ಭಾಗ 1

# ಹರಿವಂಶ ಪುರಾಣಂ



ಸಂಗ್ರಹ-ಸಂಪಾದನೆ - ಡಾ|| ಚತುರ್ವೇದಿ ವಿದ್ವಾನ್. ಎಸ್. ವೇದವ್ಯಾಸಾಚಾರ್ಯ

ಚತುರ್ವೇದಿ ಸೇವಾ ಟ್ರಸ್ಟ್

# हरिवंश पुराणम्

# ಹರಿವಂಶ ಪುರಾಣಂ

ಭಾಗ 1




ಸಂಗ್ರಹ–ಸಂಪಾದನೆ :

**ಡಾ ॥ ಚತುರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ,**

ಎಂ. ಎ., ಬಿ.ಎಡ್., ಪಿಹೆಚ್‌ಡಿ



## ಚತುರ್ವೇದಿ ಸೇವಾ ಟ್ರಸ್ಟ್



184, 22ನೇ ಮುಖ್ಯ ರಸ್ತೆ,
12ನೇ 'ಎ' ಅಡ್ಡ ರಸ್ತೆ, ರಾಘವೇಂದ್ರ ಲೇ ಔಟ್,
ಪದ್ಮನಾಭನಗರ, ಬೆಂಗಳೂರು – 70.
ಫೋನ್ : 080-2639 3950, 94492 13797



## ಪರಮಪೂಜ್ಯ ಶ್ರೀ 108 ಶ್ರೀ ವಿಶ್ವೇಶ್ವತೀರ್ಥರ

# ಅನುಗ್ರಹ ವಾಣಿ



***ಶ್ರೀ ಶ್ರೀ 108 ಶ್ರೀ ವಿಶ್ವೇಶತೀರ್ಥರು***
ಪಂಚಮಪರ್ಯಾಯ ಶ್ರೀಕೃಷ್ಣ ಮಠ
[ಪೇಜಾವರ ಅಧೋಕ್ಷಜ ಮಠ]
ಉಡುಪಿ, ದಕ್ಷಿಣ ಕನ್ನಡ

ವಿಷ್ಣುವಿನ ಮಹಿಮೆಯನ್ನು ಸ್ಪಷ್ಟ ಭಾಷೆಯಲ್ಲಿ ಪ್ರತಿಪಾದಿಸಿ ಅವರವರ ಅಧಿಕಾರಕ್ಕನುಗುಣವಾಗಿ ಮಾಡಬೇಕಾದ ಕರ್ತವ್ಯಗಳ ವಿವರಣೆಯನ್ನು ನೀಡುವ ಹರಿವಂಶವು ಮಾಧ್ವವೈಷ್ಣವರ ಕೈಪಿಡಿಯೆಂದೆ ಹೇಳಬಹುದು.

ಶ್ರೀಮದಾಚಾರ್ಯರು ಪ್ರತಿಪಾದಿಸಿದ ಸಿದ್ಧಾಂತದ ಪ್ರಮೇಯಗಳಗೆಲ್ಲ ಸ್ಪಷ್ಟ ಸಮರ್ಥನೆಯನ್ನು ಈ ಗ್ರಂಥದಲ್ಲಿ ಕಾಣಬಹುದಾಗಿದೆ.

ಇದನ್ನು ಸರಿಯಾಗಿ ತಿಳಿಯುವುದರಿಂದ ನಮ್ಮ ಮುಂದಿರುವ ಅನೇಕ ಪ್ರಶ್ನೆ ಸಮಸ್ಯೆಗಳಗೆ ಸೂಕ್ತ ಪರಿಹಾರವು ಲಭಿಸುತ್ತದೆ. ವಿವಿಧ ಅಕೃತ್ಯ ನಮ್ಮಿಂದ ನಡೆದರೂ ನಿರಾಶರಾಗದೆ ಹೇಗೆ ಆತ್ಮೋನ್ನತಿಯನ್ನು ಸಾಧಿಸಿ ಭಗವದನುಗ್ರಹ ಹೊಂದಬಹುದೆನ್ನುವ ಬಗ್ಗೆ ಸಮರ್ಥ ಮಾರ್ಗದರ್ಶನವನ್ನು ಈ ಗ್ರಂಥದಿಂದ ಕಾಣಬಹುದಾಗಿದೆ. ಹೀಗೆ ಸಜ್ಜನರಿಗೆ ಅತ್ಯಂತ ಉಪಕಾರವಾದ ವೈಷ್ಣವ ಗ್ರಂಥವಾಗಿದೆ. ಭಗವಂತನಿಗೆ ಸೃಷ್ಟಿಯಿಂದಾಗಿ ತನಗೆ ಯಾವ ಪ್ರಯೋಜನ-ವಿಲ್ಲದಿದ್ದರೂ ಯಾವ ಸ್ವಾರ್ಥವೂ ಇಲ್ಲದೆ ಪ್ರತಿಕ್ಷಣವೂ ಅಖಂಡ ಕಾರ್ಯತತ್ಪರನಾಗಿರುವನು. ಇದಕ್ಕೆಲ್ಲ ಅವನ ಸ್ವಾಭಾವಿಕ ದಯಾಗುಣವೆ ಕಾರಣವಾಗಿದೆ. **'ಇತಿ ತೇಷಾಂ ತು ಕಾರುಣ್ಯಾತ್ ದಯಾಲುರ್ಭಗವಾನಿದಂ । ಸೃಷ್ಟ್ಯಾದಿ ಕುರುತೇ ಸರ್ವಂ ।'**

ಭಗವಂತನು ಕಾರುಣ್ಯಮೂರ್ತಿಯಾದರೂ ಜಗತ್ತಿನ ಶ್ರೇಯಸ್ಸಿಗಾಗಿ ಸತ್ಯಸಂಕಲ್ಪನಾದ್ದರಿಂದ ತಮ್ಮ ಶಾಸನಗಳನ್ನು ಅಲಕ್ಷಿಸಿ ಅತಿಕ್ರಮಣಕಾರಿಗಳನ್ನು ಶಿಕ್ಷಿಸುತ್ತಾನೆ. ಭಗವಂತನ ಆದೇಶ ಉಲ್ಲಂಘಿಸಿ ಸ್ವಚ್ಛಂದ ಪಾಪಜೀವನ ನಡೆಸುವವರನ್ನು ಶಿಕ್ಷಿಸುವುದೂ ಅನಿವಾರ್ಯವೇ ಆಗಿದೆ.

ದೇವರ ಕಾರುಣ್ಯ ಕೊಡುಗೆಯಾದ ಈ ಮಾನವ ಶರೀರ-ಶಾಸ್ತ್ರ ಸಂದೇಶ

ಇವೆರಡರ ಸದುಪಯೋಗವನ್ನು ಸಾಧಿಸುವುದೇ ಜೀವನದ ಗುರಿ ಎಂದು ಈ ಗ್ರಂಥವು ಚೆನ್ನಾಗಿ ತಿಳಿಸುತ್ತದೆ.

ಈ ಗ್ರಂಥದಲ್ಲಿ ಹರಿವಂಶ ಪುರಾಣದ ಹರಿವಂಶ ಪರ್ವದಲ್ಲಿ ಸೃಷ್ಟಿ ವಿಸ್ತಾರ, ಮನು, ಪೃಥುರಾಜರ ಉಪಾಖ್ಯಾನಗಳನ್ನೂ, ಪಿತೃ ಕರ್ಮದ ವಿಧಿ-ವಿಧಾನ ಮಹಾತ್ಮೆಗಳನ್ನು ಕುರಿತ ಭಾರದ್ವಾಜರ ಕಥೆಯನ್ನು, ಶ್ರೀಕೃಷ್ಣನ ಜೀವನ ಚರಿತ್ರೆ, ಅವನ ನೂರಾರು ಮಹಿಮೆಗಳನ್ನು ವಿಧವಿಧವಾಗಿ ವರ್ಣಿಸುತ್ತದೆ. ಮೂರನೇದಾದ ಭವಿಷ್ಯ ಪರ್ವವು ಶ್ರೀಕೃಷ್ಣ ಜೀವನದ ಉತ್ತರಭಾಗ, ಯುಗಧರ್ಮಗಳು, ಹರ್ಯವತಾರಗಳು, ವ್ರತಕಥೆಗಳನ್ನು ಚಿತ್ತರಿಸಲಾಗಿದೆ. ವಿಷ್ಣುಭಕ್ತಿ ಪ್ರಬೋದಕವೂ ಅಪೂರ್ವ ಪ್ರಮೇಯಾರ್ಥಗಳ ಕೈಗನ್ನಡಿಯೂ ಆಗಿರುವ ಈ ಗ್ರಂಥವನ್ನು ಸರಳವಾಗಿ ಕನ್ನಡಿಸಿ ಚತುರ್ವೇದಿ ವೇದವ್ಯಾಸಾಚಾರ್ಯರು ವೈಷ್ಣವ ಜನರಿಗೆ ಮಹೋಪಕಾರ ಮಾಡಿದ್ದಾರೆ. ಶ್ರೀಮದಾಚಾರ್ಯರ ಸಿದ್ಧಾಂತಕ್ಕೆ ಸಂಬಂಧಿಸಿದ ಅನೇಕ ವಿಚಾರಗಳಿರುವ ಈ ಗ್ರಂಥವನ್ನು ಅನುವಾದಿಸಿ ಅಪೂರ್ವ ಸೇವೆ ಸಲ್ಲಿಸಿದ್ದಾರೆ.

ನಮ್ಮ ಪ್ರಿಯ ಶಿಷ್ಯರೂ, ವಿದ್ವಾಂಸರೂ, ಪ್ರವಚನಕಾರರೂ, ಸಂಶೋಧಕರು ಆಗಿರುವ ವೇದವ್ಯಾಸಾಚಾರ್ಯರು ನಮ್ಮ ವಿದ್ಯಾಪೀಠದಲ್ಲಿಯೇ ಹನ್ನೆರಡು ವರ್ಷ ಅಧ್ಯಯನ ಮಾಡಿ ಮನೆಯಲ್ಲಿ ಪಾಠ-ಪ್ರವಚನ, ಗ್ರಂಥ ಪ್ರಕಾಶನ ಮೊದಲಾದ ವಿವಿಧ ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದು ನಮಗೆ ಅತ್ಯಂತ ಹರ್ಷವುಂಟು ಮಾಡಿದೆ. ಇದೇ ರೀತಿ ಜಿಜ್ಞಾಸುಗಳಿಗೆ ಉಪಯುಕ್ತವಾಗುವ ಗ್ರಂಥಗಳು ಇವರಿಂದ ಅನುವಾದಿಸಲ್ಪಟ್ಟು ಸಮಾಜಕ್ಕೆ ದೊರೆಯುವಂತಾಗಲಿ ಎಂದು ಆಶಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

ಶ್ರೀಶ್ರೀ ವಿಶ್ವೇಶ್ವತೀರ್ಥ ಶ್ರೀಪಾದಂಗಳವರು

# ಮುನ್ನುಡಿ

# ಹರಿವಂಶ ಪುರಾಣಂ

*ಮಹಾಭಾರತ ಪ್ರಶಸ್ತಿ :*

ಮಹತ್ವ-ಭಾರವತ್ತ್ವಗಳಿಂದ ಮಹಾಭಾರತವೆನಿಸಿದೆ. ಮಹತ್ತರವಾದ ಅರ್ಥಗರ್ಭಿತವಾದ್ದರಿಂದ ಮಹಾಭಾರತವು. ಮಹಾಭಾರತವು ಶಾಸ್ತ್ರಗಳಲ್ಲಿ ಸೇರಿ ಶಾಸ್ತ್ರಪದವೀ ಹೊಂದಿದ್ದು ಶಾಸ್ತ್ರಗಳಲ್ಲಿಯೆ ಸಾರತಮಭಾಗವಾಗಿದೆ.

**'ಶಾಸ್ತ್ರೇಷು ಭಾರತಂ ಸಾರಮ್'**

ದೇವತೆಗಳು, ಸಂಸಾರದಲ್ಲಿ ಕ್ಲೇಶದಿಂದ ನರಳುತ್ತಿರುವ ವೇದದಲ್ಲಿ ಅಧಿಕಾರ ಹೊಂದಿದ್ದರೂ ಅರ್ಥಜ್ಞಾನವಿಲ್ಲದೆ ದುಃಖಿಸುತ್ತಿರುವ ಹಾಗೂ ವೇದಾಧಿಕಾರಹಿತರಾದ ಸ್ತ್ರೀಯಾದಿಗಳನ್ನು ನೋಡಿ ಕರುಣೆಯಿಂದ ಪ್ರಾರ್ಥಿಸಿದಾಗ ಪ್ರಸನ್ನ ಭಗವಂತನು ವ್ಯಾಸನಾಗಿ ಅವತರಿಸಿ, ರಚಿಸಿದ ಗ್ರಂಥವೇ 'ಮಹಾಭಾರತ'.

ಯಾವ ಪ್ರಮೇಯ ಮಹಾಭಾರತ ಹೇಳದೆಯೋ ಅದು ಇತರ ಗ್ರಂಥಗಳಲ್ಲಿ ಹೇಳಲ್ಪಟ್ಟಿರುತ್ತವೆ. ಯಾವುದು ಇಲ್ಲಿ ಹೇಳಲ್ಲವೋ ಆ ಪ್ರಮೇಯ ಬೇರೆಲ್ಲೂ ಕಾಣಸಿಗಲಾರದು ಎಂಬುದು ಪ್ರಶಂಸೆ ಸರ್ವಪ್ರಮೇಯಗಳನ್ನೂ ತನ್ನ ಒಡಲಲ್ಲಿ ತುಂಬಿಸಿಕೊಂಡಿದೆ.

**'ಯದಿ ಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್'**

*ಭಾರತ ನಿರುಕ್ತಿ ಸರ್ವಪಾಪ ವಿಮುಕ್ತಿ :*

ಮಹತ್ವ-ಭಾರವತ್ತ್ವಗಳಿಂದ ತುಂಬಿರುವುದು ಮಹಾಭಾರತವೆಂಬ ನಿರ್ವಚನ ತಿಳಿದ ಮಾತ್ರಕ್ಕೆ ಸರ್ವಪಾಪಗಳಿಂದ ಬಿಡುಗಡೆ.

**'ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ'**

*ವೇದಕ್ಕಿಂತಲೂ ಉತ್ತಮತೆ :*

ಮಹಾಪುರುಷೋತ್ತಮನಿಂದ ರಚಿತವಾಗಿದ್ದು ಅಪುರುಷ ನಿರ್ಮಿತ ವೇದಕ್ಕಿಂತಲೂ ಉತ್ತಮವೆನಿಸಿದ ಗ್ರಂಥ. 'ಪಂಚಮವೇದ'ವೆಂಬ ವಿಶಿಷ್ಟ

ಪಟ್ಟ ಪಡೆದಿದೆ. ಕಡಮೆಯೆಂದರೆ ಹತ್ತು ಅರ್ಥಗಳವೆ. ವಿಶಿಷ್ಟ ಜ್ಞಾನಿಗಳಿಗೆ ನೂರಾರು ಅರ್ಥವು ಹೊಳೆಯುತ್ತದೆ.

ಹೀಗಿದ್ದರೂ ಬ್ರಹ್ಮಾದಿಗಳೂ ಸಹ ಸಕಲಾರ್ಥ ತಿಳಿಯಲಾರರೆಂದೆ ಇದರ ಮಹತ್ವ. ಬ್ರಹ್ಮದೇವನೂ ಸಾಮಸ್ತ್ಯೇನ ತಿಳಿಯಲಾರನಂತೆ. ಕಿಂಚಿತ್ ಸರ್ವರೂ ತಿಳಿಯಬಹುದು.

**'ಬ್ರಹ್ಮಾಪಿ ತನ್ನ ಜಾನಾತಿ ಈಷತ್ ಸರ್ವೋಽಪಿ ಜಾನತಿ'**

ಬ್ರಹ್ಮಶಬ್ದಕ್ಕೆ ಬೃಹಸ್ಪತಿಯೆಂದರ್ಥ.

### *ಪಂಚಮವೇದ ಮಹಾಭಾರತ :*

ಮಹಾಭಾರತವು ಪಂಚಮವೇದವೆನಿಸಿದೆ.

**'ಭಾರತಂ ಚಾಪಿ ಕೃತವಾನ್ ಪಂಚಮಂ ವೇದಮುತ್ತಮಂ'**

### *ಸರ್ವೋತ್ತಮ ಗ್ರಂಥ :*

ಮಹಾಭಾರತವು ಸರ್ವೋತ್ತಮರಾದ ವೇದವ್ಯಾಸ ಪ್ರಣೀತವಾಗಿದ್ದು ಸರ್ವಶ್ರೇಷ್ಠ ಗ್ರಂಥವಾಗಿದೆ. ನಾರಾಯಣನಲ್ಲದೆ ಬೇರೆ ಯಾರು ತಾನೇ ಮಹಾಭಾರತವನ್ನು ರಚಿಸಬಲ್ಲರು? ನಾರದಾದಿಗಳಿಂದ ಅಧ್ಯಯನ ಮಾಡಲ್ಪಟ್ಟಿರುವ, ಮಹರ್ಷಿಗಳಿಂದ ತಮ್ಮ ಶಿಷ್ಯ ಪ್ರಶಿಷ್ಯರಿಗೆ ಪರಂಪರಾಗತವಾಗಿ ಮಹಾಭಾರತವನ್ನು ಉಪದೇಶ ಮಾಡುತ್ತಿರುವುದರಿಂದಲೂ ಮಹಾಭಾರತ ಮಹಾನ್ ಶ್ರೇಷ್ಠ ಗ್ರಂಥವೇ ಸರಿ.

### *ತ್ರಿವಿಧಾರ್ಥ :*

ಭಾರತವು ಮನ್ವಾದಿ, ಆಸ್ತೀಕಾದಿ, ಉಪರಿಚರಾದಿಯಾಗಿದೆ. ಪರಮಾತ್ಮನ ಜ್ಞಾನಕ್ಕೆ ಕಾರಣವಾದದ್ದು ಮನ್ವಾದಿ. ಧರ್ಮಭಕ್ತಿ ಜ್ಞಾನಾದಿ ಹತ್ತು, ಶ್ರವಣ-ಮನನ-ನಿಧಿಧ್ಯಾಸನ, ಶೀಲ ವಿನಯ-ವೇದ ಹೀಗೆ ಇವುಗಳಿಗೆ ಅಭಿಮಾನಿಗಳಾದ ಧರ್ಮ ಭೀಮಾದಿ ಪಂಚಪಾಂಡವರನ್ನು ತಿಳಿಸುವುದು ಉದ್ದೇಶ. ಪರಮಾಸ್ತಿಕ ಪಾಂಡವರು ದ್ರೌಪದೀ ಇವರುಗಳನ್ನು ಧರ್ಮಾದಿ ನಿರೂಪಣೆಯಿಲ್ಲದೆ ಅವರ ಚರಿತ್ರೆಯನ್ನು ಹೇಳುವುದು ಆಸ್ತಿಕಾದಿ. ಉಪರಿಚರನೆಂದರೆ ಸರ್ವರಿಂದಲೂ ಉಪರಿ. ಮೇಲೆ ಸಂಚರಿಸುವ ಶ್ರೀಮನ್ನಾರಾಯಣನೆ. ಅಂದರೆ ಸರ್ವೋತ್ತಮನಾದ ವಿಷ್ಣುವೆ, ಮಹಾಭಾರತ ಅಕ್ಷರ, ಪದ, ವಾಕ್ಯಗಳಿಂದ ಪ್ರತಿಪಾದ್ಯನಾಗಿರುವುದು ಉಪರಿಚರಾದಿ. ಆದಿಯೆಂದರೆ ಆದೀಯಮಾನ ಪ್ರತಿಪಾದ್ಯ ವಿಷಯವೆಂದರ್ಥ.

### *ಮಹಾಭಾರತ ಬೃಹತ್ತತೆ :*

ಮಹಾಭಾರತವು ಮಹತ್ವ ಮಾತ್ರದಲ್ಲಿ ಮಾತ್ರವಲ್ಲದೆ ಬೃಹತ್ತತೆಯಲ್ಲಿಯೂ ವಿಶಿಷ್ಟ ಗ್ರಂಥ. ಶ್ಲೋಕಗಳ ಸಂಖ್ಯೆ ಒಂದು ಲಕ್ಷ ಹನ್ನೆರಡು ಸಾವಿರ ಶ್ಲೋಕಗಳು. ಇದರಲ್ಲಿ ಒಂದು ಲಕ್ಷ ಮಹಾಭಾರತವಾದರೆ, ಹರಿವಂಶ ಹನ್ನೆರಡು ಸಾವಿರ ಶ್ಲೋಕಗಳು. ವಾದಿರಾಜರು ಲಕ್ಷಾಲಂಕಾರದಲ್ಲಿ ಮಹಾಭಾರತದಲ್ಲಿ ಒಂದು ಲಕ್ಷ, ಮೂರು ಸಾವಿರದ ಮುವ್ವತ್ತನಾಲ್ಕು ಶ್ಲೋಕಗಳಿವೆ ಎಂದಿದ್ದಾರೆ. ಮಹಾಭಾರತ ಖಿಲವೆನಿಸುವ ಹರಿವಂಶದಲ್ಲಿ ಇಪ್ಪತ್ತೈದು ಸಾವಿರ ಶ್ಲೋಕಗಳಿವೆ ಎಂದಿದ್ದಾರೆ.

### *ಅಧ್ಯಾತ್ಮ ನಿಷ್ಠ ಮಹಾಭಾರತ :*

ಸಕಲ ಭಾರತವು ಅಧ್ಯಾತ್ಮ ಪ್ರತಿಪಾದಕವಾಗಿದೆ. ಇದರಿಂದಾಗಿ ದೇವಾದಿಗಳಿಗೂ ದುರ್ಜ್ಞೇಯಾರ್ಥವಾಗಿದೆ.

### *ಹರಿವಂಶ :*

ಹರಿವಂಶವೂ ಸಹ ಭಾರತದಂತೆ ವೇದಾರ್ಥ ಪ್ರಕಾಶಕ ಹಾಗೂ ಅಧ್ಯಾತ್ಮ ನಿಷ್ಠ. ಮಹಾಭಾರತವು ಹದಿನೆಂಟು ಪರ್ವವಾದರೆ, ಹರಿವಂಶವು ಮೂರು ಪರ್ವಗಳಿಂದ ಕೂಡಿದ್ದು, ಕಬ್ಬಿನ ಪ್ರತಿಪರ್ವಗಳೂ ಮಧುರವಾದ ರಸಭರಿತವಾದಂತೆ 21 ಪರ್ವವೂ ಸುಮಧುರ ತತ್ವರಸಗಳನ್ನು ಹಾಗೂ ಸರ್ವರಸನಾದ ಶ್ರೀಹರಿಯನ್ನು ಚಿತ್ತರಿಸುತ್ತವೆ.

### *ಪ್ರತಿಪರ್ವರಸೋದಯಮ್ :*

ಈ ಮಾತು ಮಹಾಭಾರತ ಹದಿನೆಂಟು ಪರ್ವಗಳಿಗೆ ಅನ್ವಯವಾಗುವಂತೆ ಹರಿವಂಶಕ್ಕೂ ಅನ್ವಯವಾಗುತ್ತದೆ. ಇದೂ ಸಹ ಪ್ರತಿಪರ್ವ, ಪ್ರತಿ ಅಧ್ಯಾಯಗಳೂ ರಸಭರಿತವಾಗಿರುತ್ತವೆ. ಮಹಾಭಾರತ ಖಿಲದಲ್ಲಿರುವ ಮೂರು ಪರ್ವಗಳನ್ನು ಸೇರಿಸಿದರೆ ಇಪ್ಪತ್ತೊಂದು ಪರ್ವಗಳು. ಹರಿವಂಶ ಪರ್ವ, ವಿಷ್ಣು ಪರ್ವ, ಭವಿಷ್ಯ ಪರ್ವಗಳೆಂದು ಮೂರು ಪರ್ವಗಳು.

**ಹರಿವಂಶಸ್ತತಃ ಪರ್ವ ಪುರಾಣಂ ಖಿಲಸಂಜ್ಞಿತಮ್ ।**

**ಭವಿಷ್ಯಂ ಪರ್ವ ಚಾಪ್ಯುಕ್ತಂ ಖಿಲೇಷ್ವೇವಾದ್ಭುತಂ ಮಹತ್ ॥**

ಹರಿವಂಶವು ಪುರಾಣಗಳಂಶವನ್ನು, ಇತಿಹಾಸವನ್ನು ಒಳಗೊಂಡಿದ್ದರಿಂದ ಇತಿಹಾಸ-ಪುರಾಣವೆಂದೂ, ಹರಿವಂಶಪರ್ವವೆಂದೂ ಪ್ರಸಿದ್ಧವಾಗಿದೆ.

## *ಖಿಲಭಾಗ :*

**ಖಿಲವೆಂದರೆ ಹಿಂದೆ ಹೇಳದೆ ಪರಿಶಿಷ್ಟದಲ್ಲಿ ಹೇಳುವ ವಸ್ತು ವಿಷಯ.** [ಖಿಲಃ ಪೂರ್ವತ್ರಾನುಕ್ತೇ ಪರಿಶಿಷ್ಟೇ ಯಥಾ ಹರಿವಂಶಃ]. ಋಗ್ವೇದದಲ್ಲಿ ಹೇಳದೆ ನಂತರ ಹೇಳಿರುವ ಶ್ರೀಸೂಕ್ತ, ರಾತ್ರಿಸೂಕ್ತ, ಪವಮಾನ ಖಿಲ ಇತ್ಯಾದಿ. ಯಜುರ್ವೇದದಲ್ಲಿ ಪರಿಶಿಷ್ಟದಲ್ಲಿ ಹೇಳಿದ ಶಿವಸಂಕಲ್ಪಾದಿಗಳು. ಹಾಗೆ ಮಹಾಭಾರತದಲ್ಲಿ ಹರಿವಂಶವು ಖಿಲವೆನಿಸಿದೆ. ಅಥವಾ ಖಿಲವೆಂದರೆ ಉಳಿದದ್ದು ಎಂಬರ್ಥವಿದೆ. *'ಖಿಲಾನಾಂ ಶಿವಮಸ್ತು ವಃ'* ಭಾಗ ಎಂದು ಚಂದ್ರನು ಪ್ರಚೇತನಿಗೆ ಗಿಡಮರಗಳನ್ನು ನಾಶ ಮಾಡಿದ್ದು ಸಾಕು ಉಳಿದ ಗಿಡಮರಗಳಿಗೆ ಮಂಗಳವಾಗಲಿ ಎಂದು ಉಳಿದ ಎಂಬರ್ಥದಲ್ಲಿಯೇ ಖಿಲ ಶಬ್ದ ಬಳಸಲಾಗಿದೆ. ಖಿಲವೆಂದರೆ ಎಲ್ಲರನ್ನೂ ನುಂಗಿ ತಾನೊಬ್ಬನೆ ಉಳಿಯುವ ಭಗವಂತ, ಅವನ ಗುಣಗಳನ್ನು ಪ್ರತಿಪಾದಿಸುವ ಗ್ರಂಥವೆ ಖಿಲೇಷು.

**ಖಿಲಸ್ಯ ಹರೇಃ ಇಷುರ್ಗುಣೋ ಯತ್ರ** ।

**ಖಿಲೋ ನಾರಾಯಣಃ ಪ್ರೋಕ್ತಃ ತದ್ಗುಣಾಃ ಇಷವಃ ಸ್ಮೃತಾಃ** ॥

## *ಶ್ರವಣ ಕೀರ್ತನ :*

ವೈಶಂಪಾಯನರು ಜನಮೇಯಜರಾಯನಿಗೆ ಹರಿವಂಶ ಹೇಳಿದರು. ಜನಮೇಜಯನ ವಂಶ ಶ್ರವಣ ಮಾಡುವ ವಂಶ. ಗರ್ಭದಲ್ಲಿರುವಾಗಲೂ ಶ್ರವಣ ಬಿಟ್ಟಿರುವುದಿಲ್ಲ. ಅರ್ಜುನನು ಪರೀಕ್ಷಿತನ ತಾತ. ಇವನು ಶ್ರೀಕೃಷ್ಣನಿಂದ ಗೀತೆಯ ಶ್ರವಣ. ಅರ್ಜುನನ ಮಗ ಅಭಿಮನ್ಯು ಸುಭದ್ರೆಯ ಗರ್ಭದಲ್ಲಿರುವಾಗಲೇ ಕೃಷ್ಣನಿಂದ ವ್ಯೂಹ ಭೇದಿಸುವ ಮಂತ್ರತಂತ್ರ ಶ್ರವಣ ಮಾಡಿದ. ಅಭಿಮನ್ಯು ಪುತ್ರ ಪರೀಕ್ಷಿತ. ರುದ್ರಾಂಶ ಶುಕರಿಂದ ಭಾಗವತ ಶ್ರವಣ ಮಾಡಿದವ. ಪರೀಕ್ಷಿತ ಪುತ್ರ ಜನಮೇಜಯನು ವೈಶಂಪಾಯನರಿಂದ ಮಹಾಭಾರತ ಹಾಗೂ ಅದರ ಒಂದು ಭಾಗವಾದ ಹರಿವಂಶ ಶ್ರವಣ ಮಾಡಿದವ.

## *ಹರಿವಂಶದಲ್ಲಿ ವಿಶೇಷವೇನೆಂದರೆ :*

ಜನಮೇಜಯನು ವೈಶಂಪಾಯನರನ್ನು ಮಹಾಭಾರತದ ಆಖ್ಯಾನಗಳನ್ನೆಲ್ಲ ಕೇಳಿ ಕೃಷ್ಣ ಮಹಿಮೆಯಿಂದ ಪುಲಕಿತ ಗಾತ್ರನಾದನು. ಅವನ ಮಹಿಮೆ ಬಾಲ್ಯದಿಂದಲೂ ಸಂಪೂರ್ಣ ಕೇಳಬೇಕೆಂದು ಇಚ್ಛಿಸಿ ಗುರುಗಳೇ ಶ್ರೀಕೃಷ್ಣನ ಮಹಿಮೆಗಳು ಅದ್ಭುತವಾದವುಗಳು. ಅದನ್ನು ನನಗೆ ತಿಳಿಸಿ ಎಂದಾಗ ಶ್ರೀಕೃಷ್ಣನ ಮಹಿಮೆಗಳನ್ನು ವಿಶಿಷ್ಟವಾದ ಶೈಲಿಯಲ್ಲಿ ಬಾಲ್ಯದಾರಭ್ಯ

ಚಿತ್ತರಿಸುವರು. ಇಲ್ಲಿಯ ವರ್ಣನೆ ಅತ್ಯುದ್ಭುತ. ವಿಸ್ತಾರಕಥೆಗಳನ್ನು ನೋಡಬಹುದು. ಮಹಾಭಾರತದಲ್ಲಿ ಹೇಳದಿರುವ ಕೃಷ್ಣ ಮಹಿಮೆಗಳು ಹರಿವಂಶದಲ್ಲಿ ಪೂರ್ಣವಾಗಿ ಭಾಗವತಕ್ಕಿಂತಲೂ ವಿಸ್ತಾರವಾಗಿ ಹೇಳಿದ್ದರಿಂದ ಹರಿವಂಶವು 'ಖಿಲ' ಪರಿಶಿಷ್ಟವೆನಿಸಿತು.

ಖಿಲ ಭಾಗದಲ್ಲಿ ಹರಿವಂಶ ಸೇರಿಸಲು ಮತ್ತೊಂದು ಕಾರಣವೂ ಇದೆ. ವಿಶಿಷ್ಟ ಫಲವೂ ಸಜ್ಜನರಿಗೆ ಆಗುವ ಸಲುವಾಗಿಯೂ ಖಿಲದಲ್ಲಿ ಸೇರಿಸುವ ಪರಿಪಾಟವಿರುತ್ತದೆ. ಉದಾ –

ಋಗ್ವೇದದಲ್ಲಿ ಕಾಣ ಸಿಗದ ಶ್ರೀಸೂಕ್ತವು ಋಗ್ವೇದ ಖಿಲದಲ್ಲಿ ಕಾಣಬಹುದು. ಯರ್ಜುರ್ವೇದದಲ್ಲಿ ಕಾಣ ಸಿಗದ ಶಿವಸಂಕಲ್ಪ ಯರ್ಜುರ್ವೇದ ಖಿಲದಲ್ಲಿ ಕಾಣಬಹುದು. ಋಗ್ವೇದದಲ್ಲಿ ಶ್ರೀಸೂಕ್ತವನ್ನು ಹೇಳದೆ ಖಿಲದಲ್ಲಿ ಹೇಳಿರುವುದು ಹದಿನೈದು ದಿನ ಪ್ರತಿದಿನ ಹದಿನೈದು ಬಾರಿ ಎಂದರೆ ಒಟ್ಟು ಇನ್ನೂರ ಇಪ್ಪತ್ತೈದು ಬಾರಿ ಪಾರಾಯಣದಿಂದ ಧನಕನಕಾದಿ ಸಂಪತ್ತು ಲಭಿಸಲೆಂದು. ಹಾಗೆಯೆ ಹರಿವಂಶದ ಪ್ರತ್ಯೇಕತೆ ಸತ್ಸಂತಾನ, ಪಾಪವಿಮುಕ್ತಿ ಇತ್ಯಾದಿ. ವಿಶಿಷ್ಟ ಫಲವಾಗಲೆಂದು.

**ಸ್ತ್ರೀಭಿಶ್ಚ ಪುತ್ರಕಾಮಾಭಿಃ ಶ್ರೋತವ್ಯಂ ವೈಷ್ಣವಂ ಯಶಃ ॥**

*ಪಾಪಪರಿಹಾರ (ಗಾರ್ಭಿಕ) :*

ಹರಿವಂಶವನ್ನು ಶ್ರವಣ ಮಾಡಿದವರ ವಧೂವರರ ಸಮಸ್ತಪಾಪಗಳೂ ಪರಿಹಾರವಾಗುವುವು.

**ಶೃಣೋತಿ ಶ್ರಾವಯೇದ್ ವಾಪಿ ಹರಿವಂಶಂ ತು ಯೋ ನರಃ ।**

**ಸರ್ವಥಾ ಪಾಪನಿರ್ಮುಕ್ತೋ ವೈಷ್ಣವಂ ಪದಮಾಪ್ನುಯಾತ್ ॥**

ಕಾಯಿಕ ಮಾನಸಿಕ ವಾಚಿಕ ಪಾಪಗಳು ಇಲ್ಲವಾಗುತ್ತವೆ.

ಅಷ್ಟಾದಶ ಪುರಾಣ ಶ್ರವಣ ಫಲ ಹರಿವಂಶ ಶ್ರವಣದಿಂದ ಲಭಿಸುತ್ತದೆ.

**ಅಷ್ಟಾದಶ ಪುರಾಣಾನಾಂ ಶ್ರವಣಾದ್ ಯತ್ ಫಲಂ ಲಭೇತ್ ತತ್ಫಲಂ ಸಮವಾಪ್ನೋತಿ ।**

ಬ್ರಹ್ಮಹತ್ಯೆ, ಭ್ರೂಣಹತ್ಯೆ, ಗೋಹತ್ಯೆ, ಸುರಾಪಾನ, ಗುರುತಲ್ಪ ಇವುಗಳೆಲ್ಲ ಒಂದು ಭಾರಿ ಭಕ್ತಿಯಿಂದ ಶ್ರವಣ ಮಾಡಿದ ಮಾತ್ರಕ್ಕೆ ಪರಿಹೃತವಾಗುತ್ತವೆ. ಪುತ್ರ ರಹಿತ ಪುತ್ರ ಸಹಿತನಾಗುವನು. ಧನ ರಹಿತ ಧನ ಸಹಿತನಾಗುವನು.

**ಅಪುತ್ರಃ ಪುತ್ರಮಾಪ್ನೋತಿ ಅಧನೋ ಧನಮಾಪ್ನುಯಾತ್ ।**

## ಸಂತಾನವಾಗದಿರಲು ನಿಮಿತ್ತಗಳು :

1) **ಬಾಲಕರಿಗೆ ಪೀಡೆ, ಪೆಟ್ಟು, ಅಪಹಾರ, ಕೊಲೆ ಇತ್ಯಾದಿಗಳಿಂದ ಮಗು ಹುಟ್ಟಿದರೂ ಸತ್ತ ಮಗುವೆ ಹುಟ್ಟುತ್ತದೆ.**

2) ಗುರುಗ್ರಹ, ಚಂದ್ರ, ಸೂರ್ಯರು, ಅಗ್ನಿ ಇವುಗಳ ಎದುರಿನಲ್ಲಿಯೇ ಮಲ ವಿಸರ್ಜನೆ ಹಾಗೂ ವೀರ್ಯೋತ್ಸರ್ಜನೆ, ಮಾಡುವವನು ಶುಕ್ರರಹಿತನಾಗಿ ನಿವೀರ್ಯನಾಗುವನು.

3) ಸ್ತ್ರೀಯರು ಹಣ್ಣುಗಳನ್ನು ಕತ್ತರಿಸುವುದು, ತೆಂಗಿನಕಾಯಿ ಸಿಪ್ಪೆ ಬಿಡಿಸುವುದು, ಪುಷ್ಪ–ಫಲಗಳ ಗಿಡಗಳ ನಾಶ, ಮಕ್ಕಳನ್ನು ಕೊಲ್ಲುವುದು, ತಂದೆತಾಯಿಗಳನ್ನು ಮಗನಿಂದ ಬೇರ್ಪಡಿಸುವುದು, ಬೇರೆಯವರ ಗರ್ಭವನ್ನು ಸ್ರಾವ ಮಾಡಿಸುವುದು, ಈ ಪಾಪ ಮಾಡಿದವರ ಸಂಗಾದಿಗಳನ್ನು ಮಾಡುವವಳು ಪಂಚಪಾತಕೀ ಎನಿಸುವಳು.

**ಯೋಷಿತ್ ಪುಷ್ಪಫಲಾನಾಂ ಚ ಬಾಲಾನಾಂ ಘಾತಿನೀ ತಥಾ ।**

**ಫಲಾನಾಂ ಕರ್ತನಕರೀ ಮಾತಾಪಿತೃವಿಯೋಗಿನೀ ॥**

**ಸ್ರಾವಿಣೀ ಪರಗರ್ಭಾಣಾಂ ತತ್ತತ್ ಪ್ರಾಯೋಪಪೋಷಿನೀ ॥**

ಇಂತಹ ಸ್ತ್ರೀಯರು ಈ ಪಾಪಗಳಿಂದಾಗಿ ಅಪುಷ್ಪವತಿಯೂ, ಮೃತವತ್ಸಳೂ, ಕಾಕವಂಧ್ಯೆಯೂ, ಬರೇ ಹೆಣ್ಣು ಸಂತಾನ ಹೊಂದುವವಳೂ ಮಕ್ಕಳೆ ಆಗದೆ ದುಃಖಪಡುತ್ತಾಳೆ.

**ಅಪುಷ್ಪಾಃ ಮೃತವತ್ಸಾಶ್ಚ ಕಾಕವಂಧ್ಯಾಃ ತಥೈವ ಚ ।**

ಇಂತಹ ದೋಷ ಪರಿಹಾರವಾಗಿ ಸತ್ಸಂತಾನವಾಗಲೂ ಹರಿವಂಶವನ್ನು ಶ್ರವಣ ಮಾಡಬೇಕು. ಇವರ ದೋಷ ಪರಿಹಾರವಾಗಿ ಸತ್‌ಸಂತಾನ–ವಾಗುತ್ತದೆ. ಪುರುಷನಾದರೂ ಚಪ್ಪಲಿ, ಛತ್ರಿ, ಚಾಪೆ ಮೊದಲಾದ ಪದದಾನ, ಸುವರ್ಣ, ಘೃತದಾನ ಇವುಗಳ ದಾನ ಹಾಗೂ ಹತ್ತಾವರ್ತಿ ಹರಿವಂಶ ಶ್ರವಣದಿಂದ ಅವನ ಪಾಪನಾಶವಾಗಿ ವೀರ್ಯವಂತನಾಗುತ್ತಾನೆ.

**ದಶಾವೃತ್ತೀಃ ಶೃಣೋತ್ಯೇವಂ ಬೀಜಸಾಫಲ್ಯಮಾಪ್ನುಯಾತ್ ।**

ಸತ್ತು ಹುಟ್ಟುವ ಮಕ್ಕಳುಳ್ಳವಳಿಗೆ ಏಳು ಬಾರಿ ಶ್ರವಣವು ಯುಕ್ತ. ಗರ್ಭಸ್ರಾವವಾಗುವಳು ಐದು ಬಾರಿ, ಕಾಕವಂಧ್ಯಾಃ (ಬೇರೆಯವರ ಮಕ್ಕಳನ್ನು ಸಾಕುವವಳು) ಮೂರು ಬಾರಿಯು, ಕನ್ಯೆಯರನ್ನು ಮಾತ್ರ ಪ್ರಸವಿಸುವವಳು ಒಂದು ಬಾರಿ ಕೇಳದರೆ ಸಾಕು.

**ದಶಾವೃತ್ತೀರಪುಷ್ಪಾರ್ಥಂ ಮೃತವತ್ಸಾ ತು ಸಪ್ತ ವೈ ।**
**ಪಂಚಾವೃತ್ತೀಃ ಸ್ರವದ್ಗರ್ಭಾ ಕಾಕವಂಧ್ಯಾ ತ್ರಯಂ ತಥಾ ।**
**ಕನ್ಯಾಪ್ರಸೂಶ್ಚೈಕಾವೃತ್ತಿಂ ಶ್ರುತ್ವಾ ಪುತ್ರಮಾಪ್ನುಯಾತ್ ।**
ಸರ್ವದೋಷ ಪರಿಹಾರಕ್ಕಾಗಿ ನಿರಂತರ ಕೇಳುತ್ತಲೇ ಇರಬೇಕು.

### *ಹರಿವಂಶ ಶ್ರವಣ ಅವಧಿ :*

ಹರಿವಂಶವನ್ನು ನವದಿನ ಪರ್ಯಂತ ಶ್ರವಣ ಮಾಡುವುದುತ್ತಮಪಕ್ಷ. ಇಪ್ಪತ್ತೊಂದು ದಿನ ಮಧ್ಯಮ, ಮುವ್ವತ್ತೊಂದು ದಿನ ಕೇಳುವುದು ನಿಕೃಷ್ಟ.
ಈ ಮೂರು ಪದ್ಧತಿಗಳೂ ಕಲಿಯುಗದಲ್ಲಿವೆ. ಇವು ಮೂರು ವಂಧ್ಯಾದೋಷ ನಿವರ್ತಕವು. ಹರಿಶ್ರವಣ ಕಾಲದಲ್ಲಿ ವಿಶೇಷ ಗೋಸೇವೆ. ಅಶ್ವತ್ಥ ಸೇವೆ ಸಂತಾನ ಗೋಪಾಲಕೃಷ್ಣ ಮಂತ್ರ ಜಪಾದಿಗಳು ವಿಶೇಷ ಫಲದಾಯಕವು.

### *ಇತರ ಪಾಪಗಳು :*

ಪತಿನಿಂದೆ, ಅತ್ತೆ ಮಾವಂದಿರು, ತಂದೆ-ತಾಯಿ-ಗುರುಗಳ ಅವಹೇಳನ, ನಿಂದೆ, ಕಪಟಗಳು ಸಂತಾನ ವಿಘ್ನಕಾರಿಯಾಗಿವೆ.
ಇವಲ್ಲದೆ ಹೆಂಗಸರು ಬೂದುಗುಂಬಳಕಾಯಿ ಒಡೆಯುವುದು, ಗಂಡಸರು ಉರಿಯುತ್ತಿರುವ ದೇವರ ದೀಪ ನಂದಿಸುವುದು ಸಂತಾನರಾಹಿತ್ಯಕ್ಕೆ ಕಾರಣವಾಗುವುದು.

**ಅನೇಕ ಜನ್ಮ ತಪಸಾಂ ಫಲಂ ಸತ್ಪುತ್ರತಾ ಖಲು ।**

### *ಸಂತಾನ ಪ್ರಾಪ್ತಿ ಕಾರಣಗಳು :*

ಸುವರ್ಣ ತೊಟ್ಟಲಲ್ಲಿ ಮಲಗಿರುವ ಕೃಷ್ಣನ ಪ್ರತಿಮೆ ದಾನ, ವೃಷಭದಾನ, ಬ್ರಾಹ್ಮಣ ವಿವಾಹ, ಸವತ್ಸ ಸುವರ್ಣಧೇನು ದಾನ, ಶಾವಿಗೆ ಪಾಯಸ ಪ್ರಧಾನ ಭೋಜನ, ದೀಪ ದಾನ, ಬೂದುಕುಂಬಳಕಾಯಿ ದಾನ, ಇವುಗಳಿಂದ ಪ್ರಾಚೀನ ದೋಷಗಳನ್ನು ಕಳೆದುಕೊಂಡು ಸಂತಾನ ಪಡೆಯಬಹುದು.

### *ಹರಿವಂಶ ಶ್ರವಣ ಮಾಸಗಳು :*

ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗಶಿರ, ಆಷಾಢ, ಶ್ರಾವಣ ಈ ಆರೂ ಮಾಸಗಳು ಹರಿವಂಶ ಶ್ರವಣ ಶ್ರೋತೃಗಳಿಗೆ ಅಭೀಷ್ಟ-ಸಿದ್ಧಿಯಾಗುವುದು. ಬೇರೆ ಮಾಸಗಳು ಮಧ್ಯಮ.
ತೀರ್ಥಕ್ಷೇತ್ರ, ವನ, ಗೃಹಗಳಲ್ಲಿ ಹರಿವಂಶ ಉಪನ್ಯಾಸ ಮಾಡಿಸಬಹುದು.

*ಹರಿವಂಶ ಸಂಕಲ್ಪ :*

**ಅದ್ಯ ಪೂರ್ವೋಚ್ಚರಿತ ಗುಣವಿಶಿಷ್ಟಾಯಾಂ ಶುಭತಿಥೌ - ಅಮುಕಗೋತ್ರೋತ್ಪನ್ನಸ್ಯ ಅಮುಕ ಪ್ರವರಾನ್ವಿತ ಅಮುಕಶರ್ಮಣಃ ಸಪತ್ನೀಕಸ್ಯ ಮಮ ಜನ್ಮಾಂತರೇ ಮಯಾಚರಿತ ಪಾತಕ-ಉಪಪಾತಕ - ಮಹಾ ಪಾತಕ ಕೋಟಿ ನಾಶ ಪೂರ್ವಕಂ ತೇನ ಪಾಪಸಂಚಯೇನ ಕೃತಸಂತಾನಬಾಧಕತಾ ವಿನಾಶ ಪೂರ್ವಕಂ ಸತ್ಸಂತಾನ ಪ್ರಾಪ್ತ್ಯರ್ಥಂ ತಾದೃಶಸಂತಾನಸ್ಯ ಆಯುರಾಗ್ಯೈಶ್ವರ್ಯ ಪ್ರಾಪ್ತಿದ್ವಾರಾ ಉತ್ತರೋತ್ತರಾಭಿವೃದ್ಧ್ಯರ್ಥಂ ಶ್ರೀಮದ್ಧರಿವಂಶ ಪ್ರತಿಪಾದ್ಯ ಶ್ರೀ ಸಂತಾನ-ಗೋಪಾಲಕೃಷ್ಣಸ್ಯ ಪ್ರೀತಿಂ ಕಾಮಯಮಾನೋಽಹಂ ಪತ್ನ್ಯಾಸಹ ಶ್ರೀಮದ್ಧರಿವಂಶ ಪುರಾಣ ಶ್ರವಣಂ ಕರಿಷ್ಯೇ.**

ಶ್ರವಣ ಮಾಡಿಸುವ ಬ್ರಾಹ್ಮಣನಲ್ಲಿ ವ್ಯಾಸರೇ ಇದ್ದು ಹೇಳುತ್ತಿರುವರೆಂದು ಶ್ರದ್ಧಾ ಭಕ್ತಿಯಿಂದ ಶ್ರವಣ ಮಾಡಬೇಕು. ಶುಚಿಯಾಗಿ ಶ್ರವಣ ವಿಹಿತವು. ಕಥಾ ಶ್ರವಣ ಕಾಲದಲ್ಲಿ ಕೋಪ ತಾಪ, ಪರನಿಂದೆ, ಮಾಡಬಾರದು. ಸತ್ಯ, ಶೌಚ, ದಯಾ, ಮಾನ, ಆರ್ಜವ, ವಿನೀತತೆ ಮುಖ್ಯ. ಶ್ರದ್ಧಾದಿಗಳಿಲ್ಲದೆ ಅವರಿಗೆ ಫಲಶೂನ್ಯ. ಪೌರಾಣಿಕನನ್ನು ತಾಂಬೂಲ ವಸ್ತ್ರಾದಿಗಳಿಂದ ಪೂಜಿಸಿ ಶ್ರವಣ ಮಾಡಬೇಕು.

ಕಥೆ ಕೇಳುವಾಗ ಎದ್ದು ಹೋಗಬಾರದು. ಶುದ್ಧ ಪಂಚೆಧರಿಸಿ ಶ್ರವಣ, ತಾಂಬೂಲಾದಿ ಭಕ್ಷಣೆ, ಸ್ತ್ರೀ ಸಂಭಾಷಣೆ, ಪೌರಾಣಿಕನ ನಿಂದೆ, ದುರುತ್ತರ, ಕಥಾ ವಿಘ್ನ, ಬೇರೆ ವಾರ್ತಾಲಾಪ, ದೊಡ್ಡ ಆಸನಗಳ ಕೂಡುವುದು, ಕಾಲು ಮೇಲೆ ಕಾಲನ್ನಿಡುವುದು. ಎಲ್ಲೋ ನೋಡುತ್ತಿರುವುದು ಇತ್ಯಾದಿ ನಿಷಿದ್ಧವಾಗಿರುತ್ತದೆ. ಅನ್ನದಾನಾದಿಗಳು ವಿಶೇಷ ಫಲದಾಯಕ, ತಾನು ಒಂದು ಹೊತ್ತು ಮಾತ್ರ ಭೋಜನ ಮಾಡುವುದು, ಕಥೆಯನ್ನು ಉಪವಾಸದಿಂದ ಕೇಳುವುದು, ಭಗವತ್ಪ್ರೀತಿ ಸಾಧನ. ನಿದ್ರೆ ಮಾಡಬಾರದು. ಭಾವದುಷ್ಟವಾದ ಬದನೆ, ಕಲಿಂಗ, ಬೆಳ್ಳುಳ್ಳಿ, ಮೂಲಂಗಿ, ಗಜ್ಜರಿ ತಿನ್ನಬಾರದು. ಶುದ್ಧ ಸಾತ್ವಿಕಾಹಾರವಿರಬೇಕು. ನಿರಂತರ ಕೃಷ್ಣನಾಮ ಸ್ಮರಣೆ ನಡೆಯಬೇಕು.

ಹೀಗೆ ಹರಿವಂಶ ಪುರಾಣವು ಶ್ರೀಕೃಷ್ಣನ ವಂಶ ವಿಸ್ತಾರ ಮಾಡುವುದರಿಂದ ಹರಿವಂಶ ಪುರಾಣವೆನಿಸಿದೆ.

# ಹರಿವಂಶ ಅನುವಾದ

ಸಂಸ್ಕೃತ ಮೂಲವು ಯಾರಿಗೆ ಅರ್ಥವಾಗುವುದಿಲ್ಲವೋ ಅವರಿಗೋಸ್ಕರ ಈ ಅನುವಾದ. ಇದರಲ್ಲಿ ಕಥೆಯ ಓಟಕ್ಕೆ ತೊಂದರೆ ಬಾರದಂತೆ ಪ್ರಯತ್ನ ಮಾಡಲಾಗಿದೆ. ಕನ್ನಡದ ಶೈಲಿ, ಸಂಸ್ಕೃತದ ಶೈಲಿಗಳಲ್ಲಿ ಅಂತರವಿದೆಯಾಗಿ ಅನುವಾದ ಶೈಲಿಯು ಮೂಲಶೈಲಿಯನ್ನು ಅನುಸರಿಸಲು ಸಾಧ್ಯವಾಗಿಲ್ಲ. ಕರ್ತರಿ-ಕರ್ಮಣಿ ಪ್ರಯೋಗಗಳಲ್ಲಿ ಸಂಸ್ಕೃತ ಹಾಗೂ ಅನುವಾದಕ್ಕೂ ಅಂತರವಿದೆ. ಹೆಚ್ಚಿನ ಅರ್ಥ ಪುಷ್ಟಿಯಿಲ್ಲವೆಂದಿರುವ ಕೆಲವು ವಿಶೇಷಣಗಳನ್ನು ಅನುವಾದ ಮಾಡಿಲ್ಲ. ಮೂಲದ ತಾತ್ಪರ್ಯ ಅನುವಾದ ಮಾತ್ರ ಹೊರತು ಪರಿವರ್ತನೆ ಎಂದು ತಿಳಿಯಬಾರದು.

ಹರಿವಂಶವು ಭಾಗವತ ವಿಷ್ಣುಪುರಾಣ ಮಾರ್ಗವನ್ನೇ ಅನುಸರಿಸಿದರೂ ಭಾಗವತ ಕಠಿಣ, ವಿಷ್ಣುಪುರಾಣ ಅದ್ವೈತಮಯವಾಗಿದ್ದು ಯಥಾರ್ಥ ಜ್ಞಾನಕ್ಕೆ ಆಚಾರ್ಯರ ಭಾಗವತ ತಾತ್ಪರ್ಯದ ಅವಶ್ಯಕತೆಯಿದೆ. ಹರಿವಂಶವಾದರೂ ಸುಲುಭಶೈಲಿ ಅನುಷ್ಟುಪ್ ಛಂದಸ್ಸುಗಳಿಂದ ಸರಳವಾಗಿದೆ.

ಭಾಗವತಾದಿಗಳಲ್ಲಿ ಇರದ ವಿವರಣೆ ಹರಿವಂಶದಲ್ಲಿ ಕಾಣುತ್ತದೆ. ಹರಿವಂಶದಲ್ಲಿ ವಸ್ತು ವಿಷಯವನ್ನು ಆಮೂಲಾಗ್ರ ನಿರೂಪಿಸಲಾಗುತ್ತದೆ. ರುಗ್ಮಿಣೀ ಕಲ್ಯಾಣ ಮೊದಲಾದವು ಉದಾಹರಣೆ. ಪಾರಿಜಾತಾಪಹರಣ, ಜರಾಸಂಧ ಯುದ್ಧಾದಿಗಳಲ್ಲಿ ಹೇಳಿದ ವಿಷಯವನ್ನೆ ಬೇರೆ ಬೇರೆ ವ್ಯಕ್ತಿಗಳಿಂದ ಹೇಳಿಸಿರುತ್ತಾರೆ. ಅದೇ ಶ್ಲೋಕಗಳಿಂದಲೂ ಹೇಳಿದ್ದಿದೆ. ದಾರ್ಢ್ಯ ಹಾಗೂ ಶ್ರದ್ಧೆಗಾಗಿ ಹಾಗೆ ಹೇಳಲಾಗಿದೆ.

ಭಾರತ ಭಾಗವತದಲ್ಲಿ ಪಾರಿಜಾತ ವೃಕ್ಷದ ಸ್ವರೂಪ ವೈಶಿಷ್ಟ್ಯತೆ ಹೇಳಿಲ್ಲ. ಹರಿವಂಶದಲ್ಲಿ ಹೇಳಲಾಗಿದೆ. ಕೆಲವೆಡೆ ಮೂರು ಕಡೆಯಲ್ಲಿಯೂ ಸಮಾನವಾಗಿದೆ.

ಸಂವರಣ ರಾಜನನ್ನು ಭಾರತ-ಹರಿವಂಶ ಸಂವರಣನೆಂದಿದೆ. ಭಾಗವತ-ವಿಷ್ಣುಪುರಾಣವು ಅಜಮೀಢ ಎಂದಿದೆ. ಪ್ರತೀಪ ರಾಜನನ್ನು ಹರಿವಂಶ ಭೀಮಸೇನ ಎಂದಿದೆ. ಭಾಗವತ ಸಾರ್ವಭೌಮನೆಂದಿದೆ. ರುಗ್ಮಿಣಿಯ ವ್ರತೋಪವಾಸ, ಸತ್ಯಭಾಮೆಯ ಪುಣ್ಯಕವ್ರತ, ಘಂಟಾಕರ್ಣ ಪಿಶಾಚಿಯ ಕಥೆ, ಧನ್ಯಾಶ್ಚರ್ಯೋಪಾಖ್ಯಾನ ಸುಂದರವಾಗಿ ವರ್ಣಿತವಾಗಿವೆ. ಇವು ಭಾಗವತಾದಿಗಳಲ್ಲಿ ಕಾಣಬರುವುದಿಲ್ಲ. ಹೀಗೆ ಹರಿವಂಶವು ಅನೇಕಾಂಶಗಳಲ್ಲಿ ತನ್ನದೇ ಆದ ಶೈಲಿಯಿಂದ ಮೆರೆದಿದೆ.

ಆಚಾರ್ಯರು ರಾಮಾಯಣ ಹಾಗೂ ಮಹಾಭಾರತ, ಭಾಗವತಕ್ಕೆ ನಿರ್ಣಯ ಬರೆದಿದ್ದರೂ ಹರಿವಂಶ ನಿರ್ಣಯ ರಚಿಸಿಲ್ಲ. ಆದರೆ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿಯೆ ಹರಿವಂಶ ನಿರ್ಣಯ ಸೇರಿಸಿದ್ದಾರೆ. ತಾತ್ಪರ್ಯ ನಿರ್ಣಯದಲ್ಲಿ **'ಪುರಾಣೇಭ್ಯಸ್ತಥಾಽನ್ಯೇಭ್ಯಃ ಶಾಸ್ತ್ರೇಭ್ಯಃ ನಿರ್ಣಯಃ ಕೃತಃ'** ಎಂದಿದ್ದಾರೆ.

ತಾತ್ಪರ್ಯ ನಿರ್ಣಯದಲ್ಲಿ ಸಾಮಾನ್ಯವಾಗಿ ಹರಿವಂಶದ ಕಥೆಯನ್ನೇ ಅನುಸರಿಸಿದಂತೆ ಕಾಣುತ್ತದೆ.

ಹರಿವಂಶ ಪುರಾಣದ ಹರಿವಂಶ ಪರ್ವದಲ್ಲಿ ಆದಿಸೃಷ್ಟಿ, ಸೃಷ್ಟಿ ವಿಸ್ತಾರ, ಮನು, ಪೃಥುರಾಜರ ಉಪಾಖ್ಯಾನಗಳನ್ನೂ, ಪಿತೃ ಕರ್ಮದ ವಿಧಿ-ವಿಧಾನ, ಮಹಾತ್ಮೆಗಳನ್ನು ಕುರಿತ ಭಾರದ್ವಾಜರ ಕಥೆಯನ್ನು, ವಿಷ್ಣುಪರ್ವವಾದರೂ ಶ್ರೀಕೃಷ್ಣನ ಜೀವನ ಚರಿತ್ರೆ, ಅವನ ನೂರಾರು ಮಹಿಮೆಗಳನ್ನು ವಿಧವಿಧವಾಗಿ ವರ್ಣಿಸುತ್ತದೆ. ಮೂರನೇದಾದ ಭವಿಷ್ಯ ಪರ್ವವು ಶ್ರೀಕೃಷ್ಣ ಜೀವನದ ಉತ್ತರಭಾಗ, ಯುಗಧರ್ಮಗಳು, ಹರ್ಯವತಾರಗಳು, ವ್ರತಕಥೆಗಳನ್ನು ಚಿತ್ತರಿಸಲಾಗಿದೆ. ಇದೊಂದು ಸಂಪೂರ್ಣ ಪುರಾಣದ ಹತ್ತು ಲಕ್ಷಣಗಳುಳ್ಳ ಗ್ರಂಥರಾಜವೆನಿಸಿದೆ.

# - : ಕೃತಜ್ಞತೆಗಳು : -

ಪೇಜಾವರ ಶ್ರೀಗಳವರು ಮಾಧ್ವ ಸಮಾಜದಲ್ಲಿಯೇ ಜ್ಞಾನವೃದ್ಧರೂ, ವಯೋವೃದ್ಧರೂ, ಸಾಧನವೃದ್ಧರೂ, ಭಕ್ತಿವೃದ್ಧರೂ, ತ್ಯಾಗವೃದ್ಧರೂ ಆಗಿರುವರು.

ಮಾಧ್ವ ಸಮಾಜಕ್ಕಾಗಿ, ಬ್ರಾಹ್ಮಣರಿಗಾಗಿ, ಹಿಂದುಗಳಿಗಾಗಿ, ಭಾರತೀಯರಿಗಾಗಿ ತಮ್ಮನ್ನೇ ತಾವು ಅರ್ಪಿಸಿಕೊಂಡ ಅದ್ಭುತ ವ್ಯಕ್ತಿತ್ವವುಳ್ಳವರು.

ಯಾರೇ ವ್ಯಕ್ತಿ ದುಃಖದಲ್ಲಿದ್ದರೂ ಅವರನ್ನು ನೋಡಿ ಕನಿಕರಗೊಂಡು ಅವರಿಗೆ ಅವಶ್ಯಕ ವಸ್ತು ನೀಡುವ ದಯಾಮಯ ಗುಣ. ಪ್ರತಿಯೊಬ್ಬರೂ ತಮ್ಮ ಕಷ್ಟ ಅವರ ಮುಂದೆ ಹೇಳಿ ಸೂಕ್ತ ಪರಿಹಾರ ಪಡೆಯಬಹುದು.

ತನ್ನದೆಲ್ಲ ತನಗಾಗಿಯೆನ್ನದೆ, ತನ್ನವರಿಗಾಗಿ ಎನ್ನದೆ, ಸರ್ವರಿಗೂ ಎನ್ನುವ ಭಾವ ಬೇರೆಲ್ಲೂ ಸಿಗದ ಮಹಾಗುಣ. ಜಿತೇಂದ್ರಿಯರಾಗಿದ್ದವರಿಗೆ ಮಾತ್ರ ಇಂತಹ ಗುಣ ರಕ್ತಗತವಾಗಿರುತ್ತದೆ. ವಿಶ್ವಮಾನ್ಯರಿಂದ ವಿಶ್ವಮಾನ್ಯತೆ ಇವರಿಗೆ ಲಭಿಸಿದರೆ,

ವಿದ್ಯಾಮಾನ್ಯರಿಂದ ವಿದ್ಯಾಮಾನ್ಯತೆ ಲಭಿಸಿ 'ಒಂದರಲ್ಲಿ ಎರಡು' [Two in one] ಎಂಬ ತತ್ವಕ್ಕೆ ದೃಷ್ಟಾಂತವೆನಿಸಿರುವರು. ತಮ್ಮದೇ ಆದ ಅನುಭವದಿಂದ ಎಲ್ಲವೂ ಒಂದರಲ್ಲಿ [All in one] ಎಂಬ ತತ್ವ ಮೈಗೂಡಿಸಿಕೊಂಡವರು.

ಇದೆಲ್ಲ ಸಮಾಜದ ಸೇವೆ ಮಾಡಿದ ವಿಶ್ವೇಶರಿಗೆ ವಿಶ್ವ ಹಾಗೂ ತೀರ್ಥರು ಪಂಚಮ ಪರ್ಯಾಯವೆಂಬ ವಿಸ್ತೃತ ಪರ್ಯಾಯ ಭಾಗ್ಯ ದೊರಕಿಸಿದೆ. ಸುಮಾರು 37 ಗ್ರಂಥಗಳನ್ನು ನೀಡಿದ ಶ್ರೀಮಧ್ವರಿಗೆ 37 ಸುಧಾ ಮಂಗಳ ಮಾಡಿ ಜ್ಞಾನಿಗಳಿಗೆ ಮಹಾಕಾಣಿಕೆಯನ್ನು ಗುರುದಕ್ಷಿಣೆ ನೀಡಿರುವ ವಿಶ್ವಗುರುಗಳು. ವಾದಿರಾಜರಂತೆ ವಿಂಶತ್ಯುತ್ತರ ಶತಾಯುವಾಗಲಿ ಎಂದು ಸಮಸ್ತ ಮಾಧ್ವರೂ ಹಾರೈಸೋಣ.

ಈ ಪುಸ್ತಕಕ್ಕೆ ಪರಮಪೂಜ್ಯ ಶ್ರೀ 108 ಶ್ರೀ ವಿಶ್ವೇಶತೀರ್ಥರು ಸುಂದರವಾದ ಅನುಗ್ರಹ ನೀಡಿ ಪರಮಾನುಗ್ರಹ ಮಾಡಿರುವರು. ತಮ್ಮ ಅಮೂಲ್ಯ ಸಮಯವನ್ನು ನಮಗಾಗಿ–ಓದುಗರಿಗಾಗಿ ಮೀಸಲಾಗಿಟ್ಟು ಅನುಗ್ರಹಿಸಿದ್ದಾರೆ. ಅವರಿಗೆ ನನ್ನ ಭಕ್ತ್ಯಾದರ ಪೂರ್ವಕ ನಮಸ್ಕಾರಗಳನ್ನು ಅರ್ಪಿಸುವೆ.

ಈ 'ಹರಿವಂಶ ಪುರಾಣ' ಪುಸ್ತಕವನ್ನು ಸುಂದರವಾಗಿ ಅಕ್ಷರ ಸಂಯೋಜನೆ ಮಾಡಿ ಸಕಾಲಕ್ಕೆ ಒದಗಿಸಿದ ಮಹಾಲಕ್ಷ್ಮೀಲೇಔಟ್‌ನ ಎಸ್. ಎನ್. ರಮೇಶ್‌ರವರಿಗೂ ಕೃತಜ್ಞತೆ ಸಲ್ಲಿಸುವೆ.

ಮುಖಪುಟ ವಿನ್ಯಾಸವನ್ನು ಸುಂದರವಾಗಿ ಮಾಡಿಕೊಟ್ಟ ಕೆ.ಎಂ. ಶೇಷಗಿರಿಯವರಿಗೆ ನನ್ನ ಆಶೀರ್ವಾದ ಹಾಗೂ ಕೃತಜ್ಞತೆಗಳು.

ನಮ್ಮ ಸಂಸ್ಥೆಯ ಹತ್ತಾರು ಪುಸ್ತಕಗಳನ್ನು ಸುಂದರವಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟು ನಮ್ಮ ಸಂಸ್ಥೆಯ ಹಾಗೂ ಓದುಗರ ಪ್ರೀತಿಗಳಿಸಿರುವ ಹರಿ ಓಂ ಪ್ರಿಂಟರ್‌ನ ಮಾಲೀಕರಾದ ಶ್ರೀಯುತ ಪಂಚಾಕ್ಷರಿಯವರಿಗೂ, ಕೃತಜ್ಞತೆ ಸಲ್ಲಿಸುವೆ.

ಇತಿ ಸಜ್ಜನ ವಿಧೇಯ

**ಡಾ|| ಚತುರ್ವೇದಿ ಎಸ್. ವೇದವ್ಯಾಸಾಚಾರ್ಯ**

## ಅನುಕ್ರಮಣಿಕೆ



# ಹರಿವಂಶ ಪುರಾಣಂ

# 1. ಹರಿ ಪರ್ವ

ಹರಿ ಪರ್ವ ಮುಕ್ತಾಯ

* * * * * * *

## ೨. ವಿಷ್ಣು ಪರ್ವ

* * * * * * *

ಹರಿಪರ್ವ 01 ಹರಿಪರ್ವ

## ಅಥ ಪ್ರಥಮೋಽಧ್ಯಾಯಃ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ 1 ॥**

ಗ್ರಂಥಾದಿಯಲ್ಲಿ ಗ್ರಂಥ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು ನಮಸ್ಕರಿಸಿ, ದ್ಯೋತನಾದಿ ಗುಣಗಳುಳ್ಳ ಶ್ರೀ ಮಹಾಲಕ್ಷ್ಮೀದೇವಿಯನ್ನೂ, ಸಜೀವೋತ್ತಮನೆನಿಸಿದ ಬ್ರಹ್ಮವಾಯುಗಳನ್ನೂ, ಕೋಶಾಧಿಪತಿಯಾದ ಸರಸ್ವತೀ ಭಾರತೀದೇವಿಯರನ್ನೂ, ಉಪಸಾಧಕರಾದ ಶೇಷದೇವರನ್ನೂ, ನಮಸ್ಕರಿಸಿ ಇಂತಹ ಅತ್ಯದ್ಭುತ ಹರಿವಂಶ ಗ್ರಂಥವನ್ನು ನೀಡಿರುವ ನಾರಾಯಣನಿಂದ ಅಭಿನ್ನರಾದ ವೇದವ್ಯಾಸದೇವರನ್ನೂ ನಮಸ್ಕರಿಸಿದ ನಂತರ ಮಹಭಾರತವೆಂಬ ಇತಿಹಾಸ ಗ್ರಂಥದಲ್ಲಿರುವ, ಪುತ್ರ ಪೌತ್ರಾದಿ ಅಭೀಷ್ಟಿತ ನೀಡುವ ಹರಿವಂಶವನ್ನು ಪ್ರವಚನ ಮಾಡುವೆ.

**ನೈಮಿಷಾರಣ್ಯೇ ಕುಲಪತಿಃ ಶೌನಕಸ್ತು ಮಹಾಮುನಿಃ ।**
**ಸೌತಿಂ ಪಪ್ರಚ್ಛ ಧರ್ಮಾತ್ಮಾ ಸರ್ವಶಾಸ್ತ್ರವಿಶಾರದಃ ॥ 2 ॥**

ನಿಮಿಷ ಮಾತ್ರದಲ್ಲಿ ಧರ್ಮಾಚರಣೆಗೆ ಅಡ್ಡಿ ಮಾಡುವ ದೈತ್ಯರನ್ನು ಸಂಹಾರ ಮಾಡಿದ ಶ್ರೀಕೃಷ್ಣನ ವಿಶೇಷ ಸನ್ನಿಧಾನವುಳ್ಳ ನೈಮಿಷಾರಣ್ಯದಲ್ಲಿ ಮಹಾಮುನಿಯೂ, ಸರ್ವಶಾಸ್ತ್ರ ಪ್ರವೀಣನೂ, ಮಹಾಧರ್ಮಿಷ್ಠನೂ, ವಿದ್ಯಾರ್ಥಿ ಕುಲಕ್ಕೆ ಪತಿಯೂ ಆದ ಶುನಕ ಋಷಿಯ ಪುತ್ರ ಶೌನಕರು ಸೂತಪುರಾಣಿಕರನ್ನು ಈ ರೀತಿ ಕೇಳಿದರು.

*ಶೌನಕ ಉವಾಚ -*

**ಸೌತೇ! ಸುಮಹದಾಖ್ಯಾನಂ ಭವತಾ ಪರಿಕೀರ್ತಿತಮ್ ।**
**ಭಾರತಾನಾಂ ಚ ಸರ್ವೇಷಾಂ ಪಾರ್ಥಿವಾನಾಂ ತಥೈವ ಚ ॥ 3 ॥**
**ದೇವಾನಾಂ ದಾನವಾನಾಂ ಚ ಗಂಧರ್ವೋರಗ ರಕ್ಷಸಾಮ್ ।**
**ದೈತ್ಯಾನಾಮಥ ಸಿದ್ಧಾನಾಂ ಗುಹ್ಯಕಾನಾಂ ತಥೈವ ಚ ॥ 4 ॥**
**ಅತ್ಯದ್ಭುತಾನಿ ಕರ್ಮಾಣಿ ವಿಕ್ರಮಾ ಧರ್ಮ ನಿಶ್ಚಯಾಃ ।**
**ವಿಚಿತ್ರಾಶ್ಚ ಕಥಾಯೋಗಾಃ ಜನ್ಮ ಚಾಗ್ರ್ಯಮನುತ್ತಮಮ್ ॥ 5 ॥**
**ಕಥಿತಂ ಭವತಾ ಪುಣ್ಯಂ ಪುರಾಣಂ ಶ್ಲಕ್ಷ್ಣಯಾ ಗಿರಾ ।**
**ಮನಃಕರ್ಣಸುಖಂ ಸೌತೇ ಪ್ರೀಣಾತಿ ಅಮೃತ ಸಂಮಿತಮ್ ॥ 6 ॥**
**ತತ್ರ ಜನ್ಮ ಕುರೂಣಾಂ ವೈ ತ್ವಯೋಕ್ತಂ ಲೋಮಹರ್ಷಣೇ ।**
**ನತು ವೃಷ್ಣ್ಯಂಧಕಾನಾಂ ವೈ ತದ್ ಭವಾನ್ ಪ್ರಬ್ರವೀತು ಮೇ ॥ 7 ॥**

ಶೌನಕಾದಿ ಸೂತರಿಗೆ ಹೇಳುವರು - "ಸೂತರೇ, ತಾವು ಮಹಾಭಾರತವೆಂಬ ಅದ್ಭುತ ಆಖ್ಯಾನವನ್ನು ನನಗೆ ಬಿತ್ತರಿಸಿರುವಿರಿ. ಭರತವಂಶದ ಚರಿತ್ರೆ, ಅವರೊಂದಿಗೆ ಮೈತ್ರಿಯಿಂದಿದ್ದ ಅನೇಕ ರಾಜರುಗಳು, ದೇವತೆಗಳು, ದಾನವರು, ಗಂಧರ್ವರು, ಸರ್ಪಗಳು, ರಾಕ್ಷಸರು, ದೈತ್ಯರು, ಸಿದ್ಧರು, ಗುಹ್ಯಕರು ಇವರು ತೋರಿಸಿದ ಅತ್ಯದ್ಭುತ ಕರ್ಮಗಳನ್ನು ತಿಳಿಸಿರುವಿರಿ. ಇವರ ಚರಿತ್ರೆ ಹಾಗೂ ಆಚಾರಗಳು ಧರ್ಮಸ್ವರೂಪವನ್ನು ಶಿಕ್ಷಣ ನೀಡುತ್ತವೆಯಷ್ಟೆ! ಈ ಮಹಾನುಭಾವರ ಜನ್ಮವೆ ಒಂದು ಆಶ್ಚರ್ಯ.

ಇವರ ಕಥೆಗಳಾದರೂ ಚಿತ್ರವಿಚಿತ್ರ. ಇಂತಹ ಪುಣ್ಯಚರಿತ್ರೆಯನ್ನು ತಿಳಿಯಾದ ಭಾಷೆಯಲ್ಲಿ ಬಿತ್ತಿರಿಸಿರುವ ತಾವು ನಿಜವಾಗಲೂ ಅಭಿನಂದನಾರ್ಹರು. ನಿಮ್ಮ ಬಾಯಿಂದ ಪುಣ್ಯವಂತರ ಹಾಗೂ ಪುಣ್ಯ ಶ್ಲೋಕ್ಯನಾದ ಶ್ರೀಹರಿಯ ಶ್ರವಣಮನಕಾನಂದ ನೀಡುವ ಅಮೃತೋಪಮವಾದ ಕಥೆಗಳನ್ನು ನಮಗೆ ಪಾನ ಮಾಡಿಸಿರುವಿರಿ. ತಾವು ಭರತವಂಶದ ಕಥೆ ಹೇಳುವಾಗ ಕುರುವಂಶದ ಕಥೆಯನ್ನು ವಿಸ್ತರಿಸಿ ಹೇಳಿರುವಿರಿ. ಆದರೆ ವೃಷ್ಣಿ- ಅಂಧಕರ ಚರಿತ್ರೆಯನ್ನು ಶ್ರವಣ ಮಾಡಿಸಿದರೆ ನಾವು ಕೃತಾರ್ಥರಾಗುವೆವು. ಅದನ್ನು ವಿಸ್ತರಿಸಿ ಹೇಳಿರಿ" ಎಂದರು.

*ಸೂತ ಉವಾಚ-*

ಜನಮೇಜಯೇನ ಯತ್ ಪೃಷ್ಟಃ ಶಿಷ್ಯೋ ವ್ಯಾಸಸ್ಯ ಧರ್ಮವಿತ್ ।
ತತ್ ತೇऽಹಂ ಸಂಪ್ರವಕ್ಷ್ಯಾಮಿ ವೃಷ್ಣೀನಾಂ ವಂಶಮಾದಿತಃ ॥ 8 ॥

ಶ್ರುತ್ವೇತಿಹಾಸಂ ಕಾರ್ತ್ಸ್ನ್ಯೇನ ಭಾರತಾನಾಂ ಸ ಭಾರತಃ ।
ಜನಮೇಜಯೋ ಮಹಾಪ್ರಾಜ್ಞಃ ವೈಶಂಪಾಯನಮಬ್ರವೀತ್ ॥ 9 ॥

ಸೂತರು ಶೌನಕರಿಗೆ ಹೇಳುವರು – ಶೌನಕರೇ! ನೀವು ನನ್ನನ್ನು ಕೇಳಿದಂತೆ ವೇದವ್ಯಾಸರ ಶಿಷ್ಯರಾದ ವೈಶಂಪಾಯನರನ್ನು ಜನಮೇಜಯನು ಪ್ರಶ್ನಿಸಿದ್ದನು. ವೈಶಂಪಾಯನರು ಜನಮೇಜಯನಿಗೆ ಹೇಳಿದ ವೃಷ್ಣಿವಂಶವನ್ನು ಆದಿಯಿಂದಲೂ ನಿನಗೆ ತಿಳಿಸುವೆ ಕೇಳು.

ಜನಮೇಜಯನು ವೈಶಂಪಾಯನರಿಂದ ಅತ್ಯದ್ಭುತವಾದ ಮಹಾಭಾರತವನ್ನು, ಅದರಲ್ಲಿ ವರ್ಣಿತವಾಗಿರುವ ಭಾರತೀಯರ ರಾಜಮಹಾರಾಜರ ಕಥೆಯನ್ನೂ ಆದ್ಯಂತ ಕೇಳಿ – ಆನಂದ ತುಂದಿಲನಾಗಿ ಋಷಿಯನ್ನುದ್ದೇಶಿಸಿ ಹೀಗೆಂದನು.

*ಜನಮೇಜಯ ಉವಾಚ –*

ಮಹಾಭಾರತಮಾಖ್ಯಾನಂ ಬಹ್ವರ್ಥಂ ಶ್ರುತಿವಿಸ್ತರಮ್ ।
ಕಥಿತಂ ಭವತಾ ಪೂರ್ವಂ ವಿಸ್ತರೇಣ ಮಯಾ ಶ್ರುತಮ್ ॥ 10 ॥

ತತ್ರ ಶೂರಾಃ ಸಮಾಖ್ಯಾತಾಃ ಬಹವಃ ಪುರುಷರ್ಷಭಾಃ ।
ನಾಮಭಿಃ ಕರ್ಮಭಿಶ್ಚೈವ ವೃಷ್ಣ್ಯಂಧಕಮಹಾರಥಾಃ ॥ 11 ॥

ತೇಷಾಂ ಕರ್ಮಾವದಾತಾನಿ ತ್ವಯೋಕ್ತಾನಿ ದ್ವಿಜೋತ್ತಮ ।
ತತ್ರ ತತ್ರ ಸಮಾಸೇನ ವಿಸ್ತರೇಣೈವ ಮೇ ಪ್ರಭೋ ॥ 12 ॥

ನ ಚ ಮೇ ತೃಪ್ತಿರಸ್ತೀಹ ಕಥ್ಯಮಾನೇ ಪುರಾತನೇ ।
ಏಕಶ್ಚೈವ ಮತೋ ರಾಶಿಃ ವೃಷ್ಣಯಃ ಪಾಂಡವಾಸ್ತಥಾ ॥ 13 ॥

ಭವಾಂಶ್ಚ ವಂಶಕುಶಲಃ ತೇಷಾಂ ಪ್ರತ್ಯಕ್ಷದರ್ಶಿವಾನ್ ।
ಕಥಯಸ್ವ ಕುಲಂ ತೇಷಾಂ ವಿಸ್ತರೇಣ ತಪೋಧನ ॥ 14 ॥

ಜನಮೇಜಯನು ಹೇಳುವನು -ಮಹರ್ಷಿಗಳೇ, ಶೃತ್ಯರ್ಥ ನಿರ್ಣಾಯಕ ಬಹ್ವರ್ಥಗರ್ಭಿತವೂ ಆದ ಮಹಾಭಾರತ ಆಖ್ಯಾನವನ್ನು ವಿಸ್ತಾರವಾಗಿ ತಿಳಿಸುವಿರಿ. ಈ ಸಂದರ್ಭದಲ್ಲಿ ಶೂರರಾದ ಪುರುಷಶ್ರೇಷ್ಠರ ಹೆಸರುಗಳನ್ನು ಅವರ ಘನಕಾರ್ಯದೊಂದಿಗೆ ತಿಳಿಸಿರುವಿರಿ. ಮಹಾರಥರೆನಿಸಿದ ವೃಷ್ಣಿ-ಅಂಧಕರ ಕಥೆಯನ್ನು ಸಂಕ್ಷೇಪವಾಗಿ ತಿಳಿಸಿದಿರಿ. ಆದರೆ ಇಷ್ಟರಿಂದಲೇ ನನ್ನ ಮನಸ್ಸು ತೃಪ್ತವಾಗಿಲ್ಲ. ವಿಸ್ತಾರವಾಗಿ ಕೇಳಬೇಕೆಂಬ ಇಚ್ಛೆ ಬಲವಾಗಿದೆ. ಪಾಂಡವರು ವೃಷ್ಣಿಗಳು ಒಂದೇ ಕುಟುಂಬದವರಂತಿದ್ದವರು. ಅವರ ಚರಿತ್ರೆಯನ್ನು ರಾಜರನ್ನು ಪ್ರತ್ಯಕ್ಷವಾಗಿಯೇ ಕಂಡಿರುವ ನೀವು ಅವರ ಕಥೆ ಹೇಳುವುದರಲ್ಲಿ ನಿಪುಣರೇ ಆಗಿರುವಿರಿ. ತಪೋಧನರೇ, ಅವರ ಕಥೆಯನ್ನು ವಿಸ್ತಾರವಾಗಿ ಚಿತ್ತರಿಸಿ ಹೇಳಿರಿ.

ಯಾರ ಯಾರ ಕುಲದಲ್ಲಿ ಯಾರು ಯಾರು ಜನಿಸಿದರೆಂದು ಅವರೆಲ್ಲರ ಚರಿತ್ರೆ ಕೇಳಬೇಕೆಂದಿರುವೆ. ಅದನ್ನೆಲ್ಲವನ್ನೂ ತಿಳಿಸಿರಿ. ಬ್ರಹ್ಮದೇವನ ಸೃಷ್ಟಿಗಿಂತ ಪೂರ್ವದಲ್ಲಿದ್ದ ಸೃಷ್ಟಿಯಿಂದಾರಂಭಿಸಿ ಸಮಸ್ತ ವಿಚಾರವನ್ನೂ ತಿಳಿಸಿರಿ ಎಂದನು.

*ಸೌತಿರುವಾಚ -*

**ಸತ್ಕೃತ್ಯ ಪರಿಪೃಷ್ಟಸ್ತು ಸ ಮಹಾತ್ಮಾ ಮಹಾತಪಾಃ ।**
**ವಿಸ್ತರೇಣಾನುಪೂರ್ವ್ಯಾ ಚ ಕಥಯಾಮಾಸ ತಾಂ ಕಥಾಮ್ ॥ 15 ॥**

*ವೈಶಂಪಾಯನ ಉವಾಚ-*

**ಶೃಣು ರಾಜನ್ ಕಥಾಂ ದಿವ್ಯಾಂ ಪುಣ್ಯಾಂ ಪಾಪಪ್ರಣಾಶಿನೀಮ್ ।**
**ಕಥ್ಯಮಾನಾಂ ಮಯಾ ಚಿತ್ರಾಂ ಬಹ್ವರ್ಥಾಂ ಶೃತಿಸಮ್ಮಿತಾಮ್ ॥ 16 ॥**
**ಯಶ್ಚೈನಾಂ ಧಾರಯೇತ್ ತಾತ! ಶೃಣುಯಾದ್ ವಾಪ್ಯಭೀಕ್ಷ್ಣಶಃ ॥ 17 ॥**
**ಸ್ವವಂಶಧಾರಣಂ ಕೃತ್ವಾ ಸ್ವರ್ಗಲೋಕೇ ಮಹೀಯತೇ ॥ 18 ॥**

ಹೀಗೆ ಶೌನಕಾದಿಗಳಿಂದ ಪ್ರಾರ್ಥಿಸಲ್ಪಟ್ಟ ಮಹಾತಪಸ್ವಿಗಳೂ, ಮಹಾನುಭಾವರೂ ಆದ ಸೂತರು ಕ್ರಮವಾಗಿ ವಿಸ್ತಾರವಾಗಿ ಹೇಳಲುಪಕ್ರಮಿಸಿದರು.

ವೈಶಂಪಾಯನರು ಜನಮೇಜಯನನ್ನು ಕುರಿತು ರಾಜನೇ, ಲೋಕಹಿತಕ್ಕಾಗಿ

ನೀನು ಪ್ರಶ್ನೆ ಮಾಡಿರುವಿ. ಈ ಕಥೆಯನ್ನು ಕ್ರಮವಾಗಿ ವಿಸ್ತಾರವಾಗಿಯೂ ನಿನಗೆ ತಿಳಿಸುವೆ. ಚಿತ್ರವಿಚಿತ್ರವೂ ಪಾಪಹಾರಿಣಿಯೂ, ಪುಣ್ಯಪ್ರದವೂ, ನಿರ್ಣಾಯಕವೂ ಆಗಿರುವ ಈ ಹರಿವಂಶ ಕಥೆಯನ್ನು ಯಾರು ಪದೇ ಪದೇ ಕೇಳುವರೋ ಅವರು ಇಹದಲ್ಲಿ ಪುತ್ರಪೌತ್ರಾದಿ ವಂಶಾಭಿವೃದ್ಧಿಯಾಗಿ ನಂತರ ಸ್ವರ್ಗಲೋಕದಲ್ಲಿ ಪೂಜ್ಯರಾಗುವರು.

**ಅವ್ಯಕ್ತಂ ಕಾರಣಂ ಯತ್ ತನ್ನಿತ್ಯಂ ಸದಸದಾತ್ಮಕಮ್ ।**
**ಪ್ರಧಾನಂ ಪುರುಷಂ ತಸ್ಮಾತ್ ನಿರ್ಮಮೇ ವಿಶ್ವಮೀಶ್ವರಮ್ ॥ 19 ॥**

**ತಂ ವೈ ವಿದ್ಧಿ ಮಹಾರಾಜ ಬ್ರಹ್ಮಾಣಮಮಿತೌಜಸಮ್ ।**
**ಸ್ರಷ್ಟಾರಂ ಸರ್ವಭೂತಾನಾಂ ನಾರಾಯಣಪರಾಯಣಮ್ ॥ 20 ॥**

**ಅಹಂಕಾರಸ್ತು ಮಹತಸ್ತಸ್ಮಾದ್ ಭೂತಾನಿ ಜಜ್ಞಿರೇ ।**
**ಭೂತಭೇದಾಶ್ಚ ಭೂತೇಭ್ಯಃ ಇತಿಸರ್ಗಃ ಸನಾತನಃ ॥ 21 ॥**

ಕಾರ್ಯಕಾರಣಾತ್ಮಕವಾದ ನಿತ್ಯವಾದ ಮೂಲಪ್ರಕೃತಿಯು ಮಹತ್ತತ್ತ್ವಾದಿಗಳನ್ನು ಕುರಿತು ಉಪಾದಾನ ಕಾರಣವಾಗಿದೆ. ಸತ್ವರಜಸ್ಸು, ತಮಸ್ಸೆಂಬ ತ್ರಿಗುಣಗಳಿಗೆ ಕಾರಣವಾಗಿದ್ದು ಇದನ್ನು ಪ್ರಧಾನವೆನ್ನುವರು. ಸರ್ವಸಮರ್ಥ ಭಗವಂತನು ಪ್ರಧಾನ ಪುರುಷನನ್ನು ನಿರ್ಮಿಸಿದನು. ಇವನೇ ಮಹಾಸಾಮರ್ಥ್ಯಶಾಲಿಯಾದ ಚತುರ್ಮುಖ ಬ್ರಹ್ಮದೇವನು. ನಾರಾಯಣ ಪರಾಯಣನಾದ ಬ್ರಹ್ಮನೇ ಸಮಸ್ತ ಪ್ರಾಣಿ ಪ್ರಪಂಚ ಸೃಷ್ಟಿಸುವನು.

ಅವ್ಯಕ್ತತತ್ವದಿಂದ ಮಹತ್ತತ್ವವು ಜನಿಸಿತು. ಮಹತತ್ವದಿಂದ ಅಹಂಕಾರ ತತ್ವವ್ವೂ, ಇದರಿಂದ ಪಂಚಭೂತಗಳು, ಮೊದಲಾದ ಇಪ್ಪತ್ತನಾಲ್ಕು ತತ್ವಗಳು ಹುಟ್ಟಿದವು. ಸತ್ವಗುಣದಿಂದ ಉಪಬೃಂಹಿತವಾದ ರಜೋಗುಣದಿಂದ ಕೂಡಿರುವ ಮಹತತ್ವದಿಂದ, ಪಂಚಭೂತಗಳು, ಜ್ಞಾನೇಂದ್ರಿಯ, ಕರ್ಮೇಂದ್ರಿಯ ಸ್ವರೂಪವಾಗಿವುಳ್ಳ ತಮೋಗುಣವೇ ಪ್ರಧಾನವಾದ ಅಹಂಕಾರ ತತ್ವವು ಹುಟ್ಟಿತು. ಇದು ಪ್ರವಾಹತಃ ಅನಾದಿಯಾಗಿ ನಡೆದುಬರುತ್ತಿದೆ.

**ವಿಸ್ತಾರಾವಯವಂ ಚೈವ ಯಥಾಪ್ರಜ್ಞಂ ಯಥಾಶ್ರುತಮ್ ।**
**ಕೀರ್ತ್ಯಮಾನಂ ಶ್ರುಣು ಮಯಾ ಪೂರ್ವೇಷಾಂ ಕೀರ್ತಿವರ್ಧನಮ್ ॥22॥**

**ಧನ್ಯಂ ಯಶಸ್ಯಂ ಶತ್ರುಘ್ನಂ ಸ್ವರ್ಗಮಾಯುಃ ಪ್ರವರ್ಧನಮ್ ।**
**ಆವೃಷ್ಣಿವಂಶಾದ್ ವಕ್ಷ್ಯಾಮಿ ಭೂತಸರ್ಗಮನುತ್ತಮಮ್ ॥ 23 ॥**

ರಾಜನೇ, ಈ ಹರಿವಂಶ ಕಥೆಯನ್ನು ನಾನು ನನ್ನ ಗುರುಗಳಿಂದ ಕೇಳಿದಂತೆ, ನನಗೆಷ್ಟು ಹೇಳಲು ಸಾಮರ್ಥ್ಯವಿದೆಯೋ ಅಷ್ಟನ್ನು ಹೇಳುವೆ. ಈ ವಿಸ್ತಾರವಾದ ಕಥೆ ಹರಿಯ ಕೀರ್ತಿಯನ್ನು ಒಳಗೊಂಡಿರುವ ರಾಜರ ಕಥೆಗಳು. ಇದನ್ನು ಕೇಳುವುದರಿಂದ ಧನ್ಯತೆ, ಯಶಸ್ಸು, ಶತ್ರುನಾಶ, ಆಯುರಾಭಿವೃದ್ಧಿ, ಕಡೆಗೆ ಸ್ವರ್ಗಲೋಕ ನೀಡುವುದು. ಈ ಭೂತಗಳ ಸೃಷ್ಟಿಯನ್ನು ವೃಷ್ಣಿವಂಶದವರೆಗೂ ಹೇಳುವೆನು, ಕೇಳು.

**ತತಃ ಸ್ವಯಂಭೂಃ ಭಗವಾನ್ ಸಿಸೃಕ್ಷುಃ ವಿವಿಧಾ ಪ್ರಜಾಃ ।**
**ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ॥ 24 ॥**
**ಆಪೋ ನಾರಾ ಇತಿ ಪ್ರೋಕ್ತಾಃ ಆಪೋ ವೈ ನರಸೂನವಃ ।**
**ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥ 25 ॥**

ಸ್ವಯಂಭುವಾದ ಶ್ರೀಹರಿಯು ವಿವಿಧ ಪ್ರಜೆಗಳನ್ನು ಸೃಷ್ಟಿಸಲೋಸುಗ ಮೊದಲು ನೀರನ್ನು ಸೃಷ್ಟಿಸಿದನು. ಅದರಲ್ಲಿ ತನ್ನ ಶಕ್ತಿಯನ್ನು ಆಧಾನ ಮಾಡಿದನು. ನೀರಿಗೆ 'ನಾರಾ' ಎಂದು ಮತ್ತೊಂದು ಹೆಸರಿದೆ. ಇದರ ಉತ್ಪತ್ತಿ ನರನಾಮಕ ದೋಷ ರಹಿತ ಶ್ರೀಹರಿಯಿಂದ ಆಗಿದ್ದು ನರನಿಂದ ಉತ್ಪತ್ತಿ ಹೊಂದಿರುವುದೇ ನಾರಾ. ಇದರಲ್ಲಿ ಶ್ರೀಹರಿಯು ಮಲಗಿದ್ದರಿಂದ 'ನಾರಾಯಣ' ಎಂದು ಹೆಸರು ಪಡೆದ.

**ಹಿರಣ್ಯವರ್ಣಮಭವತ್ ತದಂಡಮುದಕೇಶಯಂ ।**
**ತತ್ರ ಜಜ್ಞೇ ಸ್ವಯಂ ಬ್ರಹ್ಮಾ ಸ್ವಯಂಭೂರಿತಿ ನಃ ಶ್ರುತಮ್ ॥ 26 ॥**
**ಹಿರಣ್ಯಗರ್ಭೋ ಭಗವಾನುಷಿತ್ವಾ ಪರಿವತ್ಸರಮ್ ।[1]**
**ತದಂಡಮಭವದ್ ದ್ವೈಧಂ ದಿವಂ ಭುವಮಥಾಪಿ ಚ ॥ 27 ॥**

1. 1) ಪರಿವತ್ಸರ – ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ವತ್ಸರವೆಂದು ಐದು ಭಾಗಗಳಿಗೆ ಸೂರ್ಯನು ಮೇಷಾದಿ ಸಂಕ್ರಮಣ ಮಾಡುವ ಕಾಲ ಸಂವತ್ಸರ. ಇದು 365 ದಿನಗಳಿರುತ್ತವೆ.

**ತಯೋಃ ಶಕಲಯೋಃ ಮಧ್ಯೇ ಆಕಾಶಮಸೃಜದ್ ವಿಭುಃ ।**
**ಅಪ್ಸು ಪಾರಿಪ್ಲವಾಂ ಪೃಥ್ವೀಂ ದಿಶಶ್ಚ ದಶಧಾ ದಧೇ ॥ 28 ॥**

ಭಗವಂತನ ವೀರ್ಯ ಅಮೋಘವಾದದ್ದು ನೀರಿನಲ್ಲಿದ್ದ ಆ ಶಕ್ತಿಯು ಬಂಗಾರದ ಬಣ್ಣವುಳ್ಳ ಬ್ರಹ್ಮಾಂಡವಾಯಿತು. ಇದರಲ್ಲಿಯೇ ಸ್ವಯಂನಾಮಕ ಶ್ರೀಹರಿಯಿಂದ ಬ್ರಹ್ಮದೇವನು ಕಾಣಿಸಿಕೊಂಡನು.

ಹಿರಣ್ಯಗರ್ಭನಾದರೂ ಒಂದು ಬೃಹಸ್ಪತಿಮಾನ ಕಾಲದಷ್ಟು ನೀರಿನಲ್ಲಿ ಮಲಗಿದ್ದು ಎರಡು ಭಾಗವನ್ನಾಗಿ ಮಾಡಿ, ಮೇಲಿನ ಭಾಗ ಊರ್ಧ್ವಲೋಕವೆಂದು, ಕೆಳಗಿನದ್ದು ಭೂಲೋಕವೆಂದು, ಮಧ್ಯದಲ್ಲಿರುವುದು ಅಂತರಿಕ್ಷಲೋಕವನ್ನಾಗಿ ವಿಭಾಗಿಸಿದನು.

ನೀರಿನ ಮೇಲಿರುವ ಪೃಥ್ವಿಯನ್ನು ಹತ್ತು ದಿಕ್ಕುಗಳನ್ನೂ ನಿಶ್ಚೈಯಿಸಿದನು.

**ತತ್ರ ಕಾಲಂ ಮನೋ ವಾಚಂ ಕಾಮಂ ಕ್ರೋದಮಥೋ ರತಿಮ್ ।**
**ಸಸರ್ಜ ಸೃಷ್ಟಿಂ ತದ್ರೂಪಾಂ ಸ್ರಷ್ಟುಮಿಚ್ಛನ್ ಪ್ರಜಾಪತೀನ್ ॥ 29 ॥**
**ಮರೀಚಿ ಮತ್ರ್ಯಂಗಿರಸಂ ಪುಲಸ್ತ್ಯಂ ಪುಲಹಂ ಕ್ರತುಮ್ ।**
**ವಸಿಷ್ಠಂ ಚ ಮಹಾತೇಜಾಃ ಸೋಽಸೃಜತ್ ಸಪ್ತ ಮಾನಸಾನ್ ॥ 30 ॥**
**ಸಪ್ತ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ ।**
**ನಾರಾಯಣಾತ್ಮಕಾನಾಂ ವೈ ಸಪ್ತಾನಾಂ ಬ್ರಹ್ಮಜನ್ಮನಾಮ್ ॥ 31 ॥**

ಬ್ರಹ್ಮದೇವನು ಈ ಬ್ರಹ್ಮಾಂಡದಲ್ಲಿ ಕಾಲಾಭಿಮಾನೀ, ಮನೋಭಿಮಾನೀ, ವಾಗಭಿಮಾನೀ, ಕಾಮಾಭಿಮಾನೀ ಕ್ರೋಧಾಭಿಮಾನಿಗಳನ್ನೂ, ರತಿಯಭಾವಗಳನ್ನೂ ಸೃಷ್ಟಿಸಿದನು. ಈ ಭಾವಗಳಿಗೆ ತಕ್ಕಂತೆ ಸೃಷ್ಟಿ ಮಾಡಬೇಕೆಂದು ಬಯಸಿ ಮರೀಚಿ, ಅತ್ರೀ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠರೆಂಬ ಏಳು ಮಹಾತೇಜಸ್ವಿಗಳಾದ ಪುತ್ರರನ್ನು ಮನಸ್ಸಿನಿಂದಲೇ ಸೃಷ್ಟಿಸಿದನು.

---

2) ಬೃಹಸ್ಪತಿಯು ಮೇಷಾದಿರಾಶಿ ತಿರುಗಲು 12 ವರ್ಷಬೇಕು. ಇದನ್ನೇ 'ಗುರ್ವಾವೃತ್ತ' ಎನ್ನಲಾಗಿದೆ.

3) ಅಶ್ವಿನೀ ಮೊದಲಾದ 27 ನಕ್ಷತ್ರಗಳು ಹನ್ನೆರಡು ಬಾರಿ ಸುತ್ತಲು ಬೇಕಾಗುವ ಕಾಲ 354 ದಿನಗಳು.

4) ಮುವತ್ತು ತಿಥಿಗಳು ಹನ್ನೆರಡು ಬಾರಿ ತಿರುಗುವ ಕಾಲ. ಮುನ್ನೂರಾರವತ್ತು ದಿವಸಗಳಿಗೆ ಬೇಕಾಗುವ ಕಾಲ ವತ್ಸರವು.

ಇವರೇ ಸಪ್ತಮಾನಸಪುತ್ರರು ಈ ಏಳು ಬ್ರಹ್ಮಪುತ್ರರು 'ಸಪ್ತಬ್ರಹ್ಮ'ರೆಂದೆ ಪುರಾಣದಲ್ಲಿ ಪ್ರಸಿದ್ಧಿ ಹೊಂದಿರುವರು. ಬ್ರಹ್ಮದೇವನಿಂದ ಜನಿಸಿ ನಿರಂತರ ನಾರಾಯಣ ಸನ್ನಿಧಾನವುಳ್ಳವರು.

## ರುದ್ರ ಸೃಷ್ಟಿ

**ತತೋಽಸೃಜತ್ ಪುನರ್ಬ್ರಹ್ಮಾ ರುದ್ರಂ ರೋಷಾತ್ಮ ಸಂಭವಮ್ ।**
**ಸನತ್‌ಕುಮಾರಂ ಚ ವಿಭುಂ ಪೂರ್ವೇಷಾಮಪಿ ಪೂರ್ವಜಮ್ ॥ 32 ॥**

**ಸಪ್ತೈತೇ ಜನಯಂತಿ ಸ್ಮ ಪ್ರಜಾ ರುದ್ರಶ್ಚ ಭಾರತ ।**
**ಸ್ಕಂಧಃ ಸನತ್ಕುಮಾರಶ್ಚ ತೇಜಃ ಸಂಕ್ಷಿಪ್ಯ ತಿಷ್ಠತಃ ॥ 33 ॥**

ಮುಂದೆ ಬ್ರಹ್ಮದೇವನು ತನ್ನ ಮನಸ್ಸಿನಿಂದ ಸನಕಾದಿಪುತ್ರರನ್ನು ಸೃಷ್ಟಿಸಿದನು. 'ನೀವೆಲ್ಲರೂ ಪ್ರಜಾಸೃಷ್ಟಿಯಲ್ಲಿ ತೊಡಗಿರಿ' ಎಂದು ಆದೇಶ ನೀಡಿದನು. ಅವರು ಪ್ರವೃತ್ತ ಧರ್ಮದಲ್ಲಿ ತೊಡಗಲು ಇಚ್ಛಿಸಲಿಲ್ಲ. ಹರಿಪರಾಯಣರಾದ ಅವರು ಪ್ರಜಾಸೃಷ್ಟಿ ಕಾರ್ಯದಲ್ಲಿ ಪ್ರವೃತ್ತರಾಗಲಿಲ್ಲ. ಮಕ್ಕಳು ತಂದೆಯ ಆಜ್ಞೆಯನ್ನು ಪಾಲಿಸದ ಕಾರಣ ವಿಧಿಯು ಕೋಪದಿಂದ ಕಿಡಿಯಾದನು. ಹೀಗೆ ಕೋಪಗೊಂಡ ಬ್ರಹ್ಮದೇವನ ಭ್ರೂಮಧ್ಯದಿಂದ ಒಬ್ಬ ಬಾಲಕನು ಜನಿಸಿದನು. ಇವನು ಕಾಲಾಗ್ನಿಯಂತೆ ಪ್ರಕಾಶಿಸುತ್ತಿದ್ದನು, ಪರಮಕೋಪಿಷ್ಠನಾಗಿದ್ದನು. ಕೋಪದಿಂದಾಗಿ ಅಳಲು ಪ್ರಾರಂಭಿಸಿದನು. ಇದಕ್ಕಾಗಿ ರುದ್ರನೆಂದು ಕರೆಯಲ್ಪಟ್ಟನು. ಜನಮೇಜಯನೇ, ಈ ಏಳು ಮರೀಚ್ಯಾದಿ ಸಪ್ತರ್ಷಿಗಳು ಹಾಗೂ ರುದ್ರದೇವನು ಇವರೇ ಮುಂದೆ ಪ್ರಜೆಗಳನ್ನು ಸೃಷ್ಟಿಸಲು ನಿಯುಕ್ತರಾದರು.

ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರಲ್ಲದೆ ಸ್ಕಂದ, ನಾರದರೂ ಬ್ರಹ್ಮನಪುತ್ರರೆ ಆಗಿರುವರು. ಇವರಲ್ಲಿ ಸನತ್ಕುಮಾರನು ಜ್ಞಾನಿಶ್ರೇಷ್ಠನಾಗಿದ್ದನು. ಸ್ಕಂಧನು ಮಹಾತೇಜಸ್ವಿಯಾಗಿದ್ದನು. ಇಬ್ಬರೂ ತಮ್ಮ ತೇಜಸ್ಸನ್ನು ಸಂಕ್ಷೇಪಿಸಿದ್ದರು.

**ತೇಷಾಂ ಸಪ್ತ ಮಹಾವಂಶಾಃ ದಿವ್ಯಾ ದೇವಗಣಾನ್ವಿತಾಃ ।**
**ಕ್ರಿಯಾವಂತಃ ಪ್ರಜಾವಂತೋ ಮಹರ್ಷಿಭಿರಲಂ ಕೃತಾಃ ॥ 34 ॥**

**ವಿದ್ಯುತೋಽಶನಿ ಮೇಘಾಂಶ್ಚ ರೋಹಿತೇಂದ್ರ ಧನೂಂಷಿ ಚ ।**
**ವಯಾಂಸಿ ಚ ಸಸರ್ಜಾದೌ ಪರ್ಜನ್ಯಂ ಚ ಸಸರ್ಜ ಹ ॥ 35 ॥**

**ಋಚೋ ಯಜೂಂಷಿ ಸಾಮಾನಿ ನಿರ್ಮಮೇ ಯಜ್ಞಸಿದ್ಧಯೇ ।**
**ಮುಖಾದ್ ದೇವಾನಜನಯತ್ ಪಿತೄಂಶ್ಚೇಶೋಽಪಿ ವಕ್ಷಸಃ ॥ 36 ॥**

ಮೇಲೆ ಹೇಳಿದ ಸಪ್ತರ್ಷಿಗಳಲ್ಲದೆ ದಿವ್ಯವಾದ ದೇವತಾಗಣವುಳ್ಳ ವಂಶಗಳಿವೆ. ಯಜ್ಞಯಾಗಾದಿ ಕ್ರಿಯಾಶೀಲರೂ, ಅನೇಕ ಪುತ್ರ ಪೌತ್ರಾದಿ ಸಂತಾನವುಳ್ಳವರೂ, ಮಹಾಜ್ಞಾನಿಗಳಿಂದ ಮುಕ್ತರಾದ ಇನ್ನೂ ಅನೇಕ ವಂಶಗಳಿವೆ.

ಬ್ರಹ್ಮದೇವನು ತನ್ನ ವಿವಿಧಾವಯವಗಳಿಂದ ವಿದ್ಯುತ್, ಸಿಡಿಲು, ಮೇಘ, ಕಾಮನಬಿಲ್ಲು, ಪಕ್ಷಿಗಣ, ಪರ್ಜನ್ಯನನ್ನು ಸೃಷ್ಟಿಸಿದನು.

ಯಜ್ಞಯಾಗಗಳಿಗೆ ಉಪಯುಕ್ತವಾದ ಋಗ್ವೇದ ಯಜುರ್ವೇದ, ಸಾಮವೇದಗಳನ್ನು ಆವಿಷ್ಕಾರಗೊಳಿಸಿದನು. ತನ್ನ ಮುಖದಿಂದ ದೇವತೆಗಳನ್ನು ಎದೆಯ ಭಾಗದಿಂದ ಪಿತೃಗಳನ್ನು ಸೃಷ್ಟಿಸಿದನು.

## ಮೈಥುನ ಸೃಷ್ಟಿ

**ಪ್ರಜನಾಚ್ಚ ಮನುಷ್ಯಾನ್ ವೈ ಜಘನಾತ್ ನಿರ್ಮಮೇಽಸುರಾನ್ ।**
**ಸಾಧ್ಯಾನ್ ಅಜನಯತ್ ದೇವಾನ್ ಇತ್ಯೇವಮನುಶುಶ್ರುಮ ॥ 37 ॥**

**ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತಸ್ಯ ಜಜ್ಞಿರೇ ।**
**ಆಪವಸ್ಯ ಪ್ರಜಾಸರ್ಗಂ ಸೃಜತೋ ಹಿ ಪ್ರಜಾಪತೇಃ ॥ 38 ॥**

**ಸೃಜ್ಯಮಾನಾಃ ಪ್ರಜಾಃ ನೈವ ವಿವರ್ಧಂತೇ ಯದಾ ತದಾ ।**
**ದ್ವಿಧಾ ಕೃತ್ವಾऽऽತ್ಮನೋ ದೇಹಮರ್ಧೇನ ಪುರುಷೋಽಭವತ್ ॥ 39 ॥**

**ಅರ್ಧೇನ ನಾರೀ ತಸ್ಯಾಂ ಸ ಸಸೃಜೇ ವಿವಿಧಾಃ ಪ್ರಜಾಃ ।**
**ದಿವಂ ಚ ಪೃಥಿವೀಂ ಚೈವ ಮಹಿಮ್ನಾ ವ್ಯಾಪ್ಯ ತಿಷ್ಠತಃ ॥ 40 ॥**

ಬ್ರಹ್ಮದೇವನು ತನ್ನ ಗುಹ್ಯೇಂದ್ರಿಯದಿಂದ ಮನುಷ್ಯರನ್ನು, ಜಘನ ಭಾಗದಿಂದ ಅಸುರರನ್ನು, ಸಾಧ್ಯರನ್ನೂ, ದೇವತೆಗಳನ್ನೂ ಸೃಷ್ಟಿಸಿದನೆಂದು ಕೇಳಿದ್ದೇವೆ.

ಹೀಗೆ ಜಲದಿಂದ ಹುಟ್ಟಿದ ಆಪವಬ್ರಹ್ಮದೇವನ ದೇಹಾವಯವಗಳಿಂದ ಉಚ್ಚ ಹಾಗೂ ನೀಚರಾದ ಪ್ರಜೆಗಳು ಜನಿಸಿದರು.

ಹೀಗೆ ಸನಕಾದಿಗಳನ್ನೂ ಪ್ರಜೇಶರನ್ನೂ ಸೃಷ್ಟಿಸಿದರೂ ಯಾವಾಗ ಸೃಷ್ಟಿಯು

ವಿಸ್ತಾರವಾಗಲಿಲ್ಲವೋ ಆಗ, ತನ್ನ ದೇಹವನ್ನು ಎರಡು ಭಾಗಗಳನ್ನಾಗಿಸಿದನು. ಬಲಭಾಗದಿಂದ ಸ್ವಾಯಂಭುವ ಮನುವನ್ನೂ, ಎಡಭಾಗದಿಂದ ಪರಮಸುಂದರ ಸ್ತ್ರೀಯಾದ **ಶತರೂಪಾದೇವಿ**[2]ಯನ್ನೂ ಸೃಷ್ಟಿಸಿದನು. **ಶತರೂಪಾದೇವಿ**ಯನ್ನು ಸ್ವಾಯಂಭುವ ಮನುನಿಗೆ ವಿವಾಹ ಮಾಡಿ ಮೈಥುನದಿಂದ ಪ್ರಜಾಸೃಷ್ಟಿ ಮಾಡಿಸಿದನು. ಮನು ಹಾಗೂ ಮನು ಪತ್ನಿಯರು ಸಂತಾನದಿಂದಾಗಿ ಭೂಮಿ ಸ್ವರ್ಗಗಳನ್ನು ವ್ಯಾಪಿಸಿ ನಿಂತರು.

---

2. ಶತರೂಪ ಹುಟ್ಟಿದ ಕೂಡಲೇ ಅಳಲು ಪ್ರಾರಂಭಿಸಿದಳು. ಬ್ರಹ್ಮದೇವನು ಕಾರಣ ಕೇಳಿದಾಗ - ತಂದೆಯೇ ನಾವು ಅಬಲೆಯರು - ಪರಾಧೀನರು, ಗರ್ಭಧರಿಸುವುದು ಧಾರಸಹಿಸುವುದು, ಹಡೆಯುವುದು ಲಾಲನೇ-ಪೋಷಣೆ, ಮಲಮೂತ್ರಗಳ ಶುದ್ಧಿ, ರೋಗನಾದಿಗಳು ಇವರನ್ನು ಕಾಡುವ ರೋಗರುಜಿನಗಳಿಂದ ರಕ್ಷಣೆ ಇವುಗಳನ್ನು ಮಾಡುವಾಗ ಆತ್ಮೋದ್ಧಾರಕ್ಕೆ ಸಮಯವೆಲ್ಲಿದೆ? ಮನಶ್ಶಾಂತಿಯೇ ಇರದ ಸ್ಥಿತಿಯಲ್ಲಿ ಏನು ಸಾಧನೆ ಮಾಡಬಲ್ಲೆವು? ಹರಿಸ್ಮರಣೆ ಮಾಡಲೂ ಸಮಯವಿಲ್ಲ ಎಂದಾಗ, ಬ್ರಹ್ಮದೇವನು - ಸಂಸಾರದಲ್ಲಿದ್ದರೂ ದೇಹಕೃತಕರ್ಮಬಂಧ ಅಂಟುವುದಿಲ್ಲ. ಆತ್ಮೋದ್ಧಾರಕ್ಕೆ ಗೃಹಕರ್ಮ ಪ್ರತಿಬಂಧಕವಾಗುವುದಿಲ್ಲ. ಅಲ್ಪಶೌಚಗಳಿಂದಲೇ ನಿಮಗೆ ಪೂರ್ಣಶುದ್ಧಿ. ದಿನನಿತ್ಯ ಕೆಲಸ, ಪತಿಸೇವೆ, ಮನೆಗೆಲಸ ಮಾಡುವಾಗಲು ಶ್ರೀಹರಿಯನ್ನು ಸ್ಮರಿಸಿ, ವಿಷ್ಣುಪೂಜೆಯೆಂದಾಗ, ಬ್ರಾಹ್ಮಣರು ತಪಸ್ಸಿನಿಂದ ಪಡೆಯಬಹುದಾದ ಫಲವೆ ನಿಮಗುಂಟು, ಸ್ತ್ರೀಯರೂ ಅಸ್ವತಂತ್ರರಾದರೂ ಅವರ ಪತಿ ಹಾಗೂ ಇತರ ಪುರುಷರು ಇವರ ಮನಸ್ಸಿನಂತೆ ನಡೆಯಲಿ.

ಅದ್ಯಪ್ರಭೃತಿ ನಾರೀಣಾಂ ಸಕ್ತಾನಾಂ ಗೇಹಕರ್ಮಸು ।
ಶೌಚೇನಾಲ್ಪೇನ ಶುದ್ಧಿ: ಸ್ಯಾತ್ ಪತಿಶುಶ್ರೂಷಣಂ ಹಿ ಯತ್ ॥
ವಿಷ್ಣುಪೂಜೇತಿ ಸಂಕಲ್ಪ್ಯ ಸ್ಮರಂತ್ಯ: ಕೇಶವಂ ಯದಿ ।
ಪ್ರಾಪ್ಸ್ಯಯು: ಮಹತೀಂ ಸಿದ್ಧಿಂ ಯಥಾ ಹಿ ತಪಸಾ ದ್ವಿಜಾ: ॥

ಸ್ತ್ರೀಯರ ಕುಡಿನೋಟ ಮಾತ್ರದಿಂದ ಮಂದಹಾಸ ಮಾತ್ರದಿಂದ ಆಕರ್ಷಿತರಾಗಲಿ, ವಿದ್ವಾಂಸರೂ ಬಲಿಷ್ಠರೂ ಸಹ ಮೋಹಗೊಳ್ಳುವರು. ಸನ್ಯಾಸಿಗಳೂ ಸಹ ಸ್ತ್ರೀಯರನ್ನು ನೋಡುವ ಮಾತ್ರದಿಂದ ಮೋಹಿತರಾಗಲಿ. ಹೀಗಾಗಿ ಅಸ್ವತಂತ್ರರಾದರೂ ಸ್ವತಂತ್ರರೇ ಸರಿ.

ಪರತಂತ್ರಾ: ಸ್ವತಂತ್ರಾಸ್ತಾ: ಸಬಲಾ ಅಬಲಾ ಅಪಿ ।
ಯಾಸಾಂ ಮನೋಽನುವರ್ತೇರನ್ ಜ್ಞಾನಿನೋಽಪಿ ಮಹಾಬಲಾ: ॥

*- ವಿಷ್ಣುರಹಸ್ಯ ಅಧ್ಯಾಯ 25-45-53*

**ವಿರಾಜಮಸೃಜದ್ ವಿಷ್ಣುಃ ಸೋಽಸೃಜದ್ ಪುರುಷಂ ವಿರಾಟ್ ।**
**ಪುರುಷಂ ತಂ ಮನುಂ ವಿದ್ಧಿ ತದ್ ವೈ ಮನ್ವಂತರಂ ಸ್ಮೃತಮ್ ॥ 41 ॥**
**ದ್ವಿತೀಯಮಾಪವಸ್ಯೈತನ್ ಮನೋರಂತರ ಮುಚ್ಯತೇ ।**
**ಸ ವೈರಾಜಃ ಪ್ರಜಾಸರ್ಗಂ ಸಸರ್ಜ ಪುರುಷಃ ಪ್ರಭುಃ ॥ 42 ॥**
**ನಾರಾಯಣವಿಸರ್ಗಂ ಸ ಪ್ರಜಾಃ ತಸ್ಯಾಪ್ಯಯೋನಿಜಾಃ ॥ 43 ॥**

ಭಗವಂತನು ಆಪವ ಪ್ರಜಾಪತಿಯನ್ನು ಸೃಷ್ಟಿಸಿದನು. ಅವನಾದರೂ ವಿರಾಟ್ ಪುರುಷನನ್ನು ಸೃಷ್ಟಿಸಿದನು. ಆ ಪುರುಷನೇ ಸ್ವಾಯಂಭುವ ಮನುವು. ಈ ಮನ್ವಂತರವು ***'ಸ್ವಾಯಾಂಭುವ ಮನ್ವಂತರ'***ವೆಂದು ಪ್ರಸಿದ್ಧಿ ಪಡೆಯಿತು. ಮನುವಿನಿಂದ ಸೃಷ್ಟವಾದ ಈ ಸೃಷ್ಟಿಯು *'ಮೈಥುನಸೃಷ್ಟಿ'.* ಮಾನಸ ಸೃಷ್ಟಿಯು ಮೊದಲನೆಯದಾದರೆ, ಇದು ಎರಡನೆಯ ಸೃಷ್ಟಿ. ಮನ್ವಂತರ ಪ್ರಾರಂಭವಾದದ್ದೂ ಇವನಿಂದಲೇ. ಸರ್ವ ಸಮರ್ಥ ಮನವು ಪ್ರಜಾಸೃಷ್ಟಿಯನ್ನು ಮಾಡಿದನು. ನಾರಾಯಣ ಕಲಾ ಸೃಷ್ಟಿಯೆಂದು ಬ್ರಹ್ಮನ ಸೃಷ್ಟಿಯು ಪ್ರಸಿದ್ಧವಾಗಿದೆ. ಬ್ರಹ್ಮನ ಸೃಷ್ಟಿಯು ಅಯೋನಿಜ ಸೃಷ್ಟಿಯಾದರೆ, ಮನುವಿನ ಸೃಷ್ಟಿ ಯೋನಿಜ ಎನಿಸಿದೆ.

**ಆಯುಷ್ಮಾನ್ ಕೀರ್ತಿಮಾನ್ ಧನ್ಯಃ ಪ್ರಜಾವಾನ್ ಶ್ರುತವಾಂಸ್ತಥಾ ।**
**ಆದಿಸರ್ಗಂ ವಿದಿತ್ವೇಮಂ ಯಥೇಷ್ಟಾಂ ಗತಿಮಾಪ್ನುಯಾತ್ ॥ 44 ॥**

ಈ ಆದಿಸರ್ಗವನ್ನು ಶ್ರವಣ-ಪಾರಾಯಣಾದಿಗಳನ್ನು ಮಾಡಿದವರು. ದೀರ್ಘಾಯುಷ್ಮಂತರೂ, ಕೀರ್ತಿವಂತರೂ, ಧನ್ಯರೂ, ಪುತ್ರವಂತರೂ, ಶಾಸ್ತ್ರಶ್ರವಣ ಯೋಗ್ಯತೆ ಹರಿಭಕ್ತ್ಯಾದಿಗಳನ್ನು ಹೊಂದಿ, ಮುಂದೆ ಯಥೇಷ್ಟಗತಿ ಹೊಂದುವರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಆದಿಸರ್ಗ ಕಥನವೆಂಬಲ್ಲಿ
ಮೊದಲನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 02 ಹರಿಪರ್ವ

# ಅಥ ದ್ವಿತೀಯೋಽಧ್ಯಾಯಃ

## ಸ್ವಾಯಂಭುವ ವಂಶಾವಳೀ

*ವೈಶಂಪಾಯನ ಉವಾಚ –*

**ಸ ಸೃಷ್ಟ್ವಾಸು ಪ್ರಜಾಸ್ವೇವಮಾಪವೋ ವೈ ಪ್ರಜಾಪತಿಃ ।**
**ಲೇಭೇ ವೈ ಪುರುಷಃ ಪತ್ನೀಂ ಶತರೂಪಾಮಯೋನಿಜಾಮ್ ॥ 1 ॥**

**ಆಪವಸ್ಯ ಮಹಿಮ್ನಾ ತು ದಿವಮಾವೃತ್ಯ ತಿಷ್ಠತಃ ।**
**ಧರ್ಮೇಣೈವ ಮಹಾರಾಜ! ಶತರೂಪಾ ವ್ಯಜಾಯತ ॥ 2 ॥**

**ಸಾ ತು ವರ್ಷಾಯುತಂ ತಪ್ತ್ವಾ ತಪಃ ಪರಮದುಶ್ಚರಮ್ ।**
**ಭರ್ತಾರಂ ದೀಪ್ತತಪಸಂ ಪುರುಷಂ ಪ್ರತ್ಯಪದ್ಯತ ॥ 3 ॥**

**ಸ ವೈ ಸ್ವಾಯಂಭುವಸ್ತಾತ ಪುರುಷೋ ಮನುರುಚ್ಯತೇ ।**
**ತಸ್ಯೈಕಸಪ್ತತಿಯುಗಂ ಮನ್ವಂತರ ಮಿಹೋಚ್ಯತೇ ॥ 4 ॥**

ಹೀಗೆ ಮಾನಸಿಕ ಹಾಗೂ ಅಯೋನಿಜ ಸೃಷ್ಟಿ ಮಾಡಲಿಚ್ಛಿಸಿದ ಬ್ರಹ್ಮದೇವನು ತನ್ನ ದೇಹವನ್ನೂ ಬಲಭಾಗ-ಎಡಭಾಗವೆಂದು ವಿಭಾಗಿಸಿ ಬಲಭಾಗದಿಂದ ಮನುವನ್ನು, ಎಡಭಾಗದಿಂದ ಶತರೂಪೆಯನ್ನು ಪಡೆದನು. ಇವಳು ಶುಕ್ರ-ಶೋಣಿತ ಸಂಬಂಧವಿಲ್ಲದೆ ಜನಿಸಿ ಅಯೋಜನಿಳೆನಿಸಿದಳು. ಬ್ರಹ್ಮದೇವನು ತನ್ನ ಮಹಿಮೆಯಿಂದ ದ್ಯುಲೋಕವ್ಯಾಪಿಸಿ ಇರುವ ಧರ್ಮದಿಂದಾಗಿ ಶತರೂಪೆಯಂತಹ ಪುತ್ರಿ ಹುಟ್ಟಿದಳು.

ಇವಳಾದರೂ ಹತ್ತು ಸಾವಿರ ವರ್ಷ ತಪಸನ್ನಾಚರಿಸಿ ಅತ್ಯಂತ ತೇಜಸ್ವಿಯಾದ

ಮನುವನ್ನು ತನ್ನ ಪತಿಯನ್ನಾಗಿ ಪಡೆದಳು. ಇವಳ ಪತಿಯೇ ಸ್ವಾಯಂಭುವ ಮನುವೆನಿಸಿದನು. ಇವನಿಂದಾಗಿ ಈ ಮನ್ವಂತರವೆನಿಸಿತು. ಕೃತತ್ರೇತಾದ್ವಾಪರ ಕಲಿಯುಗಗಳು ಎಪ್ಪತ್ತೊಂದು ಬಾರಿ ಆವೃತ್ತವಾದರೆ ಒಂದು **'ಮನ್ವಂತರ'**[1]ವೆನ್ನುವರು.

**ವೈರಾಜಾತ್ ಪುರುಷಾದ್ ವೀರಂ ಶತರೂಪಾ ವ್ಯಜಾಯತ ।**
**ಪ್ರಿಯವ್ರತೋತ್ತಾನಪಾದೌ ವೀರಾತ್ ಕಾಮ್ಯಾ ವ್ಯಜಾಯತ ॥ 5 ॥**

---

1. ಕೃತ – 17,28,000, ತ್ರೇತಾ –12,98,000, ದ್ವಾಪರ 8,64,000, ಕಲಿ – 4,32,000. ಒಟ್ಟು 43,20,000. ಇದನ್ನು 71ರಿಂದ ಗುಣಿಸಿದಾಗ 43,20,000 71 = 30,67,20,000 ವರ್ಷಗಳು. ಇದಕ್ಕೆ ಶ್ರೀಮದಾಚಾರ್ಯರು 18,50,000 ಸೇರಿಸಬೇಕೆಂದು ಹೇಳಿರುವರು. 30,67,20,000 + 18,50,000 = 30 ಕೋಟಿ, 85 ಲಕ್ಷ, 70 ಸಾವಿರ ವರ್ಷಗಳು. ಒಂದು ಮನ್ವಂತರವೆನಿಸುತ್ತದೆ. ವಾದಿರಾಜರು ನಿಖರವಾಗಿ ಹೀಗೆ ಹೇಳಿದ್ದಾರೆ.

   31 ಕೋಟಿ, 85 ಲಕ್ಷ, 71 ಸಾವಿರ, 428 ವರ್ಷಗಳು, 6 ತಿಂಗಳು, 25 ದಿವಸ, 17 ತಾಸು, 21 ಘಳಿಗೆ, ಸೇರಿಸಿದಾಗ ಒಂದು ಮನ್ವಂತರವಾಗುತ್ತದೆ. ಈ ಸಂಖ್ಯೆಗೆ 14 ರಿಂದ ಗುಣಿಸಿದಾಗ 14 ಮನ್ವಂತರಗಳ ಗಣಿತ ಸರಿ ಹೊಂದುತ್ತದೆ.

   **ಯುಗೈಕ ಸಪ್ತತೇರೂರ್ಧ್ವಂ ಸಾರ್ಧಾಷ್ಟಾದಶಲಕ್ಷಕಂ ।**
   **ವತ್ಸರಾಣಾಂ ಮನೋಃ ಭುಕ್ತಿಃ ಸಹಸ್ರಂ ಚತುರುತ್ತರಂ ॥ –ಭಾ.ತಾ. 3/12/24**

   ಮನುಗಳ ಪ್ರಲಯ ಕಾಲಗಳ ಅವಧಿ ಹೀಗಿದೆ – ಮೊದಲು ಆರು ಮನ್ವಂತರಗಳಲ್ಲಿ 1500 ವರ್ಷ ಮನ್ವಂತರ ಪ್ರಲಯಕಾಲವು. ಇದರಲ್ಲಿಯೂ ಸ್ವಾಯಂಭುವ ಪ್ರಲಯ ಕಾಲ 2000, ಎರಡನೇ ಸ್ವಾರೋಚಿಷ ಪ್ರಲಯ ಕಾಲವು 1500, ಮೂರನೇ ಉತ್ತಮದಲ್ಲಿ 1400, ಉಳಿದ ರೈವತ, ತಾಪಸ, ಚಾಕ್ಷುಷ, ವೈವಸ್ವತಾದಿ 1300 ವರ್ಷಗಳು ಪ್ರಲಯಕಾಲವು. ಇದು ಇಂದ್ರಾದಿ ದೇವತೆಗಳ ಭುಕ್ತಿಕಾಲವೂ ಹೌದು.

   **ಆದ್ಯೇಷು ಷಟ್ಸು ಪ್ರಥಮೇ ದ್ವಿಸಹಸ್ರಂ ಪ್ರಕೀರ್ತಿತಂ ।**
   **ವತ್ಸರಾಣಾಂ ಮನೋರಂತರೇವಮಿಂದ್ರಾದೀನಾಂ ಭವೇತ್ ॥**

   ಇಂತಹ ಸಾವಿರ ಮಹಾಯುಗಗಳ ಆವೃತ್ತಿಯು ಬ್ರಹ್ಮದೇವನ ಹಗಲು, ಅಷ್ಟೇ ರಾತ್ರಿಯು. ಇದರರ್ಥ – 43,20,000 ಮಹಾಯುಗಗಳ ಮೊತ್ತ. ಇದಕ್ಕೆ 1000 ಸೇರಿಸಿದರೆ 432 ಕೋಟಿ ವರ್ಷಗಳಾಗುತ್ತವೆ. ಇಂತಹ 360 ದಿವಸಗಳು ಒಂದು ವರ್ಷ. 4320000000 x 360 x ದಿನ 100 ವರ್ಷ. 155520000000000 ಮಾನವ ವರ್ಷಗಳು.

**ಕಾಮ್ಯಾ ನಾಮ ಮಹಾಬಾಹೋ ಕರ್ದಮಸ್ಯ ಪ್ರಜಾಪತೇಃ ।**

**ಕಾಮ್ಯಾ ಪುತ್ರಾಸ್ತು ಚತ್ವಾರಃ ಸಮ್ರಾಟ್, ಕುಕ್ಷಿಃ ವಿರಾಟ್ ಪ್ರಭುಃ ॥ 6 ॥**

**ಪ್ರಿಯವ್ರತಂ ಸಮಾಸಾದ್ಯ ಪತಿಂ ಸಾ ಸುಷುವೇ ಸುತಾನ್ ॥ 7 ॥**

ವೈರಾಜ ಪುರುಷ ಸ್ವಾಯಂಭುವ ಮನುವಿನಿಂದ ಶತರೂಪಾದೇವಿಯು "ವೀರ" ಎಂಬ ಮಹಾವೀರನನ್ನು ಹಡೆದಳು. ವೀರನಾದರು 'ಕಾಮ್ಯಾ' ಎಂಬ ತನ್ನ ಪತ್ನಿಯಲ್ಲಿ ಪ್ರಿಯವ್ರತರಾಜ ಹಾಗೂ ಉತ್ತಾನಪಾದನೆಂಬ ಇಬ್ಬರು ಪುತ್ರರನ್ನು ಪಡೆದನು. ಕಾಮ್ಯಾಯೆಂಬ ಮತ್ತೊಬ್ಬ ಕರ್ದಮ ಪ್ರಜಾಪತಿಯ ಮಗಳಿದ್ದಳು. ಅವಳನ್ನು ಪ್ರಿಯವ್ರತನು ವಿವಾಹವಾಗಿ 1) ಸಮ್ರಾಟ್, 2) ಕುಕ್ಷಿ, 3) ವಿರಾಟ್, 4) ಪ್ರಭುಯೆಂಬ ನಾಲ್ಕು ಪುತ್ರರನ್ನು ಪಡೆದನು.

**ಉತ್ತಾನಪಾದಂ ಜಗ್ರಾಹ ಪುತ್ರಮತ್ರಿಃ ಪ್ರಜಾಪತಿಃ ।**

**ಉತ್ತಾನಪಾದಾತ್ ಚತುರಃ ಸೂನೃತಾಜನಯತ್ ಸುತಾನ್ ॥ 8 ॥**

**ಧರ್ಮಸ್ಯ ಕನ್ಯಾ ಸುಶ್ರೋಣೀ ಸೂನೃತಾ ನಾಮ ವಿಶ್ರುತಾ ।**

**ಉತ್ಪನ್ನಾ ವಾಜಿಮೇಧೇನ ಧ್ರುವಸ್ಯ ಜನನೀ ಶುಭಾ ॥ 9 ॥**

ಉತ್ತಾನಪಾದನನ್ನು ಮಕ್ಕಳಿಲ್ಲದ ಅತ್ರಿ ಋಷಿಯು ದತ್ತು ಪುತ್ರನನ್ನಾಗಿ ಸ್ವೀಕರಿಸಿದನು. ಧರ್ಮನೆಂಬ ಪ್ರಜಾಪತಿಯು ಅಶ್ವಮೇಧಯಾಗವನ್ನು ಮಾಡಿದನು. ಸಂತಾನರಹಿತ ಧರ್ಮನಿಗೆ ಯಾಗದಿಂದ 'ಸೂನೃತಾ' ಎಂಬ ಕನ್ಯೆ ಹುಟ್ಟಿದಳು. ಇವಳನ್ನು ಉತ್ತಾನಪಾದನು ವಿವಾಹವಾಗಿ ಇವಳಿಂದ 1) ಧ್ರುವ, 2) ಕೀರ್ತಿಮಾನ್, 3) ಶಿವ, 4) ಶಾಂತ, 5) ಅಯಸ್ಪತಿಯೆಂಬ ಐದು ಮಕ್ಕಳನ್ನು ಪಡೆದನು. ಈ ಸೂನೃತಾ ಎಂಬುವಳೇ ಧ್ರುವನ ತಾಯಿಯಾದ ಸುನೀತಿಯು.

## [2]ಧ್ರುವ ಚರಿತ್ರೆ

**ಧ್ರುವೋ ವರ್ಷಸಹಸ್ರಾಣಿ ತ್ರೀಣೀ ದಿವ್ಯಾನಿ ಭಾರತ ।**

**ತಪಸ್ತೇಪೇ ಮಹಾರಾಜ ಪ್ರಾರ್ಥಯನ್ ಸುಮಹದ್ ಯಶಃ ॥ 10 ॥**

2. **ಧ್ರುವ** : ಸುನೀತಿ ಪುತ್ರ ಧ್ರುವನು. ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿದ್ದನು. ಮಹಾವಿಷ್ಣುವನ್ನು ಕುರಿತು ಉತ್ತಮ ತಪಸ್ಸನ್ನಾಚರಿಸಿದ್ದನು. ಮುಂದೆ ಇವನಿಗೆ ರಾಜಕುಮಾರನ ಸ್ನೇಹ ಬೆಳೆಯಿತು. ರಾಜಕುಮಾರನು ಸುಂದರನಾಗಿದ್ದು ರಾಜ್ಯದ

ಧ್ರುವನಾದರೂ ಮೂರು ಸಾವಿರ ದಿವ್ಯ ವರ್ಷಗಳಷ್ಟು ಕಾಲ ತಪಸ್ಸನ್ನು ಮಾಡಿದನು. ಯಾರೂ ಪಡೆಯದಿರುವ ಯಶಸ್ಸು ತನ್ನದಾಗಬೇಕೆಂಬ ಹಂಬಲ ಈ ತಪಸ್ಸಿಗೆ ಕಾರಣವಾಗಿತ್ತು.

## ಶುಕ್ರನಿಂದ ಧ್ರುವ ಪ್ರಶಂಸೆ

**ತಸ್ಮೈ ಬ್ರಹ್ಮಾ ದದೌ ಪ್ರೀತಃ ಸ್ಥಾನಮಪ್ರತಿಮಂ ಭುವಿ ।**
**ಅಚಲಂ ಚೈವ ಪುರತಃ ಸಪ್ತರ್ಷೀಣಾಂ ಪ್ರಜಾಪತಿಃ ॥ 11 ॥**

**ತಸ್ಯಾತಿಮಾತ್ರಾಮೃದ್ಧಿಂ ಚ ಮಹಿಮಾನಂ ನಿರೀಕ್ಷ್ಯ ಚ ।**
**ದೇವಾಸುರಾಣಾಮಾಚಾರ್ಯಃ ಶ್ಲೋಕಮಪ್ಯುಶನಾ ಜಗೌ ॥ 12 ॥**

---

ವಿವಿಧ ಭೋಗಗಳನ್ನೆಲ್ಲ ಅನುಭವಿಸುತ್ತಿದ್ದನು. ಇದನ್ನು ನೋಡಿ ತಾನು ಹೀಗೆ ರಾಜಕುಮಾರನಾಗಿ ವಿವಿಧ ಭೋಗ ಹೊಂದಬೇಕೆಂದು ಭಗವಂತನನ್ನು ಕುರಿತು ತಪಸ್ಸನ್ನಾಚರಿಸಿದನು. ಶ್ರೀಹರಿಯು ವರವಿತ್ತನು. ರಾಜಕುಮಾರನಾಗಬೇಕೆಂದು ಚಿಂತಿಸುತ್ತಾ ದೇಹ ಬಿಟ್ಟನು. ಮುಂದೆ ಉತ್ತಾನಪಾದನ ಪುತ್ರನಾದನು.

ಶ್ರೀಹರಿಯ ದರ್ಶನವಾಗಲು ಕೇವಲು ಆರು ತಿಂಗಳು ಇತ್ತು. ಸುರುಚಿಯ ಮಾತಿನಿಂದ ನೊಂದು ಕಾಡಿಗೆ ತಪಸ್ಸಿಗೆ ತೆರಳಿದ ಇವನಿಗೆ ನಾರದರು ಮಂತ್ರೋಪದೇಶ ನೀಡಿ ಮಧುವನಕ್ಕೆ ಹೋಗಲು ಆದೇಶಿಸಿದರು. ಆರುತಿಂಗಳು ಕಠಿಣ ತಪಸ್ಸನ್ನು ಮಾಡಿದಾಗ ಶ್ರೀಹರಿ ಮೈದೋರಿದನು. ವರಬೇಕು! ಎನ್ನಲು ನಮ್ಮ ತಂದೆಯೂ ಪಡೆಯದಿರುವ ಸ್ಥಾನಬೇಕೆಂದನು. ಶ್ರೀಹರಿಯು ತನ್ನ ಸ್ಥಾನವಾದ ಶಿಂಶುಮಾರಲೋಕವನ್ನು ನೀಡಿದನು. ಇದಲ್ಲದೆ 36 ಸಾವಿರ ವರ್ಷ ರಾಜ್ಯಭಾರ ಮಾಡು ಎಂದು ಹೇಳಿದನು. ಹಾಗೆಯೇ 36 ಸಾವಿರ ವರ್ಷ ರಾಜ್ಯಭಾರ ಮಾಡಿದನು. ಈ ಸಮಯದಲ್ಲಿ ಶಿಂಶುಮಾರನು ತನ್ನ ಪುತ್ರಿ ಭ್ರಮಿಯನ್ನು ಕೊಟ್ಟು ಧ್ರುವನಿಗೆ ವಿವಾಹ ಮಾಡಿದನು. ಇವಳಲ್ಲಿ ಕಲ್ಪ, ವತ್ಸರ ಎಂಬ ಮಕ್ಕಳಾದರು. ವಾಯುದೇವನೂ ತನ್ನ ಪುತ್ರಿ 'ಇಳೆ'ಯನ್ನು ನೀಡಿ ವಿವಾಹ ಮಾಡಿದನು. ಇವಳಲ್ಲಿ 'ಉತ್ಕಲ'ವೆಂಬ ಮಗನಾದನು. ಉತ್ಕಲವೆಂಬ ದೇಶ ಇವನಿಂದಲೇ ಆಯಿತು. ಧ್ರುವನಿಗೆ ಶಂಭು ಎಂಬ ಪತ್ನಿಯಲ್ಲಿ 'ಧನ್ಯ' ಮತ್ತು 'ಭವ್ಯ'ರೆಂಬ ಮಕ್ಕಳಾದರು. ಮುಂದೆ ಶಿಂಶುಮಾರನ (ಚೇಳು) ಕೊಂಡಿಯ ತುದಿಯಲ್ಲಿ ಭದ್ರವಾದ ಸ್ಥಾನ ಪಡೆದನು.

**ಯಸ್ಯ ಪುಚ್ಛಾಗ್ರೇ ಅರ್ವಾಗ್ ಭೂತ ಶಿರಸಃ**
**ಕುಂಡಲೀ ಭೂತದೇಹಸ್ಯ ಧ್ರುವಃ ಉಪಕಲ್ಪಿತಃ ॥** *–ಭಾಗ–5ನೇ ಸ್ಕಂಧ*

**ಅಹೋಽಸ್ಯ ತಪಸೋ ವೀರ್ಯಂ ಅಹೋ ಶ್ರುತಮಹೋ ಬಲಮ್ ।**
**ಯದೇನಂ ಪುರತಃ ಕೃತ್ವಾ ಧ್ರುವಂ ಸಪ್ತರ್ಷಯಃ ಸ್ಥಿತಾಃ ॥ 13 ॥**

ಸರ್ವಪ್ರಜಾರಕ್ಷಕ ಶ್ರೀಮನ್ನಾರಾಯಣನು ಧ್ರುವನ ಮೇಲೆ ಅತ್ಯಂತ ಪ್ರಸನ್ನನಾಗಿ ಸಪ್ತರ್ಷಿಗಳ ಸಮ್ಮುಖದಲ್ಲಿಯೆ ಅಚಲವಾದ ಸ್ಥಾನ ನೀಡಿ ಅನುಗ್ರಹಿಸಿದನು. ಧ್ರುವನ ಅತಿಮಾನುಷ ಮಹಿಮೆ ತಪೋವೃದ್ಧಿಯನ್ನು ನೋಡಿ, ದೇವಾಸುರರಿಗೂ ಮಾನ್ಯರಾದ ಶುಕ್ರಾಚಾರ್ಯರು ಒಂದು ಶ್ಲೋಕದಿಂದ ಗಾನ ಮಾಡಿದರು.

ಧ್ರುವರಾಜನ ತಪೋಬಲವಾದರೂ ಅನಿತರಸಾಧಾರಣವಾದದ್ದು ಇವನ ಪರಾಕ್ರಮ, ಶಾಸ್ತ್ರಜ್ಞಾನ, ಬಲಾದಿಗಳು ಪ್ರತಿಯೊಬ್ಬರನ್ನೂ ಆಶ್ಚರ್ಯವಿಮುಗ್ಧರನ್ನಾಗಿಸುತ್ತವೆ. ಇವನ ಶಕ್ತಿ ಅತ್ಯದ್ಭುತ. ಸಪ್ತರ್ಷಿಗಳೂ ಸಹ ಇವನನ್ನು ಮುಂದೆ ಮಾಡಿಕೊಂಡು ಸಂಚರಿಸುವರು.

## ಧ್ರುವನ ಸಂತತಿ

**ತಸ್ಮಾತ್ ಶ್ಲಿಷ್ಟಂ ಚ ಭವ್ಯಂ ಚ ಧ್ರುವಾಚ್ಛಂಭುಃ ವ್ಯಜಾಯತ ।**
**ಶ್ಲಿಷ್ಟೇಃ ಆಧತ್ತ ಸುಚ್ಛಾಯಾ ಪಂಚಪುತ್ರಾನ್ ಅಕಲ್ಮಶಾನ್ ॥ 14 ॥**
**ರಿಪುಂ ರಿಪುಂಜಯಂ ಪುಣ್ಯಂ ವೃಕಲಂ ವೃಕತೇಜಸಮ್ ।**
**ರಿಪೋರಾಧತ್ತ ಬೃಹತೀ ಚಾಕ್ಷುಷಂ ಸರ್ವತೇಜಸಮ್ ॥ 15 ॥**

ಧ್ರುವರಾಜನಿಗೆ ಶ್ಲಿಷ್ಟಿ, ಭವ್ಯವೆಂಬ ಮಕ್ಕಳಾದರು. ಭವ್ಯನಿಂದ 'ಶಂಭು' ಕುಮಾರನು ಜನಿಸಿದನು. ಶ್ಲಿಷ್ಟಿಗೆ ಸುಚ್ಛಾಯಾ ಎಂಬ ಪತ್ನಿಯಲ್ಲಿ ರಿಪು, ರಿಪುಂಜಯ, ವಿಪ್ರ, ವೃಕಲ, ವೃಕತೇಜಸ್ಸೆಂಬ ಐದು ಮಂದಿ ಪುತ್ರರಾದರು. ರಿಪುವಿನ ಪತ್ನಿಯಾದ ಬೃಹತಿಯಲ್ಲಿ ಮಹಾತೇಜಸ್ವಿಯಾದ ಚಾಕ್ಷುಷನು ಹುಟ್ಟಿದನು.

**ಅಜೀಜನತ್ ಪುಷ್ಕರಿಣ್ಯಾಂ ವೀರಣ್ಯಾಂ ಚಾಕ್ಷುಷೋ ಮನುಂ ।**
**ಪ್ರಜಾಪತೇರಾತ್ಮಜಾಯಾಂ ಅರಣ್ಯಸ್ಯ ಮಹಾತ್ಮನಃ ॥ 16 ॥**
**ಮನೋರಜಾಯಂತ ದಶ ನಡ್ವಲಾಯಾಂ ಮಹೌಜಸಃ ।**
**ಕನ್ಯಾಯಾಮಭವನ್ ಶ್ರೇಷ್ಠಾಃ ವೈರಾಜಸ್ಯ ಪ್ರಜಾಪತೇಃ ॥ 17 ॥**

**ಊರುಃ ಪೂರುಃ ಶತದ್ಯುಮ್ನಃ ತಪಸ್ವೀ ಸತ್ಯವಾನ್ ಕವಿಃ ।**

**ಅಗ್ನಿಷ್ಟುದ್ ಅತಿರಾತ್ರಶ್ಚ ಸುದ್ಯುಮ್ನಶ್ಚೇತಿ ತೇ ನವ ॥ 18 ॥**

**ಅಭಿಮನ್ಯುಶ್ಚ ದಶಮೋ ನಡ್ವಲಾಯಾಃ ಸುತಾಃ ಸ್ಮೃತಾಃ ॥ 19 ॥**

ಚಾಕ್ಷುಷನು ವೀರಣಪ್ರಜಾಪತಿಯ ಪುತ್ರಿಯಾದ ಪುಷ್ಕರಿಣಿಯಲ್ಲಿ ಮನುವೆಂಬ ಮಗನನ್ನು ಸೃಷ್ಟಿಸಿದನು. ಮನುವು ವೈರಾಜ ಪ್ರಜಾಪತಿಯ ಪುತ್ರಿ ನಡ್ವಲಾ ಎಂಬುವಳಲ್ಲಿ ಪುರು, ಕುರು, ಶತದ್ಯುಮ್ನ, ತಪಸ್ವಿ, ಸತ್ಯವಾನ್, ಶುಚಿ, ಅಗ್ನಿಷ್ಟೋಮ, ಸುದ್ಯುಮ್ನ ಅಭಿಮನ್ಯು ಎಂಬ ಹತ್ತು ಮಂದಿ ಪುತ್ರರನ್ನು ಪಡೆದನು.

ಊರುವಿಗೆ ಅಗ್ನಿಪುತ್ರಿಯಲ್ಲಿ ಅಂಗರಾಜ, ಸುಮನ, ಖ್ಯಾತಿ, ಕ್ರತು, ಅಂಗಿರಾ ಗಯರೆಂಬ ಕಾಂತಿಯುಕ್ತರಾದ ಆರು ಮಂದಿ ಮಕ್ಕಳಾದರು.

## ಪೃಥುರಾಜನ ಜನ್ಮ

**ಅಂಗಾತ್ ಸುನೀಥಾಪತ್ಯಂ ವೈ ವೇನಮೇಕಮಜಾಯತ ।**

**ಅಪಚಾರಾತ್ ತು ವೇನಸ್ಯ ಪ್ರಕೋಪಃ ಸುಮಹಾನಭವತ್ ॥ 20 ॥**

ಅಂಗರಾಜನು ಮೃತ್ಯುದೇವತೆಯ ಮಗಳಾದ ಸುನೀಥಾ ಎಂಬುವಳನ್ನು ಕೈಹಿಡಿದು ಸರ್ವರಿಗೂ ಪೀಡಾಕಾರಕನಾದ ವೇನನೆಂಬ ಮಗನನ್ನು ಪಡೆದ. **ವೇನ**[3]ನ ಅಪಚಾರ ಅನಾಚಾರ ಅತ್ಯಾಚಾರಗಳಿಂದ ಪ್ರಜೆಗಳು ನೊಂದಾಗ ಕೋಪಗೊಂಡ ಋಷಿಗಳು ಕೊಂದು ಹಾಕಿದರು.

---

3. ವೇನ : *ವೇನ ಪೀಡಾಯಾಂ* ಧಾತುವಿನಂತೆ ಜನರನ್ನು ಪೀಡಿಸುವವನೇ ವೇನ. ಇವನ ತಾಯಿ ಮೃತ್ಯುವೆಂಬ ಅಸುರನ ಮಗಳು. ರಂಭೆಯಿಂದ ಮೋಹಿನೀ ವಿದ್ಯೆ ಕಲಿತು, ಅದನ್ನು ಅಂಗರಾಜನ ಮೇಲೆ ಪ್ರಯೋಗಿಸಿ ಮದುವೆಯಾದಳು. ಅಂಗರಾಜನಿಗೆ ತಾನು ಮಾಡಿದ ಬಾಲಹತ್ಯೆಯಿಂದಾಗಿ ಮಕ್ಕಳು ಹುಟ್ಟಲಿಲ್ಲ ಕಡೆಗೆ ಒಬ್ಬ ದುಷ್ಟಮಗ ಹುಟ್ಟಿದ ಅವನೇ ವೇನ. ಇವನು ತಾಯಿಯ ತಂದೆಯಾದ ಅಸುರನಾದ ಮೃತ್ಯುವಿನ ಮನೆಯಲ್ಲಿಯೆ ಬೆಳೆದನು. ಮಾತಾಮಹನ ದೋಷದಿಂದಾಗಿ ಅತ್ಯಾಚಾರಾನಾಚಾರಗಳ ಆಕರನೆನಿಸಿದ್ದ. ಮೃತ್ಯು ದೇವತೆಗಳು ಯಮನ ಸೋದರ ಒಬ್ಬನು, ಅಸುರ ಮೃತ್ಯುವೊಬ್ಬನಿರುವನು. ಈ ಅಸುರ ಮೃತ್ಯುವೆ ವೇನನ ಮಾತಾಮಹನು.

## ಪೃಥು ಜನನ

**ಪ್ರಜಾರ್ಥಮೃಷಯೋ ಯಸ್ಯ ಮಮಂಥುಃ ದಕ್ಷಿಣಂ ಕರಮ್ ।**
**ವೇನಸ್ಯ ಪಾಣೌ ಮಥಿತೇ ಬಭೂವ ಮುನಿಭಿಃ ಪೃಥುಃ ॥ 21 ॥**

**ತಂ ದೃಷ್ಟ್ವಾ ಋಷಯಃ ಪ್ರಾಹುರೇಷ ವೈ ಮುದಿತಾಃ ಪ್ರಜಾಃ ।**
**ಕರಿಷ್ಯತಿ ಮಹಾತೇಜಾ ಯಶಶ್ಚ ಪ್ರಾಪ್ಸ್ಯತೇ ಮಹತ್ ॥ 22 ॥**

**ಸ ಧನ್ವೀ ಕವಚೀ ಖಡ್ಗೀ ತೇಜಸಾ ನಿರ್ದಹನ್ನಿವ ।**
**ಪೃಥುರ್ವೈನ್ಯಃ ತದಾ ಚೇಮಾಂ ರರಕ್ಷ ಕ್ಷತ್ರ ಪೂರ್ವಜಃ ॥ 23 ॥**

ನಂತರ ರಾಜ್ಯವು ಅರಾಜಕವಾಗಬಾರದೆಂದು ಯೋಚಿಸಿ, ಸತ್ತ ವೇನನ ದಕ್ಷಿಣ ಪಾಣಿಯನ್ನು ಮಥನ ಮಾಡಿದರು. ಹೀಗೆ ಮಥನ ಮಾಡಿದಾಗ ಜನಿಸಿದವನೇ ಪೃಥುಚಕ್ರವರ್ತಿ. ಋಷಿಗಳೆಲ್ಲರೂ ಇವನನ್ನು ನೋಡಿ ಭವಿಷ್ಯವಾಣಿ ನುಡಿದರು. ಇವನು ಪ್ರಜೆಗಳನ್ನು ಚೆನ್ನಾಗಿ ಸಂತೋಷ ಪಡಿಸುತ್ತಾನೆ. ಮಹಾತೇಜಸ್ವಿಯಾಗಿ ಮೆರೆದು ಲೋಕದಲ್ಲಿ ಉತ್ತಮ ಖ್ಯಾತಿ ಹೊಂದುವನು. ಅಜಗವವೆಂಬ ಧನಸ್ಸು, ಕವಚಧಾರಿಯಾಗಿ. ಧನಸ್ಸು, ಖಡ್ಗ ಇವುಗಳನ್ನು ಧರಿಸಿಯೆ ಹುಟ್ಟಿರುವ ಪೃಥುವು ದುಷ್ಟರಾಜನನ್ನು ತನ್ನ ತೇಜಸ್ಸಿನಿಂದ ಸುಟ್ಟು ಹಾಕುವನು. ಈ ಭೂಮಿಯನ್ನು ಚೆನ್ನಾಗಿ ಪರಿಪಾಲಿಸುವನು.

**ರಾಜಸೂಯಾಭಿಷಿಕ್ತಾನಾಮಾದ್ಯಃ ಸ ವಸುಧಾಧಿಪಃ ।**
**ತಸ್ಮಾಚ್ಚೈವ ಸಮುತ್ಪನ್ನೌ ನಿಪುಣೌ ಸೂತಮಾಗಧೌ ॥ 24 ॥**

**ತೇನೇಯಂ ಗೌಃ ಮಹಾರಾಜ ದುಗ್ಧಾ ಸಸ್ಯಾನಿ ಭಾರತ ॥ 25 ॥**

ಪೃಥು ಚಕ್ರವರ್ತಿಯು ರಾಜಸೂಯಯಾಗ ಮಾಡಿ ಮೊಟ್ಟ ಮೊದಲು ಮೂರ್ಧಾಭಿಷಿಕ್ತ ರಾಜನೆನಿಸಿದ. ಇವನಿಂದಲೇ ಸ್ತುತಿಪಾಠಕರಾದ ವಂದಿ ಮಾಗಧರು ಜನಿಸಿದರು. ಋಷಿಗಳು ಸೂತ-ಮಾಗಧರೆಂದು ಕರೆದು ವೇನರಾಜನ ದುಶ್ಶಾಸನ ಸಮಯದಲ್ಲಿ ಭೂಮಿಯು ತನ್ನಲ್ಲಿರುವ ಔಷಧಿ-ವನಸ್ಪತಿಗಳನ್ನು ತನ್ನ ಹೊಟ್ಟೆಯಲ್ಲಿ ಅಡಗಿಸಿಟ್ಟಿದ್ದಳು. ಇದರಿಂದಾಗಿ ಪ್ರಜೆಗಳೆಲ್ಲ ಹಸಿವೆಯಿಂದ ಕಂಗೆಟ್ಟಿದ್ದರು. ಪೃಥುರಾಜನು ಗೋದೋಹನ ಮಾಡಿ ಪುನಃ ಸಸ್ಯಶ್ಯಾಮಲವನ್ನಾಗಿಸಿದ. ಈ ಸಮಯದಲ್ಲಿ ಪಿತೃಗಳು, ದಾನವರು, ಗಂಧರ್ವರು, ಅಪ್ಸರಾಸ್ತ್ರೀಯರು, ಸರ್ಪಗಳು, ಯಕ್ಷರು, ಮೊದಲಾದವರು

ತಮ್ಮತಮ್ಮ ಪಾತ್ರೆಗಳಲ್ಲಿ ತಮಗೆ ಬೇಕಾದ ವಸ್ತುಗಳನ್ನು ದೋಹನ ಮಾಡಿಕೊಂಡರು. ಭೂಮಿಯು ಯಥೇಪ್ಸಿತ ಹಾಲನ್ನು ನೀಡಿತು.

## ಪೃಥು ಸಂತಾನ

**ಪೃಥುಪುತ್ರೌ ತು ಧರ್ಮಜ್ಞೌ ಜಜ್ಞಾತೇಽಂತರ್ಧಿ ಪಾಲಿತೌ ।**
**ಶಿಖಿಂಡಿನೀ ಹವಿರ್ಧಾನಂ ಅಂತರ್ಧಾನಾತ್ ವ್ಯಜಾಯತ ॥ 26 ॥**

**ಹವಿರ್ಧಾನಾತ್ ಷಡಾಗ್ನೇಯೀ ಧಿಷಣಾಽಜನಯತ್ ಸುತಾನ್ ।**
**ಪ್ರಾಚೀನ ಬರ್ಹಿಷಂ ಶುಕ್ಲಂ ಗಯಂ ಕೃಷ್ಣಂ ವ್ರಜಾಜಿನೌ ॥ 27 ॥**

ಮಹಾತ್ಮನಾದ ಪೃಥು ಚಕ್ರವರ್ತಿಯು ಅರ್ಚಿಸ್ ಎಂಬುವಳನ್ನು ವಿವಾಹವಾಗಿ ಅಂತರ್ಧಾನ ಮತ್ತು ಪಾಲಿತರೆಂಬ ಇಬ್ಬರು ಪುತ್ರರನ್ನು ಪಡೆದ. ಪಾಲಿತನಿಗೆ ಸಾದಿ ಎಂದು ನಾಮಾಂತರ. ಅಂತರ್ಧಾನನು ತನ್ನ ಪತ್ನಿ ಶಿಖಂಡಿನಿಯಲ್ಲಿ 'ಹವಿರ್ಧಾನ'ನೆಂಬ ಪುತ್ರರತ್ನನನ್ನು ಪಡೆದನು. ಮಹಾತ್ಮನಾದ ಹವಿರ್ಧಾನನು ಅಗ್ನಿಕುಲದ ಕನ್ಯೆಯಾದ 'ಧಿಷಣಾ' ಎಂಬ ತನ್ನ ಧರ್ಮಪತ್ನಿಯಲ್ಲಿ ಆರು ಮಂದಿ ಮಕ್ಕಳನ್ನು ಪಡೆದನು. 1) ಪ್ರಾಚೀನಬರ್ಹಿ, 2) ಶುಕ್ಲ, 3) ಗಯ, 4) ಕೃಷ್ಣ, 5) ವ್ರಜ, 6) ಅಜಿನರು. ಶುಕ್ಲನಿಗೆ ಶುಕ್ರನೆಂದು, ವ್ರಜನಿಗೆ ಮೃಜನೆಂದು ಹೆಸರಿತ್ತು.

**ಪ್ರಾಚೀನಬರ್ಹಿರ್ಭಗವಾನ್ ಮಹಾನಾಸೀತ್ ಪ್ರಜಾಪತಿಃ ।**
**ಹವಿರ್ಧಾನಾತ್ ಮಹಾರಾಜ ಯೇನ ಸಂವರ್ಧಿತಾಃ ಪ್ರಜಾಃ ॥ 28 ॥**

**ಪ್ರಾಚೀನಾಗ್ರಾಃ ಕುಶಾಸ್ತಸ್ಯ ಪೃಥಿವ್ಯಾಂ ಜನಮೇಜಯ ।**
**ಪ್ರಾಚೀನ ಬರ್ಹಿಃ ಭಗವಾನ್ ಪೃಥಿವೀ ತಲಚಾರಿಣಃ ॥ 29 ॥**

ಪ್ರಾಚೀನಬರ್ಹಿಯು ಮಹಾಭಾವನೂ, ಪೂಜ್ಯನೂ ಆಗಿದ್ದನು. ಇವನು ತನ್ನ ಯೋಗ್ಯತೆಯಿಂದ ಪ್ರಜಾಪತಿಪಟ್ಟವನ್ನು ಪಡೆದನು. ತನ್ನ ಜೀವಿತದ ಕಾಲದಲ್ಲಿ ನೂರಾರು ಯಜ್ಞಗಳನ್ನಾಚರಿಸಿ ಭೂಮಂಡಲದ ತುಂಬ ಪೂರ್ವಾಗ್ರವಾಗಿ ಹಾಸಿದ ದರ್ಭೆಗಳಿಂದಾಗಿ 'ಪ್ರಾಚೀನಬರ್ಹಿ' ಎಂದೆ ಯಥಾರ್ಥ ನಾಮಧೇಯನಾದನು.

**ಸಮುದ್ರತನಯಾಂ ತು ಕೃತದಾರೋಽಭವತ್ ಪ್ರಭುಃ ।**
**ಮಹತಸ್ತಪಸಃ ಪಾರೇ ಸವರ್ಣಾಯಾಂ ಮಹೀಪತಿಃ ॥ 30 ॥**

**ಸವರ್ಣಾಽಽಧತ್ತ ಸಾಮುದ್ರೀ ದಶ ಪ್ರಾಚೀನ ಬರ್ಹಿಷಃ ।**
**ಸರ್ವೇ ಪ್ರಚೇತಸೋ ನಾಮ ಧನುರ್ವೇದಸ್ಯ ಪಾರಗಾಃ ॥ 31 ॥**

ಪ್ರಾಚೀನ ಬರ್ಹಿರಾಜನು ಘೋರವಾದ ತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಸಂತುಷ್ಟಗೊಳಿಸಿದನು. ನಂತರ ಸಮುದ್ರನ ಕುಮಾರಿಯಾದ ಸವರ್ಣೆಯನ್ನು ವಿವಾಹವಾದನು. ಪ್ರಾಚೇತಸರೆಂಬ ಹತ್ತು ಪುತ್ರರತ್ನವನ್ನು ಪಡೆದನು. ಇವರೆಲ್ಲರೂ ಧನುರ್ವೇದದಲ್ಲಿ ಪ್ರಾವೀಣ್ಯರಾದವರು. ಧನುರ್ವೇದವೆಂದರೆ ಓಂಕಾರವೆಂಬ ಬಿಲ್ಲನ್ನು ಹೆದೆಏರಿಸಿ, ಮನಸ್ಸೆಂಬ ಬಾಣವನ್ನು ಪರಮಾತ್ಮನೆಂಬ ಲಕ್ಷ್ಯಕ್ಕೆ ಗುರಿತಪ್ಪದೆ ಹೊಡೆಯುವುದರಲ್ಲಿ ಅಗ್ರಗಣ್ಯರೆಂದರ್ಥ.

**ಅಪೃಥಗ್ ಧರ್ಮಚರಣಾಃ ತೇಽತಪ್ಯಂತ ಮಹತ್ತಪಃ ।**
**ದಶವರ್ಷ ಸಹಸ್ರಾಣಿ ಸಮುದ್ರಸಲಿಲೇಶಯಾಃ ॥ 32 ॥**

**ತಪಶ್ಚರತ್ಸು ಪೃಥಿವೀಂ ಪ್ರಚೇತಸ್ಸು ಮಹೀರುಹಾಃ ।**
**ಅರಕ್ಷ್ಯಮಾಣಾಃ ಆವವ್ರುಃ ಬಭೂವಾಽಥ ಪ್ರಜಾಕ್ಷಯಃ ॥ 33 ॥**
**ನಾಶಕತ್ ಮಾರುತೋ ವಾತುಂ ವೃತಂ ಖಮಭವದ್ ದ್ರುಮೈಃ ।**
**ದಶವರ್ಷಸಹಸ್ರಾಣಿ ನ ಶೇಕುಃ ಚೇಷ್ಟಿತುಂ ಪ್ರಜಾಃ ॥ 34 ॥**

ಪ್ರಾಚೀನ ಬರ್ಹಿಯು ತಮ್ಮ ಪುತ್ರರಿಗೆ – 'ಪುತ್ರರೇ, ಬ್ರಹ್ಮದೇವನು ನಮಗೆ ಪ್ರಜಾಭಿವೃದ್ಧಿಯನ್ನು ಮಾಡಲು ಆದೇಶಿಸಿರುವನು. ಆದ್ದರಿಂದ ನೀವೂ ಸಹ ಪ್ರಜಾಭಿವೃದ್ಧಿಯನ್ನು ಮಾಡುವವರಾಗಿರಿ. ಶೀಘ್ರವಾಗಿ ಸಂತಾನ ಅಭಿವೃದ್ಧಿಗೊಳಿಸಿರಿ' ಎಂದಾಗ, 'ತಂದೆಯೇ, ಹಾಗೆ ಆಗಲಿ, ಆದರೆ ಶೀಘ್ರವಾಗಿ ಪ್ರಜಾಭಿವೃದ್ಧಿಯಾಗಲು ನಮಗೆ ಮಹಾಸಾಮರ್ಥ್ಯ ಹೊಂದಲು ಮಾರ್ಗವಾವುದು' ಎಂದರು. ರಾಜನಾದರೂ 'ಸಂತಾನಗೋಪಾಲಕೃಷ್ಣ ಅನುಗ್ರಹವೆ ಬೇಕಾಗುತ್ತದೆ. ಅದಕ್ಕಾಗಿ ವಿಷ್ಣುವನ್ನೇ ತಪಸ್ಸನ್ನಾಚರಿಸಿರಿ' ಎಂದನು. ಪ್ರಚೇತಸರು ಭೂಮಿಯಲ್ಲಿ ತಪಸ್ಸಿಗೆ ವಿಘ್ನಬರಬಹುದೆಂದು ಸಮುದ್ರದ ಮಧ್ಯದಲ್ಲಿ ಏಕಾಗ್ರಚಿತ್ತದಿಂದ ಹತ್ತು ಸಾವಿರ ವರ್ಷಗಳವರೆಗೂ ಅಖಂಡ ತಪಸ್ಸನಾಚರಿಸಿದರು.

ರಾಜಕುಮಾರರೆಲ್ಲರೂ ತಪಸ್ಸಿಗಾಗಿ ಸಾಗರಕ್ಕೆ ಹೋದಂತೆ ಇತ್ತ ಭೂಮಂಡಲವೆಲ್ಲ ಗಿಡಮರ ದ್ರುಮ ಬಳ್ಳಿ ತ್ವಕ್ಸಾರಗಳಿಂದ ತುಂಬಿಹೋಯಿತು. ಪೃಥು–ಚಕ್ರವರ್ತಿಯು ಕಡಿದು ಹಾಕಿದ ಗಿಡಮರಗಳೆಲ್ಲವೂ ಈ ಹತ್ತು ಸಾವಿರ

ವರ್ಷದಲ್ಲಿ ಶಾಕೋಪಶಾಖೆಗಳಿಂದ ಹಬ್ಬಿ ಊರು ಕೇರಿಗಳನ್ನೆಲ್ಲ ಮುಚ್ಚಿಬಿಟ್ಟವು. ನೋಡಿದ ಕಡೆಗಳೆಲ್ಲೆಲ್ಲ ಗಿಡಮರಗಳೇ ಎದ್ದು ನಿಂತಿದ್ದವು. ಗಾಳಿಗೆ ಬೀಸಲು ಸ್ಥಳವಿಲ್ಲದಾಯಿತು. ಹತ್ತು ಸಾವಿರವರ್ಷ ಯಾವುದೇ ವ್ಯಾಪಾರ ಮಾಡಲು ಪ್ರಜೆಗಳು ಅಸಮರ್ಥರಾದರು. ಸಾಗರದ ಸಮೀಪದ ಸರೋವರದಲ್ಲಿ ತಪಸ್ಸಿಗೆ ತೊಡಗಿದಾಗ ರುದ್ರದೇವನು ರುದ್ರಗೀತೆಯನ್ನುಪದೇಶಿಸಿದನು.

**ತದುಪಶ್ರುತ್ಯ ತಪಸಾ ಯುಕ್ತಾಃ ಸರ್ವೇ ಪ್ರಚೇತಸಃ ।**
**ಮುಖೇಭ್ಯೋ ವಾಯುಮಗ್ನಿಂ ಚ ತೇಽಸೃಜನ್ ಜಾತಮನ್ಯವಃ ॥ 35 ॥**

**ಉನ್ಮೂಲಾನಥ ತಾನ್ ಕೃತ್ವಾ ವೃಕ್ಷಾನ್ ವಾಯುರಶೋಷಯತ್ ।**
**ತಾನಗ್ನಿರದಹದ್ ಘೋರಂ ಏವಮಾಸೀದ್ ದ್ರುಮಕ್ಷಯಃ ॥ 36 ॥**

**ಧ್ರುಮಕ್ಷಯಮಥೋ ಬುದ್ಧ್ವಾ ಕಿಂಚಿತ್ ಶಿಷ್ಟೇಷು ಶಾಖಿಷು ।**
**ಉಪಗಮ್ಯಾಬ್ರವೀದ್ ಏತಾನ್ ರಾಜಾ ಸೋಮಃ ಪ್ರಜಾಪತೀನ್ ॥ 37 ॥**

ಪ್ರಚೇತಸರು ಮಾಡಿದ ಉಗ್ರ ತಪಸ್ಸಿನಿಂದ ಶ್ರೀಹರಿಯು ಸಂತುಷ್ಟನಾಗಿ ಅವರಿಚ್ಛೆಯಂತೆ ತನ್ನ ದಿವ್ಯಾಪ್ರಾಕೃತ ಸಚ್ಚಿದಾನಂದ ರೂಪವನ್ನು ತೋರಿಸಿದನು. ನಿಮ್ಮ ವಂಶಾಭಿವೃದ್ಧಿಗೊಳಿಸುವ ದಕ್ಷಪ್ರಜಾಪತಿ ನಿಮಗೆ ಪುತ್ರನಾಗುವನು ಎಂದನು. ಪ್ರಾಚೇತಸರು ಪರಮಾತ್ಮನಿಂದ ಪ್ರಜಾಭಿವೃದ್ಧಿ ವರ ಪಡೆದು ಸಮುದ್ರತೀರದ ಸರೋವರದಿಂದ ಮೇಲೆ ಬಂದರು. ತಾವು ಇಲ್ಲದಿರುವಾಗ ಭೂಮಂಡಲವೆಲ್ಲ ಗಿಡಮರಗಳು ಬೆಳೆದು ನಾಡನ್ನೂ ಕಾಡನನ್ನಾಗಿ ಮಾಡಿದ್ದನ್ನು ನೋಡಿ ಕೋಪಗೊಂಡರು. ತಮ್ಮ ಬಾಯಿಯಿಂದ ಭಯಂಕರ ಬೆಂಕಿಯ ಜ್ವಾಲೆಗಳನ್ನು ಉಗುಳಿದರು. ಈ ಉರಿಯುವ ಅಗ್ನಿಗೆ ನಿಶ್ವಾಸದ ಗಾಳಿಯು ಜೊತೆಗೂಡಿ ಕಾಡ್ಗಿಚ್ಚಿನಂತೆ ಹರಡಿ ಗಿಡಮರಬಳ್ಳಿಗಳನ್ನೆಲ್ಲ ಸುಟ್ಟು ಬೂದಿ ಮಾಡಿತು. ಅವರು ಬಿಟ್ಟ ನಿಟ್ಟುಸಿರು ಸುಂಟರಗಾಳಿಯಂತೆ ಗಿಡಗಳನ್ನೆಲ್ಲ ಬುಡಸಹಿತ ಕಿತ್ತು ಹಾಕುತ್ತಿತ್ತು. ಹೀಗೆ ಬಿದ್ದುರುಳಿದ ಮರಗಳನ್ನು ಕೋಪಾಗ್ನಿಯು ಸುಟ್ಟು ಹಾಕುತ್ತಿತ್ತು. ಹೀಗೆ ಗಿಡಮರಬಳ್ಳಿಗಳೆಲ್ಲ ಸುಟ್ಟು ಭೂಮಂಡಲದಲ್ಲಿದ್ದ ವನನಾಶವಾಯಿತು. ಇದರಿಂದ ಬಯಲು, ಸ್ಥಳ ಪರ್ವತ ಮೊದಲಾದವು ಪ್ರತ್ಯೇಕವಾಗಿ ಕಾಣಿಸತೊಡಗಿತು.

ಹೀಗೆ ಜಗತ್ತಿನ ಗಿಡಮರಗಳೆಲ್ಲ ಕೋಪಾಗ್ನಿಗೆ ಆಹುತಿಯಾಗುತ್ತಿರುವುದನ್ನು ನೋಡಿ, ವೃಕ್ಷಗಳ ಅಧಿರಾಜನಾದ ಚಂದ್ರದೇವನು ಇನ್ನೂ ಸ್ವಲ್ಪ ವೃಕ್ಷಗಳು ಇರುವಾಗಲೇ ಓಡಿಬಂದನು. ಅವರೊಂದಿಗೆ ತನ್ನ ವಿಜ್ಞಾಪನೆ ಮಾಡಿಕೊಂಡನು.

**ಕೋಪಂ ಯಚ್ಛತ ರಾಜಾನಃ ಸರ್ವೇ ಪ್ರಾಚೀನ ಬರ್ಹಿಷಃ ।**
**ವೃಕ್ಷಶೂನ್ಯಾ ಕೃತಾ ಪೃಥ್ವೀ ಶಾಮ್ಯೇತಾಮಗ್ನಿಮಾರುತೌ ॥ 38 ॥**
**ರತ್ನಭೂತಾ ಚ ಕನ್ಯೇಯಂ ವೃಕ್ಷಾಣಾಂ ವರವರ್ಣಿನೀ ।**
**ಭವಿಷ್ಯಂ ಜಾನತಾ ತತ್ವಂ ಧೃತಾ ಗರ್ಭೇಣ ವೈ ಮಯಾ ॥ 39 ॥**
**ಮಾರಿಷಾ ನಾಮ ಕನ್ಯೇಯಂ ವೃಕ್ಷಾಣಾಮಿತಿ ನಿರ್ಮಿತಾ ।**
**ಭಾರ್ಯಾ ವೋಽಸ್ತು ಮಹಾಭಾಗಾಃ ಸೋಮವಂಶವಿವರ್ಧನೀ ॥ 40 ॥**
**ಯುಷ್ಮಾಕಂ ತೇಜಸೋಽರ್ಧೇನ ಮಮ ಚಾರ್ಧೇನ ತೇಜಸಾ ।**
**ಅಸ್ಯಾಂ ಉತ್ಪತ್ಸ್ಯತೇ ಪುತ್ರೋ ದಕ್ಷೋ ನಾಮ ಪ್ರಜಾಪತಿಃ ॥ 41 ॥**

ಪ್ರಾಚೀನ ಬರ್ಹಿರಾಜನ ಮಕ್ಕಳೇ, ಶಾಂತರಾಗಿರಿ, ಈ ವೃಕ್ಷಗಳನ್ನು ಉಳಿಸಿರಿ. ಈಗಾಗಲೇ ವೃಕ್ಷಗಳನ್ನೆಲ್ಲ ಕೋಪಾಗ್ನಿಯಲ್ಲಿ ಹೋಮ ಮಾಡಿರುವಿರಿ. ಮುಖಾಗ್ನಿ ಹಾಗೂ ಮುಖಮಾರುತನನ್ನು ಉಗುಳುವುದನ್ನು ನಿಲ್ಲಿಸಿ. ನಾನು ಉಳಿದಿರುವ ದ್ರುಮಗಳಿಗೂ ಹಾಗೂ ನಿಮಗೂ ಸಂಧಿಯನ್ನು ಮಾಡಲು ಸಂಧಾನಕರ್ತನಾಗಿ ಬಂದಿರುವೆನು. ನೋಡಿ ಈ ವೃಕ್ಷಗಳ ಕನ್ಯೆಯಾದ 'ಮಾರಿಷಾ' ಎಂಬ ಲಲನಾಮಣಿಯನ್ನು ಇವಳು ಸ್ತ್ರೀಕುಲಕ್ಕೆ ರತ್ನಪ್ರಾಯಳು. ಇವಳನ್ನು ನೀವು ಹತ್ತು ಮಂದಿ ವಿವಾಹವಾಗಿರಿ. ಇವಳು ನಿಶ್ಚಿತವಾಗಿಯೂ ನಿಮ್ಮ ವಂಶವನ್ನು ಅಭಿವೃದ್ಧಿಗೊಳಿಸುವಳು. ಮುಂದಿನ ಪ್ರಜಾಭಿವೃದ್ಧಿಯನ್ನು ತಿಳಿದೆ ನಾನು ಇವಳನ್ನು ಧರಿಸಿದ್ದೆ. ನಿಮ್ಮ ತೇಜಸ್ಸಿನೊಂದಿಗೆ ನನ್ನ ಅರ್ಧ ತೇಜಸ್ಸನ್ನು ಕೂಡಿಸುವೆ. ಇದರಿಂದಾಗಿ ಈ ಮಾರಿಷೆಯಲ್ಲಿ ಸಂತಾನೋತ್ಪತ್ತಿಯಲ್ಲಿ ದಕ್ಷನಾದ ದಕ್ಷ ಪ್ರಜಾಪತಿಯು ಜನಿಸುವನು.

### ಮಾರಿಷಾ–ಪ್ರಚೇತಸ ವಿವಾಹ – ದಕ್ಷ ಜನ್ಮ

**ಯ ಇಮಾಂ ದಗ್ಧ ಭೂಯಿಷ್ಠಾಂ ಯುಷ್ಮತ್ ತೇಜೋಮಯೇನ ವೈ ।**
**ಅಗ್ನಿನಾಗ್ನಿಸಮೋ ಭೂಯಃ ಪ್ರಜಾಃ ಸಂವರ್ಧಯಿಷ್ಯತಿ ॥ 42 ॥**

**ತತಃ ಸೋಮಸ್ಯ ವಚನಾದ್ ಜಗೃಹುಸ್ತೇ ಪ್ರಚೇತಸಃ ।**
**ಸಂಹೃತ್ಯ ಕೋಪಂ ವೃಕ್ಷೇಭ್ಯಃ ಪತ್ನೀ ಧರ್ಮೇಣ ಮಾರಿಷಾಮ್ ॥ 43 ॥**
**ಮಾರಿಷಾಯಾಂ ತತಸ್ತೇ ವೈ ಮನಸಾ ಗರ್ಭಮಾದಧುಃ ।**
**ದಶಭ್ಯಸ್ತು ಪ್ರಚೇತೋಭ್ಯಃ ಮಾರಿಷಾಯಾಂ ಪ್ರಜಾಪತಿಃ ॥ 44 ॥**
**ದಕ್ಷೋ ಜಜ್ಞೇ ಮಹಾತೇಜಾಃ ಸೋಮಸ್ಯಾಂಶೇನ ಭಾರತ ॥ 45 ॥**

ಪ್ರಾಚೀನ ಬರ್ಹಿರಾಜ ಕುಮಾರರೇ, ನೀಮ್ಮ ತಪೋರೂಪ ಅಗ್ನಿಯಿಂದ ಅಗ್ನಿ ಸಮಾನವರ್ಚಸ್ಕನಾದ ಪ್ರತಾಪಿಯಾದ ದಕ್ಷ ಪ್ರಜೇಶನು ಈ ದಗ್ಧ ಪ್ರಾಯವಾದ ಭೂಮಿಯನ್ನು ಪುನಃ ಸಸ್ಯಶ್ಯಾಮಲವನ್ನಾಗಿಸುವನು. ಪುನಃ ಪ್ರಜಾಭಿವೃದ್ಧಿಯನ್ನು ಮಾಡುವನು. ಹೀಗೆ ಹೇಳಿದ ಚಂದ್ರಮನ ಅಮೃತಸ್ರಾವಿ ಮಾತುಗಳಿಂದ ಆಪ್ಯಾಯಿತರಾದ ಪ್ರಚೇತಸರು **ಕಂಡುಋಷಿ**[4] ಹಾಗೂ ಪ್ರಮ್ಲೋಚಿಯರ ಪುತ್ರಿಯೂ, ವೃಕ್ಷ ತೇಜಸ್ಸು, ಚಂದ್ರನ ತೇಜಸ್ಸಿನಿಂದಲೂ ಸೌಂದರ್ಯವೇ ಮೂರ್ತಿವೆತ್ತಂತಿದ್ದ **ಮಾರಿಷೆ**[5]ಯನ್ನು ಧಾರ್ಮಿಕ

4. **ಕಂಡು ಋಷಿ :** ಕಂಡುಋಷಿಯು ಗೋಮತೀ ತೀರದಲ್ಲಿ ಉಗ್ರತಪಸ್ಸನ್ನು ಮಾಡುತ್ತಿದ್ದ. ಇಂದ್ರದೇವ ತಪೋಭಂಗಕ್ಕಾಗಿ ಪ್ರಮಲೋಚೆಯೆಂಬ ಅಪ್ಸರೆಯನ್ನು ಕಳುಹಿಸಿದ. ಇವಳೊಂದಿಗೆ ಮೋಹಗೊಂಡು, ಒಂಭೈನೂರ ಏಳುವರ್ಷ, ಆರು ತಿಂಗಳು, ಮೂರುದಿನಗಳಷ್ಟು ಕಾಲ ಸಂಸಾರಿಯಾಗಿದ್ದರು. ಹಗಲು-ರಾತ್ರಿ ಕಳೆದದ್ದೆ ತಿಳಿಯಲಿಲ್ಲ. ಒಂದು ದಿನ ಸಂಜೆ ಸ್ನಾನಕ್ಕೆ ತರಾತುರಿಯಿಂದ ಹೊರಟ ಕಂಡುವನ್ನು ಕಂಡು ಎಲ್ಲಿಗೆ ಹೊರಟರಿ ಎಂದಳು. ಸ್ನಾನ, ಸಂಧ್ಯೆ ಪೂಜೆ ಮಾಡಲೆಂದ. ಇಷ್ಟು ದಿವಸ ಇಲ್ಲದ್ದು ಇಂದೇನು? ಎಂದಳು. ಹಾಗಾದರೆ ಎಷ್ಟು ದಿವಸವಾಯ್ತು ನೀನು ಬಂದು. ಒಂಭೈನೂರ ಏಳುವರ್ಷ ಎಂದಳು. ಕೋಪದಿಂದ ಕಿಡಿಯಾಗಿ ಪಾಪಿಯೇ, ಸಾವಿರವರ್ಷ ನನ್ನ ತಪಸ್ಸನ್ನು ಹಾಳು ಮಾಡಿದೆಯೆಲ್ಲವೆ? ಎಂದು ಶಾಪಕೊಡಲು ದ್ಯುಕ್ತನಾದಾಗ ಗರ್ಭಿಣಿಯಾದ ಪ್ರಮ್ಲೋಚೆಯು ಭಯಕಂಪಿತಳಾದಳು. ಭಯದಿಂದ ಗರ್ಭ ಬೆವರಾಗಿ ಜಾರಿತು. ತೊಲಗು ಎಂದ. ಅವಳು ಬೆವರನ್ನು ವೃಕ್ಷಗಳ ಚಿಗುರಿನಿಂದ ಒರೆಸಿ ಕೆಳಗೆ ಹಾಕಿದಳು. ಅದರ ಮೇಲೆ ಚಂದ್ರನಕಾಂತಿ ಬಿತ್ತು. ಮಾರಿಷಾಯೆಂಬ ಕನ್ಯೆಯಾದಳು. ವೃಕ್ಷಗಳು ಕಾಪಾಡಿದವು. ಇದಕ್ಕಾಗಿ 'ವಾರ್ಕ್ಷಿ' ಎಂದು ಹೆಸರು. ಕಂಡುವು ಬ್ರಹ್ಮಪಾರಸ್ತೋತ್ರದಿಂದ ಹರಿಯನ್ನು ಒಲಿಸಿಕೊಂಡ.

5. **ಮಾರಿಷೆ :** ಇವಳು ಪೂರ್ವಜನ್ಮದಲ್ಲಿ ರಾಜನ ಮಡದಿಯಾಗಿದ್ದಳು. ಪತಿಯು ಅಲ್ಪಾಯುವಾದ್ದರಿಂದ ಬೇಗನೆ ವಿಧವೆಯಾದಳು. ಭಗವಂತನಿಗೆ ಶರಣಾದಳು.

ವಿಧಿವಿಧಾನಗಳಿಂದ ವಿವಾಹವಾದರು. ಈ ಮೊದಲು ಸ್ವಾಯಂಭುವ ಮನ್ವಂತರದಲ್ಲಿದ್ದ ದಕ್ಷನು ಬ್ರಹ್ಮನ ಪುತ್ರನಾಗಿದ್ದು ಶಿವನ ಕೋಪಕ್ಕೆ ತುತ್ತಾಗಿ ಮೇಷಮಸ್ತಕನಾದನು. ಪುನಃ ಚಾಕ್ಷುಷ ಮನ್ವಂತರದಲ್ಲಿ ದಕ್ಷನಾಗಿ ಹುಟ್ಟಿದನು.

## ದಕ್ಷ ಸಂತತಿ

**ಪುತ್ರಾನುತ್ಪಾದಯಾಮಾಸ ಸೋಮವಂಶ ವಿವರ್ಧನಾನ್ ।**
**ಅಚರಾಂಶ್ಚ ಚರಾಂಶ್ಚೈವ ದ್ವಿಪದೋऽಥ ಚತುಷ್ಪದಃ ॥ 46 ॥**

**ಸದೃಷ್ಟ್ವಾ ಮನಸಾ ದಕ್ಷಃ ಪಶ್ಚಾದಪ್ಯಸೃಜತ್ ಸ್ತ್ರಿಯಃ ।**
**ದದೌ ಸ ದಶ ಧರ್ಮಾಯ ಕಾಶ್ಯಪಾಯ ತ್ರಯೋದಶ ॥ 47 ॥**

**ಶಿಷ್ಟಾಃ ಸೋಮಾಯ ರಾಜ್ಞೇऽಥ ನಕ್ಷತ್ರಾಖ್ಯಾ ದದೌ ಪ್ರಭುಃ ।**
**ತಾಸು ದೇವಾಃ ಖಗಾಃ ನಾಗಾಃ ಗಾವೋ ದಿತಿಜಃ ದಾನವಾಃ ॥ 48 ॥**

**ಗಂಧರ್ವಾಪ್ಸರಸಶ್ಚೈವ ಜಜ್ಞಿರೇऽನ್ಯಾಂಶ್ಚ ಜಾತಯಃ ।**
**ತತಃ ಪ್ರಭೃತಿ ರಾಜೇಂದ್ರ ಪ್ರಜಾ ಮೈಥುನ ಸಂಭವಾಃ ॥ 49 ॥**

**ಸಂಕಲ್ಪಾದ್ ದರ್ಶನಾತ್ ಸ್ಪರ್ಶಾತ್ ಪೂರ್ವೇಷಾಂ ಸೃಷ್ಟಿರುಚ್ಯತೇ ॥ 50॥**

ದಕ್ಷಪ್ರಜಾಪತಿಯು ಸೋಮವಂಶವನ್ನು ಅಭಿವೃದ್ಧಿಗೊಳಿಸುವ ಪ್ರಜಾಭಿವೃದ್ಧಿಯನ್ನು ಬೆಳೆಸಿದನು. ಬ್ರಹ್ಮದೇವನ ಆದೇಶದಂತೆ ಪ್ರಜಾಭಿವೃದ್ಧಿ ಮಾಡಲುದ್ದೇಶಿಸಿ ಅನೇಕಾನೇಕ ಮಕ್ಕಳನ್ನು ತಾನೇ ಜನ್ಮ ನೀಡಿದನು. ಅವನು ಸ್ಥಾವರ-ಜಂಗಮಾತ್ಮಕವಾದ ಎರಡು ಕಾಲಿನ ಪ್ರಾಣಿಗಳನ್ನೂ, ಕೆಲವು ನಾಲ್ಕು ಕಾಲಿನ ಪ್ರಾಣಿಗಳನ್ನೂ ಸೃಷ್ಟಿ ಮಾಡಲಿಚ್ಛಿಸಿದನು. ಕೆಲವರನ್ನು ಮನಸ್ಸಿನಿಂದಲೇ ಸೃಷ್ಟಿಸಿದರೂ ಸೃಷ್ಟಿಯಲ್ಲಿ ವೃದ್ಧಿಯಾಗದಿದ್ದನ್ನು ನೋಡಿ, ಅನೇಕ ಮಕ್ಕಳನ್ನು ಹೆರುವ ಸ್ತ್ರೀಯರನ್ನು ಸೃಷ್ಟಿಸಿದನು. ಈ ಕನ್ಯೆಯರಲ್ಲಿ ಹತ್ತು ಮಂದಿಯನ್ನು

---

ಪರಿಪರಿ ಸೇವೆಯೆಸಗಿದಳು. ಭಗವಂತನು ಅವಳ ಮುಂದೆ ಮೈದೋರಿ ವರ ಬೇಡೆಂದ. ನನಗೆ ದೀರ್ಘಾಯುಷ್ಮಂತರಾದ ಹತ್ತು ಮಂದಿ ಪತಿಗಳು ಬೇಕು ಎಂದಳು. ಅದರಂತೆ ಪ್ರಚೇತಸರು ಇವಳು ವೃಕ್ಷಪುತ್ರಿಯಾದಾಗ ವಿವಾಹವಾಗಿ ದಕ್ಷನು ಜನಿಸಿದನು.

ಧರ್ಮನಿಗೆ ನೀಡಿದನು. ಹದಿಮೂರು ಮಂದಿ ಕಶ್ಯಪ ಋಷಿಗೂ, ಇಪ್ಪತ್ತೇಳು ನಕ್ಷತ್ರಗಳ ಹೆಸರುಳ್ಳ ಕನ್ಯೆಯರನ್ನು ಚಂದ್ರದೇವನಿಗೂ ಧಾರೆಯೆರೆದನು.

ಈ ಎಲ್ಲಾ ದಕ್ಷ ಕುಮಾರಿಯರಿಂದ ದೇವ, ದಾನವ, ದೈತ್ಯ, ಮಾನವ, ಪಶುಪಕ್ಷಿ, ಗಂಧರ್ವ, ನಾಗ ಮೊದಲಾದ ಬಗೆಯ ಜೀವ ಸಮೂಹ ಬೆಳೆಯಿತು.

ರಾಜನೇ ಅಂದಿನಿಂದ ಮೈಥುನ ಸೃಷ್ಟಿ ಪ್ರಾರಂಭವಾಯಿತೆಂದು ಹೇಳಬಹುದು. ಈ ಮೊದಲು ನೋಡಿದ ಮಾತ್ರದಿಂದಲೇ ಸಂತಾನವಾಗುತ್ತಿತ್ತು. ಮಹಾನುಭಾವರು ಮುಟ್ಟಿದರೂ, ವಾಯುವು ಕುಂತಿಯನ್ನು ಮುಟ್ಟಿದ ಮಾತ್ರಕ್ಕೆ ಭೀಮ ಹುಟ್ಟಿದಂತೆ ಹುಟ್ಟಿಸುತ್ತಿದ್ದರು. ಸಂಕಲ್ಪ ಮಾತ್ರದಿಂದಲೂ ಸೃಷ್ಟಿಸುವ ಸಾಮರ್ಥ್ಯ ಹೊಂದಿದ್ದರು. ಹೀಗೆ ಸಂಕಲ್ಪ ಶಕ್ತಿಯಿಂದ, ದರ್ಶನ ಶಕ್ತಿಯಿಂದ, ಸ್ಪರ್ಶನ ಶಕ್ತಿಯಿಂದಲೂ ಸೃಷ್ಟಿ ಮಾಡುವ ಶಕ್ತಿ ಮುಂದೆ ಕಾಣದಂತಾಗಿ ಸ್ತ್ರೀ–ಪುರುಷರ ಸಂಗದಿಂದ ಸೃಷ್ಟಿ ಮಾಡುವುದು ಆರಂಭವಾಯಿತು.

*ಜನಮೇಜಯ ಉವಾಚ –*

**ದೇವಾನಾಂ ದಾನವಾನಾಂ ಚ ಗಂಧರ್ವೋರಗ ರಕ್ಷಸಾಮ್ ।**
**ಸಂಭವಃ ಕಥಿತಃ ಪೂರ್ವಂ ದಕ್ಷಸ್ಯ ಚ ಮಹಾತ್ಮನಃ ॥ 51 ॥**

**ಅಂಗುಷ್ಠಾದ್ ಬ್ರಹ್ಮಣೋ ಜಾತಃ ದಕ್ಷಃ ಪ್ರೋಕ್ತಸ್ತ್ವಯಾನಘ ।**
**ವಾಮಾಂಗುಷ್ಠಾದ್ ತಥಾ ಚೈವ ತಸ್ಯ ಪತ್ನೀ ವ್ಯಜಾಯತ ॥ 52 ॥**

**ಕಥಂ ಪ್ರಾಚೇತಸತ್ವಂ ಸ ಪುನರ್ಲೇಭೇ ಮಹಾತಪಾಃ ॥ 53 ॥**

**ಏತನ್ಮೇ ಸಂಶಯಂ ವಿಪ್ರ ಸಮ್ಯಗಾಖ್ಯಾತುಮರ್ಹಸಿ ।**
**ದೌಹಿತ್ರಶ್ಚೈವ ಸೋಮಸ್ಯ ಕಥಂ ಶ್ವಶುರತಾಂ ಗತಃ ॥ 54 ॥**

ಜನಮೇಜಯನು ವೈಶಂಪಾಯನರನ್ನು ಕುರಿತು ಗುರುಗಳೇ, ಈ ಹಿಂದೆ ದೇವತೆಗಳು, ದಾನವರು, ಗಂಧರ್ವೋರಗ ರಾಕ್ಷಸರ ಸೃಷ್ಟಿಯನ್ನು ಚಿತ್ರಿಸಿದಿರಿ. ಈ ಸಂದರ್ಭದಲ್ಲಿಯೇ ಚತುರ್ಮುಖ ಬ್ರಹ್ಮದೇವನ ಬಲಗೈಯ ಅಂಗುಷ್ಠದಿಂದ ದಕ್ಷನನ್ನು, ಎಡಅಂಗುಷ್ಠದಿಂದ ಅವನ ಪತ್ನಿಯನ್ನು

ಸೃಷ್ಟಿಸಿದರೆಂದೂ ಹೇಳಿರುವಿರಿ. ಇಲ್ಲಿ ನನಗೆ ಒಂದು ಸಂಶಯ. ಈ ದಕ್ಷ ಪ್ರಜಾಪತಿಯು ಚಂದ್ರನ ಪುತ್ರಿಯಾದ ಮಾರಿಷಾಳಿಂದ ಹುಟ್ಟಿದನೆಂದೂ ತಿಳಿಸಿರುವಿರಿ. ಹಾಗಾದಲ್ಲಿ ಚಂದ್ರ ಪುತ್ರಿಯ ಮಗನೆಂದಾಯಿತು. ಚಂದ್ರನ ದೌಹಿತ್ರನಾದ ದಕ್ಷನು ತನ್ನ ಇಪ್ಪತ್ತೇಳು ಮಂದಿ ಹೆಣ್ಣುಮಕ್ಕಳನ್ನು ಚಂದ್ರನಿಗೆ ವಿವಾಹ ಮಾಡಿದನೆಂದಾದರೆ ತನ್ನ ಪುತ್ರಿಯರನ್ನು ತನ್ನ ಮಾತಾಮಹನಿಗೆ ನೀಡಿ ವಿವಾಹ ಮಾಡಿದನೆಂದರ್ಥ. ಅಂದರೆ ದೌಹಿತ್ರನು ಮಾತಾಮಹನಿಗೆ ಶ್ವಶುರನಾದನಲ್ಲವೆ? ಇದು ಹೇಗೆ ಎಂಬ ಸಂಶಯ ಪರಿಹರಿಸಿರಿ.

***ವೈಶಂಪಾಯನ ಉವಾಚ –***

**ಉತ್ಪತ್ತಿಶ್ಚ ನಿರೋಧಶ್ಚ ನಿತ್ಯೌ ಭೂತೇಷು ಪಾರ್ಥಿವ ।**
**ಋಷಯೋಽತ್ರ ನ ಮುಹ್ಯಂತಿ ವಿದ್ವಾಂಸಶ್ಚೈವ ಯೇ ಜನಾಃ ॥ 55 ॥**
**ಯುಗೇ ಯುಗೇ ಭವಂತ್ಯೇತೇ ಸರ್ವೇ ದಕ್ಷಾದಯೋ ನೃಪ ।**
**ಪುನಶ್ಚೈವ ನಿರುಧ್ಯಂತೇ ವಿದ್ವಾಂಸ್ತತ್ರನಮುಹ್ಯತಿ ॥ 56 ॥**
**ಜ್ಯೈಷ್ಠ್ಯಂ ಕಾನಿಷ್ಠ್ಯಮಪ್ಯೇಷಾಂ ಪೂರ್ವಂ ನಾಸೀದ್ ಜನಾಧಿಪ ॥ 57 ॥**
**ತಪ ಏವ ಗರಿಯೋಽಭೂತ್ ಪ್ರಭಾವಶ್ಚೈವ ಕಾರಣಮ್ ॥ 58 ॥**

ವೈಶಂಪಾಯನರು ಜನಮೇಜಯ ಜನರ ಹಿತಕ್ಕಾಗಿ ಒಳ್ಳೆಯದನ್ನೆ ಮಾಡಿರುವಿ. ದಕ್ಷನೇ ಮೊದಲಾದವರ ಉತ್ಪತ್ತಿ ನಿರೋಧಗಳು ಪ್ರತಿಯುಗದಲ್ಲಿಯೂ ನಡೆಯುತ್ತಿರುತ್ತದೆ. ಇದು ನಿತ್ಯವಾಗಿರುತ್ತದೆ. ಜ್ಞಾನಿಗಳಾದರೂ ಈ ವಿಷಯದಲ್ಲಿ ಮೋಹಗೊಳ್ಳುವುದಿಲ್ಲ. ನಿತ್ಯ ಉತ್ಪತ್ತಿ-ವಿನಾಶದಲ್ಲಿ ವಿದ್ವಾಂಸನು ಮೋಹಗೊಳ್ಳಬಾರದು. ಈ ಹಿಂದೆ ಇವನು ವಯೋಜ್ಯೇಷ್ಠ, ಇವನು ವಯಸ್ಸಿನಲ್ಲಿ ಕನಿಷ್ಠವೆಂಬ ಭೇದವಿದ್ದಿಲ್ಲ. ದೊಡ್ಡವ-ಚಿಕ್ಕವನೆಂಬಲ್ಲಿ ತಪಶ್ಶಕ್ತಿ ಅಧಿಕವಿದ್ದವರು ಜ್ಯೇಷ್ಠರೆಂದು ತಪಶ್ಶಕ್ತಿ ಜ್ಞಾನಶಕ್ತಿ ಕಡಮೆ ಇದ್ದವು. ಕನಿಷ್ಠರೆಂದು ವಿಭಾಗಿಸುತ್ತಿದ್ದರೇ ಹೊರತು, ವಯಸ್ಸು ಅವರ ಹಿರಿತನ-ಕಿರಿಯತನಕ್ಕೆ ಮಾಪಕವಾಗಿರಲಿಲ್ಲ. ಹೀಗಾಗಿ ತಪೋಧಿಕನಾದ ಚಂದ್ರನಿಗೆ ತನ್ನ ಪುತ್ರಿಯರನ್ನು ದಕ್ಷನು ನೀಡುರುವನು ಎಂದು ತಿಳಿ.

## ಅಧ್ಯಾಯದ ಫಲಸ್ತುತಿ

**ಇಮಾಂ ವಿಸೃಷ್ಟಿಂ ದಕ್ಷಸ್ಯ ಯೋ ವಿದ್ಯಾತ್ ಸಚರಾಚರಮ್ ।**
**ಪ್ರಜಾವಾನ್ ಆಪದುತ್ತೀರ್ಣಃ ಸ್ವರ್ಗಲೋಕೇ ಮಹೀಯತೇ ॥ 59 ॥**

ಯಾರ ಈ ದಕ್ಷ ಪ್ರಜಾಪತಿಯ ಹುಟ್ಟು, ಅವನ ಸಂತಾನದ ಹುಟ್ಟನ್ನು ತಿಳಿಯುತ್ತಾರೆಯೋ ಅವರು ಸತ್ಪುತ್ರವಂತರಾಗುವರು. ಆಪತ್ತುಗಳಿಂದ ಬಿಡುಗಡೆ ಹೊಂದಿ, ಅಂತ್ಯದಲ್ಲಿ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.

**ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ**
**ಪ್ರಾಚೀನಬರ್ಹಿ–ಪ್ರಚೇತಸರು–ದಕ್ಷಪ್ರಜಾಪತಿಯ**
**ಸೃಷ್ಟಿವಿಸ್ತಾರವೆಂಬಲ್ಲಿ**
**ಎರಡನೆಯ ಅಧ್ಯಾಯವು**
**॥ ಶ್ರೀಕೃಷ್ಣಾರ್ಪಣಮಸ್ತು ॥**

# ಅಥ ತೃತೀಯೋಽಧ್ಯಾಯಃ

## ದಕ್ಷಪ್ರಜಾಪತಿಸೃಷ್ಟಿ ವಿಸ್ತಾರ

*ಜನಮೇಜಯ ಉವಾಚ-*

**ದೇವಾನಾಂ ದಾನವಾನಾಂ ಚ ಗಂಧರ್ವೋರಗ ಯಕ್ಷಸಾಮ್ ।**
**ಉತ್ಪತ್ತಿಂ ವಿಸ್ತರೇಣೇಮಾಂ ವೈಶಂಪಾಯನ ಕೀರ್ತಯ ॥ 1 ॥**

*ವೈಶಂಪಾಯನ ಉವಾಚ -*

**ಪ್ರಜಾಃ ಸೃಜೇತಿ ವ್ಯಾದಿಷ್ಟಃ ಪೂರ್ವಂ ದಕ್ಷಃ ಸ್ವಯಂಭುವಾ ।**
**ಯಥಾ ಸಸರ್ಜ ಭೂತಾನಿ ತಥಾ ಶೃಣು ಮಹೀಪತೇ ॥ 2 ॥**

ಜನಮೇಜಯನು ವೈಶಂಪಾಯನರನ್ನುದ್ದೇಶಿಸಿ, ಗುರುಗಳೇ, ದೇವತೆಗಳ, ದಾನವರ ಗಂಧರ್ವಾದಿಗಳ ಉತ್ಪತ್ತಿಯನ್ನು ವಿಸ್ತಾರವಾಗಿ ಕೇಳಬೇಕೆಂದಿರುವೆ. ಅದನ್ನು ತಿಳಿಸಿರಿ ಎಂದು. ವೈಶಂಪಾಯನರು ಉತ್ತರಿಸುವರು – ರಾಜನೇ, ಬ್ರಹ್ಮದೇವನಿಂದ ಈ ಹಿಂದೆ ಪ್ರಜೆಗಳನ್ನು ಸೃಜಿಸು ಎಂದಾಗ ದಕ್ಷನು ಹೇಗೆ ಸೃಷ್ಟಿಸಿದನೋ ಅದೇ ಕ್ರಮದಲ್ಲಿ ವರ್ಣಿಸುವೆ ಕೇಳು.

**ಮಾನಸಾನ್ಯೇವ ಭೂತಾನಿ ಪೂರ್ವಮೇವಾಸೃಜತ್ ಪ್ರಭುಃ ।**
**ಋಷೀನ್ ದೇವಾನ್ ಸಗಂಧರ್ವಾನ್ ಅಸುರಾನಥ ರಾಕ್ಷಸಾನ್ ॥ 3 ॥**
**ಯಕ್ಷಭೂತ ಪಿಶಾಚಾಂಶ್ಚ ವಯಃ ಪಶು ಸರೀಸೃಪಾನ್ ।**
**ಯದಾಸ್ಯ ತಾಸ್ತು ಮಾನಸ್ಯೋ ನ ವ್ಯವರ್ಧಂತ ವೈ ಪ್ರಜಾಃ ॥ 4 ॥**

**ಅಪಧ್ಯಾತಾ ಭಗವತಾ ಮಹಾದೇವೇನ ಧೀಮತಾ ।**
**ನ ಮೈಥುನೇನ ಧರ್ಮೇಣ ಸಿಸೃಕ್ಷುಃ ವಿವಿಧಾಃ ಪ್ರಜಾಃ ॥ 5 ॥**

ಸಮರ್ಥನಾದ ದಕ್ಷನು ಮೊದಲು ಮನಸ್ಸಿನಲ್ಲಿ ಸಂಕಲ್ಪದಿಂದಲೇ ಪ್ರಜೆಗಳನ್ನು ಸೃಷ್ಟಿಸಿದನು. ಈ ಸೃಷ್ಟಿಯಿಂದಾಗಿ ದೇವ, ಋಷಿ, ಗಂಧರ್ವ, ಅಸುರ, ರಾಕ್ಷಸ, ಯಕ್ಷ, ಭೂತಪಿಶಾಚಿಗಳು, ಪಕ್ಷಿಗಳು, ಸರ್ಪಗಳು ಅಭಿವೃದ್ಧಿ-ಯಾದವು. ಆದರೂ ಅವನು ಯೋಚಿಸಿದಂತೆ ಪ್ರಜಾಭಿವೃದ್ಧಿ-ಯಾಗಲಿಲ್ಲ. ಹೀಗೆ ಮಾನಸೀ ಸೃಷ್ಟಿ ಅಭಿವೃದ್ಧಿಯಾಗದಿರಲು ಹಿಂದಿನ ವೈರದಿಂದಾಗಿ ಅಧಿಕ ಮಟ್ಟದಲ್ಲಿ ದಕ್ಷನ ಸಂತತಿ ಅಭಿವೃದ್ಧಿ ಹೊಂದುವುದು ಬೇಡ ರುದ್ರದೇವನ ಶಾಪವೂ ಕಾರಣವಾಗಿತ್ತು. ಇದಕ್ಕಾಗಿ ಮೈಥುನ ಧರ್ಮದಿಂದ ಸೃಷ್ಟಿ ಮಾಡಲು ತೊಡಗಿದನು.

## ದಕ್ಷನು ಅಸಿಕ್ನೀಯನ್ನು ವಿವಾಹವಾದದ್ದು

**ಅಸಿಕ್ನೀಮಾವಹತ್ ಪತ್ನೀಂ ವೀರಣಸ್ಯ ಪ್ರಜಾಪತೇಃ ।**
**ಸುತಾಂ ಸುತಪಸಾ ಯುಕ್ತಾಂ ಮಹತೀಂ ಲೋಕಧಾರಿಣೀಂ ॥ 6 ॥**

**ಅಥ ಪುತ್ರಸಹಸ್ರಾಣಿ ವೀರಣ್ಯಾಂ ಪಂಚ ವೀರ್ಯವಾನ್ ।**
**ಅಸಿಕ್ನ್ಯಾಂ ಜನಯಾಮಾಸ ದಕ್ಷ ಏವ ಪ್ರಜಾಪತಿಃ ॥ 7 ॥**

ದಕ್ಷಪ್ರಜಾಪತಿಯು ಸಂಕಲ್ಪ ಹಾಗೂ ಮಾನಸ ಸೃಷ್ಟಿಯಿಂದ ಪ್ರಜಾಭಿವೃದ್ಧಿ ಕಾರ್ಯ ಸಮೃದ್ಧ ಬೆಳೆದು ಮುಂದುವರಿದ ಲಕ್ಷಣ ಕಾಣದಿದ್ದುದರಿಂದ ಹೊಸ ರೀತಿಯ ಸೃಷ್ಟಿಯಿಂದ ಸಂತಾನಾಭಿವೃದ್ಧಿ ಮಾಡಲೆಂದು ಬಯಸಿ, ವೀರಣಪ್ರಜಾಪತಿಯ ಪುತ್ರಿಯೂ, ಮಹಾತಪಸ್ವಿಯೂ ಆದ 'ಅಸಿಕ್ನೀ'ಯನ್ನು ವಿವಾಹವಾಗಿ ಇವಳಲ್ಲಿ ಐದು ಸಾವಿರ ಮಕ್ಕಳನ್ನು ಸೃಷ್ಟಿಸಿದನು.

## ದಕ್ಷಪುತ್ರರಿಗೆ ನಾರದೋಪದೇಶ

**ತಾಂಸ್ತು ದೃಷ್ಟ್ವಾ ಮಹಾಭಾಗಾನ್ ಸಂವಿವರ್ಧಯಿಷೂನ್ ಪ್ರಜಾಃ ।**
**ದೇವರ್ಷಿಃ ಪ್ರಿಯಸಂವಾದೋ ನಾರದಃ ಪ್ರಾಬ್ರವೀತ್ ತದಾ ॥ 8 ॥**

**ನಾಶಾಯ ವಚನಂ ತೇಷಾಂ ಶಾಪಯೈವಾತ್ಮನಸ್ತಥಾ ।**
**ಯಂ ಕಶ್ಯಪಃ ಸುತವರಂ ಪರಮೇಷ್ಠೀ ವ್ಯಜೀಜನತ್ ॥ 9 ॥**

ದಕ್ಷಸ್ಯ ವೈ ದುಹಿತರಿ ದಕ್ಷಶಾಪಭಯಾನ್ ಮುನಿಃ ।
ಪೂರ್ವಂ ಸ ಹಿ ಸಮುತ್ಪನ್ನೋ ನಾರದಃ ಪರಮೇಷ್ಠಿನಾ ॥ 10 ॥

ಅಸಿಕ್ನ್ಯಾಮಥ ವೀರಣ್ಯಾಂ ಭೂಯೋ ದೇವರ್ಷಿ ಸತ್ತಮಃ ।
ತಂ ಭೂಯೋ ಜನಯಾಮಾಸ ಪಿತೇವ ಮುನಿಪುಂಗವಮ್ ॥ 11 ॥

ಹರ್ಯಶ್ವರೆಂದು ಪ್ರಸಿದ್ಧಿ ಹೊಂದಿದ ಐದು ಸಾವಿರ ಮಂದಿ ಸೇರಿ ಪ್ರಜಾಭಿವೃದ್ಧಿ ಮಾಡಲು ಆಸಕ್ತರಾಗಿರುವುದನ್ನು ಕಂಡ ನಾರದ ಮಹರ್ಷಿಗಳು - ಇವರೆಲ್ಲರೂ ತತ್ವಜ್ಞಾನ ಹೊಂದಲು ಯೋಗ್ಯರೆಂದು ತಿಳಿದು ನಿವೃತ್ತ ಧರ್ಮ ಹಿಡಿದು ಮೋಕ್ಷ ಹೊಂದಲಿ ಎಂದು ಹಾಗೂ ತನಗೆ ದಕ್ಷನು ಶಾಪವನ್ನು ಕೊಡಲಿ ಎಂದು ಹೀಗೆಂದನು - ಯಾವ ನಾರದಮುನಿಯನ್ನು ಬ್ರಹ್ಮದೇವನು ಮನಸ್ಸಂಕಲ್ಪದಿಂದ ಹುಟ್ಟಿಸಿದ್ದನೋ ಆ ನಾರದ ಮಹರ್ಷಿಯನ್ನೆ ಪುನಃ ಕಶ್ಯಪ ಮುನಿಯು ದಕ್ಷೇಶನ ಶಾಪಕ್ಕೆ ಅಂಜಿ. ದಕ್ಷನ ಪತ್ನಿಯ ತಂಗಿಯಲ್ಲಿ ಪುನಃ ಪಡೆದನು. ನಾರದರು ಈ ಮೊದಲೇ ಪರಮೇಷ್ಠಿಯಿಂದ ಜನಿಸಿದ್ದರೂ ಕಶ್ಯಪರು ಪುನಃ ವೀರಣಪ್ರಜಾಪತಿಯ ದ್ವಿತೀಯ ಪುತ್ರಿಯಾದ ಅಸಿಕ್ನಿಯ ತಂಗಿಯಲ್ಲಿ ನಾರದರನ್ನು ಪಡೆದು. ನಾರದರು ತನ್ನ ಮಕ್ಕಳನ್ನು ವೈರಾಗ್ಯಮಾರ್ಗ ಹಿಡಿಸಿದ್ದಕ್ಕಾಗಿ ಬಹಳ ಕೋಪಗೊಂಡನು. ಆದರೆ ಬ್ರಹ್ಮದೇವ ಹಾಗೂ ದಕ್ಷರು ಸಂಧಿ ಮಾಡಿಕೊಂಡರು. ನಿನ್ನ ಮಗನಾದ ನಾರದನು ನನ್ನ ಪತ್ನಿಯ ತಂಗಿಯಲ್ಲಿ ಪುನಃ ಜನಿಸಿ ಬಂದು ನನ್ನ ದೌಹಿತ್ರನಾಗಲಿ ಎಂದು.

*ಜನಮೇಜಯ ಉವಾಚ -*

ಕಥಂ ವಿನಾಶಿತಾಃ ಪುತ್ರಾಃ ನಾರದೇನ ಮಹರ್ಷಿಣಾ । 12 ॥

*ವೈಶಂಪಾಯನ ಉವಾಚ -*

ದಕ್ಷಸ್ಯ ಪುತ್ರಾಃ ಹರ್ಯಶ್ವಾಃ ವಿವರ್ಧಯಿಷವಃ ಪ್ರಜಾಃ ।
ಸಮಾಗತಾಃ ಮಹಾವೀರ್ಯಾಃ ನಾರದಸ್ತಾನುವಾಚ ಹ ॥ 13 ॥

ಬಾಲಿಶಾಃ ಬತ ಯೂಯಂ ವೈ ನಾಸ್ಯಾ ಜಾನೀಥ ವೈ ಭುವಃ ।
ಪ್ರಮಾಣಂ ಸ್ರಷ್ಟುಕಾಮಾಃ ಸ್ಥ ಪ್ರಜಾಃ ಪ್ರಾಚೇತಸಾತ್ಮಜಾಃ ॥ 14 ॥
ಅಂತರೂರ್ಧ್ವಮಧಶ್ಚೈವ ಕಥಂ ಸ್ರಕ್ಷ್ಯಥ ವೈ ಪ್ರಜಾಃ ॥ 15 ॥

ದಕ್ಷಪುತ್ರರೇ, ನೀವು ಸೃಷ್ಟಿ ಮಾಡಲು ಹೊರಟಿರುವಿರಿ. ಪ್ರಜೆಗಳನ್ನು ಸೃಷ್ಟಿಸ ಹೊರಟಿರುವ ನಿಮಗೆ **ಭೂಮಿಯ**[1] ಉದ್ದ ಅಗಲ ವಿಸ್ತಾರ ತಿಳಿಯದೆ ಹೇಗೆ ಸೃಷ್ಟಿಸುವಿರಿ. ಈ ಭೂಮಿಯು ಮೇಲೆ, ಕೆಳಗೆ, ಒಳಗಿನ ವಿಸ್ತಾರ ತಿಳಿದು ಅದಕ್ಕೆ ತಕ್ಕಂತೆ ಮಕ್ಕಳನ್ನು ಸೃಷ್ಟಿ ಮಾಡುವುದು ಬುದ್ಧಿವಂತರ ಲಕ್ಷಣವಲ್ಲವೆ? ಎಂದರು.

---

1. **ವಿಶೇಷಾಂಶ :**

**ಅದೃಷ್ಟ್ವಾಽಂತಂ ಭುವೋ ಯೂಯಂ ಬಾಲಿಶಾ ಬತ ಬಾಲಕಾಃ ।**
**ತಥೈಕ ಪುರುಷಂ ರಾಜ್ಯಂ ಬಿಲಂ ಚಾದೃಷ್ಟನಿರ್ಗಮಂ ।**
**ಬಹುರೂಪಾಂ ಸ್ತ್ರಿಯಂ ಚಾಪಿ ಪುಮಾಂಸಂ ಪುಂಶ್ಚಲೀಪತಿಂ ।**
**ನದೀ ಮುಭಯತೋ ವಾಹಾಂ ಪಂಚಪಂಚಾದ್ಭುತಂ ಗೃಹಂ ।**
**ಕ್ವಚಿದ್ ಹಂಸಂ ಚಿತ್ರಕಥಂ ಕ್ಷುರಾಂತಂ ಚ ಸ್ವಯಂ ಭ್ರಮಿಂ ।**
**ಅನುರೂಪಾಮವಿಜ್ಞಾಯ ಅಹೋ ಸರ್ಗಂ ಕರಿಷ್ಯಥ ॥** – *ಭಾಗ-6/5/6-9*

1) ಭೂಮಿಯ ಅಂತ ಸಂಸಾರ ಕಾರಣ ಲಿಂಗದೇಹವೆ ಭೂ ಎನಿಸಿದೆ. ಅದರ ಅಂತವೆಂದರೆ ಲಿಂಗಭಂಗವಾಗುವ ರೀತಿ ತಿಳಿಯದೆ ಕೇವಲ ಸೃಷ್ಟಿಯಿಂದೇನು ಲಾಭ?
2) ಈ ಜಗತ್ತೆಂಬ ರಾಜ್ಯಕ್ಕೆ ನಾಥನೆಂದರೆ ಪರಮಪುರುಷ ನಾರಾಯಣ. ಅವನನ್ನು ತಿಳಿಯಿರಿ.
3) ಬಿಲನೆಂದರೆ ಅಹೋಬಿಲ. ಅವನಲ್ಲಿಗೆ ಹೋದರೆ ಪುನರಾವೃತ್ತಿಯಿಲ್ಲವೆಂದರ್ಥ.
4) ನಾನಾ ರೂಪ ಧರಿಸುವ ಬುದ್ಧಿಯು ಚಾರಿಣಿಯು. ಅದನ್ನು ಶ್ರೀಹರಿಯಲ್ಲಿ ನೆಲೆಗೊಳಿಸಿರಿ.
5) ರಜಸ್ತಮೋಗುಣಯುಕ್ತ ಬುದ್ಧಿಯೆಂಬ ಕುಭಾರ್ಯೆಯನ್ನು ಹೊಂದಿ, ಜ್ಞಾನವೆಂಬ ಐಶ್ವರ್ಯ ನಾಶ ಮಾಡಿಕೊಂಡವರು.
6) ಹರೀಚ್ಛೆಯಿಂದ ನಿರ್ಮಿತ ನದಿಗೆ ಉತ್ಪತ್ತಿ ನಾಶವೆಂಬ ನದಿಯನ್ನು ತಿಳಿಯದೆ.
7) ಬಂಧ-ಬಂಧ ನಿವೃತ್ತಿ ಮೋಕ್ಷ ತಿಳಿಸುವ ಶಾಸ್ತ್ರಗಳೇ ಹಂಸವು. ಪರಾಪರತತ್ವ ತಿಳಿಸುತ್ತದೆ.
8) ಐದು ಜ್ಞಾನೇಂದ್ರಿಯ, ಐದು ಕರ್ಮೇಂದ್ರಿಯ ಪಂಚಭೂತಗಳು, ಪಂಚತನ್ಮಾತ್ರಗಳು, ಮನಸ್ಸು, ಅಹಂಕಾರ, ಮಹತ್ತತ್ವ, ಪ್ರಕೃತಿ, ಜೀವ ಹೀಗೆ ಇಪ್ಪತ್ತೈದು ತತ್ವಗಳಿಗೆ ನಿಯಾಮಕನಾದ ಈ ದೇಹದಲ್ಲಿದ್ದು ವ್ಯಾಪಾರ ಮಾಡುವ ಶ್ರೀಹರಿಯನ್ನು ತಿಳಿಯದೆ ಕೇವಲ ಶರೀರ ನಿರ್ಮಾಣದಲ್ಲಿ ಆಸಕ್ತರಾಗಿರುವಿರಿ.

ದಕ್ಷ ಪುತ್ರರೇ. ಭೂಮಿಯ ಅಂತ್ಯವನ್ನು, ಏಕ ಪುರುಷ ರಾಜ್ಯವನ್ನು, ಹೊರಗೆ ಹೋಗಲು ಮಾರ್ಗವಿಲ್ಲದ ಬಿಲವನ್ನು, ಬಹುರೂಪಿಣೀ ಸ್ತ್ರೀಯನ್ನೂ, ವ್ಯಭಿಚಾರಿಣಿ ಪತಿಯನ್ನು ಎರಡೂ ಕಡೆ ಹರಿಯುವ ನದಿಯನ್ನು, ಪಂಚಪಂಚಾದ್ಭುತ ಗೃಹವನ್ನು, ಚಿತ್ರವಾದ ಕಥೆ ಹೇಳುವ ಹಂಸವನ್ನೂ, ಕತ್ತಿಯ ಅಲಗಿನಂತೆ ತಿರುಗುತ್ತಿರುವ ಚಕ್ರವನ್ನು, ತಿಳಿಯದೆ ತಂದೆ ಹೇಳಿದನೆಂದ ಮಾತ್ರಕ್ಕೆ ಹೇಗೆ ಸೃಷ್ಟಿಯಲ್ಲಿ ತೊಡಗುವಿರಿ.

ವಾಯೋರನಶನಂ ಪ್ರಾಪ್ಯ ಗತಾಸ್ತೇ ವೈ ಪರಾಭವಮ್ ।
ಅದ್ಯಾಪಿ ನ ನಿವರ್ತಂತೇ ಸಮುದ್ರೇಭ್ಯ ಇವಾಪಗಾಃ ॥ 16 ॥

ನಾರದರ ಮಾತನ್ನು ವಿಮರ್ಶಿಸಿ ಅಂತರಾರ್ಥ ತಿಳಿದು ಏಕಾಭಿಪ್ರಾಯದಿಂದ ನಾರದರನ್ನು ಪ್ರದಕ್ಷಿಣೆ ಬಂದು ನಮಸ್ಕರಿಸಿ ಪ್ರಜಾಸೃಷ್ಟಿಯಲ್ಲಿ ತೊಡಗದೆ ಉಪವಾಸವ್ರತ ಮಾಡಿ ಹೃಷೀಕೇಶನ ಪಾದರವಿಂದಗಳಲ್ಲಿಯೇ ಮನಸ್ಸನ್ನಿಟ್ಟು ಭೂಮಿಯ ಆದ್ಯಂತ ತಿಳಿಯಲು ಹೊರಟವರು ಸಾಗರಕ್ಕೆ ಸೇರಿದ ನದಿಗಳು ಪುನಃ ಹಿಂದಕ್ಕೆ ಹೇಗೆ ಬರಲಾರವೋ ಹಾಗೆ ಪುನಃ ಸಂಸಾರಕ್ಕೆ ಬರಲೇ ಇಲ್ಲ.

ಹರ್ಯಶ್ವೇಷ್ವಥ ನಷ್ಟೇಷು ದಕ್ಷಃ ಪ್ರಾಚೇತಸಃ ಪುನಃ ।
ವೈರಿಣ್ಯಾಮೇವ ಪುತ್ರಾಣಾಂ ಸಹಸ್ರಮಸೃಜತ್ ಪ್ರಭುಃ ॥ 17 ॥
ವಿವರ್ಧಯಿಷವಸ್ತೇ ತು ಶಬಲಾಶ್ವಾಃ ಪ್ರಜಾಸ್ತದಾ ।
ಪೂರ್ವೋಕ್ತಂ ವಚನಂ ತಾತ ನಾರದೇನೈವ ಚೋದಿತಾಃ ॥ 18 ॥

ದಕ್ಷ ಪ್ರಜಾಪತಿಯು, ಐದು ಸಾವಿರ ಪುತ್ರರು ಸನ್ಯಾಸಿಗಳಾಗಿ ವಿರಕ್ತರಾದಾಗ 'ವೈರಿಣೀ'ಯೆಂಬ ಮತ್ತೊಬ್ಬ ಸ್ತ್ರೀ ಪಂಚಜನಿಯಲ್ಲಿ ಸಾವಿರ ಮಂದಿ 'ಶಬಲಾಶ್ವ'ರೆಂಬ ಪುತ್ರರನ್ನು ಪಡೆದು ಪ್ರಜಾಸೃಷ್ಟಿಗಾಗಿ ಪ್ರಚೋದಿಸಿದನು. ನಾರದರು ಆಗಮಿಸಿ ಹರ್ಯಶ್ವರಿಗೆ ಹೇಳಿದಂತೆ – ಶಬಲಾಶ್ವರೇ. ಈ ಶರೀರ ಹರಿಯಿಂದ ಪ್ರಾಪ್ತವಾದದ್ದು. ಮೋಕ್ಷ ಸಾಧನ ಶರೀರ ಇದೊಂದೆ. ಇದರಲ್ಲಿ

---

9) ಕ್ಷುರಸ್ಯಧಾರಾ ನಿಶಿತಾ ದುರತ್ಯಯಾಪಂಬಂತೆ ಕತ್ತಿಯ ಅಲಗಿನಂತೆ ತೀಕ್ಷ್ಣವಾದ ಕಾಲಚಕ್ರದ ಸ್ವರೂಪ ತಿಳಿಯದೆ ಸೃಷ್ಟಿಯಿಂದೇನು ಪ್ರಯೋಜನ.

10) ಓತ್ಯ್ರಷಿಯಾದ ಶಾಸ್ತ್ರದ ಆದೇಶವೆ ಪಿತುರಾದೇಶ. ಶಾಸ್ತ್ರದ ಆದೇಶ ತಿಳಿಯದೆ ಕೇವಲ ಸೃಷ್ಟಿ ಅಪ್ರಯೋಜಕವೆಂದಭಿಪ್ರಾಯ.

ಅವನನ್ನು ತಿಳಿಯದೆ ಸೃಷ್ಟಿ ಮಾಡಲು ತೊಡಗಿರುವಿರಿ. ಮೊದಲು **ನಿಮ್ಮಣ್ಣಂದಿರು**[2] ತತ್ವ ಹುಡುಕಲು ಹೊರಟಿದ್ದಾರೆ. ಮೊದಲು ಅವರನ್ನು ಹುಡುಕಿರಿ. ನಿಮಗೂ ತತ್ವ ತಿಳಿಯಬಹುದೇನೋ?

**ಅನ್ಯೋನ್ಯ ಮೂಚುಸ್ತೇ ಸರ್ವೇ ಸಮ್ಯಗಾಹ ಮಹಾಮುನಿಃ ।**
**ಭ್ರಾತೄಣಾಂ ಪದವೀಂ ಜ್ಞಾತುಂ ಗಂತವ್ಯಂ ನಾತ್ರ ಸಂಶಯಃ ॥ 19 ॥**

ಶಬಲಾಶ್ವರು ಸಾವಿರ ಮಂದಿ ಪರಸ್ಪರ ಚಿಂತಿಸಿದರು. ನಾರದರು ಹೇಳಿದ್ದಲ್ಲಿ ವಿಚಾರಣೀಯಾಂಶವಿದೆ. ನಮ್ಮ ಅಣ್ಣಂದಿರು ಎಲ್ಲಿರುವುರೆಂಬುದನ್ನು ತಿಳಿಯಲು ಹೊರಡಬೇಕು. ನಂತರ ಭೂವಿಸ್ತಾರ ತಿಳಿಯೋಣ, ಸೃಷ್ಟಿ ಮಾಡೋಣ ಎಂದರಿತು ಹರ್ಯಶ್ವರು ಹೋದ ಮಾರ್ಗಕ್ಕೆ ಹೋದರು. ಆದರೆ ಅವರೂ ಕೂಡ ನದಿಗಳಂತೆ ಪುನಃ ಹಿಂದುರುಗಲಿಲ್ಲ.

## ನಾರದರಿಗೆ ದಕ್ಷ ಶಾಪ

**ನಷ್ಟೇಷು ಶಬಲಾಶ್ವೇಷು ದಕ್ಷಃ ಕ್ರುದ್ಧೋಽವದದ್ ವಚಃ ।**
**ನಾರದಂ ನಾಶಮೇಹೀತಿ ಗರ್ಭವಾಸಂ ವಸೇತಿ ಚ ॥ 20 ॥**

**ತದಾಪ್ರಭೃತಿ ವೈ ಭ್ರಾತಾ ಭ್ರಾತುರನ್ವೇಷಣಂ ನೃಪ ॥ 21 ॥**

ಶಬಲಾಶ್ವರೂ ಸಹ ಶೋಭನವಾದ ಅಂತರ್ದೃಷ್ಟಿಗೆ ಗಮ್ಯವಾದ ಪರಮಾತ್ಮನಿಗೆ ಅತ್ಯಂತ ಪ್ರಿಯವಾದ ಸನ್ಯಾಸ ಮಾರ್ಗ ಹಿಡಿದು ಕಳೆದುಹೋದ ರಾತ್ರಿಗಳು ಪುನಃ ಹಿಂದಿರುಗಿ ಬರುವುದಿಲ್ಲವೋ ಹಾಗೆ ಅವರು ಬರಲಿಲ್ಲ. ಇದರಿಂದಾಗಿ ದಕ್ಷ ಪ್ರಜಾಪತಿಯು ನಾರದರು ಮಾಡಿದ ಪುತ್ರನಾಶವನ್ನು ಕೇಳಿ ಅತ್ಯಂತ ಕ್ರುದ್ಧನಾದನು. ಅಸಾಧುವೆ! ಸಾಧು ಸಜ್ಜನರ ವೇಷಧರಿಸಿ ಅಸಾಧು ಕಾರ್ಯಗಳನ್ನೆ ಮಾಡುತ್ತಿರುವೆ. ಸ್ವಧರ್ಮರತರಾದ ನನ್ನ ಮಕ್ಕಳಿಗೆ ಸನ್ಯಾಸಿ ಮಾರ್ಗ ಹಿಡಿಸಿರುವೆಯಲ್ಲವೆ? ಋಷಿ– ಪಿತೃ– ದೇವ ಋಣ ತೀರಿಸದೆ ಸನ್ಯಾಸ ಅನರ್ಥಕಾರಿಯೆಂದು ನಿನಗೆ ತಿಳಿದಿಲ್ಲವೆ? ನೀನು ಮಾಡಿದ ತಪ್ಪನ್ನು ಮೊದಲು ಕ್ಷಮಿಸಿರುವೆ. ನಿನಗೆ ನನ್ನ ಶಾಪ –

---

2. **ಭ್ರಾತೄಣಾಂ ಪ್ರಾಯಣಂ ಭ್ರಾತಾ ಯೋಽನುತಿಷ್ಠತಿ ಧರ್ಮವಿತ್ ।**
**ಸ ಪುಣ್ಯಬಂಧುಃ ಪುರುಷಃ ಮರುದ್ಭಿಃ ಸಹ ಮೋದತೇ ॥** – *ಭಾಗ 6/5/31*
ಯಾವ ತಮ್ಮನು ಅಣ್ಣಂದಿರು ತಮ್ಮ ಮೋಕ್ಷಕ್ಕಾಗಿ ಹಿಡಿದ ಧರ್ಮ ಹಿಡಿಯುವನೋ ಅವನು 49 ಮರುತ್ತುಗಳೊಂದಿಗೆ ಪುಣ್ಯವೆ ಬಂಧುಗಳಾಗಿ ಸುಖಿಯಾಗುವನು.

ನೀನು ಒಂದು ಕಡೆ ನಿಂತರೆ ಇಂತಹ ಅನರ್ಥ ಮಾಡುವೆಯಾದ್ದರಿಂದ ಒಂದು ಕಡೆ ನಿನ್ನ ಕಾಲು ನಿಲ್ಲದೆ ನಿವಾಸವೇರ್ಪಡದಿರಲಿ ಹಾಗೂ ಭೂಮಿಯಲ್ಲಿ ಗರ್ಭವಾಸವನ್ನು ಮಾಡುವವನಾಗು ಎಂದನು. ಅಂದಿನಿಂದ ಕಳೆದು ಹೋದ ಸೋದರನನ್ನು ಹುಡುಕಿಕೊಂಡು ಬರಲು ಅವನ ತಮ್ಮನೇ ಹೋದರೆ ಅವನು ಬರಲಾರನಾದ್ದರಿಂದ ಬೇರೆಯವರನ್ನು ಹುಡುಕಲು ಕಳುಹಿಸಬೇಕು.

ತಾಂಶ್ಚಾಪಿ ನಷ್ಟಾನ್ ವಿಜ್ಞಾಯ ಪುತ್ರಾನ್ ದಕ್ಷಃ ಪ್ರಜಾಪತಿಃ ।
ಷಷ್ಟಿಂ ಭೂಯೋಽಸೃಜತ್ ಕನ್ಯಾಃ ವೀರಣ್ಯಾಮಿತಿ ನಃ ಶ್ರುತಮ್ ॥ 22 ॥

ಮುಂದೆ ದಕ್ಷ ಪ್ರಜಾಪತಿಯನ್ನು ಬ್ರಹ್ಮದೇವರು ಸಾಂತ್ವನಗೊಳಿಸಿದರು. ವೀರಣನ ಪುತ್ರಿ ಅಸಿಕ್ನಿಯಲ್ಲಿ ತಂದೆಯಲ್ಲಿ ಪ್ರೀತಿವುಳ್ಳ ಅರವತ್ತು ಮಂದಿ ಹೆಣ್ಣು ಮಕ್ಕಳನ್ನು ಸೃಷ್ಟಿಸಿದನು. ಅವರಲ್ಲಿ ಕೆಲವರನ್ನು ಮಹಾಸಾಮರ್ಥ್ಯಶಾಲಿ ಕಶ್ಯಪನು, ಚಂದ್ರನೂ, ಧರ್ಮನು ಕೆಲವರನ್ನೂ, ಉಳಿದವರನ್ನು ಇತರ ಮಹರ್ಷಿಗಳು ವಿವಾಹವಾದರು.

## ದಕ್ಷನ ಕನ್ಯಾದಾನ

ದದೌ ಸ ದಶ ಧರ್ಮಾಯ ಕಾಶ್ಯಪಾಯ ತ್ರಯೋದಶ ।
ಸಪ್ತವಿಂಶತಿ ಸೋಮಾಯ ಚತಸ್ರೋಽರಿಷ್ಟನೇಮಯೇ ॥ 23 ॥

ದ್ವೇ ಚೈವ ಭೃಗು ಪುತ್ರಾಯ ದ್ವೇ ಚೈವಾಂಗಿರಸೇ ತಥಾ ।
ದ್ವೇ ಕೃಶಾಶ್ವಾಯ ವಿದುಷೇ ತಾಸಾಂ ನಾಮಾನಿ ಮೇ ಶೃಣು ॥ 24 ॥

ದಕ್ಷನು ಪಾತ್ರರಿಗೆ ವಿವಾಹ ಮಾಡಿಕೊಟ್ಟರೆ ಪುತ್ರಿಯು ಪುತ್ರರಿಗಿಂತ ಶತಾಧಿಕಳು ಎಂಬ ನ್ಯಾಯದಂತೆ ಯಮಧರ್ಮನಿಗೆ ಹತ್ತು ಮಂದಿಯನ್ನೂ, ಕಶ್ಯಪರಿಗೆ ಹದಿಮೂರು ಮಂದಿಯನ್ನೂ, ಚಂದ್ರನಿಗೆ ನಕ್ಷತ್ರ ನಾಮವುಳ್ಳ 27 ಪುತ್ರಿಯರನ್ನೂ, ವಿನತಪುತ್ರ ಅರಿಷ್ಟನೇಮಿಗೆ ನಾಲ್ಕು ಮಂದಿಯನ್ನೂ, ಭೃಗುಪುತ್ರನಿಗೆ ಶುಕ್ರನಿಗೆ ಇಬ್ಬರನ್ನೂ, ಅಂಗೀರಸನಿಗೆ ಇಬ್ಬರನ್ನೂ, ಪಂಡಿತನಾದ ಕೃಶಾಶ್ವನಿಗೆ ಇಬ್ಬರು ಪುತ್ರಿಯನ್ನೂ ವಿವಾಹ ಮಾಡಿಕೊಟ್ಟನು. ಅರಿಷ್ಟನೇಮಿಗೆ 'ಭೂತ' ಎಂಬ ಹೆಸರಿದೆ. ಅವರ ಹೆಸರುಗಳು ಹೀಗಿವೆ.

## ಹತ್ತು ಧರ್ಮಪತ್ನಿಯರು

ಅರುಂಧತೀ – ವಸು – ರ್ಯಾಮೀ – ಲಂಬಾ – ಭಾನ್ಸು– ರ್ಮರುತ್ವತೀ –ಸಂಕಲ್ಪಾ – ಮುಹೂರ್ತಾ – ಸಾಧ್ಯಾ – ವಿಶ್ವಾ ಭಾರತ – ಇವರ ಮಕ್ಕಳುಗಳು ಹೀಗಿರುವರು.

## ಹತ್ತು ವಿಶ್ವೇದೇವತೆಗಳ ಜನ್ಮ

ವಿಶ್ವಾ.ಎಂಬ ಪತ್ನಿಯಿಂದ ಧರ್ಮನಿಂದ ಹತ್ತು ಮಂದಿ ವಿಶ್ವೇದೇವತೆಗಳು ಹುಟ್ಟಿದರು. ಕ್ರತು–ದಕ್ಷ, ಸತ್ಯ–ವಸು, ಕಾಲ–ಕಾಮ, ಪುರೂರವ–ಆರ್ದ್ರವ ಧೂರಿ–ಲೋಚನ (ಮತ್ಸ್ಯಪುರಾಣ – ಮುನಿ, ಕುರಜ, ಮನುಜ, ವೀಜ ರೋಚಮಾನ ಎಂದಿದೆ. ಮತ್ಸ್ಯ – 203ನೇ ಅಧ್ಯಾಯ)

ಸಾಧ್ಯವೆಂಬುವಳಲ್ಲಿ ಸಾಧ್ಯರೆಂಬ ಹನ್ನೆರಡು ಮಂದಿಗಳು, ಮರುತ್ವತೀಯಲ್ಲಿ ಮರುತ್ವಾನ್, ಜಯಂತರೆಂಬ ಮರುತ್ವಂತರೂ, ವಸುಯೆಂಬುವಳಲ್ಲಿ ಎಂಟು ಮಂದಿ ವಸುಗಳು, ಭಾನುವಿನಲ್ಲಿ ವೇದಋಷಭನೆ ಮೊದಲಾದ ಭಾನುಗಳು, ಮುಹೂರ್ತೆಯಲ್ಲಿ ವಿವಾಹ ಮುಂಜಿಗಳಿಗೆ ಬೇಕಾದ ಮುಹೂರ್ತಕ್ಕೆ ಅಭಿಮಾನಿಯು, ಲಂಬಾದೇವಿಯಿಂದ ಮಿಂಚು ಗುಡುಗುಗಳಿಗೆ ಅಭಿಮಾನಿ ವಿದ್ಯೋತನು, ಜಾಮಿಯಲ್ಲಿ ನಾಗವೀಥಿ ಮತ್ತು ಅಗಮ್ಯ ದುರ್ಗಗಳಿಗೆ ಅಭಿಮಾನಿಗಳಾದ ಜಾಮೇಯರು ಹುಟ್ಟಿದರು. ಸ್ವರ್ಗನೆಂಬ ಜಾಮಿಪುತ್ರನು ಸ್ವರ್ಗಾಭಿಮಾನಿದೇವತೆಯು. ಇವನ ಪುತ್ರ ನಂದಿಯು. ಅರುಂಧತಿಯಲ್ಲಿ (ವಸಿಷ್ಠ ಪತ್ನಿಯಲ್ಲ) ಭೂತಲದಲ್ಲಿರುವ ಪಶುಗಳು, ಔಷಧಿಗಳು, ಮುಂತಾದ ಅಸಂಖ್ಯ ವಿಷಯಗಳೆಲ್ಲ ಹುಟ್ಟಿದವು. ಸಂಕಲ್ಪಾ ಎಂಬುವಳಿಂದ ಮಾನಸಕ್ರಿಯಾಭಿಮಾನಿಯಾದ ಸಂಕಲ್ಪನು ಹುಟ್ಟಿದನು. ಇವನ ಮಗನೇ ಕಾಮನು.

## 27 ಚಂದ್ರಪತ್ನಿಯರು

**ಯಾ ರಾಜನ್ ಸೋಮಪತ್ನ್ಯಸ್ತು ದಕ್ಷಃ ಪ್ರಾಚೇತಸೋ ದದೌ ।**
**ಸರ್ವಾ ನಕ್ಷತ್ರ ನಾಮ್ನ್ಯಸ್ತಾಃ ಜ್ಯೌತಿಷ್ಯೇ ಪರಿಕೀರ್ತಿತಾಃ ॥ 25 ॥**

ಅಶ್ವಿನೀ. ಭರಣೀ. ಕೃತ್ತಿಕಾ. ರೋಹಿಣೀ. ಮೃಗಶಿರಾ. ಆರ್ದ್ರಾ. ಪುನರ್ವಸು. ಪುಷ್ಯಾ. ಆಶ್ಲೇಷಾ. ಮಘಾ. ಪೂರ್ವಾಫಲ್ಗುನೀ. ಉತ್ತರಾಫಲ್ಗುನೀ. ಹಸ್ತಾ. ಚಿತ್ತಾ. ಸ್ವಾತೀ. ವಿಶಾಖಾ. ಅನುರಾಧಾ. ಜ್ಯೇಷ್ಠಾ. ಮೂಲಾ. ಪೂರ್ವಾಷಾಢಾ.

ಉತ್ತರಾಷಾಢ. ಶ್ರವಣ. ಧನಿಷ್ಠಾ. ಶತಭಿಷಾ. ಪೂರ್ವಾಭಾದ್ರಾ. ಉತ್ತರಾಭಾದ್ರಾ. ರೇವತೀ

## ಅಷ್ಟವಸುಗಳು

**ಆಪೋ ಧ್ರುವಶ್ಚ ಸೋಮಶ್ಚ ಧರಶ್ಚೈವ ಅನಿಲಾನಲೌ ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋ ನಾಮಭಿಃ ಸ್ಮೃತಾಃ ॥ 26 ॥**

ದ್ರೋಣ. ಪ್ರಾಣ. ಧ್ರುವ. ಅರ್ಕ. ಅಗ್ನಿ ದೋಷ. ವಸ್ತು. ವಿಭಾವಸು ಎಂದೂ ನಾಮಾಂತರಗಳಿವೆ. ಆಪವಸುವಿಗೆ ಶಾಂತ. ವೈತ್ಯಂಡ್ಯ. ಶ್ರಮ. ಮುನಿ ಎಂಬ ನಾಲ್ಕು ಮಂದಿ ಪುತ್ರರು. ಇದೇ ರೀತಿ ಧ್ರುವನಿಗೆ ಧರಣಿಯಲ್ಲಿ ಲೋಕಗಳನ್ನೇ ತನ್ನ ಅಂಕೆಯಲ್ಲಿರುವ 'ಕಾಲ'ನೆಂಬುವನೂ. ಸೋಮವಸುವಿಗೆ ವರ್ಚಸ್ ಎಂಬುವನು. ಧರವಸುವಿಗೆ ದ್ರವಿಣ-ಹುತಹವ್ಯರೆಂಬ ಇಬ್ಬರು ಪುತ್ರರು. ಮನೋಹರಾ ಎಂಬ ಧರನ ಮತ್ತೊಬ್ಬ ಪತ್ನಿಯಲ್ಲಿ ಶಿಶಿರ. ಪ್ರಾಣ. ರಮಣರೆಂಬ ಮೂರು ಮಂದಿ ಪುತ್ರರಾದರು. ಅನಿಲನೆಂಬ ವಸುವಿಗೆ ಶಿವಾ ಎಂಬ ಪತ್ನಿಯಲ್ಲಿ ಪ್ರಾಣನೆಂಬ ವಾಯು. ರಮಣ. ಶಿಶಿರ. ಮನೋಹರ. ಶಿವ. ಧವರೆಂಬ ಪುತ್ರರಾದರು. ಈ ಶಿವನಿಗೆ ಮನೋಜವ. ಅವಿಜ್ಞಾತಗತಿಯೆಂಬ ಮಕ್ಕಳಾದರು.

## ಕಾರ್ತಿಕೇಯನ ಜನ್ಮ

**ಅಗ್ನಿಪುತ್ರಃ ಕುಮಾರಸ್ತು ಶರಸ್ತಂಬೇ ವ್ಯಜಾಯತ ।**
**ತಸ್ಯ ಶಾಖೋ ವಿಶಾಖಶ್ಚ ನೈಗಮೈಯಶ್ಚ ಪೃಷ್ಠಜಾಃ ॥ 27 ॥**

ವಸುಪುತ್ರನಾದ ಅನಲನಿಗೆ ಷರವಣದಲ್ಲಿ ಉದಿಯಿಸಿದ ಸ್ಕಂದನು ಮಗನಾದನು. ತೇಜಸ್ವಿಯಾದ ಇವನ ಅಂಶಭೂತರಾದ ಸಹೋದರರು ಶಾಖ. ವಿಶಾಖ. ನೈಗಮೇಯರು. ನೂಜೆಯ ಹುಲ್ಲಿನ ಮಧ್ಯ ಹುಟ್ಟಿದ. ಈ ಷಣ್ಮುಖನು ಕೃತಿಕೆಯು ಧಾತ್ರಿಯಂತೆ ರಕ್ಷಿಸಿದ್ದರಿಂದ ಕಾರ್ತಿಕೇಯನೆಂದು. ಗಂಗೆಯ ಪುತ್ರನಾದ್ದರಿಂದ ಗಾಂಗೇಯನೆಂದೂ. ಅಗ್ನಿಯಿಂದ ಹುಟ್ಟಿದ್ದರಿಂದ ಆಗ್ನೇಯನೆಂದೂ ಪ್ರಸಿದ್ಧಿಯಿದೆ. ಸನತ್ಕುಮಾರನಾಗಿ ಬ್ರಹ್ಮಪುತ್ರನಾಗಿಯೂ. ರುದ್ರಪುತ್ರ ಸ್ಕಂಧನಾಗಿಯೂ. ಶ್ರೀಹರಿಪುತ್ರ ಪ್ರದ್ಯುಮ್ನನಾಗಿಯೂ ಇವನವತಾರವಿದೆ. ತ್ರಿಮೂರ್ತಿಗಳಿಗೂ ಪುತ್ರನಾದದ್ದು ವಿಶೇಷವು.

## ದೇವತಾ ಬಡಗಿ ವಿಶ್ವಕರ್ಮ[3] ಜನನ

**ಪ್ರತ್ಯೂಷಸ್ಯ ವಿದುಃ ಪುತ್ರ ಮೃಷ್ಟಿಂ ನಾಮ್ನಾ ಚ ದೇವಲಂ ।**
**ದ್ವೌ ಪುತ್ರೌ ದೇವಲಸ್ಯಾಪಿ ಕ್ಷಮಾವಂತೌ ತಪಸ್ವಿನೌ ॥ 28 ॥**

**ಬೃಹಸ್ಪತೇಸ್ತು ಭಗಿನೀ ವರಸ್ತ್ರೀ ಬ್ರಹ್ಮಚಾರಿಣೀ ।**
**ಯೋಗಸಿದ್ಧಾ ಜಗತ್ ಕೃತ್ಸ್ನಂ ಅಸಕ್ತಾ ವಿಚಚಾರ ಹ ॥ 29 ॥**

**ಪ್ರಭಾಸಸ್ಯ ಚ ಸಾ ಭಾರ್ಯಾ ವಸೋಃ ಅಷ್ಟಮಸ್ಯ ಚ ॥ 30 ॥**

---

3. ವಿಶ್ವಕರ್ಮಾ :

ವಿಶ್ವಕರ್ಮನು ಗುರುಕುಲ ವಾಸಾನಂತರ ಗುರುದಕ್ಷಿಣೆ ಬೇಡಿರೆಂದನು. ಅವರು ಯಾವತ್ತು ಹೊಸದಾಗಿಯೇ ಇರುವಂತಹ ಗೃಹ ನಿರ್ಮಾಣವಾಗಲಿ, ಗುರುಪತ್ನಿಯಾದರೂ ಎಂದೆಂದೂ ಹಳೆಯದಾಗದ ನಾರುಮಡಿಯ ಕುಪ್ಪಸವನ್ನು ಯಂತ್ರದಿಂದ ಹೊಲಿಯದೆ ತಯಾರು ಮಾಡಿಕೊಡು ಎಂದಳು.

ಗುರುಪುತ್ರನು – ನನಗೆ ಚರ್ಮದ ಸಂಪರ್ಕವಿರದ, ನೀರು–ಬೆಂಕಿಗಳಲ್ಲಿ ಹೋಗಬಹುದಾದ, ಓಡಿದರೂ ನಡೆದರೂ ಹಿತವಾಗಿರುವ, ಭೂಮಿ–ಆಕಾಶಗಳಲ್ಲಿ ತಡೆಯಿಲ್ಲದ ಗತಿಯಿರುವ ಎಂದೆಂದೂ ಹರಿದು ಹೋಗದ ಪಾದರಕ್ಷೆ ಮಾಡಿಕೊಡು ಎಂದ.

ಗುರುಪುತ್ರಿಯು – ನನ್ನ ಕಿವಿಗಳಿಗೆ ಹೊಳೆಯುವ ಕಿವಿಯೋಲೆ, ಆನೆಯ ದಂತ ನಿರ್ಮಿತ ಆಟಿಕೆಗಳು, ಅಡಿಗೆ ಮಾಡುವ ಒರಳು, ಒನಕೆ, ಮೊದಲಾದ ಮುರಿಯದ, ಸವೆಯದ ಅಡಿಗೆ ಸಾಮಗ್ರಿಗಳೂ, ಮನೆಯ ಪಾತ್ರೆಗಳೂ, ಕುಳಿತುಕೊಳ್ಳುವ ಸಿಂಹಾಸನಗಳು, ತೊಳೆಯದಿದ್ದರೂ ಫಳಫಳ ಹೊಳೆಯುತ್ತಿರಬೇಕು. ಅಡಿಗೆ ಮಾಡುವುದನ್ನು ಹೇಳಿಕೊಡು, ನಾನು ಮಾಡಿದ ಅಡಿಗೆ ರುಚಿರಚಿಯಾಗಿರಬೇಕು. ನನ್ನ ಕೈಗೆ ಬೆಂಕಿಯ ಬಿಸಿ ತಗಲಬಾರದು. ಒಂದೇ ಕಂಭದ, ನಾನು ಎಲ್ಲಿಗೆ ಬೇಕಾದರೂ ತೆಗೆದುಕೊಂಡು ಹೋಗಬಲ್ಲ, ಯಾರೇನು ಕೇಳಿದರೂ ಸಿಗುವ ಮನೆಯನ್ನು ನಿರ್ಮಿಸಿಕೊಡು. ಇಷ್ಟು ಬೇಡಿಕೆಗಳನ್ನು ಕೇಳಿದಾಗ ಚಿಂತಾಕ್ರಾಂತನಾದ. ಅವನ ಮುಂದೆ ಒಬ್ಬ ವೃದ್ಧ ತಪಸ್ವಿ ಕಂಡು ಬಂದ. ಕಾಶಿಗೆ ಹೋಗಿ ಮೂರು ವರ್ಷ ತಪಸ್ಸನ್ನು ಮಾಡುವಂತೆ ಹೇಳಿದ. ಅವನ ತಪಸ್ಸಿಗೆ ಮೆಚ್ಚಿದ ಶಿವ ವರಗಳನ್ನು ನೀಡಿದ. ಚಿನ್ನಬೆಳ್ಳಿ, ರತ್ನಗಳ ಕರ್ಪೂರಾದಿ ಸುಗಂಧ ವಸ್ತುಗಳ, ದಂತದ, ಚರ್ಮದ, ವಸ್ತ್ರಭೂಷಣ ಅಲಂಕಾರ, ಲಲಿತಕಲೆ, ಚಿತ್ರಕಲೆ, ಭಕ್ಷ್ಯಭೋಜ್ಯಾದಿ ಚಾತುರ್ಯ, ವೃತ್ತಗೀತ, ವಾದ್ಯ ರಹಸ್ಯ, ಭೂಷಣ, ಅಲಂಕಾರ, ಲಲಿತಕಲೆ, ಚಿತ್ರಕಲೆ, ಭಕ್ಷ್ಯಭೋಜ್ಯಾದಿ ಚಾತುರ್ಯ, ವೃತ್ತ ಗೀತ, ವಾದ್ಯ ರಹಸ್ಯಗಳನ್ನೂ, ಇಂದ್ರಜಾಲ ಮಹೇಂದ್ರಜಾಲಗಳಲ್ಲಿ ಸಾರ್ವಜ್ಞತೆ ನೀಡಿದ. – *ಸ್ಕಾಂದ.*

ಪ್ರತ್ಯೂಷನೆಂಬ ವಸುವಿನ ಪುತ್ರನೇ ದೇವಲನು. ಋಷ್ಟಿವೆಂಬ ಕನ್ಯೆಯೂ ಆದಳು. ದೇವಲನಿಗೆ ಕ್ಷಮಾವಂತ, ತಪಸ್ವಿಯೆಂಬ ಇಬ್ಬರು ಪುತ್ರರು. ದೇವಗುರುವೆನಿಸಿದ ಬೃಹಸ್ಪತ್ಯಾಚಾರ್ಯರಿಗೆ ಬ್ರಹ್ಮಜ್ಞಾನಿನಿಯಾದ ತಂಗಿಯೊಬ್ಬಳದ್ದಳು. ಯೋಗಸಿದ್ಧಿಯನ್ನು ಪಡೆದು ಬ್ರಹ್ಮವಾದಿನಿಯಾದ ಅವಳು. ಲೌಕಿಕ ವ್ಯಾಪಾರಗಳಲ್ಲಿ ಆಸಕ್ತಿಯನ್ನೆ ಹೊಂದದೆ ಸಮಗ್ರ ಭೂಮಿಯನ್ನು ಪ್ರದಕ್ಷಣೆ ಹಾಕಿ ಬಂದಿದ್ದಳು. ಆ ಮಹಾಸಾಧ್ವಿಯನ್ನು ಎಂಟನೆಯ ದ್ಯು ಅಥವಾ ಪ್ರಭಾಸನು ವಿವಾಹವಾದನು. ಇವರಿಬ್ಬರಲ್ಲಿ ಜನಿಸಿದವನೆ ದೇವತೆಗಳ ಶಿಲ್ಪಿಯಾದ 'ವಿಶ್ವಕರ್ಮ'ನು.

**ಕರ್ತಾ ಶಿಲ್ಪ ಸಹಸ್ರಾಣಾಂ ತ್ರಿದಶಾನಾಂ ಚ ವರ್ಧಕಿಃ ।**
**ಭೂಷಣಾನಾಂ ಚ ಸರ್ವೇಷಾಂ ಕರ್ತಾ ಶಿಲ್ಪವತಾಂ ವರಃ ॥ 31 ॥**

**ಯಃ ಯಃ ಸರ್ವಾಣಾಂ ವಿಮಾನಾನಿ ದೇವತಾನಾಂ ಚಕಾರ ಹ ।**
**ಮನುಷ್ಯಾಶ್ಚೋಪ ಜೀವಂತಿ ಯಸ್ಯ ಶಿಲ್ಪಂ ಮಹಾತ್ಮನಃ ॥ 32 ॥**

ದೇವತೆಗಳ ಶಿಲ್ಪಿಯೆನಿಸಿದ ಇವನು ದೇವಲೋಕದಲ್ಲಿ ತುಂಬಿರುವ ಏನೇನು ಶಿಲ್ಪ ಕಲಾ ಕೌಶಲ್ಯಗಳಿವೆಯೋ ಅವೆಲ್ಲ ಇವನದೆ ಕೈ ಕೆಲಸ. ಪ್ರಪಂಚ ಪೂರ್ತಿ ಕಂಡು ಬರುವ ಆಭರಣಗಳು, ಅಲಂಕಾರಗಳು ಇವನಿಂದಲೇ ರಚಿತವಾದವು. ಶಿಲ್ಪ ಸಾರ್ವಭೌಮನಾದ ಇವನೇ ಆಕಾಶ ಹಾರಾಡುವ ದೇವ ವಿಮಾನಗಳನ್ನು ತಯಾರಿಸಿದವನು. ಇವೆಲ್ಲ ಇವನ ಪ್ರತಿಭೆಯ ಕೈಚಳಕವನ್ನು ಅಲಂಭಿಸಿಯೇ ಮನುಷ್ಯರು ಜೀವನ ನಡೆಸುತ್ತಾರೆ.

ದೇವತೆಗಳಿಗೆ ಇರಲು ಬೇಕಾದ ವಿಶಾಲ ದಿವ್ಯಭವನಗಳು, ವಿಹಾರಕ್ಕೆ ಉದ್ಯಾನವನ, ಮೀಯಲು ಸರೋವರಗಳು, ಪೂಜಿಸಲು ಪ್ರತಿಮೆಗಳು, ಧರಿಸಲು ವಸ್ತ್ರ ಒಡವೆಗಳು, ತಿನ್ನಲು ಬೇಕಾದ ಫಲೋಪಭೋಗಗಳೆಲ್ಲವೂ ಇವನದೇ ಕೈ ಕುಶಲತೆ ಕಾಣಬಹುದಾಗಿದೆ.

## ಏಕಾದಶ ರುದ್ರರು

**ಸುರಭೀ ಕಶ್ಯಪಾದ್ ರುದ್ರಾನೇಕಾದಶ ವಿನಿರ್ಮಮೇ ।**
**ಮಹಾದೇವ ಪ್ರಸಾದೇನ ತಪಸಾ ಭಾವಿತಾ ಸತೀ ॥ 33 ॥**

ಜನಮೇಜಯನೇ, ಇನ್ನು ಕಶ್ಯಪರ ಹದಿಮೂರು ಪತ್ನಿಯರಲ್ಲಿ ಜನಿಸಿದ

ಪುತ್ರಾದಿಗಳನ್ನು ಹೇಳುವೆ ಕೇಳು. ಅದಿತಿ, ದಿತಿ, ದನು, ಅರಿಷ್ಟಾ, ಸುರಸಾ, ಖಷಾ, ಸುರಭೀ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರು, ಮುನಿ ಎಂಬುವರು ಕಶ್ಯಪರ ಹದಿಮೂರು ಪತ್ನಿಯರು. ಇವರಲ್ಲಿ ಸುರಭಿಯು ಉಗ್ರ ತಪಸ್ಸಿನಿಂದ ಶಿವನನ್ನು ಒಲಿಸಿಕೊಂಡು ಹನ್ನೊಂದು ಮಂದಿ ರುದ್ರರನ್ನು ಪಡೆದುಕೊಂಡಳು. 1) ಅಜೈಕಪಾತ್, 2) ಅಹಿರ್ಬುಧ್ನ, 3) ತ್ವಷ್ಟಾ, 4) ರುದ್ರ ರೆಂಬ ಮಕ್ಕಳು ಸುರುಭಿಯ ಸಂತಾನವಾಯಿತು. ತ್ವಷ್ಟುವಿನ ಪುತ್ರನೇ ವಿಶ್ವರೂಪಾಚಾರ್ಯನು. ಇನ್ನು ಏಕಾದಶ ರುದ್ರರ ಹೆಸರು ಹೀಗಿವೆ.

ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದೀ, ರೈವತ, ಮೃಗವ್ಯಾಧ, ಸರ್ಪ ಮತ್ತು ಕಪಾಲೀ ಎಂದು ರುದ್ರದೇವನ ರೂಪಗಳು ನೂರಾರಿವೆ.

## ದ್ವಾದಶಾದಿತ್ಯರು

**ಪೂರ್ವಮನ್ವಂತರೇ ಶ್ರೇಷ್ಠಾಃ ದ್ವಾದಶಾಸನ್ ಸುರೋತ್ತಮಾಃ ।**
**ತುಷಿತಾ ನಾಮ ತೇಽನ್ಯೋನ್ಯಮೂಚುಃ ವೈವಸ್ವತೇಽಂತರೇ ॥ 34 ॥**
**ಹಿತಾರ್ಥಂ ಸರ್ವಸತ್ವಾನಾಂ ಸಮಾಗಮ್ಯ ಪರಸ್ಪರಮ್ ।**
**ಆಗಚ್ಛತ ದ್ರುತಂ ದೇವಾಃ ಅದಿತಿಂ ಸಂಪ್ರವಿಶ್ಯ ವೈ ॥ 35 ॥**
**ಮನ್ವಂತರೇ ಪ್ರಸೂಯಾಮಃ ತನ್ನೋ ಶ್ರೇಯೋ ಭವಿಷ್ಯತಿ ॥ 36 ॥**

ಹಿಂದಿನ ಚಾಕ್ಷುಷ ಮನ್ವಂತರದಲ್ಲಿ 'ತುಷಿತರು' ಎಂಬ ದೇವತಾಗಣವಿರುತ್ತಿತ್ತು. ಇವರು ಹನ್ನೆರಡು ಮಂದಿ. ವೈವಸ್ವತ ಮನ್ವಂತರದ ಆರಂಭದಲ್ಲಿ ತಮ್ಮ ತಮ್ಮಲ್ಲಿ ಪರಸ್ಪರವಾಗಿ ವಿಚಾರ ಮಾಡಿದರು. ಮುಂದಿನ ಹೊಸ ಮನ್ವಂತರದಲ್ಲಿ ನಾವೆಲ್ಲರೂ ಪರಮಪತಿವ್ರತೆಯಾದ ಅದಿತಿದೇವಿಯ ಉದರದಲ್ಲಿ ಜನಿಸೋಣ. ಇದರಿಂದ ನಮಗೆ ಶ್ರೇಯಸ್ಸಾಗುತ್ತದೆ ಎಂದು ನಿರ್ಧರಿಸಿ ಕಶ್ಯಪರಿಂದ ಅದಿತೀದೇವಿಯ ಗರ್ಭದಲ್ಲಿ ಪುತ್ರರಾಗಿ ಬಂದರು.

## ದಿತಿಯ ಸಂತಾನ

**ದಿತ್ಯಾಃ ಪುತ್ರದ್ವಯಂ ಜಜ್ಞೇ ಕಶ್ಯಪಾದಿತಿ ನಃ ಶ್ರುತಮ್ ।**
**ಹಿರಣ್ಯಕಶಿಪುಶ್ಚೈವ ಹಿರಣ್ಯಾಕ್ಷಶ್ಚ ವೀರ್ಯವಾನ್ ॥ 37 ॥**

**ಸಿಂಹಿಕಾ ಚಾಭವತ್ ಕನ್ಯಾ ವಿಪ್ರಚಿತ್ತೇಃ ಪರಿಗ್ರಹಃ ।**
**ಸೈಂಹಿಕೇಯಾ ಇತಿ ಖ್ಯಾತಾಃ ಪುತ್ರಾಃ ಮಹಾಬಲಾಃ ॥ 38 ॥**

ರಾಜನೇ, ಇನ್ನು ಮುಂದೆ ಕಶ್ಯಪರ ಮತ್ತೊಬ್ಬ ಪತ್ನಿಯಾದ ದಿತಿಯ ಸಂತತಿಯನ್ನು ವರ್ಣಿಸುವೆ.

ದಿತಿದೇವಿಯು ಕಶ್ಯಪರನ್ನು ಸಂಧ್ಯಾ ಕಾಲದಲ್ಲಿ ರತಿಗೆಳದಿದ್ದರಿಂದ ದೈತ್ಯರಾದ ಇಬ್ಬರು ಮಕ್ಕಳು ಜನಿಸಿದರು. ಇವರೇ ಹಿರಣ್ಯಾಕ್ಷ-ಹಿರಣ್ಯಕಶಿಪುಗಳು. ಇವರಿಬ್ಬರಲ್ಲದೆ 'ಸಿಂಹಿಕೆ' ಎಂಬ ಹೆಣ್ಣು ಮಗಳು ಹುಟ್ಟಿದಳು. ಇವಳು ವಿವಾಹದಲ್ಲಿ ವಿಪ್ರಚಿತ್ತಿಯನ್ನು ಹೊಂದಿ ಅವನಿಂದ ಸೈಂಹಿಕೇಯರೆಂದೆ ಪ್ರಸಿದ್ಧರಾದ ಹತ್ತು ಸಾವಿರ ಮಂದಿ ಮಕ್ಕಳನ್ನು ಪಡೆದಳು. ಇವರ ಪುತ್ರ, ಪೌತ್ರರು ನೂರಾರು, ಸಾವಿರಾರು ಇರುವರು. ಇವರ ಲೆಕ್ಕ ಸಿಗುವುದಿಲ್ಲ. ಹಿರಣ್ಯಕಶಿಪುವಿನ ವಂಶ ಹೇಳುವೆ ಕೇಳು.

## ಹಿರಣ್ಯಕಶಿಪು ವಂಶಾವಳಿ

**ಹಿರಣ್ಯಕಶಿಪೋಃ ಪುತ್ರಾಶ್ಚತ್ವಾರಃ ಪ್ರಥಿತೌಜಸಃ ।**
**ಅನುಹ್ಲಾದಶ್ಚ ಹ್ಲಾದಶ್ಚ ಪ್ರಹ್ಲಾದಶ್ಚೈವ ವೀರ್ಯವಾನ್ ॥ 39 ॥**
**ಸಂಹ್ಲಾದಶ್ಚ ಚತುರ್ಥೋಽಭೂದ್ ಹ್ರಾದಪುತ್ರೋ ಹ್ರದಸ್ತಥಾ ।**
**ಸಂಹ್ಲಾದ ಪುತ್ರಃ ಸುಂದಶ್ಚ ನಿಸುಂದಸ್ತಾವುಭೌ ಸ್ಮೃತೌ ॥ 40 ॥**

ಹಿರಣ್ಯಕಶಿಪುವಿಗೆ ಅನುಹ್ಲಾದ, ಹ್ಲಾದ, ಸಂಹ್ಲಾದ, ಪ್ರಹ್ಲಾದರೆಂದು ನಾಲ್ಕು ಮಂದಿ ಮಕ್ಕಳಾದರು. ಇವರಿಂದ ದೈತ್ಯಕುಲವು ಕವಲೊಡೆದು ವಿಸ್ತಾರ ಹೊಂದಿತು. ಇವರಲ್ಲಿ ಪ್ರಹ್ಲಾದನು ಪರಾಕ್ರಮಿಯಾಗಿದ್ದರೂ ದೈವೀಗುಣಗಳನ್ನು ಬೆಳೆಸಿಕೊಂಡು ಹರಿಭಕ್ತನಾಗಿದ್ದನು. ಪ್ರಹ್ಲಾದನಿಗೂ ನಾಕುಶಿಬಿ, ಬಾಷ್ಕಲ, ಆಯುಷ್ಮಾನ್, ವಿರೋಚನ ಮೊದಲಾದವು ಪುತ್ರರಾದರು. ಇವರಲ್ಲಿ ವಿರೋಚನನಿಂದ ಬಲಿಚಕ್ರವರ್ತಿ ಹುಟ್ಟಿದನು. ಬಲಿಗಾದರೂ ಬಾಣಾಸುರನೇ ಮೊದಲಾದ ನೂರು ಮಂದಿ ಮಕ್ಕಳಾದರು.

ಅನುಹ್ಲಾದನಿಗೆ ಆಯು ಮತ್ತು ಶಿಬಿಕಾಲರು ಇಬ್ಬರು ಮಕ್ಕಳು. ಸಂಹ್ಲಾದನಿಗೆ ಸುಂದ-ನಿಸುಂದರೆಂಬ ಇಬ್ಬರು ಮಕ್ಕಳು.

ವಿಷ್ಣು, ಶಕ್ರ, ಅರ್ಯಮಾ, ಧಾತಾ, ತ್ವಷ್ಟಾ, ಪೂಷಾ, ವಿವಸ್ವಾನ್, ಸವಿತಾ, ಮಿತ್ರ, ವರುಣ, ಅಂಶ, ಭಗ ಹೀಗೆ ದ್ವಾದಶಾದಿತ್ಯರು. ವಿಷ್ಣು, ಶಕ್ರರು ಪುನಃ ಅವತರಿಸಿದರು. ಚಾಕ್ಷುಷ ಮನ್ವಂತರದಲ್ಲಿ ತುಷಿತರೆನಿಸಿದ್ದ ದೇವತೆಗಳೇ ಅದಿತಿಯಲ್ಲಿ ಹುಟ್ಟಿ 'ದ್ವಾದಶಾದಿತ್ಯ'ರೆಂದು ಪ್ರಖ್ಯಾತರಾದರು.

ಜನಮೇಜಯನೇ, ಅತ್ಯಂತ ಕಠಿಣ ವ್ರತಾಚರಣೆ ಮಾಡಿದ ದಕ್ಷನ ಇಪ್ಪತ್ತೇಳು ನಕ್ಷತ್ರಪುತ್ರಿಯರಲ್ಲಿ ಚಂದ್ರನು ದೀಪ್ತಿಮಂತರಾದ ಸಂತಾನವನ್ನು ಪಡೆಯಬೇಕಿತ್ತು. ದಕ್ಷ ಪ್ರಜೇಶನ ಶಾಪದಿಂದಾಗಿ ಕ್ಷಯರೋಗ ಹೊಂದಿದ ಚಂದ್ರನಿಗೆ ಸಂತಾನವಾಗಲಿಲ್ಲ. ರೋಹಿಣಿಯಲ್ಲಿ ಅಧಿಕಪ್ರೀತಿ ತೋರಿಸಿ ಇತರ ಪುತ್ರಿಯರನ್ನು ತಿರಸ್ಕರಿಸಿದ್ದರಿಂದ ದಕ್ಷ ಶಾಪ ನೀಡಿದನು.

ಅರಿಷ್ಟನೇಮಿಯು ತನ್ನ ನಾಲ್ಕು ವಿದ್ಯುತ್ತೆಂಬ ಪತ್ನಿಯರಲ್ಲಿ ಹದಿನಾರು ಪುತ್ರರನ್ನು ಪಡೆದನು. ರಾಜರ್ಷಿಯಾದ ಕೃತಾಶ್ವನು. ಪ್ರತ್ಯಂಗಿರಸಜರೆಂಬ ವೇದಮಂತ್ರಗಳು, ದೇವತೆಗಳ ಆಯುಧಗಳೂ ಲಭಿಸಿದವು.

**ಏತೇ ಯುಗಸಹಸ್ರಾಂತೇ ಜಾಯಂತೇ ಪುನರೇವ ಹಿ ।**
**ಸರ್ವದೇವಗಣಾಸ್ತಾತ ತ್ರಯಸ್ತ್ರಿಂಶತ್ತು ಕಾಮಜಾಃ ॥ 41 ॥**

ಭಗವಂತನ ಇಚ್ಛೆಯಿಂದಲೇ ಹುಟ್ಟುವ ಈ ಮುವ್ವತ್ತು ಮೂರು ಮಂದಿ ದೇವತೆಗಳು ಕೃತಯುಗ ಮೊದಲ್ಗೊಂಡು ನಾಲ್ಕು ಯುಗಗಳ ಒಂದು ಸಾವಿರ ಯುಗಗಳು ಕಳೆದಾಗ ಪುನಃ ಪುನಃ ಜನಿಸುತ್ತಿರುತ್ತಾರೆ. ಹೀಗೆ ಹುಟ್ಟಿದ ದೇವತಾವರ್ಗದವರಿಗೂ ಮಾನವರಂತೆ ಉತ್ಪತ್ತಿ-ನಾಶವೆಂಬ ಧರ್ಮವಿರುತ್ತದೆ.

**ಯಥಾ ಸೂರ್ಯಸ್ಯ ಗಗನೇ ಉದಯಾಸ್ತಮನೇ ಇಹ ।**
**ಏವಂ ದೇವನಿಕಾಯಾಸ್ತೇ ಸಂಭವಂತಿ ಯುಗೇ ಯುಗೇ ॥ 42 ॥**

ಹೇಗೆ ಸೂರ್ಯದೇವನಿಗೆ ಆಕಾಶದಲ್ಲಿ ಉದಯ-ಅಸ್ತಮನ ನೋಡುವವರ ದೃಷ್ಟಿಯಂತೆ ಆಗುವುವೋ, ಹಾಗೆಯೇ ದೇವತೆಗಳಗೂ ಉದಯಾಸ್ತಗಳು ಶಾಸ್ತ್ರಸಿದ್ಧವಾಗಿವೆ.

ಧೃತರಾಷ್ಟ್ರ, ಸೂರ್ಯ, ಕುಕ್ಷಿ ಮೊದಲಾದವರು ಬಲಿಯ ಪುತ್ರರು. ಇವರಲ್ಲಿ **ಬಾಣಾಸುರ**[4]ನು ಜ್ಯೇಷ್ಠನೂ ಶ್ರೇಷ್ಠನೂ ಆಗಿದ್ದು, ರುದ್ರದೇವನಿಗೆ ಅತ್ಯಂತ ಪ್ರಿಯನಾಗಿದ್ದನು.

4. **ಬಾಣಾಸುರ** : ಶಿವಭಕ್ತನಾದ ಬಾಣನಿಗೆ ರುದ್ರದೇವನ ಅನುಗ್ರಹದಿಂದ ಸಾವಿರ ತೋಳುಗಳಿದ್ದವು. ಇವನ ಮೇಲಿನ ಪ್ರೀತಿಯಿಂದ ಶಿವನೆ ಪತ್ನಿಪುತ್ರ ಸಹಿತನಾಗಿ ಬಾಣನ ಪಟ್ಟಣದಲ್ಲಿರುತ್ತಿದ್ದನು. ಇವಳ ಪುತ್ರಿ ಉಷೆ. ಕೃಷ್ಣನ ಮೊಮ್ಮಗ ಅನಿರುದ್ಧನು ವಿವಾಹವಾದನು.

**ಪುರಾಕಲ್ಪೇ ಹಿ ಬಾಣೇನ ಪ್ರಸಾದ್ಯೋಮಾಪತಿಂ ಪ್ರಭುಮ್ ।**
**ಪಾರ್ಶ್ವತೋ ವಿಹರಿಷ್ಯಾಮಿ ಇತ್ಯೇವಂ ಯಾಚಿತೋ ವರಃ ॥ 43 ॥**

ಹಿಂದಿನ ಕಲ್ಪದಲ್ಲಿ ಬಾಣಾಸುರನು ರುದ್ರದೇವನನ್ನು ತಪಸ್ಸಿನಿಂದ ಸಂತೋಷಗೊಳಿಸಿ, ಹೀಗೆ ವರ ಬೇಡಿದನು - 'ಶಿವನೇ, ನಿನ್ನ ಹತ್ತಿರವೇ ಯಾವಾಗಲೂ ಇದ್ದು ವಿಹರಿಸುತ್ತೇನೆ' ಎಂಬ ವರವನ್ನು ಬೇಡಿದನು.

## ಬಾಣಾಸುರ - ಹಿರಣ್ಯಾಕ್ಷರ ಸಂತತಿ

**ಬಾಣಸ್ಯ ಚೇಂದ್ರದಮನೋ ಲೋಹಿತ್ಯಾಮುಪಪದ್ಯತ ।**
**ಗಣಾಸ್ತಥಾಸುರಾ ರಾಜನ್ ಶತಸಾಹಸ್ರ ಸಮ್ಮಿತಾಃ ॥ 44 ॥**
**ಹಿರಣ್ಯಾಕ್ಷಸುತಾಃ ಪಂಚ ವಿದ್ವಾಂಸಃ ಸುಮಹಾಬಲಾಃ ॥ 45 ॥**

ಬಾಣಾಸುರನಿಗೆ ಇಂದ್ರದಮನನು ಪುತ್ರನಾದನು. ಲಕ್ಷೋಪಲಕ್ಷ ಅಸುರರು ಇವನ ಗಣಕ್ಕೆ ಸೇರಿದವರಾಗಿದ್ದಾರೆ.

ಹಿರಣ್ಯಾಕ್ಷನಿಗೆ ಝುರ್ಝುರ, ಶಕುನಿ, ಭೂತ ಸಂತಾಪನ, ಮಹಾನಾಭ ಹಾಗೂ ಮಹಾಪರಾಕ್ರಮಿಯಾದ ಕಾಲನಾಭ ಎಂಬ ಐದು ಮಂದಿ ಮಕ್ಕಳಾದರು. ಇವರಿಂದ ಮುಂದೆ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಮೊದಲಾದ ಸಂತತಿ ಬೆಳೆದು 27 ಕೋಟಿ ರಾಕ್ಷಸ ಕುಲವು ಬಲಿಷ್ಠವಾಗಿ ಭೂಮಿಯಲ್ಲಿ ಬೆಳೆಯಿತು.

## ದನು ಸಂತಾನ

**ಅಭವನ್ ದನು ಪುತ್ರಾಶ್ಚ ಶತಂ ತೀವ್ರ ಪರಾಕ್ರಮಾಃ ।**
**ತಪಸ್ವಿನೋ ಮಹಾವೀರ್ಯಾಃ ಪ್ರಾಧಾನ್ಯೇನ ನಿಬೋಧ ಮೇ ॥ 46 ॥**

ರಾಜನೇ, ದನುವೆಂಬ ಕಶ್ಯಪ ಸೀಮಂತಿನೀಯಿಂದ ತೀವ್ರ ಪರಾಕ್ರಮಿಗಳಾದ ತಪಸ್ವಿಗಳಾದ ಮಹವೀರ್ಯವಂತರಾದ ನೂರಾರು ಮಕ್ಕಳಾದರು. ಇವರಲ್ಲಿ ಮುಖ್ಯರಾದವರು ಹೀಗಿದ್ದಾರೆ - "ದ್ವಿಮೂರ್ಧಾ - ಶಕುನಿ - ವಿಭು - ಶಂಕುಶಿರಸ್(1) - ಶಂಕುಕರ್ಣ - ವಿರಾಧ - ಗವೇಷ್ಠೀ - ದುಂದುಭಿ - ಅಯೋಮುಖ - ಶಂಬರ - ಕಪಿಲ - ವಾಮನ - ಮರೀಚಿ - ಮಘವಾನ್ - ಇರಾ - ಶಂಕುಶಿರಸ್(2) - ವೃಕಾಸುರ - ವಿಕ್ಷೋಭಣ - ಕೇತು - ಕೇತುವೀರ್ಯ - ಶತಹ್ರದ - ಇಂದ್ರಜಿತ್ - ಸತ್ಯಜಿತ್ - ವಜ್ರನಾಭ -

ಮಹಾನಾಭ – ವಿಕ್ರಾಂತ – ಕಾಲನಾಭ – ಏಕಚಕ್ರ – ಮಹಾಬಾಹು – ತಾರಕಾಸುರ – ವೈಶ್ವಾನರ – ಪುಲೋಮಾ – ವಿದ್ರಾವಣ – ಮಹಾಸುರ – ಸ್ವರ್ಭಾನು – ವೃಷಪರ್ವನ್ – ತುಹುಂಡ – ಸೂಕ್ಷ್ಮ – ಅತಿಚಂದ್ರ – ಊರ್ಣನಾಭ – ಮಹಾಗಿರಿ – ಅಸಿಲೋಮಾ – ಕೇಶೀ – ಶಠ – ಬಲಕ – ಮದ – ಗಗನಮೂರ್ಧಾ – ಕುಂಭನಾಭ – ಪ್ರಮದ – ಮಯ – ಕುಪಥ – ಹಯಗ್ರೀವ – ವೈಸೃಪ – ವಿರೂಪಾಕ್ಷ – ಸುಪಥ – ಹರ – ಆಹರ – ಹಿರಣ್ಯಕಶಿಪು – ಶತಾಮಯನಾದ ಶಂಬರ – ಶರಭ – ಶಲಭ – ವಿಪ್ರಚಿತ್ತಿ – ಇವರೆಲ್ಲರೂ ದನುವಿನ ಮಕ್ಕಳಾಗಿದ್ದು ದಾನವರೆನಿಸಿದ್ದಾರೆ. ಇವರಿಗೆಲ್ಲ ವರದಿಂದ ಬಲಸಂಪನ್ನತೆ, ಬಲದಿಂದ ಗರ್ವಾಂಧತೆ, ಗರ್ವದಿಂದ ಹಿಂಸಾಪ್ರವೃತ್ತಿ – ಹಿಂಸೆಯಿಂದ ಪರೋಪದ್ರವ ಹೀಗೆ ಲೋಕಕಂಟಕರಾದರು. ಇವರ ಮಕ್ಕಳು ಮೊಮ್ಮಕ್ಕಳ ಸಂಖ್ಯೆ ಅಪಾರವಾದದ್ದು ಹೇಳಲು ಸಾಧ್ಯವಿಲ್ಲ.

**ಸ್ವರ್ಭಾನೋಸ್ತು ಪ್ರಭಾ ಕನ್ಯಾ ಪುಲೋಮ್ನಶ್ಚ ಸುತಾತ್ರಯಮ್ ।**
**ಉಪದಾನವೀ ಹಯಶಿರಾಃ ಶರ್ಮಿಷ್ಠಾ ವಾರ್ಷಪರ್ವಣೀ ॥ 47 ॥**

**ಪುಲೋಮಾ ಕಾಲಿಕಾಚೈವ ವೈಶ್ವಾನರಸುತೇ ಉಭೇ ।**
**ಬಹ್ವಪತ್ಯೇ ಮಹಾವೀರ್ಯೇ ಮಾರೀಚೇಸ್ತು ಪರಿಗ್ರಹಃ ॥ 48 ॥**

ಸ್ವರ್ಭಾನು ಎಂಬ ದನುಪುತ್ರನಿಗೆ 'ಪ್ರಭಾ' ಎಂಬ ಪುತ್ರಿಯಿದ್ದಳು. ಇವಳನ್ನು ನಮುಚಿ ವಿವಾಹವಾದನು. ಪುಲೋಮನಿಗೆ ಉಪದಾನವೀ, ಹಯಶಿರಾ, ಶಚೀ ಎಂಬ ಮೂವರು ಪುತ್ರಿಯರಾದರು. ವೃಷಪರ್ವರಾಜನ ಮಗಳೇ ಶರ್ಮಿಷ್ಠೆಯು. ಯಯಾತಿಯನ್ನು ಕೈ ಹಿಡಿದು ದ್ರುಹು, ಅನು, ಪೂರುವೆಂಬ ಮೂರು ಮಕ್ಕಳು ಪಡೆದಳು. ಇವರ ವಂಶ ಮುಂದೆ ಬರಲಿದೆ. ವೈಶ್ವಾನರನೆಂಬ ದನುಪುತ್ರನಿಗೆ ಪುಲೋಮಾ, ಕಾಲಿಕಾ ಎಂಬ ಇಬ್ಬರು ಪುತ್ರಿಯರು. ಇವರಿಬ್ಬರೂ ಮರೀಚಿ ಪುತ್ರ ಕಶ್ಯಪನನ್ನೆ ವಿವಾಹವಾದರು. ದಾನವ ಸ್ತ್ರೀಯರನ್ನು ವಿವಾಹವಾಗುವುದು ಬ್ರಹ್ಮದೇವರ ಅಣತಿಯಂತೆ. (ಬ್ರಹ್ಮಚೋದತಿಃ ಎಂದಿದೆ).

### ಪೌಲೋಮ– ಕಾಲಕೇಯರು

**ತಯೋಃ ಪುತ್ರ ಸಹಸ್ರಾಣಿ ಷಷ್ಟಿಂ ದಾನವ ನಂದನಾನ್ ।**
**ಚತುರ್ದಶ ಶತಾನನ್ಯಾನ್ ಹಿರಣ್ಯಪುರವಾಸಿನಃ ॥ 49 ॥**

**ಪೌಲೋಮಾಃ ಕಾಲಕೇಯಾಶ್ಚ ದಾನವಾಸ್ತೇ ಬಹಾಬಲಾಃ ।**
**ಅವಧ್ಯಾ ದೇವತಾನಾಂ ಚ ಹಿರಣ್ಯಪುರವಾಸಿನಃ ॥ 50 ॥**
**ಕೃತಾಃ ಪಿತಾಮಹೇನಾಜೌ ನಿಹತಾಃ ಸವ್ಯಸಾಚಿನಾ ॥ 51 ॥**

ಹೀಗೆ ಮರೀಚಿ ಪುತ್ರನಾದ ಕಶ್ಯಪನಿಗೆ ದನುದೇವಿಯಲ್ಲಿ ಹುಟ್ಟಿ ಬೆಳೆದ ದಾನವ ಕುಲವು ಅರವತ್ತು ಸಾವಿರಕ್ಕೆ ಮುಟ್ಟಿತ್ತು. ಪುಲೋಮೆಯಿಂದ ಪೌಲೋಮರೆಂಬ ದಾನವಗಣವು, ಕಾಲಿಕೆಯಿಂದ ಕಾಲಕೇಯರೆಂಬ ಗಣವೂ ಬ್ರಹ್ಮದೇವರ ವರದಿಂದಾಗಿ ಅವಧ್ಯರಾಗಿದ್ದರು. ದೇವತೆಗಳಿಂದ ಅವಧ್ಯರಾದ ಇವರೆಲ್ಲರೂ ಹಿರಣ್ಯಪುರದಲ್ಲಿರುತ್ತಿದ್ದರು. ಇಂದ್ರದೇವನು ತನ್ನದೆ ಅಂಶನಾದ ಅರ್ಜುನನನ್ನು ಸ್ವರ್ಗಕ್ಕೆ ಕರೆಸಿಕೊಂಡು ಮಾನವನಾದ ಇವನಿಂದ ಇಂದ್ರನು ಕೊಲ್ಲಿಸಿದನು.

**ಪ್ರಭಾಯಾಃ ನಹುಷಃ ಪುತ್ರಃ ಸೃಂಜಯಶ್ಚ ಶಚೀಸುತಃ ।**
**ಪೂರುಂ ಜಜ್ಞೇಽಥ ಶರ್ಮಿಷ್ಠಾ ದುಷ್ಯಂತಮುಪದಾನವೀ ॥ 52 ॥**

ಪ್ರಭಾ ಎಂಬ ಸ್ವರ್ಭಾನುಪುತ್ರಿಗೆ ನಮುಚಿಯಿಂದ ನಹುಷನೆಂಬ ಮಗನಾದನು. ಪುಲೋಮ ಪುತ್ರೀ ಶಚೀದೇವಿಯು ಸೃಂಜಯನಿಗೆ ತಾಯಿಯಾದಳು. ಪುಲೋಮನ ಮತ್ತೊಬ್ಬ ಪುತ್ರಿ ಉಪದಾನವಿಯು ದುಶ್ಯಂತನಿಗೆ ಜನ್ಮವಿತ್ತಳು

## ಸೈಂಹಿಕೇಯರು

**ಸಿಂಹಿಕಾಯಾಮಥೋತ್ಪನ್ನಾಃ ವಿಪ್ರಚಿತ್ತೇಃ ಸುತಾಸ್ತದಾ ।**
**ದೈತ್ಯ ದಾನವ ಸಂಯೋಗಾದ್ ಜಾತಾಸ್ತೀವ್ರ ಪರಾಕ್ರಮಾಃ ॥ 53 ॥**
**ಸೈಂಹಿಕೇಯಾ ಇತಿ ಖ್ಯಾತಾಃ ತ್ರಯೋದಶ ಮಹಾಬಲಾಃ ॥ 54 ॥**

ವಿಪ್ರಚಿತ್ತಿ ದೈತ್ಯನಿಂದ ಹಿರಣ್ಯಕಶಿಪುವಿನ ತಂಗಿಯಾದ ಸಿಂಹಿಕೆಯಲ್ಲಿ ಸೈಂಹಿಕೇಯರೆಂಬ ದೈತ್ಯಗಣ ಹುಟ್ಟಿತು. ಇವರು ದೈತ್ಯನಾದ ವಿಪ್ರಚಿತ್ತಿ ಹಾಗೂ ದಾನವಳಾದ ಸಿಂಹಿಕೆಯುರ ಸಂಯೋಗದಿಂದಾಗಿ ಮಹಾಬಲಿಷ್ಠರಾದ ಮಕ್ಕಳಾದರು. ಇವರಲ್ಲಿ ಹದಿಮೂರು ಮಂದಿ ಪ್ರಧಾನರು. ಬಲಿಷ್ಠರಾದ ವ್ಯಂಶ - ಶಲ್ಯ - ಬಲಿ - ನಭ - ವಾತಾಪಿ - ನಮುಚಿ - ಇಲ್ವಲ - ಖಸೃಮ - ಆಂಜಿಕ - ನರಕ - ಕಾಲನಾಭ - ಶುಕ್ರ - ಪೋತರಣ - ವಜ್ರನಾಭರು. ಇವರಲ್ಲಿ ವ್ಯಂಶನೆ ರಾಹುವು. ಸೂರ್ಯಚಂದ್ರರನ್ನು ಉಪರಾಗಗಳಲ್ಲಿ ನುಂಗಲು ಧಾವಿಸುವನು. ಪ್ರಹ್ಲಾದನ ಮಕ್ಕಳು ಮೂಕ ಮತ್ತು ತುಹುಂಡ ಎಂದು.

ಸುಂದನಿಗೆ ತಾಟಕೆಯಲ್ಲಿ ಮಾರೀಚನೆಂಬ ಮಹಾನೀಚ ಜನಿಸಿದನು ಹಾಗೂ ಶಿವಮಾಣ ಮತ್ತು ಪರಾಕ್ರಮಿ ಸುರಕಲ್ಪರೂ ತಾಟಕೆಯಲ್ಲಿ ಹುಟ್ಟಿದರು. ಇವರೆಲ್ಲರೂ ದನುವಂಶಾಭಿವೃದ್ಧಿಗೊಳಸಿದ ದಾನವ ಶ್ರೇಷ್ಠರು. ಇವರಿಗೆ ಕಾಲಕ್ರಮಾನುಸಾರವಾಗಿ ನೂರಾರು – ಸಾವಿರಾರು ಪುತ್ರ ಪೌತ್ರರು ಹುಟ್ಟಿದರು.

## ನಿವಾತಕವಚ ದೈತ್ಯಗಣ 3 ಕೋಟಿ

**ಸಂಹ್ಲಾದಸ್ಯ ತು ದೈತ್ಯಸ್ಯ ನಿವಾತಕವಚಾಃ ಕುಲೇ ।**
**ಸಮುತ್ಪನ್ನಾಃ ಸುತಪಸಾ ಮಹಾಂತೋ ಭಾವಿತಾತ್ಮನಃ ॥ 55 ॥**
**ತಿಸ್ರಃ ಕೋಟ್ಯಃ ಸುತಾಸ್ತೇಷಾಂ ಮಣಿಮತ್ಯಾಂ ನಿವಾಸಿನಾಮ್ ।**
**ತೇಽಪ್ಯವಧ್ಯಾಸ್ತು ದೇವಾನಾಮ್ ಅರ್ಜುನೇನ ನಿಪಾತಿತಾಃ ॥ 56 ॥**

ಸಂಹ್ಲಾದನಿಗೆ ನಿವಾತಕವಚರೆಂಬ ದೈತ್ಯರು ಜನಿಸಿದರು.

ಇವರೆಲ್ಲರೂ ತಪೋನಿಷ್ಠರೂ, ಮಹಾಭಾವರೂ ಆಗಿದ್ದರು. ಮಣಿಮತೀ ನಗರದಲ್ಲಿ ವಾಸಿಸುತ್ತಿದ್ದ ನಿವಾತಕವಚರ ಸಂಖ್ಯೆಯು ಮೂರು ಕೋಟಿಯಷ್ಟಿದ್ದವು. ಇವರೂ ಸಹ ಬ್ರಹ್ಮದೇವರ ವರದಿಂದಾಗಿ ಅವಧ್ಯರಾಗಿದ್ದು ಮಾನವವೇಷ ತಾಳದ ಇಂದ್ರಪುತ್ರ ಅರ್ಜುನನಿಂದ ಸತ್ತರು.

## ತಾಮ್ರಾ ಹಾಗೂ ಕಶ್ಯಪ ಸಂತಾನ[5]

**ಷಟ್ ಸುತಾಃ ಸುಮಹಾಸತ್ವಾಃ ತಾಮ್ರಾಯಾಃ ಪರಿಕೀರ್ತಿತಾಃ ।**
**ಕಾಕೀ ಶ್ಯೇನೀ ಚ ಭಾಸೀ ಚ ಸುಗ್ರೀವೀ ಶುಚಿ ಗೃಧ್ರಿಕಾ ॥ 57 ॥**

---

5. ಕಾಶ್ಯಪ ಸಂತಾನ :
ಅದಿತಿ, ದಿತಿ, ದನು, ಕಾಷ್ಠಾ, ಅರಿಷ್ಠಾ, ಸುರಸಾ, ಇಲಾ, ಮುನಿ, ಕ್ರೋಧವಶಾ, ತಾಮ್ರಾ, ಸುರುಭಿ, ಸರಮಾ, ತಿಮಿ ಎಂದು ಹದಿಮೂರು ಮಂದಿ ಪತ್ನಿಯರು. ತಿಮಿಯಿಂದ ಜಲಚರಗಳು, ಸರಮಾಳಿಂದ ಮಾಂಸಾಹಾರಿ ಕಾಡುಪ್ರಾಣಿಗಳು, ಸಿಂಹ, ಹುಲಿ, ಚಿರತೆ. ಸುರಭಿಯು ಎಮ್ಮೆ, ಗೋವು, ಎರಡು ಗೊರಸಿನವುಗಳು, ತಾಮ್ರಾಳಿಗೆ ಹದ್ದು, ಗೂಬೆ, ಗಿಡಗಗಳು, ಮುನಿ ಎಂಬುವಳಿಗೆ ಅಪ್ಸರಾಸ್ತ್ರೀಯರು, ಕ್ರೋಧವಶ ಕದ್ರುವಿಗೆ ಸರ್ಪಾದಿಗಳು, ಇಲಾಳಿಗೆ ಗಿಡಮರಗಳು, ಸುರಸಾಳಿಗೆ ಯಾತುಧಾನರು, ಅರಿಷ್ಠಾಳಿಗೆ ಗಂಧರ್ವರು, ಕಾಷ್ಠಾಳಿಗೆ ಕುದುರೆ ಮೊದಲಾದ ಒಂದು ಗೊರಸಿನ ಪ್ರಾಣಿಗಳು–ದನುವಿಗೆ ದಾನವಿರು.

**ಕಾಕೀ ಕಾಕಾನ್ ಅಜನಯತ್ ಉಲೂಕೀ ಪ್ರತ್ಯುಲೂಕಕಾನ್ ।**
**ಶ್ಯೇನೀ ಶ್ಯೇನಾಂಸ್ತಥಾ ಭಾಸೀ ಭಾಸಾನ್ ಗೃಧ್ರಾಂಶ್ಚ ಗೃಧ್ರ್ಯಪಿ ॥ 58 ॥**

ಕಶ್ಯಪರ ತಾಮ್ರಾ ಎಂಬ ಪತ್ನಿಯಲ್ಲಿ ಮಹಾಸತ್ವಶಾಲಿಗಳಾದ ಆರು ಮಂದಿ ಮಕ್ಕಳಾದರು. ಕಾಕೀ - ಉಲೂಕೀ - ಶ್ಯೇನೀ - ಭಾಸೀ - ಸುಗ್ರೀವೀ - ಶುಚೀ - ಗೃಧ್ರಿಕಾ ಎಂದು. ಇವರಲ್ಲಿ ಕಾಕಿಯು ಕಾಗೆಗಳಿಗೆ ಜನ್ಮ ನೀಡಿದಳು. ಉಲೂಕಿಯು ಗೂಬೆಗಳಗೂ, ಶ್ಯೇನಿಯು ಪಾರಿವಾಳ, ಭಾಸಿಯು ಕೋಳಿಗಳನ್ನೂ, ಗೃಧ್ರಿಯು ರಣಹದ್ದುಗಳನ್ನೂ, ಶುಚಿಯು ನೀರು ಹಕ್ಕಿಗಳನ್ನೂ ಸುಗ್ರೀವಿಯು ಕುದುರೆ, ಒಂಟೆ, ಕತ್ತೆಗಳನ್ನೂ ಮಕ್ಕಳನ್ನಾಗಿ ಹಡೆದಳು. ಇವಿಷ್ಟು ತಾಮ್ರೆಯ ಕೊಡುಗೆ. ಶುಚಿಯು ಹಂಸ-ಕಾರಂಡವ-ಸಾರಸ - ಪ್ಲವ - ಬಕ ಮೊದಲಾದ ನೀರಿನಲ್ಲಿ ಸಂಚರಿಸುವ ಪಕ್ಷಿಗಳಿಗೆ ತಾಯಿಯಾದಳು. ಕಶ್ಯಪ ಪುತ್ರಿಯರಿಂದ ಪಶು ಪಕ್ಷಿ ಪ್ರಪಂಚವೆಲ್ಲವೂ ಸಮೃದ್ಧವಾಗಿ ಬೆಳೆದವು.

### ವಿನತಾ ಪುತ್ರ ಗರುಡ[6]

**ವಿನತಾಯಾಸ್ತು ಪುತ್ರೌ ದ್ವೌ ಅರುಣೋ ಗರುಡಸ್ತಥಾ ।**
**ಸುಪರ್ಣಃ ಪತತಾಂ ಶ್ರೇಷ್ಠೋ ದಾರುಣಃ ಸ್ವೇನ ಕರ್ಮಣಾ ॥ 59 ॥**

---

6. **ಗರುಡ :**
ಮಹಾಪರಾಕ್ರಮಿಯು ಅಖಂಡ ತಪಸ್ಸಿನಿಂದ ಹರಿಯ ವಾಹನವಾದನು. ತನ್ನ ತಾಯಿಯ ದಾಸ್ಯವಿಮುಕ್ತಿಗೊಳಿಸಿದನು. ಇಂದ್ರದೇವರ ವಜ್ರಾಯುಧಕ್ಕೂ ಮಣಿಯದೆ ತಾನೇ ಒಂದು ಗರಿ ಬೀಳಿಸಿದನು. ಸೂರ್ಯನ ಸಾರಥಿ ಅರುಣ ಇವನ ಅಣ್ಣನು. ಇವನು ಹುಟ್ಟಿದ ಕೂಡಲೇ ಮೂರುಲೋಕಗಳೂ ಕಂಪಿಸಿದವು.
**ಗರುಡಸ್ಯ ಜತ ಮಾತ್ರೇಣ ತ್ರಯೋಲೋಕಾಃ ಪ್ರಕಂಪಿತಾಃ ।**
**ಗಗನಂ ನಷ್ಟ ಚಂದ್ರಾರ್ಕಂ ಜ್ಯೋತಿಷ್ಯಂ ನ ಪ್ರಭಾಸತೇ ॥** *-ರಾತ್ರಿಸೂಕ್ತ*

**ಅರುಣ :**
ಅರುಣನಿಗೆ ತಾಯಿಯು ಬೇಗ ಮೊಟ್ಟೆ ಒಡೆದದ್ದರಿಂದ ತೊಡೆ ಇರಲಿಲ್ಲವಾಗಿ ಅನೂರು ಎನಿಸಿ ಸೂರ್ಯನ ತಾಪ ತಡೆಯಲು ಅವನಿಗೆ ಸಾರಥಿಯಾದ. ಅವನಿಗೆ ಸಂಪಾತಿ ಜಟಾಯುವೆಂಬ ಮಕ್ಕಳು. ಸಂಪಾತಿಗೆ ಮಹಾವೇಗಶಾಲಿಯಾದ ಬಭ್ರು ಎಂಬ ಮಗನು. ಜಟಾಯುವಿಗೆ ಕರ್ಣಿಕಾರ, ಶತಗಾಮಿ ಎಂಬ ಮಕ್ಕಳು. ಇವರಿಂದ ಪಕ್ಷಿಕುಲ ಸಮೃದ್ಧವಾಯಿತು. ಸಂಪಾತಿ-ಜಟಾಯು ರಾಮನಿಗೂ ಅವನ ಸೈನ್ಯಕ್ಕೂ ಸಹಕಾರಿಯಾಗಿದ್ದವು.

ಪಕ್ಷಿರಾಜನಾದ ಗರುಡ ಹಾಗೂ ಅರುಣರು ವಿನತೆಯಲ್ಲಿ ಹುಟ್ಟಿದವರು. ಸುಪರ್ಣನು ಮಹಾಪರಾಕ್ರಮಿಯಾಗಿದ್ದನು.

## ಸುರಸಾ – ಕದ್ರೂ ವಂಶಗಳು

**ಸುರಸಾಯಾಃ ಸಹಸ್ರಂ ತು ಸರ್ಪಾಣಾಂ ಅಮಿತೌಜಸಾಮ್ ।**
**ಅನೇಕಶಿರಸಾಂ ತಾತ ಖೇಚರಾಣಾಂ ಮಹಾತ್ಮನಾಮ್ ॥ 60 ॥**
**ಕಾದ್ರವೇಯಾಶ್ಚ ಬಲಿನಃ ಸಹಸ್ರಮಮಿತೌಜಸಃ ।**
**ಸುಪರ್ಣವಶಗಾಃ ನಾಗಾಃ ಜಜ್ಞಿರೇऽನೇಕಮಸ್ತಕಾಃ ॥ 61 ॥**
**ತೇಷಾಂ ಪ್ರಧಾನಾಃ ಸತತಂ ಶೇಷವಾಸುಕಿ ತಕ್ಷಕಾಃ ॥ 62 ॥**

ಸುರಸಾ ಎಂಬ ಮತ್ತೊಬ್ಬ ಕಶ್ಯಪ ಪತ್ನಿಯಿಂದ ಸಾವಿರಾರು ಹೆಡೆಗಳಿರುವ ಪರಾಕ್ರಮವಂತರಾದ ಸರ್ಪಗಳೆ ಹರಿದು ಬಂದವು. ಇವಳ ಸವತಿಯಾದ ಕದ್ರೂದೇವಿಯಲ್ಲಿ ಸಾವಿರಾರು ಸರ್ಪಗಳೇ ಹುಟ್ಟಿಬಂದವು. ಇವರೆಲ್ಲರೂ ನಾಗ ಧುರೀಣರು. ಈ ಸರ್ಪಗಳೆಲ್ಲವೂ ಗರುಡನ ಅಧೀನವಾಗಿದ್ದವು. ಕದ್ರುವಿನ ಮಕ್ಕಳೆಲ್ಲರೂ 'ಕಾದ್ರವೇಯರು' ಎನಿಸಿದರು. ಸರ್ಪಗಳಲ್ಲಿ ಹದಿನಾಲ್ಕು ಸಾವಿರ ಪ್ರಕಾರಗಳಿವೆ. ವಿಷಮಯವಾದ ದಂತಗಳು, ಕಡುಕೋಪ ಇವುಗಳು ಸರ್ಪಗಳ ಲಕ್ಷಣವಾಗಿದೆ. ಕೋಪಿಷ್ಠವಾದ್ದರಿಂದಲೇ ವಾಯುಹಾರಿಗಳಾದ ಇವುಗಳಿಗೆ 'ಕ್ರೋಧವಶ'ರೆನ್ನಲಾಗಿದೆ.

ಇವುಗಳಲ್ಲಿ ಪ್ರಧಾನ ಸರ್ಪಗಳ ಹೆಸರು ಇಂತಿವೆ.

ಶೇಷ – ವಾಸುಕೀ – ತಕ್ಷಕ – ಐರಾವತ – ಮಹಾಪದ್ಮ – ಕಂಬಲ – ಅಶ್ವತರ – ಏಲಾಪತ್ರ – ಶಂಖ – ಕರ್ಕೋಟಕ – ಧನಂಜಯ – ಮಹಾನೀಲ – ಮಹಾಕರ್ಣ – ಧೃತರಾಷ್ಟ್ರ – ಬಲಾಹಕ – ಕುಹರ – ಪುಷ್ಪದಂಷ್ಟ್ರ – ದುರ್ಮುಖ – ಸುಮುಖ – ಶಂಖ – ಶಂಖಪಾಲ – ಕಪಿಲ – ವಾಮನ – ನಹುಷ – ಶಂಕರೋಮಾ – ಮಣಿ ಇವೇ ಮೊದಲಾದ ಸರ್ಪಗಳ ಮಕ್ಕಳು ಮೊಮ್ಮಕ್ಕಳು ಅಸಂಖ್ಯೆಯಲ್ಲಿವೆ. ಇವೆಲ್ಲವನ್ನೂ ಲೋಕಕ್ಷೇಮ ದೃಷ್ಟಿಯಿಂದ ಗರುಡನು ತಿಂದು ಹಾಕಿದನು.

ಭೂಮಿಯ ಮೇಲಿರುವ ನೀರಿನಲ್ಲಿರುವ ಪಕ್ಷಿಗಳೆಲ್ಲವನ್ನೂ ಧರಾಸಂತಾನವೆನ್ನುವರು. ಸುರಭಿಯಾದರೂ ಗೋವುಗಳನ್ನೂ. ಮಹಿಷಗಳನ್ನೂ ಹಡೆದಳು.

ಇರಾ ಎಂಬ ಕಶ್ಯಪ ಪತ್ನಿಯು ಮರ-ಗಿಡ-ಬಳ್ಳಿ-ಹುಲ್ಲು ಜಾತಿಗಳನ್ನೆ ಸೃಷ್ಟಿಸಿದಳು. ಖಶಾ ಎಂಬುವಳು ಯಕ್ಷರು, ರಾಕ್ಷಸರನ್ನೂ, ಮುನಿ ಎಂಬುವಳು ಅಪ್ಸರಾ ಸ್ತ್ರೀಯರನ್ನೂ ಹಡೆದಳು.

**ಅರಿಷ್ಟಾ ತು ಮಹಾಸತ್ವಾನ್ ಗಂಧರ್ವಾನಮಿತೌಜಸಃ ।**
**ಏತೇ ಕಶ್ಯಪದಾಯಾದಾಃ ಕೀರ್ತಿತಾಃ ಸ್ಥಾಣು ಜಂಗಮಾಃ ॥ 63 ॥**

ಅರಿಷ್ಟಾ ಎಂಬ ಪತ್ನಿಯು ಮಹಾತೇಜಸ್ಸುಳ್ಳ ಗಂಧರ್ವರಿಗೆ ಜನ್ಮವಿತ್ತಳು. ಇವರು ಹತ್ತಿರ ಬಂದರೆ ಸುಗಂಧವನ್ನು ಸುರಿಸುತ್ತಾರೆ. (ಗಂಧಂ ಅರ್ವಂತಿ).

ರಾಜನೇ, ಮೇಲೆ ನಿರೂಪಿಸಿದ ಸೃಷ್ಟಿಯೆಲ್ಲವೂ ಕಶ್ಯಪರ ಸಂತಾನವೆಂದು ತಿಳಿ. ಕಶ್ಯಪರ ಈ ಮಕ್ಕಳಿಗೆ ಮಕ್ಕಳು ಮೊಮ್ಮಕ್ಕಳು, ಮರಿಮಕ್ಕಳು, ನೂರಾರು ಸಾವಿರಾರು ಹುಟ್ಟಿದವು. ಈ ಸೃಷ್ಟಿಯು ಸ್ವಾರೋಚಿಷ ಮನ್ವಂತರದ್ದು. ಈಗ ಹೇಳುವುದು ವೈವಸ್ವತಮನ್ವಂತರದ ಕಥೆ.

### ಮರುತ್ತುಗಳ ಉತ್ಪತ್ತಿ

**ವೈವಸ್ವತೇ ತು ಮಹತಿ ವಾರುಣೇ ವಿತತೇ ಕ್ರತೌ ।**
**ಜುಹ್ವಾನಸ್ಯ ಬ್ರಹ್ಮಣೋ ವೈ ಪ್ರಜಾಸರ್ಗ ಇಹೋಚ್ಯತೇ ॥ 64 ॥**
**ಪೂರ್ವಂ ಯತ್ರ ತು ಬ್ರಹ್ಮರ್ಷೀನ್ ಉತ್ಪನ್ನಾನ್ ಸಪ್ತ ಮಾನಸಾನ್ ।**
**ಪುತ್ರತ್ವೇ ಕಲ್ಪಯಾಮಾಸ ಸ್ವಯಮೇವ ಪಿತಾಮಹಃ ॥ 65 ॥**

ವೈವಸ್ವತ ಮನ್ವಂತರದಲ್ಲಿ ವರುಣನು ದೊಡ್ಡಯಾಗ ಪ್ರಾರಂಭಿಸಿದನು. ಇದರಲ್ಲಿ ಬ್ರಹ್ಮದೇವನೇ ಹೋತೃವಾಗಿದ್ದನು. ಈ ಬ್ರಹ್ಮದೇವನು ಈ ಹಿಂದೆ ಹುಟ್ಟಿದ್ದ ಮಾನಸಪುತ್ರರಾದ ಏಳು ಮಂದಿ ಬ್ರಹ್ಮರ್ಷಿಗಳನ್ನು ಕರೆದು ಸೃಷ್ಟಿಕಾರ್ಯ ಮುಂದುವರೆಸಿರಿ ಎಂದನು. ಅವರು ಬ್ರಹ್ಮನ ಆಜ್ಞಾಪಾಲನೆಯಲ್ಲಿ ತೊಡಗಿದ್ದರು. ಈ ಮಧ್ಯದಲ್ಲಿ ದೇವ-ದಾನವರಿಗೆ ದ್ವೇಷವುಂಟಾಗಿ ದೇವತೆಗಳು ದುಷ್ಟದಾನವರೆಲ್ಲರನ್ನೂ ಕೊಂದು ಹಾಕಿದರು.

**ದಿತಿಃ ವಿನಷ್ಟಪುತ್ರಾ ವೈ ತೋಷಯಾಮಾಸ ಕಶ್ಯಪಮ್ ।**
**ತಾಂ ಕಶ್ಯಪಃ ಪ್ರಸನ್ನಾತ್ಮಾ ಸಮ್ಯಗಾರಾಧಿತಸ್ತಯಾ ॥ 66 ॥**
**ವರೇಣ ಛಂದಯಾಮಾಸ ಸಾಚ ವವ್ರೇ ವರಂ ತತಃ ।**
**ಪುತ್ರಮಿಂದ್ರ ವಧಾರ್ಥಾಯ ಸಮರ್ಥಮಮಿತೌಜಸಮ್ ॥ 67 ॥**

**ಸ ಚ ತಸ್ಯೈ ವರಂ ಪ್ರಾದಾತ್ ಪ್ರಾರ್ಥಿತಂ ಸುಮಹಾಯಶಾಃ ॥ 68 ॥**

ದೇವತೆಗಳು ತನ್ನ ಮಕ್ಕಳನ್ನು ಕೊಂದದ್ದಕ್ಕಾಗಿ ತಾಯಿಯ ಕರುಳು ಹಿಂಡಿತು. ಅನೇಕ ಕಠಿಣ ವ್ರತಗಳನ್ನು ಕೈಗೊಂಡು ಸಾಂಗೋಪಾಂಗವಾಗಿ ನಡೆಸಿದಳು. ನೂರು ವರ್ಷ ಈ ಕಠಿಣವ್ರತ ಮಾಡಿ ಉಪವಾಸಾದಿಗಳಿಂದ ಸೊರಗಿ ಕಾಷ್ಠದಂತಾದ ಇವಳ ದೇಹ ನೋಡಿ ಅವಳನ್ನು ಸಂತೈಸುತ್ತಾ ಹೀಗೆಂದರು. 'ಬೇಕಾದ ವರಬೇಡು' ಎಂದರು. ಪತಿದೇವನೇ ! ನನ್ನ ಪುತ್ರಶೋಕ ಅಳಿಯಬೇಕು. ಇಂದ್ರನನ್ನು ಕೊಲ್ಲುವಂತ ಪರಾಕ್ರಮಿಯೂ, ಶೂರನೂ ಆದ ಮಗನನ್ನು ನನಗೆ ಕರುಣಿಸು'. ಮಹಾತಪಸ್ವಿಗಳಾದ ಕಶ್ಯಪರು ವರವನ್ನು ನೀಡಿದರು. ಶುಭಾಂಗಿ, ನೀನು ಹೇಳಿದಂತೆ ಇಂದ್ರಹಣನಾದ ಶೂರ ಪುತ್ರ ಹುಟ್ಟುವನು. ಇದಕ್ಕಾಗಿ ನಾನು ಹೇಳಿದಂತೆ ನಡೆಯಬೇಕು.

## ದಿತಿಯ ಗರ್ಭ ನಿಯಮಗಳು[7]

**ಇಂದ್ರಂ ಸುತೋ ನಿಹಂತಾ ತೇ ಗರ್ಭಂ ವೈ ಶರದಾಂ ಶತಮ್ ।**
**ಯದಿ ಧಾರಯಸೇ ಶೌಚಂ ತತ್ಪರಾ ವ್ರತಮಾಸ್ಥಿತಾ ॥ 69 ॥**

**ತಥೈತ್ಯಭಿಹಿತೋ ಭರ್ತಾ ತಯಾ ದೇವ್ಯಾ ಮಹಾತಪಾಃ ।**
**ಧಾರಯಾಮಾಸ ಗರ್ಭಂ ವೈ ಶುಚಿಃ ಸಾ ವಸುಧಾಧಿಪ ॥ 70 ॥**

**ತೇಜಃ ಸಂಭೃತ್ಯ ದುರ್ಧರ್ಷಮವಧ್ಯಮಮರ್ತ್ಯೈರಪಿ ।**
**ಜಗಾಮ ಪರ್ವತಾಯ್ಯೈವ ತಪಸೇ ಶಂಸಿತವ್ರತಃ ॥ 71 ॥**

---

7. ದಿತಿಯ ಗರ್ಭ ನಿಯಮಗಳು :
   1) ಸಂಧ್ಯಾಕಾಲದಲ್ಲಿ ಭೋಜನ ನಿಷಿದ್ಧ
   2) ಗಿಡದ ಕೆಳಗೆ, ಒರಳು, ಹಾರೆ, ಒನಕೆ ಮೊದಲಾದ ಮನೆ ವಸ್ತುಗಳ ಮೇಲೆ ಕೂಡಬಾರದು
   3) ನೀರಿನಲ್ಲಿ ಮುಳುಗಿ ಸ್ನಾನವಿಲ್ಲ.
   4) ಯಾರೂ ಇಲ್ಲದ ಮನೆ ಪ್ರವೇಶ ನಿಷಿದ್ಧವು.
   5) ಹಾವಿನ ಹುತ್ತದ ಮೇಲೆ ನಿಲ್ಲಬಾರದು.
   6) ಕೆಟ್ಟ ಆಲೋಚನೆ ನಿಷಿದ್ಧ
   7) ಉಗುರಿನಿಂದ ನೆಲ ಕೊರೆಯುವುದು ತಪ್ಪು
   8) ಬೂದಿಯಿಂದ, ಇದ್ದಿಲಿನಿಂದ ಬರೆಯಬಾರದು

ದಿತಿಯೇ, ನಿನಗೆ ಇಂದ್ರನನ್ನು ಕೊಲ್ಲುವ ಪುತ್ರನಾಗುವನು. ಆದರೆ ಅದಕ್ಕಾಗಿ ದೀರ್ಘಾವಧಿಯ ಸಾಧನೆ ನಿನ್ನಿಂದ ನಡೆಯಬೇಕು. ನಾನು ನಿನ್ನಲ್ಲಿ ಒಂದು ತೇಜಸ್ಸನ್ನು ಇಡುವೆ. ಅದನ್ನು ನೀನು ನೂರು ವರ್ಷ ಪರ್ಯಂತ ಉದರದಲ್ಲಿಟ್ಟು ರಕ್ಷಿಸಬೇಕು. ಈ ಅವಧಿಯಲ್ಲಿ ಅದು ಬೆಳೆದು ಇಂದ್ರನನ್ನು ಕೊಲ್ಲುವಂತಾಗುವುದು. ಆದರೆ ಯಾವ ಸಂದರ್ಭದಲ್ಲಿಯೂ ನೀನು ಅಶುಚಿಯಾಗಬಾರದು. ಹಾಗಾದಲ್ಲಿ ಗರ್ಭ ಉಳಿಯಲಾರದು ಎಂದು ಹೇಳಿ ಅವರು ಇಂದ್ರನ ಮನಸ್ಸನ್ನೆ ಉದ್ವೇಗಗೊಳಿಸುತ್ತಾ ದೇವತೆಗಳಿಂದಲೂ ಕೊಲ್ಲಲಾಗದ ತೇಜಸ್ಸನ್ನು ಗರ್ಭಾಧಾನ ಮಾಡಿ ತಪಸ್ಸಿಗಾಗಿ ತೆರಳಿದರು.

---

9) ಸೋಮಾರಿಯಾಗಿ ಕೂಡುವುದು, ಅತೀಶ್ರಮ ಕೆಲಸ ಮಾಡುವುದು ನಿಷಿದ್ಧ.
10) ಇದ್ದಿಲು, ಬೂದಿ, ಮೂಳೆ, ಮಡಿಕೆ ತುಂಡು ಇವುಗಳ ಮೇಲೆ ನಿಲ್ಲಬಾರದು.
11) ಯಾರೊಂದಿಗೂ ಜಗಳವಾಡಬಾರದು.
12) ಮೈ ಮುರಿಯಬಾರದು.
13) ಕೂದಲು ಜಿರಿ ಹಾಕಿಕೊಂಡಿರಬಾರದು.
14) ಮೈಲಿಗೆಯಲ್ಲಿ ಬಹಳ ಕಾಲವಿರಬಾರದು.
15) ಉತ್ತರಕ್ಕೆ ತಲೆ ಹಾಕಿ ಮಲಗಬಾರದು.
16) ಬೆತ್ತಲೆ ಇರಬಾರದು.
17) ನಿಸರ್ಗಕ್ರಿಯೆಯಾದ ಮೇಲೆ ಕೈಕಾಲು ಬಾಯಿ ತೊಳೆದುಕೊಳ್ಳಬೇಕು.
18) ಅಮಂಗಳ ಮಾತು ಬಾಯಲ್ಲಿ ಬರಬಾರದು.
19) ಅತಿಹಾಸ್ಯ ವರ್ಜ್ಯವು.
20) ಹರಿಗುರುಪೂಜೆ ನಿಲ್ಲುವಂತಿಲ್ಲ.
21) ಯಾವಾಗಲೂ ನಗುಮುಖ ಮಂದಹಾಸ ಗಂಡನಿಗೆ ಹಿತ ಪ್ರಿಯ ಮಾಡಬೇಕು.
22) ಗಂಡನನ್ನು ಎಂತಹ ಸಂದರ್ಭದಲ್ಲಿಯೂ ನಿಂದಿಸಬಾರದು.

ನ ಹಿಂಸ್ಯಾತ್ ಸರ್ವಭೂತಾನಿ ನ ಶಪೇನ್ನಾನೃತಂ ವದೇತ್ ।
ನ ಛಿಂದ್ಯಾನ್ ನಖರೋಮಾಣಿ ನಸ್ಪೃಶೇದ್ ಯದಮಂಗಲಮ್ ॥
ನಾಪ್ಸು ಸ್ನಾಯಾತ್ ನ ಕುಪ್ಯೇತ ನ ಸಂಭಾಷೇತ ದುರ್ಜನೈಃ ।
ನವಸೀತಾಧೌವಾಸಃ ಸ್ರಜಂ ವಾ ವಿಧೃತಾಂ ಕ್ವಚಿತ್ ॥
ನೋಚ್ಛಿಷ್ಟಾಸ್ಪೃಷ್ಟಸಲಿಲಾ ಸಂಧ್ಯಯೋಃ ಮುಕ್ತಮೂರ್ಧಜಾ ॥
ನಾಧೌತಪಾದಾ ಪ್ರಯತಾ ನಾರ್ದ್ರಪಾನ್ನಾಪ್ಯುದಕ್ ಶಿರಾಃ ॥

*- ಭಾಗವತ 6/18/47-52*

## ನಲವತ್ತೊಂಭತ್ತು ಮರುದುತ್ಪತ್ತಿ

**ತಸ್ಯಾಶ್ಚೈವಾಂತರ ಪ್ರೇಪ್ಸುರಭವತ್ ಪಾಕಶಾಸನಃ ।**
**ಊನೇ ವರ್ಷಶತೇ ಚಾಸ್ಯಾ ದದರ್ಶಾಂತರಮಚ್ಯುತಃ ॥ 72 ॥**

**ಅಕೃತ್ವಾ ಪಾದಯೋಃ ಶೌಚಂ ದಿತಿಃ ಶಯನಮಾವಿಶತ್ ।**
**ನಿದ್ರಾಂ ಚ ಕಾರಯಾಮಾಸ ತಸ್ಯಾಃ ಕುಕ್ಷಿಂ ಪ್ರವಿಶ್ಯ ಸಃ ॥ 73 ॥**

**ವಜ್ರಪಾಣಿಃ ತತೋ ಗರ್ಭಂ ಸಪ್ತಧಾ ತಂ ನ್ಯಕೃಂತತ ।**
**ಸ ಪಾಟ್ಯಮಾನೋ ವಜ್ರೇಣ ಗರ್ಭಸ್ತು ಪ್ರರುರೋದ ಹ ॥ 74 ॥**

**ಮಾರೋದೀರಿತಿ ತಂ ಶಕ್ರಃ ಪುನಃ ಪುನರಥಾಬ್ರವೀತ್ ।**
**ಸೋಽಭವತ್ ಸಪ್ತಧಾ ಗರ್ಭಃ ತಮಿಂದ್ರೋ ರುಷಿತಃ ಪುನಃ ॥ 75 ॥**

**ಏಕೈಕಂ ಸಪ್ತಧಾ ಚಕ್ರೇ ವಜ್ರೇಣೈವಾರಿಕರ್ಶನಃ ।**
**ಮರುತೋ ನಾಮ ದೇವಾಸ್ತೇ ಬಭೂವುಃ ಭರತರ್ಷಭ ॥ 76 ॥**

ಕಶ್ಯಪರು ಹೊರಟ ಮೇಲೆ ದಿತಿಯು ಉಪದೇಶವನ್ನು ಅಕ್ಷರಶಃ ಪಾಲಿಸುತ್ತಿದ್ದಳು. ಅವಳು ಗರ್ಭಿಣೀ ಧರ್ಮವನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿರುವುದನ್ನು ನೋಡಿ ಇಂದ್ರದೇವನು ಭಯಗೊಂಡನು. ಸ್ವರ್ಗದಿಂದ ದಿತಿಯ ಆಶ್ರಮಕ್ಕೆ ಐತಂದನು. 'ತಾಯಿಯೇ, ನಿನ್ನ ಸೇವೆಗಾಗಿ ಬಂದಿದ್ದೇನೆ' ಎಂದು ಹೇಳುತ್ತಾ, ಮರೆಮಾಚಿದ ಬ್ರಹ್ಮಚಾರಿಯಾಗಿ ಹಗಲಿರುಳು ಅವಳ ಸೇವೆ ಮಾಡುವ ನೆಪದಿಂದ ಸಾವಿರ ಕಣ್ಣುಗಳಿಂದ ದಿತಿದೇವಿಯ ಛಿದ್ರ ಹುಡುಕುತ್ತಿದ್ದರೂ ಅವಳ ಆಚರಣೆಯಲ್ಲಿ ಒಂದು ನಿಯಮ ಲೋಪವು ಕಂಡುಬರಲಿಲ್ಲ. ನೂರು ವರ್ಷಪೂರ್ಣವಾಗ ಬಂದಿತು. ಇನ್ನು ಮೂರು ದಿನ ಉಳಿದಿದ್ದವು. 'ಅಂತೂ ಈ ವ್ರತ ಪೂರ್ಣಗೊಳಿಸಿದೆ' ಎಂಬ ಕೃತಕೃತ್ಯತೆಯಿಂದ ಸ್ವಲ್ಪ ಮೈ ಮರೆತಳು. ವ್ರತ ಸಮಾಪ್ತಿಯಾಗುತ್ತಿರುವ ಸಂತಸದಲ್ಲಿ ಶೌಚಕ್ಕೆ ಹೋಗಿ ಕಾಲು ತೊಳೆದುಕೊಳ್ಳದೇ, ತಲೆ ಹರವಿಕೊಂಡು ನಿದ್ರೆಯ ಸೆಳೆತದಿಂದ ತನ್ನ ಮಂಡಿಗಳ ಮಧ್ಯೆ ತಲೆಯಿರಿಸಿ ಮಲಗಿದಳು. ಹಗಲಿನಲ್ಲಿ ನಿದ್ರೆ, ಶುಚಿರಾಹಿತ್ಯ, ತಲೆಕೂದಲು ಹರವಿರುವುದು ಇಂದ್ರದೇವನು ಗರ್ಭದೊಳಗೆ ಪ್ರವೇಶಿಸಲು ಅನುವು ಮಾಡಿಕೊಟ್ಟವು. ಅವಳ ಗರ್ಭವನ್ನು ಮೊದಲು ವಜ್ರಾಯುಧದಿಂದ ಮೊದಲು ಏಳು ಭಾಗಗಳಾಗಿ ತುಂಡಿರಿಸಿದನು.

ಆದರೂ ಏಳು ಮಕ್ಕಳು ಕಣ್ತೆರೆದರು. ಒಬ್ಬೊಬ್ಬರೂ ಸೂರ್ಯವರ್ಚಸ್ವಿಗಳು. ವಜ್ರದ ಏಟಿನಿಂದ ಅಳಲು ಪ್ರಾರಂಭಿಸಿದವು. ಅಳಬೇಡಿರಿ, ಅಳಬೇಡಿರಿ ಎಂದು ಹೇಳಿದರೂ ಅಳುತ್ತಿದ್ದ ಆ ಏಳು ಮಕ್ಕಳಿಗೂ ಪುನಃ ಹೊಡೆದನು. ಅವು ತುಂಡುಗಳಾಗಿ ಒಂದೊಂದರಲ್ಲಿ ಏಳೇಳು ಭಾಗಗಳಾದವು. ಅವೆಲ್ಲವೂ ಅಳಲು ಪ್ರಾರಂಭಿಸಿದಾಗ 'ಮಾ ರುದದ್ವಂ' ಎಂದು ಹೇಳಿದ. ತುಂಡು ತುಂಡು ಮಾಡಿದರೂ ಸಾಯದೆ ಇರುವ ಈ ಕೂಸುಗಳನ್ನು ನೋಡಿ ಆಶ್ಚರ್ಯಪಟ್ಟ ಇಂದ್ರನು - ಇವಳ ವ್ರತಾನುಷ್ಠಾನ ತಪಸ್ಸು ನಿಷ್ಠೆಯಿಂದಾಗಿ ಇವು ಚಿರಂಜೀವಿಗಳೆಂದು ಹೊರಗೆ ಬಂದು – ಅಮ್ಮ ನನ್ನ ಅಪರಾಧ ಕ್ಷಮಿಸು. ನಿನ್ನ ಮಕ್ಕಳಾದ ಮರುತುರ ಗುಂಪನ್ನು ದೇವತೆಗಳಿಗೆ ಸಮಾನರನ್ನಾಗಿ ಮಾಡುತ್ತೇನೆ. ಇವರೆಲ್ಲರೂ ನನ್ನ ತಮ್ಮಂದಿರೆ ಸರಿ. ಯಜ್ಞದಲ್ಲಿ ಇವರಿಗೂ ಆಹುತಿ ದೊರಕಲಿದೆ ಎಂದು ಸಂತೈಸಿದನು. ದಿತಿಯು ಅಪರಾಧವನ್ನು ಕ್ಷಮಿಸಿದಳು. ಜನಮೇಜಯನೇ, ಶ್ರೀಹರಿಯು ಹೀಗೆ ದೇವತೆಗಳು, ಪ್ರಜೆಗಳು ಇತ್ಯಾದಿಯಾಗಿ ಪ್ರಾಣಿಗಳ ಅಭಿವೃದ್ಧಿಯನ್ನು, ಈ ದೊಡ್ಡ ಸೃಷ್ಟಿಯನ್ನು ವಿಭಾಗಿಸಿ ಅನೇಕ ಗಣಗಳನ್ನಾಗಿ ಮಾಡಿದನು. ಒಂದೊಂದು ಗಣಕ್ಕೆ ಒಬ್ಬೊಬ್ಬ ಬ್ರಹ್ಮರನ್ನಾಗಿ ನಿಯಮಿಸಿದನು. ಈ ಪ್ರಜೆಗಳೇ ರಾಜ್ಯಗಳನ್ನು ಕಟ್ಟಿಕೊಂಡು ಆಡಳಿತ ನಡೆಸಿದರು. ಇವರಲ್ಲಿ ಪೃಥು, ಮನು ಮೊದಲಾದವರು ಪ್ರಧಾನರು.

**ಸ ಹರಿಃ ಪುರುಷೋವೀರಃ ಕೃಷ್ಣಃ ಜಿಷ್ಣುಃ ಪ್ರಜಾಪತಿಃ ।**
**ಪರ್ಜನ್ಯ ಸತಪನೋಽವ್ಯಕ್ತಃ ತಸ್ಯ ಸರ್ವಮಿದಂ ಜಗತ್ ॥ 77 ॥**

ಈ ಸೃಷ್ಟಿಗೆ ಕಾರಣನಾದ ಶ್ರೀಹರಿಯು ಸರ್ವೋತ್ತಮನು, ವೀರನು, ಕರ್ಷಣ ಶಕ್ತಿವುಳ್ಳವನು, ಸೋಲಿಲ್ಲದವನು, ಬ್ರಹ್ಮಾದಿಗಳಿಗೂ ಪತಿಯು, ಅವನೇ ಪರ್ಜನ್ಯನಲ್ಲಿದ್ದು ಕಾಲಕಾಲಕ್ಕೆ ಮಳೆ ಸುರಿಸುವನು. ಸೂರ್ಯನಲ್ಲಿದ್ದು ಜಗತ್ತನ್ನು ಬೆಳಗುವನು. ಸರ್ವತ್ರ ವ್ಯಾಪ್ತನಾಗಿದ್ದರೂ ಸಾಧನೆಗಳಲ್ಲದೆ ಕಾಣದವನು. ಈ ಜಗತ್ತಿಗೆಲ್ಲ ನಿಯಮನ ಮಾಡುವ ಸ್ವಾಮಿಯು, ಬುದ್ಧಿಪ್ರಚೋದಕನು.

**ಭೂತಸರ್ಗಮಿಮಂ ಸಮ್ಯಗ್ ಜಾನತೋ ಭರತರ್ಷಭ ।**
**ಮರುತಾಂ ಚ ಶುಭಂ ಜನ್ಮ ಶೃಣ್ವತಃ ಪಠತೋಽಪಿ ವಾ ॥ 78 ॥**
**ನಾವೃತ್ತಿಭಯಮಸ್ತೀಹ ಪರಲೋಕಭಯಂ ಕುತಃ ॥ 79 ॥**

ರಾಜನೇ, ಯಾರು ಈ ಸೃಷ್ಟಿ ಕ್ರಮವನ್ನು ಚೆನ್ನಾಗಿ ತಿಳಿಯುವರೋ, ಹಾಗೂ ಈ ಮಾರುತ್ತಗಳ ಶುಭವಾದ ಜನ್ಮವನ್ನು ಕೇಳಿದವರಿಗೆ, ಪಠನ ಮಾಡಿದವರಿಗೆ ಜನ್ಮ-ಮರಣಗಳ ಭಯವಿರುವುದಿಲ್ಲ. ನರಕಲೋಕದ ಭಯವೆಲ್ಲಿಂದ ಬರುತ್ತದೆ?

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಮರುತ್ತುಗಳ ಉತ್ಪತ್ತಿ ನಿರೂಪಣವೆಂಬಲ್ಲಿ
ಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 04 ಹರಿಪರ್ವ

# ಅಥ ಚತುರ್ಥೋಽಧ್ಯಾಯಃ

## ಪೃಥು ರಾಜ ಚರಿತೆ

*ವೈಶಂಪಾಯನ ಉವಾಚ –*

**ಅಭಿಷಿಚ್ಯಾಧಿರಾಜ್ಯೇ ತು ಪೃಥುಂ ವೈನ್ಯಂ ಪಿತಾಮಹಃ ।**
**ತತಃ ಕ್ರಮೇಣ ರಾಜ್ಯಾನಿ ವ್ಯಾದೇಷ್ಟುಮುಪಚಕ್ರಮೇ ॥ 1 ॥**

**ದ್ವಿಜಾನಾಂ ವೀರುಧಾಂ ಚೈವ ನಕ್ಷತ್ರಗ್ರಹಯೋಸ್ತಥಾ ।**
**ಯಜ್ಞಾನಾಂ ತಪಸಾಂ ಚೈವ ಸೋಮಂ ರಾಜ್ಯೇಽಭ್ಯಷೇಯತ್ ॥ 2 ॥**

ರಾಜ ಜನಮೇಜಯನೇ, ಬ್ರಹ್ಮದೇವನು ವೇನನ ಮಗನಾದ ಪೃಥುವನ್ನು ಮೊದಲು ಚಕ್ರವರ್ತಿಯನ್ನಾಗಿ ನಿಯಮಿಸಿದನು. ನಂತರ ಉಳಿದ ರಾಜರಿಗೆ ಅವಕಾಶ ನೀಡಿದನು. ಚಂದ್ರನನ್ನು ಬ್ರಾಹ್ಮಣರು, ಬಳ್ಳಿಗಳು, ನಕ್ಷತ್ರಗಳು, ಗ್ರಹಗಳು, ಯಜ್ಞ, ತಪಸ್ಸುಗಳಿಗೆ ಅಧಿಪತಿಯನ್ನಾಗಿ ಮಾಡಿದರು.

**ಅಪಾಂ ತು ವರುಣಂ ರಾಜ್ಯೇ ರಾಜ್ಞಾಂ ವೈಶ್ರವಣಂ ಪ್ರಭುಮ್ ।**
**ಬೃಹಸ್ಪತಿಂ ತು ವಿಶ್ವೇಷಾಂ ದದೌ ಆಂಗೀರಸಂ ಪತಿಮ್ ॥ 3 ॥**

**ಭೃಗೂಣಾಮಧಿಪಂ ಚೈವ ಕಾವ್ಯಂ ರಾಜ್ಯೇಽಭ್ಯಷೇಚಯತ್ ।**
**ಆದಿತ್ಯಾನಾಂ ತಥಾ ವಿಷ್ಣುಂ ವಸೂನಾಮಥ ಪಾವಕಮ್ ॥ 4 ॥**

**ಪ್ರಜಾಪತೀನಾಂ ದಕ್ಷಂ ತು ಮರುತಾಮಥ ವಾಸವಮ್ ।**
**ದೈತ್ಯಾನಾಂ ದಾನವಾನಾಂ ಚ ಪ್ರಹ್ಲಾದಮಮಿತೌಜಸಮ್ ॥ 5 ॥**

**ವೈವಸ್ವತಂ ಪಿತೄಣಾಂ ಚ ಯಮಂ ರಾಜ್ಯೇಽಭ್ಯಷೇಚಯತ್ ।**
**ನಾರಾಯಣಂ ಚ ತು ಸಾಧ್ಯಾನಾಂ ರುದ್ರಾಣಾಂ ವೃಷಭಧ್ವಜಮ್ ॥ 6 ॥**

ನೀರಿಗೆ ವರುಣದೇವನನ್ನು, ರಾಜಾಧಿರಾಜನಾಗಿ, ಧನಾದಿಗಳಿಗೂ ಕುಬೇರನನ್ನೂ ವಿಶ್ವೇದೇವತೆಗಳಿಗೆ ಅಂಗೀರಸ ಗೋತ್ರದವನಾದ ಬೃಹಸ್ಪತಿಯನ್ನೂ, ಭೃಗು ವಂಶೀವಯರಿಗೆಲ್ಲ ಶುಕ್ರಾಚಾರ್ಯರನ್ನು, ದ್ವಾದಶಾದಿತ್ಯರಿಗೆ ವಿಷ್ಣುವನ್ನೂ, ಅಷ್ಟ ವಸುಗಳಿಗೆ ಅಗ್ನಿಯನ್ನು, ಬೇರೆ ಬೇರೆ ಗಣಗಳಿಗೆ ಅಧಿಪತಿಗಳಾದ ಪ್ರಜಾಪತಿಗಳಿಗೆ ದಕ್ಷ ಪ್ರಜಾಪತಿಯನ್ನು, ನಲವತ್ತೊಂಭತ್ತು ಮರುತ್ತುಗಳಿಗೆ ಇಂದ್ರದೇವನನ್ನು, ದೈತ್ಯಕುಲ, ದಾನವಕುಲಕ್ಕೆ ಪ್ರಹ್ಲಾದನನ್ನು, ಪಿತೃಗಳ ಒಡೆತನವನ್ನು ಯಮಧರ್ಮನಿಗೂ, ಬ್ರಾಹ್ಮೀ ಮಾಹೇಶ್ವರೀ ಮೊದಲಾದ ಹದಿನಾರು ಮಾತೃಕೆಗಳಿಗೂ, ಏಕಾದಶ್ಯಾದಿ ವ್ರತಗಳು, ಮಂತ್ರಗಳಿಗೂ, ಗೋವುಗಳಿಗೂ ಯಕ್ಷ, ರಾಕ್ಷಸ, ರಾಜ, ಸಾಧ್ಯರಿಗೂ ಅಧಿಪತಿಯನ್ನಾಗಿ ನಾರಾಯಣನನ್ನು, ಅಜೈಕಪಾತ್ ಹನ್ನೊಂದು ರುದ್ರರಿಗೆ ಮಹರುದ್ರದೇವನನ್ನೂ ಅಧಿಪತಿಯನ್ನಾಗಿಸಿದನು.

**ವಿಪ್ರಚಿತ್ತಿಂ ತು ರಾಜಾನಂ ದಾನವಾನಾಂ ಅಥಾದಿಶತ್ ।**
**ಸರ್ವಭೂತಪಿಶಾಚಾನಾಂ ಗಿರಿಶಂ ಶೂಲಪಾಣಿನಮ್ ॥ 7 ॥**

**ಶೈಲಾನಾಂ ಹಿಮವಂತಂ ಚ ನದೀನಾಮಥ ಸಾಗರಮ್ ।**
**ಗಂಧಾನಾಂ ಮರುತಾಂ ಚೈವ ಭೂತಾನಾಮಶರೀರಣಾಮ್ ।**
**ಶಬ್ಧಾಕಾಶವತಾಂ ಚೈವ ವಾಯುಂ ಚ ಬಲಿನಾಂ ವರಮ್ ॥ 8 ॥**

**ಗಂಧರ್ವಾಣಾಮಧಿಪತಿಂ ಚಕ್ರೇ ಚಿತ್ರರಥಂ ಪ್ರಭುಮ್ ।**
**ನಾಗಾನಾಂ ವಾಸುಕಿಂ ಚಕ್ರೇ ಸರ್ಪಾಣಾಮಥ ತಕ್ಷಕಮ್ ॥ 9 ॥**

ದಾನವರಿಗೆಲ್ಲ ವಿಪ್ರಚಿತ್ತಿಯನ್ನು, ಸರ್ವವಿಧ ಭೂತ ಪಿಶಾಚಗಳಿಗೂ ಶೂಲಪಾಣಿ ಗಿರಿಶನನ್ನು, ಪರ್ವತಗಳಿಗೆಲ್ಲ ಹಿಮಾಲಯ ಪರ್ವತವನ್ನು, ಗಂಗಾದಿಸಕಲ ನದಿಗಳಿಗೂ ಸಾಗರವನ್ನು, ಸುಗಂಧ ದ್ರವ್ಯಗಳಾದ ಪುನಗು ಮೃಗನಾಭಿ, ಕಸ್ತೂರಿ ಮೊದಲಾದ ಸುಗಂಧದ್ರವ್ಯಗಳಿಗೆ, ಮರದ್ಗಣಗಳಿಗೂ ಶರೀರರಹಿತ ಶರೀರವಿಲ್ಲದ ಭೂತಗಳಿಗೆ, ಶಬ್ಧಗಳಿಗೂ, ಇತರ

ಆಕಾಶದಲ್ಲಿರುವ ವಸ್ತುಗಳಿಗೂ, ಮಹಾಬಲಿಷ್ಠನೂ ಬಲದೇವತೆಯೂ ಆದ ವಾಯುದೇವನನ್ನು ಅಧಿರಾಜನನ್ನಾಗಿ ಮಾಡಿದನು.

ಗಂಧರ್ವರಿಗೆ ಚಿತ್ರರಥನನ್ನು, ನಾಗಗಳಿಗೆ ವಾಸುಕಿಯನ್ನು, ಸರ್ಪಗಳಿಗೆ ತಕ್ಷಕನನ್ನು, ಆನೆಗಳಿಗೆ ಐರಾವತವನ್ನು, ಕುದುರೆಗಳಿಗೆ ಉಚ್ಚೈಶ್ರವಸ್ಸನ್ನು, ಪಕ್ಷಿಗಳಿಗೆ ಗರುಡದೇವನನ್ನೂ, ಕಾಡಿನ ಮೃಗಗಳಿಗೆ ಸಿಂಹವನ್ನು, ಗೋವುಗಳಿಗೆ ವೃಷಭವನ್ನು, ಮರಗಳಿಗೆ ಅಶ್ವತ್ಥವೃಕ್ಷವನ್ನೂ, ಅಧಿಪತಿಯನ್ನಾಗಿ ಮಾಡಿದನು.

**ಸಾಗರಾಣಾಂ ನದೀನಾಂ ಚ ಮೇಘಾನಾಂ ವರ್ಷಣಸ್ಯ ಚ ।**
**ಆದಿತ್ಯಾನಾಮಧಿಪತಿಂ ಪರ್ಜನ್ಯಮಭಿಷಿಕ್ತವಾನ್ ॥ 10 ॥**
**ಸರ್ವೇಷಾಂ ದಂಷ್ಟ್ರಿಣಾಂ ಶೇಷಂ ರಾಜಾನಮಭ್ಯಶೇಷಯತ್ ॥ 11 ॥**

ಸಾಗರಗಳು, ನದಿಗಳು, ಮೇಘಗಳ ವೃಷ್ಟಿ ಆದಿತ್ಯರಿಗೂ ಪರ್ಜನ್ಯನನ್ನು ವಿಷದ ದಂತಗಳುಳ್ಳ ಸಮಸ್ತ ಸರ್ಪಣಶೀಲರಾದ ಉರಗಗಳಿಗೆ ಶೇಷನನ್ನು ಅಧಿಪತಿಯನ್ನಾಗಿಸಿದನು.

**ಋತೂನಾಮಥ ಮಾಸಾನಾಂ ದಿವಸಾನಾಂ ತಥೈವ ಚ ।**
**ಪಕ್ಷಾಣಾಂ ಚ ಕ್ಷಪಾಣಾಂ ಚ ಮುಹೂರ್ತ ತಿಥಿ-ಪರ್ವಣಾಮ್ । 12 ॥**
**ಕಾಲ-ಕಾಷ್ಠಾ-ಪ್ರಮಾಣಾನಾಂ ಗತೇಃ ಅಯನಯೋಸ್ತಥಾ ।**
**ಗಣಿತಸ್ಯಾಥ ಯೋಗಸ್ಯ ಚಕ್ರೇ ಸಂವತ್ಸರಂ ಪ್ರಭುಮ್ ॥ 13 ॥**

ವಸಂತ ಗ್ರೀಷ್ಮಾದಿ ಋತುಗಳು, ಚೈತ್ರಾದಿ ಮಾಸಗಳು, ದಿವಸಗಳು, ಶುಕ್ಲ-ಕೃಷ್ಣಪಕ್ಷಗಳು, ರಾತ್ರಿಗಳು, ಮುಹೂರ್ತಗಳು, ದ್ವಿತೀಯಾದಿ ತಿಥಿಗಳು, ಪರ್ವಕಾಲಗಳು, ಕಲೆಗಳು, ಕಾಷ್ಠಾ ಇವುಗಳ ಪ್ರಮಾಣಗಳು, ಉತ್ತರ-ದಕ್ಷಿಣಾಯನಗಳು, ಚಂದ್ರ-ಸೂರ್ಯಗ್ರಹಣಗಳು. ಇವುಗಳ ಅಭಿಮಾನಿಗಳಿಗೆ ಸಂವತ್ಸರವನ್ನು ರಾಜನನ್ನಾಗಿ ಮಾಡಿದನು.

ರಾಜನೇ, ಹೀಗೆ ಪಿತಾಮಹನು ಸ್ಥಾವರ-ಜಂಗಮ ಪ್ರಾಣಿಗಳನ್ನು ಅನೇಕ ವಿಧವಾಗಿ ವಿಭಾಗಿಸಿ ಅವುಗಳಿಗೆ ಅಧಿಪತಿಗಳನ್ನು ನೇಮಿಸಿದನು. ಇದೇ ರೀತಿ ಒಂದೊಂದು ದಿಕ್ಕಿಗೂ ಒಬ್ಬೊಬ್ಬ ಅಧಿಪತಿಯನ್ನಾಗಿ ನೇಮಿಸಿದನು.

**ಪೂರ್ವಸ್ಯಾಂ ದಿಶಿ ಪುತ್ರಂ ತು ವೈರಾಜಸ್ಯ ಪ್ರಜಾಪತೇಃ ।**
**ದಿಶಾಪಾಲಂ ಸುಧನ್ವಾನಂ ರಾಜಾನಂ ಚಾಭ್ಯಷೇಚಯತ್ ॥ 14 ॥**

ಬ್ರಹ್ಮದೇವನು ವೈರಾಜಪ್ರಜಾಪತಿ ಪುತ್ರನಾದ ಸುಧನ್ವ ರಾಜನನ್ನು ಪೂರ್ವದಿಕ್ಕಿಗೂ, ಕರ್ದಮ ಪ್ರಜಾಪತಿಯ ಮಗನಾದ ಶಂಖಪದನನ್ನು ದಕ್ಷಿಣದಿಕ್ಕಿಗೂ, ರಜಸ್ಸೆಂಬ ಪ್ರಜಾಪತಿ ಪುತ್ರನೂ, ಧರ್ಮ ಮಾರ್ಗ ಬಿಡದವನೂ ಆದ ಸುಕೇತುಮಂತನನ್ನೂ ಪಶ್ಚಿಮದಿಕ್ಕಿಗೂ, ಪರ್ಜನ್ಯ ಪ್ರಜಾಪತಿಯ ಮಗ ಹಿರಣ್ಯರೋಮನನ್ನು ಉತ್ತರದಿಕ್ಕಿಗೂ ಅಧಿಪತಿಯನ್ನಾಗಿ ಮಾಡಿದನು.

**ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪರ್ವತಾ ।**
**ಯಥಾ ಪ್ರದೇಶಮದ್ಯಾಪಿ ಧರ್ಮೇಣ ಪರಿಪಾಲ್ಯತೇ ॥ 15 ॥**

**ರಾಜಸೂಯಾಭಿಷಿಕ್ತಸ್ತು ಪೃಥುರೇಭಿಃ ನರಾಧಿಪೈಃ ।**
**ವೇದ ದೃಷ್ಟೇನ ವಿಧಿನಾ ರಾಜರಾಜ್ಯೇ ನರಾಧಿಪ ॥ 16 ॥**

ಈ ಸಪ್ತದ್ವೀಪ, ಸಪ್ತ ಕುಲ ಪರ್ವತಗಳಿಂದ ಯುಕ್ತವಾದ ನಗರ ಗ್ರಾಮ ಪುರ ಮೊದಲಾದವುಗಳಿಂದ ಈ ಮೇದಿನಿಯನ್ನು ತಮ್ಮ ತಮ್ಮ ಭಾಗಕ್ಕೆ ಸೇರಿದ ಭಾಗಗಳನ್ನು ಆಯಾಯ ರಾಜರು ಧರ್ಮದಿಂದ ಪಾಲಿಸುತ್ತಿರುವರು.

ಈ ನಿಯಮಿತರಾದ ರಾಜರೆಲ್ಲರೂ ಸೇರಿ, ವೇದೋಕ್ತ ರೀತಿಯಿಂದ ರಾಜಸೂಯ ಯಾಗವನ್ನು ಮಾಡುತ್ತಿದ್ದ ಪೃಥುಚಕ್ರವರ್ತಿಯನ್ನು 'ರಾಜಾಧಿರಾಜ'ನನ್ನಾಗಿ ಮಾಡಿದರು.

**ತತೋ ಮನ್ವಂತರೇಽತೀತೇ ಚಾಕ್ಷುಷೇಽಮಿತ ತೇಜಸಿ ।**
**ವೈವಸ್ವತಾಯ ಮನವೇ ಬ್ರಹ್ಮಾ ರಾಜ್ಯಮಥಾದಿಶತ್ ॥ 17 ॥**

ರಾಜನೇ, ಈ ಚಾಕ್ಷುಷ ಮನ್ವಂತರ ಕಳೆದು ವೈವಸ್ವತ ಮನ್ವಂತರ ಬಂದಾಗ ಸೂರ್ಯನ ಪುತ್ರನಾದ ವೈವಸ್ವತ ಮನುವಿಗೆ ಈ ಭೂ ಸಾಮ್ರಾಜ್ಯದ ಆಧಿಪತ್ಯವನ್ನು ವಹಿಸಿಕೊಟ್ಟನು. ಅದನ್ನು ಮುಂದೆ ವಿಸ್ತಾರವಾಗಿ ಹೇಳುವೆ.

**ಮಹದ್ಧ್ಯೈತದಧಿಷ್ಠಾನಂ ಪುರಾಣಂ ಪರಿಕೀರ್ತಿತಮ್ ।**
**ಧನ್ಯಂ ಯಶಸ್ಯಂ ಆಯುಷ್ಯಂ ಸ್ವರ್ಗವಾಸಕರಂ ಶುಭಮ್ ॥ 18 ॥**

ರಾಜನೆ. ನಿನಗೆ ಹೇಳಿದ ಈ ಚಾಕ್ಷುಷ ಮನ್ವಂತರದ ಕಥೆ ಉಪಾಖ್ಯಾನ ಹೇಳಿರುವೆ. ಇದು ಧನಪ್ರಾಪಕವೂ. ಯಶಸ್ಸಂಪಾದಕವೂ. ಆಯುಷ್ಕಾರಕವೂ ಅಂತ್ಯದಲ್ಲಿ ಸ್ವರ್ಗ ಪ್ರಾಪಕವೂ ಆಗಿದೆ.

*ಜನಮೇಜಯ ಉವಾಚ–*

**ವಿಸ್ತರೇಣ ಪೃಥೋರ್ಜನ್ಮ ವೈಶಂಪಾಯನ ಕೀರ್ತಯ ।**
**ಯಥಾ ಮಹಾತ್ಮನಾ ತೇನ ದುಗ್ಧಾ ಚೇಯಂ ವಸುಂಧರಾ ॥ 19 ॥**

ವೈಶಂಪಾಯನರೇ. ಪೃಥುವಿನ ಜನ್ಮವೃತ್ತಾಂತವು ಅತ್ಯಾಶ್ಚರ್ಯಕರವಾಗಿದೆ. ವಿಷ್ಣುಭಕ್ತನಾದ ಪೃಥುವಿನ ಕಥೆಯು ವಿಷ್ಣುವಿನ ಕಥೆಯಲ್ಲಿಯೇ ಪರ್ಯವಸಾನವಾಗುತ್ತದೆ. ವಿಷ್ಣುವಿನಲ್ಲಿ ಭಕ್ತಿ ಬರಲೆಂದೆ ವಿಷ್ಣುಭಕ್ತರ ಕಥೆ ಹೇಳುವುದಷ್ಟೆ? ಅವನ ಕಥೆಯನ್ನು ವಿಸ್ತಾರವಾಗಿಯೆ ತಿಳಿಸಿ.

ಗೋದೋಹನ ಮಾಡಿದನೆಂದು ಕೇಳಿದೆ. ಹೇಗೆ ದೋಹನ ಮಾಡಿದ ರೀತಿ ತಿಳಿಸಿ. ಪಿತೃಗಳು. ದೇವತೆಗಳೂ. ಋಷಿಗಳೂ. ದೈತ್ಯರು. ನಾಗರು. ಯಕ್ಷರು. ವೃಕ್ಷಗಳೂ. ಪರ್ವತಗಳೂ. ಪಿಶಾಚರೂ. ಗಂಧರ್ವರೂ. ಬ್ರಾಹ್ಮಣರೂ ಇವರೆಲ್ಲ ಈ ಪೃಥ್ವಿಯನ್ನು ಹೇಗೆ ಕರೆದುಕೊಂಡರು. ಕರೆಯಲು ಪಾತ್ರೆಗಳು ಕರುಗಳು. ಕರೆಯುವವರು. ವಿವಿಧ ರೀತಿಯ ಹಾಲುಗಳನ್ನು ತಿಳಿಸಿರಿ.

**ತೇಷಾಂ ಪಾತ್ರ ವಿಶೇಷಾಂಶ್ಚ ವೈಶಂಪಾಯನ ಕೀರ್ತಯ ।**
**ವತ್ಸಾನ್ ಕ್ಷೀರ ವಿಶೇಷಾಂಶ್ಚ ದೋಗ್ಧಾರಂ ಚಾನುಪೂರ್ವಶಃ ॥ 20 ॥**
**ಯಸ್ಮಾಚ್ಚ ಕಾರಣಾತ್ ಪಾಣಿಃ ವೇನಸ್ಯ ಮಥಿತಃ ಪುರಾ ।**
**ಕ್ರುದ್ಧೈಃ ಮಹರ್ಷಿಭಿಸ್ತಾತ ಕಾರಣಂ ತಸ್ಯ ಕೀರ್ತಯ ॥ 21 ॥**

ಕೋಪಗೊಂಡಿರುವ ಮಹರ್ಷಿ ಮುಖ್ಯರು ವೇನನ ಕೈಯನ್ನು ಮಥನ ಮಾಡಿದರೆಂದು ಕೇಳಿದೆ. ಇದಕ್ಕೇನು ಕಾರಣವೆಂದೂ ತಿಳಿಸಿರಿ ಎಂದು ಜನಮೇಜಯನನ್ನು ಕೇಳಿದನು. ಅದಕ್ಕೆ ವೈಶಂಪಾಯನರು ರಾಜನೇ. ಕೇಳು–

**ಹಂತ ತೇ ಕಥಯಿಷ್ಯಾಮಿ ಪೃಥೋಃ ವೈನ್ಯಸ್ಯ ವಿಸ್ತರಮ್ ।**
**ಏಕಾಗ್ರಃ ಪ್ರಯತಶ್ಚೈವ ಶೃಣುಷ್ವ ಜನಮೇಜಯ ॥ 22 ॥**

**ನಾಶುಚೇಃ ಕ್ಷುದ್ರಮನಸಃ ಕುಶಿಷ್ಯಾಯ ಅವ್ರತಾಯ ಚ ।**
**ಕೀರ್ತನೀಯಮಿದಂ ರಾಜನ್ ಕೃತಘ್ನಾಯ ಅಹಿತಾಯ ಚ ॥ 23 ॥**

**ಸ್ವರ್ಗ್ಯಂ ಯಶಸ್ಯ ಮಾಯುಷ್ಯಂ ಧರ್ಮ್ಯಂ ವೇದೇನ ಸಂಮಿತಮ್ ।**
**ರಹಸ್ಯಮೃಷಿಭಿಃ ಪ್ರೋಕ್ತಂ ಶ್ರುಣು ರಾಜನ್ ಯಥಾತಥಮ್ ॥ 24 ॥**

**ಯಶ್ಚೈನಂ ಕಥಯೇನ್ನಿತ್ಯಂ ಪೃಥೋಃ ವೈನ್ಯಸ್ಯ ವಿಸ್ತರಮ್ ।**
**ಬ್ರಾಹ್ಮಣೇಭ್ಯೋ ನಮಸ್ಕೃತ್ಯ ನ ಚ ಶೋಚೇತ್ ಕೃತಾಕೃತೈಃ ॥ 25 ॥**

ರಾಜನೇ, ವೇನಪುತ್ರ ಪೃಥುವಿನ ಚರಿತ್ರೆ ವಿಸ್ತಾರವಾಗಿಯೆ ಹೇಳುವೆ. ಏಕಾಗ್ರತಚಿತ್ತನಾಗಿ ಶ್ರವಣ ಮಾಡು. ಈ ಚರಿತ್ರೆಯನ್ನು ಆಶೌಚವುಳ್ಳವನು ಅಶುಚಿಯಿಂದಿರುವವನಿಗೂ, ಕೆಟ್ಟ ಮನಸ್ಸುಳ್ಳವನಿಗೂ, ದುಷ್ಟಶಿಷ್ಯನಿಗೂ ಏಕಾದಶ್ಯಾದಿ ವ್ರತಾನುಷ್ಠಾನವಿಲ್ಲದವನಿಗೂ, ಕೃತಘ್ನನಿಗೂ ಅನಿಷ್ಟಕಾರಿಗೂ ಹೇಳಬಾರದು. ಈ ಕಥಾಶ್ರವಣಾದಿಗಳಿಂದ ಸ್ವರ್ಗ, ಯಶಸ್ಸು, ಆಯುಸ್ಸು, ಧರ್ಮವೃದ್ಧಿ ಉಂಟು ಮಾಡುವುದು. ವೇದದಂತೆ ಪರಮಪವಿತ್ರವಾದ ಇದರ ರಹಸ್ಯ ಋಷಿಗಳಿಗೆ ಗೊತ್ತು.

ಇಂತಹ ಪರಮ ಪವಿತ್ರ ಕಥೆ ಹೇಳುವೆನು – ಕೇಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ರಾಜ್ಯ ವಿತರಣವೆಂಬಲ್ಲಿ
ನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 05 ಹರಿಪರ್ವ

# ಅಥ ಪಂಚಮೋಽಧ್ಯಾಯಃ

## ಪೃಥುವಿನ ಚಾರು-ಚರಿತ್ರೆ

*ವೈಶಂಪಾಯನ ಉವಾಚ -*

**ಆಸೀದ್ ಧರ್ಮಸ್ಯ ಗೋಪ್ತಾ ವೈ ಪೂರ್ವಮತ್ರಿ ಸಮಃ ಪ್ರಭುಃ ।**
**ಅತ್ರಿವಂಶ ಸಮುತ್ಪನ್ನಃ ತ್ವಂಗೋ ನಾಮ ಪ್ರಜಾಪತಿಃ ॥ 1 ॥**

**ತಸ್ಯ ಪುತ್ರೋಽಭವದ್ ವೇನೋ ನಾತ್ಯರ್ಥಂ ಧರ್ಮಕೋವಿದಃ ।**
**ಜಾತೋ ಮೃತ್ಯುಸುತಾಯಾಂ ವೈ ಸುನೀಥಾಯಾಂ ಪ್ರಜಾಪತಿಃ ॥ 2 ॥**

**ಸ ಮಾತಾಮಹದೋಷೇಣ ವೇನಃ ಕಾಲಾತ್ಮಜಾಽಽತ್ಮಜಃ ।**
**ಸ್ವಧರ್ಮಂ ಪೃಷ್ಠತಃ ಕಾಮಾಲ್ಲೋಭೇಷ್ವವರ್ತತ ॥ 3 ॥**

ಪ್ರಾಚೀನ ಕಾಲದಲ್ಲಿ ಧರ್ಮಗೋಪ್ತನೂ, ಅತ್ರಿಯಂತೆ ತಪಸ್ವಿಯೂ, ಅತ್ರಿವಂಶ ಜಾತನೂ ಆದ 'ಅಂಗ'ನೆಂಬ ರಾಜನಿದ್ದನು. ಇವನು ಮೃತ್ಯುದೇವತೆಯ ಪುತ್ರಿಯಾದ 'ಸುನೀಥಾ' ಎಂಬುವಳನ್ನು ವಿವಾಹವಾಗಿದ್ದ. ಇವಳಿಂದ ಅಂಗರಾಜನಿಗೆ 'ವೇನ'ವೆಂಬ ಸರ್ವಪೀಡಾಕರ ಪುತ್ರನು ಹುಟ್ಟಿದನು. ಈ ವೇನನಾದರೂ ಸ್ವಭಾವತಃ ದುಷ್ಟನೆ ಆಗಿದ್ದು, ತನ್ನ ತಾಯಿಯ ತಂದೆ ಮೃತ್ಯುವಿನ ಮನೆಯಲ್ಲಿ ಹೆಚ್ಚು ಕಾಲ ಬೆಳೆದದ್ದರಿಂದ ಕೊಲ್ಲು ಹೊಡಿ ಇತ್ಯಾದಿ ದುರ್ಬುದ್ಧಿಯೂ ಪರಿಸರದಿಂದಾಗಿ ಬಂದಿತ್ತು. ಇದರಿಂದ ಮಹಾ ಅಧರ್ಮ ರಾಜನಾಗಿದ್ದನು. ಕಾಮಲೋಭಗಳಿಗೆ ವಶನಾಗಿ ಬಾಲ್ಯದಿಂದಲೂ ನೀಚನೂ ಉನ್ಮತ್ತನೂ ಆಗಿದ್ದನು, ಧರ್ಮಬಾಹಿರ ಶಾಸನಗಳನ್ನೆ ಪ್ರಜೆಗಳ ಮೇಲೆ ಹೇರಿದನು. ವೈದಿಕ ಧರ್ಮವನ್ನು ಮಣ್ಣುಗೂಡಿಸಿ ಅವೈದಿಕಧರ್ಮ ಶಾಸನ ಮಾಡಿದನು.

## ವೇನನ ದುರಾಡಳಿತ

**ನಿಸ್ಸ್ವಾಧ್ಯಾಯ ವರ್ಷಟ್ಕಾರಾಃ ತಸ್ಮಿನ್ ರಾಜನಿ ಶಾಸತಿ ।**
**ಪ್ರವೃತ್ತಂ ನ ಪಪುಃ ಸೋಮಂ ಹುತಂ ಯಜ್ಞೇಷು ದೇವತಾಃ ॥ 4 ॥**
**ನ ಯಷ್ಟವ್ಯಂ ನ ಹೋತವ್ಯಂ ಇತಿ ತಸ್ಯ ಪ್ರಜಾಪತೇಃ ।**
**ಆಸೀತ್ ಪ್ರತಿಜ್ಞಾ ಕ್ರೂರೇಯಂ ವಿನಾಶೇ ಸಮುಪಸ್ಥಿತೇ ॥ 5 ॥**
**ಅಹಮಿಜ್ಯಶ್ಚ ಯಷ್ಟಾ ಚ ಯಜ್ಞಶ್ಚೇತಿ ಕುರೂದ್ವಹ ।**
**ಮಹಿಯಜ್ಞೋ ವಿಧಾತವ್ಯಃ ಮಯಿ ಹೋತವ್ಯಮಿತ್ಯಪಿ ॥ 6 ॥**

ವೇನನು ಸ್ವಧರ್ಮ ತ್ಯಜಿಸಿ ಸ್ತ್ರೀಲೋಲುಪನಾಗಿ ಅತಿಲೋಭಿಯಾಗಿದ್ದ. ವೇದ ಬ್ರಾಹ್ಮಣ ದ್ವೇಷಿಯೂ ಆಗಿದ್ದು ತನ್ನ ರಾಜ್ಯದಲ್ಲಿ ಯಜ್ಞಯಾಗಾದಿಗಳನ್ನು ಮಾಡಬಾರದು. ದೇವಪೂಜೆಗಳು ಪ್ರಾರ್ಥನೆ ಮಾಡುವುದು ನಿಷಿದ್ಧ. ಹಾಗೆ ಯಾಗಗಳನ್ನು ಮಾಡುವುದಾದರೆ ನನ್ನನ್ನು ಕುರಿತು ಯಾಗ ಮಾಡಿರಿ. ಯಜ್ಞಗಳ ಮೂಲಕ ಆರಾಧ್ಯದೈವೆಂದರೆ ನಾನೇ. ನಾನೇ ದೇವರು. ನಾನೇ ಯಜ್ಞನು, ಯಜ್ಞ ಮಾಡುವವನೂ ನಾನೇ, ನನ್ನ ಉದ್ಧೇಶಿಯೇ ಯಜ್ಞಯಾಗ ನಡೆಯಲಿ. ಸರ್ವ ದೇವತಾ ಪೂಜೆ ನನಗೆ ಸೇರಬೇಕು. ಸರ್ವದೇವಮಯೋ ರಾಜಾ ನಾನೇ. ಇದು ನನ್ನ ಶಾಸನ. ಇದಕ್ಕೆ ತಲೆಬಾಗದವರ ತಲೆ ಉಳಯುವುದಿಲ್ಲ!

ಜನಮೇಜಯ ! ಹೀಗೆ ಧರ್ಮದ ಚೌಕಟ್ಟನ್ನೇ ಮೀರಿದ ದುರಾಚಾರಿ ವೇನನು ಜನರಿಂದ ಅನೇಕ ತೆರಿಗೆಗಳನ್ನು ಸುಲಿಯುತ್ತಿದ್ದನು.

ಧರ್ಮವನ್ನೇ ನಾಶಮಾಡುತ್ತಿದ್ದ ವೇನನನ್ನು ತಿದ್ದಲು ಮರೀಚಿ ಪ್ರಮುಖರಾದ ಮಹರ್ಷಿಗಳೆಲ್ಲ ಹೀಗೆ ಹೇಳದರು –

**ವಯಂ ದೀಕ್ಷಾಂ ಪ್ರವೇಕ್ಷ್ಯಾಮಃ ಸಂವತ್ಸರಗಣಾನ್ ಬಹೂನ್ ।**
**ಅಧರ್ಮಂ ಕುರು ಮಾ ವೇನ ನೃಷ ಧರ್ಮಃ ಸನಾತನಃ ॥ 7 ॥**

ಮಹಾರಾಜ ವೇನನೇ, ನಿನ್ನ ಹಾಗೂ ನಿನ್ನ ರಾಜ್ಯದ ಕಲ್ಯಾಣಕ್ಕಾಗಿ ಪ್ರಜೆಗಳ ಹಿತಕ್ಕಾಗಿ ಸಕಲ ಯಜ್ಞ ಭೋಕ್ತೃವಾದ ಶ್ರೀಹರಿಯನ್ನುದ್ಧೇಶಿಸಿ ಯಜ್ಞಗಳಿಂದ ಪೂಜಿಸುತ್ತೇವೆ. ಈ ಸತ್ಕಾರ್ಯದಲ್ಲಿ ರಾಜನಾದ ನಿನಗೆ ಆರನೇ ಒಂದು

ಭಾಗವು ತಾನಾಗಿಯೇ ನಿನಗೆ ಪ್ರಾಪ್ತವಾಗುತ್ತದೆ. ಇಂತಹ ಯಜ್ಞ ಯಾಗಾದಿಗಳಿಂದ ಸಂತುಷ್ಟನಾದ ಶ್ರೀಹರಿಯು ನಮಗೂ ನಿನಗೂ ರಾಷ್ಟ್ರಕ್ಕೂ ಕ್ಷೇಮವುಂಟು ಮಾಡುವನು.

ನೀನು ಈ ವಂಶದಲ್ಲಿ ಪ್ರಜಾಪತಿ ರೂಪನಾಗಿ ಜನಿಸಿರುವೆ. ಧರ್ಮಸೂತ್ರ ಕೈಗೆತ್ತುಕೊಂಡಾಗ ಪ್ರಜೆಗಳನ್ನು ಧರ್ಮದಿಂದ ಪಾಲಿಸುವೆನು ಎಂಬ ಪ್ರತಿಜ್ಞಾ ಮಾಡಿರುವೆ. ಆದ್ದರಿಂದ ಅಧರ್ಮದಲ್ಲಿ ಮನಸ್ಸಿಡಬೇಡ ಎಂದರು. ಇನ್ನಾದರೂ ಸ್ವೈರಾಚಾರ ಲೋಭಗಳನ್ನು ದೂರ ಮಾಡು ಎಂದು ಉಪದೇಶಿಸಿದರು.

ಸ್ರಷ್ಟಾ ಧರ್ಮಸ್ಯ ಕಶ್ಚಾನ್ಯಃ ಶ್ರೋತವ್ಯಃ ಕಸ್ಯ ವೈ ಮಯಾ ।
ಶ್ರುತವೀರ್ಯ ತಪಃ ಸತ್ಯೈಃ ಮಯಾ ವಾ ಕಃ ಸಮೋ ಭುವಿ ॥ 8 ॥

ಇಚ್ಛನ್ ದಹೇಯಂ ಪೃಥಿವೀಂ ಪ್ಲಾವಯೇಯಂ ತಥಾ ಜಲೈಃ ।
ಖಂ ಭುವಂ ಚೈವ ರುಂಧೇಯಂ ನಾತ್ರ ಕಾರ್ಯಾ ವಿಚಾರಣಾ ॥ 9 ॥

ಮುನಿಮಹರ್ಷಿಗಳ ಮಾತನ್ನು ಕೇಳಿದ ವೇನನು ಗಹಗಹಿಸಿ ನಕ್ಕನು. ನನಗಿಂತ ದೊಡ್ಡವನು ಯಾರಿದ್ದಾನೆ? ಹರಿಯೆಂದರೆ ಯಾವನು? ಆ ನಿಮ್ಮ ಹರಿ, ಬ್ರಹ್ಮ, ರುದ್ರ, ಇಂದ್ರ, ವಾಯು, ಸೂರ್ಯ, ಚಂದ್ರ ಎಲ್ಲರೂ ರಾಜನ ಶರೀರದಲ್ಲಿಯೇ ಇರುವರು. ಸರ್ವದೇವತಾ ಸ್ವರೂಪ ರಾಜನೆಂಬುದು ತಿಳಿದಿಲ್ಲವೆ ನಿಮಗೆ? ಸ್ತ್ರೀಯರಿಗೆ ಪತಿಯ ಸೇವೆಯೇ ಧರ್ಮ ಹಾಗೆಯೆ ಪ್ರಜೆಗಳಿಗೆ ರಾಜನ ಸೇವೆಯೆ ಧರ್ಮ.

ನನ್ನ ಸಾಮರ್ಥ್ಯ ನಿಮಗೆ ತಿಳಿಯದು ನಾನು ಮನಸ್ಸು ಮಾಡಿದರೆ ಭೂಮ್ಯಾಕಾಶಗಳನ್ನು ಒಂದು ಮಾಡಬಲ್ಲೆ. ಜಲಪ್ರಲಯ ಸೃಷ್ಟಿಸಿ ಜಗತ್ತನೆಲ್ಲ ನೀರಿನಲ್ಲಿ ಮುಳುಗಿಸಬಲ್ಲೆ ಕೋಪದಿಂದ ಭೂಮಂಡಲವನ್ನೆ ಸುಟ್ಟು ಹಾಕಬಲ್ಲೆನು.

ಜನಮೇಜಯನೆ, ಮಹರ್ಷಿಗಳೆಲ್ಲರೂ ಮಧಾಂಧನಾದ ವೇನನ ನಾನೇ ದೇವರೆಂಬ ಅದ್ವೈತವನ್ನು ಕೇಳಿ ಕ್ರುದ್ಧರಾದರು.

ಓಂಕಾರ ಜಪದಿಂದ ಮಹಾಸತ್ವ ಸಂಪನ್ನರಾದ ಆ ಮುನಿಗಳ ಬಾಯಿಂದ ಹೂಂ ಪಾಪಿಯೇ ಸಾಯಿ ಎಂದರು. ಕ್ಷಣಾರ್ಧದಲ್ಲಿ ವೇನನು

ಗತಪ್ರಾಣನಾದನು. ಪರಮಾತ್ಮನಿಂದೆ ಮಾಡಿದವರು ಬಹುಕಾಲ ಬದುಕಲಾರರಷ್ಟೇ?

## ವೇನನ ದೇಹ ಮಥನ

**ತತೋಽಸ್ಯ ಸವ್ಯಮೂರುಂ ತೇ ಮಮಂಥುಃ ಜಾತಮನ್ಯವಃ ।**
**ತಸ್ಮಿಂಸ್ತು ಮಥ್ಯಮಾನೇ ವೈ ರಾಜ್ಞ ಊರೌ ಪ್ರಜಜ್ಞಿವಾನ್ ॥ 10 ॥**
**ಹ್ರಸ್ವೋಽತಿ ಮಾತ್ರಃ ಪುರುಷಃ ಕೃಷ್ಣಶ್ಚಾತಿ ಬಭೂವ ಹ ॥ 11 ॥**
**ತಮತ್ರಿಃ ವಿಹ್ವಲಂ ದೃಷ್ಟ್ವಾ ನಿಷೀದೇತ್ಯಬ್ರವಿತ್ ।**
**ನಿಷಾದ ವಂಶಕರ್ತಾಽಸೌ ಬಭೂವ ವದತಾಂ ವರ ॥ 12 ॥**

ವೇನನು ಮೃತನಾದ ಮೇಲೆ ರಾಜ್ಯದಲ್ಲಿ ಅರಾಜಕತೆವುಂಟಾದರೆ ದೇಶದಲ್ಲಿ ದಸ್ಯುಕಳ್ಳಕಾಕರ ಭಯುವೇರ್ಪಡುತ್ತದೆ. ಅಂಗವಂಶವು ನಿರ್ವಂಶವಾಗಲೂಬಾರದೆಂಬ ದೂರದೃಷ್ಟಿಯಿಂದ ಮುನಿಗಳು ಮೃತನಾದ ವೇನನ ಬಲ ತೊಡೆಯನ್ನು ಜೋರಾಗಿ ಮಥನ ಮಾಡಿದರು. ಆಗ ಒಬ್ಬ ಕಪ್ಪಾದ, ಕುಳ್ಳನಾಗಿರುವ ಪರುಷನು, ಕಾಣಿಸಿದನು.

ಋಷಿಗಳಿಗೆ ನಮಸ್ಕರಿಸಿ ನಾನೇನು ಮಾಡಲಿ ಎಂದನು. ಅವರು 'ಕುಳಿತಿಕೊ' ಎಂದರು. ಇವನಿಗೆ 'ನಿಷಾದ' ಎಂದು ಹೆಸರಾಯಿತು.

ಮುಂದೆ ಅವನಿಂದ ಹುಟ್ಟಿದ ಜಾತಿಗೆ ನಿಷಾದ ಎಂದು ಹೆಸರಾಯಿತು. ಇವರ ವಂಶದಲ್ಲಿಯೇ ಬೇಡರು ಹುಟ್ಟಿದರು. ಇವರೆಲ್ಲರೂ ವೇನನ ಪಾಪದಿಂದ ಹುಟ್ಟಿದವರು. ಇವರೆ ಅಲ್ಲದೆ ತುಷಾರ-ತುಂಬರರೆಂಬುವರೂ ಹುಟ್ಟಿದರು. ಇವರೆಲ್ಲ ಕೊಲೆ ಸುಲಿಗೆ ಕಳವು ಮಾಡುತ್ತಾ ವಿಂಧ್ಯಪರ್ವತದಲ್ಲಿ ವಾಸ ಮಾಡುತ್ತಿದ್ದರು.

## ಪೃಥು ಜನನ

**ತತಃ ಪುನಃ ಮಹಾತ್ಮಾನಃ ಪಾಣಿಂ ವೇನಸ್ಯ ದಕ್ಷಿಣಮ್ ।**
**ಅರಣೀಮಿವ ಸಂರಬ್ಧಾಃ ಮಮಂಥುಸ್ತೇ ಮಹರ್ಷಯಃ ॥ 13 ॥**
**ಪೃಥುಸ್ತಾವತ್ ಸಮುತ್ತಸ್ಥೌ ಕರಾತ್ ಜ್ವಲನ ಸನ್ನಿಭಃ ।**
**ದೀಪ್ಯಮಾನಃ ಸ್ವವಪುಷಾ ಸಾಕ್ಷಾದಗ್ನಿರಿವ ಜ್ವಲನ್ ॥ 14 ॥**
**ಸ ಧನ್ವೀ ಕವಚೀ ಜಾತಃ ಪೃಥುರೇವ ಮಹಾಯಶಾಃ ॥ 15 ॥**

ಆದ್ಯಮಾಜಗವಂ ನಾಮ ಧನುರ್ಗೃಹ್ಯ ಮಹಾರವಮ್ ।
ಶರಾಂಶ್ಚದಿವ್ಯಾನ್ ರಕ್ಷಾರ್ಥಂ ಕವಚಂ ಚ ಮಹಾಪ್ರಭಮ್ ॥ 16 ॥

ಮಹರ್ಷಿಗಳು ವೇನನ ಬಲಗೈಯನ್ನು ಅರಣಿಯಂತೆ ಮಾಡಿಕೊಂಡು ಮಥನ ಮಾಡಿದರು. ಆ ಕೈಯಿಂದ ಅಗ್ನಿಯಂತೆ ಜಾಜ್ವಲ್ಯಮಾನನು, 'ಅಜಗವ' ವೆಂಬ ಧನಸ್ಸನ್ನು ಕವಚಸಹಿತನಾಗಿ 'ಪೃಥು' ರಾಜನು ಜನಿಸಿದನು. ಅಕ್ಷಯ್ಯವಾದ ಬಾಣಗಳಿರುವ ಬತ್ತಳಿಕೆ ರಕ್ಷಣೆಗಾಗಿ ಕವಚಧರಿಸಿಯೇ ಆವಿರ್ಭೂತನಾದನು. ವೇನನೆ ಪೃಥುವಾದನೆಂದು ತಿಳಿಯಬಾರದು. ವೇನನು ಸಾತ್ವಿಕಾಂಶ, ರಾಜಸರಾಜಸ, ತಾಮಸ ತಾಮಸವೆಂದು ಮೂರು ಅಂಶಗಳ ಸಂಕೀರ್ಣ ವ್ಯಕ್ತಿತ್ವವಿತ್ತು. ಸತ್ವಾಂಶವೇ ಪೃಥುವಾಗಿ ಜನಿಸಿದ್ದು. ರಾಜ ಸಾಂಶನು ಸ್ವರ್ಗಕ್ಕೂ, ತಾಮಸಾಂಶನು ನಿಷಾದನಾಗಿಯೂ, ತಾಮಸತಾಮಸ ವೇನನು ನಾನೇ ದೇವರೆಂದು ಅಂಧಂತಮಸ್ಸಿಗೆ ಬಿದ್ದ.

ತಸ್ಮಿನ್ ಜಾತೇಽಥ ಭೂತಾನಿ ಸಂಪ್ರಹೃಷ್ಟಾನಿ ಸರ್ವಶಃ ।
ಸಮಾಪೇತುಃ ಮಹಾರಾಜ ವೇನಶ್ಚ ತ್ರಿದಿವಂ ಗತಃ ॥ 17 ॥

ಸಮುತ್ಪನ್ನೇನ ಕೌರವ್ಯ ಸತ್ಪುತ್ರೇಣ ಮಹಾತ್ಮನಾ ।
ತ್ರಾತಃ ಸ ಪುರುಷ ವ್ಯಾಘ್ರ ಪುಂನಾಮ್ನೋ ನರಕಾತ್ ತದಾ ॥ 18 ॥

ಪೃಥುವು ಜನ್ಮವಾದ ಕೂಡಲೇ ಸಮಸ್ತ ಪ್ರಾಣಿಪ್ರಪಂಚವು ಸಂತೋಷ ಹೊಂದಿತು. ಅವೆಲ್ಲವೂ ಪೃಥುವಿನ ದರ್ಶನಕ್ಕಾಗಿ ಇವನ ಬಳಿ ಬಂದವು. ಸಮಸ್ತ ಚರಾಚರ ಪ್ರಾಣಿಗಳು ಆಗಮಿಸಿ ಮಹಾದ್ಯುತಿಮಂತನಾದ ಪ್ರಜಾಪಾಲಕನಾದ ಪೃಥುವನ್ನು ರಾಜಾಧಿರಾಜರ ಆಧಿಪತ್ಯದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದರು. ತಂದೆಯನ್ನು ಪುತ್‌ನಾಮಕ ನರಕದಿಂದ ತಪ್ಪಿಸಿದ ಪೃಥುವು ನಿಜವಾಗಲೂ ಪುತ್ರನೆನಿಸಿದ.

ತಂ ಸಮುದ್ರಾಶ್ಚ ನದ್ಯಶ್ಚ ರತ್ನಾನ್ಯಾದಾಯ ಸರ್ವಶಃ ।
ತೋಯಾನಿ ಚಾಭಿಷೇಕಾರ್ಥಂ ಸರ್ವ ಏವೋಪತಸ್ಥಿರೇ ॥ 19 ॥

ಪಿತಾಮಹಶ್ಚ ಭಗವಾನ್ ದೇವೈರಾಂಗಿರಸೈಃ ಸಹ ।
ಸ್ಥಾವರಾಣಿ ಚ ಭೂತಾನಿ ಜಂಗಮಾನಿ ತಥೈವ ಚ ॥ 20 ॥

**ಸೋಽಭಿಷಿಕ್ತಃ ಮಹಾತೇಜಾ ವಿಧಿವದ್ ಧರ್ಮಕೋವಿದೈಃ ।**
**ಆದಿರಾಜ್ಯೇ ತದಾ ರಾಜ್ಞಾಂ ಪೃಥುಃ ವೈನ್ಯಃ ಪ್ರತಾಪವಾನ್ ॥ 21 ॥**
**ಪಿತ್ರಾಪರಂಜಿತಾಃ ತಸ್ಯ ಪ್ರಜಾಃ ತೇನಾನುರಂಜಿತಾಃ ।**
**ಅನುರಾಗಾತ್ ತತಸ್ತಸ್ಯ ನಾಮ ರಾಜೇತ್ಯಜಾಯತ ॥ 22 ॥**

ಪೃಥುವಿನ ಅಭಿಷೇಕಕ್ಕಾಗಿ ಸಕಲ ಪುಣ್ಯತೀರ್ಥಗಳು ಸಮುದ್ರಗಳೂ ರತ್ನಗಳನ್ನು ನೀರನ್ನೂ ತೆಗೆದುಕೊಂಡು ಉಪಸ್ಥಿತವಾದವು. ಬ್ರಹ್ಮದೇವನಾದರೂ ವಿಷ್ಣುವಿನ ರಾಜರಾಜೇಶ್ವರ ಅವತಾರಿಯಾದ ಪೃಥುವನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಿದರು. ಪೃಥುವು ಸಕಲರಾಜರಿಗೂ ಚಕ್ರವರ್ತಿಯಾದನು.

ತನ್ನ ತಂದೆಯಾದ ವೇನನಿಂದ ಪೀಡಸಲ್ಪಟ್ಟ ಪ್ರಜೆಗಳನ್ನು ಪೃಥುವು ತನ್ನ ಧರ್ಮಮೂಲ ರಾಜ್ಯಭಾರದಿಂದ ರಂಜಸಿದ್ದರಿಂದ 'ರಾಜಾ' ಎಂಬ ಹೆಸರನ್ನು ಸಾರ್ಥಕ ಮಾಡಿಕೊಂಡನು.

## ಪೃಥು ರಾಜ್ಯಾಡಳಿತ

**ಆಪಃ ತಸ್ತಂಭಿರೇ ಚಾಸ್ಯ ಸಮುದ್ರಮಭಿಯಾಸ್ಯತಃ ।**
**ಪರ್ವತಾಶ್ಚ ದದುರ್ಮಾರ್ಗಂ ಧ್ವಜಭಂಗಶ್ಚ ನಾಭವತ್ ॥ 23 ॥**
**ಅಕೃಷ್ಟ ಪಚ್ಯಾ ಪೃಥಿವೀ ಸಿದ್ಧಂತ್ಯನ್ನಾನಿ ಚಿಹ್ನಯಾ ।**
**ಸರ್ವಕಾಮದುಘಾ ಗಾವಃ ಪುಟಕೇ ಪುಟಕೇ ಮಧು ॥ 24 ॥**

ಪೃಥುವು ಸಮುದ್ರಯಾನ ಕೈಗೊಂಡಾಗ ನೀರು ಸ್ತಬ್ಧವಾಗಿ, ಸೇವೆ ಮಾಡುತ್ತಿತ್ತು. ಪರ್ವತಗಳು ತಾವಾಗಿಯೇ ದಾರಿ ಮಾಡಿಕೊಡುತ್ತಿದ್ದವು. ಅವನ ರಥವು ಹೋಗುತ್ತಿರುವಾಗ ಗಿಡಮರಗಳಿಗೆ ತಗಲಿ ರಥದ ಧ್ವಜ ಮುರಿದು ಬಿದ್ದ ದೃಷ್ಟಾಂತವಿದ್ದಿಲ್ಲ. ಆ ಪೃಥುವಿನ ಆಡಳಿತದ ಸಮಯದಲ್ಲಿಯೇ ಭೂಮಿಯನ್ನು ಹದ ಮಾಡಿ ಧಾನ್ಯ ಬೆಳೆದು ಸಮೃದ್ಧವಾಗಿ ಅನ್ನವನ್ನು ಉತ್ಪಾದಿಸುವ ಪದ್ಧತಿ ಪ್ರಾರಂಭವಾಯಿತು. ಗೋವುಗಳೆಲ್ಲವೂ ಚೆನ್ನಾಗಿ ಹಾಲನ್ನು ನೀಡುತ್ತಿದ್ದವು. ವನ-ಉಪವನಗಳಲ್ಲಿ, ವೃಕ್ಷಗಳ ಪೊಟರೆಗಳಲ್ಲಿ ಬೆಟ್ಟ ಬಯಲುಗಳಲ್ಲಿ ಜೇನಿನಗೂಡಿನಿಂದ ಜೇನು ಸಮೃದ್ಧವಾಗಿ

ಜಿನುಗುತ್ತಿದ್ದವು. ಅವನ ರಾಜ್ಯಭಾರದಲ್ಲಿ ಸಂಕಲ್ಪ ಮಾತ್ರದಿಂದ ಇಷ್ಟಾರ್ಥಗಳೆಲ್ಲವೂ ಲಭಿಸುತ್ತಿದ್ದವು. ಗೋವು ಸಮೃದ್ಧ ಹಾಲನ್ನು ಮಾತ್ರವಲ್ಲ ಕೇಳಿದ ಇಷ್ಟಾರ್ಥಗಳನ್ನೆಲ್ಲ ಕಾಮಧೇನುವಿನಂತೆ ನೀಡುತ್ತಿದ್ದವು.

## ಸೂತ-ಮಾಗಧರ ಉತ್ಪತ್ತಿ

**ಏತಸ್ಮಿನ್ನೇವ ತು ಕಾಲೇ ತು ಯಜ್ಞೇ ಪೈತಾಮಹೇ ಶುಭೇ ।**
**ಸೂತಃ ಸುತ್ಯಾಂ ಸಮುತ್ಪನ್ನಃ ಸೌತ್ಯೇಽಹನಿ ಮಹಾಮತಿಃ ॥ 25 ॥**

ಪೃಥುವಿನ ರಾಜ್ಯಭಾರ ಕಾಲದಲ್ಲಿಯೇ ಪೈತಾ ಮಹ ಯಜ್ಞ ಪ್ರಾರಂಭಿಸಿದನು. ಆ ಮಹಾಯಜ್ಞದಲ್ಲಿ ಸೋಮರಸ ಹಿಂಡುತ್ತಿರುವಾಗ ಮಹಾಮೇಧಾವಿ ಸೂತನು ಜನಿಸಿದನು. ಇದೇ ರೀತಿ ಮಾಗಧನು ಹುಟ್ಟಿದನು. ದೇವತೆಗಳು, ಋಷಿಮುಖ್ಯರೂ ಸಹ ಪೃಥುವನ್ನು ಕೊಂಡಾಡಲು ಸೂತ-ಮಾಗಧರನ್ನು ಆಹ್ವಾನಿಸಿದ್ದರು. ದೇವ-ಋಷಿಗಳು ಪೃಥುವನು ಪ್ರಶಂಸಿಸಲು ಹೇಳಿದರು.

ಸೂತ ಮಾಗಧರು ನಾವಿಬ್ಬರೂ ನಮ್ಮ ಕರ್ಮಗಳಿಂದ ದೇವತೆ ಋಷಿಗಳನ್ನು ಸಂತೋಷಗೊಳಿಸುತ್ತೇವೆ ಎಂದು ಹೇಳಿದ ಪೃಥುರಾಜನನ್ನು ಮುಕ್ತವಾಗಿ ಪ್ರಶಂಸಿದರು.

**ಸತ್ಯವಾಗ್ ದಾನಶೀಲೋಽಯಂ ಸತ್ಯಂಸಂಧೋ ನರೇಶ್ವರಃ ।**
**ಶ್ರೀಮಾನ್ ಜೈತ್ರಃ ಕ್ಷಮಾಶೀಲಃ ವಿಕ್ರಾಂತೋ ದುಷ್ಟಶಾಸನಃ ॥ 26 ॥**
**ಧರ್ಮಜ್ಞಶ್ಚ ಕೃತಜ್ಞಶ್ಚ ದಯಾವಾನ್ ಪ್ರಿಯಭಾಷಣಃ ।**
**ಮಾನ್ಯೋ ಮಾನಯಿತಾ ಯಜ್ವಾ ಬ್ರಹ್ಮಣ್ಯಃ ಸತ್ಯಸಂಗರಃ ॥ 26**

ಪೃಥುರಾಜನು ತಾನಿನ್ನೂ ಅಂತಹ ಯಾವ ಶ್ಲಾಘನೀಯ ಕಾರ್ಯಗಳನ್ನು ಮಾಡಿಲ್ಲವಾದ್ದರಿಂದ ನನ್ನನ್ನು ಹೇಗೆ ಪ್ರಶಂಸೆ ಮಾಡುತ್ತೀರಿ ಎಂದನು.

ಸೂತ ಮಾಗಧರು ನೀನು ಮುಂದೆ ಮಾಡಲಾಗುವ ಕಾರ್ಯಗಳಿಂದ ನಿನ್ನನ್ನು ಪ್ರಶಂಸೆ ಮಾಡುತ್ತಿರುವುವು ಎಂದಾಗ ಮುಂದೆ ಮಾಡಿದ ಮೇಲೆ ಪ್ರಶಂಸಿಸಿರಿ ಈಗ ಬೇಡ. ಪ್ರಶಂಸೆ ಮಾಡುವುದಾದರೆ ಸರ್ವದಾ ಸರ್ವಗುಣ ಪೂರ್ಣ ಭಗವಂತನನ್ನು ಸ್ತುತಿ ಮಾಡಿರಿ ಎಂದನು.

ಸೂತ ಮಾಗಧರು ಸತ್ಯ, ದಾನ, ಕ್ಷಮಾ, ಪರಾಕ್ರಮ, ಸೌಜನ್ಯ, ಪ್ರಿಯಭಾಷಣ

ದುಷ್ಟರನ್ನು ಶಿಕ್ಷಿಸುವುದು, ತ್ಯಾಗಶೀಲತೆ, ಸಜ್ಜನಪಕ್ಷಪಾತ, ವ್ಯವಹಾರ ಕೌಶಲ್ಯ, ಕೃತಜ್ಞತೆ, ದೈವಭಕ್ತಿ ಮೊದಲಾದ ಗುಣಗಳಿಂದ ಅತ್ಯುತ್ತಮ ಗುಣಗಳಿಂದ ಒಳ್ಳೆಯ ರೀತಿಯಲ್ಲಿ ಪ್ರಜಾಪಾಲನೆ ಮಾಡಿ 'ಆದರ್ಶ ಮಹಾರಾಜ'ನೆಂದು ಪ್ರಖ್ಯಾತಿ ಹೊಂದಿದನು.

ಜನಮೇಜಯ ರಾಜನೇ ಅಂದಿನಿಂದ ಲೋಕದಲ್ಲಿ ಸೂತ ಮಾಗಧರು ಮಾಡುವ ಸ್ತೋತ್ರಗಳಲ್ಲಿ ಆಶೀರ್ವಾದ ಪ್ರಚಲಿತವಾದವು.

ಪೃಥುವು ಅವರ ಸ್ತೋತ್ರದಿಂದ ಸಂತುಷ್ಟನಾಗಿ ಸೂತನಿಗೆ ಅನೂಪದೇಶ ಮಗಧ ದೇಶದವನ್ನು ಮಾಗಧನಿಗೂ ನೀಡಿದನು. ಈ ವಿಷಯ ಕೇಳಿ ಪ್ರೀತರಾದ ಮಹರ್ಷಿಗಳು – ಪ್ರಜೆಗಳೇ, ಈ ರಾಜನೇ ನಿಮಗೆ ಜೀವನ ವೃತ್ತಿಗಳನ್ನು ಕಲ್ಪಿಸುತ್ತಾನೆ ಎಂದರು.

**ತತೋ ವೈನ್ಯಂ ಮಹಾರಾಜ ಪ್ರಜಾಃ ಸಮಭಿದುದ್ರುವುಃ ।**
**ತ್ವಂ ನೋ ವೃತ್ತಿಂ ವಿಧಸ್ವೇತಿ ಮಹರ್ಷಿವಚನಾತ್ ತದಾ ॥ 27 ॥**
**ಸೋಽಭಿದ್ರುತಃ ಪ್ರಜಾಭಿಸ್ತು ಪ್ರಜಾಹಿತಚಿಕೀರ್ಷಯಾ ।**
**ಧನುರ್ಗೃಹ್ಯ ಪೃಷತ್ಕಾಂಶ್ಚ ಪೃಥಿವೀಮಾದ್ರವದ್ ಬಲೀ ॥ 28 ॥**

ಮಹರ್ಷಿಗಳು ವೃತ್ತಿದಾತನೆಂದು ಹೇಳಿದ ಕೂಡಲೇ ಪ್ರಜೆಗಳೆಲ್ಲರೂ ತಮ್ಮ ಜೀವನಕ್ಕಾಗಿ ವೃತ್ತಿಗಳನ್ನು ನೀಡುವಂತೆ ಪೃಥುವನ್ನು ಕೇಳಲು ಅವನನ್ನೇ ಹಿಂಬಾಲಿಸುತ್ತಾ ಓಡಿ ಬಂದರು. ಪೃಥುವಾದರೂ ಪ್ರಜೆಗಳ ಹಿತವನ್ನು ಬಯಸಿ ಧನುರ್ಬಾಣುಗಳನ್ನು ಹಿಡಿದುಕೊಂಡು ಪೃಥ್ವಿಯನ್ನೇ ಗುರಿ ಮಾಡಿಕೊಂಡು ಹಿಂಬಾಲಿಸಿ ಹೋದನು.

## ಭೂಮಿಯು ಗೋವಾದಳು

**ತತೋ ವೈನ್ಯಭಯಾದ್ ತ್ರಸ್ತಾ ಗೌರ್ಭೂತ್ವಾ ಪ್ರಾದ್ರವನ್ ಮಹೀ ।**
**ತಾಂ ಪೃಥುಃ ಧನುರಾದಾಯ ದ್ರವಂತೀಮನ್ವಧಾವತ ॥ 29 ॥**

ಭೂದೇವಿಯು ಪೃಥುವಿನ ಭಯದಿಂದಾಗಿ ಗೋರೂಪ ಧರಿಸಿ ಬ್ರಹ್ಮನೇ ಮೊದಲಾದ ಲೋಕಗಳಿಗೆ ಧಾವಿಸಿದಳು.

**ಸಾ ಲೋಕಾನ್ ಬ್ರಹ್ಮಲೋಕಾದೀನ್ ಗತ್ವಾ ವೈನ್ಯಭಯಾತ್ ತದಾ ।**
**ಪ್ರದದರ್ಶಾಗ್ರತೋ ವೈನ್ಯಂ ಪ್ರಗೃಹೀತಶರಾಸನಮ್ ॥ 30 ॥**

ಅಲಭಂತೀ ತು ಸಾ ತ್ರಾಣಂ ವೈನ್ಯಮೇವಾನ್ವಪದ್ಯತ ।
ಉವಾಚ ವೈನ್ಯಂ ನಾಧರ್ಮ್ಯಂ ಸ್ತ್ರೀವಧಂ ಕರ್ತುಮರ್ಹಸಿ ॥ 31 ॥
ಮಯಿಲೋಕಾಃ ಸ್ಥಿತಾಃ ರಾಜನ್ ಮಯೇದಂ ಧಾರ್ಯತೇ ಜಗತ್ ।
ಮದ್ವಿನಾಶೇ ವಿನಶ್ಯೇಯುಃ ಪ್ರಜಾಃ ಪಾರ್ಥಿವ ವಿದ್ಧಿ ತತ್ ॥ 32 ॥

ಬ್ರಹ್ಮಲೋಕಾದಿಗಳಗೆ ಹೋದರೂ ಬಿಡದೆ ಹಿಂಬಾಲಿಸುತ್ತಿದ್ದ ಕೋದಂಡಪಾಣಿಯಾದ ಪೃಥುವನ್ನು ದಂಡಪಾಣಿ ಯಮನೆಂಬಂತೆ ಕಂಡಳು. ದೇವತೆಗಳಿಂದಲೂ ಎದುರಿಸಲು ಅಸಾಧ್ಯನಾದ ಪೃಥುವನ್ನೇ ಶರಣು ಹೊಂದಿದಳು. ಪೃಥುವೇ, ರಾಜಾಧಿರಾಜನಾದ ನೀನು ಅಧರ್ಮವಾದ ಈ ಸ್ತ್ರೀವಧೆ ಮಾಡಬಾರದು. ರಾಜನೇ, ಸರ್ವರಿಗೂ ಆಶ್ರಯದಾತಳಾದ ನನ್ನನ್ನು ಕೊಂದರೆ ನಿನ್ನ ಪ್ರಜೆಗಳೆಲ್ಲ ನಷ್ಟರಾದಂತೆಯೇ. ಪ್ರಜೆಗಳಿಗೆ ಉಪಕಾರ ಮಾಡಲು ನೀನು ನನ್ನನ್ನು ಕೊಂದರೆ, ನಿನ್ನ ಪ್ರಜೆಗಳು ನಿಲ್ಲಲು ಆಧಾರವೇ ನಾನಲ್ಲವೆ? ನನ್ನ ಕೊಂದು ನಿನ್ನ ಪ್ರಜೆಗಳನ್ನೆಲ್ಲಿ ನಿಲ್ಲಿಸುತ್ತಿ? ಎಂದಳು.

ಪೃಥುವು ಪ್ರಜೆಗಳಿಗೆ ದ್ರೋಹ ಮಾಡಿರುವ ನಿನ್ನನ್ನು ಕೊಂದು ನನ್ನ ಯೋಗಶಕ್ತಿಯಿಂದಲೇ ಪ್ರಜೆಗಳನ್ನು ನಿಲ್ಲಿಸುತ್ತೇನೆ ಎಂದಾಗ ಇವನ ದೃಢನಿರ್ಧಾರದ ಮಾತುಗಳನ್ನು ಕೇಳಿ ಹೀಗೆಂದಳು.

ಉಪಾಯತಃ ಸಮಾರಬ್ಧಾಃ ಸರ್ವೇ ಸಿದ್ಧ್ಯಂತ್ಯುಪಕ್ರಮಾಃ ।
ಉಪಾಯಂ ಪಶ್ಯ ಯೇನ ತ್ವಂ ಧಾರಯೇಥಾಃ ಪ್ರಜಾ ನೃಪ ॥ 33 ॥
ಅವಧ್ಯಾಶ್ಚ ಸ್ತ್ರಿಯಃ ಪ್ರಾಹುಃ ತಿರ್ಯಗ್ ಯೋನಿಗತೇಷ್ವಪಿ ।
ಸತ್ವೇಷು ಪೃಥಿವೀ ಪಾಲ ನ ಧರ್ಮಂ ತ್ಯಕ್ತುಮರ್ಹಸಿ ॥ 34 ॥
ಏವಂ ಬಹುವಿಧಂ ವಾಕ್ಯಂ ಶ್ರುತ್ವಾ ರಾಜಾ ಮಹಾಮನಾಃ ।
ಕೋಪಂ ನಿಗೃಹ್ಯ ಧರ್ಮಾತ್ಮಾ ವಸುಧಾಮಿದಮಬ್ರವೀತ್ ॥ 35 ॥

ರಾಜನೇ ! ಉಪಾಯದಿಂದ ಮಾಡಿದರೆ ಎಲ್ಲಾ ಕೆಲಸಗಳೂ ಸಿದ್ಧಿಸುತ್ತವೆ. ಯಾವ ಉಪಾಯದಿಂದ ಪ್ರಜೆಗಳನ್ನು ಜೀವನ ನೀಡಿ ಧರಿಸಬಹುದೋ ಅದನ್ನು ಆಲೋಚಿಸು. ನನ್ನನ್ನು ನೀನು ಸಂಹರಿಸಿದರೂ ಪ್ರಜೆಗಳನ್ನು ಧರಿಸಲಾರೆ. ಕೋಪವನ್ನು ಬಿಟ್ಟು ನಿನಗೆ ಅನುಕೂಲಳಾಗಿರುತ್ತೇನೆ.

ಸ್ತ್ರೀಯರು ಪಶು ಪಕ್ಷಿ ಯೋನಿಯಲ್ಲಿದ್ದರೂ ಅವರನ್ನು ಕೊಲ್ಲಬಾರದೆಂದು ಜ್ಞಾನಿಗಳು ಹೇಳುವರು. ನಾನು ಸ್ತ್ರೀ ಯಾಗಿರುವೆನು. ಗೋ ರೂಪಧರಿಸಿರುವವಳು ಧರ್ಮವನ್ನು ತ್ಯಜಿಸುವುದು ನಿನ್ನಂತಹ ಧರ್ಮಿಷ್ಠನಿಗೆ ಯುಕ್ತವಲ್ಲ.

ರಾಜನೇ, ಭೂದೇವಿಯ ಈ ಮಾತುಗಳನ್ನು ಕೇಳಿದ ಪೃಥುವು ಕೋಪ ತ್ಯಜಿಸಿ ಹೀಗೆಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಪೃಥು ಗೋರೂಪಧರೆಯ ಸಂವಾದವೆಂಬಲ್ಲಿ
ಐದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥



## ಅಥ ಷಷ್ಠೋಽಧ್ಯಾಯಃ

### ಪೃಥು ಚರಿತ್ರೆ – ಗೋದೋಹನ

*ಪೃಥುರುವಾಚ –*

**ಏಕಸ್ಯಾರ್ಥಾಯ ಯೋ ಹನ್ಯಾತ್ ಆತ್ಮನೋ ವಾ ಪರಸ್ಯ ವಾ ।**
**ಬಹೂನ್ ವೈ ಪ್ರಾಣಿನೋ ಲೋಕೇ ಭವೇತ್ ತಸ್ಯೇಹ ಪಾತಕಮ್ ॥ 1 ॥**

**ಸುಖಮೇಧಂತಿ ಬಹವೋ ಯಸ್ಮಿಂಸ್ತು ನಿಹತೇಽಶುಭೇ ।**
**ತಸ್ಮಿನ್ನಾಸ್ತಿ ಹತೇ ಭದ್ರೇ ಪಾತಕಂ ಚೋಪಪಾತಕಮ್ ॥ 2 ॥**

ಭೂಮಿಯೇ, ಲೋಕದಲ್ಲಿ ಯಾರು ತನ್ನ ಸ್ವಾರ್ಥಕ್ಕಾಗಿಯಾಗಲೀ ಮತ್ತೊಬ್ಬನ ಸಲುವಾಗಿ ಅನೇಕ ಪ್ರಾಣಿಗಳನ್ನು ಕೊಂದರೆ ಅಂತಹವನಿಗೆ ಪಾಪಲೇಪವುಂಟಾಗುತ್ತದೆ. ಒಬ್ಬ ಪಾಪಿಷ್ಠನನ್ನು ಕೊಂದಾಗ ಬಹಳ ಜನರು ಸುಖ ಹೊಂದುವುದಾದರೆ ಅವನನ್ನು ಕೊಂದರೆ ಯಾವ ಪಾತಕವಾಗಲಿ ಉಪಪಾತಕವಾಗಲೀ ಇರುವುದಿಲ್ಲ.

ದುಷ್ಟನಾದ ಅಂತಹವನನ್ನು ಕೊಂದರೆ ಅನೇಕರಿಗೆ ಕ್ಷೇಮವಾಗುವುದರಿಂದ ಅಂತಹ ವಧೆಯು ಪಾತಕವಾಗುವುದರ ಬದಲಾಗಿ ಪುಣ್ಯಕರವಾಗುತ್ತದೆ. ನಾನಾದರೂ ಪ್ರಜೆಗಳ ಕ್ಷೇಮಕ್ಕಾಗಿ ನಿನ್ನನ್ನು ಕೊಲ್ಲುತ್ತೇನೆ. ನನಗೆ ಪಾಪವುಂಟಾಗದೆ ಪುಣ್ಯವೆ ಆಗುವುದು. ನನ್ನ ಮಾತನ್ನು ಕೇಳದೆಯಾದರೆ ನಿನಗೂ ಶುಭ, ಪ್ರಜೆಗಳಿಗೂ ಶುಭವು.

**ತ್ವಾಂ ನಿಹತ್ಯಾದ್ಯ ಬಾಣೇನ ಮಚ್ಛಾಸನ ಪರಾಙ್ಮುಖೀಮ್ ।**
**ಆತ್ಮಾನಂ ಪ್ರಥಯಿತ್ವಾಹಂ ಪ್ರಜಾ ಧಾರಯಿತಾ ಚಿರಮ್ ॥ 3 ॥**

**ಸಂಜೀವಯ ಪ್ರಜಾಃ ಸರ್ವಾಃ ಸಮರ್ಥಾಹ್ಯಸಿ ಧಾರಣೇ ।**
**ದುಹಿತೃತ್ವಂ ಚ ಮೇ ಗಚ್ಛ ತತ ಏನಮಹಂ ಶರಮ್ ॥ 4 ॥**

**ನಿಯಚ್ಛೇಯಂ ತ್ವದ್ವಧಾರ್ಥಂ ಉದ್ಯತಂ ಘೋರದರ್ಶನಮ್ ॥ 5 ॥**

ನನ್ನ ಆದೇಶವನ್ನು ತಿರಸ್ಕರಿಸುತ್ತಿರುವ ನಿನ್ನ ಕೊಂದು, ನನ್ನ ದೇಹವನ್ನೇ ವಿಸ್ತಾರಗೊಳಸಿ ನನ್ನ ಪ್ರಜೆಗಳನ್ನೆಲ್ಲ ಪಾಲಿಸುವೆನು. ಧರ್ಮಸ್ವರೂಪಳೇ, ನನ್ನ ಆದೇಶದಂತೆ ನಡೆದು ನಿನ್ನನ್ನಾಶ್ರಯಿಸಿರುವ ಪ್ರಜೆಗಳನ್ನು ಉಜ್ಜೀವನಗೊಳಸು. ಪ್ರಜೆಗಳನ್ನು ಧರಿಸುವ ಸಾಮರ್ಥ್ಯವೂ ನಿನ್ನಲ್ಲಿದೆ. ಇನ್ನು ಮುಂದೆ ನೀನು ನನ್ನ ಮಗಳಾಗಿ ಪ್ರಸಿದ್ಧಳಾಗಿ ಪೃಥುವಿನ ಪುತ್ರೀ 'ಪೃಥಿವೀ' ಎಂದು ನಿನ್ನನ್ನು ಕರೆಯುವರು. ಹೀಗಾದಲ್ಲಿ ಮಾತ್ರ ನಿನ್ನ ವಧೆಗೆ ವಿಸ್ತರಿಸುವ ಈ ಧನಸ್ಸಿನ ಬಾಣವನ್ನು ಉಪಸಂಹರಿಸುವೆ ಎಂದನು.

*ಪೃಥವ್ಯುವಾಚ –*

**ಸರ್ವಮೇತದಹಂ ವೀರ ವಿಧಾಸ್ಯಾಮಿ ನ ಸಂಶಯಃ ।**
**ಉಪಾಯತಃ ಸಮಾರಬ್ಧಾಃ ಸರ್ವೇ ಸಿದ್ಧ್ಯಂತ್ಯುಪಕ್ರಮಾಃ ॥ 6 ॥**

**ಉಪಾಯಂ ಪಶ್ಯ ಯೇನ ತ್ವ ಧಾರಯೇಥಾಃ ಪ್ರಜಾಃ ಇಮಾಃ ।**
**ವತ್ಸಂ ತು ಮಮ ಸಂಪಶ್ಯ ಕ್ಷರೇಯಂ ಯೇನ ವತ್ಸಲಾ ॥ 7 ॥**

**ಸಮಾಂ ಚ ಕುರು ಸರ್ವತ್ರ ಮಾಂ ತ್ವಂ ಧರ್ಮಭೃತಾಂ ವರ ।**
**ಯಥಾ ವಿಷ್ಪಂದಮಾನಂ ಮೇ ಕ್ಷೀರಂ ಸರ್ವತ್ರ ಭಾವಯೇತ್ ॥ 8 ॥**

ಪೃಥುವಿನ ಈ ದೃಢ ನಿರ್ಧಾರದ ಮಾತುಗಳನ್ನು ಕೇಳದ ಧರೆಯು ಹೆದರಿ ಮಹಾರಾಜ ! ಉಪಾಯದಿಂದ ಮಾಡಿದರೆ ಸಕಲ ಕಾರ್ಯಗಳೂ ಕೈಗೂಡುತ್ತವೆ. ನಾನೊಂದು ಉಪಾಯ ಹೇಳುವೆ. ನಾನು ವೇನನ ದುರಾಚಾರದಿಂದ ನೊಂದು ಔಷಧಿ ವನಸ್ಪತಿಗಳೆಲ್ಲವನ್ನೂ ನಿನ್ನ ಪ್ರಜೆಗಳಗೆ ದೊರೆಯಲ ಎಂದು ನನ್ನ ಉದರದಲ್ಲಿ ಬಚ್ಚಿಟ್ಟಿದ್ದೆನು. ಅದು ನಿನಗೆ ದೊರೆಯಬೇಕಾದರೆ ಗೋ ರೂಪದಲ್ಲಿರುವ ನನಗೆ ಕರುಗಳನ್ನು ತಂದಾಗ ಕರುವಿಗಾಗಿ ಹಾಲಿನ ರೂಪದಿಂದ ನಿಮಗೆ ಸುರಿಸುವೆ. ನಿಮಗೆ ಬೇಕಾದ ವಸ್ತುಗಳೆಲ್ಲವೂ ಲಭಿಸುತ್ತವೆ. ಇದಕ್ಕಾಗಿ ನೀನು ಮೊದಲು ಕಾಡುಮೇಡು-ಗಳಂದ ತುಂಬಿ ತಗ್ಗು ದಿಣ್ಣೆಯಾಗಿರುವ ಭೂಮಿಯನ್ನು ನಿನ್ನ

ಬಿಲ್ಲುಬಾಣಗಳಿಂದ ಸಮವನ್ನಾಗಿ ಮಾಡು ಇದರಿಂದಾಗಿ ನಿಮಗೆ ಬೇಕಾದ ವಸ್ತುಗಳನ್ನು ಹಾಲಿನ ರೂಪದಲ್ಲಿ ಕರೆಯಲೂ ನನಗೆ ಅನುಕೂಲವಾಗುತ್ತದೆ ಎಂದಳು.

**ತತ ಉತ್ಸಾರಯಾಮಾಸ ಶೈಲಾನ್ ಶತಸಹಸ್ರಶಃ ।**
**ಧನುಷ್ಕೋಟ್ಯಾ ತದಾ ವೈನ್ಯಃ ತೇನ ಶೈಲಾ ವಿವರ್ಧಿತಾಃ ॥ 9 ॥**

ಭೂದೇವಿಯ ಮಾತನ್ನು ಕೇಳಿದ ಪೃಥುವು ತನ್ನ ಬಿಲ್ಲು ಬಾಣಗಳಿಂದ ನೆಲದ ತುಂಬ ವ್ಯಾಪಿಸಿರುವ ನೂರಾರು ಸಾವಿರಾರು ದಿಣ್ಣೆ ಗುಡ್ಡಗಳು ಹೆಬ್ಬಂಡೆಗಳನ್ನು ಸವರಿ ಸಮತಟ್ಟಾದ ವಿಸ್ತಾರವಾದ ಬಯಲು ಪ್ರದೇಶ ಮಾಡಿದನು. ಈ ಮೊದಲು ಭೂಮಂಡಲದಲ್ಲಿ ಸಣ್ಣ ಸಣ್ಣದಾದ ದೊಡ್ಡ ದೊಡ್ಡದಾದ ಹಳ್ಳ, ತಗ್ಗು ದಿಣ್ಣೆ ಗುಡ್ಡಗಳು ಅಡ್ಡಾದಿಡ್ಡಿ ಬೆಳೆದಿದ್ದವು. ಇದರಿಂದಾಗಿ ಗ್ರಾಮ-ನಗರ-ಊರುಗಳ ಬೆಳವಣಿಗೆಗೆ ಅವಕಾಶವಿರಲಿಲ್ಲ.

**ನ ಹಿ ಪೂರ್ವವಿಸರ್ಗೇ ವೈ ವಿಷಮೇ ಪೃಥಿವೀತಲೇ ।**
**ಪ್ರವಿಭಾಗಃ ಪುರಾಣಾಂ ಚ ಗ್ರಾಮಾಣಾಂ ಚ ತದಾಭವತ್ ॥ 10 ॥**
**ನ ಸಸ್ಯಾನಿ ನ ಗೋರಕ್ಷಾ ನ ಕೃಷಿಃ ನ ವಣಿಕ್‌ಪಥಃ ॥ 11 ॥**
**ವೈವಸ್ವತೇಽಂತರೇ ಚಾಸ್ಮಿನ್ ಸಾಂಪ್ರತಂ ಸಮುಪಸ್ಥಿತೇ ।**
**ವೈನ್ಯಾತ್ ಪ್ರಭೃತಿ ರಾಜೇಂದ್ರ ಸರ್ವಸ್ಯೈತಸ್ಯ ಸಂಭವಃ ॥ 12 ॥**

ಚಾಕ್ಷುಷ ಮನ್ವಂತರದಲ್ಲಿ ಭೂಮಿಯ ಸರ್ವತ್ರ ಹಳ್ಳದಿಣ್ಣೆಗಳಿಂದ ಕೂಡಿದ್ದವು. ಸಮಭೂಮಿ ಇಲ್ಲದೆ ಗ್ರಾಮ-ನಗರಗಳೆಂಬ ವಿಭಾಗವೇ ಇರಲಿಲ್ಲ. ಎಲ್ಲಿ ನೋಡಿದರೂ ಕಾಡುಗಳೇ ಬೀಡುಬಿಟ್ಟದ್ದರಿಂದ ನಾಡು ರೂಪಗೊಳ್ಳಲು ಅವಕಾಶವಿರಲಿಲ್ಲ. ಹೊಲಗದ್ದೆಗಳು ಇರಲಿಲ್ಲವಾದ್ದರಿಂದ ವ್ಯವಸಾಯವೂ ಪ್ರಾರಂಭವಾಗಿರಲಿಲ್ಲ. ವ್ಯಾಪಾರ ಉದ್ಯೋಗ ಬೆಳೆದಿರಲಿಲ್ಲ. ವ್ಯಾಪಾರಾದಿಗಳಿಗೆ ಬೇಕಾದ ಮಾರ್ಗಗಳಂತೂ ದೂರವೆ ಉಳಿದಿತ್ತು. ಗೋರಕ್ಷಣೆ, ಕೃಷಿ, ವ್ಯಾಪಾರ, ಉದ್ಯೋಗ ಪ್ರಾರಂಭವಾದದ್ದೇ ಈ ವೈವಸ್ವತ ಮನ್ವಂತರದಲ್ಲಿ ವೈನ್ಯನು ಬಿಲ್ಲುಬಾಣಗಳಿಂದ ಕಾಡುಗಳನ್ನು ಕಡಿದು, ಬಂಡೆಗಳನ್ನು ಒಡೆದು, ದಿಣ್ಣೆಗಳನ್ನು ಪುಡಿ ಮಾಡಿ, ಸಮ ಮಾಡಿದನು. ಇದರಿಂದಾಗಿ ದೊಡ್ಡ ದೊಡ್ಡ ಬಯಲು ಮೈದಾನಗಳಾಗಿ ಬೀಜಗಳನ್ನು ಬಿತ್ತಿ ಬೆಳೆಬೆಳೆಯುವುದು ಆರಂಭವಾಯಿತು.

**ಯತ್ರ ಯತ್ರ ಸಮಂ ತ್ವಸ್ಯಾ ಭೂಮೇರಾಸೀದಿಹಾನಘ ।**
**ತತ್ರ ತತ್ರ ಪ್ರಜಾಃ ಸರ್ವಾಃ ಸಂವಾಸಂ ಸಮರೋಚಯನ್ ॥ 13 ॥**

**ಆಹಾರಃ ಫಲ ಮೂಲಾನಿ ಪ್ರಜಾನಾಮಭವತ್ ತದಾ ।**
**ತೇನಾನ್ನೇನ ಪ್ರಜಾಸ್ತಾತ ವರ್ತಂತೇಽದ್ಯಾಪಿ ನಿತ್ಯಶಃ ॥ 14 ॥**

ವೈನ್ಯನಿಂದ ಸಮತಟ್ಟಾಗಿ ಮಾಡಲ್ಪಟ್ಟ ಭೂಮಿಯಲ್ಲಿ ಸಕಲ ಪ್ರಜೆಗಳೂ ವಾಸ ಮಾಡಲು ಪ್ರಾರಂಭಿಸಿದರು. ಜನರಿಗೆ ಬೇಕಾದ ಹಣ್ಣು, ಕಾಯಿ, ಕಂದಮೂಲಗಳು, ಧಾನ್ಯಗಳು ಆಹಾರಕ್ಕಾಗಿ ಲಭಿಸಿದವು. ಜನರು ದನಕರುಗಳನ್ನು ಕಟ್ಟಿಕೊಂಡು ಗ್ರಾಮಾರಾಮ ಮತ್ತು ನಗರಗಳನ್ನು ನಿರ್ಮಿಸಿ ವಾಸ ಮಾಡಿಕೊಂಡು. ಹೀಗೆ ಪೃಥುವು ಜನರಿಗೆ ವೃತ್ತಿಯನ್ನು ಕಲ್ಪಿಸಿಕೊಟ್ಟನು. ಈಗಲೂ ಅದೇ ವೃತ್ತಿಯಿಂದಲೇ ಜನರು ಜೀವಿಸಿಕೊಂಡಿರುವರು.

**ಸಂಕಲ್ಪಯಿತ್ವಾ ವತ್ಸಂ ತು ಮನುಂ ಸ್ವಾಯಂಭುವಂ ಪ್ರಭುಮ್ ।**
**ಸ್ವಪಾಣೌ ಪುರುಷಶ್ರೇಷ್ಠ ದುದೋಹ ಪೃಥಿವೀಂ ತತಃ ॥ 15 ॥**

### ಋಷಿಗಳ ದೋಹನ

**ಸಸ್ಯಜಾತಾನಿ ಸರ್ವಾಣಿ ಪೃಥುಃ ವೈನ್ಯಃ ಪ್ರತಾಪವಾನ್ ।**
**ಋಷಿಭಿಃ ಶ್ರೂಯತೇ ಚಾಪಿ ಪುನರ್ದುಗ್ಧಾ ವಸುಂಧರಾ ॥ 16 ॥**

**ವತ್ಸಃ ಸೋಮೋಽಭವತ್ ತೇಷಾಂ ದೋಗ್ಧಾ ಚಾಂಗಿರಸಃ ಸುತಃ ।**
**ಬೃಹಸ್ಪತಿಃ ಮಹಾತೇಜಾಃ ಪಾತ್ರಂ ಛಂದಾಂಸಿ ಭಾರತ ।**
**ಕ್ಷೀರಮಾಸೀದನುಪಮಂ ತಪೋ ಬ್ರಹ್ಮ ಚ ಶಾಶ್ವತಮ್ ॥ 17 ॥**

ಪೃಥುವು ಋಷಿಗಳಾದೇಶದಂತೆ ಮೊದಲು ಧಾರಿಣಿಯನ್ನು ಹಿಂಡಿಕೊಂಡನು. ಪೃಥುವೆ ಹಾಲು ಕರೆಯುವನು – ಸ್ವಾಯಂಭುವ ಮನುವೆ ಕರುವು – ಪೃಥುವಿನ ಹಸ್ತವೆ ಪಾತ್ರೆ – ಪ್ರಜೆಗಳು ಬದುಕುವ ಆಹಾರವಾದ ಅನ್ನವನ್ನೇ ಕರೆದುಕೊಂಡರು.

ಋಷಿಗಳೆಲ್ಲರೂ ಸೇರಿ ಗೋದೋಹನ ನಡೆಸಿದರು – ಇದರಲ್ಲಿ ಬೃಹಸ್ಪತಿಯು ದೋಗ್ಧಾರ – ಚಂದ್ರನೇ ಕರು – ವೇದವೆಂಬುದೆ ಪಾತ್ರೆ – ತಪೋರೂಪವಾದ ಹಾಲು ಹಿಂಡಿಕೊಂಡರು.

## ದೇವತೆಗಳ ಗೋದೋಹನ

ಪುನಃ ದೇವಗಣೈಸ್ಸರ್ವೈಃ ಪುರಂದರ ಪುರೋಗಮೈಃ ।
ಕಾಂಚನಂ ಪಾತ್ರಮಾದಾಯ ದುಗ್ಧೇಯಂ ಶ್ರೂಯತೇ ಮಹೀ ॥ 18 ॥

ವತ್ಸಸ್ತು ಮಘವಾನಾಸೀತ್ ದೋಗ್ಧಾ ಚ ಸವಿತಾ ಪ್ರಭುಃ ।
ಕ್ಷೀರಮೂರ್ಜಸ್ಕರಂ ಚೈವ ವರ್ತಂತೇ ಯೇನ ದೇವತಾಃ ॥ 19 ॥

ದೇವತೆಗಳೆಲ್ಲ ಸೇರಿ ದೋಹನ ಮಾಡಿದರು. ಇದರಲ್ಲಿ ಸೂರ್ಯನು ಹಾಲು ಕರೆಯುವವನು - ಇಂದ್ರ ದೇವನೆ ಕರುವು - ಬಂಗಾರದ ಪಾತ್ರೆ - ದೇವತೆಗಳ ಆಹಾರವಾದ ಅಮೃತವನ್ನೆ ಹಿಂಡಿಕೊಂಡರು.

### ಪಿತೃಗಳಿಂದ ದೋಹನ - ಸ್ವಧಾಕಾರ ಪ್ರಾಪ್ತಿ

ಪಿತೃಭಿಃ ಶ್ರೂಯತೇಚಾಪಿ ಪುನರ್ದುಗ್ಧಾ ವಸುಂಧರಾ ।
ರಾಜತಂ ಪಾತ್ರಮಾದಾಯ ಸ್ವಧಾಮ್ ಅಮಿತ ವಿಕ್ರಮಃ ॥ 20 ॥

ಯಮೋ ವೈವಸ್ವತಃ ತೇಷಾಮಾಸೀದ್ ವತ್ಸಃ ಪ್ರತಾಪವಾನ್ ।
ಅಂತಕಶ್ಚಾಭವದ್ ದೋಗ್ಧಾ ಕಾಲೋ ಲೋಕಪ್ರಕಾಲನಃ ॥ 21 ॥

ಪಿತೃಗಳೆಲ್ಲರೂ ಸೇರಿ ಭೂಮಿಯನ್ನು ಕರೆದರು - ಇದರಲ್ಲಿ ಮೃತ್ಯುದೇವತೆಯೇ ಧೋಧ್ಗಾರ - ಯಮಧರ್ಮನೇ ಕರುವು - ಹಾಲಿನ ಪಾತ್ರೆ - ಬೆಳ್ಳಿಯ ಪಾತ್ರೆ - ಪಿತೃದೇವತೆಗಳಗಾಗಿ ಹಿಂಡಿದ ಹಾಲೇ 'ಸ್ವಧಾಕಾರ'.

### ಸರ್ಪನಾಗಗಳಿಂದ ದೋಹನ - ವಿಷಪ್ರಾಪ್ತಿ

ನಾಗೈಶ್ಚ ಶ್ರೂಯತೇ ದುಗ್ಧಾ ವತ್ಸಂ ಕೃತ್ವಾ ತು ತಕ್ಷಕಮ್ ।
ಅಲಾಬುಂ ಪಾತ್ರ ಮಾದಾಯ ವಿಷಂ ಕ್ಷೀರಂ ನರೋತ್ತಮ ॥ 22 ॥

ತೇಷಾಮೈರಾವತೋ ದೋಗ್ಧಾ ಧೃತರಾಷ್ಟ್ರಃ ಪ್ರತಾಪವಾನ್ ।
ತೇನೈವ ವರ್ತಯಂತ್ಯೇತೇ ಮಹಾಕಾಯಾಃ ವಿಷೋಲ್ಬಣಾಃ ॥ 23 ॥

ನಂತರ ಸರ್ಪಗಳು ಹಾಗೂ ನಾಗಗಳು ಗೋ ರೂಪಧಾರಣೆಯನ್ನು ದೋಹನ ಮಾಡಿದರು.

ಹಾಲು ಕರೆಯುವವರು ನಾಗಗಳಲ್ಲಿ ಐರಾವತವೆಂಬ ಸರ್ಪ, ಸರ್ಪಗಳಿಗೆ ಹಾಲು ಕರೆಯುವವ ಧೃತರಾಷ್ಟ್ರನೆಂಬ ಸರ್ಪವು. ತಕ್ಷಕನು ಕರುವಾಗಿದ್ದನು, ಸೋರೆ ಬುರುಡೆ ಪಾತ್ರೆಯಾಗಿತ್ತು. ವಿಷರೂಪವಾದ ಹಾಲೇ ಅವರಿಗೆ ಲಭಿಸಿತು. ಅತಿಯಾದ ವಿಷವನ್ನು ದೊಡ್ಡ ದೊಡ್ಡ ಶರೀರವನ್ನು ಪಡೆದಿರುವ ಸರ್ಪಗಳು ಪಡೆದವು. ಈ ವಿಷದಿಂದಲೇ ಜೀವಿಸಿಕೊಂಡಿವೆ.

## ಅಸುರರಿಂದ ದೋಹನ

ಅಸುರೈಃ ಶ್ರೂಯತೇ ಚಾಪಿ ಪುನರ್ದುಗ್ಧಾ ವಸುಂಧರಾ ।
ಆಯಸಂ ಪಾತ್ರಮಾದಾಯ ಮಾಯಾಂ ಶತ್ರು ನಿಬರ್ಹಣೀಮ್ ॥ 24 ॥

ವಿರೋಚನಸ್ತು ಪ್ರಾಹ್ಲಾದಿಃ ವತ್ಸಸ್ತೇಷಾಮಭೂತ್ ತದಾ ।
ಋತ್ವಿಕ್ ದ್ವಿಮೂರ್ಧಾ ದೈತ್ಯಾನಾಂ ಮಧುರ್ದೋಗ್ಧಾ ಮಹಾಬಲಃ ॥ 25 ॥

ಅಸುರರು ಭೂಮಿಯನ್ನು ಕರೆದಾಗ ದೈತ್ಯರ ಋತ್ವಿಜರು, ಎರಡು ತಲೆವುಳ್ಳವನೂ, ಆದ ಮಧುವೆ ಹಾಲು ಕರೆಯುವವವನು – ಪ್ರಹ್ಲಾದನ ಪುತ್ರ ವಿರೋಚನನೆ ಕರುವು – ಕಬ್ಬಿಣದ ಪಾತ್ರೆ – ಶತು ಸಂಹಾರಕ ಮಯಾಶಕ್ತಿಯೆ ಹಾಲು.

## ಯಕ್ಷರಿಂದ ದೋಹನ – ಅಂತರ್ಧಾನ ಶಕ್ತಿ

ಯಕ್ಷೈಶ್ಚ ಶ್ರೂಯತೇ ತಾತ ಪುನರ್ದುಗ್ಧಾ ವಸುಂಧರಾ ।
ಆಮಪಾತ್ರೇ ಮಹಾರಾಜ ಪುರಾಂತರ್ಧಾನಮಕ್ಷಯಮ್ ॥ 26 ॥

ವತ್ಸಂ ವೈಶ್ರವಣಂ ಕೃತ್ವಾ ಯಕ್ಷೈಃ ಪುಣ್ಯಜನೈಸ್ತದಾ ।
ದೋಗ್ಧಾ ರಾಜತನಾಭಸ್ತು ಪಿತಾ ಮಣಿವರಸ್ಯ ಯಃ ॥ 26

ಯಕ್ಷರು ಭೂಮಿಯನ್ನು ಕರೆದರು – ಇದರಲ್ಲಿ ಮಣಿವರನೆಂಬುವನ ಪುತ್ರನಾದ ರಜತನಾಭನು ಹಾಲು ಕರೆದನು – ಕುಬೇರನೇ ಕರುವಾದನು – ಹಸೀಮಡಕೆಯು ಹಾಲಿನ ಪಾತ್ರೆಯಾಗಿತ್ತು. ಅಣಿಮಾದಿ ಅಷ್ಟಸಿದ್ಧಿಯ ಅಂತರ್ಧಾನ ಶಕ್ತಿಯೆಂಬ ಕ್ಷೀರ ಪಡೆದರು.

## ರಾಕ್ಷಸರಿಂದ ಗೋದೋಹನ– ರಕ್ತವೆ ಹಾಲು

ರಾಕ್ಷಸೈಶ್ಚ ಪಿಶಾಚೈಸ್ತು ಪುನರ್ದುಗ್ಧಾ ವಸುಂಧರಾ ।
ಶಾವಂ ಕಪಾಲಮಾದಾಯ ಪ್ರಜಾ ಭೋಕ್ತುಂ ನರರ್ಷಭ ॥ 27 ॥

**ದೋಗ್ಧಾ ರಜತನಾಭಸ್ತು ತೇಷಾಮಾಸೀತ್ ಕುರೂದ್ವಹ ।**
**ವತ್ಸಃ ಸುಮಾಲೀ ಕೌರವ್ಯ ಕ್ಷೀರಂ ರುಧಿರಮೇವ ಚ ॥ 28 ॥**

ರಾಕ್ಷಸರು – ಪಿಶಾಚಿಗಳೂ ದೋಹನ ನಡೆಸಿದವು.

ಹಾಲುಕರೆಯುವವ ಹಿಂದಿತ ರಜತನಾಭನೇ – ಸುಮಾಲಿಯು ಕರುವಾದನು – ಶವದ ತಲೆಬುರುಡೆಯ ಹಾಲಿನ ಪಾತ್ರೆಯಾಗಿತ್ತು – ರಕ್ತವೇ ಹಾಲಾಗಿತ್ತು.

## ಗಂಧರ್ವರ ದೋಹನ – ಸುಗಂಧಪ್ರಾಪ್ತಿ

**ಪದ್ಮಪತ್ರೇ ಪುನರ್ದುಗ್ಧಾ ಗಂಧರ್ವೈಃ ಸಾಪ್ಸರೋಗಣೈಃ ।**
**ವತ್ಸಂ ಚಿತ್ರರಥಂ ಕೃತ್ವಾ ಶುಚೀನ್ ಗಂಧಾನ್ ನರರ್ಷಭ ॥ 29 ॥**

**ತೇಷಾಂ ಚ ಸುರುಚಿಸ್ತ್ವಾಸೀದ್ ದೋಗ್ಧಾ ಭರತ ಸತ್ತಮ ।**
**ಗಂಧರ್ವರಾಜೋऽತಿಬಲೋ ಮಹಾತ್ಮಾ ಸೂರ್ಯಸಂನಿಭಃ ॥ 30 ॥**

ಗಂಧರ್ವರು ಗೋದೋಹನ ಮಾಡಿದರು – ಸುರಚಿಯು ಹಾಲು ಕರೆಯುವವನಾಗಿಯೂ, ಚಿತ್ರರಥನನ್ನು ಕರುವನ್ನಾಗಿಯೂ, ಪದ್ಮದ ಎಲೆಯನ್ನು ಪಾತ್ರೆಯನ್ನಾಗಿ ಮಾಡಿ ಶುಚಿಯಾದ ಸುಗಂಧವನ್ನೆ ಹಾಲಿನ ರೂಪದಲ್ಲಿ ಪಡೆದರು.

## ಪರ್ವತಗಳ ದೋಹನ

**ಶೈಲೈಶ್ಚ ಶ್ರೂಯತೇ ರಾಜನ್ ಪುನರ್ದುಗ್ಧಾ ವಸುಂಧರಾ ।**
**ಓಷಧೀರ್ವೈ ಮೂರ್ತಿಮತೀ ರತ್ನಾನಿ ವಿವಿಧಾನಿ ಚ ॥ 31 ॥**

**ವತ್ಸಸ್ತು ಹಿಮವಾನಾಸೀತ್ ಮೇರುಃ ದೋಗ್ಧಾ ಮಹಾಗಿರಿಃ ।**
**ಪಾತ್ರಂ ತು ಶೈಲಮೇವಾಸೀತ್ ತೇನ ಶೈಲಾ ವಿವರ್ಧಿತಾಃ ॥ 32 ॥**

ಪರ್ವತಗಳೆಲ್ಲವೂ ಗೋದೋಹನ ನಡೆಸಿದವು. ಮೇರುಪರ್ವತವು ದೋಗ್ಧಾರನು, ಹಿಮಾಲಯನು ಕರುವೂ, ಕಲ್ಲಿನ ಪಾತ್ರೆಯನ್ನು ಹಿಡಿದು ಮೂರ್ತಿಮತ್ತಾದಿ ಓಷಧಿ ಲತೆಗಳನ್ನು ವಿಧವಿಧರತ್ನಗೈರಿಕಾದಿಧಾತುಗಳನ್ನೂ ಹಾಲಿನ ರೂಪದಲ್ಲಿ ಪಡೆದವು.

**ಪಾಲಾಶಂ ಪಾತ್ರ ಮಾದಾಯ ದಗ್ಧಭಿನ್ನ ಪ್ರರೋಹಣಮ್ ।**

ಮುಂದೆ ವೃಕ್ಷಗಳೆಲ್ಲವೂ ಸಾಲವೃಕ್ಷವನ್ನು ಕರೆಯುವವನ್ನಾಗಿಯೂ, ಪ್ಲಕ್ಷವೃಕ್ಷವನ್ನು ಕರುವನ್ನಾಗಿಯೂ, ಮುತ್ತುಗದೆಲೆಯನ್ನು ಪಾತ್ರೆ ಮಾಡಿ ಸುಟ್ಟರೂ, ಕತ್ತರಿಸಿದರೂ, ಪುನಃ ಚಿಗುರುವಂತೆ ಮಾಡುವ ಹಾಲನ್ನು ಪಡೆದರು.

ಈ ಭೂಮಿಯು ಜಗತ್ತಿನ ಸಕಲ ಪ್ರಾಣಿ ಸಮೂಹಕ್ಕೆ ಧಾತ್ರಿಯು ವಿಧಾತ್ರಿಯೂ ಪವಿತ್ರಳೂ ಆದಳು. ಇವಳೇ ಸಕಲ ಚರಾಚರ ಪ್ರಾಣಿಗಳಿಗೆ ಆಶ್ರಯ, ಉತ್ಪತ್ತಿ ಸ್ಥಾನಳಾಗಿರುವಳು. ಸಕಲ ಕಾಮನೆಗಳನ್ನು ಪೂರೈಸುವ ಕಾಮಧೇನುವೇ ಆಗಿರುವಳು.

**ಆಸೀದಿಯಂ ಸಮುದ್ರಾಂತಾ ಮೇದಿನೀತಿ ಪರಿಶ್ರುತಾ ।**
**ಮಧುಕೈಟಭಯೋಃ ಕೃತ್ಸ್ನಾ ಮೇದಸಾಭಿಪರಿಪ್ಲುತಾ ॥ 33 ॥**
**ತೇನೇಯಂ ಮೇದಿನೀ ದೇವೀ ಪ್ರೋಚ್ಯತೇ ಬ್ರಹ್ಮವಾದಿಭಿಃ ।**
**ದುಹಿತೃತ್ವಮನುಪ್ರಾಪ್ತಾ ದೇವೀ ಪೃಥ್ವೀತಿ ಚೋಚ್ಯತೇ ॥ 34 ॥**

ಹಿಂದೆ ಭೂಮಿಯು ತನ್ನ ಕಕ್ಷೆಯಿಂದ ತಾನಾಗಿಯೇ ಕಳಚಿಕೊಂಡು ಸಮುದ್ರತಳ ಸೇರಿತು. ವರಾಹನು ಭೂಮ್ಯುದ್ಧಾರದಲ್ಲಿ ತೊಡಗಿದ್ದಾಗ ಮಧು–ಕೈಟಭರು ಯುದ್ಧಕ್ಕೆ ಬಂದರು. ಶ್ರೀಹರಿಯು ಅವರನ್ನು ಕೊಂದು ಹಾಕಿದ. ಅವರ ಮೇದಸ್ಸನ್ನು ತೆಗೆದು ಭೂಮಿಗೆ ಸೇರಿಸಿ ಯಥಾಸ್ಥಾನ ಕಕ್ಷೆಯಲ್ಲಿರಿಸಿದ. ಸಮುದ್ರಪರ್ಯಂತವಿರುವ ಭೂಮಿಪೂರ್ತಿಯಾಗಿ ಮೇಧಸ್ಸಿನಿಂದಾದ ಈ ಭೂಭಾಗವನ್ನು 'ಮೇದಿನೀ' ಎಂದು ಕರೆದರು. ನಂತರ ಪೃಥುರಾಜನಿಗೆ ಧರ್ಮದಿಂದ ಮಗಳಾದದ್ದರಿಂದ, ಅವನಿಗೆ ಅತ್ಯಂತ ಪ್ರೀತಿಪಾತ್ರಳೂ ಆಗಿದ್ದರಿಂದಲೂ ಈಗಿರುವ ರೂಪ ಭೂಮಿಗೆ ಬರಲು ಪೃಥುವೆ ಕಾರಣವಾದ್ದರಿಂದಲೂ 'ಪೃಥ್ವೀ' ಎನ್ನುವರು. ಈ ಭೂಮಿಯನ್ನು ಅನೇಕ ಭಾಗಗಳಾಗಿ ಮಾಡಿದನು. ಗ್ರಾಮ ನಗರಗಳಿಂದ ಸುಶೋಭಿತಳನ್ನಾಗಿ ಮಾಡಿದ ಪೃಥುವು ಮಹಾಸಾಮರ್ಥ್ಯಶಾಲಿಯು.

## ಸರ್ವರಿಂದಲೂ ಪೂಜ್ಯಪೃಥು

**ನಮಸ್ಯಶ್ಚೈವ ಪೂಜ್ಯಶ್ಚ ಭೂತಗ್ರಾಮೈಃ ನ ಸಂಶಯಃ ।**
**ಬ್ರಾಹ್ಮಣೈಶ್ಚ ಮಹಾಭಾಗೈಃ ವೇದವೇದಾಂಗ ಪಾರಗೈಃ ॥ 35 ॥**

ಪೃಥುರೇವ ನಮಸ್ಕಾರ್ಯೋ ಬ್ರಹ್ಮಯೋನಿಃ ಸನಾತನಃ ॥ 36 ॥

ಇಂತಹ ಅಪಾರಮಹಿಮನಾದ ಪೃಥುವನ್ನು ಸಮಸ್ತ ಪ್ರಾಣಿಗಳೂ ಪೂಜಿಸಲೇಬೇಕು. ನಮಸ್ಕರಿಸಬೇಕು. ಮಹಾಭಾಗ್ಯವಂತರೆಂದು ಖ್ಯಾತಿ ಪಡೆದ ಬ್ರಾಹ್ಮಣರು ಸಹ ರಾಜರಾಜೇಶ್ವರ ರೂಪವಿರುವ ಅತ್ರಿವಂಶದಲ್ಲಿಯ ಹುಟ್ಟಿದ ಪೃಥುವನ್ನು ನಮಸ್ಕರಿಸಬೇಕು.

ಪಾರ್ಥಿವೈಶ್ಚ ಮಹಾಭಾಗೈಃ ಪಾರ್ಥಿವತ್ವಮಭೀಪ್ಸುಭಿಃ ।
ಆದಿರಾಜೋ ನಮಸ್ಕಾರ್ಯಃ ಯೋಧಾನಾಂ ಪ್ರಥಮೋನೃಪಃ ॥ 37 ॥
ಯೋ ಯೋದ್ಧಾ ರಣಂ ಯಾತಿ ಕೀರ್ತಯಿತ್ವಾ ಪೃಥುಂ ನೃಪಮ್ ।
ಸ ಘೋರರೂಪಾನ್ ಸಂಗ್ರಾಮಾನ್ ಕ್ಷೇಮೀ ತರತಿ ಕೀರ್ತಿಮಾನ್ ॥38॥
ವೈಶ್ಯೈರಪಿ ಚ ವಿತ್ತಾಢ್ಯೈಃ ಪುಣ್ಯವೃತ್ತಿಮನುಷ್ಠಿತೈಃ ।
ಪೃಥುರೇವ ನಮಸ್ಕಾರ್ಯೋ ವೃತ್ತಿದಾತಾ ಮಹಾಯಶಾಃ ॥ 39 ॥
ತಥೈವ ಶೂದ್ರೈಃ ಶುಚಿಭಿಃ ತ್ರಿವರ್ಣಪರಿಚಾರಿಭಿಃ ।
ಆದಿರಾಜೋ ನಮಸ್ಕಾರ್ಯೋ ಶ್ರೇಯಃ ಪರಮಭೀಪ್ಸುಭಿಃ ॥ 40 ॥
ಯ ಇದಂ ಶೃಣುಯಾನ್ನಿತ್ಯಂ ಪೃಥೋಶ್ಚರಿತಮಾದಿತಃ ।
ಪುತ್ರಪೌತ್ರ ಸಮಾಯುಕ್ತೋ ಮೋದತೇ ಸುಚಿರಂ ಭುವಿ ॥ 41 ॥

ಪ್ರತಿಯೊಬ್ಬರೂ ಆದಿರಾಜನಾದ ಪೃಥುವನ್ನು ನಮಸ್ಕರಿಸಬೇಕು. ಪೃಥ್ವಿ ಸ್ವಾಮಿತ್ವ ಬಯಸುವ ಮಹಾಭಾಗರಾದ ರಾಜರುಗಳು, ಯುದ್ಧದಲ್ಲಿ ಜಯಗಳಿಸಲಿಚ್ಛಿಸುವ ಪರಾಕ್ರಮಿ ಯೋಧರುಗಳು ಪ್ರಥಮಯೋಧನೆನಿಸಿದ ಪೃಥುವನ್ನು ಕೀರ್ತಿಸಲೇಬೇಕು.

ಯಾವ ಯೋಧನು ಸಂಗ್ರಾಮದಲ್ಲಿ ಪೃಥುರಾಜನನ್ನು ಕೀರ್ತಿಸಿ ಯುದ್ಧಕ್ಕೆ ತೊಡಗುವನೋ ಅವನು ಸೇನಾಸಾಗರವನ್ನು ಅನಾಯಾಸವಾಗಿ ದಾಟುವನು ಜಯಶಾಲಿಯಾಗಿ ಕೀರ್ತಿ ಹೊಂದುವನು.

ವ್ಯಾಪಾರಸಕ್ತರಾದ ಧನಿಕರಾದ ವೈಶ್ಯರೂ ಪೃಥುವನ್ನು ಪ್ರತಿದಿನವೂ

ನಮಸ್ಕರಿಸಬೇಕು. ಪ್ರತಿಯೊಬ್ಬರಿಗೂ ಯೋಗ್ಯವಾದ ವೃತ್ತಿಯನ್ನು ಕಲ್ಪಿಸುವವನು ಪೃಥುರಾಜನಷ್ಟೇ?

ಶೂದ್ರಾದಿಗಳು ತ್ರೈವರ್ಣಿಕರ ಸೇವೆ ಮಾಡುತ್ತಲೇ ಮಂಗಳವಾಗಲು ರಾಜರಲ್ಲಿ ಪ್ರಥಮಿಗನಾದ ಆದಿರಾಜನನ್ನು ಪೂಜಿಸಲೇಬೇಕು.

ಈ ಪೃಥು ಚರಿತ್ರೆಯನ್ನು ನಿತ್ಯವೂ ಶ್ರವಣ ಮಾಡುವವರಿಗೆ ಪುತ್ರ-ಪೌತ್ರಾದಿ ವೃದ್ಧಿವುಂಟಾಗಿ ಬಹುಕಾಲ ಸುಖಿಸುವರು.

**ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ**
**ಗೋದೋಹನೇ ಪೃಥೂಪಾಖ್ಯಾನೇವೆಂಬಲ್ಲಿ**
**ಆರನೆಯ ಅಧ್ಯಾಯವು**
**॥ ಶ್ರೀಕೃಷ್ಣಾರ್ಪಣಮಸ್ತು ॥**

# ಅಥ ಸಪ್ತಮೋಽಧ್ಯಾಯಃ

## ಮನ್ವಂತರ – ಮನು – ಋಷಿಗಳು

*ಜನಮೇಜಯ ಉವಾಚ–*

**ಮನ್ವಂತರಾಣಿ ಸರ್ವಾಣಿ ವಿಸ್ತರೇಣ ತಪೋಧನ ।**
**ತೇಷಾಂ ಸೃಷ್ಟಿಂ ವಿಸೃಷ್ಟಿಂ ಚ ವೈಶಂಪಾಯನ ಕೀರ್ತಯ ॥ 1 ॥**

**ಯಾವಂತೋ ಮನವಶ್ಚೈವ ಯಾವಂತಂ ಕಾಲಮೇವ ಚ ।**
**ಮನ್ವಂತರಂ ತಥಾ ಬ್ರಹ್ಮನ್ ಶ್ರೋತುಮಿಚ್ಛಾಮಿ ತತ್ತ್ವತಃ ॥ 2 ॥**

ಜನಮೇಜಯರಾಜನು ವೈಶಂಪಾಯರನ್ನು ಕುರಿತು ಗುರುಗಳೇ, ನಾನು ನಿಮ್ಮಿಂದ ಎಲ್ಲಾ ಮನ್ವಂತರಗಳನ್ನೂ ತಿಳಿಯಬೇಕೆಂದಿದ್ದೇನೆ. ಮನ್ವಂತರಗಳೆಷ್ಟು? ಒಂದೊಂದು ಮನ್ವಂತರಕ್ಕೆ ಕಾಲ ಪ್ರಮಾಣವೇನು? ಮನ್ವಂತರಕ್ಕೆ ಯಾರು ಒಡೆಯರು? ಎಷ್ಟು ಮಂದಿ ಮನುಗಳಿರುವರು? ಪ್ರತಿ ಮನ್ವಂತರದಲ್ಲಿ ಇಂದ್ರರು ಯಾರು? ಇವೆಲ್ಲ ತಿಳಿಯಬೇಕೆಂದಿದ್ದೇನೆ ಅದನ್ನು ತಿಳಿಸಿರಿ ಎಂದನು.

*ವೈಶಂಪಾಯನ ಉವಾಚ –*

**ನ ಶಕ್ಯಃ ವಿಸ್ತರಸ್ತಾತ ವಕ್ತುಂ ವರ್ಷಶತೈರಪಿ ।**
**ಮನ್ವಂತರಾಣಾಂ ಕೌರವ್ಯ ಸಂಕ್ಷೇಪಂ ತ್ವೇವ ಮೇ ಶೃಣು ॥ 3 ॥**

ರಾಜನೇ, ಮನ್ವಂತರಗಳನ್ನು ವಿಸ್ತಾರವಾಗಿ ಹೇಳಲು ನಮ್ಮ ನೂರು ವರ್ಷಗಳೂ ಸಾಕಾಗದು. ಆದರೂ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು.

## ಹದಿನಾಲು ಮನ್ವಂತರ

ಸ್ವಾಯಂಭುವೋ ಮನುಸ್ತಾತ ಮನುಃ ಸ್ವಾರೋಚಿಷಸ್ತಥಾ ।
ಉತ್ತಮಃ ತಾಪಸಶ್ಚೈವ ರೈವತಃ ಚಾಕ್ಷುಷ ಸ್ತಥಾ ॥ 4 ॥

ವೈವಸ್ವತಶ್ಚ ಕೌರವ್ಯ ಸಾಂಪ್ರತೋ ಮನುರುಚ್ಯತೇ ।
ಸಾವರ್ಣಿಶ್ಚ ಮನುಸ್ತಾತ ಭೌತ್ಯೋ ರೌಚ್ಯಸ್ತಥೈವ ಚ ॥ 5 ॥

ತಥೈವ ಮೇರು ಸಾವರ್ಣಾಃ ಚತ್ವಾರೋ ಮನವಃ ಸ್ಮೃತಾಃ ।
ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ ॥ 6 ॥

ಋಷೀಂಸ್ತೇಷಾಂ ಪ್ರವಕ್ಷ್ಯಾಮಿ ಪುತ್ರಾನ್ ದೇವಗಣಾಂಸ್ತಥಾ ॥ 7 ॥

ಕೌರವನೇ – 1) ಸ್ವಾಯಂಭುವ, 2) ಸ್ವಾರೋಚಿಷ, 3) ಉತ್ತಮ, 4) ತಾಪಸ, 5) ರೈವತ, 6) ಚಾಕ್ಷುಷ, 7) ವೈವಸ್ವತ, 8) ಸಾವರ್ಣಿ, 9) ಭೌತ್ಯ, 10) ರೌಚ್ಯ, 11) ಬ್ರಹ್ಮಸಾವರ್ಣಿ, 12) ರುದ್ರ ಸಾವರ್ಣಿ, 13) ಮೇರು ಸಾವರ್ಣಿ, 14) ದಕ್ಷ ಸಾವರ್ಣಿ ಹೀಗೆ ಹದಿನಾಲ್ಕು ಮನ್ವಂತರಗಳಿವೆ. ಇವುಗಳಲ್ಲಿ ಮೊದಲಿನ ಆರು ಮನ್ವಂತರ ಕಳೆದು ಹೋಗಿದೆ. ಈಗ ನಡೆಯುತ್ತಿರುವುದು ವೈವಸ್ವತ ಮನ್ವಂತರ. ಪ್ರತಿ ಮನ್ವಂತರದಲ್ಲಿಯೂ ಮನುಗಳು– ಮನುಪುತ್ರರು – ಇಂದ್ರರು – ಸಪ್ತರ್ಷಿಗಳೂ ಬೇರೆ ಬೇರೆಯಾಗಿಯೇ ಇರುತ್ತಾರೆ. ಅವರೆಲ್ಲರನ್ನೂ ಹೇಳುವೆ. ಸಾವರ್ಣಿ– ದಕ್ಷ – ಬ್ರಹ್ಮ – ಧರ್ಮ – ರುದ್ರ – ದೇವ – ಇಂದ್ರ ಹೀಗೂ ಹೇಳುವರು.

## 1. ಸ್ವಾಯಂಭುವ ಮನ್ವಂತರ

ಮರೀಚಿರತ್ರಿ ರ್ಭಗವಾನಂಗಿರಾಃ ಪುಲಹಃ ಕ್ರತುಃ ।
ಪುಲಸ್ತ್ಯಶ್ಚ ವಶಿಷ್ಠಶ್ಚ ಸಪ್ತೈತೇ ಬ್ರಹ್ಮಣಃ ಸುತಾಃ ॥ 8 ॥

ಉತ್ತರಸ್ಯಾಂ ದಿಶಿ ತಥಾ ರಾಜನ್ ಸಪ್ತರ್ಷಯೋಽಪರೇ ।
ದೇವಾಶ್ಚ ಶಾಂತರಜಸಸ್ತಥಾ ಪ್ರಕೃತಯಃ ಪರೇ ॥ 9 ॥

ಯಾಮಾ ನಾಮ ತಥಾ ದೇವಾಃ ಆಸನ್ ಸ್ವಾಯಂಭುವೇಂತರೇ ।
ಆಗ್ನೀಧ್ರಶ್ಚಾಗ್ನಿಬಾಹುಶ್ಚ ಮೇಧಾಃ ಮೇಧಾತಿಥಿರ್ವಸುಃ ॥ 10 ॥

**ಜ್ಯೋತಿಷ್ಮಾನ್ ದ್ಯುತಿಮಾನ್ ಹವ್ಯಃ ಸವನಃ ಪುತ್ರ ಏವ ಚ ।**
**ಮನೋಃ ಸ್ವಾಯಂಭುವಸ್ಯೈತೇ ದಶಪುತ್ರಾಃ ಮಹೌಜಸಃ ॥ 11 ॥**

ರಾಜನೇ ಸ್ವಾಯಂಭುವವೆಂಬ ಮೊದಲನೆಯ ಮನ್ವಂತರದಲ್ಲಿ 'ಮರೀಚಿ, ಅತ್ರಿ, ಅಂಗೀರಸ, ಪುಲಹ, ಪುಲಸ್ತ್ಯ, ಕ್ರತು, ವಶಿಷ್ಠ ಬ್ರಹ್ಮ ಮಾನಸಪುತ್ರರು ಸಪ್ತರ್ಷಿಗಳೆನಿಸುವರು.

ಸ್ವಾಯಂಭುವದಲ್ಲಿ ಯಾಮ ಎಂಬ ದೇವತಾಗಣವಿತ್ತು. ಸ್ವಾಯಂಭುವ ಮನುವಿಗೆ ಆಗ್ನೀಧ್ರ, ಅಗ್ನಿಬಾಹು, ಮೇಧಾ, ಮೇಧಾತಿಥಿ, ವಸು, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯ, ಸವನ ಹಾಗೂ ಪುತ್ರ ಹತ್ತು ಮಂದಿ ಮನುಪುತ್ರರು. ಯಜ್ಞನೆಂಬ ಭಗವಂತನೇ ಇಂದ್ರಪದವಿಯನ್ನಾಳಿದನು.

## 2. ಸ್ವಾರೋಚಿಷ ಮನ್ವಂತರ

**ಔರ್ವೋ ವಸಿಷ್ಠ ಪುತ್ರಶ್ಚ ಸ್ತಂಬಃ ಕಾಶ್ಯಪ ಏವ ಚ ।**
**ಪ್ರಾಣಾ ಬೃಹತಿಸ್ಪಶ್ಚೈವ ದತ್ತೋ ನಿಶ್ಚ್ಯವನಸ್ತಥಾ ॥ 12 ॥**
**ಏತೇ ಮಹರ್ಷಯಸ್ತಾತ ವಾಯುಪ್ರೋಕ್ತಾ ಮಹಾವ್ರತಾಃ ।**
**ದೇವಾಶ್ಚ ತುಷಿತಾ ನಾಮ ಸ್ಮೃತಾಃ ಸ್ವಾರೋಚಿಷೇಽಂತರೇ ॥ 13 ॥**
**ಹವಿರ್ಧ್ನಃ ಸುಕೃತಿರ್ಜ್ಯೋತಿರಾಪೋ ಮೂರ್ತಿರಯಸ್ಮಯಃ ।**
**ಪ್ರಥಿತಶ್ಚ ನಭಸ್ಯಶ್ಚ ನಭ ಊರ್ಜಸ್ತಥೈವ ಚ ।**
**ಸ್ವಾರೋಚಿಷಸ್ಯ ಪುತ್ರಾಸ್ತೇ ಮನೋಸ್ತಾತ ಮಹಾತ್ಮನಃ ॥ 14 ॥**

ಸ್ವಾರೋಚಿಷದಲ್ಲಿ ವಸಿಷ್ಠಪುತ್ರ ಔರ್ವ – ಸ್ತಂಬ – ಕಾಶ್ಯಪ – ಪ್ರಾಣ – ಬೃಹಸ್ಪತಿ – ದತ್ತ – ನಿಶ್ಚ್ಯವನರೆಂದು ಸಪ್ತಷಿಗಳು. ಈ ಮನ್ವಂತರದ ದೇವತೆಗಳಿಗೆ 'ತುಷಿತ'ರೆಂದು ಹೆಸರು. ಹವಿರ್ಧ್ನ (ಹವಿಘ್ನ) – ಸುಕೃತಿ – ಜ್ಯೋತಿಷ್ – ಆಪದೇವ – ಮೂರ್ತಿ – ಆಯಸ್ಮಯ – ಪ್ರಥಿತ (ಪ್ರತೀತ) – ನಭಸ್ಯ – ನಭಸ್ – ಊರ್ಜಸ್ಮೃತ ಎಂಬ ಹತ್ತು ಮಂದಿ ಮನುಪುತ್ರರು. ಸ್ವಾರೊಚಿಷನು ಅಗ್ನಿಪುತ್ರನು. ವೇದಶಿರಾ ಎಂಬ ಋಷಿಗೆ ತುಷಿತಾ ಎಂಬ ಪತ್ನಿಯಲ್ಲಿ ವಾಯುದೇವನೇ 'ರೋಚನ' ನಾಮಕನಾಗಿ ಅವತರಿಸಿ, ಇಂದ್ರ ಪದವಿಯನ್ನಾಳಿದನು. ಇವನ ತಮ್ಮನಾಗಿ ಉಪೇಂದ್ರನು ನಾರಾಯಣನೇ ಆಗಿರುವನು. ತುಷಿತರು ದೇವತಾಸ್ಥಾನ ಅಲಂಕರಿಸಿದರು.

## 3. ಉತ್ತಮ ಮನ್ವಂತರ

**ವಸಿಷ್ಠಃಪುತ್ರಾಃ ಸಪ್ತಾಸನ್ ವಾಸಿಷ್ಠಾ ಇತಿ ವಿಶ್ರುತಾಃ ।**
**ಹಿರಣ್ಯಗರ್ಭಸ್ಯ ಸುತಾ ಊರ್ಜಾ ನಾಮ ಸುತೇಜಸಃ ॥ 15 ॥**
**ಔತ್ತಮೇಯಾನ್ ಮಹಾರಾಜ ದಶಪುತ್ರಾನ್ ಮನೋರಮಾನ್ ॥ 16 ॥**

ಮೂರನೇ ಮನ್ವಂತರಾಧಿಪತಿ ಉತ್ತಮನೆಂಬುವನು ವಿಷ್ಣು ವಕ್ಷಸ್‌ನಿಂದ ಜನಿಸಿದ ಯಮಧರ್ಮನೆ ಸತ್ಯಜಿನ್ನಾಮಕ ಇಂದ್ರನಾದನು. ಅದೇ ಯಮಧರ್ಮನಿಂದ ಸೂನೃತಾದೇವಿಯಲ್ಲಿ 'ಸತ್ಯಸೇನ' ಎಂಬ ಭಗವಂತನು ಅವತರಿಸಿದನು. ವಸಿಷ್ಠನಾಮಕ ಸುತಪಸ್ಸಿಗೆ ಹಿರಣ್ಯಗರ್ಭನ ಮಗಳಾದ ಊರ್ಜಾದೇವಿಯಲ್ಲಿ ಹತ್ತು ಮಕ್ಕಳಾದರು ಅವರುಗಳೆಂದರೆ ಇಷ – ಊರ್ಜ – ತನೂಜ – ಮಧು – ಮಾಧವ – ಶುಚಿ – ಶುಕ್ರ – ಸಹಸ್ವಾನ್ – ನಭಸ್ಯ – ನಭಸ್ ಇವರೆ ದಶಮನುಪುತ್ರರು. ಭಾನು ಎಂಬ ದೇವತೆಗಳ ಗುಂಪು ಆ ಮನ್ವಂತರದ ದೇವತೆಗಳಾಗಿದ್ದರು. ಹನ್ನೆರಡು ದೇವತೆಗಳಾದ ಸುಧಾಮ, ಸತ್ಯ, ಜಪ, ಪ್ರತರ್ದನ, ವಶವರ್ತಿ ಎಂಬ ಐದು ಗುಂಪು ದೇವತಾ ಕಾರ್ಯ ನಿರ್ವಹಿಸುತ್ತಾರೆ. ಸತ್ಯಸೇನ ಶ್ರೀಹರಿಯು ಶುಂಭ, ದಾರುಣ, ವಿಂದರೆಂಬ ದೈತ್ಯರಿಂದ ತೊಂದರೆಗೀಡಾದ ಇಂದ್ರನನ್ನು ರಕ್ಷಿಸಿ ಇವರನ್ನು ಸಂಹರಿಸಿದನು. ಮೂರನೇ ಮನ್ವಂತರದಲ್ಲಿ ಬ್ರಹ್ಮದೇವರ ಮಕ್ಕಳಾದ ಊರ್ಜರೆಂಬ ಋಷಿಗಳೂ ವಸಿಷ್ಠರ ಮಕ್ಕಳೂ ಸಪ್ತರ್ಷಿ ಪದವಿಯಲ್ಲಿದ್ದರು. ಪ್ರಮದ, ವಿಮದ, ಶಕ್ತಿ ಮೊದಲಾದವರು.

## 4. ತಾಪಸ ಮನ್ವಂತರ

**ಕಾವ್ಯಃ ಪೃಥುಃ ತಥೈವಾಗ್ನಿಃ ಜನುರ್ಧಾತಾ ಚ ಭಾರತ ।**
**ಕಪೀವಾನ್ ಅಕಪೀವಾನ್ ಚ ತತ್ರ ಸಪ್ತರ್ಷಯೋಽಪರೇ ॥ 17 ॥**
**ಸತ್ಯಾದೇವಗಣಾಶ್ಚೈವ ತಾಮಸಸ್ಯಾಂತರೇ ಮನೋಃ ।**
**ದ್ಯುತಿಸ್ತಪಸ್ಯಃ ಸುತಪಾಃ ತಪೋಮೂಲಃ ತಪೋಧನಃ ॥ 18 ॥**
**ತಪೋರತಿಃ ಅಕಲ್ಮಾಷಃ ತಪಸ್ವೀ ಧನ್ವೀ ಪರಂತಪಃ ।**
**ತಾಮಸಸ್ಯ ಮನೋರೇತೇ ದಶಪುತ್ರಾಃ ಮಹಾಬಲಾಃ ॥ 19 ॥**

ತಾಪಸ ಮನುವು ಸಾಕ್ಷಾತ್ ನಾರಾಯಣಾವತಾರಿಯು. ಉತ್ತಮನ ತಮ್ಮನು. ಕ್ರೀಡೆಗಾಗಿ ಮನುಪದವಿಗೆ ಬಂದವನು. ಈ ತಾಪಸ ಮನ್ವಂತರದಲ್ಲಿ

ಹರಿಮೇಧಾ – ಹರಿಣಿಯರೆಂಬ ಋಷಿ ದಂಪತಿಗಳಿಂದ 'ಹರಿ'ಯೇ ಚಕ್ರದಿಂದ ನಕ್ರವನ್ನು ಕತ್ತರಿಸಿ ಗಜೇಂದ್ರನನ್ನು ಮುಕ್ತಗೊಳಿಸಿದ್ದು.

ವಿಶಿಖಾ ನಾಮದಿಂದ ಅಶ್ವಿನೀದೇವತೆಗಳೇ ಇಂದ್ರರಾಗಿದ್ದರು. ಹರಿ, ವೀರ, ಮೊದಲಾದವರು ದೇವತೆಗಳು. ಇವರು ವಿಧೃತಿಯ ಮಕ್ಕಳಾದ್ದರಿಂದ 'ವೈಧೃತ'ನಾಮಕರು. ವೇದಗಳನ್ನು ಧರಿಸಿದ ಇವರಿಗೆ ವೈಧೃತವೆಂದು ನಾಮವು. ಸತ್ಯರೆಂದು ಶಕ್ತಿಮಂತರೆಂದೂ ನಾಮಾಂತರಗಳವೆ.

ಈ ಮನ್ವಂತರದಲ್ಲಿ ಕಾವ್ಯ, ಪೃಥು, ಅಗ್ನಿ, ಜನ್ಯು, ಧಾತಾ, ಕಪೀವಂತ, ಅಕಪೀವಂತರೆಂಬುವರು ಸಪ್ತರ್ಷಿಗಳು. ಮನುಪುತ್ರರು ಹೀಗಿರುವರು. ದ್ಯುತಿ, ತಪಸ್ಯ, ಸುತಪಸ, ತಪೋಮೂಲ, ತಪೋರತಿ, ತಪೋಧನ, ಅಕಲ್ಮಾಷ, ತನ್ವೀ, ಧನ್ವೀ, ಪರಂತಪರೆಂದು ಹತ್ತು ಮಂದಿ.

## 5. ರೈವತ ಮನ್ವಂತರ

**ವೇದಬಾಹುಃ ಯದುಧ್ರಶ್ಚ ಮುನಿಃ ವೇದಶಿರಾಸ್ತಥಾ ।**
**ಹಿರಣ್ಯರೋಮಾ ಪರ್ಜನ್ಯಃ ಊರ್ಧ್ವಬಾಹುಶ್ಚ ಸೋಮಜಃ ।**
**ಸತ್ಯನೇತ್ರ ಸ್ತಥಾತ್ರೇಯಃ ಏತೇ ಸಪ್ತರ್ಷಯೋಽಪರೇ ॥ 20 ॥**

ರೈವತ ಮನ್ವಂತರದಲ್ಲಿ ವೇದಬಾಹು – ಯದುಧ್ರ – ವೇದಶಿರಸ್ – ಹಿರಣ್ಯರೋಮ – ಪರ್ಜನ್ಯ – ಊರ್ಧ್ವಭಾಹು – ಸತ್ಯನೇತ್ರ ಇವರು ಸಪ್ತರ್ಷಿಗಳಾಗಿದ್ದರು. ಈ ಮನ್ವಂತರದಲ್ಲಿ 'ವಿಭು' ಎಂಬುವನು ಇಂದ್ರನಾಗಿದ್ದನು.

ಭೂತರಯ ಭೂತ ರಜಸ್ಸೆಂಬ ದೇವತಾ ಸ್ಥಾನದಲ್ಲಿದ್ದರು. ಶುಭ್ರನಾಮಕ ಮಹರ್ಷಿಯ ಧರ್ಮಪತ್ನಿ ವಿಕುಂಠಾ ನಾಮಕಳು. ಇವರಿಬ್ಬರಲ್ಲಿ 'ವೈಕುಂಠ' ನಾಮಕ ಹರಿಯು ಅವತರಿಸಿದನು.

ರೈವತ ಮನ್ವಂತರದಲ್ಲಿ ಅಭೂತ ರಜಸ್, ಪ್ರಕೃತಿ, ಪಾರಿಪ್ಲವ – ರೈಭ್ಯರೆಂಬ ದೇವತೆಗಳದ್ದರು. ಮನುಪುತ್ರರು ಹೀಗಿದ್ದರು.

**ಧೃತಿಮಾನವ್ಯಯೋ ಯುಕ್ತಃ ತತ್ವದರ್ಶೀ ನಿರುತ್ಸಕಃ ।**
**ಅರಣ್ಯಶ್ಚ ಪ್ರಕಾಶಶ್ಚ ನಿರ್ಮೋಹಃ ಸತ್ಯವಾಕ್ ಕವಿಃ ।**
**ರೈವತಸ್ಯ ಮನೋಃ ಪುತ್ರಾಃ ಪಂಚಮಂ ಚೈತದಂತರಮ್ ॥ 21 ॥**

ಧೃತಿಮತಂ – ಅವ್ಯಯ – ಯುಕ್ತ – ತತ್ವದರ್ಶೀ – ನಿರುತ್ಸುಕ – ಅರಣ್ಯ – ಪ್ರಕಾಶ – ನಿರ್ಮೋಹ – ಸತ್ಯವಾಕ್ – ಕವಿ ಎಂಬ ಹತ್ತು ಮಂದಿ.

## 6. ಚಾಕ್ಷುಷ ಮನ್ವಂತರ

**ಭೃಗುರ್ನಭೋ ವಿವಸ್ವಾಂಶ್ಚ ಸುಧಾಮಾ ವಿರಜಸ್ತಥಾ ।**
**ಅತಿನಾಮಾ ಸಹಿಷ್ಣುಶ್ಚ ಸಪ್ತೈತೇ ವೈ ಮಹರ್ಷಯಃ ॥ 22 ॥**

**ಚಾಕ್ಷುಷಸ್ಯಾಂತರೇ ತಾತ ಮನೋಃ ದೇವಾನಿಮಾನ್ ಶೃಣು ॥ 23 ॥**
**ಆದ್ಯಾಃ ಪ್ರಭೂತಾ ಋಭವಃ ಪೃಥಗ್ಭಾವಾಃ ದಿವೌಕಸಃ ।**
**ಲೇಖಾಶ್ಚ ನಾಮ ರಾಜೇಂದ್ರ ಪಂಚದೇವಗಣಾಃ ಸ್ಮೃತಾಃ ॥ 24 ॥**

ಆರನೇಯದು ಚಾಕ್ಷುಷ. ಈ ಮನ್ವಂತರದಲ್ಲಿ ಭೃಗು– ನಭ – ವಿವಸ್ವಾನ್ – ಸುಧಾಮ – ವಿರಜ – ಅತಿನಾಮ – ಸಹಿಷ್ಣು ಎಂಬುವರು ಸಪ್ತರ್ಷಿಗಳು. ವೈರಾಜ ಬ್ರಹ್ಮನಿಂದ ಅವತರಿಸಿದ 'ಅಜಿತ' ಶ್ರೀಹರಿಯೇ ಸಮುದ್ರ ಮಥನ ಮಾಡಿ ಅಮೃತ ಉಣಿಸಿದನು. ಇಂದ್ರದೇವನೇ ಆರು ಏಳು ಮನ್ವಂತರಕ್ಕೆ ಇಂದ್ರನು. ಮಂದ್ರದ್ಯುಮ್ನ ನಾಮಕನಾಗಿ ಇಂದ್ರ ಪದವಿಯನ್ನಾಳಿದನು.

ಲೇಖರು, ಆದ್ಯರು ಪ್ರಭೂತರು, ಋಭುಗಳು, ಪೃಥಗ್ಭಾವರು ಎಂಬ ಐದು ದೇವತಾ ಗಣಗಳಿದ್ದವು. ಊರು, ಪೂರು, ಶತದ್ಯುಮ್ನ, ರುರುಕುಮಾರನೆ ಮೊದಲಾದ ಹತ್ತು ಮಂದಿ ಚಾಕ್ಷುಷ ಮನುವಿನ ಹತ್ತು ಪುತ್ರರು. ದೇವತಾಗಣವೊಂದಂದರಲ್ಲಿ ಎಂಟೆಂಟು ಮಂದಿ ಇರುವರು.

## 7. ವೈವಸ್ವತ ಮನ್ವಂತರ

**ಅತ್ರಿರ್ವಸಿಷ್ಠಃ ಭಗವಾನ್ ಕಶ್ಯಪಶ್ಚ ಮಹಾನೃಷಿಃ ।**
**ಗೌತಮೋಽಥ ಭರದ್ವಾಜೋ ವಿಶ್ವಾಮಿತ್ರ ಸ್ತಥೈವ ಚ ॥ 25 ॥**

**ತಥೈವ ಪುತ್ರೋ ಭಗವಾನ್ ಋಚೀಕಸ್ಯ ಮಹಾತ್ಮನಃ ।**
**ಸಪ್ತಮೋ ಜಮದಗ್ನಿಶ್ಚ ಋಷಯಃ ಸಾಂಪ್ರತಂದಿವಿ ॥ 26 ॥**

ನಾವಿರುವ ಮನ್ವಂತರವು ಏಳನೆಯ ವೈವಸ್ವತ ಮನ್ವಂತರವು. ಇದರಲ್ಲಿ ಸೂರ್ಯನ ಮಗನಾದ ಶ್ರಾದ್ಧದೇವನೆ ಮನುಮಹಾರಾಜನು. ಇದರಲ್ಲಿ ಸಪ್ತರ್ಷಿಗಳು. ಅತ್ರಿ–ವಸಿಷ್ಠ – ಕಶ್ಯಪ – ಗೌತಮ – ಭಾರದ್ವಾಜ – ವಿಶ್ವಾಮಿತ್ರ – ಜಮದಗ್ನಿ. ಇವರು ಈಗಲೂ ಸಪ್ತರ್ಷಿ ಮಂಡಲದಲ್ಲಿ ರಾರಾಜಮಾನರಾಗಿರುವರು.

**ಸಾಧ್ಯಾಃ ರುದ್ರಾಶ್ಚ ವಿಶ್ವೇ ಚ ಮರುತೋ ವಸವಸ್ತಥಾ ।**
**ಆದಿತ್ಯಾಶ್ಚಾಶ್ವಿನೌ ಚೈವ ದೇವೌ ವೈವಸ್ವತೌ ಸ್ಮೃತೌ ॥ 27 ॥**
**ಇಕ್ಷ್ವಾಕು ಪ್ರಮುಖಾಶ್ಚೈವ ದಶಪುತ್ರಾಃ ಮಹಾತ್ಮನಃ ॥ 28 ॥**

ಸಾಧ್ಯರು, ಏಕಾದಶ ರುದ್ರರು, ಹತ್ತು ವಿಶ್ವೇದೇವತೆಗಳು – ನಲವತ್ತೊಂಭತ್ತು ಮರುದ್ಗಣ, ದ್ವಾದಶಾದಿತ್ಯರು ಇವರೆಲ್ಲ ಈ ಮನ್ವಂತರದ ದೇವತೆಗಳು.

ಇಕ್ಷ್ವಾಕು, ನೃಗ, ಧೃಷ್ಣು, ಶರ್ಯಾತಿ, ನರಿಷ್ಯಂತ, ನಾಭಾಗ, ಅರಿಷ್ಟ, ಕರೂಷ, ಪೃಷಧ್ರರು ಮನುವಿನ ಮಕ್ಕಳು. ಈ ಮನ್ವಂತರದಲ್ಲಿಯೇ ಕಶ್ಯಪ – ಅದಿತಿಯ ಮಗನಾಗಿ ವಾಮನನಾಗಿ ಅವತರಿಸಿದನು. ಬಲಿಯಿಂದ ಯಾಚಿಸಿ ತ್ರಿವಿಷ್ಟಪವನ್ನು ಇಂದ್ರನಿಗೆ ನೀಡಿದನು.

**ಏತೇಷಾಂ ಕೀರ್ತಿತಾನಾಂ ತು ಮಹರ್ಷೀಣಾಂ ಮಹೌಜಸಾಮ್ ।**
**ರಾಜನ್ ಪುತ್ರಾಶ್ಚ ಪೌತ್ರಾಶ್ಚ ದಿಕ್ಷು ಸರ್ವಾಸು ಭಾರತ ॥ 29 ॥**
**'ಮನ್ವಂತರೇಷು ಸರ್ವೇಷು ಪ್ರಾಗ್ದಿಶಃ ಸಪ್ತಸಪ್ತಕಾಃ ।**
**ಸ್ಥಿತಾ ಲೋಕವ್ಯವಸ್ಥಾರ್ಥಂ ಲೋಕಸಂರಕ್ಷಣಾಯ ಚ ॥ 30 ॥**

ಈ ಹಿಂದೆ ಹೇಳಿರುವ ಮಹರ್ಷಿಗಳ ರಾಜರ ಪುತ್ರಪೌತ್ರಾದಿಗಳು ದಿಕ್ಕು ದಿಕ್ಕುಗಳಲ್ಲಿಯೂ ತುಂಬಿರುವರು. ಏಳೇಳು ಋಷಿಗಣಗಳು ಲೋಕ ವ್ಯವಸ್ಥೆ ರಕ್ಷಣೆಗಾಗಿ ಉಪಸ್ಥಿತರಿರುತ್ತಾರೆ. ಒಂದೊಂದು ಮನ್ವಂತರ ಕಳೆದು ಹೋಗುತ್ತಿರುವಂತೆ 'ಸಪ್ತಕಗಣ'ವೆನಿಸಿರುವ ಮನುಗಳು, ಮನುಪುತ್ರರು, ಸಪ್ತರ್ಷಿಗಳು, ಇಂದ್ರನು. ಆ ಗಣದ ಭಗವದವತಾರ ಎಲ್ಲವೂ ತಮಗೆ ಯೋಗ್ಯವಾದ ಲೋಕಗಳಿಗೆ ಹೋಗುತ್ತಾರೆ. ನಿಜವಾಗಿಯೂ ವಿಚಾರಿಸಿದರೆ ಮನ್ವಂತರದ ಜೀವಕೋಟಿ ರಕ್ಷಣೆ ಭಗವಂತನದೆ ಆಗಿರುತ್ತದೆ. ಇವರು ಹೋದ ಕೂಡಲೇ ಆ ಸ್ಥಳ ಖಾಲಿ ಬೀಳುವುದಿಲ್ಲ. ಮತ್ತೊಂದು ಗಣ ತಯಾರಿರುತ್ತದೆ.

### ಭಾವಿಮನ್ವಂತರಗಳ ವಿವರ

**ಸಾವರ್ಣಾಃ ಮನವಸ್ತಾತ ಪಂಚ ತಾಂಶ್ಚ ನಿಬೋಧ ಮೇ ।**
**ಏಕೋ ವೈವಸ್ವತಃ ತೇಷಾಂ ಚತ್ವಾರಸ್ತು ಪ್ರಜಾಪತೇಃ ॥ 31 ॥**

**ಪರಮೇಷ್ಠಿ ಸುತಾಸ್ತಾತ ಮೇರು ಸಾವರ್ಣತಾಂ ಗತಃ ।**
**ದಕ್ಷಸ್ಯೈತೇ ಹಿ ದೌಹಿತ್ರಾಃ ಪ್ರಿಯಾಯಾಃ ತನಯಾ ನೃಪ ॥ 32 ॥**
**ಮಹಾಂತಸ್ತಪಸಾ ಯುಕ್ತಾ ಮೇರುಪೃಷ್ಠೇ ಮಹೌಜಸಃ ॥ 33 ॥**

ಸಾವರ್ಣಿ ಮನುಗಳು ಐದು ಮಂದಿಯಿರುವರು. ಇವರಲ್ಲಿ ಒಬ್ಬನು ಸೂರ್ಯಪುತ್ರನಾಗಿರುವನು. ಉಳಿದ ನಾಲ್ವರು ಪ್ರಜಾಪತಿ ಪರಮೇಷ್ಠಿಪುತ್ರರು. ದಕ್ಷ ಪ್ರಜಾಪತಿ ದೌಹಿತ್ರರು. ದಕ್ಷನ ಪುತ್ರಿ 'ಪ್ರಿಯಾ' ಎಂಬುವಳ ಪುತ್ರರು. ಮೇರು ಪರ್ವತದಲ್ಲಿ ಭಯಂಕರ ತಪಸ್ಸು ಇವರದು. ಇವರೆಲ್ಲ ಮೇರು ಸಾವರ್ಣಿ ಎನಿಸಿರುವರು.

**ಋಚೇಃ ಪ್ರಜಾಪತೇಃ ಪುತ್ರೋ ರೌಚ್ಯೋ ನಾಮ ಮನುಃ ಸ್ಮೃತಃ ।**
**ಭೂತ್ಯಾಂ ಚೋತ್ಪಾದಿತೋ ದೇವ್ಯಾಂ ಭೌತ್ಯೋ ನಾಮ ರುಚೇಃ ಸುತಃ ॥34॥**

ರೌಚ್ಯ ಮನುವು ರುಚಿಪ್ರಜಾಪತಿ ಪುತ್ರನು. ರುಚಿಯಿಂದ ಭೂತಿಯೆಂಬುವಳಲ್ಲಿ ಹುಟ್ಟಿದವನೇ ಭೌತ್ಯನು. ಮುಂದೆ ಬರುವ ಮನ್ವಂತರಗಳನ್ನು ಬಿತ್ತರಿಸುವೆ.

## 8. ಸಾವರ್ಣೀ ಮನ್ವಂತರ

**ರಾಮೋ ವ್ಯಾಸಃ ತಥಾತ್ರೇಯೋ ದೀಪ್ತಿಮಾನಿತಿ ವಿಶ್ರುತಃ ।**
**ಭಾರದ್ವಾಜಸ್ತಥಾ ದ್ರೌಣಿರಶ್ವತ್ಥಾಮಾ ಮಹಾದ್ಯುತಿಃ ॥ 35 ॥**

**ಗೌತಮಸ್ಯಾತ್ಮಜಶ್ಚೈವ ಶರದ್ವಾನ್ ಗೌತಮಃ ಸ್ಮೃತಃ ।**
**ಕೌಶಿಕೋ ಗಾಲವಶ್ಚೈವ ರುರುಃ ಕಾಶ್ಯಪ ಏವ ಚ ॥ 36 ॥**

ರಾಜನೇ, ಎಂಟನೇ ಮನ್ವಂತರದಲ್ಲಿ ಸಾವರ್ಣಿಯು ಮನವು. ದೇವತೆಗಳಂತೆ ಕಂಗೊಳಸುವ ನಿರ್ಮೋಕ, ವಿರಜಸ್ಕ, ಸುತಪ, ಅಮಿತಾಭ ಮೊದಲಾದವರು ದೇವತಾ ಪಟ್ಟದಲ್ಲಿರುವರು.

ಪರಶುರಾಮ – ವೇದವ್ಯಾಸರು – ಅತಿಪುತ್ರದೀಪ್ತಿಮಂತ – ಅಶ್ವತ್ಥಾಮಾ – ಕೃಪಾಚಾರ್ಯ – ಗಾಲವ – ರುರು.

ಮಹಾನುಭಾವರೂ ಬ್ರಹ್ಮವೇತ್ತರೂ ಇವರು ಸಾವರ್ಣಿ ಮನ್ವಂತರದ ಸಪ್ತರ್ಷಿಗಳು. ಜಾತಿಯಿಂದಲೂ, ತಪಸ್ಸು, ಮಂತ್ರ, ಶುದ್ಧವಾದ ಮಾತುಗಳಿಂದ ನಿರ್ಮಲವಾದ ಇವರು ಬ್ರಹ್ಮಲೋಕದಲ್ಲಿರುವರು.

## ಸಪ್ತರ್ಷಿಗಳ ಲಕ್ಷಣ

**ಭೂತಭವ್ಯಭವಜ್ಞಾನಂ ಬುಧ್ವಾ ಚೈವ ತು ಯೇ ಸ್ವಯಮ್**
**ತಪಸಾ ವೈ ಪ್ರಸಿದ್ಧಾಃ ಮೇ ಸಂಗತಾಃ ಪ್ರವಿಚಿಂತಕಾಃ ॥ 37 ॥**

**ಸಪ್ತೈತೇ ಸಪ್ತಭಿಶ್ಚೈವ ಗುಣೈಃ ಸಪ್ತರ್ಷಯಃ ಸ್ಮೃತಾಃ ।**
**ದೀರ್ಘಾಯುಷೋ ಮಂತ್ರ ಕೃತ ಈಶ್ವರಾ ದೀರ್ಘಚಕ್ಷುಷಃ ॥ 38 ॥**

**ಬುದ್ಧ್ವಾ ಪ್ರತ್ಯಕ್ಷ ಧರ್ಮಾಣೋ ಗೋತ್ರ ಪ್ರಾವರ್ತಕಾಸ್ತಥಾ ।**
**ಸಪ್ತರ್ಷಯೋ ಮಹಾಭಾಗಾಃ ಸತ್ಯಧರ್ಮ ಪರಾಯಣಾಃ ॥ 39 ॥**

ಸಪ್ತರ್ಷಿಗಳು ಬ್ರಹ್ಮಲೋಕದಲ್ಲಿದ್ದು ವೈದಿಕ ಧರ್ಮಕ್ಕೆ ಲೋಪ ಬಂದಾಗ ಮೇಲಿಂದ ಇಳಿದು ಬಂದು ಮತ್ತೆ ವೇದೋದ್ಧಾರ ಮಾಡುತ್ತಾರೆ. ಭೂತಭವ್ಯಭವಿಷ್ಯತ್ ಜ್ಞಾನವುಳ್ಳವರೂ, ನಿರಂತರ ತಪೋಯುಕ್ತರೂ, ದೀರ್ಘಾಯುಷ್ಟ್ವ, ಮಂತ್ರದರ್ಶನ, ಸರ್ವಸಾಮರ್ಥ್ಯ, ದೀರ್ಘದೃಷ್ಟಿ, ಧರ್ಮವನ್ನು ಪ್ರತ್ಯಕ್ಷೀಕೊಂಡವರು. ಗೋತ್ರ ಪ್ರವರ್ತಕತ್ವಾದಿ ಏಳು ಗುಣಗಳಿಂದ ಏಳೇಳು ಋಷಿಗಳು ತಮ್ಮ ಅವಧಿಯಲ್ಲಿ ಧರ್ಮ ಸ್ಥಾಪಿಸುವರು. ಧರ್ಮ ನಷ್ಟವಾದಾಗ ಪುನಃ ಸ್ಥಾಪಿಸುವರು. ಇವರು ತಮ್ಮ ಉಪಾಸನೆ ಮಾಡಿದವರಿಗೆ ವರಗಳನ್ನು ನೀಡುವರು. ಬಹಳ ಕಾಲ ಇರುವುದರಿಂದ ಇವರ ಜನ್ಮಕಾಲವನ್ನಾಗಲೀ, ವಯಸ್ಸನ್ನಾಗಲೀ ಪ್ರಮಾಣ ಪೂರಕ ತಿಳಿಯಲು ಸಾಧ್ಯವಿಲ್ಲ.

## ಸಾವರ್ಣಿ ಮನ್ವಂತರದ ಮನುಪುತ್ರರು

**ಸಾವರ್ಣಸ್ಯ ಮನೋಃ ಪುತ್ರಾನ್ ಭವಿಷ್ಯಾನ್ ಶೃಣು ಸತ್ತಮ ।**
**ವರೀಯಾಂಶ್ಚ ಅವರೀಯಾಂಶ್ಚ ಸಮ್ಮತೋ ಧೃತಿಮಾನ್ ವಸುಃ ॥ 40 ॥**

**ಚರಿಷ್ಣುರಪ್ಯಧೃಷ್ಣುಶ್ಚ ವಾಜಃ ಸುಮತಿರೇವ ಚ ।**
**ಸಾವರ್ಣಸ್ಯ ಮನೋಃ ಪುತ್ರಾಃ ಭವಿಷ್ಯಾ ದಶ ಭಾರತ ॥ 41 ॥**

ಸಾವರ್ಣಿ ಮನುವಿಗೆ ವರೀಯಾನ್ – ಅವರೀಯಾನ್ – ಸಮ್ಮತ – ಧೃತಿಮಂತ – ವಸು – ಚರಿಷ್ಣು – ಅಧೃಷ್ಣು – ವಾಜ – ಸುಮತಿ ಇವರುಗಳು ಸಾವರ್ಣಿ ಮನುವಿನ ಮಕ್ಕಳು. ಸುತಪರೇ ಮೊದಲಾದವು ದೇವತಾಗಣವು. ಇವರಿಗೆ ಬಲಿಯು ಇಂದ್ರನು.

## 9. ದಕ್ಷಸಾವರ್ಣಿ

**ಪ್ರಥಮೇ ಮೇರು ಸಾವರ್ಣೇ ಪ್ರವಕ್ಷ್ಯಾಮಿ ಮುನೀನ್ ನೃಪ ।**
**ಮೇಧಾತಿಥಿಸ್ತು ಪೌಲಸ್ತ್ಯಃ ವಸುಃ ಕಾಶ್ಯಪ ಏವ ಚ ॥ 42 ॥**

**ಜ್ಯೋತಿಷ್ಮಾನ್ ಭಾರ್ಗವಶ್ಚೈವ ದ್ಯುತಿಮಾನಂಗಿರಾಸ್ತಥಾ ।**
**ಸಾವನಶ್ಚೈವ ವಾಸಿಷ್ಠಃ ಆತ್ರೇಯೋ ಹವ್ಯವಾಹನಃ ॥ 43 ॥**

**ಪೌಲಹಃ ಸಪ್ತ ಇತ್ಯೇತೇ ಮುನಯೋ ರೋಹಿತೇಂತರೇ ॥ 44 ॥**

ರಾಜನೇ, ಒಂಭತ್ತನೆಯ ಮನ್ವಂತರದ ಮೇರು ಸಾವರ್ಣಿಯಲ್ಲಿರುವ ಸಪ್ತರ್ಷಿಗಳು ಹೀಗಿದ್ದಾರೆ. ಮೇಧಾತಿಥಿ – ಕಾಶ್ಯಪವಸು – ಭೃಗೀಯ – ಜ್ಯೋತಿಷ್ಮಂತ – ಆಂಗೀರಸ ದ್ಯುತಿಮಂತ – ವಾಸಿಷ್ಠ ಸಾವನ – ಆತ್ರೇಯ ಹವ್ಯವಾಹನ ಪುಲಹಗೋತ್ರೀಯ ಸಪ್ತ ಎಂಬುವರು.

ಪಾರ, ಸುಧರ್ಮ, ಮರೀಚಿಗರ್ಭ ಎಂಬ ದೇವತೆಗಳ ಸಂಘವಿರುತ್ತದೆ. ಒಂದೊಂದು ಗಣದಲ್ಲಿ ಹನ್ನೆರಡು ದೇವತೆಗಳು. ಈ ದೇವತೆಗಳಿಗೆಲ್ಲ 'ಅದ್ಭುತ' ಎಂಬ ದೇವೇಂದ್ರನೆ ರಾಜನು.

**ಧೃಷ್ಟಕೇತುಃ ಮನೋಃಪುತ್ರಃ ಪಂಚಹೋತ್ರೋ ನಿರಾಕೃತಿಃ ।**
**ಪೃಥು ಶ್ರವಾಃ ಭೂರಿಧಾಮಾ ಋಚೀಕೋಽಷ್ಟಹತೋ ಗಯಃ ॥ 45 ॥**

**ಪ್ರಥಮಸ್ಯ ತು ಸಾವರ್ಣೇಃ ನವ ಪುತ್ರಾಃ ಮಹೌಜಸಃ ॥ 46 ॥**

ಮುಂದೆ ಬರುವ ಮನ್ವಂತರಗಳಲ್ಲಿ ಮೊದಲನೆಯದಾದ ಸಾವರ್ಣಿಯಲ್ಲಿ ಮನುಪುತ್ರರು ಒಂಭತ್ತು ಮಂದಿ ಇರುವರು. ಧೃಷ್ಟಕೇತು – ಪಂಚಹೋತ್ರ – ನಿರಾಕೃತಿ – ಪೃಥು – ಶ್ರವಸ್ – ಭೂರಿಧಾಮಾ – ಋಚೀಕ – ಅಷ್ಟಹತ – ಗಯರೆಂಬುವರು.

## 10. ಬ್ರಹ್ಮ ಸಾವರ್ಣಿ

**ದಶಮೇ ತ್ವಥ ಪರ್ಯಾಯೇ ದ್ವಿತೀಯಸ್ಯಾಂತರೇ ಮನೋಃ ।**
**ಹವಿಷ್ಮಾನ್ ಪೌಲಹಶ್ಚೈವ ಸುಕೃತಿಶ್ಚೈವ ಭಾರ್ಗವಃ ॥ 47 ॥**

**ಆಪೋಮೂರ್ತಿಃ ತಥಾಽಽತ್ರೇಯೋ ವಾಸಿಷ್ಠಶ್ಚಾಷ್ಟಮಃ ಸ್ಮೃತಃ ।**
**ಪೌಲಸ್ತ್ಯ ಪ್ರಮತಿಶ್ಚೈವ ನಭೋಗಶ್ಚೈವ ಕಾಶ್ಯಪಃ ।**
**ಅಂಗಿರಾ ನಭಸಃ ಸತ್ಯಃ ಸಪ್ತೈತೇ ಪರಮರ್ಷಯಃ ॥ 48 ॥**

ಬ್ರಹ್ಮಸಾವರ್ಣಿಯಲ್ಲಿ ಹವಿಷ್ಮಾನ್ - ಸುಕೃತಿ - ಆಪೋಮೂರ್ತಿ - ಅಷ್ಟಮ-ಪ್ರಮತಿ - ನಭೋಗ - ನಭಸ್‌ನ ಪುತ್ರ ಸತ್ಯವೆಂಬುವರು ಸಪ್ತರ್ಷಿಗಳು.

ಸುಧಾಮ - ದಶುದ್ಧ - ವಿರುದ್ಧ ಮೊದಲಾದ ದೇವತಾಗಣವಿರುತ್ತದೆ. ಒಂದೊಂದು ದೇವತಾಗಣದಲ್ಲಿ ನೂರು ನೂರು ಸಂಖ್ಯೆ. ಇವರಿಗೆಲ್ಲ 'ಶಾಂತಿ' ಎಂಬುವನೇ ಇಂದ್ರ. ಸುಕ್ಷೇತ್ರ - ಉತ್ತಮ - ಭೂರಿಷೇಣರು ಬ್ರಹ್ಮ ಸಾವರ್ಣಿಯ ಮಕ್ಕಳು. ಬ್ರಹ್ಮಸಾವರ್ಣಿಯು ಉಪಶ್ಲೋಕ ಸುತನು. ವಿಶ್ವಸೃಜನ ಮನೆಯಲ್ಲಿ 'ಶ್ರೀಮೂರ್ತಿ' ಎಂಬ ಶ್ರೀಹರಿಯ ರೂಪವು ಅವತರಿಸಿ ಜಗತ್ತನ್ನು ಸಂತೋಷಗೊಳಿಸಿದನು.

## 11. ರುದ್ರ ಸಾವರ್ಣಿ

**ಹವಿಷ್ಮಾನ್ ಕಾಶ್ಯಪಶ್ಚಾಪಿ ಹವಿಷ್ಮಾನ್ ಯಶ್ಚ ಭಾರ್ಗವಃ ।**
**ತರುಣಶ್ಚ ತಥಾಽಽತ್ರೇಯೋ ವಾಸಿಷ್ಠಸ್ತ್ವನಘಸ್ತಥಾ ॥ 49 ॥**

**ಅಂಗಿರಾಶ್ಚೋದಧಿಷ್ಣ್ಯಶ್ಚ ಪೌಲಸ್ತ್ಯೋ ನಿಶ್ಚರಸ್ತಥಾಃ ।**
**ಪುಲಹಶ್ಚಾಗ್ನಿತೇಜಾಶ್ಚ ಭಾವ್ಯಾಃ ಸಪ್ತ ಮಹರ್ಷಯಃ ॥ 50 ॥**

ಕಶ್ಯಪಗೋತ್ರದ ಹವಿಷ್ಮಾನ್ - ಭೃಗು ವಂಶದ ಹವಿಷ್ಮಂತ, ಅತ್ರಿಗೋತ್ರದ ತರುಣ - ವಸಿಷ್ಠಗೋತ್ರೀಯ ಅನಘ - ಅಂಗೀರಸನ್ ಉದಧಿಷ್ಣ್ಯ - ಪುಲಸ್ತ್ಯ ಗೋತ್ರದ ನಿಶ್ಚರ - ಪುಲಗೋತ್ರದ ಅಗ್ನಿತೇಜಸ್ ಇವರು ಸಪ್ತರ್ಷಿಗಳು. ಹನ್ನೊಂದನೆ ಮನುವಿಗೆ ಸಂವರ್ತಗ - ಸಶರ್ಮಾ - ಪುರೂದ್ವಹ - ಕ್ಷೇಮಧನ್ವಾ - ದೃಢಾಯು - ಆಧರ್ಮ - ಪಂಡಕರೆಂಬ ಎಂಟು ಮಂದಿ ಪುತ್ರರು.

ವಿಹಂಗಮ - ಕಾಮಗಮ - ನಿರ್ವಾಣರುಚಿ ಎಂಬುವರು ದೇವತೆಗಳು. ಇವರಿಗೆ 'ಧೃತಿ' ಎಂಬುವನೇ ಇಂದ್ರನು. ಇವನಿಗೆ ವೈಧೃತಿಯೆಂದು ನಾಮಾಂತರ. ಇದರಲ್ಲಿ ಶ್ರೀಹರಿಯು ಆರ್ಯಕನಿಂದ ವೈಧೃತಾದೇವಿಯಲ್ಲಿ 'ಧರ್ಮಸೇತು' ಎಂದು ಪ್ರಖ್ಯಾತನಾಗಿರುವನು. ಸಕಲಲೋಕಧಾರಕನು.

## 12. ಮೇರು ಸಾವರ್ಣಿ ಮನ್ವಂತರ

**ದ್ಯುತಿರ್ವಸಿಷ್ಠ ಪುತ್ರಶ್ಚ ಆತ್ರೇಯಃ ಸುತಪಾಸ್ತಥಾ ।**
**ಅಂಗಿರಾಸ್ತಪಸೋ ಮೂರ್ತಿಃ ತಪಸ್ವೀ ಕಾಶ್ಯಪಸ್ತಥಾ ॥ 51 ॥**

**ತಪೋಽಶನಶ್ಚ ಪೌಲಸ್ತ್ಯ ಪೌಲಹಶ್ಚ ತಪೋರವಿಃ ।**
**ಭಾರ್ಗವಃ ಸಪ್ತಮಸ್ತೇಷಾಂ ವಿಜ್ಞೇಯಸ್ತು ತಪೋಧೃತಿಃ ॥ 52 ॥**

**ಪಂಚ ದೇವಗಣಾಃ ಪ್ರೋಕ್ತಾಃ ಮಾನಸಾ ಬ್ರಹ್ಮಣಶ್ಚ ತೇ ॥ 53 ॥**

ಮೇರು ಸಾವರ್ಣಿಯಲ್ಲಿ ವಸಿಷ್ಠಪುತ್ರ ದ್ಯುತಿ – ಸುತಪಾ – ತಪೋಮೂರ್ತಿ – ತಪಸ್ವೀ – ತಪೋವನ – ತಪೋರವಿ – ತಪೋಧೃತಿ ಇವರು ಹನ್ನೆರಡನೆ ಮೇರು ಸಾವರ್ಣಿಯಲ್ಲಿ ಸಪ್ತರ್ಷಿಗಳು.

ದೇವವಾಯು– ಅದೂರ – ದೇವಶ್ರೇಷ್ಠ – ವಿದೂರಥ – ಮಿತ್ರವಾನ್ – ಮಿತ್ರದೇವ – ಮಿತ್ರಸೇನ – ಮಿತ್ರಕೃತ್ – ಮಿತ್ರಬಾಹು – ಸುವರ್ಚರೆಂಬುವರು ಹತ್ತು ಮನುವಿನ ಪುತ್ರರು. ಹರಿತ – ರೋಹಿತ – ಸುಮನಾ – ಸುಕರ್ಮ – ಸುರಾಪವೆಂಬ ದೇವತಾ ಸಂಘವಿದ್ದು ಒಂದೊಂದರಲ್ಲಿ ದಶದೇವತೆಗಳಿರುವರು. ಇವರಿಗೆಲ್ಲ ಇಂದ್ರ 'ಋತುಧಾಮ'. ಸತ್ಯಮಹರೆಂಬ ಪತ್ನಿ ಸೂನೃತಾ. 'ಸ್ವಧಾಮಾ' ಎಂಬ ಹರಿಯ ಅಂಶವುಳ್ಳ ವ್ಯಕ್ತಿಯು ಇದನ್ನು ರಕ್ಷಿಸುತ್ತಾನೆ.

## 13. ರೌಚ್ಯ ಮನ್ವಂತರ

**ಅಂಗಿರಾಶ್ಚೈವ ಧೃತಿಮಾನ್ ಪೌಲಸ್ತ್ಯೋ ಹವ್ಯಪಸ್ತು ಸಃ ।**
**ನಿಷ್ಪ್ರಕಂಪಸ್ತಥಾಽಽತ್ರೇಯೋ ನಿರ್ಮೋಹಃ ಕಾಶ್ಯಪಸ್ತಥಾ ॥ 54 ॥**

**ಸುತಪಾಶ್ಚೈವ ವಾಸಿಷ್ಠಃ ಸಪ್ತೈತೇ ತು ಮಹರ್ಷಯಃ ॥ 55 ॥**

**ತ್ರಯ ಏವ ಗಣಾಃ ಪ್ರೋಕ್ತಾಃ ದೇವತಾನಾಂ ಸ್ವಯಂಭುವಾ ॥ 56 ॥**

ಧೃತಿಮಾನ್ – ಹವ್ಯಪ – ತತ್ವದರ್ಶಿ – ನಿರುತ್ಸುಕ – ನಿಷ್ಪ್ರಕಂಪ – ನಿರ್ಮೋಹ(ಕ) – ಸುತಪವೆಂಬ ಸಪ್ತರ್ಷಿಗಳಿರುವರು. ಇದರಲ್ಲಿ ಸುತ್ರಾಮ, ಸುಧಾಮ, ಸುಕರ್ಮವೆಂಬ ಮೂರು ದೇವತಾಗಣವಿದ್ದು ಮುವ್ವತ್ತಮೂರು ದೇವತೆಗಳಿಂದ ಕೂಡಿರುತ್ತದೆ. ಇವರಿಗೆಲ್ಲ ಮಹಾಬಲಶಾಲಿಯಾದ

'ದಿವಸ್ಪತಿ'ಯೇ ಇಂದ್ರನು. ಈ ಮನ್ವಂತರದಲ್ಲಿ ದೇವಹೋತ್ರಯೆಂಬುವನ ಪತ್ನಿ ಬೃಹತೀ ಎಂಬುವಳಲ್ಲಿ ಶ್ರೀಹರಿಯು 'ಯೋಗೇಶ್ವರ' ಎಂದು ಅವತರಿಸಿ ಇಂದ್ರನನ್ನು ಕಾಪಾಡುವನು.

**ತ್ರಯೋದಶಸ್ಯ ಪುತ್ರಾಸ್ತೇ ವಿಜ್ಞೇಯಾಃ ರುಚೇಃ ಸುತಾಃ ।**

ಚಿತ್ರಸೇನ - ವಿಚಿತ್ರ - ನಯ - ಧರ್ಮಭೃತ - ಧೃತ - ಸುನೇತ್ರ - ಕ್ಷತ್ರವೃದ್ಧಿ - ಸುತಪಾ - ನಿರ್ಭಯ - ದೃಢ ಎಂಬುವರನು ಹತ್ತು ರೌಚ್ಯನ ಪುತ್ರರು.

## 14. ಭೌತ್ಯ/ಇಂದ್ರ ಸಾವರ್ಣಿ

**ಚತುರ್ದಶೇಽಥ ಪರ್ಯಾಯೇ ಭೌತ್ಯಸ್ಯೈವಾಂತರೇ ಮನೋಃ ।**
**ಭಾರ್ಗವೋ ಹ್ಯತಿಬಾಹುಶ್ಚ ಶುಚಿರಾಂಗಿರಸಸ್ತಥಾ ॥ 57 ॥**

**ಯುಕ್ತಶ್ಚೈವ ತಥಾಽಽತ್ರೇಯಃ ಶುಕ್ರೋ ವಾಸಿಷ್ಠ ಏವ ಚ ।**
**ಅಜಿತಃ ಪೌಲಹಶ್ಚೈವ ಅಂತ್ಯಾಃ ಸಪ್ತರ್ಷಯಶ್ಚ ತೇ ॥ 58 ॥**

ರಾಜನೇ ಕಡೆಯದಾದ ಹದಿನಾಲ್ಕನೇ ಮನ್ವಂತರವು ಭೌತ್ಯ ಅಥವಾ ಇಂದ್ರಸಾವರ್ಣಿಯು. ಇದರಲ್ಲಿ ಸಪ್ತರ್ಷಿಗಳು ಹೀಗಿರುವರು ಅತಿಬಾಹು - ಶುಚಿ - ಯುಕ್ತ - ಯುಕ್ತ - ಶುಕ್ರ - ಶುಕ್ರ - ಅಜಿತ. ಹೀಗೆ ಏಳು ಮಂದಿ ಗೋತ್ರಭೇದದಿಂದಾಗಿ ಹೆಸರು ಒಂದಾದರೂ ಭಿನ್ನಭಿನ್ನರೆ.

ದಶಪುತ್ರರು - ತರಂಗಭೀರು - ವಪ್ರ - ತರಸ್ವಾನ್ - ಉಗ್ರ - ಅಭಿಮಾನೀ - ಪ್ರವೀಣ - ಜಿಷ್ಣು - ಸಂಕ್ರಂದನ - ತೇಜಸ್ವೀ - ಸಬಲರೆಂಬುವರು.

ಈ ಮನ್ವಂತರದಲ್ಲಿ ವಿನತೆಯೆಂಬುವಳಲ್ಲಿ ನಾರಾಯಣನೆಂಬುವವನಿಂದ 'ಬೃಹದ್ಭಾನು' ಎಂಬ ಹೆಸರಿನಿಂದ ಅವತರಿಸಿ ಧರ್ಮಶಾಸ್ತಾರನಾಗುವನು. ವಿನತೆಯನ್ನು 'ವಿತಾನಾ' ಎಂದು ಕರೆಯುವರು.

**ಏತೇಷಾಂ ಕಲ್ಯ ಉತ್ಥಾಯ ಕೀರ್ತನಾತ್ ಸುಖಮೇಧತೇ ।**
**ಯಶಶ್ಚಾಪ್ನೋತಿ ಸುಮಹದಾಯುಷ್ಮಾಂಶ್ಚ ಭವೇನ್ನರಃ ॥ 59 ॥**

**ಅತೀನಾಗತಾನಾಂ ವೈ ಮಹರ್ಷೀಣಾಂ ಸದಾ ನರಃ ।**
**ದೇವತಾನಾಂ ಗಣಾಃ ಪ್ರೋಕ್ತಾಃ ಪಂಚ ವೈ ಭರತರ್ಷಭ ॥ 60 ॥**

ಹೀಗೆ ಹದಿನಾಲ್ಕು ಮನ್ವಂತರದಲ್ಲಿ ಬರುವ ಮನುಗಳು, ಮನುಪುತ್ರರು, ಸಪ್ತರ್ಷಿಗಳು, ಇಂದ್ರರು, ದೇವತಾಗಣ – ಹರಿಯ ಅವತಾರ ಇವುಗಳನ್ನು ತಿಳಿದು ಪ್ರಾತಃಕಾಲದಲ್ಲಿ ಎದ್ದು ಇವರ ನಾಮಗಳನ್ನು ಉಚ್ಚಾರ ಮಾಡುವುದರಿಂದ ಆಯಾಯ ನಾಮಗಳಿಂದ ಅವರಲ್ಲಿದ್ದು ನಿಯಮನ ಮಾಡುತ್ತಿರುವ ಶ್ರೀಹರಿಯು ಪ್ರಸನ್ನನಾಗಿ ಸುಖಸೌಭಾಗ್ಯಗಳನ್ನು ದೀರ್ಘಾಯುಸ್ಸನ್ನು ನೀಡುವನು. ಭೂಮಿಯಲ್ಲಿ ಕೀರ್ತಿವಂತನಾಗುವನು.

ಇತಿ ಶ್ರೀಹರಿವಂಶ ಖಿಲಭಾಗದಲ್ಲಿ
ಮನ್ವಂತರಾನುಚರಿತವೆಂಬಲ್ಲಿ
ಏಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




## ಅಥ ಅಷ್ಟಮೋಽಧ್ಯಾಯಃ

### ಚತುರ್ಯುಗಗಳು – ಮನ್ವಂತರಗಳ ಪರಿಮಾಣ

*ಜನಮೇಜಯ ಉವಾಚ–*

**ಮನ್ವಂತರಸ್ಯ ಸಂಖ್ಯಾನಂ ಯುಗಾನಾಂ ಚ ಮಹಾಮತೇ ।**
**ಬ್ರಹ್ಮಣೋಽಹ್ನಃ ಪ್ರಮಾಣಂ ಚ ವಕ್ತುಮರ್ಹಸಿ ಮೇ ದ್ವಿಜ ॥ 1 ॥**

ಜನಮೇಜಯನು – ವೈಶಂಪಾಯನರೇ, ಒಂದು ಮನ್ವಂತರದಲ್ಲಿರುವ ಯುಗಗಳೆಷ್ಟು? ಅವುಗಳ ಪರಿಮಾಣವೇನು? ಬ್ರಹ್ಮನಿಗೆ ಒಂದು ಹಗಲು ಎಂದರೆ ಎಷ್ಟು ವರ್ಷಗಳು? ಇವುಗಳನ್ನು ಕೃಪೆ ಮಾಡಿ ನನಗೆ ತಿಳಸಿರಿ ಎಂದನು.

**ಅಹೋರಾತ್ರಂ ಭಜೇತ್ ಸೂರ್ಯೋ ಮಾನವಂ ಲೌಕಿಕಂ ಪರಮ್ ।**
**ತಾಮುಪಾದಾಯ ಗಣನಾಂ ಶೃಣು ಸಂಖ್ಯಾಮರಿಂದಮ ॥ 2 ॥**

ಜನಮೇಜಯನೇ ! ಮನುಷ್ಯರ ದಿನ-ರಾತ್ರಿಗಳನ್ನು ಸೂರ್ಯನು ವಿಭಾಗಿಸುತ್ತಾನೆ. ಈ ಲೌಕಿಕ ಗಣನೆಯನ್ನಾರಂಭಿಸಿ ದ್ವಿಪರಾರ್ಧವೆಂಬ ಬ್ರಹ್ಮನ ಕಾಲಮಾನದವರೆಗೂ ನಾನು ಹೇಳುವುದನ್ನು ಕೇಳು.

### ಕಾಲಪ್ರಮಾಣ

**ನಿಮೇಷೈಃ ಪಂಚದಶಭಿಃ ಕಾಷ್ಠಾ ತ್ರಿಂಶತ್ತು ತಾಃ ಕಲಾಃ ।**
**ತ್ರಿಂಶತ್ಕಲೋ ಮುಹೂರ್ತಸ್ತು ತ್ರಿಂಶತಾ ತೈಃ ಮನಿಷಿಣಃ ॥ 3 ॥**

**ಅಹೋರಾತ್ರಮಿತಿ ಪ್ರಾಹುಃ ಚಂದ್ರಸೂರ್ಯಗತಿಂ ನೃಪ ।**
**ವಿಶೇಷೇಣ ತು ಸರ್ವೇಷು ಅಹೋರಾತ್ರೇ ಚ ನಿತ್ಯಶಃ ॥ 4 ॥**

**ಅಹೋರಾತ್ರಾಃ ಪಂಚದಶ ಪಕ್ಷ ಇತ್ಯಭಿಶಬ್ಧಿತಃ ।**
**ದ್ವೌ ಪಕ್ಷೌ ತು ಸ್ಮೃತೋ ಮಾಸಃ ಮಾಸೌ ದ್ವೌ ಋತುರುಚ್ಯತೇ ॥ 5 ॥**

ರಾಜನೇ ಹದಿನೈದು ಸೆಕೆಂಡುಗಳಿಗೆ ಒಂದು 'ಕಾಷ್ಠಾ' ಎಂದು, ಮುವತ್ತು ಕಾಷ್ಠಗಳು (15 X 30 = 450) ಒಂದು 'ಕಲೆ'. 450 ಸೆಕೆಂಡುಗಳು (430/60 =7.5) ಇಂತಹ 30 ಕಲೆಗಳು ಒಂದು ಮುಹೂರ್ತ.

### ಪಿತೃ-ದೇವತಾಮಾನ

ಮುವತ್ತು ಕಲೆಗಳು ಒಂದು ಮುಹೂರ್ತ, ಮುವತ್ತು ಮುಹೂರ್ತಗಳು = ಅರವತ್ತು ಘಳಿಗೆಗಳು ಒಂದು ದಿನ. ಮುಹೂರ್ತವೆಂದರೆ ಎರಡು ಘಳಿಗೆಗಳು. ಒಂದು ಘಳಿಗೆಯೆಂದರೆ ಇಪ್ಪತ್ತನಾಲ್ಕು ನಿಮಿಷಗಳು 2 1/2 ಘಳಿಗೆಗೆ 1 ಘಂಟೆ. ಅಹೋರಾತ್ರವೆಂಬುದು ಸೂರ್ಯ-ಚಂದ್ರರ ಉದಯಾಸ್ತಗಳಿಂದ ತಿಳಿಯಬಹುದು.

ಹದಿನೈದು ದಿನಗಳಿಗೆ ಒಂದು ಪಕ್ಷವೆನ್ನುವರು. ತಿಂಗಳಿನಲ್ಲಿ ಶುಕ್ಲಪಕ್ಷ - ಕೃಷ್ಣಪಕ್ಷವೆಂದು ಎರಡಿವೆ. ಶುಕ್ಲ-ಕೃಷ್ಣಪಕ್ಷಗಳು ದಿನಗಳು ಸೇರಿ ಮುವ್ವತ್ತು ದಿವಸಗಳಿಗೆ ಒಂದು ತಿಂಗಳು ಎನ್ನುವರು.

ಇಂತಹ ಹನ್ನೆರಡು ಮಾಸಗಳು ಒಂದು ಸಂವತ್ಸರವೆನಿಸುತ್ತದೆ. ಈ ಸಂವತ್ಸರದಲ್ಲಿ ಆರು ತಿಂಗಳು ಉತ್ತರಾಯಣ - ಇನ್ನಾರು ತಿಂಗಳು ದಕ್ಷಿಣಾಯನವೆಂದು ಎರಡು ಆಯನಗಳಿರುತ್ತವೆ. ಎರಡು ತಿಂಗಳಿಗೆ ಒಂದು ಋತುವು. ಅಯನದಲ್ಲಿ ಮೂರು ಋತುಗಳಿರುತ್ತವೆ.

**ಮಾನೇನಾನೇನ ಯೋ ಮಾಸಃ ಪಕ್ಷ ದ್ವಯ ಸಮನ್ವಿತಃ ।**
**ಪಿತೄಣಾಂ ತದಹೋರಾತ್ರಮಿತಿ ಕಾಲವಿದೋ ವಿದುಃ ॥ 6 ॥**

**ಕೃಷ್ಣಪಕ್ಷತ್ವಹಸ್ತೇಷಾಂ ಶುಕ್ಲಪಕ್ಷಸ್ತು ಶಾರ್ವರೀ ॥ 7 ॥**

ಮನುಷ್ಯರ ಒಂದು ತಿಂಗಳು ಪಿತೃಗಳಿಗೆ ಒಂದು ದಿನವೆನ್ನುವರು. ಇದರಲ್ಲಿ ಕೃಷ್ಣಪಕ್ಷವು ಪಿತೃಗಳಿಗೆ ಹಗಲು, ಶುಕ್ಲಪಕ್ಷವಾದರೂ ರಾತ್ರಿಯು, ಕೃಷ್ಣಪಕ್ಷದ

ಅಷ್ಟಮೀಯಿಂದ ಶುಕ್ಲಾಷ್ಟಮಿವರೆಗೂ ಒಂದು ದಿನ. ಈ ಮಧ್ಯದಲ್ಲಿ ಬರುವ ಅಮಾವಾಸ್ಯೆಯು ಮಟಮಟ ಮಧ್ಯಾಹ್ನವು. ಅದಕ್ಕಾಗಿ ಅವರ ತೃಪ್ತಿಗಾಗಿ ತರ್ಪಣ ಬಿಡುವುದು. ಶ್ರಾದ್ಧಾದಿಗಳು ವಿಹಿತವಾಗಿವೆ.

**ಮಾನುಷೇಣ ತು ಮಾನೇನ ಯೋ ವೈ ಸಂವತ್ಸರಃ ಸ್ಮೃತಃ ।**
**ದೇವಾನಾಂ ತದಹೋರಾತ್ರಂ ದಿವಾ ಚೈವೋತ್ತರಾಯಣಮ್ ॥ 8 ॥**

**ದಕ್ಷಿಣಾಯನಂ ಸ್ಮೃತಾ ರಾತ್ರಿಃ ಪ್ರಾಜ್ಞೈಃ ತತ್ತ್ವಾರ್ಥಕೋವಿದೈಃ ॥ 9 ॥**

ಮನುಷ್ಯರ 360 ದಿನಗಳು ದೇವತೆಗಳಿಗೆ ಒಂದು ದಿನವೆನಿಸಿದೆ. ಉತ್ತರಾಯಣವು ದೇವತೆಗಳ ಹಗಲಾದರೆ, ದಕ್ಷಿಣಾಯಣವು ರಾತ್ರಿಯೆನಿಸಿದೆ. ಆದ್ದರಿಂದಲೇ ವಿವಾಹೋಪನಯನಾದಿಗಳು ಉತ್ತರಾಯಣದಲ್ಲಿ ವಿಹಿತವಾಗಿವೆ.

## ಮನುಕಾಲ

**ದಿವ್ಯಮಬ್ಧಂ ದಶಗುಣಮಹೋರಾತ್ರಂ ಮನೋಃ ಸ್ಮೃತಮ್ ।**
**ಅಹೋರಾತ್ರಂ ದಶಗುಣಂ ಮಾನವಃ ಪಕ್ಷ ಉಚ್ಯತೇ ॥ 10 ॥**

ದೇವತೆಗಳ ಹತ್ತು ವರ್ಷಗಳು ಮನುವಿಗೆ ಒಂದು ದಿನವು. ಇಂತಹ ಹತ್ತು ದಿನಗಳು ಮನುವಿನ ಒಂದು ಪಕ್ಷವು. ಇಂತಹ ಹತ್ತು ಪಕ್ಷಗಳು ಸೇರಿದರೆ ಒಂದು ಮನುವಿನ ತಿಂಗಳು. ಇಂತಹ ಹನ್ನೆರಡು ತಿಂಗಳಿಗೆ ಮನುವಿನ ಒಂದು ವರ್ಷವು. ಮೂರು ಋತುಗಳಿಗೆ ಒಂದು ಅಯನ, ಎರಡು ಅಯನ ಒಂದು ವರ್ಷ.

## ಚತುರ್ಯುಗಪ್ರಮಾಣ

**ಚತ್ವಾರ್ಯೇವ ಸಹಸ್ರಾಣಾಂ ವರ್ಷಾಣಾಂ ತು ಕೃತಂ ಯುಗಮ್ ।**
**ತಾವಚ್ಛತೀ ಭವೇತ್ ಸಂಧ್ಯಾ ಸಂಧ್ಯಾಂಶಶ್ಚ ತಥಾ ನೃಪ ॥ 11 ॥**

ರಾಜನೇ, ದೇವತೆಗಳ 4000 ವರ್ಷಗಳು ಕೃತಯುಗ, ಅದರ ಸಂಧಿಕಾಲ 400 ವರ್ಷ. ಇದೇ ರೀತಿ 3000 ವರ್ಷಗಳು ತ್ರೇತಾಯುಗ, 300 ವರ್ಷ ಸಂಧಿಕಾಲ, ಎರಡು ಸಾವಿರ ವರ್ಷಗಳು ದ್ವಾಪರ, 200 ವರ್ಷ ಸಂಧಿಕಾಲ, 1000 ವರ್ಷಗಳು ಕಲಿಯುಗ 100 ವರ್ಷ ಸಂಧಿಕಾಲವು, ಒಟ್ಟು 12000 ವರ್ಷಗಳು. ಇದನ್ನೇ ದಿವ್ಯವರ್ಷ ಎನ್ನುವರು.

## ಮನ್ವಂತರ ಪ್ರಮಾಣ

**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೈವ ಚತುರ್ಯುಗೀ ।**
**ಯುಗಂ ತದೇಕ ಸಪ್ತತ್ಯಾ ಗಣಿತಂ ನೃಪಸತ್ತಮ ॥ 12 ॥**
**ಮನ್ವಂತರಮಿತಿ ಪ್ರೋಕ್ತಂ ಸಂಖ್ಯಾನಾರ್ಥವಿಶಾರದೈಃ ॥ 13 ॥**

ಕೃತ, ತ್ರೇತಾ, ದ್ವಾಪರ, ಕಲಿ ಯುಗಗಳನ್ನು 'ಚತುರ್ಯುಗ'ವೆನ್ನುವರು. ಇಂತಹ ಚತುರ್ಯುಗಗಳು 71 ಬಾರಿ ತಿರುಗಿದಾಗ ಆಗುವ ಕಾಲವೆ 'ಮನ್ವಂತರ'. ಅಂದರೆ ಕೃತಾದಿ ನಾಲ್ಕು ಯುಗಗಳ ಕಾಲ 43,20,000 ವರ್ಷ ಇದನ್ನು 71 ರಿಂದ ಗುಣಿಸಿದಾಗ 30,67,20,000. ಇದಕ್ಕೆ 18,50 ಸಾವಿರ ಸೇರಿಸಬೇಕೆಂದು ಸಂಖ್ಯಾಜ್ಞಾನಿಗಳಾದ ಆಚಾರ್ಯರ ಮತ. 30,67,20,000 ಕ್ಕೆ 18,50,000 ಸೇರಿಸಿ 30,85,70,000 ವರ್ಷಗಳು ಮನ್ವಂತರವೆನಿಸುತ್ತದೆ. ಮನ್ವಂತರದಲ್ಲಿ ಬರುವ ಅಯನಗಳನ್ನು ದಕ್ಷಿಣಾಯನ – ಉತ್ತರಾಯಣವೆನ್ನುವರು.

**ಮನುಃ ಪ್ರಲೀಯತೇ ಯತ್ರ ಸಮಾಪ್ತೇ ಚಾಯನೇ ವಿಭೋ ।**
**ತತೋಽಪರೋ ಮನುಃ ಕಾಲಮೇತಾವಂತಂ ಭವತ್ಯುತ ॥ 14 ॥**

ಉತ್ತರಾಯಣ ಮುಗಿದಾಗ ಮನುವು ಅವನ ಅವಧಿ ಮುಗಿದು ಮತ್ತೊಬ್ಬ ಮನವು ಅಧಿಕಾರವೇರುತ್ತಾನೆ. ಇಂತಹ ಮನುಗಳ ಗುಂಪೇ ಇದೆ. ಯಾವ ಕಾಲದಲ್ಲಿಯೂ ಆ ಪದವಿಗಳು ಶೂನ್ಯವಾಗುವುದಿಲ್ಲ ಹೀಗೆ ಜಗತ್ತು ಪ್ರವಾಹತೋ ಅನಾದಿಯು.

## ಬ್ರಹ್ಮನ ವರ್ಷ

ಮನುಗಳ ಹತ್ತು ಸಾವಿರ ದಿವ್ಯ ವರ್ಷಗಳು ಬ್ರಹ್ಮದೇವನ ಒಂದು ವರ್ಷವೆನ್ನುವರು. ಬ್ರಹ್ಮದೇವನ ಒಂದು ದಿನವು 'ಕಲ್ಪ'ವೆಂದು ಕರೆಯುವರು. ಈ ಕಾಲದಲ್ಲಿ ಶೈಲಗಳು, ಕಾನನಗಳಿಂದ ಕೂಡಿದ ಭೂಮಿಯು ನೀರಿನಲ್ಲಿ ಮುಳುಗುತ್ತದೆ. ಪುನಃ ಸಾವಿರ ಚತುರ್ಯುಗ ಕಳೆದಾಗ ಬ್ರಹ್ಮದೇವನ ಕಲ್ಪವೂ ಮುಗಿದಿರುತ್ತದೆ. ಕೃತವೆ ಮೊದಲಾದ ನಾಲ್ಕು ಯುಗಗಳು 71 ಬಾರಿ ಸುತ್ತಿದಾಗ ಒಂದು ಮನ್ವಂತರವೆಂದು ಮೊದಲೇ ಹೇಳಿರುವೆನು. ಇಂತಹ ಮನ್ವಂತರಗಳು ಹದಿನಾಲ್ಕು ಇದ್ದು ಇವುಗಳನ್ನು ಆಳುವ ಹದಿನಾಲ್ಕು ಮಂದಿ ಮನುಗಳು.

ಇವರು ಪುತ್ರರು ಸಪ್ತರ್ಷಿಗಳು ಮೊದಲಾದವರ ಸ್ಮರಣೆ ಮಾತ್ರದಿಂದ ಕೀರ್ತಿಯನ್ನು ಹೆಚ್ಚಿಸುವುದು. ಧನಧಾನ್ಯ ಸಮೃದ್ಧಿಯಾಗುವುದು.

ಮನ್ವಂತರಗಳಲ್ಲಿ ನಡೆಯುವ ಪ್ರಲಯ-ಸೃಷ್ಟಿ ಹಾಗೂ ಇವುಗಳ ಅಂತರವನ್ನು ನೂರು ವರ್ಷ ಹೇಳಿದರೂ ಮುಗಿಯುವುದಿಲ್ಲ.

**ವಿಸರ್ಗಸ್ಯ ಪ್ರಜಾನಾಂ ವೈ ಸಂಹಾರಸ್ಯ ಚ ಭಾರತ ।**
**ಮನ್ವಂತರೇಷು ಸಂಹಾರಾಃ ಶ್ರೂಯಂತೇ ಭರತರ್ಷಭ ॥ 15 ॥**
**ಸಶೇಷಾಸ್ತತ್ರ ತಿಷ್ಠಂತಿ ದೇವಾಃ ಸಪ್ತರ್ಷಿಭಿಃ ಸಹ ।**
**ಪೂರ್ಣೇಯುಗ ಸಹಸ್ರೇ ತು ಕಲ್ಪ ನಿಃಶೇಷ ಉಚ್ಯತೇ ॥ 16 ॥**
**ತತ್ರ ಸರ್ವಾಣಿ ಭೂತಾನಿ ದಗ್ಧಾನ್ಯಾದಿತ್ಯ ತೇಜಸಾ ॥ 17 ॥**
**ಬ್ರಹ್ಮಾಣಂ ಅಗ್ರತಃ ಕೃತ್ವಾ ಸಹಾದಿತ್ಯಗಣೈಃ ವಿಭುಮ್ ।**
**ಪ್ರವಿಶಂತಿ ಸುರಶ್ರೇಷ್ಠಂ ಹರಿಂ ನಾರಾಯಣಂ ಪ್ರಭುಮ್ ॥ 18 ॥**

ಭರತಶ್ರೇಷ್ಠನೇ! ಬಹುಶಃ ಪ್ರತಿಮನ್ವಂತರದಲ್ಲಿಯೂ ಸೃಷ್ಟಿ ಸ್ಥಿತಿ ಸಂಹಾರಗಳು ನಡೆಯುತ್ತಲೇ ತಪಸ್ಸು ಶಾಸ್ತ್ರಜ್ಞಾನಗಳಿಂದ ಮುಕ್ತರಾದ ಸಪ್ತರ್ಷಿಗಳು ಹಾಗೂ ದೇವತೆಗಳು ಉಳಿದೆ ಇರುತ್ತಾರೆ. ಚತುರ್ಯುಗ ಸಾವಿರ ಬಾರಿ ತಿರುಗಿದರೆ ಒಂದು ಕಲ್ಪ. ಕಲ್ಪಾಂತ್ಯದಲ್ಲಿ ಸಕಲ ಪ್ರಾಣಿಗಳೂ ನಾಶವುಂಟಾಗುತ್ತದೆ. ಪ್ರಖರಕಿರಣವುಳ್ಳ ಹನ್ನೆರಡು ಸೂರ್ಯರು ಉದಯಿಸಿ ವಿಶ್ವದ ಪ್ರಾಣಿಗಳನ್ನು ಸುಟ್ಟುಬೂದಿ ಮಾಡುತ್ತಾರೆ. ಇವನಿಗೆ ಶೇಷ ರುದ್ರರೂ ಸಹಾಯ ಮಾಡುತ್ತಾರೆ. ದೇವತೆಗಳೆಲ್ಲರೂ ಬ್ರಹ್ಮನನ್ನು ಮುಂದೆ ಮಾಡಿಕೊಂಡು ಶ್ರೀಮನ್ನಾರಾಯಣನನ್ನ ಪ್ರವೇಶಿಸುವರು.

### ಶ್ರೀಹರಿಯ ನಿದ್ರಾಲೀಲೆ

**ಯಃ ಸ್ರಷ್ಟಾ ಸರ್ವಭೂತಾನಾಂ ಕಲ್ಪಾಂತೇಷು ಪುನಃ ಪುನಃ ।**
**ಅವ್ಯಕ್ತಃ ಶಾಶ್ವತಃ ದೇವಸ್ತಸ್ಯ ಸರ್ವಮಿದಂ ಜಗತ್ ॥ 19 ॥**
**ತತ್ರ ಸಂವರ್ತತೇ ರಾತ್ರಿಃ ಸಕಲೈಕಾರ್ಣವೇ ತದಾ ।**
**ನಾರಾಯಣೋ ದಧೇ ನಿದ್ರಾಂ ಬ್ರಾಹ್ಮಂ ವರ್ಷಸಹಸ್ರಕಮ್ ॥ 20 ॥**

ಪ್ರತಿಯೊಂದು ಕಲ್ಪದ ಅಂತ್ಯದಲ್ಲಿ ಪುನಃ ಪ್ರಾಣಿಗಳನ್ನು ಸೃಷ್ಟಿಸುವನು. ಅಂತಹ

ಶಶ್ವದೇಕ ಪ್ರಕಾರನೂ ಅವ್ಯಕ್ತನೂ ಆದ ಶ್ರೀಹರಿಗೆ ಈ ಸಕಲ ಪ್ರಪಂಚವು ಅಧೀನವಾಗಿರುತ್ತದೆ. ಈ ಜಗತ್ತೆಲ್ಲವೂ ಅಗಾಧ ಜಲದಲ್ಲಿ ಮುಳುಗಿದ ಸಮಯ ರಾತ್ರಿಕಾಲವಾಗಿರುತ್ತದೆ. ಇದೇ ಶ್ರೀಹರಿಯು ನಿದ್ರಾಕಾಲ. ಇದರ ಅವಧಿ ಸಾವಿರ ದಿವ್ಯ ವರ್ಷಗಳು. ಶ್ರೀಹರಿಯ ಮಲಗಿದಂತೆ ನಟಿಸಿರುವ ಕಾಲವೇ ರಾತ್ರಿ ಕಾಲವು. ಇವನೊಂದಿಗೆ ಬ್ರಹ್ಮನೂ ಮಲಗಿರುತ್ತಾನೆ. ಚತುರ್ಯುಗ ಸಹಸ್ರ ಮುಗಿದ ಮೇಲೆ ಬ್ರಹ್ಮದೇವನು ಎಚ್ಚೆತ್ತು ಕೊಳ್ಳುತ್ತಾನೆ. ಪುನಃ ಸೃಷ್ಟಿ ಪ್ರಾರಂಭವಾಗುತ್ತದೆ. ಹಿಂದಿನ ಕಲ್ಪದಲ್ಲಿ ಹೇಗೆ ಸೃಷ್ಟಿಸಿದ್ದನೋ ಹಾಗೆಯೇ ಸೃಷ್ಟಿಸುವನು. ಆದರೆ ಜೀವಿಗಳು ಮಾತ್ರ ಬೇರೆಯಾಗಿರುತ್ತದೆ. ದೇವತೆಗಳ ಪದವೀ ಅಧಿಕಾರ ಹಿಂದಿನಂತೆಯೇ ಇರುತ್ತದೆ. ಈ ಶರೀರದಲ್ಲಿ ಹಿಂದೆ ಹೇಗೆ ಇತ್ತೊ ಹಾಗೆಯೇ ಇಂದ್ರಿಯಗಳು ಯಥಾವತ್ತಾಗಿರುತ್ತದೆ. ಜೀವಿಗಳು ಮಾತ್ರ ಕರ್ಮಾನುಸಾರ ಮನುಷ್ಯ ಪಕ್ಷಿ, ಪ್ರಾಣಿ, ಸ್ಥಾವರ ಜಂಗಮ ರೂಪದಲ್ಲಿರುತ್ತವೆ.

ಸೂರ್ಯನ ಪ್ರಖರ ಕಿರಣಗಳಿಂದ ಸುಟ್ಟು ಹೋದ ಈ ಜಗತ್ತು ಪುನಃ ದೇವರ್ಷಿ, ಗಂಧರ್ವ, ಯಕ್ಷರಾಕ್ಷಸ, ಮಾನವರಾಗಿ ಹುಟ್ಟುವರು.

**ಸಹಸ್ರಯುಗ ಸಂಖ್ಯಾನಂ ಕೃತ್ವಾ ದಿವಸಮೀಶ್ವರಃ ।**
**ರಾತ್ರಿಂ ಯುಗಸಹಸ್ರಾಂತಾಂ ಕೃತ್ವಾ ಚ ಭಗವಾನ್ ವಿಭುಃ ॥ 21 ॥**

**ಸಂಹರತ್ಯಥ ಭೂತಾನಿ ಸೃಜತೇ ಚ ಪುನಃ ಪುನಃ ।**
**ವ್ಯಕ್ತಾವ್ಯಕ್ತೋ ಮಹಾದೇವೋ ಹರಿಃ ನಾರಾಯಣಃ ಪ್ರಭುಃ ॥ 22 ॥**

ಕಾಲನಿಯಮಕ ಶಿಂಶುಮಾರನು ಕ್ರಮವಾಗಿ ಚತುರ್ಯುಗ ಪರ್ಯಂತ ದಿವಸವನ್ನು ರಾತ್ರಿಯನ್ನೂ ಸೃಜಿಸಿ, ಪ್ರಾಣಿಗಳನ್ನು ಅವರವರ ಕರ್ಮಾನುಸಾರವಾಗಿ ಸೃಷ್ಟಿ ಮಾಡುತ್ತಿರುತ್ತಾನೆ. ಹರಿಯು ಮಾತ್ರ ಬ್ರಹ್ಮಾದಿಗಳಿಗೆ ವ್ಯಕ್ತನಾಗಿಯೂ ಸಾಮಾನ್ಯರಿಗೆ ಅವ್ಯಕ್ತನಾಗಿಯೂ ಇದ್ದು ಜಗದ್ವ್ಯಾಪಾರ ಮಾಡುವನು.

## ಸಾವರ್ಣಿ ಮನು ಜನ್ಮ

**ತಸ್ಯ ತೇ ಕೀರ್ತಯಿಷ್ಯಾಮಿ ಮನೋಃ ವೈವಸ್ವತಸ್ಯ ಹ ।**
**ವಿಸರ್ಗಂ ಭರತಶ್ರೇಷ್ಠ ಸಾಂಪ್ರತಸ್ಯ ಮಹಾದ್ಯುತೇ ॥ 23 ॥**

**ವೃಷ್ಣಿವಂಶ ಪ್ರಸಂಗೇನ ಕಥ್ಯಮಾನಂ ಪುರಾತನಮ್ ।**
**ಯತ್ರೋತ್ಪನ್ನೋ ಮಹಾತ್ಮಾ ಸ ಹರಿರ್ವೃಷ್ಣಿಕುಲೇ ಪ್ರಭುಃ ॥ 24 ॥**
**ಸರ್ವಾಸುರ ವಿನಾಶಾಯ ಸರ್ವಲೋಕ ಹಿತಾಯ ಚ ॥ 25 ॥**

ರಾಜನೇ ! ವೈವಸ್ವತ ಮನ್ವಂತರದಲ್ಲಿ ಸದ್ಯ ನಾವಿದ್ದೇವೆ. ಈ ಮನ್ವಂತರವನ್ನೆ ವೈವಸ್ವತ ಮನ್ವಂತರ ಎನ್ನುವರು. ಶ್ರೀಹರಿಯು ವಿಶೇಷ ಸನ್ನಿಧಾನ ಪಾತ್ರ ವೈವಸ್ವತನು. ಶ್ರೀಹರಿಯಾದರೂ ಸಕಲ ದೈತ್ಯರ ವಿನಾಶಕ್ಕಾಗಿಯೂ, ಸಕಲ ಸಜ್ಜನ ವೃಂದಹಿತಕ್ಕಾಗಿಯೂ ಕಾಲಕಾಲಕ್ಕೆ ಅವತರಿಸುತ್ತಿರುವನು. ಕಂಸಾದಿ ದೈತ್ಯರ ವಿನಾಶಕ್ಕಾಗಿಯೂ ಪಾಂಡವರಂತಹ ಸಜ್ಜನರ ಹಿತಕ್ಕಾಗಿಯೂ ವೃಷ್ಣಿವಂಶದಲ್ಲಿ ಅವತರಿಸಿರುವನು. ವೃಷ್ಣಿವಂಶ ಚಿತ್ತರದಲ್ಲಿ ಅವನ ಅವತಾರಗಳನ್ನು ಹೇಳುವೆ ಎಂದರು.

ಇತಿ ಶ್ರೀಹರಿವಂಶ ಖಿಲಭಾಗದಲ್ಲಿ
ಮನ್ವಂತರಾನುಚರಿತವೆಂಬಲ್ಲಿ
ಎಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ನವಮೋಽಧ್ಯಾಯಃ

## ವೈವಸ್ವತ ಮನುವಿನ ವಂಶಾವಳಿ

*ವೈಶಂಪಾಯನ ಉವಾಚ–*

ವಿವಸ್ವಾನ್ ಕಶ್ಯಪಾತ್ ಜಜ್ಞೇ ದಾಕ್ಷಾಯಿಣ್ಯಾಂ ಅರಿಂದಮ ।
ತಸ್ಯ ಭಾರ್ಯಾಭವತ್ ಸಂಜ್ಞಾ ತ್ವಾಷ್ಟ್ರೀ ದೇವೀ ವಿವಸ್ವತಃ ॥ 1 ॥
ಸುರೇಣು ರಿತಿ ವಿಖ್ಯಾತಾ ತ್ರಿಷು ಲೋಕೇಷು ಭಾವಿನೀ ।
ಸಾ ವೈ ಭಾರ್ಯಾ ಭಗವತೀ ಮಾರ್ತಂಡಸ್ಯ ಮಹಾತ್ಮನಃ ॥ 2 ॥
ಭರ್ತೃರೂಪೇಣ ನಾತುಷ್ಯತ್ ರೂಪಯೌವ್ವನಶಾಲಿನೀ ।
ಸಂಜ್ಞಾ ನಾಮ ಸುತಪಸಾ ದೀಪ್ತೇನೇಹ ಸಮನ್ವಿತಾ ॥ 3 ॥
ಆದಿತ್ಯಸ್ಯ ಹಿ ತದ್ರೂಪಂ ಮಂಡಲಸ್ಯ ಸುತೇಜಸಾ ।
ಗಾತ್ರೇಷು ಪರಿದಗ್ಧಂ ವೈ ನಾತಿಕಾಂತಮಿವಾಭವತ್ ॥ 4 ॥

ಸೂರ್ಯನು ಅದಿತಿ ದೇವಿಯಲ್ಲಿ ಕಶ್ಯಪರಿಂದ ಜನಿಸಿದನು. ಇವನು ದೇವತೆಗಳ ಬಡಿಗನಾದ ವಿಶ್ವಕರ್ಮನ ಪುತ್ರಿಯಾದ ಸಂಜ್ಞೆಯನ್ನು ವಿವಾಹವಾಗಿದ್ದ. ಇವಳನ್ನು 'ಸುರೇಶ್ವರೀ' ಎಂದು 'ಸುರೇಣು' ಎಂದು ಕೆಲವಡೆ ಕರೆಯುವರು. ಮಹಾನುಭಾವನಾದ ಸೂರ್ಯನ ಪತ್ನಿಯಾಗಿ ರೂಪ ಯೌವ್ವನದಿಂದಲೂ ಪರಿಶೋಭಿಸುತ್ತಿದ್ದ ಸಂಜ್ಞೆಗೆ ಸೂರ್ಯ ದೇವನ ಮೇಲೆ ಬಹಳ ಪ್ರೀತಿ ಆದರಗಳಿದ್ದವು. ಆದರೆ ತನ್ನ ಪತಿದೇವನ ನಿತ್ಯವೂ ಅತ್ಯಧಿಕ ಬಿಸಿಯ ಬೇಗೆಯಿಂದ ಬಳಲಿ ಅಪ್ರಸನ್ನಳಾಗಿದ್ದಳು. ಸೂರ್ಯನ

ಆಲಿಂಗನಾದಿಗಳಿಂದ ಅವಳ ಅಂಗಾಂಗಗಳೆಲ್ಲ ಅಗ್ನಿಸ್ಫುಲಿಂಗ ಸಮೂಹವನ್ನೇ ಆಲಿಂಗಿಸಿದ ಅನುಭವವಾಗುತ್ತಿತ್ತು.

**ನ ಖಲ್ವಯಂ ಮೃತೋऽಂಡಸ್ಥ ಇತಿ ಸ್ನೇಹಾದಭಾಷತ ।**
**ಅಜ್ಞಾನಾತ್ ಕಶ್ಯಪಸ್ತಸ್ಮಾತ್ ಮಾರ್ತಂಡ ಇತಿ ಚೋಚ್ಯತೇ ॥ 5 ॥**
**ತೇಜಸ್ತ್ವಭ್ಯಧಿಕಂ ತಾತ ನಿತ್ಯಮೇವ ವಿವಸ್ವತಃ ।**
**ಯೇನಾತಿ ತಾಪಯಾಮಾಸ ತ್ರೀನ್‌ಲ್ಲೋಕಾನ್ ಕಶ್ಯಪಾತ್ಮಜಃ ॥ 6 ॥**

ಸೂರ್ಯನು ಅದಿತಿಯ ಗರ್ಭದಲ್ಲಿದ್ದಾಗ ಬುಧನು ಭಿಕ್ಷೆಗಾಗಿ ಬಂದನು. ಶೀಘ್ರವಾಗಿ ಭಿಕ್ಷೆ ನೀಡದಿದ್ದಾಗ ಕೋಪಗೊಂಡ ಬುಧನು - ಯಾವ ಗರ್ಭಭಾರದಿಂದ ನನಗೆ ತಡೆ ಮಾಡಿದೆಯೋ ಆ ಗರ್ಭವು ಮೃತವಾಗಲಿ ಎಂದು ಶಪಿಸಿದನು. ಅದಿತಿಯು ಅತ್ಯಂತ ನೊಂದು ಕೊಂಡಳು. ನನ್ನ ಗರ್ಭಸ್ಥ ಅಂಡವು ಮೃತವೇ ಆಯಿತೆಂದು ಅಜ್ಞಾನದಿಂದ ಇರುತ್ತಿರುಲಾಗಿ ಗರ್ಭಾಶಯದಲ್ಲಿದ್ದ ಮಗುವನ್ನು ಕಶ್ಯಪರು ತಮ್ಮ ಶಕ್ತಿಯಿಂದಾಗಿ ಬದುಕಿಸಿದ್ದರು. ಮಗು ಮೃತವಾಗಿಲ್ಲ ಎಂದರು. ಇದರಿಂದಾಗಿ 'ಮಾರ್ತಾಂಡ' ಎಂದು ಸೂರ್ಯನಿಗೆ ಹೆಸರಾಯಿತು. ಕಶ್ಯಪರ ತೇಜಸ್ಸಿನಿಂದ ಹುಟ್ಟಿದ ಇವನು ತನ್ನ ಕಾಂತಿಯಿಂದ ಮೂರು ಲೋಕಗಳನ್ನು ಬೆಳಗುವನು

## ಸೂರ್ಯನ ಮಕ್ಕಳು

**ತ್ರೀಣ್ಯಪತ್ಯಾನಿ ಕೌರವ್ಯ ಸಂಜ್ಞಾಯಾಂ ತಪತಾಂ ವರಃ ।**
**ಆದಿತ್ಯೋ ಜನಯಾಮಾಸ ಕನ್ಯಾಂ ದ್ವೌ ಚ ಪ್ರಜಾಪತಿಃ ॥ 7 ॥**
**ಮನುಃ ವೈವಸ್ವತಃ ಪೂರ್ವಂ ಶ್ರಾದ್ಧದೇವಃ ಪ್ರಜಾಪತಿಃ ।**
**ಯಮಶ್ಚ ಯಮುನಾ ಚೈವ ಯಮಜೌ ಸಂಬಭೂವತುಃ ॥ 8 ॥**

ಸೂರ್ಯನಿಗೆ ಸಂಜ್ಞೆಯಲ್ಲಿ 1) ವೈವಸ್ವತಮನು, 2) ಯಮಧರ್ಮ, 3) ಯಮುನಾ ಎಂಬ ಮೂವರು ಪುತ್ರರಾದರು. ಯಮ-ಯಮುನಾ ಅವಳಿ ಮಕ್ಕಳಾದರು. ಸೂರ್ಯನ ಕಾಂತಿ ದಿನದಿನಕ್ಕೂ ಬೆಂಕಿಯ ಮೊಟ್ಟೆಯಂತೆ ದಹಿಸುತ್ತಲೇ ಇತ್ತು. ಸಂಜ್ಞೆಗೆ ಸೂರ್ಯನ ಜೊತೆ ಬಾಳುವುದೆಂದರೆ ಬೆಂಕಿಯೊಂದಿಗೆ ಸರಸಾಟವೆನಿಸಿತು. ಅದಕ್ಕಾಗಿ ತನ್ನಂತಯೆ ರೂಪವುಳ್ಳ ತನ್ನ ಛಾಯೆಯಲ್ಲಿ ಜೀವ ತುಂಬಿದಳು. ಮಾಯಾಮಯಿಯಾದ ಸಂಜ್ಞೆಯು ತನ್ನ ನೆರಳಿನಿಂದಲೇ ತನ್ನಂತಯೇ ಇರುವ ಸ್ತ್ರೀಯನ್ನು ಸೃಷ್ಟಿಸಿ ಹೀಗೆಂದಳು.

*ಸಂಜ್ಞೋವಾಚ –*

**ಅಹಂ ಯಾಸ್ಯಾಮಿ ಭದ್ರಂ ತೇ ಸ್ವಮೇವ ಭವನಂ ಪಿತುಃ ।**
**ತ್ವಯೇಹ ಭವನೇ ಮಹ್ಯಂ ವಸ್ತವ್ಯಂ ನಿರ್ವಿಕಾರಯಾ ॥ 9 ॥**
**ಇಮೌ ಚ ಬಾಲಕೌ ಮಹ್ಯಂ ಕನ್ಯಾ ಚೈವ ಸಮಧ್ಯಮಾ ।**
**ಸಂಭಾವ್ಯಾಸ್ತೇ ನ ಚಾಖ್ಯೇಯಮಿದಂ ಭಗವತೇ ಕ್ವಚಿತ್ ॥ 10 ॥**

ತಂಗಿ ಛಾಯೆಯೆ, ನಾನು ನನ್ನ ತಂದೆಯ ಮನೆಗೆ ತೆರಳುವೆನು. ನೀನು ನನ್ನ ಜಾಗದಲ್ಲಿದ್ದು ನನ್ನ ಹೆಸರಿನಿಂದಲೇ ಸಂಸಾರ ಮಾಡು. ನನ್ನ ಮಕ್ಕಳಾದ ಶ್ರಾದ್ಧದೇವ, ಯಮ, ಯಮಿಯರನ್ನು ನೀನು ನಿನ್ನ ಮಕ್ಕಳಂತೆ ಪ್ರೀತಿಯಿಂದ ರಕ್ಷಿಸು. ನಾನು ನಿನ್ನನ್ನು ಇಲ್ಲಿ ಇರಿಸಿ ತಂದೆಯ ಮನೆಗೆ ಹೋಗಿದ್ದನ್ನು ಸೂರ್ಯದೇವನಿಗೆ ಎಂತಹ ಸಂದರ್ಭದಲ್ಲಿಯೂ ಹೇಳಬಾರದು ಎಂದಳು.

*ಛಾಯೋವಾಚ –*

**ಆ ಕಚಗ್ರಹಣಾದ್ ದೇವಿ ಆಶಾಪಾನ್ ನೈವ ಕರ್ಹಿಚಿತ್ ।**
**ಆಖ್ಯಾಸ್ಯಾಮಿ ಮತಂ ತುಭ್ಯಂ ಗಚ್ಛ ದೇವಿ ಯಥಾ ಸುಖಮ್ ॥ 11 ॥**

ಸಂಜ್ಞಾದೇವಿಯೇ, ನನ್ನ ಪತಿ ತಲೆ ಕೂದಲು ಹಿಡಿದು ಎಳೆದು ನೀನಾರು ಹೇಳು ಎಂದಾಗ ಹಾಗೂ ನನ್ನನ್ನು ಶಪಿಸುವ ಪ್ರಸಂಗದವರೆಗೂ ಈ ರಹಸ್ಯವನ್ನು ಯಾವಾಗಲೂ ಯಾರಿಗೂ ಹೇಳುವುದಿಲ್ಲ.

**ತ್ವಷ್ಟುಃ ಸಮೀಪಮಗಮದ್ ವ್ರೀಡಿತೇವ ತಪಸ್ವಿನೀ ।**
**ಪಿತುಃ ಸಮೀಪಗಾ ಸಾತು ಪಿತ್ರಾ ನಿರ್ಭರ್ತ್ಸಿತಾ ತದಾ ॥ 12 ॥**

ಇಷ್ಟು ಧೈರ್ಯ ನೀಡಿದ ಮೇಲೆ ಮಹಾತಪಸ್ವಿನಿಯಾದ ಸಂಜ್ಞೆಯ ನಾಚಿಕೆಪಟ್ಟುಕೊಂಡೇ ತನ್ನ ತಂದೆಯ ಮನೆಗೆ ಹೋದಳು. ಆದರೆ ಮಹಾ ನಿಷ್ಠುರವಾದಿಯಾದ ತ್ವಷ್ಟ್ರುವು ಗಂಡನನ್ನು ತ್ಯಜಿಸಿ ಬಂದ ಮಗಳನ್ನು ತನ್ನ ಮನೆಯಲ್ಲಿ ಇರಿಸಿಕೊಳ್ಳಲಿಲ್ಲ. ಮಗಳೇ, ಏನಾದರೂ ಎಂತಿದ್ದರೂ ಪತಿಯೇ ಸತಿಗೆ ಗತಿ. ಇಲ್ಲಿಂದ ನಿನ್ನ ಮನೆಗೆ ಹಿಂತಿರುಗು ಎಂದನು. ಸಂಜ್ಞೆಯು ತನ್ನ ಕಷ್ಟಗಳನ್ನು ತೋಡಿಕೊಂಡರೂ ಕೇಳದೆ ಗಂಡನ ಮನೆಗೆ ಹೋಗಲೇಬೇಕೆಂದು ಹೇಳಿದನು. ಸಂಜ್ಞೆಗೆ ಬೇರೆ ಮಾರ್ಗ ಕಾಣಲಿಲ್ಲ.

**ಭರ್ತುಃ ಸಮೀಪಂ ಗಚ್ಛೇತಿ ನಿಯುಕ್ತಾ ಚ ಪುನಃ ಪುನಃ ।**
**ಆಗಚ್ಛತ್ ವಡವಾ ಭೂತ್ವಾಽಽಚ್ಛಾದ್ಯ ರೂಪಮನಿಂದಿತಾ ॥ 13 ॥**
**ಕುರೂನಥ ಉತ್ತರಾನ್ ಗತ್ವಾ ತೃಣಾನ್ಯೇವ ಚಚಾರ ಹ ॥ 14 ॥**

ಸಂಜ್ಞೆಗೆ ತನ್ನ ಮನೆ. ತನ್ನ ತಂದೆ ಮನೆ ಎರಡೂ ತಪ್ಪಿದವು. ದುಃಖಿತಳಾದ ಅವಳು ಉತ್ತರ ಕುರುದೇಶಕ್ಕೆ ನಡೆದಳು. ತನ್ನ ರೂಪಸೌಂದರ್ಯದಿಂದ ಮುಗ್ಧರಾದ ದೈತ್ಯದಾನವರು ತನ್ನೆಡೆಗೆ ಆಕರ್ಷಿತರಾಗಿ ಬರಬಹುದೆಂದು ಭಯದಿಂದ ದೇವತಾರೂಪ ತ್ಯಜಿಸಿ ಹೆಣ್ಣು ಕುದುರೆಯ ರೂಪ ಧರಿಸಿದಳು. ಕುದುರೆಯ ಸ್ವಭಾವದಂತೆ ಹುಲ್ಲುಗಳನ್ನು ತಿನ್ನತೊಡಗಿದಳು.

## ಸಾವರ್ಣಿ ಮನು ಜನ್ಮ

**ದ್ವಿತೀಯಾಯಾಂ ತು ಸಂಜ್ಞಾಯಾಂ ಸಂಜ್ಞೇಯಮಿತಿ ಚಿಂತಯನ್ ।**
**ಆದಿತ್ಯೋ ಜನಯಾಮಾಸ ಪುತ್ರ ಮಾತ್ಮಸಮಂ ತದಾ ॥ 15 ॥**
**ಪೂರ್ವಜಸ್ಯ ಮನೋಸ್ತಾತ ಸದೃಶೋಽಯಮಿತಿ ಪ್ರಭುಃ ।**
**ಸವರ್ಣತ್ವಾತ್ ಮನೋರ್ಭೂಯಃ ಸಾವರ್ಣ ಇತಿ ಚೋಕ್ತವಾನ್ ॥ 16 ॥**

ಎರಡನೆ ಛಾಯಾದೇವಿಯನ್ನು ಸಂಜ್ಞೆಯೆಂದೆ ಭಾವಿಸಿದ ಸೂರ್ಯನು ತನ್ನ ಹೊಸ ಹೆಂಡತಿಯಲ್ಲಿ ಪ್ರೀತಿಯಿಂದ ಸಂಸಾರ ಮಾಡುತ್ತಿದ್ದನು. ಇದರಿಂದಾಗಿ ತನಗೆ ಸಮಾನರಾದ ಪುತ್ರರನ್ನು ಛಾಯೆಯಿಂದಲೂ ಪಡೆದನು.

ಛಾಯೆಯಲ್ಲಿ ಜನಿಸಿದ ಮಗನು ತನಗೆ ಈ ಮೊದಲು ಜನಿಸಿದ ವೈವಸ್ವತ ಮನುವಿನಂತೆಯೇ ಸಮಾನಕಾಂತಿ ಸಮಾನ ವರ್ಣಗಳಿದ್ದದ್ದರಿಂದ ಸೂರ್ಯನು ತನ್ನ ಮಗನಿಗೆ 'ಸಾವರ್ಣ' ಎಂದು ಹೆಸರಿಟ್ಟನು.

## ಶನೈಶ್ಚರ ಉತ್ಪತ್ತಿ

**ಮನುರೇವಾಭವನ್ ನಾಮ್ನಾ ಸಾವರ್ಣ ಇತಿ ಚೋಚ್ಯತೇ ।**
**ದ್ವಿತೀಯೋ ಯಃ ಸುತಸ್ತ ಸ್ಯಾಃ ಸ ವಿಜ್ಞೇಯಃ ಶನೈಶ್ಚರಃ ॥ 17 ॥**
**ಸಂಜ್ಞಾತು ಪಾರ್ಥಿವೀ ತಾತ ಸ್ವಸ್ಯ ಪುತ್ರಸ್ಯ ವೈ ತದಾ ।**
**ಚಕಾರಾಭ್ಯಧಿಕಂ ಸ್ನೇಹಂ ನ ತಥಾ ಪೂರ್ವಜೇಷು ವೈ ॥ 18 ॥**

ಅನಂತರದಲ್ಲಿ ಛಾಯಾದೇವಿಗೆ ಸೂರ್ಯನಿಂದ ಶನೈಶ್ಚರನು ಜನಿಸಿದನು.

ಹೀಗೆ ಸೂರ್ಯನಿಂದ ಛಾಯಾದೇವಿಗೆ ಸಾವರ್ಣಿಮನು, ಶನೈಶ್ಚರ ಎಂಬ ಇಬ್ಬರು ಮಕ್ಕಳಾದರು. ಇವರು ಜನಿಸಿದ ನಂತರ ತನ್ನ ಸವತಿಯಾದ ಸಂಜ್ಞೆಯ ಮಕ್ಕಳಾದ ವೈವಸ್ವತಮನು, ಯಮ-ಯಾಮಿರಲ್ಲಿ ಪ್ರೀತಿ ಕಡಮೆಯಾಯಿತು. ತನ್ನ ಮಕ್ಕಳಲ್ಲಿ ಅತ್ಯಧಿಕ ಸ್ನೇಹ ಹಾಗೂ ಅಕ್ಕನ ಮಕ್ಕಳಲ್ಲಿ ಸ್ಪಷ್ಟವಾಗಿ ಭೇದವನ್ನು ಮಾಡತೊಡಗಿದಳು.

**ಮನುಸ್ತಸ್ಯಾಕ್ಷಮತ್ ತತ್ತು ಯಮಃ ತಸ್ಯಾಃ ನ ಚಕ್ಷಮೇ ।**
**ತಾಂ ಸ ರೋಷಾಚ್ಚ ಬಾಲ್ಯಾಚ್ಚ ಭಾವಿನೋಽರ್ಥಸ್ಯ ವೈ ಬಲಾತ್ ॥19 ॥**
**ಪದಾ ಸಂತರ್ಜಯಾಮಾಸ ಸಂಜ್ಞಾಂ ವೈವಸ್ವತೋ ಮನುಃ ॥ 20 ॥**

## ಯಮನಿಗೆ ಛಾಯೆಯ ಶಾಪ

**ತಂ ಶಶಾಪ ತತಃ ಕ್ರೋಧಾತ್ ಸಾವರ್ಣಜನನೀ ನೃಪ ।**
**ಚರಣಃ ಪತತಾಮೇಷಃ ತವೇತಿ ಭೃಶದುಃಖಿತಾ ॥ 21 ॥**

ಛಾಯೆಯು ತನ್ನ ಮಕ್ಕಳಲ್ಲಿ ಮೋಹ ಮಮತೆಯನ್ನು, ತನ್ನಲ್ಲಿ ಹಾಗೂ ಮನು ಯಮನೆಯರಲ್ಲಿ ಅಸಡ್ಡೆಯನ್ನು ಯಮಧರ್ಮನು ನೋಡುತ್ತಿದ್ದನು. ಇದು ದಿನೇ ದಿನೇ ಅಧಿಕವಾದಾಗ ನಿಷ್ಠುರವಾದಿಯಾದ ಯಮನು ಸಹಿಸದಾದನು. ಮನುವು ಈ ಅಸಡ್ಡೆಯನ್ನು ಹೇಗೋ ಸಹಿಸಿಕೊಂಡನು. ಯಮನಿನ್ನೂ ಬಾಲಕನಾದ್ದರಿಂದ ತಾಯಿಯ ಪಕ್ಷಪಾತ ಸಹಿಸದಾದನು. ಕೋಪದಿಂದ ಕಾಲನ್ನೆತ್ತಿ ಒದ್ದು ಹಾಕುವೆನೆಂದೂ ಛಾಯೆಯನ್ನು ಬೆದರಿಕೆ ಹಾಕಿದನು. ಇದರಲ್ಲಿ ಮುಂದಿನ ಪ್ರಯೋಜನವೂ ಅಡಗಿತ್ತು. ಛಾಯೆಯು ದುಃಖದುಮ್ಮಾನಗಳಿಂದ ಕೋಪಗೊಂಡು ಮೂರ್ಖನೇ, ನನ್ನನ್ನು ಒದೆಯಲು ಎತ್ತಿರುವ ನಿನ್ನ ಕಾಲುಗಳು ಬಿದ್ದು ಹೋಗಲಿ ಎಂದು ಶಪಿಸಿದಳು. ಯಮದೇವನು ಶಾಪದಿಂದ ಭಯಭೀತನಾಗಿ ತಂದೆ ಸೂರ್ಯದೇವನ ಮುಂದೆ ಅರುಹಿದ.

**ಮಾತ್ರಾ ಸ್ನೇಹೇನ ಸರ್ವೇಷು ವರ್ತಿತವ್ಯಂ ಸುತೇಷು ವೈ ।**
**ಸೇಯಂ ಅಸ್ಮಾನಪಾಹಾಯ ಯವೀಯಾಂಸಂ ಬುಭೂಷತಿ ॥ 22 ॥**

ತಂದೆಯೇ ! ತಾಯಿಯಾದವಳು ಎಲ್ಲಾ ಮಕ್ಕಳಲ್ಲಿಯೂ ಸಮಾನ ಪ್ರೀತಿಯಿಂದ ನೋಡಬೇಕು. ನಮ್ಮ ತಾಯಿಯಾದರೂ ಸಾವರ್ಣಿ ಮನು,

ಶನೈಶ್ಚರರಲ್ಲಿ ಅಪಾರ ಪ್ರೀತಿ, ನಾನು ವೈವಸ್ವತ ಮನುವಿನಲ್ಲಿ ತಿರಸ್ಕಾರ. ನನ್ನಲ್ಲಿ ಇದನ್ನು ನೋಡಿ ಕೋಪದಿಂದಲೂ, ಬಾಲ್ಯಚಾಪಲ್ಯದಿಂದಲೂ ತಾಯಿಗೆ ಕಾಲನ್ನೆತ್ತಿ ಭಯಪಡಿಸಿದೆ ಅಷ್ಟೆ. ನನ್ನ ಕಾಲು ಬಿದ್ದು ಹೋಗಲಿ ಎಂದು ಶಪಿಸಿರುವಳು. ನನ್ನ ಕಾಲು ಬೀಳದಂತೆ ಕಾಪಾಡು ಎಂದನು.

*ಛಾಯೋವಾಚ–*

**ಯಸ್ಮಾತ್ ತೇ ಪೂಜನೀಯಾಹಂ ಲಂಘಿತಾಸ್ಮಿ ತ್ವಯಾ ಸುತ ।**
**ತಸ್ಮಾತ್ ತವೈಷ ಚರಣಃ ಪತಿಷ್ಯತಿ ನ ಸಂಶಯಃ ॥ 23 ॥**

ಪುತ್ರನೇ ನಾನು ನಿನಗೆ ಪೂಜ್ಯಳಾಗಿರುವೆನು. ಹೀಗಿದ್ದರೂ ನನ್ನನ್ನು ಒದೆಯಲು ಕಾಲೆತ್ತಿರುವಿ. ಇದರಿಂದಾಗಿ ನನ್ನ ಶಾಪದಂತೆ ನಿನ್ನ ಕಾಲು ಬಿದ್ದು ಹೋಗುತ್ತವೆ.

**ಅಪತ್ಯಂ ದುರಪತ್ಯಂ ಸ್ಯಾತ್ ನಾಂಬಾ ಕುಜನನೀ ಭವೇತ್ ।**
**ಶಪ್ತೋಽಹಮಸ್ಮಿ ಲೋಕೇಶ ಜನನ್ಯಾ ತಪತಾಂ ವರ ॥ 24 ॥**

ತಾಯಿಯೇ, ಲೋಕದಲ್ಲಿ ಕೆಟ್ಟ ಮಗ ಸಿಗಬಹುದು, ಆದರೆ ಕೆಟ್ಟ ತಾಯಿಯೆಂಬುದನ್ನು ಕೇಳಲ್ಲವಲ್ಲ. ಹೀಗಿರುವಾಗ ತಾಯಿಯಾದ ನೀನು ನನಗೆ ಶಾಪ ನೀಡುವುದು ಹೇಗೆ? ನೀನು ನನ್ನ ತಾಯಿಯೇ ಎಂಬ ಸಂಶಯ ಮೂಡುತ್ತಿದೆ. ಪುನಃ ತಂದೆಗೆ ಯಮನು ಹೇಳುವನು.

ತಂದೆಯೇ, ಈ ತಾಯಿಯ ಶಾಪದಂತೆ ನನ್ನ ಕಾಲುಗಳು ಬಿದ್ದು ಹೋಗುವುದು ಬೇಡ ಎಂದನು. ಅದಕ್ಕೆ ಸೂರ್ಯನು –

**ನ ಶಕ್ಯಮನ್ಯಥಾಕರ್ತುಂ ಮಯಾ ಮಾತುರ್ವಚಸ್ತವ ।**
**ಕೃಮಯೋ ಮಾಂಸಮಾದಾಯ ಯಾಸ್ಯಂತಿ ಧರಣೀತಲಮ್ ॥ 25 ॥**
**ಶಾಪಸ್ಯ ಪರಿಹಾರೇಣ ತ್ವಂ ಚ ತ್ರಾತೋ ಭವಿಷ್ಯಸಿ ।**

ಧರ್ಮರಾಜನೇ, ಸತ್ಯಸಂಧನೂ ಧರ್ಮಜ್ಞನೂ ಆದ ನಿನ್ನನ್ನೆ ಕೋಪವು ಆವರಿಸಿ ಬಿಟ್ಟಿತು. ಇದರಿಂದಾಗಿ ನಿನಗೆ ಮಹಾದುಃಖವಾಗುತ್ತದೆ. ನಿನ್ನ ತಾಯಿಯ ಶಾಪವನ್ನು ಬದಲಿಸಲು ನಾನು ಅಸಮರ್ಥನು. ನಿನ್ನ ತಾಯಿಯ ಮಾತು ನಡೆದೆ ತೀರುತ್ತದೆ. ಆದರೂ ಧೃತಿಗೆಡಬೇಡ. ಶಾಪದಂತೆ ನಿನ್ನ ಕಾಲುಗಳಲ್ಲಿ ಹುಳ ಕಾಣಿಸಿಕೊಂಡು, ನಿನ್ನ ಕಾಲಿನ ಮಾಂಸವು ಕಾಲಿನಿಂದ

ಭೂಮಿಗೆ ಬರುತ್ತವೆ. ಪೂರ್ಣವಾಗಿ ಮಾಂಸ ತೆಗೆದುಕೊಂಡ ಮೇಲೆ ಪುನಃ ನಿನಗೆ ಕಾಲು ಹುಟ್ಟುತ್ತದೆ.

ನಂತರ ಸೂರ್ಯದೇವನು ಸಂಜ್ಞೆಯೇ ! ಎಲ್ಲಾ ಮಕ್ಕಳು ಸಮಾನರಾಗಿಯೆ ಇರುವಾಗ ನಾಲ್ವರಲ್ಲಿ ಪಕ್ಷಪಾತ ಬುದ್ಧಿ ನಿನಗೇಕೆ ! ಹೀಗೆ ಅನೇಕ ಪ್ರಶ್ನೆ ಕೇಳಿದರೂ ಅವಳು ನಗುತ್ತಿದ್ದಳೇ ಹೊರತು ಉತ್ತರ ನೀಡಲಿಲ್ಲ.

ಸೂರ್ಯನಿಗೆ ಆಶ್ಚರ್ಯವಾಗಿ ಧ್ಯಾನದೃಷ್ಟಿಯಿಂದ ಸರ್ವ ವಿಷಯವನ್ನು ಗ್ರಹಿಸಿದನು. ಛಾಯೆಯ ತಲೆಯ ಮುಡಿಯನ್ನು ಹಿಡಿದು ಕೇಳಿದಾಗ – ನನ್ನ ಕಚಗ್ರಹಣ ಮಾಡಿ ಕೇಳುವವರೆಗೂ ಯಾರಿಗೂ ರಹಸ್ಯ ಹೇಳಲಾರೆ ಎಂದಿದ್ದರಿಂದ ಈಗ ಹೇಳಲೇ ಬೇಕಾಯಿತು. ಅವಳು ನಡೆದ ವೃತ್ತಾಂತವೆಲ್ಲವನ್ನೂ ತಿಳಿಸಿದಳು. ಸೂರ್ಯನು ಕೋಪದಿಂದ ತನ್ನ ಮಾವನಾದ ತ್ವಷ್ಟ್ರುವಿನ ಮನೆಗೆ ಹೋದ. ತನ್ನನ್ನು ವಂಚಿಸಿ ತಂದೆಯ ಮನೆಗೆ ಹೋದಳೆಂದು ಕಿಡಿಕಿಡಿಯಾದ ಸೂರ್ಯನನ್ನೂ ಮಾವನು ಸಂತೈಸಿದನು. ನಯ–ವಿನಯ ಮಾತುಗಳಿಂದ ಹೀಗೆಂದನು.

**ತವಾತಿತೇಜಸಾವಿಷ್ಟಮಿದಂ ರೂಪಂ ನ ಶೋಭತೇ ।**
**ಅಸಹಂತೀ ಚ ತತ್ ಸಂಜ್ಞಾ ವನೇ ಚರತಿ ಶಾದ್ವಲೇ ॥ 26 ॥**

**ನಿತ್ಯಂ ತಪಸ್ಯಾಭಿರತಾಂ ವಡವಾರೂಪ ಧಾರಿಣೀಮ್ ।**
**ಪರ್ಣಾಹಾರಕೃಶಾಂ ದೀನಾಂ ಜಟಿಲಾಂ ಬ್ರಹ್ಮಚಾರಿಣೀಂ ॥ 27 ॥**

**ಹಸ್ತಿ ಹಸ್ತ ಪರಿಕ್ಲಿಷ್ಟಾಂ ವ್ಯಾಕುಲಾಂ ಪದ್ಮಿನೀಮಿವ ॥ 28 ॥**

ಸೂರ್ಯನೇ, ನಿನ್ನ ತೇಜಸ್ಸು ಪ್ರಕರವಾಗಿದೆ. ಈ ತೇಜ ಪ್ರಕರ್ಷವನ್ನು ಕೋಮಲೆಯಾದ ಸಂಜ್ಞೆಯು ಸಹಿಸದಾದಳು. ಬೆಂಕಿಯ ಪರ್ವತದಂತಿರುವ ನಿನ್ನ ಆಲಿಂಗನ ಸಹಿಸದೆ ನಿನಗೆ ಹೇಳಲಾಗದೆ ತನ್ನ ಪ್ರತಿರೂಪವಾದ ನೆರಳನಾರಿಯನ್ನು ಸೃಷ್ಟಿಸಿ ತಪಸ್ಸಿಗೆ ಹೊರಟಿದ್ದಾಳೆ. ಅವಳು ಆನೆಯ ಸೊಂಡಿಲಿನಿಂದ ಧ್ವಂಸವಾದ ಕಮಲಿನೀಯಂತಿರುವಳು. ಅತ್ಯಂತ ದುಃಖಗೊಂಡಿದ್ದಾಳೆ. ಸಂಜ್ಞೆಯು ಸದಾಚಾರಿಯಾಗಿದ್ದು 'ವಡವಾ' ರೂಪದಿಂದ ಯೋಗ ಬಲದಿಂದ ಸ್ವೀಕರಿಸಿ ಸೂರ್ಯಾಂತರ್ಗತ ನಾರಾಯಣನನ್ನೆ ಧ್ಯಾನಿಸುತ್ತಿರುವಳು. ಅವಳು ಅತ್ಯಂತ ಕೃಶಳೂ ದೀನಳೂ ಜಡೆಗಟ್ಟಿದ ಕೇಶರಾಶಿವುಳ್ಳವಳೂ ಆಗಿದ್ದಾಳೆ. ಅನಿಂದ್ಯ ಸುಂದರವಾದ ತನ್ನ ಹೆಣ್ಣಿನ ಸೌಂದರ್ಯ ಕಂಡು ಕಂಡವರ ಕಣ್ಣು ಕೊರೈಸಿ ವಕ್ರದೃಷ್ಟಿ ಬೀಳದಿರಲೆಂದೆ

ಹೆಣ್ಣು ಕುದುರೆ ರೂಪಧರಿಸಿರುವಳು. ಇಂತಹ ನಿನ್ನ ಪತ್ನಿಯನ್ನು ನೀನೆ ನೋಡುವಿಯಂತೆ ಎಂದನು.

**ಅನುಕೂಲಂ ತು ದೇವೇಶ ಯದಿ ಸ್ಯಾನ್ ಮಮ ತನ್ಮತಮ್ ।**

**ರೂಪಂ ನಿರ್ವರ್ತಯಾಮ್ಯದ್ಯ ತವ ಕಾಂತಿಮರಿಂದಮ ॥ 29 ॥**

**ರೂಪಂ ವಿವಸ್ವತಶ್ಚಾಸೀತ್ ತಿರ್ಯಗೂರ್ಧ್ವ ಸಮಂ ತು ವೈ ॥ 30 ॥**

ಶತ್ರು ಕರ್ಶನನೇ, ನೀನು ನನ್ನ ಮಾತನ್ನು ಕೇಳುವಿಯಾದರೆ ಪ್ರಖರವಾಗಿರುವ ಅತ್ಯಂತ ಉಗ್ರ ರೂಪವನ್ನು ಬದಲಿಸಿ ಸೌಮ್ಯವೂ ಸುಂದರವೂ ಶಾಂತವೂ ಆದ ರೂಪ ಬರುವಂತೆ ಮಾಡುವೆನು.

ಸೂರ್ಯನ ರೂಪವು ಈ ಹಿಂದೆ ಮೇಲಕ್ಕೂ ಕೆಳಭಾಗಕ್ಕೂ ಅಡ್ಡಡ್ಡವಾಗಿಯೂ ಸಮವಾಗಿಯೂ ಹರಡಿತ್ತು. ಅಂತಹ ಸರ್ವತ್ರ ವ್ಯಾಪ್ತವಾದ ರೂಪವಿದ್ದದ್ದರಿಂದಲೇ ಅವನನ್ನು 'ವಿಭಾವಸು' ಎಂದು ಕರೆದರು.

ಮುಂದೆ ಸೂರ್ಯನ ಸಮ್ಮತಿಯಂತೆ ತ್ವಷ್ಟ್ರುವು ತನ್ನ ತೇಜೋಮಯವಾದ ಸಾಣೆಕಲ್ಲಿಗೆ ಸೂರ್ಯಬಿಂಬವನ್ನು ಸಾಣೆ ಹಿಡಿದು ಅವನ ತೇಜಸ್ಸನ್ನು ಕಡಮೆ ಮಾಡಿದನು. ಬಿಸಿ ಕಡಮೆಯಾಗಿ ಶಾಂತವೂ ಸೌಮ್ಯವೂ ಮನೋಹರವೂ ಆಯಿತು. ಅಂದಿನಿಂದ ಸೂರ್ಯನ ರೂಪವೆ ಬದಲಾಯಿತು. ಮುಖವು ಕೆಂಪಾಯಿತು.

## ದ್ವಾದಶಾದಿತ್ಯರು

**ಮುಖರಾಗಂ ತು ಯತ್ ಪೂರ್ವಂ ಮಾರ್ತಂಡಸ್ಯ ಮುಖಚ್ಚ್ಯುತಮ್ ।**

**ಆದಿತ್ಯಾ ದ್ವಾದಶೈವೇಹ ಸಂಭೂತಾ ಮುಖಸಂಭವಾಃ ॥ 31 ॥**

**ಧಾತಾ ಅರ್ಯಮಾ ಚ ಮಿತ್ರಶ್ಚ ವರುಣೋಽಂಶೋ ಭಗಸ್ತಥಾ ।**

**ಇಂದ್ರೋ ವಿವಸ್ವಾನ್ ಪೂಷಾ ಚ ಪರ್ಜನ್ಯೋ ದಶಮಸ್ತಥಾ ॥ 32 ॥**

**ತತಸ್ತ್ವಷ್ಟಾ ತತೋ ವಿಷ್ಣುರಜಘನ್ಯೋ ಜಘನ್ಯಜಃ ॥ 33 ॥**

ತ್ವಷ್ಟ್ರುವು ಸಾಣೆ ಹಿಡಿಯುತ್ತಿದ್ದಾಗ ಸೂರ್ಯನಿಂದ ಯಾವ ಕೆಂಪಧೂಳಿಯು ಹೊರಬಂದಿದ್ದಿತೋ ಅದರಿಂದಲೇ 'ದ್ವಾದಶಾದಿತ್ಯರು' ಜನಿಸಿದರು. ಅವರ ನಾಮಧೇಯ ಇಂತಿವೆ. ಧಾತಾ, ಅರ್ಯಮಾ, ಮಿತ್ರ, ವರುಣ, ಅಂಶ, ಭಗ, ಇಂದ್ರ, ವಿವಸ್ವಾನ್, ಪರ್ಜನ್ಯ, ತ್ವಷ್ಟು, ಪೂಷಾ, ವಿಷ್ಣು ವಸ್ತುತಃ ವಿಷ್ಣುವು

ಕೊನೆಯವನಾಗಿದ್ದರೂ ಅನಂತಾನಂತ ಗುಣಗಳಿಂದ ಎಲ್ಲರಿಗಿಂತಲೂ ಸರ್ವೋತ್ತಮನಾಗಿದ್ದನು.

**ಹರ್ಷಂ ಲೇಭೇ ತತೋ ದೇವೋ ದೃಷ್ಟ್ವಾಽಽದಿತ್ಯಾನ್ ಸ್ವದೇಹಜಾನ್ ।**
**ಗಂಧೈಃ ಪುಷ್ಪೈಃ ಅಲಂಕಾರೈಃ ಭಾಸ್ವತಾ ಮುಕುಟೇನ ಚ ॥ 34 ॥**

**ಏವಂ ಸಂಪೂಜಯಾಮಾಸ ತ್ವಷ್ಟಾ ವಾಕ್ಯ ಮುವಾಚ ಹ ।**
**ಗಚ್ಛ ದೇವ ನಿಜಾಂ ಭಾರ್ಯಾಂ ಕುರೂಂಶ್ಚರತಿ ಸೋತ್ತರಾನ್ ॥ 35 ॥**
**ವಡವಾರೂಪಮಾಸಾದ್ಯ ವನೇ ಚರತಿ ಶಾದ್ವಲೇ ॥ 36 ॥**

ಸೂರ್ಯನು ಹನ್ನೆರಡು ಆದಿತ್ಯರೂ ಗಂಧ ಪುಷ್ಪಾದಿ ಅಲಂಕಾರಗಳಿಂದ ಅಲಂಕೃತರಾಗಿದ್ದರು. ತನ್ನಿಂದ ಜನಿಸಿದ ದ್ವಾದಶಾದಿತ್ಯರನ್ನು ನೋಡಿ ಆನಂದ ತುಂದಿಲನಾದನು.

ಮುಂದೆ ತ್ವಷ್ಟ್ರುವು ತನ್ನ ಅಳಿಯನಿಗೆ ದಿವ್ಯರೂಪ ನೀಡಿ ಸಮ್ಮಾನಿಸಿದ ಮೇಲೆ ಹೀಗೆಂದನು – ಸೂರ್ಯದೇವನೇ ! ಈಗ ನೀನು ನಿನ್ನ ಪತ್ನಿಯ ಬಳಿಗೆ ಹೋಗು. ಅವಳಿಗ ಉತ್ತರ ಕುರು ದೇಶದಲ್ಲಿ ಹೆಣ್ಣು ಅಶ್ವ ವೇಷ ಧರಿಸಿ ಚಿಗುರು ಹುಲ್ಲನ್ನು ತಿನ್ನುತ್ತಾ ತಿರುಗಾಡುತ್ತಿದ್ದಾಳೆ.

ಸೂರ್ಯನು ಮಾವನ ಮಾತನ್ನು ಬಹೂಕರಿಸಿ ತನ್ನ ಪತ್ನಿಯ ಭಯಪಡಬಹುದೆಂದು ತಾನೂ ಸಹ ಕುದುರೆ ವೇಷಧರಿಸಿ ಅಲ್ಲಿಗೆ ಬಂದನು.

ಸರ್ವಪ್ರಾಣಿಗಳಿಗೂ ಸಂಜ್ಞಾದೇವಿಯನ್ನು ನೋಡಲು ಅಸಾಧ್ಯಳಾಗಿದ್ದಳು. ಕಾರಣವೇನೆಂದರೆ ನಿಯಮಾನುಷ್ಠಾನತತ್ಪರಳಾಗಿದ್ದ ಆಕೆ ತೇಜಸ್ಸಿನಿಂದ ಕಂಗೊಳಿಸುತ್ತಿದ್ದಳು. ಕುದುರೆಯ ವೇಷ ಧರಿಸಿ ನಿರ್ಭಯಳಾಗಿ ಸಂಚರಿಸುತ್ತಿದ್ದಳು. ಸೂರ್ಯದೇವನೂ ಸಹ ಅಶ್ವವೇಷ ಧರಿಸಿ ಅವಳಿಗೆ ಅಭಿಮುಖನಾಗಿ ನಿಂತನು.

## ಅಶ್ವಿನೀ ದೇವತೆಗಳ ಉತ್ಪತ್ತಿ

**ಸೋಽಶ್ವರೂಪೇಣ ಭಗವಾಂಸ್ತಾಂ ಮುಖೇ ಸಮಭಾವಯತ್ ।**
**ಮೈಥುನಾಯ ವಿಚೇಷ್ಟಂತೀ ಪರಪುಂಸೋಪಶಂಕಯಾ ॥ 37 ॥**

**ಸಾ ನಿರವಮಚ್ಛುಕ್ರಂ ನಾಸಿಕಾಯಾಂ ವಿವಸ್ವತಃ ।**
**ದೇವೌ ತಸ್ಯಾಮಜಾಯೇತಾಮಶ್ವಿನೌ ಭಿಷಜಾಂ ವರೌ ॥ 38 ॥**

ಅಶ್ವರೂಪದಿಂದ ಬಂದ ಸೂರ್ಯದೇವನು ಅವಳನ್ನು ರತಿಗೆ ಆಹ್ವಾನಿಸಿದನು. ವಡವೆಯಾದರೂ ಇಷ್ಟಪಟ್ಟಳಾದರೂ ಪರಪುರುಷನೆಂಬ ಶಂಕೆಯಿಂದ ಅವಕಾಶ ನೀಡಲಿಲ್ಲ. ಸೂರ್ಯನ ವೀರ್ಯವಾದರೂ ಕುದುರೆಯ ಮೂಗಿನ ಸಮೀಪ ಹೊರಬಿತ್ತು. ಅಮೋಘವೀರ್ಯನಾದ ಸೂರ್ಯದೇವನಿಗೆ ಅಶ್ವಿನಿದೇವತೆಗಳೆಂಬ ದೇವತೆಗಳಿಬ್ಬರು ಜನಿಸಿದರು. ನಾಸತ್ಯ-ದಸ್ರರೆಂದು ಪ್ರಸಿದ್ಧರಾದರು.

ಇವರಿಬ್ಬರೂ ಅಷ್ಟಮ ಪ್ರಜಾಪತಿಯಾದ ಸವಿತೃದೇವ ಮಾರ್ತಾಂಡನ ಮಕ್ಕಳು. ವಡವಾಳಲ್ಲಿ ಸೂರ್ಯನ ಮಕ್ಕಳನ್ನಾಗಿ ಪಡೆದುಕೊಂಡನು. ನಂತರ ಸೂರ್ಯನು ತನ್ನ ನಿಜವಾದ ನಯನ ಮನೋಹರವಾದ ರೂಪವನ್ನು ತೋರಿಸಿದನು. ತನ್ನ ಪತಿಯನ್ನು ನೋಡಿದ ಅವಳು ಅತ್ಯಂತ ಸಂತೋಷಪಟ್ಟಳು.

### ಸಾವರ್ಣಿ ಭವಿಷ್ಯದ್ ಮನ್ವಂತರಾಧಿಪತಿ

**ಯಮಸ್ತು ಕರ್ಮಣಾ ತೇನ ಭೃಶಂ ಪೀಡಿತಮಾನಸಃ ।**
**ಧರ್ಮೇಣ ರಂಜಯಾ ಮಾಸ ಧರ್ಮರಾಜ ಇವ ಪ್ರಜಾಃ ॥ 39 ॥**
**ಸ ಲೇಭೇ ಕರ್ಮಣಾ ತೇನ ಪರಮೇಣ ಮಹಾದ್ಯುತಿಃ ॥ 40 ॥**
**ಪಿತೃಣಾಮಾಧಿಪತ್ಯಂ ಚ ಲೋಕಪಾಲತ್ವಮೇವ ಚ ।**
**ಮನುಃ ಪ್ರಜಾಪತಿಸ್ತ್ವಾಸೀತ್ ಸಾವರ್ಣಃ ಸ ತಪೋಧನಃ ॥ 41 ॥**

ಯಮಧರ್ಮನಾದರೂ ತಾಯಿಗೆ ಕಾಲನ್ನೆತ್ತಿದ ಪಾಪಕ್ಕೆ ಗುರಿಯಾಗಿ ಪರಮದುಃಖಿತನಾಗಿದ್ದರೂ ಪ್ರಜೆಗಳನ್ನು ಧರ್ಮದಿಂದ ಪಾಲಿಸಿದನು. ಇದರಿಂದಾಗಿ ದಕ್ಷಿಣದಿಕ್ಕಿನ ಅಧಿಪತಿಯಾಗಿ ಪಿತೃಗಳ ಮೇಲಿನ ಆಧಿಪತ್ಯ ಹೊಂದಿದನು.

ಸೂರ್ಯನ ಮತ್ತೊಬ್ಬ ಮಗನಾದ ಮಹಾತಪಸ್ವಿ ಸಾವರ್ಣಿಯಾದರೂ ಮುಂದೆ ಬರಲಿರುವ ಎಂಟನೆಯ ಮನ್ವಂತರಕ್ಕೆ ಮನುವಾಗುವನು. ಈಗವನು ಮೇರು ಪರ್ವತದ ಶಿಖರದಲ್ಲಿ ದುಸ್ಸಾಧ್ಯವಾದ ತಪಸ್ಸನ್ನಾಚರಿಸುತ್ತಿರುವನು.

### ಗ್ರಹಾಧಿಪತಿ ಶನೈಶ್ಚರ

**ಭ್ರಾತಾ ಶನೈಶ್ಚರಶ್ಚಾಸ್ಯ ಗ್ರಹತ್ವಮುಪಲಬ್ಧವಾನ್ ।**
**ನಾಸತ್ಯೌ ಯೌ ಸಮಾಖ್ಯಾತೌ ಸ್ವರ್ವೈದ್ಯೌ ತೌ ಬಭೂವತುಃ ॥ 42 ॥**

**ತ್ವಷ್ಟಾ ತು ತೇಜಸಾ ತೇನ ವಿಷ್ಣೋಶ್ಚಕ್ರ ಮಕಲ್ಪಯತ್ ।**
**ತದಪ್ರತಿಹತಂ ಯುದ್ಧೇ ದಾನವಾಂತಚಿಕೀರ್ಷಯಾ ॥ 43 ॥**

ಸಾವರ್ಣಿ ಮನುವಿನ ತಮ್ಮನಾದ ಶನಿಯು ನವಗ್ರಹಗಳಲ್ಲಿ ಪರಿಗಣಿತನಾದ. ನಾಸತ್ಯ-ದಸ್ರರಾದರು ದೇವವೈದ್ಯರೆಂದು ಪ್ರಖ್ಯಾತಿ ಪಡೆದರು.

ತ್ವಷ್ಟ್ರ ದೇವತೆಯಾದರೂ ಸೂರ್ಯನ ಮಂಡಲವನ್ನು ಸಾಣೆಗೆ ಹಿಡಿದು ತೀಡಿದಾಗ ಅದು ಸವೆದು ಸಣ್ಣದಾಯಿತು. ಆ ವಿರಾಟ್ ದೇಹದ ಅಧಿಕ ಭಾಗವನ್ನೆಲ್ಲ ಕೊರೆದು ಎಂಟನೆಯ ಒಂದು ಭಾಗಕ್ಕೆ ಇಳಿಸಿದ. ಹೀಗೆ ಕೊರೆದು ಬಿದ್ದ ತುಂಡು ಭಾಗಗಳನ್ನೆಲ್ಲ ಒಟ್ಟುಗೂಡಿಸಿ ವಿಷ್ಣುವಿನ ಚಕ್ರವನ್ನು ನಿರ್ಮಿಸಿದನು. ಇದು ಕಾಮನಿಂದ ಅಭಿಮನ್ಯವಾದದ್ದು. ಶಿವನ ತ್ರಿಶೂಲವೂ ಇದರದೆ ತುಣುಕುಗಳು. ಸುದರ್ಶನ ಚಕ್ರವಾದರೂ ಯುದ್ಧದಲ್ಲಿ ಅಪ್ರತಿಹತ ಸಾಮರ್ಥ್ಯವುಳ್ಳದ್ದು.

## ಯಮುನಾ-ತಪತೀ ನದೀ

**ಯವೀಯಸೀ ತಯೋರ್ಯಾ ತು ಯಮೀ ಕನ್ಯಾ ಯಶಸ್ವಿನೀ ।**
**ಅಭವತ್ ಸಾ ಸರಿಚ್ಛ್ರೇಷ್ಠಾ ಯಮುನಾ ಲೋಕಭಾವಿನೀ ॥ 44 ॥**

**ಯ ಇದಂ ಜನ್ಮ ದೇವಾನಾಂ ಶೃಣುಯಾದ್‌ವಾಪಿ ಧಾರಯೇತ್ ।**
**ಆಪದ್ಭ್ಯಃ ಸ ವಿಮುಚ್ಯೇತ ಪ್ರಾಪ್ನುಯಾಚ್ಚ ಮಹದ್ ಯಶಃ ॥ 45 ॥**

ಸೂರ್ಯ-ಸಂಜ್ಞೆಯರ ಮಗಳು ಯಮನೆಯೆಂದು ಲೋಕಪಾವನಗೈಯ್ಯುವ ನದಿಯಾದಳು. ಇದರಂತೆ ತಪತಿಯೂ ಸಹ ಸರ್ವಪಾಪತಾಪ ನೀಡುವ ತಾಪೀ ನದಿಯಾದಳು. ಸೂರ್ಯನ ವಂಶದಲ್ಲಿ ಸೂರ್ಯಪುತ್ರ ಮನು ಮನ್ವಂತರಾಧಿಪತಿಯೂ, ಶನಿಯೂ ಗ್ರಹಾಧಿಪತಿಯಾಗಿಯೂ, ಅಶ್ವಿನಿಗಳು ದೇವವೈದ್ಯರಾಗಿಯೂ, ಯಮನೆಯು ಯುಮನಾಯೆಂಬ ನದಿಯಾಗಿಯೂ ಹರಿದಳು. ಈ ದೇವತೆಗಳ ಜನ್ಮವೃತ್ತಾಂತ ಕೇಳದವನಿಗೆ ಶ್ರವಣ - ಮನನಾದಿಗಳಿಂದ ಸಕಲ ಆಪತ್ತುಗಳಿಂದಲೂ ಮುಕ್ತನಾಗಿ ಮಹತ್ತರ ಕೀರ್ತಿವಂತನಾಗುವನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಮನ್ವಂತರಾನುಚರಿತವೆಂಬಲ್ಲಿ
ಒಂಭತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ದಶಮೋಽಧ್ಯಾಯಃ

## ವೈವಸ್ವತ ಮನುವಂಶಾವತಳಿ

*ವೈಶಂಪಾಯನ ಉವಾಚ–*

**ಮನೋರ್ವೈವಸ್ವತಸ್ಯಾಸನ್ ಪುತ್ರಾ ವೈ ನವ ಸತ್ತಮಾಃ ।**
**ಇಕ್ಷ್ವಾಕುಶ್ಚೈವ ನಾಭಾಗೋ ಧೃಷ್ಣುಃ ಶರ್ಯಾತಿರೇವ ಚ ॥ 1 ॥**
**ನರಿಷ್ಯಂಶ್ಚ ತಥಾ ಪ್ರಾಂಶುಃ ನಾಭಾಗಾರಿಷ್ಟ ಸಪ್ತಮಾ ।**
**ಕರೂಷಶ್ಚ ಪೃಷಧ್ರಶ್ಚ ನವೈತೇ ಭರತರ್ಷಭ ॥ 2 ॥**

ಜನಮೇಜಯನೇ ! ವಿವಸ್ವಾನ್ ಎಂಬ ಸೂರ್ಯನಿಂದ ಸಂಜ್ಞೆಯಲ್ಲಿ ವೈವಸ್ವತ ಮನುವು ಜನಿಸಿದನು. ಇವನು ತನ್ನ ಶ್ರದ್ಧಾಯೆಂಬ ಪತ್ನಿಯಲ್ಲಿ ನವಪುತ್ರರನ್ನು ಪಡೆದನು. ಇಕ್ಷ್ವಾಕು – ನಾಭಾಗ – ಧೃಷ್ಣು – ಶರ್ಮಾತಿ – ನರಿಷ್ಯಂತ – ಪ್ರಾಂಶು – ನಾಭಾಗಾರಿಷ್ಟ – ಕರೂಷ – ಪೃಷಧ್ರ ಎಂದು

## ಇಲಾದೇವಿ ಜನ್ಮ

**ಅಕರೋತ್ ಪುತ್ರಕಾಮಸ್ತು ಮನುರಿಷ್ಟಿಂ ಪ್ರಜಾಪತಿಃ ।**
**ಮಿತ್ರಾವರುಣಯೋಃ ತಾತ ಪೂರ್ವಮೇವ ವಿಶಾಂಪತೇ ॥ 3 ॥**
**ಅನುತ್ಪನ್ನೇಷು ನವಸು ಪುತ್ರೇಷ್ವೇತೇಷು ಭಾರತ ।**
**ಮಿತ್ರಾವರಣಯೋರಂಶೇ ಮುನಿರಾಹುತಿಮಾಜುಹೋತ್ ॥ 4 ॥**
**ಆಹೂತ್ಯಾಂ ಹೂಯಮಾನಾಯಾಂ ದೇವಗಂಧರ್ವ ಮಾನುಷಾಃ ।**
**ತುಷ್ಟಿಂ ತು ಪರಮಾಂ ಜಗ್ಮುಃ ಮುನಯಶ್ಚ ತಪೋಧನಾಃ ॥ 5 ॥**

**ಅಹೋಽಸ್ಯ ತಪಸೋವೀರ್ಯಂ ಅಹೋಽಸ್ಯ ಶ್ರುತಮದ್ಭುತಂ ।**
**ತತ್ರ ದಿವ್ಯಾಂಬರಧರಾ ದಿವ್ಯಾಭರಣ ಭೂಷಿತಾ ॥ 6 ॥**
**ದಿವ್ಯ ಸಂಹನನಾ ಚೈವ ಇಲಾ ಜಜ್ಞೇ ಇತಿ ಶ್ರುತಿಃ ॥ 7 ॥**

ವೈವಸ್ವತ ಮನುವು ಮಕ್ಕಳಾಗಬೇಕೆಂಬ ಬಯಕೆಯಿಂದ ಪ್ರಜಾಪತಿ ದೇವತಾಕ ಯಜ್ಞವೊಂದನ್ನು ಮಾಡಲುದ್ಧೇಶಿಸಿದನು. ಒಂಭತ್ತು ಪುತ್ರರು ಹುಟ್ಟುವ ಮೊದಲೇ ಮಿತ್ರಾವರುಣರ ಯಜ್ಞವನ್ನು ಮಾಡಿದನು. ಮನುವಿಗೆ ಮಕ್ಕಳಾಗಲು ಪುರೋಹಿತರಾದ ವಸಿಷ್ಠರು ಸಂತತಿಗಾಗಿ ಮಿತ್ರಾವರುಣರೆಂಬ ಉಭಯದೇವತಾಕ ಯಾಗ ಮಾಡಿದರು. ಯಜ್ಞದಲ್ಲಿ ಮನುವು ಮಿತ್ರಾವರುಣರಿಗಾಗಿ ಅಗ್ನಿಯಲ್ಲಿ ಆಹುತಿ ನೀಡುತ್ತಿದ್ದನು. ಪಯೋವ್ರತದಿಂದ (ಕೇವಲ ಹಾಲನ್ನೇ ಸೇವಿಸಿ) ಯಾಗ ಮಾಡಿದ್ದರಿಂದಲೂ ಶ್ರದ್ಧಾಭಕ್ತಿಗಳಿಂದ ಮಾಡಿದ್ದರಿಂದಲೂ ದೇವ ಗಂಧರ್ವ ಮುನಿಗಳು ಸಂತುಷ್ಟರಾದರು. ಮನುವಿನ ತಪಸ್ಸಿನ ಬಲವನ್ನು ಶಾಸ್ತ್ರಜ್ಞಾನವನ್ನು ಪ್ರಶಂಸಿದರು.

ಮಿತ್ರಾವರುಣರನ್ನು ಉದ್ಧೇಶಿಸಿ ಆಹುತಿ ನೀಡುತ್ತಿರುವಾಗಲೇ – ಮನುವಿನ ಪತ್ನಿ ಶ್ರದ್ಧೆಯು – ಹೋತೃಗಳೇ, ನನಗೆ ಹೆಣ್ಣು ಮಗುವಾಗುವಂತೆ ಪ್ರಾರ್ಥಿಸಿರಿ ಎಂದು ಹೋತೃವನ್ನು ಬೇಡಿದಳು. ಹೋತೃವು ಅದೇ ರೀತಿ ಪ್ರಾರ್ಥಿಸಿ ಆಹುತಿ ನೀಡುತ್ತಿದ್ದಂತೆಯೇ, ದಿವ್ಯವಸ್ತ್ರಾಲಂಕೃತಳೂ, ದಿವ್ಯಾಭರಣ-ಭೂಷಿತಳು ದಿವ್ಯಕಾಂತಿಯುಕ್ತಳಾದ 'ಇಳಾ' ಎಂಬ ಕನ್ಯೆಯು ಯಜ್ಞಕುಂಡದಿಂದ ಹುಟ್ಟಿದಳು.

**ಅನುಗಚ್ಛಸ್ವ ಮಾಂ ಭದ್ರೇ ತಮಿಲಾ ಪ್ರತ್ಯುವಾಚ ಹ ।**
**ಧರ್ಮಯುಕ್ತಮಿದಂ ವಾಕ್ಯಂ ಪುತ್ರಕಾಮಂ ಪ್ರಜಾಪತಿಮ್ ॥ 8 ॥**
**ಮಿತ್ರಾವರುಣಯೋರಂಶೇ ಜಾತಾಽಸ್ಮಿ ವದತಾಂ ವರ ।**
**ತಯೋಃ ಸಕಾಶಂ ಗಚ್ಛಾಮಿ ನ ಮಾಂ ಧರ್ಮೋಽ ಹತೋಽವಧೀತ್ ॥9॥**

ಹೋತೃವಿನ ಸಾಂಕಲ್ಪಿಕ ವಾಕ್ಯವು ವಿಪರೀತವಾದ್ದರಿಂದ ಹುಟ್ಟಿದ ಇಳೆಯನ್ನು ನೋಡಿ ಮನುವು ಸಾಕ್ಷಾತ್ ತನ್ನ ವಂಶ ಬೆಳೆವಣಿಗೆಗೆ ಕಾರಣಳಾಗದಿದ್ದರಿಂದ ಹೆಚ್ಚು ಸಂತುಷ್ಟನಾಗದೆ – ಮಗಳೇ ಇಳಾ ನನ್ನನ್ನು ಅನುಸರಿಸಿ ನನ್ನೊಂದಿಗೆ ಬಾ ಎಂದಾಗ, ಇಳೆಯು – ಮನುವೇ, ನಾನು ಧರ್ಮವ್ಯತಿಕ್ರಮ ಮಾಡಲಾರೆ. ಧರ್ಮವನ್ನು ಅತಿಕ್ರಮಿಸಿದರೆ ಧರ್ಮವು ನನ್ನನ್ನು ನಾಶ ಮಾಡಿತು.

ಮಿತ್ರಾವರುಣರ ಅಂಶದಿಂದ ಹುಟ್ಟಿದ ನಾನು ಅವರ ಬಳಿಗೆ ಹೋಗುವೆನು ಎಂದು ಧರ್ಮಸಮ್ಮತ ಮಾತನ್ನಾಡಿದಳು. ಹೀಗೆ ಹೇಳಿ ಮಿತ್ರವರುಣರ ಬಳಿ ಸೇರಿ ಕೈ ಜೋಡಿಸಿ ಹೀಗೆಂದಳು.

**ಅಂಶೋಽಸ್ಮಿ ಯುವಯೋಃ ಜಾತಾ ದೇವೌ ಕಿಂ ಕರವಾಣಿ ನಾಮ್ ।**
**ಮನುನಾ ಚಾಹ ಮುಕ್ತಾ ವೈ ಅನುಗಚ್ಛಸ್ವ ಮಾಮಿತಿ ॥ 10 ॥**

ಮಿತ್ರಾವರುಣರೇ, ನಾನು ನಿಮ್ಮ ಅಂಶಗಳಿಂದ ಜನಿಸಿರುವೆನು. ನಾನು ನಿಮಗೆ ಯಾವ ಕಾರ್ಯ ಮಾಡಿಕೊಡಲಿ ! ಮನುವಾದರೂ ನನ್ನನ್ನೆ ಅನುಸರಿಸು ಎನ್ನುತ್ತಿದ್ದಾನೆ. ನಿಮ್ಮ ಪುತ್ರಿಯಾದ ನಾನು ನಿಮ್ಮ ಬಳಿ ಬಂದಿದ್ದೇನೆ. ಈ ರೀತಿ ಧರ್ಮಪರಾಯಣೆಯಾದ ಇಳೆಯು ಹೇಳಿದಾಗ ಮಿತ್ರಾವರುಣರು ಹೀಗೆಂದರು.

**ಅನೇನ ತವ ಧರ್ಮೇಣ ಪ್ರಶ್ರಯೇಣ ದಮೇನ ಚ ।**
**ಸತ್ಯೇನ ಚೈವ ಸುಶ್ರೋಣಿ ಪ್ರೀತೌ ಸ್ವೋ ವರವರ್ಣಿನಿ ॥ 11 ॥**
**ಆವಯೋಸ್ತ್ವಂ ಮಹಾಭಾಗೇ ಖ್ಯಾತಿಂ ಕನ್ಯೇತಿ ಯಾಸ್ಯಸಿ ।**
**ಮನೋಃ ವಂಶಧರಃ ಪುತ್ರಃ ತ್ವಮೇವ ಚ ಭವಿಷ್ಯಸಿ ॥ 12 ॥**

ಸಾಧ್ವಿ ಇಳಾದೇವಿ ಈ ಧರ್ಮಶ್ರದ್ಧೆ, ಸತ್ಯ, ವಿನಯ, ದಮಗಳಿಂದ ಸುಪ್ರೀತರಾಗಿದ್ದೇವೆ. ನೀನು ನಮ್ಮ ಮಗಳೆ ಆಗಿರುವಿ. ಆದರೂ ವಸಿಷ್ಠರ ಪ್ರಭಾವದಿಂದ ನೀನು ಮನು ವಂಶೋದ್ಧಾರಕನಾದ ಮಗನೂ ಆಗುವಿ. ಈ ಸಂದರ್ಭದಲ್ಲಿ ನಿನ್ನನ್ನು 'ಸುದ್ಯುಮ್ನ' ಎಂದು ವಿಶ್ವವಿಖ್ಯಾತನಾಗಿ ಮನುವಂಶವನ್ನು ಬೆಳೆಸುವಿ ಎಂದರು.

### ಇಳೆಯನ್ನು ಬುಧ ವರಿಸಿದ

**ನಿವೃತ್ತಾ ಸಾ ತು ತಚ್ಛ್ರುತ್ವಾ ಗಚ್ಛಂತೀ ಪಿತುರಂತಿಕಮ್ ।**
**ಬುಧೇನಾಂತರಮಾಸಾದ್ಯ ಮೈಥುನಾಯೋಪಮಂತ್ರಿತಾ ॥ 13 ॥**

ವಸಿಷ್ಠರ ಪ್ರಾರ್ಥನೆಯನ್ನು ಮನ್ನಿಸಿದ ಶ್ರೀಹರಿಯು ಇಳೆಯನ್ನು ಗಂಡನ್ನಾಗಿ ಮಾಡಿದ. ಮನುವು ಸಂತುಷ್ಟನಾದ. ಒಂದು ಬಾರಿ ಸುದ್ಯುಮ್ನನು ಕುದುರೆಯನ್ನೇರಿ ಉತ್ತರ ದಿಕ್ಕಿಗೆ ಪ್ರಯಾಣ ಬೆಳೆಸಿದ. ಮೇರುವಿನ

ಬುಡದಲ್ಲಿರುವ ಇಳಾವೃತಖಂಡದ 'ಸುಕುಮಾರ' ವನ ತಲುಪಿದಂತೆಯೇ ಪುನಃ ಹೆಣ್ಣಾದನು. ರುದ್ರದೇವರ ಶಾಪ ಹಾಗಿತ್ತು. ಮನೆಗೆ ಬರಲಾರದೆ ಸುಕುಮಾರ ವನದಲ್ಲಿಯೇ ಇವಳನ್ನು ಚಂದ್ರನ ಮಗನಾದ ಬುಧನು ನೋಡಿ ಕಾಮಿಸಿದನು. ಇವಳೂ ಅವನನ್ನಿಚ್ಛಿಸಿದಳು, ವಿವಾಹವಾದರು.

**ಸೋಮಪುತ್ರಾದ್ ಬುಧಾತ್ ರಾಜನ್ ತಸ್ಯಾಂ ಜಜ್ಞೇ ಪುರೂರವಾಃ ।**
**ಜನಯಿತ್ವಾ ಸುತಂ ಸಾ ತಮಿಲಾ ಸುದ್ಯುಮ್ನತಾಂ ಗತಾ ॥ 14 ॥**

ಇದರಿಂದಾಗಿ ಇಳೆಯು 'ಪುರೂರವಸ್' ಎಂಬ ಪುತ್ರನನ್ನು ಪಡೆದಳು. ಪುರೂರವಸ್ಸನ್ನು ಪಡೆದ ನಂತರ ತನ್ನ ಕುಲಾಚಾರ್ಯ ವಸಿಷ್ಠರನ್ನು ಸ್ಮರಿಸಿದನು. ಸುದ್ಯುಮ್ನನ ದುರವಸ್ಥೆಯನ್ನು ನೋಡಿದ ವಸಿಷ್ಠರು ರುದ್ರದೇವರನ್ನೆ ಆರಾಧಿಸಿದರು. ತುಷ್ಟನಾದ ರುದ್ರದೇವನು ವ್ಯವಸ್ಥಿತವಾಗಿ ಒಂದು ಮಾಸ ಹೆಣ್ಣಾಗಿ, ಒಂದು ಮಾಸ ಗಂಡಾಗಿಯೂ ಇರಲಿ ಎಂದು ವರ ನೀಡಿದಾಗ ಇಳೆಯು ಪುನಃ ಸುದ್ಯುಮ್ನನಾದನು.

### ಸುದ್ಯುಮ್ನ ಸಂತತಿ

ಸುದ್ಯುಮ್ನನು ಗಂಡಾಗಿದ್ದಾಗ ಪರಮಧಾರ್ಮಿಕರಾದ ಮೂವರು ಮಕ್ಕಳಾದರು. ಉತ್ಕಲ, ಗಯೆ, ವಿತಾಶ್ವರೆಂದು. ವಿನತಾಶ್ವನಿಗೆ ಭಾಗವತವು ವಿಮಲ ಎಂದಿದೆ. ಇವರೆಲ್ಲರೂ ದಕ್ಷಿಣಾಪಥಕ್ಕೆ ರಾಜರೆನಿಸಿದರು.

ಉತ್ಕಲನಿಗೆ ಈಗಿರುವ ಉತ್ಕಲವೆನ್ನುವ ರಾಜ್ಯವನ್ನು, ವಿನತಾಶ್ವನಿಗೆ ಪಶ್ಚಿಮ ದೇಶ ರಾಜನಾದನು. ಪೂರ್ವದಿಕ್ಕಿಗೆ ಗಯಾ ದೇಶವು ಗಯೆನ ರಾಜಧಾನಿಯಾಯಿತು.

ವೈವಸ್ವತನು ಸೂರ್ಯನಲ್ಲಿ ಲೀನನಾದ ಮೇಲೆ ಅವನ ಹತ್ತು ಮಂದಿ ಮಕ್ಕಳೂ ತಂದೆಯ ರಾಜ್ಯವನ್ನು ಹತ್ತು ಭಾಗಗಳಾಗಿ ವಿಭಾಗಿಸಿ ರಾಜ್ಯವಾಳಿದರು. ಮನುವಿನ ಜ್ಯೇಷ್ಠ ಪುತ್ರನು ಯೂಪಸ್ತಂಭಗಳಿಂದ ಅಲಂಕೃತ ಮಧ್ಯದೇಶಕ್ಕೆ ರಾಜನಾದನು.

**ಕನ್ಯಾಭಾವಾಚ್ಚ ಸುದ್ಯುಮ್ನಃ ನೈನಂ ಗುಣಮವಾಪ್ತವಾನ್ ।**
**ವಸಿಷ್ಠವಚನಾಚ್ಚಾಸೀತ್ ಪ್ರತಿಷ್ಠಾನೇ ಮಹಾತ್ಮನಃ ॥ 15 ॥**

**ತತ್ ಪುರೂರವಸೇ ಪ್ರಾದಾದ್ ರಾಜ್ಯಂ ಪ್ರಾಪ್ಯಂ ಮಹಾಯಶಾಃ ।**
**ಸುದ್ಯುಮ್ನಃ ಕಾರಯಾಮಾಸ ಪ್ರತಿಷ್ಠಾನೇ ನೃಪಕ್ರಿಯಾಮ್ ॥ 16 ॥**

ಸುದ್ಯುಮ್ನನಿಗೆ ಮಾತ್ರ ಇಳಾದೇವಿಯಾಗಿ ಹೆಣ್ಣಾಗಿ ಗಂಡಾಗಿದ್ದ ನೆಪ ಹೇಳಿ ಅವನ ಸೋದರರು ರಾಜ್ಯದಲ್ಲಿ ಭಾಗ ನೀಡಲಿಲ್ಲ. ಮುಂದೆ ವೈವಸ್ವತ ಮನುವು ಅಂತ್ಯಕಾಲದಲ್ಲಿ ಸೂರ್ಯನಲ್ಲಿ ಲೀನನಾದ ಮೇಲೆ ಕುಲಪುರೋಹಿತರಾದ ವಶಿಷ್ಠರು ಮನುವಿಗೆ ಹೇಳಿ ಪ್ರತಿಷ್ಠಾನಪುರಿಯನ್ನು ಈಗಿನ ಪ್ರಯಾಗವನ್ನು ಕೊಡಿಸಿದರು. ಸುದ್ಯುಮ್ನನು ತಾನು ಇರುವವರೆಗೂ ಅಲ್ಲಿ ರಾಜ್ಯಭಾರವಹಿಸಿ ನಂತರ ತಾನು ಇಳಾಕುಮಾರಿಯಾಗಿದ್ದಾಗ ಬುಧನಿಂದ ಜನಿಸಿದ ಪುರೂರವಸ್‌ಗೆ ನೀಡಿದನು.

## ಉತ್ಕಲ ಸಂತತಿ

**ಯಶ್ಚಕಾರ ಮಹಾತ್ಮಾ ವೈ ದಂಡಕಾರಣ್ಯ ಮುತ್ತಮಂ ।**
**ತತ್ರ ಪ್ರವಿಷ್ಟ ಮಾತ್ರಸ್ತು ನರಃ ಪಾಪೈಃ ಪ್ರಮುಚ್ಯತೇ ॥ 17 ॥**

ಉತ್ಕಲನಿಗೆ ದಂಡ, ಅಂಬರೀಷ, ಧೃಷ್ಟಕ ಎಂಬ ಮೂವರು ಪುತ್ರರಾದರು. ಇವರಲ್ಲಿ ದಂಡಕನು ತಪಸ್ವಿಗಳಿಗೆ ಸ್ಥಾನವಾದ 'ದಂಡಕಾರಣ್ಯ'ವನ್ನು ನಿರ್ಮಿಸಿದನು. ಈ ದಂಡಕಾರಣ್ಯ ಪ್ರವೇಶಿಸಿದ ಮಾತ್ರಕ್ಕೆ ನರಃ ಸರ್ವಪಾಪರಹಿತನಾಗುವನು.

ಸುದ್ಯುಮ್ನನು ಸ್ತ್ರೀಪುಂಲಕ್ಷಣಯುಕ್ತನಾಗಿದ್ದರಿಂದ ಇಳಾದೇವಿ, ಸುದ್ಯುಮ್ನ ಎಂದೂ ಎರಡೂ ಹೆಸರಿನಿಂದ ಕರೆಯುತ್ತಿದ್ದರು. ಇಳನು ಚಂದ್ರ-ಸೂರ್ಯವಂಶವೆರಡನ್ನೂ ಅಭಿವೃದ್ಧಿಗೊಳಿಸಿದನು.

## ನರಿಷ್ಯಂತ ಸಂತತಿ ಶಕರು

**ನರಿಷ್ಯತಃ ಶಕಾಃ ಪುತ್ರಾಃ ನಾಭಾಗಸ್ಯ ತು ಭಾರತ ।**
**ಅಂಬರೀಷೋಽಭವತ್ ಪುತ್ರಃ ಪಾರ್ಥಿವರ್ಷಭ ಸತ್ತಮಃ ॥ 18 ॥**

ವೈವಸ್ವತ ಮನುವಿಗೆ 'ನರಿಷ್ಯಂತ' ಎಂಬ ಮಗನಿದ್ದು ಅವನಿಂದ ಅನೇಕ ವೀರವರೇಣ್ಯರಾದ ಬಲಿಷ್ಠ ಪುತ್ರರು ಇದ್ದರು. ಇವರೆಲ್ಲರೂ 'ಶಕರು' ಎಂದು ಪ್ರಖ್ಯಾತರಾದರು ವೈವಸ್ವತನ ಎರಡನೇ ಮಗ ನಾಭಾಗನಿಗೆ 'ಅಂಬರೀಷ' ಎಂಬ ಸತ್ಪುತ್ರ ಜನಿಸಿದನು.

ಮೂರನೇ ಮಗ ಧೃಷ್ಣು/ಧೃಷ್ಟನೆಂಬುವನಿಂದ 'ಧಾರ್ಷ್ಟಕ'ವೆಂಬ ಮಗನು ಹುಟ್ಟಿದನು. ಇವನು ಜಾತಿಯಲ್ಲಿ ಕ್ಷತ್ರಿಯನಾದರೂ ಆಚಾರದಲ್ಲಿ ಬ್ರಾಹ್ಮಣನೆನಿಸಿದನು. ಇವರ ವಂಶ ಧಾರ್ಷ್ಟಕವೆಂಬ ಕ್ಷತ್ರಿಯ ವಂಶವಾಯಿತು.

**ಕರೂಷಸ್ಯತು ಕಾರೂಷಾಃ ಕ್ಷತ್ರಿಯಾಃ ಯುದ್ಧ ದುರ್ಮದಾಃ ।**
**ಸಹಸ್ರಂ ಕ್ಷತ್ರಿಯಗಣೋ ವಿಕ್ರಾಮತಃ ಸಂಬಭೂವ ಹ ॥ 19 ॥**

**ನಾಭಾಗಾರಿಷ್ಟ ಪುತ್ರಾಶ್ಚ ಕ್ಷತ್ರಿಯಾಃ ವೈಶ್ಯತಾಂ ಗತಾಃ ॥ 20 ॥**

ಕರೂಷನೆಂಬ ಆರನೇ ಮಗನಿಂದ ಧರ್ಮವತ್ಸಲರೂ ಬ್ರಾಹ್ಮಣರಲ್ಲಿ ಗೌರವವುಳ್ಳ ಉತ್ತರಾಪಥ ದೇಶವನ್ನು ರಕ್ಷಿಸುವ, ದುಷ್ಟಶಿಕ್ಷಣ ಶಿಷ್ಟ ರಕ್ಷಣದಲ್ಲಿ ಕಟಿಬದ್ಧರಾದ 'ಕಾರೂಷರು' ಹುಟ್ಟಿದರು. ಮಹಾಪರಾಕ್ರಮಿಗಳ ಸಾವಿರ ಮಂದಿ ಈ ಕಾರೂಷ ಗಣದಲ್ಲಿದ್ದರು. ಏಳನೆಯ ನಾಭಾಗಾರಿಷ್ಟನಿಗೆ ಕ್ಷತ್ರಿಯ ರಾಜರೂ ಹುಟ್ಟಿದರೂ ಅವರೆಲ್ಲರೂ ವ್ಯಾಪಾರಾದಿಗಳಲ್ಲಿ ತೊಡಗಿ ವೈಶ್ಯರಾದರು.

## ಸುಕನ್ಯಾ ಸುಚರಿತೆ

**ಪ್ರಾಂಶೋರೇಕೋಽಭವತ್ ಪುತ್ರಃ ಶರ್ಯಾತಿರಿತಿ ವಿಶ್ರುತಃ ।**
**ನರಿಷ್ಯಂತಸ್ಯ ದಾಯಾದೋ ರಾಜಾ ದಂಡಧರೋ ಯಮಃ ॥ 21 ॥**

**ಶರ್ಯಾತೇಃ ಮಿಥುನಂ ಚಾಸೀದಾನರ್ತೋ ನಾಮ ವಿಶ್ರುತಃ ।**
**ಪುತ್ರಃ ಕನ್ಯಾ ಸುಕನ್ಯಾಖ್ಯಾ ಯಾ ಪತ್ನೀ ಚ್ಯವನಸ್ಯ ಚ ॥ 22 ॥**

ಪ್ರಾಂಶುರಾಜನಿಗೆ ಪ್ರಜಾಪತಿಯೆಂಬ ಪುತ್ರನಾದನು. ಮನು ಪುತ್ರನಾದ ಶರ್ಯಾತಿಗೆ ಆನರ್ತವೆಂಬ ಗಂಡು ಮಗು ಹಾಗೂ ಸುಕನ್ಯಾ ಎಂಬ ಹೆಣ್ಣು ಮಗು ಜನಿಸಿತು. ಸುಕನ್ಯೆಯು ಪರಮಕೋಪಿಷ್ಠನಾದ ಚ್ಯವನನನ್ನು ವಿವಾಹವಾದಳು. ಆನರ್ತನಿಗೆ ರೇವ ಎಂಬ ಮಗನಾದನು. ಆನರ್ತ ರಾಜನು ಆಳಿದ ರಾಷ್ಟ್ರವು 'ಆನರ್ತದೇಶ' ವೆನಿಸಿತು.

**ಆನರ್ತಸ್ಯ ತು ದಾಯಾದಃ ರೇವೋ ನಾಮ ಮಹಾದ್ಯುತಿಃ ।**
**ಆನರ್ತ ವಿಷಯಶ್ಚಾಸೀತ್ ಪುರೀ ಚಾಸ್ಯ ಕುಶಸ್ಥಲೀ ॥ 23 ॥**

ಮಹಾಕಾಂತಿಯುಕ್ತನಾದ 'ರೇವ' ಎಂಬುವನು ಆನರ್ತ ರಾಜನ ಪುತ್ರನು.

ಆನರ್ತನು ರಾಜ್ಯಭಾರ ಮಾಡಿದ ಪ್ರದೇಶವನ್ನು ಆನರ್ತವೆಂದೆ ಕರೆಯಲಾಯಿತು. ಶ್ರೀರಾಮನು ಕುಶನಿಗಾಗಿ ನಿರ್ಮಿಸಿದ್ದನು. ರೇವತ ರಾಜನೂ ಈ ಪ್ರದೇಶವಾಳದನು. (ಮುಂದೆ ಇದು 'ಕುಶಸ್ಥಲೀ' ಎನಿಸಿತು. ಮುಂದೆ ದ್ವಾರಕಾ ಎನಿಸಿತು) ಆನರ್ತ ದೇಶದ ರಾಜಧಾನಿಯೇ ಕುಶಸ್ಥಲೀ. ರೇವ ಅಥವಾ ರೈವನ ಮಗನೇ ಧರ್ಮಿಷ್ಠನಾದ ಕಕುದ್ಮಿಯು.

**ಜ್ಯೇಷ್ಠಃ ಪುತ್ರ ಶತಸ್ಯಾಸೀದ್ ರಾಜ್ಯಂ ಪ್ರಾಪ್ಯ ಕುಶಸ್ಥಲೀಮ್ ।**
**ಸ ಕನ್ಯಾ ಸಹಿತಃ ಶ್ರುತ್ವಾ ಗಾಂಧರ್ವಂ ಬ್ರಹ್ಮಣೋಽಂತಿಕೇ ॥ 24 ॥**

**ಮುಹೂರ್ತಭೂತಂ ದೇವಸ್ಯ ಗತಂ ಬಹುಯುಗಂ ಪ್ರಭೋ ॥ 25**

**ತತಃ ಸ ರೈವತೋ ಜ್ಞಾತ್ವಾ ಯಥಾತತ್ವಮರಿಂದಮ ।**
**ಕನ್ಯಾಂ ಸ ಬಲದೇವಾಯ ಸುವ್ರತಾಂ ನಾಮ ರೇವತೀಮ್ ॥ 26 ॥**

ರೇವನಿಗೆ ನೂರು ಮಕ್ಕಳಿದ್ದರು. ಅವರಲ್ಲಿ ಕಕುದ್ಮಿಯು ಜ್ಯೇಷ್ಠನು. ಕುಶಸ್ಥಲಿಯಲ್ಲಿ ಈ ರೈವತನೇ ಕುಶಸ್ಥಲಿಯ ಶಾಸಕನಾಗಿದ್ದನು. ರೈವತನಿಗೆ ರೇವತಿ ಎಂಬ ಕನ್ಯೆಯಿದ್ದಳು. ಅವಳಿಗೆ ಅನುರೂಪನಾದ ವರ ಬಹಳ ಕಾಲ ಹುಡುಕಿದರೂ ಸಿಗಲಿಲ್ಲ. ಕೊನೆಗೆ ಬ್ರಹ್ಮನು ಇವಳಿಗೆ ಯಾವ ವರವನ್ನು ಗಂಟು ಹಾಕಿದ್ದಾನೆ ಎಂದು ತಿಳಿಯಲು ಬ್ರಹ್ಮಲೋಕಕ್ಕೆ ತೆರಳಿದನು.

ಅಲ್ಲಿ ಹಾಹಾ ಹೂಹೂ ಗಂಧರ್ವರು ಗಾನ ಮಾಡುತ್ತಿದ್ದರು. ಚಿತ್ರಾ, ದಕ್ಷಿಣಾ ಧಾತರಿ ಎಂಬ ಸಂಗೀತದ ಮೂರು ವಿಧ ಸಂಗೀತ ನಡೆದಿತ್ತು. ಆ ಗಂಧರ್ವ ಸಂಗೀತ ಆಲಿಸುತ್ತಾ ತನ್ಮಯನಾಗಿ ಕೇಳುತ್ತಿದ್ದ ಅವನಿಗೆ ಒಂದು ಮುಹೂರ್ತ ಹೋದದ್ದೆ ತಿಳಿಯಲಿಲ್ಲ. ಬ್ರಹ್ಮಲೋಕದ ಒಂದು ಮುಹೂರ್ತದಲ್ಲಿ ಅನೇಕ ಯುಗಗಳೆ ಕಳೆದು ಹೋಗಿದ್ದವು. ಕಕುದ್ಮಿಯು ಸಂಗೀತಾ ನಂತರ ಬ್ರಹ್ಮದೇವನನ್ನು ಕುರಿತು ನಮಸ್ಕರಿಸಿ "ನನ್ನ ಮಗಳಿಗೆ ನೀವು ಯಾವ ವರ ಗೊತ್ತು ಮಾಡಿರುವಿರಿ" ಎಂದ. ರಾಜನೇ, ನೀನು ತಿಳಿದಂತೆ ಈಗ ನಿನ್ನ ಕಾಲದಲ್ಲಿದ್ದ ಯಾವ ವರರೂ ಇರುವುದಿಲ್ಲ. ಇಲ್ಲಿ ಒಂದು ಮುಹೂರ್ತವೆಂದರೆ ಮಾನವ ಚತುರ್ಯುಗಗಳೇ ಕಳೆದು ಹೋಗಿವೆ. ಈಗ ಇಪ್ಪತ್ತೆಂಟನೆಯ ದ್ವಾಪರ ಮುಗಿಯಲೂ ಬಂದಿದೆ. ಈಗ ಶೇಷಾವತಾರಿ ಬಲರಾಮನಿರುವನು. ಈ ರೇವತಿಯನ್ನು ಅವನಿಗೆ ಕೊಡು ಎಂದನು. ಕಕುದ್ಮಿ ಹಾಗೂ ರೇವತಿ ಇಬ್ಬರೂ ಯುವಕರಾಗಿಯೇ ಇದ್ದು ಯಾದವರಿಂದ ಆಳಲ್ಪಡುತ್ತಿರುವ

ಕುಶಸ್ಥಲಿಗೆ ಬಂದನು. ರೇವತನು ವಿಷಯಗಳನ್ನೆಲ್ಲ ಯಥಾವತ್ತಾಗಿ ತಿಳಿದು, ಸುವ್ರತಳಾದ ರೇವತಿಯನ್ನು ಬಲರಾಮನಿಗೆ ವಿವಾಹ ಮಾಡಿಕೊಟ್ಟನು.

**ದತ್ತ್ವಾ ಜಗಾಮ ಶಿಖರಂ ಮೇರೋಸ್ತಪಸಿ ಸಂಸ್ಥಿತಃ ।**
**ರೇಮೇ ರಾಮೋಽಪಿ ಧರ್ಮಾತ್ಮಾ ರೇವತ್ಯಾ ಸಹಿತಃ ಸುಖೀ ॥ 27 ॥**

ರೇವತನು ಮೇರು ಪರ್ವತಕ್ಕೆ ತಪಸ್ಸಿಗೆ ಹೋದನು. ಬಲರಾಮನು ರೇವತಿಯೊಂದಿಗೆ ರಮಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವೈವಸ್ವತ ಮನು ವಂಶಾವಳಿವೆಂಬಲ್ಲಿ
ಹತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 11 ಹರಿಪರ್ವ

## ಅಥ ಏಕಾದಶೋಽಧ್ಯಾಯಃ

### ಧುಂಧುಮಾರನ ಕಥೆ

*ಜನಮೇಜಯ ಉವಾಚ-*

**ಕಥಂ ಬಹುಯುಗೇ ಕಾಲೇ ಸಮತೀತೇ ದ್ವಿಜೋತ್ತಮ ।**
**ನ ಜರಾ ರೇವತೀಂ ಪ್ರಾಪ ರೈವತಂ ಚ ಕಕುದ್ಮಿನಮ್ ॥ 1 ॥**

ವೈಶಂಪಾಯನರೇ, ಅನೇಕ ಯುಗಗಳೂ ಕಳೆದರೂ ರೇವತ ಹಾಗೂ ರೇವತಿಗೆ ಜರೆಯು ಆಕ್ರಮಿಸದಿರಲು ಕಾರಣವೇನು? ವೃದ್ಧಾಪ್ಯ ಬಂದಿದ್ದರೆ ಆ ವೃದ್ಧ ಕನ್ಯೆಯನ್ನು ಬಲರಾಮನು ಹೇಗೆ ಮದುವೆಯಾದ? ಗಂಡಚಿಕ್ಕವ ಹೆಂಡತಿ ಹಿರಿಯಳಾಗಲಿಲ್ಲವೆ? ಇದಲ್ಲದೆ ರೈವತನು ತಪಸ್ಸಿಗೆ ತೆರಳಿದ ಮೇಲೆ ಅವನ ವಂಶ ಬೆಳೆದದ್ದು ಹೇಗೆ? ಎಂದನು.

*ವೈಶಂಪಾಯನ ಉವಾಚ -*

**ನ ಜರಾ ಕ್ಷುತ್ ಪಿಪಾಸೇ ವಾ ನ ಮೃತ್ಯುಃ ಭರತರ್ಷಭ ।**
**ಋತುಚಕ್ರಂ ನ ಭವತಿ ಬ್ರಹ್ಮಲೋಕೇ ಸದಾನಘ ॥ 2 ॥**

ರಾಜನೇ, ಮುಪ್ಪು - ಮರಣ - ಹಸಿವು - ಬಾಯಾರಿಕೆ ಇವೆಲ್ಲ ಭೂಮಿಯಲ್ಲಿದ್ದವರಿಗೆ ತಪ್ಪಿದ್ದಲ್ಲ. ಆದರೆ ಸತ್ಯಲೋಕದಲ್ಲಿರುವವರಿಗೆ ಈ ಭಾವಗಳು ಅಡ್ಡಿಯಾಗಲಾರವು. ಮುಪ್ಪಾಗಲೀ, ಮೃತ್ಯುವಾಗಲೀ, ಹಸಿವೆ ಬಾಯಾರಿಕೆಗಳಾಗಲಿ ಅವರನ್ನೆಂದೂ ಬಾಧಿಸಲಾರವು. ರೈವತ-ರೇವತಿ ಈ ಇಬ್ಬರೂ ತಂದೆ ಮಗಳು ಬ್ರಹ್ಮಲೋಕಕ್ಕೆ ಯಾವ ತಾರಣ್ಯದಲ್ಲಿದ್ದರೋ ಮರಳಿ ಭೂಲೋಕಕ್ಕೆ ಬಂದಾಗಲೂ ಹಾಗೆಯೆ ಇದ್ದರು.

ರೈವತನು ತನ್ನ ಮಗಳನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದಂತೆ ಇತ್ತ ದೈತ್ಯರು ಕುಶಸ್ಥಲಿಯನ್ನು ಆಕ್ರಮಿಸಿದರು. ಧಾರ್ಮಿಕನಾದ ಕಕುದ್ಮಿಗೆ ನೂರು ಮಂದಿ ಸಹೋದರರಿದ್ದರು. ರಾಕ್ಷಸರಿಂದ ತಾಡಿತ–ಪೀಡತರಾದ ರೈವತ ಸೋದರರು ದಿಕ್ಕುಪಾಲಾಗಿ ಹೋದರು. ಅವರು ಇದ್ದಲ್ಲಿಯೇ ಪುತ್ರಪೌತ್ರ ಪರಂಪರೆಯಾಗಿ ಬೆಳೆದವು.

**ಯೇಷಾಮೇತೇ ಮಹಾರಾಜ ಶರ್ಯಾತಾ ಇತಿ ವಿಶ್ರುತಾಃ ।**
**ಕ್ಷತ್ರಿಯಾಃ ಭರತಶ್ರೇಷ್ಠ ದಿಕ್ಷು ಸರ್ವಾಸು ಧಾರ್ಮಿಕಾಃ ॥ 3 ॥**
**ನಾಭಾಗಾರಿಷ್ಟೌ ಪುತ್ರೌ ದ್ವೌ ವೈಶ್ಯಾ ಬ್ರಾಹ್ಮಣತಾಂ ಗತೌ ।**

ಈ ಸಂತತಿಯವರಿಗೆ ಶರ್ಯಾತರೆಂದು ಪ್ರಸಿದ್ಧ ನಾಮವಾಯಿತು. ನಾಭಾಗ – ರಿಷ್ಟ ಎಂಬುವರ ಪುತ್ರರಾದರೂ ಮೊದಲು ವೃತ್ತಿಯಿಂದ ವೈಶ್ಯರಾಗಿದ್ದರೂ ಮುಂದೆ ತಮ್ಮ ತಪೋಮಹಿಮೆಯಿಂದ ಬ್ರಾಹ್ಮಣರಾದರು.

ಕರೂಷನೆಂಬುವನಿಗೆ ಕಾರೂಷರೆಂಬ ಯುದ್ಧ ದುರ್ಮದರಾಗಿದ್ದು ತಮ್ಮ ವೀರ ವೃತ್ತಿಯಿಂದ ಕಡೆಯವರೆಗೂ ಕ್ಷತ್ರಿಯರಾಗಿಯೇ ಉಳಿದರು.

### ಪೃಷಧ್ರ ಶೂದ್ರನಾದ

ಮಧುವಿನ ಆರನೇ ಮಗನಾದ ಪ್ರಾಂಶುವಿಗೆ 'ಪ್ರಜಾತಿ' ಯೆಂಬ ಪುತ್ರನಾದನು.

**ಪೃಷಧ್ರೋ ಹಿಂಸಯಿತ್ವಾ ತು ಗುರೋರ್ಗಾಂ ಜನಮೇಜಯ ।**
**ಶಾಪಾತ್ ಶೂದ್ರತ್ವಮಾಪನ್ನೋ ನವೈತೇ ಪರಿಕೀರ್ತಿತಾಃ ॥ 4 ॥**
**ವೈವಸ್ವತಸ್ಯ ತನಯಾಃ ಮನೋಃ ವೈ ಭರತರ್ಷಭ ॥ 5 ॥**

ವೈವಸ್ವತ ಮನುವಿನ ದ್ವಿತೀಯ ಪುತ್ರ ಪೃಷಧ್ರ ಅಥವಾ ವೃಷಧ್ರನು ಗೋವುಗಳನ್ನು ಧಾರಣ ಮಾಡುವ ಸಾಮರ್ಥ್ಯ ಹೊಂದಿದ್ದು ಸಾರ್ಥಕ ನಾಮಧೇಯವನ್ನು ಹೊಂದಿದ್ದ. ಒಂದು ಬಾರಿ ವಸಿಷ್ಠರು ಗೋರಕ್ಷಣೆ ಮಾಡಲು ಆಜ್ಞಾಪಿಸಿದರು. ಇದು ಸಾವಿರ ಆಕಳಾಗಬೇಕೆಂಬ ಅವರ ಆದೇಶವಾಗಿತ್ತು.

ಹಗಲಿರುಳೂ ರಕ್ಷಿಸುತ್ತಿದ್ದ. ಒಂದು ದಿನ ಹುಲಿಯೊಂದು ಕೊಟ್ಟಿಗೆ ಪ್ರವೇಶಿಸಿದಾಗ ಹಸುಗಳು ಭಯದಿಂದ ಚೀರಿದವು. ಹುಲಿಯು ಒಂದು

ಗೋವನ್ನು ಹಿಡಿಯಿತು. ಆರ್ತನಾದ ಕೇಳಿದ ಪೃಷಧ್ರನು ಕತ್ತಲೆಯಲ್ಲಿ ಹುಲಿಯನ್ನು ಹೊಡೆಯುವೆನೆಂದು ಭ್ರಮಿಸಿ ಗೋವಿನ ತಲೆಯನ್ನೆ ಕತ್ತರಿಸಿ ಹಾಕಿದನು. ಹುಲಿಯು ಪೆಟ್ಟು ಬಿದ್ದು ಓಡಿ ಹೋಯಿತು. ಕುಲಾಚಾರ್ಯರು ಪೃಷಧ್ರನಿಗೆ ಈ ಕ್ರೂರ ಕೆಲಸದಿಂದಾಗಿ ನೀನು ಶೂದ್ರನಾಗು ಎಂದು ಶಪಿಸಿದರು. ಮುಂದೆ ಉಗ್ರ ತಪಸ್ಸಿನಿಂದಾಗಿ ಶ್ರೀಹರಿಯನ್ನು ಸಂತುಷ್ಟಗೊಳಸಿದನು. ರಾಜನೇ, ನಾನು ನಿನಗೆ ಒಂಭತ್ತು ಮನುಪುತ್ರರ ವಿಚಾರ ತಿಳಿಸಿರುವೆನು.

### ಇಕ್ಷ್ವಾಕು ಚರಿತ್ರೆ

**ಕ್ಷವತೋಽಶ್ಚ ಮನೋಸ್ತಾತ ಇಕ್ಷ್ವಾಕುರಭವತ್ ಸುತಃ ।**
**ತಸ್ಯ ಪುತ್ರಶತತ್ವಾಸೀದ್ ಇಕ್ಷ್ವಾಕೋಃ ಭೂರಿದಕ್ಷಿಣಮ್ ॥ 6 ॥**
**ತೇಷಾಂ ವಿಕುಕ್ಷಿಃ ಜ್ಯೇಷ್ಠಸ್ತು ವಿಕುಕ್ಷಿತ್ವಾದ್ ಅಯೋಧತಾಮ್ ।**
**ಶಕುನಿ ಪ್ರಮುಖಾಸ್ತಸ್ಯ ಪುತ್ರಾಃ ಪಂಚಾಶದುತ್ತಮಾಃ ॥ 7 ॥**

### ಮೂಗಿನಿಂದ ಹುಟ್ಟಿ ಮಾಂಸ ತಿಂದ ವಿಕ್ಷುಕ್ಷಿ

ರಾಜನೇ ಮನುರಾಜನು ಒಂದು ದಿನ ಜೋರಾಗಿ ಸೀನಿದನು. ಆಗ ಅವನ ಮೂಗಿನಿಂದಲೇ ಒಬ್ಬ ಪುತ್ರ ಜನಿಸಿದ. ಇವನೇ ಇಕ್ಷ್ವಾಕು. ಇವನಿಗೆ ವಿಕುಕ್ಷಿ, ಶಶಾದ, ದಂಡಕ, ನಿಮಿ ಮೊದಲಾದ ನೂರು ಮಂದಿ ಮಕ್ಕಳಿದ್ದರು. ಶಕುನಿ ಮೊದಲಾದ ಐವತ್ತು ಮಂದಿ ಕುಮಾರರು ಉತ್ತರಾಪಥವನ್ನಾಳಿದರು. ಉಳಿದವರು 48 ಮಂದಿ ದಕ್ಷಿಣಾಪಥ ಆಳಿದರು.

**ಇಕ್ಷ್ವಾಕುಸ್ತು ವಿಕುಕ್ಷಿಂ ವೈ ಅಷ್ಟಕಾಯಾಮಥಾದಿಶತ್ ।**
**ಮಾಂಸಮಾನಯ ಶ್ರಾದ್ಧಾರ್ಥಂ ಮೃಗಾನ್ ಹತ್ವಾ ಮಹಾಬಲಃ ॥ 8 ॥**
**ಶ್ರಾದ್ಧಕರ್ಮಣೀ ಚೋದ್ದಿಷ್ಟ ಮಕೃತೇ ಶ್ರಾದ್ಧ ಕರ್ಮಣಿ ।**
**ಭಕ್ಷಯಿತ್ವಾ ಶಶಂ ತಾತ ಶಶಾದೋ ಮೃಗಯಾಗತಃ ॥ 9 ॥**

ಇಕ್ಷ್ವಾಕು ನರೇಂದ್ರನು ಒಂದು ದಿನ ತನ್ನ ಜ್ಯೇಷ್ಠ ಪುತ್ರ ವಿಕುಕ್ಷಿಗೆ ಅಷ್ಟಕಾಶ್ರಾದ್ಧಕ್ಕಾಗಿ ಯೋಗ್ಯ ಪ್ರಾಣಿಯ ಮಾಂಸವನ್ನು ತರಲು ಆದೇಶಿಸಿದನು. ವಿಕುಕ್ಷಿಯು ಅರಣ್ಯಕ್ಕೆ ಹೋದನು. ಬೇಟೆಯಿಂದ ಬಳಲಿ ಬೆಂಡಾದ ವಿಕುಕ್ಷಿಗೆ ಬಹಳ ಹಸಿವೆಯಾಯಿತು. ಹಸಿವೆ ತಡೆಯಲಾರದೆ ತಾನು ಶ್ರಾದ್ಧಕ್ಕಾಗಿ

ಸಂಹರಿಸಿದ ಮೊಲಗಳಲ್ಲಿ ಒಂದನ್ನು ತಿಂದು, ಉಳಿದದ್ದನ್ನು ಮನೆಗೆ ತಂದನು. ಶ್ರಾದ್ಧಕ್ಕಾಗಿ ಮೀಸಲಾಗಿದ್ದ ಮೊಲವನ್ನು ತಿಂದು ತಂದಿದ್ದರಿಂದ ಉಚ್ಛಿಷ್ಟವಾಗಿದೆ. ಇದು ಅಪವಿತ್ರ. ಶ್ರಾದ್ಧಕ್ಕೆ ಬರುವುದಿಲ್ಲವೆಂದು ವಸಿಷ್ಠರು ಹೇಳಿದರು. ಕೋಪಗೊಂಡ ಇಕ್ಷ್ವಾಕು ರಾಜನು ವಿಕುಕ್ಷಿಯನ್ನು ರಾಜ್ಯದಿಂದ ಗಡೀಪಾರು ಮಾಡಿದ. ಶಶವನ್ನು = ಮೊಲವನ್ನು, ಅದ = ತಿಂದನೆಂದೆ 'ಶಶಾದ' ನಾದನು.

**ಇಕ್ಷ್ವಾಕೌ ಸಂಸ್ಥಿತೇ ತಾತ ಶಶಾದಃ ಪುರಮಾವಸತ್ ।**
**ಶಶಾದಸ್ಯ ದಾಯಾದಃ ಕಕುಸ್ಥೋ ನಾಮ ವೀರ್ಯವಾನ್ ॥ 10 ॥**

**ಇಂದ್ರಸ್ಯ ವೃಷಭೂತಸ್ಯ ಕಕುಸ್ಥೋಽಜಯತಾಸುರಾನ್ ।**
**ಪೂರ್ವಂ ದೇವಾಸುರೇ ಯುದ್ಧೇ ಕಕುಸ್ಥಸ್ತೇನ ಹಿ ಸ್ಮೃತಃ ॥ 11 ॥**

ಇಕ್ಷ್ವಾಕು ರಾಜನು ಮೃತನಾದ ಮೇಲೆ ಶಶಾದನು ಮರಳಿ ಮನೆಗೆ ಬಂದ ವಿಕುಕ್ಷಿಯನ್ನು ವಸಿಷ್ಠರೇ ಪಟ್ಟಾಭಿಷೇಕ ಮಾಡಿದರು. ಶಶಾದನು ಧರ್ಮದಿಂದ ರಾಜ್ಯವಾಳಿದನು. ಶಶಾದನ ಪುತ್ರನೇ 'ಕಕುದ್‌ಸ್ಥ'ನು. ಇವನು ಮಹಾಶೂರವಂತನು. ಎತ್ತಿನ ವೇಷ ಧರಿಸಿದ ಇಂದ್ರದೇವನ ಡುಬ್ಬದ ಮೇಲೆ ಕುಳಿತು ಯುದ್ಧ ಮಾಡಿದ್ರಿಂದ 'ಕಕುಸ್ಥ' ಎಂದಾಯಿತು. ಪುರಂಜಯವೆಂದ ತೊಟ್ಟಿಲ ಹೆಸರಿದ್ದು ಕಕುಸ್ಥ ಎಂದು ಕರೆಯಲು ಕಾರಣವಿದೆ. ಹಿಂದೆ ತ್ರೇತಾಯುಗದಲ್ಲಿ ದೇವತೆ–ದಾನವರ ಮಧ್ಯೆ ಘೋರ ಯುದ್ಧವಾಯಿತು. ಪರಾಜಿತರಾದ ಇಂದ್ರಾದಿ ದೇವತೆಗಳು ಪುರಂಜಯನ ಸಹಾಯ ಬೇಡಿದರು. 'ಇಂದ್ರನೇ, ನೀನು ನನಗೆ ವಾಹನವಾದರೆ ನಾನು ಸಹಾಯ ಮಾಡುವೆನು' ಎಂದ. ಭಗವಂತನ ಮಾತಿನಂತೆ ದೇವೇಂದ್ರನು ಗೂಳಿಯ ವೇಷ ಧರಿಸಿದರು. ಪುರಂಜಯನು ಯುದ್ಧ ಸನ್ನದ್ಧನಾಗಿಯೂ, ವಿಷ್ಣುವಿನ ತೇಜಸ್ಸಿನಿಂದಲೂ ದೈತ್ಯರನ್ನು ಕೊಂದು ಹಾಕಿದನು. ಜಯಮಾಲೆ ಹೊಂದಿದ ರಾಜನು ಇಂದ್ರನಿಗೆ ನಗರವನ್ನು ನೀಡಿದನು. ಇದಕ್ಕಾಗಿ 'ಇಂದ್ರವಾಹ'ನೆಂದೂ, ಎತ್ತಿನ ಡುಬ್ಬದ ಮೇಲೆ ಕುಳಿತಿದ್ದರಿಂದ 'ಕಕುಸ್ಥ'ನೆಂದೂ ಪ್ರಖ್ಯಾತನಾದ.

## ಕಕುಸ್ಥನ ವಂಶ

**ಅನೇನಾಸ್ತು ಕಕುಸ್ಥಸ್ಯ ಪೃಥುರಾನೇನಸಃ ಸ್ಮೃತಃ ॥ 12 ॥**
**ಆರ್ದ್ರಸ್ಯ ಯುವನಾಶ್ವಸ್ತು ಶ್ರಾವಸ್ತಸ್ಯ ಚಾತ್ಮಜಃ ।**
**ಶ್ರಾವಸ್ತಸ್ಯ ತು ದಾಯಾದಃ ಬೃಹದಶ್ವೋಮಹಾಯಶಾಃ ॥ 13 ॥**

ಕಕುಸ್ಥನ ಮಗ ಅನೇನಸ್. ಅವನ ಮಗ ಪೃಥು. ಪೃಥುವಿನ ಮಗ ವಿಷ್ಟರಾಶ್ವ. ವಿಷ್ಟರಾಶ್ವನ ಮಗ ಆರ್ದ್ರಾ. ಇವನ ಮಗನೇ ಯುವನಾಶ್ವ ರಾಜ. ಇವನಿಂದ ಶ್ರಾವಸ್ತನು ಜನಿಸಿದನು. ಇವನೇ ಶ್ರಾವಸ್ತಿ. ಕೋಸಲ ದೇಶದ ರಾಜಧಾನಿಯನ್ನು ನಿರ್ಮಿಸಿದನು. ಶ್ರಾವಸ್ತನ ಮಗನೇ ಬೃಹದಶ್ವನು. ಇವನ ಮಗನೇ 'ಕುವಲಯಾಶ್ವ'.

## ಧುಂಧುಮಾರನೆನಿಸಿದ ಕುವಲಾಶ್ವ

**ಕುವಲಾಶ್ವಃ ಸುತಸ್ತಸ್ಯ ರಾಜಾ ಪರಮಧಾರ್ಮಿಕಃ ।**
**ಯಃ ಸಃ ಧುಂಧುವಧಾತ್ ರಾಜಾ ಧುಂದುಮಾರತ್ವಮಾಗತಃ ॥ 14 ॥**

ಬೃಹದಶ್ವನ ಮಗನೇ ಪರಮ ಧಾರ್ಮಿಕನಾದ ಕುವಲಯಾಶ್ವನು. ಇವನು ಮುಂದೆ ಧುಂಧು ಎಂಬ ರಾಕ್ಷಸನನ್ನು ಕೊಂದು 'ಧುಂಧುಮಾರ' ಎನಿಸಿದನು.

ವೈಶಂಪಾಯನರೇ, ಮಹಾಬಲಿಷ್ಠನಾದ ದೈತ್ಯಾಗ್ರೇಸರನನ್ನು ಹೇಗೆ ಕೊಂದನು? ಸಂಹಾರ ಮಾಡಿದ ರೀತಿಯನ್ನು ತಿಳಿಸಿರಿ ಎಂದಾಗ,

***ವೈಶಂಪಾಯನ ಉವಾಚ–***

**ಕುವಲಾಶ್ವಸ್ಯ ಪುತ್ರಾಣಾಂ ಶತಮುತ್ತಮ ಧನ್ವಿನಾಮ್ ।**
**ಸರ್ವೇ ವಿದ್ಯಾಸು ನಿಷ್ಣಾತಾ ಬಲವಂತೋ ದುರಾಸದಾಃ ॥ 15 ॥**

**ಕುವಲಾಶ್ವಂ ಸುತಂ ರಾಜ್ಯೇ ಬೃಹದಶ್ವೋ ನ್ಯಯೋಜಯತ್ ।**
**ಪುತ್ರ ಸಂಕ್ರಾಮಿತಶ್ರೀಸ್ತು ವನಂ ರಾಜಾ ಸಮಾವಿಶತ್ ॥ 16 ॥**

**ತಮುತ್ತಂಕೋಽಥ ವಿಪ್ರರ್ಷಿಃ ಪ್ರಯಾಂತಂ ಪ್ರತ್ಯವಾರಯತ್ ॥ 17 ॥**

**ಭವತಾ ರಕ್ಷಣಂ ಕಾರ್ಯಂ ತತ್ ತಾವತ್ ಕರ್ತುಮರ್ಹಸಿ ।**
**ನಿರುದ್ವಿಗ್ನಃ ತಪಶ್ಚರ್ತುಂ ನ ಹಿ ಶಕ್ನೋಷಿ ಪಾರ್ಥಿವ ॥ 18 ॥**

**ಪಾಲನೇ ಹಿ ಮಹಾನ್ ಧರ್ಮಃ ಪ್ರಜಾನಾಮಿಹ ದೃಶ್ಯತೇ ।**
**ನ ತಥಾ ದೃಶ್ಯತೇಽರಣ್ಯೇ ಮಾ ತೇ ಭೂದ್ ಬುದ್ಧಿರೀದೃಶೀ ॥ 19 ॥**

ಬೃಹದಶ್ವನು ತನ್ನ ಮಗ ಕುವಲಾಶ್ವನಿಗೆ ಪಟ್ಟದಲ್ಲಿ ಅಭಿಷೇಕಿಸಿ ತಪಸ್ಸಿಗಾಗಿ ಹೊರಡಲುನವಾದ. ಅರಣ್ಯಪ್ರಸ್ಥಾನಕ್ಕೆ ಹೊರಟಿದ್ದ ಅವನನ್ನು ಉತ್ತಂಕ ಋಷಿಯು ರಾಜಾ ಬೃಹದಶ್ವನೇ, ಕ್ಷತ್ರಿಯರಿಗೆ ಪ್ರಜಾಪಾಲನೇ ಮಹಾಧರ್ಮವು.

ತಪಸ್ವಿಗಳಾದ ನಮ್ಮ ರಕ್ಷಣೆ ಮಾಡುವುದೇ ನಿನ್ನ ಕರ್ತವ್ಯವಾಗಿದೆ. ನಿನ್ನಿಂದ ರಕ್ಷಣೆ ದೊರೆಯದ ನಾವು ನಿರುದ್ವಿಗ್ನವಾಗಿ ತಪಸ್ಸನ್ನಾಚರಿಸುವುದಾದರೂ ಹೇಗೆ? ನಿನ್ನ ರಕ್ಷಣೆಯಿಂದಾಗಿ ವಿಶ್ವದಲ್ಲಿ ಶಾಂತಿಯಿರುತ್ತದೆ. ಕಾಡಿಗೆ ಹೋಗುವುದು ಬೇಡ. ಪ್ರಜಾಪಾಲನೆಯಿಂದಲೇ ಅಪಾರ ಪುಣ್ಯ ಲಭಿಸುವಾಗ ಕಾಡಿಗೆ ಹೋದರೆ ಇಂತಹ ಪುಣ್ಯವು ಲಭಿಸಲಾರದು. ರಾಜರಿಗೆ ಪ್ರಜಾಪಾಲನೆಯೇ ಧರ್ಮವೆಂದು ಹಿಂದಿನ ರಾಜರ್ಷಿಗಳೇ ವ್ಯವಸ್ಥೆ ಮಾಡಿರುವರು. ಇದನ್ನು ಮಾಡಿ ಕೀರ್ತಿವಂತನಾಗು ಎಂದರು.

ರಾಜನು ಋಷಿಗಳೇ ನಿಮಗೆ ಬಂದ ಆಪತ್ತಾದರೂ ಏನು? ಎಂದನು.

**ಮಮಾಶ್ರಮ ಸಮೀಪೇ ಹಿ ಸಮೇಷು ಮರುಧನ್ವಸು ।**
**ಸಮುದ್ರೋ ವಾಲುಕಾಪೂರ್ಣೋ ಉಜ್ಜಾನಕ ಇತಿ ಶ್ರುತಃ ॥ 20 ॥**

**ಅಂತರ್ಭೂಮಿಗತಃ ತತ್ರ ವಾಲುಕಾಂತರ್ಹಿತೋ ಮಹಾನ್ ।**
**ರಾಕ್ಷಸಸ್ಯ ಮಧೋಃ ಪುತ್ರಃ ಧುಂಧುನಾಮಾ ಮಹಾಸುರಃ ॥ 21 ॥**
**ಶೇತೇ ಲೋಕವಿನಾಶಾಯ ತಪ ಆಸ್ಥಾಯ ದಾರುಣಮ್ ॥ 22 ॥**

ಉತ್ತಂಕರು ಹೇಳುವರು – ರಾಜಾ ಬೃಹದಶ್ವನೇ, ನನ್ನ ಆಶ್ರಮದ ಹತ್ತಿರ ಮರುಭೂಮಿಯೊಂದಿದೆ. ಸಮ ಸ್ಥಳವಾಗಿದ್ದು ಮರಳನಿಂದಲೇ ತುಂಬಿರುವ ಉಜ್ಜಾನಕವೆಂಬ ಸಮುದ್ರವಿದೆ. ಅಲ್ಲಿ ದೇವತೆಗಳಿಂದಲೂ ಅವಧ್ಯನಾದ ಮಧುದೈತ್ಯನ ಪುತ್ರನಾದ 'ಧುಂಧು' ದೈತ್ಯನು ಲೋಕನಾಶಕ್ಕಾಗಿ ಘೋರ ತಪಸ್ಸನ್ನಾಚರಿಸುತ್ತಿರುವನು.

**ಸಂವತ್ಸರಸ್ಯ ಪರ್ಯಂತೇ ಸ ನಿಶ್ವಾಸಂ ಪ್ರಮುಂಚತಿ ।**
**ಯದಾ ತದಾ ಭೂಶ್ಚಲತಿ ಸಶೈಲ ವನಕಾನನಾ ॥ 23 ॥**

**ತಸ್ಯ ನಿಶ್ವಾಸವಾತೇನ ರಜ ಉದ್ಧೂಯತೇ ಮಹತ್ ।**
**ಆದಿತ್ಯ ಪಥಮಾವೃತ್ಯ ಸಪ್ತಾಹಂ ಭೂಮಿಕಂಪನಮ್ ॥ 24 ॥**
**ತೇನ ತಾತ ನ ಶಕ್ನೋಮಿ ತಸ್ಮಿನ್ ಸ್ಥಾತುಂ ಸ್ವಕಾಶ್ರಮೇ ॥ 25 ॥**
**ತಂ ಮಾರಯ ಮಹಾಕಾಯಂ ಲೋಕಾನಾಂ ಹಿತಕಾಮ್ಯಯಾ ॥ 26 ॥**

ಅವನಾದರೂ ವರ್ಷಕ್ಕೆ ಒಂದು ಬಾರಿ ಮರಳಿನಲ್ಲಿದ್ದವನು ಮೇಲೆ ಬಂದು ಜೋರಾಗಿ ನಿಟ್ಟುಸಿರು ಬಿಡುತ್ತಾನೆ. ಇದರಿಂದಾಗಿ ವನಪರ್ವತಗಳಿಂದ ಸಹಿತವಾದ ಇಡೀ ಭೂಮಿಯು ಏಳು ದಿನದವರೆಗೂ ಕಂಪಿಸುತ್ತದೆ. ಸೂರ್ಯಮಂಡಲವನ್ನೆಲ್ಲ ಮುಚ್ಚಿ ಹಾಕುತ್ತದೆ. ಒಂದು ಸಪ್ತಾಹ ಪರ್ಯಂತ ಭೂಕಂಪ, ಬೆಂಕಿಯ ಮಳೆ, ಹೊಗೆ, ಬೇಗೆ ಎಲ್ಲೆಲ್ಲೂ ಬೆಂಕಿಯ ತಾಂಡವ ನೃತ್ಯ ಪ್ರಾಣಿಗಳ ಸಂಹಾರ ಅವಿಚ್ಛಿನ್ನವಾಗಿ ನಡೆಯುತ್ತದೆ. ರಾಕ್ಷಸನು ಮಾತ್ರ ಯಾರಿಗೂ ಗೋಚರನಾಗುವುದಿಲ್ಲ. ಹೀಗಾಗಿ ನನ್ನ ಆಶ್ರಮದಲ್ಲಿರಲು ಅಶ್ಯಕವಾಗಿದೆ. ನೀನು ಅರಣ್ಯಕ್ಕೆ ಹೋಗುವುದನ್ನು ನಿಲ್ಲಿಸಿ ದುಷ್ಟ ದಾನವನನ್ನು ಸಂಹರಿಸಿದರೆ ಮಹಾಪುಣ್ಯಶಾಲಿಯಾಗಿ ಮೆರೆಯುವಿ. ಲೋಕಗಳೆಲ್ಲ ಸುಖವಾಗಿರಬೇಕಾದರೆ ರಾಕ್ಷಸನು ಮಡಿಯಲೆಬೇಕು. ನೀನೊಬ್ಬನೇ ಅವನನ್ನು ನಿಗ್ರಹಿಸಲು ಸಮರ್ಥನಾಗಿರುವೆ.

ವಿಷ್ಣುನಾ ಹಿ ವರೋದತ್ತಃ ಮಹ್ಯಂ ಪೂರ್ವಯುಗೇಽನಘ ।
ಯಸ್ತ್ವಂ ಮಹಾಸುರಂ ರೌದ್ರಂ ಹನಿಷ್ಯಸಿ ಮಹಾಬಲಮ್ ॥ 27 ॥
ತಸ್ಯ ತ್ವಂ ವರದಾನೇನ ತೇಜ ಆಪ್ಯಾಯಯಿಷ್ಯಸಿ ।
ನ ಹಿ ಧುಂಧುಃ ಮಹಾತೇಜಾಃ ತೇಜಸಾಲ್ಪೇನ ಶಕ್ಯತೇ ॥ 28 ॥
ಏವಮುಕ್ತೋ ರಾಜರ್ಷಿರುತ್ತಂಕೇನ ಮಹಾತ್ಮನಾ ।
ಕುವಲಾಶ್ವಂ ಸುತಂ ಪ್ರಾದಾತ್ ತಸ್ಮೈ ಧುಂಧು ನಿವಾರಣೇ ॥ 29 ॥

ರಾಜನೇ, ಹಿಂದೆ ವಿಷ್ಣುವು ನನಗೊಂದು ವರ ನೀಡಿರುವನು. ನಾನು ಯಾರಲ್ಲಿ ವಿಷ್ಣುವಿನ ತೇಜಸ್ಸು ಬರಲೆಂದು ಹೇಳುವೆನೋ ಅವನಲ್ಲಿ ವಿಷ್ಣುವು ತನ್ನ ತೇಜಸ್ಸನ್ನು ಆಧಾನಗೊಳಿಸುವನು. ಇದರಿಂದಾಗಿ ಬಲಿಷ್ಠ ದೈತ್ಯನನ್ನು ಸಂಹರಿಸಬಹುದು. ಮಹಾಸಾಮರ್ಥ್ಯಶಾಲಿಯಾದ ಧುಂಧುವನ್ನು ಕೊಲ್ಲಲು ಅಲ್ಪ ಸಾಮರ್ಥ್ಯವುಳ್ಳವನು ಕೊಲ್ಲಲಾರನೆಂದೆ ವಿಷ್ಣುವಿನ ತೇಜಸ್ಸಿನಿಂದ ಮಹಾಪ್ರಭಾವ ಹೊಂದಿದ ನೀನು ಅವನನ್ನು ಕೊಲ್ಲುವಿ. ಆದ್ದರಿಂದ ಅರಣ್ಯಕ್ಕೆ ಹೋಗದೆ ಧುಂಧುವನ್ನು ಕೊಂದು ಕೀರ್ತಿವಂತನಾಗು ಎಂದು ಉತ್ತಂಕನು ಹೇಳಿದಾಗ, ಬೃಹದಶ್ವನು ತನ್ನ ಮಗನಾದ ಕುವಲಾಶ್ವನನ್ನು ಧುಂಧು ಮಾರಣಕ್ಕಾಗಿ ನಿಯಮಿಸಿದನು.

*ಬೃಹದಶ್ವ ಉವಾಚ –*

**ಭಗವನ್ ನ್ಯಸ್ತ ಶಸ್ತ್ರೋಽಹಮಯಂ ತು ತನಯೋ ಮಮ ।**
**ಭವಿಷ್ಯತಿ ದ್ವಿಜಶ್ರೇಷ್ಠ ಧುಂಧುಮಾರೋ ನ ಸಂಶಯಃ ॥ 30 ॥**
**ಸ ತಂ ವ್ಯಾದಿಶ್ಯ ತನಯಂ ರಾಜರ್ಷಿಃ ಧುಂಧುಮಾರಣೇ ।**
**ಜಗಾಮ ಪರ್ವತಾಯೈವ ತಪಸೇ ಸಂಶಿತವ್ರತಃ ॥ 31 ॥**

ಪೂಜ್ಯರೇ, ನಾನೀಗ ಅಸ್ತ್ರಶಸ್ತ್ರ ತ್ಯಾಗ ಮಾಡಿರುವೆನು. ಇವನು ನನ್ನ ಮಗ ಕುವಲಾಶ್ವನು. ಇವನು ಧುಂಧುವನ್ನು ಸಂಹರಿಸಬಲ್ಲ. 'ಧುಂಧುಮಾರ'-ನೆನಿಸಿಬಲ್ಲ. ಕಠೋರ ವ್ರತ ನಿಷ್ಠನಾದ ರಾಜರ್ಷಿ ಬೃಹದಶ್ವನು ಉತ್ತಂಕನಿಗೆ ಹೀಗೆ ಹೇಳಿ, ತನ್ನ ಮಗನಿಗೆ ಧುಂಧುವನ್ನು ಕೊಲ್ಲಲು ಆದೇಶಿಸಿ, ತಪಸ್ಸಿಗಾಗಿ ಪರ್ವತಕ್ಕೆ ಹೊರಟು ಹೋದನು.

## ಕುವಲಾಶ್ವ ಧುಂಧುಮಾರನಾದದ್ದು

**ಕುವಲಾಶ್ವಸ್ತು ಪುತ್ರಾಣಾಂ ಶತೇನ ಸಹ ಪಾರ್ಥಿವಃ ।**
**ಪ್ರಾಯಾತ್ ಉತ್ತಂಕಸಹಿತೋ ಧುಂಧೋಸ್ತಸ್ಯ ವಿನಿಗ್ರಹೇ ॥ 32 ॥**
**ತಮಾವಿಶತ್ ತದಾ ವಿಷ್ಣುಃ ಭಗವಾನ್ ತೇಜಸಾ ಪ್ರಭುಃ ॥ 33 ॥**

ಕುವಲಾಶ್ವನು ತಂದೆಯ ಆದೇಶದಂತೆ ತನ್ನ ಇಪ್ಪತ್ತೊಂದು ಸಾವಿರದ ನೂರು ಮಂದಿ ಪುತ್ರರೊಂದಿಗೆ, ಉತ್ತಂಕನೊಡನೆ ಉಜ್ಜಾನಕ ಸಾಗರದ ಒಳಗೆ ಹೋದನು. ಉತ್ತಂಕನ ಪ್ರಾರ್ಥನೆಯಂತೆ ವಿಷ್ಣುವಿನ ತೇಜಸ್ಸು ಕುವಲಾಶ್ವನಲ್ಲಿ ಬಂದು ಸೇರಿತು. ದುರ್ಧರ್ಷನಾದ ಕುವಲಾಶ್ವನು ಧುಂಧುಮಾರಣಕ್ಕಾಗಿ ಹೋಗುತ್ತಿರುವಾಗ ಅಶರೀರವಾಣಿಯು ಗಂಭೀರವಾಗಿ ಹೇಳಿತು.

**ಏಷ ಶ್ರೀಮಾನ್ ಅವಧ್ಯೋಽದ್ಯ ಧುಂಧುಮಾರೋ ಭವಿಷ್ಯತಿ ।**
**ದಿವ್ಯೈಃ ಮಾಲ್ಯೈಶ್ಚ ತಂ ದೇವಾಃ ಸಮಂತಾತ್ ಸಮವಾಕಿರನ್ ॥ 34 ॥**
**ಸ ಗತ್ವಾ ಜಯತಾಂ ಶ್ರೇಷ್ಠಃ ತನಯೈಃ ಸಹ ವೀರ್ಯವಾನ್ ।**
**ಸಮುದ್ರಂ ಖಾನಯಾಮಾಸ ವಾಲುಕಾರ್ಣವಮವ್ಯಯಮ್ ॥ 35 ॥**

ಮಹಾಶಕ್ತಿಶಾಲಿಯಾದ ಕುವಲಾಶ್ವನು ಯಾರಿಂದಲೂ ಕೊಲ್ಲಲ್ಲು ಅಸಾಧ್ಯನಾದವನು. ಇವನು ನಿಶ್ಚಿತವಾಗಿಯೂ 'ಧುಂಧುಮಾರ'ನಾಗುತ್ತಾನೆ

ಎಂದು ದೇವತೆಗಳೆಲ್ಲರೂ ದಿವ್ಯಮಾಲೆಗಳನ್ನು ಕುವಲಾಶ್ವನ ಮೇಲೆ ಸುರಿಸಿದರು. ದೇವ ದುಂದುಭಿಗಳು ಮೊಳಗಿದವು.

ಕುವಲಾಶ್ವನು ತನ್ನ ಪುತ್ರರೊಂದಿಗೆ ಉಜ್ಜಾನಕವೆಂಬ ಸ್ಥಳಕ್ಕೆ ಹೋಗಿ ಅಲ್ಲಿದ್ದ ಮರಳು ಮೈದಾನವನ್ನು ಅಗೆದು ತೋಡಿ ಮರಳನ್ನೆಲ್ಲ ತಿರುವಿ ಹಾಕಿದರು. ಅಲ್ಲಿನ ಮರಳಿನಲ್ಲಿ ಅಡಗಿ ಕುಳಿತಿದ್ದ ಧುಂಧುರಾಕ್ಷಸ ಪಶ್ಚಿಮ ದಿಕ್ಕಿನಲ್ಲಿ ಅವರಿಗೆ ಕಂಡುಬಂದ.

**ಮುಖಜೇನಾಗ್ನಿನಾ ಕ್ರೋಧಾತ್ ಲೋಕಾನ್ ಉದ್ವರ್ತಯನ್ನಿವ ।**
**ವಾರಿ ಸುಸ್ರಾವ ವೇಗೇನ ಮಹೋದಧಿರಿವೋದಯೇ ॥ 36 ॥**

**ತಸ್ಯ ಪುತ್ರಶತಂ ದಗ್ಧಂ ತ್ರಿಭಿರೂನಂ ತು ರಕ್ಷಸಾ ।**
**ತತಃ ಸ ರಾಜಾ ಕೌರವ್ಯ! ರಾಕ್ಷಸಂ ತಂ ಮಹಾಬಲಮ್ ॥ 37 ॥**

ತಾನಿರುವ ಸ್ಥಳಕ್ಕೆ ಬಂದಿರುವ ವೀರ ಕುಮಾರನನ್ನು ನೋಡಿ ಭೀಕರ ಬಾಯಿಯನ್ನು ತೆಗೆದು ಬೆಂಕಿಯನ್ನು ಉಗುಳಿದ. ಅವರ ಮೇಲೆ ಧಾರಾಕಾರವಾಗಿ ಮರಳು ನೀರನ್ನು ಎರೆಚಿದ. ಅವನ ಅಗ್ನಿಜ್ವಾಲೆಗಳು - ಮರಳು ಮಿಶ್ರಿತ ನೀರಿನ ಪ್ರವಾಹಗಳು ಕುವಲಾಶ್ವನ ಮಕ್ಕಳನ್ನೆಲ್ಲ ಕೊಂದು ಕೇವಲ ಮೂರು ಮಂದಿಯನ್ನು ಮಾತ್ರ ಉಳಿಸಿತು. ಕುವಲಾಶ್ವನು ತನ್ನ ಮಕ್ಕಳು ಹತರಾದರೂ ಧೈರ್ಯಗುಂದದೆ ಕರ್ತವ್ಯವಿಮುಖನಾಗದೆ ಧುಂಧುವನ್ನು ಯುದ್ಧದಲ್ಲಿ ಎದುರಿಸಿದ. ಯೋಗಿಯಾದ ರಾಜನು ಧುಂಧುವಿನ ಮೂಲಕ ಬರುತ್ತಿದ್ದ ಜಲಪ್ರವಾಹವನ್ನು ಹರಿಯ ತೇಜಸ್ಸಿನಿಂದ ಆಪ್ಯಾಯಿತನಾದ ರಾಜನು ತನ್ನ ಮುಂದೆ ನಿಲ್ಲಿಸಿದ ನೀರಿನ ಸ್ತಂಭಗಳನ್ನೆಲ್ಲ ಯೋಗಶಕ್ತಿಯಿಂದ ಕುಡಿದು ಬಿಟ್ಟನು. ಯೋಗಶಕ್ತಿಯಿಂದ ಅಗ್ನಿಯ ವೇಗವನ್ನೂ ನೀರಿನಿಂದ ತಡೆದನು.

**ತಸ್ಯ ವಾರಿಮಯಂ ವೇಗಮಾಪೀಯ ಸ ನರಾಧಿಪಃ ।**
**ಯೋಗೀ ಯೋಗೇನ ವಹ್ನಿಂ ಚ ಶಮಯಾಸ ವಾರಿಣಾ ॥ 38 ॥**

**ನಿಹತ್ಯ ತಂ ಮಹಾಕಾಯಂ ಬಲೇನೋದಕರಾಕ್ಷಸಮ್ ।**

ದೈತ್ಯನು ತನ್ನ ಮುಖದಿಂದ ಉಗುಳುತ್ತಿದ್ದ ಅಗ್ನಿಜ್ವಾಲೆಯನ್ನೆಲ್ಲ ನೀರಿನಿಂದ ಶಮನಗೊಳಿಸಿದನು.

**ಉತ್ತಂಕಸ್ತು ವರಂ ಪ್ರಾದಾದ್ ತಸ್ಮೈ ರಾಜ್ಞೇ ಮಹಾತ್ಮನೇ ।**
**ದದೌ ತಸ್ಯಾಕ್ಷಯಂ ವಿತ್ತಂ ಶತ್ರುಭಿಶ್ಚಾಪರಾಜಯಮ್ ॥ 39 ॥**

**ಧರ್ಮೇ ರತಿಂ ಚ ಸತತಂ ಸ್ವರ್ಗವಾಸಂ ತಥಾಕ್ಷಯಮ್ ।**
**ಪುತ್ರಾಣಾಂ ಚಾಕ್ಷಯಾನ್ ಲೋಕಾನ್ ಸ್ವರ್ಗೇ ಯೇ ರಾಕ್ಷಸಾಃ ಹತಾಃ**
**॥ 40 ॥**

ಧುಂಧುದೈತ್ಯನನ್ನು ಸಂಹರಿಸಿದ ಪ್ರೀತನಾದ ಉತ್ತಂಕಮುನಿಯು ಕುವಲಾಶ್ವನಿಗೆ ವರವನ್ನು ನೀಡಿದನು. ರಾಜನೇ, ನಿನ್ನ ಸಾಮ್ರಾಜ್ಯಕ್ಕೆ ಯಾವುದೇ ಭಯಾಪಾಯ ಇಲ್ಲದಂತೆ ಹಾಗೂ ಅಪಾರವಾದ ಸಂಪತ್ತು ಸ್ಥಿರವಾಗಿ ಇರುವಂತೆಯೂ ವರವನ್ನಿತ್ತನು. ಕುವಲಯಾಶ್ವನ ಇಪ್ಪತ್ತೊಂದು ಸಾವಿರದ ನೂರು ಮಂದಿ ಮಕ್ಕಳಲ್ಲಿ ಉಳಿದವರು ಮೂವರು ಮಾತ್ರ. ಧುಂಧುದೈತ್ಯನೊಂದಿಗೆ ನಡೆದ ದಾರುಣ ಯುದ್ಧದಲ್ಲಿ ಮೃತರಾದ ಇಪ್ಪತ್ತೊಂದು ಸಾವಿರದ ತೊಂಭತ್ತೇಳು ಮಂದಿ ಮಕ್ಕಳಿಗೂ ಉತ್ತಂಕನು ಸ್ವರ್ಗದಲ್ಲಿ ಅಕ್ಷಯಲೋಕ ಪ್ರಾಪ್ತವಾಗುವಂತೆಯೂ ಅನುಗ್ರಹಿಸಿದ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಧುಂಧುದೈತ್ಯವಧವೆಂಬಲ್ಲಿ
ಹನ್ನೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 12 ಹರಿಪರ್ವ

# ಅಥ ದ್ವಾದಶೋಽಧ್ಯಾಯಃ

## ಧುಂಧುಮಾರ ವಂಶಾವಳಿ

*ವೈಶಂಪಾಯನ ಉವಾಚ –*

**ತಸ್ಯ ಪುತ್ರಾಃ ತ್ರಯಃ ಶಿಷ್ಟಾಃ ದೃಢಾಶ್ವೋ ಜ್ಯೇಷ್ಠ ಉಚ್ಯತೇ ।**
**ಚಂದ್ರಾಶ್ವ ಕಪಿಲಾಶ್ವಾ ತು ಕುಮಾರೌ ದ್ವೌ ಕನೀಯಸೌ ॥ 1 ॥**

**ಧೌಂಧುಮಾರಿಃ ದೃಢಾಶ್ವಸ್ತು ಹರ್ಯಶ್ವಸ್ತಸ್ಯ ಚಾತ್ಮಜಃ ।**
**ಹರ್ಯಶ್ವಸ್ಯ ನಿಕುಂಭೋಽಭೂತ್ ಕ್ಷಾತ್ರಧರ್ಮರತಃ ಸದಾ ॥ 2 ॥**

ಕುವಲಯಾಶ್ವನ ನೂರು ಪುತ್ರರಲ್ಲಿ ಉಳಿದವರು ಮೂವರು ಮಾತ್ರ. ದಂಡ ಎಂದೂ ದೃಢಾಶ್ವ, ಕಪಿಲಾಶ್ವ, ಚಂದ್ರಾಶ್ವ. ಚಂದ್ರಾಶ್ವನಿಗೆ ಭದ್ರಾಶ್ವ ಎಂದೂ, ಹೆಸರಿದೆ. ಕುವಲಾಶ್ವನ ಮೂವರು ಮಕ್ಕಳಲ್ಲಿ ದೃಢಾಶ್ವನೇ ಜ್ಯೇಷ್ಠನು. ಚಂದ್ರಾಶ್ವ-ಕಪಿಲಾಶ್ವರು ಕಿರಿಯರು. ದೃಢಾಶ್ವನಿಗೆ 'ಹರ್ಯಶ್ವ'ನೆಂಬ ಮಗನಾದನು. ಹರ್ಯಶ್ವನ ಮಗನು ನಿಕುಂಭನು. ಇವನು ಕ್ಷಾತ್ರಿಯ ಧರ್ಮಾಸಕ್ತನಾಗಿದ್ದನು. ನಿಕುಂಭನಿಗೆ ಸಂಹತಾಶ್ವನೆಂಬ ರಣವಿಕ್ರಮಿಯು ಪುತ್ರನಾದನು. ಸಂಹತಾಶ್ವನಿಗೆ ಬರ್ಹಣಾಶ್ವನೆಂದು, ಸಿಂಹತಾಶ್ವವೆಂದೂ ಹೆಸರಿತ್ತು. ಸಂಹತಾಶ್ವನಿಗೆ ಹಿಮಾಲಯನ ಪುತ್ರಿ ದೃಶದ್ವತಿಯನ್ನು ವಿವಾಹ ಮಾಡಿಕೊಡಲಾಗಿತ್ತು. ಇವಳನ್ನು ದೃಶದ್ವತಿಯೆಂದೂ ದಕ್ಷದ್ವತಿಯೆಂದೂ, ದೃಷ್ಟದ್ವತೀಯೆಂದೂ ಪ್ರಸಿದ್ಧಳಾಗಿದ್ದಳು. ಇವಳಿಂದ ಸಂಹತಾಶ್ವನಿಗೆ 'ಪ್ರಸೇನಜಿತ್' ಎಂಬ ಪುತ್ರನಾದನು.

## ಯುವನಾಶ್ವ ಚರಿತೆ

**ಲೇಭೇ ಪ್ರಸೇನಜಿತ್ ಭಾರ್ಯಾಂ ಗೌರೀಂ ನಾಮ ಪತಿವ್ರತಾಮ್ ।**
**ಅಭಿಶಪ್ತಾ ತು ಸಾ ಭರ್ತ್ರಾ ನದೀ ವೈ ಬಾಹುದಾಽಭವತ್ ॥ 3 ॥**
**ತಸ್ಯಾಃ ಪುತ್ರೋ ಮಹಾನಾಸೀತ್ ಯುವನಾಶ್ವೋ ಮಹೀಪತಿಃ ॥ 4 ॥**
**ಮಾಂಧಾತಾ ಯುವನಾಶ್ವಸ್ಯ ತ್ರಿಲೋಕವಿಜಯಿ ಸುತಃ ॥ 5 ॥**

ಪ್ರಸೇನಜಿತ್ ರಾಜನಿಗೆ ಗೌರಿ ಎಂಬ ಪತಿವ್ರತಾಶಿರೋಮಣಿ ಪತ್ನಿಯಾಗಿದ್ದಳು. ಅವಳಲ್ಲಿ ಪ್ರಸೇನಜಿತ್ ರಾಜನು ಯುವನಾಶ್ವನೆಂಬ ಮಗನನ್ನು ಪಡೆದನು. ಪ್ರಸೇನನ ಪತ್ನಿ ಗೌರಿಯು ಪರಮಪತಿವ್ರತೆಯಾಗಿದ್ದರೂ ಪತಿಯ ಶಾಪದಿಂದಾಗಿ 'ಬಾಹುದಾ' ಎಂಬ ನದಿಯಾಗಿ ಹರಿದಳು.

ಇವಳ ಮಗನಾದ ಯುವನಾಶ್ವನಿಂದ ತ್ರಿಲೋಕ ವಿಜಯಿಯಾದ 'ಮಾಂಧಾತ'ನೆಂಬ ರಾಜನು ಜನಿಸಿದನು. ಭೃಗುಋಷಿ ಅಭಿಮಂತ್ರಿಸಿದ್ದ ನೀರನ್ನು ಕುಡಿದು ಗರ್ಭಿಣಿಯಾದ ಯುವನಾಶ್ವನು ಹೊಟ್ಟೆ ಒಡೆದು ಒಂದು ಶಿಶುವಿಗೆ ಜನ್ಮವಿತ್ತನು. ಹುಟ್ಟಿದ ಮಗು ಹಾಲಿಗಾಗಿ ಇಂದ್ರದೇವನು ತನ್ನ ತೋರು ಬೆರಳನ್ನು ಮಗುವಿನ ಬಾಯಲ್ಲಿಟ್ಟು ಅಮೃತದಂತಹ ಹಾಲು ಸುರಿಸಿದನು. ಮಾಂಧಾಸ್ಯತಿ ಎಂದದ್ದರಿಂದ **'ಮಾಂಧಾತಾ'**[1] ಎಂದು ಖ್ಯಾತನಾದನು.

**ತಸ್ಯ ಚೈತ್ರರಥೀ ಭಾರ್ಯಾ ಶಶಬಿಂದೋಃ ಸುತಾಽಭವತ್ ।**
**ಸಾಧ್ವೀ ಬಿಂದುಮತೀ ನಾಮ ರೂಪೇಣಾಸದೃಶೀ ಭುವಿಃ ॥ 6 ॥**

---

1. ಮಾಂಧಾತಾ :
ಸೂರು ಅಶ್ವಮೇಧ ಹಾಗೂ ರಾಜಸೂಯ ಮಾಡಿದವನು. ಯುವನಾಶ್ವದಿಂದ ಗರ್ಭಧರಿಸಿ ಪುರುಷರಿಂದ ಪುರುಷ ಹುಟ್ಟಿದ ಆಶ್ಚರ್ಯಜನಕ. ಮಾಂಧಾತ ಇಂದ್ರನ ಮೇಲೆ ಯುದ್ಧ ಹೂಡಿದ. ಇಂದ್ರನು ಲವಣಾಸುರನನ್ನು ಗೆದ್ದು ನನ್ನೊಂದಿಗೆ ಯುದ್ಧ ಮಾಡೆಂದ. ಲವಣಾಸುರನ ರುದ್ರ ದತ್ತ ತ್ರಿಶೂಲದಿಂದ ಯುದ್ಧದಲ್ಲಿ ಮೃತನಾದ. ಮಹಾಭಾರತ ವಿರಾಟಪರ್ವದಲ್ಲಿ ಅರ್ಜುನ ಮಾಡುವ ಯುದ್ಧ ನೋಡಲು ಮಾಂಧಾಂತನೂ ಇಂದ್ರನೊಂದಿಗೆ ಬಂದಿದ್ದ (ವಿ.ಪ. 53). ಚಂದ್ರಸೂರ್ಯರ ಬೆಳಕು ಬೀಳುವ ಪ್ರದೇಶವೆಲ್ಲ ಮಾಂಧಾತನದ್ದು (ಭಾ).

**ಪತಿವ್ರತಾ ಚ ಜ್ಯೇಷ್ಠಾ ಚ ಭ್ರಾತೃಣಾಮಯುತಸ್ಯ ಚ ।**
**ತಸ್ಯಾಮುತ್ಪಾದಯಾಮಸ ಮಾಂಧಾತಾ ದ್ವೌ ಸುತೌ ನೃಪ ॥ 7 ॥**
**ಪುರುಕುತ್ಸಂ ಚ ಧರ್ಮಜ್ಞಂ ಮುಚುಕುಂದಂ ಚ ಧಾರ್ಮಿಕಮ್ ॥ 8 ॥**

ಮಾಂಧಾತ ರಾಜನಿಗೆ ಶಶಬಿಂದು ರಾಜನ ಮಗಳು ಚೈತ್ರರಥಿ/ ಬಿಂದುಮತಿಯೆಂಬ ರೂಪವತೀ, ಗುಣವತಿಯೂ ಆದ ಪತ್ನಿಯಿದ್ದಳು. ಇವಳಿಗೆ ಹತ್ತು ಸಾವಿರ ಸಹೋದರರಿದ್ದರು. ಅವಳಲ್ಲಿ ಮಂಧಾತನು **ಪುರುಕುತ್ಸ**[2] ಮತ್ತು ಮುಚುಕುಂದರೆಂಬ ಧರ್ಮಿಷ್ಠ ಮಕ್ಕಳನ್ನು ಪಡೆದನು.

**ಪುರುಕುತ್ಸ ಸುತಸ್ತ್ವಾಸೀತ್ ತ್ರಸದ್ದಸ್ಯುಃ ಮಹೀಪತಿಃ ।**
**ನರ್ಮದಾಯಾಮ್ ಅಥೋತ್ಪನ್ನಃ ಸಂಭೂತಸ್ತಸ್ಯ ಚಾತ್ಮಜಃ ॥ 9 ॥**
**ಸಂಭೂತಸ್ಯ ತು ದಾಯಾದಃ ಸುಧನ್ವಾನಾಮ ಪಾರ್ಥಿವಃ ॥ 10 ॥**

ಪುರುಕುತ್ಸನ ಪುತ್ರನೇ **ತ್ರಸದ್ದಸ್ಯು**[3]. ತ್ರಸದ್ದಸ್ಯುವಿಗೆ ಸಂಭೂತನು ಸಂಭೂತನಾದನು. ಸಂಭೂತರಾಜನಿಂದ ಸುಧನ್ವರಾಜನು ಇವನಿಗೆ ತ್ರಿಧನ್ವರಾಜನು, ಶತ್ರುಮರ್ದನನಾದ ತ್ರಿಧನ್ವನಿಗೆ 'ತ್ರಯ್ಯಾರುಣ' ಯೆಂಬ ರಾಜನು ಮಗನಾದನು.

---

2. **ಪುರುಕುತ್ಸ :**
ಯುವನಾಶ್ವನು ಮೌನೇಯ/ವಧ್ರ್ಯಶ್ವರೆಂಬ ಆರುಕೋಟಿ ಗಂಧರ್ವರನ್ನು ನಿಗ್ರಹಿಸಿದ. ನಾಗರೆಲ್ಲರೂ ಶ್ರೀಹರಿಯನ್ನು ಪ್ರಾರ್ಥಿಸಿದಾಗ ನಾಗಗಳೇ, ನಾನು ಪುರುಕುತ್ಸ ರಾಜನಲ್ಲಿದ್ದು ಮೌನೇಯರನ್ನು ನಿಗ್ರಹಿಸುವೆ ಎಂದನು. ನಾಗರ ತಂಗಿಯಾದ ನರ್ಮದೆಯನ್ನು ವಿವಾಹವಾದ – ಅನರಣ್ಯನನ್ನೂ ಪಡೆದ. ನರ್ಮದೆಯನ್ನು ನೆನೆದವರಿಗೆ ಸರ್ಪಭಯವಿರುವುದಿಲ್ಲೆಂದು ಸರ್ಪಗಳು ವರ ನೀಡಿದವು.
**ನರ್ಮದಾ ಭ್ರಾತೃಭಿರ್ದತ್ತಾ ಪುರುಕುತ್ಸಾಯ ಚೋರಗೈಃ ॥** *–ಭಾಗ 9/7/58*

3. **ತ್ರಸದ್ದಸ್ಯು :**
ಪೌರುಕುತ್ಸನೆಂದೂ ಕರೆಯಲಾಗಿದೆ. ಅಗಸ್ತ್ಯ ಋಷಿ ಧನಕ್ಕಾಗಿ ಇವನ ಬಳಿ ಬಂದಾಗ ಹಣವಿರಲಿಲ್ಲ. ಪ್ರಜೆಗಳಲ್ಲಿ ಕೇಳಲು ಬಾರದೆ ಋಷಿಯನ್ನು ಬರಿಗೈಯಲ್ಲಿ ಕಳಿಸಲಾಗದೆ ಬ್ರಧ್ನಾಶರಾಜನಲ್ಲಿ ಬಂದ, ಅಲ್ಲಿಯೂ ಹೇರಳ ಹಣ ದೊರೆಯಲಿಲ್ಲ. ಮಹಾಧನಿಕನಾದ ಇಲ್ವಲನಲ್ಲಿಗೆ ಹೋದರು. ಅಹಂಕಾರ ತೋರಿದಾಗ ಅವನ ಅಹಂಕಾರ ಮುರಿದು ಆತನಿಂದಲೇ ಹೇರಳ ಸಂಪತ್ತು ಪಡೆದರು.

## ತ್ರಿಶಂಕು ಕಥೆ

**ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ ಮಹಾಬಲಃ ।**
**ಪಾಣಿಗ್ರಹಣ ಮಂತ್ರಾಣಾಂ ವಿಘ್ನಂ ಚಕ್ರೇ ಸುದುರ್ಮತಿಃ ॥ 11 ॥**

**ಯೇನ ಭಾರ್ಯಾ ಹೃತಾ ಪೂರ್ವಂ ಕೃತೋದ್ವಾಹಾ ಪರಸ್ಯ ವೈ ।**
**ಬಾಲ್ಯಾತ್ ಕಾಮಾಚ್ಚ ಮೋಹಾಚ್ಚ ಸಂಹರ್ಷಾತ್ ಚಾಪಲೇನ ಚ ॥ 12 ॥**

ಇಕ್ಷ್ವಾಕು ವಂಶದ ತ್ರಯ್ಯಾರುಣನಿಗೆ ಸತ್ಯವ್ರತನೆಂಬ ಮಗನಿದ್ದನು. ಸತ್ಯವ್ರತನು ಮಹಾಕಾಮಿಯೂ ಸ್ವಛಂದ ವಿಹಾರಿಯೂ ಆಗಿದ್ದನು. ಪರಸ್ತ್ರೀಹರಣ ಮೂಲಕವಾಗಿ ಪಾಣಿಗ್ರಹಣ ಮಂತ್ರಗಳನ್ನೇ ವ್ಯರ್ಥಗೊಳಸುತ್ತಿದ್ದನು. ಒಂದು ಬಾರಿ ವಿವಾಹ ನಡೆದಿತ್ತು. ಸತ್ಯವ್ರತ ಅಲ್ಲಿಗೆ ಬಂದವನೆ ಹಸೆಮಣೆಯ ಮೇಲಿದ್ದ ಕನ್ಯೆಯನ್ನು ನೋಡಿ ಅವಳಲ್ಲಿ ಅನುರಕ್ತನಾದ, ಮಂತ್ರ ಹೇಳುತ್ತಿದ್ದ ಬ್ರಾಹ್ಮಣರನ್ನು ಗದರಿಸಿ ಸುಮ್ಮನಾಗುವಂತೆ ಮಾಡಿದ. ಎಲ್ಲರೂ ನೋಡುತ್ತಿದ್ದಂತೆಯೇ ಕನ್ಯೆಯನ್ನು ಅಪಹರಿಸಿ ಇವಳನ್ನು ಮದುವೆಯಾದ. ಹೀಗೆ ಮೂರ್ಖತನ ಚಾಪಲ್ಯದಿಂದ ಕಾಮಮೋಹಿತ–ನಾಗಿಯೂ ಕನ್ಯೆಯನ್ನು ಅಪಹರಿಸಿದ್ದ ಸತ್ಯವ್ರತನನ್ನು ರಾಜನು ಅಪಧ್ವಂಸ ಇಲ್ಲಿಂದ ಹೊರಡು ಎಂದು ಹಲವು ಬಾರಿ ಹೇಳದನು.

**ಅಧರ್ಮಶಂಕುನಾ ತೇನ ರಾಜಾ ತ್ರಯ್ಯಾರುಣೋಽತ್ಯಜಿತ್ ।**
**ಅಪಧ್ವಂಸೇತಿ ಬಹುಶೋ ವದನ್ ಕ್ರೋಧಸಮನ್ವಿತಃ ॥ 13 ॥**

**ಪಿತರಂ ಸೋಽಬ್ರವೀತ್ ತ್ಯಕ್ತಃ ಕ್ವ ಗಚ್ಛಾಮೀತಿ ವೈ ಮುಹುಃ ।**
**ಪಿತಾ ತ್ವೇನಮಥೋವಾಚ ಶ್ವಪಾಕೈಃ ಸಹ ವರ್ತಯ ॥ 14 ॥**

ಅಧರ್ಮವೆಂಬ ಆಣಿಯಿಂದ ಚುಚ್ಚಲ್ಪಟ್ಟ ತ್ರಯ್ಯಾರುಣನು ಕೋಪದಿಂದ ಅಪಧ್ವಂಸ ಇಲ್ಲಿಂದ ತೊಲಗಿ ಹೋಗು ಎಂದ. ನೀನು ನನ್ನನ್ನು ಬಿಟ್ಟರೆ ನಾನೆಲ್ಲಿ ವಾಸಿಸಲಿ? ಎಂದಾಗ ರಾಜನು ಕುಲ ಕಳಂಕರನೇ. ಚಂಡಾಲ–ರೊಂದಿಗೆ ವಾಸಿಸು. ಕುಲದೂಷಕನಾದ ನಿನ್ನನ್ನು ಪುತ್ರನೆಂದು ಹೇಳಲಾರೆ ಎಂದನು. ಕುಲಪುರೋಹಿತರಾದ ವಸಿಷ್ಠರೂ ಅವನ ಮಾತಿಗೆ ಸುಮ್ಮನಿದ್ದರು.

ತಂದೆಯಿಂದ ತ್ಯಜಿಸಲ್ಪಟ್ಟ ಸತ್ಯವ್ರತನು ಹರಿಜನ ಕೇರಿಯಲ್ಲಿಯೇ ವಾಸಿಸುತ್ತಿದ್ದನು. ಪುತ್ರಶೋಕದಿಂದಾಗಿ ರಾಜನಿಗೂ ವೈರಾಗ್ಯ ಬಂದಿತ್ತು. ಸಾಕಿನ್ನು ಸಂಸಾರವೆಂದು ಕಾಡಿಗೆ ತಪಸ್ಸಿಗಾಗಿ ಹೊರಟನು.

## ದ್ವಾದಶ ವರ್ಷ ಬರಗಾಲ

**ತತಸ್ತಸ್ಮಿಂಸ್ತು ವಿಷಯೇ ನಾವರ್ಷತ್ ಪಾಕಶಾಸನಃ ।**
**ಸಮಾ ದ್ವಾದಶ ರಾಜೇಂದ್ರ ತೇನಾಧರ್ಮೇಣ ವೈ ತದಾ ॥ 15 ॥**

ಕನ್ಯಾಪಹರಣರೂಪ ರಾಜ ಕುಟುಂಬ ಈ ಅಧರ್ಮತೆಯಿಂದಾಗಿ ಆ ರಾಜ್ಯದಲ್ಲಿ ದ್ವಾದಶ ವರ್ಷ ಇಂದ್ರನು ಮಳೆಯನ್ನೆ ಸುರಿಸಲಿಲ್ಲ. ಭೀಕರ ಬರಗಾಲ ಉಂಟಾಯಿತು.

**ದಾರಾಂಸ್ತು ತಸ್ಯ ವಿಷಯೇ ವಿಶ್ವಾಮಿತ್ರೋ ಮಹಾತಪಾಃ ।**
**ಸನ್ನ್ಯಸ್ಯ ಸಾಗರಾನೂಪೇ ಚಚಾರ ವಿಪುಲಂ ತಪಃ ॥ 16 ॥**

**ತಸ್ಯ ಪತ್ನೀ ಗಲೇ ಬಧ್ವಾ ಮಧ್ಯಮಂ ಪುತ್ರಮೌರಸಮ್ ।**
**ಶೇಷಸ್ಯ ಭರಣಾರ್ಥಾಯ ವ್ಯಕ್ರೀಣಾದ್ ಗೋಶತೇನ ವೈ ॥ 17 ॥**

ವಿಶ್ವಾಮಿತ್ರನಾದರು ಈ ಘಟನೆಗಿಂತ ಮೊದಲೇ ತನ್ನ ಪತ್ನೀಪುತ್ರಾದಿಗಳನ್ನು ಅಯೋಧ್ಯೆಯಲ್ಲಿ ವಾಸವಾಗಿರಿಸಿದ್ದನು. ಸಮುದ್ರ ದಡದಲ್ಲಿ ಅತ್ಯುಗ್ರ ತಪಸ್ಸನ್ನು ಆಚರಿಸಲು ಹೋಗಿದ್ದನು. ವಿಶ್ವಾಮಿತ್ರನ ಪತ್ನಿ ಕೌಶಿಕಿಗೆ ಜೀವನವನ್ನು ನಡೆಸುವುದೇ ದುರ್ಭರವಾಯಿತು. ಆಗ ಅವಳು ತನ್ನ ಒಂದು ಮಗುವನ್ನು ಮಾರಿ ಉಳಿದ ಮಕ್ಕಳನ್ನು ಬದುಕಿಸಬೇಕೆಂದು ನಿರ್ಧರಿಸಿದಳು. ತನ್ನ ಕೊರಳಿಗೆ ಬಟ್ಟೆಯನ್ನು ಕಟ್ಟಿಕೊಂಡು ಅದರಲ್ಲಿ ಒಂದು ಮಗುವನ್ನು ಮಲಗಿಸಿಕೊಂಡು – 'ನೂರು ಗೋವುಗಳನ್ನು ಕೊಟ್ಟವರಿಗೆ ಈ ಮಗುವನ್ನು ಮಾರುವೆ ಎನ್ನುತ್ತಾ ಉರೂರು ಅಲೆದಳು. ಗಲದಲ್ಲಿ ಕಟ್ಟಿಲ್ಪಟ್ಟವನೇ 'ಗಾಲವ' ಋಷಿಯೆನಿಸಿದನು.

## ಸತ್ಯವ್ರತನಿಂದ ವಿಶ್ವಾಮಿತ್ರ ಕುಟುಂಬ ರಕ್ಷಣೆ

**ತಂ ತು ಬದ್ಧಂ ಗಲೇ ದೃಷ್ಟ್ವಾ ವಿಕ್ರೀಯಂತಂ ನೃಪಾತ್ಮಜಃ ।**
**ಮಹರ್ಷಿಪುತ್ರಂ ಧರ್ಮಾತ್ಮಾ ಮೋಕ್ಷಯಾಮಾಸ ಭಾರತ ॥ 18 ॥**

**ಸತ್ಯವ್ರತೋ ಮಹಾಭಾಹುಃ ಭರಣಂ ತಸ್ಯ ಚಾಕರೋತ್ ।**
**ವಿಶ್ವಾಮಿತ್ರಸ್ಯ ತುಷ್ಟ್ಯರ್ಥಂ ಅನುಕಂಪಾರ್ಥಮೇವ ಚ ॥ 19 ॥**

**ಸೋಽಭವದ್ ಗಾಲವೋ ನಾಮ ಗಲಬಂಧಾತ್ ಮಹಾತಪಾಃ ।**
**ಮಹರ್ಷಿಃ ಕೌಶಿಕಸ್ತಾತ ತೇನ ವೀರೇಣ ಮೋಚಿತಃ ॥ 20 ॥**

ಕೌಶಿಕಿಯು ಮಗುವನ್ನು ಮಾರುವ ವಿಚಾರ ತಿಳಿದ ಚಂಡಾಲಕೇರಿಯಲ್ಲಿದ್ದ ಸತ್ಯವ್ರತನು ಅಲ್ಲಿಗೆ ಬಂದನು. ವಿಶ್ವಾಮಿತ್ರರ ಕುಟುಂಬಕ್ಕೆ ಇಂತಹ ದುರವಸ್ಥೆ ಕಂಡು ಮನಕರಗಿದ ಸತ್ಯವ್ರತನು ವಿಶ್ವಾಮಿತ್ರರ ಕುಟುಂಬಕ್ಕೆ ಸಾಕಾಗುವಷ್ಟು ಧನಧಾನ್ಯಗಳನ್ನಿತ್ತು ಆ ಮಗುವನ್ನು ಮಾರಾಟದಿಂದ ಮುಕ್ತಗೊಳಿಸಿದನು. ವಿಶ್ವಾಮಿತ್ರನಿಗೆ ತನ್ನ ಮೇಲೆ ಅನುಕಂಪ ಪ್ರೀತಿವುಂಟಾಗಿ ಮುಂದೆ ಅವರ ಅನುಗ್ರಹ ಪಡೆಯಬೇಕೆಂಬುದೂ ಅವನ ಅಭಿಪ್ರಾಯವಾಗಿತ್ತು. ಬರಗಾಲ ಮುಗಿಯುವವರೆಗೂ ಸತ್ಯವ್ರತನು ವಿಶ್ವಾಮಿತ್ರ ಕುಟುಂಬವನ್ನು ಅನ್ನಪಾನಾದಿಗಳಿಂದ ರಕ್ಷಿಸಿದನು.

ಹೀಗೆ ವೀರನಾದ ಸತ್ಯವ್ರತನು ಕೌಶಿಕಗಾಲವನನ್ನು ಬಿಡುಗಡೆ ಮಾಡಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಸತ್ಯವ್ರತನು ವಿಶ್ವಾಮಿತ್ರರ ಕುಟುಂಬ ಪೋಷಣೆವೆಂಬಲ್ಲಿ
ಹನ್ನೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 13 ಹರಿಪರ್ವ

# ಅಥ ತ್ರಯೋದಶೋಽಧ್ಯಾಯಃ

## ತ್ರಿಶಂಕು ಚರಿತೆ

*ವೈಶಂಪಾಯನ ಉವಾಚ –*

**ಸತ್ಯವ್ರತಸ್ತು ಭಕ್ತ್ಯಾ ಚ ಕೃಪಯಾ ಚ ಪ್ರತಿಜ್ಞಯಾ ।**
**ವಿಶ್ವಾಮಿತ್ರ ಕಲತ್ರಂ ತದ್ ಬಭಾರ ವಿನಯೇ ಸ್ಥಿತಃ ॥ 1 ॥**

**ಹತ್ವಾ ಮೃಗಾನ್ ವರಾಹಾಂಶ್ಚ ಮಹಿಷಾಂಶ್ಚ ವನೇಚರಾನ್ ।**
**ವಿಶ್ವಾಮಿತ್ರಾಶ್ರಮಾಭ್ಯಾಶೇ ಮಾಂಸಂ ವೃಕ್ಷೇ ಬಬಂಧ ಹ ॥ 2 ॥**

**ಉಪಾಂಶುವ್ರತಮಾಸ್ಥಾಯ ದೀಕ್ಷಾಂ ದ್ವಾದಶವಾರ್ಷಿಕೀಮ್ ।**
**ಪಿತುರ್ನಿಯೋಗಾದ್ ಅವಸತ್ ತಸ್ಮಿನ್ ವನಗತೇ ನೃಪೇ ॥ 3 ॥**

**ಅಯೋಧ್ಯಾಂ ಚೈವ ರಾಷ್ಟ್ರಂ ಚ ತಥೈವಾಂತಃ ಪುರಂ ಪ್ರತಿ ।**
**ಯಾಜ್ಯೋಪಾಧ್ಯಾಯ ಸಂಬಂಧಾತ್ ವಸಿಷ್ಠಃ ಪರ್ಯರಕ್ಷತ ॥ 4 ॥**

ಸತ್ಯವ್ರತನು ವಿಶ್ವಾಮಿತ್ರರಲ್ಲಿ ಶ್ರದ್ಧಾಭಕ್ತಿಗಳಿಂದಲೂ ವಿನಿಯದಿಂದಲೂ ಕೂಡಿದ್ದನು. ಇದರಿಂದಾಗಿ ವಿಶ್ವಾಮಿತ್ರರ ಕುಟುಂಬಕ್ಕೆ ಎಂದೂ ಉಪವಾಸ ಬೀಳುವ ಪ್ರಸಂಗ ಬಾರದಂತೆ ನೋಡಿಕೊಂಡನು. ಕಾಡಿನಲ್ಲಿರುವ ಜಿಂಕೆ, ಎಮ್ಮೆ, ವರಾಹಾದಿ ಪ್ರಾಣಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ವಿಶ್ವಾಮಿತ್ರರ ಆಶ್ರಮದ ಬಳಿಯಿರುವ ಒಂದು ವೃಕ್ಷದ ಟೊಂಗೆಗೆ ತೂಗು ಹಾಕುತ್ತಿದ್ದನು. ಹೀಗೆ ಹನ್ನೆರಡು ವರ್ಷಗಳವರೆಗೂ ವಿಶ್ವಾಮಿತ್ರ ಸಂಸಾರಕ್ಕೆ

ತೊಂದರೆಯಾಗದಂತೆ ನೋಡಿಕೊಂಡನು. ತಂದೆಯಾದ ತ್ರಯ್ಯಾರುಣನು ರಾಜ್ಯತ್ಯಾಗ ಮಾಡಿ ಕಾಡಿಗೆ ಪ್ರವೇಶಿಸಿದ ನಂತರವೂ ತಂದೆಯ ಮಾತನ್ನು ಪಾಲಿಸುತ್ತಾ ಅಜ್ಞಾತವಾಸವ್ರತ ಕೈಗೊಂಡಿದ್ದನು. ರಾಜನೆ ಇಲ್ಲದ ಅರಾಜಕ ರಾಷ್ಟ್ರ ಅಯೋಧ್ಯೆಯನ್ನು ಅಂತಃಪುರವನ್ನೂ ಉಪಾಧ್ಯಾಯರೂ – ಪುರೋಹಿತರೂ ಆದ ವಸಿಷ್ಠರೇ ನೋಡಿಕೊಂಡರು.

## ವಸಿಷ್ಠರ ಮೇಲೆ ಸತ್ಯವ್ರತನ ಕೋಪ

**ಸತ್ಯವ್ರತಸ್ತು ಬಾಲ್ಯಾಚ್ಚ ಭಾವಿನೋಽರ್ಥಸ್ಯ ವಾ ಬಲಾತ್ ।**
**ವಸಿಷ್ಠೇಽಭ್ಯಧಿಕಂ ಮನ್ಯುಂ ಧಾರಯಾಮಾಸ ವೈ ತದಾ ॥ 5 ॥**
**ನ ವಾರಯಾಮಾಸ ಮುನಿಃ ವಸಿಷ್ಠಃ ಕಾರಣೇನ ಹ ।**
**ಪಾಣಿಗ್ರಹಣ ಮಂತ್ರಾಣಾಂ ನಿಷ್ಠಾ ಸ್ಯಾತ್ ಸಪ್ತಮೇ ಪದೇ ॥ 6 ॥**
**ಜಾನನ್ ಧರ್ಮಂ ವಸಿಷ್ಠಸ್ತು ನ ಮಾಂ ತ್ರಾತೀತಿ ಭಾರತ ।**
**ಸತ್ಯವ್ರತಸ್ತದಾ ರೋಷಂ ವಸಿಷ್ಠೇ ಮನಸಾಕರೋತ್ ॥ 7 ॥**

ಸತ್ಯವ್ರತನಾದರೂ ಮೌಢ್ಯದಿಂದಾಗಿ ವಸಿಷ್ಠರ ಮೇಲೆ ಕ್ರೋಧ ತಾಳಿದ್ದ. ತನ್ನ ತಂದೆಗೆ ವೈರಾಗ್ಯಬರಲೂ ಹಾಗೂ ತಾನು ಹನ್ನೆರಡು ವರ್ಷ ಕಾಡಿನಲ್ಲಿ ಅಜ್ಞಾತವಾಸ ಮಾಡಲು ಈ ವಶಿಷ್ಠನೇ ಕಾರಣ. ತನ್ನನ್ನು ರಾಜ್ಯದಿಂದ ದಬ್ಬುವಾಗ ವಸಿಷ್ಠರು ಮನಸ್ಸು ಮಾಡಿದ್ದರೆ ರಾಜ್ಯದಲ್ಲಿಯೇ ಉಳಿಯಬಹುದಿತ್ತು.

ತಾಳಿಕಟ್ಟಿದ ಮಾತ್ರಕ್ಕೆ ವಿವಾಹವಾಗುವುದಿಲ್ಲ. ಸಪ್ತಪದಿಯಾಗಿ ಕನ್ಯೆಯು ತನ್ನ ಗೋತ್ರ ತ್ಯಜಿಸಿ ಪತಿಯ ಗೋತ್ರಕ್ಕೆ ಸೇರಬೇಕು. ನಂತರವೇ ಪತ್ನಿಯೆನಿಸುವಳು ಹಾಗೂ ವಿವಾಹ ಮಂತ್ರಗಳು ಸಫಲವಾಗುವುದು. ಇದು ತಿಳಿದಿದ್ದರೂ ನನ್ನನ್ನು ಹೊರಹಾಕಿದ್ದಾರೆಂದು ಸತ್ಯವ್ರತನಿಗೆ ವಶಿಷ್ಠರ ಮೇಲೆ ಕೋಪ.

ವಸಿಷ್ಠರಾದರೂ ಸರ್ವಜ್ಞರು ಭವಿಷ್ಯತ್ ಜ್ಞಾನಿಗಳು ಮುಂದಾಗುವುದನ್ನು ಮೊದಲೇ ತಿಳಿಯುವವರು. ಸತ್ಯವ್ರತನು ಕಾಡಿಗೆ ಹೋದರೆ ಅಲ್ಲಿ ವಿಶ್ವಾಮಿತ್ರರ ಪತ್ನಿಗೆ ಆಸರೆ ಇವನಿಂದ ದೊರೆತು ವಿಶ್ವಾಮಿತ್ರ ಮುನಿಯ ಆಸರೆ ಇವನಿಗೆ ದೊರೆಯಲಿ ಎಂದು. ಇದಲ್ಲದೆ ಕನ್ಯೆಯನ್ನು ಅಪಹಾರ

ಮಾಡಿದ ಪಾಪಕ್ಕೆ ಹನ್ನೆರಡು ವರ್ಷ ಪಾಪ ಪ್ರಾಯಶ್ಚಿತ್ತ ಮಾಡಿಸುವುದೂ ಮತ್ತೊಂದು ಉದ್ದೇಶವಾಗಿತ್ತು. ಇದಾವುದರ ಅರಿವಿಲ್ಲದೆ ದೂರಾಲೋಚನೆಯಿಲ್ಲದೆ ದುರಾಲೋಚನೆಯಿಂದ ವಶಿಷ್ಠರ ಮೇಲೆ ದಿನೇ ದಿನೇ ಕೋಪಗೊಳ್ಳುತ್ತಿದ್ದ.

**ತೇನ ತ್ವಿದಾನೀಂ ವಹತಾ ದೀಕ್ಷಾಂ ತಾಂ ದುರ್ವಹಾಂ ಭುವಿ ।**
**ಕುಲಸ್ಯ ನಿಷ್ಕೃತಿಸ್ತಾತ ಕೃತಾ ಸ ವೈ ಭವೇದಿತಿ ॥ 8 ॥**
**ನ ತಂ ವಸಿಷ್ಠೋ ಭಗವಾನ್ ಪಿತ್ರಾ ತ್ಯಕ್ತಂ ನ್ಯವಾರಯತ್ ।**
**ಅಭಿಷೇಕ್ಷ್ಯಾಮ್ಯಹಂ ಪುತ್ರಮಸ್ಯೇತ್ಯೇವಂ ಮತಿರ್ಮುನೇಃ ॥ 9 ॥**

ವಸಿಷ್ಠರು - ಸತ್ಯವ್ರತನೇನಾದರೂ ಅತ್ಯಂತ ಕಠಿಣ ವ್ರತವನ್ನು ಪೂರ್ತಿಗೊಳಿಸಿದ್ದೆ ಆದರೆ, ಇದರಿಂದ ಇವರ ವಂಶವು ಉದ್ಧಾರವಾಗುತ್ತದೆ. ಅಲ್ಲದೆ ವ್ರತ ಪೂರ್ಣವಾದ ಮೇಲೆ ಶುದ್ಧನಾದ ಸತ್ಯವ್ರತನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನೂ ಮಾಡುವ ಅಭಿಲಾಷೆ ಹೊಂದಿದ್ದರು. ಇದಕ್ಕಾಗಿಯೇ ವಸಿಷ್ಠರು ತಂದೆ ಕಾಡಿಗೆ ಹೋಗು ಅಂದಾಗ ತಡೆಯಲಿಲ್ಲ.

## ವಸಿಷ್ಠರ ಗೋ ಹತ್ಯೆ ಗೈದ

**ಸ ತು ದ್ವಾದಶ ವರ್ಷಾಣಿ ದೀಕ್ಷಾಂ ತಾಮುದ್ವಹದ್ ಬಲೀ ।**
**ಅವಿದ್ಯಮಾನೇ ಮಾಂಸೇ ತು ವಸಿಷ್ಠಸ್ಯ ಮಹಾತ್ಮನಃ ।**
**ಸರ್ವಕಾಮದುಘಾಂ ದೋಗ್ಧ್ರೀಂ ದದರ್ಶ ಸ ನೃಪಾತ್ಮಜಃ ॥ 10 ॥**
**ತಾಂ ವೈ ಕ್ರೋಧಾಚ್ಚ ಮೋಹಾಚ್ಚ ಶ್ರಮಾಚ್ಚೈವ ಕ್ಷುಧಾರ್ದಿತಃ ।**
**ದಶಧರ್ಮಾನ್ ಗತೋ ರಾಜಾ ಜಘಾನ ಜನಮೇಜಯ ॥ 11 ॥**
**ತಚ್ಚ ಮಾಂಸಂ ಸ್ವಯಂ ಚೈವ ವಿಶ್ವಾಮಿತ್ರಸ್ಯ ಚಾತ್ಮಜಾನ್ ॥ 12 ॥**

ಸತ್ಯವ್ರತನ ಅನುನಯದಿಂದ ರಾಜ್ಯದಲ್ಲಿ ದ್ವಾದಶವರ್ಷ ಕ್ಷಾಮವುಂಟಾಗಿ ಅನ್ನ ನೀರು ಕಾಣದೆ ಕಂಗಲಾದರು. ವಿಶ್ವಾಮಿತ್ರನ ಸಂಸಾರವೂ ಕಂಗೆಟ್ಟು ಹೋಗಿತ್ತು. ಅವರ ಕುಟುಂಬ ಸಾಕುವ ಹೊಣೆ ಹೊತ್ತಿದ್ದ ಸತ್ಯವ್ರತನು ಮುನಿಸಂಸಾರಕ್ಕೆ ಯಾವುದೇ ವಸ್ತುವು ದೊರೆಯದಂತಾದಾಗ ದುಡುಕಿ ಮತ್ತೊಂದು ಮಹಾಪಾಪವನ್ನೆಸಗಿದ. ಸರ್ವೇಷ್ಟ ಪ್ರಪೂರಕಳಾದ ವಸಿಷ್ಠರ ಕಾಮಧೇನು ಮೇಯುತ್ತಿದ್ದನ್ನು ನೋಡಿದ. ವಸಿಷ್ಠರ ಮೇಲಿದ್ದ

ಕೋಪದಿಂದಲೂ, ಇದರ ಪರಿಣಾಮವೇನಾದೀತು ಎಂಬ ಪರಿವೆಯೇ ಇಲ್ಲದೆ ಆ ಗೋವನ್ನು ಕೊಂದು ಹಾಕಿದ. ನನಗಾಗಿ ನಾನು ಕೊಂದಿದ್ದಲ್ಲ. ಮುನಿ ಪರಿವಾರಕ್ಕಾಗಿ ತಾನೆ ಎಂದು ತಾನೆ ಸಮಾಧಾನ ಮಾಡಿಕೊಂಡ. ಆ ಮಾಂಸವನ್ನು ಭಗವಂತನಿಗೆ ಅರ್ಪಿಸಿದ ವಿಶ್ವಾಮಿತ್ರನ ಕುಟುಂಬಕ್ಕೆ ನೀಡಿ ತಾನೂ ತಿಂದ. ಈ ಕುಕೃತ್ಯದಿಂದಾಗಿ ವಸಿಷ್ಠರು ಕೆರಳ ಕೆಂಡವಾದರು. ಹೀಗೆಂದರು –

## ಸತ್ಯವ್ರತನು ತ್ರಿಶಂಕುವಾದನು

*ವಸಿಷ್ಠ –*

**ಪಾತಯೇಯಮಹಂ ಕ್ರೂರ ತವ ಶಂಕುಮಸಂಶಯಂ ।**
**ಯದಿ ತೇ ದ್ವಾವಿಮೌ ಶಂಕೂ ನ ಸ್ಯಾತಾಂ ವೈ ಕೃತೌ ಪುನಃ ॥ 13 ॥**
**ಪಿತುಶ್ಚ ಅಪರಿತೋಷೇಣ ಗುರೋಃ ದೋಗ್ಧ್ರೀವಧೇನ ಚ ।**
**ಅಪ್ರೋಕ್ಷಿತೋಪಯೋಗಾಚ್ಚ ತ್ರಿವಿಧಸ್ತೇ ವ್ಯತಿಕ್ರಮಃ ॥ 14 ॥**

ಪಾಪಿಷ್ಠನೇ ನೀನು ಈಗ ಮಾಡಿದ ಹೊಸ ಎರಡು ಪಾಪಗಳನ್ನು ಮಾಡಿರದಿದ್ದರೆ ಮೊದಲನೆ ಕನ್ಯಾಪಹರಣ ಪಾಪವನ್ನು ಹೋಗಲಾಡಿಸುತ್ತಿದ್ದೆ.

1) ಗುರುವಿನ ಗೋವನ್ನು ಕೊಂದದ್ದು ಮಹಾಪಾಪ, 2) ತಂದೆ ಅಸಮಾಧಾನ ಮಾಡಿ ಅರಣ್ಯಕ್ಕೆ ಹೊರಡಲು ಕಾರಣವಾದದ್ದು, 3) ಹೆರವರಿಗೆ ಗೊತ್ತು ಮಾಡಿದ ಹೆಣ್ಣನ್ನು ಅಪಹರಿಸಿದ್ದು – ಹೀಗೆ ಮೂರು ಮಹಾಪರಾಧ ಮಾಡಿದ್ದಕ್ಕಾಗಿ ಅಥವಾ ತಂದೆಗೆ ಅಸಮ್ಮತ ಕಾರ್ಯವೆಸಗಿದ್ದು, ಗುರುಗಳ ಹೋಮಧೇನುವನ್ನು ಕೊಂದದ್ದು, ಮಾಂಸವನ್ನು, ಹರಿಗರ್ಪಿಸದೆ ತಿಂದದ್ದು ಹೀಗೆ ತ್ರಿ–ಶಂಕುಗಳನ್ನಾಚರಿಸಿರುವೆಯಾದ್ದರಿಂದ 'ತ್ರಿಶಂಕು'ವೆನಿಸು ಎಂದರು.

## ವಿಶ್ವಾಮಿತ್ರ ಕರುಣಾದೃಷ್ಟಿ

**ವಿಶ್ವಾಮಿತ್ರಸ್ತು ದಾರಾಣಾಮಾಗತೋ ಭರಣೇ ಕೃತೇ ।**
**ಸ ತು ತಸ್ಮೈ ವರಂ ಪ್ರಾದಾತ್ ಮುನಿಃ ಪ್ರೀತಃ ತ್ರಿಶಂಕವೇ ॥ 15 ॥**
**ಛಂದ್ಯಮಾನೋ ವರೇಣಾಥ ವರಂ ವವ್ರೇ ನೃಪಾತ್ಮಜಃ ।**
**ಸಶರೀರೋ ವ್ರಜೇ ಸ್ವರ್ಗಮಿತ್ಯೇವಂ ಯಾಚಿತೋ ಮುನಿಃ ॥ 16 ॥**

ಹನ್ನೆರಡು ವರ್ಷದ ನಂತರ ಸುವೃಷ್ಟಿಯಾಯಿತು. ಬರಗಾಲ ಹೋಗಿ ಸುಗ್ಗೀಕಾಲ ಬಂದಿತು. ವಿಶ್ವಾಮಿತ್ರನ ದ್ವಾದಶ ವರ್ಷದ ತಪಸ್ಸೂ ಮುಗಿಯಿತು. ತಮ್ಮ ಮನೆಗೆ ಬಂದಾಗ ಪತ್ನೀಪುತ್ರರೆಲ್ಲರೂ ಸುರಕ್ಷಿತವಾಗಿದ್ದನ್ನೂ ನೋಡಿ ಸಂತಸಪಟ್ಟರು. ಬರಗಾಲದ ಘೋರ ಕಾಲದಲ್ಲಿ ಹನ್ನೆರಡು ವರ್ಷ ಸತ್ಯವ್ರತನೇ ತನ್ನ ಕುಟುಂಬ ರಕ್ಷಿಸಿದನೆಂದು ತಿಳಿದು ತ್ರಿಶಂಕುವನ್ನು ಕುರಿತು- ನಿನ್ನ ಕಾರ್ಯದಿಂದ ಸಂತೋಷ ಹೊಂದಿದ್ದೇನೆ. ಬೇಕಾದ ವರ ನೀಡುತ್ತೇನೆ ಕೇಳು ಎಂದನು.

## ತ್ರಿಶಂಕುವಿನ ಸಶರೀರ ಸ್ವರ್ಗ ಬಯಕೆ

ತ್ರಿಶಂಕುವು "ಗುರುಗಳೇ ನಾನು ಇದೇ ಮನುಷ್ಯ ದೇಹದಿಂದ ಸಾಯದೇನೆ ಸ್ವರ್ಗಕ್ಕೆ ಹೋಗಬೇಕೆಂದು" ಬೇಡಿಕೊಂಡನು.

**ಅನಾವೃಷ್ಟಿಭಯೋ ತಸ್ಮಿನ್ ಗತೇ ದ್ವಾದಶ ವಾರ್ಷಿಕೇ ।**
**ರಾಜ್ಯೇಽಭಿಷಿಚ್ಯ ಪಿತ್ರ್ಯೇ ತು ಯಾಜಮಾಮಾಸ ತಂ ಮುನಿಮ್ ॥ 17 ॥**
**ಮಿಷತಾಂ ದೇವತಾನಾಂ ಚ ವಸಿಷ್ಠಸ್ಯ ಚ ಕೌಶಿಕಃ ।**
**ಸಶರೀರಂ ತದಾ ತಂ ತು ದಿವಮಾರೋಪಯತ್ ಪ್ರಭುಃ ॥ 18 ॥**

ವಿಶ್ವಾಮಿತ್ರರು ಹಾಗೆ ಆಗಲಿ ಎಂದರು. ಮೊದಲು ತ್ರಿಶಂಕುವನ್ನು ಅಯೋಧ್ಯಾ ಸಾಮ್ರಾಜ್ಯದಲ್ಲಿ ರಾಜ್ಯಾಭಿಷೇಕ ಮಾಡಿದರು. ನಂತರ ತಾವೇ ಪುರೋಹಿತರಾಗಿ ತ್ರಿಶಂಕುವಿನಿಂದ ಯಜ್ಞ ನಡೆಸಿದರು. ಸಕಲ ದೇವತೆಗಳು, ಋಷಿಗಳೂ, ವಸಿಷ್ಠರೇ ಮೊದಲಾದ ಬ್ರಹ್ಮವೇತ್ತರು ನೋಡುತ್ತಿರುವಂತೆಯೇ ಮರ್ತ್ಯಲೋಕದ ಮಾನವ ತ್ರಿಶಂಕು ಸ್ವರ್ಗಕ್ಕೇರಿಸಿದರು.

## [1]ತ್ರಿಶಂಕು ವಂಶಾವಳೀ

**ತಸ್ಯ ಸತ್ಯರಥಾ ನಾಮ ಭಾರ್ಯಾ ಕೈಕಯ ವಂಶಜಾ ।**
**ಕುಮಾರಂ ಜನಯಾಮಾಸ ಹರಿಶ್ಚಂದ್ರಮಕಲ್ಮಶಮ್ ॥ 19 ॥**

---

1. **ತ್ರಿಶಂಕು** : ವಿಶ್ವಾಮಿತ್ರರ ತಪಃ ಪ್ರಭಾವದಿಂದ ಸ್ವರ್ಗಕ್ಕೇನೋ ಹೋದ. ಇಂದ್ರದೇವನು ನೀನು ಗುರು ಶಾಪದಿಂದ ಪತಿತನಾಗಿರುವೆ. ಸ್ವರ್ಗಕ್ಕೇರಲು ಅಯೋಗ್ಯ ಎಂದು ಹೇಳಿ ಅಲ್ಲಿಂದ ದಬ್ಬಿದ. ತ್ರಿಶಂಕು ತಲೆಕೆಳಗಾಗಿ ಬೀಳುತ್ತಾ ಗುರುಗಳೇ ರಕ್ಷಿಸಿರಿ ಎಂದ. ಅಲ್ಲಿಯೇ ನಿಲ್ಲು ಎಂದು ಅಲ್ಲಿಯೇ ಬೀಳದಂತೆ ರಕ್ಷಿಸಿದರು. ತಪೋಬಲದಿಂದ

**ಆಹರ್ತಾ ರಾಜಸೂಯಸ್ಯ ಸ ಸಮ್ರಾಡಿತಿ ವಿಶ್ರುತಃ ।**

**ಹರಿಶ್ಚಂದ್ರಸ್ಯ ಪುತ್ರೋಽಭೂತ್ ರೋಹಿತೋ ನಾಮ ವೀರ್ಯವಾನ್ ॥20॥**

ತ್ರಿಶಂಕುವಿಗೆ ಸತ್ಯರಥಾದೇವಿ ಎಂಬ ಪತ್ನಿಯಿದ್ದಳು. ಇವಳು ಕೇಕಯ ರಾಜಸ ಪುತ್ರಿಯು. ಈ ದಂಪತಿಗಳಿಂದ ಸತ್ಯಸಂಧನಾದ ಹರಿಶ್ಚಂದ್ರನು ಹುಟ್ಟಿದನು. ಹರಿಶ್ಚಂದ್ರನು ಚಕ್ರವರ್ತಿಯಾಗಿದ್ದಾಗ ರಾಜಸೂಯಯಾಗವನ್ನು ಮಾಡಿದ್ದನು. ಇವನು ಚಂದ್ರಮತೀಯೆಂಬ ತನ್ನ ಪತ್ನಿಯಲ್ಲಿ 'ರೋಹಿತ'ನೆಂಬ ಪುತ್ರನನ್ನು ಪಡೆದನು. ರೋಹಿತನು **ರೋಹಿತಪುರ**[2]ವೆಂಬ ಪಟ್ಟಣ ಕಟ್ಟಿಸಿದನು. ಮುಂದೆ ರಾಜ್ಯವನ್ನು ಪಾಲಿಸಿ ನಂತರ ಸಂಸಾರಾಸಾರತೆಯನ್ನು ತಿಳಿದು ಬ್ರಾಹ್ಮಣರಿಗೆ ತನ್ನ ರಾಜ್ಯ ಹಂಚಿಕೊಟ್ಟು ತಪಸ್ಸಿಗಾಗಿ ಕಾಡಿಗೆ ಹೊರಟು ಹೋದನು.

## ರೋಹಿತಾಶ್ವನ ವಂಶ

**ಹರಿತೋ ರೋಹಿತಸ್ಯಾಥ ಚಂಚುರ್ಹಾರೀತ ಉಚ್ಯತೇ ।**

**ವಿಜಯಶ್ಚ ಸುದೇವಶ್ಚ ಚಂಚುಪುತ್ರೌ ಬಭೂವತುಃ ॥ 21 ॥**

**ರುರುಕಸ್ತನಯಸ್ತಸ್ಯ ರಾಜಧರ್ಮಾರ್ಥ ಕೋವಿದಃ ।**

**ರುರುಕಸ್ಯ ವೃಕೋಪುತ್ರಃ ವೃಕಾದ್ ಬಾಹುಸ್ತು ಜಜ್ಞಿವಾನ್ ॥ 22 ॥**

**ಹೈಹಯಾಃ ತಾಲಜಂಘಾಶ್ಚ ನಿರಸ್ಯಂತಿ ಸ್ಮ ತಂ ನೃಪಮ್ ॥ 23 ॥**

ರೋಹಿತಾಶ್ವನ ಪುತ್ರನು 'ಹರಿತ'ನು. ಹರಿತನ ಪುತ್ರನೇ 'ಚಂಚುರಾಜ'. ಚಂಚುವಿನ ಪುತ್ರರು ಇಬ್ಬರು. ವಿಜಯ, ಸುದೇವರೆಂದು. ಎಲ್ಲಾ ರಾಜರನ್ನೂ

---

ಮತ್ತೊಂದು ಸ್ವರ್ಗ ಸೃಷ್ಟಿಸತೊಡಗಿದರು. ಇಂದ್ರನಿಗೆ ಭಯವಾಗಿ ಅವರಲ್ಲಿಗೆ ಬಂದ. ಇಂದ್ರನೇ ಈತನು ಸಶರೀರವಾಗಿ ಧ್ರುವಾದಿ ನಕ್ಷತ್ರವಿರುವವರೆಗೂ ಇಲ್ಲಿಯೇ ಇರಲಿ ಎಂದರು. ಇದು 'ತ್ರಿಶಂಕು ಸ್ವರ್ಗ'ವೆನಿಸಿತು.[ರಾಮಾ. ಬಾಲ 57]

**ಪ್ರಾಪ್ತಃ ಚಂಡಾಲತಾಂ ಶಾಪಾತ್ ಗುರೋಃ ಕೌಶಿಕತೇಜಸಾ ।**

**ಸಶರೀರೋ ಗತಃ ಸ್ವರ್ಗಂ ಅದ್ಯಾಪಿ ದಿವಿ ದೃಶ್ಯತೇ ॥** – *ಭಾಗ 9/7/62*

---

2. **ರೋಹಿತಪುರ** : ರೋಹಿತಪುರವು ಡಿಲ್ಲಿಯಿಂದ 42 ಮೈಲಿ ದೂರದಲ್ಲಿದೆ. ರೋಹಿತನು ಇದನ್ನು ಮುಂದೆ ವಿಪ್ರರಿಗೆ ದಾನ ನೀಡಿ ಅರಣ್ಯಕ್ಕೆ ತಪಸ್ಸಿಗಾಗಿ ಹೋದನು.

ಗೆದ್ದು ಮರೆದಿದ್ದ ವಿಜಯನಿಗೆ ವಿಜಯಯೆಂಬ ಹೆಸರು ಅನ್ವರ್ಥವಾಗಿತ್ತು. ವಿಜಯನಿಗೆ ರಾಜಕಾರ್ಯ, ಧರ್ಮಕಾರ್ಯ, ಆರ್ಥಿಕ ಶಾಸ್ತ್ರಗಳಲ್ಲಿ ಪರಿಣತನಾಗಿದ್ದ 'ರುರುಕ'ನೆಂಬ ಮಗನಿದ್ದನು. ರುರುಕನನ್ನು ಮರುಕ ಎಂದು ಕರೆಯಲಾಗಿತ್ತು. ರುರುಕನಿಗೆ ವೃಕನೆಂಬುವನು ಮಗನಾದನು. ವೃಕನಿಂದ 'ಬಾಹುರಾಜ'ನು ಜನಿಸಿದನು.

ಬಾಹುರಾಜ ವೃಕರಾಜನಂತೆ ಅಂತಹ ಧರ್ಮಿಷ್ಠನಾಗಿರಲಿಲ್ಲ. ಬಾಹುರಾಜನ ಕಾಲದಲ್ಲಯ ಹೈಹಯರು ತಾಲಜಂಘರೆಂಬ ವೈವ್ಯಂದದ ವೀರರಾಜರು ಬಲಿಷ್ಠರಾಗಿ ಪ್ರಚಂಡ ಸೇನಾವಾಹಿನಿಯೊಂದಿಗೆ ಬಾಹುವಿನ ಮೇಲೆ ಯುದ್ಧ ಹೂಡಿ ಸೋಲಿಸಿದರು. ಸರ್ವಸ್ವವನ್ನು ಕಳೆದುಕೊಂಡು ಕಾಡುಪಾಲಾದ ಬಾಹುರಾಜ.

## ಸಗರ ವಂಶ

**ಸಗರಸ್ತು ಸುತೋ ಬಾಹೋಃ ಜಜ್ಞೇ ಸಹ ಗರೇಣ ಚ ।**
**ಔರ್ವಸ್ಯಾಶ್ರಮಮಾಗಮ್ಯ ಭಾರ್ಗವೇಣಾಭಿರಕ್ಷಿತಃ ॥ 24 ॥**
**ಆಗ್ನೇಯಮಸ್ತ್ರಂ ಲಬ್ಧ್ವಾ ಚ ಭಾರ್ಗವಾತ್ ಸಗರೋನೃಪಃ ।**
**ಜಿಗಾಯ ಪೃಥಿವೀಂ ಹತ್ವಾ ತಾಲಜಂಘಾನ್ ಸಹೈಹಯಾನ್ ॥ 25 ॥**

ಬಾಹುರಾಜನು ಅಧರ್ಮಾಭಿನಿವೇಶದಿಂದಾಗಿ ಶತ್ರುಗಳಿಂದ ಸೋತು ಕಾಡಿಗೆ ಸೇರಿದಾಗ ಅವನ ಪತ್ನಿ ಯಾದವಿಯು ಗರ್ಭಿಣಿಯಾಗಿದ್ದಳು. ಅದನ್ನು ಸಹಿಸದ ಅವಳ ಸವತಿಯರೆಲ್ಲರೂ ಅವಳ ಉದರದಲ್ಲಿದ್ದ ಮಗುವು ಸಾಯಲು ಇವಳಿಗೆ ವಿಷ ಉಣಿಸಿದರು. ಗರ್ಭವು ಕಲ್ಲಿನಂತಾಗಿ ಏಳೆಂಟು ವರ್ಷವಾದರೂ ಹೊರಬರಲಿಲ್ಲ. ಬಾಹುರಾಜನಾದರೂ ಔರ್ವಮುನಿಯ ಆಶ್ರಮ ಸಮೀಪ ಮೃತನಾದನು. ಅವನ ಪತ್ನಿ ಸಹಗಮನ ಮಾಡಲು ತೊಡಗಿದಳು. ಔರ್ವಮುನಿಗೆ ಸಹಗಮನ ವಿಷಯ ತಿಳಿದಾಗ ಸಂಭ್ರಮದಿಂದ ಬಂದು - ತಾಯಿ ನಿನ್ನ ಹೊಟ್ಟೆಯಲ್ಲಿ ಚಕ್ರವರ್ತಿಯಾಗುವ ಪುತ್ರನಿದ್ದಾನೆ. ಅವನಿಂದಲೇ ಶತ್ರುಗಳು ನಾಶವಾಗುವರು. ಇಂತಹವನ್ನು ಸುಟ್ಟು ಹಾಕುವೆಯಲ್ಲ. ಚಿತೆಯಿಂದ ಇಳಿ ಎಂದರು. ಔರ್ವರ ಅನುಗ್ರಹದಿಂದ ಯಾದವಿಯು ಬದುಕಿ ಉಳಿದಳು.

ಯಾದವಿಯು ಔರ್ವರ ಆಶ್ರಮದಲ್ಲಿಯೇ ಗಂಡು ಮಗವನ್ನು ಹೆತ್ತಳು.

ಗರವೆಂದರೆ ವಿಷ, ಆ ಗರ ಸಹಿತನಾಗಿಯೇ ಜನಿಸಿದ್ದರಿಂದ 'ಸಗರ' ಎಂದು ಹೆಸರಾಯಿತು. ಮುಂದೆ ಸಗರನಿಗೆ ಶಸ್ತ್ರ-ಶಾಸ್ತ್ರಗಳನ್ನು ಹೇಳಕೊಟ್ಟರು. ಮುಂದೆ ವೇದ, ಧನುರ್ವಿದ್ಯೆಗಳಲ್ಲಿ ಸಗರನು ಪಾರಂಗತನಾದನು. ಸಕಲ ಶಸ್ತ್ರಗಳನ್ನು ಹೇಳಕೊಟ್ಟು ಕೊನೆಗೆ ಅಮೋಘವಾದ ಆಗ್ನೇಯಾಸ್ತ್ರವನ್ನು ಉಪದೇಶಿಸಿದರು. ಆಗ್ನೇಯಾಸ್ತ್ರದಿಂದ ಸಗರನು ಶಕರನ್ನು ಯುವನರನ್ನು, ಕಾಂಭೋಜ, ಪಾರದ ಪಲ್ಲವರಿಂದ ಒಡಗೂಡಿದ ಹೈಹಯ-ತಾಳಜಂಘರನ್ನು ಹೊಡೆದಾಡಿ ಅವರನ್ನೆಲ್ಲ ಸೋಲಿಸಿದ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ತ್ರಿಶಂಕು ಚರಿತ್ರೆಯಲ್ಲಿ ಸಗರನ ಜನ್ಮವೆಂಬಲ್ಲಿ
ಹದಿಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 14 ಹರಿಪರ್ವ

## ಅಥ ಚತುರ್ದಶೋಽಧ್ಯಾಯಃ

### ಸಗರನ ಜನ್ಮ - ಸಾಗರರ ವಿನಾಶ

*ಜನಮೇಜಯ ಉವಾಚ -*

**ಕಥಂ ಸ ಸಗರೋಜಾತಃ ಗರೇಣೈವ ಸಹಾಚ್ಯುತಃ ।**

**ಕಿಮರ್ಥಂ ಚ ಶಕಾದೀನಾಂ ಕ್ಷತ್ರಿಯಾಣಾಂ ಮಹೌಜಸಾಮ್ ॥ 1 ॥**

**ಏತನ್ ಮೇ ಸರ್ವಮಾಚಕ್ಷ್ವ ವಿಸ್ತರೇಣ ತಪೋಧನ ॥ 2 ॥**

ತಪೋಧನ ವೈಶಂಪಾಯನರೇ - ಸಗರ ರಾಜನು ವಿಷದಿಂದ ಸಹಿತವಾಗಿಯೇ ಹುಟ್ಟಲು ಕಾರಣವೇನು? ವಿಷದಿಂದ ಇದ್ದರೂ ವಿಷವು ಅವನ ಮೇಲೆ ಪ್ರಭಾವ ಬೀರದಿರಲು ಕಾರಣವೇನು? ಶಕರೆ ಮೊದಲಾದ ಕ್ಷತ್ರಿಯರನ್ನು ಧರ್ಮಭ್ರಷ್ಟರನ್ನಾಗಿ ಮಾಡಿದ್ದೇಕೆ? ಇವುಗಳನ್ನು ವಿಸ್ತಾರವಾಗಿಯೇ ಹೇಳಬೇಕೆಂದನು.

*ವೈಶಂಪಾಯನ ಉವಾಚ-*

**ಬಾಹೋಃ ವ್ಯಸನಿನಃ ತಾತ! ಹೃತಂ ರಾಜ್ಯಮಭೂತ್ ಕಿಲ ।**

**ಹೈಹಯೈಃ ತಾಲಜಂಘೈಶ್ಚ ಶಕೈಃ ಸಾರ್ಧಂ ವಿಶಾಂಪತೇ ॥ 3 ॥**

**ಯವನಾಃ ಪಾರದಾಶ್ಚೈವ ಕಾಂಬೋಜಾಃ ಪಲ್ಲವಾಃ ಖಸಾಃ ।**

**ಏತೇ ಹ್ಯಪಿ ಗಣಾಃ ಪಂಚ ಹೈಹಯಾರ್ಥೇ ಪರಾಕ್ರಮನ್ ॥ 4 ॥**

ರಾಜನೇ ಬಾಹುರಾಜನು ನಿರಂತರ ಭೋಗಾಸಕ್ತನಾಗಿದ್ದು ಬೇಟೆ, ಜೂಜು,

ಸ್ತ್ರೀ ಸಹವಾಸ ಮೊದಲಾದ ವ್ಯಸನಿಯಾಗಿದ್ದನು. ಹೈಹಯ, ತಾಲಜಂಘ, ಶಕರು, ಯವನರು, ಪಾರದರೆಲ್ಲರೂ ರಾಜ್ಯಾಪಹರಣಕ್ಕೆ ಹೊಂಚು ಹೊಕ್ಕುತ್ತಿದ್ದು ತಾಲಜಂಘರೊಂದಿಗೆ ಉಳಿದವರು ಸೇರಿ ರಾಜ್ಯಭ್ರಷ್ಟನನ್ನಾಗಿ ಮಾಡಿದರು.

**ಹೃತರಾಜ್ಯಃ ತದಾ ರಾಜಾ ಸ ವೈ ಬಾಹುರ್ವನಂ ಯಯೌ ।**
**ಪತ್ನ್ಯಾ ಚಾನುಗತೋ ದುಃಖೀ ವನೇ ಪ್ರಾಣಾನ್ ಅವಾಸೃಜತ್ ॥ 5 ॥**
**ಪತ್ನೀ ತು ಯಾದವೀ ತಸ್ಯ ಸಗರ್ಭಾ ಪೃಷ್ಠತೋಽನ್ವಗಾತ್ ।**
**ಸಪತ್ನ್ಯಾಚ ಗರಸ್ತಸ್ಯೈ ದತ್ತಃ ಪೂರ್ವಮಭೂತ್ ಕಿಲ ॥ 6 ॥**

ರಾಜ್ಯಭ್ರಷ್ಟನಾದ ಬಾಹುರಾಜನು ಬಹಳ ಖತಿಗೊಂಡು ಅರಣ್ಯಕ್ಕೆ ಓಡಿ ಹೋದನು. ಗರ್ಭಿಣಿಯಾದ ಯಾದವಿ ಪತ್ನಿಯೂ ಸಹ ಅವನನ್ನು ಹಿಂಬಾಲಿಸಿದಳು. ಕೆಲವು ಕಾಲಾನಂತರ ಬಾಹುರಾಜನು ಅಸುನೀಗಿದನು. ಯಾದವಿಯಾದರೂ ಗರ್ಭಿಣಿಯಾದ ವಿಚಾರ ತಿಳಿದ ಅವಳ ಸವತಿಯರು ಅವಳಿಗೆ ವಿಷವುಣಿಸಿದ್ದರು. ಗಂಡನು ಮೃತನಾದಾಗ ಪತಿವ್ರತೆಯು ಅನುಗಮನ ಮಾಡಲಿಚ್ಛಿಸಿದಳು.

## ಸಗರನ ವಿದ್ಯಾಭ್ಯಾಸ – ಆಗ್ನೇಯಾಸ್ತ್ರಪ್ರಾಪ್ತಿ

**ಸಾ ತು ಭರ್ತುಶ್ಚಿತಾಂ ಕೃತ್ವಾ ವನೇ ತಾಮಧ್ಯರೋಹತ ।**
**ಔರ್ವಸ್ತಾಂ ಭಾರ್ಗವಸ್ತಾತ ಕಾರುಣ್ಯಾತ್ ಸಮವಾರಯತ್ ॥ 7 ॥**
**ತಸ್ಯಾಶ್ರಮೇ ಚ ತಂ ಗರ್ಭಂ ಗರೇಣೈವ ಸಹಾಚ್ಯುತಮ್ ।**
**ವ್ಯಜಾಯತ ಮಹಾಬಾಹುಂ ಸಗರಂ ನಾಮ ಪಾರ್ಥಿವಮ್ ॥ 8 ॥**
**ಔರ್ವಸ್ತು ಜಾತಕರ್ಮಾದಿ ತಸ್ಯ ಕೃತ್ವಾ ಮಹಾತ್ಮನಃ ।**
**ಅಧ್ಯಾಪ್ಯ ವೇದಶಾಸ್ತ್ರಾಣಿ ತತೋಽಸ್ತ್ರಂ ಪ್ರತ್ಯಪಾದಯತ್ ॥ 9 ॥**

ಪತಿಯ ಮರಣದಿಂದ ಪರಮದುಃಖಿತಳಾದ ಯಾದವಿಯು ಸಹಗಮನಕ್ಕಾಗಿ ಚಿತೆಯೇರ್ಪಡಿಸಿದಳು. ಭೃಗುವಂಶೀಯ ಔರ್ವಋಷಿಯು ದಯೆಯಿಂದ ಅವಳನ್ನು ಅವಳ ಗರ್ಭವನ್ನು ರಕ್ಷಿಸಿದನು. ತನ್ನ ಆಶ್ರಮದಲ್ಲಿಯೇ ವಾಸವನ್ನು ಅವಳಿಗೆ ಕಲ್ಪಿಸಿದನು. ಕ್ರಮೇಣ ಯಾದವಿಯು ಒಬ್ಬ ಮಹಾವೀರನಿಗೆ ಜನನಿಯಾದಳು. ಗರ್ಭವು ವಿಷದೊಂದಿಗೆ ಬೆಳೆದಿತ್ತು. ಹುಟ್ಟಿದಾಗ ವಿಷದಿಂದ

ಸಹಿತವಾಗಿಯೇ ಹುಟ್ಟಿದನು. ಗರ + ಸಹಿತನಾದವನು 'ಸಗರ'ನೆಂದಾದನು. ಸಗರನಿಗೆ ಜಾತಕರ್ಮಾದಿ ಸಕಲ ಸಂಸ್ಕಾರವನ್ನೂ ತಾನೇ ಮಾಡಿದನು. ವೇದಾದಿ ಶಾಸ್ತ್ರಾಭ್ಯಾಸ ಮಾಡಿಸಿದನು. ಅಸ್ತ್ರಶಸ್ತ್ರಗಳನ್ನು ತಿಳಿಸಿಕೊಟ್ಟನು. ದೇವತೆಗಳಿಗೂ ದುಸ್ಸಾಧ್ಯವಾದ ಆಗ್ನೇಯಾಸ್ತ್ರವನ್ನು ಔರ್ವರಿಂದ ಪಡೆದನು.

ಈ ಅಸ್ತ್ರದ ಸಾಮರ್ಥ್ಯದಿಂದ ಸಗರನು ಹೈಹಯ, ತಾಲಜಂಘರನ್ನು ಕೋಪಗೊಂಡ ರುದ್ರದೇವನು ಪಶುಗಳನ್ನು ಸಂಹರಿಸುವಂತೆ ಸಂಹರಿಸಲು ಆರಂಭಿಸಿದನು. ಇದರಿಂದಾಗಿ ಜಗತ್ತಿನಲ್ಲಿಯೇ 'ಮಹಾಪರಾಕ್ರಮಿ ಸಗರ' ಎಂದು ಕೀರ್ತಿವಂತನಾದನು. ಹೈಹಯರನ್ನು ನಾಶ ಮಾಡಿದ ನಮತರ ಇವರಿಗೆ ಸಹಾಯ ಹಸ್ತ ನೀಡಿದ ಶಕ-ಯವನ-ಪಾರದ-ಕಾಂಭೋಜ-ಪಲ್ಲವರನ್ನು ನಿರ್ನಾಮ ಮಾಡಲುದ್ಯುಕ್ತನಾದನು.

### ವಸಿಷ್ಠರಲ್ಲಿ ಶರಣು

**ತೇ ವಧ್ಯಮಾನಾ ವೀರೇಣ ಸಗರೇಣ ಮಹಾತ್ಮನಾ ।**
**ವಸಿಷ್ಠಂ ಶರಣಂ ಗತ್ವಾ ಪ್ರಣಿಪೇತುಃ ಮನೀಷಿಣಮ್ ॥ 10 ॥**

**ವಸಿಷ್ಠಸ್ತು ಅಥ ತಾನ್ ದೃಷ್ಟ್ವಾ ಸಮಯೇನ ಮಹಾದ್ಯುತಿಃ ।**
**ಸಗರಂ ವಾರಯಾಮಾಸ ತೇಷಾಂ ದತ್ವಾಽಭಯಂ ತದಾ ॥ 11 ॥**

ಸಗರನಿಂದ ಅವ್ಯಾಹತವಾಗಿ ಕೊಲ್ಲಲ್ಪಡುತ್ತಿರುವ ಅಳಿದುಳಿದವರು ಮೌನಿಗಳಾದ ವಸಿಷ್ಠರಿಗೆ ಶರಣು ಹೊಂದಿದರು. ವಸಿಷ್ಠರಾದರೂ ವಿಶೇಷ ನಿಯಮವನ್ನು ವಿಧಿಸಿ ಅಭಯ ನೀಡಿದರು. ಸಗರನಿಗೆ ಅವರನ್ನು ಕೊಲ್ಲಬೇಡವೆಂದರು.

### ತಂದೆಯ ತಲೆಯೊಡೆದವರಿಗೆ ಮಗನಿಂದ ಮುಂಡನ

ಗುರುಗಳ ಆದೇಶವನ್ನು ಮನ್ನಿಸಿ ಅವರನ್ನು ಕೊಲ್ಲದೆ ಕೊಲ್ಲುವುದಕ್ಕೆ ಸಮಾನವಾದ ವಿಕಾರಿತ್ವವನ್ನುಂಟು ಮಾಡಿದನು.

**ಧರ್ಮಂ ಜಘಾನ ತೇಷಾಂ ವೈ ವೇಷಾನ್ಯತ್ವಂ ಚಕಾರ ಹ ।**
**ಅರ್ಧಂ ಶಕಾನಾಂ ಶಿರಸಃ ಮುಂಡಂ ಕೃತ್ವಾ ವ್ಯಸರ್ಜಯತ್ ॥ 12 ॥**
**ಯವನಾನಾಂ ಶಿರಃ ಸರ್ವಂ ಕಾಂಬೋಜಾನಾಂ ತಥೈವ ಚ ।**
**ಪಾರದಾ ಮುಕ್ತಕೇಶಾಶ್ಚ ಪಲ್ಲವಾಃ ಶ್ಮಶ್ರುಧಾರಿಣಃ ॥ 13 ॥**

**ನಿಃ ಸ್ವಾಧ್ಯಾಯ ವಷಟ್ಕಾರಾಃ ಕೃತಾಸ್ತೇನ ಮಹಾತ್ಮನಾ ॥ 14 ॥**

ಶಕರ ತಲೆಯನ್ನು ಅರ್ಧ ಬೋಳಿಸಿದ. ಯವನ ಹಾಗೂ ಕಾಂಭೋಜರ ಶಿರಸ್ಸನ್ನು ಪೂರ್ಣ ಮುಂಡನ ಮಾಡಿದನು. ಪಾರದವರಿಗೆ ತಲೆಯಿಂದ ಒಂದು ಕೂದಲನ್ನು ತೆಗೆಯಬಾರದೆಂದು ನಿಯಮಿಸಿದನು. ಪಲ್ಲವರಿಗೆ ಗಡ್ಡ ಇರಿಸಿ ಶಿರಸ್ಸನ್ನು ಪೂರ್ಣ ಮಂಡನ ಮಾಡಲು ಆಜ್ಞಾಪಿಸಿದನು.

ಇವರೆಲ್ಲರಿಗೂ ವೇದಾಧ್ಯಯನ ಯಜ್ಞಯಾಗಾದಿಗಳಿಂದ ಬಹಿಷ್ಕೃತರನ್ನಾಗಿಸಿದನು. ಕ್ಷತ್ರಿಯ ಧರ್ಮದಿಂದ ದೂರ ಮಾಡಿದನು. ಇವರು ಅವನ ಮುಂದೆ ಕ್ಷತ್ರಿಯರೆಂದು ತಲೆಯೆತ್ತುವಂತಿಲ್ಲ. ಯಾವ ಬ್ರಾಹ್ಮಣನೂ ಇವರಿಗೆ ಆರ್ಯೋಚಿತವಾದ ಸಂಸ್ಕಾರ ಮಾಡಿಸಬಾರದು. ಈ ನಿಯಮದಿಂದಾಗಿ ಇದ್ದರೂ ಸತ್ತಂತೆ ಆದರು. ಹೀಗೆ ಅವರನ್ನು ಕೊಲ್ಲದೇನೆ ಅವರ ವೇಷವನ್ನು ವಿರೂಪಗೊಳಿಸಿ ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡನು.

## ಸಗರನ ಆಕ್ರಮಣ

**ಶಕಾಃ ಯವನ ಕಾಂಬೋಜಾಃ ಪಾರದಾಶ್ಚ ವಿಶಾಂಪತೇ ।**
**ಕೋಲಿಸರ್ಪಾಃ ಸಮಹಿಷಾ ದಾರ್ಧ್ಯಾಃ ಚೋಲಾಃ ಸಕೇರಲಾಃ ॥ 15 ॥**

**ಸರ್ವೇ ತೇ ಕ್ಷತ್ರಿಯಾಸ್ತಾತ! ಧರ್ಮಸ್ತೇಷಾಂ ನಿರಾಕೃತಃ ।**
**ಖಸಾನ್ ತುಷಾರಾನ್ ಚೋಲಾಂಶ್ಚ ಮದ್ರಾನ್ ಕಿಷ್ಕಿಂಧಕಾನ್ ತಥಾ ।**
**ಕೌಂತಲಾಂಶ್ಚ ತಥಾ ವಂಗಾನ್ ಸಾಲ್ವಾನ್ ಕೌಂಕಣಕಾನ್ ತಥಾ ॥ 16 ॥**

ರಾಜ ಜನಮೇಜಯನೇ, ಸಗರನು ಶಕರು, ಯವನರು, ಕಾಂಬೋಜರು, ಪಾರದರು ಕೋಲಸರ್ಪರು, ಮಹಿಷರು, ದಾರ್ದ್ಯರು, ಚೋಲ-ಕೇರಲರು ಮೊದಲಾದ ಕ್ಷತ್ರಿಯರನ್ನು ವಸಿಷ್ಠರ ಅಣತಿಯಂತೆ ಧರ್ಮಭ್ರಷ್ಟರನ್ನಾಗಿ ಮಾಡಿ ಲೋಕೈಕ ವಿಜಯಿಯಾಗಿ ಮೆರೆದನು.

## ಸಗರನ ಅಶ್ವಮೇಧ

**ಅಶ್ವಂ ವೈ ಪ್ರೇರಯಾಮಾಸ ವಾಜಿಮೇಧಾಯ ದೀಕ್ಷಿತಃ ।**
**ತಸ್ಯ ಚಾರಯತಃ ಸೋಽಶ್ವಃ ಸಮುದ್ರೇ ಪೂರ್ವದಕ್ಷಿಣೇ ॥ 17 ॥**
**ವೇಲಾ ಸಮೀಪೇಽಪಹೃತೋ ಭೂಮಿಂ ಚೈವ ಪ್ರವೇಶಿತಃ ॥ 18 ॥**

ಸಗರನು ಬಾಲ್ಯದಿಂದಲೇ ಧರ್ಮಿಷ್ಠನಾಗಿದ್ದು ಶತ್ರುಸಮೂಹವನ್ನೆಲ್ಲ ಗೆದ್ದು ರಾಜ್ಯದಲ್ಲಿ ಭದ್ರತೆವುಂಟು ಮಾಡಿದನು. ಶಾಂತಿ ಸಾಮ್ರಾಜ್ಯವು ಸ್ಥಾಪಿತವಾದ ಮೇಲೆ ಅಶ್ವಮೇಧಯಾಗ ಮಾಡಲು ಇಚ್ಛಿಸಿದನು.

ಸಗರನು ದೀಕ್ಷಿತನಾಗಿ ಕುಳಿತಾಗ ಅವನ ಅರವತ್ತು ಸಾವಿರ ಮಂದಿ ಪುತ್ರರು ಅಶ್ವಮೇಧದ ಕುದುರೆಯನ್ನು ಕಾಯುತ್ತಿದ್ದರು. ಸಗರನ ಅಶ್ವಮೇಧ ವೈಭವವನ್ನು ಕಂಡು ಸಹಿಸದ ಇಂದ್ರದೇವನು ಕುದುರೆಯನ್ನು ಅಪಹರಿಸಿ ಪಾತಾಲದಲ್ಲಿರುವ ಕಪಿಲಮುನಿಯ ಆಶ್ರಮದಲ್ಲಿ ಬಿಟ್ಟು ಬಂದನು. ಸಗರಕುಮಾರರು ಇಡೀ ಅಖಂಡ ಭೂಮಂಡಲವನ್ನು ಹುಡುಕಿದರೂ ಆ ಆಖಂಡಲನು (ಇಂದ್ರ ಬಚ್ಚಿಟ್ಟ ಪ್ರದೇಶ) ಅರಿಯದಾದರು.

## ಕಪಿಲ ಪರಮಾತ್ಮನ ದರ್ಶನ

**ಸ ತಂ ದೇಶಂ ತದಾ ಪುತ್ರೈಃ ಖಾನಯಾಮಾಸ ಪಾರ್ಥಿವಃ ।**
**ಆಸೇದುಃ ತೇ ತತಸ್ತತ್ರ ಖನ್ಯಮಾನೇ ಮಹಾರ್ಣವೇ ॥ 19 ॥**

**ತಮಾದಿಪುರುಷಂ ದೇವಂ ಹರಿಂ ಕೃಷ್ಣಂ ಪ್ರಜಾಪತಿಮ್ ।**
**ವಿಷ್ಣುಂ ಕಪಿಲರೂಪೇಣ ಸ್ವಪಂತಂ ಪುರುಷೋತ್ತಮಮ್ ॥ 20 ॥**

ಭೂಮಂಡಲದಲ್ಲಿ ಕುದುರೆ ಲಭಿಸದಿದ್ದಾಗ ಪೂರ್ವಸಮುದ್ರದ ದಂಡೆಯ ಹತ್ತಿರವಿರುವ ಭೂಮಿಯನ್ನು ಅಗೆದು ಪಾತಾಳಕ್ಕೆ ಬಿಲ ಮಾರ್ಗ ಮಾಡಿ ಅಲ್ಲಿಗೆ ಹೋದರು ಅಲ್ಲಿ ಕುದುರೆಯನ್ನು ಅನ್ವೇಷಿಸುತ್ತಿದ್ದಾಗ ತಪಃ ಸಮಾಧಿಯಲ್ಲಿ ಮಗ್ನವಾಗಿರುವ **ಕಪಿಲ**[1]ರೂಪಿ ಭಗವಂತನನ್ನು ನೋಡಿದರು. ಅವರ ಸಮೀಪದಲ್ಲಿ ಕುದುರೆಯನ್ನೂ ನೋಡಿದರು. ಕುದುರೆ ಅಪಹಾರಕ

---

1. ಕಪಿಲ : ಸಾಕ್ಷಾತ್ ನಾರಾಯಣಾವತಾರಿ ಕಪಿಲ ಪರಮಾತ್ಮನಿಗೆ ಕೋಪ ಬಂದು ಸುಟ್ಟುಬೂದಿಯಾದರೆಂದು ಕಪಿಲ ಸ್ವರೂಪ ತಿಳಿಯದವರ ಮಾತಷ್ಟೆ.

ಬಲಜ್ಞಾನ ಸ್ವರೂಪನಾದ ಸತ್ವಾದಿಗುಣರಹಿತನೂ ಜಗತ್ಪವಿತ್ರಗೊಳಿಸುವವನೂ ಆದ ಇವನಲ್ಲಿ – ಆಕಾಶದಲ್ಲಿ ಭೂರಜಸ್ಸುಗಳಿವೆ ಎಂದಂತೆ ಕೋಪಮಯವಾದ ಅಜ್ಞಾನವಿದೆಯೆಂಬುದು ಸಾಧುವಾದವಲ್ಲ. ಪರಮಾತ್ಮನಲ್ಲಿ ಎಸಗಿದ ಪಾಪದಿಂದಾಗಿ ತಮ್ಮ ಶರೀರಾಗ್ನಿಯಿಂದಲೇ ದಗ್ಧವಾದರೆಂಬುದು ಸಾಧುವಾದ.

**ನ ಸಾಧುವಾದಃ ಮುನಿಕೋಪಭರ್ಜಿತಾಃ ।**
**ಸ್ವಶರೀರಾಗ್ನಿನಾ ಭಸ್ಮಸಾದಭವನ್ ಕ್ಷಣಾತ್ ॥** – *ಭಾಗ –9/8/12*

ಈ ಕಪಿಲಮುನಿಯೇ ಎಂದು ಭ್ರಮಿಸಿ ಹೊಡೆಯಿರಿ, ಕೊಲ್ಲಿರಿ ಎಂದು ಕಿರುಚಾಡಿದರು. ಈ ಸಪ್ಪಳದಿಂದ ಕಪಿಲಮುನಿಯು ತಪೋಭಂಗ-ವೇರ್ಪಟ್ಟಿತು.

## ಕಪಿಲನ ನೇತ್ರಾಗ್ನಿಯಿಂದ ದಗ್ಧರಾದರು

**ತಸ್ಯ ಚಕ್ಷುಃ ಸಮುತ್ಥೇನ ತೇಜಸಾ ಪ್ರತಿಬುದ್ಧ್ಯತಃ ।**
**ದಗ್ಧಾಸ್ತೇ ವೈ ಮಹಾರಾಜ ಚತ್ವಾರಃ ತ್ವವಶೇಷಿತಾಃ ॥ 21 ॥**
**ಬರ್ಹಕೇತುಃ ಸುಕೇತುಶ್ಚ ತಥಾ ಧರ್ಮರಥೋ ನೃಪಃ ।**
**ಶೂರಃ ವಂಶಜನಶ್ಚೈವ ತಸ್ಯ ವಂಶಕರೋ ನೃಪಃ ॥ 22 ॥**

ಸಚ್ಚಿದಾನಂದ ರೂಪಿಯೂ ಪ್ರಜಾಪತಿಯೂ ಆದ ಭಗವಂತನ ನೇತ್ರಗಳಿಂದ ಕೋಪದ ಕೆಂಗಣ್ಣಿನ ಸ್ಫುಲಿಂಗಗಳು ಹಾರಿ ಬಂದವು. ಈ ಕಿಡಿ ಸಗರಕುಮಾರರ ಪಾಲಿಗೆ ಪ್ರಲಯಾಗ್ನಿಯಾಗಿ ಎಲ್ಲರನ್ನೂ ಸುಟ್ಟು ಹಾಕಿತು. ಬರ್ಹಕೇತು, ಸುಕೇತು, ಧರ್ಮರಥ, ಪಂಚನದ ಎಂಬ ನಾಲ್ವರೂ ಮಾತ್ರ ಬದುಕಿ ಉಳಿದರು.

ಇವರಿಂದಲೇ ಮುಂದೆ ಈ ಸಗರ ವಂಶ ಅಭಿವೃದ್ಧಿ ಹೊಂದಿತು.

ಉಳಿದ ನಾಲ್ಕು ಮಂದಿ ಹಾಗೂ ಸಗರನೂ ಸಹ ಭಗವಂತನನ್ನು ಭಕ್ತ್ಯಾದರ ಪೂರ್ವಕವಾಗಿ ಪ್ರಾರ್ಥಿಸಿದಾಗ ದಯಾಮಯನು ಶಾಂತನಾಗಿ ಅವರನ್ನು ಕ್ಷಮಿಸಿದನು.

## ಸಗರರಿಗೆ ಕಪಿಲನ ವರದಾನ

**ಅಕ್ಷಯಂ ವಂಶಮಿಕ್ಷ್ವಾಕೋಃ ಕೀರ್ತಿಂ ಚಾಪ್ಯನಿವರ್ತನೀಮ್ ।**
**ಪುತ್ರಂ ಚ ಸಮುದ್ರಂ ವಿಭುಃ ಸ್ವರ್ಗವಾಸಂ ತಥಾಕ್ಷಯಮ್ ॥ 23 ॥**
**ಪುತ್ರಾಣಾಂ ಚಾಕ್ಷಯಾನ್ ಲೋಕಾನ್ ತಸ್ಯ ಯೇ ಚಕ್ಷುಷಾ ಹತಾಃ ॥24॥**

ಸಂತುಷ್ಟ ಕಪಿಲನು ಸಗರರಿಗೆ ವರದಾನ ಮಾಡಿದನು – ಯಾರು ಇವನ ನೇತ್ರಾಗ್ನಿ ದಗ್ಧರಾದವರಿಗೆ ವಿಷ್ಣುಪಾದೋದಕದಿಂದ ಸದ್ಗತಿ ಹೊಂದುವುದಾಗಿಯೂ, ಇಕ್ಷ್ವಾಕು ವಂಶವು ಅಕ್ಷಯವಾಗಲೆಂದೂ, ಸಗರನ ಕೀರ್ತಿ ಆಚಂದ್ರಾರ್ಕಸ್ಥಾಯಿಯಾಗಿಯೂ, ಉಳಿದ ನಾಲ್ಕು ಮಂದಿಗೆ

ಆಯುರಾರೋಗ್ಯಭಾಗ್ಯಗಳನ್ನಿತ್ತನು. ಇದಲ್ಲದೆ ಅವರು ತೋಡಿ ಹಾಕಿದ ಹಳ್ಳದಲ್ಲಿ ನೀರು ತುಂಬಿ ವಿಸ್ತೃತವಾಗಿ 'ಸಾಗರ' ಎಂದು ಕರೆಯಲ್ಪಟ್ಟಿತು.

ಸಮುದ್ರರಾಜನನ್ನು ಸಗರ ರಾಜನಿಗೆ ಪುತ್ರನನ್ನಾಗಿಯೂ ಮಾಡಿದನು. ಇದರಿಂದಲೇ ಸಮುದ್ರನಿಗೆ 'ಸಾಗರ' = ಸಗರನ ಮಗ ಎಂದು ಪ್ರಸಿದ್ಧವಾಯಿತು.

## ಸಗರನಿಗೆ ಸಾಗರನ ಆತಿಥ್ಯ

**ಸಮುದ್ರಶ್ಚಾರ್ಘ್ಯಮಾದಾಯ ವವಂದೇ ತಂ ಮಹೀಪತಿಮ್ ।**
**ಸಾಗರತ್ವಂ ಚ ಲೇಭೇ ಸ ಕರ್ಮಣಾ ತೇನ ತಸ್ಯ ವೈ ॥ 25 ॥**

**ತಂ ಚಾಶ್ವಮೇಧಿಕಂ ಸೋಽಶ್ವಂ ಸಮುದ್ರಾದುಪಲಬ್ಧವಾನ್ ।**
**ಆಜಹಾರಾಶ್ವಮೇಧಾನಾಂ ಶತಂ ಸ ಸುಮಹಾಯಶಾಃ ॥ 26 ॥**

**ಪುತ್ರಾಣಾಂ ಚ ಸಹಸ್ರಾಣಿ ಷಷ್ಟಿಃ ತಸ್ಯೇತಿ ನಃ ಶ್ರುತಮ್ ॥ 27 ॥**

ಸಮುದ್ರರಾಜನು ಯಜ್ಞೀಯ ಕುದುರೆಯನ್ನು ಪಾತಾಳದಿಂದ ತಂದು ಸಗರರಾಜನಿಗೆ ಅರ್ಪಿಸಿದ್ದಲ್ಲದೆ ಅನರ್ಘ್ಯ ಮುತ್ತುರತ್ನಗಳ ರಾಶಿಯನ್ನು ಅವನ ಮುಂದೆ ಸುರಿದನು. ಸಗರನು ನೂರು ಅಶ್ವಮೇಧಗಳನ್ನು ಪೂರ್ತಿ ಮಾಡಿ ಮಹಾಕೀರ್ತಿವಂತನಾದನು. ಸಗರನಿಗೆ ಅರವತ್ತು ಸಾವಿರ ಮಂದಿ ಮಕ್ಕಳಿದ್ದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಸಗರೋಪಾಖ್ಯಾನವೆಂಬಲ್ಲಿ
ಹದಿನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಪಂಚದಶೋಽಧ್ಯಾಯಃ

## ಸಗರ ವಂಶ ವರ್ಣನೆ

*ಜನಮೇಜಯ ಉವಾಚ -*

ಸಗರಸ್ಯಾತ್ಮಜಾ ವೀರಾಃ ಕಥಂ ಜಾತಾ ಮಹಾತ್ಮನಃ ।
ವಿಕ್ರಾಂತಾಃ ಷಷ್ಠಿಸಾಹಸ್ರಾಃ ವಿಧಿನಾ ಕೇನ ವಾ ದ್ವಿಜ ॥ 1 ॥

*ವೈಶಂಪಾಯನ ಉವಾಚ-*

ದ್ವೇ ಭಾರ್ಯೇ ಸಗರಸ್ಯಾಸ್ತಾಂ ತಪಸಾ ದಗ್ಧಕಿಲ್ಬಿಷೇ ।
ಜ್ಯೇಷ್ಠಾ ವಿದರ್ಭದುಹಿತಾ ಕೇಶಿನೀ ನಾಮ ವಿಶ್ರುತಾ ॥ 2 ॥
ಕನೀಯಸೀ ತು ಯಾ ತಸ್ಯ ಪತ್ನೀ ಪರಮಧರ್ಮಿಣೀ ।
ಅರಿಷ್ಟನೇಮಿ ದುಹಿತಾ ರೂಪೇಣಪ್ರತಿಮಾ ಭುವಿಃ ॥ 3 ॥

ವೈಶಂಪಾಯನರೇ, ಮಹಾನುಭಾವನಾದ ಸಗರನಿಗೆ ಮಹಾಪರಾಕ್ರಮಿ-ಗಳಾದ ಅರವತ್ತು ಸಾವಿರ ಪುತ್ರರು ಹೇಗಾದರು. ಇದನ್ನು ನನಗೆ ತಿಳಿಸಿರಿ ಎಂದನು.

ವೈಶಂಪಾಯನರು ರಾಜನೇ, ಸಗರನಿಗೆ ಇಬ್ಬರು ಭಾರ್ಯರಿದ್ದರು. ಇಬ್ಬರೂ ತಪಸ್ಸಿನಿಂದ ಪಾಪಗಳನ್ನು ಕಳೆದುಕೊಂಡಿದ್ದರು. ಕೇಶಿನೀ, ಸುಮತೀ ಎಂಬುವರು. ಇವರಲ್ಲಿ ಕೇಶಿನಿಯು ವಿದರ್ಭರಾಜನ ಮಗಳಾಗಿದ್ದು ಹಿರಿಯಳು. ಅರಿಷ್ಟನೇಮಿಯ ಪುತ್ರಿಯು ದ್ವಿತೀಯ ಪತ್ನಿಯಾಗಿದ್ದಳು. ಇವಳು ಪರಮಪತಿವ್ರತೆ, ಹಾಗೆಯೇ ಸೌಂದರ್ಯಶಾಲಿನಿಯಾಗಿದ್ದಳು.

ಇವರಿಬ್ಬರಿಗೂ ಬಹಳ ದಿನಗಳು ಕಳೆದರೂ ಸಂತಾನವಾಗಲಿಲ್ಲ. ಔರ್ವ ಋಷಿಗೆ ಶರಣಾಗತರಾದರು.

**ಔರ್ವಸ್ತಾಭ್ಯಾಂ ವರಂ ಪ್ರಾದಾತ್ ತಂ ನಿಬೋಧ ಜನಾಧಿಪ ।**
**ಷಷ್ಟಿಂ ಪುತ್ರಸಹಸ್ರಾಣಿ ಗೃಹ್ಣಾತ್ವೇಕಾ ತಪಸ್ವಿನೀ ॥ 4 ॥**
**ಏಕಂ ವಂಶಧರಂ ತ್ವೇಕಾ ಯಥೇಷ್ಟಂ ವರಯತ್ವಿತಿ ॥ 5 ॥**
**ತತ್ರೈಕಾ ಜಗೃಹೇ ಪುತ್ರಾನ್ ಲುಬ್ಧಾ ಶೂರಾನ್ ಬಹೂಂಸ್ತಥಾ ॥ 6 ॥**

ಔರ್ವಋಷಿಯು ಅವರಿಬ್ಬರಿಗೆ ವರಪ್ರದಾನ ಮಾಡುತ್ತಾ ಹೀಗೆಂದನು – 'ನಿಮ್ಮಿಬ್ಬರಲ್ಲಿ ಒಬ್ಬಳು ಅರವತ್ತು ಸಾವಿರ ಮಕ್ಕಳನ್ನು, ಮತ್ತೊಬ್ಬಳು ಕುಲದೀಪಕನಾದ ಒಬ್ಬ ಮಗನನ್ನೂ ಪಡೆಯಬಹುದು. ನಿಮಗೆ ಈ ಎರಡು ವರಗಳಲ್ಲಿ ಯಾರಿಗೆ ಯಾವುದು ಬೇಕೋ ಅದನ್ನು ಪಡೆಯಬಹುದು' ಎಂದರು. ಹೀಗೆ ಹೇಳಲು ಸಗರನ ಎರಡನೆ ಹೆಂಡತಿಯಾದ ಸುಮತಿ ಅಥವಾ ಈಲಿನೀ ಅಥವಾ ಪ್ರಭ ಎಂಬುವಳು ಪುತ್ರ ಲೋಭದಿಂದ ನನಗೆ ಅರವತ್ತು ಸಾವಿರ ಮಕ್ಕಳಿರಲಿ ಎಂದಳು. ಕೇಶಿನಿ ಅಥವಾ ಭಾನುಮತಿಯು ನನಗೆ ವಂಶೋದ್ಧಾರಕನಾದ ಒಬ್ಬ ಮಗನೆ ಸಾಕು ಎಂದಳು.

### ಅಸಮಂಜಸನ ಜನನ

ಔರ್ವನು ತಥಾಸ್ತು ಎಂದನು. ಕೇಶಿನಿಯು ಸಗರನಿಂದ ಅಸಮಂಜಸನೆಂಬ ಪುತ್ರನನ್ನು ಪಡೆದಳು. ಅಸಮಂಜಸನಿಗೆ ಪಂಚಜನನೆಂಬ ಹೆಸರಿತ್ತು.

### ಅರವತ್ತು ಸಾವಿರ ಮಕ್ಕಳು

**ರಾಜಾ ಪಂಚಜನೋ ನಾಮ ಬಭೂವ ಸುಮಹಾಬಲಃ ।**
**ಇತರಾ ಸುಷುವೇ ತುಂಬೀಂ ಬೀಜಪೂರ್ಣಾಮಿತಿ ಶ್ರುತಿಃ ॥ 7 ॥**
**ತತ್ರ ಷಷ್ಟಿ ಸಹಸ್ರಾಣಿ ಗರ್ಭಾಸ್ತೇ ತಿಲ ಸಂಮಿತಾಃ ॥ 8 ॥**
**ಘೃತಪೂರ್ಣೇಷು ಕುಂಭೇಷು ತಾನ್ ಗರ್ಭಾನ್ ನಿದಧೇ ಪಿತಾ ।**
**ಧಾತ್ರೀಶ್ಚೈಕೈಕಶಃ ಪ್ರಾದಾತ್ ತಾವತೀರೇವ ಪೋಷಣೇ ॥ 9 ॥**

ಸಗರನ ಎರಡನೆ ಹೆಂಡತಿಯು ಬೀಜಗಳಿಂದ ತುಂಬಿದ್ದ ಸೋರೆಕಾಯಿಯನ್ನು (ಹಾಲ್ಗುಂಬುಳ) ಹಡೆದಳು. ಈ ಸೋರೆಕಾಯಿಯಲ್ಲಿ ಎಳ್ಳಿನಷ್ಟು ಆಕಾರದ

ಅರವತ್ತು ಸಹಸ್ರ ಗರ್ಭಾಣುಗಳಿದ್ದವು. ರಾಜನು ಅವುಗಳನ್ನೆಲ್ಲ ಘೃತ ತುಂಬಿದ ಘಟಗಳಲ್ಲಿ ಇರಿಸಿ, ದಾಸಿಯರನ್ನು ನೋಡಿಕೊಳ್ಳಲು ನೇಮಿಸಿದನು. ಇವು ದಿನದಿನಕ್ಕೆ ಬೆಳೆದು, ದಶಮಾಸಗಳು ಕಳೆದ ಬಳಿಕ ಘೃತಕುಂಭದಿಂದ ಹೊರಕ್ಕೆ ಬಂದರು. ಅವರು ಬಾಲ್ಯ ಸಹಜವಾದ ಲೀಲೆಯನ್ನು ತೋರಿಸಿ ಸಗರ ರಾಜನಿಗೆ ಸಂತೋಷವುಂಟು ಮಾಡಿದರು.

**ಷಷ್ಟಿಃ ಪುತ್ರಸಹಸ್ರಾಣಿ ತಸ್ಯೈವಮಭವನ್ ನೃಪ ।**
**ಗರ್ಭಾದಲಾಬುಮಧ್ಯಾತ್ ವೈ ಜಾತಾನಿ ಪೃಥಿವೀಪತೇ ॥ 10 ॥**
**ತೇಷಾಂ ನಾರಾಯಣಂ ತೇಜಃ ಪ್ರವಿಷ್ಟಾನಾಂ ಮಹಾತ್ಮನಾಮ್ ।**
**ಏಕಃ ಪಂಚಜನೋ ನಾಮ ಪುತ್ರೋ ರಾಜಾ ಬಭೂವ ಹ ॥ 11 ॥**

ಹೀಗೆ ಸೋರೆಕಾಯಿಯ ಮಧ್ಯದಿಂದ ರಾಜನಿಗೆ ಷಷ್ಟಿ ಸಹಸ್ರಪುತ್ರರಾದರು. ಆದರೆ ಕಾಲಯೋಗದಿಂದಾಗಿ ನಾರಾಯಣನ ಅವತಾರಿ ಕಪಿಲನ ತೇಜಸ್ಸಿಗೆ ಸಿಕ್ಕು ಲೀನರಾಗಿ ಹೋದರು.

## ಅಸಮಂಜಸನ ಯೋಗ ಶಕ್ತಿ

ಸಗರನ ಮಕ್ಕಳಲ್ಲಿ ಪಂಚಜನನಿಗೆ ಅಸಮಂಜಸನೆಂಬುವನು ಒಬ್ಬನು. ಇವನು ಹಿಂದಿನ ಜನ್ಮದಲ್ಲಿ ಮಹಾಯೋಗಿಯಾಗಿದ್ದು ಸ್ತ್ರೀಸಂಗದಿಂದಾಗಿ ತನ್ನ ಪರಮಾತ್ಮ ಯೋಗದಿಂದ ವಂಚಿತನಾದನು. ಸ್ಮರಣೆಯು ಈ ಜನ್ಮದಲ್ಲಿಯೂ ಬಂದಿತ್ತು. ತನ್ನ ಬಂಧುಗಳು ತನ್ನನ್ನು ಪ್ರೀತಿಸಿ ಯೋಗಭ್ರಷ್ಟನನ್ನಾಗಿ ಮಾಡಬಹುದೆಂಬ ಭಯದಿಂದ ಅಸಮಂಜಸ ಕಾರ್ಯ ಮಾಡುತ್ತಾ ಅಸಮಂಜಸನೆ ಆಗಿದ್ದನು. ಆಡುತ್ತಿರುವ ಮಕ್ಕಳನ್ನು ಸರಯೂ ನದಿಯಲ್ಲಿ ಹಾಕಿ ಮುಳುಗಿಸುತ್ತಿದ್ದನು. ತಂದೆಯು ಇವನನ್ನು ತ್ಯಾಗ ಮಾಡಿದನು. ಪುನಃ ತನ್ನ ತಪಃಪ್ರಭಾವದಿಂದ ಸತ್ತವರನ್ನು ಬದುಕಿಸಿ ತಪಸ್ಸಿಗಾಗಿ ಹೊರಟು ಹೋದನು. ಮಕ್ಕಳ ತಂದೆ ತಾಯಿಗಳು ಆಶ್ಚರ್ಯಪಟ್ಟರು. ತಂದೆಗೆ ಇವನ ತ್ಯಾಗದಿಂದ ಪಶ್ಚಾತ್ತಾಪವುಂಟಾಯಿತು.

## ಪಂಚಜನನ ಸಂತಾನ

**ಸುತಃ ಪಂಚಜನಸ್ಯಾಸೀತ್ ಅಂಶುಮಾನ್ ನಾಮ ವೀರ್ಯವಾನ್ ।**
**ದಿಲೀಪಸ್ತಸ್ಯ ತನಯಃ ತಸ್ಯ ಖಟ್ವಾಂಗ ಇತಿ ವಿಶ್ರುತಃ ॥ 12 ॥**

**ಯೇನ ಸ್ವರ್ಗಾದಿಹಾಗತ್ಯ ಮುಹೂರ್ತಂ ಪ್ರಾಪ್ಯ ಜೀವಿತಮ್ ।**
**ತ್ರಯೋऽನುಸಂಧಿತಾ ಲೋಕಾ ಬುದ್ಧ್ಯಾ ಸತ್ಯೇನ ಚಾನಘ ॥ 13 ॥**

ಪಂಚಜನನಿಗೆ 'ಅಂಶುಮಾನ್' ಎಂಬವನು ಮಗ. ಅವನಿಗೆ ದಿಲೀಪನೆಂಬ ಮಗನು ಜನಿಸಿದನು. ದಿಲೀಪನನ್ನು ಖಟ್ವಾಂಗನೆಂದು ಕರೆಯುವರು.

ಖಟ್ವಾಂಗನು ದೇವತೆಗಳಿಗೆ ಸಹಾಯ ಮಾಡಲು ಹೋಗುತ್ತಿದ್ದ. ಒಂದು ಬಾರಿ ಸ್ವರ್ಗಕ್ಕೆ ಹೋಗಿ ಮರುಳುವಾಗ ತನ್ನ ಆಯುಷ್ಯ ಮುಹೂರ್ತ ಮಾತ್ರ ಉಳಿದಿದೆ ಎಂದು ತಿಳಿದು, ಕೂಡಲೇ ಆತ್ಯಂತ ಭಕ್ತಿಯಿಂದ ಭಗವಂತನನ್ನು ಧ್ಯಾನ ಮಾಡಿದ. ಮೂರು ಲೋಕಗಳ ವಿಷಯಗಳೆಲ್ಲವೂ ಅಸಾರವೆಂದು ಬಗೆದು ಪುತ್ರಮಿತ್ರಕಲತ್ರಾದಿ ಸಕಲವಸ್ತುಗಳನ್ನು ಶ್ರೀಹರಿಗೆ ಅರ್ಪಿಸಿ ಅತ್ಯಲ್ಪಕಾಲದಲ್ಲಿಯೇ ಮೋಕ್ಷವನ್ನು ಪಡೆದನು.

## ಗಂಗೆಗೆ ಭಗೀರಥ ಪ್ರಯತ್ನ

**ದಿಲೀಪಸ್ಯ ತು ದಾಯಾದಃ ಮಹಾರಾಜೋ ಭಗೀರಥಃ ।**
**ಯಃ ಸ ಗಂಗಾಂ ಸರಿಚ್ಛ್ರೇಷ್ಠಾಮ್ ಅವಾತಾರಯತ ಪ್ರಭುಃ ॥ 14 ॥**
**ಕೀರ್ತಿಮಾನ್ ಸ ಮಹಾಭಾಗಃ ಶಕ್ರತುಲ್ಯಪರಾಕ್ರಮಃ ।**
**ಸಮುದ್ರಮಾನಯತ್ ಚೈನಾಂ ದುಹಿತೃತ್ವೇನ ಕಲ್ಪಯತ್ ॥ 15 ॥**
**ತಸ್ಮಾದ್ ಭಾಗೀರಥೀ ಗಂಗಾ ಕಥ್ಯತೇ ವಂಶ ಚಿಂತಕೈಃ ॥ 16 ॥**

ಕಪಿಲನ ನೇತ್ರಾಗ್ನಿಯಿಂದ ಬೂದಿಯಾದ ಮಕ್ಕಳು ಹಿಂತಿರುಗಿ ಬಾರದಿದ್ದರಿಂದ ಖತಿಗೊಂಡ ಸಗರನು ಅಂಶುಮಂತನನ್ನು ಅನ್ವೇಷಣೆಗಾಗಿ ಕಳಿಸಿದನು. ಅವನು ಕಪಿಲ ಋಷಿಯ ಹತ್ತಿರ ಬಂದು ಭಸ್ಮ ಹಾಗೂ ಕುದುರೆಯನ್ನು ನೋಡಿದನು. ತಪ್ಪು ಮಾಡಿದ ತಮ್ಮ ಪೂರ್ವಜರ ಪಾಪ ಪರಿಹರಿಸಬೇಕೆಂದು ಸ್ತುತಿಗೈದನು. ಕಪಿಲನು ಸಂತುಷ್ಟನಾಗಿ ಅಂಶುಮಂತನೇ, ನಿನ್ನ ಪೂರ್ವಜರು ಉದ್ಧಾರವಾಗಲು ಗಂಗೆಯು ಇಳಿದು ಬರಬೇಕು. ಯಜ್ಞ ಕುದುರೆ ತೆಗೆದುಕೊಂಡು ಹೋಗು ಎಂದನು. ಆ ಕುದುರೆಯಿಂದ ಸಗರನು ಯಜ್ಞ ಪೂರ್ಣಗೊಳಿಸಿದನು. ಅಂಶುಮಂತನು ಗಂಗೆಯನ್ನು ತರಲು

ತಪಸ್ಸನ್ನಾಚರಿಸಿದನು. ಗಂಗೆ ತರಲಾಗಲಿಲ್ಲ. ದಿಲೀಪನೂ ಹಾಗೆಯೇ ಗಂಗೆಯನ್ನು ತರದೆ ಕಾಲವಶನಾದನು. ಇವನ ಮಗ ಭಗೀರಥನು ಗಂಗೆಯನ್ನುದ್ದೇಶಿಸಿ ತಪಸ್ಸನ್ನಾಚರಿಸಿದನು. ಗಂಗೆಯು ಪ್ರಸನ್ನಾಳಾದಾಗ ಪಿತೃಭಸ್ಮವನ್ನು ಪವಿತ್ರಗೊಳಿಸೆಂದನು.

ರಾಜನೇ, ನಾನು ಆಕಾಶದಿಂದ ಬಿದ್ದಾಗ ನನ್ನ ವೇಗ ತಡೆಯುವರ್‍ಯಾರಿದ್ದಾರೆ? ಭೂಮಿಯನ್ನೆ ಭೇದಿಸಿ ರಸಾತಲಕ್ಕೆ ಹೋಗಿ ಬಿಡುವೆನು. ಇದಲ್ಲದೆ ನಾನು ಭೂಮಿಗೆ ಬಂದರೆ ಜನರೆಲ್ಲ ತಮ್ಮ ಪಾಪಗಳನ್ನೆಲ್ಲ ನನ್ನಲ್ಲಿ ಬಿಡುವರು. ನನ್ನ ಪಾಪ ಹೋಗುವುದು ಹೇಗೆ ಹೇಳು. ನನ್ನ ಧರಿಸಿರುವರೂ, ನನ್ನ ಪಾಪಕಳೆಯುವರು ಇದ್ದರೆ ನಾನು ಬರುವೆನು ಎಂದಳು.

ಗಂಗೆಯೇ, ಹರಿಭಕ್ತರು ನಿನ್ನಲ್ಲಿ ಮುಳುಗುವುದರಿಂದ ಸಾಲಿಗ್ರಾಮವನ್ನು ನೀರಿನಲ್ಲಿ ಮುಳುಗಿಸಿದಂತೆ ನೀರು ತೀರ್ಥವಾಗುವುದು. ಸಮಸ್ತ ಜಗತ್ತಿಗೆ ಆಶ್ರಯರಾದ ರುದ್ರದೇವರು ನಿನ್ನ ವೇಗವನ್ನು ಧರಿಸುವರು. ಇಳಿದು ಬಾ ತಾಯೇ ಎಂದನು. ರುದ್ರದೇವನನ್ನು ಪ್ರಾರ್ಥಿಸಿದಾಗ ರುದ್ರದೇವನು ಹಾಗೆ ಆಗಲಿ! ಎಂದನು. ಗಂಗೆಯು ವೇಗವಾಗಿ ಬಿದ್ದಾಗ ರುದ್ರದೇವನು ತನ್ನ ಜಟಾಜೂಟದಲ್ಲಿ ಧರಿಸಿದನು. ಒಂದು ಹನಿ ನೀರು ಬೀಳದಂತೆ ಗಗನ ಕೇಶನಾಗಿ ಧರಿಸಿದನು. ಒಂದು ಧಾರೆ ಮಾತ್ರ ಭಗೀರಥನನ್ನು ಹಿಂಬಾಲಿಸಿತು. ಪಿತೃಗಳ ಮೇಲೆ ಹರಿದು ಬೂದಿಯಾದ ಸಾಗರರನ್ನು ಪಾವನಗೊಳಿಸಿದಳು. ಹೀಗೆ ಇಂದ್ರ ಸದೃಶ ಪರಾಕ್ರಮಿ ಭಗೀರಥನು ಸಮುದ್ರ ಪರ್ಯಂತ ಕರೆದೊಯ್ದನು. ಭಗೀರಥನ ಹಿಂದೆ ಅನುಸರಿಸಿ ಹರಿದು ಬಂದು ಅವನ ಮಗಳಾಗಿ ಮೂರು ಲೋಕ ಪಾವನಗೊಳಿಸಿದ್ದರಿಂದ 'ಭಾಗೀರಥೀ' ಎಂದು ಪ್ರಸಿದ್ಧಳಾದಳು.

## ಭಗೀರಥ ವಂಶ

**ಭಗೀರಥ ಸುತೋ ರಾಜಾ ಶ್ರುತ ಇತ್ಯಭಿವಿಶ್ರುತಃ ।**
**ನಾಭಾಗಸ್ತು ಶ್ರುತಸ್ಯಾಸೀತ್ ಪುತ್ರಃ ಪರಮಧಾರ್ಮಿಕಃ ॥ 17 ॥**
**ಅಂಬರೀಷಸ್ತು ನಾಭಾಗಿಃ ಸಿಂಧುದ್ವೀಪಪಿತಾಽಭವತ್ ।**
**ಅಯುತಾಜಿತ್ ತು ದಾಯಾದಃ ಸಿಂಧುದ್ವೀಪಸ್ಯ ವೀರ್ಯವಾನ್ ॥ 18 ॥**

**ಅಯುತಾಜಿತ್ ಸುತಸ್ತ್ವಾಸೀದ್ ಋತುಪರ್ಣೋ ಮಹೀಪತಿಃ ।**
**ದಿವ್ಯಾಕ್ಷಹೃದಯಜ್ಞೋ ವೈ ರಾಜಾ ನಲಸಖೋ ಬಲೀ ॥ 19 ॥**

ಭಗೀರಥನಿಗೆ 'ಶ್ರುತ' ಎಂಬ ಪುತ್ರನಾದನು. ಶ್ರುತನ ಮಗ 'ನಾಭಾಗ'ನು. ನಾಭಾಗನ ಪುತ್ರ 'ಅಂಬರೀಷ'ನು. ಅಂಬರೀಷನ ಮಗನೇ 'ಸಿಂಧುದ್ವೀಪ'ನು. ಸಿಂಧುದ್ವಿಪನ ಸುತನೇ 'ಅಯುತಾಜಿತ್'. ಅಯುತಾಜಿತ್ತಿನ ವರಕುಮಾರನೇ 'ಋತುಪರ್ಣರಾಜ'ನು. ಇವನು ನಳಮಹಾರಾಜನ ಆಪ್ತಮಿತ್ರನಾಗಿದ್ದನು. ಅಕ್ಷವಿದ್ಯೆಯಲ್ಲಿ ಋತುಪರ್ಣನು ಅದ್ವಿತೀಯನಾಗಿದ್ದನು. ಕಲಿಪುರುಷನ ಪ್ರಭಾವದಿಂದಾಗಿ ದ್ಯೂತದಲ್ಲಿ ಸೋತು ನಳರಾಜನು 'ಬಾಹುಕ'ನೆಂಬ ಹೆಸರಿನಿಂದ ಋತುಪರ್ಣನಲ್ಲಿ ಸಾರಥಿಯಾಗಿದ್ದನು. ದಮಯಂತಿಯ ದ್ವಿತೀಯ ವಿವಾಹ ವಾರ್ತೆ ಕೇಳಿದ ಋತುಪರ್ಣ ರಾಜನು ವಿದರ್ಭದೇಶಕ್ಕೆ ಸಾರಥಿ ನಳನೊಂದಿಗೆ ಬರುತ್ತಿರುವಾಗ ದಾರಿಯಲ್ಲಿ ಕುದುರೆಯ ಪರೀಕ್ಷೆಯಲ್ಲಿ ನುರಿತ ನಳನಿಂದ ಅಶ್ವಹೃದಯ ತಿಳಿದ. ಬದಲಾಗಿ ಅಕ್ಷವಿದ್ಯೆಯನ್ನು ನಳನಿಗೆ ಹೇಳಿಕೊಟ್ಟ.

## ಸೌದಾಸ ಕಲ್ಮಾಶಪಾದ[1]ನಾದದ್ದು

**ಋತುಪರ್ಣಸುತಃ ತ್ವಾಸೀತ್ ಆರ್ತುಪರ್ಣಿಃ ಮಹೀಪತಿಃ ।**
**ಸುದಾಸಸ್ತಸ್ಯ ತನಯಃ ರಾಜಾ ತು ಇಂದ್ರಸಖೋಽಭವತ್ ॥ 20 ॥**

---

1. **ಕಲ್ಮಾಶಪಾದ :** ಕಲ್ಮಾಶಪಾದನ ಪತ್ನಿ ಮದಯಂತೀ, ರಾಜನು ಕಾಡಿಗೆ ಹೋಗಿದ್ದಾಗ ಇಬ್ಬರು ರಾಕ್ಷಸದಂಪತಿಗಳು ಹುಲಿವೇಷಧರಿಸಿ ವಿಹರಿಸುತ್ತಿದ್ದರು. ಇವುಗಳಲ್ಲಿ ಹೆಣ್ಣು ಹುಲಿಯನ್ನು ಕೊಂದು ಹಾಕಿದನು. ಗಂಡುಹುಲಿಯು ರಾಕ್ಷಸನಾಗಿ ನಿನಗೆ ಒಂದು ಗತಿ ತೋರುವೆ ಎಂದು ಹೇಳಿ ಮಾಯವಾದನು. ರಾಕ್ಷಸನು ಸೇಡಿಗಾಗಿ ಹೊಂಚು ಹಾಕುತ್ತಿದ್ದನು.

   ಮುಂದೆ ವಸಿಷ್ಠರಿಂದ ಯಜ್ಞ ಮಾಡಿಸಲು ಅನುವಾದ. ವಸಿಷ್ಠರು ಯಜ್ಞ ನಡೆಸುತ್ತಿದ್ದರು. ವಸಿಷ್ಠರು ಸ್ನಾನಕ್ಕೆ ಹೋದಾಗ ರಾಕ್ಷಸನು ವಸಿಷ್ಠರರ ವೇಷದಲ್ಲಿ ಒಂದು ಮಾಂಸಾಹಾರವನ್ನು ಇಂದು ಕಲ್ಪಿಸಬೇಕೆಂದನು. ಮಾಯವಿ ರಾಕ್ಷಸನೆ ಒಂದು ನರಮಾಂಸ ಅಡಿಗೆ ಮಾಡಿ ಹೊರಟುಹೋದ. ವಸಿಷ್ಠರು ಭೋಜನಕ್ಕೆ ಕುಳಿತಾಗ ನರಮಾಂಸ ಬಡಿಸಿದ ಸೌದಾಸನಿಗೆ ನರಮಾಂಸ ತಿನ್ನುವ ರಾಕ್ಷಸನಾಗು ಎಂದು ಶಪಿಸಿದರು. ರಾಜನಿಗೂ ಕೋಪಬಂದು ವಸಿಷ್ಠರಿಗೆ ಪ್ರತಿಶಾಪ ಕೊಡಲು ಹೊರಟಾಗ ಮದಯಂತಿಯು ತಡೆದು ತನ್ನ ಕಾಲ ಮೇಲೆಯೇ ಹಾಕಿಕೊಳ್ಳುವಂತೆ

**ಸುದಾಸಸ್ಯ ಸುತಸ್ತ್ವಾಸೀತ್ ಸೌದಾಸೋ ನಾಮ ಪಾರ್ಥಿವಃ ।**
**ಖ್ಯಾತಃ ಕಲ್ಮಾಶ ಪಾದೋ ವೈ ನಾಮ್ನಾ ಮಿತ್ರಸಹಸ್ತಥಾ ॥ 21 ॥**

ಋತುಪರ್ಣನ ಮಗನೇ ಆರ್ತುಪಣೀ/ಆಪ್ತಪರ್ಣಿಯು/ ಸರ್ವಕಾಮ-ನೆಂಬುವನು. ಆರ್ತುಪರ್ಣಿಯ ಮಗನೇ ಸುದಾಸನು. ಸುದಾಸನು ಇಂದ್ರನ ಪ್ರಿಯಮಿತ್ರನಾಗಿದ್ದನು. ಸುದಾಸನ ತನುಜನೇ ಸೌದಾಸನು. ಇವನು ಕಲ್ಮಾಶಪಾದ, ಅನಮಿತ್ರ ಎಂದು ಪ್ರಸಿದ್ಧನಾಗಿದ್ದನು. ಸೌದಾಸನು ತನ್ನ ಪಾದದ ಮೇಲೆ ತನ್ನ ಶಾಪೋದಕವನ್ನು ಹಾಕಿಕೊಂಡು ಕಾಲು ಸುಟ್ಟು ಹೋಗಿ 'ಕಲ್ಮಾಶಪಾದ' ಎನಿಸಿದನು.

## ಕಲ್ಮಾಶಪಾದ ವಂಶ

**ಕಲ್ಮಾಶಪಾದಸ್ಯ ಸುತಃ ಸರ್ವಕರ್ಮೇತಿ ವಿಶ್ರುತಃ ।**
**ಅನರಣ್ಯಸ್ತು ಪುತ್ರೋಽಭೂತ್ ವಿಶ್ರುತಃ ಸರ್ವಕರ್ಮಣಃ ॥ 22 ॥**
**ಅನರಣ್ಯಸುತಃ ನಿಘ್ನೋ ನಿಘ್ನಪುತ್ರೌ ಬಭೂವತುಃ ।**

ಕಲ್ಮಾಶಪಾದನ ಪುತ್ರನು 'ಸರ್ವಕರ್ಮ'ನು. ಸರ್ವಕರ್ಮನ ತನುಜನೆ 'ಅನರಣ್ಯ', ಅನರಣ್ಯನ ಮಗನೇ 'ನಿಘ್ನನು'. ನಿಘ್ನರಾಜನಿಗೆ 'ಅನಮಿತ್ರ-ರಘು'ಯೆಂಬ ಇಬ್ಬರು ಪುತ್ರರು. ಇವರಿಬ್ಬರೂ ಚಕ್ರವರ್ತಿಗಳಾಗಿ ಮೆರೆದರು.

ಅನಮಿತ್ರನಿಗೆ ಮಹಾನುಭಾವನಾದ 'ದುಲಿದುಹ'ನು ಪುತ್ರನಾದನು.

ಈ ದುಲಿದುಹನಿಗೆ 'ಎರಡನೇ ದಿಲೀಪರಾಜ'ನು ಮಗನಾದನು. ಇವನು ಶ್ರೀರಾಮಚಂದ್ರನ ವೃದ್ಧಪ್ರಪಿತಾಮಹನಾಗಿದ್ದನು. ದಿಲೀಪನಿಗೆ ಮಹಾಬಾಹುವಾದ 'ರಘು' ಎಂಬ ರಾಜನು ಪುತ್ರನಾದನು. ರಘುರಾಜನು

---

ಹೇಳಿದಳು. ಇದರಿಂದ ರಾಜನ ಕಾಲು ಉದ್ದಿನಕಾಳಿನಂತೆ ಕಪ್ಪಾಯಿತು. ಇದಕ್ಕಾಗಿ ಕಲ್ಮಾಶಪಾದ ಎನಿಸಿದನು. ವಶಿಷ್ಠರು ಶಾಪ ನಿಡಿದಾಗ ಕಿಂಕರನೆಂಬ ರಾಕ್ಷಸನನ್ನು ಸೇರಿಸಿದ ವಿಶ್ವಾಮಿತ್ರರು ವಶಿಷ್ಠರ ನೂರು ಮಕ್ಕಳನ್ನು ಇವನಿಂದ ಕೊಲ್ಲಿಸಿದ. ಇದಲ್ಲದೆ ಮತ್ತೊಮ್ಮೆ ಶಕ್ತಿಯೊಂದಿಗೆ ಅವನ ಪತ್ನಿ ವಿಹಾರ ಮಾಡುತ್ತಿರುವಾಗ ಶಕ್ತಿಯನ್ನು ತಿಂದು ಹಾಕಿದ್ದರಿಂದ 'ನೀನು ಪತ್ನಿಯ ಸಂಪರ್ಕ ಮಾಡಿದರೆ ಸಾಯುವಿ' ಎಂದು ಶಪಿಸಿ ಅವಳೂ ಸಹಗಮನ ಮಾಡಿದಳು. ಹನ್ನೆರಡು ವರ್ಷ ಕಳೆದ ಮೇಲೆ ಸಂತಾನಕ್ಕಾಗಿ ವಸಿಷ್ಠರಿಂದ ನಿಯೋಗ ಪದ್ಧತಿಯಿಂದ ತನ್ನ ಪತ್ನಿಯಲ್ಲಿ ಅಶ್ಮಕನನ್ನು ಪಡೆದ.

ಅಯೋಧ್ಯೆಯಲ್ಲಿ ಚಕ್ರವರ್ತಿಯಾಗಿ ಬೆಳಗಿದನು. ರಘುವಿನಿಂದ 'ಅಜ'ನು ಜನಿಸಿದನು. ಅಜನಿಂದ '**ದಶರಥ**'[2]ನು ಹುಟ್ಟಿದನು.

## ಶ್ರೀರಾಮಾವತಾರ

**ರಾಮೋ ದಶರಥಾದ್ ಜಜ್ಞೇ ಧರ್ಮಾತ್ಮಾ ಸುಮಹಾಯಶಾಃ ।**

ದಶರಥನ ಮಗನೇ ಸಾಕ್ಷಾತ್ ಶ್ರೀಹರಿಯ ಅವತರಭೂತನಾದ '**ಶ್ರೀರಾಮಚಂದ್ರ**'[3]ನು.

---

2. **ದಶರಥ** :

ದಶರಥನು ಪದ್ಮಪುರಾಣದಲ್ಲಿ ಸ್ವಾಯಂಭುವ ಮನುವೆಂದೂ, ರಘುರಾಜನ ವಂಶದಲ್ಲಿ ಹುಟ್ಟಿದನೆಂದೂ, ಇವನ ಎರಡನೇ ಜನ್ಮ ವೃಷ್ಣೀವಂಶದಲ್ಲಿ ವಸುದೇವ ಎಂದು ಹತ್ತು ಸಾವಿರ ವರ್ಷಗಳು ಕಳೆದಾಗ ಶಂಬಲ ಗ್ರಾಮದಲ್ಲಿ ವಿಷ್ಣು ಯಶಸ್ಸಾಗಿ ಹುಟ್ಟಿದನೆಂದೂ ಹೇಳಲಾಗಿದೆ. ಅಂಶಾವತರದಲ್ಲಿ ಪಂಡಿತಾಚಾರ್ಯರು ಸ್ವಾಯಂಭುವ ಮನುವಿನ ಅವತಾರವೆಂದೆ ಹೇಳಿದ್ದಾರೆ. ವಾಮನಪುರಾಣದಲ್ಲಿ ವೈವಸ್ವತ ಮನುವಿನ ಅಂಶವೆಂದು ಹೇಳಲಾಗಿದೆ.

ಶ್ರೀಮದಾಚಾರ್ಯರು –ತಾ. ನಿರ್ಣಯದಲ್ಲಿ '**ಸ ಕಶ್ಯಪೋ ದ್ರಾಕ್**' ಎಂದು ದಶರಥನು ಕಶ್ಯಪನ ಸಾಕ್ಷಾತ್ ಅವತಾರವೆಂದಿದ್ದಾರೆ. ವಿರುದ್ಧದಂತೆ ತೋರುವ ವಾಕ್ಯಗಳಿಗೆ ಸತ್ಯಧರ್ಮರು – ಕಶ್ಯಪನೇ ದಶರಥನು ಅವನಲ್ಲಿ ಸ್ವಾಯಂಭುವನ ಅಂಶವಿದೆ. ಹಾಗೆ ವೈವಸ್ವತಮನುವಿನ ಅಂಶವಿದೆಯಂದು ಕೂಡಿಸಿದ್ದರೆ. **ವಿವಸ್ವತಃ ತಂತುಭವಸ್ಯ** ಎಂಬ ವಾಕ್ಯಕ್ಕೆ ವೈವಸ್ವತ ಮನುವಿನ ವಂಶದಲ್ಲಿ ಬಂದವನೆಂದೂ ಅರ್ಥೈಸಬಹುದು.

---

3. **ಶ್ರೀರಾಮ** : ಶ್ರೀರಾಮನು ಹದಿಮೂರು ಸಾವಿರ ವರ್ಷ ರಾಜ್ಯವಾಳಿದನೆಂದು ಭಾಗವತ ಹೇಳಿದೆ. '**ತ್ರಯೋದಶಾಬ್ದ ಸಾಹಸ್ರಂ ಅಗ್ನಿಹೋತ್ರಮಖಂಡಿತಮ್** । ರಾಮಾಯಣದಲ್ಲಿ '**ದಶವರ್ಷ ಸಹಸ್ರಾಣೀ ದಶವರ್ಷಶತಾನಿಚ**' ಎಂದು ಹನ್ನೊಂದು ಸಾವಿರ ವರ್ಷ ಎಂದಿದೆ. ವಿಷ್ಣುಪುರಾಣದಲ್ಲಿ ಹನ್ನೆರಡು ಸಾವಿರ ವರ್ಷ ಎನ್ನಲಾಗಿದೆ. ಇದರಿಂದ ವಿರೋಧ ಎನ್ನಬಾರದು. ನಕ್ಷತ್ರ ಮಾಸದಿಂದ ಲೆಕ್ಕ ಮಾಡಿದರೆ ಹದಿಮೂರು ಸಹಸ್ರ ವರ್ಷಗಳೆಂದು ಭಾಗವತ ಹೇಳಿದೆ. 324 ದಿನಗಳಿಗೆ ಒಂದು ವರ್ಷ 13000 x 324 = 42,12,000 ವರ್ಷಗಳು. 360 ರಿಂದ ಭಾಗಿಸಿದಾಗ 11700 ವರ್ಷಗಳು ಬರುತ್ತವೆ. ಈ ಏಳುನೂರು ವರ್ಷಗಳಾದರೂ ಸೀತೆಯು ಭೂಮಿ ಪ್ರವೇಶ ಮಾಡಿದ ನಂತರವೂ ಇದ್ದದ್ದು.

'**ಅತೋ ದ್ವಾದಶಸಾಹಸ್ರಂ ರಾಮೋರಾಜ್ಯಂ ಚಕಾರ**' ಎಂಬ ವಿಷ್ಣುಪುರಾಣ ಸೌರಮಾನ ಪ್ರಕಾರ ಹೇಳಿದ್ದು. 360 ದಿನಗಳಿಗೆ ವತ್ಸರದಂತೆ 11 ಸಾವಿರ ವರ್ಷ.

## ಶ್ರೀರಾಮನ ವಂಶಾವಳೀ

**ರಾಮಸ್ಯ ತನಯೋ ಜಜ್ಞೇ ಕುಶ ಇತ್ಯಭಿವಿಶ್ರುತಃ ।**
**ಅತಿಥಿಸ್ತು ಕುಶಾದ್ ಜಜ್ಞೇ ನಿಷಧಸ್ತಸ್ಯ ಚಾತ್ಮಜಃ ॥ 23 ॥**

ಶ್ರೀರಾಮಚಂದ್ರನಿಗೆ **ಕುಶ–ಲವ**[4]ರೆಂಬ ಅವಳ ಮಕ್ಕಳನ್ನು ಪಡೆದನು.

ಕುಶನಿಗೆ 'ಅತಿಥಿಯು' ಮಗನಾದನು. ಅತಿಥಿಗೆ 'ನಿಷಧನು', ನಿಷಧನ ಮಗ 'ನಲ'ನು. ನಲನ ಮಗ 'ನಭ'ನು. ನಭನಿಗೆ ಪುಂಡರೀಕನು, ಪುಂಡರೀಕನಿಗೆ ಕ್ಷೇಮಧನ್ವನು. ಇವನಿಗೆ 'ದೇವಾನೀಕ'ನು, ದೇವಾನೀಕನಿಗೆ 'ಅಹೀನಗು' ಪುತ್ರನು, ಅಹೀನಗುವಿಗೆ 'ಸುಧಾನ್ವಾ'ನನು, ಇವನಿಗೆ 'ಅನಲ'ನು, ಅನಲನಿಗೆ 'ಉಕ್ಥ್ಯ'ನು, ಉಕ್ಥ್ಯನಿಗೆ 'ವಜ್ರನಾಭ'ನು, ವಜ್ರನಾಭನಿಗೆ 'ಶಂಖ'ನು. ಇವನೇ 'ವ್ಯುಷಿತಾಶ್ವ'ನೆಂದು ಖ್ಯಾತನಾದನು.

ವ್ಯುಷಿತಾಶ್ವನ ಮಗ 'ಪುಷ್ಪ'ನು. ಪುಷ್ಪನಿಗೆ 'ಅರ್ಥಸಿದ್ಧಿ'ಯು, ಅರ್ಥಸಿದ್ಧಿಗೆ 'ಸುದರ್ಶನ'ನೂ, ಸುದರ್ಶನಿಗೆ 'ಅಗ್ನಿವರ್ಣ'ನೂ, ಅಗ್ನಿವರ್ಣನಿಗೆ 'ಶೀಘ್ರ'ನೂ ಶೀಘ್ರನಿಗೆ 'ಮರು'ವು, ಮರುವಿನ ಮಗನೇ ಪ್ರಖ್ಯಾತನಾದ 'ಬೃಹದ್ಬಲ'ನು.

---

4. **ಲವ–ಕುಶ :**

ಕುಶನು ಇಂದ್ರದೇವನು, ಲವನು ಅಗ್ನಿಯ ಅವತಾರ. ಇಂದ್ರ ಹಾಗೂ ಅಗ್ನಿಗಳು ಸೀತಾಕೃತಿಯಲ್ಲಿದ್ದು ಇಂದ್ರನೂ, ಕೈಲಾಸಕ್ಕೆ ಹೋಗಿ ಬರಲು ದ್ವಾರವಾಗಿ ಅಗ್ನಿಯೂ ಸೀತಾದೇವಿಯ ಸೇವೆ ಸಲ್ಲಿಸಿದ್ದರಿಂದ ಅವರಿಬ್ಬರನ್ನೂ ಪುತ್ರರನ್ನಾಗಿ ಮಾಡಿಕೊಂಡಳು.

ಹರಿವಂಶದಲ್ಲಿ ಕುಶವೊಬ್ಬನನ್ನೆ ಹೇಳಿದ್ದರೂ **'ಕುಶೋಲವ ಇತಿಖ್ಯಾತೌ ಸಾ ಸುಷುವೇ ಸುತೌ'** ಎಂದು ಭಾಗವತ (9/9/11) ಹೇಳಿದ್ದರಿಂದ ಇಬ್ಬರನ್ನೂ ಸ್ವೀಕರಿಸಬೇಕು.

ಇದೇ ರೀತಿ ಲಕ್ಷ್ಮಣನಿಗೆ ಅಂಗದ, ಚಕ್ರಕೇತುವೂ, ಭರತನಿಗೆ ತಕ್ಷ, ಪುಷ್ಕಲನೆಂದೂ, ಶತ್ರುಘ್ನನಿಗೆ ಸುಬಾಹು ಶ್ರುತಸೇನನೆಂಬ ಮಕ್ಕಳು ಆದರು.

ರಾಮವೆಂಬ ಶಬ್ದವು ರ + ಆ + ಮ, ಆ ಶಬ್ದವು ಪೂರ್ಣವೆಂದು ಹೇಳುತ್ತದೆ. ರ = ಆನಂದ, ಮ = ಜ್ಞಾನ. ಜ್ಞಾನಾನಂದ ಪೂರ್ಣನೆ ರಾಮನು.

**ನಿತ್ಯಪೂರ್ಣಸುಖಜ್ಞಪ್ತಿ ರೂಪೋಽಸೌ ಯತೋ ವಿಭುಃ ।**
**ಅತೋಽಸ್ಯ ರಾಮ ಇತ್ಯಾಖ್ಯಾ ತಸ್ಯ ದುಃಖಂ ಕುತೋಽಣ್ವಪಿ ॥**

ರಾಮನು ಹದಿಮೂರು ಸಾವಿರ ವರ್ಷದವರೆಗೆ ಅಖಂಡ ಬ್ರಹ್ಮಚರ್ಯವ್ರತದಲ್ಲಿದ್ದನು.

ಪುರಾಣದಲ್ಲಿ ಪ್ರಸಿದ್ಧರಾದ ಇಬ್ಬರು ನಲರಾಜರಿರುವರು. ವೀರಸೇನನ ಪುತ್ರನೊಬ್ಬ. ಇಕ್ಷ್ವಾಕು ವಂಶದ ನಿಷಧರಾಜನ ಮಗನೆಂದು.

**ಇಕ್ಷ್ವಾಕು ವಂಶ ಪ್ರಭವಾಃ ಪ್ರಾಧಾನ್ಯೇನ ಕೀರ್ತಿತಾಃ ।**
**ಏತೇ ವಿವಸ್ವತಃ ವಂಶೇ ರಾಜಾನೋ ಭೂರಿತೇಜಸಃ ॥ 24 ॥**
**ಪಠನ್ ಸಮ್ಯಗಿಮಾಂ ಸೃಷ್ಟಿಮಾದಿತ್ಯಸ್ಯ ವಿವಸ್ವತಃ ।**
**ಶ್ರಾದ್ಧದೇವಸ್ಯ ದೇವಸ್ಯ ಪ್ರಜಾನಾಂ ಪುಷ್ಟಿದಸ್ಯ ಚ ॥ 25 ॥**
**ಪ್ರಜಾವಾನೇತಿ ಸಾಯುಜ್ಯಂ ಆದಿತ್ಯಸ್ಯ ವಿವಸ್ವತಃ ।**
**ವಿಪಾಪ್ಮಾ ವಿರಜಶ್ಚೈವ ಆಯುಷ್ಮಾಂಶ್ಚ ಭವತ್ಯುತ ॥ 26 ॥**

ಜನಮೇಜಯನೇ ! ಯಾರು ಅದಿತಿಯ ಪುತ್ರನೂ, ಶ್ರಾದ್ಧದೇವನೆಂದು ಪ್ರಜೆಗಳಗೆ ಪುಷ್ಟಿ ನೀಡುವವನೂ ಆದ ಸೂರ್ಯದೇವನ ವಂಶವನ್ನು ಪಾರಾಯಣ ಮಾಡುವನೋ ಅವನು ಶುಭಸಂತಾನ ಪಡೆಯುವನು.

ರಜೋಗುಣರಹಿತನೂ ಪಾಪರಹಿತನೂ ಆಗಿ ದೀರ್ಘಾಯುಷ್ಮಂತ-ನಾಗುವನು. ನಂತರ ಆದಿತ್ಯನ ಸಾಯುಜ್ಯವನ್ನೇ ಪಡೆಯುವನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವೈವಸ್ವತ ವಂಶಾವಳಿಯಲ್ಲಿ ರಘುವಂಶವೆಂಬಲ್ಲಿ
ಹದಿನೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 16 ಹರಿಪರ್ವ

# ಅಥ ಷೋಡಶೋಽಧ್ಯಾಯಃ

## ಶ್ರಾದ್ಧ ಕಲ್ಪ

*ಜನಮೇಜಯ ಉವಾಚ –*

**ಕಥಂ ವೈ ಶ್ರಾದ್ಧ ದೇವತ್ವಂ ಆದಿತ್ಯಸ್ಯ ವಿವಸ್ವತಃ ।**
**ಶ್ರೋತುಮಿಚ್ಛಾಮಿ ವಿಪ್ರಾಗ್ರ್ಯ ಶ್ರಾದ್ಧಸ್ಯ ಚ ಪರಂ ವಿಧಿಮ್ ॥ 1 ॥**
**ಸ್ವರ್ಗಸ್ಥಾಃ ಪಿತರೋ ಯೇ ಚ ದೇವಾನಾಮಪಿ ದೇವತಾಃ ॥ 2 ॥**
**ಯೇ ಚ ತೇಷಾಂ ಗಣಾಃ ಪ್ರೋಕ್ತಾಃ ಯಚ್ಚ ತೇಷಾಂ ಬಲಂ ಪರಮ್ ।**
**ಯಥಾ ಚ ಕೃತಮಸ್ಮಾಭಿಃ ಶ್ರಾದ್ಧಂ ಪ್ರೀಣಾತಿ ವೈ ಪಿತೄನ್ ॥ 3 ॥**
**ಪ್ರೀತಾಶ್ಚ ಪಿತರೋ ಯೇ ಸ್ಮ ಶ್ರೇಯಸಾ ಯೋಜಯಂತಿ ಹಿ ।**
**ಏವಂ ವೇದಿತುಮಿಚ್ಛಾಮಿ ಪಿತೄಣಾಂ ಸರ್ಗಮುತ್ತಮಮ್ ॥ 4 ॥**

ವೈಶಂಪಾಯನರೇ, ಸೂರ್ಯದೇವನಿಗೆ ಶ್ರಾದ್ಧದೇವನೆಂದು ಹೆಸರು ಹೇಗೆ ಬಂತು? ಶ್ರಾದ್ಧದ ವಿಧಿ ವಿಧಾನಗಳನ್ನು ತಿಳಿಸಿರಿ. ಪಿತೃಗಳೆಂದರೆ ಯಾರು? ಪಿತೃಗಳ ಸೃಷ್ಟಿ ಹೇಗಾಯಿತು. ಸ್ವರ್ಗದಲ್ಲಿರುವ ಪಿತೃಗಳು ದೇವತೆಗಳಿಗಿಂತಲೂ ಶ್ರೇಷ್ಠರೆಂದು ಕೇಳಿರುವೆನು. ಅದು ಹೇಗೆ? ಪಿತೃಗಣಗಳೆಷ್ಟು? ಅವರ ಬಲವೆಂತು? ನಾವು ಮಾಡಿದ ಶ್ರಾದ್ಧಾದಿಗಳಿಂದ ಅವರಿಗೆ ತೃಪ್ತಿ ಹೇಗಾಗುತ್ತದೆ? ಭೂಲೋಕದ ಮಾನವರಾದ ನಾವು ಮಾಡುವ ಪಿಂಡದಾನವು ಸ್ವರ್ಗದಲ್ಲಿರುವ ಪಿತೃಗಳಿಗೆ ಮುಟ್ಟುವ ಬಗೆ ಹೇಗೆ? ಹಾಗೆಯೇ ಬೇರೆ ಪಶು ಪಕ್ಷಿ ಕೀಟ ಜನ್ಮಗಳಲ್ಲಿ ಹುಟ್ಟಿರಬಹುದಾದ ಪಿತೃಗಳಿಗೆ ನಾವಿತ್ತ

ಅಕ್ಕಿಯ ಅನ್ನ ಹೇಗೆ ಉಪಯುಕ್ತವಾಗುವುದು? ಈ ಶ್ರಾದ್ಧವನ್ನು ಮಾಡಿದರೆ ನಮಗೇನು ಫಲ? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸಿರಿ ಎಂದನು.

### ಪಿತೃಗಳು

**ಹಂತ ತೇ ಕಥಯಿಷ್ಯಾಮಿ ಪಿತೄಣಾಂ ಸರ್ಗಮುತ್ತಮ್ ।**
**ಯಥಾ ಚ ಕೃತಮಸ್ಮಾಭಿಃ ಶ್ರಾದ್ಧಂ ಪ್ರೀಣಾತಿ ವೈ ಪಿತೄನ್ ॥ 5 ॥**
**ಪ್ರೀತಾಶ್ಚ ಪಿತರೋ ಯೇ ಸ್ಮ ಶ್ರೇಯಸಾ ಯೋಜಯಂತಿ ಹಿ ।**
**ಮಾರ್ಕಂಡೇಯೇನ ಕಥಿತಂ ಭೀಷ್ಮಾಯ ಪರಿಪೃಚ್ಛತೇ ॥ 6 ॥**

ಜನಮೇಜಯನೇ ಪಿತೃಗಳ ಸೃಷ್ಟಿ ಕ್ರಮವನ್ನು, ಶ್ರಾದ್ಧದಿಂದ ಅವರಿಗೆ ಹೇಗೆ ತೃಪ್ತಿಯಾಗುತ್ತದೆ ಎಂಬುದನ್ನು ಪ್ರೀತರಾದ ಪಿತೃಗಳು ನಮಗೆ ಯಾವ ರೀತಿಯ ಶ್ರೇಯಸ್ಸನ್ನು ನೀಡುತ್ತಾರೆಂಬುದನ್ನೂ ವಿಸ್ತಾರವಾಗಿ ಹೇಳುತ್ತೇನೆ ಕೇಳು.

### ಶ್ರಾದ್ಧ ಕುರಿತು ಮಾರ್ಕಂಡೇಯ-ಭೀಷ್ಮ ಸಂವಾದ

**ಅಪೃಚ್ಛದ್ ಧರ್ಮರಾಜೋ ಹಿ ಶರತಲ್ಪಗತಂ ಪುರಾ ।**
**ಏವಮೇವ ಪುರಾ ಪ್ರಶ್ನಂ ಯನ್ ಮಾಂ ತ್ವಂ ಪರಿಪೃಚ್ಛಸಿ ॥ 7 ॥**

ವೈಶಂಪಾಯನರು ರಾಜನಿಗೆ ಇದೇ ಪ್ರಶ್ನೆಯನ್ನೇ ಹಿಂದೆ ಭೀಷ್ಮನು ಮಾರ್ಕಂಡೇಯರನ್ನು ಪ್ರಶ್ನಿಸಿದ್ದನು. ಭೀಷ್ಮನು ಶರತಲ್ಪದಲ್ಲಿ ಮಲಗಿರುವಾಗ ಧರ್ಮರಾಜನೂ ಸಹ ನೀನು ಕೇಳಿದ ಪ್ರಶ್ನೆಗಳನ್ನೆ ಕೇಳಿದ್ದನು. ಮಾರ್ಕಂಡೇಯರಾದರೂ ಹಿಂದೆ ಸನತ್ಕುಮಾರರನ್ನು ಪ್ರಶ್ನಿಸಿ ಸರಿಯಾದ ಉತ್ತರವನ್ನು ಪಡೆದಿದ್ದರು. ಅವುಗಳನ್ನು ನಾನು ನಿನಗೆ ಯುಧಿಷ್ಠಿರ-ಭೀಷ್ಮನಿಗೂ ನಡೆದ ಸಂಭಾಷಣೆಯನ್ನು ಹೇಳುವೆ.

*ಧರ್ಮ ಉವಾಚ -*

**ಪುಷ್ಟಿಕಾಮೇನ ಧರ್ಮಜ್ಞ ಕಥಂ ಪುಷ್ಟಿರವಾಪ್ಯತೇ ।**
**ಏತದ್ವೈ ಶ್ರೋತುಮಿಚ್ಛಾಮಿ ಕಿಂ ಕುರ್ವಾಣೋ ನ ಶೋಚತಿ ॥ 8 ॥**

*ಭೀಷ್ಮ ಉವಾಚ -*

**ಶ್ರಾದ್ಧೈಃ ಪ್ರೀಣಾತಿ ಹಿ ಪಿತೄನ್ ಸರ್ವಕಾಮ ಫಲೈಸ್ತು ಯಃ ।**
**ತತ್ಪರಃ ಪ್ರಯತಃ ಶ್ರಾದ್ಧೀ ಪ್ರೇತ್ಯ ಚೇಹ ಚ ಮೋದತೇ ॥ 9 ॥**

ಧರ್ಮಿಷ್ಠ ಭೀಷ್ಮನೇ, ಪುಷ್ಟಿಯನ್ನು ಇಚ್ಛಿಸುವ ಮನುಷ್ಯನು ಪುಷ್ಟಿಯನ್ನು ಹೊಂದುವುದು ಹೇಗೆ? ಯಾವುದನ್ನು ಮಾಡಿದರೆ ದುಃಖಕ್ಕೆ ಈಡಾಗುವುದಿಲ್ಲ ಎಂದ ತಿಳಿಸು ಎಂದಾಗ – ಯುಧಿಷ್ಠಿರನೇ, ಸರ್ವೇಷ್ಟಗಳನ್ನು ಪೂರ್ಣ ಮಾಡಬಹುದಾದದ್ದು 'ಶ್ರಾದ್ಧ'ವೊಂದೆ. ಯಾವನು ಪಿತೃಗಳನ್ನು ತೃಪ್ತಿಪಡಿಸುವನೋ ಅಂತಹ ಶ್ರಾದ್ಧ ಶ್ರದ್ಧಿಯು ಇಹ–ಪರಂಗಳಲ್ಲಿ ಸುಖವನ್ನು ಹೊಂದುವನು.

ಶ್ರಾದ್ಧದಿಂದ ತೃಪ್ತರಾದ ಪಿತೃಗಳು ಧರ್ಮದಲ್ಲಿ ಆಸಕ್ತಿ ಬೇಕಿದ್ದರೆ ಧರ್ಮಾಸಕ್ತಿಯನ್ನೂ, ಪುತ್ರಾದಿಕಾಮನಿಗೆ ಸತ್ ಸಂತಾನವನ್ನೂ, ದೈಹಿಕ ಪುಷ್ಟಿಯನ್ನರಸುವವನಿಗೆ ಪುಷ್ಟಿಯನ್ನೂ ನೀಡುವರು. ಆದ್ದರಿಂದ ಶ್ರಾದ್ಧಾದಿಗಳಿಂದ ಅವರನ್ನು ತೃಪ್ತಿಪಡಿಸಬೇಕು.[1]

## ಶ್ರಾದ್ಧ ಯಾರಿಗೆ ? ಪಿತೃಗಳಾರು?

*ಧರ್ಮರಾಜ ಉವಾಚ –*

**ವರ್ತಂತೇ ಪಿತರಃ ಸ್ವರ್ಗೇ ಕೇಷಾಂಚಿನ್ ನರಕೇ ಪುನಃ ।**
**ಪ್ರಾಣಿನಾಂ ನಿಯತಂ ವಾಪಿ ಕರ್ಮಜಂ ಫಲಮುಚ್ಯತೇ ॥ 10 ॥**

**ಅಭಿಸಂಧಾಯ ಪಿತರಂ ಪಿತುಶ್ಚ ಪಿತರಂ ತಥಾ ।**
**ಪಿತುಃ ಪಿತಾಮಹಂ ಚೈವ ತ್ರಿಷು ಪಿಂಡೇಷು ನಿತ್ಯಶಃ ।**
**ತಾನಿ ಶ್ರಾದ್ಧಾನಿ ದತ್ತಾನಿ ಕಥಂ ಗಚ್ಛಂತಿ ವೈ ಪಿತೄನ್ ॥ 11 ॥**

---

1. ಶ್ರಾದ್ಧದಿಂದ ತೃಪ್ತಿ ಹೊಂದಿದ ಪಿತೃದೇವತೆಯು ಕರ್ತನಿಗೆ ಸತ್ಪುತ್ರರನ್ನೂ, ಪಿತಾಮಹನು ಗವಾದಿ ಸಂಪತ್ತನ್ನೂ, ಪ್ರಪಿತಾಮಹನು ಧನರತ್ನ ಸಂಪತ್ತುಗಳನ್ನು ಊರ್ಧ್ವಪ್ರಪಿತಾಮಹನು ಅಶನ–ವಸನಗಳನ್ನೂ ಕೊಡುವನು.

   **ಪಿತಾ ದದಾತಿ ಸತ್ಪುತ್ರಾನ್ ಗೋಧನಾನಿ ಪಿತಾಮಹಃ ।**
   **ಧನದಾತಾ ಭವೇತ್ ಸೋಽಪಿ ಯಸ್ತಸ್ಯ ಪ್ರಪಿತಾಮಹಃ ॥**
   **ದದ್ಯಾತ್ ವಿಪುಲ ಮನ್ನಾದ್ಯಂ ವೃದ್ಧಸ್ತು ಪ್ರಪಿತಾಮಹಃ ।**
   **ತೃಪ್ತಾಃ ಶ್ರಾದ್ಧೇನ ತೇ ಸರ್ವೇ ದತ್ವಾ ಪುತ್ರಸ್ಯ ವಾಂಛಿತಮ್ ॥** – *ಗರುಡಪುರಾಣ*

**ಕೇ ವಾ ತೇ ಪಿತರೋಽನ್ಯೇ ಸ್ಮ ಕಾನ್ ಯಜಾಮೋ ವಯಂ ಪುನಃ ।**
**ದೇವಾ ಅಪಿ ಪಿತೄನ್ ಸ್ವರ್ಗೇ ಯಜಂತೀತಿ ಚ ನಃ ಶ್ರುತಮ್ ॥ 12 ॥**

**ಭೀಷ್ಮನೇ.** ಪ್ರಾಣಿಗಳಿಗೆ ಅವರವರ ಕರ್ಮದಂತೆ ಫಲವು ನಿಯತವಾಗಿರುತ್ತದೆ. ಅವರವರು ಮಾಡಿದ ಕರ್ಮಕ್ಕೆ ತಕ್ಕಂತೆ ಫಲ ಲಭಿಸುತ್ತದೆ. ಹೀಗಾಗಿ ಪಿತೃಗಳು ಕರ್ಮಾನುಸಾರವಾಗಿ ಸ್ವರ್ಗ/ನರಕಕ್ಕೆ ಹೋಗುವವರು. ನೀನು ತಿಳಿಸಿದಂತೆ ಮಾನವರು ಪಿತೃಗಳು ಪಿತೃ-ಪಿತಾಮಹ-ಪ್ರಪಿತಾಮಹರನ್ನುದ್ದೇಶಿಸಿ ಶ್ರಾದ್ಧ ಮಾಡುವರು. ಅವರಿಗಾಗಿ ತ್ರಿಪಿಂಡಗಳನ್ನು ಇಟ್ಟು ಶ್ರಾದ್ಧ ಮಾಡಿದರೆ ಅವರಿಗೆ ತಲುಪುವುದು ಹೇಗೆ? ಪಿತೃಗಳು ನರಕಕ್ಕೆ ಹೋಗಿದ್ದರೆ ಅವರು ನಮಗೆ ಇಷ್ಟಾರ್ಥ ನೀಡಲು ಹೇಗೆ ಸಮರ್ಥರಾಗುತ್ತಾರೆ? ಅಥವಾ ಪಿತೃಗಳೆಂದರೆ ನಮ್ಮ ಪೂರ್ವಜರಿಗಿಂತಲೂ ಭಿನ್ನರಾದವರು ಇರುವರೆ ? ಇದ್ದರೆ ಅವರಾರು? ನಾವು ಯಾವ ಪಿತೃ ದೇವತೆಗಳನ್ನು ಪೂಜಿಸಬೇಕು. ಸ್ವರ್ಗದಲ್ಲಿರುವ ದೇವತೆಗಳು ಪಿತೃಗಳನ್ನು ಪೂಜಿಸುವರಂತೆ. ಅವರು ಪೂಜಿಸುವ ಪಿತೃಗಳೆಂದರೆ ಯಾರು?[2] ಎಂದು ಪ್ರಶ್ನಿಸಿದನು.

---

2. **ಪಿತೃಗಳು ಯಾರು? :** ಪಿತೃಗಳಲ್ಲಿ ಎರಡು ಬಗೆ – ಚಿರ, ಅಚಿರ ಪಿತೃಗಳು. ಚಿರಪಿತೃಗಳು ಮೃತರಾದ ನಮ್ಮ ಅಚಿರಪಿತೃಗಳನ್ನು ಶ್ರಾದ್ಧದಿಂದ ಸಂತೋಷ-ಪಡಿಸುವರು.

   **ಕರ್ತ್ರಾ ಚಾರಾಧ್ಯಮಾನಾಸ್ತೇ ನಾಮಗೋತ್ರಾದಿಕೀರ್ತನೈಃ ।**
   **ಪಿತೄನ್ ಚಾಪ್ಯಾಯಯಿಷ್ಯಂತಿ ಸ್ವರ್ಗಸ್ಥಾನಪಿ ಪ್ರಾಣಿನಃ ॥**

   ಚಿರಪಿತೃಗಳಲ್ಲಿ ಅಗ್ನಿಷ್ವಾತ್ತರು, ಬರ್ಹಿಷದರು, ವೈರಾಜರು ಎಂದೂ, ಸುಕಾಲ, ಅಂಗೀರಸ ಸುಸ್ವಧರು, ಸೋಮಪರು ಎಂದು ಪುನಃ ಅಮೂರ್ತರ ನಾಲ್ಕು ಗಣಗಳಿವೆ.

   ಇವರೆಲ್ಲರೂ ಚಂದ್ರನ ಮೇಲೆ ಇರುವ ಸನಾತನವೆಂಬ ಪ್ರತ್ಯೇಕ ಏಳು ಲೋಕಗಳಲ್ಲಿರುವರು.

   ಮೃತರಾದ ನಮ್ಮ ಪಿತೃಗಳು ಈ ಗುಂಪಿಗೆ ಸೇರುವುದಿಲ್ಲ. ಕೆಲವರಿಂದ ಕೆಲವು ಕಾಲದಲ್ಲಿ ಮಾತ್ರ ಪಿತೃಗಳೆಂದು ಕರೆಸಿಕೊಳ್ಳುವರು. ಶ್ರಾದ್ಧಾರಾಧನೆಯಿಂದ ತೃಪ್ತರಾದ ಚಿರಪಿತೃಗಳು ನಮ್ಮ ಮೃತ ಪಿತೃಗಳನ್ನು ತುಷ್ಟಿಗೊಳಿಸುವರು. ಅಗ್ನಿಷ್ವಾತ್ತಾದಿಗಳು ಬ್ರಹ್ಮದೇವರ ಪುತ್ರರು. ಬ್ರಹ್ಮದೇವರ ಪುತ್ರರ ಪುತ್ರರೂ ಸಹ ಪಿತೃಗಳೆ. ದೇವತೆಗಳ ಪುತ್ರರೂ ಮತ್ತೊಂದು ದೇವತಾಗಣವಿದ್ದು ವಸು-ರುದ್ರ-ಆದಿತ್ಯಗಣ-ವೆನಿಸಿಕೊಳ್ಳುವುದು.

*ಭೀಷ್ಮ ಉವಾಚ –*

**ಅತ್ರ ತೇ ಕೀರ್ತಯಿಷ್ಯಾಮಿ ಯಥಾಶ್ರುತಮರಿಂದಮ ।**
**ಯೇ ಚ ತೇ ಪಿತರೋಽನ್ಯೇ ಸ್ಮ ಯಾನ್ ಯಜಾಮೋ ವಯಂ ಪುನಃ॥13॥**
**ಪಿತ್ರಾ ಮಮ ಪುರಾ ಗೀತಂ ಲೋಕಾಂತರಗತೇನ ವೈ ॥ 14 ॥**

ಧರ್ಮರಾಜನೇ, ನನ್ನ ಲೋಕಾಂತರ ಹೊಂದಿದ ನನ್ನ ತಂದೆ ಶಂತನು ಹೇಳಿದ ವಿಚಾರವನ್ನು ನಿನಗೆ ಯಥಾವತ್ತಾಗಿ ಹೇಳುತ್ತೇನೆ.

## ಶಂತನುವಿನಿಂದ ಭೀಷ್ಮ ಪರೀಕ್ಷೆ

**ಶ್ರಾದ್ಧಕಾಲೇ ಮಮ ಪಿತುಃ ಮಯಾ ಪಿಂಡಃ ಸಮುದ್ಯತಃ ।**
**ತಂ ಪಿತಾ ಮಮ ಹಸ್ತೇನ ಭಿತ್ವಾ ಭೂಮಿಮಯಾಚತ ॥ 15 ॥**
**ನೈಷ ಕಲ್ಪೇ ವಿಧಿರ್ದೃಷ್ಟ ಇತಿ ಸಂಚಿಂತ್ಯ ಚಾಪ್ಯಹಮ್ ।**
**ಕುಶೇಷ್ವೇವ ತತಃ ಪಿಂಡಂ ದತ್ತವಾನ್ ಅವಿಚಾರಯನ್ ॥ 16 ॥**

ಧರ್ಮಜ, ನಾನು ನನ್ನ ತಂದೆಯಾದ ಶಂತನುವಿನ ಶ್ರಾದ್ಧವನ್ನು ಮಾಡುತ್ತಿದ್ದೆ, ಅಂದು ಕಾಲ ಶ್ರಾದ್ಧ ಪ್ರಾಪ್ತವಾಗಿತ್ತು. ಪುರೋಹಿತರು ದಕ್ಷಿಣಾಭಿಮುಖವಾಗಿ ಹರಡಿದ ದರ್ಭೆಗಳ ಮೇಲೆ ಕೆಳಗಿನಿಂದ ಮೇಲುಮುಖವಾಗಿ ಇಡಲು ಆದೇಶಿಸಿದ್ದರು.

ಕೂಡಲೇ ಶಂತನುವು ಭೂಮಿಯನ್ನು ಭೇದಿಸಿ, ಅವನ ಕೈ ಕಾಣಿಸಿತು.

---

ಇವರು ಪಿತೃ–ಪಿತಾಮಹ–ಪ್ರಪಿತಾಮಹನಲ್ಲಿರುತ್ತಾರೆ. ಇವರಲ್ಲಿ ಮಧ್ವವಲ್ಲಭ ಜನಾರ್ದನ ಸ್ವಾಮಿಯಿರುವನು. ಈ ಶ್ರಾದ್ಧ ಸ್ವಾಮಿ ಪ್ರೀತನಾದಾಗ ವಸ್ವಾದಿ ಪಿತೃಗಳು ಸಂಪ್ರೀತರಾಗುವರು. ಇದರಿಂದಾಗಿ ನಮ್ಮ ಪಿತೃಗಳು ಯಾವುದೇ ಯೋನಿಯಲ್ಲಿರಲಿ. ಅವರನ್ನು ತೃಪ್ತಿಗೊಳಿಸುವರು. ದೇವತೆಗಳಾಗಿದ್ದರೆ ಅಮೃತವನ್ನಾಸಿಯು, ಗೋವಾಗಿದ್ದರೆ ಹುಲ್ಲಿನ ರೂಪದಲ್ಲಿಯೂ, ರಾಕ್ಷಸರಾಗಿದ್ದರೆ ಮಾಂಸರೂಪದಲ್ಲಿಯೂ, ಮನುಷ್ಯರಾಗಿದ್ದರೆ ಅನ್ನದ ರೂಪದಲ್ಲಿಯೂ ಚಿರಪಿತೃಗಳು ತೃಪ್ತಿಪಡಿಸುವರು. ಇವರು 19ನೇ ಕಕ್ಷೆಯಲ್ಲಿರುವರು, ಇವರಲ್ಲಿ ಯಮ, ಸೋಮಕವ್ಯವಾಹರನ್ನು ಬಿಟ್ಟು ಅಗ್ನಿಷ್ವಾತ್ತ, ಬರ್ಹಿಷದ, ಸೋಮಪ ಸೋಮಸದ, ಹವಿರ್ಭುಜ, ಆಜ್ಯಪ ಸುಕಾಲಿನ ಎಂಬುವರು ಪಿತೃಸಪ್ತಕರು, ಇವರೇ ಚಿರಪಿತೃಗಳು. ವಸು–ರುದ್ರ–ಆದಿತ್ಯರು ಶೇಷಶತಸ್ಥಗಣದಲ್ಲಿರುವರು. ವೇದಗಳಲ್ಲಿ ನಾಮ ರೂಪಗಳಿಲ್ಲದೆ ದೇವಕುಲದಲ್ಲಿ ಹುಟ್ಟಿ ದೇವತಾಕಾರ್ಯ ತೊಡಗಿದ ಆಜಾನಜರಲ್ಲಿ ನೂರು ಮಂದಿ ಪಿತೃಗಳಿರುವರು.

ತೋಳು. ಉಂಗುರಾಭರಣಗಳನ್ನು ನೋಡಿದ ನನಗೆ ಇದು ತಂದೆಯದೆ ಕೈಗಳೆಂದು ಖಾತ್ರಿಯಾಯಿತು. ಅದೃಶ್ಯವಾಣಿ ಹೀಗಿತ್ತು. 'ಭೀಷ್ಮ! ಪಿಂಡವನ್ನು ದರ್ಭೆ ಮೇಲಿಡದೆ ನನ್ನ ಕೈಯಲ್ಲಿಯೇ ನೀಡು' ಎಂದು ಕೈ ಮುಂದೆ ಬಂದಿತು. ನಾನದರೂ ಶಾಸ್ತ್ರದಲ್ಲಿ ಮೃತಪಿತೃಗಳಿಗೆ ದರ್ಭೆಯ ಮೇಲಿಡುವುದೇ ಹೇಳಲ್ಪಟ್ಟಿದೆ. ಹೀಗಿರುವಾಗ ಶಾಸ್ತ್ರದ ಮರ್ಯಾದೆ ಬಿಟ್ಟು ಶಾಸ್ತ್ರದ ಮರ್ಯಾದೆ ತೆಗೆಯಲಾರೆ. ದರ್ಭೆಯ ಮೇಲೆ ಇಡುವೆ' ಎಂದು ಹೇಳಿ ದರ್ಭೆಯ ಮೇಲೆ ಇಟ್ಟನು. ಇದನ್ನು ಕೇಳಿ ಕೋಪಗೊಳ್ಳದೆ ಸಂತೋಷದಿಂದ ಮಧುರ ವಾಕ್ಯಗಳಿಂದ ಹೀಗೆಂದೆನು.

**ತ್ವಯಾ ದಾಯಾದ ವಾನಸ್ಮಿ ಕೃತಾರ್ಥೋಽಮತ್ರ ಚೇಹ ಚ ।**
**ಸತ್ಪುತ್ರೇಣ ತ್ವಯಾ ಪುತ್ರ ಧರ್ಮಜ್ಞೇನ ವಿಪಶ್ಚಿತಾ ॥ 17 ॥**

**ಯಥಾ ಚತುರ್ಥಂ ಧರ್ಮಸ್ಯ ರಕ್ಷಿತಾ ಲಭತೇ ಫಲಮ್ ।**
**ಪಾಪಸ್ಯ ಹಿ ತಥಾ ಮೂಢಃ ಫಲಂ ಪ್ರಾಪ್ನೋತ್ಯರಕ್ಷಿತಾ ॥ 18 ॥**

**ಪ್ರಮಾಣಂ ಯದ್ಧಿ ಕುರುತೇ ಧರ್ಮಾಚಾರೇಷು ಪಾರ್ಥಿವಃ ।**
**ಪ್ರಜಾಃ ತದನುವರ್ತಂತೇ ಪ್ರಮಾಣಾಚರಿತಂ ಸದಾ ॥ 19 ॥**

**ತಸ್ಮಾತ್ ತವಾಹಂ ಸುಪ್ರೀತಃ ಪ್ರೀತ್ಯಾ ಚ ವರಮುತ್ತಮಮ್ ।**
**ದದಾಮಿ ತಂ ಪ್ರತೀಚ್ಛ ತ್ವಂ ತ್ರಿಷು ಲೋಕೇಷು ದುರ್ಲಭಮ್ ॥ 20 ॥**

ಸತ್ಪುತ್ರನೇ, ನಿನ್ನ ಈ ಶಾಸ್ತ್ರೋಕ್ತ ವಿಧಿಯಿಂದ ನನಗೆ ಖಂಡಿತವಾಗಿಯೂ ಆನಂದವುಂಟಾಗಿದೆ. ವೈದಿಕವಾದ ವಿಧಿ ವಿಧಾನಗಳಲ್ಲಿ ನಿನಗಿರುವ ಶ್ರದ್ಧೆಯನ್ನು ನೋಡಿ ಪ್ರಸನ್ನನಾಗಿದ್ದೇನೆ. ಧರ್ಮಜ್ಞನಾದ ನಿನ್ನಂತಹ ಸುಪುತ್ರನಿಂದಾಗಿ ಇಹ-ಪರಗಳಲ್ಲಿ ಕೃತಾರ್ಥನಾಗಿರುವೆನು. ಧರ್ಮಗಳಲ್ಲಿ ಜನರಿಗೆ ಆಸೆವುಂಟು ಮಾಡಲೆಂದೇ ನಾನು ನಿನ್ನನ್ನು ಪರೀಕ್ಷಿಸಿದನು.

ಧರ್ಮದ ರಕ್ಷಣೆಯನ್ನು ಮಾಡುವ ರಾಜನಿಗೆ ಧಾರ್ಮಿಕನು ಮಾಡುವ ಧರ್ಮಕಾರ್ಯದ ನಾಲ್ಕನೇ ಒಂದು ಭಾಗ ಫಲವಿರುವಂತೆ, ಧರ್ಮವನ್ನು ರಕ್ಷಿಸದ ಮೂಢರಾಜನು, ಜನರು ಮಾಡುವ ಪಾಪದಲ್ಲಿಯೂ ನಾಲ್ಕನೇ ಒಂದು ಭಾಗ ಪಡೆಯುತ್ತಾನೆ. ಧರ್ಮದ ಆಚರಣೆಯಲ್ಲಿ ರಾಜನೇ ಮೊದಲಾದವರ ಆಚರಣೆಯನ್ನು ಗಮನಿಸುತ್ತಿರುವ ಪ್ರಜೆಗಳು, ರಾಜನು

ಮಾಡುವಂತೆ ಇವರೂ ಮಾಡುವರು. ನೀನು ನಿನ್ನಾಚರಣೆಯಿಂದಾಗಿ ಪ್ರಜೆಗಳಿಗೆ ಮಾರ್ಗದರ್ಶಕನಾಗಿರುವೆ. ನಿನಗೆ ಮೂರುಲೋಕದಲ್ಲಿಯೂ ದುರ್ಲಭವಾದ ವರವನ್ನೀಯುವೆನು, ಬೇಡು" ಎಂದನು.

## ಸ್ವಚ್ಛಂದ ಮೃತ್ಯುತ್ವವರ

**ನತೇ ಪ್ರಭವಿತಾ ಮೃತ್ಯುಃ ಯಾವಜ್ಜೀವಿತುಮಿಚ್ಛಸಿ ।**
**ತ್ವತ್ತೋಽಭ್ಯನುಜ್ಞಾಂ ಸಂಪ್ರಾಪ್ಯ ಮೃತ್ಯುಃ ಪ್ರಭವಿತಾ ತವ ॥ 21 ॥**

ಭೀಷ್ಮನೇ, ನೀನು ಎಲ್ಲಿಯವರೆಗೂ ಜೀವಿಸಿರಲು ಭಯಸುವೆಯೋ ಅಲ್ಲಿಯವರೆಗೂ ನಿನಗೆ ಮೃತ್ಯುವಿನ ಭಯವುಂಟಾಗುವುದಿಲ್ಲ. ನಿನ್ನ ಅನುಮತಿ ಕೇಳಿಯೇ ಮೃತ್ಯುವು ನಿನ್ನ ಹತ್ತಿರ ಸುಳಿಯುತ್ತದೆ. ಇದಲ್ಲದೆ ಇನ್ನೇನಾದರೂ ಬೇಡಿಕೆಯಿದ್ದರೆ ಬೇಡು, ನೀಡುವೆ ಎಂದನು.

**ಯದಿ ತ್ವನುಗ್ರಹಂ ಭೂಯಃ ತ್ವತ್ತೋಽರ್ಹಾಮಿ ಮಹಾದ್ಯುತೇ ।**
**ಪ್ರಶ್ನಮಿಚ್ಛಾಮಿ ವೈ ಕಿಂಚಿದ್ ವ್ಯಾಹೃತಂ ಭವತಾ ಸ್ವಯಮ್ ॥ 22 ॥**

ಧರ್ಮಜನೇ, ನಮ್ಮ ಪಿತನು ಹೀಗೆ ವರ ಬೇಡಲು ಹೇಳಿದ ನಂತರ ನಾನು ಅವನಿಗೆ ಅಭಿವಾದನ ಪೂರ್ವಕ ತಲೆಬಾಗಿ, ತಂದೆಯೇ, ನೀನು ಪ್ರಸನ್ನನಾದ್ದರಿಂದಲೇ ನಾನು ಧನ್ಯನಾಗಿರುವೆನು. ನಿನ್ನ ಅನುಗ್ರಹ ನನ್ನ ಮೇಲಿರುವುದಾದರೆ ನಾನು ಕೇಳುವ ಶ್ರಾದ್ಧೀಯ ಪ್ರಶ್ನೆಗಳಿಗೆ ಸೂಕ್ತ ಉತ್ತರ ನೀಡುವವನಾಗು ಎಂದನು. ಶಂತನುವು ಭೀಷ್ಮ ! ನಿನಗೇನು ಪ್ರಶ್ನೆಯಿದೆ ಅದನ್ನು ಕೇಳು, ಧರ್ಮರಾಜನೇ, ನಮ್ಮ ತಂದೆಯು ಲೋಕಾಂತರಗತ-ನಾಗಿದ್ದರೂ ಅದೃಶ್ಯನಾಗಿಯೇ ಮಾತನಾಡುತ್ತಿದ್ದನು.

## ಭೀಷ್ಮನ ಪೈತೃಕ ಪ್ರಶ್ನೆ

**ಶ್ರೂಯಂತೇ ಪಿತರೋ ದೇವಾ ದೇವಾನಾಮಪಿ ದೇವತಾಃ ।**
**ದೇವಾಶ್ಚ ಪಿತರೋಽನ್ಯೇ ವಾ ಕಾನ್ ಯಜಾಮೋ ವಯಂ ಪುನಃ ॥23 ॥**
**ಕಥಂ ಚ ದತ್ತಮಸ್ಮಾಭಿಃ ಶ್ರಾದ್ಧಂ ಪ್ರೀಣಾತ್ಯಹೋ ಪಿತೄನ್ ।**
**ಲೋಕಾಂತರ ಗತಾನ್ ತಾತ ಕಿಂ ನು ಶ್ರಾದ್ಧಸ್ಯ ವಾ ಫಲಮ್ ॥ 24 ॥**

ತಂದೆಯೇ ! ಪಿತೃ ದೇವತೆಗಳು ದೇವತೆಗಳಿಗೂ ದೇವತೆಗಳಂತೆ. ಪಿತೃಗಳೂ

ದೇವತೆಗಳೆ? ಅಥವಾ ಪಿತೃಗಳು ಬೇರೆ, ದೇವತೆಗಳು ಬೇರೆಯೋ, ನಾವೇಕೆ ಪಿತೃಗಳನ್ನು ಪೂಜಿಸಬೇಕು? ನಾವು ನೀಡಿದ ಶ್ರಾದ್ಧ ಅವರಿಗೆ ತಲುಪುವುದು ಹೇಗೆ? ಶ್ರಾದ್ಧಾದಿಗಳಿಂದ ನಮಗೇನು ಉಪಯೋಗ? ಎಂದು ತಿಳಿಸು.

ಶಂತನುರುವಾಚ -

ಭೀಷ್ಮನು ಕೇಳಿದ ಪ್ರಶ್ನೆಗಳಿಗೆ ಶಾಸ್ತ್ರೀಯವಾಗಿ ಉತ್ತರಿಸಿದನು.

ಭೀಷ್ಮನೇ ! ನೀನು ಕೇಳಿರುವ ಪ್ರಶ್ನೆಗಳಿಗೆ ಸಂಕ್ಷೇಪವಾಗಿ ಉತ್ತರಿಸುವೆ.

## ಪಿತೃದೇವತೆಗಳು

**ಆದಿದೇವಸುತಾಃ ತಾತ! ಪಿತರೋ ದಿವಿ ದೇವತಾಃ ।**

**ತಾನ್ ಯಜಂತಿ ಸ್ಮ ವೈ ಲೋಕಾಃ ಸದೇವಾ ಸುರಮಾನವಾಃ ॥ 25 ॥**

**ಆಪ್ಯಾಯಿತಾಶ್ಚ ತೇ ಶ್ರಾದ್ಧೇ ಪುನರಾಪ್ಯಾಯಯಂತಿ ಚ ।**
**ತಾನ್ ಯಜಸ್ವ ಮಹಾಭಾಗ ಶ್ರಾದ್ಧೈರಗ್ರ್ಯೈಃ ಅತಂದ್ರಿತಃ ।**

**ತೇ ತೇ ಶ್ರೇಯೋ ವಿಧ್ಯಾಸ್ಯಂತಿ ಸರ್ವಕಾಮ ಫಲಪ್ರದಾಃ ॥ 26 ॥**

ಪಿತೃಗಳೆಂದರೆ ಬ್ರಹ್ಮದೇವನ ಪುತ್ರರು. ಇವರನ್ನು ದೇವತೆಗಳೂ, ಮಾನವರೂ, ದಾನವರೂ, ಯಕ್ಷ ರಕ್ಷಗಂಧರ್ವ-ಕಿನ್ನರರೂ ಶ್ರದ್ಧೆಯಿಂದ ಅರ್ಚಿಸುವರು.

ಮಕ್ಕಳು ನೀಡಿದ ಶ್ರಾದ್ಧಾದಿಗಳನ್ನು ಆದಿದೇವನ ಪುತ್ರರಾದ ಈ ಪಿತೃಗಳು ಎಂಬ ಹೆಸರಿನ ದೇವತೆಗಳೇ ತಾವು ಸ್ವೀಕರಿಸಿ, ಆ ಶ್ರಾದ್ಧಕರ್ತನ ಪಿತಾ, ಪಿತಾಮಹ, ಪ್ರಪಿತಾಮಹರು ಇದ್ದಲ್ಲಿಗೆ ಒಯ್ದು, ಅವರು ಹೇಗಿರುವರೋ ಅದಕ್ಕೆ ತಕ್ಕಂತೆ ಅವರ ಆಹಾರವಾಗಿ ಮಾರ್ಪಡಿಸಿ ನೀಡುವರು. ಹಾಗೂ ಈ ಶ್ರಾದ್ಧವನ್ನು ಮಾಡಿದವನಿಗೂ ಅವರೇ ಪುಣ್ಯ ನೀಡುವರು. ಇದರಿಂದ ಶ್ರಾದ್ಧ ಮಾಡಿದವನ ನೇರ ಪಿತೃಗಳೂ, ಪಿತೃಗಣವೆಂದು ಹೆಸರಾದ ದೇವತೆಗಳೂ ಸುಪ್ರೀತರಾಗುವರು. ಇದರಿಂದಾಗಿ ಶ್ರಾದ್ಧಕರ್ತನನ್ನೂ ಅವನ ಪಿತೃಗಳನ್ನೂ ನರಕದಿಂದ ಉದ್ಧರಿಸಿ ಅನುಗ್ರಹಿಸುವರು.

ಮಹಾಭಾಗನೇ, ಅಂತಹ ಪಿತೃದೇವತೆಗಳನ್ನೂ ಶ್ರಾದ್ಧಾಭಕ್ತಿ ಸಮನ್ವಿತನಾಗಿ ಶ್ರಾದ್ಧಾದಿಗಳಿಂದ ತೃಪ್ತಿಪಡಿಸು. ಇದರಿಂದ ಸಕಲೇಷ್ಟಾರ್ಥ ಹೊಂದುವಿ.

ಭೀಷ್ಮನೇ, ಮೃತರಾದವರ ನಾಮಧೇಯ, ಗೋತ್ರಾದಿಗಳನ್ನು ಉಚ್ಚರಿಸಿ ಪಿತೃದೇವತೆಗಳ ಆರಾಧನೆ ನಡೆಸಿದ್ದಾದರೆ ಅವರು ನಮ್ಮನ್ನು ಹಾಗೂ ಮೃತರಾದ ಪಿತೃಗಳನ್ನು ಸಂತೋಷಗೊಳಿಸುವರು.

**ಮಾರ್ಕಂಡೇಯಸ್ತು ತೇ ಶೇಷಮೇತತ್ ಸರ್ವಂ ಪ್ರವಕ್ಷ್ಯತಿ ।**
**ಉಪಸ್ಥಿತಶ್ಚ ಶ್ರಾದ್ಧೇಽದ್ಯ ಮಮೈವಾನುಗ್ರಹಾಯ ವೈ ॥ 27 ॥**
**ಏನಂ ಪೃಚ್ಛ ಮಹಾಭಾಗಮ್ ಇತ್ಯುಕ್ತ್ವಾಂತರಧೀಯತ ॥ 28 ॥**

ಭೀಷ್ಮನೇ, ಈ ವಿಷಯದಲ್ಲಿ ಹೆಚ್ಚಿನ ವಿಷಯಗಳನ್ನು ತಿಳಿಸಲು ನಿನ್ನ ನನ್ನ ಸುದೈವದಿಂದ ನನ್ನ ಈ ಶ್ರಾದ್ಧಕ್ಕೆ ಬ್ರಾಹ್ಮಣರಾಗಿ ಬಂದಿರುವ ಮಾರ್ಕಂಡೇಯ ಋಷಿಗಳನ್ನು ಕೇಳು. ಪಿತೃಭಕ್ತರಾದ ಇವರು ನಿನಗೆ ತಾವು ಪ್ರತ್ಯಕ್ಷಕಂಡ ಹಾಗೂ ಕೇಳಿ ತಿಳಿದ ಅನೇಕ ಶ್ರಾದ್ಧೀಯ ವಿಷಯಗಳನ್ನು ತಿಳಿಸುವರು ಎಂದು ಹೇಳಿ ನನ್ನ ತಂದೆಯು ಅಲ್ಲಿಯೇ ಅಂತರ್ಧಾನ ಹೊಂದಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಭೀಷ್ಮ-ಶಂತನು ಸಂವಾದದಲ್ಲಿ ಶ್ರಾದ್ಧೀಯ ಕಲ್ಪವೆಂಬಲ್ಲಿ
ಹದಿನಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 17 ಹರಿಪರ್ವ

# ಅಥ ಸಪ್ತದಶೋಽಧ್ಯಾಯಃ

## ಭೀಷ್ಮ-ಮಾರ್ಕಂಡೇಯ ಸಂವಾದ

**ತತೋಽಹಂ ತಸ್ಯ ವಚನಾತ್ ಮಾರ್ಕಂಡೇಯಂ ಸಮಾಹಿತಃ ।**
**ಪ್ರಶ್ನಂ ತಮೇವಾನ್ವಪೃಚ್ಛಂ ಯನ್ ಮೇ ಪೃಷ್ಟಾಃ ಪುರಾ ಪಿತಾ ॥ 1 ॥**

ಭೀಷ್ಮನು-ಯುಧಿಷ್ಠಿರನೇ, ನನ್ನ ತಂದೆ ಹೇಳಿದಂತೆ **ಮಾರ್ಕಂಡೇಯ**'ರನ್ನು ಪಿತೃಗಳ ವಿಷಯವಾಗಿ ಪ್ರಶ್ನಿಸಿದನು. ಧರ್ಮಜ್ಞನೂ, ಮಹಾತಪಸ್ವಿಯೂ ಆದ ಮಾರ್ಕಂಡೇಯನು ತನ್ನ ಪ್ರಶ್ನೆಯು ಲೋಕಹಿತ ಪ್ರಶ್ನೆಯೆಂದು ತಿಳಿದು ಸಮಗ್ರ ಪಿತೃಕಲ್ಪದ ಬಗ್ಗೆ ಹೇಳಲು ಪ್ರಾರಂಭಿಸಿದನು.

## ಪಿತೃಪ್ರಸಾದದಿಂದ ದೀರ್ಘಾಯುಸ್ಸು

**ಅಹಂ ಪಿತೃಪ್ರಸಾದಾದ್ ವೈ ದೀರ್ಘಾಯುಷ್ಟ್ವಂ ಅವಾಪ್ತವಾನ್ ।**
**ಪಿತೃಭಕ್ತ್ಯೈವ ಲಬ್ಧಂ ಚ ಪ್ರಾಗ್ ಲೋಕೇ ಪರಮಂ ಯಶಃ ॥ 2 ॥**
**ಅಧಿರುಹ್ಯ ಗಿರಿಂ ಮೇರುಂ ತಪೋಽತಪ್ಯಂ ಸುದುಶ್ಚರಮ್ ॥ 3 ॥**

---

1. **ಮಾರ್ಕಂಡೇಯ :** ಭೃಗುವಂಶೀಯನಾದ ಮೃಕಂಡುವಿನಿಂದ ಜನಿಸಿದ ಮೃಕುಂಡುವು ಭೃಗುವಿನಿಂದ ಖ್ಯಾತಿಯಿಂದ ಜನಿಸಿದ ಧಾತ ಹಾಗೂ ಆಯತಿಯೆಂಬುವರ ಮಗನು. ಶಿವನನ್ನು ತಪಸ್ಸಿನಿಂದ ಸಂತುಷ್ಟಗೊಳಿಸಿ ಮಾರ್ಕಂಡೇಯನನ್ನು ಪಡೆದರು. ಮಾರ್ಕಂಡೇಯನು ತಪಸ್ಸಿನಿಂದಾಗಿ 14 ಮನ್ವಂತರ ಆಯುಸ್ಸು ಪಡೆದ ಚಿರಂಜೀವಿಗಳಲ್ಲಿ ಎಂಟನೆಯವನು. **'ಮಾರ್ಕಂಡೇಯಶ್ಚ ಅಷ್ಟಮಃ'** ಭಗವಂತನಿಂದ ಪ್ರಲಯದರ್ಶನ ಮಾಡಿದವ. ಕಾಮ್ಯಕವನದಲ್ಲಿ ಪಾಂಡವರಿಗೆ ಅನೇಕ ಧರ್ಮಕಥೆಗಳನ್ನು ತಿಳಿಸಿದವ. ಧೂಮೋರ್ಣೇ ಇವನ ಪತ್ನಿ.

**ತತಃ ಕದಾಚಿತ್ ಪಶ್ಯಾಮಿ ದಿವಂ ಪ್ರಜ್ವಾಲ್ಯ ತೇಜಸಾ ।**
**ವಿಮಾನಂ ಮಹದಾಯಾಂತಂ ಉತ್ತರೇಣ ಗಿರೇಸ್ತದಾ ॥ 4 ॥**

**ತಸ್ಮಿನ್ ವಿಮಾನೇ ಪರ್ಯಂಕೇ ಜ್ವಲಿತಾದಿತ್ಯ ಸನ್ನಿಭಂ ।**
**ಅಂಗುಷ್ಠಮಾತ್ರಂ ಪುರುಷಂ ಅಗ್ನೌ ಅಗ್ನಿಮಿವಾಹಿತಮ್ ॥ 5 ॥**

ಮಾರ್ಕಂಡೇಯರು ಭೀಷ್ಮರನ್ನು ಕುರಿತು ಸತ್ಯಸಂಧಭೀಷ್ಮನೇ ! ನಿನ್ನ ಪಿತೃಜಿಜ್ಞಾಸೆಯನ್ನೂ ಜ್ಞಾನಪಿಪಾಸೆಯನ್ನೂ ಕಂಡು ನನಗೆ ಅತ್ಯಂತ ಸಂತೋಷವಾಗಿದೆ. ಸತ್ಯವ್ರತನೆ! ನನಗೆ ಈ ದೀರ್ಘಾಯುಸ್ಸು ಉಂಟಾದದ್ದೆ ಪಿತೃಗಳ ಪ್ರಸಾದದಿಂದವೆಂದು ತಿಳಿ. ಪಿತೃಗಳ ಅನುಗ್ರಹದಿಂದಾಗಿ ದಿವ್ಯಜ್ಞಾನ ಹೊಂದಿದ ನಾನು ದಿಗಂತ ವಿಶ್ರಾಂತ ಯಶಸ್ಸನ್ನು ಹೊಂದಿರುವೆನು. ಹಿಂದೆ ನಾನು ಮೇರುಪರ್ವತದ ಉತ್ತುಂಗಶೃಂಗದಲ್ಲಿ ಸಹಸ್ರವಾರ್ಷಿಕವಾದ ತಪೋನುಷ್ಠಾನ ನಿರತನಾಗಿದ್ದೆ. ಒಂದು ದಿನ ತನ್ನ ಕಾಂತಿಯಿಂದ ದಶದಿಕ್ಕುಗಳನ್ನೆಲ್ಲ ಬೆಳಗುತ್ತಿರುವ ದಿವ್ಯವಾದ ವಿಮಾನವೊಂದು ಮೇರುವಿನ ಉತ್ತರದಿಕ್ಕಿನ ಶ್ರೇಣಿಯಲ್ಲಿ ಇಳಿಯುತ್ತಿರುವುದನ್ನು ನೋಡಿದೆನು. ಸುವರ್ಣಕಾಂತಿಯಿಂದ ಬೆಳಗುತ್ತಿರುವ ಆ ವಿಮಾನ ಪರ್ಯಂಕದಲ್ಲಿ ಅಗ್ನಿಯ ಕುಮಾರನಂತಿರುವ, ಹೆಬ್ಬೆರಳಿನ ಗಾತ್ರ ಪ್ರಮಾಣದ ಅಗ್ನಿಯಲ್ಲಿ ಅಗ್ನಿಯನ್ನಿಟ್ಟಂತೆ ತೇಜಃಪುಂಜನಾದ ಕುಮಾರನು ಪವಡಿಸಿದ್ದನ್ನು ನೋಡಿದೆ.

ನಾನು ಅವನಿಗೆ ಭಕ್ತ್ಯಾದರಗಳಿಂದ ನಮಸ್ಕರಿಸಿದೆ. ಆಗ ಅಂಗುಷ್ಠ ಮಾತ್ರ ದಿವ್ಯತೇಜಸ್ವಿಯು ಎದ್ದು ಕುಳಿತು ಪ್ರಸನ್ನ ದೃಷ್ಟಿಯಿಂದ ನನ್ನನ್ನು ವೀಕ್ಷಿಸಿದನು. ಇದರಿಂದಾಗಿ ನಾನು ಪಾವಿತನೂ ಅಮೃತಪ್ಲಾವಿತನೂ ಆದೆ. ನಾನೂ ಸಹ ಉತ್ಸಾಹದಿಂದ ಅವರನ್ನು ಸಮೀಪಿಸಿ ಅವರಿಗೆ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಭಕ್ತಿಯಿಂದ ಕೈಮುಗಿದು ವಿನೀತನಾಗಿ ತಾವು ಯಾರೆಂದು ಕೇಳಿದೆನು – ವಿಭುವೆ! ನಿಮ್ಮನ್ನು ನಾವು ಅರಿಯುವುದು ಹೇಗೆ? ಎಂದ.

**ತಪೋವೀರ್ಯಾತ್ ಸಮುತ್ಪನ್ನಂ ನಾರಾಯಣಗುಣಾತ್ಮಕಮ್ ।**
**ದೈವತಂ ಹ್ಯಸಿ ದೇವಾನಾಮಿತಿ ಮೇ ವರ್ತತೇ ಮತಿಃ ॥ 6 ॥**

ಸ್ವಾಮಿನ್, ತಾವು ತಪೋವೀರ್ಯಾದಿಗಳಿಂದ ನಾರಾಯಣನ ಗುಣಗಳನ್ನು ತುಂಬಿಸಿಕೊಂಡಿರುವಿರಿ. ದೇವತೆಗಳಿಗೂ ದೇವತೆಯಂತೆ ಇರುವಿರೆಂದು ನನ್ನ ಭಾವನೆ.

ಆಗ ಅವರು ಮಂದಾರ ಪುಷ್ಪಗಳನ್ನು ನನ್ನ ಮೇಲೆ ಎರಚಿದವರಂತೆ ಒಮ್ಮೆ ಮಂದಹಾಸ ಬೀರಿದರು. ಅನುಗ್ರಹ ಕಟಾಕ್ಷದೃಷ್ಟಿ ಬೀರಿದ ಅವರು ನನ್ನನ್ನೊಮ್ಮೆ ಅವಲೋಕಿಸಿ ಅಮೃತಸಿಂಚಿತ ಮಧುರ ಮಾತುಗಳನ್ನಾಡಿದರು.

**ಮಾಮುವಾಚ ಧರ್ಮಾತ್ಮಾ ಸ್ಮಯಮಾನ ಇವಾನಘ ।**
**ನ ತೇ ತಪಃ ಸುಚರಿತಂ ಯೇನ ಮಾಂ ನಾವಬುಧ್ಯಸೇ ॥ 7 ॥**

ನಿನ್ನ ತಪಸ್ಸು ಪೂರ್ಣಹಂತವನ್ನು ತಲುಪಿಲ್ಲವಾದ್ದರಿಂದಲೇ ನೀನು ನನ್ನನ್ನು ಗುರುತಿಸಲಾಗಲಿಲ್ಲ ಎಂದು ಹೇಳಿ ಕೂಡಲೇ ಮತ್ತೊಂದು ದೇದೀಪ್ಯಮಾನವಾದ ರೂಪವನ್ನು ಧರಿಸಿದರು. ಇಂತಹ ದಿವ್ಯರೂಪವನ್ನು ಈ ಹಿಂದೆ ಎಂದೂ ನೋಡಿರಲಿಲ್ಲ. ಕುತೂಹಲ ಮಗ್ನನಾಗಿದ್ದ ನನ್ನನ್ನು ಕುರಿತು ಹೀಗೆ ಹೇಳಿದರು.

***ಸನತ್ಕುಮಾರ ಉವಾಚ –***

**ಏಧಿ ಮಾಂ ಬ್ರಹ್ಮಣಃ ಪುತ್ರಂ ಮಾನಸಂ ಪೂರ್ವಜಂ ವಿಭೋ ।**
**ತಪೋವೀರ್ಯ ಸಮುತ್ಪನ್ನಂ ನಾರಾಯಣ ಗುಣಾತ್ಮಕಮ್ ॥ 8 ॥**

**ಸನತ್ಕುಮಾರ ಇತಿ ಯಃ ಶ್ರುತೋ ದೇವೇಷು ವೈ ಪುರಾ ।**
**ಸೋಽಸ್ಮಿ ಭಾರ್ಗವ ಭದ್ರಂ ತೇ ಕಂ ಕಾಮಂ ಕರವಾಣಿ ತೇ ॥ 9 ॥**

ಮಾರ್ಕಂಡೇಯನೇ, ನಾನು ಬ್ರಹ್ಮದೇವರ ಮಾನಸಪುತ್ರ. ಶ್ರೀಮನ್ನಾರಾಯಣನ ಅಂಶದಿಂದ ಹುಟ್ಟಿರುವ ನನ್ನನ್ನು 'ಸನತ್‌ಕುಮಾರ'ವೆನ್ನುವರು. ನಾನು ಬ್ರಹ್ಮದೇವನ ತಪಃಪ್ರಭಾವದಿಂದ ಹುಟ್ಟಿರುವೆನು. ದೇವತೆಗಳಲ್ಲಿ ಸನತ್ಕುಮಾರನೆಂದು ಯಾರೂ ಪ್ರಸಿದ್ಧರಾಗಿರುವರೋ ಅವನೇ ನಾನೆಂದು ತಿಳಿ. ನನಗೆ ಏಳು ಮಂದಿ ತಮ್ಮಂದಿರುವರು. ಕ್ರತು, ವಸಿಷ್ಠ ಮೊದಲಾದ ಸಪ್ತರ್ಷಿಗಳು. ಇವರ ಕೀರ್ತಿ ಏಳು ಲೋಕಗಳೆಲ್ಲೆಲ್ಲ ಹರಿಡಿದೆ. ಅವರೆಲ್ಲರ ಜ್ಯೇಷ್ಠ ನಾನು, ಪ್ರಜಾ ಧರ್ಮಕಾಮಗಳನ್ನು ತ್ಯಜಿಸಿ ನೈಷ್ಠಿಕ ಬ್ರಹ್ಮಚರ್ಯದಿಂದ ಸನ್ಯಾಸ ಧರ್ಮದಲ್ಲಿರುವೆ. ನಿನ್ನ ಈ ಘೋರವಾದ ತಪಸ್ಸಿನಾಚರಣೆಯಿಂದ ಸುಪ್ರೀತನಾಗಿ ನಿನ್ನಲ್ಲಿಗೆ ಬಂದಿದ್ದೇನೆ. ನಿನಗೇನು ವರಬೇಕೋ ಅದನ್ನು ಕೇಳು

**ಯಥೋತ್ಪನ್ನಃ ತಥೈವಾಹಂ ಕುಮಾರ ಇತಿ ವಿದ್ಧಿ ಮಾಮ್ ।**
**ತಸ್ಮಾತ್ ಸನತ್ಕುಮಾರೇತಿ ನಾಮೈತನ್ ಮೇ ಪ್ರತಿಷ್ಠಿತಮ್ ॥ 10 ॥**

ಸರ್ವಕಾಲದಲ್ಲಿಯೂ ಹಸುಗೂಸಿನಂತೆ ರಾಗದ್ವೇಷ ಕಾಮಾದಿ ರಹಿತನಾಗಿದ್ದು ಹೃದಯವು ಸ್ವಚ್ಛ ದರ್ಪಣದಂತಿರುವುದರಿಂದ ಯಾವಾಗಲೂ 'ಕುಮಾರ' ಎಂಬ ಸನತ್ಕುಮಾರವೆಂಬ ಹೆಸರಿದೆ.

**ವಯಂ ತು ಯತಿಧರ್ಮಾಣಃ ಸಂಯೋಜ್ಯಾತ್ಮಾನಮಾತ್ಮನಿ ।**
**ಪ್ರಜಾಧರ್ಮಂ ಚ ಕಾಮಂ ಚ ವ್ಯಪಹಾಯ ಮಹಾಮುನೇ ॥ 11 ॥**

ನಾವಾದರೂ ಆತ್ಮವನ್ನು ಭಗವಂತನಲ್ಲಿ ಲೀನಗೊಳಿಸಿ ಪ್ರಜಾಧರ್ಮ ಹಾಗೂ ಕಾಮಪ್ರೇಮಾದಿಗಳನ್ನು ಬದಿಗೊತ್ತಿ ಸನ್ಯಾಸಿಗಳಾಗಿರುವೆವು.

ಮಾರ್ಕಂಡೇಯನೇ! ನೀನು ನನ್ನನ್ನು ದರ್ಶನಾರ್ಥಿಯಾಗಿಯೇ ತಪಸ್ಸನ್ನಾಚರಿಸಿರುವೆ. ನಾನು ನಿನ್ನ ತಪಸ್ಸಿಗೆ ಮೆಚ್ಚಿ ನಿನಗೆ ಕಾಣಿಸಿಕೊಂಡಿರುವೆ ನಿನಗೆ ಯಾವ ಇಚ್ಛೆಯನ್ನು ಪೂರೈಸಲಿ ಹೇಳು ಎಂದರು.

**ಇತ್ಯುಕ್ತವಂತಂ ತಮಹಂ ಪ್ರತ್ಯವೋಚಂ ಸನಾತನಮ್ ।**
**ಅನುಜ್ಞಾತೋ ಭಗವತಾ ಪ್ರೀಯಮಾಣೇನ ಭಾರತ ॥ 12 ॥**
**ಪೃಷ್ಟಃ ಪಿತೄಣಾಂ ಸರ್ಗಂ ಚ ಫಲಂ ಶ್ರಾದ್ಧಸ್ಯ ಚಾನಘ ॥ 13 ॥**
**ಚಿಚ್ಛೇದ ಸಂಶಯಂ ಭೀಷ್ಮ! ಸ ತು ದೇವೇಶ್ವರೋ ಮಮ ॥ 14 ॥**

ಭೀಷ್ಮನೇ, ಹೀಗೆ ಸನತ್ಕುಮಾರರಿಗೆ ಪ್ರಶ್ನೆ ಮಾಡಲು ಅನುಮತಿ ನೀಡುವಂತೆ ಪ್ರತ್ಯುತ್ತರಿಸಿದೆನು. ಆಗ ನಾನು ಪಿತೃಗಳ ಉತ್ಪತ್ತಿ, ಶ್ರಾದ್ಧ, ಶ್ರಾದ್ಧದ ಫಲ ಇವುಗಳ ಬಗ್ಗೆ ಪ್ರಶ್ನಿಸಿದೆನು. ದೇವೇಶ್ವರರಾದ ಅವರು ನನ್ನ ಸಂಶಯವೆಲ್ಲವನ್ನೂ ಪರಿಹರಿಸಿದರು.

### ಪಿತೃದೇವತೆಗಳು

**ದೇವಾನಸೃಜತ ಬ್ರಹ್ಮಾ ಮಾಂ ಯಕ್ಷ್ಯಂತೀತಿ ಭಾರ್ಗವ ।**
**ತಮುಸ್ತ್ಯಜ್ಯ ತಥಾತ್ಮಾನಂ ಅಯಜಂಸ್ತೇ ಫಲಾರ್ಥಿನಃ ॥ 15 ॥**
**ತೇ ಶಪ್ತಾಃ ಬ್ರಹ್ಮಣಾ ಮೂಢಾ ನಷ್ಟ ಸಂಜ್ಞಾಃ ದಿವೌಕಸಃ ।**
**ನ ಸ್ಮ ಕಿಂಚಿದ್ ವಿಜಾನಂತಿ ತತೋ ಲೋಕೋಽಪ್ಯಮುಹ್ಯತ ॥ 16 ॥**

ಸೃಷ್ಟಿಯ ಆರಂಭದಲ್ಲಿ ಬ್ರಹ್ಮದೇವರು ಭಗವಂತನ ಆರಾಧನೆಗಾಗಿ ದೇವತೆಗಳನ್ನು ಸೃಷ್ಟಿಸಿದರು. ಜೀವೋತ್ತಮರಾದ ಈ ದೇವತೆಗಳು ಜಗಜ್ಜನ್ಮಾದಿ ಕಾರಣನಾದ ಭಗವಂತನನ್ನು ಯಜ್ಞ ಯಾಗಾದಿಗಳಿಂದ ಭಕ್ತಿಯಿಂದ ಅರ್ಚಿಸಿ ಸದ್ಗತಿ ಹೊಂದಿ, ಮುಂದಿನ ಮಾನವ ಕುಲಕ್ಕೂ ಮಾರ್ಗದರ್ಶನ ನೀಡಲಿ ಎಂಬುದು ಅವರ ಮನೀಷೇ ಆಗಿತ್ತು. ಆದರೆ ಸ್ವಾರ್ಥಕ್ಕೆ ಬಲಿಬಿದ್ದ ದೇವತೆಗಳು ದೇವದೇವನ ಆರಾಧನೆ ಬಿಟ್ಟು ಇಂದ್ರಿಯ ತೃಪ್ತಿಪಡಿಸುವುದರಲ್ಲಿ ಉದ್ಯುಕ್ತರಾದರು. ಬ್ರಹ್ಮದೇವರು ಕೋಪದಿಂದ ನೀವೆಲ್ಲರೂ ಮೂಢಮತಿಗಳಾಗಿರಿ ಎಂದು ಶಪಿಸಿದರು. ದೇವತೆಗಳೆಲ್ಲ ಸಂಜ್ಞಾಹೀನರಾದರು. ಅವರಿಗೆ ಏನೂ ತಿಳಿಯುತ್ತಿರಲಿಲ್ಲ. ಅವರನ್ನು ಪೂಜಿಸುತ್ತಿದ್ದ ಲೋಕವೂ ಸಂಜ್ಞಾವಿಹೀನವಾಯಿತು.

### ಪಿತೃಗಳಿಂದ ಶಾಪಪರಿಹಾರ

**ತೇ ಭೂಯಃ ಪ್ರಣತಾಃ ಶಪ್ತಾಃ ಪ್ರಾಯಾಚಂತ ಪಿತಾಮಹಮ್ ।**
**ಪ್ರಾಯಶ್ಚಿತ್ತಂ ಚರಧ್ವಂ ವೈ ವ್ಯಭಿಚಾರೋ ಹಿ ವಃ ಕೃತಃ ।**
**ಪುತ್ರಾಂಶ್ಚ ಪರಿಪೃಚ್ಛಧ್ವಂ ತತೋ ಜ್ಞಾನಮವಾಪ್ಸ್ಯಥ ॥ 17 ॥**

ಪಶ್ಚಾತ್ತಾಪದಿಂದ ದಗ್ಧರಾದ ದೇವತೆಗಳು ಬ್ರಹ್ಮದೇವರ ಪಾದಕ್ಕೆರಗಿ ಕ್ಷಮೆ ಬೇಡಿದರು. ದಯಾಮಯ ಬ್ರಹ್ಮದೇವನು ಲೋಕಕಲ್ಯಾಣಕ್ಕಾಗಿ ಹೀಗೆಂದನು.

ದೇವತೆಗಳೇ, ನೀವೆಲ್ಲರೂ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಿರಿ. ನೀವು ನನ್ನ ಆಜ್ಞಾಮೀರಿರುವಿರಿ. ಪಾಪಕ್ಕೆ ಪ್ರಾಯಶ್ಚಿತ್ತವನ್ನು ನಿಮ್ಮ ಮಕ್ಕಳನ್ನೆ ಕೇಳಿರಿ. ಅವರು ಹೇಳಿದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಪುನಃ ದೇವದೇವೋತ್ತಮನ ಸೇವೆ ಮಾಡಿದರೆ ನಿಮ್ಮ ಮತಿಯ ಮೌಢ್ಯ ಮಾಂದ್ಯಗಳೆಲ್ಲ ತೊಲಗಿ ಪುನಃ ಜ್ಞಾನದಿಂದ ಪ್ರಕಾಶಮಾನವಾಗುವಿರಿ ಎಂದರು.

**ಪ್ರಾಯಶ್ಚಿತ್ತಾನಿ ಧರ್ಮಜ್ಞಾಃ ವಾಙ್ಮನಃ ಕರ್ಮಜಾನಿ ವೈ ।**
**ಶಂಸಂತಿ ಕುಶಲಾ ನಿತ್ಯಂ ಚಕ್ಷುರ್ಭ್ಯಾಮಪಿ ನಿತ್ಯಶಃ ॥ 18 ॥**

ದೇವತೆಗಳು ಹಿರಿಯರಾರೂ ಮಾನಾಪಮಾನಗಳನ್ನು ಬಿಟ್ಟು ತಮಗಿಂತ ವಯಸ್ಸಿನಲ್ಲಿ ಕಿರಿಯರಾದರೂ ಜ್ಞಾನದಲ್ಲಿ ಹಿರಿಯರಾಗಿ ತಂದೆಯಂತಿರುವ

ತಮ್ಮ ಮಕ್ಕಳನ್ನು ಸಮೀಪಿಸಿ - ಮಕ್ಕಳೇ ಜ್ಞಾನಹೀನರಾದ ನಮಗೆ ಪಾಪಪ್ರಾಯಶ್ಚಿತ್ತವನ್ನು ತಿಳಿಸಿರಿ. ಎಂದು ಕೇಳಿದರು. ಪಿತೃಗಳಾದರೂ ಮನಃ ಪ್ರಣಿಧಾನದಿಂದ ಸರ್ವವನ್ನು ತಿಳಿದು ಅವರ ಪಾಪಕ್ಕೆ-ಕಾಯಿಕ-ವಾಚಿಕ-ಮಾನಸಿಕ, ಚಾಕ್ಷುಷಿಕ ಪ್ರಾಯಶ್ಚಿತ್ತವನ್ನು ಹೇಳಿದರು. ಮಕ್ಕಳೇ, ವೇದೋಕ್ತ ಈ ವಿಧಿವಿಧಾನಗಳಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳಿರಿ. ಅಂತರಂಗದಲ್ಲಿ ನಿರಂತರ ಹರಿಯ ಧ್ಯಾನ ಮಾಡುತ್ತಾ, ಬಹಿರಂಗದಲ್ಲಿ ಪ್ರದಕ್ಷಿಣೆ-ನಮಸ್ಕಾರ ಮೊದಲಾದವುಗಳಿಂದ ಪೂಜಿಸಿರಿ. ಇದರಿಂದ ನಿಮ್ಮ ಜ್ಞಾನಮಾಂದ್ಯ ದೂರವಾಗುವುದೆಂದರು.

## ಪರತತ್ವ ತಿಳಿದವನು ತಂದೆಗೂ ತಂದೆ

**ಅಭಿಶಪ್ತಾಸ್ತು ತೇ ದೇವಾಃ ಪುತ್ರವಾಕ್ಯೇನ ನಿಂದಿತಾಃ ।**
**ಪಿತಾಮಹಮುಪಾಗಚ್ಛನ್ ಸಂಶಯಚ್ಛೇದನಾಯ ವೈ ॥ 19 ॥**

**ಯೂಯಂ ಶರೀರಕರ್ತಾರಸ್ತೇಷಾಂ ದೇವಾ ಭವಿಷ್ಯಥ ।**
**ತೇ ತು ಜ್ಞಾನಪ್ರದಾತಾರಃ ಪಿತರೋ ವೋ ನ ಸಂಶಯಃ ॥ 20 ॥**

ತಮ್ಮ ಮಕ್ಕಳಾದ ಪಿತೃಗಳು ತಮ್ಮನ್ನು 'ಮಕ್ಕಳೇ' ಎಂದು ಸಂಬೋಧಿಸಿದ್ದು ಕೇಳಿ ದೇವತೆಗಳಿಗೆ ಕೋಪ ಬಂತು. ಬ್ರಹ್ಮದೇವನಲ್ಲಿ ಪುನಃ ಹೋಗಿ ತಮ್ಮ ಜ್ಞಾನಪ್ರದಾತರ ಬಗ್ಗೆ ದೂರು ನೀಡಿದರು. ಆಗ ಬ್ರಹ್ಮದೇವನು – ದೇವತೆಗಳೇ, ***ಯಸ್ತಾವಿಜಾನಾತ್ ಸ ಪಿತುಃ ಪಿತಾಸತ್*** ಎಂಬ ವೇದವಾಣಿಯನ್ನು ಕೇಳಿಲ್ಲವೆ? ನೀವು ವೇದದ ಮುಖ್ಯ ತಾತ್ಪರ್ಯ ವಿಷಯನಾದ ಶ್ರೀಹರಿಯನ್ನು ತಿಳಿದವರು. 'ತಂದೆಯಾದವನಿಗೂ ತಂದೆ' ಎಂದು. ನೀವು ದೇಹ ನೀಡಿದ್ದರಿಂದ ತಂದೆಯೆನಿಸಿದರೆ ನಿಮ್ಮ ಮಕ್ಕಳು ಜ್ಞಾನವನ್ನು ನೀಡಿದ್ದರಿಂದ ತಂದೆಗಳೆನಿಸಿರುವರು. ಇಂದಿನಿಂದ ನೀವು ಅವರನ್ನು ಪಿತೃಗಳೆಂದು ಉಪಾಸಿಸಿರಿ. ಅವರು ನಿಮ್ಮನ್ನು ದೇವತೆಗಳೆಂದು ಪೂಜಿಸಲಿ ಎಂದರು.

ಬ್ರಹ್ಮದೇವನು ಹೀಗೆ ಹೇಳಿದಾಗ ತಮ್ಮ ಸಂದೇಹವನ್ನು ಕಳೆದುಕೊಂಡು ಪರಸ್ಪರ ಪ್ರೀತಿಯಿಂದ ಕೂಡಿ ಪುತ್ರರ ಹತ್ತಿರ ಬಂದರು.

**ಯೂಯಂ ವೈ ಪಿತರೋಽಸ್ಮಾಕಂ ಯೈರ್ವಯಂ ಪ್ರತಿಬೋಧಿತಾಃ ।**
**ಧರ್ಮಜ್ಞಾಃ ಕಶ್ಚ ವಃ ಕಾಮಃ ಕೋ ವರೋ ವಃ ಪ್ರದೀಯತಾಮ್ ॥21 ॥**

**ಉಕ್ತಾಶ್ಚ ಯಸ್ಮಾದ್ ಯುಷ್ಮಾಭಿಃ ಪುತ್ರಕಾ ಇತಿ ವೈ ವಯಮ್ ।**
**ತಸ್ಮಾದ್ ಭವಂತಃ ಪಿತರೋ ಭವಿಷ್ಯಂತಿ ನ ಸಂಶಯಃ ॥ 22 ॥**

ಮಕ್ಕಳೇ, ನಾವು ನಿಮಗೆ ಶರೀರ ನೀಡಿ ಪಿತೃಗಳಾಗಿರುವಂತೆ ನೀವು ಜ್ಞಾನದಾನ ಮಾಡಿ ನಮ್ಮ ಪಿತೃಗಳಾಗಿರುವಿರಿ. ನಿಮ್ಮ ಅಪೇಕ್ಷೆ ಏನಿದೆ? ಯಾವ ವರಬೇಕೋ ಅದನ್ನು ಕೇಳಿರಿ ಎಂದರು. ನೀವು ನಮ್ಮನ್ನೂ ಪುತ್ರರೆ ಎಂದಿರುವಿರಿ. ಇದು ಸತ್ಯವೆ. ಇಂದಿನಿಂದ ನೀವು ಪಿತೃಗಳು ಎನಿಸುವಿರಿ.

## ಸರ್ವಕರ್ಮಗಳೂ ಪಿತೃತೃಪ್ತಿಯಾದರೇ ಸಫಲ

**ಯೋಽನಿಷ್ಟ್ವಾ ತು ಪಿತೄನ್ ಶ್ರಾದ್ಧೈಃ ಕ್ರಿಯಾಃ ಕಾಶ್ಚಿತ್ ಕರಿಷ್ಯತಿ ।**
**ರಾಕ್ಷಸಾ ದಾನವಾ ನಾಗಾಃ ಫಲಂ ಪ್ರಾಪ್ಸ್ಯಂತಿ ತಸ್ಯ ತತ್ ॥ 23 ॥**

ದೇವತೆಗಳು ತಮ್ಮ ಪಿತೃಗಳಿಗೆ ಈ ರೀತಿ ವರ ನೀಡಿದರು.

"ಈ ಪಿತೃಗಳನ್ನು ಶ್ರಾದ್ಧ ವಿಧಿಯಿಂದ ತೃಪ್ತಿಪಡಿಸದಿರುವ ಮಾನವರು ತಾವು ಆಚರಿಸಿದ ಸತ್ಕರ್ಮಗಳ ಪುಣ್ಯಫಲವೆಲ್ಲವನ್ನೂ ದೈತ್ಯರೂ, ದಾನವರೂ, ರಾಕ್ಷಸರೂ, ನಾಗಗಳೂ ಅನುಭೋಗಿಸಲಿ" ಎಂದು.

**ಶ್ರಾದ್ಧೈರಾಪ್ಯಾಯಿತಾಶ್ಚೈವ ಪಿತರಃ ಸೋಮಮವ್ಯಯಮ್ ।**
**ಆಪ್ಯಾಯಮಾನಾಃ ಯುಷ್ಮಾಭಿಃ ವರ್ಧಯಿಷ್ಯಂತಿ ನಿತ್ಯದಾ ॥ 24 ॥**

**ಶ್ರಾದ್ಧೈರಾಪ್ಯಾಯಿತೋ ಸೋಮಃ ಲೋಕಾನ್ ಆಪ್ಯಾಯಯಿಷ್ಯತಿ ॥ 25 ॥**

ಪಿತೃಗಳೇ, ನಿಮ್ಮ ಮೂಲಕ ಸಂತೃಪ್ತರಾದ ಲೌಕಿಕ ಪಿತೃಗಳಾದ ಪಿತೃ ಪಿತಾಮಹ ಪ್ರಪಿತಾಮಹಂದಿರು ತಾವು ಸಂತುಷ್ಟರಾಗುವರಲ್ಲದೆ ತಮಗೆ ದೇವತೆಯಾದ ಚಂದ್ರನನ್ನು ವೃದ್ಧಿಗೊಳಿಸುವರು. ಪಿತೃ ಶ್ರಾದ್ಧದಿಂದ ತೃಪ್ತನಾಗಿ ವೃದ್ಧಿ ಹೊಂದುವ ಚಂದ್ರನಾದರೂ ಸಮುದ್ರ ಪರ್ವತ ವನಗಳಿಂದ ಸಹಿತವಾದ ಈ ಚರಾಚರ ಪ್ರಪಂಚವನ್ನು ತೃಪ್ತಿಗೊಳಿಸುವನು.

## ಶ್ರಾದ್ಧದಿಂದ ಪಿತ್ರನುಗ್ರಹ

**ಶ್ರಾದ್ಧಾನಿ ಪುಷ್ಟಿ ಕಾಮಾಶ್ಚ ಯೇ ಕರಿಷ್ಯಂತಿ ಮಾನವಾಃ ।**
**ತೇಭ್ಯಃ ಪುಷ್ಟಿಂ ಪ್ರಜಾಶ್ಚೈವ ದಾಸ್ಯಂತಿ ಪಿತರಃ ಸದಾ ॥ 26 ॥**

**ಶ್ರಾದ್ಧೇ ಯೇ ಚ ಪ್ರದಾಸ್ಯಂತಿ ತ್ರೀನ್ ಪಿಂಡಾನ್ ನಾಮಗೋತ್ರತಃ ।**
**ಸರ್ವತ್ರ ವರ್ತಮಾನಾನ್ ತಾನ್ ಪಿತರಃ ಸಪಿತಾಮಹಾನ್ ।**
**ಭಾವಯಿಷ್ಯಂತಿ ಸತತಂ ಶ್ರಾದ್ಧದಾನೇನ ತರ್ಪಿತಾಃ ॥ 27 ॥**

ಪುಷ್ಟಿಕಾಮನೆಯಿಂದ ಯಾರು ಶ್ರಾದ್ಧ ಮಾಡುವರೋ ಅವರಿಗೆ ಪಿತೃಗಳು ಪುಷ್ಟಿಯನ್ನು ಹಾಗೂ ಸತ್‌ಸಂತಾನವನ್ನೂ ನೀಡುವರು.

ಯಾವ ಪಿತೃಭಕ್ತನು ಶ್ರಾದ್ಧಾಂಗವಾಗಿ ಪಿತೃ-ಪಿತಾಮಹ-ಪ್ರಪಿತಾಮಹರಿಗೆ ಅವರ ನಾಮ ಗೋತ್ರಗಳನ್ನು ಹೇಳಿ ಮೂರು ಪಿಂಡಗಳನ್ನು ಪ್ರದಾನ ಮಾಡುವನೋ ಅಂತಹವನ ಶ್ರಾದ್ಧದಿಂದ ಪಿತೃಗಳು ಸಂತುಷ್ಟರಾಗುವರು.

ಭೀಷ್ಮನೇ, ಬ್ರಹ್ಮದೇವನೇ ಹೀಗೆ ಆದೇಶ ನೀಡಿರುವನು.

**ತ ಏತೇ ಪಿತರೋ ದೇವಾಃ ದೇವಾಶ್ಚ ಪಿತರಸ್ತಥಾ ।**
**ಅನ್ಯೋನ್ಯಂ ಪಿತರೋ ಹ್ಯೇತೇ ದೇವಾಶ್ಚ ಪಿತರಶ್ಚ ಹ ॥ 28 ॥**

ನಂತರ ದೇವತೆಗಳು-ಪಿತೃಗಳು ಪರಸ್ಪರ ಹೀಗೆ ಮಾತನಾಡಿಕೊಂಡರು. ಯಾರು ದೇವತೆಗಳೋ ಅವರೆ ಪಿತೃಗಳೂ ಆಗಿರುತ್ತಾರೆ. ಯಾರು ಪಿತೃಗಳೋ ಅವರು ದೇವತೆಗಳೂ ಆಗಿರುತ್ತಾರೆ. ಹೀಗೆ ದೇವತೆಗಳು - ಪಿತೃಗಳು ಪರಸ್ಪರ ಪೂಜ್ಯರಾಗಿರುತ್ತಾರೆ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಮಾರ್ಕಂಡೇಯ-ಸನತ್ಕುಮಾರ ಸಂವಾದದಲ್ಲಿ
ಪಿತೃಗಳ ವರ್ಣನೆವೆಂಬಲ್ಲಿ
ಹದಿನೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 18 ಹರಿಪರ್ವ

## ಅಥ ಅಷ್ಟಾದಶೋಽಧ್ಯಾಯಃ

### ಪಿತೃಗಣ-ಲೋಕಶಕ್ತಿ ಪ್ರಭಾವ ವರ್ಣನೆ

*ಮಾರ್ಕಂಡೇಯ ಉವಾಚ –*

**ಕಿಯಂತೋ ವೈ ಪಿತೃಗಣಾಃ ಕಸ್ಮಿಂಲ್ಲೋಕೇ ಪ್ರತಿಷ್ಠಿತಾಃ ।**
**ವರ್ತಂತೇ ದೇವ ಪ್ರವರಾಃ ದೇವಾನಾಂ ಸೋಮವರ್ಧನಾಃ ॥ 1 ॥**

ಭೀಷ್ಮನೇ, ತೇಜೋವಂತನಾದ ಸನತ್ಕುಮಾರನು ಹೀಗೆ ಹೇಳಿದ ನಂತರ ಕುಮಾರನನ್ನು ಜನರ ಸಂದೇಹ ನಿವಾರಣೆಗಾಗಿ ಪುನಃ ಪ್ರಶ್ನಿಸಿದನು. ನಾನೇನು ಪ್ರಶ್ನಿಸಿದೆ, ಅದಕ್ಕೆ ಅವನೇನು ಉತ್ತರ ಹೇಳಿದನೆಂದು ತಿಳಿಸುವೆ.

ನಾನು ಸನತ್ಕುಮಾರರನ್ನು ಪ್ರಶ್ನಿಸಿದೆ – ಗುರುಗಳೇ !

ಪಿತೃಗಣವೆಂದು ಕರೆಯಬೇಕಾದರೆ ಅವರು ಎಷ್ಟು ಮಂದಿ ಇರುವರು? ಅವರೆಲ್ಲ ಯಾವ ಲೋಕದಲ್ಲಿದ್ದಾರೆ ಎಂದು ತಿಳಿಸಿರಿ ಎಂದು.

### ಪಿತೃಗಳು ಏಳು ಮಂದಿ

**ಸಪ್ತೈತೇ ಯಜತಾಂ ಶ್ರೇಷ್ಠ ಸ್ವರ್ಗೇ ಪಿತೃಗಣಾಃ ಸ್ಮೃತಾಃ ।**
**ಚತ್ವಾರೋ ಮೂರ್ತಿಮಂತಶ್ಚ ತ್ರಯಃ ತೇಷಾಮಮೂರ್ತಯಃ ॥ 2 ॥**

**ಧರ್ಮಮೂರ್ತಿಧರಾಃ ತೇಷಾಂ ತ್ರಯೋ ಯೇ ಪರಮಾ ಗಣಾಃ ॥ 3 ॥**

ಸನತ್ಕುಮಾರರು ಹೇಳುವರು – ಮಾರ್ಕಂಡೇಯನೇ, ಈ ಪಿತೃಗಳಲ್ಲಿ ಏಳು ಮುಖ್ಯವಾದ ಗುಂಪುಗಳಿವೆ. ವೈರಾಜರು-ಅಗ್ನಿಷ್ವಾತ್ತರು-ಬರ್ಹಿಷದರು- ಸುಕಾಲರು-ಅಂಗೀರಸರು-ಸುಸ್ವಧರು – ಸೋಮಪರು

ಎಂದು. ಇವರಲ್ಲಿ ಸುಕಾಲರು, ಅಂಗೀರಸರು, ಸುಸ್ವಧರು, ಸೋಮಪರಿಗೆ ಕರ್ಮಜನ್ಯವಾದ ಶರೀರವಿದೆ. ಇವರು ಮೂರ್ತರಾಗಿರುವರು. ವೈರಾಜರು-ಅಗ್ನಿಷ್ವಾತ್ತರು-ಬರ್ಹಿಷದರೆಂಬ ಮೂರು ಗಣದವರು ಮಾತ್ರ ಕಾಮರೂಪಿಗಳಾದ್ದರಿಂದ ಅಮೂರ್ತರಾಗಿರುವರು. ಇವರು ತಪಃ ಸಾಮರ್ಥ್ಯದಿಂದಾಗಿ ಆಗಸಕ್ಕಿಂತಲೂ ವಿಶಾಲವಾದ ದೇಹ ಧರಿಸಬಲ್ಲರು. ಅದರಂತೆ ಪರಮಾಣುವಿನಷ್ಟು ಸೂಕ್ಷ್ಮದೇಹವನ್ನು ಹೊಂದಬಲ್ಲರು. ಬ್ರಹ್ಮನ ಮಾನಸಪುತ್ರರಾದ ಇವರು ಅಗಾಧಜ್ಞಾನವುಳ್ಳವರು. ಧರ್ಮವೇ ಮೂರ್ತಿವೆತ್ತಂತೆ ಇರುವವರು. ಪರಮಶ್ರೇಷ್ಠರಾದ ಅಮೂರ್ತ ಪಿತೃಗಣ ಸ್ಥಾನವನ್ನು ಮೊದಲು ಹೇಳುವೆ.

## ವೈರಾಜ ಪಿತೃಗಳು

**ವಿರಾಜಸ್ಯ ದ್ವಿಜಶ್ರೇಷ್ಠ ವೈರಾಜಾ ಇತಿ ವಿಶ್ರುತಾಃ ।**
**ಯಜಂತಿ ತಾನ್ ದೇವಗಣಾಃ ವಿಧಿದೃಷ್ಟೇನ ಕರ್ಮಣಾ ॥ 4 ॥**

**ಏತೇ ವೈ ಯೋಗ ವಿಭ್ರಷ್ಟಾ ಲೋಕಾನ್ ಪ್ರಾಪ್ಯ ಸನಾತನಾನ್ ।**
**ಪುನರ್ಯುಗ ಸಹಸ್ರಾಂತೇ ಜಾಯಂತೇ ಬ್ರಹ್ಮವಾದಿನಃ ॥ 5 ॥**

ವಿರಾಜನಾಮಕನಾದ ಬ್ರಹ್ಮದೇವನ ಮಕ್ಕಳಾದುದರಿಂದ 'ವೈರಾಜ'ರೆಂದು ಪ್ರಸಿದ್ಧರಾದ ಈ ಪಿತೃಗಳನ್ನು ದೇವತೆಗಳೂ ಸಹ ವಿಧಿವತ್ತಾಗಿ ಪೂಜಿಸುವರು. ಇವರು ಸನಾತನ ಬ್ರಹ್ಮಲೋಕದಲ್ಲಿದ್ದರೂ ಆತ್ಯಂತಿಕ ವೈರಾಗ್ಯವಿಲ್ಲದೆ ಯೋಗಭ್ರಷ್ಟರಾಗಿ ಶ್ರೀಹರಿಯ ಆತ್ಯಂತಿಕ ಪ್ರಸಾದಕ್ಕೆ ಪಾತ್ರರಾಗದೆ ಇಲ್ಲಿಯೆ ಉಳಿದುಕೊಂಡು ಬಿಡುತ್ತಾರೆ. ಪುನಃ ಸಾವಿರ ಯುಗ ಕಳೆದಾಗ ಪುನಃ ಬ್ರಹ್ಮವಾದಿಗಳಾಗಿ ಭುವಿ ಜನ್ಮವೆತ್ತುವರು. ಅವರಿಗೆ ಹಿಂದಿನ ಯುಗದ ಸ್ಮರಣೆ ಸ್ಮೃತಿಪಟಲದಲ್ಲಿರುವುದರಿಂದ ಪುನಃ ಈ ಶುದ್ಧ ಆತ್ಮ ತತ್ವ ವಿಜ್ಞಾನವೆಂಬ ಸಾಂಖ್ಯಯೋಗವನ್ನಾಶ್ರಯಿಸಿ ಸಿದ್ಧರಾಗಿ ಪುನರಾವೃತ್ತಿರಹಿತ ಮೋಕ್ಷ ಮಾರ್ಗವನ್ನು ಹೊಂದುವರು. ಈ ಪಿತೃಗಳೇ ತಮ್ಮ ಯೋಗ ಶಕ್ತಿಯಿಂದ ಯೋಗಿಗಳ ಯೋಗ ಸಾಧನೆಯನ್ನು ವೃದ್ಧಿಗೊಳಿಸುತ್ತಾರೆ. ಚಂದ್ರನನ್ನು ವೃದ್ಧಿಗೊಳಿಸುವ ಈ ಸೋಮಪರೆನಿಸುವ ಪಿತೃಗಣಗಳ ಸೃಷ್ಟಿಯೇ ಪ್ರಥಮವಾದದ್ದು.

## ವೈರಾಜರ ಮೂರು ಕನ್ಯಾಮಣಿಗಳು

**ಏತೇಷಾಂ ಮಾನಸೀ ಕನ್ಯಾ ಮೇನಾ ನಾಮ ಮಹಾಗಿರೇಃ ।**
**ಪತ್ನೀ ಹಿಮವತಃ ಶ್ರೇಷ್ಠಾ ಯಸ್ಯಾ ಮೈನಾಕ ಉಚ್ಯತೇ ॥ 6 ॥**
**ತ್ರಿಸ್ರಃ ಕನ್ಯಾಸ್ತು ಮೇನಾಯಾಂ ಜನಯಾಮಾಸ ಶೈಲರಾಟ್ ।**
**ಅಪರ್ಣಾಂ ಏಕಪರ್ಣಾಂ ಚ ತೃತೀಯಾಂ ಏಕಪಾಟಲಾಮ್ ॥ 7 ॥**
**ಲೋಕಾನ್ ಸಂತಾಪಯಾಮಾಸುಃ ತಾಸ್ತಿಸ್ರಃ ಸ್ಥಾಣುಜಂಗಮಾನ್ ॥ 8 ॥**
**ಆಹಾರಮೇಕಪರ್ಣೇನ ಏಕಪರ್ಣಾ ಸಮಾಚರತ್ ।**
**ಪಾಟಲಾಪುಷ್ಪಮೇಕಂ ಚ ಆದಧೌ ಏಕಪಾಟಲಾ ॥ 9 ॥**

ಈ ವೈರಾಜ ಪಿತೃಗಳ ಮಾನಿೀ ಕನ್ಯೆಯೇ ಮೇನಾದೇವಿಯು. (ಮೇನಕೆಯಲ್ಲ). ನಗಾಧಿರಾಜನಾದ ಹಿಮಾಲಯನು ಇವಳನ್ನು ಪ್ರಾಣಿಗ್ರಹಣ ಮಾಡಿದ್ದನು. ಹಿಮಾಲಯ-ಮೇನಾದೇವಿಯಲ್ಲಿ ಮೊದಲು ಮೈನಾಕ, ಪರ್ವತನು ಚೊಚ್ಚಲ ಮಗನಾಗಿ ಹುಟ್ಟಿದನು. ಇವನ ಮಗನೇ ಅಪಾರ ರತ್ನಾಶ್ರಯನಾದ ಕ್ರೌಂಚನು. ಈ ಹಿಮಾಲಯನಿಂದ ಅಪರ್ಣಾ, ಏಕಪರ್ಣಾ, ಏಕಪಾಟಲಾ ಎಂಬ ಮೂರು ಹೆಣ್ಣು ಮಕ್ಕಳು ಅವತರಿಸಿದರು. ಮೇನೆಯ ಈ ಮೂವರು ಮಕ್ಕಳೂ ಮಹಾ ತಪಸ್ವಿನಿಯರು. ಬ್ರಹ್ಮವಾದಿನಿಯರು. ಪೂರ್ಣಯೋಗಿನಿಯರು. ಇಂದ್ರಿಯ ನಿಗ್ರಹಿಗಳಾಗಿದ್ದರು. ಈ ಮೂವರ ಅಭೂತಪೂರ್ವವಾದ ತಪಸ್ಸಿನ ತೀವ್ರತೆಗೆ ಚರಾಚರ ಪ್ರಪಂಚವೆಲ್ಲವೂ ಸಂತ್ರಸ್ತವಾಗಿತ್ತು.

### ಏಕಪರ್ಣೆಯ ಏಕಪರ್ಣಾಹಾರ

ಇವರಲ್ಲಿ ಎರಡನೆಯವಳಾದ ಏಕಪರ್ಣೆಯು ಉಳಿದೆಲ್ಲ ಆಹಾರ ವಿಹಾರಗಳನ್ನು ತ್ಯಜಿಸಿ, ಪ್ರತಿದಿನವೂ ಒಂದೇ ಗಿಡದೆಲೆಯನ್ನು ತಿಂದು ಘೋರ ತಪಸ್ಸನ್ನಾಚರಿಸಿದಳು. ಇದರಿಂದಾಗಿ 'ಏಕಪರ್ಣಾ' ಎಂದೆ ಹೆಸರಾಯಿತು.

ಮೂರನೆಯವಳಾದ ಏಕಪಾಟಲಾ ಎಂಬುವುಳಾದರೂ ದಿನಕ್ಕೊಂದು ಪಾಟಲಪುಷ್ಪ (ದಾಸವಾಳ)ವನ್ನು ತಿನ್ನುತ್ತಾ, ನಿರಂತರ ಉಪವಾಸದಿಂದಾಗಿ ಘೋರ ತಪಸ್ಸನ್ನಾಚರಿಸಿ 'ಏಕಪಾಟಲಾ' ಎಂದೇ ಖ್ಯಾತಳಾದಳು.

## ಅನ್ನಪೂರ್ಣೆ ಅಪರ್ಣಾ ಆದಳು

ಏಕಾ ತತ್ರ ನಿರಾಹಾರಾ ತಾಂ ಮಾತಾ ಪ್ರತ್ಯಷೇಧಯತ್ ।
'ಉ' 'ಮಾ' ಇತಿ ನಿಷೇದಂತೀ ಮಾತೃಸ್ನೇಹೇನ ದುಃಖಿತಾ ॥ 10 ॥

ಉಮೇತ್ಯೇವಾಭವತ್ ಖ್ಯಾತಾ ತ್ರಿಷು ಲೋಕೇಷು ಸುಂದರೀ ॥ 11 ॥

ಮೊದಲನೆಯವಳಾದ ಅಪರ್ಣೆಯೆ ಅನ್ನಪೂರ್ಣಾದೇವಿಯಾದ ಪಾರ್ವತಿಯು. ಶಿವನನ್ನು ಒಲಿಸಬೇಕೆಂದು ತೀಕ್ಷ್ಣ ತಪಸ್ಸನ್ನು ಮಾಡಲು ಗೌರೀಶಂಕರ ಶಿಖರಕ್ಕೆ ಹೊರಟಾಗ ತಾಯಿಯಾದ ಮೇನೆಯು ಮಾತೃ ಸ್ನೇಹದಿಂದ ಪಾರ್ವತಿಯ ಶಿರೀಷ ಪುಷ್ಪದಂತೆ ಕೋಮಲ ಶರೀರವನ್ನು ಕಂಡು 'ಉ' 'ಮಾ' ಎಂದಳು. ಉ = ಎಲೋ ಅಪರ್ಣೆಯೇ! ಮಾ = ತಪಸ್ಸಿಗಾಗಿ ಹೋಗುವುದು ಬೇಡ ಎಂದು. ಅದರಿಂದ ಪಾರ್ವತಿಯು ಉಮಾ ಎಂದು ಕರೆಯಲ್ಪಟ್ಟಳು.

ಏತತ್ ತು ತ್ರಿಕುಮಾರೀಕಂ ಜಗತ್ ಸ್ಥಾಸ್ಯತಿ ಭಾರ್ಗವ ।

ಈ ಮೂರು ಮಹಿಳಾ ಮಹರ್ಷಿಗಳ ತಪಸ್ಸಿನಿಂದಲೇ ಈ ಜಗತ್ತು ಸ್ಥಿರವಾಗಿ ನಿಂತಿದೆ. ಈ ಮೂವರೂ ತಪಸ್ಸೇ ಮೂರ್ತಿಮತ್ತಾಗಿ ಇರುವವರು.

ತಪಃ ಶರೀರಾಸ್ತಾಃ ಸರ್ವಾಸ್ತಿಸ್ರಃ ಯೋಗಬಲಾನ್ವಿತಾಃ ।
ಸರ್ವಾಶ್ಚ ಬ್ರಹ್ಮವಾದಿನ್ಯಃ ಸರ್ವಾಶ್ಚೈವೋರ್ಧ್ವರೇತಸಃ ॥ 12 ॥

ಬ್ರಹ್ಮವಾದಿನಿಯರು ಯೋಗಬಲವುಳ್ಳವರು, ಊರ್ಧ್ವರೇತಸ್ಕರೂ ಆಗಿರುವರು.

## ಮೂರು ಮಹಿಳೆಯರ ವಿವಾಹ

ಉಮಾ ತಾಸಾಂ ವರಿಷ್ಠಾ ಚ ಜ್ಯೇಷ್ಠಾ ಚ ವರವರ್ಣಿನೀ ।
ಮಹಾಯೋಗಬಲೋಪೇತಾ ಮಹಾದೇವ ಮುಪಸ್ಥಿತಾ ॥ 13 ॥

ಅಸಿತಸ್ಯೈಕಪರ್ಣಾ ತು ದೇವಲಸ್ಯ ಮಹಾತ್ಮನಃ ।
ಪತ್ನೀ ದತ್ತಾ ಮಹಾಬ್ರಹ್ಮನ್ ಯೋಗಾಚಾರ್ಯಾಯ ಧೀಮತೇ ॥ 14 ॥

ಜೈಗಿಷವ್ಯಾಯ ತು ತಥಾ ವಿದ್ಧಿ ತಾಮೇಕಪಾಟಲಾಮ್ ॥ 15 ॥

ಈ ಮೂವರೂ ಅದ್ವಿತೀಯ ಯೋಗಬಲದಿಂದ ಸಕಲಸಿದ್ಧಿಗಳನ್ನು ಕೈವಶ ಮಾಡಿಕೊಂಡಿದ್ದರೂ ಸ್ತ್ರೀಯರಿಗೆ ವಿವಾಹವಿಲ್ಲದೆ ಮುಕ್ತಿಯಿಲ್ಲವೆಂದು ತಿಳಿದು

ಮೂವರು ಯೋಗ್ಯಪತಿಗಳನ್ನು ವರಿಸಿದರು. ಇವರಲ್ಲಿ ಅಪರ್ಣೆಯು ಜ್ಯೇಷ್ಠಳೂ ಶ್ರೇಷ್ಠಳೂ ಆಗಿದ್ದು ಮಹಾತಪಸ್ಸಿನ ಯೋಗದಿಂದ ದೇವದೇವನಾದ ಮಹಾದೇವನನ್ನೆ ಪತಿಯನ್ನಾಗಿಸಿಕೊಂಡಳು. ಜಗದಂಬೆಯಿಂದ ವಿಶ್ವಮಾನ್ಯಳಾದಳು.

ಏಕಪರ್ಣೆಯು ಮಹಾತಪಸ್ವಿನಿಯಾಗಿದ್ದು ದೇವಲ ವಂಶದ ಅಸಿತ ಮಹರ್ಷಿಗಳನ್ನು ಪಾಣಿಗ್ರಹಣ ಮಾಡಿದಳು. ಮಹಾಯೋಗಿನಿಯಾದ ಏಕಪಾಟಲೆಯು ಯೋಗಾಚಾರ್ಯರೂ, ಬ್ರಹ್ಮದರ್ಶಿಗಳೂ ಆದ ರುದ್ರಾಂಶ 'ಜೈಗಿಷವ್ಯ'ರನ್ನು ಕೈ ಹಿಡಿದು ಉದ್ಧಾರ ಹೊಂದಿದಳು.

ಹೀಗೆ ಏಕಪರ್ಣಾ, ಏಕಪಾಟಲೆಯರು ಯೋಗಾಚಾರ್ಯರಾದ ಜೈಗಿಷವ್ಯ ಅಸಿತರ ಸೇವೆಯಲ್ಲಿ ನಿರತರಾದರು.

## ಅಗ್ನಿಷ್ವಾತ್ತ ಪಿತೃ ಗಣ

**ಲೋಕಾಃ ಸೋಮಪದಾ ನಾಮ ಮರೀಚೇಃ ಯತ್ರ ವೈಸುತಾಃ ।**
**ಪಿತರೋ ಯತ್ರ ವರ್ತಂತೇ ದೇವಾಸ್ತಾನ್ ಭಾವಯಂತ್ಯುತ ॥ 16 ॥**
**ಅಗ್ನಿಷ್ವಾತ್ತಾಃ ಇತಿ ಖ್ಯಾತಾಃ ಸರ್ವ ಏವಾಮಿತೌಜಸಃ ।**
**ಏತೇಷಾಂ ಮಾನಸೀ ಕನ್ಯಾ ಅಚ್ಛೋದಾ ನಾಮ ನಿಮ್ನಗಾ ॥ 17 ॥**
**ಅಚ್ಛೋದಂ ನಾಮ ವಿಖ್ಯಾತಂ ಸರೋ ಯಸ್ಯಾಃ ಸಮುತ್ಥಿತಮ್ ॥ 18 ॥**

ಅಗ್ನಿಷ್ವಾತ್ತರೆಲ್ಲರೂ ಮಾರೀಚ ಪ್ರಜಾಪತಿಯ ಪುತ್ರರಾಗಿದ್ದು ಸೋಮಪಥ ಅಥವಾ ಸೋಮಪದವೆಂಬ ಲೋಕದಲ್ಲಿದ್ದಾರೆ. ಇವರೆಲ್ಲರೂ ಪಿತೃಗಣಕ್ಕೆ ಸೇರಿದ್ದು ನಿರಂತರ ಯಜ್ಞ ಯಾಗಾದಿಗಳನ್ನು ಮಾಡುವ ಇವರನ್ನು ದೇವತೆಗಳೂ ಪೂಜಿಸುವರು. ಅಗ್ನಿಷ್ವಾತ್ತ ಪಿತೃಗಳೂ ಮಹಾತೇಜಸ್ವಿಗಳು. ಇವರ ಮಾನಸೀ ಕನ್ಯೆಯೇ 'ಅಚ್ಛೋದೆ'ಯು. ಸ್ವಚ್ಛ ಉದಕವುಳ್ಳ ಅಚ್ಛೋದ ಸರಸ್ಸು ಇವಳಿಂದಲೇ ಆವಿರ್ಭವಿಸಿದ್ದು.

**ತಯಾ ನ ದೃಷ್ಟಪೂರ್ವಾಸ್ತೇ ಪಿತರಸ್ತು ಕದಾಚನ ।**
**ಅಪ್ಯಮೂರ್ತಾನಥ ಪಿತೄನ್ ಸಾ ದದರ್ಶ ಶುಚಿಸ್ಮಿತಾ ॥ 19 ॥**
**ಸಂಭೂತಾ ಮನಸಾ ತೇಷಾಂ ಪಿತೄನ್ ಸ್ವಾನ್ ನಾಭಿಜಾನತೀ ॥ 20 ॥**

**ಸಾ ದೃಷ್ಟ್ವಾ ಪಿತರಂ ವವ್ರೇ ವಸುಂ ನಾಮಾಂತರಿಕ್ಷಗಮ್ ।**
**ಅಮಾವಸುರಿತಿಖ್ಯಾತಂ ಆಯೋಃ ಪುತ್ರಂ ಯಶಸ್ವಿನಮ್ ॥ 21 ॥**

ಅಚ್ಛೋದೆಯು ತನಗೆ ಜನ್ಮ ನೀಡಿದ ಪಿತೃಗಳನ್ನು ಈ ಮೊದಲು ನೋಡಿದವಳಲ್ಲ. ಆದರೆ ಅಗ್ನಿಷ್ವಾತ್ತರನ್ನು ಕಾಣಬೇಕೆಂಬ ಹಂಬಲದಿಂದ ಅರಸಲು ಮನೆಯಿಂದ ಹೊರಟಿದ್ದಳು. ಬಹಳ ವರ್ಷ ತಪಸ್ಸು ಮಾಡಿದ ದೈವೀಪ್ರಭಾವವುಳ್ಳ ಅಚ್ಛೋದೆಯು ದಿವ್ಯದಿಟ್ಟ ಪಡೆದು ಪಿತೃ ನಿರೀಕ್ಷಣಕ್ಕಾಗಿ ಹೊರಟಾಗ ತನ್ನ ಕಣ್ಣೆದುರೇ ಅಗ್ನಿಷ್ವಾತ್ತರು ಬಂದಿದ್ದರು, ಈ ಮೊದಲು ಎಂದೂ ಅವರನ್ನು ನೋಡದ್ದರಿಂದ ಗುರುತು ಸಿಗಲಿಲ್ಲ. ಅವಳು ಈ ಪಿತೃಗಳ ಮಧ್ಯೆ ಅಮಾವಸು ಎಂಬ ಗಂಧರ್ವನನ್ನು ನೋಡಿ ಮುಗ್ಧಳಾಗಿ ವಿಮಾನದಲ್ಲಿ ಕುಳಿತು ಅದ್ರಿಕೆಯ ಜೊತೆಗೆ ವಿಹಾರಕ್ಕಾಗಿ ಹೊರಟಿರುವ ಅಮಾವಸುವನ್ನು ನೋಡಿ, 'ನೀನೇ ನನ್ನ ತಂದೆ' ಎಂದು ಆಲಿಂಗಿಸಿದಳು. ಇಚ್ಛಾನುಸಾರವಾಗಿ ರೂಪಧರಿಸುವ ಅಚ್ಛೋದೆಯು ಬೇರೆಯವನನ್ನು ತಂದೆಯನ್ನಾಗಿ ಭಾವಿಸಿದ್ದರಿಂದ ಮಾನಸಿಕ ವ್ಯಭಿಚಾರ ಪಿತೃ ಅತಿಕ್ರಮಣ ಪಾಪ ಯೋಗಭ್ರಷ್ಟಳಾಗಿ ಕೆಳಗೆ ಬೀಳುವವಳಾದಳು.

**ತ್ರೀಣ್ಯಪಶ್ಯದ್ ವಿಮಾನಾನಿ ಪತಮಾನಾ ದಿವಶ್ಚ್ಯುತಾ ।**
**ತ್ರಸರೇಣು ಪ್ರಮಾಣಾನಿ ಸಾಪಶ್ಯತ್ ತೇಷು ತಾನ್ ಪಿತೄನ್ ।**
**ತ್ರಾಯಧ್ವಮಿತ್ಯುವಾಚಾರ್ತಾ ಪತಂತೀ ತಾನ್ ಅವಾಕ್ ಶಿರಾಃ ॥ 22 ॥**

ಮೇಲಿನಿಂದ ಕೆಳಗೆ ಬೀಳುತ್ತಿರುವಾಗಲೇ ಮೂರು ವಿಮಾನಗಳಲ್ಲಿ ತ್ರಸರೇಣು ಪ್ರಮಾಣದಲ್ಲಿದ್ದರೂ ತೇಜೋಭಾಸುರರಾಗಿ ಕುಳಿತಿರುವ ತನ್ನ ನಿಜವಾದ ತಂದೆ ಅಗ್ನಿಷ್ವಾತ್ತರನ್ನು ಕಂಡಳು. ಉರುಳುತ್ತಿರುವಾಗಲೇ ಅವರಿಗೆ ಕೈಮುಗಿದು 'ತ್ರಾಯಧ್ವಂ ನನ್ನ ರಕ್ಷಿಸಿರಿ' ಎಂದು ಗೋಗರೆದಳು. ಆಗ ಅವರು ಮಗು! ಭಯಪಡಬೇಡ ನಿಲ್ಲು ಎಂದು ಪ್ರೀತಿಯಿಂದ ಕೈಯೆತ್ತಿ ನಿಲ್ಲಲು ಹೇಳಿದರು. ಅವರ ತಪಃಪ್ರಭಾವದಿಂದಾಗಿ ಅಂತರಿಕ್ಷದ ಅಂತರಾಲದಲ್ಲಿಯೆ ನಿಂತಳು. ಬಳಿಕ ಅಚ್ಛೋದೆಯು ದೈನ್ಯದಿಂದ ಕೇಳಿಕೊಂಡು ತನ್ನ ತಂದೆಯನ್ನು ಪ್ರಾರ್ಥಿಸಿಕೊಂಡಳು. ಅವಳ ಮುಗ್ಧಭಾವ-ಪಿತೃಭಕ್ತಿಯಿಂದ

ಪ್ರಸನ್ನರಾದ ಅವರು ಅವಳ ಮುಂದಿನ ಭವಿಷ್ಯವನ್ನೆಲ್ಲ ತಿಳಿದು ಸಂತೈಸುತ್ತಾ ಹೀಗೆಂದರು.

**ಊಚುಸ್ತೇ ಪಿತರಃ ಕನ್ಯಾಂ ಭ್ರಷ್ಟೈಶ್ವರ್ಯಾಂ ವ್ಯತಿಕ್ರಮಾತ್ ।**
**ಭ್ರಷ್ಟೈಶ್ವರ್ಯಾ ಸ್ವದೋಷೇಣ ಪತಸಿ ತ್ವಂ ಶುಚಿಸ್ಮಿತೇ ॥ 23 ॥**
**ಇತ್ಯುಕ್ತ್ವಾ ಪಿತೃಭಿಃ ಸಾ ತು ಪಿತ್ರ್ಯಾನ್ ಪ್ರಾಸಾದಯತ್ ಸ್ವಕಾನ್ ।**
**ಧ್ಯಾತ್ವಾ ಪ್ರಸಾದಂ ತೇ ಚಕ್ರುಃ ತಸ್ಯಾಃ ಸರ್ವೇಽನುಕಂಪಯಾ ॥ 24 ॥**

ಶುಚಿಸ್ಮಿತಳೇ, ನಿನ್ನ ಪಿತೃಲಂಘನರೂಪ ದೋಷದಿಂದಾಗಿ ಯೋಗಶಕ್ತಿ ಭ್ರಷ್ಟಳಾಗಿ ನೀನು ಕೆಳಗುರುಳುತ್ತಿರುವೆ. ದೇವತೆಯಾಗಿರುವಾಗ ಮಾಡಿದ ಕರ್ಮಗಳು ಕೂಡಲೇ ಫಲ ನೀಡುತ್ತದೆ. ಮಾನವರಾಗಿದ್ದಾಗ ಮಾಡಿದ ಶುಭಾಶುಭ ಫಲಗಳು ಅವನು ಸತ್ತ ನಂತರ ಸ್ವರ್ಗ-ನರಕರೂಪ ಫಲ ನೀಡುತ್ತದೆ. ದೇವತೆಗಳು ಮಾಡಿದ ಶುಭಾಶುಭ ಫಲಗಳನ್ನು ಯಾವ ಶರೀರದಿಂದ ಮಾಡುವವರೋ ಆ ಶರೀರದಿಂದಲೇ ಅನುಭವಿಸಬೇಕಷ್ಟೇ. ಆದ್ದರಿಂದ ಪಿತೃ ಅತಿಕ್ರಮಣದಿಂದಾಗಿ ತಗುಲಿದ ಪಾಪದಿಂದಾಗಿ ನಿನಗೆ ಭೂಮಿಯಲ್ಲಿ ನರಜನ್ಮವು ಆಗುತ್ತದೆ ಎಂದರು.

ಅಚ್ಛೋದೆಯು ಪುನಃ ಸ್ತುತಿ ಮಾಡಿ ಪ್ರಸನ್ನಗೊಳಿಸಿದಳು. ಪಿತೃಗಳು ದಯೆ ತೋರಿ ಇವಳಿಗೆ ಯಾವ ರೀತಿಯಲ್ಲಿ ಶ್ರೇಯಸ್ಸಾಗುವುದೆಂದು ಯೋಚಿಸಿ ಹೀಗೆಂದರು.

## ಅಚ್ಛೋದೆಯಲ್ಲಿ ವ್ಯಾಸ ಜನನ

ಅಸ್ಯ ರಾಜ್ಞೋ ವಸೋಃ ಕನ್ಯಾ ತ್ವಮಪತ್ಯಂ ಭವಿಷ್ಯಸಿ ।
ಕನ್ಯಾ ಚ ಭೂತ್ವಾ ಲೋಕಾನ್ ಸ್ವಾನ್ ಪುನಃ ಪ್ರಾಪ್ಸ್ಯಸಿ ದುರ್ಲಭಾನ್॥25॥
ಪರಾಶರಸ್ಯ ದಾಯಾದಂ ತ್ವಂ ಪುತ್ರಂ ಜನಯಿಷ್ಯಸಿ ।
ಸ ವೇದಮೇಕಂ ಬ್ರಹ್ಮರ್ಷಿಃ ಚತುರ್ಧಾ ವಿಭಜಿಷ್ಯತಿ ॥ 26 ॥

ಪುತ್ರಿ ಅಚ್ಛೋದೇ ! ದೈವಸಂಕಲ್ಪವನ್ನು ಮೀರುವುದು ದುಃಸಾಧ್ಯ. ನೀನು ಯಾರನ್ನು ತಂದೆಯೆಂದು ಭ್ರಮಿಸಿ ಆಲಂಗಿಸಿದೆಯೋ ಆ ಅಮಾವಸುವಿನ ಮಗಳಾಗಿ ನೀನು ಭೂಮಿಯಲ್ಲಿ ಜನಿಸುವೆ.

ಸಾಕ್ಷಾತ್ ಭಗವಂತನೇ ಪರಾಶರದಿಂದ ನಿನ್ನಲ್ಲಿ ವೇದವ್ಯಾಸರಾಗಿ ಅವತರಿಸುವನು. ಆ ವಾಸಿಷ್ಠ ಕೃಷ್ಣನಾದರೂ ಕೃತಯುಗದಲ್ಲಿ ಒಂದಾಗಿದ್ದ ವೇದಗಳನ್ನು ಶಾಖೋಪಶಾಖೆಯಾಗಿ ವಿಂಗಡಿಸಿ ವೇದವ್ಯಾಸನೆಂಬ ಸಾರ್ಥಕ ನಾಮ ಹೊಂದುವನು. ವೇದಾರ್ಥನಿರ್ಣಾಯಕ ಬ್ರಹ್ಮಸೂತ್ರಗಳನ್ನೂ ರಚಿಸುವರು.

**ಮಹಾಭಿಷಸ್ಯ ಪುತ್ರೌ ದ್ವೌ ಶಂತನೋಃ ಕೀರ್ತಿವರ್ಧನೌ ।**
**ವಿಚಿತ್ರವೀರ್ಯಂ ಧರ್ಮಜ್ಞಂ ತಥಾ ಚಿತ್ರಾಂಗದಂ ಶುಭಮ್ ॥ 27 ॥**

**ಏತಾನುತ್ಪಾದ್ಯ ಪುತ್ರಸ್ತ್ವಂ ಪುನರ್ಲೋಕಾನವಾಪ್ಸ್ಯಸಿ ।**
**ವ್ಯತಿಕ್ರಮಾತ್ ಪಿತೄಣಾಂ ಚ ಜನ್ಮ ಪ್ರಾಪ್ಸ್ಯಸಿ ಕುತ್ಸಿತಮ್ ॥ 28 ॥**

**ಅಸ್ಯೈವ ರಾಜ್ಞಃ ಕನ್ಯಾ ತ್ವಂ ಅದ್ರಿಕಾಯಾಃ ಭವಿಷ್ಯಸಿ ।**
**ಅಷ್ಟಾವಿಂಶೇ ಭವಿತ್ರೀ ತ್ವಂ ದ್ವಾಪರೇ ಮತ್ಸ್ಯಯೋಗಿಜಾ ॥ 29 ॥**

ಪುತ್ರಿ ಅಚ್ಛೋದೆ ! ಯಾವಾಗ ಮಹಾನುಭಾವನಾದ ಉಪರಿಚರವಸುವು ಮನುಷ್ಯ ಲೋಕದಲ್ಲಿ ಜನ್ಮವೆತ್ತುವನೋ ಆಗಲೇ ನೀನು ಅವನ ಪುತ್ರಿಯಾಗಿ ಜನಿಸುವೆ. ನಿನ್ನ ತಪಸ್ಸಿನಿಂದ ಸುದುರ್ಲಭವಾದ ಅನೇಕ ಲೋಕಗಳನ್ನು ಹೊಂದುವೆ.

ಹಿಂದೆ ಬ್ರಹ್ಮದೇವನಿಗೆ ನೀರನ್ನೆರಚಿ ಮಹಾಭಿಷೇಕ ಮಾಡಿದ್ದರಿಂದ ವರುಣನಿಗೆ ಬ್ರಹ್ಮನು ಮಹಾಭಿಷಕ್ ಎಂದು ಭೂಮಿಯಲ್ಲಿ ಹುಟ್ಟು ಎಂದು ಶಪಿಸಿದ್ದನು. ಅವನೇ ಶಾಂತ ತನುವಾಗಿ ಶಂತನು ನಾಮಧೇಯದಿಂದ ಮುಂದೆ ಹುಟ್ಟಲಿರುವನು. ಅವನ ಪತ್ನಿಯಾಗಿ ನೀನು ಧರ್ಮಿಷ್ಠನಾದ ವಿಚಿತ್ರವೀರ್ಯನಿಗೂ ಚಿತ್ರಾಂಗದನೆಂಬ ಕೀರ್ತಿವಂತರಾದ ಇಬ್ಬರು ಪುತ್ರರನ್ನು ಪಡೆಯುವಿ. ಹೀಗೆ ಮೂರು ಮಂದಿ ಮಕ್ಕಳನ್ನಾಗಿ ಪಡೆದು ಉತ್ತಮಲೋಕಗಳನ್ನು ಹೊಂದುವಿ. ಪಿತೃಗಳ ಅತಿಕ್ರಮಣ ದೋಷದಿಂದ ನಿನಗೆ ಕುತ್ಸಿತವಾದ ಯೋನಿಯಲ್ಲಿ ಜನಿಸುವಿ. ಇಪ್ಪತ್ತೆಂಟನೆಯ ದ್ವಾಪರಯುಗ ಪ್ರಾಪ್ತವಾದಾಗ ಒಂದು ಮೀನಿನ ಉದರದಲ್ಲಿ ಮುಂದೆ ಇವಳೇ ಅಮಾವಸು ರಾಜನಿಂದ (ಉಪರಿಚರವಸು) ಅವನ ಪತ್ನಿಯು ಶಾಪದಿಂದ ಮೀನಾಗಿದ್ದಳು. ಅವಳಲ್ಲಿ 'ಸತ್ಯವತಿ' ಎಂಬ ಹೆಸರಿನಿಂದ ಹುಟ್ಟಿದಳು. ಅಮಾವಸುವು

ಉಪರಿಚರನಾದಾಗ ಬೇಟೆಗೆ ಹೋಗಿದ್ದನು. ಅಂದು ಅವನ ಪತ್ನಿ ಋತುಸ್ನಾತಳಾಗಿದ್ದಳು. ಅಂದು ರಮಿಸದಿದ್ದರೆ ಭ್ರೂಣಹತ್ಯೆ ದೋಷ ತಗಲುವುದೆಂದು ತನ್ನ ಶಕ್ತಿಯನ್ನು ಒಂದು ದೊನ್ನೆಯಲ್ಲಿಟ್ಟು ಅದನ್ನು ರಾಣಿಗೆ ತಲುಪಿಸಲು ತನ್ನ ಪ್ರಿಯ ಹದ್ದಿಗೆ ನೀಡಿದನು. ಹದ್ದು ಯಮನೆಯ ದಂಡೆಯ ಸಮೀಪ ಬಂದಾಗ ಮತ್ತೊಂದು ಹದ್ದು ಅದನ್ನು ಕಿತ್ತುಕೊಳ್ಳಲು ಅದರ ಮೇಲೆರಗಿತು. ಕಾದಾಟದಲ್ಲಿ ದೊನ್ನೆಯು ಯಮುನೆಯಲ್ಲಿ ಬಿದ್ದಿತು. ಅಲ್ಲಿಯೇ ಇದ್ದ ಅದ್ರಿಕೆಯು ಅದನ್ನು ನುಂಗಿದಳು. ಬೆಸ್ತರು ಬೀಸಿದ ಬಲೆಗೆ ಬಿದ್ದ ಅದ್ರಿಕೆ ಮೀನನ್ನು ಕತ್ತರಿಸಿದಾಗ ಸುಂದರವಾದ ಎರಡು ಮುದ್ದಾದ ಕೂಸುಗಳು ಹೊರಬಂದವು. ಇದರ ಲಕ್ಷಣ ನೋಡಿ ರಾಜನಿಗೆ ಅರ್ಪಿಸಿದರು. ರಾಜನು ಎರಡು ಮಗುಗಳಲ್ಲಿ ಗಂಡು ಮಗು ತಾನಿಟ್ಟುಕೊಂಡು ಹೆಣ್ಣು ಮಗುವನ್ನು ಬೆಸ್ತರಾಜನಿಗೆ ನೀಡಿದನು. ದಾಶರಾಜನು ದೇವದತ್ತಳಾದ ಇವಳನ್ನು ಸಾಕಿ ದೊಡ್ಡವಳನ್ನಾಗಿ ಮಾಡಿದನು. ಮುಂದೆ ಮತ್ಸ್ಯಗಂಧಾ ಎಂಬ ಹೆಸರಿನ ಆ ಕನ್ಯೆ ನೌಕೆಯಲ್ಲಿದ್ದಾಗ ಪರಾಶರರು ನದಿಯನ್ನು ದಾಟಲು ದೋಣಿಯನ್ನೇರಿದರು. ನದಿಯ ನಡು ದ್ವೀಪದಲ್ಲಿ ಅವಳೊಂದಿಗೆ ವಿಹರಿಸಿ ಅಕ್ಷತಕನ್ಯಾತ್ವ ನೀಡಿ ಹೊರಟು ಹೋದರು. ಬಾದರಾಯಣರು ದ್ವೀಪದ ಮಧ್ಯದಲ್ಲಿಯೇ ಕಾಣಿಸಿಕೊಂಡರು. ತಾಯಿಯೇ, ನಾನು ಅವತರಿಸಲು ನೀನು ನೆಪ ಮಾತ್ರ. ನೀನು ಇನ್ನೂ ಕನ್ಯೆಯೆ ಆಗಿರುವಿ, ಮುಂದೆ ಮಹಾರಾಜ ಶಂತನುವನ್ನು ವಿವಾಹವಾಗಿ ಇಬ್ಬರು ಮಕ್ಕಳನ್ನು ಪಡೆಯುವೆ ಎಂದರು. ನಿನಗೆ ಆಪತ್ಕಾಲದಲ್ಲಿ ನನ್ನನ್ನು ಸ್ಮರಿಸು ಎಂದು ಮಾಯವಾದರು. ಮುಂದೆ ಶಂತನು ರಾಜನನ್ನು ಕೈ ಹಿಡಿದು ವಿಚಿತ್ರವೀರ್ಯ-ಚಿತ್ರಾಂಗದನೆಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರ ಕ್ಷೇತ್ರದಲ್ಲಿ ಪಾಂಡು-ಧೃತರಾಷ್ಟ್ರ-ವಿದುರರೆಂಬ ಮಕ್ಕಳು ಜನಿಸಿದರು. ಇವರೆಲ್ಲ ದೊಡ್ಡವರಾದ ಮೇಲೆ ಪರಮಪದವನ್ನೈದಿದಳು.

**ವೈಭ್ರಾಜಾ ನಾಮ ತೇ ಲೋಕಾಃ ದಿವಿ ಸಂತಿ ಸುದರ್ಶನಾಃ ।**
**ಯತ್ರ ಬರ್ಹಿಷದೋ ನಾಮ ಪಿತರೋ ದಿವಿ ವಿಶ್ರುತಾಃ ॥ 30 ॥**

**ನಾಗಾಃ ಸರ್ಪಾಃ ಸುಪರ್ಣಾಶ್ಚ ಭಾವಯಂತಿ ಅಮಿತೌಜಸಃ ।**
**ಏತೇ ಪುತ್ರಾಃ ಮಹಾತ್ಮಾನಃ ಪುಲಸ್ತ್ಯಸ್ಯ ಪ್ರಜಾಪತೇಃ ॥ 31 ॥**

**ಏತೇಷಾಂ ಮಾನಸೀ ಕನ್ಯಾ ಪೀವರೀ ನಾಮ ವಿಶ್ರುತಾ ।**
**ಪರಾಶರಕುಲೋದ್ಭೂತಃ ಶುಕೋ ನಾಮ ಮಹಾತಪಾಃ ।**
**ವ್ಯಾಸದರಣ್ಯಾಂ ಸಂಭೂತೋ ವಿಧೂಮೋಽಗ್ನಿರಿವ ಜ್ವಲನ್ ॥ 32 ॥**

ಪಿತೃಗಳ ಮೂರನೆ ಗಣವಾದ ಬರ್ಹಿಷದರು 'ವೈಭ್ರಾಜ' ಲೋಕದಲ್ಲಿರುವರು. ಇವರೆಲ್ಲರೂ ಪುಲಸ್ತ್ಯ ಪ್ರಜಾಪತಿಯ ಮಕ್ಕಳಾಗಿದ್ದು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಂಡು ಸುದರ್ಶನರೆಂದು ಖ್ಯಾತರಾಗಿರುವರು. ಇವರನ್ನೂ ಯಕ್ಷರು, ಗಂಧರ್ವರು, ರಾಕ್ಷಸರೂ, ನಾಗಗಳೂ, ಸರ್ಪಗಳೂ, ಮಹಾಮಹಿಮಾವಂತ ಗರುಡನೂ ಸಹ ಬರ್ಹಿಷದ ಪಿತೃಗಳನ್ನು ಉಪಾಸಿಸುವರು.

### ಮಾನಸೀ ಕನ್ಯೆ ಪೀವರೀ

ಬರ್ಹಿಷದ ಪಿತೃಗಳ 'ಮಾನಸೀ ಕನ್ಯೆಯು ಪೀವರೀ' ಯೋಗಶಾಸ್ತ್ರದಲ್ಲಿ ಪೀವರಿಯು ಸಾಧಿಸಿದ ಸಿದ್ಧಿ ಅನ್ಯಾದೃಶವಾದದ್ದು. ಪೀವರಿಯು ಉಗ್ರ ತಪಸ್ಸನ್ನು ಕೈಗೊಂಡಾಗ ಸಾಕ್ಷಾತ್ ನಾರಾಯಣನೆ ಮೈತೋರಿ ಬೇಕಾದ ವರ ಬೇಡು ಎಂದಾಗ – ಪೀವರಿಯು ನನಗೆ ಸ್ಫುರದ್ರೂಪಿಯೂ, ಯೋಗಿಯೂ, ವೈರಾಗಿಯೂ ಆಗಿರುವಂತಹ ಪತಿಯನ್ನು ಕರುಣಿಸು ಎಂದಳು. ಭಗವಂತನು ಸಾಧ್ವೀಮಣಿ, ನಿನಗೆ ಸಾಕ್ಷಾತ್ ನನ್ನಂಶರಾದ ವ್ಯಾಸದೇವರ ವರಪುತ್ರನಾದ ಶುಕಾಚಾರ್ಯರು ನೀನು ಭೂಮಿಯಲ್ಲಿ ಅವತರಿಸಿದಾಗ ನಿನ್ನನ್ನೂ ಪತ್ನಿಯನ್ನಾಗಿ ಸ್ವೀಕರಿಸುವನು.

**ಸ ತಸ್ಯಾಂ ಪಿತೃಕನ್ಯಾಯಾಂ ಪೀವರ್ಯಾಂ ಜನಯಿಷ್ಯತಿ ।**
**ಕನ್ಯಾಂ ಪುತ್ರಾಂಶ್ಚ ಚತುರಃ ಯೋಗಾಚಾರ್ಯಾನ್ ಮಹಾಬಲಾನ್ ॥33॥**
**ಕೃಷ್ಣಂ ಗೌರಂ ಪ್ರಭುಂ ಶಂಭುಂ ಕೃತ್ವೀಂ ಕನ್ಯಾಂ ತಥೈವ ಚ ।**
**ಬ್ರಹ್ಮದತ್ತಸ್ಯ ಜನನೀಂ ಮಹಿಷೀಂ ತ್ವಣುಹಸ್ಯ ಚ ॥ 34 ॥**

ತ್ಯಾಗಿಯೂ, ಯೋಗಿಯೂ, ವಿರಾಗಿಯೂ ಆದ ಶುಕಮುನಿಯು ಪೀವರಿಯಲ್ಲಿ ಕೃಷ್ಣ, ಗೌರ, ಪ್ರಭು, ಶಂಭು ಎಂಬ ಯೋಗಾಚಾರ್ಯರಾದ ನಾಲ್ಕು ಪುತ್ರರನ್ನು ಸೃಷ್ಟಿಸುವನು. ಕೃತ್ವೀಯೆಂಬ ಕನ್ಯೆಯನ್ನು ಪಡೆಯುತ್ತಾನೆ.

ಇವಳಾದರೂ 'ಅಣುಹ'ನೆಂಬ ಧರ್ಮಾತ್ಮನನ್ನು ಕೈ ಹಿಡಿದು, ಬ್ರಹ್ಮದತ್ತನೆಂಬ ಸತ್ಪುತ್ರನನ್ನು ಪಡೆಯುವಳು. ಧರ್ಮಾತ್ಮನು, ಮಹಾಯೋಗಿಯೂ ಆದ ಶುಕನು ಮಹಾವ್ರತನಿಷ್ಠರಾದ ಯೋಗಿಗಳನ್ನು ಪುತ್ರರನ್ನಾಗಿ ಪಡೆದ ಮೇಲೆ ತನ್ನ ಜನಕರಾದ ಜನನಾದಿ ರಹಿತವಾದ ಮುಕ್ತಿ ಹೊಂದುವನು. ಈ ಪದವಾದರೂ ಉದ್ವೇಗರಹಿತವೂ, ಸನಾತನವೂ ಆಗಿರುತ್ತದೆ.

**ಅಮೂರ್ತಿಮಂತಃ ಪಿತರೋ ಧರ್ಮಮೂರ್ತಿಧರಾ ಮುನೇ ।**
**ಕಥಾ ಯತ್ರೇಯಮುತ್ಪನ್ನಾ ವೃಷ್ಣ್ಯಂಧಕ ಕುಲಾನ್ವಯಾ ॥ 35 ॥**

ಅಮೂರ್ತರಾದಾರೂ ಧರ್ಮವೆ ಮೂರ್ತಿವೆತ್ತಂತಿರುವ ಈ ಪಿತೃಗಣವು ವೃಷ್ಣಿ-ಅಂಧಕ ಕುಲದೊಡನೇ ಸಂಬಂಧ ಹೊಂದಿರುತ್ತಾರೆ. ಮುಂದೆ ಈ ಕಥೆ ಪ್ರಾರಂಭವಾಗಲಿದೆ.

### ಸುಕಾಲ ಪಿತೃಗಳು

**ಸುಕಾಲಾ ನಾಮ ಪಿತರೋ ವಸಿಷ್ಠಸ್ಯ ಪ್ರಜಾಪತೇಃ ।**
**ನಿರತಾ ದಿವಿ ಲೋಕೇಷು ಜ್ಯೋತಿರ್ಭಾಸಿಷು ಭಾಸುರಾಃ ॥ 36 ॥**
**ಸರ್ವಕಾಮ ಸಮೃದ್ಧೇಷು ದ್ವಿಜಾಸ್ತಾನ್ ಭಾವಯಂತ್ಯುತ ।**

ಹಿಂದೆ ಹೇಳದ ಮೂರು ಪಿತೃಗಣಗಳನ್ನು ದೇವತೆಗಳು ಪೂಜಿಸುವರು. ಏಳು ಗಣದಲ್ಲಿ ನಾಲ್ಕು ಮೂರ್ತ ಪಿತೃಗಳನ್ನು ಮನುಷ್ಯರಿಂದ ಪೂಜ್ಯರಾಗಿರುವರು. ದಿವ್ಯದೇಹ ಧರಿಸಿಕೊಂಡು ಧರ್ಮಮೂರ್ತಿ-ಗಳಾಗಿರುವವರಾದ್ದರಿಂದಲೇ 'ಮೂರ್ತರು' ಎಂದು ಕರೆಯಲಾಗಿದೆ. ಇವರಲ್ಲಿ ಸುಕಾಲರು ಜ್ಯೋತಿ ಪ್ರಕಾಶದಿಂದ ಶೋಭಾಯಮಾನವಾದ ವಸಿಷ್ಠ ಪ್ರಜಾಪತಿಯ ಲೋಕದಲ್ಲಿ ವಾಸ ಮಾಡುತ್ತಿರುವರು. ಇವರನ್ನು ಬ್ರಾಹ್ಮಣರು ಪೂಜಿಸುವರು. ವಸಿಷ್ಠ ಪ್ರಜಾಪತಿಯ ಪುತ್ರರಾದ ಸುಕಾಲರು ಸಕಲ ಕಾಮೋಪಭೋಗಗಳಂದ ಸಮೃದ್ಧವಾದ ಮರೀಚಿ= ಕಿರಣಗಳ ಲೋಕದಲ್ಲಿರುವುದರಿಂದ ಆ ಲೋಕಕ್ಕೂ 'ಮರೀಚಿಲೋಕ' ಎನ್ನಲಾಗಿದೆ.

### ಮಾನಸೀಕನ್ಯಾ ಗೌಃ ಎಂಬುವಳು

**ತೇಷಾಂ ವೈ ಮಾನಸೀ ಕನ್ಯಾ ಗೌರ್ನಾಮ್ನಾ ದಿವಿ ವಿಶ್ರುತಾ ।**
**ತಪ್ಯೈವ ವಂಶೇ ಯಾ ದತ್ತಾ ಶುಕಸ್ಯ ಮಹಿಷೀ ಪ್ರಿಯಾ ॥ 37 ॥**

**ಏಕಶೃಂಗೇತಿ ವಿಖ್ಯಾತಾ ಸಾಧ್ಯಾನಾಂ ಕೀರ್ತಿವರ್ಧನೀ ॥ 38 ॥**

ಈ ಸುಕಾಲ ಪಿತೃಗಳ ಮಾನಸೀ ಕನ್ಯೆಯೇ 'ಗೌಃ' ಎಂಬುವಳು. ಇವಳನ್ನು ಮಹಾಭಾಗವತಾಚಾರ್ಯನಾದ ಶುಕನು ಮತ್ತೊಬ್ಬ ಪತ್ನಿಯನ್ನಾಗಿ ಸ್ವೀಕರಿಸಿದನು. 'ಏಕಶೃಂಗಾ' ಎಂಬುದು ಗೌಕನ್ಯೆಯ ನಾಮಾಂತರ. ಈ ಶುಕಸೀಮಂತಿಯು ಸಾಧ್ಯ ಎಂಬ ದೇವತಾ ಗಣದ ಕೀರ್ತಿ ದಶದಿಕ್ಕುಗಳಲ್ಲಿಯೂ ವಿಸ್ತೃತವಾಯಿತು. ಈ ಪಿತೃಗಳು ಶ್ರಾದ್ಧದ ಮೂಲಕ ತಮ್ಮನ್ನು ಆರಾಧಿಸಿದವರಿಗೆ ಸಕಲ ಸಂಪತ್ತನ್ನೂ ಕರುಣಿಸುವರು.

## ಆಂಗೀರಸ ಪಿತೃಗಳು

**ಮರೀಚಿ ಗರ್ಭಾನ್ ತಾನ್ ಲೋಕಾನ್ ಸಮಾಶ್ರಿತ್ಯ ವ್ಯವಸ್ಥಿತಾಃ ।**
**ಯೇ ತ್ವಂಗೀರಸಃ ಪುತ್ರಾಃ ಸಾಧ್ಯೈಃ ಸಂವರ್ಧಿತಾಃ ಪುರಾ ॥ 39 ॥**

**ತಾನ್ ಕ್ಷತ್ರಿಯಗಣಾಃ ತಾತ ಭಾವಯಂತಿ ಫಲಾರ್ಥಿನಃ ।**
**ತೇಷಾಂ ತು ಮಾನಸೀ ಕನ್ಯಾ ಯಶೋದಾ ನಾಮ ವಿಶ್ರುತಾ ॥ 40 ॥**

**ಪತ್ನೀ ಸಾ ವಿಶ್ವಮಹತಃ ಸ್ನುಷಾ ವೈ ವೃದ್ಧಶರ್ಮಣಃ ।**
**ರಾಜರ್ಷೇ ಜನನೀ ಚಾಪಿ ದಿಲೀಪಸ್ಯ ಮಹಾತ್ಮನಃ ॥ 41 ॥**

ಮೂರ್ತಗಣದಲ್ಲಿ ಎರಡನೆಯವರೇ ಆಂಗೀರಸ ಪಿತೃಗಳು. ಅಂಗಿರಾ ಮುನಿಯ ಮಕ್ಕಳಾದ ಇವರು ಸೂರ್ಯಕಿರಣಗಳಿಂದ ಭಾಸಿತವಾದ ಲೋಕಗಳಲ್ಲಿರುವವರು. ಪುತ್ರಾದಿ ಫಲಾಪೇಕ್ಷೆಗಳಾದ ಕ್ಷತ್ರಿಯರು ಇವರನ್ನು ಆರಾಧಿಸುತ್ತಾರೆ. ಇವರ ಮಾನಸ ಪುತ್ರಿಯೇ 'ಯಶೋದಾ' ಇವಳನ್ನು ವೃದ್ಧಶರ್ಮನ ಮಗನಾದ ವಿಶ್ವಮಹತ್ತೆಂಬುವನಿಗೆ ವಿವಾಹ ಮಾಡಿಕೊಡಲಾಗಿತ್ತು. ಇವನಿಂದ 'ದಿಲೀಪ'ನೆಂಬ ರಾಜರ್ಷಿಯು ಜನಿಸಿದನು. ವಿಶ್ವಮಹಾನ್ ಎಂದರೆ ಸಗರಪುತ್ರ ಅಂಶುಮಂತನಿಗೆ ನಾಮಾಂತರ. ಇವನಿಂದಲೇ ದಿಲೀಪರಾಜನು ಹುಟ್ಟಿದನು. ದೇವಯುಗದಲ್ಲಿ ದಿಲೀಪನು ಶ್ರೇಷ್ಠವಾದ ಅಶ್ವಮೇಧ ಮಾಡಿದ್ದನು. ಈ ಅಶ್ವಮೇಧಯಾಗದಲ್ಲಿ ಸಂಪ್ರೀತರಾದ ಮಹರ್ಷಿಗಳು ಅವನು ಮಾಡಿದ ಅಶ್ವಮೇಧದ ವೈಭವ ವಿಜೃಂಭಣೆಗಳು ಹಾಡಿಹೊಗಳಿದ್ದಾರೆ.

**ಅಗ್ನೇರ್ಜನ್ಮ ಯಥಾ ಶ್ರುತ್ವಾ ಶಾಂಡಿಲ್ಯಸ್ಯ ಮಹಾತ್ಮನಃ ।**
**ದಿಲೀಪಂ ಯಜಮಾನಂ ಯೇ ಪಶ್ಯಂತಿ ಸುಸಮಾಹಿತಾಃ ॥ 42 ॥**

**ಸತ್ಯವಂತಂ ಮಹಾತ್ಮಾನಂ ತೇಽಪಿ ಸ್ವರ್ಗಜಿತೋ ನರಾಃ ॥ 43 ॥**

ಯಾರು ಏಕಾಗ್ರಚಿತ್ತರಾಗಿ ಶಾಂಡಿಲ್ಯಗೋತ್ರೋತ್ಪನ್ನನಾದ ಅಗ್ನಿದೇವನ ಜನ್ಮ ವೃತ್ತಾಂತ ಶ್ರವಣ ಮಾಡಿ ಸತ್ಯವಂತನೂ ಮಹಾನುಭಾವ ಆದ ದಿಲೀಪನನ್ನು ನೋಡಿದರೆ ಸಾಕು ಆ ಪುಣ್ಯದಿಂದ ಸ್ವರ್ಗವನ್ನೇ ಗೆದ್ದು ತರಬಹುದು ಎಂದು.

## ಸುಸ್ವಧ ಪಿತೃಗಳು

**ಸುಸ್ವಧಾ ನಾಮ ಪಿತರಃ ಕರ್ದಮಸ್ಯ ಪ್ರಜಾಪತೇಃ ।**
**ಸಮುತ್ಪನ್ನಾಸ್ತು ಪುಲಹಾತ್ ಮಹಾತ್ಮಾನೋ ದ್ವಿಜರ್ಷಭಾಃ ॥ 44 ॥**

**ಲೋಕೇಷು ದಿವಿ ವರ್ತಂತೇ ಕಾಮಗೇಷು ವಿಹಂಗಮಾಃ ।**
**ತಾಂ ಶ್ಚ ವೈಶ್ಯಗಣಾಸ್ತಾತ ಭಾವಯಂತಿ ಫಲಾರ್ಥಿನಃ ॥ 45 ॥**

**ತೇಷಾಂ ವೈ ಮಾನಸೀ ಕನ್ಯಾ ವಿರಜಾ ನಾಮ ವಿಶ್ರುತಾ ।**
**ಯಯಾತೇಃ ಜನನೀ ಬ್ರಹ್ಮನ್ ಮಹಿಷೀ ನಹುಷಸ್ಯ ಚ ॥ 46 ॥**

ಕರ್ದಮ ಪ್ರಜಾಪತಿಯ ಮಕ್ಕಳೇ 'ಸುಸ್ವಧಾ' ಎಂಬ ಪಿತೃಗಳು. ಇವರು ದ್ವಿಜಶ್ರೇಷ್ಠನೂ. ಮಹಾತಪೋಬಲ ಸಮನ್ವಿತನೂ ಆದ ಇವರು. ಪುಲಹಮಹರ್ಷಿಯಿಂದ ಜನಿಸಿರುವರು. ಸುಸ್ವಧರು ಗಗನಚಾರಿಗಳು. ಸಕಲ ಕಾಮೋಪಭೋಗವುಳ್ಳ ದೇವಲೋಕದಲ್ಲಿ ವಾಸಿಸುತ್ತಾರೆ. ಇವರನ್ನು ವೈಶ್ಯರು ಆರಾಧಿಸುತ್ತಾರೆ. ಇವರ ಮಾನಸೀ ಕನ್ಯೆಯೇ 'ವಿರಜಾ'. ಇವಳು ನಹುಷ ರಾಜನ ಧರ್ಮಪತ್ನಿಯಾಗಿರುವಳು. ಯಯಾತಿ ಮೊದಲಾದವರ ತಾಯಿಯಾಗಿರುವಳು. ಇವಳನ್ನೆ 'ಅಷ್ಟಕಾ' ಎಂದು ಕರೆಯುವರು.

## ಸೋಮಪ ಪಿತೃಗಳು

**ತ್ರಯ ಏತೇ ಗಣಾಃ ಪ್ರೋಕ್ತಾಃ ಚತುರ್ಥಂ ತು ನಿಬೋಧ ಮೇ ।**
**ಉತ್ಪನ್ನಾ ಯೇ ಸ್ವಧಾಯಾಂ ತೇ ಸೋಮಪಾ ವೈ ಕವೇಃ ಸುತಾಃ ॥ 47 ॥**

**ಹಿರಣ್ಯಗರ್ಭಸ್ಯ ಸುತಾಃ ಶೂದ್ರಾಸ್ತಾನ್ ಭಾವಯಂತ್ಯುತ ।**
**ಮಾನಸಾ ನಾಮ ತೇ ಲೋಕಾ ಯತ್ರ ತಿಷ್ಠಂತಿ ತೇ ದಿವಿ ॥ 48 ॥**

**ತೇಷಾಂ ವೈ ಮಾನಸೀ ಕನ್ಯಾ ನರ್ಮದಾ ಸರಿತಾಂ ವರಾ ।**
**ಪುರುಕುತ್ಸಸ್ಯ ಯಾ ಪತ್ನೀ ತ್ರಸದ್ದಸ್ಯೋಃ ಜನನ್ಯಪಿ ॥ 49 ॥**

ರಾಜನೇ, ಇದುವರೆಗೂ ನಾನು ಮೂರು ಪಿತೃಗಣಗಳ ವಿಷಯವನ್ನು ಹೇಳಿರುವೆನು. ಈಗ ನಾಲ್ಕನೇ ಪಿತೃಗಣದ ವಿಷಯವಾಗಿ ಚಿತ್ತರಿಸುವೆ ಕೇಳು.

ಕವಿಯೆಂಬ ಮಹಾನುಭಾವನಿಂದ ಸ್ವಧಾದೇವಿಯಲ್ಲಿ ಸೋಮಪರೆಂಬ ವಿಖ್ಯಾತವಾದ ಪಿತೃಗಣ ಜನಿಸಿತು. ಇವರು ಅಗ್ನಿಯ ಪುತ್ರರು. ಈ ಸೋಮಪ ಪಿತೃಗಳನ್ನು ಶೂದ್ರ ವರ್ಣದವರು ಆರಾಧಿಸುತ್ತಾರೆ. ಇವರು ವಾಸ ಮಾಡುವ ಲೋಕಗಳಿಗೆ 'ಮಾನಸಲೋಕ'ವೆಂದು ಪ್ರಖ್ಯಾತಿ. ಸೋಮಪರ ಮಾನಸಪುತ್ರಿಯೇ 'ನರ್ಮದಾ'. ಇವಳು ಸಮಗ್ರ ದಕ್ಷಿಣಾಪಥವನ್ನೂ ಪಾವನಗೊಳಿಸುವ ಸರಿತ್ ಆಗಿರುವಳು. ಇವಳನ್ನು ಪುರುಕುತ್ಸ ಮಹಾರಾಜನು ವಿವಾಹವಾಗಿ 'ತ್ರಸದ್ದಸ್ಯು' ಎಂಬ ಮಹಾಪರಾಕ್ರಮಿಯು ಜನಿಸಿದನು. ಯಾವ ಈ ರಾಜನು ದಸ್ಯುಗಳನ್ನೆಲ್ಲ ನಿಗ್ರಹ ಮಾಡಿದ್ದರಿಂದಾಗಿ ಸಾರ್ಥಕ ನಾಮಧೇಯನು. ಮನುವು ಪ್ರತಿಯುಗದ ಆರಂಭದಲ್ಲಿ ಅಗ್ನಿಷ್ವಾತ್ತಾದಿ ದೇವತೆಗಳನ್ನೂ ಪೂಜಿಸುವನು ಹಾಗೂ ಕಾಲ ಬಲದಿಂದ ಲುಪ್ತವಾದ ಶ್ರಾದ್ಧ ಧರ್ಮಗಳನ್ನು ಉದ್ಧರಿಸುವ ಮೂಲಕ ಶ್ರಾದ್ಧಗಳು ಲುಪ್ತವಾಗದಂತೆ ರಕ್ಷಿಸುವನು.

**ಪಿತೃಣಾಮಾದಿಸರ್ಗೇಣ ಸರ್ವೇಷಾಂ ದ್ವಿಜಸತ್ತಮ ।**
**ತಸ್ಮಾದೇನಂ ಸ್ವಧರ್ಮೇಣ ಶ್ರಾದ್ಧದೇವಂ ವದಂತಿ ವೈ ॥ 50 ॥**

ಹೀಗೆ ಸುಕಾಲ, ಅಗ್ನಿಷ್ವಾತ್ತ, ಬಹಿರ್ಷದ ಎಂಬ ಅಮೂರ್ತಗಣ ಸೇರಿ ಏಳು ಗಣಗಳದ್ದು ಇವರೆಗೆಲ್ಲ **'ಯಮಃ ಪಿತೄಣಾಮಧಿಪತಿಃ'** ಎಂಬಂತೆ ಯಮದೇವರೇ ಅಧಿಪತಿಗಳು. ಈ ಕಾರಣದಿಂದಲೇ ಯಮಧರ್ಮನು 'ಶ್ರಾದ್ಧದೇವ'ನೆನಿಸುತ್ತಾನೆ.

**ಸರ್ವೇಷಾಂ ರಾಜತಂ ಪಾತ್ರಂ ಅಥವಾ ರಜತಾನ್ವಿತಮ್ ।**
**ದತ್ತಂ ಸ್ವಧಾಂ ಪುರೋಧಾಯ ಶ್ರಾದ್ಧಂ ಪ್ರೀಣಾತಿ ವೈ ಪಿತೄನ್ ॥ 51 ॥**
**ಸೊಮಸ್ಯಾಪ್ಯಾಯನಂ ಕೃತ್ವಾ ಅಗ್ನೇರ್ವೈವಸ್ವತಸ್ಯ ಚ ।**
**ಉದಗಾಯನಮಪ್ಯಗ್ನೌ ಅಗ್ನ್ಯಭಾವೇಽಪ್ಸು ವಾ ಪುನಃ ॥ 52 ॥**

**ಪಿತೄನ್ ಪ್ರೀಣಾತಿ ಯೋ ಭಕ್ತ್ಯಾ ಪಿತರಃ ಪ್ರೀಣಯಂತಿ ತಮ್ ।**
**ಯಚ್ಛಂತಿ ಪಿತರಃ ಪುಷ್ಟಿಂ ಪ್ರಜಾಶ್ಚ ವಿಪುಲಾಸ್ತಥಾ ॥ 53 ॥**

ಯಮಧರ್ಮನು *'ಸೋಮಾಯ ಪಿತೃಮತೇ ಸ್ವಧಾ'* ಎಂದು, *'ನಮೋಽಗ್ನಯೇ ಕವ್ಯವಾಹನಾಯ ಸ್ವಧಾ'* ಎಂದು, *'ನಮೋ ಯಮಾಯ ಅಂಗಿರಸೇ ಸ್ವಧಾ'* ಎಂದು ಸೋಮನಿಗೂ, ಅಗ್ನಿಗೂ, ಯಮದೇವನಿಗೂ ಮೂರು ಆಹುತಿ ನೀಡಬೇಕು. ಈ ಆಹುತಿಗಳನ್ನು ಅಗ್ನಿಯಲ್ಲಿಯೇ ಸ್ವಧಾ ಶಬ್ದೋಚ್ಚಾರಣ ಪೂರ್ವಕ ಹಾಕಬೇಕು.

ಈ ಪಿತೃಗಳಿಗೆ **ರುದ್ರದೇವನು**[1] ಶ್ರೀಹರಿಗಾಗಿ ಕಣ್ಣೀರಿಟ್ಟಾಗ ಆ ಕಣ್ಣೀರಿನಿಂದ ಬೆಳ್ಳಿಯು ಹುಟ್ಟಿತು. ಇದನ್ನು ದುರ್ವರ್ಣವೆನ್ನುತ್ತಾರೆ. ಶ್ರೀಹರಿಯ ಕಣ್ಣೀರಿನಿಂದಾದ ಬಂಗಾರವು ಸುವರ್ಣವೆನಿಸಿದೆ. ಪಿತೃಗಳಿಗೆ ಬೆಳ್ಳಿಯ ಪಾತ್ರೆ ಅಥವಾ ಬೆಳ್ಳಿಮಿಶ್ರಿತ ಪಾತ್ರೆಯು ವಿಹಿತವಾಗಿದೆ.

ಪಿತೃಗಳಿಗೆ ಹಾಕುವ ಹವಿಸ್ಸು 'ಸ್ವಧಾ' ಎನಿಸಿದೆ. ಹವಿಸ್ಸನ್ನು ಅಗ್ನಿಯಲ್ಲಾಗಲೀ, ಬ್ರಾಹ್ಮಣರ ಕೈಯ್ಯಲ್ಲಾಗಲೀ, ನೀರು, ಗೋವು ಇವುಗಳಲ್ಲಿ ಅರ್ಪಿಸಬೇಕು. ಈ ರೀತಿ ಪಿತೃಗಳನ್ನು ತೃಪ್ತಿಪಡಿಸುವ ಪಿತೃಭಕ್ತನ ಪಿತೃಗಳನ್ನೂ ಇವರು ಸುಪ್ರೀತಗೊಳಸುತ್ತಾರೆ. ಪಿತೃಗಳು ಸಮಾರಾಧಿತರಾದಾಗ ಕರ್ತೃವಿಗೆ ದೈಹಿಕ ಪುಷ್ಟಿಯನ್ನೂ, ಮಹಾಸಂಪತ್ತನ್ನೂ, ಸತ್ಸಂತಾನವನ್ನೂ ಸ್ವರ್ಗಾರೋಗ್ಯಾದಿ ಭಾಗ್ಯಗಳನ್ನು ಅನುಗ್ರಹಿಸುವರು.

**ದೇವಕಾರ್ಯಾದಪಿ ಮುನೇ ಪಿತೃಕಾರ್ಯಂ ವಿಶಿಷ್ಯತೇ ।**
**ದೇವತಾನಾಂ ಹಿ ಪಿತರಃ ಪೂರ್ವಮಾಪ್ಯಾಯನಂ ಸ್ಮೃತಮ್ ॥ 54 ॥**
**ಶೀಘ್ರಪ್ರಸಾದಾ ಹ್ಯಕ್ರೋಧಾ ಲೋಕಸ್ಯಾಪ್ಯಾಯನಂ ಪರಮ್ ॥ 55 ॥**
**ಪಿತೃಭಕ್ತೋಽಸಿ ವಿಪ್ರರ್ಷೇ ಮದ್ಭಕ್ತಶ್ಚ ವಿಶೇಷತಃ ।**
**ದಿವ್ಯಂ ಚಕ್ಷುಃ ಸವಿಜ್ಞಾನಂ ಪ್ರದಿಶಾಮಿ ಚ ತೇಽನಘ ॥ 56 ॥**

ದೇವತಾ ಕಾರ್ಯಗಳಿಗಿಂತಲೂ ಪಿತೃಕಾರ್ಯ ಶ್ರೇಷ್ಠವಾಗಿರುತ್ತದೆ. ಪಿತೃದೇವತೆಗಳೂ ಯಾವಾಗಲೂ ಶೀಘ್ರವಾಗಿ ಒಲಿಯುವವರು. ದೇವತೆಗಳು ನಿಧಾನವಾಗಿ ಒಲಿಯುವರು. ಕ್ರೋಧರಹಿತ ಪಿತೃಗಳು, ದೇವತೆಗಳು ಸಕೋಪಿಗಳು, ಲೋಕದ ಜನರ ವಿಷಯದಲ್ಲಿ ವಿಶೇಷವಾಗಿ ಆಸೆವಹಿಸಿದ ಪಿತೃಗಳು ಬಹುಬೇಗ ಪ್ರಿಯರಾಗಿ ಇಷ್ಟಾರ್ಥ ನೆರವೇರಿಸುವರು. ಪಿತೃಗಳು ಬ್ರಾಹ್ಮಣ ಸಂತರ್ಪಣೆಯಿಂದ ಬಹಳ ತೃಪ್ತಿ ಹೊಂದುವರು. ಬ್ರಾಹ್ಮಣ

1. ರುದ್ರರೋದನ : *ರುದ್ರ ನೇತ್ರೋದ್ಭವಂ ಯಸ್ಮಾತ್ ತಸ್ಮಾತ್ ರಜತಂ ಪಿತೃವಲ್ಲಭಂ।*

ಭೋಜನ ಶ್ರಾದ್ಧದಲ್ಲಿ ಅತ್ಯವಶ್ಯ. ಇದೆಲ್ಲ ಕಾರಣದಿಂದಾಗಿ ಪಿತೃ ಸಮಾರಾಧನೆಯು ಮನುಷ್ಯರ ಮುಖ್ಯ ಕರ್ತವ್ಯವಾಗಿದೆ.

ಸನತ್ಕುಮಾರರು ಮಾರ್ಕಂಡೇಯ ನೀನು ಪಿತೃಭಕ್ತನಾಗಿರುವೆ. ನನ್ನಲ್ಲಿಯೂ ನಿನಗೆ ಅತ್ಯಂತ ಭಕ್ತಿಯಿದೆ. ನಾನು ಹೇಳಿದಂತೆ ಪಿತೃದೇವತೆಗಳನ್ನು ಯಾವಾಗಲೂ ನಮಸ್ಕರಿಸು.

ನಾನು ನಿನಗೆ ಶ್ರೇಯಸ್ಸನ್ನುಂಟು ಮಾಡುವೆ. ನಾನು ನಿನಗೆ ಹೇಳಿದ್ದನ್ನೆಲ್ಲ ನೀನು ಪ್ರತ್ಯಕ್ಷವಾಗಿ ನೋಡುವಿ. ವಿಜ್ಞಾನ ಸಹಿತ ದಿವ್ಯದೃಷ್ಟಿ ನಿನಗೆ ನೀಡುತ್ತೇನೆ. ಮಾರ್ಕಂಡೇಯನೇ, ಶ್ರಾದ್ಧದ ಫಲರೂಪವಾಗಿ ಪಡೆಯಬಹುದಾದ ಈ ಗತಿಯನ್ನು ಸಾವಧಾನಚಿತ್ತವಾಗಿ ನೋಡು. ನೀನು ಸಿದ್ಧಪುರುಷನಾದರೂ ಈಗಿರುವ ಈ ಚರ್ಮದ ನೇತ್ರಗಳಿಂದ ಯೋಗ ಗತಿಯನ್ನಾಗಲಿ, ಪಿತೃಗತಿಯನ್ನಾಗಲೀ ತಿಳಿಯಲಾರೆ.

**ಚಕ್ಷುರ್ದತ್ವಾ ಸವಿಜ್ಞಾನಂ ದೇವಾನಾಮಪಿ ದುರ್ಲಭಮ್ ।**
**ಜಗಾಮ ಗತಿಮಿಷ್ಟಾಂ ವೈ ದ್ವಿತೀಯೋಽಗ್ನಿರಿವ ಜ್ವಲನ್ ॥ 57 ॥**

**ತನ್ನಿಬೋಧ ಕುರುಶ್ರೇಷ್ಠ ! ಯನ್ ಮಯಾಸೀತ್ ನಿಶಾಮಿತಮ್ ।**
**ಪ್ರಸಾದಾತ್ ತಸ್ಯ ದೇವಸ್ಯ ದುರ್ಜ್ಞೇಯಂ ಭುವಿಮಾನುಷೈಃ ॥ 58 ॥**

ಭೀಷ್ಮನೇ, ದೇವೇಶನಾದ ಸನತ್ಕುಮಾರನು ನನಗೆ ಹೇಳಿ ದೇವತೆಗಳಿಗೂ ಸುದುರ್ಲಭವಾದ ವಿಜ್ಞಾನ ಪೂರ್ವಕ ದಿವ್ಯದೃಷ್ಟಿಯನ್ನು ನೀಡಿ, ಅನುಗ್ರಹಿಸಿ, ಎರಡನೇ ಅಗ್ನಿಯಂತೆಯೇ ಜ್ವಲಿಸುತ್ತಾ ತನಗಿಷ್ಟವಾದ ಕಡೆಗೆ ಹೊರಟು ಹೋದನು.

ಕುರುಶ್ರೇಷ್ಠ ಭೀಷ್ಮ ! ಸನತ್ಕುಮಾರನು ನನಗೆ ನೀಡಿದ ದಿವ್ಯದೃಷ್ಟಿಯಿಂದ ನಾನು ಯಾವ ಘಟನೆಗಳನ್ನು ನೋಡಿ ತಿಳಿದೆನೋ ಅದನ್ನು ನಿನಗೆ ಹೇಳುವೆನು. ಭೂಮಿಯಲ್ಲಿ ಇಂತಹ ಲೋಕೋತ್ತರ ಘಟನೆಗಳನ್ನು ತಿಳಿಯವುದು ಮನುಷ್ಯ ಮಾತ್ರರಿಗೆ ದುರ್ಲಭವೆಂದು ತಿಳಿ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ ಭೀಷ್ಮ-ಮಾರ್ಕಂಡೇಯ
ಸಂವಾದದಲ್ಲಿ ಪಿತೃದೇವತಾ ಗಣ ವರ್ಣನೆವೆಂಬಲ್ಲಿ
ಹದಿನೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ನವದಶೋಽಧ್ಯಾಯಃ

## ಭರದ್ವಾಜ ಪುತ್ರಕಥೆ

*ಮಾರ್ಕಂಡೇಯ ಉವಾಚ –*

**ಆಸನ್ ಪೂರ್ವಯುಗೇ ತಾತಾ ಭರದ್ವಾಜಾತ್ಮಜಾಃ ದ್ವಿಜಾಃ ।**
**ಯೋಗಧರ್ಮಮನುಪ್ರಾಪ್ಯ ಭ್ರಷ್ಟಾ ದುಶ್ಚರಿತೇನ ವೈ ॥ 1 ॥**

**ಅಪಭ್ರಂಶ ಮನುಪ್ರಾಪ್ತಾಃ ಯೋಗಧರ್ಮಾಪಚಾರಿಣಃ ।**
**ಮಹತಃ ಸರಸಃ ಪಾರೇ ಮಾನಸಸ್ಯ ವಿಸಂಜ್ಞಿತಾಃ ॥ 2 ॥**

**ಅಪ್ರಾಪ್ಯ ಯೋಗಂ ತೇ ಸರ್ವೇ ಸಂಯುಕ್ತಾಃ ಕಾಲಧರ್ಮಣಾ ।**
**ಜಾತಾಃ ಕೌಶಿಕದಾಯಾದಾಃ ಕುರುಕ್ಷೇತ್ರೇ ನರರ್ಷಭಾಃ ॥ 3 ॥**

ಭಿಷ್ಮನೇ, ಸನತ್ಕುಮಾರರು ತಾವು ಅಂತರ್ಧಾನವಾಗುವ ಮೊದಲು ಕೌಶಿಕನ ಮಕ್ಕಳು ಶ್ರಾದ್ಧದಿಂದಾಗಿ ಐದು ಜನ್ಮಗಳಲ್ಲಿ ಬ್ರಹ್ಮಪ್ರಾಪ್ತಿ ಪಡೆದರು. ಈ ಕಥೆಯನ್ನು ಹೇಳಿದ್ದರು. ಅದನ್ನು ನಿಮಗೆ ಹೇಳುತ್ತೇನೆ. ಕೇಳು.

ಹಿಂದೆ ಭರದ್ವಾಜರೆಂಬ ಋಷಿಗಳಿಗೆ ವಾಗ್ದುಷ್ಟ, ಕ್ರೋಧನ, ಹಿಂಸ್ರ, ಪಿಶುನ, ಕವಿ, ಖಸೃಮ, ಪಿತೃವರ್ತಿ(ವರ್ಣಿ) ಎಂಬ ಹೆಸರಿನ ಏಳು ಮಂದಿ ಮಕ್ಕಳಿದ್ದರು. ಯೋಗನಿರತರಾಗಿದ್ದು ಕಾಲಾಂತರದಲ್ಲಿ ತಾವು ಮಾಡಿದ ದುರಚಾರದಿಂದಾಗಿ ಯೋಗಭ್ರಷ್ಟರಾದರು. ಭಗವಂತನಿಗಾಗಿ ತಮ್ಮ ಮನಸ್ಸು ಇಂದ್ರಿಯಗಳನ್ನೆಲ್ಲ ಮುಡುಪಾಗಿಟ್ಟಿದ್ದ ಅವರು ಲೌಕಿಕ ಕಾಮನೆಯಿಂದಾಗಿ ಭಗವಂತನಲ್ಲಿ ಮನಃ ಪ್ರಣಿಧಾನರೂಪ ಯೋಗಕ್ಕೆ ಅಪಚಾರವೆಸಗಿದಂತಾಗಿ ಯೋಗ ಭ್ರಷ್ಟರಾಗಿ ಉತ್ತಮ ಲೋಕದಿಂದ ಭ್ರಷ್ಟರಾಗಿ ಮಾನಸಸರೋವರದ ಸಮೀಪ ಬಿದ್ದು

ಸಂಜ್ಞಾ ರಹಿತರಾಗಿದ್ದರು. ನೀರಿನಲ್ಲಿ ಮುಳುಗಿ ಹೋದ ಮನುಷ್ಯರಂತೆ ಅವರೂ ಮೋಹಾಂಧಕಾರದಲ್ಲಿ ಮುಳುಗಿದರು. ಯೋಗವಿಷಯವನ್ನೆ ಧ್ಯಾನಿಸುತ್ತಿದ್ದರೂ ಯೋಗಕ್ಕೆ ತತ್ತ್ವವೆನಿಸಿದ ಶ್ರೀಹರಿಯು ಹೊಳೆಯಲಿಲ್ಲ. ಹಾಗೆಯೇ ಮರಣವನ್ನಪ್ಪಿದರು. ದೇವತೆಗಳೊಂದಿಗೆ ಬಹುಕಾಲವಿದ್ದು ಯೋಗಭ್ರಷ್ಟರಾದ್ದರಿಂದ ಭರದ್ವಾಜನ ಮಕ್ಕಳು, ಕುರುಕ್ಷೇತ್ರದಲ್ಲಿ ಕೌಶಿಕನ ಮಕ್ಕಳಾಗಿ ಹುಟ್ಟಿದರು.

## ಪಿತ್ರನುಗ್ರಹದಿಂದ ಜಾತಿಸ್ಮರಣೆ

**ಹಿಂಸಯಾ ವಿಹರಿಷ್ಯಂತೋ ಧರ್ಮಂ ಪಿತೃಕೃತೇನ ವೈ ।**
**ತತಸ್ತೇ ಪುನರಾಜಾತಿಂ ಭ್ರಷ್ಟಾಃ ಪ್ರಾಪ್ಸ್ಯಂತಿ ಕುತ್ಸಿತಾಮ್ ॥ 4 ॥**

**ತೇಷಾಂ ಪಿತೃಪ್ರಸಾದೇನ ಪೂರ್ವಜಾತಿಕೃತೇನ ವೈ ।**
**ಸ್ಮೃತಿರುತ್ಪತ್ಸ್ಯತೇ ಪ್ರಾಪ್ಯ ತಾಂ ತಾಂ ಜಾತಿಂ ಜುಗುಪ್ಸಿತಾಮ್ ॥ 5 ॥**

ಆ ಏಳು ಮಂದಿ ಭರದ್ವಾಜಾತ್ಮಜರು ಶ್ರಾದ್ಧ ಮಾಡುವ ನೆಪವೊಡ್ಡಿ ಅನೇಕ ಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಇದೊಂದು ಅವರಿಗೆ ವಿಹಾರವಾಗಿತ್ತು. ಈ ಪ್ರಾಣಿ ಹಿಂಸಾರೂಪ ಪಾಪದಿಂದಾಗಿ ನೀಚ ಯೋನಿಗಳಲ್ಲಿ ಜನ್ಮವೆತ್ತ-ಬೇಕಾಯಿತು. ಹೀಗಿದ್ದರೂ ಹಿಂದಿನ ಜನ್ಮಗಳಲ್ಲಿ ಮಾಡಿದ್ದ ಪಿತೃಶ್ರಾದ್ಧ-ದಿಂದಾಗಿ ಪಿತೃಗಳು ಪ್ರೀತರಾಗಿದ್ದರು. ಇವರೆಲ್ಲ ಯಾವುದೇ ಕುತ್ಸಿತ ಯೋನಿಯಲ್ಲಿ ಜನಿಸಿದ್ದರೂ. ಹಿಂದಿನ ಜನ್ಮದ ಸ್ಮರಣೆಯು ಮಾತ್ರ ಮಾಸಿರಲಿಲ್ಲ. ಇದರಿಂದಾಗಿ ಆಯಾಯ ಯೋನಿಗಳಲ್ಲಿಯೂ ಸ್ವವರ್ಣಾಶ್ರಮೋಚಿತ ಧರ್ಮವನ್ನು ಆಚರಿಸುತ್ತಿದ್ದರು. ಇದರಿಂದಾಗಿ ಕೊನೆಯಲ್ಲಿ ಬ್ರಾಹ್ಮಣ ಜನ್ಮ ಹೊಂದಿದರು.

**ಯೋಗೋ ಹಿ ದುರ್ಲಭೋ ನಿತ್ಯಮ್ ಅಲ್ಪ ಪ್ರಜ್ಞೈಃ ಕದಾಚನ ।**
**ಲಬ್ಧ್ವಾಪಿ ನಾಶಯಂತ್ಯೇನಂ ವ್ಯಸನೈಃ ಕಟುತಾಮಿತಾಃ ॥ 6 ॥**
**ಅಧರ್ಮೇಷ್ವೇವ ವರ್ತಂತೇ ಪ್ರಾರ್ದಯಂತೇ ಗುರೂನಪಿ ॥ 7 ॥**

ಅಲ್ಪ ಪ್ರಜ್ಞರಿಗೆ ಯೋಗಶಕ್ತಿಯು ದುರ್ಲಭವು. ಯೋಗ ಸಿದ್ಧಿಸಿದರೂ ಬಹುಕಾಲ ಉಳಿಯಲಾರದು. ಇಂತಹವರು ಅಧರ್ಮದಲ್ಲಿ ತೊಡಗಿ ತಂದೆ ತಾಯಿ

ಗುರುಗಳನ್ನೂ ಕಷ್ಟಕ್ಕೀಡು ಮಾಡುತ್ತಾರೆ. ಯಾವುದನ್ನೂ ಯಾಚಿಸಬಾರದೋ ಅದನ್ನು ಯಾಚಿಸದಿರುವುದು. ಶರಣಾಗತ ರಕ್ಷಣೆ. ದರಿದ್ರನನ್ನೂ ಗೌರವಿಸುವುದು. ಸಂಪತ್ತು ಬಂದಾಗ ಉಬ್ಬದಿರುವುದು. ಯುಕ್ತಾಹಾರ ವಿಹಾರತೆ. ಶಾಸ್ತ್ರೋಕ್ತ ಕರ್ಮಾಚರಣೆ. ಭಗವದ್ ಧ್ಯಾನ. ವೇದಾಧ್ಯಯನ ಆಸಕ್ತಿ ಹೊಂದಿರುವುದು. ವಸ್ತುವು ಕಳೆದು ಹೋದಾಗ ಅದಕ್ಕಾಗಿ ಪರಿತಪಿಸುವುದಿಲ್ಲ. ಭೋಗಾಸಕ್ತತೆಯಲ್ಲಿ ವಿರಕ್ತಿ. ಮಧು. ಮಾಂಸವರ್ಜನೆ. ಕಾಮುಕರಾಹಿತ್ಯತೆ. ಬ್ರಾಹ್ಮಣರ ಸೇವಾತತ್ಪರತೆ. ದುರ್ಜನ ಸಂಗದಿಂದ ದೂರವಿರುವುದು. ಕಾಮುಕರಾಹಿತ್ಯತೆ. ಬ್ರಾಹ್ಮಣರ ಸೇವಾತತ್ಪರತೆ. ದುರ್ಜನ ಸಂಗದಿಂದ ದೂರವಿರುವುದು. ಆಲಸ್ಯರಾಹಿತ್ಯತೆ. ಆತ್ಮಾಭಿಮಾನರಹಿತತೆ. ಹರಿಭಕ್ತರ ಸಂಗದಲ್ಲಿ ಹೆಚ್ಚು ಕಾಲವಿರುವುದು ಭಗವನ್ನಿಷ್ಠ ಬುದ್ಧಿವುಳ್ಳ ಕ್ರೋಧವನ್ನು ಹತ್ತಿಕ್ಕಿದ ಮಹಾತ್ಮರು ಮಾತ್ರ ಯೋಗಸಿದ್ಧಿಯನ್ನು ಹೊಂದುವರು.

**ಯೋಗಧರ್ಮಾದ್ಧಿ ಧರ್ಮಜ್ಞ ನ ಧರ್ಮೋಽಸ್ತಿ ವಿಶೇಷವಾನ್ ।**
**ವರಿಷ್ಠಃ ಸರ್ವಧರ್ಮಾಣಾಂ ತಮೇವಾಚರ ಭಾರ್ಗವ ॥ 8 ॥**

**ಇತ್ಯುಕ್ತ್ವಾ ಭಗವಾನ್ ದೇವಃ ತತ್ರೈವಾಂತರಧೀಯತ ।**
**ಅಷ್ಟಾದಶೈವ ವರ್ಷಾಣಿ ತ್ವೇಕಾಹಮಿವ ಮೇಽಭವತ್ ॥ 9 ॥**

**ಪ್ರಸಾದಾತ್ ತಸ್ಯ ದೇವಸ್ಯ ನ ಗ್ಲಾನಿರಭವತ್ ತದಾ ।**
**ನ ಕ್ಷುತ್ ಪಿಪಾಸೇ ಕಾಲಂ ವಾ ಜಾನಾಮಿ ಸ್ಮ ತವಾನಘ ॥ 10 ॥**

**ಪಶ್ಚಾತ್ ಶಿಷ್ಯ ಸಕಾಶಾತ್ ತು ಕಾಲಃ ಸಂವಿದಿತೋ ಮಯಾ ॥ 11 ॥**

ಮಾರ್ಕಂಡೇಯ. ಯೋಗಧರ್ಮಕ್ಕಿಂತಲೂ ಉತ್ತಮವಾದ ಮತ್ತೊಂದು ಧರ್ಮವಿರುವುದಿಲ್ಲ. ಇದು ಇತರ ಧರ್ಮಗಳಿಗಿಂತಲೂ ವಿಶಿಷ್ಟ ಹಾಗೂ ಶ್ರೇಷ್ಠವಾಗಿದೆ. ಇದನ್ನೆ ನೀನು ಅವಲಂಬಿಸು. ಶ್ರದ್ಧೆಯಿಂದಲೂ ಯೋಗಧರ್ಮಾಸಕ್ತಿಯಿಂದಲೂ ಅಲ್ಪಾಹಾರಿಯಾಗಿ ಜಿತೇಂದ್ರಿಯನಾಗಿದ್ದರೆ ನೀನೂ ಸಹ ಮುಂದೆ ಯೋಗಸಿದ್ಧಿಯನ್ನು ಹೊಂದುವೆ ಎಂದು ಹೇಳಿ ಸನತ್ಕುಮಾರರು ಅದೃಶ್ಯರಾದರು.

ಇವರನ್ನು ಉಪಾಸಿಸುತ್ತಿದ್ದ ನಾನು ಇವರೊಂದಿಗೆ ಹದಿನೆಂಟು ವರ್ಷ ಸಹಚರನಾಗಿದ್ದೆ. ಆದರೂ ಅಷ್ಟು ದೀರ್ಘಕಾಲವೂ ನನಗೆ ಒಂದು ದಿನದಂತೆ ಕಳೆದುಹೋಗಿತ್ತು. ದಿನ ಹೋದದ್ದೆ ತಿಳಿಯಲಿಲ್ಲ. ಇಷ್ಟು ದೀರ್ಘಕಾಲ ಸನತ್ಕುಮಾರ ಸೇವೆಯಲ್ಲಿ ತೊಡಗಿದ್ದಾಗ ಹಸಿವೆ-ಬಾಯಾರಿಕೆಯಾಗಲಿ, ಬಳಲಿಕೆ ಆಯಾಸ ಯಾವುದೂ ನನ್ನನ್ನು ಬಾಧಿಸಲಿಲ್ಲ. ಇದೂ ಸಹ ಗುರುಗಳ ಅನುಗ್ರಹ ವಿಶೇಷವೇ ಸರಿ. ಹದಿನೆಂಟು ವರ್ಷಗಳು ಕಳೆದು ಹೋದ ವಿಚಾರವಾದರೂ ಮುಂದೆ ನನ್ನ ಶಿಷ್ಯನಿಂದ ತಿಳಿಯಿತು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಯೋಗಸಿದ್ಧಿ ಅಧಿಕಾರವೆಂಬಲ್ಲಿ
ಹತ್ತೊಂಭತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ವಿಂಶತಿತಮೋಽಧ್ಯಾಯಃ

## ಬ್ರಹ್ಮದತ್ತ ಹಾಗೂ ಉಗ್ರಾಯುಧ ವಂಶ ವರ್ಣನೆ

*ಮಾರ್ಕಂಡೇಯ ಉವಾಚ –*

**ತಸ್ಮಿನ್ನಂತರ್ಹಿತೇ ದೇವೇ ವಚನಾತ್ ತಸ್ಯ ವೈ ಪ್ರಭೋಃ ।**
**ಚಕ್ಷುರ್ದಿವ್ಯಂ ಸವಿಜ್ಞಾನಂ ಪ್ರಾದುರಾಸೀತ್ ತದಾ ಮಮ ॥ 1 ॥**

**ತತೋಽಹಂ ತಾನಪಶ್ಯಂ ವೈ ಬ್ರಾಹ್ಮಣಾನ್ ಕೌಶಿಕಾತ್ಮಜಾನ್ ।**
**ಆಪಗೇಯ ಕುರುಕ್ಷೇತ್ರೇ ಯಾನ್ ಉವಾಚ ಗುರುರ್ಮಮ ॥ 2 ॥**

**ಬ್ರಹ್ಮದತ್ತೋಽಭವದ್ ರಾಜಾ ಯಸ್ತೇಷಾಂ ಸಪ್ತಮೋ ದ್ವಿಜಃ ।**
**ಪಿತೃವರ್ತೀತಿ ವಿಖ್ಯಾತೋ ನಾಮ್ನಾ ಶೀಲೇನ ಕರ್ಮಣಾ ।**
**ಶುಕಸ್ಯ ಕನ್ಯಾ ಕೃತ್ವೀ ತಂ ಜನಯಾಮಾಸ ಪಾರ್ಥಿವಮ್ ॥ 3 ॥**

ಮಾರ್ಕಂಡೇಯರು ಭೀಷ್ಮನಿಗೆ – ಭೀಷ್ಮನೇ ! ದೇವತಾ ಸ್ವರೂಪಿಯಾದ ಸನತ್ಕುಮಾರರು ಅದೃಶ್ಯರಾದ ಮೇಲೆ ನನಗೆ ಅವರ ಅನುಗ್ರಹದಿಂದಾಗಿ ವಿಶಿಷ್ಟ ಜ್ಞಾನದಿಂದ ಕೂಡಿದ ದಿವ್ಯದೃಷ್ಟಿಯು ಪ್ರಾಪ್ತವಾಯಿತು. ಈ ದಿವ್ಯದೃಷ್ಟಿಯಿಂದಾಗಿ ಸನತ್ಕುಮಾರರು ನನಗೆ ಹೇಳಿದ್ದ ಕೌಶಿಕ ಬ್ರಾಹ್ಮಣರ ಮಕ್ಕಳನ್ನೂ ನಾನು ಕುರುಕ್ಷೇತ್ರದಲ್ಲಿ ಕಂಡೆನು. ಇವರಲ್ಲಿ ಏಳನೆಯವನಾದ 'ಪಿತೃವರ್ತೀ' ಎಂಬ ಬ್ರಾಹ್ಮಣನೇ, ತನ್ನ ಸತ್ಕರ್ಮಗಳಿಂದ ಏಳನೇ ಜನ್ಮದಲ್ಲಿ 'ಬ್ರಹ್ಮದತ್ತ'ನೆಂಬ ರಾಜನಾದನು. ಕಾಂಪಿಲ್ಯ ರಾಜನಾದ ಅಣುಹನು, ಶುಕಾಚಾರ್ಯರ ಪುತ್ರಿಯಾದ 'ಕೃತ್ವೀ' ಎಂಬುವಳಲ್ಲಿ ಬ್ರಹ್ಮದತ್ತನನ್ನು ಸೃಷ್ಟಿಸಿದನು.

*ಯುಧಿಷ್ಠಿರ ಉವಾಚ –*

**ಅಣುಹಃ ಕಸ್ಯ ವೈ ಪುತ್ರಃ ಕಸ್ಮಿನ್ ಕಾಲೇ ಬಭೂವ ಹ ।**
**ರಾಜಾ ಧರ್ಮಭೃತಾಂ ಶ್ರೇಷ್ಠೋ ಯಸ್ಯ ಪುತ್ರೋ ಮಹಾಯಶಾಃ ॥ 4 ॥**
**ಬ್ರಹ್ಮದತ್ತೋ ನರಪತಿಃ ಕಿಂವೀರ್ಯಃ ಸ ಬಭೂವ ಹ ।**
**ಕಥಂ ಸ ಸಪ್ತಮಸ್ತೇಷಾಂ ಸ ಬಭೂವ ನರಾಧಿಪಃ ॥ 5 ॥**

ಪಿತಾಮಹನೆ ! ಧರ್ಮಾತ್ಮರಲ್ಲಿ ಶ್ರೇಷ್ಠನಾದ ಬ್ರಹ್ಮದತ್ತನ ತಂದೆಯಾದ ಅಣುಹ ರಾಜನು ಯಾರ ಪುತ್ರನು? ಅವನಿದ್ದ ಕಾಲವಾವುದು? ಅವನ ಪುತ್ರ ಬ್ರಹ್ಮದತ್ತನ ಪರಾಕ್ರಮ ಹೇಗಿದ್ದಿತು? ಇವನು ಭರದ್ವಾಜನ ಪುತ್ರರಲ್ಲಿ ಏಳನೆಯವನಾಗಿ ಹೇಗಾದನು? ಶುಕನು ತನ್ನ ಪುತ್ರಿಯನ್ನು ಅಣುಹನಿಗೆ ವಿವಾಹ ಮಾಡಿ ಕೊಟ್ಟನೆಂದ ಮೇಲೆ ಅಣುಹನು ಸಾಮಾನ್ಯ ರಾಜನಾಗಿದ್ದರೆ ವಿವಾಹ ಮಾಡಿಕೊಡಲಾರ ಎಂದ ಮೇಲೆ ಅಣುಹನೂ ಮಹಾಪರಾಕ್ರಮಿಯೇ ಆಗಿರಬೇಕಲ್ಲವೆ? ಅಣುಹ ಬ್ರಹ್ಮದತ್ತರ ಕಥೆಯನ್ನು ವಿಸ್ತಾರವಾಗಿ ನನಗೆ ತಿಳಿಸಿರಿ ಎಂದನು.

ಭೀಷ್ಮನು ಧರ್ಮಜನೇ, ಮಹಾತಪಸ್ವಿ ಮಾರ್ಕಂಡೇಯರು ನನಗೆ ಹೇಳಿದಂತೆ ಬ್ರಹ್ಮದತ್ತನ ವಂಶಾವಳಿಯನ್ನು ವಿವರಿಸಿ ಹೇಳುವೆನು ಕೇಳು.

## ಪ್ರಾಣಿಪಕ್ಷಿಭಾಷೆ ಬಲ್ಲ ಬ್ರಹ್ಮದತ್ತ

**ಪ್ರತೀಪ ಸ್ಯ ತು ರಾಜರ್ಷೇಃ ತುಲ್ಯಕಾಲೋ ನರಾಧಿಪಃ ।**
**ಪಿತಾಮಹಸ್ಯ ಮೇ ರಾಜನ್ ಬಭೂವೇತಿ ಮಯಾ ಶ್ರುತಮ್ ॥ 6 ॥**
**ರುತಜ್ಞಃ ಸರ್ವಭೂತಾನಾಂ ಸರ್ವಭೂತಹಿತೇ ರತಃ ।**
**ಸಖಾಽಸ್ಯ ಗಾಲವೋ ಯಸ್ಯ ಯೋಗಾಚಾರ್ಯೋ ಮಹಾಯಶಾಃ ॥ 7 ॥**
**ಶಿಕ್ಷಾಮುತ್ಪಾದ್ಯ ತಪಸಾ ಕ್ರಮೋ ಯೇನ ಪ್ರವರ್ತಿತಃ ॥ 8 ॥**

ಧರ್ಮರಾಜನೇ ! ನನ್ನ ಪಿತಾಮಹನಾದ ಪ್ರತೀಪರಾಜನಿದ್ದ ಕಾಲದಲ್ಲಿಯೇ ಬ್ರಹ್ಮದತ್ತನೂ ಇದ್ದನೆಂದು ಕೇಳಿದ್ದೇನೆ. ಬ್ರಹ್ಮದತ್ತನಾದರೂ ಮಹಾತಪಸ್ವಿ-ಯಾದಂತೆ ಸರ್ವಪ್ರಾಣಿಹಿತದಲ್ಲಿರತನಾಗಿದ್ದನು. ಇದಕ್ಕಾಗಿಯೇ ಸಕಲ ಕ್ರಿಮಿ

ಕೀಟ ಪಶುಪಕ್ಷಿ ಮೊದಲಾದ ಸಕಲ ಜಂತುಗಳ ಭಾವ ಭಾಷೆಯನ್ನು ಚೆನ್ನಾಗಿ ತಿಳದಿದ್ದನು. ಜನ್ಮಾಂತರದಲ್ಲಿ ಮಾಡಿದ ಶ್ರಾದ್ಧದ ಪುಣ್ಯದಿಂದಾಗಿ, ಪಿತೃ ಭಕ್ತಿಯಿಂದಲೂ ಯೋಗಶಾಸ್ತ್ರದಲ್ಲಿ ಅದ್ವಿತೀಯ ಪಂಡಿತನಾಗಿದ್ದನು.

ವೇದದಲ್ಲಿರುವ ಪದ ಪಾಠ, ಕ್ರಮ ಪಾಠ, ಘನ ಪಾಠಗಳಲ್ಲಿ ಕ್ರಮಪಾಠದ ಕ್ರಮವನು ತಿಳಸಿಕೊಟ್ಟವನೂ, ವೇದಾರ್ಥ ತಿಳಯಲು ಉಪಯುಕ್ತವಾದ ಷಡಂಗಗಳಲ್ಲಿ ಶಿಕ್ಷಾ ಪದ್ಧತಿಯನ್ನು ತಪಸ್ಸಿನಿಂದ ಒಲಿಸಿಕೊಂಡು ಜಗತ್ತಿಗೆ ನೀಡಿದವನು 'ಗಾಲವ ಋಷಿ'. ಇವನು ಬ್ರಹ್ಮದತ್ತನ ಮಿತ್ರನಾಗಿದ್ದನು. ಯೋಗಿಯಾದ 'ಕಂಡರೀಕ'ನು ಬ್ರಹ್ಮದತ್ತನ ಮಂತ್ರಿಯಾಗಿದ್ದನು.

ಭರದ್ವಾಜನ ಏಳು ಮಂದಿ ಮಕ್ಕಳೂ ಏಳು ಬಾರಿ ಜನ್ಮವೆತ್ತಿದರು. ಅವರೆಲ್ಲರೂ ಪರಸ್ಪರವಾಗಿ ಮೈತ್ರೀ ಭಾವದಿಂದಲೇ ಇರುತ್ತಿದ್ದರು. ಬ್ರಹ್ಮದತ್ತನ ವಂಶವನ್ನು ಮಾರ್ಕಂಡೇಯರು ತಿಳಸಿರುವಂತೆ ನಾನು ನಿನಗೆ ತಿಳಸುವೆನು.

**ಬ್ರಹ್ಮದತ್ತಸ್ಯ ಪೌರಾಣಾಂ ಪೌರವಸ್ಯ ಮಹಾತ್ಮನಃ ।**
**ಬೃಹತ್ ಕ್ಷತ್ರಸ್ಯ ದಾಯಾದಃ ಸುಹೋತ್ರೋ ನಾಮ ಧಾರ್ಮಿಕಃ ॥ 9 ॥**
**ಸುಹೋತ್ರಸ್ಯಾಪಿ ದಾಯಾದಃ ಹಸ್ತೀ ನಾಮ ಬಭೂವ ಹ ।**
**ತೇನೇದಂ ನಿರ್ಮಿತಂ ಪೂರ್ವಂ ಹಸ್ತಿನಾಪುರಮುತ್ತಮಮ್ ॥ 10 ॥**

ಬೃಹತ್‌ಕ್ಷತ್ರನು ಪುರುವಂಶದಲ್ಲಿ ಹುಟ್ಟಿದವನು. ಬ್ರಹತ್‌ಕ್ಷತ್ರನಿಗೆ ಸುಹೋತ್ರನು ಪುತ್ರನು. ಸುಹೋತ್ರನಿಗೆ ಹಸ್ತೀರಾಜನು. ಇವನಿಂದಲೇ ಹಸ್ತಿನಾಪುರ ನಿರ್ಮಿತವಾಯಿತು. ಹಸ್ತಿಗೆ ಅಜಮೀಢ, ದ್ವಿಮೀಢ, ಪುರುಮೀಢರೆಂಬ ತ್ರೇತಾಗ್ನಿ ವರ್ಚಸ್ವಿಗಳಾದ ಮೂವರು ಮಂದಿ ಮಕ್ಕಳಾದರು.

### ಅಜಮೀಢ ವಂಶ

ಅಜಮೀಢನಿಗೆ ಧೂಮಿನೀಯೆಂಬ ತನ್ನ ಪತ್ನಿಯಲ್ಲಿ 'ಬೃಹದಿಷು' ಎಂಬ ಮಗನಾದನು. ಬೃಹದಿಷುವಿಗೆ ಬೃಹದ್ ಧನುವು, ಇವನಿಗೆ ಬೃಹದ್‌ಧರ್ಮನೂ, ಬೃಹದ್‌ಧರ್ಮನಿಗೆ ಸತ್ಯಜಿತನೂ, ಇವನ ಮಗ ವಿಶ್ವಜಿತುವು, ವಿಶ್ವಜಿತುವಿಗೆ ಸೇನಜಿತುವು, ಅವಂತೀರಾಜನಾದ ಸೇನಜಿತನಿಗೆ ರುಚಿರ, ಶ್ವೇತಕೇತು, ಮಹಿಮ್ನಾರ, ವತ್ಸರೆಂಬ ನಾಲ್ಕು ಮಂದಿ ಪುತ್ರರಾದರು.

ರುಚಿರನಿಗೆ ಪೃಥುಸೇನನು, ಇವನಿಗೆ ಪಾರನೆಂಬ ಪುತ್ರನಾದನು, ಪಾರನ ಪುತ್ರನೇ ನೀಪನೆಂಬ ರಾಜನು. ನೀಪರಾಜನಿಗೆ ಮಹಾವೀರ್ಯವಂತರಾದ ನೂರು ಮಂದಿ ಮಕ್ಕಳಿದ್ದರು. ನೂರು ಮಂದಿಯಲ್ಲಿ ಸಮರಕೌಶಲಿಯಾದ 'ಸಮೀರ'ನೆಂಬುವನು ಪ್ರಖ್ಯಾತನಾಗಿದ್ದನು. ಸಮರನೆ ಮೊದಲಾದ ನೂರುಮಂದಿಗೂ ನೀಪರೆಂದೆ ಪ್ರಸಿದ್ಧಿಯಿತ್ತು. ಕಾಂಪಿಲ್ಯದ ರಾಜನಾದ ಸಮರ ರಾಜನಿಗೆ ಪರ-ಪಾರ-ಸದಶ್ವರೆಂಬ ಮೂವರು ಪುತ್ರರಾದರು. ಪರನಿಗೆ ಪೃಥು ಎಂಬುವನೂ, ಪೃಥುವಿಗೆ ಸುಕೃತಕರ್ಮನೆಂಬ ಮಗನೂ, ಸುಕೃತನಿಗೆ ವಿಭ್ರಾಜನೆಂಬುವನೂ, ವಿಭ್ರಾಜನಿಗೆ ಅಣುಹ ರಾಜನು ಮಗನಾದನು. ಈ ಅಣುಹನು ಶುಕಾಚಾರ್ಯರ ಪುತ್ರಿಯಾದ ಕೃತ್ವೀಯನ್ನು ವಿವಾಹವಾಗಿದ್ದನು. ಇವರಿಬ್ಬರಲ್ಲಿ ಅವತರಿಸಿದವನೇ 'ಬ್ರಹ್ಮದತ್ತ'ನು.

**ವಿಭ್ರಾಜಸ್ಯ ತು ಪುತ್ರೋऽಭೂದ್ ಅಣುಹೋ ನಾಮ ಪಾರ್ಥಿವಃ ।**
**ಬಭೌ ಶುಕಸ್ಯ ಜಾಮಾತಾ ಕೃತ್ವೀ ಭರ್ತಾ ಮಹಾಯಶಾಃ ॥ 11 ॥**
**ಪುತ್ರೋऽಣುಹಸ್ಯ ರಾಜರ್ಷಿಃ ಬ್ರಹ್ಮದತ್ತೋऽಭವತ್ ಪ್ರಭುಃ ॥ 12 ॥**

ಬ್ರಹ್ಮದತ್ತನಿಗೆ ಯೋಗಿಯಾದ 'ವಿಷ್ವಕ್ಸೇನ' ರಾಜನು ಹುಟ್ಟಿದನು.

**ವಿಭ್ರಾಜಃ ಪುನರಾಯಾತಃ ಸ್ವಕೃತೇನೇಹ ಕರ್ಮಣಾ ।**

ಪಿತಾಮಹನಾದ ವಿಭ್ರಾಜನೇ ಮಗನ ಮಗನಾಗಿ ವಿಷ್ವಕ್ಸೇನನಾಗಿ ಜನಿಸಿದ.

## ಪೂಜನೀಯಾ ಪಕ್ಷಿ

**ಬ್ರಹ್ಮದತ್ತಸ್ಯ ಪುತ್ರೋऽನ್ಯಃ ಸರ್ವಸೇನ ಇತಿ ಶ್ರುತಃ ।**
**ಚಕ್ಷುಷೀ ತಸ್ಯ ನಿರ್ಭಿನ್ನೇ ಪಕ್ಷಿಣ್ಯಾ ಪೂಜನೀಯಯಾ ॥ 13 ॥**
**ಅಥಾಸ್ಯ ಪುತ್ರಸ್ತ್ವಪರೋ ಬ್ರಹ್ಮದತ್ತಸ್ಯ ಜಜ್ಞಿವಾನ್ ।**
**ವಿಷ್ವಕ್ಸೇನ ಇತಿ ಖ್ಯಾತಃ ಮಹಾಬಲ ಪರಾಕ್ರಮಃ ॥ 14 ॥**

ಬ್ರಹ್ಮದತ್ತನಿಗೆ 'ಸರ್ವಸೇನ'ನೆಂಬ ಮತ್ತೊಬ್ಬ ಮಗನಿದ್ದನು. ಪೂಜನೀಯಾ ಎಂಬ ಹಕ್ಕಿಯು ಬ್ರಹ್ಮದತ್ತನ ಮನೆಯಲ್ಲಿ ಬಹಳ ಕಾಲದಿಂದ ವಾಸವಾಗಿದ್ದಿತು. ಸರ್ವಸೇನನು ಹಿರಿಯ ವಿಷ್ವಕ್ಸೇನ ಕಿರಿಯ ಪೂಜನೀಯಾ ಪಕ್ಷಿಯು ಕಾರಣಾಂತರದಿಂದ ಸರ್ವಸೇನನು ಚಿಕ್ಕವನಿದ್ದಾಗ ಅವನ ಕಣ್ಣುಗಳನ್ನು

ತನ್ನ ಚೂಪಾದ ಕೊಕ್ಕಿನಿಂದ ಚುಚ್ಚಿ ಕಣ್ಣುಗುಡ್ಡೆಗಳನ್ನೆ ಕಿತ್ತು ಹಾಕಿದ್ದರಿಂದ ಧೃತರಾಷ್ಟ್ರನಂತೆ ಅಂಧನಾಗಿದ್ದನು. ಈ ಕಾರಣದಿಂದಾಗಿ ತಮ್ಮನಾದ ವಿಷ್ವಕ್ಸೇನನೇ ರಾಜನಾದನು.

ವಿಷ್ವಕ್ಸೇನನಿಗೆ ದಂಡಸೇನನು ಮಗನಾದನು. ದಂಡಸೇನನಿಗೆ ಭಲ್ಲಾಟನೆಂಬವನೂ ಹುಟ್ಟಿದನು. ಇವನನ್ನು ಯುದ್ಧದಲ್ಲಿ ರಾಧೇಯನಾದ ಕರ್ಣನು ಕೊಂದು ಹಾಕಿದನು. ಭಲ್ಲಾಟನು ಮಹಾನುಭಾವನಾಗಿದ್ದರೂ ಅವನ ಮಗ ಮಾತ್ರ ದುರ್ಬುದ್ಧಿವುಳ್ಳವನಾಗಿದ್ದನು. ಇವನು ಮುಂದೆ ತನ್ನ ದುರಾಚಾರದಿಂದಾಗಿ ನೀಪವಂಶವನ್ನೆ ನಾಶ ಮಾಡಿದನು. ಇವನು ಉಗ್ರಾಯುಧನೆಂಬುವನಿಗಾಗಿ ಇಡೀ ನೀಪವಂಶದವರನ್ನೆಲ್ಲ ಕೊಂದು ಹಾಕಿದನು. ಉಗ್ರಾಯುಧನಾದರೂ ಶಂತನು ಸತ್ತ ಮೇಲೆ ಸತ್ಯವತಿಯನ್ನು ನನಗೆ ಒಪ್ಪಿಸು ಎಂದು ನನ್ನನ್ನು ಆಗ್ರಹಿಸಿದನು. ನಾನಾದರೂ ಉದ್ಧಟನಾದ ಅವನನ್ನು ಯುದ್ಧದಲ್ಲಿ ಕೊಂದು ಹಾಕಿದೆನು.

*ಯುಧಿಷ್ಠಿರ ಉವಾಚ –*

**ಉಗ್ರಾಯುಧಃ ಕಸ್ಯ ಪುತ್ರಃ ಕಸ್ಮಿನ್ ವಂಶೇ ಜಜ್ಞಿವಾನ್ ।**
**ಕಿಮರ್ಥಂ ಚೈವ ಭವತಾ ನಿಹತಃ ತದ್ ಬ್ರವೀಹಿ ಮೇ ॥ 15 ॥**

ಯುಧಿಷ್ಠಿರನು – ಭೀಷ್ಮನೇ, ಉಗ್ರಾಯುಧ ಯಾರು, ಯಾವ ವಂಶ ಅವನದು? ನೀನು ಅವನನ್ನು ಕೊಂದದ್ದೇಕೆ? ಎಂಬುದನ್ನು ತಿಳಿಸು ಎಂದನು. ಭೀಷ್ಮನು, ಧರ್ಮರಾಜನೇ, ಹಸ್ತಿಯ ಮಗನಾದ ಅಜಮೀಢನಿಗೆ ಬೃಹದಿಷು ಎಂಬ ಮಗನಲ್ಲದೆ, ಯವೀನರನೆಂಬ ಮತ್ತೊಬ್ಬ ಪುತ್ರನೂ ಇದ್ದನು. ಯವೀನರನ ಮಗನೇ ಧೃತಿಮಂತನು. ಧೃತಿಮಂತನ ಮಗನೇ ಸತ್ಯಧೃತಿಯು. ಸತ್ಯಧೃತಿಗೆ ದೃಢನೇಮಿಯೂ, ದೃಢನೇಮಿಗೆ ಸುಧರ್ಮರಾಜನೂ ಸುಧರ್ಮನಿಗೆ ಸಾರ್ವಭೌಮನೆಂಬ ಮಗನೂ ಜನಿಸಿದನು. ಇವನು ಏಕಚ್ಛತ್ರಾಧಿಪತಿಯಾಗಿದ್ದು ಸಾರ್ವಭೌಮನೆ ಆಗಿದ್ದನು. ಇವನ ವಂಶದಲ್ಲಿ 'ಮಹಾಂತ'ನೆಂಬ ಪುತ್ರನು ಜನಿಸಿದನು. ಮಹಾಂತನಿಗೆ ರುಕ್ಮರಥನೂ, ರುಕ್ಮರಥನಿಗೆ ಸುಪಾರ್ಶ್ವನೂ, ಸುಪಾರ್ಶ್ವನಿಗೆ ಸಮತಿಯೂ, ಸಮತಿಗೆ ಸನ್ನತಿಯೆಂಬ ಮಗನೂ ಹುಟ್ಟಿದನು. ಸನ್ನತಿಯ ಮಗನೇ 'ಕೃತ'ನು.

**ಶಿಷ್ಯೋ ಹಿರಣ್ಯನಾಭಸ್ಯ ಕೌಶಲ್ಯಸ್ಯ ಮಹಾತ್ಮನಃ ।**
**ಚತುರ್ವಿಂಶತಿಧಾ ತೇನ ಸಪ್ರಾಚ್ಯಾಃ ಸಾಮಸಂಹಿತಾಃ ॥ 16 ॥**

**ಸ್ಮೃತಾಸ್ತೇ ಪ್ರಾಚ್ಯಸಾಮಾನಃ ಕಾರ್ತಯೋ ನಾಮ ಸಾಮಗಾಃ ॥ 17 ॥**

ಕೃತರಾಜನು ಕೋಸಲ ದೇಶದ ಮಹಾನುಭಾವನಾದ ಹಿರಣ್ಯನಾಭನ ಶಿಷ್ಯನಾಗಿದ್ದನು. ಅವನು ಪ್ರಾಚೀನ ಸಾಮವೇದವನ್ನು ಇಪ್ಪತ್ತನಾಲ್ಕು ಶಾಖೆಗಳನ್ನಾಗಿ ವಿಭಾಗಿಸಿದನು. ಇವುಗಳನ್ನು 'ಪ್ರಾಚ್ಯ ಸಾಮವೇದ'-ವೆನ್ನುವರು. ಈ ಸಾಮವೇದ ಅಧ್ಯಯನ ಮಾಡಿದವರನ್ನು 'ಕೀರ್ತಿ ಸಾಮಗರು' ಎನ್ನುವರು.

ಕೃತನ ಮಗನೇ ಉಗ್ರಾಯುಧನು. ಮಹಾಪರಾಕ್ರಮಿಯಾದ ಇವನು ಪಾಂಚಾಲ ರಾಜನಾದ ಪೃಷತರಾಜನ ಪಿತಾಮಹನೂ ಮಹಾತೇಜಸ್ವಿಯೂ ಆಗಿದ್ದ ನೀಪರಾಜನನ್ನು ಯುದ್ಧದಲ್ಲಿ ಸಂಹಾರಗೈದನು. ಉಗ್ರಾಯುಧನ ಮಗನೇ ಕ್ಷೇಮ್ಯನು. ಕ್ಷೇಮ್ಯನಿಂದ ಸುವೀರನೂ, ಸುವೀರನಿಂದ ನೃಪಂಜಯನೂ, ನೃಪಂಜಯನ ಮಗನೇ ಬಹುರಥನು. ಇವರೆಲ್ಲರೂ 'ಪೌರವರು' ಎಂದೇ ಕರೆಯಲ್ಪಡುವರು.

ಉಗ್ರಾಯುಧನು ಮಹಾದುಷ್ಟ ಸ್ವಭಾವದವನಾಗಿದ್ದನು.

ಅನೇಕ ವಿಧವಾದ ಆಯುಧಗಳ ಸಮೂಹವನ್ನೆ ಹೊಂದಿದ್ದು ಮಹಾದರ್ಪಿಷ್ಠನಾಗಿದ್ದ ಉಗ್ರಾಯುಧನು ನೀಪರಾಜರನ್ನೂ ಹಾಗೂ ಬೇರೆ ರಾಜರನ್ನೂ ಯುದ್ಧದಲ್ಲಿ ಕೊಂದು ಹಾಕಿದನು.

**ಪಿತರ್ಯುಪರತೇ ಮಹ್ಯಂ ಶ್ರಾವಯಾಮಾಸ ಕಿಲ್ಬಿಷಮ್ ।**
**ಮಾಮಮಾತ್ಯೈಃ ಪರಿವೃತಂ ಶಯಾನಂ ಧರಣೀತಲೇ ॥ 18 ॥**

**ಉಗ್ರಾಯುಧಸ್ಯ ರಾಜೇಂದ್ರ ದೂತೋಽಭ್ಯೇತ್ಯ ವಚೋಽಬ್ರವೀತ್ ।**

ನನ್ನ ತಂದೆಯು ಮಂತ್ರಿಗಳಿಂದ ಕೂಡಿ ಯುದ್ಧರಂಗದಲ್ಲಿ ಮೃತನಾಗಿದ್ದನು. ಈ ಸಮಯದಲ್ಲಿಯೇ ಉಗ್ರಾಯುಧನು ತನ್ನ ದೂತನನ್ನು ನನ್ನ ಬಳಿ ಕಳುಹಿಸಿ, ಅತ್ಯಂತ ಹೇಯವಾದ ಮಾತನ್ನು ಹೇಳಿ ಕಳುಹಿಸಿದನು.

**ಅದ್ಯತ್ವಂ ಜನನೀಂ ಭೀಷ್ಮ ಗಂಧಕಾಲೀಂ ಯಶಸ್ವಿನೀಮ್ ।**
**ಸ್ತ್ರೀರತ್ನಂ ಮಮ ಭಾರ್ಯಾರ್ಥೇ ಪ್ರಯಚ್ಛ ಕುರುಪುಂಗವ ॥ 19 ॥**

**ಏವಂ ರಾಜ್ಯ ಚ ತೇ ಸ್ಫೀತಂ ಧನಾನಿ ಚ ನ ಸಂಶಯಃ ॥ 20 ॥**

**ಪ್ರದಾಸ್ಯಾಮಿ ಯಥಾಕಾಮಂ ಅಹಂ ವೈ ರತ್ನಭಾಗ್ ಭುವಿ ।**

**ಮಮ ಪ್ರಜ್ವಲಿತಂ ಚಕ್ರಂ ನಿಶಮ್ಯೇದಂ ಸುದುರ್ಜಯಮ್ ॥ 21 ॥**

**ಶತ್ರವೋ ವಿದ್ರವಂತ್ಯಾಜೌ ದರ್ಶನಾದೇವ ಭಾರತ ॥ 22 ॥**

**ಭೀಷ್ಮನೇ** ! ನಿನ್ನ ತಂದೆಯು ಮಂತ್ರಿಗಳೊಂದಿಗೆ ನನ್ನ ಕೈಯಿಂದ ಮೃತಪ್ರಾಯನಾಗಿದ್ದಾನೆ. ನಿನ್ನ ತಾಯಿಯಾದ ಗಂಧಕಾಲಿಯೆನಿಸಿದ ಸತ್ಯವತಿಯನ್ನು ನನಗೆ ಭಾರ್ಯೆಯನ್ನಾಗಿ ಮಾಡಿಸು. ಸ್ತ್ರೀರತ್ನವು ಎಂದೂ ಪುರುಷರತ್ನನನ್ನೂ ಸೇರಬೇಕಷ್ಟೆ? ನೀನು ನಿನ್ನ ತಾಯಿಯನ್ನು ನನಗೆ ಒಪ್ಪಿಸಿದೆಯಾದರೆ ಸಂಪತ್ಸಮೃದ್ಧ ರಾಜ್ಯವನ್ನು ವಿವಿಧ ರತ್ನಗಳನ್ನೂ ವಿಪುಲವಾಗಿ ಬಹುಮಾನ ನೀಡುತ್ತೇನೆ. ನಾನೂ ಸ್ತ್ರೀರತ್ನ ಪಡೆದ ಪುರುಷರತ್ನನಾಗುವೆನು. ನನ್ನನ್ನೂ ಗೆಲ್ಲಬಹುದೆಂಬ ಭ್ರಮೆ ನೀನಿಟ್ಟು ಕೊಳ್ಳಬೇಡ. ಪ್ರಜ್ವಲಿಸುತ್ತಿರುವ ಚಕ್ರವನ್ನು ಕಂಡೊಡನೆಯೇ ಯುದ್ಧಕ್ಕೆ ಬಂದ ಶತ್ರುಗಳು ದೂರಕ್ಕೆ ಪಲಾಯನ ಮಾಡುವರು.

ನೀನು ನಿನ್ನ ಪ್ರಾಣಕ್ಕೆ, ನಿನ್ನ ರಾಷ್ಟ್ರಕ್ಕೆ ಕ್ಷೇಮವನ್ನು ಬಯಸುವಿಯಾದರೆ ನನ್ನಾದೇಶ ಪಾಲಿಸು ಅನ್ಯಥಾ ನನ್ನ ಸೇನಾವಾಹಿನಿಯೊಡನೆ ಬಂದು ನಿನ್ನನ್ನು ನಿನ್ನ ರಾಜ್ಯವನ್ನು ಧ್ವಂಸ ಮಾಡುವೆ ಎಂದು.

**ಅಥಃ ಪ್ರಸ್ತಾರಶಯನೇ ಶಯಾನಸ್ತೇನ ಚೋದಿತಃ ।**

**ದೂತಾಂತರ್ಹಿತ ಮೇತದ್ ವೈ ವಾಕ್ಯಮಗ್ನಿಶಿಖೋಪಮಮ್ ॥ 23 ॥**

**ಆಜ್ಞಾಪಯಂ ವೈ ಸಂಗ್ರಾಮೇ ಸೇನಾಧ್ಯಕ್ಷಾಂಶ್ಚ ಸರ್ವಶಃ ॥ 24 ॥**

**ವಿಚಿತ್ರವೀರ್ಯಂ ಬಾಲಂ ಚ ಮದುಪಾಶ್ರಯಮೇವ ಚ ।**

**ದೃಷ್ಟ್ವಾ ಕ್ರೋಧ ಪರೀತಾತ್ಮಾ ಯುಧ್ಧಾಯೈವ ಮನೋದಧೇ ॥ 25 ॥**

**ನಿಗೃಹೀತಃ ತದಾಹಂ ತೈಃ ಸಚಿ ನೈಃ ಮಂತ್ರ ಕೋವಿದೈಃ ।**

**ಸ್ನಿಗ್ಧೈಶ್ಚ ಶಾಸ್ತ್ರವಿದ್ಭಿಶ್ಚ ಸಂಯುಗಸ್ಯ ನಿವರ್ತನೇ ॥ 26 ॥**

ಯುಧಿಷ್ಠಿರನೇ, ನಾನು ವ್ರತನಿಷ್ಠನಾದ್ದರಿಂದ ದರ್ಭೆಗಳನ್ನು ಹಾಸಿ ಅದರ ಮೇಲೆ ಮಲಗಿದ್ದೆನು. ಉಗ್ರಾಯುಧನ ಅಗ್ನಿಯ ಉರಿಯಂತಿರುವ

ವಾಕ್ಯಗಳನ್ನು ಕೇಳಿ ಕಿಡಿಕಿಡಿಯಾದೆನು. ಅವನ ದುರ್ಬುದ್ಧಿಯು ಅರ್ಥವಾಯಿತು. ಅವನಿಗೆ ಸರಿಯಾಗಿ ಪಾಠಕಲಿಸಬೇಕೆಂದು ನಿಶ್ಚೈಸಿ ಸೇನಾಧ್ಯಕ್ಷರನ್ನು ಕರೆಸಿ ಯುದ್ಧಕ್ಕೆ ಅಣಿಯಾಗಿರಲು ಆದೇಶ ನೀಡಿದೆ. ಈ ಸಮಯದಲ್ಲಿ ವಿಚಿತ್ರವೀರ್ಯನು ಇನ್ನೂ ಚಿಕ್ಕ ಬಾಲಕನಾಗಿ ನನ್ನ ಆಶ್ರಯದಲ್ಲಿಯೇ ಬೆಳೆಯುತ್ತಿದ್ದನು. ಯುದ್ಧಕ್ಕೆ ಸಮರ್ಥನಾಗಿರಲಿಲ್ಲ. ಹೀಗಾಗಿ ಉಗ್ರಾಯುಧನ ಮೇಲೆ ಯುದ್ಧ ಮಾಡಲು ತೀರ್ಮಾನಿಸಿದೆ. ಆದರೆ ಮಂತ್ರಜ್ಞರಾದ ಮಂತ್ರಿವರ್ಯರು, ವೇದವೇತ್ತರಾದ ಋತ್ವಿಕ್ಕರೂ, ತತ್ತ್ವದರ್ಶಿಗಳಾದ ಮಿತ್ರರೂ ನನ್ನನ್ನು ಯುದ್ಧ ಮಾಡುವುದು ಬೇಡವೆಂದು ತಡೆದರು. ಹೀಗೆ ತಡೆಯಲು ಒಂದು ಕಾರಣವಿತ್ತು.

### ಆಶೌಚವಿರುವಾಗ ಯುದ್ಧ ಬೇಡ

**ಪ್ರವೃತ್ತಚಕ್ರಃ ಪಾಪ್ತೋಽಸೌ ತ್ವಂ ಚ ಆಶೌಚಗತಃ ಪ್ರಭೋ ।**
**ನ ಚೈಷ ಪ್ರಥಮಃ ಕಲ್ಪಃ ಯುದ್ಧಂ ನಾಮ ಕದಾಚನ ॥ 27 ॥**

**ತೇ ವಯಂ ಸಾಮಪೂರ್ವಂ ವೈ ದಾನಂ ಭೇದಂ ತಥೈವ ಚ ।**
**ಪ್ರಯೋಕ್ಷ್ಯಾಮಃ ತತಃ ಶುದ್ಧೋ ದೈವತಾನ್ಯಭಿವಾದ್ಯ ಚ ।**
**ಬ್ರಾಹ್ಮಣೈರಭ್ಯನುಜ್ಞಾತಃ ಪ್ರಯಾಸ್ಯಸಿ ಜಯಾಯ ವೈ ॥ 28 ॥**

ಭೀಷ್ಮನೇ, ಉಗ್ರಾಯುಧನ ಚಕ್ರಾಯುಧ ಮರಣಾಯುಧವಾಗಿ ಹೋರಾಡುತ್ತಿದೆ. ಎರಡನೆಯದಾಗಿ ನೀನು ಆಶೌಚದಲ್ಲಿರುವೆ. ಯಾವುದೇ ಸಮಸ್ಯೆಗೆ ಪರಿಷ್ಕಾರ ಯುದ್ಧವೆ ಅಲ್ಲ. ನಾವು ಸಾಮ ದಾನ ಭೇದಾದಿ ಉಪಾಯಗಳನ್ನು ಪ್ರಯೋಗಿಸಿ ನೋಡೋಣ. ಈ ಮಧ್ಯದಲ್ಲಿ ನಿನ್ನ ಮೃತಾಶೌಚವೂ ಕಳೆಯುತ್ತದೆ. ಪುಣ್ಯಾಹದಿಂದ ಶುದ್ಧನಾಗಿ ದೇವತೆ ಬ್ರಾಹ್ಮಣರಿಗೆ ನಮಸ್ಕರಿಸಿ, ಬ್ರಾಹ್ಮಣರು ಹಾಗೂ ಅಗ್ನಿಯನ್ನು ಸಂಪೂಜಿಸಿ, ಅವರ ಆದೇಶ ಪಡೆದು ಯುದ್ಧಕ್ಕೆ ಹೊರಟರೆ ಜಯವಾಗುವುದು ಖಂಡಿತವೆಂದು ಹೇಳಿದರು.

**ಅಸ್ತ್ರಾಣಿ ನ ಪ್ರಯೋಜ್ಯಾನಿ ನ ಪ್ರವೇಶ್ಯಶ್ಚ ಸಂಗರಃ ।**
**ಆಶೌಚೇ ವರ್ತಮಾನೇ ತು ವೃದ್ಧಾನಾಮಿತಿ ಶಾಸನಮ್ ॥ 29 ॥**

ಆಶೌಚವಿರುವಾಗ ಯಾವುದೇ ಅಸ್ತ್ರಗಳನ್ನೂ ಪ್ರಯೋಗಿಸಬಾರದು. ಯುದ್ಧ ಮಾಡಬಾರದು ಎಂದು ವೃದ್ಧರ ಉಪದೇಶವಿದೆ. ಆದ್ದರಿಂದ ಮೊದಲು

ಅವನನ್ನು ಸಾಮ ದಾನ ಭೇದಗಳಿಂದ ವಶಪಡಿಸಿಕೊಳ್ಳೋಣ. ಅದಕ್ಕೆ ಅವನು ಒಗ್ಗದಿದ್ದರೆ ಇಂದ್ರನು ಶಂಬರಾಸುರನನ್ನು ಸಂಹರಿಸಿದಂತೆ ಸಂಹಾರ ಮಾಡುವಿಯಂತೆ ಎಂದರು.

ಕೆಲವು ಕ್ಲಿಷ್ಟ ಸಂದರ್ಭಗಳಲ್ಲಿ ವೃದ್ಧರ ಅದರಲ್ಲಿಯೂ ಅನುಭವಸ್ಥ ವೃದ್ಧರ ಮಾತುಗಳನ್ನು ಕೇಳಬೇಕೆಂಬ ಸಿದ್ಧಾಂತವುಳ್ಳ ನಾನು ಯುದ್ಧದಿಂದ ವಿರಮಿಸಿದೆ.

ನಂತರ ನನ್ನ ನೀತಿಕುಶಲರಾದ ಮಂತ್ರಿಗಳು ಸಮಾಲೋಚನೆ ನಡೆಸಿ ಸಾಮಾದಿ ಚತುರ್ವಿಧ ಉಪಾಯಗಳನ್ನು ಅವನ ಮೇಲೆ ಪ್ರಯೋಗಿಸಿದರು. ಆದರೆ ದುರ್ಬುದ್ಧಿ ದುರಂಹಕಾರಿಯಾದ ಉಗ್ರಾಯುಧನು ಇವುಗಳಿಗೆ ಮಣಿಯಲ್ಲಿಲ್ಲ.

### ದುರ್ಬುದ್ಧಿವುಳ್ಳವನಿಗೆ ಚಕ್ರ ಸಹಾಯವಿಲ್ಲ

**ಪ್ರವೃತ್ತಂ ತಸ್ಯ ತಚ್ಚಕ್ರಂ ಅಧರ್ಮನಿರತಸ್ಯ ವೈ ।**
**ಪರದಾರಾಭಿಲಾಷೇಣ ಸದ್ಯಸ್ತಾತ ನಿವರ್ತಿತಮ್ ॥ 30 ॥**

**ನ ತ್ವಹಂ ತಸ್ಯ ಜಾನೇ ತನ್ನಿವೃತ್ತಂ ಚಕ್ರಮುತ್ತಮಮ್ ।**

ಉಗ್ರಾಯುಧನ ಧರ್ಮಚಕ್ರವು ಶತ್ರುಗಳ ಮೇಲೆರಗಿ ಸಂಹಾರ ಮಾಡುತ್ತಿತ್ತು. ಆದರೆ ಅಧರ್ಮಾಸಕ್ತನೂ ಪರದಾರಾಭಿಲಾಷಿಯೂ ಆದ ಇವನ ಮಾತು ಕೇಳದೆ ಧರ್ಮಚಕ್ರವು ಯಾರನ್ನೂ ಕೊಲ್ಲದೆ ಸ್ಥಗಿತಗೊಂಡಿತು.

ಈ ಚಕ್ರವು ತನ್ನ ಕಾರ್ಯವನ್ನು ಮಾಡದೆ ಸ್ಥಗಿತಗೊಂಡು ಹಿಂದಿರುಗಿದ್ದಾಗಲೀ ಸಜ್ಜನರಿಂದ ನಿಂದೆಗೊಳಗಾಗಿ ಉಗ್ರಾಯುಧನು ತನ್ನ ನೀಚಕರ್ಮದಿಂದಲೇ ಮೃತಪ್ರಾಯನಾಗಿರುವ ವಿಷಯವಾಗಲೀ ನನಗೆ ತಿಳಿಯಲೇ ಇಲ್ಲ.

### ಭೀಷ್ಮನು ಉಗ್ರಾಯುಧನ ಮೇಲೆ ಯುದ್ಧ

**ಕೃತಶೌಚಃ ಶರೀ ಚಾಪೀ ರಥೀ ನಿಷ್ಕ್ರಮ್ಯ ವೈ ಪುರಾತ್ ।**
**ಕೃತ ಸ್ವಸ್ತ್ಯಯನೋ ವಿಪ್ರೈಃ ಪ್ರಾಯೋಧಯಮಹಂ ರಿಪುಮ್ ॥ 31 ॥**
**ತ್ರ್ಯಹ ಮುನ್ಮತ್ತವದ್‌ಯುದ್ಧಂ ದೇವಾಸುರಮಿವಾಭವತ್ ॥ 32 ॥**

ಆಶೌಚ ನಿವೃತ್ತಿಯಾದ ಮೇಲೆ ಸ್ವಸ್ತಿ ಪುಣ್ಯಾಹಾದಿಗಳಿಂದ ಶುದ್ಧನಾದ ನಾನು

ದುರಹಂಕಾರಿಯಾದ ಉಗ್ರಾಯುಧನನ್ನು ಶಿಕ್ಷಿಸಲು ಬಿಲ್ಲುಬಾಣಗಳಿಂದ ಸಜ್ಜಾಗಿ ರಥದಲ್ಲಿ ಕುಳಿತು ಶತ್ರುವಿನ ಕಡೆಗೆ ಹೊರಟನು.

ಉಗ್ರಾಯುಧನಿಗೂ ನನಗೂ ಭಯಂಕರ ಯುದ್ಧ ನೇರವಾಗಿ ನಡೆಯಿತು. ನಾನು ಹಾಗೂ ನನ್ನ ಸೈನ್ಯವು ದೇವಾಸುರ ಯುದ್ಧದಂತೆ ಬಹಳ ಉತ್ಸಾಹದಿಂದ ಹೋರಾಡಿದೆವು. ನನ್ನ ಶರೀರ ಬಲ, ಅಸ್ತ್ರಬಲ, ಹೊಂದಿದ್ದ ನಾವು ಉಗ್ರಾಯುಧನ ಮೇಲೆ ಮೂರು ದಿನಗಳ ಪರ್ಯಂತ ಹೋರಾಡಿದೆವು. ಈ ನಿರಂತರ ಅಸ್ತ್ರಪ್ರಹಾರದಿಂದಾಗಿ ಪ್ರಾಣ ತೊರೆದು ರಣಾಂಗಣದಲ್ಲಿ ಬಿದ್ದನು.

**ಏತಸ್ಮಿನ್ನಂತರೇ ತಾತ ಕಾಂಪಿಲ್ಯೇ ಪೃಷತೋಽಭ್ಯಯಾತ್ ।**
**ಹತೇ ನಿಪೇಶ್ವರೇ ಚೈವ ಹತೇ ಚೋಗ್ರಾಯುಧೇ ನೃಪೇ ॥ 33 ॥**

**ಅಹಿಚ್ಛತ್ರಂ ಸ್ವಕಂ ರಾಜ್ಯಂ ಪಿತ್ರ್ಯಂ ಪ್ರಾಪ ಮಹಾದ್ಯುತಿಃ ।**
**ದ್ರುಪದಸ್ಯ ಪಿತಾ ರಾಜನ್ ಮಮೈವಾನುಮತೇ ತದಾ ॥ 34 ॥**

ದ್ರುಪದನ ತಂದೆ ಪೃಷತನು ಉಗ್ರಾಯುಧನು ನನ್ನಿಂದ ಸಂಹರಿಸಲ್ಪಟ್ಟದ್ದನ್ನು ಕೇಳಿ ಕಾಂಪಿಲ್ಯನಗರವನ್ನು ಆಕ್ರಮಿಸಿದನು. ಪಿತ್ರಾರ್ಜಿತವಾದ ಅಹಿಚ್ಛತ್ರ–ವನ್ನೂ ನನ್ನ ಅನುಮತಿಯಿಂದಲೇ ರಾಜ್ಯವಾಳತೊಡಗಿದನು. ಹೀಗೆ ಬಹಳ ಕಾಲ ಪೃಷತನು ರಾಜ್ಯವಾಳಿದ ಮೇಲೆ ಅವನ ಮಗ ದ್ರುಪದ ರಾಜನು ಆಳತೊಡಗಿದನು.

**ಪ್ರತಿಗೃಹ್ಯ ತತೋ ದ್ರೋಣ ಉಭಯಂ ಜಯತಾಂ ವರಃ ।**
**ಕಾಂಪಿಲ್ಯಂ ದ್ರುಪದರಾಯೈವ ಪ್ರಾಯಚ್ಛದ್ ವಿದಿತಂ ತವ ॥ 35 ॥**

ದ್ರೋಣರು ದ್ರುಪದನಿಂದ ಅವಮಾನಿತರಾಗಿ ಪ್ರತೀಕಾರಕ್ಕಾಗಿ ದ್ರುಪದನನ್ನು ಹಿಡಿಯಲು ಅರ್ಜುನನ ಸಹಾಯ ಹೊಂದಿ ಸೆರೆ ಹಿಡಿದರು. ದ್ರೋಣನನ್ನು ಹಂಗಿಸಿ ಅವನ ಅರ್ಧ ರಾಜ್ಯ ಕಿತ್ತುಕೊಂಡರು. ಆ ರಾಜ್ಯವೇ 'ಅಹಿಚ್ಛತ್ರ' ಕಾಂಪಿಲ್ಯವನ್ನು ದ್ರುಪದನಿಗೆ ಪುನಃ ನೀಡಿದರು. ಈ ವಿಷಯ ಧರ್ಮಜ! ನಿನಗೂ ತಿಳಿದಿದೆಯಲ್ಲವೆ?

ಯುಧಿಷ್ಠಿರ ! ಇದುವರೆಗೆ ನಾನು ನಿನಗೆ ದ್ರುಪದ ಬ್ರಹ್ಮದತ್ತ ನೀಪ, ಉಗ್ರಾಯುಧರ ವಂಶ ಚಿತ್ತರಿಸಿದ್ದೇನೆ.

## ಪೂಜನೀಯಾ ಪಕ್ಷಿ

**ಕಿಮರ್ಥಂ ಬ್ರಹ್ಮದತ್ತಸ್ಯ ಪೂಜನೀಯಾ ಶಕುಂತಿಕಾ ।**
**ಅಂಧಂ ಚಕಾರ ಗಾಂಗೇಯ ಜ್ಯೇಷ್ಠಂ ಪುತ್ರಂ ಪುರಾ ವಿಭೋ ॥ 36 ॥**

ಧರ್ಮರಾಜನು ಭೀಷ್ಮರನ್ನು ಕುರಿತು ಭೀಷ್ಮರೇ ! ಪೂಜನೀಯಾ ಪಕ್ಷೀಯು ರಾಜನೊಂದಿಗೆ ಮೈತ್ರಿ ಹೇಗೆ ಹೊಂದಿತು. ರಾಜನ ಅರಮನೆಯಲ್ಲಿಯೇ ವಾಸವಾಗಿದ್ದು, ತನ್ನ ಆಶ್ರಯದಾತ ರಾಜನ ಮಗನ ನೇತ್ರಗಳನ್ನೆ ಕಿತ್ತು ಹಾಕಿ ಅಂಧನನ್ನಾಗಿ ಮಾಡಿದ್ದೇಕೆ? ತಿಳಿಸಿ ಎಂದನು.

**ಶ್ರುಣು ಸರ್ವಂ ಮಹಾರಾಜ ಯಥಾವೃತ್ತಮಭೂತ್ ಪುರಾ ।**
**ಬ್ರಹ್ಮದತ್ತಸ್ಯ ಭವನೇ ತನ್ನಿಬೋಧ ಯುಧಿಷ್ಠಿರ ॥ 37 ॥**
**ಕಾಚಿತ್ ಶಕುಂತಿಕಾ ರಾಜನ್ ಬ್ರಹ್ಮದತ್ತಸ್ಯ ವೈ ಸಖೀ ।**
**ತಸ್ಯಾಕುಲಾಯಮಭವದ್ ಗೇಹೇ ತಸ್ಯ ನರೋತ್ತಮ ॥ 38 ॥**
**ಸಾ ಸದಾಹನಿ ನಿರ್ಗತ್ಯ ತಸ್ಯ ರಾಜ್ಞೋ ಗೃಹೋತ್ತಮಾತ್ ।**
**ಚರಿತ್ವಾ ತೇಷು ಸಾ ರಾಜನ್ ನಿಶಿ ಕಾಂಪಿಲ್ಯ ಮಾಗಮತ್ ॥ 39 ॥**
**ರಾಜ್ಞಾ ತೇನ ಸದಾ ರಾಜನ್ ಕಥಾಯೋಗಂ ಚಕಾರ ಸಾ ।**
**ಚರಿತ್ವಾ ವಿವಿಧಾನ್ ದೇಶಾನ್ ಕಥಯಾಮಾಸ ಸಾ ನಿಶಿ ॥ 40 ॥**

ಹಿಂದೆ ಕಾಂಪಿಲ್ಯ ನಗರದಲ್ಲಿ ಬ್ರಹ್ಮದತ್ತನು ರಾಜ್ಯಭಾರ ಮಾಡುತ್ತಿದ್ದನು. ಅವನಿಗೆ ವಿವಿಧ ಪಕ್ಷಿಪಶುಗಳ ಭಾಷೆಯೆಲ್ಲ ಚೆನ್ನಾಗಿ ತಿಳಿದಿದ್ದ. ಇದರಿಂದಾಗಿ 'ಪೂಜನೀಯಾ' ಎಂಬ ಹೆಣ್ಣು ಪಕ್ಷಿಯೊಂದಿಗೆ ಮೈತ್ರಿವುಂಟಾಯಿತು. ರಾಜನ ಅರಮನೆಯಲ್ಲಿ ಚಂದ್ರಶಾಲೆಯಲ್ಲಿ ಗೂಡು ಕಟ್ಟಿಕೊಂಡು ವಾಸಿಸುತ್ತಿತ್ತು. ಆ ಪಕ್ಷಿಯು ಹಗಲು ಸಮುದ್ರತೀರ, ನದೀತೀರ, ಪರ್ವತತಪ್ಪಲು, ವನ-ಉಪವನಗಳಲ್ಲಿಯೂ, ಹಂಸ ಸಾರಸ ಕಾರಂಡವ ಪಕ್ಷಿಗಳಿಂದ ಶಬ್ಧಿತವಾದ ಪ್ರದೇಶಗಳಲ್ಲಿ ತಿರುಗಿ ಸಂಜೆ ಹಿಂತಿರುಗಿ ಬಂದು, ಪ್ರಪಂಚದ ಸಮಾಚಾರವನ್ನೆಲ್ಲ ತಿಳಿಸುತ್ತಿತ್ತು. ತಾನು ನೋಡಿದ ಆಶ್ಚರ್ಯಕರ ಘಟನೆಯನ್ನು ವಿವರಿಸಿ ಹೇಳುತ್ತಾ ರಾಜನ ಮನಸ್ಸನ್ನು ರಂಜಿಸುತ್ತಿತ್ತು. ಈ ಪಕ್ಷಿಯ ಮೃದು ಮಧುರ ಭಾಷಣದಿಂದ ವಿವಿಧ ದೇಶ ವಾರ್ತಾಶ್ರವಣ-ದಿಂದಾಗಿ ಬ್ರಹ್ಮದತ್ತನ ಪ್ರಾಣಪ್ರಿಯಪಕ್ಷಿಯಾಗಿತ್ತು.

**ಪುತ್ರೋಽಭೂದ್ ರಾಜಶಾರ್ದೂಲ ಸರ್ವಸೇನೇತಿ ವಿಶ್ರುತಃ ।**
**ಪೂಜನೀಯಾಥ ಸಾ ತಸ್ಮಿನ್ ಪ್ರಾಸೂತ ಅಂಡಮಥಾಪಿ ಚ ॥ 41 ॥**

**ತಸ್ಮಿನ್ ನೀಡೇ ಪುರಾ ಹ್ಯೇಕಂ ತತ್ ಕಿಲ ಪ್ರಾಸ್ಫುಟತ್ ತದಾ ।**
**ಅಥ ಸಾ ಪೂಜನೀಯಾ ವೈ ರಾಜಪುತ್ರ ಸ್ವಪುತ್ರಯೋಃ ॥ 42 ॥**

**ತುಲ್ಯಸ್ನೇಹಾತ್ ಪ್ರೀತಿಮತೀ ದಿವಸೇ ದಿವಸೇಽಭವತ್ ।**
**ಆಜಹಾರ ಸದಾ ಸಾಯಂ ಚಂಚ್ವಾಮೃತಫಲದ್ವಯಮ್ ॥ 43 ॥**

ಒಂದು ದಿನ ಮಹಾರಾಜನಿಗೆ ತನ್ನ ಪತ್ನಿಯಾದ ಸನ್ನತಿಯಲ್ಲಿ ಒಂದು ಗಂಡು ಮಗು ಹುಟ್ಟಿತು. ಅವನಿಗೆ 'ಸರ್ವಸೇನ' ಎಂದು ನಾಮಕರಣ ಮಾಡಿದ ರಾಜ. ಇದೇ ಸಮಯದಲ್ಲಿ ಪೂಜನೀಯಾ ಪಕ್ಷಿಯೂ ಸಹ ಮೊಟ್ಟೆಯನ್ನಿಟ್ಟಿತು. ಮುಂದೆ ಒಂದು ದಿನ ಮೊಟ್ಟೆಯೊಡೆದು ಮಾಂಸದ ಮುದ್ದೆಯೊಂದು ಹೊರಬಿತ್ತು. ಕೈಕಾಲುಗಳಿದ್ದು ಕೆಂಪು ಬೆರೆತ ಕಂದು ಬಣ್ಣವಿರುವ ಅದು ನೇತ್ರಹೀನವಾಗಿದ್ದಿತು. ಪೂರ್ಣ ಆಕಾರ ಪಡೆದಿರಲಿಲ್ಲ. ಇಂತಹ ಅಶಕ್ತ ಹಾಗೂ ವಿಕಾರ ದೇಹದ ಊನಾಂಗ ಮಗುವನ್ನು ನೋಡಿ ತಾಯಿಗೆ ದುಃಖವಾಯಿತು. ಆಗ ಅದು ದೇಶಾಂತರಗಳೆಲ್ಲ ಸುತ್ತಿ ಪ್ರತಿದಿನವೂ ಅಮೃತಫಲಗಳನ್ನು ತಂದು ತನ್ನ ಮಗುವಿಗೆ ತಿನ್ನಿಸಿತು. ಇದರಿಂದಾಗಿ ಕಣ್ಣು ಬಂದು ಮೈತುಂಬಿಕೊಂಡು ಸುಂದರವಾಗಿ ಕಾಣಿಸಿತು. ಪಕ್ಷಿಮರಿಯು ಅಂಗಳದಲ್ಲಿ ಹಾರಾಡಲು ಪ್ರಾರಂಭಿಸಿತು. ಸರ್ವಸೇನನಿಗೂ ಪಕ್ಷಿಗೂ ಸ್ನೇಹವೇರ್ಪಟ್ಟು ಅವರಿಬ್ಬರೂ ಒಟ್ಟುಗೂಡಿಯೇ ಆಡುತ್ತಿದ್ದರು.

ತಾಯಿಪಕ್ಷಿಯು ತನ್ನ ಮಗನ ಜೊತೆಗೆ ರಾಜಪುತ್ರನಿಗೂ ಒಂದು ಅಮೃತಫಲವನ್ನು ತನ್ನ ಕೊಕ್ಕಿನಲ್ಲಿ ಕಚ್ಚಿಕೊಂಡು ತಂದು ಕೊಡುತ್ತಿತ್ತು. ಈ ಫಲದ ಫಲವಾಗಿ ಮರಿಪಕ್ಷಿ ಹಾಗೂ ರಾಜಕುಮಾರರೂ ಒಳ್ಳೆ ಸತ್ವಯುತರಾಗಿಯೂ, ತೇಜೋವಂತರಾಗಿ ಬೆಳೆದರು.

**ತಸ್ಯಾಂ ಗತಾಯಾಮಥ ಚ ಪೂಜನ್ಯಾಂ ವೈ ಸದಾಹನಿ ।**
**ಶಿಶುನಾ ಚಟಕೇನಾಥ ಧಾತ್ರೀ ತಂ ತು ಶಿಶುಂ ನೃಪ ॥ 44 ॥**
**ತೇನ ಪ್ರಕ್ರೀಡಯಾಮಾಸ ಬ್ರಹ್ಮದತ್ತಾತ್ಮಜಂ ಸದಾ ॥ 45 ॥**

## ರಾಜಕುಮಾರನು ಮರಿಯನ್ನು ಕೊಂದು ಹಾಕಿದುದು

ಪಕ್ಷಿಯು ಹೊರಗೆ ಹೋದಾಗ ರಾಜಪುತ್ರನನ್ನು ರಾಜಕುಮಾರನನ್ನು ನೋಡಿಕೊಳ್ಳಲು ನಿಯಮಿತಳಾಗಿದ್ದ ದಾಸಿಯು ಗೂಡಿನಿಂದ ಗುಬ್ಬಿಮರಿಯನ್ನು ಹೊರಕ್ಕೆ ತಂದು ರಾಜಕುಮಾರನ ಕೈಯ್ಯಲ್ಲಿ ಕೊಡುತ್ತಿದ್ದಳು. ಒಂದು ಬಾರಿ ರಾಜಕುಮಾರನು ಹಟ ಮಾಡುತ್ತಿದ್ದ. ಏನು ಕೊಟ್ಟರೂ ಸಮಾಧಾನ ಮಾಡಲಾಗಲಿಲ್ಲ. ಯಾವಾಗಲೂ ರಾಜಕುಮಾರ ಹಟ ಮಾಡಿದಾಗ ಗುಬ್ಬಿಮರಿಯನ್ನು ಕೈಯ್ಯಲ್ಲಿ ಕೊಟ್ಟ ಕೂಡಲೇ ಹಟ ನಿಲ್ಲಿಸುತ್ತಿದ್ದ. ಇಂದೂ ಸಹ ಅದೇ ರೀತಿ ಚಂಡಿಹಿಡಿದಿದ್ದಾಗ ಸಮಾಧಾನ ಪಡಿಸಲು ಗುಬ್ಬಿಮರಿಯನ್ನು ದಾಸಿಯು ತಂದು ನೀಡಿದಾಗ ಕೋಪದಿಂದ ಮರಿಹಕ್ಕಿಯ ಕುತ್ತಿಗೆಯನ್ನು ಬಲವಾಗಿ ಮುಷ್ಟಿಯಿಂದ ಹಿಡಿದು ಹಿಸುಕಿ ಕುತ್ತಿಗೆ ಮುರಿದು ನೆಲಕ್ಕೆ ಒಗೆದನು. ಪಕ್ಷಿಯು ಮೃತಪಟ್ಟಿತು.

### ಪಕ್ಷಿಗಾಗಿ ರಾಜನ ದುಃಖ

**ತಂ ತು ಪಂಚತ್ವಮಾಪನ್ನಂ ವ್ಯಾತ್ತಾಸ್ಯಂ ಬಾಲಘಾತಿತಮ್ ।**
**ಕಥಂಚಿತ್ ಮೋಚಿತಂ ದೃಷ್ಟ್ವಾ ನೃಪತಿಃ ದುಃಖಿತೋಽಭವತ್ ॥ 46 ॥**
**ಧಾತ್ರೀಂ ತಸ್ಯ ಜಗರ್ಹೇ ತಾಂ ತದಾಶ್ರುಪರಮೋ ನೃಪಃ ।**
**ಪೂಜನೀಯಾಪಿ ತತ್ಕಾಲೇ ಗೃಹಿತ್ವಾ ತು ಫಲದ್ವಯಮ್ ॥ 47 ॥**
**ಅಥಾಪಶ್ಯತ್ ತಮಾಗಮ್ಯ ಗೇಹೇ ತಸ್ಮಿನ್ ನರಾಧಿಪ ।**
**ಪಂಚಭೂತ ಪರಿತ್ಯಕ್ತಂ ಶಾವಂ ತಂ ಸ್ವತನೂದ್ಭವಮ್ ॥ 48 ॥**

ರಾಜನಿಗೆ ಪೂಜನೀಯೆಯ ಮರಿಪುತ್ರನ ಆಕಸ್ಮಿಕ ಮರಣದಿಂದ ಬಹುವ್ಯಥೆಪಟ್ಟನು. ಸಿಟ್ಟು ಕರುಣೆ ಕೋಪ ದಿಗ್ಭ್ರಮೆಗಳೆಲ್ಲ ಒಟ್ಟಿಗೆ ಕಾಣಿಸಿದವು. ಕೋಪಗೊಂಡ ರಾಜಕುಮಾರನ ಕೈಗೆ ಆ ಮರಿಯನ್ನು ತಂದುಕೊಟ್ಟಿದ್ದ ದಾಸಿಯನ್ನು ಬಹಳವಾಗಿ ಹಳಿದನು.

ಅದೇ ವೇಳೆಗೆ ಸಂಜೆ ತನ್ನ ಪುತ್ರನಿಗಾಗಿ ಫಲವನ್ನು ಹಿಡಿದುಕೊಂಡು ಪುತ್ರವಾತ್ಸಲ್ಯದಿಂದ ಧಾವಿಸಿ ಬಂದ ಪೂಜನೀಯೆಯು ತನ್ನ ಮಗನು ಪಂಚಪ್ರಾಣಗಳಿಂದ ವಿಯುಕ್ತನಾದದ್ದನ್ನು ಕಂಡು ಮೂರ್ಛಿತಳಾಗಿ ಬಿದ್ದುಬಿಟ್ಟಳು.

ನಂತರ ಚೇತರಿಸಿಕೊಂಡು ಬಹುದುಃಖದಿಂದ ವಿಲಾಪ ಮಾಡಿತು.

### ಪೂಜನೀಯೆಯ ಶೋಕ

**ನ ತು ತ್ವಮಾಗತಾಂ ಪುತ್ರ ವಾಶಂತೀಂ ಪರಿಸರ್ಪಸಿ ।**
**ಪಕ್ಷಾಭ್ಯಾಂ ತ್ವಾಂ ಪರಿಷ್ವಜ್ಯ ನನು ವಾಶಾಮಿ ಚಾಪ್ಯಹಮ್ ॥ 49 ॥**

ಮಗುವೆ! ನಾನು ನಿನ್ನ ಹತ್ತಿರ ಬಂದು ವಿಲಾಪ ಮಾಡುತ್ತಿದ್ದರೂ ಅವ್ಯಕ್ತ ಮಧುರಶಬ್ಧದೊಂದಿಗೆ ನನ್ನ ಬಳ ಏಕೆ ಬರುತ್ತಿಲ್ಲ? ನಾನು ಕೂಕೂ ಎಂದ ಕೂಡಲೇ ಬಾಯಿತೆರೆದು ನನ್ನ ಬಳಗೆ ಓಡಿಬರುತ್ತಿದ್ದೆ? ಇಂದೇಕೆ ಬರುತ್ತಿಲ್ಲ?

ನನ್ನೆರಡೂ ರೆಕ್ಕೆಗಳಿಂದಲೂ ನಿನ್ನನ್ನು ಆಲಿಂಗಿಸಿಕೊಂಡು ನಾನು ಅಳುತ್ತಿರುವುದು ನಿನಗೆ ಕೇಳಿಸದೆ? ಎಂದಿನಂತೆ ಚೀ ಚೀ ಕೂ ಕೂ ಎಂದು ಕೂಗುತ್ತಿಲ್ಲವೇಕೆ? ಇತ್ಯಾದಿ ವಿಲಾಪ ಮಾಡಿತು.

### ಶುಕ್ರನೀತಿ

**ನನು ಮೂರ್ಧಾಭಿಷಿಕ್ತಃ ತ್ವಂ ಧರ್ಮಂ ವೇತ್ಸಿ ಸನಾತನಮ್ ।**
**ಅಥ ಕಸ್ಮಾತ್ ಮಮ ಸುತಂ ಧಾತ್ರ್ಯಾ ಘಾತಿತವಾನಸಿ ॥ 50 ॥**

**ನ ಚ ನೂನಂ ಶ್ರುತಾ ತೇಽಭೂದಿಯಮಾಂಗೀರಸೀ ಶ್ರುತಿಃ ।**
**ಶರಣಾಗತಃ ಕ್ಷುಧಾರ್ತಶ್ಚ ಶತ್ರುಭಿಃ ಚಾಪ್ಯುಪದ್ರುತಃ ॥ 51 ॥**

**ಚಿರೋಷಿತಶ್ಚ ಸ್ವಗೃಹೇ ಪಾತವ್ಯಃ ಸರ್ವದಾ ಭವೇತ್ ।**
**ಅಪಾಲಯನ್ ನರೋ ಯಾತಿ ಕುಂಭೀಪಾಕಮಸಂಶಯಮ್ ॥ 52 ॥**

ರಾಜನೇ ! ನೀನು ರಾಜಧರ್ಮಗಳನ್ನೆಲ್ಲ ಚೆನ್ನಾಗಿ ತಿಳಿದಿರುವಿ. ಹೀಗಿದ್ದೂ ನನ್ನ ಮರಿಯನ್ನು ನಿನ್ನ ಮಗನಿಂದ ಹೇಗೆ ಕೊಲ್ಲಿಸಿದೆ? ನಿನ್ನಲ್ಲಿ ವಿಶ್ವಾಸವಿಟ್ಟು ನಿನ್ನ ಮಗನಿಗೂ ಅಮೃತೋಪಮ ಫಲವನ್ನು ನೀಡುತ್ತಿದ್ದೆ. ಈ ವಿಶ್ವಾಸಘಾತದಿಂದಾಗಿ ನಾನು ಜೀವನವಿಡೀ ದುಃಖ ಸಮುದ್ರದಲ್ಲಿ ಮುಳುಗಿಸಿದೆ. ಶುಕ್ರನೀತಿಯನ್ನು ನೀನು ಓದಿಲ್ಲವೆ? ಅಥವಾ ಕೇಳಿಲ್ಲವೆ?

ಹಸಿದುಬಂದವರನ್ನೂ, ಶರಣಾಗತರಾದವರನ್ನೂ, ತನ್ನೊಂದಿಗೆ ಇರುವವರನ್ನೂ, ಶತ್ರುಗಳಿಂದ ಉಪದ್ರುತರಾದವರನ್ನು, ಮನೆಯಲ್ಲಿಯೇ ಬಹಳ ಕಾಲದಿಂದಿರುವವರನ್ನೂ ಸರ್ವದಾ ಸರ್ವಥಾ ರಕ್ಷಿಸಲೇಬೇಕೆಂದು ನಿನಗೆ ಗೊತ್ತಿಲ್ಲವೆ? ಶರಣಾಗತರಾದವರೇ ಮೊದಲಾದವರನ್ನು ಪಾಲಿಸದ

ವ್ಯಕ್ತಿಗೆ 'ಕುಂಭೀಪಾಕ' ನರಕಕ್ಕೆ ಸೇರುವನು. ಇಂತಹ ವ್ಯಕ್ತಿಯು ಅರ್ಪಿಸುವ ಹವ್ಯ-ಕವ್ಯಗಳನ್ನು ದೇವತೆಗಳೂ ಪಿತೃಗಳೂ ಹೇಗೆ ಸ್ವೀಕಸರಿಸುವರು?

ಇದನ್ನೆಲ್ಲ ತಿಳದೂ ನನ್ನ ಮಗನನ್ನು ಕೊಲ್ಲಿಸಿದ ನೀನು ಕ್ಷತ್ರಿಯಾಧಮ-ನಾಗಿರುವಿ. ನಿನಗೆ ಧಿಕ್ಕಾರವಿರಲಿ!

**ಏವಮುಕ್ತ್ವಾ ಮಹಾರಾಜ ದಶಧರ್ಮಗತಾ ಸತೀ ।**
**ಶೋಕಾರ್ತಾ ತಸ್ಯ ಬಾಲಸ್ಯ ಚಕ್ಷುಷೀ ನಿರ್ಬಿಭೇದ ಸಾ ।**
**ಕೃತ್ವಾ ಚಾಂಧಂ ನೃಪಸುತಂ ಉತ್ಪಪಾತ ತತೋಽಂಬರಮ್ ॥ 53 ॥**

ರಾಜನಿಗೆ ಹೀಗೆ ಹೇಳ ಶೋಕಾರ್ತವಾಗಿದ್ದ ಆ ಪಕ್ಷಿಯು ರಾಜಕುಮಾರನ ನೇತ್ರಗಳನ್ನು ತನ್ನ ಚೂಪಾದ ಚೊಕ್ಕುನಿಂದ ಚುಚ್ಚಿ ಕಣ್ಣುಗುಡ್ಡೆಗಳನ್ನು ಕಿತ್ತು ಹಾಕಿತು.

## ಪೂಜನೀಯಾ ಪಕ್ಷಿ ಉಪದೇಶ

**ಅಥ ರಾಜಾ ಸುತಂ ದೃಷ್ಟ್ವಾ ಪೂಜನೀಯಾಮುವಾಚ ಹ ।**
**ವಿಶೋಕಾ ಭವ ಕಲ್ಯಾಣಿ ಕೃತಂ ತೇ ಭೀರು ಶೋಭನಮ್ ॥ 54 ॥**

**ಪುರೇವ ವಸ ಭದ್ರಂ ತೇ ನಿವರ್ತಸ್ವ ರಮಸ್ವ ಚ ।**
**ಪುತ್ರಪೀಡೋದ್ಭವಶ್ಚಾಪಿ ನ ಕೋಪಃ ಪರಮಸ್ತ್ವಯಿ ॥ 55 ॥**

ರಾಜನಾದರೂ ತನ್ನ ಪುತ್ರನ ನೇತ್ರಘಾತದಂತ ಘೋರ ಕೃತಿಯಿಂದಲೂ ಕೋಪತಾಪಗಳನ್ನು ಹೊಂದದೆ-ಪೂಜನೀಯಳೇ ! ನನ್ನ ಬೇಜವಾಬ್ದಾರಿಯಿಂದ ತಪ್ಪಾದದ್ದು ನಿಜವೆ. ಅದಕ್ಕಾಗಿ ನೀನು ನನ್ನ ಮಗನ ನೇತ್ರೋತ್ಪಾಟನ ಮಾಡಿದ್ದು ಮಗನ ತಪ್ಪಿಗೆ ತಕ್ಕ ಶಾಸನವಾದಂತಾಗಿದೆ. ನನಗೆ ಇದರಿಂದಾಗಿ ನಿನ್ನ ಮೇಲೆ ಯಾವುದೇ ರೀತಿಯ ಅಸಮಾಧಾನವಿಲ್ಲ. ಇನ್ನಾದರೂ ಶಾಂತಳಾಗಿ ನೀನು ಮೊದಲಿನಂತೆಯೇ, ನನ್ನ ಸಖಿಯಾಗಿ ನನ್ನ ಅರಮನೆಯಲ್ಲಿ ವಾಸ ಮಾಡುವೆಯಂತೆ ಇಳದು ಬಾ ಎಂದನು.

*ಪೂಜನೀಯೋವಾಚ -*

**ಆತ್ಮೋಪಸ್ಯೇನ ಜಾನಾಮಿ ಪುತ್ರಸ್ನೇಹಂ ತವಾಪ್ಯಹಮ್ ।**
**ನ ಚಾಹಂ ವಸ್ತುಮಿಚ್ಛಾಮಿ ತವ ಪುತ್ರಮಚಕ್ಷುಷಮ್ ॥ 56 ॥**
**ಗಾಥಾಶ್ಚಾಪ್ಯುಶನೋದ್ಗೀತಾಃ ಇಮಾಃ ಶೃಣು ಮಯೇರಿತಾಃ ॥ 57 ॥**

ಪೂಜನೀಯ ಪಕ್ಷಿ ಹೇಳುತ್ತದೆ – ರಾಜನೇ, ನಿನ್ನ ಮಗನ ಕಣ್ಣು ಹೋದದ್ದಕ್ಕಾಗಿ ನೀನು ದುಃಖಪಡುತ್ತಿಲ್ಲವೆಂದು ನೀನು ಹೇಳಿದರೂ ನಾನು ನಂಬಲಾರೆ. ಮಕ್ಕಳಿಗೆ ಸಾವು ನೋವು ಬಂದಾಗ ತಂದೆತಾಯಿಗಳು ಎಷ್ಟು ದುಃಖ ಅನುಭವಿಸುತ್ತಾರೆಂದು ನಾನು ನನ್ನ ಮಗನ ಮರಣದಿಂದಲೇ ಅನುಭವಿಸುತ್ತಿದ್ದೇವೆ. ನಿನಗೆ ಅಪಕಾರ ಮಾಡಿಯೂ ಪುನಃ ನಿನ್ನ ಮನೆಯಲ್ಲಿರುವುದು ಮೃತ್ಯುಪಂಜರದಲ್ಲಿರುವಂತೆಯೆ, ನೀನು ಸುಮ್ಮನಿದ್ದರೂ ನಿನ್ನ ಸೇವಕರು ನನ್ನನ್ನು ಸುಮ್ಮನೆ ಬಿಡರು. ಆದ್ದರಿಂದ ನಾನು ಪುನಃ ನಿನ್ನಲ್ಲಿಗೆ ಬರಲಾರೆನು. ನಿನಗೆ ಮಂಗಳವಾಗಲಿ. ಈ ವಿಷಯದಲ್ಲಿ ಶುಕ್ರನೀತಿಯನ್ನು ಹೇಳುವೆ ಕೇಳು.

**ಕುಮಿತ್ರಂ ಚ ಕುದೇಶಂ ಚ ಕುರಾಜಾನಂ ಕುಸೌಹೃದಮ್ ।**
**ಕುಪುತ್ರಂ ಚ ಕುಭಾರ್ಯಾಂ ಚ ದೂರತಃ ಪರಿವರ್ಜಯೇತ್ ॥ 58 ॥**

**ಕುಮಿತ್ರೇ ಸೌಹೃದಂ ನಾಸ್ತಿ ಕುಭಾರ್ಯಾಯಾಂ ಕುತೋರತಿಃ ।**
**ಕುತಃ ಪಿಂಡಃ ಕುಪುತ್ರೇ ವೈ ನಾಸ್ತಿ ಸತ್ಯಂ ಕುರಾಜನಿ ॥ 59 ॥**

ರಾಜನೇ, ಕೆಟ್ಟಮಿತ್ರ, ಕೆಟ್ಟದೇಶ, ಕೆಟ್ಟ ರಾಜ, ಕೆಟ್ಟ ಸುಹೃದ, ಕೆಟ್ಟ ಪುತ್ರ, ಭಾರ್ಯರು ಇವರಿಂದ ದೂರವಿರಬೇಕು. ಕೆಟ್ಟ ಮಿತ್ರನಲ್ಲಿ ಪ್ರೀತಿಯಿರುವುದಿಲ್ಲ. ಕೆಟ್ಟ ಪತ್ನಿಯಿಂದ ಸುಖವೆಲ್ಲಿಂದ? ಕುಪುತ್ರನಾದರೂ ತಂದೆಗೆ ಶ್ರಾದ್ಧಾದಿ ಮಾಡಲಾರನು. ಕುತ್ಸಿತರಾಜನಲ್ಲಿ ಸತ್ಯನಿಷ್ಠೆ ಇರಲಾರದು. ಕೆಟ್ಟ ಮಿತ್ರನನ್ನು ನಂಬುವುದಾದರೂ ಹೇಗೆ? ಕೆಟ್ಟ ರಾಜನಿರುವ ರಾಜ್ಯದಲ್ಲಿ ವೇನನಂತೆ ನಿತ್ಯವೂ ಭಯವಿರುತ್ತದೆ.

**ನ ವಿಶ್ವಸೇದ್ ಅವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ ।**
**ವಿಶ್ವಾಸಾದ್ ಭಯಮುತ್ಪನ್ನಂ ಮೂಲಾನ್ಯಪಿ ನಿಕೃಂತತಿ ॥ 60 ॥**
**ರಾಜಸೇವಿಷು ವಿಶ್ವಾಸಂ ಗರ್ಭಸಂಕರಿತೇಷು ಚ ।**
**ಅಪ್ಯುನ್ನತಿಂ ನರಃ ಪ್ರಾಪ್ಯ ಪ್ರಾವಾರಃ ಕೀಟಕೋ ಯಥಾ ॥ 61 ॥**
**ಸ ನಶ್ಯತ್ಯ ಸಂದೇಹಮಾಹೈವಂ ಉಶನಾಃ ನೃಪ ॥ 62 ॥**

ಅಪರಾಧಿಯ ವಿಷಯದಲ್ಲಿ ವಿಶ್ವಾಸವನ್ನಿಡಬಾರದು. ವಿಶ್ವಾಸಕ್ಕೆ ಪಾತ್ರನಾಗದವನಲ್ಲಿ ವಿಶ್ವಾಸವಿಡಬಾರದು. ವಿಶ್ವಾಸಕ್ಕೆ ಪಾತ್ರನಾಗಿದ್ದರೂ ಅತೀವಿಶ್ವಾಸವು ಅನರ್ಥಕ್ಕೆ ದಾರಿಯು. ರಾಜಸೇವಕರಲ್ಲಿ, ಸಂಕರ

ಜಾತಿಯವರಲ್ಲಿ ವಿಶ್ವಾಸವಿಟ್ಟವನು ಅನಾಥನಂತೆ ದುರ್ಬಲನಂತೆ ಹೆಚ್ಚು ಕಾಲ ಜೀವಿಸಲಾರನು. ವ್ಯಕ್ತಿಯು ಎಷ್ಟೇ ಉನ್ನತ ಸ್ಥಾನದಲ್ಲಿದ್ದರೂ ಇಂತಹವರಲ್ಲಿ ವಿಶ್ವಾಸವಿಟ್ಟು ನಾಶವಾಗುತ್ತಾನೆ.

**ಅಪಿ ಮಾರ್ದವಭಾವೇನ ಗಾತ್ರಂ ಸಂಲೀಯ ಬುದ್ಧಿಮಾನ್ ।**
**ಅರಿಂ ನಾಶಯತೇ ನಿತ್ಯಂ ಯಥಾ ವಲ್ಲಿಃ ಮಹಾದ್ರುಮಮ್ ॥ 63 ॥**

**ಮೃದುರಾದ್ರಃ ಕೃಶೋಭೂತ್ವಾ ಶನೈಃ ಸಂಲೀಯತೇ ರಿಪುಃ ।**
**ವಲ್ಮೀಕ ಇವ ವೃಕ್ಷಸ್ಯ ಪಶ್ಚಾತ್ ಮೂಲಾನಿ ಕೃಂತತಿ ॥ 64 ॥**

ಹೇಗೆ ಬಳ್ಳಿಯ ನೋಡಲು ಮೃದುವಾಗಿದ್ದು ದೊಡ್ಡ ವೃಕ್ಷವನ್ನು ಆಶ್ರಯಿಸುತ್ತಾ ಕ್ರಮೇಣ ಗಿಡವನ್ನೆಲ್ಲ ಆಕ್ರಮಿಸಿ ಆ ವೃಕ್ಷವನ್ನೆ ಕಾಣಿಸದಂತೆ ಮಾಡುತ್ತದೆ. ಹಾಗೆ ಶತ್ರುವು ಅತ್ಯಂತ ವಿನೀತನಂತೆ ತನ್ನನ್ನು ತೋರಿಸುತ್ತಾ ಸಮಯ ಬಂದಾಗ ನಾಶ ಮಾಡುವನು. ಗೆದ್ದಲು ಮೃದುವೂ, ಸ್ನಿಗ್ಧವಾಗಿದ್ದು ಕೃಶವಾಗಿದ್ದರೂ ಗಿಡದಲ್ಲಿ ಸೇರಿ ಕಾಲಾನುಕ್ರಮದಲ್ಲಿ ಮಹಾವೃಕ್ಷವನ್ನೆ ದುರ್ಬಲಗೊಳಸುವಂತೆ ಸ್ನೇಹಿತನಂತೆ ಕಾಣುತ್ತಿದ್ದರೂ ಅರಿಯು ಭಯಂಕರನಾಗಿ ಮೂಲವನ್ನೇ ಕತ್ತರಿಸುವನು. ಇಂದ್ರನು ಮುನಿಗಳ ಎದುರಿಗೆ ನಮುಚಿಗೆ ದ್ರೋಹ ಬಗೆಯಲಾರೆ ಎಂದು ಪ್ರತಿಜ್ಞೆ ಮಾಡಿದ್ದರೂ ಸಮಯ ಸಿಕ್ಕಿದಾಗ ಹಸಿ-ಬಿಸಿಗಳಲ್ಲದ ನೀರಿನ ನೊರೆಯಲ್ಲಿ ವಜ್ರಾಯುಧ ಇಟ್ಟು ನಮುಚಿಯನ್ನು ಕೊಂದು ಹಾಕಿರುವನಷ್ಟೆ.

**ಸುಪ್ತಂ ಮತ್ತಂ ಪ್ರಮತ್ತಂ ವಾ ಘಾತಯಂತಿ ರಿಪುಂ ನರಾಃ ।**
**ವಿಷೇಣ ವಹ್ನಿನಾ ವಾಪಿ ಶಸ್ತ್ರೇಣೈವಾಥ ಮಾಯಯಾ ॥ 65 ॥**

**ಶತ್ರುಶೇಷಂ ಋಣಚ್ಛೇಷಂ ಶೇಷಮಗ್ನೇಶ್ಚ ಭೂಮಿಪ ।**
**ಪುನರ್ವರ್ಧೇತ ಸಂಭೂಯ ತಸ್ಮಾತ್ ಶೇಷಂ ನ ಶೇಷಯೇತ್ ॥ 66 ॥**

ಶತ್ರುಗಳು ತಮ್ಮ ರಿಪುಗಳನ್ನು ಶತ್ರುವು ಮಲಗಿರಲಿ, ಮತ್ತನಾಗಿರಲಿ, ಪ್ರಮತ್ತನಾಗಿರಲಿ, ವಿಷ, ಬೆಂಕಿ, ಶಸ್ತ್ರ ಮೊದಲಾದವುಗಳಿಂದ ಕೊಂದು ಹಾಕುತ್ತಾರೆ.

ಮನುಷ್ಯರು ತಮಗೆ ಮುಂದೆ ತೊಂದರೆಗೀಡಾಗಬಹುದೆಂದು ತಿಳಿದು ಇಷ್ಟು ಶೇಷವನ್ನು ಉಳಿಸುವುದಿಲ್ಲ. ಶತ್ರುವಿನ ಶೇಷ, ಸಾಲದ ಶೇಷ, ಅಗ್ನಿಯ

ಶೇಷ ಉಳಿಸಿದರೆ ಚಿಕ್ಕಶೇಷವೆ ಭಯಂಕರವಾಗಿ ಬೆಳೆದು ಮೂಲವನ್ನೇ ನಾಶ ಮಾಡುತ್ತದೆ.

**ಹಸತೇ ಜಲ್ಪ ತೇ ವೈರೀ ಏಕಪಾತ್ರೇ ಭುನಕ್ತಿ ಚ ।**
**ಏಕಾಸನಂ ಚಾರೋಹತಿ ಸ್ಮರತೇ ತಚ್ಚ ಕಿಲ್ಬಿಷಮ್ ॥ 67 ॥**

**ಕೃತ್ವಾ ಸಂಬಂಧಕಂ ಚಾಪಿ ವಿಶ್ವಸೇತ್ ಶತ್ರುನಾ ನ ಹಿ ।**
**ಪುಲೋಮಾನಂ ಜಘಾನಾಜೌ ಜಾಮಾತಾ ಸನ್ ಶತಕ್ರತುಃ ॥ 68 ॥**

ವೈರಿಯು ತನ್ನ ಶತ್ರುವಿನೊಂದಿಗೆ ಮೇಲ್ನೋಟಕ್ಕೆ ನಗುವನ್ನು, ಪ್ರೀತಿಯಿಂದ ಮಾತನಾಡುವನು, ಅಷ್ಟೇಕೆ ? ಒಂದೇ ಪಾತ್ರೆಯಲ್ಲಿ ತಿನ್ನುತ್ತಾ ಪ್ರೀತ್ಯಧಿಕವಿದೆಯೆಂದು ನಟಿಸುತ್ತಾನೆ. ಒಂದೇ ಆಸನದಲ್ಲಿ ಕೂಡುತ್ತಾನೆ. ಆದರೆ ಒಳಗೊಳಗೆ ತನಗೆ ಮಾಡಿದ ದ್ರೋಹವನ್ನು ಮನಸ್ಸಿನಲ್ಲಿಯೇ ಸ್ಮರಿಸುತ್ತಿರುತ್ತಾನೆ. ತನ್ನ ಶತ್ರುಶೇಷ ಸಂಬಂಧಿಕನಾಗಿದ್ದರೂ ಕೊಲ್ಲದೆ ಬಿಡುವುದಿಲ್ಲ. ಇಂದ್ರದೇವನು ತನಗೆ ಮಗಳನ್ನು ಕೊಟ್ಟ ಅಳಿಯ ಪುಲೋಮನನ್ನು ಯುದ್ಧದಲ್ಲಿ ಎದುರಿಸಿ ಕೊಂದು ಹಾಕಿದನು.

ಜಿಂಕೆಯು ಬೇಟೆಗಾರನ ಸಮೀಪ ಸುಳಿಯದಂತೆ ಎಚ್ಚರ ವಹಿಸುತ್ತದೆ. ಅದರಂತೆ ವೈರಿಯು ಸಮೀಪ ಬುದ್ಧಿವಂತನು ಸುಳಿಯಬಾರದು. ನಾನು ನಿನಗೆ ದ್ರೋಹವೆಸಗಿದವನು. ನಿನ್ನ ಬಳಿ ವಾಸಿಸುವುದು ತರವಲ್ಲ.

ಅದರಲ್ಲಿಯೂ ಶತ್ರುವು ಅತ್ಯುನ್ನತ ಸ್ಥಾನಮಾನ ಪಡೆದವನಾಗಿದ್ದರೆ ಅವನ ಬಳಿ ವಾಸಿಸುವುದು ಮೃತ್ಯುವಿನ ಸಮೀಪವೆ ವಾಸಿಸುವಂತೆ. ನದಿಯ ಪ್ರವಾಹ ಜೋರಾಗಿರುವಾಗ ನದಿಯ ದಂಡೆಯ ಗಿಡಮರಗಳನ್ನು ಬುಡಸಹಿತ ಕಿತ್ತು ಹಾಕುವುದಿಲ್ಲವೆ?

ಮಿತ್ರನಲ್ಲದವನ ಸಹಾಯು ಹೊಂದಿದ್ದರೂ ತಾನು ಸುಭದ್ರ ಸ್ಥಿತಿಯಲ್ಲಿರುವೆನೆಂದು ಭಾವಿಸಲಾಗದು. ಬಟ್ಟೆಯ ಆಶ್ರಯ ಪಡೆದಿರುವ ಕೀಟವು ತಾನು ಉನ್ನತಸ್ಥಾನದಲ್ಲಿದ್ದೇನೆಂದು ತನಗೆ ಯಾವುದೇ ಭಯವಿಲ್ಲವೆಂದು ತಿಳಿಯಲಾಗದು. ವಸ್ತ್ರವನ್ನು ಜಾಡಿಸಿದರೆ ಆಶ್ರಯ ತಪ್ಪಿ ದುಃಖ ಪಡಬೇಕಾಗುತ್ತದೆ.

**ಇತ್ಯೇತಾ ಹ್ಯುಶನೋದ್ಗೀತಾ ಗಾಥಾ ಧಾರ್ಯಾ ವಿಪಶ್ಚಿತಾ ।**
**ಕುರ್ವತಾ ಚಾತ್ಮರಕ್ಷಾಂ ವೈ ನರೇಣ ಪೃಥಿವೀಪತೇ ॥ 69 ॥**

**ಪುತ್ರಮಂಧಂ ಪ್ರಕುರ್ವಂತ್ಯಾ ತಸ್ಮಾನ್ನೋ ವಿಶ್ವಸೇ ತ್ವಯಿ ॥ 70 ॥**

**ಏವಮುಕ್ತ್ವಾ ಪ್ರದುದ್ರಾವ ತದಾऽऽಕಾಶಂ ಪತಂಗಿನೀ ।**

**ಇತ್ಯೇತತ್ ತೇ ಮಯಾಖ್ಯಾತಂ ಯದ್ ವೃತ್ತಂ ಪೂಜನೀಯಾ ॥ 71 ॥**

ರಾಜಬ್ರಹ್ಮದತ್ತನೇ, ತನ್ನನ್ನು ಶತ್ರುಗಳಿಂದ ರಕ್ಷಿಸಲಿಚ್ಛಿಸುವವನು ಶುಕ್ರನೀತಿಯ ಮಾತುಗಳನ್ನು ನೆನಪಿನಲ್ಲಿಟ್ಟುಕೊಂಡಿರಬೇಕು.

ನಾನಾದರೂ ನಿನ್ನ ಪ್ರೀತಿಯ ಪುತ್ರನನ್ನು ಅಂಧನನ್ನಾಗಿ ಮಾಡಿರುವೆ. ಇದರಿಂದಾಗಿ ನೀನೆಷ್ಟೆ ಪ್ರೀತಿಯುಕ್ತ ಮಾತನಾಡಿದರೂ ನನಗೆ ನಿನ್ನಲ್ಲಿ ವಿಶ್ವಾಸವೇರ್ಪಡದು ಎಂದು ಹೇಳುತ್ತಾ ಹಾರಿಹೋಯಿತು.

ಯುಧಿಷ್ಠಿರನೇ, ಹೀಗೆ ಬ್ರಹ್ಮದತ್ತನಿಗೂ ಪೂಜನೀಯಾ ಪಕ್ಷಿಗೂ ನಡೆದ ವೃತ್ತಾಂತ ನಿನಗೆ ತಿಳಿಸಿರುವೆ. ನೀನು ಶ್ರಾದ್ಧಕಲ್ಪದ ಬಗ್ಗೆ ಪ್ರಶ್ನಿಸಿರುವೆ, ನಾನೂ ಇದೇ ಪ್ರಶ್ನೆಯನ್ನು ಮಾರ್ಕಂಡೇಯರನ್ನು ಪ್ರಶ್ನಿಸಿದೆ. ಅವರು ಹೇಳಿದ ಪ್ರಕ್ರಿಯೆಗಳನ್ನೆ ನಿನಗೂ ತಿಳಿಸುವೆ.

**ಶ್ರಾದ್ಧಸ್ಯ ಫಲಮುದ್ದಿಶ್ಯ ನಿಯತಂ ಸುಕೃತಸ್ಯ ಚ ।**

**ತನ್ನಿಬೋಧ ಮಹಾರಾಜ ಸಪ್ತಜಾತಿಷು ಭಾರತ ॥ 72 ॥**

**ಸಗಾಲವಸ್ಯ ಚರಿತಂ ಕಂಡರೀಕಸ್ಯ ಚೈವ ಹಿ ।**

**ಬ್ರಹ್ಮದತ್ತತೃತೀಯಾನಾಂ ಯೋಗಿನಾಂ ಬ್ರಹ್ಮಚಾರಿಣಾಮ್ ॥ 73 ॥**

ಶ್ರದ್ಧಾಪೂರ್ವಕವಾಗಿ ಮಾಡಿದ ಶ್ರಾದ್ಧದಿಂದ ಹೊಂದಬಹುದಾದ ಪುಣ್ಯಫಲವನ್ನೆ ಲಕ್ಷ್ಯದಲ್ಲಿರಿಸಿಕೊಂಡು ಪುರಾಣಗಳಲ್ಲಿ ಹೇಳಿರುವ ಯೋಗಿಗಳೂ ಬ್ರಹ್ಮಚಾರಿವ್ರತಸ್ಥರೂ ಆಗಿದ್ದ ಗಾಲವ, ಕಂಡರೀಕ ಹಾಗೂ ಬ್ರಹ್ಮದತ್ತರೆಂಬ ಮೂವರ ಸಪ್ತಜನ್ಮಗಳ ಇತಿಹಾಸವನ್ನು ಹೇಳುವೆ. ಅದನ್ನು ಶ್ರವಣ ಮಾಡು ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಪೂಜನೀಯ ಪಕ್ಷಿಕಥೆವೆಂಬಲ್ಲಿ
ಇಪ್ಪತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ಏಕವಿಂಶೋಽಧ್ಯಾಯಃ – ದ್ವಾವಿಂಶೋಽಧ್ಯಾಯಃ

### ಪಿತೃಕಲ್ಪ– ಶ್ರಾದ್ಧದ ಮಹಿಮೆ

*ಮಾರ್ಕಂಡೇಯ ಉವಾಚ –*

**ಶ್ರಾದ್ಧೇ ಪ್ರತಿಷ್ಠಿತೋ ಲೋಕಃ ಶ್ರಾದ್ಧೇಃ ಯೋಗಃ ಪ್ರವರ್ತತೇ ।**
**ಹಂತ ತೇ ವರ್ತಯಿಷ್ಯಾಮಿ ಶ್ರಾದ್ಧಸ್ಯ ಫಲಮುತ್ತಮಮ್ ॥ 1 ॥**

**ಬ್ರಹ್ಮದತ್ತೇನ ಯತ್ ಪ್ರಾಪ್ತಂ ಸಪ್ತಜಾತಿಷು ಭಾರತ ।**
**ತತ ಏವ ಹಿ ಧರ್ಮಸ್ಯ ಬುದ್ಧಿಃ ನಿರ್ವರ್ತತೇ ಶನೈಃ ॥ 2 ॥**

**ಪೀಡಯಾಪ್ಯಥ ಧರ್ಮಸ್ಯ ಕೃತೇ ಶ್ರಾದ್ಧೇ ಪರಾನಘ ।**
**ಯತ್ ಪ್ರಾಪ್ತಂ ಬ್ರಾಹ್ಮಣೈಃ ಪೂರ್ವಂ ತನ್ನಿಬೋಧ ಮಹಾಮತೇ ॥ 3 ॥**

ಮಾರ್ಕಂಡೇಯರು ಭೀಷ್ಮನಿಗೆ ಮಹಾಮತಿ ಭೀಷ್ಮನೇ, ಈ ಸಕಲ ವಿಶ್ವವೂ ಸಹ ಶ್ರಾದ್ಧದಲ್ಲಿ ನಿಂತಿದ್ದು ಶ್ರಾದ್ಧದಿಂದಲೇ ಭಗವದ್ಯೋಗ ಸಿದ್ಧಿಸುತ್ತದೆ. ಇಂತಹ ಶ್ರಾದ್ಧದ ಮಹಾಮಹಿಮೆಯನ್ನು ಶ್ರಾದ್ಧಾಚರಣೆಯಿಂದಾಗುವ ಫಲವನ್ನೂ ತಿಳಿಸುವೆ, ಕೇಳು ಎಂದರು.

ಬ್ರಹ್ಮದತ್ತ ರಾಜನು ತನ್ನ ಏಳು ಜನ್ಮಗಳಲ್ಲಿ ಪಡೆದುಕೊಂಡ ಶ್ರಾದ್ಧದ ಫಲವನ್ನು ಶ್ರವಣ ಮಾಡುವುದರಿಂದ ಧರ್ಮಾಚರಣೆಯಲ್ಲಿ ಮನಸ್ಸು ಪ್ರವೃತ್ತವಾಗುತ್ತದೆ. ಬ್ರಾಹ್ಮಣರು ಗೋಹಿಂಸಾರೂಪವಾದ ಅಧರ್ಮಾಚರಣೆಯಿಂದಾಗಿ ಧರ್ಮಚ್ಯುತಿ ಏರ್ಪಟ್ಟರೂ ಶ್ರಾದ್ಧವನ್ನು ಮಾಡಿದ್ದರಿಂದ ಎಂತಹ ಫಲವನ್ನು ಪಡೆದರೆಂಬುದನ್ನು ಹೇಳುವೆ.

ಸನತ್ಕುಮಾರರು ನನಗೆ ಈ ಏಳು ಬ್ರಾಹ್ಮಣರ ವಿಷಯವಾಗಿ ಏನು

ಹೇಳಿದರೋ ಅದನ್ನೆ ನಾನು ಹೇಳುತ್ತೇನೆ. ಆ ಬ್ರಾಹ್ಮಣರೆಲ್ಲರೂ ಕುರುಕ್ಷೇತ್ರದಲ್ಲಿ ಗೋವನ್ನು ಕೊಂದು ಪಿತೃವ್ರತವುಳ್ಳವರಾಗಿ ಶ್ರಾದ್ಧ ಮಾಡುತ್ತಿರುವುದನ್ನು ನಾನು ನೋಡಿದೆನು. ಇಂತಹ ದಿವ್ಯದೃಷ್ಟಿ ಸನತ್ಕುಮಾರರ ಅನುಗ್ರಹವೆಂದು ತಿಳಿ.

**ವಾಗ್ದುಷ್ಟಃ ಕ್ರೋಧನೋ ಹಿಂಸ್ರಃ ಪಿಶುನಃ ಕವಿರೇವ ಚ ।**
**ಖಸೃಮಃ ಪಿತೃವರ್ತೀ ಚ ನಾಮಭಿಃ ಕರ್ಮಭಿಸ್ತಥಾ ॥ 4 ॥**

ಕುರುಕ್ಷೇತ್ರದಲ್ಲಿ ಬ್ರಹ್ಮರ್ಷಿ ವಿಶ್ವಾಮಿತ್ರರ ಏಳು ಮಂದಿ ಮಕ್ಕಳು ವಾಸವಾಗಿದ್ದರು. ಅವರ ಹೆಸರು ವಾಗ್ದುಷ್ಟ, ಕ್ರೋಧನ, ಹಿಂಸ್ರ, ಪಿಶುನ, ಕವಿ, ಖಸೃಮ, ಪಿತೃವರ್ತಿ ಎಂದು ಖಸೃಮನನ್ನು ಸ್ವಸೃಪ ಎಂದೂ ಕರೆಯುತ್ತಿದ್ದರು. ಇವರ ಸ್ವಭಾವಗಳೂ ಸಹ ಅವರ ಹೆಸರಿಗೆ ತಕ್ಕಂತೆಯೆ ಇದ್ದಿತು. ಈ ಸಪ್ತ ಋಷಿ ಪುತ್ರರೂ ತಮ್ಮ ತಂದೆ ತಪಸ್ಸಿಗೆ ತೆರಳಿದ ನಂತರ ಮಹರ್ಷಿ ಗಾರ್ಗ್ಯರ ಶಿಷ್ಯತ್ವ ವಹಿಸಿದರು.

ಅವರ ಶಿಷ್ಯರಾಗಿ ಅಧ್ಯಯನವನ್ನು ಮುಂದುವರೆಸಿದರು. ಗಾರ್ಗ್ಯರ ಬಳಿ ಸರಹಸ್ಯ ಉಪನಿಷತ್ ಮೊದಲಾದ ಪಾಠಗಳನ್ನು ಮುಗಿಸಿಕೊಂಡು ಆಶ್ರಮದಲ್ಲಿರುವ ಹಸುವನ್ನು ಕರುಸಹಿತರಾಗಿ ಹುಲ್ಲುಗಾವಲುಗಳಲ್ಲಿ ಮೇಯಿಸಿಕೊಂಡು ಬರುತ್ತಿದ್ದರು.

**ವಿನಿಯೋಗಾದ್ ಗುರೋಸ್ತಸ್ಯ ಗಾಂ ದೋಗ್ಧ್ರೀಂ ಸಮಕಲ್ಪಯನ್ ।**
**ಸಮಾನವತ್ಸಾಂ ಕಪಿಲಾಂ ಸರ್ವೇ ನ್ಯಾಯಗತಾಂ ತದಾ ॥ 5 ॥**

**ತೇಷಾಂ ಪಥಿ ಕ್ಷುಧಾರ್ತಾನಾಂ ಬಾಲ್ಯಾನ್ ಮೋಹಾಚ್ಚ ಭಾರತ ।**
**ಕ್ರೂರಾ ಬುದ್ಧಿಃ ಸಮಭವತ್ ತಾಂ ಗಾಂ ವೈ ಹಿಂಸಿತುಂ ತದಾ ॥ 6 ॥**

ಒಂದು ಬಾರಿ ಗುರುವಿನ ಆದೇಶದಂತೆ ಹಾಲು ಕೊಡುತ್ತಿದ್ದ ಕಪಿಲಾಧೇನುವನ್ನು ಮೇಯಿಸಿಕೊಂಡು ಬರಲು ಕರುವಿನೊಂದಿಗೆ ಹಸಿರು ತುಂಬಿರುವ ಶಾದ್ವಲ ಪ್ರದೇಶಕ್ಕೆ ಹೋದರು. ಅಲ್ಲಿನ ಉರಿಬಿಸಿಲಿನ ಬೇಗೆಯಿಂದ ಕಂಗೆಟ್ಟರು. ಹಸಿವೆ ತಾಳದೆ ದಿಕ್ಕು ತೋರದಂತಾಯಿತು. ಕಾಡಿನಲ್ಲಿ ಎಲ್ಲೆಲ್ಲೂ ಎಷ್ಟು ಹುಡುಕಿದರೂ ಏನೂ ಸಿಗಲಿಲ್ಲ. ಕ್ಷುಧ್ ಬಾಧೆಯಿಂದ ವಿವೇಕ ಶೂನ್ಯವಾಯಿತು. ದುರ್ಬುದ್ಧಿಯಿಂದಾಗಿ ತಾವು ಮೇಯಿಸಲು ತಂದಿದ್ದ ಗುರುಗಳ ಹಸುವನ್ನೆ ಕೊಂದು ತಿನ್ನುವ ದುರ್ವಿಚಾರ ಬಂದಿತು.

**ತಾನ್ ಕವಿಃ ಖಸೃಮಶ್ಚೈವ ಯಾಚೇತೇ ನೇತಿ ವೈ ತದಾ ।**
**ನ ಚಾಶಕ್ಯಂತ ತೇ ತಾಭ್ಯಾಂ ತದಾ ವಾರಯಿತುಂ ದ್ವಿಜಾಃ ॥ 7 ॥**

**ಪಿತೃವರ್ತೀ ತು ಯಸ್ತೇಷಾಂ ನಿತ್ಯಂ ಶ್ರಾದ್ಧಾಹ್ನಿಕೋ ದ್ವಿಜಃ ।**
**ಸ ಸರ್ವಾನಬಧ್ನೀತ್ ಭ್ರಾತೃನ್ ಕೋಪಾದ್ ಧರ್ಮೇ ಸಮಾಹಿತಃ ॥8 ॥**

**ಯದ್ಯವಶ್ಯಂ ಪ್ರಹಂತವ್ಯಾ ಪಿತೄನುದ್ಧಿಶ್ಯ ಸಾಧ್ವಿಮಾಮ್ ।**
**ಪ್ರಕುರ್ವೀಮಹಿ ಗಾಂ ಸಮ್ಯಕ್ ಸರ್ವ ಏವ ಸಮಾಹಿತಾಃ ॥ 9 ॥**

ಏಳು ಮಂದಿಯಲ್ಲಿ ಕವಿ ಮತ್ತು ಖಸೃಮ ಎಂಬುವರು ಮಾತ್ರ ಹಾಗೆ ಗೋವನ್ನು ಕೊಲ್ಲಬಾರದೆಂದು ತಡೆಯಲು ಪ್ರಯತ್ನಿಸಿದರು. ಆದರೆ ಅವರನ್ನು ತಡೆಯಲು ಸಾಧ್ಯವಾಗಲಿಲ್ಲ. ಆ ಐದು ಮಂದಿಯಲ್ಲಿ ಪಿತೃವರ್ತಿಯೆಂಬುವನು ನಿರಂತರ ಶ್ರಾದ್ಧಾಸಕ್ತನೂ, ಪಿತೃವರ್ತಿಯೂ ಆದ ಪಿತೃವರ್ತಿಯೂ ಮಾತ್ರ ಹೀಗೆಂದನು.

ಈ ಹಸುವನ್ನು ಕೊಲ್ಲುವುದೇ ನಿಮ್ಮ ಉದ್ದೇಶವಾಗಿದ್ದರೆ ಇತರ ಮಾಂಸದಿಂದ ಪಿತೃಗಳನ್ನುದ್ದೇಶಿಸಿ ಶ್ರಾದ್ಧ ಮಾಡೋಣ. ಮಾಂಸವನ್ನು ಶ್ರಾದ್ಧಶೇಷವನ್ನು ಪಿತೃ ಪ್ರಸಾದವೆಂದು ಭಕ್ಷಿಸೋಣ. ಇದರಿಂದ ನಮಗೆ ಪಾಪ ಬರುವುದಿಲ್ಲ. ಈ ಶ್ರಾದ್ಧವು ಘೋರ ಪಾಪದಿಂದ ನಮ್ಮನ್ನು ರಕ್ಷಿಸುತ್ತದೆ ಎಂದನು.

ಈ ರೀತಿ ಮಾಡುವುದರಿಂದ ಈ ಗೋವೂ ಸಹ ಶ್ರಾದ್ಧದಲ್ಲಿ ವಿನಿಯುಕ್ತವಾದಂತಾಗಿ ಗೋವಿಗೂ ಪುಣ್ಯಲೋಕ, ನಮಗಾದರೂ ಗೋಹತ್ಯಾ ಪಾಪವು ತಗಲುವುದಿಲ್ಲ.

### ಗೋವು ಹುಲಿ ತಿಂದಿತು– ಕರು ಸ್ವೀಕರಿಸಿರಿ

**ತಥೇತ್ಯುಕ್ತ್ವಾ ಚ ತೇ ಸರ್ವೇ ಪ್ರೋಕ್ಷಯಿತ್ವಾ ಚ ಗಾಂ ತತಃ ।**
**ಪಿತೃಭ್ಯಃ ಕಲ್ಪಯಿತ್ವೈನಾಂ ಉಪಾಯುಂಜಂತ ಭಾರತ ॥ 10 ॥**

**ಉಪಯುಜ್ಯ ಚ ಗಾಂ ಸರ್ವೇ ಗುರೋಃ ತಸ್ಯ ನ್ಯವೇದಯನ್ ।**
**ಶಾರ್ದೂಲೇನ ಹತಾಧೇನುಃ ವತ್ಸೋಽಯಂ ಗೃಹ್ಯತ್ಯಾಮಿತಿ ॥ 11 ॥**

ಕೌಶಿಕ ಪುತ್ರರು ಹಸಿವೆಯನ್ನು ನೀಗಿಸಿಕೊಳ್ಳಲು ಗೋವನ್ನು ಕೊಂದು. ಅದರ ಮಾಂಸವನ್ನು ಪ್ರೋಕ್ಷಣ ಮಾಡಿ ಪಿತೃಗಳಿಗೆ ಶ್ರಾದ್ಧ ಮಾಡಿದರು. ಪಿತೃವರ್ತಿಯೇ ಸ್ವಯಂ ಶ್ರಾದ್ಧ ಮಾಡಿದನು. ಇಬ್ಬರು ಸೋದರರರನ್ನು

ವಿಶ್ವೇದೇವತೆಗಳ ಸ್ಥಾನದಲ್ಲಿಯೂ, ಮೂರು ಮಂದಿ ಅಣ್ಣಂದಿರನ್ನು ಪಿತೃಸ್ಥಾನದಲ್ಲಿಯೂ ಕೂಡಿಸಿ ಒಬ್ಬನನ್ನು ಅತಿಥಿಯನ್ನಾಗಿ ಮಾಡಿ ವಿಧಿಪೂರ್ವಕವಾಗಿ ತಾನೇ ನಿಂತು ಸಕಲ ಶ್ರಾದ್ಧಕರ್ಮಗಳನ್ನು ಸಮಂತ್ರಕವಾಗಿ ನೆರವೇರಿಸಿದನು. ನಂತರ ಪಿತೃಪ್ರಸಾದವೆಂದು ಹೊಟ್ಟೆತುಂಬಾ ತಿಂದರು. ಹಸಿವೆ ಪರಿಹಾರವಾಯಿತು. ನಂತರ ಏಳೂ ಮಂದಿ ಕೌಶಿಕರು ಗರ್ಗರ ಬಳಗೆ ಹೋಗಿ ಕರುವನ್ನು ಮಾತ್ರ ಗುರುಗಳಿಗೆ ಒಪ್ಪಿಸಿ ಗುರುಗಳೇ! ಹೆಬ್ಬುಲಿಯೊಂದು ಬಂದು ಹಸುವನ್ನು ಕೊಂದು ಹಾಕಿ, ತಿಂದುಹೋಯಿತು. ಕರುವನ್ನು ಮಾತ್ರ ತಂದಿದ್ದೇವೆ ! ತೆಗೆದುಕೊಳ್ಳಿ ಎಂದು ಸುಳ್ಳು ಹೇಳಿ ಅಧೋಮುಖರಾಗಿ ನಿಂತುಕೊಂಡರು. ಸರಳ ಸ್ವಭಾವ ಗಾರ್ಗ್ಯರು ಶಿಷ್ಯರು ಹೇಳಿದ್ದನ್ನು ನಿಜವೆಂದು ನಂಬಿ, ಕರುವನ್ನೆ ಸ್ವೀಕರಿಸಿದರು.

## ಗುರುದ್ರೋಹ - ಏಳು ಜನ್ಮ ಕಾಡಿತು

**ಮಿಥ್ಯೋಪಚರ್ಯ ತೇ ತಂ ತು ಗುರುಮನ್ಯಾಯತೋ ದ್ವಿಜಾಃ ।**
**ಕಾಲೇನ ಸಮಯುಜ್ಯಂತ ಸರ್ವ ಏವಾಯುಷಃ ಕ್ಷಯೇ ॥ 12 ॥**
**ತೇ ವೈ ಕ್ರೂರತಯಾ ಹಿಂಸ್ರಾ ಅನಾರ್ಯತ್ವಾದ್ ಗುರೌ ತಥಾ ।**
**ಉಗ್ರಾ ಹಿಂಸಾವಿಹಾರಾಶ್ಚ ಸಪ್ತ ಅಜಾಯಂತ ಸೋದರಾಃ ॥ 13 ॥**

ಹೀಗೆ ಏಳು ಮಂದಿ ಗುರುವಿಗೆ ಸುಳ್ಳು ಹೇಳಿದ್ದು ಹಾಗೂ ಗೋಹತ್ಯೆಯಿಂದಾಗಿ ಮಹಾಘೋರ ಪಾಪವುಂಟಾಯಿತು. ಪತಿತರಾದ ಅವರೆಲ್ಲರೂ ಕಾಲಕ್ರಮೇಣ ಮೃತರಾದರು. ಅತ್ಯಂತ ಕ್ರೂರ ಕಾರ್ಯ ಮಾಡಿದ್ದರಿಂದಲೂ ಗುರುಗಳ ವಂಚನೆ, ಗೋಹತ್ಯೆಯಿಂದಾಗಿ ಮುಂದೆ ಪ್ರಾಣಿಗಳನ್ನು ಕೊಂದೆ ಬದುಕುವ ಕ್ರೂರಿಗಳಾದ ವ್ಯಾಧರಾಗಿ ದಶಾರ್ಣ ಅಥವಾ ದಶಪುರದಲ್ಲಿ ಹುಟ್ಟಿದರು.

**ಲುಬ್ಧಕಸ್ಯಾತ್ಮಜಾಸ್ತಾತ! ಬಲವಂತೋ ಮನಸ್ವಿನಃ ।**
**ಪಿತೄನಭ್ಯರ್ಚ್ಯ ಧರ್ಮೇಣ ಪ್ರೋಕ್ಷಯಿತ್ವಾ ಚ ಗಾಂ ತದಾ ॥ 14 ॥**
**ಸ್ಮೃತಿಃ ಪ್ರತ್ಯವಮರ್ಶಶ್ಚ ತೇಷಾಂ ಜಾತ್ಯಂತರೇಽಭವತ್ ।**
**ಜಾತಾಃ ವ್ಯಾಧಾಃ ದಶಾರ್ಣೇಷು ಸಪ್ತ ಧರ್ಮ ವಿಚಕ್ಷಣಾಃ ॥ 15 ॥**

ಯಾರಿಗೂ ಬೇಡವಾದ ಬೇಡಜನ್ಮ ಬೇಡದಿದ್ದರೂ ಬಂದೊದಗಿತ್ತು. ಆದರೂ ಜನ್ಮಾಂತರದಲ್ಲಿ ಮಾಡಿದ ಭಕ್ತಿಶ್ರಾದ್ಧದಿಂದಾಗಿ ಈ ವ್ಯಾಧ ಜನ್ಮದಲ್ಲಿಯೂ

ಅವರಿಗೆ ಜಾತಿ ಸ್ಮರಣೆ ಒದಗಿತ್ತು. ಕಿರಾತನ ಮಕ್ಕಳಾಗಿ ಜನಿಸಿ, ತಮ್ಮ ಧರ್ಮಕ್ಕುರ್ಚಿವಾದ ಚೌರ್ಯ, ಕ್ರೌರ್ಯ, ಹಿಂಸಾ ಕಾರ್ಯಗಳಲ್ಲಿ ಆಸಕ್ತರಾಗಿದ್ದರು. ಪಿತೃಭಕ್ತಿಯ ಸಲುವಾಗಿ ತಮ್ಮ ನೀಚಕೃತ್ಯದ ಸ್ಮರಣೆಯುಂಟಾಯಿತು. ಅವರಿಗೆ ಗೋವನ್ನು ಕೊಂದದ್ದು ಕಣ್ಣು ಮುಂದೆ ಬಂದಿತು. ಗೋಹತ್ಯೆ-ಗುರುಗಳ ಮಿಥ್ಯಾಚಾರದಿಂದ ಈ ಅಧಃಪಾತ ತಮಗಾಗಿದೆ ಎಂದು ತಿಳಿದು ಸುಲಿಗೆ, ಹಿಂಸೆ, ಕಳವುಗಳನ್ನೆಲ್ಲ ತ್ಯಜಿಸಿ ಧರ್ಮಾನುಷ್ಠಾನ ಕೈಗೊಂಡರು.

**ಸ್ವಕರ್ಮನಿರತಾಃ ಸರ್ವೇ ಲೋಭಾನೃತ ವಿವರ್ಜಿತಾಃ ।**
**ತಾವನ್ಮಾತ್ರಂ ಪ್ರಕುರ್ವಂತಿ ಯಾವತ್ ಪ್ರಾಣಧಾರಣಮ್ ॥ 16 ॥**
**ಶೇಷಂ ಧ್ಯಾನಪರಾಃ ಕಾಲಮ್ ಅನುಧ್ಯಾಯಂತಿ ಕರ್ಮತತ್ ॥ 17 ॥**
**ನಿರ್ವೈರೋ ನಿರ್ವೃತಿಃ ಶಾಂತೋ ನಿರ್ಮನ್ಯುಃ ಕೃತಿರೇವ ಚ ।**
**ವೈಧಸೋ ಮಾತೃವರ್ತೀ ಚ ವ್ಯಾಧಾಃ ಪರಮಧಾರ್ಮಿಕಾಃ ॥ 18 ॥**

ದುಷ್ಟಕರ್ಮಗಳೇ ಈ ನೀಚ ಜಾತಿಗೆ ಕಾರಣವೆಂದು ತಿಳಿದು ಹಿಂಸಾಚಾರ ಅತ್ಯಾಚಾರ, ಹತ್ಯಾಚಾರಗಳಿಂದ ದೂರರಾದರು. ತಮ್ಮ ತಂದೆ ತಾಯಂದಿರ ಸೇವೆ ಮಾಡಿ ಲೋಭ ಅನೃತ ವಂಚನೆ ಕಪಟ ಬಿಟ್ಟರು. ಹಗಲಿರುಳೂ ಶ್ರೀಹರಿ ಧ್ಯಾನಾಸಕ್ತರಾದರು. ಬದುಕಿರುವ ಮಟ್ಟಿಗೆ ಆಹಾರ ಸ್ವೀಕಾರ ಮಾಡಿದರು. ವ್ಯಾಧರಾಗಿದ್ದಾಗ ಅವರ ಹೆಸರು ಹೀಗಿದ್ದಿತು. ನಿರ್ವೈರ, ನಿರ್ವೃತಿ, ಶಾಂತ, ನಿರ್ಮನ್ಯು, ಕೃತಿ, ವೈಧಸ, ಮಾತೃವರ್ತೀ ಎಂದು ಪ್ರಸಿದ್ಧರಾಗಿ ಪುಲಿಂದ ಪುತ್ರರು ಬೇಡಜಾತಿಯಲ್ಲಿಯೂ ಮುನಿವೃತ್ತಿಯನ್ನೇ ಸಾಧಿಸಿದರು. ಯಾವಾಗ ತಂದೆ-ತಾಯಿಯರು ಮೃತರಾದರೋ ಆಗಲೇ ಧನಸ್ಸು ಬಾಣ ತ್ಯಜಿಸಿ, ಉಪವಾಸ ವ್ರತ ಹಿಡಿದು ಪವಿತ್ರ ದಿವ್ಯತೀರ್ಥದ ದಂಡೆಯಲ್ಲಿಯೇ ಪ್ರಾಣಬಿಟ್ಟರು.

## ಕಾಲಂಜರ ಪರ್ವತದಲ್ಲಿ ಜಿಂಕೆಗಳಾದರು

ಶುಭೇನ ಕರ್ಮಣಾ ತೇನ ಜಾತಾಃ ಜಾತಿಸ್ಮರಾ ಮೃಗಾಃ ।
ತ್ರಾಸಾನುತ್ಪಾದ್ಯ ಸಂವಿಗ್ನಾಃ ರಮ್ಯೇ ಕಾಲಂಜರೇ ಗಿರೌ ॥ 19 ॥
ಉನ್ಮುಖೋ ನಿತ್ಯವಿತ್ರಸ್ತಃ ಸ್ತಬ್ಧಕರ್ಣೋ ವಿಲೋಚನಃ ।
ಪಂಡಿತೋ ಘಸ್ಮರೋ ನಾದೀ ನಾಮತಸ್ತೇಽಭವನ್ ಮೃಗಾಃ ॥ 20 ॥

ಅನಂತರ ಕುಶಿಕಪುತ್ರರಿಗೆ ಜಿಂಕೆಯ ಜನ್ಮ ಪ್ರಾಪ್ತವಾಯಿತು. ಅದರಲ್ಲಿಯೂ ಅವರಿಗೆ ಹಿಂದಿನ ಸ್ಮರಣೆಗಳಿದ್ದವು. ಕಿರಾತರಾಗಿದ್ದಾಗ ಮಾಡಿದ ಪಿತೃಮಾತೃಸೇವೆ, ಸತ್ಯ ಅಹಿಂಸಾದಿ ಧರ್ಮಗಳಿಂದಾಗಿ ಜಿಂಕೆಯಾಗಿ ಹುಟ್ಟಿದರೂ ಜಾತಿಸ್ಮೃತಿ ಅಳಿಯಲ್ಲಿಲ್ಲ. ಉನ್ಮುಖ, ನಿತ್ಯವಿತ್ರಸ್ತ, ಸ್ತಬ್ಧಕರ್ಣ, ವಿಲೋಚನ, ಪಂಡಿತ, ಘಸ್ಮರ, ನಾದೀ ನಾಮಗಳನ್ನು ಹೊಂದಿದ್ದು, ಹಿಂದಿನ ಜನ್ಮಗಳಲ್ಲಿ ಧನುರ್ಬಾಣ ಹಿಡಿದು ಪ್ರಾಣಿಗಳನ್ನು ಭಯಪಡಿಸುತ್ತಿದ್ದರಿಂದಾಗಿ ನಿರಂತರವೂ ಭಯಗ್ರಸ್ತ ಜೀವನ ನಡೆಸಿದವು.

ಹಿಂದಿನ ಜನ್ಮಗಳ ಸ್ಮರಣೆಯಿಂದಾಗಿ ಆಹಾರ-ವಿಹಾರಗಳನ್ನು ತ್ಯಜಿಸಿದವು. ಶೀತೋಷ್ಣ ದ್ವಂದ್ವ ಸಹಿಷ್ಣುಗಳಾಗಿ ಇತರ ಜಿಂಕೆಗಳೊಂದಿಗೆ ಸೇರದೆ, ಒಂದೇ ರೀತಿಯ ಧರ್ಮಶೀಲರಾಗಿ ಶುಭಕರ್ಮಗಳನ್ನೇ ಮಾಡುತ್ತಿದ್ದರು.

**ಜಹುಃ ಪ್ರಾಣಾನ್ ಮರುಂ ಸಾಧ್ಯಂ ಲಘ್ವಾಹಾರಾಃ ತಪಸ್ವಿನಃ ।**
**ತೇಷಾಂ ಮರುಂ ಸಾಧಯತಾಂ ಪದಸ್ಥಾನಾನಿ ಭಾರತ ॥ 21 ॥**
**ತಥೈವಾದ್ಯಾಪಿ ದೃಶ್ಯಂತೇ ಗಿರೌ ಕಾಲಂಜರೇ ನೃಪ ॥ 22 ॥**

ಅವರು ಆ ಸಮಯದಲ್ಲಿ ಲಘುವಾದ ಆಹಾರ ತಿನ್ನುತ್ತಾ, ಮಹಾತಪಸ್ಸು ಮಾಡುತ್ತಾ ಮರುವೆಂಬ ವ್ರತಾಚರಣೆ ಮಾಡಿದರು. ಅವರು ಮಾಡಿದ ತಪಸ್ಸು ಅಮೋಘವಾದದ್ದು. ಅವರು ಮರುವ್ರತಾಚರಣೆಯ ಕಾಲದಲ್ಲಿ ನಿಶ್ಚಲವಾಗಿ ನಿಂತು ತಪಸ್ಸನ್ನು ಮಾಡಿದ ಸ್ಥಳದಲ್ಲಿ ಅವುಗಳ ಪಾದಚಿಹ್ನೆಗಳು ಮೂಡಿದ್ದು, ಇಂದೂ ಸಹ ಅವುಗಳನ್ನು ನೋಡಬಹುದಾಗಿದೆ. ಕ್ರಮೇಣ ಆ ತಪಸ್ಸಿನಿಂದ ಕೃಶವಾಗಿ ಜಿಂಕೆಗಳು ದೇಹತ್ಯಾಗ ಮಾಡಿದವು.

### ಶರದ್ವೀಪದಲ್ಲಿ ಚಕ್ರವಾಕ ಪಕ್ಷಿ ಜನ್ಮ

**ಕರ್ಮಣಾ ತೇನ ತೇ ತಾತ ಶುಭೇನಾಶುಭವರ್ಜಿತಾಃ ।**
**ಶುಭಾತ್ ಶುಭತರಾಂ ಯೋನಿಂ ಚಕ್ರವಾಕತ್ವಮಾಗತಾಃ ॥ 23 ॥**
**ಶುಭೇ ದೇಶೇ ಶರದ್ವೀಪೇ ಸಪ್ತೈವಾಸನ್ ಜಲೌಕಸಃ ॥ 24 ॥**
**ತ್ಯಕ್ತ್ವಾ ಸಹಚರೀಧರ್ಮಂ ಮುನಯೋ ಬ್ರಹ್ಮಚಾರಿಣಃ ॥ 25 ॥**
**ನಿಃಸ್ಪೃಹೋ ನಿರ್ಮಮಃ ಕ್ಷಾಂತೋ ನಿರ್ದ್ವಂದ್ವೋ ನಿಷ್ಪರಿಗ್ರಹಃ ।**
**ನಿರ್ವೃತ್ತಿಃ ನಿಭೃತಶ್ಚೈವ ಶಕುನಾ ನಾಮತಃ ಸ್ಮೃತಾಃ ॥ 26 ॥**

ಕೌಶಿಕರು ಹಿಂದೆ ಜಿಂಕೆಯಾಗಿದ್ದಾಗ ಅಖಂಡ ತಪಸ್ಸನ್ನಾಚರಿಸಿದ್ದರಿಂದ ಚಿಗರೆಯ ಜನ್ಮದಿಂದ ಮುಕ್ತರಾಗಿ ಅದಕ್ಕಿಂತಲೂ ಸ್ವಚ್ಛಜನ್ಮವಾದ 'ಚಕ್ರವಾಕ' ಪಕ್ಷಿಗಳಾಗಿ ಜನಿಸಿದರು.

ಶರದ್ವೀಪದಲ್ಲಿ ಪವಿತ್ರತೀರ್ಥಗಳಲ್ಲಿ ನೀರಿನ ಮಧ್ಯ ನಿಂತು ಉಗ್ರ ತಪಸ್ಸನ್ನಾಚರಿಸಿದವು. ಈ ಜನ್ಮದಲ್ಲಿಯೂ ತಮ್ಮ ಜಾತಿಯ ಬೇರೆ ಪಕ್ಷಿಗಳೊಂದಿಗೆ ಸೇರದೇ ಪ್ರತ್ಯೇಕವಾಗಿದ್ದವು. ಚಕ್ರವಾಕವು ಅತ್ಯಂತ ಪ್ರೇಮಯುಕ್ತ ಪಕ್ಷಿಯಾಗಿದ್ದರೂ ಇಂದ್ರಿಯ ನಿಗ್ರಹ ಹೊಂದಿ ವಿಷಯ ಸುಖದ ಅಭಿಲಾಷೆ ಬಿಟ್ಟು, ಶ್ರೀಹರಿಯಲ್ಲಿ ಮನೋಭ್ಯಾಸ ರೂಪ ಯೋಗದಿಂದಾಗಿ ಭಗವಂತನನ್ನು ಮೆಚ್ಚಿಸಿದರು.

ಈ ಚಕ್ರವಾಕಗಳಾಗಿದ್ದಾಗ ಅವರ ಶೀಲವೃತ್ತಿಗಳಗೆ ಅನುಸಾರವಾಗಿ ಅವರಿಗೆ ಕ್ರಮವಾಗಿ ನಿಸ್ಪೃಹ, ನಿರ್ಮಮ, ಕ್ಷಾಂತ, ನಿರ್ದ್ವಂದ್ವ, ನಿಷ್ಪರಿಗ್ರಹಃ, ನಿರ್ವೃತ್ತಿ, ನಿಭೃತ ಹೆಸರಾಗಿತ್ತು.

### ಮಾನಸರೋವರದಲ್ಲಿ ಹಂಸಗಳಾಗಿ ಜನ್ಮ

**ತೇ ತತ್ರ ಪಕ್ಷಿಣಃ ಸರ್ವೇ ಶಕುನಾ ಧರ್ಮಚಾರಿಣಃ ।**
**ನಿರಾಹಾರಾಃ ಜಹುಃ ಪ್ರಾಣಾಂಸ್ತಪೋಯುಕ್ತಾಃ ಸರಿತ್ ತಟೇ ॥ 27 ॥**

**ಅಥ ತೇ ಸೋದರಾಃ ಜಾತಾಃ ಹಂಸಾಃ ಮಾನಸಚಾರಿಣಃ ।**
**ಜಾತಿಸ್ಮರಾಃ ಸುಸಂಯುಕ್ತಾಃ ಸಪ್ತೈವ ಬ್ರಹ್ಮಚಾರಿಣಃ ॥ 28 ॥**

**ವಿಪ್ರಯೋನೌ ಯತೋ ಮೋಹಾತ್ ಮಿಥ್ಯೋಪಚರಿತೋ ಗುರುಃ ।**
**ತಿರ್ಯಗ್ ಯೋನೌ ತತೋ ಜಾತಾಃ ಸಂಸಾರೇ ಪರಿಬಭ್ರಮುಃ ॥ 29 ॥**

ಈ ಚಕ್ರವಾಕ ಜನ್ಮದಲ್ಲಿಯೂ ಆಹಾರ ನೀರು ತ್ಯಜಿಸಿದವು. ತಪೋವೃತ್ತಿಯಿಂದಿದ್ದು ದೇಹತ್ಯಾಗ ಮಾಡಿದವು. ಧರ್ಮಮಾರ್ಗದಲ್ಲಿಯೇ ನಿರತವಾಗಿದ್ದು ಮುಂದೆ ಮಾನಸಸರೋವರದಲ್ಲಿ ಸಂಚರಿಸುವ ಏಳು ಹಂಸಪಕ್ಷಿಗಳಾಗಿ ಜನಿಸಿದವು. ಹಾಲಿನಂತೆ ವಿಶುದ್ಧ ಶರೀರವು – ಅವರ ಪರಿಶುದ್ಧಾಂತರಾಳವನ್ನು ತಿಳಿಸುವ ಪರಿಯೂ ಆಗಿತ್ತು. ಹೀಗೆ ಅಂತರಂಗಶುದ್ಧಿ–ಬಹಿರಂಗಶುದ್ಧಿಯನ್ನು ಹೊಂದಿದ್ದವು. ಹಂಸಜನ್ಮ–ವೆತ್ತಿದಾಗಲೂ ಹಿಂದಿನ ಜಾತಿಸ್ಮರವನ್ನು ಹೊಂದಿದ್ದವು. ಇದರಿಂದಾಗಿ ಅವರು ಬ್ರಹ್ಮಚರ್ಯವ್ರತವನ್ನು ಆಚರಿಸಿದವು.

## ಗುರುದ್ರೋಹ ಏಳು ಜನ್ಮ ಕಾರಣವಾಯಿತು

ಬ್ರಾಹ್ಮಣರಾಗಿದ್ದ ಅರು ಮೋಹವಶರಾಗಿ ಗುರುವಿಗೆ ಸುಳ್ಳು ಹೇಳದ ಕಾರಣ ಅನೇಕ ತಿರ್ಯಗ್ ಜಂತುಗಳಲ್ಲಿ ಹುಟ್ಟಿ ಈ ಪ್ರಪಂಚದಲ್ಲಿ ಭ್ರಮಿಸುತ್ತಿದ್ದರು.

## ಪಿತೃಶ್ರಾದ್ಧ ಪ್ರಯುಕ್ತ ಪೂರ್ವಜನ್ಮಸ್ಮರಣೆ

**ಯತಶ್ಚ ಪಿತೃವಾಕ್ಯಾರ್ಥಃ ಕೃತಃ ಸ್ವಾರ್ಥೇ ವ್ಯವಸ್ಥಿತ ತೈಃ ।**
**ತತೊ ಜ್ಞಾನಂ ಚ ಜಾತಿಂ ಚ ತೇ ಹಿ ಪ್ರಾಪುಃ ಗುಣೋತ್ತರಾಮ್ ॥ 30 ॥**

**ಸುಮನಾಃ ಶುಚಿವಾಕ್ ಶುದ್ಧಃ ಪಂಚಮಃ ಛಿದ್ರದರ್ಶನಃ ।**
**ಸುನೇತ್ರಶ್ಚ ಸ್ವತಂತ್ರಶ್ಚ ಶಕುನಾಃ ನಾಮತಃ ಸ್ಮೃತಾಃ ॥ 31 ॥**

ಕುಶಿಕಪುತ್ರರು ಸ್ವಾರ್ಥಿಗಳಾಗಿದ್ದು ಅನ್ಯಾಯ ಮಾಡಿದ್ದರೂ, ಪಿತೃಗಳಿಗೆ ಶ್ರಾದ್ಧ ಮಾಡಿ ಆರಾಧನೆ ಮಾಡಿದ್ದರಿಂದ ನೀಚಜಾತಿಗಳಲ್ಲಿಯೂ ಪೂರ್ವಜನ್ಮಸ್ಮರಣೆವುಂಟಾಗಿತ್ತು. ಇದರಿಂದಾಗಿ ಬ್ರಾಹ್ಮಣರಾಗಿ ಹುಟ್ಟಿದರು. ಆಗ ಸುಮನಸ್, ಶುಚಿವಾಕ್, ಶುದ್ಧಃ ಪಂಚಮಃ, ಛಿದ್ರದರ್ಶನಃ ಸುನೇತ್ರ, ಸ್ವತಂತ್ರ ಎಂದು ಹೆಸರಾಗಿತ್ತು.

ಪದ್ಮಗರ್ಭ, ಅರವಿಂದಾಕ್ಷ, ಹೈಮಗರ್ಭ, ಸುಲೋಚನ, ಉರುಬಿಂದು, ಸುಬಿಂದು, ಕ್ಷೀರಗರ್ಭ ಎಂದೂ ಅವರಿಗೆ ಹೆಸರನ್ನು ಹೊಂದಿದ್ದರು.

ಹಿಂದೆ ವಾಗ್ದುಷ್ಟ ಮೊದಲಾದ ಕೌಶಿಕಪುತ್ರರಲ್ಲಿ ಐದನೆಯವನು. 'ಪಾಂಚಿಕ' ನೆನಿಸಿ ರಾಜನ ಮಂತ್ರಿಯಾಗುವನು. ಖಸೃಮವೆಂಬುವನು ಮುಂದೆ 'ಕಂಡರೀಕ' ನೆನಿಸಿದ. ಪಿತೃವರ್ತಿಯು ಏಳು ಜನ್ಮದಲ್ಲಿ 'ಬ್ರಹ್ಮದತ್ತ'ನೆಂಬ ರಾಜನೆನಿಸಿದ.

**ತೇಷಾಂ ತು ತಪಸಾ ತೇನ ಸಪ್ತಜಾತಿಕೃತೇನ ವೈ ।**
**ಯೋಗಸ್ಯ ಚಾಪಿ ನಿರ್ವೃತ್ತ್ಯಾ ಪ್ರತಿಭಾನಾಚ್ಚ ಶೋಭನಾತ್ ॥ 32 ॥**
**ಪೂರ್ವಜಾತಿಷು ಯದ್ ಬ್ರಹ್ಮ ಶ್ರುತಂ ಗುರುಕುಲೇಷು ವೈ ।**
**ತಥೈವಾಸ್ಥಿತಾ ಬುದ್ಧಿಃ ಸಂಸಾರೇಷ್ವಪಿ ವರ್ತತಾಮ್ ॥ 33 ॥**

ಈ ಏಳು ಋಷಿಕುಮಾರರು ಏಳೂ ಜನ್ಮಗಳಲ್ಲಿಯೂ ಮಾಡಿದ ತಪಸ್ಸು, ಯೋಗಸಿದ್ಧಿಯಿಂದಲೂ, ಗುರುಕುಲದಲ್ಲಿ ಮಾಡಿದ್ದ ವೇದಾಧ್ಯಯನ ಪ್ರಭಾವದಿಂದಲೂ ಅವರ ಬುದ್ಧಿಯು ಮಾತ್ರ ಧರ್ಮದಿಂದ ವಿಚಲಿತರಾಗಲಿಲ್ಲ.

ಹೀಗೆ ಹಂಸಯೋನಿಯಲ್ಲಿ ಹುಟ್ಟಿದಾಗ ಬ್ರಹ್ಮಚಾರಿಗಳಾಗಿಯೂ, ಬ್ರಹ್ಮವಾದಿಗಳಾಗಿಯೂ ಇದ್ದರು. ಶ್ರೀಹರಿಯ ನಿರಂತರ ಸ್ಮರಣೆ ನಡೆದಿತ್ತು.

## ನೀಪರಾಜನ ಭೇಟಿ

**ತೇಷಾಂ ತತ್ರ ವಿಹಂಗಾನಾಂ ಚರತಾಂ ಸಹಚಾರಿಣಾಮ್ ।**
**ನೀಪಾನಾಮೀಶ್ವರೋ ರಾಜಾ ವಿಭ್ರಾಜಃ ಪೌರವಾನ್ವಯಃ ॥ 34 ॥**

**ವಿಭ್ರಾಜಮಾನೋ ವಪುಷಾ ಪ್ರಭಾವೇನ ಸಮನ್ವಿತಃ ।**
**ಸ್ವತಂತ್ರಶ್ಚ ವಿಹಂಗೋಽಸೌ ಸ್ಪೃಹಯಾಮಾಸ ತಂ ನೃಪಮ್ ।**
**ದೃಷ್ಟ್ವಾಽಽಯಾಂತಂ ಶ್ರಿಯೋಪೇತಂ ಭವೇಯಮಹಮೀದೃಶಃ ॥ 35 ॥**

**ಯದ್ಯಸ್ತಿ ಸುಕೃತಂ ಕಿಂಚಿತ್ ತಪೋ ವಾ ನಿಯಮೋಽಪಿ ವಾ ।**
**ಖಿನ್ನೋಽಪಿ ಹ್ಯುಪವಾಸೇನ ತಪಸಾ ನಿಷ್ಫಲೇನ ಚ ॥ 36 ॥**

ಆ ಹಂಸ ಪಕ್ಷಿಗಳು ಜೊತೆಯಲ್ಲಿಯೇ ವಿಹರಿಸುತ್ತಿದ್ದರು. ಹೀಗಿರುವಾಗ ಒಂದು ದಿನ ನೀಪವಂಶದ ರಾಜನೂ, ಪುರುವಂಶೀಯನೂ ಆದ ವಿಭ್ರಾಜನೆಂಬ ರಾಜನೂ ತನ್ನ ದೇಹ ಕಾಂತಿಯಿಂದ ನಾಲ್ಕೂ ದಿಕ್ಕುಗಳನ್ನೂ ಪ್ರಕಾಶಗೊಳಸುತ್ತಿದ್ದನು. ತನ್ನ ಅಂತಃಪುರ ರಮಣಿಯರೊಂದಿಗೆ ಅರಣ್ಯಕ್ಕೆ ಬಂದನು.

ಈ ಸಮಯದಲ್ಲಿ 'ಸ್ವತಂತ್ರ' ಹಂಸವು ರಾಜನ ವನವಿಹಾರ ಜಲವಿಹಾರ ವಸಂತವಿಹಾರ ಮಾಡುತ್ತಾ ಅಂತಃಪುರಃ ಚಾರು ರಮಣೀಮಣಿಗಳಿಂದ ಸ್ವಚ್ಛಂದ ವಿಹಾರ ಮಾಡುತ್ತಿದ್ದನ್ನು ಅಲ್ಲಿಯೇ ತಪೊಮಗ್ನವಾಗಿದ್ದ ಹಂಸಗಳ ಮನಸ್ಸು ವಿಚಲಿತವಾಯಿತು – ನಾನಿಷ್ಟುದಿನ ಅನ್ನಾಹಾರ ನೀರುಗಳನ್ನು ಬಿಟ್ಟು ಉಪವಾಸ ಮಾಡಿದ್ದೇನೆ. ಇದರಿಂದಾಗಿ ಪುಣ್ಯವೇನಾದರೂ ಬಂದಿದ್ದರೆ ಇದರಿಂದ ಇಂತಹ ರಾಜಭೋಗವಾದರೂ ಲಭಿಸುವಂತಾಗಲಿ ಎಂದಿತು.

**ತತಸ್ತಂ ಚಕ್ರವಾಕೌ ದ್ವಾವೂಚತುಃ ಸಹಚಾರಿಣೌ ।**
**ಆವಾಂ ತೇ ಸಚಿವೌ ಸ್ಯಾವಸ್ತವ ಪ್ರಿಯಹಿತೈಷಿಣೌ ॥ 37 ॥**

**ಏವಂ ತೇ ಸಮಯಂ ಚಕ್ರುಃ ಶುಚಿವಾಕ್ ತಮುವಾಚ ಹ ।**

'ಸ್ವತಂತ್ರ' ವೆಂಬ ಪಕ್ಷಿಯು ರಾಜನಾಗಬೇಕೆಂಬ ಇಚ್ಛೆ ವ್ಯಕ್ತಪಡಿಸಿದಾಗ ಅದರ ಎಡ-ಬಲದಲ್ಲಿದ್ದ ಹಂಸಗಳೆರಡು ಹೇಳಿದವು.

ಸಹೋದರ, ನೀನು ರಾಜನಾದಾಗ ನಾವಿಬ್ಬರೂ ನಿನಗೆ ಪ್ರಿಯರಾದ ಮಂತ್ರಿಗಳಾಗುತ್ತೇವೆ ಎಂದವು. ಇದೇ ಸಮಯದಲ್ಲಿ 'ಶುಚಿವಾಕ್' ಎಂಬ ಹಂಸವು ಹೀಗೆಂದೆತು.

**ರಾಜಾ ತ್ವಂ ಭವಿತಾ ತಾತ ಕಾಂಪಿಲ್ಯೇ ನಾತ್ರ ಸಂಶಯಃ ।**
**ಭವಿಷ್ಯತಃ ಸಖಾಯೌ ಚ ದ್ವಾವಿಮೌ ಚ ಸಚಿವೌ ತವ ॥ 38 ॥**

**ಶಪ್ತ್ವಾ ಚಾನಭಿಭಾಷ್ಯಾನ್ ತಾನ್ ಚತ್ವಾರಃ ಚಕ್ರುರಂಜಡಾಃ ।**
**ತಾನ್‌ತ್ರೀನ್ ಅಭೀಪ್ಸತೊ ರಾಜ್ಯಂ ವ್ಯಭಿಚಾರಪ್ರದರ್ಶಿತಾನ್ ॥ 39 ॥**

**ಶಪ್ತಾಃ ಖಗಾಸ್ತ್ರಯಸ್ತೇ ತು ಯೋಗಭ್ರಷ್ಟಾ ವಿಚೇತಸಃ ।**
**ತಾನಯಾಚಂತ ಚತುರಸ್ತ್ರಯಸ್ತೇ ಸಹಚಾರಿಣಃ ॥ 40 ॥**

ಈ ಮೂರೂ ಹಂಸಗಳ ವಿಚಾರವನ್ನು ಕೇಳಿ ತಿಳಿದ ಶುಚಿವಾಕ್ ಹಂಸವು ರಾಜನಾಗಿ ಬಯಸಿದ ಮೊದಲಿನ ಹಂಸವನ್ನು ಕುರಿತು ಹೇಳಿತು. ಮೂರ್ಖ ಹಂಸವೇ ! ಬ್ರಹ್ಮರ್ಷಿ ಪುತ್ರರಾದ ನಾವು ಒಂದು ಜನ್ಮದಲ್ಲಿ ಮಾಡಿದ ದುಷ್ಕರ್ಮದಿಂದ ಅನೇಕ ನೀಚ ಜನ್ಮಗಳಲ್ಲಿ ಜನ್ಮವೆತ್ತಬೇಕಾಯಿತು.

ಇನ್ನು ಮುಂದಾದರೂ ಯೋಗಾರೂಢನಾಗಿ ಬ್ರಹ್ಮಜ್ಞಾನ ಪಡೆದು, ಶ್ರೀಹರಿ ಸಾಕ್ಷತ್ಕಾರ ಪಡೆಯಬೇಕೆಂದಿದ್ದೆವು. ನಿಮಗೆ ರಾಜಮಂತ್ರಿಗಳಾಗುವಂತೆ ವಿಷಯೇಚ್ಛೆವುಂಟಾಗಿದೆ. ಅದಕ್ಕಾಗಿ ತಪಸ್ಸನ್ನೆಲ್ಲ ಧಾರೆಯೆಯಲು ಸಿದ್ಧರಾಗಿರುವಿರಿ ನಿಮಿಚ್ಛೆಯಂತೆ ಕಾಂಪಿಲ್ಯ ದೇಶದ ಮಹಾರಾಜ ಹಾಗೂ ಇವರಿಬ್ಬರೂ ಸಹಾಯಕ ಮಂತ್ರಿಗಳಾಗುವರು. ನೀವು ಸಂಸಾರ ಬಲೆಯಲ್ಲಿ ಸಿಕ್ಕಿದಿರಿ, ನಾವು ನಾಲ್ಕು ಜನರು ಪರಮಪದಕ್ಕೆ ಹೊರಟೆವು ಎಂದು ಹೇಳಿತು.

**ತಾನಯಾಚಂತ ಚತುರಸ್ತಯಸ್ತೇ ಸಹಚಾರಿಣಃ ।**
**ತೇಷಾಂ ಪ್ರಸಾದಂ ತೇ ಚಕ್ರುಃ ಅಥೈತಾನ್ ಸಮನಾಽಬ್ರವೀತ್ ॥ 41 ॥**

**ಸರ್ವೇಷಾಮೇವ ವಚನಾತ್ ಪ್ರಸಾದಾನುಗತಂ ವಚಃ ।**
**ಅಂತವಾನ್ ಭವಿತಾ ಶಾಪೋ ಯುಷ್ಮಾಕಂ ನಾತ್ರ ಸಂಶಯಃ ॥ 42 ॥**

**ಇತಶ್ಚ್ಯುತಾಶ್ಚ ಮಾನುಷ್ಯಂ ಪ್ರಾಪ್ಯ ಯೋಗಮವಾಪ್ಸ್ಯಥ ॥ 43 ॥**

ಹೀಗೆ ಹೇಳಿದ ನಾಲ್ಕು ಪಕ್ಷಿಗಳು ಉಳಿದ ಮೂವರು ಪಕ್ಷಿಗಳೊಂದಿಗೆ ಮಾತನ್ನೆ

ನಿಲ್ಲಿಸಿದವು. ಶಾಪದಿಂದಾಗಿ ಕಂಗೆಟ್ಟ ಮೂರು ಪಕ್ಷಿಗಳು ಭಯಗೊಂಡವು. ಚತುರಮತಿಗಳಾದ ಈ ಮೂವರೂ ಆ ಚತುರ್ಯೋಗಿಗಳನ್ನು ದೀನರಾಗಿ ಬೇಡಿಕೊಂಡರು. ನಮ್ಮ ತಪ್ಪನ್ನು ಮನ್ನಿಸಿ ಉದ್ಧಾರದ ಮಾರ್ಗ ತೋರಿರೆಂದು ಕೇಳಿಕೊಂಡರು. ನಮ್ಮನ್ನು ಬಿಟ್ಟು ನೀವು ಮಾತ್ರ ಹೋಗದೆ ನಮ್ಮನ್ನೂ ಕರೆದೊಯ್ಯಿರಿ ಎಂದು ಗೋಗರೆದಾಗ.

**ಸರ್ವಸತ್ವರುತಜ್ಞಾಶ್ಚ ಸ್ವತಂತ್ರೋಽಯಂ ಭವಿಷ್ಯತಿ ।**
**ಪಿತೃಪ್ರಸಾದೋ ಹ್ಯಸ್ಮಾಭಿರಸ್ಯ ಪ್ರಾಪ್ತಃ ಕೃತೇನ ವೈ ॥ 44 ॥**
**ಗಾಂ ಪ್ರೋಕ್ಷಯಿತ್ವಾ ಧರ್ಮೇಣ ಉಪಕಲ್ಪ್ಯತಾಮ್ ।**
**ಇಮಂ ಚ ವಾಕ್ಯ ಸಂದರ್ಭ ಶ್ಲೋಕಮೇಕಮುದಾಹೃತಮ್**
**ಪುರುಷಾಂತರಿತಂ ಶ್ರುತ್ವಾ ತತೋ ಯೋಗ ಮವಾಪ್ಸ್ಯಥ ॥ 45 ॥**

ಕರುಣಾಪೂರ್ಣರಾದ ನಾಲ್ವರೂ–ನಾವು ಕೊಟ್ಟಿರುವ ಶಾಪಕ್ಕೆ ಅಂತ್ಯವಿದೆ.

ನಮ್ಮ ಜೊತೆಯಲ್ಲಿದ್ದ ಈ ಸ್ವತಂತ್ರ ಹಂಸವು ರಾಜನಾದಾಗ ಅವನಿಗೆ ಸಕಲ ಪ್ರಾಣಿಗಳ ಭಾಷೆಯನ್ನರಿತಿರುತ್ತಾನೆ. ಈ ಪಿತೃವರ್ತಿಯೇ ಗೋವನ್ನು ಸಂಪ್ರೋಕ್ಷಿಸಿ ಪಿತೃಗಳಿಗೆ ಶ್ರಾದ್ಧ ಮಾಡಿರಿ ಎಂದವನು. ಇವನ ಮಾತಿನಂತೆಯೇ ನಾವೂ ನಡೆದುಕೊಂಡೆ ಪಿತ್ರನುಗ್ರಹವನ್ನು ಸಂಪಾದಿಸಿದೆವು. ಯೋಗಸಾಧನ ಫಲ ಪಡೆದವು. ಸೋದರರೇ – ನಿಮಗೆ ಒಂದು ಶ್ಲೋಕ ಹೇಳಿ ಕೊಡುತ್ತೇವೆ. ಆ ಶ್ಲೋಕವನ್ನು ಬೇರೆಯವರು ಹೇಳಿದ್ದು ಕೇಳಿದಾಗ ನಿಮಗೆ ವೈರಾಗ್ಯ ಹುಟ್ಟು ಸಕಲೈಶ್ವರ್ಯವನ್ನು ತ್ಯಜಿಸಿ ನಮ್ಮನ್ನು ಕೂಡುವಿರಿ ಎಂದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶ್ರಾದ್ಧದಿಂದ ಕೌಶಿಕರ ಬ್ರಹ್ಮಪ್ರಾಪಿವೆಂಬಲ್ಲಿ
ಇಪ್ಪತ್ತೊಂದು–ಇಪ್ಪತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 23 ಹರಿಪರ್ವ

# ಅಥ ತ್ರಯೋವಿಂಶೋऽಧ್ಯಾಯಃ

## ಬ್ರಹ್ಮದತ್ತನಾಗಿ ರಾಜನಾಗಿ ಜನನ

*ಮಾರ್ಕಂಡೇಯ ಉವಾಚ -*

**ತೇ ಯೋಗ ಧರ್ಮನಿರತಾಃ ಸಪ್ತಮಾನಸಚಾರಿಣಃ ।**

**ಪದ್ಮಗರ್ಭೋಽರವಿಂದಾಕ್ಷಃ ಕ್ಷೀರಗರ್ಭಃ ಸುಲೋಚನಃ ॥ 1 ॥**

**ಉರುಬಿಂದುಃ ಸುಬಿಂದುಶ್ಚ ಹೈಮಗರ್ಭಸ್ತು ಸಪ್ತಮಃ ।**

**ವಾಯ್ವಂಬುಭಕ್ಷಾಃ ಸತತಂ ಶರೀರಾಣ್ಯುಪಶೋಷಯನ್ ॥ 2 ॥**

ಭಗವದ್ ಯೋಗಧರ್ಮದಲ್ಲಿಯೇ ಆಸಕ್ತರಾಗಿದ್ದ ಆ ಏಳೂ ಹಂಸಗಳು ಪದ್ಮಗರ್ಭ ಅರವಿಂದಾಕ್ಷ-ಕ್ಷೀರಗರ್ಭ-ಸುಲೋಚನ-ಉರುಬಿಂದು - ಸುಬಿಂದು ಹೈಮಗರ್ಭವೆಂಬ ಹೆಸರಿನ ಆ ಏಳು ಪಕ್ಷಿಗಳೂ ವಾಯ್ವಾಹಾರ ಸೇವಿಸುತ್ತಾ ಶರೀರವನ್ನು ಒಣಗಿಸಿದರು.

ವಿಭ್ರಾಜಮಾನರಾಜನು ದೇದಿಪ್ಯಮಾನವಾದ ಕಾಂತಿಯಿಂದ ಬೆಳಗುತ್ತಾ ಅಂತಃಪುರ ಸ್ತ್ರೀಪರಿವೃತನಾಗಿ ಇಂದ್ರನಂತೆ ಸಂಚರಿಸುತ್ತಾ - ಯೋಗಧರ್ಮದಲ್ಲಿರುವ ಈ ಏಳೂ ಹಂಸಗಳನ್ನು ನೋಡಿ ಬೆರಗಾದನು. ಇಂತಹ ಚಂಚಲಯೋನಿಯಲ್ಲಿ ಹುಟ್ಟಿದರೂ ಈ ಪಕ್ಷಿಗಳು ಧ್ಯಾನ್ಯಕಲೀನ-ಮಾನಸರಾಗಿ ಮಾನಸರೋವರ ಮಧ್ಯದಲ್ಲಿ ತಪಸ್ಸನ್ನಾ-ಚರಿಸುತ್ತಿದೆ. ಮಾನುಷರಾದ ನಾವು ಆಧ್ಯಾತ್ಮ ಸಾಧನೆ ಮಾಡದೆ ಲೋಲುಪರಾಗಿದ್ದೇವೆ. ಈ ನನ್ನ ಜನ್ಮ ಈ ಹಂಸಗಳಗಿಂತ ಕಡೆಯಾಯಿತಲ್ಲ ಎಂದು ಬಹಳ ಖೇದವುಂಟಾಯಿತು.

ಹಕ್ಕಿಗಳ ಧ್ಯಾನಯೋಗ ತಪಃಸಮಾಧಿಗಳು ವಿಭ್ರಾಜಮಾನನ ಮನದಲ್ಲಿ ವೈರಾಗ್ಯ ಹುಟ್ಟಿಸಿದವು. ರಾಜಧಾನಿಗೆ ಬಂದು ತನ್ನ ಮಗನಾದ 'ಅಣುಹ' ರಾಜನಿಗೆ ಪಟ್ಟಗಟ್ಟಿ ತಪಸ್ಸಿಗಾಗಿ ಹೊರಟನು.

**ಅಣುಹೋ ನಾಮ ತಸ್ಯಾಽಽಸೀತ್ ಪುತ್ರಃ ಪರಮಧಾರ್ಮಿಕಃ ।**
**ಅಣುಧರ್ಮರತಿಃ ನಿತ್ಯಮಣುಂ ಸೋಽಧ್ಯಗಮತ್ ಪದಮ್ ॥ 3 ॥**

ವಿಭ್ರಾಜನಿಗೆ ಅಣುಹನೆಂಬ ಪರಮಧರ್ಮಿಷ್ಠ ಪುತ್ರನಿದ್ದನು. ಅಣುಧರ್ಮರತನಾಗಿದ್ದು ಸೂಕ್ಷ್ಮಾತಿ ಸೂಕ್ಷ್ಮವಸ್ತುವನ್ನು ಬಲ್ಲವನೆಂದು 'ಅಣುಹ'ವೆಂಬ ಹೆಸರನ್ನು ಸಾರ್ಥಕಗೊಳಿಸಿದ್ದನು.

### ಅಣುಹರಾಜ ಚರಿತೆ

**ಪ್ರಾದಾತ್ ಕನ್ಯಾಂ ಶುಕಸ್ತಸ್ಮೈ ಕೃತ್ವೀಂ ಪೂಜಿತ ಲಕ್ಷಣಾಮ್ ।**
**ಸತ್ಯಶೀಲಗುಣೋಪೇತಾಂ ಯೋಗಧರ್ಮರತಾಂ ಸದಾ ॥ 4 ॥**

**ಸಾ ಹ್ಯುದ್ದಿಷ್ಟಾ ಪುರಾ ಭೀಷ್ಮ ! ಪಿತೃಕನ್ಯಾ ಮನೀಷಿಣೀ ।**
**ಸನತ್ಕುಮಾರೇಣ ತದಾ ಸನ್ನಿಧೌ ಮಮ ಶೋಭನಾ ॥ 5 ॥**

ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರು ತಮ್ಮ ಮಗಳಾದ ಹಾಗೂ ಮಹಾಯೋಗ ಧರ್ಮಿಷ್ಠಳಾದ, ಸಕಲಗುಣಗಳ ಖನಿಯಂತಿರುವ 'ಕೃತ್ವೀ' ಎಂಬ ಮಗಳನ್ನು 'ಅಣುಹ' ರಾಜನಿಗೆ ಧಾರೆಯೆರೆದಿದ್ದರು. ಭೀಷ್ಮನೇ ! ಮನನಶೀಲಳಾದ ಕೃತ್ವೀಯು ಪಿತೃದೇವತೆಗಳಾದ ಬರ್ಹಿಷದರ ಮಾನಸೀ ಕನ್ಯೆ ಪೀವರೀ ಎಂಬುವಳೆಂದು ನನಗೆ ಸನತ್ಕುಮಾರರು ಹೇಳಿದ್ದರು.

ಯೋಗಪತ್ನಿಯೂ, ಯೋಗಿಮಾತೆಯೂ ಆದ ಕೃತ್ವೀಯನ್ನು ತನ್ನ ಮಗನಿಗೆ ವಿವಾಹ ಮಾಡಿಸಿ, ಪಟ್ಟಾಭಿಷೇಕಗೈದು, ಪ್ರೀತಾತ್ಮನಾಗಿ, ಬ್ರಾಹ್ಮಣರಿಂದ ಸ್ವಸ್ತಿ ಪುಣ್ಯಾಹ ನಡೆಸಿ ತಪಸ್ಸಿಗಾಗಿ ವಿಭ್ರಾಜನು ಏಳು ಪಕ್ಷಿಗಳಿದ್ದ ಮಾನಸರೋವರಕ್ಕೆ ಬಂದನು. ಅಲ್ಲಿ ನಿರಾಹಾರನಾಗಿ ವಾಯುಭಕ್ಷನಾಗಿ ಸಕಲೈಹಿಕಕಾಮನೆಯನ್ನು ತ್ಯಜಿಸಿ ಉಗ್ರ ತಪಸ್ಸನ್ನಾಚರಿಸಿದನು.

### ಪಕ್ಷಿಪುತ್ರನಾಗುವ ವಿಭ್ರಾಜನ ಹಂಬಲ

**ತಸ್ಯ ಸಂಕಲ್ಪ ಆಸೀಚ್ಚ ತೇಷಾಮೇಕತರಸ್ಯ ವೈ ।**
**ಪುತ್ರತ್ವಂ ಪ್ರಾಪ್ಯ ಯೋಗೇನ ಯುಜ್ಯೇಯಮಿತಿ ಭಾರತ ॥ 6 ॥**

**ತತೋ ವಿಭ್ರಾಜಿತಂ ತೇನ ವೈಭ್ರಾಜಂ ನಾಮ ತದ್ವನಮ್ ।**
**ಸರಸ್ತಚ್ಚ ಕುರುಶ್ರೇಷ್ಠ ವೈಭ್ರಾಜಮಿತಿ ಸಂಜ್ಞಿತಮ್ ॥ 7 ॥**

ಯೋಗಧರ್ಮದಲ್ಲಿರುವ ಈ ಏಳು ಪಕ್ಷಿಗಳಲ್ಲಿ ಯಾವುದಾದರೊಂದು ಪಕ್ಷಿಗೆ ನಾನು ಪುತ್ರನಾಗಿ ಹುಟ್ಟಿದರೆ ನಾನೂ ಸಹ ಯೋಗಿಯಾಗಬಹುದು ಎಂಬ ಮನಸ್ಸಂಕಲ್ಪವುಂಟಾಯಿತು. ಹೀಗೆ ಸಂಕಲ್ಪಿಸಿ ಘೋರವಾದ ತಪಸ್ಸನ್ನು ಮಾಡುತ್ತಾ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು. ತನ್ನ ತಪಸ್ಸಿನಿಂದ ಆ ಅರಣ್ಯವನ್ನೇ ಬೆಳಗಿಸುತ್ತಾ ವೈಭ್ರಾಜವನವೆಂದೂ, ಅಲ್ಲಿರುವ ಸರೋವರವು ವೈಭ್ರಾಜ ಸರೋವರವೆಂಬ ಹೆಸರನ್ನು ಪಡೆಯಿತು.

**ತತ್ರ ತೇ ಶಕುನಾ ರಾಜನ್ ಚತ್ವಾರೋ ಯೋಗಧರ್ಮಿಣಃ ।**
**ಯೋಗಭ್ರಷ್ಟಾಃ ತ್ರಯಶ್ಚೈವ ದೇಹನ್ಯಾಸಕೃತೋಽಭವನ್ ॥ 8 ॥**
**ಕಾಂಪಿಲ್ಯೇ ನಗರೇ ತೇ ತು ಬ್ರಹ್ಮದತ್ತ ಪುರೋಗಮಾಃ ।**
**ಜಾತಾಃ ಸಪ್ತ ಮಹಾತ್ಮಾನಃ ಸರ್ವೇ ವಿಗತಕಲ್ಮಷಾಃ ॥ 9 ॥**
**ಸ್ಮೃತಿಮಂತೋಽತ್ರ ಚತ್ವಾರಃ ತ್ರಯಸ್ತು ಪರಿಮೋಹಿತಾಃ ॥ 10 ॥**

ಈ ಏಳು ಹಂಸಪಕ್ಷಿಗಳು ಕಾಂಪಿಲ್ಯನಗರದಲ್ಲಿ ಮನುಷ್ಯ ಜನ್ಮ ಪಡೆದವು. ಬ್ರಹ್ಮದತ್ತನೆ ಮೊದಲಾದ ಹೆಸರುಗಳನ್ನು ಪಡೆದಿದ್ದರು. ಇವರೆಲ್ಲರೂ ಮಹಾನುಭಾವರೂ ಪಾಪಲೇಪರಹಿತೂ ಆಗಿದ್ದು ಜ್ಞಾನಾರ್ಜನೆ, ಧ್ಯಾನ, ತಪಸ್ಸು, ಅರ್ಚನೆಗಳಲ್ಲಿ ನಿರತರಾಗಿದ್ದರು. ವೇದ-ವೇದಾಂತಸಾರವನ್ನು ನೋಡಿದವರಾಗಿದ್ದರು.

ಇವರಲ್ಲಿ ನಾಲ್ವರಿಗೆ ಹಿಂದಿನ ಜನ್ಮಗಳ ಸ್ಮರಣೆಯಿತ್ತು. ಉಳಿದ ಮೂವರೂ ಶಾಪದಿಂದಾಗಿ ಹಿಂದಿನ ಜನ್ಮದ ಸ್ಮರಣೆಯಿದ್ದಿಲ್ಲ.

### ಪ್ರಾಣಿಪಕ್ಷಿ ಭಾಷೆಯರಿತ ಬ್ರಹ್ಮದತ್ತ

ಸ್ವತಂತ್ರವೆಂಬ ಹಂಸವು ತನ್ನಿಚ್ಛೆಯಂತೆ ಅಣುಹನ ಮಗನಾಗಿ ಬ್ರಹ್ಮದತ್ತ ನಾಮಧೇಯದಿಂದ ಹುಟ್ಟಿದನು. ತಂದೆಯ ನಂತರ ಇವನೇ ಪಾಂಚಾಲಾಧಿಪತಿಯಾದನು. ಮಂತ್ರಿಯಾಗಲು ಇಚ್ಛಿಸಿದ ಇನ್ನೆರಡು ಚಕ್ರವಾಕಗಳು ಮಂತ್ರಿಯ ಪುತ್ರರಾಗಿ ಹುಟ್ಟಿ, ತಂದೆಯ ನಂತರ ಪುಂಡರೀಕ-ಸುಬಾಲಕರೆಂಬ ಅವರಿಬ್ಬರೂ ಬ್ರಹ್ಮದತ್ತನಿಗೆ ಮಂತ್ರಿಗಳಾದರು. ಬ್ರಹ್ಮದತ್ತನು

ಜನ್ಮಾಂತರದಲ್ಲಿ ಮಾಡಿದ ಶ್ರಾದ್ಧದ ಪುಣ್ಯದಿಂದಲೂ ಪಿತೃಗಳ ಮೇಲಿನ ಭಕ್ತಿಯಿಂದಲೂ ಯೋಗಶಾಸ್ತ್ರದಲ್ಲಿ ಪ್ರವೀಣನಾಗಿದ್ದನು. ಬ್ರಹ್ಮದತ್ತನಿಗೆ ಪಶು-ಪಕ್ಷಿ, ಕ್ರಿಮಿ-ಕೀಟಗಳ ಮನಸ್ಸಿನ ಭಾವವನ್ನು ಭಾಷೆಯನ್ನು ಅರಿಯುವ ಸಾಮರ್ಥ್ಯ ಹೊಂದಿದ್ದನು.

ಛಿದ್ರದರ್ಶಿ-ಸುನೇತ್ರರೆಂಬ ಹೆಸರಿನ ಹಂಸಗಳು ವೇದವೇದಾಂಗ ಪಾರಂಗತರಾಗಿ ರಾಜನ ಮಂತ್ರಿಗಳಾದರು. ಬಾಭ್ರವ್ಯ ಹಾಗೂ ವತ್ಸರೆಂಬ ನಾಮ ಹೊಂದಿದ್ದರು. ಹಿಂದೆ ಸ್ವತಂತ್ರನ ಜೊತೆಗಿದ್ದಂತೆ ಈಗಲೂ ಬ್ರಹ್ಮದತ್ತನಾದಾಗಲೂ ಅನುಯಾಯಿಗಳಾದರು.

ವಾಗ್ದುಷ್ಟರೆ ಮೊದಲಾದ ತನ್ನ ಸೋದರರಲ್ಲಿ ಐದನೆಯವನಾದ ಕವಿಯು ಪಾಂಚಿಕನೆನಿಸಿದ್ದನು. ಅವನೇ ಏಳನೆಯ ಜನ್ಮದಲ್ಲಿ ಮಂತ್ರಿಪುತ್ರನಾಗಿ ಹುಟ್ಟಿ ಪಾಂಚಾಲನೆಂಬ ಶ್ರೋತ್ರಿಯನಾಗಿದ್ದನು. ಖಸೃಮನಾದರೂ ವತ್ಸನೆಂಬ ಮಂತ್ರಿಗೆ ಮಗನಾಗಿ ಕಂಡರೀಕನೆಂಬ ಹೆಸರಿನಿಂದ ಪ್ರಖ್ಯಾತನಾದನು.

**ಪಾಂಚಾಲೋ ಬಹ್ವೃಚಸ್ತ್ವಾಸೀದ್ ಆಚಾರ್ಯತ್ವಂ ಚಕಾರ ಹ ।**
**ದ್ವಿವೇದಃ ಕಂಡರೀಕಸ್ತು ಛಂದೋಗೋಽಧ್ವರ್ಯುರೇವ ಚ ॥ 11 ॥**

**ಬ್ರಹ್ಮದತ್ತಸ್ಯ ಭಾರ್ಯಾ ತು ದೇವಲಸ್ಯಾತ್ಮಜಾಽಭವತ್ ।**
**ಅಸಿತಸ್ಯ ಹಿ ದುಧರ್ಷಾಂ ಸನ್ನತಿರ್ನಾಮ ನಾಮತಃ ॥ 12 ॥**

ಪಾಂಚಾಲ ಮತ್ತು ಕಂಡರೀಕರಲ್ಲಿ ಪಾಂಚಾಲನು ಋಗ್ವೇದಿಯಾಗಿದ್ದು ಆಚಾರ್ಯತ್ವವನ್ನೂ ಪೌರೋಹಿತ್ಯವನ್ನು ಮಾಡುತ್ತಿದ್ದನು. ಕಂಡರೀಕನು ಯಜುರ್ವೇದ ಹಾಗೂ ಸಾಮವೇದವನ್ನು ಅಧ್ಯಯನ ಮಾಡಿ 'ದ್ವಿವೇದೀ' ಎನಿಸಿದ್ದನು. ಸಾಮಗಾಯಕನಾಗಿ ಉದ್ಗಾತೃವೂ ಅಧ್ವರ್ಯವೂ ಆಗಿದ್ದನು. ಬ್ರಹ್ಮದತ್ತನಿಗೆ ಕ್ರಮೇಣ ಇವರಲ್ಲಿ ಸಖ್ಯವುಂಟಾಯಿತು. ಈ ಮೂವರೂ ಗೃಹಸ್ಥಧರ್ಮಾನುಸಕ್ತರಾಗಿದ್ದು ಕಾಮಪ್ರೇಮಗಳಿಗೆ ಆಸ್ಪದ ಎತ್ತಿದ್ದರು. ಅಣುಹನು ಬ್ರಹ್ಮದತ್ತನಿಗೆ ಪಟ್ಟಕಟ್ಟಿದ ಮೇಲೆ ದೇವಲ ಅಥವಾ ಅಸಿತರೆಂಬ ನಾಮವುಳ್ಳ ಸುದೇವನ ಮಗಳಾದ 'ಸನ್ನತಿ'ಯೆಂಬ ಕನ್ಯೆಯನ್ನು ವಿವಾಹ ಮಾಡಿಕೊಂಡಿದ್ದನು.

ಸನ್ನತಿಯಾದರೂ ಹಿಂದೆ ಬ್ರಾಹ್ಮಣರಾಗಿದ್ದಾಗ ಏಳೂ ಜನರೂ ಕೊಂದು ತಿಂದ ಕಪಿಲೆಗೋವೇ ಸನ್ನತಿಯೆಂಬ ಹೆಸರಿನಿಂದ ರಾಜಮಹಿಷಿಯಾಗಿದ್ದಳು.

ಪಿತೃಕಾರ್ಯಕ್ಕಾಗಿ ಆ ಹಸುವನ್ನು ಉಪಯೋಗಿಸಿದ್ದ ಪುಣ್ಯದಿಂದಾಗಿ ಈ ಮಾನವ ಜನ್ಮದಲ್ಲಿ ಮಹಾರಾಣಿಯಾಗಿದ್ದಳು. ಇದರಿಂದಾಗಿಯೇ ಮಹಾ ಬ್ರಹ್ಮವಾದಿನಿಯಾಗಿದ್ದಳು.

**ಪಂಚಮಃ ಪಾಂಚಿಕಸ್ತತ್ರ ಸಪ್ತಜಾತಿಷು ಭಾರತ ।**
**ಷಷ್ಠಸ್ತು ಕಂಡರೀಕೋಽಭೂತ್ ಬ್ರಹ್ಮದತ್ತಸ್ತು ಸಪ್ತಮಃ ॥ 13 ॥**
**ಶೇಷಾಃ ವಿಹಂಗಮಾಃ ಯೇ ವೈ ಕಾಂಪಿಲ್ಯೇ ಸಹಚಾರಿಣಃ ।**
**ತೇ ಜಾತಾಃ ಶ್ರೋತ್ರಿಯಕುಲೇ ಸುದರಿದ್ರೇ ಸಹೋದರಾಃ ॥ 14 ॥**

ಏಳನೆಯ ಜನ್ಮದಲ್ಲಿ ಐದನೆಯವನಾದ ಕವಿಯು 'ಪಾಂಚಿಕ'ನೆನಿಸಿದನು. ಆರನೆಯ ಖಸೃಮನು 'ಕಂಡರೀಕ'ನಾದನು. ಏಳನೆಯ ಪಿತೃವರ್ತಿಯು ಬ್ರಹ್ಮದತ್ತನಾದನು. ಉಳಿದ ನಾಲ್ಕು ಹಂಸಗಳು ಕಾಂಪಿಲ್ಯ ನಗರದ ದಟ್ಟ ದರಿದ್ರ ಶ್ರೋತ್ರಿಯ ಬ್ರಾಹ್ಮಣನ ಮನೆಯಲ್ಲಿ ಸಹೋದರರಾಗಿ ಹುಟ್ಟಿದರು.

ಇವರ ನಾಮಗಳು ಧೃತಿಮಾನ್, ಸುಮನಸ್, ವಿದ್ವಾನ್, ತತ್ವದರ್ಶೀ-ಯೆಂದಾಗಿತ್ತು. ಅವರು ವೇದಾಧ್ಯಯನ ಸಂಪನ್ನರಾಗಿದ್ದರು. ಈ ಮೂವರು ಸೋದರರು ಮಾಡುವ ತಪ್ಪುಗಳನ್ನೂ ನೋಡುತ್ತಿದ್ದರು. ಈ ನಾಲ್ವರಿಗೂ ವೈರಾಗ್ಯಬುದ್ಧಿ ನಿಶ್ಚಲವಾಗಿ ಬಂದಿತ್ತು. ಯೋಗ ನಿರತರಾದ್ದರಿಂದ ಮನೆಬಿಟ್ಟು ಹೊರಡಲುದ್ಯುಕ್ತರಾದರು.

### ತಪಸ್ಸಿಗೆ ಹೊರಟ ಪುತ್ರರಿಗೆ ತಂದೆಯ ಆಕ್ಷೇಪ

**ಆಮಂತ್ರ್ಯ ಪಿತರಂ ತಾತ! ಪಿತಾ ತಾನ್ ಅಬ್ರವೀತ್ ತದಾ ।**
**ಅಧರ್ಮ ಏಷ ಯುಷ್ಮಾಕಂ ಯನ್ ಮಾಂ ತ್ಯಕ್ತ್ವಾ ಗಮಿಷ್ಯಥ ॥ 15 ॥**
**ದಾರಿದ್ರ್ಯಮಪಾಕೃತ್ಯ ಪುತ್ರಾರ್ಥಾಂಶ್ಚೈವ ಪುಷ್ಕಲಾನ್ ।**
**ಶುಶ್ರೂಷಾಮಪ್ರಯುಜ್ಯೈವ ಕಥಂ ವೈ ಗಂತುಮರ್ಹಥ ॥ 16 ॥**

ತಪಸ್ಸಿಗಾಗಿ ಹೊರಟ ನಾಲ್ಕು ಮಕ್ಕಳು ತಂದೆಯ ಅನುಮತಿ ಪಡೆಯಲು ಹೋದಾಗ ತಂದೆಯು- ವೃದ್ಧನಾದ ನನ್ನನ್ನು ಈ ವಯಸ್ಸಿನಲ್ಲಿ ಬಿಟ್ಟು ಹೋಗುವುದು ನಿಮ್ಮಂತಹ ಶಾಸ್ತ್ರವೇತ್ತರಿಗೆ ಸಾಧುವಲ್ಲವು. ದಾರಿದ್ರ್ಯದಿಂದ ಬಳಲುತ್ತಿರುವ ನನ್ನ ದಾರಿದ್ರ್ಯವನ್ನು ದೂರ ಮಾಡದೆ ಮಕ್ಕಳಿಂದ ಪಡೆಯಬಹುದಾದ ಬಹೂಪಕಾರವನ್ನು ಪಡೆಯಲು ಅವಕಾಶವನ್ನು

ಕಲ್ಪಿಸದೇ, ಪಿತೃಶುಶ್ರೂಷೆಯನ್ನು ಮಾಡದೆ ನೀವಾದರೂ ಹೇಗೆ ತಾನೇ ನನ್ನ ಬಿಟ್ಟು ಹೋಗುವಿರಿ ಎಂದನು.

### ಶ್ಲೋಕ ಶ್ರವಣದಿಂದ ಅಕ್ಷರಕ್ಕೆ ಲಕ್ಷ

**ಕರಿಷ್ಯಾಮೋ ವಿಧಾನಂ ತೇ ಯೇನ ತ್ವಂ ವರ್ತಯಿಷ್ಯಸಿ ।**
**ಇಮಂ ಶ್ಲೋಕಂ ಮಹಾರ್ಥಂ ತ್ವಂ ರಾಜಾನಂ ಸಹಮಂತ್ರಿಣಮ್ ॥ 17 ॥**

**ಶ್ರಾವಯೇಥಾಃ ಸಮಾಗಮ್ಯ ಬ್ರಹ್ಮದತ್ತಮಕಲ್ಮಷಮ್ ।**
**ಪ್ರೀತಾತ್ಮಾ ದಾಸ್ಯತಿ ಸ ತೇ ಗ್ರಾಮಾನ್ ಭೋಗಾಂಶ್ಚ ಪುಷ್ಕಲಾನ್ ॥ 18 ॥**

ತಂದೆಯ ಮಾತಿಗೆ ನಾಲ್ವರು ಪುತ್ರರು ಹೀಗೆಂದರು – ತಂದೆಯೇ ! ನಿನಗೆ ಸುಖವಾಗಿ ಜೀವಿಸುವ ವಿಧಾನವನ್ನು ತಿಳಸುವೆವು! ಈ ದೇಶದ ರಾಜನಾದ ಬ್ರಹ್ಮದತ್ತನು ತನ್ನ ಮಂತ್ರಿಗಳೊಂದಿಗೆ ಇರುವಾಗ ನಾವು ಹೇಳಿಕೊಡುವ ಶ್ಲೋಕವನ್ನು ಅವರು ಕೇಳುವಂತೆ ಪಠಿಸು ಇದರಿಂದಾಗಿ ರಾಜನು ಒಂದೊಂದಕ್ಷರಕ್ಕೆ ಲಕ್ಷ ಲಕ್ಷದಂತೆ ಗ್ರಾಮಾದಿ ಧನಗಳನ್ನು ನಿನಗೆ ನೀಡುವನು. ಶ್ಲೋಕದಿಂದ ನಿನಗೆ ಬೇಕಾದ ಅಭೀಷ್ಟವೆಲ್ಲ ನೆರವೇರುತ್ತದೆ ಎಂದರು.

**ಏತಾವದುಕ್ತ್ವಾ ತೇ ಸರ್ವೇ ಪೂಜಯಿತ್ವಾ ಚ ತಂ ಗುರುಮ್ ।**
**ಯೋಗ ಧರ್ಮಮನು ಪ್ರಾಪ್ಯ ಪರಾಂ ನಿರ್ವೃತಿಮಾಯಯುಃ ॥ 19 ॥**

ಹೀಗೆ ತಂದೆಗೆ ನಾಲ್ವರೂ ಶ್ಲೋಕವನ್ನು ಹೇಳಿಕೊಟ್ಟು ಹರಿಯಲ್ಲಿ ಮನಃ ಪ್ರಣಿಧಾನವೆಂಬ ಯೋಗಾಸಕ್ತರಾಗಿ ಮನೆಯಿಂದ ಹೊರಟು ಸಿದ್ಧಿ ಹೊಂದಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಬ್ರಹ್ಮದತ್ತನಾಗಿ ರಾಜನಾಗಿ ಜನನವೆಂಬಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 24 ಹರಿಪರ್ವ

# ಅಥ ಚತುರ್ವಿಂಶೋಽಧ್ಯಾಯಃ

## ಶ್ಲೋಕೈಕಶ್ರವಣದಿಂದ ವೈರಾಗ್ಯ

*ಮಾರ್ಕಂಡೇಯ ಉವಾಚ –*

**ಬ್ರಹ್ಮದತ್ತಸ್ಯ ತನಯಃ ಸ ವಿಭ್ರಾಜಸ್ತ್ವಜಾಯತ ।**
**ಯೋಗಾತ್ಮಾ ತಪಸಾ ಯುಕ್ತೋ ವಿಷ್ವಕ್ಸೇನ ಇತಿ ಶ್ರುತಃ ॥ 1 ॥**

**ಕದಾಚಿತ್ ಬ್ರಹ್ಮದತ್ತಸ್ತು ಭಾರ್ಯಯಾ ಸಹಿತೋ ವನೇ ।**
**ವಿಜಹಾರ ಪ್ರಹೃಷ್ಟಾತ್ಮಾ ಯಥಾ ಶಚ್ಯಾ ಶಚೀಪತಿಃ ॥ 2 ॥**

**ತತಃ ಪಿಪೀಲಿಕಾರುತಂ ಸ ಶುಶ್ರಾವ ನರಾಧಿಪಃ ।**
**ಕಾಮಿನೀಂ ಕಾಮಿನಸ್ತಸ್ಯ ಯಾಚತಃ ಕ್ರೋಶತೋ ಭೃಶಮ್ ॥ 3 ॥**

**ಬ್ರಹ್ಮದತ್ತೋ ಮಹಾಹಾಸಮಕಸ್ಮಾದೇವ ಚಾಹಸತ್ ॥ 4 ॥**

ಹಂಸಪಕ್ಷಿಗಳನ್ನು ನೋಡಿ ಯಾವನ ಮನಸ್ಸಿನಲ್ಲಿ ಯೋಗ ಸಾಧನ ಮಾಡಬೇಕೆಂದು ಬಯಸಿದ್ದನೋ ಆ ವಿಭ್ರಾಜರಾಜನೇ ಬ್ರಹ್ಮದತ್ತ ಪುತ್ರನಾಗಿ ಹುಟ್ಟಿ ವಿಷ್ವಕ್ಸೇನ ಎನಿಸಿದ.

ಒಂದು ದಿನ ಬ್ರಹ್ಮದತ್ತನು ತನ್ನ ಮೆಚ್ಚಿನ ಮಡದಿ ಸನ್ನತಿಯ ಜೊತೆಗೆ ವಿಹಾರಕ್ಕಾಗಿ ಉದ್ಯಾನ ವನಕ್ಕೆ ಹೋಗಿದ್ದ. ಅಲ್ಲಿ ಒಂದು ಜೋಡಿ ಇರುವೆ ದಂಪತಿಗಳ ಪ್ರೇಮಕಲಹವನ್ನು ವೀಕ್ಷಿಸಿದನು. ಹೆಣ್ಣು ಇರುವೆ ಗಂಡು ಇರುವೆಯ ಮೇಲೆ ಯಾವುದೋ ಕಾರಣಕ್ಕಾಗಿ ಕೋಪಗೊಂಡಿತ್ತು. ಕಾಮಮೋಹಿತವಾದ ಗಂಡಿರುವೆಯು ಅದನ್ನು ತನ್ನೆಡೆಗೆ ಒಲಿಸಿಕೊಳ್ಳಲು ಹಂಬಲಿಸುತ್ತಿತ್ತು. ಕಾಮಾತುರ ಗಂಡಿರುವೆಯು – ಸುಂದರಿ ! ಇಂದು

ನೀನು ನನ್ನ ಮೇಲೆ ಮುನಿಸುಗೊಂಡಿರುವೆ. ನಿನ್ನಂತಹ ಚೆಲುವೆಯನ್ನು ನಾನು ಎಲ್ಲೂ ನೋಡಿಲ್ಲ. ಸಣ್ಣ ನಡು, ಚಿನ್ನದ ಬಾಯಿ, ಸುಂದರ ಮುಖದಲ್ಲಿ ಮೋಹಕ ನಗು ಉತ್ತಮಸ್ತ್ರೀಯ ಲಕ್ಷಣವೆಲ್ಲ ನಿನ್ನಲ್ಲಿದೆ. ಇತ್ಯಾದಿ ಮಾತುಗಳಿಂದ ಒಲಿಸುತ್ತಿತ್ತು. ಇವೆರಡರ ಪ್ರೇಮಾಲಾಪ ನೋಡಿ ಬ್ರಹ್ಮದತ್ತನಿಗೆ ಸಕಲ ಪ್ರಾಣಿಗಳ ಭಾಷೆ ಅರ್ಥವಾಗುತ್ತಿದ್ದರಿಂದ ಬ್ರಹ್ಮದತ್ತ ಜೋರಾಗಿ ನಕ್ಕುಬಿಟ್ಟನು. ಒಂದೇ ಬಾರಿ ಆಕಸ್ಮಿಕವಾಗಿ ಜೋರಾಗಿ ನಕ್ಕಿದ್ದನ್ನು ನೋಡಿ ರಾಣಿಗೆ ಆಶ್ಚರ್ಯವಾಯಿತು.

**ತತಃ ಸಾ ಸನ್ನತಿರ್ದೀನಾ ವ್ರೀಡಿತೇವಾಭವತ್ ತದಾ ।**
**ನಿರಾಹಾರಾ ಬಹುತಿಥಂ ಬಭೂವ ವರವರ್ಣಿನೀ ॥ 5 ॥**

**ತ್ವಯಾ ಚ ಹಸಿತಾ ರಾಜನ್ ನಾಹಂ ಜೀವಿತುಮುತ್ಸಹೇ ।**
**ಉವಾಚ ಚೈನಂ ಕುಪಿತಾ ನೈಷ ಭಾವೋಽಸ್ತಿ ಮಾನುಷೇ ॥ 6 ॥**

**ಕೋ ವಾ ಪಿಪೀಲಿಕಾರುತಂ ಮಾನುಷೋ ವೇತ್ತುಮರ್ಹತಿ ॥ 7 ॥**

**ಯದ್ಯೇಷ ವೈ ಪ್ರಭಾವಸ್ತೇ ಸರ್ವಸತ್ವರುತಜ್ಞತಾ ।**
**ಯಥಾಹಮೇತದ್ ಜಾನೀಯಾಂ ತಥಾ ಪ್ರತ್ಯಾಯಯ ಸ್ವ ಮಾಮ್ ॥8 ॥**

ಬ್ರಹ್ಮದತ್ತನು ಹೀಗೆ ನಕ್ಕಿದ್ದನ್ನು ನೋಡಿ ಸನ್ನತಿಯು –ಹೀಗೇಕೆ ನಗುತ್ತಿರುವಿರಿ? ರಾಣಿಗೆ ಏನೂ ಉತ್ತರ ಕೊಡದೆ ಮತ್ತಷ್ಟು ನಗು ಹೆಚ್ಚಾಯಿತು ಹೊರತು ಉತ್ತರ ಹೇಳುವಂತಿರಲಿಲ್ಲ. ರಾಣಿಗೆ ಬಹಳ ಅವಮಾನವೆನ್ನಿಸಿತು. ಸುತ್ತಲೂ ಕಣ್ಣನ್ನು ಹಾಯಿಸಿದರೂ ನಗಲು ಯಾವುದೇ ವಸ್ತು ಕಾಣಲಿಲ್ಲ. ಇದರಿಂದಾಗಿ ತನ್ನನ್ನೇ ನೋಡಿ ನಗುತ್ತಿರುವನೆಂದು ನಿಶ್ಚೈಯಿಸಿದಳು.

ನೀವೇಕೆ ನಗುತ್ತಿರುವಿರಿ ಹೇಳಿ ಎಂದಳು. ರಾಜನಿಗೆ ಇವಳು ಕೋಪಗೊಂಡಿದ್ದಾಳೆಂದು ತಿಳಿದು ಸಮಾಧಾನಿಸುತ್ತಾ ನಾನು ನಕ್ಕರೆ ಇಷ್ಟು ಕೋಪವೇತಕೆ? ನಗು ಬಂತು ನಕ್ಕೆ ಅಷ್ಟೆ ಎಂದ. ನೀವು ನನ್ನ ಮುಖ ನೋಡಿಯೇ ನಕ್ಕಿದ್ದೀರಿ. ನಿಮ್ಮಿಂದ ಅವಮಾನಿಸಿಕೊಂಡು ಬದುಕಿರುವುದಕ್ಕಿಂತ ಸಾಯುವುದೇ ಮೇಲು ಎಂದು ಅತ್ತಳು. ರಾಜನ ಮನಸ್ಸಿಗೆ ಬಹಳ ದುಃಖವಾಯಿತು.

ರಾಣಿ ! ನಿಜವನ್ನು ಹೇಳಬೇಕೆಂದರೆ ನಾನು ಇರುವೆ ದಂಪತಿಗಳ

ಮಾತುಗಳನ್ನು ಕೇಳ ನಕ್ಕಿದ್ದು. ಗಂಡು ಹೆಣ್ಣಿರವೆಯ ಪಾದಗಳಿಗೆ ಬಿದ್ದು ತನ್ನ ಪ್ರಣಯಕ್ಕಾಗಿ ಬೇಡುತ್ತಿತ್ತು. ಇದನ್ನು ನೋಡಿ ಮನುಷ್ಯರಲ್ಲಿ ಮಾತ್ರವಲ್ಲ. ಪ್ರಾಣಿಗಳಲ್ಲಿಯೂ ಇದೇ ಗೋಳು ಎಂದು ನಗು ಬಂದಿತಷ್ಟೆ. ಬೇಜಾರಾಗಬೇಡ.

ನನ್ನನ್ನು ವಂಚಿಸಬೇಡಿ. ನಾನು ಅನೇಕ ಪಂಡಿತರನ್ನು ಕಂಡಿದ್ದೇನೆ. ಪ್ರಾಣಿಗಳ ಭಾಷೆಯನ್ನು ತಿಳಯುವ ಶಕ್ತಿಯು ಮಾನವನಿಗಿರುವುದಿಲ್ಲ. ಇದು ನನಗೆ ಚೆನ್ನಾಗಿ ತಿಳದಿದೆ. ದೇವತೆಗಳ ಅನುಗ್ರಹವಾಗಲೀ, ಹಿಂದಿನ ಜನ್ಮದ ಪುಣ್ಯ ವಿಶೇಷದಿರಿದಾಗಲೀ. ತಪಸ್ಸು. ವಿದ್ಯೆಯಿಂದಾಗಲೀ ಸಾಧ್ಯವಾಗಬಹುದೆ ಹೊರತು ಸಾಮಾನ್ಯರಿಗೆ ಪ್ರಾಣಿಗಳ ಭಾಷೆ ತಿಳಯಲು ಸಾಧ್ಯವೇ ಇಲ್ಲ.

ನಿಮಗೂ ಸಹ ಅಂತಹ ಅಪೂರ್ವ ಪಕ್ಷಿಪ್ರಾಣಿಗಳ ಭಾಷೆ ತಿಳಯುವುದಾಗಿದ್ದಲ್ಲಿ ಅದನ್ನು ನನಗೂ ಹೇಳಕೊಡಿ ಹಾಗಿಲ್ಲವಾದಲ್ಲಿ ನನ್ನ ಅವಮಾನಕ್ಕೆಂದೆ ನಕ್ಕಿದ್ದೀರಿ ಎಂದು ತೀರ್ಮಾನಿಸಿ ನಾನು ಪ್ರಾಣ ಬಿಡುವುದು ಖಂಡಿತಾ ಎಂದಳು.

**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ**

**ತತ್‌ತಸ್ಯಾಃ ವಚನಂ ಶ್ರುತ್ವಾ ಮಹಿಷ್ಯಾಃ ಪರುಷಾಕ್ಷರಮ್ ।**
**ಸ ರಾಜಾ ಪರಮಾಪನ್ನೋ ದೇವಶ್ರೇಷ್ಠಮಗಾತ್ ತತಃ ॥ 9 ॥**
**ಶರಣ್ಯಂ ಸರ್ವಭೂತೇಶಂ ಭಕ್ತ್ಯಾ ನಾರಾಯಣಂ ಹರಿಮ್ ॥ 10 ॥**
**ಸಮಾಹಿತೋ ಷಡ್ ರಾತ್ರೇಣ ನಿರಾಹಾರಃ ಮಹಾಯಶಾಃ ।**
**ದದರ್ಶ ದರ್ಶನೇ ರಾಜಾ ದೇವಂ ನಾರಾಯಣಂ ಪ್ರಭುಮ್ ॥ 11 ॥**

ರಾಜನಿಗೆ ಈ ಘಟನೆಯಿಂದಾಗಿ ಬಹಳ ಖೇದವುಂಟಾಯಿತು. ಬೇಸರ ಕಳೆಯಲು ಉದ್ಯಾನಕ್ಕೆ ಹೋಗಿ ಮಹಾಬೇಸರ ಬರುವಂತಾಯಿತು. ಅರಮನೆಗೆ ಬಂದ ಮೇಲೂ ರಾಣಿ ತನ್ನ ನಿಲುವನ್ನು ಬದಲಾಯಿಸಲ್ಲಿಲ್ಲ. ಮಹಾಚಂಡಿ ಹಿಡಿದು ಕುಳತಳು. ರಾಣೀವಾಸದ ಶೃಂಗಾರ ಸರಸಗಳೆಲ್ಲ ಮಾಯವಾಗಿ ಸ್ಮಶಾನಭೂಮಿಯಂತಾಯಿತು. ಪುನಃ ಮೊದಲಿನ ಸ್ಥಿತಿ ತರಲು ಮಾಡಿದ ರಾಜನ ಪ್ರಯತ್ನಗಳೆಲ್ಲ ವ್ಯರ್ಥವಾದವು.

ರಾಜನು ಮಾಡಿದ ಪ್ರಯತ್ನಗಳೆಲ್ಲ ಮಣ್ಣುಗೂಡಿದ್ದನ್ನು ನೋಡಿ ನಿಜವಾದ ವೈರಾಗ್ಯವೆ ಮೂಡಿತ್ತು. ಈ ಹೆಮ್ಮಾರಿಯನ್ನು ಒಲಿಸುವ ಬದಲು ಮುರಾರಿಯನ್ನು ಒಲಿಸಿದ್ದರೆ ಅವನನ್ನೆ ಸಾಕ್ಷಾತ್ಕರಿಸಿಕೊಳ್ಳಬಹುದಿತ್ತು.

ಈ ನನ್ನ ಸ್ತ್ರೈಣಬುದ್ಧಿಗೆ ಧಿಕ್ಕಾರವಿರಲಿ ! ಎಂದು ಒಮ್ಮಿಂದೊಮ್ಮೆ ರಾಜ್ಯಕೋಶಾಗಾರ ಹೆಂಡತಿಯನ್ನು ತ್ಯಜಿಸಿ ತಪಸ್ಸಿಗಾಗಿ ಅರಣ್ಯಕ್ಕೆ ಬಂದನು. ಘೋರಾರಣ್ಯದಲ್ಲಿ ಘೋರತಪಸ್ಸನ್ನು ಒಂಟಿಗಾಲಿನಲ್ಲಿ ನಿಂತು ಮಾಡಿದ. ಇವನ ತಪಸ್ಸು ಅಖಂಡ ಆರು ದಿನ ಸಾಗಿತ್ತು. ದಯಾಮಯ ಅವನ ಮುಂದೆ ಮೈದೋರಿ ನಿಂತ.

ಭಗವಂತನ ದರ್ಶನದ ಮುಂದೆ ಯಾವುದೂ ಇಲ್ಲದಾಯಿತು. ಮನಸ್ಸಿನ ಕೋಪತಾಪಗಳೆಲ್ಲ ಮಾಯವಾಗಿ ಮನಸ್ಸು ತಿಳಿಯಾಯಿತು. ಹೆಂಡತಿಯ ಮೇಲೆ ಕೋಪ ಹೋಗಿ ಅವಳು ಮಹೋಪಕಾರವನ್ನೆ ಮಾಡಿದಳೆಂದು ಉದ್ಗರಿಸಿದ.

### ಭಗವಂತನ ನಲ್ನುಡಿ

**ಉವಾಚ ಚೈನಂ ಭಗವಾನ್ ಸರ್ವಭೂತಾನುಕಂಪಕಃ ।**
**ಬ್ರಹ್ಮದತ್ತ! ಪ್ರಭಾತೇ ತ್ವಂ ಕಲ್ಯಾಣಂ ಸಮವಾಪ್ಸ್ಯಸಿ ॥ 11 ॥**

ಸರ್ವಪ್ರಾಣಿ ಹಿತಚಿಂತಕನಾದ ನಾರಾಯಣನು – ರಾಜನಿಗೆ, ಬ್ರಹ್ಮದತ್ತನೇ! ನಾಳೆ ಬೆಳಗಾಗುತ್ತಲೇ ಕಲ್ಯಾಣವನ್ನು ಹೊಂದುವೆ ಎಂದು ಹೇಳಿ ಮಾಯವಾದನು.

**ಚತುರ್ಣಾಂ ತು ಪಿತಾ ಯೋಽಸೌ ಬ್ರಾಹ್ಮಣಾನಾಂ ಮಹಾತ್ಮನಾಮ್ ।**
**ಶ್ಲೋಕಂ ಸೋಽಧೀತ್ಯ ಪುತ್ರೇಭ್ಯಃ ಕೃತಕೃತ್ಯ ಇವಾಭವತ್ ॥ 12 ॥**
**ಸ ರಾಜಾನಮಥಾನ್ವಿಚ್ಛನ್ ಸಹಮಂತ್ರಿಣಮಚ್ಯುತಮ್ ।**
**ನ ದದರ್ಶಾಂತರಂ ಕಿಂಚಿತ್ ಶ್ಲೋಕಂ ಶ್ರಾವಯಿತುಂ ತದಾ ॥ 13 ॥**

ಇತ್ತ ನಾಲ್ಕು ಬ್ರಾಹ್ಮಣರ ತಂದೆಯು ತಮ್ಮ ಪುತ್ರರು ತನಗೆ ಹೇಳಿಕೊಟ್ಟ ಎರಡು ಶ್ಲೋಕಗಳನ್ನು ಬಾಯಿಪಾಠ ಮಾಡಿದನು. ರಾಜನೆದುರು ಹೇಳಬೇಕೆಂದು ರಾಜಭವನದ ಮುಂದೆ ಹೊರಟನು.

ರಾಜಾಬ್ರಹ್ಮದತ್ತನಾದರೂ ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಂಡು ಸಿದ್ಧಿ ಪಡೆದು ಕಾಂಪಿಲ್ಯಕ್ಕೆ ಹಿಂತಿರುಗುತ್ತಿದ್ದನು. ಭಗವಂತನನ್ನು ನೋಡಿದ ರಾಜನನ್ನು ನೋಡಲು ಬಹುಜನ ಕುತೂಹಲದಿಂದ ಕಾಯುತ್ತಿತ್ತು. ರಾಜನ ಮಿತ್ರನಾದ ಪಾಂಚಿಕ ಹಾಗೂ ಮಂತ್ರಿಯ ಹಂಸ ಧವಳವಾದ ಚಾಮರ ಬೀಸುತ್ತಿದ್ದನು. ಈ ಜನರ ನೂಕುನುಗ್ಗಲಿನಲ್ಲಿಯೇ ವೃದ್ಧನಾದ ಬ್ರಾಹ್ಮಣನು ಬೀಳುತ್ತೇಳುತ್ತಾ ರಾಜನ ರಥದ ಸಮೀಪ ಬಂದನು.

ರಾಜನಾದರೂ ಸರ್ವರಿಂದಲೂ ವಂದನೆ ಸ್ವೀಕರಿಸುತ್ತಾ ಮಂದಹಾಸ-ದಿಂದಲೇ ಕೃತಜ್ಞತೆ ತೋರುತ್ತಿದ್ದನು. ರಾಜನ ರಥದ ಸಮೀಪ ಬಂದವನೆ ಜೋರಾಗಿ ಉಚ್ಚ ಕಂಠದಿಂದ ಈ ಶ್ಲೋಕದ್ವಯವನ್ನುಚ್ಚರಿಸಿದನು.

**ಸಪ್ತವ್ಯಾಧಾಃ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ ।**
**ಚಕ್ರವಾಕಾಃ ಶರದ್ವೀಪೇ ಹಂಸಾಃ ಸರಸಿ ಮಾನಸೇ ॥ 14 ॥**

**ತೇಽಭಿಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾಃ ವೇದಪಾರಗಾಃ ।**
**ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ಕಿಮವಸೀದಥ ॥ 15 ॥**

**ತಚ್ಛ್ರುತ್ವಾ ಮೋಹಮಗಮದ್ ಬ್ರಹದತ್ತೋ ನರಾಧಿಪಃ ।**
**ಸಚಿವಶ್ಚಾಸ್ಯ ಪಾಂಚಾಲ್ಯಃ ಕಂಡರೀಕಶ್ಚ ಭಾರತಃ ॥ 16 ॥**

ಕುರುಕ್ಷೇತ್ರದಲ್ಲಿ ಹಿಂದೆ ಬ್ರಾಹ್ಮಣರಾಗಿದ್ದ ಕೌಶಿಕ ಕುಮಾರರೇ ತಮ್ಮ ದುಷ್ಕೃತ್ಯದಿಂದ ದಶಾರ್ಣಾ/ದಶಪುರದಲ್ಲಿ ಏಳು ಮಂದಿ ವ್ಯಾಧರಾಗಿ ಜನಿಸಿದರು.

ಅನಂತರ ಕಾಲಂಜರ ಪರ್ವತದಲ್ಲಿ ಅವರೇ ಏಳು ಜಿಂಕೆಗಳಾಗಿ ಹುಟ್ಟಿದರು. ಮುಂದೆ ಶರದ್ವೀಪದಲ್ಲಿ ಚಕ್ರವಾಕ ಪಕ್ಷಿಗಳಾಗಿ ಜನಿಸಿದರು. ಮುಂದಿನ ಜನ್ಮದಲ್ಲಿ ಮಾನಸಸರೋವರದಲ್ಲಿ ಹಂಸಗಳಾಗಿ ಜನಿಸಿದರು. ಕೊನೆಯದಾದ ಈ ಜನ್ಮದಲ್ಲಿ ನಿಮ್ಮ ಜೊತೆಗಿದ್ದ ನಾಲ್ವರೂ ಸಿದ್ಧಿ ಹೊಂದಿ ಹರಿಪುರಕ್ಕೆ ಹೊರಟಿರುವೆವು. ಈಗಾಗಲೇ ನಿಮ್ಮಿಂದ ಬಹಳ ದೂರಕ್ಕೆ ಸಾಗಿರುವರು. ಇವರ ತಮ್ಮಂದಿರಾದ ನೀವು ಮಾತ್ರ ಇಲ್ಲಿಯೇ ಏಕೆ ಕೊಳೆಯುತ್ತಿರುವಿರಿ.

ಈ ಒಗಟಿನಂತಹ ಮಾತನ್ನು ಕೇಳಿದ ಕೂಡಲೇ ಪಾಂಚಿಕ, ಕಂಡರೀಕ ಮಂತ್ರಿಪುತ್ರರು ಹಾಗೂ ರಾಜಬ್ರಹ್ಮದತ್ತನು ಮೂರ್ಛೆ ಬಿದ್ದರು. ಜನರೆಲ್ಲರೂ ಭಯಪಟ್ಟರು. ಶೈತ್ಯೋಪಚಾರ ಮಾಡಿದಾಗ ಮೂರ್ಛೆಯಿಂದ ಎದ್ದರು. ತಮ್ಮ ಏಳು ಜನುಮದ ಕತೆಯೆಲ್ಲವೂ ನೆನಪಿಗೆ ಬಂದು ಬಹಳ ದುಃಖವಾಯಿತು.

## ಬ್ರಾಹ್ಮಣನಿಗೆ ಅಪಾರ ಧನರಾಶಿ

**ತತಸ್ತೇ ತತ್‌ಸರಃ ಸ್ಮೃತ್ವಾ ಯೋಗಂ ತಮುಪಲಭ್ಯ ಚ ।**
**ಬ್ರಾಹ್ಮಣಂ ವಿಪುಲೈರರ್ಥೈಃ ಭೋಗೈಶ್ಚ ಸಮಯೋಜಯನ್ ॥ 17 ॥**

**ಅಭಿಷಿಚ್ಯ ಸ್ವರಾಜ್ಯೇ ತು ವಿಷ್ವಕ್ಸೇನಮರಿಂದಮಮ್ ।**
**ಜಗಾಮ ಬ್ರಹ್ಮದತ್ತೋಽಥ ಸದಾರೋ ವನಮೇವ ಹ ॥ 18 ॥**

ಅನಂತರ ಮೂವರಿಗೂ ಹಿಂದಿನ ಸ್ಮರಣೆವುಂಟಾಗಿ ಮಾನಸ ಸರೋವರವನ್ನು ಕಣ್ಣು ಮುಂದೆ ನಿಲ್ಲಿಸಿತು. ಆ ಜನ್ಮಗಳಲ್ಲಿ ತಮಗಿದ್ದ ಯೋಗಶಕ್ತಿಯೂ ನೆನಪಾಯಿತು. ತಮ್ಮ ಹಿಂದಿನ ಜನ್ಮಗಳನ್ನೆಲ್ಲ ಸ್ಮರಿಸುವಂತೆ ಮಾಡಿದ ಬ್ರಾಹ್ಮಣನಿಗೆ ಅಪಾರ ಐಶ್ವರ್ಯ ಭೋಗಭಾಗ್ಯಗಳನ್ನು ನೀಡಿದರು. ಬ್ರಹ್ಮದತ್ತನು ತನ್ನ ಪುತ್ರನಾದ ವಿಷ್ವಕ್ಸೇನನನ್ನು ಅಭಿಷೇಚಿಸಿ ಪತ್ನಿಯೊಂದಿಗೆ ಕಾಡಿಗೆ ತೆರಳಿದನು.

### ಸನ್ನತಿ ಗೋವು ವಿರಕ್ತನನ್ನಾಗಿಸಿತು

**ಅಥೈನಂ ಸನ್ನತಿಃ ಧೀರಾ ದೇವಲಸ್ಯ ಸುತಾ ತದಾ ।**
**ಉವಾಚ ಪರಮಪ್ರೀತಾ ಯೋಗಾದ್ ವನಗತಂ ನೃಪಮ್ ॥ 19 ॥**

**ಜಾನಂತ್ಯಾ ತೇ ಮಹಾರಾಜ ಪಿಪೀಲಿಕಾರುತಜ್ಞತಾಮ್ ।**
**ಚೋದಿತಃ ಕ್ರೋಧಮುದ್ದಿಶ್ಯ ಸಕ್ತಃ ಕಾಮೇಷು ವೈ ಮಯಾ ॥ 20 ॥**

**ತವ ಚಾಂತರ್ಹಿತೋ ಯೋಗಃ ತತಃ ಸಂಸ್ಮಾರಿತೋ ಮಯಾ ।**
**ಸ ರಾಜಾ ಪರಮಪ್ರೀತಃ ಪತ್ನ್ಯಾಃ ಶ್ರುತ್ವಾ ವಚಸ್ತದಾ ॥ 21 ॥**

ರಾಜನು ಪಾಂಚಿಕ-ಕಂಡರೀಕರೊಂದಿಗೆ ಅರಣ್ಯ ಸೇರಿ ತಪಸ್ಸಿಗೆ ಕುಳಿತುಕೊಳ್ಳಲಿರುವಾಗಲೇ ಅವನ ಪತ್ನಿ ಸನ್ನತಿಯು ರಾಜನಿಗೆ ನಮಸ್ಕರಿಸಿ – ರಾಜನೇ ಅಂದು ಇರುವೆಗಳ ಪ್ರಣಯ ಕಲಹವನ್ನು ನೋಡಿ ನೀವು ನಕ್ಕದ್ದೆಂದು ನನಗೆ ತಿಳಿದಿದ್ದರೂ ನಾನು ಬುದ್ಧಿಪೂರ್ವಕವಾಗಿಯೇ ಹಠ ಮಾಡಿದೆ.

ನನ್ನ ರೂಪಲಾವಣ್ಯಗಳಿಗೆ ಮುಗ್ಧರಾಗಿ ನಿರಂತರ ನನ್ನಲ್ಲಿಯೆ ಅನುರಕ್ತರಾದ ನಿಮಗೆ ನನ್ನ ಮೇಲಿನ ಮಮತೆ ದೂರವಾಗುವವರೆಗೂ ವೈರಾಗ್ಯ ಬಾರದು. ನಾನು ದೂರಾಗದೆ ಹರಿಯು ಸಮೀಪಸಲಾರನು. ಕಾಮನಿರುವ ಕಡೆ ರಾಮವಿರುವುದಿಲ್ಲ ತಾನೆ!

ಇರುವೆಯ ನೆಪವೊಡ್ಡಿ ನಿಮ್ಮ ಮೇಲೆ ಬಡಿದಾಡಿದೆ. ಇದರಿಂದಾಗಿ ತಪಸ್ಸು ಮಾಡಿ ಒಂದೆ ಸಪ್ತಾಹದಲ್ಲಿ ಹರಿಯನ್ನು ಕಂಡಿರಿ ನಿನಗೇಕೆ ನನ್ನ ಮೇಲೆ

ಇಷ್ಟು ವಿಶ್ವಾಸವೆನ್ನುವಿರೋ ? ನೀವು ವಿಶ್ವಾಮಿತ್ರರ ಪುತ್ರಾರಾದಾಗ ಕೊಂದು ತಿಂದ ಗಾರ್ಗ್ಯರ ಹಸುನಾನಾಗಿದ್ದೆ. ಈ ಜನ್ಮದಲ್ಲಿ ರಾಜಪಟ್ಟಮಹಿಷಿ-ಯಾಗಿರುವೆ ನಿಮಗೆ ಆತ್ಮದ ಅರಿವು ಬೇಗ ಮೂಡಲಿ ಎಂದೆ ಚಂಡಿಹಿಡಿದು ಪ್ರಚಂಡಳಾದೆ. ನನ್ನ ಕ್ಷಮಿಸಿ ಎಂದಳು.

ಸನ್ನತಿಯ ಸಮಯಪ್ರಜ್ಞೆ, ದೂರದೃಷ್ಟಿ ತ್ಯಾಗಾದಿಗಳನ್ನು ಕಂಡು ಪರಮಪ್ರೀತನಾದ ರಾಜನು - ನಿನ್ನಿಂದಲೇ ನನ್ನ ಉದ್ಧಾರವಾಯಿತು ಎಂದನು.

## ಸಾಂಖ್ಯಯೋಗ-ಕ್ರಮ-ಶಿಕ್ಷಾ ವ್ಯವಸ್ಥೆ

**ಕಂಡರೀಕೋಽಪಿ ಧರ್ಮಾತ್ಮಾ ಸಾಂಖ್ಯಯೋಗಮನುತ್ತಮಮ್ ।**
**ಪ್ರಾಪ್ಯಯೋಗಗತಿಃ ಸಿದ್ಧಃ ವಿಶುದ್ಧಸ್ತೇನ ಕರ್ಮಣಾ ॥ 22 ॥**

**ಕ್ರಮಂ ಪ್ರಣೀಯ ಪಾಂಚಾಲ್ಯಃ ಶಿಕ್ಷಾಂ ಚೋತ್ಪಾದ್ಯ ಕೇವಲಾಮ್ ।**
**ಯೋಗಾಚಾರ್ಯಗತಿಂ ಪ್ರಾಪ ಯಶಶ್ಚಾಗ್ರ್ಯಂ ಮಹಾತಪಾಃ ॥ 23 ॥**

ಕಂಡರೀಕನೂ ಶುದ್ಧ ಆತ್ಮ ತತ್ವ ವಿಜ್ಞಾನದಿಂದಲೂ ಸಾಧನೋಪಾಯ-ಗಳಿಂದಲೂ ಬ್ರಹ್ಮಜ್ಞಾನ ಪಡೆದುಕೊಂಡನು. ರಾಜಮಿತ್ರ ಪಾಂಚಿಕನು ವೇದವಿಶಾರದನಾಗಿ ವೇದಾಧ್ಯಯನಕ್ಕೆ ಅನುಕೂಲ ಶಾಸ್ತ್ರವಾದ ಕ್ರಮಪಾಠವನ್ನು ವ್ಯವಸ್ಥೆಗೊಳಿಸಿದನು. ಇದಲ್ಲದೆ ವೇದಾರ್ಥನಿರ್ಣಾಯಕ ಶಿಕ್ಷಾ ಪದ್ಧತಿಯನ್ನು ಪ್ರಚಾರದಲ್ಲಿ ತಂದನು. ನಂತರ ಯೋಗಾಚಾರ್ಯನೆನಿಸಿ ಜ್ಞಾನ, ಕರ್ಮ, ಭಕ್ತಿ ಯೋಗಗಳ ಅನುಷ್ಠಾನದಿಂದ ಉತ್ತಮಗತಿ ಹೊಂದಿದನು.

## ಪಿತೃಕಲ್ಪ ಫಲಸ್ತುತಿ

**ಏವಮೇತತ್ ಪುರಾವೃತ್ತಂ ಮಮ ಪ್ರತ್ಯಕ್ಷಮಚ್ಯುತ ।**
**ತದ್ ಧಾರಯಸ್ವ ಗಾಂಗೇಯ ಶ್ರೇಯಸಾ ಯೋಕ್ಷ್ಯಸೇ ತತಃ ॥ 24 ॥**

**ಯೇ ಚಾನ್ಯೇ ಧಾರಯಿಷ್ಯಂತಿ ತೇಷಾಂ ಚರಿತಮುತ್ತಮಮ್ ।**
**ತಿರ್ಯಗ್ ಯೋಗಿಷು ತೇ ಜಾತು ನ ಗಮಿಷ್ಯಂತಿ ಕರ್ಹಿಚಿತ್ ॥ 25 ॥**

**ಶೃತ್ವಾ ಚೇದಮುಪಾಖ್ಯಾನಂ ಮಹಾರ್ಥಂ ಮಹತಾಂ ಗತಿಮ್ ।**
**ಯೋಗಧರ್ಮೋ ಹೃದಿ ಸದಾ ಪರಿವರ್ತತಿ ಭಾರತ ॥ 26 ॥**

ಭೀಷ್ಮನೇ ! ಹಿಂದೆ ನಡೆದ ಶ್ರಾದ್ಧ ಮಹಾತ್ಮ್ಯ ಸೂಚಕವಾದ ಈ ಪಿತೃಕಲ್ಪ ವೃತ್ತಾಂತವನ್ನು ನನಗೆ ಪ್ರತ್ಯಕ್ಷವಾಗಿ ಕಂಡಿದೆ. ನೀನು ಈ ವಿಷಯವನ್ನು ಗ್ರಹಣ ಮಾಡು. ನೀನು ಮಾತ್ರವಲ್ಲ ಬೇರೆ ಯಾರೇ ಆಗಲಿ ಕೌಶಿಕಪುತ್ರರ ಈ ಏಳು ಜನ್ಮದ ಕಥೆಯನ್ನು ಕೇಳಿ ಮನನ ಮಾಡುವರೋ ಅಂತಹವರೂ ಕೂಡ ಯಾವಾಗಲು ಯಾವುದೇ ಕಾರಣದಿಂದಲೂ ತಿರ್ಯಗ್ ಜಂತುಗಳ ಯೋನಿಯಲ್ಲಿ ಹುಟ್ಟುವುದಿಲ್ಲ. ಮಹಾತ್ಮರಿಗೆ ಸದ್ಗತಿಯನ್ನೀಯುವ ಮಹಾರ್ಥಪೂರ್ಣವಾದ ಈ ಚರಿತ್ರೆಯನ್ನು ಕೇಳುವವರ ಹೃದಯದಲ್ಲಿ ಯೋಗಧರ್ಮವು ಸದಾ ಪ್ರಕಾಶಿಸುತ್ತಿರುತ್ತದೆ. ಈ ಯೋಗಧರ್ಮ ಧಾರಣೆಯಿಂದಾಗಿ ಮಾನವನು ಎಂದಾರೊಂದು ದಿನ ಶಾಂತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ.

*ವೈಶಂಪಾಯನ ಉವಾಚ –*

**ಏವಮೇತದ್ ಪುರಾಗೀತಂ ಮಾರ್ಕಂಡೇಯೇನ ಧೀಮತಾ ।**
**ಶ್ರಾದ್ಧಸ್ಯ ಫಲಮುದ್ಧಿಶ್ಯ ಸೋಮಸ್ಯಾಪ್ಯಾಯನಾಯ ವೈ ॥ 27 ॥**
**ಸೋಮೋ ಹಿ ಭಗವಾನ್ ದೇವೋ ಲೋಕಸ್ಯಾಪ್ಯಾಯನಂ ಪರಮ್ ।**
**ವೃಷ್ಣಿವಂಶ ಪ್ರಸಂಗೇನ ತಸ್ಯ ವಂಶಂ ನಿಬೋಧ ಮೇ ॥ 28 ॥**

ವೈಶಂಪಾಯನರು ಜನಮೇಜಯನಿಗೆ ಹೇಳುವರು – ರಾಜನೇ, ಈ ಹಿಂದೆ ಮಾರ್ಕಂಡೇಯರು. ಶ್ರಾದ್ಧ ಮಾಡಿದ್ದರ ಫಲವನ್ನು ಲಕ್ಷ್ಯದಲ್ಲಿರಿಸಿಕೊಂಡು, ಚಂದ್ರನ ಸಂತೋಷಕ್ಕಾಗಿ ಈ ಕಥೆ ಹೇಳಿರುವರು.

ಚಂದ್ರನು ಸಕಲಲೋಕಗಳಿಗೂ ಆಪ್ಯಾಯನ ಮಾಡುವ ದೇವನಾಗಿದ್ದಾನೆ. ವೃಷ್ಣಿವಂಶದ ಕಥೆಯನ್ನು ಕೇಳುವಾಗ ಚಂದ್ರವಂಶವನ್ನು ಹೇಳುವೆ, ಕೇಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಪಿತೃಕಲ್ಪ ಸಮಾಪ್ತಿವೆಂಬಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥



## ಅಥ ಪಂಚವಿಂಶೋऽಧ್ಯಾಯಃ

### ಚಂದ್ರವಂಶ-ಚಂದ್ರನ ಉತ್ಪತ್ತಿ

*ವೈಶಂಪಾಯನ ಉವಾಚ -*

**ಪಿತಾ ಸೋಮಸ್ಯ ವೈ ರಾಜನ್ ಜಜ್ಞೇऽತ್ರಿರ್ಭಗವಾನ್ ಋಷಿಃ ।**
**ಬ್ರಹ್ಮಣೋ ಮಾನಸಾತ್ ಪೂರ್ವಂ ಪ್ರಜಾಸರ್ಗಂ ವಿಧಿತ್ಸತಃ ॥ 1 ॥**

**ತತ್ರಾತ್ರಿಃ ಸರ್ವಭೂತಾನಾಂ ತಸ್ಥೌ ಸ್ವತನಯೈಃ ಯುತಃ ।**
**ಕರ್ಮಣಾ ಮನಸಾ ವಾಚಾ ಶುಭಾನ್ಯೇವ ಚಚಾರ ಸಃ ॥ 2 ॥**

ಸೃಷ್ಟಿಯ ಪ್ರಾರಂಭಿಕ ಕಾಲವದು. ಶ್ರೀಹರಿಯ ಆದೇಶದಂತೆ ಸೃಷ್ಟಿಸಲು ಹೊರಟ ಬ್ರಹ್ಮದೇವ. ಮೊದಲು ಮನಸ್ಸಿನಿಂದ ಸೃಷ್ಟಿಯಾಯಿತು. ಈ ಸೃಷ್ಟಿಯಲ್ಲಿ ಸೃಷ್ಟನಾದವನೇ ಅತ್ರಿಋಷಿ. ಇವನೇ ಚಂದ್ರದೇವನ ತಂದೆಯೂ ಅತ್ರಿಋಷಿಯು ಕರ್ಮ, ಮನಸ್ಸು, ವಾಕ್ಕುಗಳೆಂಬ ತ್ರಿಕರಣಗಳು ಶುದ್ಧವಾಗಿದ್ದವು. ಅತ್ರಿಮುನಿಯು ಮೂರು ಸಾವಿರ ವರ್ಷದವರೆಗೂ ಕೈಗಳನ್ನು ಮೇಲಕ್ಕೆತ್ತಿ, ಕಟ್ಟಿಗೆ, ಗೋಡೆ, ಪಾಷಾಣದಂತೆ ನಿಶ್ಚಲ ತಪಸ್ಸನ್ನಾಚರಿಸಿದ.

### ಊರ್ಧ್ವರೇತಸ್ಕ ಅತ್ರಿಯಿಂದ ಚಂದ್ರ ಜನನ

**ತತ್ರೋರ್ಧ್ವರೇತಸಸ್ತಸ್ಯ ಸ್ಥಿತಸ್ಯಾನಿಮಿಷಸ್ಯ ಹ ।**
**ಸೋಮತ್ವಂ ತನುರಾಪೇದೆ ಮಹಾಸತ್ವಸ್ಯ ಭಾರತ ॥ 3 ॥**

**ನೇತ್ರಾಭ್ಯಾಂ ವಾರಿ ಸುಸ್ರಾವ ದಶಧಾ ದ್ಯೋತಯದ್ ದಿಶಃ ॥ 4 ॥**

ಅತ್ರಿಯ ತಪಸ್ಸು ಉಗ್ರವಾಗಿತ್ತು ಸೂರ್ಯನನ್ನೆ ನೋಡುತ್ತಾ, ಎರಡು ಕಾಲಿನ ಹೆಬ್ಬೆರಳನಲ್ಲಿ ದೇಹದ ಭಾರವೆಲ್ಲ ಹಾಕಿ, ಹೆಬ್ಬಂಡೆಯಂತೆ ತಪೋನುಷ್ಠಾನ ಮಾಡುತ್ತಿದ್ದ. ಸೋಮನನ್ನೆ ಮನದಲ್ಲಿ ತುಂಬಿಸಿಕೊಂಡು ತಪಸ್ಸನ್ನು

ಮಾಡುತ್ತಿದ್ದ ಅತ್ರಿಯ ನೇತ್ರದಿಂದ ನೀರು ಸುರಿಯಿತು. ಅದು ಊರ್ಧ್ವರೇತಸ್ಕನಾದ ಅತ್ರಿಯ ಶಕ್ತಿ. ಇದು ಹತ್ತು ದಿಕ್ಕನ್ನೂ ಬೆಳಗುತ್ತಿತ್ತು. ಈ ಕಣ್ಣೀರನ್ನು ದಶದಿಕ್ಕಿನ ದೇವತೆಗಳು ಸ್ವೀಕರಿಸಿದರು. ಹೊಟ್ಟೆಯಲ್ಲಿ ಹೊತ್ತರು. ಆ ತೇಜೋಂಶವನ್ನು ಅವರಿಗೆ ಹೊರಲಾಗಲಿಲ್ಲ. ಆಗಲೇ ಅವರ ದಿಕ್ ಗರ್ಭದಿಂದ ಒಂದು ತೇಜಃಪಿಂಡ ಹೊರಬಿದ್ದಿತು. ಅವನೇ ಚಂದ್ರದೇವನು.

## ಬ್ರಹ್ಮದೇವನ ಅನುಗ್ರಹ

**ಪತಿತಂ ಸೋಮಮಾಲೋಕ್ಯ ಬ್ರಹ್ಮಾಲೋಕಪಿತಾಮಹಃ ।**
**ರಥಮಾರೋಪಯಾಮಾಸ ಲೋಕಾನಾಂ ಹಿತಕಾಮ್ಯಯಾ ॥ 5 ॥**

**ಯುಕ್ತೋ ವಾಜಿಸಹಸ್ರೇಣ ಸಿತೇನೇತಿ ಹಿ ನಃ ಶ್ರುತಮ್ ॥ 6 ॥**

### ಚಂದ್ರನ ವಾಜಿಸಹಸ್ರ

ಹೀಗೆ ಹುಟ್ಟಿದ ಮೊಮ್ಮಗನನ್ನು ನೋಡಿದ ಪಿತಾಮಹನು ಅವನನ್ನು ಸಾವಿರಾರು ಛಂದೋಮಯಗಳಾದ ಕುದುರೆ ಹೂಡಿದ ವೇದರಥದಲ್ಲಿ ಕುಳ್ಳಿರಿಸಿದರು. ಸಪ್ತರ್ಷಿಗಳು ನಾಲ್ಕೂವೇದ ಪಾರಾಯಣ ನಡೆಸಿದರು. ಚಂದ್ರನೂ ಸಹ ಬಹಳ ಕಾಲ ಉಗ್ರತಪಸ್ಸನ್ನಾಚರಿಸಿದ. ಇದರಿಂದಾಗಿ ಮತ್ತಷ್ಟು ಕಾಂತಿ ವೃದ್ಧಿಯಾಯಿತು. ಇವನು ಬಿದ್ದಾಗ ಅಂಗಿರಸಗೋತ್ರದ ಭೃಗವು ಹಾಗೂ ಅವನ ಮಕ್ಕಳೂ ಸಹ ವೇದಗಳಿಂದ ಹಾಡಿ ಹೊಗಳಿದರು. ಇದರಿಂದಾಗಿ ಚಂದ್ರನ ತೇಜಸ್ಸು ಮೂರ್ಲೋಕಗಳಲ್ಲಿಯೂ ಬೆಳಗತೊಡಗಿತು.

## 21 ಬಾರಿ ಭೂ ಪ್ರದಕ್ಷಿಣೆ

**ಸ ತೇನ ರಥಮುಖ್ಯೇನ ಸಾಗರಾಂತಾಂ ವಸುಂಧರಾಮ್ ।**
**ತ್ರಿಃಸಪ್ತಕೃತ್ವಃ ಅತಿಯಶಾಃ ಚಕಾರಾಭಿಪ್ರದಕ್ಷಿಣಮ್ ॥ 7 ॥**

**ತಸ್ಯ ಯಚ್ಚ್ಯಾವಿತಂ ತೇಜಃ ಪೃಥಿವೀಂ ಅನ್ವಪದ್ಯತ ।**
**ಓಷಧ್ಯಸ್ತಾಃ ಸಮುದ್ಭೂತಾಃ ತೇಜಸಾ ಪ್ರಜ್ವಲಂತ್ಯುತ ॥ 8 ॥**

ಚತುರ್ಮುಖ ಬ್ರಹ್ಮದೇವರು ತನ್ನ ಮೊಮ್ಮಗನನ್ನು ತನ್ನ ದಿವ್ಯವಾದ ರಥದಲ್ಲಿ ಕೂಡಿಸಿಕೊಂಡು ಸಾಗರಾಂಬರವಾದ ಭೂಮಿಯನ್ನು 21 ಬಾರಿ ಪ್ರದಕ್ಷಿಣೆ

ಬಂದರು. ರಥದ ವೇಗದಿಂದಾಗಿ ಚಂದ್ರನ ತೇಜಸ್ಸು ಭೂಮಿಯ ಮೇಲೆ ಬಿದ್ದಾಗ ಔಷಧಿ ಗುಣಯುಕ್ತ ಅನೇಕ ಗಿಡಮರಗಳು ಉತ್ಪನ್ನವಾದವು.

ಈ ಔಷಧಿ ವನಸ್ಪತಿಗಳಿಂದಲೇ ಮೂರ್ಲೋಕದ ಜರಾಯಜ ಅಂಡಜ ಉದ್ಭಿಜ ಸ್ವೇದಜಗಳೆಂಬ ಚತುರ್ವಿಧ ಪ್ರಾಣಿಗಳ ಪೋಷಣೆಯಾಗುತ್ತದೆ. ಹೀಗೆ ಸಂಪೂರ್ಣ ಜಗತ್ತಿನ ಪೋಷಕ ಚಂದ್ರನಾದನು.

## ಚಂದ್ರನ ತಪಸ್ಸು- ಆಧಿಪತ್ಯ

**ತಪಸ್ತೇಪೇ ಮಹಾಭಾಗ ಪದ್ಮಾನಾಂ ದಶತೀರ್ದಶ ।**
**ತತಸ್ತಸ್ಮೈ ದದೌ ರಾಜ್ಯಂ ಬ್ರಹ್ಮಾ ಬ್ರಹ್ಮವಿದಾಂ ವರಃ ।**
**ಬೀಜೌಷಧೀನಾಂ ವಿಪ್ರಾಣಾಮಪಾಂಚ ಜನಮೇಜಯ ॥ 9 ॥**

**ಸಪ್ತವಿಂಶತಿಮಿಂದೋಸ್ತು ದಾಕ್ಷಾಯಣ್ಯೋ ಮಹಾವ್ರತಾಃ ।**
**ದದೌ ಪ್ರಾಚೇತಸೋ ದಕ್ಷೋ ನಕ್ಷತ್ರಾಣೇತಿ ಯಾಃ ವಿದುಃ ॥ 10 ॥**

ಈ ತೇಜೋಮೂರ್ತಿಯನ್ನು ನೋಡಿದ ಋಷಿ ಮುಖ್ಯರು ಇವನು ನಮಗೆ ರಾಜನಾಗಲಿ ಎಂದು ಪ್ರಾರ್ಥಿಸಿದರು. ದೇವತೆಗಳ ಸ್ತೋತ್ರದಿಂದ ಅಧಿಕ ತೇಜೋವಂತನಾದ ಚಂದ್ರನನ್ನು ನೋಡಿದ ಬ್ರಹ್ಮದೇವರು ಇವನನ್ನು ಬ್ರಾಹ್ಮಣ, ನಾನಾ ವಿಧ ಬೀಜಗಳು, ಔಷಧಿಗಳು, ನೀರು ಈ ನಾಲ್ಕು ವಸ್ತುಗಳ ಆಧಿಪತ್ಯ ನೀಡಿದರು.

## 27 ನಕ್ಷತ್ರ ಕೈ ಹಿಡಿದ ಉಡುಪ

ದ್ವಿಜರಾಜನಾಗಿ ಶೋಭಾಯಮಾನನಾದ ಚಂದ್ರನಿಗೆ ದಕ್ಷ ಪ್ರಜಾಪತಿಯು ಇಪ್ಪತ್ತೇಳು ಮಂದಿ ರೋಹಿಣ್ಯಾದಿ ನಕ್ಷತ್ರ ನಾಮವುಳ್ಳ ತನ್ನ ಪುತ್ರಿಯರನ್ನು ವಿವಾಹ ಮಾಡಿಕೊಟ್ಟನು. ಅಶ್ವಿನೀ ಭರಣೀ ಮೊದಲಾದ ನಭೋಮಂಡಲದಲ್ಲಿ ಈಗಲೂ ಮಿನುಗುತ್ತಿರುವ ತಾರೆಯರೆಲ್ಲರೂ ಚಂದ್ರನ ಪತ್ನಿಯರು.

## ಚಂದ್ರನಿಂದ ರಾಜಸೂಯಯಾಗ

**ಸಮಾಜಹ್ರೇ ರಾಜಸೂಯಂ ಸಹಸ್ರ ಶತದಕ್ಷಿಣಮ್ ।**
**ಹೋತಾಸ್ಯ ಭಗವಾನ್ ಅತ್ರಿಃ ಅಧ್ವರ್ಯುಃ ಭಗವಾನ್ ಭೃಗುಃ ॥ 11 ॥**

**ಹಿರಣ್ಯಗರ್ಭಶ್ಚೋದ್ಗಾತಾ ಬ್ರಹ್ಮಾ ಬ್ರಹ್ಮತ್ವಮೇಯಿವಾನ್ ।**
**ಸದಸ್ಯಸ್ತತ್ರ ಭಗವಾನ್ ಹರಿರ್ನಾರಾಯಣಃ ಸ್ವಯಮ್ ॥ 12 ॥**

ಚಂದ್ರನು ಮಹಾರಾಜ್ಯವನ್ನು ಪಡೆದು ಉತ್ತಮ ಕಲ್ಪದ ರಾಜಸೂಯ ಯಾಗವನ್ನು ಮಾಡಿದನು. ಈ ಯಾಗದಲ್ಲಿ ದಕ್ಷಿಣೆಯಾಗಿ ಒಂದು ಲಕ್ಷ ಗೋವುಗಳನ್ನು ದಾನ ಮಾಡಿದನು. ಈ ಯಾಗದ ವೈಭವ ಅವರ್ಣನೀಯ. ತಂದೆ ಅತ್ರಿಯೇ ಹೋತ್ರವಾಗಿದ್ದನು. ಭೃಗುವು ಅಧ್ವರ್ಯುವಾಗಿದ್ದು, ಸಾಮವೇದ ಉದ್ಗಾನ ವಾಯುದೇವನೇ ನಡೆಸಿದ್ದನು. ಬ್ರಹ್ಮದೇವನೆ ಬ್ರಹ್ಮನ ಸ್ಥಾನವನ್ನುಲಂಕರಿಸಿದ್ದು, ಶ್ರೀಹರಿಯು ಸದಸ್ಯನಾಗಿದ್ದನು. ಚಂದ್ರನು ತಾನು ಗೆದ್ದು ಕೊಂಡ ಮೂರು ಲೋಕಗಳನ್ನೆ ಯಜ್ಞ ದಕ್ಷಿಣೆಯನಾಗಿ ದಾನ ಮಾಡಿದನೆಂದು ನಾವು ಕೇಳಿದ್ದೇವೆ. ಚಂದ್ರನ ಔದಾರ್ಯವನ್ನೆಲ್ಲ ದೇವಗಂಧರ್ವರು ಹಾಡಿ ಹೊಗಳಿದರು.

### ಚಂದ್ರನ ದುಃಶ್ಶೀಲ ಚಾರಿತ್ರ್ಯ

**ತಂ ಸಿನಿಶ್ಚ ಕುಹೂಶ್ಚೈವ ದ್ಯುತಿಃ ಪುಷ್ಟಿಂ ಪ್ರಭಾ ವಸುಃ ।**
**ಕೀರ್ತಿರ್ಧೃತಿಶ್ಚ ಲಕ್ಷ್ಮೀಶ್ಚ ನವದೇವ್ಯಃ ಸಿಷೇವಿರೇ ॥ 13 ॥**

**ತಸ್ಯ ತತ್ ಪ್ರಾಪ್ಯ ದುಷ್ಪ್ರಾಪ್ಯ ಮೈಶ್ವರ್ಯಂ ಮುನಿ ಸತ್ಕೃತಮ್ ।**
**ವಿಬಭ್ರಾಮ ಮತಿಸ್ತಾತ ವಿನಯಾದನಯಾಽಽಹತಾ ॥ 14 ॥**

ಈ ಸಮಯದಲ್ಲಿಯೇ ಸಿನೀವಾಲೀ, ಕುಹೂ, ಪುಷ್ಟಿ, ಪ್ರಭಾ, ವಸು ಕೀರ್ತಿ, ಧೃತಿ, ಲಕ್ಷ್ಮೀರೆಂಬ ನವದೇವತೆಗಳು ಚಂದ್ರನನ್ನು ಬಂದು ಸೇವಿಸಿದರು. ಅವಭೃಥ ಸ್ನಾನ ಮಾಡಿ ನಿಂತ ಚಂದ್ರನ ಸೌಂದರ್ಯಕ್ಕೆ ಮಾರು ಹೋದ ಈ ನವ ಕನ್ನಿಕೆಯರು, ತಮ್ಮ ಕಾಂತರಾದ ಕಾಂತ, ವಿಭಾವಸು, ದಾತ್ರ, ಪ್ರಭಾಕರ, ಹವಿಷ್ಮಂತ, ನಂದರೆಂಬ ತಮ್ಮ ಪತಿಗಳನ್ನು ತೊರೆದು ಚಂದ್ರನ ಮಡಿಲನ್ನು ಸೇರಿದರು.

ಹೀಗೆ ಅಖಂಡ ತಪಸ್ಸು, ರಾಜಸೂಯಯಾಗ, ಅಪರಿಮಿತೈಶ್ವರ್ಯ, ನಿರಂಕುಶ ಅಧಿಕಾರ ಅತ್ಯದ್ಭುತಕಾಂತಿ ಇವುಗಳಿಂದ ಚಂದ್ರಮನಿಗೆ ಪಿತ್ತನೆತ್ತಿಗೇರಿತು. ವಿವೇಕದ ತೂಕ ತಪ್ಪಿತು. ಅಹಂಕಾರಕ್ಕೀಡು ಮಾಡಿದವು.

### ಬೃಹಸ್ಪತಿಯ ಪತ್ನಿಯ ಅಪಹಾರ

**ಬೃಹಸ್ಪತೇಃ ಸ ವೈ ಭಾರ್ಯಾಂ ತಾರಾಂ ನಾಮ ಯಶಸ್ವಿನೀಮ್ ।**
**ಜಹಾರ ತರಸಾ ಸರ್ವಾನ್ ಅವಮತ್ಯಾಂಗಿರಃ ಸುತಾನ್ ॥ 15 ॥**

**ನೈವ ವ್ಯಸರ್ಜಯತ್ ತಾರಾಂ ತಸ್ಮಾ ಆಂಗಿರಸೇ ತದಾ ।**
**ಸಸಂರಬ್ಧಃ ತತಸ್ತಸ್ಮಿನ್ ದೇವಾಚಾರ್ಯೋ ಬೃಹಸ್ಪತಿಃ ॥ 16 ॥**

**ಉಶನಾ ಸ ಜಗ್ರಾಹ ಪಾರ್ಷ್ಣಿಮಂಗಿರಸಸ್ತದಾ ।**
**ಸ ಹಿ ಶಿಷ್ಯೋ ಮಹಾತೇಜಾಃ ಪಿತುಃ ಪೂರ್ವೋ ಬೃಹಸ್ಪತೇ ॥ 17 ॥**

ರಾಜಸೂಯಾ ನಂತರ ಅವಭೃಥ ಸ್ನಾನವಾದ ನಂತರ ನಂದನವನದಲ್ಲಿ ವಿಹರಿಸುತ್ತಿದ್ದ ಬೃಹಸ್ಪತ್ಯಾಚಾರ್ಯರ ಪತ್ನಿಯಾ 'ತಾರಾ' ಎಂಬುವಳನ್ನು ನೋಡಿದ ಚಂದ್ರನು ಅವಳ ಸೌಂದರ್ಯಕ್ಕೆ ಮಾರುಹೋಗಿ ಅವಳನ್ನು ಅಪಹರಿಸಿ ತನ್ನ ಅರಮನೆಯಲ್ಲಿಟ್ಟುಕೊಂಡ. ಅಂಗೀರಸನ ಮಕ್ಕಳು ಎಷ್ಟು ಹೇಳದರೂ ಅವರನ್ನೂ ಲೆಕ್ಕಿಸದೆ ಬಲಾತ್ಕರಿಸಿದನು. ದೇವತೆಗಳು ಬೃಹಸ್ಪತಿಯೂ ಎಷ್ಟೆ ಕೇಳಕೊಂಡರೂ ಐಶ್ವರ್ಯ ಶ್ರೀಯೋಪೇತನಾದ ಚಂದ್ರ ತಾರೆಯನ್ನು ಬಿಟ್ಟು ಕೊಡಲಿಲ್ಲ. ಇದರಿಂದಾಗಿ 'ತಾರಕಾಮಯ'ವೆಂಬ ಯುದ್ಧವಾಗಬೇಕಾಯಿತು.

ಬೃಹಸ್ಪತ್ಯಾಚಾರ್ಯರು ಎದುರಾಳ ಶುಕ್ರಾಚಾರ್ಯರು ಚಂದ್ರನಿಗೆ ತಮ್ಮ ಬೆಂಬಲ ತೋರಿದರು. ರುದ್ರದೇವನು ಬೃಹಸ್ಪತಿಯ ಪಕ್ಷ ಸೇರಿದನು. ರುದ್ರದೇವನು ಬೃಹಸ್ಪತಿಯ ತಂದೆ ಅಂಗೀರಸನ ಶಿಷ್ಯನಾಗಿದ್ದರಿಂದ ಗುರುವಿನ ಮಗನೆಂದು ದೇವವಕ ವಹಿಸಿದರು.

ರುದ್ರದೇವನು ತನ್ನ ಅಜಗವಧನಸ್ಸನ್ನು ಹಿಡಿದು ಸಹಾಯಕನಾಗಿ ಬಂದನು. ದೇವದೈತ್ಯರಲ್ಲಿ ಯುದ್ಧದಲ್ಲಿ ರುದ್ರದೇವನು ಬ್ರಹ್ಮಶಿರವೆಂಬ ಪರಮಾಸ್ತ್ರವನ್ನು ದೈತ್ಯರ ಮೇಲೆ ಪ್ರಯೋಗಿಸಿದನು. ಇದರಿಂದಾಗಿ ದೈತ್ಯರೆಲ್ಲರೂ ಸೋತು ಹೋಗಬೇಕಾಯಿತು.

### ತಾರೆಗಾಗಿ ನಡೆದ ತಾರಕಾಮಯ ಸಂಗ್ರಾಮ

ತತ್ರ ತದ್ ಯುದ್ಧಮಭವದ್ ಪ್ರಖ್ಯಾತಂ ತಾರಕಾಮಯಂ ।
ದೇವಾನಾಂ ದಾನವಾನಾಂ ಚ ಲೋಕಕ್ಷಯಕರಂ ಮಹತ್ ॥ 18 ॥

ಬ್ರಹ್ಮಾಣಂ ಶರಣಂ ಜಗ್ಮುಃ ಆದಿದೇವಂ ಸನಾತನಮ್ ।
ತತೋ ನಿರ್ವಾಯ ಉಶನಸಂ ರುದ್ರಂ ಜ್ಯೇಷ್ಠಂ ಚ ಶಂಕರಮ್ ।
ದದೌ ಆಂಗೀರಸೇ ತಾರಾಂ ಸ್ವಯಮೇವ ಪಿತಾಮಹಃ ॥ 19 ॥

ದೈತ್ಯರಿಗೆ ದೇವತೆಗಳಗೆ ನಡೆದ ಈ ಯುದ್ಧಕ್ಕೆ ತಾರೆಯೇ ಕಾರಣಳಾದ್ದರಿಂದ 'ತಾರಕಾಮಯ' ಯುದ್ಧವೆನಿಸಿತು. ಘೋರ ಆಯುಧಗಳ ಎಸೆತ, ಅಸ್ತ್ರಶಸ್ತ್ರಾಸ್ತ್ರಗಳ ಮಸೆದಾಟದಿಂದಾಗಿ ಅಸಂಖ್ಯ ಪ್ರಾಣಿಗಳು ನಾಶವಾದವು.

ಈ ಯುದ್ಧದಲ್ಲಿ ಬಹಳ ದೈತ್ಯ ದಾನವರು ನಾಶವಾದರು. ಅಳಿದುಳಿದ ದೇವತೆಗಳು ಹಾಗೂ ತುಷಿತವೆಂಬ ದೇವತಾಗಣವು ಬ್ರಹ್ಮದೇವನನ್ನು ಶರಣು ಹೊಂದಿದರು. ಆಗ ಬ್ರಹ್ಮದೇವನು ಶುಕ್ರ-ಚಂದ್ರರಿಗೆ ಛಿಮಾರಿ ಹಾಕಿ ಶಿವನಿಗೆ ಸಮಾಧಾನ ಮಾಡಿ ತಾರೆಯನ್ನು ಬೃಹಸ್ಪತಿಗೆ ಒಪ್ಪಿಸಿದನು.

## ಬುಧನ ಜನ್ಮ

**ತಾಮಂತಃ ಪ್ರಸವಾಂ ದೃಷ್ಟ್ವಾಂ ತಾರಾಂ ಪ್ರಾಹ ಬೃಹಸ್ಪತಿಃ ।**
**ಮದೀಯಾಯಾಂ ನ ತೇ ಯೋನೌ ಗರ್ಭೋ ಧಾರ್ಯಃ ಕಥಂಚನ॥20॥**

**ಅಯೋನೌ ಉತ್ಸೃಜತ್ ತಂ ಸಾ ಕುಮಾರಂ ದಸ್ಯುಹಂತಮಮ್ ।**
**ಜಾತಮಾತ್ರಃ ಸ ಭಗವಾನ್ ದೇವಾನಾಮಕ್ಷಿಪದ್ ವಪುಃ ॥ 21 ॥**

ಈ ಸಂದರ್ಭದಲ್ಲಿ ತಾರೆಯು ಗರ್ಭವತಿಯಾಗಿದ್ದಳು. ಇದನ್ನು ಗಮನಿಸಿದ ಗುರುವು ನನ್ನ ಸಂಬಂಧಿ ಕ್ಷೇತ್ರದಲ್ಲಿ ಇತರ ಗರ್ಭವಿರಬಾರದು, ಅದಕ್ಕಾಗಿ ಅದನ್ನು ಎಲ್ಲಿಯಾದರೂ ಬಿಸಾಡಿ ಬಾ ಎಂದನು. ತಾರೆಯಾದರೂ ಜೊಂಡು ಹುಲ್ಲಿನಲ್ಲಿ ವಿಸರ್ಜಿಸಿದಳು. ಆ ಮಗು ಹುಟ್ಟಿದ ಕೂಡಲೇ ತನ್ನ ಶರೀರಕಾಂತಿಯಿಂದಾಗಿ ದೇವತೆಗಳ ತೇಜಸ್ಸನ್ನೆ ಕ್ಷೀಣಗೊಳಿಸಿದ. ದೇವತೆಗಳಿಗೆಲ್ಲ ಚಂದ್ರನದೋ ಬೃಹಸ್ಪತಿಯದೋ ಎಂದು ಸಂದೇಹ ಪ್ರಾರಂಭವಾಯಿತು. ತಾರೆಯನ್ನೆ ಅವರು ಕೇಳಿದರು.

**ಸತ್ಯಂ ಬ್ರೂಹಿ ಸುತಃ ಕಸ್ಯ ಸೋಮಸ್ಯಾಥ ಬೃಹಸ್ಪತೇಃ ।**
**ಪೃಚ್ಛ್ಯಮಾನಾ ಯದಾ ದೇವೈಃ ನಾಹ ಸಾ ಸಾಧ್ವಸಾಧು ವಾ ॥ 22 ॥**
**ತದಾ ತಾಂ ಶಪ್ತುಮಾರಬ್ಧಃ ಕುಮಾರೋ ದಸ್ಯು ಹಂತಮಃ ।**
**ತಂ ನಿವಾರ್ಯ ತತೋ ಬ್ರಹ್ಮಾ ತಾರಾಂ ಪ್ರಪ್ರಚ್ಛ ಸಂಶಯಮ್ ॥ 23 ॥**

ತಾರೆಯೇ ಸತ್ಯವಾಗಿ ಹೇಳು ಈ ಮಗುವು ಯಾರಿಗೆ ಸೇರಿದ್ದು, ಎಂದರು. ಅವಳು ನಾಚಿಕೆಯಿಂದಾಗಿ ಮೌನಗೌರಿಯಾಗಿದ್ದಳು. ಇದನ್ನು ನೋಡಿದ ಶಿಶುವು ಕೋಪದಿಂದ ನಾನು ಯಾರದೆಂದು ಹೇಳವೆಯೋ ಶಾಪಕೊಡಲೋ ಎಂದು ಗುಡುಗಿತು. ಅದನ್ನು ತಡೆದು ಬ್ರಹ್ಮದೇವನೇ ತಾರೆಯನ್ನು ಸಮೀಪಿಸಿ ಅನುನಯದಿಂದ ತಾರೆ, ನಿಜ ಹೇಳು. ಇದು ಯಾರ ಕೂಸು ನಾಚಿಕೆಯಿಂದ ಕರಗಿದ ತಾರೆಯು ಈ ಮಗುವಿಗೆ ತಂದೆ 'ಚಂದ್ರನೆ' ಎಂದಳು.

## ಚಂದ್ರ ಪುತ್ರ ಬುಧನಾದ

**ತತಸ್ತಂ ಮೂರ್ಧ್ನಿ ಉಪಾಘ್ರಾಯ ಸೋಮೋ, ಧಾತಾ ಪ್ರಜಾಪತಿಃ ।**
**ಬುಧ ಇತ್ಯಕರೋನ್ನಾಮ ತಸ್ಯ ಪುತ್ರಸ್ಯ ಧೀಮತಃ ॥ 23 ॥**

ನಂತರ ಈ ಮಗುವಿಗೆ ತಂದೆಯಾದ ಚಂದ್ರನು ಸಂತೋಷದಿಂದ ಮಗುವನ್ನೆತ್ತಿಕೊಂಡು ಮುದ್ದಾಡಿದ. ಮಸ್ತಕವನ್ನು ಮೂಸಿದ. ಮಮತೆಯಿಂದ ಮಯದಡವಿದ. ಬ್ರಹ್ಮನು 'ಬುಧ' ಎಂದು ನಾಮಕರಣ ಮಾಡಿದ. ಬುಧನು ಆಗಸದಲ್ಲಿ ಕಾಣಿಸಿಕೊಂಡಾಗ ಬೃಹಸ್ಪತಿಗೆ ವಿರುದ್ಧವಾಗಿಯೇ ಚೇಷ್ಟಿಸುತ್ತಾನೆ.

## ಬುಧನಿಂದ ಇಳೆಯಲ್ಲಿ ಪುರೂರವಸ್

**ಉತ್ಪಾದಯಾಮಾಸ ತತಃ ಪುತ್ರಂ ವೈ ರಾಜಪುತ್ರಿಕಾ ।**
**ತಸ್ಯಾಪತ್ಯಂ ಮಹಾರಾಜೋ ಬಭೂವೈಲಃ ಪುರೂರವಾಃ ॥ 24 ॥**
**ಊರ್ವಶ್ಯಾಂ ಜಜ್ಞಿರೇ ಯಸ್ಯ ಪುತ್ರಾಃ ಸಪ್ತ ಮಹಾತ್ಮನಃ ॥ 25 ॥**

ಚಂದ್ರನ ಸುಂದರ ಮಗನಾದ ಬುಧನು ವೈವಸ್ವತ ಕುಮಾರಿ ಇಳೆಯನ್ನು ವಿವಾಹವಾಗಿ ಪುರೂರವನೆಂಬ ರಾಜನನ್ನು ಪಡೆದನು. ಸ್ವರ್ಗದ ಅಪ್ಸರಾಸ್ತ್ರೀ ಊರ್ವಶಿಯೂ ಈ ಪುರೂರವನನ್ನು ಮೆಚ್ಚಿ ಸ್ವರ್ಗಸಿರಿ ಬಿಟ್ಟು ಬಂದು ವಿವಾಹವಾದಳು. ಪುರೂರವನಿಗೆ ಊರ್ವಶಿಯಲ್ಲಿ ಏಳು ಮಂದಿ ಮಕ್ಕಳಾದರು.

## ಚಂದ್ರನಿಗೆ ಕ್ಷಯರೋಗ

**ಪ್ರಸಹ್ಯ ಧರ್ಷಿತಸ್ತತ್ರ ಸೋಮೋ ವೈ ರಾಜಯಕ್ಷ್ಮಣಾ ।**
**ಜಗಾಮ ಶರಣಾರ್ಥಾಯ ಪಿತರಂ ಸೋಽತ್ರಿಮೇವ ತು ॥ 26 ॥**
**ಸ ರಾಜಯಕ್ಷ್ಮಣಾ ಮುಕ್ತಃ ಶ್ರಿಯಾ ಜಜ್ವಾಲ ಸರ್ವತಃ ॥ 27 ॥**
**ಧನ್ಯಂ ಯಶಸ್ಯ ಮಾಯುಷ್ಯಂ ಪುಣ್ಯಂ ಸಂಕಲ್ಪ ಸಾಧನಮ್ ।**
**ಸೋಮಸ್ಯ ಜನ್ಮ ಶ್ರುತ್ವೈವ ಪಾಪೇಭ್ಯೋ ವಿಪ್ರಮುಚ್ಯತೇ ॥ 28 ॥**

ಇತ್ತ ಸ್ತ್ರೀ ಲಂಪಟನಾದ ಚಂದ್ರನಿಗೆ ಕ್ಷಯರೋಗ ಹಿಡಿಯಿತು. ಇದರಿಂದಾಗಿ ಚಂದ್ರಮಂಡಲ ಕ್ಷೀಣಿಸತೊಡಗಿತು. ಚಂದ್ರನು ತಂದೆಯಾದ ಅತ್ರಿಯನ್ನೆ

ಶರಣು ಹೊಂದಿದನು. ಅತ್ರಿಯು ಆ ರೋಗವನ್ನು ತಪಶ್ಶಕ್ತಿಯಿಂದ ಪರಿಹರಿಸಿದನು. ಈಗ ಪುನಃ ಮೊದಲಿನಂತೆ ಕಾಂತಿಯಿಂದ ಬೆಳಗಿದನು.

ಜನಮೇಜಯನೇ ! ನಾನು ನಿನಗೆ ಹೇಳಿದ ಚಾರುಚಂದ್ರನ ಉತ್ಪತ್ತಿಯ ಕಥೆಯನ್ನು ಶ್ರವಣ ಮಾಡುವವರಿಗೆ ಯಶಸ್ಸು ಕಾಂತಿ ಹೆಚ್ಚುವುದು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಚಂದ್ರವಂಶೋತ್ಪತ್ತಿ ಬುಧಜನ್ಮನಾಮವೆಂಬಲ್ಲಿ
ಇಪ್ಪತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 26 ಹರಿಪರ್ವ

# ಅಥ ಷಡ್ವಿಂಶೋಽಧ್ಯಾಯಃ

## ರಾಜರ್ಷಿ ಪುರೂರವ

*ವೈಶಂಪಾಯನ ಉವಾಚ –*

**ಬುಧಸ್ಯ ತು ಮಹಾರಾಜ ವಿದ್ವಾನ್ ಪುತ್ರಃ ಪುರೂರವಾಃ ।**
**ತೇಜಸ್ವೀ ದಾನಶೀಲಶ್ಚ ಯಜ್ವಾ ವಿಪುಲ ದಕ್ಷಿಣಃ ॥ 1 ॥**

**ತಂ ಬ್ರಹ್ಮವಾದಿನಂ ಕ್ಷಾಂತಂ ಧರ್ಮಜ್ಞಂ ಸತ್ಯವಾದಿನಮ್ ।**
**ಊರ್ವಶೀ ವರಯಾಮಾಸ ಹಿತ್ವಾ ಮಾನಂ ಯಶಸ್ವಿನೀ ॥ 2 ॥**

**ತಯಾ ಸಹ ಅವಸದ್ ರಾಜಾ ವರ್ಷಾಣಿ ದಶ ಪಂಚ ಚ ।**
**ಪಂಚ ಷಟ್ ಸಪ್ತ ಚಾಷ್ಟೌ ಚ ದಶ ಚಾಷ್ಟೌ ಚ ಭಾರತ ॥ 3 ॥**

ಬುಧನ ಮಗನಾದ ವಿದ್ವಾಂಸನಾದ ಪುರೂರವನು ತೇಜಸ್ವಿಯೂ, ದಾನಶೌಂಡನು, ಯಜ್ಞಯಾಗಶೀಲನೂ, ವಿಪುಲವಾಗಿ ದಕ್ಷಿಣೆ ನೀಡುವವನೂ ಆಗಿದ್ದನು. ವೇದದಲ್ಲಿ ಹೇಳಿದ ಕೆಲವೆ ರಾಜರ್ಷಿಗಳಲ್ಲಿ ಪುರೂರವನೂ ಒಬ್ಬನು. **ಮಿತ್ರಾವರುಣ**[1]ರಿಂದ ಶಾಪ ಹೊಂದಿದ್ದ

1. **ಮಿತ್ರಾವರುಣರ ಶಾಪ :** ಮಿತ್ರ ಮತ್ತು ವರುಣರು ದೀಕ್ಷಿತರಾಗಿದ್ದರು. ಊರ್ವಶಿಯನ್ನು ನೋಡಿ ವೀರ್ಯಪಾತವಾಯಿತು. ಅದನ್ನು ಕುಂಭದಲ್ಲಿಟ್ಟು ಅವಳಿಗೆ ಶಾಪವಿತ್ತರು. ನೀನು ಭೂಮಿಯಲ್ಲಿ ಹುಟ್ಟು ಆಗ ಮನುಷ್ಯರು ನಿನ್ನನ್ನು ಭೋಗಿಸಲಿ. ಇದಲ್ಲದೆ ಹರಿವಂಶ ಹೇಳಿದಂತೆ, ಬ್ರಹ್ಮದೇವರ ಶಾಪವೂ ಮನುಷ್ಯ ಭೋಗಿಯಾಗಲು ಇತ್ತು.

**ತಾಂ ಶಪ್ತವಂತೌ ಮನುಜಭೋಗ್ಯಾ ಭೂಮ್ಯಾಂ ಭವೇತಿ ತಾವಿತಿ । –*ಪುರಾಣ***
**ಬ್ರಹ್ಮ ಶಾಪಾಭಿಭೂತಾ ಸಾ ಮಾನುಷಂ ಸಮುಪಾಸ್ಥಿತಾ । – *ಹರಿವಂಶ***

ಊರ್ವಶಿಯಂತಹ ದೇವಲೋಕ ಅಪ್ಸರೆಯೇ ಧೀರೋದಾತ್ತ ಗುಣವುಳ್ಳ ಪುರೂರವನನ್ನು ಅವನ ವೀರವಿಕ್ರಮಗಳನ್ನು ಕಂಡು ಮೋಹಿಸಿ ಧರೆಗೆ ಇಳಿದು ಬಂದಿದ್ದಳು. ದೇವಭಾವದ ಅಭಿಮಾನವನ್ನೂ ತ್ಯಜಿಸಿ ಮಾನವನಾದ ಪುರೂವನನ್ನು ಅರಿಸಿದ್ದು ಯೋಗಾಯೋಗವೆ ಸರಿ. ರಾಜ ಪುರೂರವನು ಊರ್ವಶಿಯೊಂದಿಗೆ ಕುಬೇರನ ಚೈತ್ರ ವನದಲ್ಲಿ ಹತ್ತು ವರ್ಷಗಳ ಕಾಲವೂ, ಮಂದಾಕಿನಿಯ ಅಲಕಾಪುರಿಯಲ್ಲಿ ಐದು ವರ್ಷಗಳೂ, ವಿಶಾಲ ಬದರಿಯ ವನಗಳಲ್ಲಿ ಐದು ವರ್ಷಗಳೂ, ನಂದನ ವನದಲ್ಲಿ ಆರು ವರ್ಷಗಳ ಕಾಲವೂ, ಫಲವೃಕ್ಷಗಳಿಂದ ಫಲಿತ ಉದ್ಯಾನಗಳಾದ ಕುರುಕ್ಷೇತ್ರ ದೇಶಗಳಲ್ಲಿ ಏಳು ವರ್ಷಗಳೂ, ಗಂಧಮಾದನದಲ್ಲಿ ಎಂಟು ವರ್ಷಗಳೂ, ಉತ್ತರಾಚಲದಲ್ಲಿ ಪುನಃ ಎಂಟು ವರ್ಷಗಳೂ ವಿಹಾರ ಮಾಡಿದರು.

## ಪುರೂರವ ಸಂತಾನ

**ತಸ್ಯ ಪುತ್ರಾ ಬಭೂವುಸ್ತೇ ಸಪ್ತ ದೇವಸುತೋಪಮಾಃ ।**
**ದಿವಿ ಜಾತಾ ಮಹಾತ್ಮಾನಃ ಆಯುರ್ಧೀಮಾನ್ ಅಮಾವಸುಃ ॥ 4 ॥**

**ವಿಶ್ವಾಯುಶ್ಚೈವ ಧರ್ಮಾತ್ಮಾ ಶ್ರುತಾಯುಶ್ಚ ತಥಾಪರಃ ।**
**ದೃಢಾಯುಶ್ಚ ವನಾಯುಶ್ಚ ಶತಾಯುಶ್ಚೋರ್ವಶೀ ಸುತಾಃ ॥ 5 ॥**

ಪುರೂರವನಿಗೆ ಊರ್ವಶಿಯಲ್ಲಿ ದೇವಲೋಕದಲ್ಲಿ ಹುಟ್ಟಿದ ದೇವತೋಪಮರಾದ ಆಯು, ಅಮಾವಸು, ವಿಶ್ವಾಯು, ಶ್ರುತಾಯು, ದೃಢಾಯು, ವನಾಯು, ಶತಾಯು ಎಂಬ ಏಳು ಮಕ್ಕಳು ಹುಟ್ಟಿದರು.

ದೇವಕನ್ಯೆ ಊರ್ವಶಿ ಮಾನುಷನನ್ನು ವರಿಸಿದಳು.

*ಜನಮೇಜಯ* –

**ಗಾಂಧರ್ವೀ ಚೋರ್ವಶೀ ದೇವೀ ರಾಜಾನಂ ಮಾನುಷಂ ಕಥಮ್ ।**
**ದೇವಾನ್ ಉತ್ಸೃಜ್ಯ ಸಂಪ್ರಾಪ್ತಾ ತನ್ನೋ ಬ್ರೂಹಿ ಬಹುಶ್ರುತ ॥ 6 ॥**

ಜನಮೇಜಯನು ವೈಶಂಪಾಯನರನ್ನು ಕುರಿತು ಗುರುಗಳೇ! ಬಹುಶ್ರುತರಾದ ನೀವು – ಗಂಧರ್ವಳಾದ ಊರ್ವಶಿಯು ದೇವಲೋಕದ ಅಪ್ಸರೆ. ದೇವತೆಗಳನ್ನು ವರಿಸುವುದು ಚಿತವು. ಮನುಷ್ಯನಾದ ಪುರೂರವನನ್ನು ವರಿಸಲು ಕಾರಣವೇನು? ಎಂದು ತಿಳಿಸಿರಿ.

## ಊರ್ವಶಿಯ ಮೂರು ಕರಾರುಗಳು

*ವೈಶಂಪಾಯನ -*

**ಬ್ರಹ್ಮಶಾಪಾಭಿಭೂತಾ ಸಾ ಮಾನುಷಂ ಸಮಪದ್ಯತ ।**
**ಐಲಂ ತು ಸಾ ವರಾರೋಹಾ ಸಮಯಾತ್ ಸಮುಪಸ್ಥಿತಾ ॥ 7 ॥**
**ಆತ್ಮನಃ ಶಾಪಮೋಕ್ಷಾರ್ಥಂ ಸಮಯಂ ಸಾ ಚಕಾರ ಹ ।**
**ಅನಗ್ನದರ್ಶನಂ ಚೈವ ಸಕಾಮಾಯಾಂ ಚ ಮೈಥುನಮ್ ॥ 8 ॥**
**ದ್ವೌ ಮೇಷೌ ಶಯನಾಭ್ಯಾಶೇ ಸದಾ ಬದ್ಧೌ ಚ ತಿಷ್ಠತಃ ।**
**ಘೃತಮಾತ್ರೋ ತಥಾಽಽಹಾರಃ ಕಾಲಮೇಕಂ ತು ಪಾರ್ಥಿವ ॥ 9 ॥**
**ಯದ್ಯೇಷ ಸಮಯೋ ರಾಜನ್ ಯಾವತ್ಕಾಲಂ ಚ ತೇ ದೃಢಃ ।**
**ತಾವತ್ ಕಾಲಂ ತು ವತ್ಸ್ಯಾಮಿ ತ್ವತ್ತಃ ಸಮಯ ಏಷ ನಃ ॥ 10 ॥**

ಜನಮೇಜಯ ಕೇಳು ! ಬ್ರಹ್ಮದೇವನ ಶಾಪದಿಂದಾಗಿ ಊರ್ವಶಿಯು ಮಾನವ ಲೋಕಕ್ಕೆ ಬರುವಂತಾಯಿತು. ಸುಂದರಾಂಗಿಯಾದ ಅವಳು ಪುರೂರವಸ್‌ನ ಹತ್ತಿರ ಬಂದು ಕೆಲವು ಕರಾರುಗಳನ್ನು ಹಾಕಿದಳು.

ವೀರನೇ! ಮೈಥುನ ಕಾಲ ಹೊರತು ನೀನೆಂದೂ ನನಗೆ ದಿಗಂಬರನಾಗಿ ಕಾಣಿಸಬಾರದು. ನಾನು ಅಪೇಕ್ಷಿಸಿದಾಗ ಮಾತ್ರ ನೀನು ನನ್ನೊಡನೆ ಸಮಾಗಮ ಮಾಡಬೇಕು. ನನ್ನ ಪ್ರೀತಿಯ ಮಕ್ಕಳಂತಿರುವ ಈ ಎರಡು ಟಗರುಗಳನ್ನು ರಾಜನು ರಕ್ಷಿಸಬೇಕು. ತಾನು ತಿನ್ನುವುದು ಕೇವಲ ತುಪ್ಪವನ್ನು ಮಾತ್ರ. ಅದೂ ಕೂಡ ಒಂದು ಹೊತ್ತು. ನೀನು ಈ ನನ್ನ ನಿಯಮಗಳನ್ನು ಎಲ್ಲಿಯವರೆಗೂ ಪಾಲಿಸುವೆಯೋ ಅಲ್ಲಿಯವರೆಗೂ ನಾನು ನಿನ್ನೊಂದಿಗೆ ನಾನಾ ಭೋಗ ಭಾಗ್ಯಗಳನ್ನು ನೀಡುತ್ತಾ ಇರುವೆನು. ಊರ್ವಶಿಯು ಮೊದಲು ಮಾನವರ ಸಂಪರ್ಕ ಮಾಡುವಾಗ ಬೇಗನೆ ಭೂಲೋಕದಿಂದ ಬಿಡುಗಡೆ ಹೊಂದಿ ಸ್ವರ್ಗಕ್ಕೆ ಬೇಕಾದಾಗ ಹೊರಟು ಹೋಗಲೆಂದೆ ಈ ನೆಪಗಳನ್ನು ಮುಂದಿಟ್ಟಿದ್ದಳು. ಇದು ಶಾಪದಿಂದ ಮುಕ್ತಳಾಗಲು ಮಾಡಿಕೊಂಡ ಒಪ್ಪಂದಗಳಾಗಿದ್ದವು.

## ಊರ್ವಶೀ-ಪುರೂರವ ಸಮಾಗಮ

**ತಸ್ಯಾಸ್ತಂ ಸಮಯಂ ಸರ್ವಂ ಸ ರಾಜಾ ಸಮಪಾಲಯತ್ ।**
**ಏವಂ ಸಾ ವಸತೇ ತತ್ರ ಪುರೂರವಸಿ ಭಾಮಿನೀ ॥ 11 ॥**

**ವರ್ಷಾಣ್ಯೇಕೋನಷಷ್ಟಿಸ್ತು ತತ್‌ಸಕ್ತಾ ಶಾಪಮೋಹಿತಾ ॥ 12 ॥**

ಪುರೂರವನು ಊರ್ವಶಿಯ ಒಪ್ಪಂದಗಳಗೆಲ್ಲ ಒಪ್ಪಿ ಚೆನ್ನಾಗಿ ಪಾಲಿಸಿ-ಕೊಂಡೇ ಬಂದನು. ಬ್ರಹ್ಮದೇವನ ಹಾಗೂ ಮಿತ್ರಾವರುಣರ ಶಾಪದಿಂದಾಗಿ ಪುರೂರವಸಿನ ಜೊತೆಗೆ ಐವತ್ತೊಂಭತ್ತು ವರ್ಷಗಳನ್ನು ಕಳೆದಳು.

## ಊರ್ವಶಿಯಿಲ್ಲದೆ ಸ್ವರ್ಗ ಬಣಬಣ

**ಊರ್ವಶ್ಯಾಂ ಮಾನುಷಸ್ಥಾಯಾಂ ಗಂಧರ್ವಾಃ ಚಿಂತಯಾನ್ವಿತಾಃ ।**
**ಸಮಾಗಚ್ಛೇತ್ ಪುನರ್ದೇವಾನ್ ಊರ್ವಶೀ ಸ್ವರ್ಗಭೂಷಣಮ್ ॥13 ॥**

**ತತೋ ವಿಶ್ವಾವಸುರ್ನಾಮ ತತ್ರಾಹ ವದತಾಂ ವರಃ ।**
**ವ್ಯುತ್ಕ್ರಾಂತಸಮಯಂ ಸಾ ವೈ ರಾಜಾನಂ ತ್ಯಕ್ಷ್ಯತೇ ಯಥಾ ।**
**ಸಸಹಾಯೋ ಗಮಿಷ್ಯಾಮಿ ಯುಷ್ಮಾಕಂ ಕಾರ್ಯಸಿದ್ಧಯೇ ॥ 14 ॥**

ಇತ್ತ ಸ್ವರ್ಗವು ಊರ್ವಶಿ ಶೂನ್ಯವಾಗಿ ಶೂನ್ಯವಾಗಿತ್ತು. ಗಂಧರ್ವರು ಚಿಂತಾಕ್ರಾಂತರಾದರು. ಇಂದ್ರನೂ ಊರ್ವಶೀ ಇಲ್ಲದೆ ಸ್ವರ್ಗದಲ್ಲಿ ಬಣಬಣವಾಗಿದೆ. ಏನಾದರೂ ಮಾಡಿ ಅವಳನ್ನು ಪುನಃ ಸ್ವರ್ಗಕ್ಕೆ ಮರಳಿ ಬರಲು ಉಪಾಯ ಚಿಂತಿಸಿರಿ ಎಂದನು. ಆಗ ವಿಶ್ವಾಮಸುವೆಂಬ ಗಂಧರ್ವನು – ಊರ್ವಶಿ ಹಾಗೂ ಪುರೂರವನ ಮಧ್ಯದಲ್ಲಿರುವ ಒಪ್ಪಂದವನ್ನು ನಾನು ಒಪ್ಪಂದವನ್ನು ನಾನು ಬಲ್ಲೆನು. ರಾಜನು ಅದನ್ನು ಮೀರಿದಂತಾದರೆ ಊರ್ವಶಿ ಕೂಡಲೇ ಅವನನ್ನು ತ್ಯಜಿಸಿ ಬರುವಳು ಎಂದು ಹೇಳ ನಾನು ಹೇಗಾದರೂ ಮಾಡಿ ಊರ್ವಶಿಯನ್ನು ಆ ಮೋಹದ ಬಲೆಯಿಂದ ಬಿಡಿಸಿ ಸ್ವರ್ಗಕ್ಕೆ ತರುತ್ತೇನೆಂದು ಪ್ರತಿಜ್ಞೆಗೈದು ಕೆಲವು ಸಹಾಯಕರೊಂದಿಗೆ ಹೊರಟ.

**ಏವಮುಕ್ತ್ವಾ ಗತಸ್ತತ್ರ ಪ್ರತಿಷ್ಠಾನಂ ಮಹಾಯಶಾಃ ।**
**ನಿಶಾಯಾಮಥ ಚಾಗಮ್ಯ ಮೇಷಮೇಕಂ ಜಹಾರ ಸಃ ॥ 15 ॥**

**ಮಾತೃವದ್ ವರ್ತತೇ ಸಾ ತು ಮೇಷಯೋಶ್ಚಾರುಹಾಸಿನೀ ।**
**ರಾಜಾನಮಬ್ರವೀತ್ ತತ್ರ ಪುತ್ರೋ ಮೇಽಹ್ರಿಯತೇತಿ ಸಾ ॥ 16 ॥**

**ಏವಮುಕ್ತೋ ವಿನಿಶ್ಚಿತ್ಯ ನಗ್ನೋ ನೈವೋದತಿಷ್ಠತ ।**
**ನಗ್ನಂ ಮಾಂ ದ್ರಕ್ಷ್ಯಸೇ ದೇವೀ ಸಮಯೋ ವಿತಥೋ ಭವೇತ್ ॥ 17 ॥**

ವಿಶ್ವಾವಸುವು ಊರ್ವಶೀ-ಪುರೂರವವಿರುವ ಪ್ರತಿಷ್ಠಾನಪುರಕ್ಕೆ ಬಂದನು. ಒಂದು ದಿನ ಗಾಢಾಂಧಕಾರದಲ್ಲಿ ಊರ್ವಶಿಯ ಪ್ರೇಮದ ಟಗರುಗಳಲ್ಲಿ

ಒಂದನ್ನು ಅಪಹರಿಸಿದನು. ಅದರ ಧ್ವನಿ ಕೇಳಿ ಗಂಧರ್ವರು ಬಂದಿರಬೇಕೆಂದು ಊಹಿಸಿದಳು. ಚಾರುಹಾಸಿನಿ ಊರ್ವಶಿಯು ಎರಡೂ ಟಗರುಗಳನ್ನು ತಾಯಿಯಂತೆ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಗಂಧರ್ವನು ಬಂದಿದ್ದು ತನ್ನ ಶಾಪಮುಕ್ತಿಯ ಕಾಲವು ಸನ್ನಿಹಿತವೆಂದರಿತು –ನಗ್ನನಾಗಿ ಮಲಗಿದ್ದ ರಾಜನನ್ನು – ರಾಜನೇ – ನನ್ನ ಮಗನನ್ನು ಕಳ್ಳರು ಅಪಹರಿಸುತ್ತಿರುವರು. ರಕ್ಷಿಸಿರಿ ಎಂದಳು. ರಾಜನು ನಗ್ನನಾಗಿರುವೆ. ನೀನು ನನ್ನನ್ನು ಈ ಅವಸ್ಥೆಯಲ್ಲಿ ನೋಡಿದೆಯಾದರೆ ನನ್ನನ್ನು ತ್ಯಜಿಸುವೆ ಎಂದು ಹೇಳಿ ಸುಮ್ಮನಿದ್ದನು. ಗಂಧರ್ವನು ಮತ್ತೊಂದು ಹೋತುವನ್ನು ಅಪಹರಿಸಿದಾಗ ಊರ್ವಶಿಯು ತನ್ನ ಮಕ್ಕಳನ್ನು ರಕ್ಷಿಸಬೇಕೆಂದು ಬೇಡಿದಳು.

**ಏವಮುಕ್ತಃ ತಥೋತ್ಥಾಯ ನಗ್ನೋ ರಾಜಾ ಪ್ರಧಾವಿತಃ ।**
**ಮೇಷಯೋಃ ಪದ ಮನ್ವಿಚ್ಛನ್ ಗಂಧರ್ವೈಃ ವಿದ್ಯುದಸೃಥ ॥ 18 ॥**
**ಪ್ರಕಾಶಿತಂ ವೈ ಸಹಸಾ ತತೋ ನಗ್ನಮವೈಕ್ಷತ ।**
**ನಗ್ನಂ ದೃಷ್ಟ್ವಾ ತಿರೋಭೂತಾ ಸಾಪ್ಸರಾ ಕಾಮರೂಪಿಣೀ ॥ 19 ॥**

ರಾಜನಾದರೂ ನಗ್ನಾವಸ್ಥೆಯಲ್ಲಿಯೇ ಮೇಷಗಳನ್ನು ಬಿಡಿಸಿ ತರಲು ಧಾವಿಸಿದನು. ತಮ್ಮನ್ನು ಅನುಸರಿಸುತ್ತಿರುವ ರಾಜನನ್ನು ಹಾಗೂ ರಾಜನನ್ನೂ ಅನುಸರಿಸಿ ಅವನ ಹಿಂದೆ ಬರುತ್ತಿರುವ ಊರ್ವಶಿಯನ್ನು ನೋಡಿ. ಮಿಂಚುಗಳ ಗೊಂಚಲುಗಳನ್ನು ಸೃಷ್ಟಿ ಮಾಡಿದರು. ಇದರಿಂದಾಗಿ ಊರ್ವಶಿಗೆ ರಾಜನು ನಗ್ನ ರೂಪ ದರ್ಶನವಾಯಿತು. ಕರಾರು ಮುರಿದಂತಾಯಿತು. ತಕ್ಷಣ ಊರ್ವಶಿ ರಾಜನನ್ನು ಬಿಟ್ಟು ಮಾಯವಾದಳು.

## ರಾಜನ ವಿಲಾಪ

**ಅಪಶ್ಯನ್ ಊರ್ವಶೀಂ ತತ್ರ ವಿಲಲಾಪ ಸುದುಃಖಿತಃ ।**
**ಚಚಾರ ಪೃಥಿವೀಂ ಸರ್ವಾಂ ಮಾರ್ಗಮಾಣ ಇತಸ್ತತಃ ॥ 20 ॥**
**ಅಥಾಪಶ್ಯತ್ ಸ ತಾಂ ರಾಜಾ ಕುರುಕ್ಷೇತ್ರೇ ಮಹಾಬಲಃ ॥ 21 ॥**

ಮಹಾರಾಜನು ಹೋತುಗಳೆರಡನ್ನು ಬಿಡಿಸಿಕೊಂಡು ಬರುವುದರಲ್ಲಿ ಮನೆಯಲ್ಲಿ ಊರ್ವಶಿಯು ಕಾಣಲಿಲ್ಲ. ಅವಳ ಮೇಲಿನ ಪ್ರೇಮಾತಿರೇಕದಿಂದಾಗಿ ರಾಜ್ಯಕೋಶ ಮನೆ ಮಾರುಗಳನ್ನೆಲ್ಲ ತ್ಯಜಿಸಿ. ಉರ್ವಶೀಮಾರ್ಗ ತತ್ಪರನಾದ. ಇಡೀ ಭೂಮಂಡಲವನ್ನು ಸುತ್ತು ಹಾಕಿದನು.

ಕೊನೆಗೆ ಒಂದು ದಿನ ಕುರುಕ್ಷೇತ್ರಕ್ಕೆ ಬಂದಾಗ ಅಲ್ಲಿರುವ ಪ್ಲಕ್ಷತೀರ್ಥದಲ್ಲಿ ಕಮಲಗಳಿಂದ ತುಂಬಿರುವ ಹೈಮವತೀ ಪುಷ್ಕರಿಣಿಯಲ್ಲಿ ಸ್ನಾನ ಮಾಡುತ್ತಿದ್ದ. ತನ್ನ ಪ್ರೇಯಸಿ ಊರ್ವಶಿಯನ್ನು ನೋಡಿದನು.

ಊರ್ವಶಿಯು ಇವನನ್ನು ನೋಡಿ ತನ್ನ ಸಖಿಯರಿಗೆ ಗೆಳತಿಯರೇ, ರಾಜನನ್ನೂ ತೋರಿಸುತ್ತಾ ನಾನು ಇದುವರೆಗೂ ಯಾರ ಜೊತೆಯಲ್ಲಿ ವಿಹಾರ ಮಾಡಿದೆನೊ ಆ ಪುರುಷೋತ್ತಮನೆ ಇವನು ಎಂದಳು.

**ತಾಂ ಕ್ರೀಡಂತೀಂ ತತೋ ದೃಷ್ಟ್ವಾ ವಿಲಲಾಪ ಸುದುಃಖಿತಃ ।**
**ಜಾಯೇ ಹ ತಿಷ್ಠ ಮನಸಾ ಘೋರೇ ವಚಸಿ ತಿಷ್ಠ ಹ ।**
**ಏವಮಾದೀನಿ ಸೂಕ್ತಾನಿ ಪರಸ್ಪರ ಮಭಾಷತ ॥ 22 ॥**

ಊರ್ವಶಿಯನ್ನು ನೋಡಿ – ಪ್ರಿಯೇ ! ನೀನು ಸ್ವಲ್ಪ ಕಾಲ ಇಲ್ಲಿಯೆ ಇರು. ಕಠೋರ ಹೃದಯಳಾಗಿ ನನ್ನನ್ನು ಬಿಟ್ಟು ಹೋಗಬೇಡ. ನಿನ್ನ ಮಾತಿನಂತೆ ನಡದೆ ಇವೇ ಮೊದಲಾದ ಹಯೇ ಜಾಯೇ ಮನಸಾತಿಷ್ಠ ಘೋರೇ ಇತ್ಯಾದಿ ವೇದಗಳಿಂದ ಪರಸ್ಪರ ಮಾತನಾಡಿಕೊಂಡರು. ಸುರತನಿಪುಣಳಾದ ನೀನು ನನ್ನನ್ನು ಬಿಡಬೇಡ, ಸರಸಲ್ಲಾಪಗಳು ಇನ್ನೂ ಪೂರ್ಣವಾಗಿಲ್ಲ. ಈ ನನ್ನ ದೇಹವು ನೀನಿಲ್ಲದೆ ಬೀಳುತ್ತದೆ. ಅದನ್ನು ತೋಳಗಳು ಹದ್ದುಗಳು ತಿನ್ನುತ್ತವೆ.

**ಊರ್ವಶೀ ಚಾಬ್ರವೀದ್ಯೈಲಂ ಸಗರ್ಭಾಹಂ ತ್ವಯಾ ಪ್ರಭೋ ।**
**ಸಂವತ್ಸರಾತ್ ಕುಮಾರಾಸ್ತೇ ಭವಿಷ್ಯಂತಿ ನ ಸಂಶಯಃ ॥ 23 ॥**
**ನಿಶಾಮೇಕಾಂ ಚ ನೃಪತೇ ನಿವತ್ಸ್ಯಾಮಿ ಮಯಾ ಸಹ ॥ 23 ॥**

ಊರ್ವಶಿಯು ರಾಜನೇ, ನೀನು ಪುರುಷಾನಾಗಿದ್ದೀಯೇ, ನೀನು ಮರಣ ಹೊಂದುವುದು ಬೇಡ, ತೋಳಗಳು ತಿನ್ನುವುದೂ ಬೇಡ. ಸ್ತ್ರೀಯರ ಮನಸ್ಸು ತೋಳಗಳ ಮನಸ್ಸಿನಂತೆ ಮಹಾಕಠಿಣವಾಗಿರುವುದರಿಂದ ಅವರ ಸ್ನೇಹ ಮಾಡಬಾರದು. ಅವರಿಗೆ ಸೇರದ ಪತಿ, ಸಹೋದರರನ್ನು ಅಲ್ಪ ಪ್ರಯೋಜನಕ್ಕಾಗಿ ನಾಶ ಮಾಡುತ್ತಾರೆ. ಆದರೂ ನೀನು ಈ ವರ್ಷದ ಕಡೆಯಲ್ಲಿ ಒಂದು ದಿನ ನನ್ನೊಂದಿಗೆ ಸುಖವನ್ನು ಹೊಂದುವಿ. ನಾನೀಗ ಗರ್ಭಿಣಿಯಾಗಿರುವೆನು. ಪ್ರತಿವರ್ಷವೂ ನನ್ನ ಗರ್ಭದಿಂದ ಒಬ್ಬ ಮಗ ಜನಿಸುವನು. ವರ್ಷಕ್ಕೊಂದು ಬಾರಿ ನಾನು ನಿನ್ನ ಜೊತೆಯಲ್ಲಿರುವೆನು. ರಾಜನು ಊರ್ವಶಿಯ ಮಾತನ್ನು ಕೇಳಿದ ಮಾತ್ರಕ್ಕೆ ಸಂತೋಷ ನಿರ್ಭರನಾಗಿ

ತನ್ನ ನಗರಕ್ಕ ಹಿಂದುರಿಗಿದನು. ಒಂದು ವರ್ಷವಾಗುತ್ತಲೆ ಊರ್ವಶಿಯು ರಾಜನೊಂದಿಗೆ ಬಂದು, ಒಂದು ರಾತ್ರಿ ಅವನೊಂದಿಗೆ ಇದ್ದು ಸುಖ ನೀಡಿದಳು.

**ಊರ್ವಶ್ಯಥಾಬ್ರವೀದ್ಧೈಲಂ ಗಂಧರ್ವಾಃ ವರದಾಸ್ತವ ।**
**ತಾನ್ ವೃಣೀಷ್ವ ಮಹಾರಾಜ ಬ್ರೂಹಿ ಚೈನಾನ್ ತ್ವಮೇವ ಹಿ ॥ 24 ॥**
**ವೃಣೀಷ್ವ ಸಮತಾಂ ರಾಜನ್ ಗಂಧರ್ವಾಣಾಂ ಮಹಾತ್ಮನಾಮ್ ।**
**ತಥೈತ್ಯುಕ್ತ್ವಾ ವರಂ ವವ್ರೇ ಗಂಧರ್ವಾಶ್ಚ ತಥಾಸ್ತ್ವಿತಿ ॥ 25 ॥**
**ಪೂರಯಿತ್ವಾಗ್ನಿನಾ ಸ್ಥಾಲೀಂ ಗಂಧರ್ವಾಶ್ಚ ತಮಬ್ರುವನ್ ।**
**ಅನೇನೇಷ್ಟ್ವಾ ಚ ಲೋಕಾನ್ನಃ ಪ್ರಾಪ್ಸ್ಯಸಿ ತ್ವಂ ನರಾಧಿಪ ॥ 26 ॥**

ಊರ್ವಶಿಯು ಆ ರಾಜನೊಂದಿಗೆ ರಸರಾತ್ರಿಯು ಎಂದೂ ಕಳೆಯದಂತೆ ಮಾಡಲು ರಾಜನಿಗೆ ಒಂದು ಯುಕ್ತಿಯನ್ನು ಹೇಳಿದಳು.

ರಾಜನೇ ! ನಾಳೆ ನನ್ನನ್ನು ಕರೆದೊಯ್ಯಲು ಸ್ವರ್ಗದಿಂದ ಗಂಧರ್ವರು ಬರುವರು. ನೀನು ಅವರನ್ನು ಆದರಾತಿಥ್ಯದಿಂದ ಚೆನ್ನಾಗಿ ಸಂತೋಷಪಡಿಸು. ರಾಜೋಪಚಾರದಿಂದ ಸಂತುಷ್ಟರಾದ ಅವರು ನಿನಗೆ ವರವೊಂದನ್ನು ಕೇಳಲು ಹೇಳುವರು – ಆಗ ನೀನು "ನಾನು ಗಂಧರ್ವನಾಗಬೇಕೆಂದು ಕೇಳು."

ರಾಜನು ಹಾಗೆಯೇ ಆಗಲೆಂದು ಹೇಳಿ ತಾನೂ ಗಂಧರ್ವರಿಗೆ ಸಮಾನನಾಗಿರಬೇಕೆಂಬ ವರವನ್ನು ಗಂಧರ್ವರನ್ನು ಬೇಡಿದನು. ಗಂಧರ್ವರು ಹಾಗೆ ಆಗಲೆಂದು ಹೇಳಿ ಒಂದು ಅಗ್ನಿಸ್ಥಾಲಿಯನ್ನು ಕೊಟ್ಟರು. ರಾಜನೇ! ಈ ಅಗ್ನಿಯಿಂದ ನೀನು ಯಜ್ಞವನ್ನು ಮಾಡು. ನೀನು ನಮ್ಮ ಲೋಕಗಳಿಗೆ ಬರಬಹುದೆಂದರು. ರಾಜನು ಅಗ್ನಿಪಾತ್ರೆಯನ್ನೆ ಊರ್ವಶೀ ಎಂದು ತಿಳಿದಿದ್ದನು. ಮುಂದು ಇದು ಅಗ್ನಿಷ್ಟಿಕೆಯೆಂದು ಗೊತ್ತಾಗಿ ಕಾಡಿನಲ್ಲಿಯೇ ಇಟ್ಟು ಬಂದನು. ರಾಜನು ತಾನಿಟ್ಟ ಸ್ಥಳದಲ್ಲಿ ಶಮೀ ವೃಕ್ಷವು ಅದರಲ್ಲಿರುವ ಅಶ್ವತ್ಥ ವೃಕ್ಷವನ್ನು ನೋಡಿದನು. ಸ್ಥಾಲಿಯು ಶಮಿಯಾಗಿದೆ ಅಗ್ನಿಯು ಅಶ್ವತ್ಥವಾಗಿದೆ ಎಂದು ತಿಳಿದು ಶಮಿಯನ್ನು ಅಶ್ವತ್ಥವನ್ನು ಕತ್ತರಿಸಿ ಮೇಲೊಂದು ಕೆಳಗೊಂದಿಟ್ಟು ಮಥನ ಮಾಡಿದನು.

**ಅಶ್ವತ್ಥಾದರಣಿಂ ಕೃತ್ವಾ ಮಥಿತ್ವಾಗ್ನಿಂ ಯಥಾವಿಧಿ ।**
**ಮಥಿತ್ವಾಗ್ನಿಂ ತ್ರಿಧಾ ಕೃತ್ವಾ ಅಯಜತ್ ಸ ನರಾಧಿಪಃ ।**
**ಗಂಧರ್ವೇಭ್ಯೋ ವರಂ ಲಬ್ಧ್ವಾ ತ್ರೇತಾಗ್ನಿಂ ಸಮಕಾರಯತ್ ॥ 27 ॥**

ಗಂಧರ್ವರು ಹೇಳಿದಂತೆ ರಾಜನು ಶಾಸ್ತ್ರವಿಧಿಯಂತೆ ಅರಣಿ ನಿರ್ಮಂಥನ ಮಾಡಿ ಹುಟ್ಟಿದ ಅಗ್ನಿಯನ್ನು ಮೂರು ಭಾಗ ಮಾಡಿ ಯಜ್ಞಗಳನ್ನು ಮಾಡಿ ಗಂಧರ್ವರ ಸಾಲೋಕ್ಯ ಹೊಂದಿದನು. ಈ ಹಿಂದೆ ಒಂದೇ ಪ್ರಣವ, ವಿಷ್ಣುವೊಬ್ಬನೆ, ಸರ್ವಯಜ್ಞದಲ್ಲಿ ಒಂದೇ ಅಗ್ನಿಯಿತ್ತು. ತ್ರೇತಾಯುಗದಲ್ಲಿ ಪುರೂರವ ರಾಜನಿಂದ ವೇದವು ತ್ರಯೀ ಎನಿಸಿತು. ಅಗ್ನಿಯೂ ಸಹ ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯವೆಂದೂ ಮೂರಾಯಿತು.

**ಏವಂ ಪ್ರಭಾವೋ ರಾಜಾಸೀದ್ ಐಲಸ್ತು ನರಸತ್ತಮ ।**
**ದೇಶೇ ಪುಣ್ಯತಮೇ ಚೈವ ಮಹರ್ಷಿಭಿರಭಿಷ್ಟುತೇ ॥ 28 ॥**

**ರಾಜ್ಯಂ ಸ ಕಾರಯಮಾಸ ಪ್ರಯಾಗೇ ಪೃಥಿವೀ ಪತಿಃ ।**
**ಉತ್ತರೇ ಜಾಹ್ನವೀ ತೀರೇ ಪ್ರತಿಷ್ಠಾನೇ ಮಹಾಯಶಾಃ ॥ 29 ॥**

ಜನಮೇಜಯನೇ ! ಪುರೂರವ ರಾಜನು ಇಂತಹ ಪ್ರಭಾವೀ ರಾಜನಾಗಿದ್ದನು. ಮಹರ್ಷಿಗಳಿಂದಲೂ ಸ್ತುತಿಸಲ್ಪಡುತ್ತಿದ್ದನು. ಶ್ರೇಷ್ಠವೂ ಪುಣ್ಯತಮವೂ ಆದ ಪ್ರಯಾಗದಲ್ಲಿ ಗಂಗಾನದಿಯ ಉತ್ತರದಲ್ಲಿದ್ದ ಪ್ರತಿಷ್ಠಾನಪುರದಲ್ಲಿ ರಾಜ್ಯವಾಳುತ್ತಿದ್ದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಐಲೋತ್ಪತ್ತಿವೆಂಬಲ್ಲಿ
ಇಪ್ಪತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಸಪ್ತವಿಂಶೋऽಧ್ಯಾಯಃ

## ಅಮಾವಸು ಚರಿತ್ರೆ

*ವೈಶಂಪಾಯನ ಉವಾಚ-*

**ಐಲಪುತ್ರಾ ಬಭೂವುಸ್ತೇ ಸರ್ವೇ ದೇವಸುತೋಪಮಾಃ ।**
**ದಿವಿಜಾತಾಃ ಮಹಾತ್ಮಾನಃ ಆಯುರ್ಧೀಮಾನ್ ಅಮಾವಸುಃ ॥ 1 ॥**

**ವಿಶ್ವಾಯುಶ್ಚೈವ ಧರ್ಮಾತ್ಮಾ ಶ್ರುತಾಯುಶ್ಚ ತಥಾಪರಃ ।**
**ದೃಢಾಯುಶ್ಚ ವನಾಯುಶ್ಚ ಶತಾಯುಶ್ಚೋರ್ವಶೀ ಸುತಾಃ ॥ 2 ॥**

ಐಲಪುರೂರವನಿಗೆ ಊರ್ವಶಿಯಿಂದ ದೇವತಾ ಕಾಂತಿವುಳ್ಳ ಏಳು ಮಂದಿ **ಪುತ್ರರಾದರು**[1]. ಇವರೆಲ್ಲರೂ ಸ್ವರ್ಗದಲ್ಲಿಯೇ ಹುಟ್ಟಿದ ಮಹಾನುಭಾವರು. ಶತಾಯು, ಆಯು, ಅಮಾವಸು, ವಿಶ್ವಾಯು, ಶ್ರುತಾಯು, ದೃಢಾಯು, ವನಾಯು ಎಂದು.

### ಅಮಾವಸು ಸಂತಾನ

ಅಮಾವಸುವಿಗೆ ಭೀಮ ಮತ್ತು ನಗ್ನಜಿತ್ ಎಂಬ ಇಬ್ಬರು ಮಕ್ಕಳಾದರು.

1. ಷಡಾಸನ್ ಆತ್ಮಜಾ ನೃಪ ಎಂದು ಭಾಗವತ ಆರು ಮಕ್ಕಳೆಂದಿದೆ. ಇಲ್ಲಿ ಆಯುರ್ಧಾಮನೆಂಬ ಒಬ್ಬನನ್ನು ತನ್ನ ಸಮೀಪದಲ್ಲಿಯೇ ಇರುವವನಾಗಿ ನಿವೇದಿತನಾಗಿದ್ದ ಅವನನ್ನು ಬಿಟ್ಟು ಆರುಮಂದಿ – ಒಟ್ಟು ಏಳು ಮಕ್ಕಳೆ. ಹೆಸರುಗಳು ಭಾಗವತದಲ್ಲಿ ವ್ಯತ್ಯಾಸದಲ್ಲಿ ಹೇಳಲಾಗಿದೆ. ಆಯು, ಶ್ರುತಾಯು, ಸತ್ಯಾಯು, ರಯ, ವಿಜಯ, ಜಯ ಎಂದು. ಬ್ರಹ್ಮಪುರಾಣದಲ್ಲಿ ಬಹ್ವಾಯು ಎಂದು ಶತಾಯುವಿಗೆ ನಾಮಾಂತರ ತಿಳಿಸಿದೆ. ಪದ್ಮಪುರಾಣದಲ್ಲಿ ಆಯುಃ ದೃಢಾಯು, ವಶ್ಯಾಯು, ಧನಾಯು, ವೃತ್ತಿವಾನ್, ವಸು, ದಿವಜಾತ ಹಾಗೂ ಸುಬಾಹು ಎಂದು ಎಂಟು ಮಕ್ಕಳೆಂದು ಹೇಳಿದೆ.

ಅಮಾವಸುವಿಗೆ ವಿಜಯನೆಂಬ ಹೆಸರಿತ್ತು. ವಿಜಯನಿಗೆ ಭೀಮನಾದನು, ಭೀಮನಿಗೆ ಕಾಂಚನಪ್ರಭೆವುಳ್ಳ ಕಾಂಚನಪ್ರಭನು ಮಗನಾದನು. ಮಹಾಬಲನಾದ ಸುಹೋತ್ರನು ಕಾಂಚನಪ್ರಭನ ಮಗನಾದನು. ಸುಹೋತ್ರನ ಮಗನೇ ಜಹ್ನುವು. ಕೇಶಿನೀಯೆಂಬುವುಳು ಜಹ್ನುವಿನ ತಾಯಿಯು. ಜಹ್ನುವು ಸರ್ವಮೇಧ ಯಜ್ಞವನ್ನು ಪೂರೈಸಿದವನು.

## ಜಹ್ನುವಿನಲ್ಲಿ ಗಂಗೆಯ ಮೋಹ

**ಪತಿಲೋಭೇನ ಯಂ ಗಂಗಾ ಪತಿತ್ವೇಽಭಿಸಸಾರ ಹ ।**
**ನೇಚ್ಛತಃ ಪ್ಲಾವಯಾಮಾಸ ತಸ್ಯ ಗಂಗಾಂ ಚ ತತ್ಸದಃ ॥ 3 ॥**
**ಏಷ ತೇ ವಿಫಲಂ ಯತ್ನಂ ಪಿಬನ್ನಂಬಃ ಕರೋಮ್ಯಹಂ ।**
**ರಾಜರ್ಷಿಣಾ ತತಃ ಪೀತಾಂ ಗಂಗಾಂ ದೃಷ್ಟ್ವಾ ಮಹರ್ಷಯಃ ॥ 4 ॥**

ಜಹ್ನುವಿನ ಅದ್ಭುತವಾದ ಪರಾಕ್ರಮ ಗುಣಶೀಲಗಳನ್ನು ಕಂಡ ದೇವಗಂಗೆಯು ಇವನನ್ನು ಮೋಹಿಸಿದಳು. ಅವನ ಬಳಿ ಸಾರಿ ತನ್ನಿಚ್ಛೆಯನ್ನು ಅವನ ಮುಂದಿಟ್ಟಳು. ಜಹ್ನುವು ಅವಳ ಪ್ರೀತಿಯ ಕರೆಯನ್ನು ತಿರಸ್ಕರಿಸಿದನು.

ಭಗೀರಥನು ದೇವಗಂಗೆಯನ್ನು ಪಾತಾಳಕ್ಕೆ ಕರೆದೊಯ್ಯುವಾಗ ಜಹ್ನು ಋಷಿಯ ಆಶ್ರಮವಿತ್ತು. ಗಂಗೆಗೆ ತನ್ನ ಪ್ರಣಯಭಂಗದಿಂದ ಅತ್ಯಂತ ಕೋಪಗೊಂಡಿದ್ದಳು. ಇದರ ಪ್ರತಿಕಾರವೊ ಎಂಬಂತೆ ತನ್ನ ಭಯಂಕರ ಪ್ರವಾಹದಲ್ಲಿ ಜಹ್ನುವಿನ ಯಜ್ಞವಾಟಿಕೆ, ಯಜ್ಞೋಪಕರಣಗಳನ್ನೆಲ್ಲ ನೀರಿನ ಪ್ರವಾಹದಲ್ಲಿ ಕೊಚ್ಚಿ ಹಾಕಿದಳು. ಇದರಿಂದ ಕೋಪಗೊಂಡ ಜಹ್ನುವು ದುಷ್ಫಲವನ್ನು ಈಗಲೇ ಅನುಭವಿಸುವಿ ಎಂದು ಆ ನೀರನ್ನೆಲ್ಲ ಕುಡಿದು ಹಾಕಿದ. ಜಹ್ನುವು ಗಂಗೆಯನ್ನು ಆಪೋಶನ ಮಾಡಿದ್ದನ್ನು ನೋಡಿದ ಋಷಿಗಳು ಜಹ್ನುವಿಗೆ ಗಂಗೆಯನ್ನು ಬಿಡುವಂತೆ ಮಾಡಿದರು. ಜಹ್ನುವು ಗಂಗೆಯನ್ನು ಬಲಗಿವಿಯ ಮೂಲಕ ಹೊರಬಿಟ್ಟ. ಅಂದಿನಿಂದಾರಂಭಿಸಿ ಗಂಗೆಗೆ 'ಜಾಹ್ನವೀ' ಎಂದು ಹೆಸರಾಯಿತು. ಹೆಂಡತಿಯಾಗ ಬೇಕಾಗಿದ್ದವಳು ಅವನ ಪುತ್ರಿಯಾದಳು.

ಗಂಗೆಯು ಕಾವೇರಿಯಾಗಿ ಜಹ್ನುವನ್ನು ವರಿಸಿದಳು.

**ಯುವನಾಶ್ವಸ್ಯ ಪುತ್ರೀಂ ತು ಕಾವೇರೀಂ ಜಹ್ನುರಾವಹತ್ ।**
**ಯುವನಾಶ್ವಸ್ಯ ಶಾಪೇನ ಗಂಗಾರ್ಧೇನ ವಿನಿರ್ಮಮೇ ॥ 5 ॥**

**ಕಾವೇರೀಂ ಸರಿತಾಂ ಶ್ರೇಷ್ಠಾಂ ಜಹ್ನೋರ್ಭಾರ್ಯಾಂ ಅನಿಂದಿತಾಮ್ ।**
**ಜುಹ್ನುಸ್ತು ದಯಿತಂ ಪುತ್ರಂ ಸುನಹಂ ನಾಮ ಧಾರ್ಮಿಕಮ್ ।**
**ಕಾವೇರ್ಯಾಂ ಜನಯಾಮಾಸ ಅಜಕಸ್ತಸ್ಯ ಚಾತ್ಮಜಃ ॥ 6 ॥**

ಮಡದಿಯಾಗಬೇಕೆಂದು ಬಂದು ಮಗಳಾದ ಗಂಗೆಯ ಸಂಕಲ್ಪ ಬೇರೊಂದು ರೀತಿಯಿಂದ ಪೂರ್ಣವಾಯಿತು. ಯುವನಾಶ್ವ ಮಹಾರಾಜನು ಹಿಂದಕ್ಕೆ ಯಾವುದೋ ಕಾರಣಕ್ಕಾಗಿ ಗಂಗೆಗೆ ಮಾನವಳಾಗು ಎಂದು ಶಾಪಕೊಟ್ಟಿದ್ದನು. ಆಗ ಅವಳು ಅವನ ಉದರದಲ್ಲಿ ಕಾವೇರಿಯಾಗಿ ಹುಟ್ಟಿದಳು. ಈ ಕಾವೇರಿಯಾದರೂ ಅರ್ಧ ಭಾಗ ಜಾನ್ಹವಿಯಾಗಿದ್ದು ಜಹ್ನುವನ್ನು ಮದುವೆಯಾಗಿ ಕಾವೇರಿಯು ತನ್ನ ಮನೋಭಿಲಾಷೆ ಈ ರೀತಿ ಪೂರ್ತಿ ಮಾಡಿಕೊಂಡಳು. ಜಹ್ನುವಿನ ಮಗ ಅಜಕನೆಂಬುವನು. ಅಜಕನ ಮಗ ಬಲಾಕಾಶ್ವ – ಇವನು ಮೃಗಯಾವ್ಯಸನಿಯಾಗಿದ್ದನು. ಬಲಕಾಶ್ವನ ಮಗ ಕುಶನು. ಕುಶನಿಗೆ ಕುಶಿರ, ಕುಶನಾಭ, ಕುಶಾಂಬ, ಮೂರ್ತಿಮಂತ ಎಂಬ ನಾಲ್ಕು ಮಂದಿ ಮಕ್ಕಳಾದರು. ಇವರಲ್ಲಿ ಕುಶಿಕನು ಕಾಡು ಜನಾಂಗದಲ್ಲಿ ಬೆಳೆಯುತ್ತಿದ್ದನು. ಇವನಿಗೆ ಇಂದ್ರನಿಗೆ ಸಮಾನವಾದ ಮಗನಾಗಬೇಕೆಂದು ತಪಸ್ಸನ್ನಾಚರಿಸಿದನು. ಇದರಿಂದ ಭಯಗೊಂಡವನಂತೆ ಇಂದ್ರನು ತಾನೇ ಕುಶಿಕನಿಗೆ ಗಾಧಿಯಾಗಿ ಹುಟ್ಟಿದನು.

### ಇಂದ್ರನು ಗಾಧಿಯಾದ

**ಕುಶಿಕಸ್ತು ತಪಸ್ತೇಪೇ ಪುತ್ರಮಿಂದ್ರ ಸಮಪ್ರಭಮ್ ।**
**ಲಭೇಯಮಿತಿ ತಂ ಶಕ್ರಃ ತ್ರಾಸಾದಭ್ಯೇತ್ಯ ಜಜ್ಞಿವಾನ್ ॥ 7 ॥**

**ಅತ್ಯುಗ್ರ ತಪಸಂ ದೃಷ್ಟ್ವಾ ಸಹಸ್ರಾಕ್ಷಃ ಪುರಂದರಃ ।**
**ಪುತ್ರತ್ವೇ ಕಲ್ಪಯಾಮಾಸ ಸ ದೇವೇಂದ್ರಃ ಸುರೋತ್ತಮಃ ॥ 8 ॥**

**ಸ ಗಾಧಿರಭವದ್ ರಾಜಾ ಮಘವಾನ್ ಕೌಶಿಕಃ ಸ್ವಯಮ್ ।**
**ಪೌರುಕುತ್ಸ್ಯಭವದ್ ಭಾರ್ಯಾ ಗಾಧಿಸ್ತಸ್ಯಾಮಜಾಯತ ॥ 9 ॥**

ಕುಶಿಕನು ಇಂದ್ರನಂತಹ ಮಗನಿಗಾಗಿ ಉಗ್ರ ತಪಸ್ಸು ಮಾಡುತ್ತಿರುವಾಗ ಕುಶಿಕನು ತಪೋವೀರ್ಯಗಳನ್ನು ಕಂಡು ಇಂದ್ರನಿಗೆ ಭಯವಾಯಿತು.

ಇನ್ನೊಬ್ಬ ಇಂದ್ರ ಹುಟ್ಟಿ ಬಂದರೆ ತನ್ನ ಗೌರವ ಕಡಮೆಯಾದೀತೆಂದು ತಾನೆ ಒಂದು ಅಂಶದಿಂದ ಕುಶಿಕನ ಮಗನಾಗಿ ಜನಿಸಿ ಬಂದನು. ಕುಶಿಕನ

ಪತ್ನಿಯಾದ ಪೌರುಕುತ್ಸಿಯಲ್ಲಿ ಸುರರಾಜನೇ ಗಾಧಿಯೆಂಬ ಹೆಸರಿನಿಂದ ಹುಟ್ಟಿದ್ದರಿಂದ ಅವನಿಗೆ 'ಕೌಶಿಕ' ಎಂದು ಹೆಸರಾಯಿತು.

## ಋಚೀಕ–ಸತ್ಯವತೀ

**ಗಾಧೇಃ ಕನ್ಯಾ ಮಹಾಭಾಗಾ ನಾಮ್ನಾ ಸತ್ಯವತೀ ಶುಭಾ ।**
**ತಾಂ ಗಾಧಿಃ ಭೃಗುಪುತ್ರಾಯ ಋಚೀಕಾಯ ದದೌ ಪ್ರಭುಃ ॥ 10 ॥**

**ತಸ್ಯಾಃ ಪ್ರೀತೋಽಭವದ್ ಭರ್ತಾ ಭಾರ್ಗವೋ ಭೃಗುನಂದನಃ ।**
**ಪುತ್ರಾರ್ಥಂ ಕಾರಯಾಮಾಸ ಚರುಂ ಗಾಧೇಃ ತಥೈವ ಚ ॥ 11 ॥**

**ಉವಾಚಾಹೂಯ ತಾಂ ಭರ್ತಾ ಋಚೀಕೋ ಭಾರ್ಗವ ಸ್ತದಾ ।**
**ಉಪಯೋಜ್ಯಶ್ಚರುರಯಂ ತ್ವಯಾ ಮಾತ್ರಾ ತ್ವಯಂ ತವ ॥ 12 ॥**

ಗಾಧಿಗೆ ಸತ್ಯವತಿಯೆಂಬ ಮಹಾನುಭಾವಳಾದ ಓರ್ವ ಮಗಳಿದ್ದಳು. ಅವಳನ್ನು ಭೃಗುಮುನಿಯ ಪುತ್ರರಾದ ಋಚೀಕರಿಗೆ ವಿವಾಹ ಮಾಡಿಕೊಡಲಾಗಿತ್ತು. ಋಷೀಕರು ತಮ್ಮ ಪತ್ನಿಯಾದ ಸತ್ಯವತಿಯ ಸೇವಾಕೈಂಕರ್ಯದಿಂದ ಪರಿತುಷ್ಟರಾಗಿ ಅವಳಿಗೂ, ಅವಳ ತಾಯಿಗೂ ಸಂತತಿಯಾಗಲೆಂದು ಎರಡು ಬೇರೆ ಬೇರೆ ಚರುಗಳನ್ನು ಅಭಿಮಂತ್ರಿಸಿ ಸಿದ್ಧಪಡಿಸಿದರು. ತನ್ನ ಪತ್ನಿಯನ್ನು ಕರೆದು ಅವಳಿಗೆ ಈ ಚರುಪಾತ್ರೆಗಳನ್ನು ನೀಡಿ, ಇದು ನಿನಗಾಗಿ ತಯಾರಿಸಿದ್ದು ನೀನು ಸ್ವೀಕರಿಸು ನಿನಗೆ ಬ್ರಾಹ್ಮಣಪುತ್ರ ಹುಟ್ಟುತ್ತಾನೆ. ಅವನು ಶಾಂತನೂ ತೇಜಸ್ವಿಯೂ ಆಗಿರುತ್ತಾನೆ. ಈ ಎರಡನೇ ಚರು ನಿನ್ನ ತಾಯಿಗಾಗಿ ತಯಾರಿಸಿದ್ದೇನೆ. ಇದರಿಂದ ಕ್ಷತ್ರಿಯನೂ ಕ್ಷತ್ರಿಯಾಂತಕನೂ, ಪರಾಕ್ರಮಶಾಲಿಯೂ ದೀಪ್ತಿಮಂತನಾದ ಧೀರಪುತ್ರನು ಜನಿಸುವನು ಎಂದು ಹೇಳಿ ತಪಸ್ಸಿಗಾಗಿ ಹೊರಟು ಹೋದರು.

## ಚರುಗಳ ಬದಲಾವಣೆ

**ಗಾಧಿಃ ಸದಾರಸ್ತು ತದಾ ಋಚೀಕಾವಾಸಮಭ್ಯಗಾತ್ ।**
**ತೀರ್ಥಯಾತ್ರಾ ಪ್ರಸಂಗೇನ ಸುತಾಂ ದ್ರಷ್ಟುಂ ಜನೇಶ್ವರ ॥ 13 ॥**

**ಚರುಮಾದಾಯ ಯತ್ನೇನ ಸಾ ತು ಮಾತ್ರೇ ನ್ಯವೇದಯತ್ ।**
**ಮಾತಾ ವ್ಯತ್ಯಸ್ಯ ದೈವೇನ ದುಹಿತ್ರೇ ಸ್ವಂ ಚರುಂ ದದೌ ॥ 14 ॥**

**ಅಥ ಸತ್ಯವತೀ ಗರ್ಭಂ ಕ್ಷತ್ರಿಯಾಂತಕರಂ ತದಾ ।**
**ಧಾರಯಾಮಾಸ ದೀಪ್ತೇನ ವಪುಷಾ ಘೋರದರ್ಶನಮ್ ॥ 15 ॥**

ಮುಂದೆ ಒಂದು ದಿನ ಗಾಧಿ ಮಹಾರಾಜನು ಪುತ್ರಿಯನ್ನು ಕಾಣಲು ಬಂದನು. ತೀರ್ಥಯಾತ್ರಾ ನಿಮಿತ್ತದಿಂದ ಋಚೀಕಾಶ್ರಮಕ್ಕೆ ಬಂದನು. ಸತ್ಯವತಿಯೂ ಬಂದಿದ್ದಳು. ಸತ್ಯವತಿಯು ತನ್ನ ಪತಿಯು ಅಭಿಮಂತ್ರಿಸಿ ಕೊಟ್ಟ ಎರಡೂ ಚರುಗಳನ್ನೂ ತೋರಿಸಿದಳು. ಅವುಗಳ ಸ್ವೀಕಾರದಿಂದ ಆಗಬಹುದಾದ ಸಂತಾನಗಳ ಸ್ವರೂಪ ಸ್ವಭಾವ ಪ್ರಭೇದಗಳನ್ನು ತಿಳಿಸಿ ಅವೆರಡನ್ನೂ ಅವಳ ಕೈಯಲ್ಲಿರಿಸಿದಳು. ಅವಳಾದರೂ ದೈವವಶಾತ್ ಪ್ರಮಾದದಿಂದ ಆ ಚರುಗಳಲ್ಲಿ ಅದಲು ಬದಲಾಗಿ ತನ್ನದ್ದನ್ನು ಪುತ್ರಿಗೂ ನೀಡಿದಳು, ಮಗಳಗಾಗಿದ್ದದ್ದನ್ನು ತಾನು ಸ್ವೀಕರಿಸುತ್ತಾನೆ. ಕೃತಾರ್ಥನಾದ ರಾಜನು ತನ್ನ ಪಟ್ಟಣಕ್ಕೆ ಹೋದನು.

ಋಚೀಕರು ಆಶ್ರಮನಕ್ಕೆ ಮರಳ ತನ್ನ ಪತ್ನಿಯ ಉಗ್ರ ರೌದ್ರರಸವನ್ನೂ ರಾಜಸಕಳೆಯನ್ನೂ ಕಂಡು ನಡೆದದ್ದಲ್ಲ ದಿವ್ಯದೃಷ್ಟಿಗೆ ಗೋಚರವಾಯಿತು. ಸತ್ಯವತೀ ! ನಿನ್ನ ತಾಯಿ ನಿನಗೆ ಮೋಸ ಮಾಡಿದ್ದಾಳೆ. ಅವಳು ನಿನ್ನ ಚರು ತಿಂದು ತನ್ನದ್ದನ್ನು ನಿನಗೆ ನೀಡಿದ್ದಾಳೆ. ಇದರಿಂದಾಗಿ ನಿನ್ನಲ್ಲಿ ಇಂತಹ ಕ್ರೂರ ದರ್ಶನ ಕಂಡು ಬರುತ್ತಿದೆ. ಇದರಿಂದಾಗಿ ಮುಂದೆ ಕ್ಷತ್ರಿಯರೆಲ್ಲರನ್ನೂ ಕೊಲ್ಲುವ ಕ್ರೂರ ಕರ್ಮಿಯಾದ ಘೋರರೂಪಿ ಮಗನು ಹುಟ್ಟುತ್ತಾನೆ.

ಮಾತ್ರಾಸಿ ವಂಚಿತಾ ಭದ್ರೇ ಚರುವ್ಯತ್ಯಾಸ ಹೇತುನಾ ।
ಜನಿಷ್ಯತೇ ಹಿ ಪುತ್ರಸ್ತೇ ಕ್ರೂರ ಕರ್ಮಾತಿ ದಾರುಣಃ ॥ 16 ॥
ಭ್ರಾತಾ ಜನಿಷ್ಯತೇ ಚಾಪಿ ಬ್ರಹ್ಮಭೂತಸ್ತಪೋಧನಃ ।
ವಿಶ್ವಂ ಹಿ ಬ್ರಹ್ಮ ತಪಸಾ ಮಯಾ ತಸ್ಮಿನ್ ಸಮರ್ಪಿತಮ್ ॥ 17 ॥
ಭ್ರಾತಾ ಜನಿಷ್ಯತೇ ಚಾಪಿ ಬ್ರಹ್ಮಭೂತಃ ತಪೋಧನಃ ।

ಪ್ರಿಯೆ ! ನೀನು ನಿನ್ನ ತಾಯಿಯಿಂದ ವಂಚಿತಳಾಗಿರುವಿ. ನಿನ್ನನ್ನು ಮರುಳು ಮಾಡಿ ಅವಳು ನಿನ್ನ ಚರುವನ್ನು ಭಕ್ಷಿಸಿದ್ದಾಳೆ. ಇದರಿಂದ ನಿನಗೆ ಹುಟ್ಟುವ ಮಗ ಕ್ರೂರ, ಕಠೋರವಾಗಿರುತ್ತಾನೆ. ನಿನ್ನ ತಮ್ಮನು ಮಹಾತಪಸ್ವಿಯೂ ಬ್ರಹ್ಮಜ್ಞಾನಿಯೂ ಎನಿಸುವನು. ಬ್ರಹ್ಮಧರ್ಮದ ಸಾರಸರ್ವಸ್ವವೆಲ್ಲವನ್ನೂ ನಿನ್ನ ಚರುವಿನಲ್ಲಿಟ್ಟಿದ್ದೆ. ಅದಕ್ಕಾಗಿ ಮಹಾಬ್ರಾಹ್ಮಣ ಹುಟ್ಟಿದರೆ ನಿನಗೆ ಕ್ರೂರಾತ್ ಕ್ರೂರತರ ಹುಟ್ಟುತ್ತಾನೆ.

## ಜಮದಗ್ನಿ-ವಿಶ್ವಾಮಿತ್ರರ ಜನ್ಮ

**ಏವಮುಕ್ತಾ ಮಹಾಭಾಗಾ ಭರ್ತ್ರಾ ಸತ್ಯವತೀ ತದಾ ।**
**ಪ್ರಸಾದಯಾಮಾಸ ಪತಿಂ ಪುತ್ರೋ ಮೇ ನೇದೃಶೋ ಭವೇತ್ ॥ 18 ॥**

**ನೈಷ ಸಂಕಲ್ಪಿತಃ ಕಾಮೋ ಮಯಾ ಭದ್ರೇ ತಥಾಸ್ತ್ವಿತಿ ।**
**ಉಗ್ರ ಕರ್ಮಾ ಭವೇತ್ ಪುತ್ರಃ ಪಿತುರ್ಮಾತುಶ್ಚ ಕಾರಣಾತ್ ॥ 19 ॥**

**ಇಚ್ಛನ್ ಲೋಕಾನಪಿ ಮುನೇ ಸೃಜೇಥಾಃ ಕಿಂ ಪುನಃ ಸುತಮ್ ।**
**ಶಮಾತ್ಮಕಮೃಜುಂ ತ್ವಂ ಮೇ ಪುತ್ರಂ ದಾತುಮಿಹಾರ್ಹಸಿ ॥ 20 ॥**

**ಕಾಮಮೇವಂವಿಧಃ ಪೌತ್ರೋ ಮಮ ಸ್ಯಾತ್ ತವ ಚ ಪ್ರಭೋ ।**
**ತ್ವಯಾ ಯಥೋಕ್ತಂ ವಚನಂ ತಥಾ ಭದ್ರಂ ಭವಿಷ್ಯತಿ ॥ 21 ॥**

ಪತಿವ್ರತೆಯಾದ ಸತ್ಯವತಿಯು ಪತಿಯ ಮಾತನ್ನು ಕೇಳಿ ಭಯಪಟ್ಟಳು. ತನ್ನ ಪತಿಯನ್ನು ದೀನಳಾಗಿ ಹೀಗೆಂದಳು - ಸ್ವಾಮಿನ್ ! ಪ್ರಸನ್ನರಾಗಿರಿ, ನನ್ನ ಅಜ್ಞಾನ ಮನ್ನಿಸಿರಿ. ನನ್ನಲ್ಲಿ ತಮ್ಮಂಥ ಬ್ರಹ್ಮಜ್ಞಾನಿಗಳಿಂದ ಕ್ರೂರಕರ್ಮಿಯಾದ ಬ್ರಾಹ್ಮಣಾಧಮನು ಹುಟ್ಟುವುದು ಎಂತಹ ವಿಪರ್ಯಾಸ. ಇದನ್ನು ಹೇಗಾದರೂ ತಪ್ಪಿಸಿ, ತಾವು ಮನಸ್ಸು ಮಾಡಿದರೆ ಮತ್ತೊಂದು ಹೊಸ ಸೃಷ್ಟಿಯನ್ನೆ ಸೃಷ್ಟಿಸಿ ಬಲ್ಲಿರಿ. ಇಂಥ ತಪೋಬಲ ಸಮನ್ವಿತನಾದ ಪುತ್ರರತ್ನವನ್ನು ಸೃಷ್ಟಿಸುವುದು ಅಸಾಧ್ಯವೇ ನಿಮಗೆ ? ನನ್ನ ಉದರದಲ್ಲಿ ಪ್ರಶಾಂತನೂ, ಬ್ರಹ್ಮಜ್ಞಾನಿ, ಸೌಮ್ಯ ಸತ್ಪುತ್ರನನ್ನಾಗಿ ಮಾರ್ಪಾಡು ಮಾಡಿರಿ. ನನ್ನ ಮೊಮ್ಮಗನು ಕಾಠಿಣ್ಯ ನಿರ್ದಾಕ್ಷಿಣ್ಯಾದಿ ಕ್ಷಾತ್ರ ಗುಣಗಳೆಲ್ಲ ಒಂದು ತಲೆ ಮುಂದು ಹಾಕಿ ನನ್ನ ಮೊಮ್ಮಗನಿಗೆ ವರ್ಗಾವಣೆ ಮಾಡಿರಿ ಎಂದಳು. ಋಚೀಕನು ಪ್ರಸನ್ನನಾಗಿ ಹಾಗೆ ಆಗಲಿ ಎಂದನು.

### ಸತ್ಯವತಿಯು ಕೌಶಕೀ ನದಿಯಾದಳು

**ತತಃ ಸತ್ಯವತೀ ಪುತ್ರಂ ಜನಯಾಮಾಸ ಭಾರ್ಗವಮ್ ।**
**ತಪಸ್ಯಭಿರತಂ ದಾಂತಂ ಜಮದಗ್ನಿಂ ಶಮಾತ್ಮಕಮ್ ॥ 22 ॥**
**ಸಾಹಿ ಸತ್ಯವತೀ ಪುಣ್ಯಾ ಸತ್ಯಧರ್ಮಪರಾಯಣಾ ।**
**ಕೌಶಿಕೀತಿ ಸಮಾಖ್ಯಾತಾ ಪ್ರವೃತ್ತೇಯಂ ಮಹಾನದೀ ॥ 23 ॥**

ಅನಂತರ ಋಚೀಕನು ತನ್ನ ತಪೋಮಹಿಮೆಯಿಂದ ಪುತ್ರನ ಕ್ಷಾತ್ರನ ತಲೆಗೆ

ಬದಲಾಗಿ ತಪಃ ಪ್ರಭಾವದಿಂದ ಪರಮಶಾಂತ, ಮಹಾತಪಸ್ವಿ, ಜಿತೇಂದ್ರಿಯ, ಶಾಂತ ಸೌಮ್ಯಾಕಾರನಾದ ಜಮದಗ್ನಿಯೆಂಬ ಭಾರ್ಗವನನ್ನು ಸೃಷ್ಟಿಸಿದನು. ಸತ್ಯವತಿಯಾದರೂ ಧರ್ಮಿಷ್ಠಳೂ ಆಗಿದ್ದು ತನ್ನ ಜೀವವಿರುವವರೆಗೂ ಪತಿಯನ್ನು ಉಪಾಸಿಸಿ ಮುಂದೆ ಜನೋಪಯೋಗಿಯಾದ 'ಕೌಶಿಕೀ' ನದಿಯಾಗಿ ಹರಿದಳು.

## ಪರಶುರಾಮ ಅವತಾರ

**ಇಕ್ಷ್ವಾಕು ವಂಶ ಪ್ರಭವೋ ರೇಣುರ್ನಾಮ ನರಾಧಿಪಃ ।**
**ತಸ್ಯಕನ್ಯಾ ಮಹಾಭಾಗಾ ಕಾಮಲೀ ನಾಮ ರೇಣುಕಾ ॥ 23 ॥**

**ರೇಣುಕಾಯಾಂ ತು ಕಾಮಲ್ಯಾಂ ತಪೋವಿದ್ಯಾ ಸಮನ್ವಿತಃ ।**
**ಆರ್ಚೀಕೋ ಜನಯಾಮಾಸ ಜಾಮದಗ್ನ್ಯಂ ಸುದಾರುಣಮ್ ॥ 24 ॥**

**ರಾಮಂ ಕ್ಷತ್ರಿಯಹಂತಾರಂ ಪ್ರದೀಪ್ತಮಿವ ಪಾವಕಮ್ ॥ 25 ॥**

ಇಕ್ಷ್ವಾಕು ವಂಶದಲ್ಲಿ 'ರೇಣು' ಎಂಬ ರಾಜನಿದ್ದನು. ಅವನಿಗೆ ಕಾಮಲೀ ಅಥವಾ ರೇಣುಕಾ ಎಂಬ ಮಗಳಿದ್ದಳು. ಇವಳನ್ನು ಜಮದಗ್ನಿಗೆ ವಿವಾಹ ಮಾಡಲಾಗಿತ್ತು. ಇವರಿಂದ ಕ್ಷತ್ರಿಯಾಂತಕನಾದ ಪರಶುರಾಮನೆಂಬ ಭಗವದವತಾರಿ ಅವತರಿಸಿದನು. ಭಾರ್ಗವರಾಮ ಮಧ್ಯಾಹ್ನ ಸೂರ್ಯನಂತೆ ಪ್ರಕಾಶಮಾನನೂ ಉರಿಯುವ ಅಗ್ನಿ ಪರ್ವತವೆ ಆಗಿದ್ದು ಸಕಲ ವಿದ್ಯಾ ಪಾರಂಗತ. ರುದ್ರದೇವನಿಂದ ಧನುರ್ವೇದವನ್ನೆಲ್ಲ ಚೆನ್ನಾಗಿ ತಿಳಿದುಕೊಂಡಿದ್ದ. ಜಮದಗ್ನಿಗೆ ಶುನಃಶೇಫ, ಶುನಃಪುಚ್ಛವೆಂಬ ಇನ್ನಿಬ್ಬರು ಪುತ್ರರಾದರು.

## ವಿಶ್ವಾಮಿತ್ರ ವಂಶಾವಳಿ

**ವಿಶ್ವಮಿತ್ರಸ್ತು ಧರ್ಮಾತ್ಮಾ ನಾಮ್ನಾ ವಿಶ್ವರಥಃ ಸ್ಮೃತಃ ।**
**ಜಜ್ಞೇ ಭೃಗುಪ್ರಸಾದೇನ ಕೌಶಿಕಾದ್ ವಂಶವರ್ಧನಃ ॥ 26 ॥**

**ವಿಶ್ವಾಮಿತ್ರಸ್ಯ ಚ ಸುತಾ ದೇವರಾತಾದಯಃ ಸ್ಮೃತಾಃ ॥ 27 ॥**

ಇತ್ತ ಬ್ರಾಹ್ಮಣ್ಯದ ಚರುವನ್ನು ಭಕ್ಷಿಸಿದ ಸತ್ಯವತಿಯ ತಾಯಿಗೆ ಗಾಧಿರಾಜನಿಂದ ಮಹಾತಪಸ್ವಿಯೂ ಶಾಂತಿಸಾಗರನೂ ಆದ 'ವಿಶ್ವಾಮಿತ್ರ'ನೆಂಬ ಪುತ್ರ ಜನಿಸಿದನು. ಅದ್ಭುತವಾದ ಉಗ್ರ ತಪಸ್ಸನ್ನಾಚರಿಸಿ ಬ್ರಹ್ಮರ್ಷಿ ಪದವಿಗೇರಿದ ಹಾಗೂ ಗಾಯತ್ರೀ ಸಾಕ್ಷಾತ್ಕರಿಸಿ ವಿಶ್ವಕ್ಕೆಲ್ಲ ಹಿತ

ಸಾಧಿಸಿ 'ವಿಶ್ವಾಮಿತ್ರ'ನೆಂದು ಸಾರ್ಥಕ ಮಾಡಿಕೊಂಡ. ವಿಶ್ವಾಮಿತ್ರ ಮುನಿಯು ಕುಶಿಕ ವಂಶವನ್ನು ಉದ್ಧರಿಸಿದ.

ವಿಶ್ವಾಮಿತ್ರನು 'ಶಾಲಾವತೀ' ಎಂಬ ಪತ್ನಿಯಲ್ಲಿ ದೇವರಾತ, ಕತಿ, ಹಿರಣ್ಯಾಕ್ಷರು ರೇಣುಚಾರ್ಯೆಯಲ್ಲಿ ರೇಣುಕ, ಸಾಂಕೃತಿ, ಮುದ್ಗಲ, ಗಾಲವ, ಮಧುಚ್ಛಂದ, ದೇವಲರೂ ದೃಷ್ಟದ್ವತೀ ಎಂಬುವಳಲ್ಲಿ ಅಷ್ಟಕ, ಕಚ್ಛಪ, ಹಾರೀತ ಮೊದಲಾದ ಮಕ್ಕಳಾದರು.

### ವಿಶ್ವಾಮಿತ್ರನ ಪೀಳಿಗೆ

**ಪಾಣಿನೋ ಬಭ್ರವಶ್ಚೈವ ಧ್ಯಾನಜಪ್ಯಾಃ ತಥೈವ ಚ ।**
**ಪಾರ್ಥಿವಾ ದೇವರಾತಾಶ್ಚ ಶಾಲಂಕಾಯನ ಬಾಷ್ಕಲಾಃ ॥ 28 ॥**
**ಲೋಹಿತಾ ಯಾಮದೂತಾಶ್ಚ ತಥಾ ಕಾರೀಷವಃ ಸ್ಮೃತಾಃ ।**
**ಸೌಶ್ರುತಾಃ ಕೌಶಿಕಾ ರಾಜನ್ ತಥಾನ್ಯೇ ಸೈಂಧವಾಯನಾಃ ॥ 29 ॥**
**ದೇವಲಾ ರೇಣವಶ್ಚೈವ ಯಾಜ್ಞವಲ್ಕ್ಯಾಘಮರ್ಷಣಾಃ ।**
**ಔದುಂಬರಾ ಹ್ಯಭಿಷ್ಣಾತಾಃ ತಾರಕಾಯನ ಚುಂಚುಲಾಃ ॥ 30 ॥**
**ಶಾಲಾವತ್ಯಾಃ ಹಿರಣ್ಯಾಕ್ಷಾಃ ಸಾಂಕೃತ್ಯಾ ಗಾಲವಾಸ್ತಥಾ ।**
**ಬಾದರಾಯಣಿನಶ್ಚಾನ್ಯೇ ವಿಶ್ವಾಮಿತ್ರಸ್ಯ ಧೀಮತಃ ॥ 31 ॥**

ಮಹಾನುಭಾವನಾದ ವಿಶ್ವಾಮಿತ್ರನ ಮಕ್ಕಳ ಪೀಳಿಗೆ ಹೀಗಿದೆ – ಪಾಣಿಗಳು, ಬಭ್ರುಗಳು, ಧ್ಯಾನಜಪ್ಯರು, ಪಾರ್ಥಿವರು, ದೇವರಾತರು, ಶಾಲಂಕಾಯರು, ಬಾಷ್ಕಲರು, ಲೋಹಿತರು, ಯಮದೂತರು, ಕಾರೀಷುಗಳು, ಸೌಶ್ರುತರು, ಕೌಶಿಕರು, ಸೈಂಧವಾಯನರು, ದೇವಲರು, ರೇಣುಗಳು, ಯಜ್ಞವಲ್ಕ್ಯರು. ಇವರೆಲ್ಲರೂ ವಿಶ್ವಾಮಿತ್ರನ ವಂಶೀಯರು. ಕೌಶಿಕ ಗೋತ್ರದವರ ಸಂಖ್ಯೆ ಅಪಾರವಾಗಿದೆ. ಇವರೆಲ್ಲರೂ ಇತರ ಗೋತ್ರದವರೊಂದಿಗೆ ವಿವಾಹಕ್ಕೆ ಯೋಗ್ಯರಾಗಿರುತ್ತಾರೆ. ವಸಿಷ್ಠ-ವಿಶ್ವಾಮಿತ್ರ ಗೋತ್ರದವರಿಗೂ ವೈವಾಹಿಕ ಸಂಬಂಧವೇರ್ಪಡಬಹುದು.

### ಶುನಃಶ್ಶೇಪನ ಜ್ಯೇಷ್ಠತೆ

**ವಿಶ್ವಾಮಿತ್ರಾತ್ಮಜಾನಾಂ ತು ಶುನಃ ಶೇಪೋಽಗ್ರಜಃ ಸ್ಮೃತಃ ।**
**ಭಾರ್ಗವಃ ಕೌಶಿಕತ್ವಂ ಹಿ ಪ್ರಾಪ್ತಃ ಸ ಮುನಿಸತ್ತಮಃ ॥ 32 ॥**

**ವಿಶ್ವಾಮಿತ್ರಸ್ಯ ಪುತ್ರಸ್ತು ಶುನಃ ಶೇಪೋऽಭವತ್ ಕಿಲ ।**
**ಹರಿದಶ್ವಸ್ಯ ಯಜ್ಞೇ ತು ಪಶುತ್ವೇ ವಿನಿಯೋಜಿತಃ ॥ 33 ॥**
**ದೇವೈಃ ದತ್ತಃ ಸವೈ ಯಸ್ಮಾದ್ ದೇವರಾತಸ್ತತೋऽಭವತ್ ॥ 34 ॥**

ವಿಶ್ವಾಮಿತ್ರರ ಮಕ್ಕಳಲ್ಲಿ ಶುನಃಶ್ಶೇಪನೇ ಹಿರಿಯನೆಂದು ಹೇಳುವರು. ವಸ್ತುತಃ ಇವನು ಜಮದಗ್ನಿಯ ತಮ್ಮ ಈ ಶುನಃಶ್ಶೇಪನು ಋಚೀಕರ ಮಧ್ಯದ ಮಗನಾಗಿದ್ದು ಭಾರ್ಗವ ವಂಶದವನು. ಭೃಗುಕುಲದ ಇವನು ಕೌಶಿಕ ವಂಶಕ್ಕೆ ಬಂದನು. ಇವನು ಹರಿದಶ್ವನ ಯಜ್ಞದಲ್ಲಿ ಯಾಗೀಯ ಪಶುವನ್ನಾಗಿ ಮೀಸಲಾಗಿಡಲ್ಪಟ್ಟಿದ್ದ. ಇವನು ದೇವತೆಗಳನ್ನು ವೈದಿಕ ಮಂತ್ರಗಳಿಂದ ಪ್ರಾರ್ಥಿಸಿದಾಗ ಅವರು ವಿಶ್ವಾಮಿತ್ರನಿಗೆ ಇವನನ್ನು ಒಪ್ಪಿಸಿದರು. ದೇವತೆಗಳಿಂದ ಕೊಡಲ್ಪಟ್ಟವನೆ 'ದೇವರಾತ' ಎಂದು ಪ್ರಖ್ಯಾತನಾದನು.

**ದೇವರಾತಾದಯಃ ಸಪ್ತ ವಿಶ್ವಾಮಿತ್ರಸ್ಯ ವೈ ಸುತಾಃ ।**
**ದೃಶದ್ವತೀ ಸುತಶ್ಚಾಪಿ ವಿಶ್ವಾಮಿತ್ರಾತ್ ತಥಾऽಷ್ಟಕಃ ॥ 35 ॥**
**ಅಷ್ಟಕಸ್ಯ ಸತೋ ಲೌಹಿಃ ಪ್ರೋಕ್ತೋ ಜಹ್ನುಗಣೋ ಮಯಾ ।**
**ಅಥ ಊರ್ಧ್ವಂ ಪ್ರವಕ್ಷ್ಯಾಮಿ ವಂಶಮಾಯೋಃ ಮಹಾತ್ಮನಃ ॥ 36 ॥**

ವಿಶ್ವಾಮಿತ್ರನಿಗೆ ದೇವರಾತನೆ ಮೊದಲಾದ ಏಳು ಪುತ್ರರಲ್ಲದೆ ದೃಶದ್ವತಿಯಿಂದ ಜನಿಸಿದ 'ಅಷ್ಟಕ'ನೆಂಬ ಎಂಟನೆ ಮಗನಿದ್ದನು. ಅಷ್ಟಕನ ಮಗನೆ 'ಲೌಹಿ' ಎಂಬುವನು.

ರಾಜನೇ! ಊರ್ವಶಿಯ ಮಗನಾದ ಅಮಾವಸುವಿನ ಪ್ರಖ್ಯಾತ ವಂಶದಲ್ಲಿ ವಿಖ್ಯಾತನಾದ ಜಹ್ನು ಋಷಿಯ ಕುಲಕ್ರಮಾಗತಿಯನ್ನು ತಿಳಿಸಿರುವೆನು. ಮುಂದೆ ಇದೇ ಪುರೂರವನ ಜ್ಯೇಷ್ಠ ಪುತ್ರನಾದ ಆಯುವಿನ ವಂಶವನ್ನು ಚಿತ್ತರಗೊಳಿಸುವೆ, ಕೇಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಅಮಾವಸು–ವಿಶ್ವಾಮಿತ್ರನ ವಂಶಾವಳಿವೆಂಬಲ್ಲಿ
ಇಪ್ಪತ್ತೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಅಷ್ಟಾವಿಂಶೋಽಧ್ಯಾಯಃ

## ಯತ್ರ ರಜಿಃ ತತ್ರ ಧರ್ಮಃ

*ವೈಶಂಪಾಯನ ಉವಾಚ-*

ಆಯೋಃ ಪುತ್ರಾಃ ತಥಾ ಪಂಚ ಸರ್ವೇ ವೀರಾಃ ಮಹಾರಥಾಃ ।
ಸ್ವರ್ಭಾನು ತನಯಾಯಾಂ ಚ ಪ್ರಭಾಯಾಂ ಜಜ್ಞಿರೇ ನೃಪ ॥ 1 ॥

ನಹುಷಃ ಪ್ರಥಮಂ ಜಜ್ಞೇ ವೃದ್ಧಶರ್ಮಾ ತತಃ ಪರಮ್ ।
ರಂಭೋ ರಜಿರನೇನಾಶ್ಚ ತ್ರಿಷು ಲೋಕೇಷು ವಿಶ್ರುತಾಃ ॥ 2 ॥

ರಜಿಃ ಪುತ್ರಶತಾನೀಹ ಜನಯಾಮಾಸ ಪಂಚ ವೈ ।
ರಾಜೇಯಮಿತಿ ವಿಖ್ಯಾತಂ ಕ್ಷತ್ರಮಿಂದ್ರ ಭಯಾವಹಮ್ ॥ 3 ॥

ಪುರೂರವಸ್ಸಿನ ಜ್ಯೇಷ್ಠಪುತ್ರನಾದ ಆಯುವಿಗೆ ರಾಹುವಿನ ಮಗಳಾದ 'ಪ್ರಭಾ' ಎಂಬ ಪತ್ನಿಯಿಂದ ನಹುಷ, ವೃದ್ಧಶರ್ಮ, ರಂಭ, ರಜಿ, ಅನೇನಾ ಎಂಬ ಪಂಚಪುತ್ರರತ್ನರು ಜನಿಸಿದರು. ವೃದ್ಧಶರ್ಮವನ್ನೇ ಕ್ಷತ್ರ ವೃದ್ಧ ಎಂದು ಕರೆಯಲಾಗಿದೆ. ಇವರಲ್ಲಿ ರಜಿರಾಜನಿಗೆ ರಾಜೇಯರೆಂಬ ಐನೂರು ಮಕ್ಕಳಾದರು. ಈ ರಾಜೇಯ ಹೆಸರನ್ನು ಕೇಳದ ಮಾತ್ರಕ್ಕೆ ಇಂದ್ರದೇವನಿಗೂ ಹೆದರಿಕೆ.

## ದೇವ-ದಾನವರಲ್ಲಿ ಯಾರಿಗೆ ಜಯ?

ಯತ್ರ ದೇವಾಸುರೇ ಯುದ್ಧೇ ಸಮುತ್ಪನ್ನೇ ಸುದಾರುಣೇ ।
ದೇವಾಶ್ಚೈವಾಸುರಾಶ್ಚೈವ ಪಿತಾಮಹಮಥಾಬ್ರುವನ್ ॥ 4 ॥

ಆವಯೋಃ ಭಗವನ್ ಯುದ್ಧೇ ಕೋ ವಿಜೇತಾ ಭವಿಷ್ಯತಿ ।

ದೇವಾಸುರ ಯುದ್ಧವು ಪ್ರಾರಂಭವಾಗಿತ್ತು. ಘನಘೋರವಾದ ಯುದ್ಧದಲ್ಲಿ ಜಯಲಕ್ಷ್ಮಿಯು ಯಾರ ಕಡೆ ಒಲಿಯುವವಳೆಂದು ಅನಿಶ್ಚಿತವಾಗಿತ್ತು. ದೇವಾಸುರರೆಲ್ಲರೂ ಬ್ರಹ್ಮನ ಬಳ ಬಂದು ಪಿತಾಮಹನೇ ! ಈ ಸಂಗ್ರಾಮದಲ್ಲಿ ಯಾರಿಗೆ ಜಯಲಕ್ಷ್ಮೀ ಮಾಲೆ ಹಾಕಿ ವರಿಸುವಳೆಂದು ಕೇಳಿದರು.

### ರಜಿಯಿದ್ದ ಪಕ್ಷವೆ ಜಯಪಕ್ಷ

**ಯೇಷಾಮರ್ಥಾಯ ಸಂಗ್ರಾಮೇ ರಜಿರಾತ್ತಾಯುಧಃ ಪ್ರಭುಃ ।**
**ಯೋತ್ಸ್ಯತೇ ತೇ ಜಯಿಷ್ಯಂತಿ ತ್ರೀನ್ ಲೋಕಾನ್ ನಾತ್ರ ಸಂಶಯಃ ॥ 5॥**
**ಯತೋ ರಜಿಃ ಧೃತಿಸ್ತತ್ರ ಶ್ರೀಶ್ಚ ತತ್ರ ಯತೋ ಧೃತಿಃ ।**
**ಯತೋ ಧೃತಿಶ್ಚ ಶ್ರೀಶ್ಚೈವ ಧರ್ಮಸ್ತತ್ರ ಜಯಸ್ತಥಾ ॥ 6 ॥**

ಬ್ರಹ್ಮದೇವರು- ದೇವದಾನವರೇ! ಗೆಲುವಿನ ಗುಟ್ಟು ಹೇಳುವೆ ಕೇಳಿರಿ, ರಜಿ ರಾಜನು ಯಾವ ಪಕ್ಷವಹಿಸಿ ಸಹಾಯ ಸಲ್ಲಿಸುವನೋ ಅಲ್ಲಿಯೇ ಜಯವಿರುತ್ತದೆ. ಅವನ ಬೆಂಬಲವಿರುವವರಿಗೆ ಮೂರ್ಲೋಕ ಜಯವೂ ಸುಲಭಸಾಧ್ಯವು.

ರಜಿ ಇದ್ದಲ್ಲಿ ಧೈರ್ಯ, ಧೈರ್ಯವಿರುವಲ್ಲಿ ಸಂಪತ್ತು, ಧೈರ್ಯಲಕ್ಷ್ಮೀ ಎರಡೂ ಇರುವಲ್ಲಿ ಧರ್ಮವು, ಧರ್ಮವಿರುವಲ್ಲಿಯೇ ಜಯವಿರುತ್ತದೆ. ಯತೋ ಧರ್ಮಃ ತತೋ ಜಯಃ ಎಂದರು.

ಬ್ರಹ್ಮದೇವರ ಮಾತನ್ನು ಕೇಳಿ ರಜಿಯ ಸಮೀಪ ಬಂದು ಒಕ್ಕೊರಳಿನಿಂದ ಸಹಾಯ ಹಸ್ತ ಬೇಡಿದರು.

### ನಮ್ಮ ಜಯಕ್ಕಾಗಿ ಧನಸ್ಸನ್ನು ಹಿಡಿ

**ತೇ ದೇವದಾನವಾಃ ಪ್ರೀತಾಃ ದೇವೇನೋಕ್ತಾ ರಜೇರ್ಜಯೇ ।**
**ಅಭ್ಯಯುಃ ಜಯಮಿಚ್ಛಂತೋ ವೃಣ್ವಾನಾ ಭರತರ್ಷಭ ॥ 7 ॥**
**ಊಚುಃ ಅಸ್ಮಜ್ಜಯಾಯ ತ್ವಂ ಗೃಹಾಣ ವರಕಾರ್ಮುಕಮ್ ।**
**ಯದಿ ದೈತ್ಯಗಣಾನ್ ಸರ್ವಾನ್ ಜಿತ್ವಾ ಶಕ್ರ ಪುರೋಗಮಾಃ ॥ 8 ॥**
**ಇಂದ್ರೋ ಭವಾಮಿ ಧರ್ಮೇಣ ತತೋ ಯೋತ್ಸ್ಯಾಮಿ ಸಂಯುಗೇ ।**
**ದೇವಾಃ ಪ್ರಥಮತೋ ಭೂಯಃ ಪ್ರತ್ಯೂಚುಃ ಹೃಷ್ಟಮಾನಸಾಃ ॥ 9 ॥**

ರಜಿ ರಾಜನ ತಾಯಿಯಾದ ಪ್ರಭಾದೇವಿಯು ದಾನವೇಶ್ವರ ರಾಹುವಿನ ಪುತ್ರಿಯಾಗಿದ್ದು ದೈತ್ಯ, ದಾನವರೆಲ್ಲರೂ ರಜಿಗೆ ದೂರದ ಸಂಬಂಧಿಗಳಾಗಿದ್ದರು. ಹಾಗೆಯೇ ರಜಿಯ ತಂದೆ ಆಯುವು ದೇವಕನ್ಯೆ ಊರ್ವಶಿಯಿಂದ ಜನಿಸಿದ್ದರಿಂದ ರಜಿ ರಾಜನಿಗೆ ದೇವತೆಗಳೂ ಹತ್ತಿರ ಸಂಬಂಧವುಳ್ಳವ-ರಾಗಿದ್ದರು. ಇಬ್ಬರೂ ಬಂದು ಸಹಾಯ ಯಾಚಿಸಿದ್ದರು.

ರಜಿಯು – ಮಡದಿ ಮಕ್ಕಳ ಸೂಚನೆಯಂತೆ "ಯಾರು ನನ್ನನ್ನು ತಮ್ಮ ಸಿಂಹಾಸನದಲ್ಲಿ ಕೂಡಿಸಿ ಸಾರ್ವಭೌಮನೆಂದು ಗೌರವಿಸುವರೋ ಅವರಿಗೆ ನನ್ನ ಬೆಂಬಲವಿರುತ್ತದೆ" ಎಂದನು.

ಮೊದಲು ರಜಿ ರಾಜನು ದೇವತೆಗಳನ್ನುದ್ಧೇಶಿಸಿ– ನಾನು ದಾನವರನ್ನು ಗೆದ್ದ ನಂತರ ನನ್ನನ್ನೆ ಇಂದ್ರನೆಂದು ಇಂದ್ರ ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡುವುದಾದರೇ ನಾನು ಶಸ್ತ್ರ ಹಿಡಿದು ದೈತ್ಯರ ವಿರುದ್ಧ ಹೋರಾಡುವೆ ಎಂದನು.

ದೇವತೆಗಳೆಲ್ಲರೂ ಹಾಗೇ ಆಗಲಿ ಎಂದು ಸಂತೋಷದಿಂದ ನುಡಿದರು. ದೇವತೆಗಳ ಮಾತನ್ನು ಕೇಳಿ, ದೇವತೆಗಳು ಕೇಳಿದಂತೆ ಹೀಗೆಂದನು.

**ಪಪ್ರಚ್ಛ ಅಸುರಮುಖ್ಯಾಂಸ್ತು ಯಥಾ ದೇವಾನಪೃಚ್ಛತ ।**
**ದಾನವಾ ದರ್ಪಪೂರ್ಣಾಸ್ತು ಸ್ವಾರ್ಥಮೇವಾನುಗಮ್ಯ ಹ ॥ 10 ॥**
**ಅಸ್ಮಾಕಮಿಂದ್ರಃ ಪ್ರಹ್ಲಾದೋ ಯಸ್ಯಾರ್ಥೇ ವಿಜಯಾಮಹೇ ॥ 11 ॥**

ದಾನವರೇ, ನಾನು ಯುದ್ಧ ಮಾಡಿದರೆ ದೇವತೆಗಳನ್ನೆಲ್ಲ ಸೋಲಿಸುವುದು ನಿಶ್ಚಿತವು. ಅನಂತರ ಇಂದ್ರ ಪದವಿಯಲ್ಲಿ ನನ್ನನ್ನೆ ಕೂಡಿಸಿ ಇಂದ್ರನೆಂದು ಒಪ್ಪುವಿರಾ? ಎಂದಾಗ ದೈತ್ಯರು ರಾಜನೇ! ರಾಜನೂ ಇಂದ್ರನೂ ಸಾರ್ವಭೌಮನೂ ಪ್ರಹ್ಲಾದರಾಜನೇ. ಅವನಿಗೆ ಇಂದ್ರ ಸಿಂಹಾಸನ ಕೊಡಲಿಕ್ಕಾಗಿಯೇ ನಮ್ಮ ಈ ಹೋರಾಟ. ನಿನಗೆ ಎಂದೂ ಅದನ್ನು ಬಿಟ್ಟುಕೊಡಲಾರೆವು ಎಂದರು. ಆದರೂ ನಮಗೆ ನೀನು ಸಹಾಯ ಮಾಡು ಎಂದರು.

ದೇವತೆಗಳಾದರೂ ಸಂತೋಷದಿಂದ ಅವನ ಕರಾರನ್ನು ಒಪ್ಪಿದರು.

ಭವಿಷ್ಯಃಽಂದ್ರೋ ಜಿತ್ವೈವಂ ದೇವೈರುಕ್ತಸ್ತು ಪಾರ್ಥಿವಃ ।
ಜಘಾನ ದಾನವಾನ್ ಸರ್ವಾನ್ ಯೇಽವಧ್ಯಾ ವಜ್ರ ಪಾಣಿನಃ ॥ 12 ॥

ಸವಿಪ್ರಣಷ್ಟಾಂ ದೇವಾನಾಂ ಪರಮಶ್ರೀಃ ಶ್ರಿಯಂ ವಶೀ ।
ನಿಹತ್ಯ ದಾನವಾನ್ ಸರ್ವಾನ್ ಆಜಹಾರ ರಜಿಃ ಪ್ರಭುಃ ॥ 13 ॥

ಇಂದ್ರೋಽಪಿ ತಾತ ದೇವಾನಾಂ ಸರ್ವೇಷಾಂ ನಾತ್ರ ಸಂಶಯಃ ।
ಯಸ್ಯಾಹಮೀಂದ್ರಃ ಪುತ್ರಸ್ತೇ ಖ್ಯಾತಿಂ ಯಾಸ್ಯಾಮಿ ಕರ್ಮಭಿಃ ॥ 14 ॥

ರಜಿ ರಾಜನ ಒಪ್ಪಂದಕ್ಕೆ ಸಹಿ ಹಾಕಿದ. ದೇವತೆಗಳ ಪಕ್ಷ ವಹಿಸಿ ದೈತ್ಯರ ವಿರುದ್ಧ ಹೋರಾಡಿ ದೇವತೆಗಳಿಗೆ ವಿಜಯಶ್ರೀ ಒಲಿದು ಮಾಲೆ ಹಾಕಿದಳು. ಅಮೋಘವೀರ್ಯನಾದ ರಜಿಯು ಅಮೋಘ ಶಸ್ತ್ರಾಸ್ತ್ರಗಳಿಂದ ದೈತ್ಯ ದಾನವರನ್ನು ಲೀಲಾಜಾಲವಾಗಿ ಸೋಲಿಸಿದನು. ಹೀಗೆ ಜಯ ಸಾಧಿಸಿದ ರಜಿಯನ್ನು ಗೌರವಿಸಲು ಇಂದ್ರನೊಂದಿಗೆ ಮುಂದೆ ಬಂದರು.

ರಜಿ ರಾಜನೇ ! ಇಂದಿನಿಂದ ನೀನೇ ಸ್ವರ್ಗಕ್ಕೆಲ್ಲ ಇಂದ್ರ. ನನಗೂ ನೀನೂ ತಂದೆಯಿದ್ದಂತೆ. ಇಂದಿನಿಂದ ನಾನು ರಜಿಪುತ್ರನೆಂದು ಹೇಳಿಕೊಳ್ಳುತ್ತೇನೆ. ಇದೋ ಈ ಸ್ವರ್ಗ ಸಿಂಹಾಸನ, ಇಂದ್ರ ಪದವಿ ನಿನ್ನ ಅಧೀನವೆಂದು ಧೂರ್ತ ವಿನಯ ತೋರುತ್ತಾ ನಿಂತನು.

ಸ ತು ಶಕ್ರವಚಃ ಶೃತ್ವಾ ವಂಚಿತಸ್ತೇನ ಮಾಯಯಾ ।
ತಥೇತ್ಯೇವಾಬ್ರವೀದ್ ರಾಜಾ ಪ್ರೀಯಮಾಣಃ ಶತಕ್ರತುಮ್ ॥ 15 ॥

ಪರಮಸಾತ್ವಿಕನೂ ಸೌಹಾರ್ದ ಸ್ನೇಹಿಯೂ ಆದ ರಜಿಯು ದೇವರಾಜನಿಂದ ಈ ದೊಡ್ಡ ಮಾತನ್ನು ಕೇಳಿ ಸಂತುಷ್ಟನಾಗಿ ಹಾಗೆ ಆಗಲಿ ಎಂದು ದೇವರಾಜ್ಯವನ್ನು ಇಂದ್ರನಿಗೆ ಬಿಟ್ಟು ನಿಸ್ಪೃಹಿಯಾಗಿ ರಜಿಯು ಮರಳಿ ಭೂಲೋಕಕ್ಕೆ ಇಳಿದು ಬಂದನು. ಕೆಲವು ಕಾಲವಿದ್ದು ಮುಂದೆ ಕಾಲಗತಿಯನ್ನಪ್ಪಿದ.

### ರಾಜೇಯರಿಂದ ಸ್ವರ್ಗಕ್ಕೆ ಲಗ್ಗೆ

ತಸ್ಮಿಂಸ್ತು ದೇವಸದೃಶೇ ದಿವಂ ಪ್ರಾಪ್ತೇ ಮಹೀಪತೌ ।
ದಾಯಾದ್ಯಮಿಂದ್ರಾದ್ ಆಜಹ್ರುಃ ಆಚಾರಾತ್ ತನಯಾ ರಜೇಃ ॥ 16 ॥

ಪಂಚಪುತ್ರ ಶತಾನ್ಯಸ್ಯ ತದ್ವೈ ಸ್ಥಾನಂ ಶತಕ್ರತೋಃ ।
ಹೃತರಾಜ್ಯೋಽಬ್ರವೀದ್ ಶಕ್ರೋ ಹೃತಭಾಗೋ ಬೃಹಸ್ಪತಿಮ್ ॥ 17 ॥

ರಜಿ ರಾಜನು ದಿವಂಗತನಾದ ಮೇಲೆ ಆ ರಜಿ ರಾಜನ ಐನೂರು ಮಂದಿ ರಾಜೇಯರು ಯುದ್ಧ ದರ್ಮದರು ಚಂಡಪ್ರಚಂಡರು. ರಜಿರಾಜನು ಇರುವವರೆಗೂ ಅವರಿಗೆ ಏನೂ ಮಾಡಲು ಆಗುತ್ತಿದ್ದಿಲ್ಲ. ಅವನು ಮೃತನಾದ ಮಾರನೆ ದಿನವೇ ಸ್ವರ್ಗವನ್ನೇ ಆಕ್ರಮಿಸಿದರು. ತಮ್ಮ ಪರಾಕ್ರಮದಿಂದ ದೇವತೆಗಳ ವಿರುದ್ಧ ಹೋರಾಡಿದರು. ದೇವೇಂದ್ರನಿಂದ ಸ್ವರ್ಗಸಾಮ್ರಾಜ್ಯ ಕಸಿದುಕೊಂಡರು. ಯುದ್ಧದ ಪೂರ್ವದ ಒಡಂಬಡಿಕೆಯಂತೆ ಈ ಸ್ವರ್ಗವೆಲ್ಲವೂ ನಮ್ಮ ತಂದೆಗೆ ಸೇರಿದ್ದಾಗಿದೆ. ತಂದೆಯ ನಂತರ ಮಕ್ಕಳಾದ ನಾವೇ ಈ ಸ್ವರ್ಗದ ಅಧಿಕಾರಿಗಳು. ಇನ್ನು ಮುಂದೆ ಯಜ್ಞಯಾಗಗಳಲ್ಲಿನ ಆಹುತಿಗಳೆಲ್ಲ ಇಂದ್ರರಾದ ನಮಗೆ ಸೇರಬೇಕು ಎಂದು ಹೇಳಿ ಸಿಂಹಾಸನ ಆಕ್ರಮಿಸಿ ಆಹುತಿಗಳನ್ನೆ ಅವರೆ ಅಪಹರಿಸಿದರು. ಇಂದ್ರದೇವರು ಆಹುತಿಯಿಲ್ಲದೆ ಕೃಶವಾಗುತ್ತಾ ಬಂದರು. ಹೀಗೆ ಬಹಳ ಕಾಲ ಮುಗಿದ ಮೇಲೆ ಇಂದ್ರದೇವರು ಬೃಹಸ್ಪತ್ಯಾಚಾರ್ಯರಿಗೆ ತಮ್ಮ ಸ್ಥಿತಿಯನ್ನು ತೋಡಿಕೊಂಡರು.

**ಬೋರೆಹಣ್ಣಿನಷ್ಟಾದರೂ ಆಹುತಿ ಕೊಡಿಸಿರಿ**

**ಬದರೀಫಲ ಮಾತ್ರಂ ವೈ ಪುರೋಡಾಶಂ ವಿಧತ್ಸ್ವ ಮೇ ।**
**ಬ್ರಹ್ಮರ್ಷೇ ಯೇನ ತಿಷ್ಠೇಯಂ ತೇಜಸಾಽಽಪ್ಯಾಯಿತಃ ಸದಾ ॥ 18 ॥**

**ಬ್ರಹ್ಮನ್ ಕೃಶೋಽಹಂ ವಿಮನಾ ಹೃತರಾಜ್ಯೋ ಹೃತಾಶನಃ ॥ 19 ॥**

ರಾಜ್ಯಭ್ರಷ್ಟನಾದ ದೇವೇಂದ್ರನು ಬೃಹಸ್ಪತ್ಯಾಚಾರ್ಯರೊಂದಿಗೆ ಗುಟ್ಟಾಗಿ ಬಂದು ಮೆಲ್ಲಗೆ ಹೇಳಿದನು. ಗುರುಗಳೇ ! ನನಗೆ ಬೋರೆ ಕಾಯಿಯಷ್ಟಾದರೂ ಪುರೋಡಾಶವನ್ನು ಆಹುತಿ ರೂಪದಲ್ಲಿ ಕೊಡಿಸಬಲ್ಲಿರಾ? ಈ ಮೂರು ಲೋಕದಲ್ಲಿಯೂ ನನಗೆ ಯಾರೂ ಯಜ್ಞದಲ್ಲಿ ಆಹುತಿ ನೀಡುವುದಿಲ್ಲ.

ರಜಿಯ ಮಕ್ಕಳ ಕಾಟ ಅತಿಯಾಗಿದೆ. ಹೀಗಾಗಿ ನಮಗೆಲ್ಲ. ಕಂಗಾಲಾಗುವ ಪರಿಸ್ಥಿತಿವುಂಟಾಗಿದೆ. ಹೇಗಾದರೂ ಮಾಡಿ ಸುರರಾಜ್ಯವು ಮರಳಿ ನಮಗೆ ದೊರೆಯುವಂತೆ ಮಾಡಿರಿ ಎಂದರು.

*ಬೃಹಸ್ಪತಿರುವಾಚ–*

**ಯದ್ಯೇವಂ ಚೋದಿತಃ ಶಕ್ರ ತ್ವಯಾಸ್ಯಾಂ ಪೂರ್ವಮೇವ ಹಿ ।**
**ನಾಭವಿಷ್ಯತ್ ತ್ವತ್ ಪ್ರಿಯಾರ್ಥಮಕರ್ತವ್ಯಂ ಮಮಾನಘ ॥ 20 ॥**

**ಯಥಾಭಾಗಂ ಚ ರಾಜ್ಯಂ ಚ ನಚಿರಾತ್ ಪ್ರತಿಲಪ್ಸ್ಯಸೇ ।**
**ತಥಾ ತಾತ ಕರಿಷ್ಯಾಮಿ ಮಾಭೂತ್ ತೇ ವಿಕ್ಲವಂ ಮನಃ ॥ 21 ॥**

ಸುರಪತಿಯ ದೀನ ವಾಕ್ಯಗಳನ್ನು ಕಂಡು ಕೇಳ ಎದೆ ಕರಗಿದ ಗುರುಗಳು ದೇವೇಂದ್ರನೆ ! ಈ ವಿಷಯವನ್ನು ಇಷ್ಟು ದಿವಸ ನನಗೆ ಮೊದಲೆ ಏಕೆ ಹೇಳಲಿಲ್ಲ? ಆಗಲೇ ತಿಳಸಿದ್ದರೇ ನಿನಗಾಗಿ ಮಾಡಬಾರದ ಚಾರ್ವಾಕ ಮತ ಪ್ರಾರಂಭಿಸಿರಬೇಕಿದ್ದಿಲ್ಲ. ಆಗಲೀ ಈಗಲೂ ನೀನು ಚಿಂತಿಸಬೇಕಿಲ್ಲ.

## ಚಾರ್ವಾಕ ಮತ ಪ್ರಚಾರ

**ನಾಸ್ತಿವಾದಾರ್ಥಶಾಸ್ತ್ರಂ ಹಿ ಧರ್ಮವಿದ್ವೇಷಣಂ ಪರಮ್ ।**
**ಪರಮಂ ತರ್ಕ ಶಾಸ್ತ್ರಾಣಾಮಸತಾಂ ತನ್ಮನೋಽನುಗಮ್ ॥ 22 ॥**
**ನ ಹಿ ಧರ್ಮಪ್ರಧಾನಾನಾಂ ರೋಚತೇ ತತ್ ಕಥಾಂತರೇ ।**
**ತೇ ತತ್ ಬೃಹಸ್ಪತಿ ಕೃತಂ ಶಾಸ್ತ್ರಂ ಶೃತ್ವಾಲ್ಪ ಚೇತಸಃ ॥ 23 ॥**
**ಪೂರ್ವೋಕ್ತ ಧರ್ಮಶಾಸ್ತ್ರಾಣಾಮಭವನ್ ದ್ವೇಷಿಣಃ ಸದಾ ।**
**ತೇನಾಧರ್ಮೇಣ ತೇ ಪಾಪಾಃ ಸರ್ವ ಏವ ಕ್ಷಯಂ ಗತಾಃ ॥ 23 ॥**

ಬುದ್ಧಿವತಾಂ ವರಿಷ್ಠರೂ ಚಾಣಾಕ್ಷರೂ ಆದ ಬೃಹಸ್ಪತಿಗಳು ಅವರನ್ನು ಧರ್ಮಭ್ರಷ್ಟರನ್ನಾಗಿ ಮಾಡಲು ನಾಸ್ತೀಕ ಚಾರ್ವಾಕ ದರ್ಶನ ಮಾಡಿದರು. ಇದರಲ್ಲಿ ದೇವರಿಲ್ಲ. ನರಕವಿಲ್ಲ. ಮೋಕ್ಷವಿಲ್ಲ. ಅಂಗನಾಲಿಂಗನಜನ್ಯ ಸುಖವೆ ಸ್ವರ್ಗಮೋಕ್ಷ ಬೇರೆ ಯಾವುದಿಲ್ಲ. ದೇಹವೆ ಆತ್ಮಾ. ಇದನ್ನು ಸುಟ್ಟರೆ ಆತ್ಮವು ಬೂದಿಯಾಯಿತು. ಯಾರಿಗೆ ನರಕ? ಯಾರಿಗೆ ಸ್ವರ್ಗ? ಪ್ರತ್ಯಕ್ಷದಲ್ಲಿ ತೋರುವುದು ಮಾತ್ರ ಸತ್ಯ. ಅತೀಂದ್ರಿಯವಾದ ಯಾವುದೂ ಇಲ್ಲ. ಬ್ರಾಹ್ಮಣರೆಲ್ಲ ಹೊಟ್ಟೆಪಾಡಿಗಾಗಿ ಮಾಡಿಕೊಂಡ ಕಟ್ಟಲೆ. ಇದಾವುದನ್ನೂ ನಂಬಬೇಕಿಲ್ಲ. ***ಋಣಂ ಕೃತ್ವಾ ಘೃತಂ ಪಿಬೇತ್*** ಇದೇ ಪ್ರಧಾನ ಧರ್ಮ. ಇಂದ್ರಿಯ ಸಂತರ್ಪಣೆಯೇ ಪರಮ ಸಾಫಲ್ಯ. ಧರ್ಮಕರ್ಮಗಳಂದ ದೈಹಿಕ ದಂಡನೆ ವ್ಯರ್ಥ. ನಿರಂತರ ಸುಖೋಪಭೋಗವೆ ಜೀವನ ಸಾಫಲ್ಯತೆ ಇತ್ಯಾದಿ ಬೋಧಿಸಿದರು. ಈ ನಾಸ್ತಿಕ ದರ್ಶನವು ರಾಜೇಯರಿಗೆ ಅನುಕೂಲ ಸಿಂಧುವೆನಿಸಿ ಮತ್ತಷ್ಟು ಆನಂದ ಸಿಂಧುವೆ ದೊರೆತಂತಾಯಿತು. ಶೃಂಗಾರ ಕೇಳ ವಿಲಾಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ರಾಜೇಯರಿಗೆ ದೇವದ್ರೋಹ. ಧರ್ಮದ್ರೋಹ ಬ್ರಹ್ಮದ್ವೇಷವನ್ನೂ ವೇದೋಕ್ತ ಕರ್ಮಗಳನ್ನು

ದ್ವೇಷಿಸಿ, ಪಾನ, ಹೆಣ್ಣು ಹೊನ್ನು ವಿಲಾಸ. ಕೇಳಿಗಳಲ್ಲಿಯೆ ಮುಳುಗಿ ಅತಿವಿಹಾರ-ಅತಿಪಾನಾದಿಗಳಿಂದ ಆರೋಗ್ಯಕ್ಕೆ ಚ್ಯುತಿವುಂಟಾಗಿ ನೈತಿಕಬಲ, ದೈಹಿಕಬಲ ಎರಡನ್ನೂ ಕಳೆದುಕೊಂಡರು. ದೇವೇಂದ್ರನು ಇವರನ್ನು ಸುರಸೇನಾನಾಯಕರೊಂದಿಗೆ ಕೂಡಿ ಹೊಡೆದೊಡಿಸಲು ಕಷ್ಟವಾಗಲಿಲ್ಲ. ಸ್ವರ್ಗಭ್ರಷ್ಟರಾಗಿ ಭೂಮಿ ಸೇರಿದರು.

## ದೇವೇಂದ್ರನಿಗೆ ಪುನಃ ಸ್ವರ್ಗಾಧಿಪತ್ಯ

**ತ್ರೈಲೋಕ್ಯ ರಾಜ್ಯಂ ಶಕ್ರಸ್ತು ಪ್ರಾಪ್ಯ ದುಷ್ಪ್ರಾಪಮೇವ ಚ ।**
**ಬೃಹಸ್ಪತಿ ಪ್ರಸಾದಾದ್ಧಿ ಪರಾಂ ನಿರ್ವೃತಿ ಮಭ್ಯಯಾತ್ ॥ 24 ॥**

**ಹತ್ವಾ ರಜಿಸುತಾನ್ ಸರ್ವಾನ್ ಕಾಮಕ್ರೋಧ ಪರಾಯಣಾನ್ ॥ 25 ॥**

ಬೃಹಸ್ತಪತ್ಯಾಚಾರ್ಯರ ಬುದ್ಧಿ ಪ್ರಧಾನ ಶಾಸ್ತ್ರದಿಂದ ರಾಜೇಯರ ಬುದ್ಧಿಭ್ರಂಶವಾಯಿತು. ಶಿಷ್ಯನಿಗಾಗಿ ಅವನ ಗುರುಗಳು ಬೀಸಿದ ಬಲೆಗೆ ರಾಜೇಯರು ಸಿಕ್ಕಿ ಬಳಲಿದರು. ಇಂದ್ರದೇವನು ಮತ್ತೇ ತ್ರೈಲೋಕದ್ಯಾಧಿಪತಿಯಾದರು.

## ಫಲಸ್ತುತಿ

**ಯಂ ಇದಂ ಚ್ಯಾವನಂ ಸ್ಥಾನಾತ್ ಪ್ರತಿಷ್ಠಾಂ ಚ ಶತಕ್ರತೋಃ ।**
**ಶೃಣುಯಾದ್ ಧಾರಯೇದ್ ವಾಪಿ ನ ಸ ದೌರಾತ್ಮ್ಯ ಮಾಪ್ನುಯಾತ್॥26॥**

ಯಾರು ಇಂದ್ರನು ಸ್ಥಾನದಿಂದ ಚ್ಯುತನಾದದ್ದು ಹಾಗೆಯೆ ಬೃಹಸ್ಪತಿಯ ಅನುಗ್ರಹದಿಂದ ತನ್ನ ತ್ರೈಲೋಕ್ಯ ಸಾಮ್ರಾಜ್ಯವನ್ನು ಪಡೆದುಕೊಂಡ ಈ ಕಥಾಪ್ರಸಂಗವನ್ನು ಹೇಳುವರೋ ಕೇಳುವರೋ ಅಂತಹವರ ಮನಸ್ಸು ಎಂದೂ ಕೆಟ್ಟ ಭಾವನೆಗಳನ್ನು ಹೊಂದುವುದಿಲ್ಲ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಬೃಹಸ್ಪತಿಗಳಿಂದ ನಾಸ್ತಿಕಮತ ಪ್ರವರ್ತನೆ ರಾಜೇಯರ ಪತನ-
ದೇವೇಂದ್ರನ ಪುನಃ ಸಾಮ್ರಾಜ್ಯ-ಪ್ರಾಪ್ತಿವೆಂಬಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಏಕೋನತ್ರಿಂಶೋಽಧ್ಯಾಯಃ

## ಧನ್ವಂತರಿಯ ಅವತಾರ

*ವೈಶಂಪಾಯನ ಉವಾಚ– ಅನೇನಸವಂಶಾವಳಿ*

**ರಂಭೋಽನಪತ್ಯಃ ತತ್ರಾಸೀದ್ ವಂಶಂ ವಕ್ಷ್ಯಾಮ್ಯಶೇಷತಃ ।**
**ಅನೇನಸಃ ಸುತೋ ರಾಜಾ ಪ್ರತಿಕ್ಷತ್ರೋ ಮಹಾಯಶಾಃ ॥ 1 ॥**

**ಪ್ರತಿಕ್ಷತ್ರ ಸುತಶ್ಚಾಪಿ ಸೃಂಜಯೋ ನಾಮ ವಿಶ್ರುತಃ ।**
**ಸೃಂಜಯಸ್ಯ ಜಯಃ ಪುತ್ರಃ ವಿಜಯಸ್ತಸ್ಯ ಚಾತ್ಮಜಃ ॥ 2 ॥**

**ವಿಜಯಸ್ಯ ಕೃತಿಃ ಪುತ್ರಃ ತಸ್ಯ ಹರ್ಯಶ್ವತಃ ಸುತಃ ।**
**ಹರ್ಯಶ್ವತಸುತೋ ರಾಜಾ ಸಹದೇವಃ ಮಹಾಯಶಾಃ ॥ 3 ॥**

ಆಯುವಿನ ಮಗನಾದ ರಂಭನಿಗೆ ಮಕ್ಕಳಾಗಲಿಲ್ಲ. ಅನೇನಸ್‌ನೆಂಬ ಆಯುಃ ಪುತ್ರನಿಗೆ ಪ್ರತಿಕ್ಷತ್ರನು, ಪ್ರತಿಕ್ಷತ್ರನಿಗೆ ಸೃಂಜಯನು, ಇವನಿಗೆ ಜಯನೆಂಬವನೂ, ಜಯನಿಗೆ ವಿಜಯನೂ, ವಿಜಯನಿಗೆ ಕೃತಿಯೂ, ಕೃತಿಗೆ ಹರ್ಯಶ್ವನೂ, ಹರ್ಯಶ್ವನಿಗೆ ಸಹದೇವನೂ, ಸಹದೇವನಿಗೆ ನದೀನನೂ, ನದೀನನಿಗೆ ಜಯತ್ಸೇನನೂ, ಇವನಿಗೆ ಸಂಕೃತಿಯೂ, ಸಂಕೃತಿಗೆ ಧರ್ಮಿಷ್ಠನಾದ ಕ್ಷತ್ರಧರ್ಮನೆಂಬ ಮಗನೂ ಆದನು. ಇಷ್ಟು ಮಂದಿ ಅನೇನಸ್ ವಂಶದವರು.

### ಕ್ಷತ್ರವೃದ್ಧ ವಂಶ– ಧನ್ವಂತರಿ ಅವತಾರ

ಕ್ಷತ್ರವೃದ್ಧನಿಗೆ ಸುನಹೋತ್ರನು ಮಗನಾದನು. ಸುನಹೋತ್ರನಿಗೆ ಕಾಶ, ಶಲ, ಗೃತ್ಸಮದರೆಂಬ ಧಾರ್ಮಿಕ ಪುತ್ರರಾದರು. ಗೃತ್ಸಮದನ ಮಗನೇ ಶುನಕನು. ಇವನಿಂದಲೇ ಶೌನಕರ ವಂಶವು ಮುಂದುವರೆಯಿತು.

ಗೃತ್ಸಮದ ಪುತ್ರರಲ್ಲಿ ಶುನಕನಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಯ ಮಕ್ಕಳಿದ್ದರು. ಇವರೆಲ್ಲರೂ ಶೌನಕರೆಂದೇ ಕರೆಯಲ್ಪಡುತ್ತಿದ್ದರು. ಶೌನಕರು ಋಗ್ವೇದದ ದ್ರಷ್ಟ್ರ ಋಷಿಯೆನಿಸಿದರು.

**ಶುನಕೋ ಶೌನಕೋ ಯಸ್ಯ ಬಹ್ವೃಚಪ್ರವರೋ ಮುನಿಃ ।**
**ಕಾಶ್ಯಸ್ಯ ಕಾಶಯೋ ರಾಜನ್ ಪುತ್ರೋ ದೀರ್ಘತಪಾಸ್ತಥಾ ॥ 4 ॥**
**ಧನ್ವಸ್ತು ದೀರ್ಘತಪಸಃ ವಿದ್ವಾನ್ ಧನ್ವಂತರಿಸ್ತತಃ ।**
**ಪುನಃ ಧನ್ವಂತರೀರ್ದೇವೋ ಮಾನುಷೇಷ್ವಿವ ಜಜ್ಞಿವಾನ್ ॥ 5 ॥**

ಗೃತ್ಸಿಮದನ ಹಿರಿಯ ಪುತ್ರ ಶಲನಿಗೆ ಆರ್ಷ್ಟೀಷೇಣನೆಂಬ ಪುತ್ರನಾದನು. ಇವನ ಮಗನೇ ಕಾಶಕನು/ಕಾಶ್ಯಪನು ಇವನ ಮಗನೇ ದೀರ್ಘತಪಸ್ ಅಥವಾ ದೀರ್ಘತಮಸ್ ರಾಜನು. ದೀರ್ಘತಪನು ತೇಜಸ್ವಿ, ತಪಸ್ವೀ, ವಿರಕ್ತನೂ ಆಗಿದ್ದನು. ಗಂಗಾ ತಟದಲ್ಲಿ ತಪಸ್ಸನ್ನು ಮಾಡುತ್ತಾ ಜೀವನ ಸವೆಸಿದ.

ದೀರ್ಘತಮನ ಪುತ್ರನೇ ಧನ್ವ ಅಥವಾ ಧನುವು. ಧನ್ವರಾಜನ ಮಗನೇ ಸಾಕ್ಷಾತ್ ಶ್ರೀಮನ್ನಾರಾಯಣ ನವಂಶನಾದ **ಧನ್ವಂತರಿ**[1] ಭಗವಂತನು. ಆಯುರ್ವೇದ ಶಾಸ್ತ್ರ ಪ್ರವರ್ತಕನೂ, ವೈದ್ಯ ವಿಜ್ಞಾನಕ್ಕೆ ಮೂಲಪುರುಷನು. ಆರೋಗ್ಯಶಾಸ್ತ್ರಕ್ಕೆ ಅಯುರ್ವೇದ ಎಂದು ಇವನಿಂದಲೇ ಹೆಸರು ಪಡೆಯಿತು. ಧನ್ವರಾಜನ ಉಗ್ರ ತಪಸ್ಸಿಗೆ ಮೆಚ್ಚಿ ಹರಿಯೆ ಇವನ ಮಗನಾಗಿ ಅವತರಿಸಿದನು.

**ಕಥಂ ಧನ್ವಂತರಿರ್ದೇವೋ ಮಾನುಷೇಷ್ವಿಹ ಜಜ್ಞಿವಾನ್ ।**
**ಜಾತಃ ಸಹಿ ಸಮುದ್ರಾತ್ತು ಮಥ್ಯಮಾನೇ ಪುರಾಮೃತೇ ॥ 6 ॥**
**ಉತ್ಪನ್ನಃ ಕಲಶಾತ್ ಪೂರ್ವಂ ಸರ್ವತಶ್ಚ ಶ್ರಿಯಾ ಸಹ ॥ 7 ॥**

---

1. ಧನ್ವಂತರಿಃ ದೀರ್ಘತಮಸಃ ಆಯುರ್ವೇದ ಪ್ರವರ್ತಕಃ ।
ಯಜ್ಞಭುಗ್ ವಾಸುದೇವಾಂಶಃ ಸ್ಮೃತಿಮಾತ್ರಾರ್ತಿನಾಶನಃ ॥ – *ಭಾಗ 9/14/42*
ದೀರ್ಘತಮಸ್‌ನಿಂದ ಧನ್ವನು, ಧನ್ವನಿಂದ ಧನ್ವಂತರಿರೂಪಿ ಭಗವಂತನು ಅವತರಿಸಿದನು.

ದೀರ್ಘತಮ ಮಗನೆಂದು ಭಾಗವತ ಹೇಳಿದೆ. ಹರಿವಂಶ ದೀರ್ಘತಮನ ಮಗ ಧನ್ವನಿಂದ ಧನ್ವಂತರಿ ಜನಿಸಿದ ಎಂದಿದೆ. ವಿ. ದಾಸರು ದೀರ್ಘತಮ-ನಂದನ-ದೇವ ಎಂದು ಹರಿವಂಶವನ್ನೇ ಅನುಸರಿಸಿದ್ದಾರೆ.

**ಅಬ್ಜಸ್ತ್ವಮಿತಿ ಹೋವಾಚ ತಸ್ಮಾದ್ ಅಬ್ಜಸ್ತು ಸ ಸ್ಮೃತಃ ॥ 8 ॥**

**ಅಬ್ಜಃ ಪ್ರೋವಾಚ ವಿಷ್ಣುಂ ವೈ ತವ ಪುತ್ರೋಽಸ್ಮಿ ವೈ ಪ್ರಭೋ ।**
**ವಿಧತ್ಸ್ವ ಭಾಗಂ ಸ್ಥಾನಂ ಚ ಮಮ ಲೋಕೇ ಸುರೇಶ್ವರ ॥ 9 ॥**

ಹಿಂದೆ ದೇವ-ದಾನವರು ಸೇರಿ ಹಾಲಿನ ಸಮುದ್ರವನ್ನು ಅಮೃತಕ್ಕಾಗಿ ಕಡೆದರು. ಆಗ ಜ್ಯೋತಿರ್ಮೂರ್ತಿಯು ಜ್ಞಾನಮುದ್ರೆ-ಅಮೃತ-ಕಮಂಡಲವನ್ನು ಹಿಡಿದು ಮೇಲೆ ಬಂದಿತ್ತು. ಸಮುದ್ರ ಮಥನ ಸಹಾಯ ಮಾಡಲು ಕಟಿಬದ್ಧನಾಗಿದ್ದ ನಾರಾಯಣನನ್ನು ಅಸುರರ ಮೋಹಕ್ಕಾಗಿ ತನ್ನನ್ನು ತಾನೆ ಹೀಗೆ ತನ್ನ ನಾಮವನ್ನೆ ಜಪಿಸುತ್ತಾ ಶ್ರೀ ಧನ್ವಂತರಿಯನ್ನು ನೋಡಿ ನಾರಾಯಣನು ಧನ್ವಂತರಿಯೇ ನೀರಿನಿಂದ ಹುಟ್ಟಿದ ನೀನು 'ಅಬ್ಜ' ಎನ್ನುವರು. ನಿನಗೇನು ಬೇಕು? ಎಂದಾಗ ನಾನು ನಿನ್ನ ಮಗನು. ನನಗೆ ಯಜ್ಞದಲ್ಲಿ ಹವಿರ್ಭಾಗವನ್ನೂ, ದೇವತಾ ಪಂಕ್ತಿಯಲ್ಲಿ ಸ್ಥಾನವನ್ನು ನೀಡುವವನಾಗು ಎಂದು ಪ್ರಾರ್ಥಿಸಿದನು.

**ಕೃತೊ ಯಜ್ಞವಿಭಾಗೋ ಹಿ ಯಜ್ಞಿಯೈಃ ಹಿ ಸುರೈಃ ಪುರಾ ।**
**ದೇವೇಷು ವಿನಿಯುಕ್ತಂ ಹಿ ವಿದ್ಧಿ ಹೋತ್ರಂ ಮಹರ್ಷಿಭಿಃ ॥ 10 ॥**

**ನ ಶಕ್ಯಮುಪಹೋಮಾ ವೈ ತುಭ್ಯಂ ಕರ್ತುಂ ಕದಾಚನ ।**
**ಅರ್ವಾಗ್ ಭೂತೋಽಸಿ ದೇವಾನಾಂ ಪುತ್ರ ತ್ವಂ ತು ನಹೀಶ್ವರಃ ॥ 11 ॥**

**ದ್ವಿತೀಯಾಯಾಂ ತು ಸಂಭೂತ್ಯಾಂ ಲೋಕೇ ಖ್ಯಾತಿಂ ಗಮಿಷ್ಯಸಿ ।**
**ಚರುಮಂತ್ರೈಃ ವ್ರತೈಃಜಾಪ್ಯೈಃ ಯಕ್ಷಂತಿ ತ್ವಾಂ ದ್ವಿಜಾತಯಃ ॥ 12 ॥**

ಆಗ ನಾರಾಯಣನು – ಪುತ್ರನೇ! ಬಹು ಹಿಂದೆಯೇ ಯಜ್ಞದ ವಿಭಾಗಗಳೆಲ್ಲ ದೇವತೆಗಳಲ್ಲಿ ಹಂಚಿಯಾಗಿದೆ. ಇಂದ್ರಾದಿ ದೇವತೆಗಳಿಗೆಲ್ಲ ಅವರವರ ಆಹುತಿಗಳು ಕ್ಲೃಪ್ತವಾಗಿವೆ. ಈಗ ಹುಟ್ಟಿದ ನಿನಗೆ ಪುರಾತನ ದೇವತೆಗಳ ಶ್ರೇಣಿಗೆ ಸೇರತಕ್ಕ ಯಜ್ಞಹವಿರ್ಭಾಗ ಸಿಗಲಾರದು. ಉಪಹೋಮಗಳ ಹವಿಸ್ಸನ್ನು ನಿನಗೆ ನೀಡಬಹುದಾದರೂ ಸಕಲ ಹೋಮಗಳ ಪ್ರಧಾನ ಯಜ್ಞಭುಕ್ ಎನಿಸಿದ ನಿನ್ನ ಘನತೆಗೆ ಯೋಗ್ಯವಾದದ್ದಲ್ಲ. ಆದ್ದರಿಂದ ನೀನು ದ್ವಾಪರಯುಗದಲ್ಲಿ ಪುನಃ ಇನ್ನೊಮ್ಮೆ ಜನಿಸು. ನೀನು ಗರ್ಭದಲ್ಲಿರುವಾಗಲೇ ಅಣಿಮಾದಿ ಅಷ್ಟಸಿದ್ಧಿಗಳೂ ನಿನಗೆ ಸಿದ್ಧಿಸಿರುತ್ತದೆ. ಆಗ ನೀನು ಸಾಕ್ಷಾತ್ತಾಗಿ

ನನ್ನ ಸ್ವರೂಪಾಂಶದಿಂದಲೇ ಅವತರಿಸುವಿಯಾದ್ದರಿಂದ ಸರ್ವ ಬ್ರಾಹ್ಮಣರೂ ನಿನ್ನನ್ನೆ ಕುರಿತು ಯಜ್ಞಯಾಗಗಳನ್ನಾಚರಿಸುವರು. ಇದೆಲ್ಲ ಕೇವಲ ಲೀಲಾವಿನೋದ ಅಸುರ ಮೋಹಿನಿಯಾದ ಲೀಲೆ ಮಾತ್ರವೆಂದು ತಿಳಿಯಬೇಕು. ಈ ಧನ್ವಂತರಿಯೇ ವೈದ್ಯಕವನ್ನು ಎಂಟು ವಿಭಾಗ ಮಾಡಿದನು.

ಮುಂದೆ ದ್ವಾಪರದಲ್ಲಿ ಕಾಶಿರಾಜನಾದ ದೀರ್ಘತಪಸನು ಧನ್ವಂತರಿಯನ್ನು ಕುರಿತು ಉಗ್ರ ತಪಸ್ಸನ್ನಾಚರಿಸಿದನು. ತಪಸ್ಸಂತುಷ್ಟನಾದ ಧನ್ವಂತರಿಯು ನಿನ್ನ ಕೋರಿಕೆ ಏನು? ಎಂದಾಗ 'ನೀನೇ ನನ್ನ ಪುತ್ರನಾಗಿ ಅವತರಿಸಬೇಕು' ಎಂದನು. ಧನ್ವಂತರಿಯು ನಿನ್ನ ಮಗನ ಮಗನಾಗಿ ನಿನಗೆ ಮೊಮ್ಮಗನಾಗಿ ಅವತರಿಸುವೆ ಎಂದನು.

ಹೀಗೆ ವಿಷ್ಣುವು ಧನ್ವನಿಗೆ ವರವಿತ್ತನು. ಅದರಂತೆ ದೀರ್ಘತಮಸ್ಸಿನ ಪುತ್ರನಾದ ಧನ್ವನೂ ಸಹ ದೀರ್ಘತಪಸ್ಸನ್ನೂ ಮಾಡಿ ಧನ್ವಂತರಿಯೇ ತನ್ನ ಪುತ್ರನಾಗಬೇಕೆಂದು ವರ ಬೇಡಿದನು. ಅವನ ಪ್ರತಿಜ್ಞೆ ಹೀಗಿತ್ತು.

**ದ್ವಿತೀಯೇ ದ್ವಾಪರೇ ಪ್ರಾಪ್ತೇ ಸೌನಹೋತ್ರಿಃ ಸ ಕಾಶಿರಾಟ್ ।**
**ಪುತ್ರ ಕಾಮಃ ತಪಸ್ತೇಪೇ ಧನ್ವೋ ದೀರ್ಘಂ ತಪಸ್ತದಾ ॥ 13 ॥**

**ಪ್ರಪದ್ಯೇ ದೇವತಾಂ ತಾಂ ತು ಯಾ ಮೇ ಪುತ್ರಂ ಪ್ರದಾಸ್ಯತಿ ।**
**ತತಸ್ತುಷ್ಟಃ ಸ ಭಗವಾನಬ್ಜಃ ಪ್ರೋವಾಚ ತಂ ನೃಪಮ್ ॥ 14 ॥**

**ಭಗವನ್ ಯದಿ ತುಷ್ಟಸ್ತ್ವಂ ಪುತ್ರೋ ಮೇ ಖ್ಯಾತಿಮಾನ್ ಭವ ।**
**ತಸ್ಯ ಗೇಹೇ ಸಮುತ್ಪನ್ನೋ ದೇವೋ ಧನ್ವಂತರಿಸ್ತದಾ ॥ 15 ॥**

**ಆಯುರ್ವೇದಂ ಭರದ್ವಾಜಾತ್ ಪ್ರಾಪ್ಯೇಹ ಭಿಷಜಾಂ ಕ್ರಿಯಾಮ್ ।**
**ತಮಷ್ಟಧಾ ಪುನವ್ಯಸ್ಯ ಶಿಷ್ಯೇಭ್ಯಃ ಪ್ರತ್ಯಪಾದಯತ್ ॥ 16 ॥**

ಎರಡನೆ ಆವೃತ್ತಿಯ ದ್ವಾಪರ ಯುಗದಲ್ಲಿ ಕಾಶಿ ರಾಜನ ಮಗ ಸುನಹೋತ್ರನ ಪುತ್ರನಾದ ಧನ್ವನು ಪುತ್ರ ಕಾಮನೆಯಿಂದ ಉಗ್ರ ದೀರ್ಘತಪಸ್ಸನ್ನು ಕೈಗೊಂಡನು. ನನಗೆ ಯಾವ ದೇವನು ಪುತ್ರನನ್ನು ನೀಡವನೋ ಅವನನ್ನೆ ನನ್ನ ಕುಲದೇವತೆಯನ್ನಾಗಿ ಸ್ವೀಕರಿಸುತ್ತೇನೆ ಎಂದು ಪ್ರತಿಜ್ಞೆಗೈದನು. ಹೀಗೆ ಪ್ರತಿಜ್ಞೆ ಮಾಡಿ ಪುತ್ರನ ಸಲುವಾಗಿ ಧನ್ವಂತರಿಯನ್ನೆ ಆರಾಧಿಸತೊಡಗಿದನು. ಇವನ ತಂದೆಯೂ ಕೂಡ ಇದೇ ಧನ್ವಂತರಿಯನ್ನು ಆರಾಧಿಸಿದ್ದನು. ಇವನೂ

**ಅಬ್ಜಸ್ತ್ವಮಿತಿ ಹೋವಾಚ ತಸ್ಮಾದ್ ಅಬ್ಜಸ್ತು ಸ ಸ್ಮೃತಃ ॥ 8 ॥**

**ಅಬ್ಜಃ ಪ್ರೋವಾಚ ವಿಷ್ಣುಂ ವೈ ತವ ಪುತ್ರೋऽಸ್ಮಿ ವೈ ಪ್ರಭೋ ।**
**ವಿಧತ್ಸ್ವ ಭಾಗಂ ಸ್ಥಾನಂ ಚ ಮಮ ಲೋಕೇ ಸುರೇಶ್ವರ ॥ 9 ॥**

ಹಿಂದೆ ದೇವ-ದಾನವರು ಸೇರಿ ಹಾಲಿನ ಸಮುದ್ರವನ್ನು ಅಮೃತಕ್ಕಾಗಿ ಕಡೆದರು. ಆಗ ಜ್ಯೋತಿರ್ಮೂರ್ತಿಯು ಜ್ಞಾನಮುದ್ರೆ-ಅಮೃತ-ಕಮಂಡಲವನ್ನು ಹಿಡಿದು ಮೇಲೆ ಬಂದಿತ್ತು. ಸಮುದ್ರ ಮಥನ ಸಹಾಯ ಮಾಡಲು ಕಟಿಬದ್ಧನಾಗಿದ್ದ ನಾರಾಯಣನನ್ನು ಅಸುರರ ಮೋಹಕ್ಕಾಗಿ ತನ್ನನ್ನು ತಾನೆ ಹೀಗೆ ತನ್ನ ನಾಮವನ್ನೆ ಜಪಿಸುತ್ತಾ ಶ್ರೀ ಧನ್ವಂತರಿಯನ್ನು ನೋಡಿ ನಾರಾಯಣನು ಧನ್ವಂತರಿಯೇ ನೀರಿನಿಂದ ಹುಟ್ಟಿದ ನೀನು 'ಅಬ್ಜ' ಎನ್ನುವರು. ನಿನಗೇನು ಬೇಕು? ಎಂದಾಗ ನಾನು ನಿನ್ನ ಮಗನು. ನನಗೆ ಯಜ್ಞದಲ್ಲಿ ಹವಿರ್ಭಾಗವನ್ನೂ, ದೇವತಾ ಪಂಕ್ತಿಯಲ್ಲಿ ಸ್ಥಾನವನ್ನು ನೀಡುವವನಾಗು ಎಂದು ಪ್ರಾರ್ಥಿಸಿದನು.

**ಕೃತೊ ಯಜ್ಞವಿಭಾಗೋ ಹಿ ಯಜ್ಞಿಯೈಃ ಹಿ ಸುರೈಃ ಪುರಾ ।**
**ದೇವೇಷು ವಿನಿಯುಕ್ತಂ ಹಿ ವಿದ್ಧಿ ಹೋತ್ರಂ ಮಹರ್ಷಿಭಿಃ ॥ 10 ॥**

**ನ ಶಕ್ಯಮುಪಹೋಮಾ ವೈ ತುಭ್ಯಂ ಕರ್ತುಂ ಕದಾಚನ ।**
**ಅರ್ವಾಗ್ ಭೂತೋऽಸಿ ದೇವಾನಾಂ ಪುತ್ರ ತ್ವಂ ತು ನಹೀಶ್ವರಃ ॥ 11 ॥**

**ದ್ವಿತೀಯಾಯಾಂ ತು ಸಂಭೂತ್ಯಾಂ ಲೋಕೇ ಖ್ಯಾತಿಂ ಗಮಿಷ್ಯಸಿ ।**
**ಚರುಮಂತ್ರೈಃ ವ್ರತೈಃಜಾಪ್ಯೈಃ ಯಕ್ಷಂತಿ ತ್ವಾಂ ದ್ವಿಜಾತಯಃ ॥ 12 ॥**

ಆಗ ನಾರಾಯಣನು – ಪುತ್ರನೇ! ಬಹು ಹಿಂದೆಯೇ ಯಜ್ಞದ ವಿಭಾಗಗಳೆಲ್ಲ ದೇವತೆಗಳಲ್ಲಿ ಹಂಚಿಯಾಗಿದೆ. ಇಂದ್ರಾದಿ ದೇವತೆಗಳಿಗೆಲ್ಲ ಅವರವರ ಆಹುತಿಗಳು ಕ್ಲೃಪ್ತವಾಗಿವೆ. ಈಗ ಹುಟ್ಟಿದ ನಿನಗೆ ಪುರಾತನ ದೇವತೆಗಳ ಶ್ರೇಣಿಗೆ ಸೇರತಕ್ಕ ಯಜ್ಞಹವಿರ್ಭಾಗ ಸಿಗಲಾರದು. ಉಪಹೋಮಗಳ ಹವಿಸ್ಸನ್ನು ನಿನಗೆ ನೀಡಬಹುದಾದರೂ ಸಕಲ ಹೋಮಗಳ ಪ್ರಧಾನ ಯಜ್ಞಭುಕ್ ಎನಿಸಿದ ನಿನ್ನ ಘನತೆಗೆ ಯೋಗ್ಯವಾದದ್ದಲ್ಲ. ಆದ್ದರಿಂದ ನೀನು ದ್ವಾಪರಯುಗದಲ್ಲಿ ಪುನಃ ಇನ್ನೊಮ್ಮೆ ಜನಿಸು. ನೀನು ಗರ್ಭದಲ್ಲಿರುವಾಗಲೇ ಅಣಿಮಾದಿ ಅಷ್ಟಸಿದ್ಧಿಗಳೂ ನಿನಗೆ ಸಿದ್ಧಿಸಿರುತ್ತದೆ. ಆಗ ನೀನು ಸಾಕ್ಷಾತ್ತಾಗಿ

ನನ್ನ ಸ್ವರೂಪಾಂಶದಿಂದಲೇ ಅವತರಿಸುವಿಯಾದ್ದರಿಂದ ಸರ್ವ ಬ್ರಾಹ್ಮಣರೂ ನಿನ್ನನ್ನೆ ಕುರಿತು ಯಜ್ಞಯಾಗಗಳನ್ನಾಚರಿಸುವರು. ಇದೆಲ್ಲ ಕೇವಲ ಲೀಲಾವಿನೋದ ಅಸುರ ಮೋಹಿನಿಯಾದ ಲೀಲೆ ಮಾತ್ರವೆಂದು ತಿಳಿಯಬೇಕು. ಈ ಧನ್ವಂತರಿಯೇ ವೈದ್ಯಕವನ್ನು ಎಂಟು ವಿಭಾಗ ಮಾಡಿದನು.

ಮುಂದೆ ದ್ವಾಪರದಲ್ಲಿ ಕಾಶಿರಾಜನಾದ ದೀರ್ಘತಪಸನು ಧನ್ವಂತರಿಯನ್ನು ಕುರಿತು ಉಗ್ರ ತಪಸ್ಸನ್ನಾಚರಿಸಿದನು. ತಪಸ್ಸಂತುಷ್ಟನಾದ ಧನ್ವಂತರಿಯು ನಿನ್ನ ಕೋರಿಕೆ ಏನು? ಎಂದಾಗ 'ನೀನೇ ನನ್ನ ಪುತ್ರನಾಗಿ ಅವತರಿಸಬೇಕು' ಎಂದನು. ಧನ್ವಂತರಿಯು ನಿನ್ನ ಮಗನ ಮಗನಾಗಿ ನಿನಗೆ ಮೊಮ್ಮಗನಾಗಿ ಅವತರಿಸುವೆ ಎಂದನು.

ಹೀಗೆ ವಿಷ್ಣುವು ಧನ್ವನಿಗೆ ವರವಿತ್ತನು. ಅದರಂತೆ ದೀರ್ಘತಮಸ್ಸಿನ ಪುತ್ರನಾದ ಧನ್ವನೂ ಸಹ ದೀರ್ಘತಪಸ್ಸನ್ನೂ ಮಾಡಿ ಧನ್ವಂತರಿಯೇ ತನ್ನ ಪುತ್ರನಾಗಬೇಕೆಂದು ವರ ಬೇಡಿದನು. ಅವನ ಪ್ರತಿಜ್ಞೆ ಹೀಗಿತ್ತು.

**ದ್ವಿತೀಯೇ ದ್ವಾಪರೇ ಪ್ರಾಪ್ತೇ ಸೌನಹೋತ್ರಿಃ ಸ ಕಾಶಿರಾಟ್ ।**
**ಪುತ್ರ ಕಾಮಃ ತಪಸ್ತೇಪೇ ಧನ್ವೋ ದೀರ್ಘಂ ತಪಸ್ತದಾ ॥ 13 ॥**
**ಪ್ರಪದ್ಯೇ ದೇವತಾಂ ತಾಂ ತು ಯಾ ಮೇ ಪುತ್ರಂ ಪ್ರದಾಸ್ಯತಿ ।**
**ತತಸ್ತುಷ್ಟಃ ಸ ಭಗವಾನಬ್ಜಃ ಪ್ರೋವಾಚ ತಂ ನೃಪಮ್ ॥ 14 ॥**
**ಭಗವನ್ ಯದಿ ತುಷ್ಟಸ್ತ್ವಂ ಪುತ್ರೋ ಮೇ ಖ್ಯಾತಿಮಾನ್ ಭವ ।**
**ತಸ್ಯ ಗೇಹೇ ಸಮುತ್ಪನ್ನೋ ದೇವೋ ಧನ್ವಂತರಿಸ್ತದಾ ॥ 15 ॥**
**ಆಯುರ್ವೇದಂ ಭರದ್ವಾಜಾತ್ ಪ್ರಾಪ್ಯೇಹ ಭಿಷಜಾಂ ಕ್ರಿಯಾಮ್ ।**
**ತಮಷ್ಟಧಾ ಪುನವ್ಯಸ್ಯ ಶಿಷ್ಯೇಭ್ಯಃ ಪ್ರತ್ಯಪಾದಯತ್ ॥ 16 ॥**

ಎರಡನೆ ಆವೃತ್ತಿಯ ದ್ವಾಪರ ಯುಗದಲ್ಲಿ ಕಾಶಿ ರಾಜನ ಮಗ ಸುನಹೋತ್ರನ ಪುತ್ರನಾದ ಧನ್ವನು ಪುತ್ರ ಕಾಮನೆಯಿಂದ ಉಗ್ರ ದೀರ್ಘತಪಸ್ಸನ್ನು ಕೈಗೊಂಡನು. ನನಗೆ ಯಾವ ದೇವನು ಪುತ್ರನನ್ನು ನೀಡವನೋ ಅವನನ್ನೆ ನನ್ನ ಕುಲದೇವತೆಯನ್ನಾಗಿ ಸ್ವೀಕರಿಸುತ್ತೇನೆ ಎಂದು ಪ್ರತಿಜ್ಞೆಗೈದನು. ಹೀಗೆ ಪ್ರತಿಜ್ಞೆ ಮಾಡಿ ಪುತ್ರನ ಸಲುವಾಗಿ ಧನ್ವಂತರಿಯನ್ನೆ ಆರಾಧಿಸತೊಡಗಿದನು. ಇವನ ತಂದೆಯೂ ಕೂಡ ಇದೇ ಧನ್ವಂತರಿಯನ್ನು ಆರಾಧಿಸಿದ್ದನು. ಇವನೂ

ಉಗ್ರತಪಸ್ಸೇ. ಅವನದೂ ಉಗ್ರತಪಸ್ಸೆ. ಇಬ್ಬರದೂ ದೀರ್ಘತಪಸ್ಸೆ. ಇದರಿಂದಾಗಿ ಧನ್ವಂತರಿಯು ಧನ್ವನ ಪುತ್ರನಾಗಿ ಅವತರಿಸಿದನು. ಇದರಿಂದಾಗಿ ತಂದೆಯ ಅಭೀಷ್ಟವೂ ಸಿದ್ಧಿಸಿದಂತಾಯಿತು. ಧನ್ವಂತರಿಯು ಯಾವುದೇ ರೋಗವನ್ನು ಸಮರ್ಥ ರೀತಿಯಲ್ಲಿ ಪರಿಹರಿಸುತ್ತಿದ್ದನು.

ಭರದ್ವಾಜರಿಂದ ಆಯುರ್ವೇದ ಕಲಿತು ಅದನ್ನು ಕಾಯ, ಬಾಲ, ಗ್ರಹ, ಊರ್ಧ್ವಾಂಗ, ಶಲ್ಯ, ದಂಷ್ಟ್ರ, ಜರಾ, ವೃಷ ಎಂದು ಎಂಟು ವಿಭಾಗ ಮಾಡಿ ಶಿಷ್ಯರಲ್ಲಿ ಪ್ರವರ್ತಿಸಿದನು.

## ಧನ್ವಂತರಿ ವಂಶ-ದಿವೋದಾಸ ಕಥೆ

**ಧನ್ವಂತರೇಸ್ತು ತನಯಃ ಕೇತುಮಾನಿತಿ ವಿಶ್ರುತಃ ।**
**ಅಥ ಕೇತುಮತಃ ಪುತ್ರಃ ವೀರೋ ಭೀಮರಥಃ ಸ್ಮೃತಃ ॥ 17 ॥**

**ಸುತೋ ಭೀಮರಥಸ್ಯಾಪಿ ದಿವೋದಾಸಃ ಪ್ರಜೇಶ್ವರಃ ।**
**ದಿವೋದಾಸಸ್ತು ಧರ್ಮಾತ್ಮಾ ವಾರಾಣಸ್ಯಧಿಪೋಽಭವತ್ ॥ 18 ॥**

ಈ ಧನ್ವಂತರಿಯ ಪುತ್ರನೇ ಕೇತುಮಾನ್ ರಾಜನು. ಕೇತುಮಂತನಿಗೆ ವೀರನಾದ ಭೀಮರಥನು. ಭೀಮರಥನಿಗೆ ದಿವೋದಾಸನೆಂಬ ರಾಜೇಶ್ವರನು ಮಗನಾದನು. ಇವನು ಕಾಶಿ ದೇಶಕ್ಕೆ ರಾಜನಾದನು.

## ಕಾಶಿಯ ಇತಿಹಾಸ

**ಏತಸ್ಮಿನ್ನೇವ ಕಾಲೇ ತು ಪುರೀಂ ವಾರಣಾಸೀಂ ನೃಪ ।**
**ಶೂನ್ಯಾಂ ನಿವಾಸಯಾಮಾಸ ಕ್ಷೇಮಕೋ ನಾಮ ರಾಕ್ಷಸಃ ॥ 19 ॥**
**ಶಪ್ತಾ ಹಿ ಸಾ ಮತಿಮತಾ ನಿಕುಂಭೇನ ಮಹಾತ್ಮನಾ ।**
**ಶೂನ್ಯಾ ವರ್ಷ ಸಹಸ್ರಂ ವೈ ಭವಿತಾ ನಾತ್ರ ಸಂಶಯಃ ॥ 20 ॥**

ಕಾಶಿಕ್ಷೇತ್ರವು ಇತಿಹಾಸ ಪ್ರಸಿದ್ಧವು. ಇದನ್ನು ಆಳಿದವರೆಷ್ಟೋ ಮಂದಿ ರಾಜರು. ಅವರಲ್ಲಿ 'ಭದ್ರಶ್ರೇಣ್ಯ' ಎಂಬ ರಾಜ ರಾಜ್ಯವಾಳುತ್ತಿದ್ದನು. ದಿವೋದಾಸನು ಭದ್ರಶ್ರೇಣ್ಯನ ನೂರು ಮಂದಿ ಮಕ್ಕಳನ್ನು ಎದುರಿಸಿ ನಂತರ ಅವರನ್ನು ಕೊಂದು ಕಾಶಿಯನ್ನು ವಶಪಡಿಸಿಕೊಂಡನು.

ದಿವೋದಾಸನು ಕಾಶಿಯನ್ನು ಪಾಲಿಸುತ್ತಿದ್ದಾಗ ಶಾಪದ ನಿಮಿತ್ತದಿಂದಾಗಿ ಜನಶೂನ್ಯ ಸ್ಮಶಾನವಾಯಿತು. ಈ ಸಮಯದಲ್ಲಿಯೇ ರುದ್ರನ ಸೇವಕ ಕ್ಷೇಮಕನೆಂಬುವನು ವಾಸಿಸುತ್ತಿದ್ದನು.

ರುದ್ರದೇವನ ಮತ್ತೊಬ್ಬ ಅನುಚರ ಕಾಶಿಗೆ ಸಾವಿರ ವರ್ಷ ಜನಶೂನ್ಯ-ನಾಗಿರುವಿ ಎಂದು ಶಪಿಸಿದ್ದ. ವಾರಾಣಾಸಿಯು ಶಾಪಗ್ರಸ್ತವಾಗುತ್ತಲೇ ಅಲ್ಲಿನ ರಾಜ ದೀವೋದಾಸ ಅದನ್ನು ತ್ಯಜಿಸಿ ಗೋಮತಿ ನದಿಯ ದಡದಲ್ಲಿ ಮತ್ತೊಂದು ನಗರದಲ್ಲಿ ವಾಸಿಸುತ್ತಿದ್ದನು.

*ಜನಮೇಜಯ ಉವಾಚ –*

**ವಾರಾಣಸೀಂ ನಿಕುಂಭಸ್ತು ಕಿಮರ್ಥಂ ಶಪ್ತವಾನ್ ಪ್ರಭುಃ ।**
**ನಿಕುಂಭಕಶ್ಚ ಧರ್ಮಾತ್ಮಾ ಸಿದ್ಧಿಕ್ಷೇತ್ರಂ ಶಶಾಪ ಸಃ ॥ 21 ॥**
**ದಿವೋದಾಸಸ್ತು ರಾಜರ್ಷಿಃ ನಗರೀಂ ಪ್ರಾಪ್ಯ ಪಾರ್ಥಿವಃ ।**
**ವಸತಿ ಸ್ಮ ಮಹಾತೇಜಾಃ ಸ್ಫೀತಾಯಾಂ ತು ನರಾಧಿಪಃ ॥ 22 ॥**
**ಏತಸ್ಮಿನ್ನೇವ ಕಾಲೇ ತು ಕೃತದಾರೋ ಮಹೇಶ್ವರಃ ।**
**ದೇವ್ಯಾಃ ಸ ಪ್ರಿಯಕಾಮಸ್ತು ನ್ಯವಸತ್ ಶ್ವಶುರಾಂತಿಕೇ ॥ 23 ॥**
**ಹೃಷ್ಯತೇ ವೈ ಮಹಾದೇವೀ ಮೇನಾ ನೈವ ಪ್ರಹೃಷ್ಯತಿ ।**
**ಸಪಾರ್ಷದಃ ತ್ವನಾಚಾರಃ ತವ ಭರ್ತಾ ಮಹೇಶ್ವರಃ ॥ 24 ॥**
**ದರಿದ್ರಃ ಸರ್ವದೈವಾಸೌ ಶೀಲಂ ತಸ್ಯ ನ ವರ್ತತೇ ।**
**ವಿವರ್ಣವದನಾ ದೇವೀ ಮಹಾದೇವಮಭಾಷತ ॥ 25 ॥**

ಜನಮೇಜಯನು ವೈಶಂಪಾಯನರನ್ನು ಗುರುಗಳೇ ! ವಾರಾಣಾಸಿಯು ಸಿದ್ಧಿಕ್ಷೇತ್ರ. ನಿಕುಂಭನೂ ಸಹ ಧರ್ಮಿಷ್ಠನೆಂದು ಪ್ರಖ್ಯಾತನಾಗಿದ್ದವನು. ಹೀಗಾಗಿ ನಿಕುಂಭನು ಮೋಕ್ಷ ಕ್ಷೇತ್ರಕ್ಕೆ ಶಾಪಕೊಟ್ಟನೆಂದರೆ ಹೇಗೆ? ಇದನ್ನು ತಿಳಿಸಿರಿ ಎಂದನು.

ರಾಜನೇ ! ದಿವೋದಾಸನು ಭದ್ರಶ್ರೇಣ್ಯ ರಾಜನ ನೂರು ಪುತ್ರರನ್ನು ಕೊಂದು ವಾರಣಾಸಿಯನ್ನು ವಶಪಡಿಸಿಕೊಂಡು ಗಂಗಾ ತರಂಗ ಮಂಗಳವಾದ ಮುಕ್ತಿ ಕ್ಷೇತ್ರದಲ್ಲಿಯೇ ರಾಜ್ಯಭಾರ ನಡೆಸಿದ್ದನು.

ಇದೇ ಸಮಯದಲ್ಲಿ ಶಿವನು ಪಾರ್ವತಿಯನ್ನು ಪಾಣಿಗ್ರಹಣ ಮಾಡಿ ಅವಳಿಗೆ ಪ್ರೀತಿವುಂಟು ಮಾಡುವ ಸಲುವಾಗಿ ತನ್ನ ಮಾವ ಹಿಮಾಲಯನ ಮನೆಯಲ್ಲಿಯೇ ಮನೆ ಅಳಿಯನಾಗಿ ಇರುತ್ತಿದ್ದನು. ಪರಮೇಶ್ವರನ ಆದೇಶದಂತೆ ಅವನ ಪಾರ್ಷದ ಗನಗಳು, ಋಷಿಮುನಿಗಳೂ ಸಹ

ಪಾರ್ವತೀದೇವಿಯನ್ನು ಸ್ತೋತ್ರದಿಗಳಿಂದ ಸಂತೋಷಪಡಿಸುತ್ತಿದ್ದರು. ಶಿವಭಕ್ತರ ಸ್ತುತ್ಯಾದಿಗಳಿಂದ ಭಕ್ತಿಗೀತೆಗಳಿಂದ ಮಹಾದೇವಿಗೆ ಸಂಪ್ರೀತಿಯಾದರೂ ಅವಳ ತಾಯಿಯಾದ ಮೇನಕೆಗೆ ಶಿವನು ತನ್ನ ಮನೆಯಲ್ಲಿಯೇ ಇರುವುದಾಗಲೀ, ಶಿವಗಣದ ಲೀಲೆಗಳಾಗಲೀ ಸ್ವಲ್ಪವೂ ಹಿಡಿಸಲಿಲ್ಲ, ಅಸಹ್ಯವಾಗುತ್ತಿತ್ತು.

ಒಂದು ಬಾರಿ ರುದ್ರ-ರುದ್ರಗಣದ ವೇಷಭೂಷಣಗಳನ್ನು ನೋಡಿ ಮಗಳಾದ ಪಾರ್ವತಿಗೆ ಹೀಗೆಂದಳು. ಪಾರ್ವತಿ ! ಇದೇನು ನಿನ್ನ ಪತಿಯ ವೇಷ? ಅನಾಚಾರಿ ಪರಿವಾರ, ಅಷ್ಟದರಿದ್ರನೂ ಸದಾಚಾರ ಶೀಲ ವರ್ಜಿತನೂ ಆದ ಇವನ ವೇಷಾಚಾರ ಕಂಡು ನನಗೆ ಹೇಸಿಗೆಯಾಗುತ್ತಿದೆ. ಹೆಸರಿಗೆ ಮಹಾ ಈಶ್ವರ - ನೋಡಿದರೆ ಸರಿಯಾದ ವಸ್ತ್ರವಿಲ್ಲದ ದಿಗಂಬರ. ನೀನು ಬೇರೆ ಮನೆ ನೋಡಿ ಅಲ್ಲಿರುವಂತೆ ಹೇಳು ಎಂದು ಹಂಗಿಸುತ್ತಿದ್ದಳು.

ತನ್ನ ಪರಮಪ್ರಿಯ ಶಿವನನ್ನು ಹೀಗೆ ಹೀಯಾಳಿಸುವುದನ್ನು ಸಹಿಸದೆ ಶಿವನ ಮುಂದೆ ಬಂದು ನಿಂತಳು. ತಾಯಿಯ ಮಾತಿನಿಂದ ಕೋಪವುಕ್ಕಿ ಬಂದರೂ ಹಿಂದಿನ ಕಹಿ ತಲೆಯಲ್ಲಿ ಇದ್ದದ್ದರಿಂದ ಕೋಪವನ್ನು ನುಂಗಿಕೊಂಡು ವಿವರ್ಣಮುಖಿಯಾಗಿ ಮಂದಹಾಸ ಪೂರ್ವಕ ತನ್ನ ನಲ್ಲನನ್ನು ಸಮೀಪಿಸಿ ಹೀಗೆಂದಳು.

**ನೇಹ ವತ್ಸ್ಯಾಮ್ಯಹಂ ದೇವ ನಯ ಮಾಂ ಸ್ವಾಂ ನಿಕೇತನಮ್ ।**
**ತಥಾ ಕರ್ತುಂ ಮಹಾದೇವಃ ಸರ್ವಲೋಕಾನ್ ಅವೈಕ್ಷತ ॥ 26 ॥**

**ವಾರಾಣಸೀಂ ಮಹಾತೇಜಾಃ ಸಿದ್ಧಿಕ್ಷೇತ್ರಂ ಮಹೇಶ್ವರಃ ।**
**ದಿವೋದಾಸೇನ ತಾಂ ಜ್ಞಾತ್ವಾ ನಿವಿಷ್ಟಾಂ ನಗರೀಂ ಭವಃ ॥ 27 ॥**

ದೇವದೇವ! ನನಗಿನ್ನು ಈ ತವರು ಮನೆ ವಾಸ ಸಾಕು. ಇನ್ನು ಮುಂದೆ ಈ ಮನೆಯಲ್ಲಿರಲು ನನಗಿಷ್ಟವಿಲ್ಲ. ಆದ್ದರಿಂದ ನಿಮ್ಮ ಮನೆಗೆ ನನ್ನನ್ನು ಕರೆದೊಯ್ಯಿರಿ ಎಂದಳು. ಪಾರ್ವತಿಯು ಹೀಗೆ ಹೇಳಿದಾಗ ಪ್ರೇಯಸಿಯ ಶ್ರೇಯಸ್ಸಿಗಾಗಿ ತ್ರಿಲೋಕದಲ್ಲಿ ತನ್ನ ವಾಸಕ್ಕೆ ಯೋಗ್ಯ ಸ್ಥಳವಾವುದೆಂದು ತ್ರಿಲೋಚನನು ತ್ರಿಲೋಕವನ್ನು ಅವಲೋಕಿಸಿದನು. ಅವನಿಗೆ ಮೋಕ್ಷ ಕ್ಷೇತ್ರವಾದ ಕಾಶಿಯೆ ತನಗೆ ಸರ್ವರೀತಿಯಿಂದಲೂ ಯೋಗ್ಯ ವಾಸಸ್ಥಾನವೆಂದು ಬಗೆದನು. ಆದರೆ ಅಲ್ಲಿ ದಿವೋದಾಸನು ವಾಸವಾಗಿರುವನೆಂದು ತಿಳಿದು ತನ್ನ ಪಾರ್ಶ್ವದಲ್ಲಿದ್ದ ಗಣೇಶ್ವರನಾದ ನಿಕುಂಭನಿಗೆ ಹೀಗೆಂದನು.

## ಕ್ಷೌರಿಕನಿಗೆ ಸ್ವಪ್ನದಲ್ಲಿ ತೋರಿದ ನಿಕುಂಭ

**ಗಣೇಶ್ವರ ಪುರೀಂ ಗತ್ವಾ ಶೂನ್ಯಾಂ ವಾರಾಣಸೀಂ ಕುರು ।**
**ಮೃದುನೈವ ಅಭ್ಯುಪಾಯೇನ ಹ್ಯತಿವೀರ್ಯಃ ಸ ಪಾರ್ಥಿವಃ ॥ 28 ॥**
**ತತೋ ಗತ್ವಾ ನಿಕುಂಭಸ್ತು ಪುರೀಂ ವಾರಾಣಸೀಂ ತದಾ ।**
**ಸ್ವಪ್ನೇ ನಿದರ್ಶಯಾಮಾಸ ಕಂಡುಕಂ ನಾಮ ನಾಪಿತಮ್ ॥ 29 ॥**
**ಶ್ರೇಯಸ್ತೇऽಹಂ ಕರಿಷ್ಯಾಮಿ ಸ್ಥಾನಂ ಮೇ ರೋಚಯಾನಘ ।**
**ಮದ್ರೂಪಾಂ ಪ್ರತಿಮಾಂ ಕೃತ್ವಾ ನಗರ್ಯಂತೇ ತಥೈವ ಚ ॥ 30 ॥**
**ತತಃ ಸ್ವಪ್ನೇ ಯಥೋದ್ಧಿಷ್ಟಂ ಸರ್ವಂ ಕಾರಿತವಾನ್ ನೃಪ ।**
**ಪೂಜಾಂ ತು ಮಹತೀಂ ತಸ್ಯ ನಿತ್ಯಮೇವ ಪ್ರಯೋಜಯತ್ ॥ 31 ॥**

ಶಿವನು ಗಣೇಶ್ವರನಿಗೆ ನಿಕುಂಭನೇ ! ನನಗೆ ವಾಸ ಮಾಡಲು ಸ್ಥಳ ಬೇಕಾಗಿದೆ. ಕಾಶೀಪಟ್ಟಣವೆ ನನಗೆ ಯೋಗ್ಯ ಸ್ಥಳವೆಂದು ತಿಳಿದಿರುವೆ. ಅದಕ್ಕಾಗಿ ಅದನ್ನು ತೆರವು ಮಾಡಿಸು. ಆದರೆ ಅಲ್ಲಿ ದಿವೋದಾಸ ರಾಜನು ಆಳುತ್ತಿರುವನು. ಅವನು ಅಸಾಧಾರಣ ಪರಾಕ್ರಮಿ. ಮೃದು ಮಾರ್ಗದಿಂದಲೇ ಉಪಾಯದಿಂದ ಕಾರ್ಯ ಸಾಧಿಸಬೇಕು ಎಂದನು.

ನಿಕುಂಭನು ವಾರಣಾಸಿಗೆ ಬಂದು, ರಾಜನಿಗೆ ಕ್ಷೌರ ಮಾಡುವ ಕಂಡುಕನೆಂಬ ನಾಪಿತನನ್ನು ಕಂಡ. ಅವನಿಗೆ ತನ್ನನ್ನು ಸ್ವಪ್ನದಲ್ಲಿ ಕಾಣಿಸಿ ಕಂಡುಕನೇ, ನನಗೆ ಈ ಕಾಶಿಯಲ್ಲಿ ಒಂದು ದೇವಸ್ಥಾನ ಕಟ್ಟಿಸು. ನನ್ನದೆ ಮೂರ್ತಿಯನ್ನು ಪ್ರತಿಷ್ಠಾಪಿಸು. ನಿರಂತರ ಪೂಜಾ ವ್ಯವಸ್ಥೆ ಮಾಡು. ಹೀಗಾದಾಗ ನಾನು ನಿನಗೆ ಬೇಕಾದ ವರವನ್ನು ನೀಡುತ್ತೇನೆ ಎಂದು ಮರೆಯಾದನು.

ಕ್ಷೌರಿಕನಾದರೂ ದಿವೋದಾಸನ ಮುಂದೆ ತನ್ನ ಸ್ವಪ್ನದ ವಿಚಾರವೆಲ್ಲವನ್ನೂ ತಿಳಿಸಿದನು. ರಾಜನಾದರೂ ಊರಾಚೆ ವಿಶಾಲವಾದ ದೇವಾಲಯವನ್ನು ಕಟ್ಟಿಸಿ ನಿಕುಂಭನ ವಿಗ್ರಹ ಸ್ಥಾಪಿಸಿ, ನಿರಂತರ ನಿತ್ಯೋತ್ಸವ ನಿತ್ಯಪೂಜೆ ವ್ಯವಸ್ಥೆ ಮಾಡಿದ, ಧೂಪದೀಪಗಂಧ ಮಾಲ್ಯ ನೈವೇದ್ಯ ನಿರಂತರ ನಡೆಯುತ್ತಲ್ಲಿತ್ತು. ನಿರಂತರ ಅನ್ನದಾನವೇರ್ಪಾಟಾಯಿತು.

## ನಿಕುಂಭನ ವರದಾನಶೀಲತೆ

**ತತೋ ವರಸಹಸ್ರಂ ತು ನಾಗರಾಣಾಂ ಪ್ರಯಚ್ಛತಿ ।**
**ಪುತ್ರಾನ್ ಹಿರಣ್ಯಮಾಯುಶ್ಚ ಸರ್ವಾನ್ ಕಾಮಾನ್ ತಥೈವ ಚ ॥ 32 ॥**

**ರಾಜ್ಞಸ್ತು ಮಹಿಷೀ ಶ್ರೇಷ್ಠಾ ಸುಯಶಾ ನಾಮ ವಿಶ್ರುತಾ ।**
**ಪುತ್ರಾರ್ಥಮಾಗತಾ ದೇವೀ ಸಾಧ್ವೀ ರಾಜ್ಞಾ ಪ್ರಚೋದಿತಾ ॥ 33 ॥**
**ಪೂಜಾಂ ತು ವಿಪುಲಾಂ ಕೃತ್ವಾ ದೇವೀ ಪುತ್ರಮಯಾಚತ ॥ 34 ॥**
**ಪುನಃ ಪುನರಥಾಗತ್ಯ ಬಹುಶಃ ಪುತ್ರಕಾರಣಾತ್ ।**
**ನ ಪ್ರಯಚ್ಛತಿ ಪುತ್ರಂ ಹಿ ನಿಕುಂಭಃ ಕಾರಣೇನ ಹಿ ॥ 35 ॥**

ನಿಕುಂಭನ ಪೂಜಾ ಮಾಡಿದವರು ಬರೀಕೈಯಲ್ಲಿ ಹೋಗುತ್ತಿರಲಿಲ್ಲ. ಬಂದು ಬೇಡಿದವರಿಗೆಲ್ಲ, ಹರಿಕೆ ಹೊತ್ತವರಿಗೆಲ್ಲ ಅವರ ಮನೋರಥ ಪೂರ್ತಿಯಾಗುತ್ತಿತ್ತು. ಇದರಿಂದಾಗಿ 'ಜಾಗೃತದೇವರು' ಎಂದು ಪ್ರಸಿದ್ಧಿ ಹೊಂದಿತು. ದೇಶದೇಶಗಳಿಂದ ಬಂದ ಜನರು ಹಗಲಿರುಳೂ ಸೇವೆ, ಭಜನೆ ಮಾಡುತ್ತಿದ್ದರು. ಅವರಿಗೆಲ್ಲ ಸಂತಾನ, ಸಂಪತ್ತು, ರಾಜ್ಯ ಕೋಶ, ಅಧಿಕಾರ ಆಯುಷ್ಯ, ಆರೋಗ್ಯ ಮೊದಲಾದ ಈಪ್ಸಿತಗಳನ್ನು ಕಾಮಧೇನುವಿನಂತೆ ನೀಡುತ್ತಿದ್ದ.

ಹೀಗೆ ನೂರಾರು ನಾಗರಿಕರ ಇಷ್ಟಾರ್ಥಗಳನ್ನೆಲ್ಲ ನಿಕುಂಭನು ತಪ್ಪದೆ ಪೂರೈಸುತ್ತಿದ್ದನ್ನು ಕಂಡು ಸಂತಾನವಿಲ್ಲದ ದಿವೋದಾಸರು ತನ್ನ ಪಟ್ಟದರಸಿ ಸುಯಶಾರಾಣಿಗೆ ಈ ದೇವರ ಸೇವೆ ಮಾಡಲು ಆದೇಶಿಸಿದನು. ಮಹಾರಾಣಿಯು ಪ್ರತಿದಿನವೂ ವಿಧವಿಧವಾಗಿ ಪೂಜಿಸುತ್ತಾ ಬಂದಳು. ತನಗೆ ಪುತ್ರ ಸಂತಾನ ಕರುಣಿಸು ಎಂದು ಬೇಡುತ್ತಿದ್ದಳು. ಸುಕುಮಾರವಾದ ತನ್ನ ಮೃದು ಪ್ರಕೃತಿಯನ್ನು ಲಕ್ಷಿಸದೆ ದೇಹವನ್ನು ಸೇವೆಯಲ್ಲಿ ತೊಡಗಿಸಿದಳು. ಆದರೂ ಫಲ ಸಿಗಲಿಲ್ಲ. ಪುನಃ ಪುನಃ ಸೇವೆ ಮಾಡುತ್ತಲೇ ಇದ್ದಳು. ಕಠೋರವ್ರತೋಪವಾಸಗಳನ್ನು ಮಾಡಿದಳು. ಊರ ಜನರಿಗೆಲ್ಲ ಸಣ್ಣ ಸೇವೆಗೆ ಒಲಿದು ತಕ್ಷಣ ಫಲ ನೀಡುವ ಈ ದೈವ ರಾಣಿಯೊಬ್ಬಳಿಗೆ ಮಾತ್ರ ಫಲ ನೀಡಲಿಲ್ಲ. ಇದಕ್ಕೊಂದು ವಿಶೇಷ ಕಾರಣವಿತ್ತು.

### ರಾಜನ ಕ್ರೋಧ; ದೇವರಲ್ಲವಿದು–ಪಿಶಾಚಿ

**ರಾಜಾ ಯದಿ ನಃ ಕುಪ್ಯೇತ್ ಕಾರ್ಯಸಿದ್ಧಿಸ್ತತೋ ಭವೇತ್ ।**
**ಅಥ ದೀರ್ಘೇಣ ಕಾಲೇನ ಕ್ರೋಧೋ ರಾಜಾನಮಾವಿಶತ್ ॥ 36 ॥**

**ಭೂತ ಏಷ ಮಹಾನ್ ದ್ವಾರಿ ನಾಗರಾಣಾಂ ಪ್ರಯಚ್ಛತಿ ।**
**ಪ್ರೀತೋ ವರಾನ್ ವೈ ಶತಶೋ ಮಮ ಕಿಂ ನ ಪ್ರಯಚ್ಛತಿ ॥ 37 ॥**
**ನ ದದಾತಿ ಚ ಪುತ್ರಂ ಮೇ ಕೃತಘ್ನಃ ಕೇನ ಹೇತುನಾ ।**
**ತತೋ ನಾರ್ಹತಿ ಸತ್ಕಾರಂ ಮತ್ಸಕಾಶಾದ್ ವಿಶೇಷತಃ ॥ 38 ॥**

ನಿಕುಂಭನು ಬೇರೊಂದು ಕಾರಣದಿಂದಾಗಿ ಸುಯಶಾಳಗೆ ಮಾತ್ರ ಸಂತಾನೇಚ್ಛೆ ಪೂರ್ತಿ ಮಾಡಲಿಲ್ಲ. ರಾಜ ದಿವೋದಾಸನು ಯಾವುದಾದರೂ ಕಾರಣದಿಂದಾಗಿ ನಮ್ಮ ಮೇಲೆ ಕೋಪಗೊಂಡರೆ ನಮ್ಮ ಕಾರ್ಯ ಸಿದ್ಧಿಯಾಗುತ್ತದೆ ಎಂದೇ ವರ ನೀಡಲಿಲ್ಲ.

ತನ್ನ ಪತ್ನಿಯು ಎಷ್ಟು ಪೂಜಿಸಿದಿರೂ ಎಷ್ಟು ಬೇಡಿದರೂ ವರವನ್ನು ಕೊಡದೆ ಕಲ್ಲಿನಂತೆ ಕೂತಿರುವ ಈ ಗಣೇಶನಾದ ನಿಕುಂಭನ ಮೇಲೆ ಬಹಳ ಕ್ರೋಧವುಂಟಾಯಿತು.

ಕ್ರೋಧಾತಿರೇಕದಿಂದ ಹುಚ್ಚನಂತಾದ ದಿವೋದಾಸನು ಇದಾವುದೋ ಪಿಶಾಚಿಯೇ ನಮ್ಮ ಊರಲ್ಲಿ ಬಂದು ಕುಳಿತದೆ. ಊರಿನ ನಾಗರಿಕರೆಲ್ಲರಿಗೂ ಕೇಳಿದ ವರಗಳನ್ನು ಕೊಡುವ ಈ ಭೂತ ನನ್ನ ಪಾಲಿಗೆ ಮಾತ್ರ ವರ ಕೊಡುತ್ತಿಲ್ಲ ಏಕೆ?

ನಾನೂ ನನ್ನ ಪತ್ನಿಯೊಂದಿಗೆ ಈ ಭೂತವನ್ನು ಅತಿಶಯವಾಗಿಯೆ ಪೂಜಿಸಿದ್ದೇವೆ. ನಿಜಕ್ಕೂ ಈ ಭೂತ ನಾನು ಮಾಡಿರುವ ಉಪಕಾರ ಸ್ಮರಣೆಯೂ ಇಲ್ಲದ ಕೃತಘ್ನ ಗಣೇಶನು ನನಗೆ ಫಲ ನೀಡುತ್ತಿಲ್ಲ. ಆದ್ದರಿಂದ ಇನ್ನು ಮೇಲೆ ಸಾಕಿನ್ನು ಈ ಭೂತದ ಪೂಜೆ ಎಂದು ಹೇಳಿ ನಿಕುಂಭನ ದೇವಸ್ಥಾನವನ್ನು, ಮೂರ್ತಿಯನ್ನು ಕಿತ್ತು ಒಡೆದು ನಾಶ ಮಾಡಿದನು. ತನ್ನ ಆಲಯವು ಭಗ್ನವಾದದ್ದನ್ನು ನೋಡಿದ ನಿಕುಂಭನು ರಾಜನಿಗೆ ಶಾಪವಿತ್ತನು.

## ನಿಕುಂಭನ ಶಾಪ

**ಯಸ್ಮಾದನಪರಾಧಸ್ಯ ತ್ವಯಾ ಸ್ಥಾನಂ ವಿನಾಶಿತಮ್ ।**
**ಪುರ್ಯಕಸ್ಮಾದಿಯಂ ಶೂನ್ಯಾ ತವ ನೂನಂ ಭವಿಷ್ಯತಿ ॥ 39 ॥**
**ತತಸ್ತೇನ ತು ಶಾಪೇನ ಶೂನ್ಯಾ ವಾರಾಣಸೀ ತದಾ ।**
**ಶಪ್ತ್ವಾ ಪುರೀಂ ನಿಕುಂಭಸ್ತು ಮಹಾದೇವ ಮಥಾಗಮತ್ ॥ 40 ॥**

**ಅಕಸ್ಮಾತ್ ತ್ರು ಪುರೀ ಸಾ ತು ವಿದ್ರುತಾ ಸರ್ವತೋದಿಶಮ್ ।**
**ತಸ್ಯಾಂ ಪುರ್ಯಾಂ ತತೋ ದೇವಃ ನಿರ್ಮಮೇ ಪದಮಾತ್ಮನಃ ॥ 41 ॥**

ಮದಾಂಧ ದಿವೋದಾಸನೇ, ನಿನಗೆ ನಾನು ಯಾವ ಅಪರಾಧವನ್ನು ಮಾಡಲಿಲ್ಲ. ಆದರೂ ನನ್ನ ದೇವಾಲಯವನ್ನೂ ನಾಶಪಡಿಸಿರುವೆ. ಆದ್ದರಿಂದ ನಿನ್ನ ರಾಜಧಾನಿಯಾದ ಈ ಕಾಶಿಯು ಸಾವಿರ ವರ್ಷಗಳವರೆಗೂ ಜನರಹಿತ ಸ್ಮಶಾನದಂತಾಗಲಿ ಎಂದು ಶಪಿಸಿದನು. ಈ ಶಾಪದಿಂದಾಗಿ ವಾರಾಣಸಿಯಲ್ಲಿ ವಾಸ ಮಾಡುತ್ತಿದ್ದ ಜನರೆಲ್ಲರೂ ದಿಕ್ಕಾಪಾಲಾಗಿ ಓಡಿ ಹೋದರು. ಕಾಶಿಯು ಮಹಾಸ್ಮಶಾನದಂತಾಯಿತು. ನಿಕುಂಭನು ಶಿವನನ್ನು ಸಮೀಪಿಸಿ ಸ್ವಾಮಿ ನಿಮಗೆ ವಾಸಿಸಲು ಸ್ಥಾನ ತೆರವಾಗಿದೆ ಎಂದನು. ಶಿವನೂ ಕಾಶಿಕ್ಷೇತ್ರವನ್ನೇ ತನ್ನ ಅವಿಮುಕ್ತ ಕ್ಷೇತ್ರವನ್ನಾಗಿ ವಾಸಿಸಿದನು. ಜನಶೂನ್ಯವಾದ ಕಾಶಿಯನ್ನು ದಿವೋದಾಸನು ತ್ಯಜಿಸಿ ಗೋಮತೀ ನದಿಯ ತೀರದಲ್ಲಿ ಮತ್ತೊಂದು ರಾಜಧಾನಿ ನಿರ್ಮಿಸಿ ಅಲ್ಲಿ ವಾಸ ಮಾಡಲುದ್ಯುಕ್ತನಾದನು.

**ರಮತೇ ತತ್ರ ವೈ ದೇವೋ ರಮಮಾಣೋ ಗಿರೇಃ ಸುತಾಮ್ ।**
**ನ ರತಿಂ ತತ್ರ ವೈ ದೇವೀ ಲಭತೇ ಗೃಹವಿಸ್ಮಯಾತ್ ॥ 42 ॥**
**ವಸಾಮ್ಯತ್ರ ನ ಪುರ್ಯಾಂ ತು ದೇವೀ ದೇವಮಥಾಬ್ರವೀತ್ ।**
**ನಾಹಂ ವೇಶ್ಮನಿ ವತ್ಸ್ಯಾಮಿ ಅವಿಮುಕ್ತಂ ಹಿ ಮೇ ಗೃಹಮ್ ।**
**ನಾಹಂ ತತ್ರ ಗಮಿಷ್ಯಾಮಿ ಗಚ್ಛ ದೇವಿ ಗೃಹಂ ಪ್ರತಿ ॥ 43 ॥**
**ತಸ್ಮಾತ್ ತದವಿಮುಕ್ತಂ ಹಿ ಪ್ರೋಕ್ತಂ ದೇವೇನ ವೈ ಸ್ವಯಮ್ ॥ 44 ॥**

ಶಿವನು ನಿಕುಂಭನು ಏರ್ಪಡಿಸಿದ್ದ ಕಾಶಿಯಲ್ಲಿ ಪಾರ್ವತೀ ಸಹಿತವಾಗಿ ಸುಖವಾಗಿದ್ದನು. ಚಂದ್ರಶೇಖರನು ಪ್ರಾಣದರಸಿಯೂ ಪಾರ್ವತಿಯನ್ನು ಬಗೆಬಗೆಯಿಂದ ರಂಜಿಸುತ್ತಾ ತಾನೂ ಅವಳೊಂದಿಗೆ ಆನಂದದಿಂದ ವಾಸಿಸಿದನು.

ಹೀಗೆ ಕಾಶೀ ಕ್ಷೇತ್ರವು ತ್ರ್ಯಂಬಕನಿಗೆ ಸಂತೋಷ ತಂದು ನೀಡಿತಾದರು ಪಾರ್ವತಿ ಮಾತ್ರ ತನ್ನ ಜನ್ಮಭೂಮಿ-ಜನನಿಜನಕರನ್ನು ಬಿಟ್ಟು ಬಂದದ್ದರಿಂದ ಈ ಸ್ಥಳ ಅವಳಿಗೆ ಸಮಾಧಾನ ತಂದಿರಲಿಲ್ಲ. ಒಂದು ಬಾರಿ ಶಿವನನ್ನು

ಕುರಿತು ದೇವದೇವನೇ ! ಈ ಸ್ಥಳ ಸಾಕು ಪುನಃ ನಾವು ನಮ್ಮ ತವರು ಮನೆಗೆ ಹೋಗೋಣ ಎಂದಳು.

ಇದಕ್ಕೆ ಉತ್ತರವಾಗಿ ಶಿವನು ನಾನೂ ಎಂದು ಮನೆಯಲ್ಲಿ ವಾಸ ಮಾಡುವವನಲ್ಲ. ಈ ಅವಿಮುಕ್ತ ಕ್ಷೇತ್ರವೆ ನನ್ನ ನಿಶ್ಚಿತ ಮನೆ. ನಾನಿನ್ನು ತವರು ಮನೆಗೆ ಬರುವುದಿಲ್ಲ. ನಾನೆಂದಿಗೂ ಬಿಟ್ಟಿರಲಾರದ ಮನೆ ಇದೇ ಕಾಶಿಯೆ. ಇಂದಿನಿಂದ ಇದು ನಾನು ಬಿಟ್ಟಿರಲಾರದ ಅವಿಮುಕ್ತ ಸ್ಥಾನ ಇದೆ ಆಗಿದೆ. ನಿನಗೆ ಬೇಕಾದರೆ ಇರು ಅಥವಾ ತವರು ಮನೆಗೆ ಬೇಕಾದರೂ ಹೋಗಬಹುದು ಎಂದ. ಜನಮೇಜಯನೇ, ಹೀಗೆ ವಾರಾಣಾಸಿಯು ಶಾಪ ಹೊಂದಿ ಶಿವನ ಅವಿಮುಕ್ತ ಕ್ಷೇತ್ರವಾಯಿತು.

## ತ್ರಿಯುಗವಾಸಿ ತ್ರ್ಯಂಬಕ

**ಯುಗೇಷು ತ್ರಿಷು ಧರ್ಮಾತ್ಮಾ ಸಹ ದೇವ್ಯಾ ಮಹೇಶ್ವರಃ ।**
**ಅಂತರ್ಧಾನಂ ಕಲೌ ಯಾತಿ ತತ್ಪುರಂ ಹಿ ಮಹಾತ್ಮನಃ ॥ 45 ॥**

ಪರಮಶಿವನು ಕೃತ ತ್ರೇತಾ ದ್ವಾಪರಗಳಲ್ಲಿಯೂ ಕಾಶಿಯಲ್ಲಿ ದೃಶ್ಯನಾಗಿಯೇ ಇರುತ್ತಾನೆ. ಕಲಿಯುಗದಲ್ಲಿ ಮಾತ್ರ ಅದೃಶ್ಯನಾಗಿದ್ದರೂ ಸನ್ನಿಧಾನ ವಿಶೇಷವಿದ್ದೆ ಇರುತ್ತದೆ.

ಕಲಿಯುಗದಲ್ಲಿ ಅವಿಮುಕ್ತ ಪುರಿಯು ಅಂತರ್ಹಿತವಾಗುತ್ತದೆ. ಆಗಲೆ ಮೊದಲಿನ ವಾರಾಣಾಸಿ ಪ್ರಾದುರ್ಭಾವ ಹೊಂದುತ್ತದೆ. ಪುನಃ ಜನರು ವಾಸಿಸಲು ಪ್ರಾರಂಭಿಸುವರು.

## ಭದ್ರಶ್ರೇಣ್ಯನ ಶತ್ರುಶೇಷ

**ಭದ್ರಶ್ರೇಣ್ಯಸ್ಯ ಪುತ್ರೋ ವೈ ದುರ್ದಮೋ ನಾಮ ವಿಶ್ರುತಃ ।**
**ದಿವೋದಾಸೇನ ಬಾಲೇತಿ ಘೃಣಯಾ ಸ ವಿವರ್ಜಿತಃ ॥ 46 ॥**

**ಹೈಹಯಸ್ಯ ತು ದಾಯಾದ್ಯಂ ಕೃತವಾನ್ ವೈ ಮಹೀಪತಿಃ ।**
**ಆಜಹ್ರೇ ಪಿತೃದಾಯಾದ್ಯಂ ದಿವೋದಾಸ ಹೃತಂ ಬಲಾತ್ ॥ 47 ॥**

### ದುರ್ದಮನಿಂದ ಕಾಶೀರಾಜ್ಯಾಪಹಾರ

ದಿವೋದಾಸನು ಭದ್ರಶ್ರೇಣ್ಯನ ನೂರು ಜನ ಪುತ್ರರಲ್ಲಿ ತೊಂಭತ್ತೊಂಬತ್ತು

ಮಕ್ಕಳನ್ನು ಕೊಂದು ಹಾಕಿ. ನೂರನೆಯವನು ಚಿಕ್ಕ ವಯಸ್ಸಿನವನೆಂದು ಅವನನ್ನು ಕೊಲ್ಲದೆ ಉಪೇಕ್ಷೆ ಮಾಡಿಬಿಟ್ಟಿದ್ದನು. ಮುಂದೆ ದುರ್ದಮನೆಂಬ ಹೆಸರಿನ ಈ ಹುಡುಗನು ಪ್ರಾಯ ಹೊಂದಿ ಸೇಡು ತೀರಿಸಿಕೊಳ್ಳಲು ಬಯಸಿದನು. ಅದಕ್ಕಾಗಿ ಕಾರ್ತವೀರ್ಯಾರ್ಜುನನನ್ನು ನೀನೇ ನನಗೆ ತಂದೆಯೆಂದು ಮೊರೆ ಹೊಂದಿದನು. ಅವನ ಸಹಾಯ ಪಡೆದು ಕಾಶೀರಾಜ್ಯವನ್ನು ವಶಪಡಿಸಿಕೊಂಡನು. ಹೀಗೆ ದುರ್ದಮನು ದಿವೋದಾಸನೊಡನೆ ಹೋರಾಡಿ ತನ್ನ ರಾಜ್ಯವನ್ನು ಪುನಃ ಪಡೆದುಕೊಂಡನು.

### ಪ್ರತರ್ದನನಿಂದ ಪುನಃ ರಾಜ್ಯಾಪಹಾರ

**ದಿವೋದಾಸಾದ್ ದೃಷದ್ವತ್ಯಾಂ ವೀರೋ ಜಜ್ಞೇ ಪ್ರತರ್ದನಃ ।**
**ತೇನ ಪುತ್ರೇಣ ಬಾಲೇನ ಪ್ರಹೃತಂ ತಸ್ಯ ವೈ ಪುನಃ ॥ 48 ॥**

ದಿವೋದಾಸನಿಗೆ ದೃಷದ್ವತಿಯೆಂಬ ಭಾರ್ಯೆಯಿದ್ದಳು. ಅವಳಲ್ಲಿ ದಿವೋದಾಸನಿಂದ ಜನಿಸಿದವನೇ ಪ್ರತರ್ದನನು. ವೀರಾಗ್ರಣಿಯಾದ ಪ್ರತರ್ದನನು. ಇನ್ನು ಚಿಕ್ಕವನಿರುವಾಗಲೇ ದುರ್ದಮನ ಮೇಲೆ ದಾಳಿ ಮಾಡಿ ತನ್ನ ತಂದೆಯ ರಾಜ್ಯವನ್ನು ಪುನಃ ತನ್ನ ವಶಮಾಡಿಕೊಂಡನು.

### ಪ್ರತರ್ದನನ ವಂಶ

**ಪ್ರತರ್ದನಸ್ಯ ಪುತ್ರೌ ದ್ವೌ ವತ್ಸ ಭಾರ್ಗೌ ಬಭೂವತುಃ ।**
**ವತ್ಸಪುತ್ರೋ ಹ್ಯಲರ್ಕಸ್ತು ಸನ್ನತಿಸ್ತಸ್ಯ ಚಾತ್ಮಜಃ ॥ 49 ॥**

ಪ್ರತರ್ದನನಿಗೆ ವತ್ಸ ಹಾಗೂ ಭಾರ್ಗರೆಂಬ ಇಬ್ಬರು ಪುತ್ರರಿದ್ದರು. ವತ್ಸನ ಮಗನೇ 'ಅಲರ್ಕರಾಜನು'.

**ಅಲರ್ಕಃ ಕಾಶಿರಾಜಸ್ತು ಬ್ರಹ್ಮಣ್ಯಃ ಸತ್ಯಸಂಗರಃ ।**
**ಅಲರ್ಕಂ ಪ್ರತಿ ರಾಜರ್ಷಿಂ ಶ್ಲೋಕೋ ಗೀತಃ ಪುರಾತನೈಃ ॥ 50 ॥**

**ಷಷ್ಠಿರ್ವರ್ಷಸಹಸ್ರಾಣಿ ಷಷ್ಠಿಂ ವರ್ಷಶತಾನಿ ಚ ।**
**ಯುವಾರೂಪೇಣ ಸಂಪನ್ನಃ ಆಸೀತ್ ಕಾಶಿಕುಲೋದ್ಭವಃ ॥ 51 ॥**

**ಲೋಪಾಮುದ್ರಾ ಪ್ರಸಾದೇನ ಪರಮಾಯುರವಾಪ ಸಃ ॥ 52 ॥**

ಅಲರ್ಕನು ಸತ್ಯಸಂಧನೂ ಬ್ರಾಹ್ಮಣಪ್ರಿಯನೂ ಆಗಿದ್ದನು. ಅಲರ್ಕ ರಾಜನನ್ನು ಕುರಿತು ಪುರಾತನರು ಈ ಗೀತೆಯನ್ನು ಹಾಡಿದ್ದಾರೆ.

ಕಾಶಿವಂಶಾವತಂಸನಾದ ಅಲರ್ಕ ರಾಜನು ಲೋಪಾಮುದ್ರೆಯೆಂಬ ದೇವಿಯನ್ನೋಲಿಸಿಕೊಂಡು ಸಾವಿರಾರು ವರ್ಷ ದೀರ್ಘಾಯುಷ್ಮಂತನಾಗಿ ಬಾಳಿದನು. ಇವನ ಜೀವನ ಅರವತ್ತು ಸಾವಿರದ ಆರು ನೂರು ವರ್ಷದಷ್ಟು ದೀರ್ಘಕಾಲವಾಗಿತ್ತು. (60,600 ವರ್ಷಗಳು).

### ಕಾಶಿಗೆ ನಿಕುಂಭನ ಶಾಪ ನಿವೃತ್ತಿ

**ಶಾಪಸ್ಯಾಂತೇ ಮಹಾಬಾಹುಃ ಹತ್ವಾ ಕ್ಷೇಮಕ ರಾಕ್ಷಸಮ್ ।**
**ರಮ್ಯಾಂ ನಿವೇಶಯಾಮಾಸ ಪುರೀಂ ವಾರಾಣಸೀಂ ಪುನಃ ॥ 53 ॥**

ಹಿಂದೆ ಹೇಳಿದಂತೆ 'ಸಾವಿರ ವರ್ಷ ಜನ ಶೂನ್ಯವಾಗಲಿ' ಎಂಬ ನಿಕುಂಭನ ಶಾಪ ಮುಗಿಯುತ್ತಿದ್ದಂತೆ ಅಲರ್ಕರಾಜನು ಕಾಶೀಪಟ್ಟಣವನ್ನು ಪುನಃ ನಿರ್ಮಾಣ ಮಾಡಿದನು. ಶಾಪದಿಂದ ಜನಶೂನ್ಯವಾಗಿದ್ದಾಗ ಕ್ಷೇಮಕರನೆಂಬ ರಾಕ್ಷಸ ಕಾಶಿಯನ್ನು ಆಕ್ರಮಿಸಿ ವಾಸಿಸುತ್ತಿದ್ದ. ಅಲರ್ಕನು ಕ್ಷೇಮಕ ರಾಕ್ಷಸನನ್ನು ಕೊಂದು ಹಾಕಿ ಪುನರ್ನಿರ್ಮಾಣ ಮಾಡಿದ.

### ಅಲರ್ಕನ ವಂಶ

ಅಲರ್ಕನಿಗೆ ಸನ್ನತಿ ಅಥವಾ ಸಂತತಿಯೆಂಬ ಪುತ್ರನಾದನು. ಸನ್ನತಿಗೆ ಸುನೀಥನು, ಸುನೀಥನಿಗೆ ಕ್ಷೇಮ್ಯನು, ಇವನಿಗೆ ಸುಕೇತನನು, ಇವನಿಗೆ ಕೇತುಮಾನ್, ಕೇತುಮಂತನಿಗೆ ಎರಡನೆಯ ಸುಕೇತುವು, ಈ ಸುಕೇತುವಿಗೆ ಧರ್ಮಕೇತು, ಇವನಿಗೆ ಸತ್ಯಕೇತು. ಇವನಿಗೆ ವಿಭುವು, ವಿಭುವಿಗೆ ಆನರ್ತನು, ಆನರ್ತನಿಗೆ ಸುಕುಮಾರನು, ಸುಕುಮಾರನಿಗೆ ಧೃಷ್ಟಕೇತುವು. ಇವನಿಗೆ ವೀತಿ(ವೇಣು) ಹೋತ್ರನು, ವೀತಿ ಹೋತ್ರನಿಂದ ಭರ್ಗನು, ಭರ್ಗನಿಗೆ ಭಾರ್ಗಭೂಮಿಯು. ಇಲ್ಲಿಯವರೆಗೂ ಕಾಶಿಯಿಂದಾರಂಭಿಸಿ ಭಾರ್ಗಭೂಮಿಯವರೆಗೂ ಕಾಶ್ಯನಲ್ಲಿ ಜನಿಸಿದವರು. ಕಾಶ್ಯನ ಮಕ್ಕಳೆಲ್ಲ ಕ್ಷತ್ರವೃದ್ಧನ ವಂಶದವರು. ರಾಭನ ಮಗ ರಭಸ, ರಭಸನಿಂದ ಗಂಭೀರ, ಇವನಿಂದ ಚಕ್ರಕ ಜನಿಸಿದರು.

**ಏತೇ ತ್ವಂಗಿರಸಃ ಪುತ್ರಾಃ ಜಾತಾ ವಂಶೇಽಥ ಭಾರ್ಗವೇ ।**
**ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ತಯೋಃ ಪುತ್ರಾಃ ಸಹಸ್ರಶಃ ॥ 54 ॥**

**ಇತ್ಯೇತೇ ಕಾಶಯಃ ಪ್ರೋಕ್ತಾಃ ನಹುಷಸ್ಯ ನಿಬೋಧ ಮೇ ॥ 55 ॥**

ಅಂಗೀರಸನ ವಂಶದವರಾದ ಇವರೆಲ್ಲರೂ ಗಾಲವಾಂಗೀರಸ ವಂಶದಲ್ಲಿ ಹುಟ್ಟಿದ ರಾಜ ಮಹಾರಾಜರ ಕಥೆ ನಿರೂಪಿಸಿದ್ದೇನೆ. ಇವರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ನಾನಾ ಜಾತಿಯ ಸಾವಿರಾರು ಕಾಶೀರಾಜರು ಜನಿಸಿದರು.

ಇನ್ನು ಮುಂದೆ ನಹುಷನ ಚರಿತ್ರೆ ಹೇಳುವೆ ಕೇಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
**ಕಾಶಿಕಥೆ, ದಿವೋದಾಸ, ಪ್ರತರ್ದನ, ಅಲರ್ಕರ ಚರಿತ್ರೆವೆಂಬಲ್ಲಿ**
ಇಪ್ಪತ್ತೊಂಬತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




# ಅಥ ತ್ರಿಂಶೋಽಧ್ಯಾಯಃ

## ಯಯಾತಿ ಚರಿತ್ರೆ ವಂಶ ನಿರೂಪಣೆ

*ವೈಶಂಪಾಯನ ಉವಾಚ-*

**ಉತ್ಪನ್ನಾಃ ಪಿತೃಕನ್ಯಾಯಾಂ ವಿರಜಾಯಾಂ ಮಹೌಜಸಃ ।**
**ನಹುಷಸ್ಯ ತು ದಾಯಾದಾಃ ಷಡಿಂದ್ರೋಪಮಚೇತಸಃ ॥ 1 ॥**

**ಯತಿರ್ಯಯಾತಿಃ ಸಂಯಾತಿಃ ಆಯಾತಿಃ ಪಾಂಚಿಕೋ ಭವಃ ।**
**ಸುಯಾತಿಃ ಷಷ್ಠಃ ತೇಷಾಂ ವೈ ಯಯಾತಿಃ ಪಾರ್ಥಿವೋಽಭವತ್ ॥ 2 ॥**

**ಕಕುಸ್ಥ ಕನ್ಯಾಂ ಗಾಂ ನಾಮ ಲೇಭೇ ಪರಮಧಾರ್ಮಿಕಃ ।**
**ಯತಿಸ್ತು ಮೋಕ್ಷಮಾಸ್ಥಾಯ ಬ್ರಹ್ಮಭೂತೋಽಭವನ್ ಮುನಿಃ ॥ 3 ॥**

ಈ ಹಿಂದೆ ಸುಸ್ವಧರೆಂದು ಚಿತ್ತರಿಸಿದ ಪಿತೃಗಳ ಮಾನಸೀ ಕನ್ಯೆ ವಿರಜೆಯಲ್ಲಿ ನಹುಷನಿಂದ ಯತಿ, ಯಯಾತಿ, ಸಂಯಾತಿ, ಆಯಾತಿ, ಐದನೆಯವನು ಭವ, ಸುಯಾತಿಯು ಆರನೆಯವನು. ಸುಯಾತಿಗೆ ಕೃತಿಯೆಂದು ಆಯಾತಿಗೆ ಉದ್ಧವಪದನೆಂದು, ಭವನಿಗೆ ವಿಯತಿಯೆಂದು, ಕೃತಿಗೆ ವಿದ್ಯಾಸಾತಿಯೆಂದೂ ನಾಮಾಂತರಗಳಿದ್ದವು. ಇವರಲ್ಲಿ ಯತಿಯು ಜ್ಯೇಷ್ಠಪುತ್ರನು. ಅವನು ಕಕುತ್ಥ ರಾಜನ ಮಗಳಾದ ಗೋದೇವಿಯನ್ನು ವಿವಾಹವಾದರೂ ಬ್ರಹ್ಮಚಿಂತನೆ-ಯಲ್ಲಿಯೇ ಸರ್ವದಾ ಆಸಕ್ತನಾಗಿರುತ್ತಿದ್ದನು. ಲೌಕಿಕ ಭೋಗಭಾಗ್ಯಗಳನ್ನು ದೂರ ಮಾಡಿ ವೈಖಾನಸ ವ್ರತ ಹಿಡಿದು ಹೆಸರಿಗೆ ತಕ್ಕಂತೆ ಯತಿಯೂ ವ್ರತಿಯೂ ಭಗವನ್ಮತಿಯೂ ಆಗಿದ್ದನು. ಕಡೆಗೆ ಮುಕ್ತಿ ಹೊಂದಿದನು.

ನಂತರ ದ್ವಿತೀಯ ಪುತ್ರನಾದ ಯಯಾತಿಯು ರಾಜನಾದನು. ಯಯಾತಿಯು ತನ್ನ ಶೌರ್ಯ ವೀರ್ಯ ಪರಾಕ್ರಮಗಳಿಂದ ಎಲ್ಲಾ ರಾಜರನ್ನೂ ಗೆದ್ದು ಜಗಜ್ಜೇತಾರನಾದನು.

## ಯಯಾತಿ ವಿವಾಹ – ಸಂತಾನ

**ದೇವಯಾನೀಂ ಉಶನಸಃ ಸುತಾಂ ಭಾರ್ಯಾಮವಾಪ ಹ ।**
**ಶರ್ಮಿಷ್ಠಾ ಮಾಸುರೀಂ ಚೈವ ತನಯಾಂ ವೃಷಪರ್ವಣಃ ॥ 4 ॥**
**ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ।**
**ದ್ರುಹ್ಯಂ ಚಾನುಂ ಚ ಪುರುಂ ಚ ಶರ್ಮಿಷ್ಠಾಂ ವಾರ್ಷಪರ್ವಣೀ ॥ 5 ॥**

ಶುಕ್ರಾಚಾರ್ಯರ ಪುತ್ರಿಯಾದ ದೇವಯಾನಿಯನ್ನೂ, ರಾಕ್ಷಸ ರಾಜನಾದ ವೃಷಪರ್ವನ ರಾಜನ ಮಗಳಾದ ಶರ್ಮಿಷ್ಠೆಯನ್ನೂ ವಿವಾಹವಾದ ಯಯಾತಿಯು ಅವರಿಬ್ಬರಲ್ಲಿ ದೇವಯಾನಿಯಲ್ಲಿ ಯದು ಹಾಗೂ ತುರ್ವಸು ಎಂಬ ಇಬ್ಬರು ಪುತ್ರರನ್ನೂ, ಶರ್ಮಿಷ್ಠೆಯಲ್ಲಿ ದ್ರುಹ್ಯು ಅನು, ಪೂರು ಎಂಬ ಮೂವರು ಮಕ್ಕಳನ್ನು ಪಡೆದನು.

## ಇಂದ್ರದೇವನ ಅದ್ಭುತ ಕಾಣಿಕೆ

**ತಸ್ಮೈ ಶಕ್ರೋ ದದೌ ಪ್ರೀತಃ ರಥಂ ಪರಮಭಾಸ್ವರಮ್ ।**
**ಅಸಂಗಂ ಕಾಂಚನಂ ದಿವ್ಯಂ ದಿವ್ಯೈಃ ಪರಮವಾಜಿಭಿಃ ॥ 6 ॥**
**ಸ ತೇನ ರಥಮುಖ್ಯೇನ ಷಡ್‌ರಾತ್ರೇಣ ಅಜಯನ್ ಮಹೀಮ್ ॥ 7 ॥**
**ಸ ರಥಃ ಪೌರವಾಣಾಂ ತು ಸರ್ವೇಷಾಮಭವತ್ ತದಾ ॥ 8 ॥**

ಇಂದ್ರದೇವನು ಯಯಾತಿಯ ಮೇಲೆ ಪರಮಪ್ರೀತನಾಗಿ ಶ್ರೇಷ್ಠವೂ ಸೂರ್ಯನಂತೆ ದೇದಿಪ್ಯಮಾನವೂ ಆದ, ರಥವನ್ನೂ, ಹಾಗೆಯೇ ಗಾಳಿಯಂತೆ ವೇಗವಾಗಿ ಓಡುವ ಶುಭ್ರವಾದ ಕುದುರೆಗಳನ್ನು, ಸುವರ್ಣದ ಕಿರೀಟವನ್ನೂ, ನೀಡಿದನು. ಈ ದಿವ್ಯ ರಥದಲ್ಲಿ ಕುಳಿತು ಯಯಾತಿಯು ದಿಗ್ದೇಶವನ್ನೆಲ್ಲ ಸುತ್ತಾಡಿ ದಿಗ್ವಿಜಯ ಮಾಡಿ, ಅಖಂಡ ಭೂಮಂಡಲವನ್ನೆಲ್ಲ ತನ್ನ ಪಾದಕ್ರಾಂತ ಮಾಡಿಕೊಂಡ. ಸರ್ವತ್ರ ತಡೆಯಿಲ್ಲದ ಈ ರಥದಲ್ಲಿ ಭಾರ್ಯೆಯೊಂದಿಗೆ ಕುಳಿತು ಆರು ರಾತ್ರಿಗಳಲ್ಲಿ ಸಮಗ್ರ ಭೂಮಿಯನ್ನು ವಶಮಾಡಿಕೊಂಡಿದ್ದನು. ದೇವತೆಗಳೂ, ದೈತ್ಯದಾನವರೂ, ಮಾನವರೂ ಸಹ ಅವನ ಪರಾಕ್ರಮಕ್ಕೆ ಮಣಿದು ತಲೆತಗ್ಗಿಸಿದರು.

ಈ ರಥವು ಕುರುವಂಶದ ರಾಜಮನೆತನದ ಅಧೀನದಲ್ಲಿಯೇ ಬಹುಕಾಲ ಇದ್ದಿತು. ಕುರುವಂಶೀಯ ವಸುರಾಜನವರೆಗೂ ಇದ್ದ ಈ ರಥವು ಕೊನೆಗೆ ಪರೀಕ್ಷಿತನ ಪುತ್ರನಾದ ಇಂದ್ರೋತ ಜನಮೇಜಯನ ಕಾಲದಲ್ಲಿ ಇವನ ಮೇಲೆ ಕೋಪಗೊಂಡ ಗಾರ್ಗ್ಯಮುನಿಯ ಶಾಪದಿಂದಾಗಿ ಕುರುಕುಲದಿಂದ ತಪ್ಪಿ ಬೇರೆಯವರ ವಶವಾಯಿತು.

ಶಾಪದಿಂದ ದುರ್ವಾಸನೆ ಹೊಂದಿದ ರಾಜ

**ಗಾರ್ಗ್ಯಸ್ಯ ಹಿ ಸುತಂ ಬಾಲಂ ಸ ರಾಜಾ ಜನಮೇಜಯಃ ।**
**ವಾಕ್‌ಘೂರಂ ಹಿಂಸಯಾಮಾಸ ಬ್ರಹ್ಮಹತ್ಯಾಮವಾಪ ಸಃ ॥ 9 ॥**

**ಸ ಲೋಹಗಂಧೀ ರಾಜರ್ಷಿಃ ಪರಿಧಾವನ್ ಇತಸ್ತತಃ ।**
**ಪೌರಜಾನಪದೈಃ ತ್ಯಕ್ತೋ ನ ಲೇಭೇ ಶರ್ಮ ಕರ್ಹಿಚಿತ್ ॥ 10 ॥**

ಗರ್ಗ ಮುನಿಯ ಪುತ್ರನೊಬ್ಬನನ್ನು ಜನಮೇಜಯ ರಾಜನು ಕಾಲಚೋದಿತನಾಗಿ ಕೊಂದು ಹಾಕಿದನು. ಅವನಿಗೆ ಬ್ರಹ್ಮಹತ್ಯಾ ದೋಷ ಒದಗಿತು. ಬ್ರಹ್ಮಹತ್ಯೆಯಿಂದಾಗಿ ಹಾಗೂ ಗಾರ್ಗ್ಯನ ಶಾಪದಿಂದಾಗಿ ಮೈಯೆಲ್ಲ ದುರ್ವಾಸನೆ ಹೊರ ಸೂಸಲು ಪ್ರಾರಂಭವಾಯಿತು. ಯಾರು ಹತ್ತಿರಕ್ಕೆ ಸುಳಯುತ್ತಿರಲಿಲ್ಲ. ಪಟ್ಟಣಿಗರು–ಗ್ರಾಮವಾಸಿಗಳು ಈ ರಾಜನನ್ನು ಪರಿತ್ಯಜಿಸಿದರು. ಇಂದ್ರೋತ ಜನಮೇಜಯನೂ ದಿಕ್ಕು ಗಾಣದೆ ಕಂಡ ಕಂಡಲ್ಲೆಲ್ಲ ಅಲೆದಾಡುತ್ತಿದ್ದನು.

### ಇಂದ್ರೋತನು ಶೌನಕನಿಗೆ ಶರಣಾದ

**ತತಃ ಸ ದುಃಖಸಂತಪ್ತೋ ನಾಲಭತ್ ಸಂವಿದಂ ಕ್ವಚಿತ್ ।**
**ಇಂದ್ರೋತಃ ಶೌನಕಂ ರಾಜಾ ಶರಣಂ ಪ್ರತ್ಯಪದ್ಯತ ॥ 11 ॥**

**ಯಾಜಯಾಮಾಸ ಚೇಂದ್ರೋತಂ ಶೌನಕೋ ಜನಮೇಜಯಮ್ ।**
**ಅಶ್ವಮೇಧೇನ ರಾಜಾನಂ ಪಾವನಾರ್ಥಂ ದ್ವಿಜೋತ್ತಮಃ ॥ 12 ॥**

**ಸ ಲೋಹಗಂಧೋ ವ್ಯಶನತ್ ತಸ್ಯಾವಭೃಥಮೇತ್ಯ ಹ ।**

ಇಂದ್ರೋತನು ಕಾಡುಮೇಡುಗಳಲ್ಲಿ ಅಲೆದು ಬೆಂಡಾಗಿ ಬೇಸತ್ತನು. ಅವನಿಗೆ ಎಲ್ಲಿಯೂ ಶಾಂತಿ ಸಿಕ್ಕಿರಲಿಲ್ಲ. ನಂತರ ಶೌನಕರಿಗೆ ಶರಣಾಗಿ ತನ್ನ ದುಃಖ

ತೊಲಗಿಸರೆಂದು ಬೇಡಿದ. ಬ್ರಹ್ಮಹತ್ಯೆಯ ದೋಷದಿಂದಾಗಿ ನಿಸ್ತೇಜನೂ ಕ್ಷೀಣನೂ ಕಳೆಗೆಟ್ಟವನೂ ಆದ ರಾಜನನ್ನು ನೋಡಿ ದಯ ಮಾಡಿ– ರಾಜನೇ ಬ್ರಹ್ಮಹತ್ಯೆಯಿಂದಾಗಿ ಲೋಹದ ದುರ್ಗಂಧದಿಂದ ನಾರುತ್ತಿದೆ ಈ ನಿನ್ನ ದೇಹ ಮೈಯೆಲ್ಲ ತೊನ್ನುರೋಗ ತಗಲಿದೆ. ಕುಷ್ಠರೋಗದಿಂದಾಗಿ ನಿನ್ನ ಅವಯವಗಳೆಲ್ಲ ತುಂಡಾಗಿ ಬೀಳುತ್ತಿವೆ. ಅಲ್ಲವೆ ? ಬೆದರಬೇಡ ನಾನು ನಿನ್ನಿಂದ ಒಂದು ಅಶ್ವಮೇಧಯಾಗ ಮಾಡಿಸುವೆ ಎಂದು ಅಭಯ ನೀಡಿದರು. ರಾಜನಿಂದ ಅಶ್ವಮೇಧಯಾಗವು ಶೌನಕರ ನೇತೃತ್ವದಲ್ಲಿ ಸಮರ್ಥವಾಗಿ ನಡೆಯಿತು. ಯಜ್ಞ ಸಮಾಪ್ತಿಯಾದ ಮೇಲೆ ಮಂತ್ರಪೂತ ಜಲದಿಂದ ಅವಭೃಥ ಸ್ನಾನ ಮಾಡಿಸಿದರು. ಮಂತ್ರಪೂತ ಪುಣ್ಯಜಲದಲ್ಲಿ ಮುಳುಗಿ ಎದ್ದಾಗ ಇಷ್ಟು ದಿನ ಹೊರಸೂಸುತ್ತಿದ್ದ ದುರ್ಗಂಧ ಸಂಪೂರ್ಣ ತೊಲಗಿ ಹೋಗಿತ್ತು. ಅವನನ್ನು ಆಕ್ರಮಿಸಿದ್ದ ತೊನ್ನು ರೋಗವಾಗಲಿ, ಬ್ರಹ್ಮಹತ್ಯೆಯ ಗುರುತಾಗಿದ್ದ ಸುಟ್ಟ ಕಬ್ಬಿಣದ ದುರ್ವಾಸನೆ ದುರ್ಗಂಧವಾವುದೂ ಇದ್ದಿಲ್ಲ. ಮೊದಲಿನಂತೆ ಗ್ರಹಣ ಬಿಟ್ಟ ಚಂದ್ರನಂತೆ ಹೊಳೆಯತೊಡಗಿದ.

## ಇಂದ್ರ ರಥವು ಉಪೇಂದ್ರನಿಗೆ ಸೇರಿತು

**ಸ ಚ ದಿವ್ಯೋ ರಥೋ ರಾಜನ್ ವಸೋಃ ಚೇದಿಪತೇಸ್ತದಾ ।**
**ದತ್ತಃ ಶಕ್ರೇಣ ತುಷ್ಟೇನ ಲೋಭೇ ತಸ್ಮಾದ್ ಬೃಹದ್ರಥಃ ॥ 13 ॥**
**ಬೃಹದ್ರಥಾತ್ ಕ್ರಮೇಣೈವ ಗತೋ ಬಾರ್ಹದ್ರಥಂ ನೃಪಮ್ ।**
**ತತೋ ಹತ್ವಾ ಜರಾಸಂಧಂ ಭೀಮಸ್ತಂ ರಥಮುತ್ತಮಮ್ ॥ 14 ॥**
**ಪ್ರದದೌ ವಾಸುದೇವಾಯ ಪ್ರೀತ್ಯಾ ಕೌರವ ನಂದನಃ ।**

ದೇವೇಂದ್ರನು ಈ ಹಿಂದೆ ಯಯಾತಿ ರಾಜನಿಗೆ ನೀಡಿದ್ದ ದಿವ್ಯರಥವು ಕುರುವಂಶದ ಮೊದಲನೆಯ ಜನಮೇಜನ ಕಾಲದವರೆಗೂ ಬಂದಿತ್ತು. ವಸುವಿಗೆ ಬ್ರಹ್ಮಹತ್ಯೆ ಅಂಟಿಕೊಂಡಾಗ ಅದನ್ನು ತೆಗೆದುಕೊಂಡು ಚೇದಿರಾಜ ವಸುವಿಗೆ ನೀಡಿದ. ಈ ಚೇದಿರಾಜನಿಂದ ಬೃಹದ್ರಥ ರಾಜನಿಗೆ ಸೇರಿತು. ನಂತರ ಬೃಹದ್ರಥನ ನಂತರ ಅವನ ಮಗನಾದ ಜರಾಸಂಧನಿಗೆ ಸೇರಿತು. ಜಲಭೀಮನು ಜರಾಸಂಧನನ್ನು ಕೊಂದು ಹಾಕಿದ ನಂತರ ಆ ರಥವು ಭೀಮಸೇನನ ವಶವಾಯಿತು. ಅದನ್ನು ಶ್ರೀಕೃಷ್ಣ ಪರಮಾತ್ಮನ ಪಾದಗಳಲ್ಲಿ ಭೀಮನು ಅರ್ಪಿಸಿ ಕೃತಾರ್ಥನಾದ. ಹೀಗೆ ಇಂದ್ರನಿಂದ ರಥವು ಉಪೇಂದ್ರನಿಗೆ ಸೇರಿತು.

### ಸಪ್ತದ್ವೀಪ ಭೂಮಿಯ ಪಂಚವಿಭಾಗ

**ಸಪ್ತದ್ವೀಪಾಂ ಯಯಾತಿಸ್ತು ಜಿತ್ವಾ ಪೃಥ್ವೀಂ ಸಸಾಗರಾಮ್ ।**
**ವ್ಯಭಜತ್ ಪಂಚಧಾ ರಾಜನ್ ಪುತ್ರಾಣಾಂ ನಾಹುಷಸ್ತದಾ ॥ 15 ॥**

**ದಿಶಿ ದಕ್ಷಿಣ ಪೂರ್ವಸ್ಯಾಂ ತುರ್ವಸುಂ ಮತಿಮಾನ್ ನೃಪಃ ।**
**ಪ್ರತೀಚ್ಯಾಮುತ್ತರಸ್ಯಾಂ ಚ ದ್ರುಹ್ಯಂ ಚಾನುಂ ಚ ನಾಹುಷಃ ॥ 16 ॥**

**ದಿಶಿ ಪೂರ್ವೋತ್ತರಸ್ಯಾಂ ವೈ ಯದುಂ ಜ್ಯೇಷ್ಠಂ ನ್ಯಯೋಜಯತ್ ।**
**ಮಧ್ಯೆ ಪೂರುಂ ಚ ರಾಜಾನಂ ಅಭ್ಯಷಿಂಚತ ನಾಹುಷಃ ॥ 17 ॥**

ಯಯಾತಿಯು ಸಪ್ತದ್ವೀಪವತಿಯಾದ ಈ ಪೃಥ್ವಿಯನ್ನು ಗೆದ್ದು ಅದರ ಆಗ್ನೇಯ ಭಾಗವನ್ನು ತುರ್ವಸುವಿಗೆ ನೀಡಿದನು. ಪಶ್ಚಿಮ ಭಾಗವನ್ನು ದ್ರುಹ್ಯವಿಗೂ, ಉತ್ತರ ಭಾಗವನ್ನೆಲ್ಲ ಅನುವಿಗೂ, ಈಶಾನ್ಯ ಭಾಗವನ್ನು ಜ್ಯೇಷ್ಠಪುತ್ರನಾದ ಯದುವಿಗೆ ವಿಭಾಗ ಮಾಡಿಕೊಟ್ಟನು.

ಮಧ್ಯಭಾಗದಲ್ಲಿ ಪೂರು ರಾಜನಿಗ ಅಭಿಷೇಕಗೈದನು. ಯಯಾತಿಯ ಪಂಚಪುತ್ರರೂ ಪಂಚಖಂಡ ಪ್ರಪಂಚವನ್ನು ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದರು.

### ಶುಕ್ರಾಚಾರ್ಯರ ಶಾಪ

ಶುಕ್ರಾಚಾರ್ಯರು ದೇವಯಾನಿಯನ್ನು ಬಹಳ ಪ್ರೀತಿಸುತ್ತಿದ್ದರು. ಯಯಾತಿಯು ಶರ್ಮಿಷ್ಠೆಯನ್ನು ಮದುವೆಯಾದದ್ದು ಅವಳಗಿಷ್ಟವಿರಲಿಲ್ಲ. ಇದಕ್ಕಾಗಿ ತಂದೆಗೆ ಯಯಾತಿಯ ಮೇಲೆ ದೂರಿದಳು. ಶುಕ್ರಾಚಾರ್ಯ-ನಾದರೂ ವಿಚಾರವಿಲ್ಲದೆ ಯಯತಿಗೆ ರಾಜನೇ 'ವೃದ್ಧನಾಗು' ಎಂದು ಶಪಿಸಿದ. ಹೀಗಾಗಿ ನಡುವಯಸ್ಸಿನಲ್ಲಿಯೇ ರಾಜನಿಗೆ ವೃದ್ಧಾಪ್ಯ ಅಡರಿತು. ಮುಪ್ಪು ಬಂದಿದ್ದರೂ ಅವನ ಮನಸ್ಸು ಕಾಮವಾಸನೆಯಿಂದ ಹೊರಬಂದಿದ್ದಿಲ್ಲ. ಒಂದು ದಿನ ಯಯಾತಿಯು ರಾಜ್ಯಭಾರ ಪುತ್ರರಿಗೆ ಹಾಕಿ ಅವರ ರಾಜ್ಯಭಾರದಿಂದ ಸಂತುಷ್ಟನಾಗಿ ದೇವಯಾನಿಯ ಪುತ್ರನಾದ ಯದುವನ್ನು ಕುರಿತು ಹೀಗೆ ಹೇಳದನು.

### ವಾರ್ಧಕ್ಯ ತೆಗೆದುಕೊ ತಾರುಣ್ಯ ನೀಡು

**ಜರಾಂ ಮೇ ಪ್ರತಿಗೃಹ್ಣೀಷ್ವ ಪುತ್ರ ಕೃತ್ಯಾಂತರೇಣ ವೈ ।**
**ತರುಣಸ್ತವ ರೂಪೇಣ ಚರೇಯಂ ಪೃಥಿವೀಮಿಮಾಮ್ ॥ 18 ॥**

**ಅನಿರ್ದಿಷ್ಟಾ ಮಯಾ ಭಿಕ್ಷಾ ಬ್ರಾಹ್ಮಣಸ್ಯ ಪ್ರತಿಶ್ರುತಾ ।**
**ಅನಪಾಕೃತ್ಯ ತಾಂ ರಾಜನ್ ನ ಗ್ರಹೀಷ್ಯಾಮಿ ತೇ ಜರಾಮ್ ॥ 19 ॥**
**ಜರಾಯಾಂ ಬಹವೋ ದೋಷಾಃ ಪಾನಭೋಜನ ಕಾರಿತಾಃ ।**
**ತಸ್ಮಾಜ್ಜರಾಂ ನ ತೇ ರಾಜನ್ ಗ್ರಹೀತುಮಹಮುತ್ಸಹೇ ॥ 20 ॥**
**ಸಂತಿ ತೇ ಬಹವಃ ಪುತ್ರಾಃ ಮತ್ತಃ ಪ್ರಿಯತರಾ ನೃಪ ॥ 21 ॥**

ಯದುಕುಮಾರನೇ! ನೀನು ನನ್ನ ರಾಜ್ಯವನ್ನು ತೆಗೆದುಕೊಂಡಂತೆ ನನ್ನ ಅಕಾಲಮುಪ್ಪನ್ನು ಸಹ ಸ್ವೀಕರಿಸು. ಸ್ವಲ್ಪಕಾಲ ನಿನ್ನ ಯವ್ವನ ನೀಡು ನಿನ್ನ ರೂಪದಿಂದ ನಾನು ಈ ಭೂಮಂಡಲದಲ್ಲಿ ಕೆಲವು ಕಾಲ ಸಂಚರಿಸುತ್ತೇನೆ ಎಂದು ತನ್ನ ವಾರ್ಧಕ್ಯಕ್ಕೆ ಬದಲಾಗಿ ನವತಾರುಣ್ಯ ಬೇಡಿದನು.

ಯದುವು ತಂದೆಯೇ, ನಾನೊಬ್ಬ ಬ್ರಾಹ್ಮಣನಿಗೆ ಬೇಡಿದ್ದನ್ನು ಕೊಡುತ್ತೇನೆ ಎಂದು ಮಾತು ಕೊಟ್ಟಿರುವೆ. ಅವನು ಏನು ಕೇಳುವನೊ ಗೊತ್ತಿಲ್ಲ. ನಾನು ನಿನ್ನ ವೃದ್ಧಾಪ್ಯ ತೆಗೆದುಕೊಂಡು ವೃದ್ಧನಾಗಿ ಕೂತರೆ ಆ ಬ್ರಾಹ್ಮಣನ ಮನೋರಥವನ್ನು ಹೇಗೆ ಪೂರೈಸುವುದು? ಮುಪ್ಪು ಬಂದಿತೆಂದರೆ ತಿನ್ನುವುದು, ಕುಡಿಯುವುದಕ್ಕೆ ಪ್ರತಿಬಂಧಕವೆ. ನಿನಗೆ ನನಗಿಂತ ಪ್ರೀತಿಯ ಮಕ್ಕಳಿದ್ದಾರೆ ಅವರನ್ನು ಕೇಳು ಎಂದನು.

## ಯದುವಿನ ಮೇಲೆ ಯಯಾತಿಯ ಕೋಪ-ಶಾಪ

**ಕ ಆಶ್ರಯಸ್ತವಾನ್ಯೋಽಸ್ತಿ ಕೋ ವಾ ಧರ್ಮೋ ವಿಧೀಯ ತೇ ।**
**ಮಾಮನಾದೃತ್ಯ ದುರ್ಬುದ್ಧೇ ! ತದಹಂ ತವ ದೇಶಿಕಃ ॥ 22 ॥**
**ಅರಾಜ್ಯಾ ತೇ ಪ್ರಜಾ ಮೂಢ ಭವಿತ್ರೀತಿ ನರಾಧಮ ॥ 23 ॥**

ಯದುವಿನ ಮಾತು ಅರ್ಥವಾಯಿತು. ಕೊಡುವುದಿಲ್ಲ ಎನ್ನುವುದಕ್ಕೆ ಬದಲಾಗಿ ನೆಪ ಹೇಳುತ್ತಿರುವ ಯದು ಮೇಲೆ ಕೋಪಗೊಂಡ ಯಯಾತಿಯು ದುರ್ಬುದ್ಧಿಯೇ ! ಜನ್ಮವಿತ್ತ ತಂದೆಯ ಮಾತನ್ನು ತಿರಸ್ಕರಿಸಿ ಯಾವನೋ ಅತಿಥಿಗೆ ಸತ್ಕಾರ ಮಾಡುವ ನಿನಗೆ ಧರ್ಮವೆಲ್ಲಿದೆ? ಜನ್ಮದಾತನೂ, ವಿದ್ಯಾಗುರುವೂ ಆಗಿರುವ ನನ್ನ ತಿರಸ್ಕರಿಸಿದ ಮೇಲೆ ನಿನ್ನ ಸಂತತಿಗೆ ರಾಜ್ಯಾಧಿಕಾರ ಇಲ್ಲದಂತಾಗಲೀ ಎಂದು ಶಪಿಸಿ, ಉಳಿದ ಮಕ್ಕಳಾದ ದ್ರುಹ್ಯ, ತುರ್ವಸು, ಅನು ಮಕ್ಕಳನ್ನು ಕರೆದು ತಾರುಣ್ಯ ನೀಡಲು ಹೇಳಿದ. ಅವರೂ ಸಹ ಯದುವಿನಂತೆ ತಂದೆಯ ಮಾತನ್ನು ತಿರಸ್ಕರಿಸಿದರು. ರಾಜನು ಅವರಿಗೂ ಶಾಪ ನೀಡಿ ಕೊನೆಯದಾಗಿ ಪೂರುವನ್ನು ಬೇಡಿದನು.

ಶರ್ಮಿಷ್ಠೆಯ ಪುತ್ರನೂ, ಪಿತೃನಿಷ್ಠನೂ ಆದ ಪೂರು ರಾಜನು ತಂದೆ ಹೇಳಿದಂತೆ ತನ್ನ ಯೌವ್ವನ ನೀಡಿ ತಂದೆಯ ವೃದ್ಧಾಪ್ಯ ಸ್ವೀಕರಿಸಿದ.

### ಯದ್ಯೇಕೋऽಪಿ ಜರಾಂ ಪ್ರಾಪ್ನುಯಾತ್

**ಸ ಜರಾಂ ಪ್ರತಿ ಜಗ್ರಾಹ ಪಿತಃ ಪೂರುಃ ಪ್ರತಾಪವಾನ್ ।**
**ಯಯಾತಿರಪಿ ರೂಪೇಣ ಪೂರೋಃ ಪರ್ಯಚರನ್ ಮಹೀಮ್ ॥24 ॥**

**ವಿಶ್ವಾಚ್ಯಾ ಸಹಿತೋ ರೇಮೇ ವನೇ ಚೈತ್ರ ರಥೇ ಪ್ರಭುಃ ।**
**ಯದಾವಿತೃಷ್ಣಃ ಕಾಮಾನಾಂ ಭೋಗೇಷು ಸ ನರಾಧಿಪಃ ॥ 25 ॥**

**ತದಾ ಪೂರೋಃ ಸಕಾಶಾದ್ ಸ್ವಾಂ ಜರಾಂ ಪ್ರತ್ಯಪದ್ಯತ ।**

ಪೂರುವು – ಹಿರಿಯರು ನನ್ನ ಮೇಲೆ ಮಾಡಿದ ಹಿರಿಯ ಅನುಗ್ರಹವಿದು ಎಂದೇ ವೃದ್ಧಾಪ್ಯ ಸ್ವೀಕರಿಸಿದ. ಪೂರುವಿನ ಯೌವ್ವನದಿಂದ ಇರತೊಡಗಿದ ಯಯಾತಿಯು ದೇವಯಾನಿ ಹಾಗೂ ಶಮಿಷ್ಠೆಯರು ವಯಸ್ಸು ಮೀರಿದವರಾಗಿದ್ದು ಅವರಿಂದ ಸುಖಕಾಣದೆ ದೇವಸ್ತ್ರೀಯಾದ 'ವಿಶ್ವಾಚೀ' ಎಂಬ ಅಪ್ಸರೆಯೊಂದಿಗೆ ವಿಹಾರ ಮಾಡಿದ. ನಿಸರ್ಗ ರಮಣೀಯ ಸ್ಥಾನಗಳಲ್ಲಿ ಸ್ವಚ್ಛಂದ ವಿಹಾರ ನಡೆಯಿತು. ಬಹುಕಾಲ ಪರ್ಯಂತ ಸ್ವರ್ಗದ ರಮಣೀಯರಿಂದಲೂ ವಿಹಾರ ಮಾಡಿದರೂ ಮನಸ್ಸು ಸಾಕು ಎನ್ನಲಿಲ್ಲ. ಭೋಗಾಭಿಲಾಶೆ ಬಲಿಯುತ್ತಲೇ ಇತ್ತು. ಕಡೆಗೆ ಈ ಭೋಗಗಳಿಗೆ ಬೆನ್ನು ಹಾಕುವುದೇ ಸರಿಯಾದ ಕೆಲಸವೆಂದು ತಿಳಿದು- ವಿಷಯ ಭೋಗಕ್ಕೆ ಅಲಂಬುದ್ಧಿ ಇಲ್ಲ ಎಂಬ ಸತ್ಯವನ್ನು ಜಗತ್ತಿಗೆ ನೀಡಿದ.

### ಅಗ್ನಿಯನ್ನು ತುಪ್ಪ ಸುರಿದು ಆರಿಸಬಲ್ಲದೆ?

**ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ 26 ॥**

**ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ ಸರ್ವಮಿತಿ ಪಶ್ಯನ್ ನ ಮುಹ್ಯತಿ ॥ 27 ॥**

ಯಯಾತಿಯ ಅನುಭವದ ಉದ್ಗಾರ ಮಹಾಶನೋ ಮಹಾಪಾಪ್ಮಾ

ತುಪ್ಪ-ಚರು ಸಮಿತ್ತುಗಳನ್ನು ಅಗ್ನಿಗೆ ಹಾಕುತ್ತಿದ್ದರೆ ಅದಕ್ಕೆ ತೃಪ್ತಿಯಾಗದೆ ಮತ್ತೆ ಮತ್ತೆ ಅಪೇಕ್ಷಿಸುತ್ತದೆ. ತುಪ್ಪವನ್ನು ಸುರಿದು ಯಜ್ಞೇಶ್ವರನನ್ನು

ತೃಪ್ತಿಪಡಿಸಲು ಸಾಧ್ಯವಿಲ್ಲ. ಹಾಗೆಯ ಕಾಮೋಪಭೋಗಗಳಿಂದ ಅವುಗಳನ್ನು ಸೇವಿಸುತ್ತಲೇ ಇರಬೇಕೆಂಬ ಅಭಿಲಾಷೆ ಹೆಚ್ಚು ತರುತ್ತದೆ. ಹೊರತು ಅದನ್ನು ತಲ್ಲಣಿಸಲು ಸಾಧ್ಯವಿಲ್ಲ.

ಈ ಭೂಮಂಡಲದಲ್ಲಿರುವ ಅನ್ನ ಹೊನ್ನು ಭೂಮಿ, ಗೋವುಗಳು, ಸ್ತ್ರೀಯರು ಎಲ್ಲವನ್ನೂ ಒಬ್ಬನಿಗೆ ನೀಡಿದರೂ ಸಾಕು ಎನ್ನಲಾರನು. ಈ ತತ್ವವನ್ನು ಮನಗಂಡಾಗ ವಿದ್ವಾಂಸರು ಕಾಮಪಭೋಗಗಳಿಗಾಗಿ ಮೋಹಿತನಾಗಲಾರ.

ಯಾವ ಜೀವಿಗೂ ತ್ರಿಕರಣಗಳಿಂದ ದ್ರೋಹ ಬಗೆಯದೆ ಎಲ್ಲವನ್ನೂ ಸಮದೃಷ್ಟಿಯಿಂದ ನೋಡಿ ಕೇಡನ್ನು ಬಯಸುವುದಿಲ್ಲವೋ ಆಗ ಪರಬ್ರಹ್ಮನನ್ನು ಹೊಂದುವನು. ಅವನಿಗೆ ಸರ್ವದಿಕ್ಕುಗಳು ಸುಖದಾಯಕ-ವಾಗಿರುತ್ತದೆ.

## ಮಹಾಶನೋ–ಮಹಾಪಾಪ್ಮಾ

**ಯಾ ದುಸ್ತ್ಯಜಾ ದುರ್ಮತಿಭಿಃ ಯಾ ನ ಜೀರ್ಯತಿ ಜೀರ್ಯತಃ ।**
**ಯೋಽಸೌ ಪ್ರಾಣಾಂತಿಕೋ ರೋಗಃ ತಾಂ ತೃಷ್ಣಾಂ ತ್ಯಜತಃ ಸುಖಮ್॥28॥**

**ಜೀರ್ಯಂತಿ ಜೀರ್ಯತಃ ಕೇಶಾಃ ದಂತಾಃ ಜೀರ್ಯಂತಿ ಜೀರ್ಯತಃ ।**
**ಧನಾಶಾ ಜೀವಿತಾಶಾ ಚ ಜೀರ್ಯನ್ನಪಿ ನ ಜೀರ್ಯತಃ ॥ 29 ॥**

**ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಮ್ ।**
**ತೃಷ್ಣಾಕ್ಷಯ ಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥ 30 ॥**

ಮತಿಗೆಟ್ಟವರಿಂದ ಯಾವುದನ್ನು ಬಿಡಲಿಕ್ಕಾಗುವುದಿಲ್ಲವೋ ಮನುಷ್ಯನೂ ಮುದುಕನಾಗಿ ಜೀರ್ಣನಾದರೂ ಅವನಲ್ಲಿರುವ ಯಾವುದು ಜೀರ್ಣವಾಗುವುದಿಲ್ಲವೋ ಯಾವುದು ಪ್ರಾಣಾಂತಿಕ ರೋಗಕ್ಕೆ ಸಮಾನವಾದದ್ದೊ ಅಂತಹ ಕಾಮೋಪಭೋಗಾಭಿಲಾಷೆಯನ್ನು ತ್ಯಜಿಸಿದಾಗ ಮಾತ್ರ ಪರಮ ಸುಖಿಯಾಗುವನು.

ಮಾನವನು ವೃದ್ಧನಾದಂತೆ ಕೂದಲು ಬೆಳ್ಳಗಾಗಿ ಉದುರಿ ಹೋಗುತ್ತದೆ. ವೃದ್ಧಾಪ್ಯದಲ್ಲಿ ಗಟ್ಟಿಯಾಗಿದ್ದ ದಂತಗಳು ಆಯತಪ್ಪಿ ಬಿದ್ದು ಹೋಗುತ್ತವೆ. ಆದರೆ ಮನುಷ್ಯನಿಗೆ ಎಷ್ಟು ಮುದುಕನಾದರೂ ಧನದ ಮೇಲೆ ಆಸೆ. ಜೀವಿಸಬೇಕೆಂಬ ಆಸೆ ಮಾತ್ರ ನಿತ್ಯ ಯೌವ್ವನ ಪಡೆದಿರುತ್ತದೆ. ಅವನನ್ನು

ಬಿಟ್ಟು ಹೋಗುವುದಿಲ್ಲ. ಇವಕ್ಕೆಲ್ಲ ಉಪಾಯವೊಂದೆ, ಆಸೆಯನ್ನು ತೊರೆದು ಶ್ರೀಹರಿಯಲ್ಲಿ ಮನಸ್ಸನ್ನು ತೊಡಗಿಸುವುದು.

ಕಾಮಜನಿತ ಸುಖವಾಗಲೀ, ಸ್ವರ್ಗೀಯ ಸುಖವಾಗಲೀ ಅಥವಾ ಇನ್ನಾವುದೇ ದಿವ್ಯವಾದ ಮಹಾಸುಖವಿರುವುದೋ ಆ ಎಲ್ಲಾ ಸುಖಗಳ ಮೊತ್ತವು-ಆಸೆಯನ್ನು ಬಿಟ್ಟು ಹರಿಯಲ್ಲಿ ನೆಟ್ಟ ನಿಶ್ಚಿಂತ ಮನಸ್ಸಿನ ನೆಮ್ಮದಿಯ ಹದಿನಾರನೇ ಒಂದು ಭಾಗಕ್ಕೆ ಸರಿಸಾಟಿಯೆನಿಸಲಾರವು.

## ಭೃಗು ತುಂಗದಲ್ಲಿ ಉಗ್ರ ತಪಸ್ಸು ಸ್ವರ್ಗಪ್ರಾಪ್ತಿ

**ಏವಮುಕ್ತ್ವಾ ಸ ರಾಜರ್ಷಿಃ ಸದಾರಃ ಪ್ರಾವಿಶದ್ ವನಮ್ ।**
**ಕಾಲೇನ ಮಹತಾ ವಾಪಿ ಚಚಾರ ವಿಪುಲಂ ತಪಃ ॥ 31 ॥**

**ಭೃಗುತುಂಗೇ ತಪಸ್ತಪ್ತ್ವಾ ತಪಸೋಽಂತೇ ಮಹಾತಪಾಃ ।**
**ಅನಶ್ನನ್ ದೇಹ ಮುತ್ಸೃಜ್ಯ ಸದಾರಃ ಸ್ವರ್ಗಮಾಪ್ತವಾನ್ ॥ 32 ॥**

ಜನಮೇಜಯನೇ ! ವಿಷಯಾಸಕ್ತನಾಗಿ ರಾಗಭೋಗಗಳನ್ನು ಅನುಭವಿಸುತ್ತಿರುವ ನನಗೆ ಸಾವಿರ ವರ್ಷಗಳು ಸಂದವು. ಇಷ್ಟಾದರೂ ಭೋಗದಲ್ಲ ಅನಾಸಕ್ತಿ ಮೂಡದೆ ದಿನೇ ದಿನೇ ಅಧಿಕವಾಗುತ್ತದೆ. ಆದ್ದರಿಂದ ಈ ಭೋಗಾಸೆಯನ್ನು ತ್ಯಜಿಸಿ ಮಮತೆ ತೊರೆದು ದ್ವಂದ್ವಾತೀತನಾಗಿ ದೇವರಲ್ಲಿ ಮನಸ್ಸನ್ನಿಟ್ಟು ಧ್ಯಾನ ಮಾಡುವೆ ಎಂದು ಉದ್ಗಾರ ತೆಗೆದು ಪತ್ನಿಯರೊಂದಿಗೆ ತಪಸ್ಸಿಗಾಗಿ ಅರಣ್ಯಕ್ಕೆ ಹೊರಟನು. ಅಲ್ಲಿ ಭೃಗುತುಂಗವೆಂಬ ಶೈಲಶೃಂಗದಲ್ಲಿ ಘೋರ ತಪಸ್ಸನ್ನಾಚರಿಸಿದನು. ಅನ್ನಾಹಾರಗಳನ್ನು ತೊರೆದು ಭೌತಿಕ ಶರೀರ ತ್ಯಾಗ ಮಾಡಿದನು. ಪತ್ನಿಯರ ಸಹಿತನಾಗಿಯೇ ಸ್ವರ್ಗವನ್ನೇರಿದನು.

## ಯಯಾತಿ ವಂಶಾವಳೀ

ತಸ್ಯ ವಂಶೇ ಮಹಾರಾಜ ಪಂಚ ರಾಜರ್ಷಿಸತ್ತಮಾಃ ।
ಯೈಃ ವ್ಯಾಪ್ತಾ ಪೃಥಿವೀ ಸರ್ವಾ ಸೂರ್ಯಸ್ಯೇವ ಗಭಸ್ತಿಭಿಃ ॥ 33 ॥

ಯದೋಸ್ತು ಶೃಣು ರಾಜರ್ಷೇಃ ವಂಶಂ ರಾಜರ್ಷಿ ಸತ್ಕೃತಮ್ ।
ಯತ್ರ ನಾರಾಯಣೋ ಜಜ್ಞೇ ಹರಿಃ ವೃಷ್ಣಿ ಕುಲೋದ್ಭವಃ ॥ 34 ॥

## ಯದುವಂಶದಲ್ಲಿ ಶ್ರೀಕೃಷ್ಣ ಜನ್ಮ

ಜನಮೇಜಯನೇ ! ಕೇಳು, ಆ ಯಯಾತಿಗೆ ಐದು ಮಂದಿ ಮಕ್ಕಳಿದ್ದರು. ಆ ಮಕ್ಕಳ ವಂಶಜರಿಂದ ಸೂರ್ಯಕಿರಣಗಳಿಂದ ಅಖಂಡ ಬ್ರಹ್ಮಾಂಡವೇ ವ್ಯಾಪಿಸಲ್ಪಡುವಂತೆ ಇಡೀ ಭೂಮಂಡಲವೆಲ್ಲವೂ ವ್ಯಾಪಿಸಲ್ಪಟ್ಟಿತು.

ಇವರಲ್ಲಿಯೂ ರಾಜರ್ಷಿಯಾದ ಯದುವಿನ ವಂಶವೂ ಇಂದಿಗೂ ಸಮಸ್ತ ರಾಜರ್ಷಿಗಳಿಂದಲೂ ಸನ್ಮಾನಿತವಾಗಿದೆ. ಈ ಪರಮಪವಿತ್ರವಾದ ಯದುವಂಶದಲ್ಲಿಯೇ ಶ್ರೀಮನ್ನಾರಾಯಣನು ವೃಷ್ಣಿವಂಶ ಪ್ರದೀಪನಾಗಿ ಶ್ರೀಕೃಷ್ಣನಾಗಿ ಅವತರಿಸಿರುವನು. ಈ ಪವಿತ್ರ ಯದುವಂಶವನ್ನು ಬಿತ್ತರಿಸುವೆ. ಕೇಳು ಎಂದರು.

### ಅಧ್ಯಾಯ ಫಲಸ್ತುತಿ

**ಧನ್ಯಃ ಪ್ರಜಾವಾನ್ ಆಯುಷ್ಮಾನ್ ಕೀರ್ತಿಮಾಂಶ್ಚ ಭವೇನ್ನರಃ ।**
**ಯಯಾತೇಃ ಚರಿತಂ ಪುಣ್ಯಂ ಪಠನ್ ಶೃಣ್ವನ್ ನರಾಧಿಪ ॥ 35 ॥**

ಈ ಯಯಾತಿಯ ಚರಿತ್ರೆ-ಅವನ ವೈರಾಗ್ಯ ಉದಾರ-ತಪಸ್ಸು - ಮಗ ಪೂರುವಿನ ಪಿತೃಭಕ್ತಿ- ವೃದ್ಧಾಪ್ಯ ಸ್ವೀಕಾರಾದಿಗಳು - ಪವಿತ್ರ ಯದುಕುಲ ಇವುಗಳನ್ನು ಶ್ರವಣ ಮಾತ್ರದಿಂದ ಕೀರ್ತಿ ಕಲ್ಯಾಣಗಳನ್ನು ನೀಡುತ್ತದೆ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಯಯಾತಿ ಚರಿತಂ-ಪೂರು ಪಿತೃಭಕ್ತಿ ವರ್ಣನೆವೆಂಬಲ್ಲಿ
ಮುವತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ  ಹರಿಪರ್ವ

## ಅಥ ಏಕತ್ರಿಂಶೋಽಧ್ಯಾಯಃ

### ಪೂರುವಂಶ ಚರಿತಮ್

*ಜನಮೇಜಯ ಉವಾಚ–*

ಪೂರೋರ್ವಂಶಮಹಂ ಬ್ರಹ್ಮನ್ ಶ್ರೋತು ಮಿಚ್ಛಾಮಿ ತತ್ತ್ವತಃ ।
ದ್ರುಹ್ಯೋಶ್ಚಾನೋಃ ಯದೋಶ್ಚೈವ ತುರ್ವಸೋಶ್ಚ ಪೃಥಕ್ ಪೃಥಕ್ ॥ 1 ॥
ವಿಸ್ತರೇಣಾನುಪೂರ್ವ್ಯಾ ಚ ತದ್ ಭವಾನ್ ವಕ್ತುಮರ್ಹತಿ ॥ 2 ॥

*ವೈಶಂಪಾಯನ ಉವಾಚ –*

ಹಂತ ತೇ ಕೀರ್ತಿಯಿಷ್ಯಾಮಿ ಪೂರೋರ್ವಂಶ ಮನುತ್ತಮಮ್ ।
ಪೂರೋಃ ಪುತ್ರೋ ಮಹಾವೀರ್ಯೋ ರಾಜಾಽಽಸೀದ್ ಜನಮೇಜಯಃ॥3॥
ಪ್ರಚಿನ್ವಾಸ್ತು ಸುತಸ್ತಸ್ಯ ಯಃ ಪ್ರಾಚೀಮಜಯದ್ ದಿಶಮ್ ॥ 4 ॥

ಜನಮೇಜಯನು ವೈಶಂಪಾಯನರನ್ನು ಕುರಿತು – ಗುರುಗಳೇ! ಪುರುವಂಶವನ್ನು ಯಥಾರ್ಥವಾಗಿ ತಿಳಯಲಿಚ್ಛಿಸುವೆ. ಹಾಗೆಯೇ ದ್ರುಹ್ಯ, ಅನು, ಯದು, ತುರ್ವಸು ರಾಜರ ಬಗ್ಗೆಯೂ ನನಗೆ ತಿಳಸಿ ಕೊಡಿರಿ. ಮೊದಲು ನನ್ನ ವಂಶವಾದ ಪೂರು ವಂಶವನ್ನೆ ವಿಸ್ತರಿಸಿರಿ ಎಂದನು.

ವೈಶಂಪಾಯನರು ಜನಮೇಜಯನೇ ! ಪರಾಕ್ರಮಿಗಳಾದ ನೀನು ಜನ್ಮವೇತ್ತಿರುವ ಪೂರುವಂಶದವರ ಚರಿತ್ರೆಯನ್ನು ವಿಸ್ತಾರವಾಗಿ ಹೇಳುವೆ.

ಪೂರುವಿಗೆ ಮಹಾವೀರ್ಯನಾದ ಜನಮೇಜಯನು ಹುಟ್ಟಿದನು. ಅವನಿಗೆ ಪ್ರಚಿನ್ವಾನ್ ಎಂಬುವನು ಪೂರ್ವ ದಿಕ್ಕಿನ ರಾಜರೆಲ್ಲರನ್ನೂ ಗೆದ್ದ ಮಹಾವೀರ.

ಇವನಿಗೆ ಪ್ರವೀರನು. – ಇವನಿಗೆ ಮನುಸ್ಯುವು. – ಅವನಿಗೆ ಅಭಯದನು. – ಅಭಯದನಿಗೆ ಸುಧನ್ವನು – ಇವನಿಗೆ ಬಹುಗವನು. ಬಹುಗವನಿಗೆ ಶಮ್ಯಾತಿಯು. ಶಮ್ಯಾತಿಗೆ – ರಹಸ್ಯಾತಿಯು. ಇವನಿಗೆ ರೌದ್ರಶ್ವನು ಮಕ್ಕಳಾದನು. ರೌದ್ರಾಶ್ವನಿಗೆ ಘೃತಾಚೀಯೆಂಬ ಅಪ್ಸರೆಯಲ್ಲಿ ಹತ್ತು ಮಂದಿ ಗಂಡು ಮಕ್ಕಳು ಹಾಗು ಹತ್ತು ಮಂದಿ ಹೆಣ್ಣು ಮಕ್ಕಳು ಆದರು.

ಋಚೇಯು – ಕೃಕಣೇಯು – ಕಕ್ಷೇಯು – ಸ್ಥಂಡಿಲೇಯು – ಸನ್ನತೇಯು – ದಶಾರ್ಣೇಯು – ಜಲೇಯು – ಸ್ಥಲೇಯು – ಧನೇಯು – ವನೇಯುವ ಹೀಗೆ ಹತ್ತು ಮಂದಿ. ಇನ್ನು ಹೆಣ್ಣು ಮಕ್ಕಳ ನಾಮ ಹೀಗಿವೆ – ರುದ್ರಾ – ಶೂದ್ರಾ – ಭದ್ರಾ – ಮಲದಾ – ಮಲಹಾ – ಖಲದಾ – ನಲದಾ – ಸುರಸಾ – ಗೋಪಚಲಾ – ಸ್ತ್ರೀರತ್ನ ಕೂಟಾ

## ರೌದ್ರಾಶ್ವ ವಂಶ

**ಋಷಿರ್ಜಾತೋಽತ್ರಿವಂಶೇ ತು ತಾಸಾಂ ಭರ್ತಾ ಪ್ರಭಾಕರಃ ।**
**ರುದ್ರಾಯಾಂ ಜನಯಾಮಾಸ ಸುತಂ ಸೋಮಂ ಯಶಸ್ವಿನಮ್ ॥ 5 ॥**

**ಸ್ವರ್ಭಾನುನಾ ಹತೇ ಸೂರ್ಯೇ ಪತಮಾನೇ ದಿವೋ ಮಹೀಮ್ ।**
**ತಮೋಽಭಿಭೂತೇ ಲೋಕೇ ಚ ಪ್ರಭಾ ಯೇನ ಪ್ರವರ್ತಿತಾ ॥ 6 ॥**

ಅತ್ರಿವಂಶದ ಪ್ರಭಾಕರನೆಂಬ ಋಷಿಯು ರೌದ್ರಾಶ್ವನ ಮಗಳಾದ ಭದ್ರಾದೇವಿಯನ್ನು ಪ್ರಾಣಿಗ್ರಹಣ ಮಾಡಿ. ಅವಳಲ್ಲಿ ಸೋಮನೆಂಬ ಪುತ್ರನನ್ನು ಪಡೆದನು. ಅತ್ರಿ ವಂಶದಲ್ಲಿ ಪ್ರಭಾಕರ ಋಷಿ ಮಹಾಪ್ರಭಾವೀ ಋಷಿಯಾಗಿದ್ದನು. ಹಿಂದೊಮ್ಮೆ ರಾಹುವಿನಿಂದ ಹತನಾಗಿ ಸೂರ್ಯನು ಗಗನದಿಂದ ಭೂಮಿಗೆ ಉರುಳುತ್ತಿದ್ದ. ಲೋಕದ ತುಂಬ ಕತ್ತಲೆ ತುಂಬಿತು. ಎಲ್ಲೆಡೆ ಅಂಧಂತಮಸ್ಸುನಿಂದ ಅಲ್ಲಾಡದೆ ತತ್ತರಿಸಿತ್ತು. ಆಗ ಪ್ರಭಾಕರನು ತನ್ನ ತಪೋಮಹಿಮೆಯಿಂದ ಸರ್ವತ್ರ ಬೆಳಕನ್ನುಂಟು ಮಾಡಿ. ತಾಮಸ ಪ್ರಪಂಚದಿಂದ ಲೋಕವನ್ನು ಪಾರು ಮಾಡಿದ ಪ್ರಭಾವಂತ ಈ ಪ್ರಭಾಕರ.

## ಪ್ರಭಾಕರನಿಂದ ಪ್ರಭಾಕರನಿಗೆ ಸ್ವಸ್ತಿ

**ಸ್ವಸ್ತಿ ತೇಽಸ್ತ್ವಿತಿ ಚೋಕ್ತೋ ವೈ ಪತಮಾನೋ ದಿವಾಕರಃ ।**
**ವಚನಾತ್ ತಸ್ಯ ವಿಪ್ರರ್ಷೇಃ ನ ಪಪಾತ ದಿವೋ ಮಹೀಮ್ ॥ 7 ॥**

**ಅತ್ರಿ ಶ್ರೇಷ್ಠಾನಿ ಗೋತ್ರಾಣಿ ಯಶ್ಚಕಾರ ಮಹಾತಪಾಃ ।**
**ಯಜ್ಞೇಷ್ವತ್ರೇರ್ಧನಂ ಚೈವ ಸುರೈರ್ಯಸ್ಯ ಪ್ರವರ್ತಿತಮ್ ॥ 8 ॥**

ಸೂರ್ಯನು ರಾಹುವಿನ ಪ್ರಹಾರದಿಂದ ಗಗನದಿಂದ ಭೂಮಿಗೆ ಅಪ್ಪಳಿಸುವುದರಲ್ಲಿದ್ದ. ಅದನ್ನು ತಡೆದು ನಿಲ್ಲಿಸಿ, ನಿನಗೆ ಸ್ವಸ್ತಿಯಾಗಲಿ ಎಂದು ಹೇಳುತ್ತಾ ಪತನೋನ್ಮುಖನಾದ ರವಿಯನ್ನು ಸ್ವಸ್ಥಾನದಲ್ಲಿ ಪುನಃ ಪ್ರತಿಷ್ಠಾಪಿಸಿದ.

ಈ ಪ್ರಭಾಕರನು ರೌದ್ರಾಶ್ವನ ಭದ್ರಾ ಎಂಬುವಳನ್ನಲ್ಲದೆ ಉಳಿದ ನವಮಣಿಗಳಂತಿರುವ ನವ ಕನ್ಯಾಮಣಿಗಳನ್ನು ವಿವಾಹವಾದನು. ಇವರಲ್ಲಿ ಹತ್ತು ಮಂದಿ ಪುತ್ರರಾದರು. ಇವರೂ ಸಹ ತಂದೆಯಂತೆ ಪ್ರಭಾಕರ ಕಾಂತಿವುಳ್ಳವರೂ, ವೇದವೇದಾಂತ ಪಾರಂಗತರಾದರು.

ಪ್ರಭಾಕರನಿಂದಾಗಿ ಅವನ ವಂಶವಾದ ಅತ್ರಿವಂಶಕ್ಕೆ ಯಜ್ಞ-ಯಾಗಾದಿಗಳಲ್ಲಿ ದೇವತೆಗಳೂ ಸಹ ವಿಶೇಷ ಗೌರವ ಮರ್ಯಾದೆ ಮಾಡುತ್ತಿದ್ದರು.

## ಸ್ವಸ್ತ್ಯಾತ್ರೇಯರು

**ತೇ ತು ಗೋತ್ರಕರಾ ರಾಜನ್ ಋಷಯೋ ವೇದಪಾರಗಾಃ ।**
**ಸ್ವಸ್ತ್ಯಾತ್ರೇಯಾಃ ಇತಿ ಖ್ಯಾತಾಃ ಕಿಂ ತು ಅತ್ರಿಧನ ವರ್ಜಿತಾಃ ॥ 9 ॥**

ರೌದ್ರಾಶ್ವನ ಪುತ್ರಿಕಾ ಪುತ್ರರೆಲ್ಲರೂ ಗೋತ್ರ ಪ್ರವರ್ತಕ ಋಷಿಗಳಾಗಿದ್ದರು. ಆಕಾಶದಿಂದ ಬೀಳುತ್ತಿದ್ದ ಸೂರ್ಯನಿಗೆ 'ಸ್ವಸ್ತಿ' ಹೇಳಿ ಸ್ವಸ್ತಿವಾಚನ ಮಾಡಿ ಭೂಮಿಪಾತವನ್ನು ನಿಲ್ಲಿಸಿದ್ದರಿಂದ ಪ್ರಭಾಕರನು 'ಸ್ವಸ್ತ್ಯಸ್ತು' ಎಂದಿದ್ದನು. ಇವನ ಮಕ್ಕಳೆಲ್ಲರೂ 'ಸ್ವಸ್ತ್ಯಾತ್ರೇಯರು' ಎಂದು ಪ್ರಖ್ಯಾತರಾದರು. ಆದರೆ ಇವರೆಲ್ಲರೂ ಅಯಾಚಿತ ವೃತ್ತಿಯವರು.

ಅಪರಿಗ್ರಹ ಇವರ ಮುಖ್ಯಧರ್ಮವಾಗಿತ್ತು. ಇದರಿಂದಾಗಿ ಅತ್ರಿ ಋಷಿ ಪ್ರಭಾಕರನ ಸಂಪತ್ತನ್ನು ಹೊಂದಲಿಲ್ಲ. ಜ್ಞಾನ ವೈರಾಗ್ಯಗಳೆಂಬ ಸಿರಿವಂತಿಕೆ ವಂಶಪೂರ್ತಿ ತುಂಬಿತ್ತು. ವೇದವೇದಾಂತ ಧೀಮಂತಿಕೆಗಳು ಕುಗ್ಗಿರಲಿಲ್ಲ.

## ಕಕ್ಷೇಯ ವಂಶ

**ಕಕ್ಷೇಯೋಃ ತನಯಾಶ್ಚಾಸನ್ ತ್ರಯ ಏವ ಮಹಾರಥಾಃ ।**
**ಸಭಾನರಃ ಚಾಕ್ಷುಷಶ್ಚ ಪರಮನ್ಯುಃ ತಥೈವ ಚ ॥ 10 ॥**

ರೌದ್ರಾಶ್ವನ ತೃತೀಯ ಪುತ್ರ ಕಕ್ಷೇಯು ರಾಜನಿಗೆ ಸಭಾನರ – ಚಾಕ್ಷುಷ –

ಪರಮನ್ಯು ಎಂಬ ಮೂವರು ಪುತ್ರರಾದರು. ಇವರೆಲ್ಲ ಮಹಾರಥರೇ. ಸಭಾನರನಿಗೆ ಕಾಲಾನಲ. ಕಾಲಾನಲನಿಂದ ಸೃಂಜಯ ಜನಿಸಿದ. ಸೃಂಜಯನು ಧರ್ಮಜ್ಞನೂ, ಧರ್ಮಶಾಸ್ತ್ರ ಮರ್ಮಜ್ಞನೂ ಆಗಿದ್ದನು. ಸೃಂಜಯನಿಗೆ ಪುರಂಜಯನೆಂಬ ಇತಿಹಾಸ ಪ್ರಸಿದ್ಧ ರಾಜನು ಮಗನಾದನು. ಈ ಪುರಂಜಯನ ಚಿರಂಜೀವನೇ ಜನಮೇಜಯನು. ಜನಮೇಜಯನ ಮಗನೇ ಮಹಾಶಾಲನು. ಮಹಾಶಾಲನ ಕೀರ್ತಿ ದೇವತೆಗಳಲ್ಲಿಯೂ ಭೂಮಂಡಲದಲ್ಲಿಯೂ ಪ್ರಸಿದ್ಧವಾಗಿತ್ತು.

ಮಹಾಶಾಲನ ಮಗನೇ ಮಹಾಮನಸನೆಂಬ ಪರಮಧಾರ್ಮಿಕನು ಸುರಗಣ ಪೂಜಿತನೂ ಆಗಿದ್ದನು.

**ಮಹಾಮನಾಸ್ತು ಪುತ್ರೌ ದ್ವೌ ಜನಯಾಮಾಸ ಭಾರತ ।**
**ಉಶೀನರಂ ಚ ಧರ್ಮಜ್ಞಂ ತಿತಿಕ್ಷುಂ ಚ ಮಹಾಬಲಮ್ ॥ 11 ॥**

ಮಹಾಮನಸ್ ರಾಜನಿಗೆ ಉಶೀನರ, ತಿತಿಕ್ಷು ಎಂಬ ಇಬ್ಬರು ಮಕ್ಕಳಾದರು. ತಿತಿಕ್ಷುವನ್ನು ದಿತಿಕ್ಷು ಎಂದೂ ಕರೆಯಲಾಗುತ್ತಿತ್ತು. ದಿತಿಕ್ಷುವು ಬಲಿಷ್ಠನಾದರೆ, ಉಶೀನರ ಧರ್ಮಿಷ್ಠನು.

### ಪಂಚಕನ್ಯೆಯ ಕೈಹಿಡಿದ ಉಶೀನರ

ಈ ಉಶೀನರ ರಾಜನು ನೃಗಾದೇವಿ – ಕ್ರಿಮಿದೇವೀ – ನವಾದೇವೀ – ದುರ್ವಾದೇವೀ – ದೃಷದ್ವತೀ ದೇವೀ ಎಂಬ ಐವರು ಪತ್ನಿಯನ್ನಾಗಿ ಹೊಂದಿದನು. ಇವರಿಂದ ಕುಲದೀಪಕರಾದ ಪಂಚಪುತ್ರರು ಜನಿಸಿದರು. ಉಶೀನರ ರಾಜನಿಗೆ ಮೊದಲು ಸಂತಾನವೇ ಆಗಿರಲಿಲ್ಲ. ವೃದ್ಧಾಪ್ಯದಲ್ಲಿ ಕೈಗೊಂಡ ಉಗ್ರ ಸೇವಾವ್ರತಗಳಿಂದಾಗಿ ದೇವತಾಗಣ ಸಂತುಷ್ಟವಾಯಿತು. ಇದರಿಂದಾಗಿ ಪಂಚಪುತ್ರರು ಜನಿಸಿದರು.

### ಪಂಚಪುತ್ರರು

ನೃಗಾದೇವಿಯಲ್ಲಿ ನೃಗರಾಜನೂ, ಕ್ರಿಮೀದೇವಿಯಲ್ಲಿ ಕ್ರಿಮಿರಾಜನೂ, ನವಾದೇವಿಯಲ್ಲಿ ನವಕುಮಾರನೂ, ದೂರ್ವೆಯಲ್ಲಿ ಸುವ್ರತನೂ, ದೃಷದ್ವತೀಯಲ್ಲಿ ಶಿಬಿಚಕ್ರವರ್ತಿಯೂ ಹುಟ್ಟಿದರು.

**ಶಿಬೇಸ್ತು ಪುತ್ರಾಃ ಚತ್ವಾರಃ ವೀರಾಃ ತ್ರೈಲೋಕ್ಯ ವಿಶ್ರುತಾಃ ।**
**ವೃಷದರ್ಭಃ ಸುವೀರಶ್ಚ ಮದ್ರಕಃ ಕೈಕಯಸ್ತಥಾ ॥ 12 ॥**

ಶಿಬಿ ಚಕ್ರವರ್ತಿಗೆ ವೃಷದರ್ಭ - ಸುವೀರ - ಕೇಕಯ - ಮದ್ರಕರೆಂಬ ಸುಪ್ರಸಿದ್ಧ ನಾಲ್ಕು ಮಂದಿ ಮಕ್ಕಳಾದರು. ಅವರು ಆಳುವ ರಾಜ್ಯಗಳಿಗೂ ಅವರದೇ ಹೆಸರುಗಳು. ಕೇಕಯದೇಶ - ಮದ್ರಕ - ಸುವೀರ - ವೃಷದರ್ಭಿ ಎಂದು.

### ತಿತಿಕ್ಷು ವಂಶ - ಬಲಿಯ ಪುನರ್ಜನ್ಮ

ಉಶೀನರರ ಸೋದರನಾದ ತಿತಿಕ್ಷುವಿಗೆ ಉಪದ್ರಥನೂ ಇವನಿಗೆ ಫೇನನೂ, ಫೇನನಿಂದ ಸುತಪಸ್ ಅಥವಾ ಸಂತಪಸ್ ಎಂಬ ರಾಜನೂ, ಸಂತಪಸ್‌ನಿಂದ ಮಹಾಯೋಗಿಯಾದ ಬಲಿರಾಜನು ಜನಿಸಿದನು. ದೈತ್ಯೇಶ್ವರನಾದ ಬಲಿಚಕ್ರವರ್ತಿಯೇ ಮನುಷ್ಯ ರೂಪದಿಂದ ಸುತಪನ ಪುತ್ರನಾಗಿ ಜನಿಸಿದನು. ಈ ಹಿಂದೆ ಬ್ರಹ್ಮದೇವರು ಚಿರಂಜೀವಿಯಾಗಿ ವರ್ಣಾಶ್ರಮ ವ್ಯವಸ್ಥಾಪಕನೂ ಮಹಾಯೋಗಿಯೂ ಆಗುವಿಯೆಂದು ಆಶೀರ್ವದಿಸಿದ್ದರು.

### ಬಲಿ ವಂಶೋದ್ಧಾರಕರು

**ಪುತ್ರಾನ್ ಉತ್ಪಾದಯಾಮಾಸ ಪಂಚ ವಂಶಕರಾನ್ ಭುವಿ ।**
**ಅಂಗಃ ಪ್ರಥಮತೋ ಜಜ್ಞೇ ವಂಗಃ ಸುಹ್ಮಃ ತಥೈವ ಚ ।**
**ಪುಂಡ್ರಃ ಕಲಿಂಗಶ್ಚ ತಥಾ ಬಾಲೇಯಂ ಕ್ಷತ್ರ ಮುಚ್ಯತೇ ॥ 13 ॥**

ಬಲಿಯಿಂದ ಅಂಗ, ವಂಗ, ಕಲಿಂಗ, ಸುಹ್ಮ, ಪುಂಡ್ರ ಎಂಬ ಪಂಚ ವೀರಪುತ್ರರಾದರು. ಈ ರಾಜಕುಮಾರರ ಹೆಸರುಗಳಿಂದಲೇ ಅವರು ಆಳಿದ ನಾಡುಗಳು ಇಂದಿಗೂ ಪ್ರಸಿದ್ಧವಾಗಿವೆ.

### ಬಲಿಗೆ ಬ್ರಹ್ಮ ವರ

**ಬಲೇಸ್ತು ಬ್ರಹ್ಮಣಾ ದತ್ತಾಃ ವರಾಃ ಪ್ರೀತೇನ ಭಾರತ ।**
**ಮಹಾಯೋಗಿತ್ವ ಮಾಯುಶ್ಚ ಕಲ್ಪಸ್ಯ ಪರಿಮಾಣತಃ ॥ 14 ॥**
**ಸಂಗ್ರಾಮೇ ವಾಪ್ಯಜೇಯತ್ವಂ ಧರ್ಮೇ ಚೈವ ಪ್ರಧಾನತಾ ।**
**ತ್ರೈಲೋಕ್ಯ ದರ್ಶನಂ ಚೈವ ಪ್ರಾಧಾನ್ಯಂ ಪ್ರಸವೇ ತಥಾ ॥ 15 ॥**

**ಬಲೇ ಚಾಪ್ರತಿಮತ್ವಂ ವೈ ಧರ್ಮ ತತ್ವಾರ್ಥ ದರ್ಶನಮ್ ।**
**ಚತುರೋ ನಿಯತಾನ್ ವರ್ಣಾಂಸ್ತ್ವಂ ಚ ಸ್ಥಾಪಯಿತಾ ಭುವಿ ॥ 16 ॥**

ಈ ಬಲಿರಾಜನು ಮಾಡಿದ ಧರ್ಮನಿಷ್ಠವಾದ ರಾಜ್ಯಪರಿಪಾಲನೆ ಯಜ್ಞಯಾಗಾದಿ ಧಾರ್ಮಿಕ ಕರ್ಮಗಳಿಂದ ಪ್ರೀತನಾದ ಬ್ರಹ್ಮದೇವನು "ಬಲಿರಾಜನೇ ! ನೀನು ಈ ಕಲ್ಪ ಪೂರ್ತಿ ಚಿರಂಜೀವಿಯಾಗಿರು, ಧರ್ಮಧುರೀಣನೂ, ಯುದ್ಧದಲ್ಲಿ ಅಜೇಯನೂ ಆಗಿರು. ಈ ಮನುಷ್ಯ ದೇಹದಿಂದಲೇ ಮೂರು ಲೋಕದಲ್ಲಿ ತಡೆಯಿಲ್ಲದೆ ಸಂಚರಿಸುತ್ತಿರು. ಸತ್ಸಂತಾನವನ್ನು ಹೊಂದು. ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ವ್ಯವಸ್ಥಾಪಿಸಿ ಕೀರ್ತಿವಂತನಾಗಿ ಬಾಳು ಎಂದು ವರವಿತ್ತರು.

## ನಿಯೋಗ ಪದ್ಧತಿಯಿಂದ ಬಲಿಗೆ ಪುತ್ರರು

**ತಸ್ಯ ತೇ ತನಯಾಃ ಸರ್ವೇ ಕ್ಷೇತ್ರಜಾಃ ಮುನಿಪುಂಗವಾತ್ ।**
**ಸಂಭೂತಾ ದೀರ್ಘತಮಸಃ ಸುದೇಷ್ಣಾಯಾಂ ಮಹೌಜಸಃ ॥ 17 ॥**

**ಬಲಿಸ್ತಾನ್ ಅಭಿಷಿಚ್ಯೇಹ ಪಂಚಪುತ್ರಾನ್ ಅಕಲ್ಮಷಾನ್ ।**
**ಕೃತಾರ್ಥಃ ಸೋಽಪಿ ಯೋಗಾತ್ಮಾ ಯೋಗ ಮಾಶ್ರಿತ್ಯ ಸ ಪ್ರಭುಃ ॥ 18 ॥**

ಬಲಿರಾಜನ ಮಕ್ಕಳೆಲ್ಲರೂ ಕ್ಷೇತ್ರಜರು. ಅಂದರೆ ಬಲಿಯು ಊರ್ಧ್ವರೇತಸ್ಕನಾಗಿದ್ದರಿಂದ ಅವನ ಪತ್ನಿಯಾದ ಸುದೇಷ್ಣೆಯಲ್ಲಿ ದೀರ್ಘ ತಮಸ್ಸೆಂಬ ಮುನಿಶ್ರೇಷ್ಠನಿಂದ ನಿಯೋಗ ಪದ್ಧತಿಯಿಂದ ಹುಟ್ಟಿದವರು.

ಯೋಗಿಯಾದ ಬಲಿಯು ತನ್ನ ರಾಜ್ಯವನ್ನು ಅವರ ಹೆಸರಿನಿಂದಲೇ ವಿಭಾಗಿಸಿ ಅವರಿಗೆ ಅಭಿಷೇಕಿಸಿ ಕೃತಕೃತ್ಯನಾದನೆಂದು ಯೋಗ ಮಾರ್ಗದಲ್ಲಿಯೇ ಇದ್ದು ಮುಂದೆ ಕಾಲವನ್ನು ಪ್ರತೀಕ್ಷಿಸುತ್ತಾ ಭೂಮಂಡಲವನ್ನೆಲ್ಲ ಸಂಚರಿಸುತ್ತಿದ್ದನು. ಮುಂದೆ ಸುತಲಲೋಕಕ್ಕೆ ಹೊರಟು ಹೋದನು.

## ಅಂಗ ವಂಶ ನಿರೂಪಣೆ

**ಅಂಗಪುತ್ರೋ ಮಹಾನಾಸೀತ್ ರಾಜೇಂದ್ರೋ ದಧಿವಾಹನಃ ।**
**ದಧಿವಾಹನ ಪುತ್ರಸ್ತು ರಾಜಾ ದಿವಿರಥೋಽಭವತ್ ॥ 19 ॥**

**ವಿದ್ವಾನ್ ಧರ್ಮರಥೋ ನಾಮ ತಸ್ಯ ಚಿತ್ರರಥಃ ಸುತಃ ।**
**ತೇನ ಚಿತ್ರರಥೇನಾಥ ತದಾ ವಿಷ್ಣು ಪದೇ ಗಿರೌ ।**
**ಯಜತಾ ಸಹ ಶಕ್ರೇಣ ಸೋಮಃ ಪೀತಃ ಮಹಾತ್ಮನಾ ॥ 20 ॥**

ಅಂಗರಾಜನ ಮಗ ದಧಿವಾಹನ, ದಧಿವಾಹನನಿಗೆ ದಿವಿರಥನು ಪುತ್ರನಾದನು. ದಿವಿರಥ ಅಥವಾ ದಿವ್ಯರಥನಿಗೆ ಧರ್ಮರಥನು. ಇವನು ಇಂದ್ರ ತುಲ್ಯ ಪರಾಕ್ರಮಿಯಾಗಿದ್ದನು. ಬೃಹಸ್ಪತಿಯಂತೆ ಮೇಧಾವಿ. ಈ ಧರ್ಮರಥನು ಕಾಲಂಜರ ಪರ್ವತದಲ್ಲಿ ಯಜ್ಞ ಮಾಡಿ ಇಂದ್ರನ ಜೊತೆಗೆ ಸೋಮಪಾನ ಮಾಡಿದವನು.

ಮಹಾತ್ಮನಾದ ಧರ್ಮರಥನಿಗೆ ಪುಣ್ಯಾತ್ಮನಾದ ಚಿತ್ರರಥನೆಂಬ ಪುತ್ರನಿದ್ದ. ಈ ಚಿತ್ರರಥನ ಪುತ್ರನೇ ಲೋಮಪಾದ ರಾಜ. ಲೋಮಪಾದನಿಗೆ ದಶರಥ ರಾಜನು ತನ್ನ ಮಗಳಾದ ಶಾಂತಾದೇವಿಯನ್ನು ದತ್ತು ಮಗಳಾಗಿ ನೀಡಿದ್ದ. ಮುಂದೆ ಲೋಮಪಾದನು ಶಾಂತೆಯನ್ನು ವಿಭಾಂಡಕಮುನಿ ಸೂನುವಾದ ಋಷ್ಯಶೃಂಗನಿಗೆ ಮದುವೆ ಮಾಡಿಕೊಟ್ಟನು.

## ಋಷ್ಯಶೃಂಗನ ಅನುಗ್ರಹ– ಪುತ್ರ ಪ್ರಾಪ್ತಿ

**ಅಥ ಚಿತ್ರರಥಸ್ಯಾಪಿ ಪುತ್ರೋ ದಶರಥೋಽಭವತ್ ।**
**ಲೋಮಪಾದ ಇತಿ ಖ್ಯಾತಃ ಯಸ್ಯ ಶಾಂತಾ ಸುತಾಽಭವತ್ ॥ 21 ॥**
**ತಸ್ಯ ದಾಶರಥಿಃ ವೀರಃ ಚತುರಂಗೋ ಮಹಾಯಶಾಃ ।**
**ಋಷ್ಯಶೃಂಗ ಪ್ರಸಾದೇನ ಜಜ್ಞೇ ಕುಲ ವಿವರ್ಧನಃ ॥ 22 ॥**

ಲೋಮಪಾದನು ದಶರಥನೆಂದೂ ಪ್ರಖ್ಯಾತನಾಗಿದ್ದ. ಇವನಿಗೆ ಋಷ್ಯಶೃಂಗನ ಅನುಗ್ರಹದಿಂದ ಚತುರಂಗನೆಂಬ ವಂಶಾಭಿವೃದ್ಧಿಗೊಳಿಸುವ ಸತ್ಪುತ್ರ ಜನಿಸಿದ. ಚತುರಂಗನ ಪುತ್ರ ಪೃಥುಲಾಕ್ಷ. ಪೃಥುಲಾಕ್ಷನ ಮಗ ಚಂಪರಾಜ. ಚಂಪರಾಜನು ನಿರ್ಮಿಸಿದ ಪಟ್ಟಣವೇ ಚಂಪಾಪುರೀ. ಈ ಚಂಪರಾಜನು ಪೂರ್ಣಭದ್ರ ಮುನಿಯ ಮಂತ್ರಬಲದಿಂದ 'ಹರ್ಯಂಗ' ಎಂಬ ಮಗನನ್ನು ಪಡೆದ. ಋಷ್ಯಶೃಂಗನು ತನ್ನ ಸಾಮರ್ಥ್ಯದಿಂದ ಇಂದ್ರನ ವಾಹನವಾದ ಐರಾವತ ಆನೆಯನ್ನು ಭೂಮಿಗೆ ಇಳಿಸಿ, ಹರ್ಯಂಗನಿಗೆ ವಾಹನವನ್ನಾಗಿ ಮಾಡಿಸಿದ. ಹರ್ಯಂಗನ ಮಗ ಭದ್ರರಥನು. ಇವನಿಗೆ ಬೃಹತ್ಕರ್ಮನು,

**ಬಲೇಃ ಚಾಪ್ರತಿಮತ್ವಂ ವೈ ಧರ್ಮ ತತ್ವಾರ್ಥ ದರ್ಶನಮ್ ।**
**ಚತುರೋ ನಿಯತಾನ್ ವರ್ಣಾಂಸ್ತ್ವಂ ಚ ಸ್ಥಾಪಯಿತಾ ಭುವಿ ॥ 16 ॥**

ಈ ಬಲಿರಾಜನು ಮಾಡಿದ ಧರ್ಮನಿಷ್ಠವಾದ ರಾಜ್ಯಪರಿಪಾಲನೆ ಯಜ್ಞಯಾಗಾದಿ ಧಾರ್ಮಿಕ ಕರ್ಮಗಳಿಂದ ಪ್ರೀತನಾದ ಬ್ರಹ್ಮದೇವನು "ಬಲಿರಾಜನೇ ! ನೀನು ಈ ಕಲ್ಪ ಪೂರ್ತಿ ಚಿರಂಜೀವಿಯಾಗಿರು. ಧರ್ಮಧುರೀಣನೂ. ಯುದ್ಧದಲ್ಲಿ ಅಜೇಯನೂ ಆಗಿರು. ಈ ಮನುಷ್ಯ ದೇಹದಿಂದಲೇ ಮೂರು ಲೋಕದಲ್ಲಿ ತಡೆಯಿಲ್ಲದೆ ಸಂಚರಿಸುತ್ತಿರು. ಸತ್ಸಂತಾನವನ್ನು ಹೊಂದು. ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ವ್ಯವಸ್ಥಾಪಿಸಿ ಕೀರ್ತಿವಂತನಾಗಿ ಬಾಳು ಎಂದು ವರವಿತ್ತರು.

## ನಿಯೋಗ ಪದ್ಧತಿಯಿಂದ ಬಲಿಗೆ ಪುತ್ರರು

**ತಸ್ಯ ತೇ ತನಯಾಃ ಸರ್ವೇ ಕ್ಷೇತ್ರಜಾಃ ಮುನಿಪುಂಗವಾತ್ ।**
**ಸಂಭೂತಾ ದೀರ್ಘತಮಸಃ ಸುದೇಷ್ಣಾಯಾಂ ಮಹೌಜಸಃ ॥ 17 ॥**

**ಬಲಿಸ್ತಾನ್ ಅಭಿಷಿಚ್ಯೇಹ ಪಂಚಪುತ್ರಾನ್ ಅಕಲ್ಮಷಾನ್ ।**
**ಕೃತಾರ್ಥಃ ಸೋಽಪಿ ಯೋಗಾತ್ಮಾ ಯೋಗ ಮಾಶ್ರಿತ್ಯ ಸ ಪ್ರಭುಃ ॥ 18 ॥**

ಬಲಿರಾಜನ ಮಕ್ಕಳೆಲ್ಲರೂ ಕ್ಷೇತ್ರಜರು. ಅಂದರೆ ಬಲಿಯು ಊರ್ಧ್ವರೇತಸ್ಕನಾಗಿದ್ದರಿಂದ ಅವನ ಪತ್ನಿಯಾದ ಸುದೇಷ್ಣೆಯಲ್ಲಿ ದೀರ್ಘ ತಮಸ್ಸೆಂಬ ಮುನಿಶ್ರೇಷ್ಠನಿಂದ ನಿಯೋಗ ಪದ್ಧತಿಯಿಂದ ಹುಟ್ಟಿದವರು.

ಯೋಗಿಯಾದ ಬಲಿಯು ತನ್ನ ರಾಜ್ಯವನ್ನು ಅವರ ಹೆಸರಿನಿಂದಲೇ ವಿಭಾಗಿಸಿ ಅವರಿಗೆ ಅಭಿಷೇಕಿಸಿ ಕೃತಕೃತ್ಯನಾದನೆಂದು ಯೋಗ ಮಾರ್ಗದಲ್ಲಿಯೇ ಇದ್ದು ಮುಂದೆ ಕಾಲವನ್ನು ಪ್ರತೀಕ್ಷಿಸುತ್ತಾ ಭೂಮಂಡಲವನ್ನೆಲ್ಲ ಸಂಚರಿಸುತ್ತಿದ್ದನು. ಮುಂದೆ ಸುತಲಲೋಕಕ್ಕೆ ಹೊರಟು ಹೋದನು.

## ಅಂಗ ವಂಶ ನಿರೂಪಣೆ

**ಅಂಗಪುತ್ರೋ ಮಹಾನಾಸೀತ್ ರಾಜೇಂದ್ರೋ ದಧಿವಾಹನಃ ।**
**ದಧಿವಾಹನ ಪುತ್ರಸ್ತು ರಾಜಾ ದಿವಿರಥೋಽಭವತ್ ॥ 19 ॥**

**ವಿದ್ವಾನ್ ಧರ್ಮರಥೋ ನಾಮ ತಸ್ಯ ಚಿತ್ರರಥಃ ಸುತಃ ।**
**ತೇನ ಚಿತ್ರರಥೇನಾಥ ತದಾ ವಿಷ್ಣು ಪದೇ ಗಿರೌ ।**
**ಯಜತಾ ಸಹ ಶಕ್ರೇಣ ಸೋಮಃ ಪೀತಃ ಮಹಾತ್ಮನಾ ॥ 20 ॥**

ಅಂಗರಾಜನ ಮಗ ದಧಿವಾಹನ. ದಧಿವಾಹನನಿಗೆ ದಿವಿರಥನು ಪುತ್ರನಾದನು. ದಿವಿರಥ ಅಥವಾ ದಿವ್ಯರಥನಿಗೆ ಧರ್ಮರಥನು. ಇವನು ಇಂದ್ರ ತುಲ್ಯ ಪರಾಕ್ರಮಿಯಾಗಿದ್ದನು. ಬೃಹಸ್ಪತಿಯಂತೆ ಮೇಧಾವಿ. ಈ ಧರ್ಮರಥನು ಕಾಲಂಜರ ಪರ್ವತದಲ್ಲಿ ಯಜ್ಞ ಮಾಡಿ ಇಂದ್ರನ ಜೊತೆಗೆ ಸೋಮಪಾನ ಮಾಡಿದವನು.

ಮಹಾತ್ಮನಾದ ಧರ್ಮರಥನಿಗೆ ಪುಣ್ಯಾತ್ಮನಾದ ಚಿತ್ರರಥನೆಂಬ ಪುತ್ರನಿದ್ದ. ಈ ಚಿತ್ರರಥನ ಪುತ್ರನೇ ಲೋಮಪಾದ ರಾಜ. ಲೋಮಪಾದನಿಗೆ ದಶರಥ ರಾಜನು ತನ್ನ ಮಗಳಾದ ಶಾಂತಾದೇವಿಯನ್ನು ದತ್ತು ಮಗಳಾಗಿ ನೀಡಿದ್ದ. ಮುಂದೆ ಲೋಮಪಾದನು ಶಾಂತೆಯನ್ನು ವಿಭಾಂಡಕಮುನಿ ಸೂನುವಾದ ಋಷ್ಯಶೃಂಗನಿಗೆ ಮದುವೆ ಮಾಡಿಕೊಟ್ಟನು.

## ಋಷ್ಯಶೃಂಗನ ಅನುಗ್ರಹ- ಪುತ್ರ ಪ್ರಾಪ್ತಿ

**ಅಥ ಚಿತ್ರರಥಸ್ಯಾಪಿ ಪುತ್ರೋ ದಶರಥೋಽಭವತ್ ।**
**ಲೋಮಪಾದ ಇತಿ ಖ್ಯಾತಃ ಯಸ್ಯ ಶಾಂತಾ ಸುತಾಽಭವತ್ ॥ 21 ॥**
**ತಸ್ಯ ದಾಶರಥಿಃ ವೀರಃ ಚತುರಂಗೋ ಮಹಾಯಶಾಃ ।**
**ಋಷ್ಯಶೃಂಗ ಪ್ರಸಾದೇನ ಜಜ್ಞೇ ಕುಲ ವಿವರ್ಧನಃ ॥ 22 ॥**

ಲೋಮಪಾದನು ದಶರಥನೆಂದೂ ಪ್ರಖ್ಯಾತನಾಗಿದ್ದ. ಇವನಿಗೆ ಋಷ್ಯಶೃಂಗನ ಅನುಗ್ರಹದಿಂದ ಚತುರಂಗನೆಂಬ ವಂಶಾಭಿವೃದ್ಧಿಗೊಳಿಸುವ ಸತ್ಪುತ್ರ ಜನಿಸಿದ. ಚತುರಂಗನ ಪುತ್ರ ಪೃಥುಲಾಕ್ಷ. ಪೃಥುಲಾಕ್ಷನ ಮಗ ಚಂಪರಾಜ. ಚಂಪರಾಜನು ನಿರ್ಮಿಸಿದ ಪಟ್ಟಣವೇ ಚಂಪಾಪುರೀ. ಈ ಚಂಪರಾಜನು ಪೂರ್ಣಭದ್ರ ಮುನಿಯ ಮಂತ್ರಬಲದಿಂದ 'ಹರ್ಯಂಗ' ಎಂಬ ಮಗನನ್ನು ಪಡೆದ. ಋಷ್ಯಶೃಂಗನು ತನ್ನ ಸಾಮರ್ಥ್ಯದಿಂದ ಇಂದ್ರನ ವಾಹನವಾದ ಐರಾವತ ಆನೆಯನ್ನು ಭೂಮಿಗೆ ಇಳಿಸಿ, ಹರ್ಯಂಗನಿಗೆ ವಾಹನವನ್ನಾಗಿ ಮಾಡಿಸಿದ. ಹರ್ಯಂಗನ ಮಗ ಭದ್ರರಥನು. ಇವನಿಗೆ ಬೃಹತ್ಕರ್ಮನು.

ಬೃಹತ್ಕರ್ಮನಿಗೆ ಬೃಹದ್‌ದರ್ಭನೂ. ಇವನಿಗೆ ಬೃಹನ್ಮನನೂ. ಇವನಿಗೆ ಜಯದ್ರಥನೂ. ಜಯದ್ರಥನಿಗೆ ದೃಢರಥನೂ. ಇವನಿಗೆ ವಿಶ್ವಜಿತನೂ. ವಿಶ್ವಜಿತನಿಗೆ ಕರ್ಣನೂ.

## ಅಧಿರಥ - ಕರ್ಣ

**ದಾಯಾದಸ್ತಸ್ಯ ಕರ್ಣಸ್ತು ವಿಕರ್ಣಸ್ತಸ್ಯ ಚಾತ್ಮಜಃ ।**
**ತಸ್ಯ ಪುತ್ರಶತಂ ತ್ವಾಸೀದ್ ಅಂಗಾನಾಂ ಕುಲವರ್ಧನಮ್ ॥ 23 ॥**
**ಬೃಹದ್ದರ್ಭಸುತೋ ಯಸ್ತು ನಾಮ್ನಾ ಬೃಹನ್ಮನಾಃ ॥ 24 ॥**
**ತಸ್ಯ ಪತ್ನೀದ್ವಯಂ ಚಾಸೀತ್ ಚೈದ್ಯಸ್ಯೈತೇ ಸುತೇ ಶುಭೇ ।**
**ಯಶೋದೇವೀ ಚ ಸತ್ಯಾ ಚ ತಾಭ್ಯಾಂ ವಂಶಸ್ತು ಭಿದ್ಯತೇ ॥ 25 ॥**
**ಸತ್ಯಕರ್ಮಸುತಶ್ಚಾಪಿ ಸೂತಸ್ತ್ವಧಿರಥಸ್ತು ವೈ ।**
**ಯಃ ಕರ್ಣಂ ಪ್ರತಿಜಗ್ರಾಹ ತತಃ ಕರ್ಣಸ್ತು ಸೂತಜಃ ॥ 26 ॥**

ಬೃಹದ್ದರ್ಭನ ಮಗ ಬೃಹನ್ಮನನು. ಇವನಿಗೆ ಚೈದ್ಯ ರಾಜ್ಯದ ಇಬ್ಬರು ಶುಭಶೀಲರಾದ ಯಶೋದೇವೀ ಮತ್ತು ಸತ್ಯಾ ಎಂಬುವರನ್ನು ವಿವಾಹ ಮಾಡಿಕೊಡಲಾಗಿತ್ತು. ಯಶೋದೇವಿಗೆ ಜಯದ್ರಥನೂ ಜಯದ್ರಥನಿಂದ ದೃಢರಥ. ವಿಶ್ವಜಿತ್. ಇವನಿಗೆ ಕರ್ಣನೂ. ಕರ್ಣನಿಗೆ ವಿಕರ್ಣನೂ. ವಿಕರ್ಣನಿಗೆ ಕುಲೋದ್ಧಾರಕರಾದ ನೂರು ಮಂದಿ ಮಕ್ಕಳಾದರು. ಎರಡನೆ ಪತ್ನಿಯಾದ ಸತ್ಯೆಗೆ ವಿಜಯನೆಂಬ ಮಗನಾದನು. ಇವನು ಶಮದಮಾದಿಗಳಿಂದ ಬ್ರಾಹ್ಮಣರನ್ನೂ ವೀರ್ಯ ವಿಕ್ರಮಳಿಂದ ಕ್ಷತ್ರಿಯರನ್ನೂ ಮಿರಿಸುವ ಸತ್ಪುತ್ರನಾಗಿದ್ದನು. ಈ ವಿಜಯನಿಂದ ಧೃತಿಯು. ಧೃತಿಯಿಂದ ಧೃತವ್ರತನೂ. ಇವನಿಂದ ಸತ್ಯಕರ್ಮನೂ ಹುಟ್ಟಿದರು. ಸತ್ಯಕರ್ಮನಿಗೆ ಬ್ರಾಹ್ಮಣನ ಸ್ತ್ರೀಯರಲ್ಲಿ ಹುಟ್ಟಿದ್ದರಿಂದ ಸೂತನೆನಿಸಿದ. ಕರ್ಣನ ಸಾಕು ತಂದೆ ಅಧಿರಥನು ಹುಟ್ಟಿದನು. ಇವನೆ ಕುಂತಿಯ ಮಗ. ಕ್ಷತ್ರಿಯನಾದ ಕರ್ಣನನ್ನು ಮಗನಾಗಿ ಸ್ವೀಕರಿಸಿ. ಸೂತ ಸಂಸ್ಕಾರಗಳನ್ನೆ ಮಾಡಿ ಕರ್ಣನನ್ನೂ ಸೂತ ಜಾತಿಗೆ ಸೇರಿಸಿದ. ಈ ಕರ್ಣನಿಂದ ವೃಷಸೇನನು. ವೃಷಸೇನನಿಗೆ ವೃಷನೂ ಹುಟ್ಟಿದನು. ಹೀಗೆ ಸತ್ಯಸಂಧರಾದ ಅಂಗರಾಜನ ವಂಶವು ವಿಸ್ತಾರವಾಗಿ ಬೆಳೆಯಿತು.

## ಋಚೇಯು ವಂಶಾವಳಿ

**ಋಚೇಯೋಸ್ತು ಮಹಾರಾಜ ರೌದ್ರಾಶ್ವತನಯಸ್ಯ ಹ ।**
**ಶ್ರುಣು ವಂಶಮನು ಪ್ರೋಕ್ತಂ ಯತ್ರ ಜಾತೋಽಸಿ ಪಾರ್ಥಿವ ॥ 27 ॥**

ರಾಜನೇ ! ಈಗ ನಾನು ವಿಸ್ತರಿಸಲು ಹೊರಟಿರುವುದು ರೌದ್ರಾಶ್ವನ ಹತ್ತು ಮಕ್ಕಳಲ್ಲಿ ಋಚೇಯುವಿನ ವಂಶಾವಳಿಯನ್ನು, ಅದನ್ನು ಕೇಳು. ಈ ಮಹಾವಂಶದಲ್ಲಿಯೇ ನೀನೂ ಹುಟ್ಟಿದವನಾಗಿದ್ದಿ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಪುರವಂಶ ವಿಸ್ತಾರವೆಂಬಲ್ಲಿ
ಮುವತ್ತೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ದ್ವಾತ್ರಿಂಶೋಽಧ್ಯಾಯಃ

## ಋಚೇಯು ವಂಶ ನಿರೂಪಣೆ

**ಅನಾಧೃಷ್ಯಸ್ತು ರಾಜರ್ಷಿಃ ಋಚೇಯುಃ ಚೈಕರಾಟ್ ಸ್ಮೃತಃ ।**
**ಋಚೇಯೋಃ ಜ್ವಲನಾ ನಾಮ ಭಾರ್ಯಾ ವೈ ತಕ್ಷಕಾತ್ಮಜಾ ॥ 1 ॥**

**ತಸ್ಯಾಂ ಸ ದೇವ್ಯಾಂ ರಾಜರ್ಷಿಃ ಮತಿನಾರೋ ಮಹೀಪತಿಃ ।**
**ತಂಸುರಾದ್ಯಃ ಪ್ರತಿರಥಃ ಸುಬಾಹುಶ್ಚೈವ ಧಾರ್ಮಿಕಃ ॥ 2 ॥**
**ಗೌರೀ ಕನ್ಯಾ ಚ ವಿಖ್ಯಾತಾ ಮಾಂಧಾತೃಜನನೀ ಶುಭಾ ॥ 3 ॥**

ಜನಮೇಜಯನೇ ! ರೌದ್ರಾಶ್ವನ ಜ್ಯೇಷ್ಠಪುತ್ರನಾದ ಋಚೇಯುವು ಏಕಛತ್ರಾಧಿಪತಿಯಾಗಿದ್ದನು. ಶತ್ರುಗಳು ಇವನನ್ನು ಎದುರಿಸಲು ಸಮರ್ಥರಾಗಲಿಲ್ಲ. ಋಚೇಯುವು ತಕ್ಷಕ ನಾಗನ ಪುತ್ರಿಯಾದ 'ಜ್ವಲನಾ' ಎಂಬುವಳನ್ನು ವಿವಾಹವಾಗಿ ಅವಳಿಂದ 'ಮತಿನಾರ'ನೆಂಬ ರಾಜರ್ಷಿಯನ್ನು ಪಡೆದನು. ಮತಿನಾರನಿಗೆ ತಂಸು, ಪ್ರತಿರಥ, ಸುಬಾಹು ಎಂಬ ಮೂವರು ಗಂಡು ಮಕ್ಕಳು ಹಾಗೂ ಗೌರೀ ಎಂಬ ಕನ್ಯೆಯೊಬ್ಬಳು ಜನಿಸಿದಳು. ಈ ಗೌರಿಯನ್ನು ಮುಂದೆ ಯುವನಾಶ್ವ ರಾಜನು ಕೈಹಿಡಿದು ಮಾಂಧಾತ್ ರಾಜನನ್ನು ಪಡೆದನು. ಮತಿನಾರನ ಮೂವರೂ ಪುತ್ರರೂ ವೇದವೇತ್ತರೂ, ಬ್ರಾಹ್ಮಣಪ್ರಿಯರೂ ಸತ್ಯವಾದಿಗಳಾಗಿದ್ದರು.

## ದುಷ್ಯಂತ ಜನನ

**ಪುತ್ರಃ ಪ್ರತಿರಥಸ್ಯಾಸೀತ್ ಕಣ್ವಃ ಸಮಭವನ್ ನೃಪಃ ।**
**ಮೇಧಾತಿಥಿಃ ಸುತಸ್ತಸ್ಯ ಯಸ್ಮಾತ್ ಕಾಣ್ವಾಯನಾ ದ್ವಿಜಾಃ ॥ 4 ॥**

**ಈಲಿನೀ ಭೂಪ ಯಸ್ಯಾಸೀತ್ ಕನ್ಯಾ ವೈ ಜನಮೇಜಯ ।**
**ಬ್ರಹ್ಮವಾದಿನ್ಯಧಿ ಸ್ತ್ರೀಂ ಚ ತಂಸುಃ ತಾಮಭ್ಯಗಚ್ಛತ ॥ 5 ॥**
**ತಂಸೋಃ ಸುರೋಧೋ ರಾಜರ್ಷಿಃ ಧರ್ಮನೇತ್ರೋ ಮಹಾಯಶಾಃ ।**
**ಬ್ರಹ್ಮವಾದೀ ಪರಾಕ್ರಾಂತಃ ತಸ್ಯ ಭಾರ್ಯಾ ಉಪದಾನವೀ ॥ 6 ॥**
**ಉಪದಾನವೀ ಸುತಾನ್ ಲೇಭೇ ಚತುರಃ ತ್ವೈಲಿಕಾತ್ಮಜಾನ್ ।**
**ದುಷ್ಯಂತಮಥ ಸುಷ್ಮಂತಂ ಪ್ರವೀರ ಮನಘಂ ತಥಾ ॥ 7 ॥**

ಪ್ರತಿರಥನಿಂದ ಕಣ್ವನೂ, ಕಣ್ವನಿಂದ ಮೇಧಾತಿಥಿಯೂ, ಈ ಮೇಧಾತಿಥಿಯಿಂದಲೇ ಮುಂದೆ 'ಕಾಣ್ವಾಯನ'ಯೆಂಬ ಬ್ರಾಹ್ಮಣ ಕುಲವು ಪ್ರವೃತ್ತವಾಯಿತು. 'ತಂಸು' ರಾಜನು ಬ್ರಹ್ಮವಾದಿನೀ ಸ್ತ್ರೀಯಾದ ಇಲಾದೇವಿಯಲ್ಲಿ ಧರ್ಮನೇತ್ರ ಹುಟ್ಟಿದನು. ತಾಯಿಯಂತೆ ಬ್ರಹ್ಮವಾದಿ ಆಗಿದ್ದನು. ಅವನ ಪತ್ನಿಯು ಉಪದಾನವೀ ವದಾನವೀಯೆಂದೂ ನಾಮಾಂತರವಿತ್ತು. ಈ ಧರ್ಮನೇತ್ರ-ಉಪದಾನವೀ ದಂಪತಿಗಳಿಂದ ದುಷ್ಯಂತ, ಸುಷ್ವಂತ, ಪ್ರವೀರ, ಅನಘ ಎಂಬ ನಾಲ್ಕು ಮಂದಿ ಮಕ್ಕಳಾದರು.

## ಭರತ-ಸರ್ವದಮನ

**ದುಷ್ಯಂತಸ್ಯಚ ದಾಯಾದಃ ಭರತೋ ನಾಮ ವೀರ್ಯವಾನ್ ।**
**ಸ ಸರ್ವದಮನೋ ನಾಮ ನಾಗಾಯುತಬಲೋ ಮಹಾನ್ ।**
**ಶಕುಂತಲಾಯಾಂ ಭರತೋ ಯಸ್ಯ ನಾಮ್ನಾಸ್ಥ ಭಾರತಾಃ ॥ 8 ॥**

ದುಷ್ಯಂತನ ಮಗನೇ ನಾಗಾಯುತ ಬಲ ಸಂಪನ್ನನಾದ ಭರತ ಚಕ್ರವರ್ತಿಯು. ಸರ್ವಪ್ರಾಣಿಗಳ ಮದವನ್ನೂ ದಮನ ಮಾಡುತ್ತಿದ್ದನೆಂದೆ 'ಸರ್ವದಮನ'ನೆಂದು ಪ್ರಸಿದ್ಧನಾದನು. ದುಷ್ಯಂತನ ತಂದೆಗೆ ರೈಭ್ಯಯೆಂಬ ನಾಮಾಂತರವೂ ಇತ್ತು.

## ದುಷ್ಯಂತ-ಶಕುಂತಲೋಪಾಖ್ಯಾನ

**ದುಷ್ಯಂತಂ ಪ್ರತಿರಾಜಾನಂ ವಾಗುವಾಚಾಶರೀರಿಣೀ ।**
**ಮಾತಾ ಭಸ್ತ್ರಾ ಪಿತುಃ ಪುತ್ರಃ ಯೇನ ಜಾತಃ ಸ ಏವ ಸಃ ॥ 9 ॥**

**ಭರಸ್ವ ಪುತ್ರಂ ದುಷ್ಯಂತ ! ಮಾವಮಂಸ್ಥಾಃ ಶಕುಂತಲಾಮ್ ।**
**ರೇತೋಧಾಃ ಪುತ್ರ ಉನ್ನಯತಿ ನರದೇವ ! ಯಮಕ್ಷಯಾತ್ ॥ 10 ॥**

ದುಷ್ಯಂತನು ಬೇಟೆಗೆ ಹೋಗಿದ್ದು ಕಣ್ವಾಶ್ರಮದಲ್ಲಿ ತ್ರಿಲೋಕರಮಣಿಯಾದ ಶಕುಂತಲೆಯನ್ನು ನೋಡಿ ಮೋಹಗೊಂಡು ನೀನು ಯಾರು? ಯಾರ ಮಗಳು? ನನ್ನ ಮನಸ್ಸು ನಿನ್ನಲ್ಲಿ ಅನುರಕ್ತವಾಗಿದೆಯೆಂದರೆ ನೀನು ರಾಜನ್ಯಕನ್ಯೆಯೆಂದೆ ಭಾವಿಸುವೆ ಶಕುಂತಲೆಯು ವೀರನೆ ನಾನು ವಿಶ್ವಾಮಿತ್ರ-ಮೇನಕೆಯ ಮಗಳು. ಕಣ್ವರು ನನ್ನ ಸಾಕು ತಂದೆ ಎಂದಳು. ರಾಜನು ಅವಳ ಮನದಿಗಿಂತ ತಿಳದು ಗಾಂಧರ್ವ ವಿಧಿಯಿಂದ ವಿವಾಹವಾದನು. ಒಂದು ದಿನ ಅವಳೊಂದಿಗೆ ಇದ್ದು ಅರಮನೆ ಸೇರಿದನು. ಕೆಲವು ದಿನಗಳಲ್ಲಿ ಅಂತರ್ವತ್ನಿಯಾದ ಅವಳು ಭರತನನ್ನು ಹೆತ್ತಳು. ಕಣ್ವರು ಜಾತಕರ್ಮಾದಿ ನಡೆಸಿದರು. ಮಗನೊಂದಿಗೆ ರಾಜನ ಬಳ ಬಂದಳು. ರಾಜನಾದರೂ ದೋಷರಹಿತರಾದ ಪತ್ನೀಪುತ್ರರನ್ನು ಯಾವಾಗ ಸ್ವೀಕರಿಸಲಿಲ್ಲವೋ ಅಶರೀರವಾಣಿಯು ಹೀಗೆ ಹೇಳಿತು.

"ರಾಜನೇ ! ತಾಯಿಯು-ಮಗನು ಹುಟ್ಟುವ ವಿಷಯದಲ್ಲಿ ವೀರ್ಯವನ್ನು ರಕ್ಷಿಸಿಡುವ ಚರ್ಮದ ಚೀಲ ಮಾತ್ರ. ತಾಯಿಯ ಮಗನೆಂಬುವುದು ಔಪಚಾರಿಕ. ತಂದೆಯ ಮಗನೆಂಬುದೇ ಪ್ರಧಾನ. ದೌಷ್ಯಂತಿಯಾದ ಈ ನಿನ್ನ ಮಗನನ್ನು ರಕ್ಷಣೆ ಮಾಡು. ಶಕುಂತಲೆಯನ್ನು ವ್ಯಭಿಚಾರಿಣಿಯೆಂದು ಅವಮಾನಿಸಬೇಡ. ಈ ಮಗನು ರೇತೋಧಾರಕನಾದ ತಂದೆಯನ್ನು ನರಕದಿಂದ ಪಾರು ಮಾಡುವನು. ಅಕ್ಷಯ ಲೋಕಗಳನ್ನು ಹೊಂದಿಸುವವನೂ ಆಗಿರುವನು. ನೀನೇ ಈ ಗರ್ಭಧಾನ ಮಾಡಿದವನು.

ಶಕುಂತಲೆಯು ಸುಳ್ಳು ಹೇಳುತ್ತಿಲ್ಲ" ಎಂದಿತು.

### ಭರತನ ಸಂತಾನ

**ಭರತಸ್ಯ ವಿನಷ್ಟೇಷು ತನಯೇಷು ಮಹೀಪತೇಃ ।**
**ಮಾತೃಣಾಂ ತಾತ ಕೋಪೇನ ಮಯಾ ತೇ ಕಥಿತಂ ಪುರಾ ॥ 11 ॥**
**ಬೃಹಸ್ಪತೇ ರಾಂಗಿರಸಃ ಪುತ್ರೋ ರಾಜನ್ ಮಹಾಮುನಿಃ ।**
**ಸಂಕ್ರಾಮಿತೋ ಭರದ್ವಾಜೋ ಮರುದ್ಭಿಃ ಕ್ರತುಭಿರ್ವಿಭುಃ ॥ 12 ॥**

ಜನಮೇಜಯನೇ, ಭರತನಿಗೆ ವಿದರ್ಭ ದೇಶದ ಸರ್ವಸಮ್ಮತರಾದ ಮೂರು ಮಂದಿ ಪತ್ನಿಯರಿದ್ದರು. ಅವರಿಗೆ ಒಬ್ಬೊಬ್ಬರಿಗೂ ಒಂದೊಂದು ಗಂಡು ಮಗು ಹುಟ್ಟಿದವು. **ಭರತ**ನು ಮಕ್ಕಳನ್ನು ನೋಡಿ ಒಂದು ಮಗುವೂ ನನಗೆ ಅನುರೂಪವಾಗಿಲ್ಲವೆಂದು ಹೇಳಿದನು. ತಾಯಂದಿರಿಗೆ ಈ ಮಗುವಿನಿಂದಾಗಿ ನಮ್ಮನ್ನು ತ್ಯಜಿಸಬಹುದೆಂಬ ಭಯವಾಯಿತು. ಅವರು ತಾವೆ ವಿಷ ಪ್ರಯೋಗಾದಿಗಳಿಂದ ತಮ್ಮ ಮಕ್ಕಳನ್ನು ಕೊಂದು ಹಾಕಿದರು. ('ಸಾಯಲಿ' ಎಂದು ಶಾಪಕೊಟ್ಟರೆಂದು ಬ್ರಹ್ಮಪುರಾಣ ಹೇಳಿದೆ). ಹೀಗೆ ಭರತನ ವಂಶವು ನಷ್ಟವಾಗುತ್ತಿರಲು ಭರತನು 'ಮರುತ್‌ಸ್ತೋಮ'ವೆಂಬ ಯಾಗ ಮಾಡಿದನು. ಮರುತ್ತುಗಳು ಪ್ರಸನ್ನರಾಗಿ ಭರದ್ವಾಜನನ್ನು ಮಗನನ್ನಾಗಿ ನೀಡಿದರು. ಈ ಭರದ್ವಾಜ ಋಷಿಯು ಯಜ್ಞ ಮಾಡಿಸಿ ಭರತನಿಗೆ ಒಬ್ಬ ಪುತ್ರನಾಗುವಂತೆ ಮಾಡಿದನು. ಭರತರಾಜನ ಹಿಂದಿನ ಮಕ್ಕಳೆಲ್ಲ ನಷ್ಟರಾದ (ವಿತಥ) ಮೇಲೆ ಜನಿಸಿದ ಭರತಪುತ್ರನಿಗೆ 'ವಿತಥ' ಎಂದೇ ಹೆಸರನ್ನಿಟ್ಟನು.

---

1. **ಭರತ :** 1) ಭರ+ತ = ಮತ್ವರ್ಥೇ ತ ಪ್ರತ್ಯಯಃ, ಭರ ಎಂಬ ಶಬ್ಧ ಯಾರಿಗಿದೆಯೋ ಅವನು.

2) **ಭರೇಣ ಹರಿಣಾ ತತತ್ವಾತ್ –** ಹರಿಯ ಸನ್ನಿಧಾನವುಳ್ಳವನು. ಪದ್ಮನಾಭಾಂಶನು. ಬಲಕೈಯಲ್ಲಿ ಚಕ್ರಚಿಹ್ನೆ ಹಾಗೂ ಪಾದದಲ್ಲಿ ಪದ್ಮಚಿಹ್ನೆ ಇದ್ದವನು.

**ಚಕ್ರಂ ದಕ್ಷಿಣ ಹಸ್ತೇಽಸ್ಯ ಪದ್ಮಕೋಶಶ್ಚ ಪಾದಯೋಃ ।**

3) ಭರಂ – **ಭೂಮೇಃ ಭಾರಂ ಭರಣಂ ತನೋತೀತಿ ಭರತಃ**

4) ಭರೇ – **ಶುಭೇ ರತತ್ವಾತ್ ಭರತಃ**

ಭರತನು ಐಂದ್ರವೆಂಬ ಯಾಗವನ್ನು ಮೃಷ್ಣಾರವೆಂಬ ದೇಶದಲ್ಲಿ ಮಾಡಿದನು. ಗಂಗಾತೀರದಲ್ಲಿ 55, ಯಮುನಾ ತೀರದಲ್ಲಿ 78 ಅಶ್ವಮೇಧ ಯಾಗಗಳನ್ನು ಮಾಡಿದನು. ದೀರ್ಘ ತಮಸ್ಸರು ಯಾಗ ಮಾಡಿಸಿದರು. ಯಾಗದಲ್ಲಿ ಕಪ್ಪಾದ ಬಿಳಿದಂತಗಳುಳ್ಳ ನೂರುಕೋಟಿ ಏಳುನೂರು ಆನೆಗಳನ್ನು ದಾನ ಮಾಡಿದನು. ಭರತನ ಮಹಿಮೆ ಋಗ್ವೇದದಲ್ಲಿ ವರ್ಣಿಸಲಾಗಿದೆ. ಬ್ರಾಹ್ಮಣರು ಎರಡೆರಡು ಸಾವಿರ ಗೋವುಗಳನ್ನು ಹಂಚಿಕೊಂಡರು. ನೂರಮೂವತ್ತಮೂರು ಕುದುರೆಗಳನ್ನು ಯಾಗಕ್ಕಾಗಿ ಕಟ್ಟಿ ಹಾಕಿದ್ದ.

ಭರತನು ಬ್ರಾಹ್ಮಣ ಹಿಂಸಕರಾದ ಕಿರತಾ ಹೂಣ ಯವನಾದಿಗಳನ್ನು ನಿಗ್ರಹಿಸಿರುವನು.

ಪಣಿಗಳೆಂಬ ದೈತ್ಯರು ದೇವತಾ ಸ್ತ್ರೀಯರನ್ನು ಅಪಹರಿಸಿ ರಸಾತಲಕ್ಕೆ ಕರೆದೊಯ್ದರು. ಇವರನ್ನು ಪುನಃ ಅವರಿಂದ ಬಿಡಿಸಿ ತಂದ ಮಹಿಮಾವಂತ.

## ಭರತನ ಸ್ವರ್ಗಮನ – ವಿತಥ ಪಟ್ಟಾಭಿಷೇಕ

**ಅತ್ರೈವೋದಾಹರಂತೀಮಂ ಭರದ್ವಾಜಾಯ ಧೀಮತಃ ।**
**ಧರ್ಮ ಸಂಕ್ರಮಣಂ ಚಾಪಿ ಮರುದ್ಭಿಃ ಭರತಾಯ ವೈ ॥ 13 ॥**

**ಪೂರ್ವಂ ತು ವಿತಥೇ ತಸ್ಯ ಕೃತೇ ವೈ ಪುತ್ರ ಜನ್ಮನಿ ।**
**ತತೋಽಥ ವಿತಥೋ ನಾಮ ಭರದ್ವಾಜ ಸುತೋಽಭವತ್ ॥ 14 ॥**

ಭರತನು ಮೊದಲು ಸಂತಾನ ಪ್ರಾಪ್ತಿಗಾಗಿ ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾಗಿದ್ದವು. ಫಲ ನೀಡಿರಲಿಲ್ಲ. **ಭರದ್ವಾಜ**[2]ರು ಮಾಡಿಸಿದ ಹೋಮದಿಂದಾಗಿ ವಿತಥನೆಂಬ ರಾಜನು ಹುಟ್ಟಿದನು. ಭರದ್ವಾಜನಿಗೂ ವಿತಥನೆಂದೆ ಹೆಸರು. ತಥಾ = ಉಚಥ್ಯನ ಮಗ ದೀರ್ಘತಮನಂತೆ ಹುಟ್ಟದೆ, ವಿ = ವಿರುದ್ಧ ಬೃಹಸ್ಪತಿಯ ವೀರ್ಯದಿಂದ ಜನಿಸಿದವನು ಎಂಬರ್ಥ. ಮುಂದೆ ವಿನಷ್ಟವಾಗುತ್ತಿದ್ದಾಗ ಭರದ್ವಾಜನಿಂದ ಹುಟ್ಟಿದ ಮಗನೂ ವಿತಥನೆ.

---

2. **ಧರ್ಮ ಸಂಕ್ರಮಣಂ :** ಭರತನ ವಂಶವು ನಷ್ಟವಾಗುತ್ತಿರಲು ಭರತನು ಮಾಡಿದ ಮರುತ್‌ಸ್ತೋಮವೆಂಬ ಯಾಗದಿಂದ ಪ್ರೀತರಾದ ಮರುತ್ತುಗಳು ಈ ಭರದ್ವಾಜನನ್ನು ನೀಡಿದರು. **ಭರದ್+ವಾಜಃ ದ್ವಯೋಃ ಜಾತತ್ವಾತ್ ದ್ವಾಜಃ, ತಂ ದ್ವಾಜಂ ಭರ =** ರಕ್ಷಿಸು ಎಂದು ಉಚಥ್ಯನ ಪತ್ನಿಗೆ ಅಶರೀರವಾಣಿ ಹೇಳಿದ್ದು.

   ***ಇತಿಹಾಸ ಹೀಗಿದೆ :*** ಉಚಥ್ಯರು ಬೃಹಸ್ಪತಿಯ ಅಣ್ಣ. ಅವನ ಪತ್ನಿ ಮಮತೆಯು. ಗರ್ಭಿಣಿಯಾಗಿರುವಾಗ ಮೋಹದಿಂದಾಗಿ ಗರ್ಭಿಣಿಯನ್ನು ಬಲಾತ್ಕಾರ ಮಾಡಿದರು. ಅವಳೂ ತಿರಸ್ಕರಿಸಿದಳು. ಒಳಗಿರುವ ಮಗವೂ ಕಾಲಿನಿಂದ ಒದ್ದು ನಿಷೇಧಿಸಿತ್ತು. ಆದರೂ ವೀರ್ಯಾಧಾನ ಮಾಡಿದಾಗ ಮಗುವು ಅದನ್ನು ಪಾದದಿಂದ ಆಚೆ ತಳ್ಳಿ ತಾನೂ ಹೊರಗೆ ಬಂದಿತು. ಬಿದ್ದ ಶಕ್ತಿಯಿಂದ ಕುಮಾರನೊಬ್ಬ ಹುಟ್ಟಿದನು. ಪತಿಗೆ ಭಯಪಟ್ಟ ಮಮತೆಯು, ಮಮತೆ ಇಲ್ಲದೆ ಬಿಟ್ಟು ಹೊರಟಾಗ ದೇವತೆಗಳು ಹೀಗೆಂದರು.

   **ಮೂಢೇ ಭರದ್ವಾಜಮಿಮಂ ಭರದ್ವಾಜಂ ಬೃಹಸ್ಪತೇಃ ।**

   ಮೂಢಳೇ, ಉಚಥ್ಯನ ಹೆಂಡತಿಯಲ್ಲಿ ಹುಟ್ಟಿದವನೂ, ಬೃಹಸ್ಪತಿಯ ವೀರ್ಯದಿಂದ ಹುಟ್ಟಿದವನು. ಹೀಗೆ ಇಬ್ಬರಿಂದ ಜಾತನಾದ 'ಭರದ್ವಾಜ'ನನ್ನು ರಕ್ಷಿಸು ಎಂದರು. ಹೀಗೆ ಹೇಳಿದರೂ ಆ ಮಗುವನ್ನು ಬಿಟ್ಟು ಹೋದಾಗ ಮರುತ್ತುಗಳು ರಕ್ಷಿಸುತ್ತಾ ಮುಂದೆ ಭರದ್ವಾಜನನ್ನು ಭರತನಿಗೆ ನೀಡಿದರು. ವಿಚ್ಛಿನ್ನವಾದ ವಂಶಕ್ಕೆ ದತ್ತು ಕೊಟ್ಟಿದ್ದರಿಂದ ವಿತಥಯೆಂದು ಹೆಸರಾಯಿತು. ವಿ + ತಥಾ = ತಥಾ ಅವನಂತೆ ಅಲ್ಲ. ದೀರ್ಘತಮನಂತೆ ಅಲ್ಲ. ವಿರುದ್ಧ = ಜಾರಜನು.

ವಿತಥನು ಜನಿಸಿದ ಮೇಲೆ ಕೆಲವು ಕಾಲಾ ನಂತರ ಭರತನು ದಿವಂಗತನಾದ. ಭರದ್ವಾಜನು ವಿತಥನನ್ನು ಪಟ್ಟಗಟ್ಟಿ ತಪಸ್ಸಿಗಾಗಿ ತೆರಳಿದ. ವಿತಥನಿಗೆ ಸುಹೋತ್ರ, ಸುಹೋತಾ, ಗಯ, ಗರ್ಗ, ಕಪಿಲ ಎಂಬ ಐದು ಮಂದಿ ಪುತ್ರರಾದರು. ಸುಹೋತ್ರನಿಗೆ ಕೌಶಿಕ ಮತ್ತು ಗೃತ್ಸಮತಿಯೆಂಬ ಇಬ್ಬರು ಪುತ್ರರಾದರು. ಕೌಶಿಕನಿಗೆ ಕಾಶಿಕಾ ಎಂದು ಹೆಸರಿತ್ತು. ಕಾಶಿಕನಿಗೆ ಕಾಶೇಯ-ದೀರ್ಘತಪರೆಂಬ ಇಬ್ಬರು ಮಕ್ಕಳಾದರು. ಗೃತ್ಸಮತಿಯ ಮಕ್ಕಳಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರೆಂಬ ತ್ರಿವರ್ಣದವರೂ ಇದ್ದರು. ದೀರ್ಘತಪಸನ ವಂಶದಲ್ಲಿ ಧನ್ವಂತರಿ, ಕೇತುಮಂತ, ದಿವೋದಾಸ ಮುಂತಾದವರ ಮೂಲಕ ಮುಂದುವರೆದ ವಿಷಯ ಈ ಹಿಂದೆ ತಿಳಿಸಿರುವೆ.

## ಗಂಗೆ ಪಾನ ಮಾಡಿದ ಜಹ್ನು

**ಅಜಮೀಢೋಽಪರೋ ವಂಶಃ ಶ್ರೂಯತಾಂ ಭರತರ್ಷಭ ।**
**ಸುಹೋತ್ರಸ್ಯ ಬೃಹತ್ ಪುತ್ರೋ ಬೃಹತಸ್ತನಯಾಸ್ತ್ರಯಃ ॥ 15 ॥**
**ಅಜಮೀಢೋ ದ್ವಿಮೀಢಶ್ಚ ಪುರುಮೀಢಶ್ಚ ವೀರ್ಯವಾನ್ ॥ 16 ॥**
**ಅಜಮೀಢಸ್ಯ ಪತ್ನ್ಯಸ್ತು ತಿಸ್ರಃ ವೈ ಯಶಸಾನ್ವಿತಾಃ ।**
**ನೀಲಿನೀ ಕೇಶಿನೀ ಚೈವ ಧೂಮಿನೀ ಚ ವರಾಂಗನಾ ॥ 17 ॥**

ಸುಹೋತ್ರನಿಗೆ ಕಾಶಿಕ-ಗೃತ್ಸಮತಿಗಳೆಂಬ ಪುತ್ರರಲ್ಲದೆ 'ಬೃಹತ್'ಯೆಂಬ ಮತ್ತೊಬ್ಬ ಮಗನಿದ್ದನು. ಇವನಿಗೆ ಅಜಮೀಢ-ದ್ವಿಮೀಢ-ಪುರುಮೀಢರೆಂಬ ಮೂವರು ಮಕ್ಕಳಾದರು. ಅಜಮೀಢನಿಗೆ ಧೂಮಿನೀ, ನೀಲಿನೀ, ಕೇಶಿನೀ ಎಂಬ ಮೂವರು ಪತ್ನಿಯರಿದ್ದರು. ಬೃಹತ್‌ನಿಗೆ ಹಸ್ತಿಯೆಂದೂ ಹಸ್ತಿನಾಪುರ ರಚಿಸಿದವನೆಂದೂ ಪ್ರಸಿದ್ಧಿಯಿದೆ.

ಈ ಅಜಮೀಢನಿಂದ ಕೇಶಿನೀದೇವಿಯಲ್ಲಿ ಜಹ್ನುಪುತ್ರನು ಹುಟ್ಟಿದನು. ಜಹ್ನುವು ವಿಶ್ವಜಿತ್ ಯಾಗ ಮಾಡಿದವನು. ಗಂಗೆಯು ಇವನನ್ನು ಮೋಹಿಸಿದ್ದು ತಿರಸ್ಕರಿಸಿದ್ದ ಜಹ್ನುವಿನ ಆಶ್ರಮವನ್ನೆಲ್ಲ ಕೊಚ್ಚಿ ಹಾಕಿದಾಗ, ಜಹ್ನುವು ಏಕಾಪೋಶನ ಮಾಡಿದ್ದನು. ಮುಂದೆ ದೇವತಾ ಪ್ರಾರ್ಥನೆಯಂತೆ ತನ್ನನ್ನು ಪತಿಯೆಂದು ತಿಳಿಯದೆ ಜನ್ಮಕೊಟ್ಟ ತಂದೆಯೆಂದು ಭಾವಿಸಲಿ ಎಂದು ಕಿವಿಯಿಂದ ಬಿಟ್ಟು ಜಹ್ನು ಪುತ್ರಿ 'ಜಾಹ್ನವೀ' ಯೆನಿಸಿದಳು.

## ಪಾಂಚಾಲ ವಂಶ

**ಅಜಮೀಢಸ್ಯ ನೀಲಿನ್ಯಾಂ ಸುಶಾಂತಿರುಪಪದ್ಯತ ।**
**ಪುರುಜಾತಿಃ ಸುಶಾಂತೇಸ್ತು ವಾಹ್ಯಾಶ್ವಃ ಪುರುಜಾತಿತಃ ॥ 18 ॥**
**ವಾಹ್ಯಾಶ್ವತನಯಾಃ ಪಂಚ ಬಭೂವುರಮರೋಪಮಾಃ ॥ 19 ॥**
**ಮುದ್ಗಲಃ ಸೃಂಜಯಶ್ಚೈವ ರಾಜಾ ಬೃಹದಿಷುಃ ಸ್ಮೃತಃ ।**
**ಯವೀನರಶ್ಚ ವಿಕ್ರಾಂತಃ ಕೃಮಿಲಾಶ್ವಶ್ಚ ಪಂಚಮಃ ॥ 20 ॥**

ಅಜಮೀಢನಿಗೆ ಮತ್ತೊಬ್ಬ ನೀಲಿನೀಯೆಂಬ ನಾರಿಯಲ್ಲಿ 'ಸುಶಾಂತಿ'ಯು ಜನಿಸಿದನು. ಸುಶಾಂತಿಗೆ ಬಾಹ್ಯಾಶ್ವ, ಬಾಹ್ಯಾಶ್ವನಿಗೆ ಮುದ್ಗಲ, ಸೃಂಜಯ, ಬೃಹದಿಷು, ಯವೀನರ, ಕೃಮೀಲಾಶ್ವ ಎಂಬ ಐದು ಪುತ್ರರಾದರು. ಈ ಪಂಚಕುಮಾರರು ಪ್ರಪಂಚವನ್ನೇ ರಕ್ಷಿಸಲು ಅಲಂ ಅಂದರೆ ಸಮರ್ಥರಾಗಿರುವರು. ಈ ಐದು ಮಂದಿ ಮಕ್ಕಳೆ ಸಾಕು ಎಂದು ಹೇಳಿದ್ದರಿಂದ ಪಾಂಚಾಲರು ಎಂದು ಕರೆದರು. ಪಾಂಚಾಲವು ಇವರು ಆಳಿದ ದೇಶಕ್ಕೂ ಇವರದೆ ಹೆಸರು.

## ಮುದ್ಗಲ ವಂಶ-ಅಹಲ್ಯಾ-ಗೌತಮರು

**ಮುದ್ಗಲಸ್ಯ ದಾಯಾದಃ ಮೌದ್ಗಲ್ಯಃ ಸುಮಹಾಯಶಾಃ ।**
**ಏತೇ ಹ್ಯಂಗೀರಸಃ ಪಕ್ಷಂ ಸಂಶ್ರಿತಾಃ ಕಣ್ವ ಮೌದ್ಗಲಾಃ ॥ 21 ॥**

ಪಾಂಚಾಲದಲ್ಲಿ ಮುದ್ಗಲನ ಪ್ರೀತಿಪುತ್ರನೇ ಮೌದ್ಗಲ್ಯ. ಇವರೆಲ್ಲರೂ ಕ್ಷತ್ರಧರ್ಮದಿಂದ ಯುಕ್ತರಾಗಿದ್ದರೂ ಆರ್ಜವತೆ ಪ್ರಾಮಾಣಿಕತನ ಅಭಯಾದಿ ಗುಣಗಳಿಂದ ಬ್ರಾಹ್ಮಣರಾಗಿದ್ದರು. ಕಣ್ವ ಹಾಗೂ ಮೌದ್ಗಲ್ಯರು ಅಂಗೀರಸ ಪಕ್ಷ ವಹಿಸಿ ಕಣ್ವ ಮೌದ್ಗಲ್ಯರೆನಿಸಿದರು.

ಮೌದ್ಗಲ್ಯನು ಇಂದ್ರಸೇನನು ಬ್ರಹ್ಮರ್ಷಿಯೆಂದು ಪ್ರಸಿದ್ಧನಾದನು. ಇಂದ್ರಸೇನನಿಂದ 'ವದ್ಧ್ಯಶ್ವ'ನೂ, ಇವನಿಗೆ ಮೇನಕೆಯಲ್ಲಿ ರಾಜರ್ಷಿಯಾದ ದಿವೋದಾಸ ಹಾಗೂ ಅಹಲ್ಯಾ ಎಂಬ ಇಬ್ಬರು ಮಕ್ಕಳಾದರು.

## ಕೃಪಾಚಾರ್ಯ-ಕೃಪೀ ಜನನ

**ಶರದ್ವತಸ್ತು ದಾಯಾದಂ ಅಹಲ್ಯಾ ಸಮಸೂಯತ ।**

**ಶತಾನಂದಂ ಋಷಿಶ್ರೇಷ್ಠಂ ತಸ್ಯಾಪಿ ಸುಮಹಾಯಶಾಃ ।**
**ಪುತ್ರಃ ಸತ್ಯಧೃತಿರ್ನಾಮ ಧನುರ್ವೇದಸ್ಯ ಪಾರಗಃ ॥ 22 ॥**
**ತಸ್ಯ ಸತ್ಯಧೃತೇ ರೇತೋ ದೃಷ್ಟ್ವಾಪ್ಸರಮಗ್ರತಃ ।**
**ಅವಸ್ಕನ್ನಂ ಶರಸ್ತಂಬೇ ಮಿಥುನಂ ಸಮಪದ್ಯತ ।**
**ಕೃಪಯಾ ತಚ್ಚ ಜಗ್ರಾಹ ಶಂತನುಃ ಮೃಗಯಾಂ ಗತಃ ॥ 23 ॥**
**ಕೃಪಃ ಸ್ಮೃತಃ ಸ ವೈ ತಸ್ಮಾದ್ ಗೌತಮೀ ಚ ಕೃಪೀ ತಥಾ ॥ 24 ॥**

ಈ ಅಹಲ್ಯೆಯನ್ನು ಗೌತಮನಿಗೆ ವಿವಾಹ ಮಾಡಿಕೊಡಲಾಗಿತ್ತು. ಗೌತಮನಿಂದ ಅಹಲ್ಯೆಯಲ್ಲಿ ಶತಾನಂದರು ಜನಿಸಿದರು. ಶತಾನಂದರಿಂದ ಸತ್ಯಧೃತಿಯು, ಸತ್ಯಧೃತಿಗೆ **'ಶರದ್ವಾನ್'**[3] ಎಂದು ಅಜ್ಜನ ಹೆಸರಿನಿಂದಲೂ ಕರೆಯುತ್ತಿದ್ದರು.

ಶರದ್ವಂತನು ಒಂದು ದಿನ ಯಮುನಾ ನದೀ ತೀರದಲ್ಲಿ ತಪಸ್ಸಿನಲ್ಲಿ ನಿರತನಾಗಿದ್ದಾಗ ಊರ್ವಶಿಯನ್ನು ನೋಡಿದನು. ಇವಳಿಗೆ ಜಾಲವತೀ ಎಂದು ಪುರಾಣ ತಿಳಿಸಿದೆ. ಇವಳನ್ನು ನೋಡಿದಾಗ ಶಕ್ತಿಪಾತವಾಯಿತು.

ಶರದ್ವಾನನು ಊರ್ವಶಿಯನ್ನು ನೋಡುತ್ತಲೇ ಮನಸ್ಸು ಚಂಚಲವಾಗಿ ಹುಲ್ಲುಗಾವಲಿನ ಮೇಲೆ ವೀರ್ಯಪಾತವಾಯಿತು. ಅಲ್ಲಿಯ ಸಸ್ಯಶಾದ್ವಲದಲ್ಲಿ ಒಂದು ಗಂಡು ಹೆಣ್ಣು ಮಗು ಜನಿಸಿದವು. ಈ ಮಧ್ಯದಲ್ಲಿ ಶಂತನುವು ಬೇಟೆಗೆ ಹೋಗಿದ್ದು ಶರಸ್ತಂಭದಲ್ಲಿ ಬಿದ್ದಿದ್ದ ದ್ವಂದ್ವವನ್ನು ನೋಡಿ ಕೃಪೆಯಿಂದ

---

3. ಶರದ್ವಾನ್ :

ಗೌತಮಪುತ್ರ ಶತಾನಂದ ಸೋದರನು. ಶಂರೂಪ ಶ್ರೀಹರಿಯಲ್ಲಿ ರತಿವುಳ್ಳವನು 'ಶರದ್ವಾನ್'. ಶಂ ಸುಖವನ್ನು ರಾತೀತಿ= ಕೊಡುವ ಶ್ರೀಹರಿಯೇ ಶರದ್. ಅವನ ನಿರಂತರ ಉಪಾಸನೆವುಳ್ಳವನು ಶರದ್ವಾನ್ ।

ಶರದ್ವಾನ್ ತಪೋಮಗ್ನನಾದಾಗ ಜಾಲವತೀ ಜಾನಪದೀ ಜಾಲಪದೀ ಎಂಬ ಹೆಸರುಳ್ಳ ಊರ್ವಶಿಯನ್ನು ಕಳುಹಿಸಿದನು ಇಂದ್ರನು.

**ತತೋ ಜಾಲವತೀಂ ನಾಮ ದೇವಕನ್ಯಾಂ ಸುರೇಶ್ವರಃ ॥** *–1/140/6*

ತನ್ನ ಸುಂದರವಾದ ಅಂಗಾಂಗಗಳಿಂದ ನೋಡುವವರನ್ನು ಬಲೆಯು ಜಲಚರಗಳನ್ನು ಬಂಧಿಸುವಂತೆ ಬಂಧಿಸುವವಳೆಂದೇ ಊರ್ವಶಿಯನ್ನು 'ಜಾಲವತೀ' ಎಂದಿದ್ದಾರೆ.

ರಾಜ್ಯಕ್ಕೆ ತಂದನು. ಕೃಪೆಯಿಂದಾಗಿ **ಕೃಪ**[4]ನೆಂದೂ, ಕೃಪೀಯೆಂದು ಹೆಸರಾಯಿತು. ಕೃಪಿಯು ಮೂಲದಲ್ಲಿ ತಾರೆಯು. ಬೃಹಸ್ಪತಿಯು ದ್ರೋಣಾಚಾರ್ಯನಾಗಿದ್ದು ಅವನನ್ನೇ ಕೈಹಿಡಿದಳು. ಇವರಿಗೆಲ್ಲ ಶಾರದ್ವತ ಅಥವಾ ಗೌತಮರೆಂದು ಕರೆಯುವರು.

## ಅಹಲ್ಯಾ ಅಣ್ಣನ ವಂಶ ವಿಸ್ತಾರ

**ಅತ ಊರ್ಧ್ವಂ ಪ್ರವಕ್ಷ್ಯಾಮಿ ದಿವೋದಾಸಸ್ಯ ಸಂತತಿಮ್ ।**
**ದಿವೋದಾಸಸ್ಯ ದಾಯಾದಃ ಬ್ರಹ್ಮರ್ಷಿಃ ಮಿತ್ರಯುರ್ನೃಪ ॥ 25 ॥**

**ಮೈತ್ರಾಯಣಾಸ್ತತಃ ಸೋಮೋ ಮೈತ್ರೇಯಾಸ್ತು ತತಃ ಸ್ಮೃತಾಃ ॥ 26 ॥**

ಅಹಲ್ಯೆಯ ಅಣ್ಣನಾದ ದಿವೋದಾಸನಿಗೆ ಬ್ರಹ್ಮರ್ಷಿಯಾದ 'ಮಿತ್ರಯು' ಎಂಬ ಮಗನಿದ್ದನು. ಇವನಿಂದಲೇ ಮೈತ್ರಾಯಿಣೀ ಶಾಖೆ ಪ್ರವೃತ್ತವಾಯಿತು. ಹಾಗೆಯೆ ಮೈತ್ರೇಯರೆಂಬ ಎಷ್ಟೋ ಕುಲದೀಪಕರು ಪ್ರಸಿದ್ಧರಾದರು.

## ಸೋಮಕ ವಂಶ – ದ್ರುಪದ ರಾಜ

**ಆಸೀತ್ ಪಂಚಜನಃ ಪುತ್ರಃ ಸೃಂಜಯಸ್ಯ ಮಹಾತ್ಮನಃ ।**
**ಸುತಃ ಪಂಚಜನಸ್ಯಾಪಿ ಸೋಮದತ್ತೋ ಮಹೀಪತಿಃ ॥ 27 ॥**

**ಸಹದೇವಸುತಶ್ಚಾಪಿ ಸೋಮಕೋ ನಾಮ ಪಾರ್ಥಿವಃ ।**
**ಅಜಮೀಢಾತ್ ಪುನರ್ಜಾತಃ ಕ್ಷೀಣೇ ವಂಶೇ ತು ಸೋಮಕಃ ॥ 28 ॥**

ಮುದ್ಗಲನ ತಮ್ಮ ಸೃಂಜಯನಿಗೆ ಪಂಚಜನನೂ, ಅವನಿಗೆ ಸೋಮದತ್ತನೂ ಸೋಮದತ್ತನಿಗೆ ಸಹದೇವನೂ, ಸಹದೇವನಿಗೆ ಸೋಮಕನೂ, ಅಜಮೀಢವಂಶ ನಾಶದ ಅಂಚಿನಲ್ಲಿದ್ದಾಗ ಸೋಮಕನು ಹುಟ್ಟಿದನು. ಸೋಮಕನಿಗೆ ಜಂತು, ಜಂತು ರಾಜನಿಗೆ ನೂರು ಮಂದಿ ಮಕ್ಕಳಿದ್ದರು.

---

4. ಕೃಪ :
**ಕೃಷ್ಯತೇ ಕೃಪಾ ವಿಷಯಃ ಕ್ರಿಯತೇ ಇತಿ ಕೃಪಃ ಕೃಪ ಕೃಪಾಯಾಮ್ ।**
ಹನ್ನೊಂದು ರುದ್ರರಲ್ಲಿ ವಿಷ್ಕಂಭನೆಂಬ ರುದ್ರನೇ ಹರಿಯ ಭೂಭಾರ ಹರಣದಲ್ಲಿ ಸೇವೆ ಮಾಡಲು ಕೃಪನಾಗಿ ಅವತರಿಸಿದನು. – *ತಾ.ನಿ. 11/58*

ಇವರಲ್ಲಿ ಕೊನೆಯವನೇ ಪೃಷದ್ರಾಜ. ಇವನಿಂದ **ದ್ರುಪದ್** ರಾಜನು. ಹುಟ್ಟಿದನು. ಧೃಷ್ಟದ್ಯುಮ್ನ ದ್ರುಪದ ಪುತ್ರನ ದ್ರೌಪದೀಯೆಂಬ ಮಗಳೂ ಹುಟ್ಟಿದರು. ಧೃಷ್ಟದ್ಯುಮ್ನನಿಂದ ಧೃಷ್ಟಕೇತುವು ಜನಿಸಿದನು. ಇವರೆಲ್ಲರೂ ಹರ್ಮ್ಯಾಶ್ವನ ವಂಶದವರು ಪಾಂಚಾಲರೆಂದೆ ಪ್ರಸಿದ್ಧರಾದರು. ಇದು ಅಜಮೀಢನ ಪತ್ನಿ ನೀಲಿನಿಯ ವಂಶವೂ ಆಗಿದೆ.

## ಅಜಮೀಢ ಪತ್ನಿ ಧೂಮಿನೀ ತಪಸ್ಸು

**ಮಹಿಷೀ ತ್ವಜಮೀಢಸ್ಯ ಧೂಮಿನೀ ಪುತ್ರಗೃದ್ಧಿನೀ ।**
**ತೃತೀಯಾ ತವ ಪೂರ್ವೇಷಾಂ ಜನನೀ ಪೃಥಿವೀ ಪತೇ ॥ 29 ॥**

**ತತೋ ವರ್ಷಾಯುತಂ ತಪ್ತ್ವಾ ತಪಃ ಪರಮದುಶ್ಚರಮ್ ।**
**ಹುತ್ವಾಗ್ನಿಂ ವಿಧಿವತ್ ಸಾ ತು ಪವಿತ್ರ ಮಿತ ಭೋಜನಾ ।**
**ಅಗ್ನಿಹೋತ್ರ ಕುಶೇಷ್ವೇವ ಸುಷ್ವಾಪ ಜನಮೇಜಯ ॥ 30 ॥**

---

5. ದ್ರುಪದ :

ಪೃಷತನು 'ಪೇಷುಸೇಚನೆ' ಧಾತುವಿನಿಂದಾಗಿ ಯಥೇಚ್ಛವಾಗಿ ರೇತಸ್ಸನ್ನು ಚೆಲ್ಲಿದ್ದರಿಂದ ಪೃಷತನು. ಪುತ್ರನಿಗಾಗಿ ತಪಸ್ಸನ್ನಾಚರಿಸಿದ. ಮೇನಕೆಯನ್ನು ನೋಡಿದನು. **'ಮೇ ನ ಕೋಽವಿ ನಿಯತಃ ಪತಿರಿತಿ ಮೇನೇತಿ ಮೇನಕಾ'** ನನಗೆ ಯಾರೂ ನಿಯತಪತಿಗಳಿಲ್ಲ. ಅವಳನ್ನು ನೋಡಿ ರೇತಸ್ಸು ಪಾತವಾಯಿತು. ರಾಜನು ಅದನ್ನು ಕಾಲಿನಿಂದ ಆಕ್ರಮಿಸಿ ಗೋಪನ ಮಾಡಿದ. ನನ್ನಿಂದ ಹೊರಟ ರೇತಸ್ಸನ್ನು ಬೇರೆಯವರಿಗೆ ಕಾಣದಿರಲಿ ಎಂಬ ಇಚ್ಛೆಯಿಂದ. ಇದರಿಂದ ಒಬ್ಬ ಮಗ ಜನಿಸಿದ. ಹೂಹೂ ಎಂಬ ಗಂಧರ್ವನು ಆವಹ ಎಂಬ ಮರುತ್ತಿನ ಅಂಶದಿಂದಾಗಿ ದ್ರುಪದನಾಗಿ ಜನಿಸಿದ. **'ಪದೇ ದ್ರುತತ್ವಾತ್ ದ್ರುಪದಾಭಿಧೇಯಃ'** ಯಜ್ಞಸೇನನೆಂದೂ ಹೆಸರು. ಮರದ ಗುರುತಿನ ಧ್ವಜ. ಮಾಕಂದಿ ರಾಜಧಾನೀ. ಅಗ್ನಿವೇಶ್ಯ ಮುನಿ ಶಿಷ್ಯ. ದ್ರೋಣರ ಜೊತೆಗೆ ಓದಿದವನು. ಸೌತ್ರಾಮಣಿ ಅಥವಾ ಕೌಸವಿ ಪತ್ನಿ. ಶಿಖಂಡಿ ಪುತ್ರ. ಯಜ್ಞ ಪುನಃ ಮಾಡಿದಾಗ ಧೃಷ್ಟದ್ಯುಮ್ನ, ದ್ರೌಪದೀ ಎಂಬ ಮಗಳ ಅಗ್ನಿಕುಂಡದಿಂದಲೇ ಜನಿಸಿದರು. ಸುಮಿತ್ರ, ವೀರ ಕೇತು ಕೌಸವಿಯಲ್ಲಿ ಜನಿಸಿದವರು. ಭರದ್ವಾಜರಿಂದ ಶಸ್ತ್ರ–ಶಾಸ್ತ್ರಾಭ್ಯಾಸ – ದ್ರೋಣನಿಗೆ ನಾನು ಯುವರಾಜನಾದಾಗ ನಾನು ನೀನು ಒಟ್ಟಿಗೆ ಆಳೋಣ. ನೀನಿಲ್ಲದೆ ನನಗೆ ರಾಜ್ಯವು ಪ್ರಿಯವಲ್ಲವೆಂದನು. ಮುಂದೆ ದ್ರುಪದನನ್ನು ಹದಿನಾಲ್ಕನೆಯ ರಾತ್ರಿ ಯುದ್ಧದಲ್ಲಿ ದ್ರೋಣ ಕೊಂದು ಹಾಕಿದ.

**ಧೂಮಿನ್ಯಾ ಸ ತಯಾ ದೇವ್ಯಾ ತ್ವಜಮೀಢಃ ಸಮೇಯಿವಾನ್ ।**
**ಋಕ್ಷಂ ಸಂಜನಯಾ ಮಾಸ ಧೂಮವರ್ಣಂ ಸುದರ್ಶನಮ್ ॥ 31 ॥**

**ಋಕ್ಷಾತ್ ಸಂವರಣೋ ಜಜ್ಞೇ ಕುರುಃ ಸಂವರಣಾತ್ ತಥಾ ।**
**ಯಃ ಪ್ರಯಾಗಾದತಿಕ್ರಮ್ಯ ಕುರುಕ್ಷೇತ್ರಂ ಚಕಾರ ಹ ॥ 32 ॥**

ಜನಮೇಜಯನೇ, ಈ ಧೂಮಿನಿಯೇ ನಿನ್ನ ಪೂರ್ವಜರ ಮಹಾತಾಯಿ. ಈ ಧೂಮಿನಿಯು ಅನೇಕ ವ್ರತೋಪವಾಸಗಳನ್ನು ಮಾಡಿದಳು. ಸತ್ಸಂತಾನಕ್ಕಾಗಿ ಸತ್ಸಂತಾನ ಪ್ರಾಪ್ತಿಗಾಗಿ ಹತ್ತು ಸಾವಿರ ವರ್ಷ ಉಗ್ರ ತಪಸ್ಸನ್ನಾಚರಿಸಿದಳು. ಮಿತಾಹಾರದಿಂದ ಹವನ ಹೋಮಗಳನ್ನು ಮಾಡಿಸಿದಳು. ಹೋಮಾ ನಂತರ ಅಗ್ನಿಹೋತ್ರಕ್ಕಾಗಿ ತಂದಿದ್ದ ದರ್ಭಾಸನದ ಮೇಲೆ ಮಲಗಿದಳು. ಇಂತಹ ದೀರ್ಘ ವ್ರತ ತಪೋನುಷ್ಠಾನಾ ನಂತರದಲ್ಲಿ ಅಜಮೀಢನು ಇವಳನ್ನು ವರಿಸಲು ಬಂದನು. ಅವನಿಂದ ಧೂಮಿನಿಗೆ ಅತ್ಯಂತ ಸುಂದರನೂ ಧೂಮ್ರವರ್ಣದವನು ಆದ 'ಋಕ್ಷರಾಜ'ನು ಜನಿಸಿದನು. ಋಕ್ಷನಿಂದ ಸಂವರಣನು, ಸಂವರಣನಿಂದ ಕುರು ಕುಮಾರನು ಜನಿಸಿದನು. ಈ ಕುರುವೆ ಪ್ರಯಾಗ ಪ್ರದೇಶ ದಾಟಿ ಕುರುಕ್ಷೇತ್ರವನ್ನು ನಿರ್ಮಿಸಿದನು. ಈ ಕುರುವಿನಿಂದಲೇ ಕೌರವರ ವಂಶ ಪ್ರಸಿದ್ಧವಾಯಿತು.

## ಕೌರವ ವಂಶ

**ಕುರೋಶ್ಚ ಪುತ್ರಾಃ ಚತ್ವಾರಃ ಸುಧನ್ವಾ ಸುಧನುಸ್ತಥಾ ।**
**ಪರೀಕ್ಷಿಚ್ಚ ಮಹಾಬಾಹುಃ ಪ್ರವರಶ್ಚಾರಿಮೇಜಯಃ ॥ 33 ॥**

**ಸುಧನ್ವನಸ್ತು ದಾಯಾದಃ ಸುಹೋತ್ರೋ ಮತಿಮಾಂಸ್ತತಃ ।**
**ಚ್ಯವನಸ್ತಸ್ಯ ಪುತ್ರಸ್ತು ರಾಜಾ ಧರ್ಮಾರ್ಥ ಕೋವಿದಃ ॥ 34 ॥**

**ಚ್ಯವನಾತ್ ಕೃತಯಜ್ಞಸ್ತು ಇಷ್ಟ್ವಾ ಯಜ್ಞೈಃ ಸ ಧರ್ಮವಿತ್ ।**
**ವಿಶ್ರುತಂ ಜನಯಾಮಾಸ ಪುತ್ರಮಿಂದ್ರ ಸಮಂ ನೃಪಃ ॥ 35 ॥**

**ಚೈದ್ಯೋಪರಿಚರಂ ವೀರಂ ವಸುಂ ನಾಮಾಂತರಿಕ್ಷಗಮ್ ।**
**ಚೈದ್ಯೋಪರಿಚರಾಜ್ಜಜ್ಞೇ ಗಿರಿಕಾ ಸಪ್ತ ಮಾನವಾನ್ ॥ 36 ॥**

ಕುರುವಿಗೆ ಸುಧನ್ವಾನ-ಸುಧನು – ಪರೀಕ್ಷಿತ್ – ಅರಿಮೇಜಯರೆಂಬ ನಾಲ್ಕು ಮಕ್ಕಳಾದರು. ಸುಧನ್ವನಿಗೆ ಸುಹೋತ್ರನೂ, ಸುಹೋತ್ರನಿಗೆ ಮತಿವಂತನೂ,

ಮತಿವಂತನಿಗೆ ಚ್ಯವನನೂ, ಚ್ಯವನನಿಗೆ ಕೃತಯಜ್ಞನೂ ಮಕ್ಕಳಾದರೂ. ಕೃತಯಜ್ಞನು ಯಜ್ಞವನ್ನು ಮಾಡಿ ಇಂದ್ರ ಸಮಾನ ಪರಾಕ್ರಮವುಳ್ಳ ಉಪರಿಚರ ವಸು ಎಂಬ ಪುತ್ರನನ್ನು ಪಡೆದನು. ಉಪರಿಚರ ವಸುವು ಚೇದಿ ರಾಜ್ಯಕ್ಕೆ ಅಧಿಪತಿಯಾದನು. ವಸುವು ಅಂತರಿಕ್ಷದಲ್ಲಿ ಬೇಕಾದ ಕಡೆ ಸಂಚರಿಸುವ ಸಮರ್ಥನಿದ್ದುದರಿಂದ 'ಉಪರಿಚರ ವಸು' ಎಂದೂ, ಚೇದಿ ವಂಶದ ಸಂಬಂಧವಿದ್ದುದರಿಂದ 'ಚೈದ್ಯವಸು' ಎಂದೂ ಕರೆಯುತ್ತಿದ್ದರು. ಈ ಉಪರಿಚರ ವಸುವಿಗೆ ಗಿರಿಕಾ ಅಥವಾ ಅದ್ರಿಕಾ ಎಂಬ ಪತ್ನಿಯಿದ್ದು ಅವಳಲ್ಲಿ ವಸುವು ಏಳು ಮಂದಿ ಮಕ್ಕಳನ್ನು ಪಡೆದನು. ಮೊದಲನೆಯವನು ಬೃಹದ್ರಥನು ಮಹಾರಥನೂ ಮಗಧ ರಾಜ್ಯಕ್ಕೆ ಅಧಿಪತಿಯೂ ಆಗಿದ್ದನು. ದ್ವಿತೀಯ ಪುತ್ರನು ಪ್ರತ್ಯಗ್ರಹನು. ಮೂರನೆಯವನು ಕುಶನು. ಇವನನ್ನು ಮಣಿವಾಹನನೆಂದೂ ಕರೆಯುತ್ತಿದ್ದರು. ಮಾರುತ, ಯದು, ಮತ್ಸ್ಯ, ಇವರ ನಂತರ ಒಂದು ಹೆಣ್ಣು ಮಗು ಹುಟ್ಟಿದಳು. ಇವಳೇ ಸತ್ಯವತೀ ಕಾಲೀ ಎಂದು ಕರೆಯುತ್ತಿದ್ದರು. ಇವಳು ಮೀನಿನಿಂದ ಹುಟ್ಟಿದಳು.

ಈ ವಸುವಿನ ಜ್ಯೇಷ್ಠ ಪುತ್ರ ಬೃಹದ್ರಥನಿಂದ ಕುಶಾಗ್ರ – ವೃಷಭ – ಪುಷ್ಪವಾನ್ – ಸತ್ಯಹಿತ – ಊರ್ಜ – ಸಂಭವ ಮೊದಲಾದ ರಾಜರಾದರು. ಇವರಲ್ಲಿ ಸಂಭವನನ್ನು ಬೃಹದ್ರಥನೆಂದೂ ಕರೆಯಲಾಗುತ್ತಿತ್ತು.

### ಜರಾಸಂಧ ಜನನ

**ಶಕಲೇ ದ್ವೇ ಸ ವೈ ಜಾತೋ ಜರಯಾ ಸಂಧಿತಃ ಸ ತು ।**
**ಜರಯಾ ಸಂಧಿತೊ ಯಸ್ಮಾತ್ ಜರಾಸಂಧ ಸ್ತತಃ ಸ್ಮೃತಃ ॥ 37 ॥**

**ಸರ್ವಕ್ಷತ್ರಸ್ಯ ಜೇತಾಸೌ ಜರಾಸಂಧೋ ಮಹಾಬಲಃ ।**
**ಜರಾಸಂಧಸ್ಯ ಪುತ್ರೋ ವೈ ಸಹದೇವಃ ಪ್ರತಾಪವಾನ್ ॥ 38 ॥**

ಬೃಹದ್ರಥಮೊಗೆ ಚಂಡಕೌಶಿಕನು ಒಂದು ಮಾವಿನ ಹಣ್ಣನ್ನು ನೀಡಿದ್ದರು. ಅದನ್ನು ಬೃಹದ್ರಥನು ಎರಡು ಹೋಳು ಮಾಡಿ ತನ್ನ ಇಬ್ಬರು ಹೆಂಡಂದರಿಗೆ ನೀಡಿದ್ದರ ಪರಿಣಾಮ ಇಬ್ಬರೂ ಒಂದೊಂದು ಹೋಳನ್ನು ಹಡೆದರು. ಇವುಗಳನ್ನು ಕಾಡಿನಲ್ಲಿ ಬಿಸಾಕಿದರು. ಜರಾ ರಾಕ್ಷಸಿಯು ಈ ಹೋಳುಗಳನ್ನು ಸೇರಿಸಿದಾಗ ಮಗು ಜೀವಂತವಾಯಿತು. ಜರಾ ರಾಕ್ಷಸಿಯಿಂದ ಸಂಧಿತನಾದವನೇ ಜರಾಸಂಧನು. ವಿಪ್ರಚಿತ್ತಿಯೆಂಬ ದೈತ್ಯನೇ

ಜರಸಂಧನಾಗಿ ಹುಟ್ಟಿದ. ಇವನು ಮಹಾಬಲಿಷ್ಠನಾದ್ದರಿಂದ ಎಲ್ಲ ಕ್ಷತ್ರಿಯ ರಾಜರನ್ನೂ ಗೆದ್ದು ಪಾದಾಕ್ರಾಂತ ಮಾಡಿಕೊಂಡನು. ಇವನ ಮಗ **ಸಹದೇವನು**[6].

### ಸಹದೇವನ ವಂಶ

**ಸಹದೇವಾತ್ಮಜಃ ಶ್ರೀಮಾನ್ ಉದಾಯುಃ ಸ ಮಹಾಯಶಾಃ ।**
**ಉದಾಯುಃ ಜನಯಾಮಾಸ ಪುತ್ರಂ ಪರಮಧಾರ್ಮಿಕಮ್ ॥ 39 ॥**

**ಶೃತಧರ್ಮೇತಿ ನಾಮಾನಂ ಮಗಧಾನ್ ಯೋಽವಸದ್ ವಿಭುಃ ।**
**ಪರಿಕ್ಷಿತಸ್ತು ದಾಯಾದೋ ಧಾರ್ಮಿಕೋ ಜನಮೇಜಯಃ ।**
**ಜನಮೇಜಯಸ್ಯ ಪುತ್ರೋ ತು ಸುರಥೋ ಮತಿಮಾಂಸ್ತಥಾ ॥ 40 ॥**

**ಸುರಥಸ್ಯ ತು ವಿಕ್ರಾಂತಃ ಪುತ್ರೋ ಜಜ್ಞೇ ವಿದೂರಥಃ ।**
**ವಿದೂರಥಸ್ಯ ದಾಯಾದಃ ಋಕ್ಷ ಏವ ಮಹಾರಥಃ ॥ 41 ॥**

ಜರಾಸಂಧನ ಮಗ ಸಹದೇವನಿಗೆ ಉದಾಯು ಅಥವಾ ಸೋಮಾಪಿಯು ಮಗನಾದನು. ಇವನು ಶ್ರುತಧರ್ಮ ಅಥವಾ ಶ್ರುತಶ್ರವನೆಂಬ ಮಗನನ್ನು ಪಡೆದನು. ಶ್ರುತಧರ್ಮನು ಪರಮಧಾರ್ಮಿಕನಾಗಿದ್ದು ಮಗಧ ದೇಶದಲ್ಲಿ ವೈಭವೋಪೇತ ಜೀವನ ನಡೆಸಿದವನು. ಇದೆಲ್ಲ ಸುಧನ್ವನ ವಂಶಾವಳಿ.

ಕುರುವಿನ ದ್ವಿತೀಯ ಪುತ್ರನಾದ ಪರೀಕ್ಷಿತ್ ರಾಜನಿಗೆ ಜನಮೇಜಯನೆಂಬ ಪುತ್ರನಿದ್ದನು. ಜನಮೇಜಯನಿಗೆ ಶ್ರುತಸೇನ–ಉಗ್ರಸೇನ–ಭೀಮಸೇನರೆಂಬ ಮೂವರು ಮಕ್ಕಳಾದರು. ಜನಮೇಜಯನ ಮಣಿಮತಿಯೆಂಬ ಮಡದಿಯಲ್ಲಿ ಸುರಥ – ಮತಿಮಾನ್ ಎಂಬ ಮಕ್ಕಳಾಗಿದ್ದರು.

---

6. **ಸಹದೇವ :**

ಜರಾಸಂಧನ ಮಗನು. ರುದ್ರರಲ್ಲಿ ಪತ್ರತಾಪ ಎಂಬ ರುದ್ರನ ಅವತಾರನು. ಇವನು ಭಗವದ್ಭಕ್ತನು. ಜರಾಸಂಧನಲ್ಲಿರುವ ರಥವನ್ನು ಭೀಮನಿಗೆ ನೀಡಿದನು. ಭೀಮನು ಶ್ರೀಕೃಷ್ಣನಿಗೆ ನೀಡಿದನು. ಈ ಗದೆಯನ್ನು ಉಪೇಂದ್ರನು ಇಂದ್ರನಿಗೆ ನೀಡಿದ್ದನು. ಅವನು ವಸುವಿಗೆ ನೀಡಿದನು. ಇದರಿಂದ ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದರಿಂದಲೇ ಉಪರಿಚರವೆಂದು ಹೆಸರು ಬಂದಿತ್ತು. ಇವನ ಮಗನೇ ಬೃಹದ್ರಥನು. ಬೃಹದ್ರಥನ ಮಗ ಜರಾಸಂಧನಿಗೂ ಈ ರಥ ಬಂದಿತ್ತು. ಇದು ಸಹದೇವನು ಭೀಮನಿಗೆ ನೀಡಿದ. ಭೀಮನು ಶ್ರೀಕೃಷ್ಣನಿಗೆ ಅರ್ಪಿಸಿದನು.

ಈ ಸುರಥನಿಂದ ವಿಕ್ರಾಂತನೂ, ವಿಕ್ರಾಂತನಿಂದ ವಿದೂರಥನೂ, ವಿದೂರಥನಿಂದ ಋಕ್ಷನೆಂಬ ಮಗನೂ ಹುಟ್ಟಿದನು. ಈ ಋಕ್ಷನು ಧೂಮಿನಿಯ ಪುತ್ರ ಋಕ್ಷನಿಗಿಂತ ಭಿನ್ನನು.

## ಜನಮೇಜಯ – ಪರೀಕ್ಷಿತ್ ಇಬ್ಬರು

**ದ್ವಾವೃಕ್ಷೌ ತವ ವಂಶೇಽಸ್ಮಿನ್ ದ್ವಾವೇವ ತು ಪರೀಕ್ಷಿತೌ ।**
**ಭೀಮಸೇನಾಸ್ತ್ರಯೋ ರಾಜನ್ ದ್ವಾವೇವ ಜನಮೇಜಯೌ ॥ 42 ॥**

ಜನಮೇಜಯನೇ, ನಿಮ್ಮ ಕುಲದಲ್ಲಿ ಇಬ್ಬರು ಋಕ್ಷರು, ಇಬ್ಬರು ಪರೀಕ್ಷಿತರು, ಮೂವರು ಭೀಮಸೇನರು, ಇಬ್ಬರು ಜನಮೇಜಯರು.

ಈ ಎರಡನೆ ಋಕ್ಷನಿಗೆ ಭೀಮಸೇನನೆಂಬ ಮಗನಿದ್ದನು. ಇವನಿಗೆ ಪ್ರತೀಪ ರಾಜನು ಪುತ್ರನಾದನು. ಪ್ರತೀಪನಿಗೆ **ಶಂತನು**[7], ದೇವಾಪಿ, ಬಾಹ್ಲೀಕರೆಂಬ ಮೂವರು ಮಕ್ಕಳಾದರು. ಜನಮೇಜಯನೇ, ನೀನು ಶಂತನುವಿನ ವಂಶದಲ್ಲಿ ಜನಿಸಿರುವೆ.

## ಬಾಹ್ಲೀಕನಿಗೆ ಪಂಜಾಬುದೇಶ

**ಬಾಹ್ಲಿಕಸ್ಯ ತು ರಾಜ್ಯಂ ವೈ ಸಪ್ತವಾಹ್ಯಂ ನರೇಶ್ವರ ।**
**ಬಾಹ್ಲಿಕಸ್ಯ ಸುತಶ್ಚೈವ ಸೋಮದತ್ತೋ ಮಹಾಯಶಃ ॥ 43 ॥**

---

7. ಶಂತನು :
ಪ್ರತೀಪನಿಗೆ ಸುನಂದಿ ಎಂಬುವಳಲ್ಲಿ ಹುಟ್ಟಿದವನು. ***ಶಾಂತಿಂ ತನೋತೀತಿ ಶಂತನುಃ ಶಂತನೋತೀತಿ ಶಂತನುಃ*** – ಬ್ರಹ್ಮದೇವರ ಮೇಲೆ ಸಮುದ್ರದ ಉಪ್ಪು ನೀರನ್ನು ಎರಚಿ ಅಭಿಷೇಕ ಮಾಡಿದ್ದರಿಂದ ಮಹಾಭಿಷಕ್ ಎಂದು, ಶಾಂತನಾಗು ಎಂದದ್ದರಿಂದ ಶಾಂತತನುವಾಗಿ ಶಂತನು ಎಂದೂ ಹೆಸರಾಯಿತು. ಶಂತನುವು ಯಾವುದೇ ವಯೋವೃದ್ಧನನ್ನು ತನ್ನ ಕೈಯಿಗಳಿಂದ ಮುಟ್ಟಿದ ಕೂಡಲೇ ಕಂಠದಲ್ಲಿರುವ ಘುರು ಘುರು ಶಬ್ಧ ಹೋಗಿ ಯುವಕನಾಗುತ್ತಾನೆ.
**ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಯೌವನ ಮೇಷ್ಯತಿ ।** *–ಭಾಗ–9/19/14*
ವರುಣನು ಮಹಾಭಿಷಕ್‌ತ್ವ ಹೊಂದಿ ಆ ದೇಹವನ್ನು ಬಿಟ್ಟು ಮೂಲ ರೂಪ ಸೇರದೆ ಆ ದೇಹದಿಂದಲೇ ಸತ್ಯಲೋಕಕ್ಕೆ ಹೋದ. ಅಲ್ಲಿ ರಾಗದಿಂದ ಗಂಗೆಯನ್ನು ನೋಡಿ ಶಾಪ ಪಡೆದು ಶಂತನುವಾಗಿ ಜನಿಸಿದ.

ಬಾಹ್ಲೀಕನ ರಾಜ್ಯವು ಮಂತ್ರಿಯೆ ಮೊದಲಾದ ಸಪ್ತಾಂಗಗಳಿಂದ ನಡೆಸಲ್ಪಡುತ್ತಿತ್ತು. ಬಾಹ್ಲೀಕನು ಪುತ್ರಿಕ ಪುತ್ರ ಧರ್ಮನಿಂದ ಬಾಹ್ಲೀಕ ದೇಶಕ್ಕೆ ರಾಜನಾದನು. ಬಾಹ್ಲೀಕನು ಪೂರ್ವದಲ್ಲಿ ಪ್ರಹ್ಲಾದರಾಜನು. ಬಾಹ್ಲೀಕನಿಗೆ ಸೋಮದತ್ತನು ಮಗನು. ಇವನು ಪತ್ರತಾಪವೆಂಬ ರುದ್ರಾಂಶನು. ಸೋಮದತ್ತನಿಗೆ ಅಜೈಕಪಾತ್, ಅಹಿರ್ಬುಧ್ನಿ, ವಿರೂಪಾಕ್ಷರೆಂಬ ರುದ್ರರು ಭೂರಿ, ಭೂರಿ ಶ್ರವಸ್ ಶಲರೆಂದು ಮಕ್ಕಳಾದರು.

## ದೇವವ್ರತ - ಭೀಷ್ಮ

**ಶಂತನೋಃ ಸಂಪ್ರವಕ್ಷ್ಯಾಮಿ ಯತ್ರ ಜಾತೋಽಸಿ ಪಾರ್ಥಿವ ।**
**ಗಾಂಗಂ ದೇವವ್ರತಂ ನಾಮ ಪುತ್ರಂ ಸೋಽಜನಯತ್ ಪ್ರಭುಃ ॥ 44 ॥**

**ಸ ತು ಭೀಷ್ಮ ಇತಿ ಖ್ಯಾತಃ ಪಾಂಡವಾನಾಂ ಪಿತಾಮಹಃ ।**
**ಕಾಲೀ ವಿಚಿತ್ರ ವೀರ್ಯಂ ತು ಜನಯಾಮಾಸ ಭಾರತ ॥ 45 ॥**

ಶಂತನುವಿನ ವಂಶ ಹೇಳುವೆ ಕೇಳು, ನೀನೂ ಸಹ ಇದೇ ವಂಶದವನು. ಶಂತನುವು ದೇವ ನದಿಯಾದ ಗಂಗೆಯಲ್ಲಿ ದೇವವ್ರತ ಅಥವಾ ಭೀಷ್ಮನೆಂಬ ಸತ್ಯಸಂಧನಾದ ಸತ್ಪುತ್ರನನ್ನು ಪಡೆದನು, ಶಂತನುವಿಗೆ ಗಂಗೆಯು ಸ್ವರ್ಗ ಸೇರಿದ ಮೇಲೆ ಸತ್ಯವತಿ ಅಥವಾ ಕಾಳಿಯೆಂಬ ಎರಡನೆ ಪತ್ನಿಯಲ್ಲಿ ವಿಚಿತ್ರವೀರ್ಯ ಹಾಗೂ ಚಿತ್ರಾಂಗದನೆಂಬ ಇಬ್ಬರು ಮಕ್ಕಳಾದರು.

## ಧೃತರಾಷ್ಟ್ರ ಪಾಂಡು ವಿದುರ ಜನನ

**ಕೃಷ್ಣ ದ್ವೈಪಾಯನಶ್ಚೈವ ಕ್ಷೇತ್ರೇ ವೈಚಿತ್ರವೀರ್ಯಕೇ ।**
**ಧೃತರಾಷ್ಟ್ರಂ ಚ ಪಾಂಡುಂ ಚ ವಿದುರಂ ಚಾಪ್ಯಜೀಜನತ್ ॥ 46 ॥**

**ಧೃತರಾಷ್ಟ್ರಸ್ತು ಗಾಂಧಾರ್ಯಾಂ ಪುತ್ರಾನ್ ಉತ್ಪಾದಯತ್ ಶತಮ್ ।**
**ತೇಷಾಂ ದುರ್ಯೋಧನೋ ಶ್ರೇಷ್ಠಃ ಸರ್ವೇಷಾಮೇವ ಸ ಪ್ರಭುಃ ॥ 47 ॥**

ವಿಚಿತ್ರವೀರ್ಯನಿಗೆ ಅಂಬಾಲೆ-ಅಂಬಾಲಿಕೆಯೆಂಬ ಪತ್ನಿಯರಿದ್ದರು. ಕ್ಷಯರೋಗಕ್ಕೆ ವಿಚಿತ್ರವೀರ್ಯ ಬಲಿಯಾದ. ಸತ್ಯವತಿಯು ಕೃಷ್ಣದ್ವೈಪಾಯನರನ್ನು ಶರಣು ಹೊಂದಿದಳು. ವ್ಯಾಸರು ಅಂಬಾಲೆಯಲ್ಲಿ ತನ್ನ ಉಗ್ರರೂಪ ನೋಡಿ ನೇತ್ರವನ್ನು ಮುಚ್ಚಿದ್ದರಿಂದ ಕುರುಡನಿಂದ ಧೃತರಾಷ್ಟ್ರನನ್ನು, ಭಯದಿಂದ ಬಿಳಿಚಿಕೊಂಡ ಅಂಬಾಲಿಕೆಯಲ್ಲಿ ಕೇತಕೀ

ಹೂವಿನ ಧೂಳಿನಂತೆ ಬಿಳಿಯಾದ ಪಾಂಡುರಾಜನನ್ನು ನಿಯೋಗ ಪದ್ಧತಿಯಿಂದ ಹುಟ್ಟಿಸಿದರು. ಇಬ್ಬರು ಮಕ್ಕಳು ಹೀಗೆ ಊನಾಂಗರಾದ್ದರಿಂದ ಸರ್ವಾಂಗ ಸುಂದರ ಬೇಕೆಂದು ಕೇಳಿದಾಗ ಅಂಬಾಲೆಯು ಭಯದಿಂದ ತಾನು ಹೋಗದೆ ಭಕ್ತಳಾದ ದಾಸಿಯನ್ನು ಕಳಿಸಿದಾಗ, ವ್ಯಾಸರಿಂದ ದಾಸಿಯಲ್ಲಿ ಜನಿಸಿದವನೇ 'ವಿದುರ'. ಮಾಂಡವ್ಯ ಶಾಪದಿಂದಾಗಿ ಶೂದ್ರ ಯೋನಿಯಲ್ಲಿ ಹುಟ್ಟಿದ ಶೂದ್ರ ಸ್ವಭಾವವಿಲ್ಲದ ಯಮಧರ್ಮನೆ ಇವನು.

ಧೃತರಾಷ್ಟ್ರನು ಗಾಂಧಾರರಾಜನ ಸುಬಲನ ಹಿರಿಯ ಮಗಳಾದ **ಗಾಂಧಾರಿ**[8]ಯನ್ನು ವಿವಾಹವಾದನು. ಅವಳಲ್ಲಿ ಕಲಿಯ ಅವತಾರನಾದ ದುರ್ಯೋಧನನೆ ಪ್ರಧಾನರಾದ ನೂರು ಮಂದಿ ಮಕ್ಕಳಾದರು.

## ಭೀಮಾರ್ಜುನ ಜನನ

**ಪಾಂಡೋಃ ಧನಂಜಯಃ ಪುತ್ರಃ ಸೌಭದ್ರಸ್ತಸ್ಯ ಚಾತ್ಮಜಃ ।**
**ಅಭಿಮನ್ಯೋಃ ಪರೀಕ್ಷಿತ್ ತು ಪಿತಾ ತವ ಜನೇಶ್ವರ ॥ 48 ॥**
**ಏಷ ತೇ ಪೌರವೋ ವಂಶಃ ಯತ್ರ ಜಾತೋಽಸಿ ಪಾರ್ಥಿವ ॥ 49 ॥**

ಪಾಂಡುರಾಜನಿಗೆ ಧರ್ಮ, ವಾಯು, ಇಂದ್ರರ ಅಂಶವುಳ್ಳ ಯುಧಿಷ್ಠಿರ, ಭೀಮಸೇನ, ಅರ್ಜುನರೆಂಬ ಮಕ್ಕಳು ಮಂತ್ರ ಬಲದಿಂದ ಆದರು. ಮಾದ್ರಿಗೆ

---

8. **ಗಾಂಧಾರೀ :**

ಗಾಂಧಾರಿಯು ಮೂಲದಲ್ಲಿ ಮತಿಯೆಂಬುವಳು. ಕುಂತಿ ಹಾಗೂ ಮಾದ್ರಿಯರು ಸಿದ್ಧಿ, ಧೃತಿಯೆಂಬ ದೇವಿಯರು. ಪಾಂಡುರಾಜನಿಗೆ ಪೂರ್ವಜನ್ಮದಲ್ಲಿಯೂ ಇವನ ಪತ್ನಿಯರೇ. ಅರಿಷ್ಟಾಪುತ್ರನಾದ ಧೃತರಾಷ್ಟ್ರ ಅಥವಾ ಹಂಸನೆ ಧೃತರಾಷ್ಟ್ರ.

**ಅರಿಷ್ಟಾಯಾಸ್ತು ಯಃ ಪುತ್ರಃ ಹಂಸ ಇತ್ಯಭಿವಿಶ್ರುತಃ ।**

ಗಾಂಧಾರಿಗೆ ನೂರು ಮಕ್ಕಳಾಗುವರೆಂಬ ಈಶ್ವರನ ವರವಿತ್ತು.

**ಗಾಂಧಾರೀ ಕಿಲ ಪುತ್ರಾಣಾಂ ಶತಂ ಲೇಭೇ ವರಂ ಶುಭಮ್ ।**

ಭೀಷ್ಮನು ಅಂಧನಾದ ಧೃತರಾಷ್ಟ್ರನನ್ನು ತನಗೆ ವಿವಾಹ ಮಾಡುವರೆಂದು ತಿಳಿದ ಕೂಡಲೇ ರಾದ್ಧಾಂತ ಮಾಡದೆ ತಾನೂ ಕಣ್ಣಿಗೆ ನಾಲ್ಕು ಮಡಿಕೆ ವಸ್ತ್ರದಿಂದ ವೇಷ್ಟಿಸಿಕೊಂಡೆ ಹಸೇಮಣೆ ಹತ್ತಿದಳು.

**ತತಃ ಸಾ ಪಟ್ಟ ಮಾದಾಯ ಕೃತ್ವಾ ಬಹುಗುಣಂ ತದಾ ।**
**ಬಬಂಧ ನೇತ್ರೇ ಸ್ವೇ ರಾಜನ್ ಪತಿವ್ರತ ಪರಾಯಣಾ ॥**

ಅಶ್ವಿನಿಗಳ ಅನುಗ್ರಹದಿಂದಾಗಿ ನಕುಲ– ಸಹದೇವರೆಂಬ ಅವಳ ಮಕ್ಕಳು ಜನಿಸಿದರು. ಹೀಗೆ ಪಂಚಪಾಂಡವರಾದರು. ಅರ್ಜುನನಿಗೆ ಸುಭದ್ರೆಯಲ್ಲಿ ಅಭಿಮನ್ಯುವು ಜನಿಸಿದನು. ಅಭಿಮನ್ಯುವಿಗೆ ಪರೀಕ್ಷಿತ್ ರಾಜನು ಹುಟ್ಟಿದನು. ಇವನೇ ನಿನಗೆ ತಂದೆಯು. ಇವಿಷ್ಟು ರಾಜರು ಪೂರುವಂಶದವರು.

### ತುರ್ವಸು ವಂಶ ನಿರೂಪಣೆ

**ಸುತಸ್ತು ತುರ್ವಸೋಃ ವಹ್ನಿಃ ವಹ್ನೇಃ ಗೋಭಾನುರಾತ್ಮಜಃ ।**
**ಗೋಭಾನೋಸ್ತು ಸುತೋ ರಾಜಾ ತ್ರೈಸಾನುಃ ಅಪರಾಜಿತಃ ॥ 50 ॥**
**ಕರಂಧಮಸ್ತು ತ್ರೈ ಸಾನೋಃ ಮರುತ್ ತಸ್ಯ ಚಾತ್ಮಜಃ ।**
**ಅನಪತ್ಯೋऽಭವದ್ ರಾಜಾ ಯಜ್ವಾ ವಿಪುಲ ದಕ್ಷಿಣಃ ॥ 51 ॥**

ಪೂರು ರಾಜನ ಸಹೋದರ ಯಯಾತಿ ಪುತ್ರ ತುರ್ವಸುವಿನ ವಂಶದಲ್ಲಿ ವಹ್ನಿಯು. ವಹ್ನಿಗೆ ಗೋಭಾನುವು. ಇವನಿಗೆ ತ್ರೈಸಾನುವು–ತ್ರೈಸಾನುವಿಗೆ ಕರಂಧಮನೂ – ಇವನಿಗೆ ಮರುತ್ ರಾಜನು ಹುಟ್ಟಿದರು. ಅವಿಕ್ಷಿತ ರಾಜನ ಮಗ ಮರುತ್ ಬೇರೆ. ಈ ಮರುತ್ತನಿಗೆ ಸಂತಾನವಿರಲಿಲ್ಲ. ಅದಕ್ಕಾಗಿ ಬಹುದಕ್ಷಿಣಾಕವಾದ ಯಾಗಗಳನ್ನು ಮಾಡಿದನು. ಇದರಿಂದಾಗಿ ಮರುತ್‌ನಿಗೆ 'ಸಂಮತಾ' ಎಂಬ ಪುತ್ರಿಯಾದಳು. ಈ ತನ್ನ ಮಗಳನ್ನೆ ಯಜ್ಞದ ದಕ್ಷಿಣೆಯನ್ನಾಗಿ ಪುರೋಹಿತ ಸಂವರ್ತನಿಗೆ ದಾನ ಮಾಡಿದ ದಾನಿ. ಸಂವರ್ತನಾದರೂ ಈ ರಾಜಕುಮಾರಿಯನ್ನು ಪೂರುವಂಶದ ಘೋರನಿಗೆ ವಿವಾಹ ಮಾಡಿಕೊಟ್ಟನು. ಹೀಗೆ ತುರ್ವಸು ವಂಶವು ಯಯಾತಿಯ ಶಾಪದಿಂದಾಗಿ ಪೂರುವಿನ ವಂಶದಲ್ಲಿಯೇ ಲೀನವಾಗಿ ಹೋಯಿತು.

**ದುಷ್ಯಂತಸ್ಯ ತು ದಾಯಾದಃ ಕರುತ್ಥಾಮಃ ಪ್ರಜೇಶ್ವರಃ ।**
**ಕರುತ್ಥಾಮಾತ್ ತಥಾऽऽಕ್ರೀಡಃ ಚತ್ವಾರಸ್ತಸ್ಯ ಚಾತ್ಮಜಾಃ ॥ 52 ॥**
**ಪಾಂಡ್ಯಶ್ಚ ಕೇರಲಶ್ಚೈವ ಕೋಲಶ್ಚೋಲಾಃ ಸಕೇರಲಾಃ ।**

ದುಷ್ಯಂತನಿಗೆ ಶಕುಂತಲೆಯಲ್ಲದೆ ಮತ್ತೊಬ್ಬ ಪತ್ನಿಯಲ್ಲಿ ಕುರುತ್ಥಾಮನು ಜನಿಸಿದನು. ಇವನಿಗೆ ಆಕ್ರೀಡನೂ. ಇವನಿಗೆ ಪಾಂಡ್ಯ, ಕೇರಲ, ಕೋಸಲ, ಚೋಲರೆಂಬ ನಾಲ್ಕು ಮಕ್ಕಳಾದರು. ಅವರ ಹೆಸರಿನ ದೇಶಗಳು ಪ್ರಸಿದ್ಧವಾಗಿದೆ.

## ದ್ರುಹ್ಯು ವಂಶ – ಗಾಂಧಾರಾಶ್ವಗಳು

**ದ್ರುಹ್ಯೋಶ್ಚ ತನಯೋ ರಾಜನ್ ಬಭ್ರುಃ ಸೇತುಶ್ಚ ಪಾರ್ಥಿವಃ ।**
**ಅಂಗಾರಸೇತುಃ ತತ್ಪುತ್ರೋ ಮರುತಾಂ ಪತಿರುಚ್ಯತೇ ॥ 53 ॥**
**ಯೌವನಾಶ್ವೇನ ಸಮರೇ ಕೃಚ್ಛ್ರೇಣ ನಿಹತೋ ಬಲೀ ॥ 54 ॥**
**ಅಂಗಾರಸ್ಯ ತು ದಾಯಾದಃ ಗಾಂಧಾರೋ ನಾಮ ಭಾರತ ।**
**ಖ್ಯಾಯತೇ ತಸ್ಯ ನಾಮ್ನಾ ವೈ ಗಾಂಧಾರವಿಷಯೋ ಮಹಾನ್ ॥ 55 ॥**
**ಗಾಂಧಾರ ದೇಶಜಾಶ್ಚೈವ ತುರಗಾ ವಾಜಿನಾಂ ವರಾಃ ॥ 56 ॥**

ಯಯಾತಿ ರಾಜನ ಮತ್ತೊಬ್ಬ ಮಗನಾದ ದ್ರುಹ್ಯುವಿಗೆ ಬಭ್ರುವು – ಬಭ್ರುವಿಗೆ **ಅಂಗಾರ**[9] ಸೇತುವು. ಅಂಗಾರ ಸೇತುವು ಯುವನಾಶ್ವ ರಾಜನೊಂದಿಗೆ ಹದಿನಾಲ್ಕು ತಿಂಗಳು ಯುದ್ಧ ಮಾಡಿ ಕೊನೆಗೆ ಸೋತು ಮಡಿದನು. ಅಂಗಾರ ಕೇತುವಿಗೆ ಗಾಂಧಾರನೆಂಬ ಪುತ್ರನು. ಇವನಿಂದಲೇ ಈ ದೇಶಕ್ಕೆ ಗಾಂಧಾರ ದೇಶವೆಂದಾಯಿತು. ಗಾಂಧಾರ ದೇಶದ ಕುದುರೆಗಳು ಜಗತ್ಪ್ರಸಿದ್ಧವಾಗಿವೆ.

ಯಯಾತಿಯ ಮತ್ತೊಬ್ಬ ಪುತ್ರ ಅನುವಿಗೆ ಧರ್ಮ – ಶ್ರುತ – ದುದುಹ – ಪ್ರಜಾತ – ಸುಚೇತ ಎಂಬ ಮಕ್ಕಳಾದರು. ಹೀಗೆ ಯಯಾತಿ ಪುತ್ರರ ವಂಶೋಪ ವಂಶವು ವಿಸ್ತೃತವಾದವು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಯಯಾತಿ ವಂಶವೆಂಬಲ್ಲಿ
ಮುವತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

---

9. ಅಂಗಾರ :
ಅಂಗಾರಸೇತುವನ್ನು ಕೇತು ಎಂದು ಕರೆಯಲಾಗಿದೆ. ಇವನಿಗೆ ಗಾಂಧಾರ ಮಗನೆಂದು ಹೇಳಿದೆ. ಆದರೆ ಗಾಂಧಾರ ಮತ್ತು ಸೇತುವಿನ ಮಧ್ಯೆ ಆರಬ್ಧನನ್ನು ಇಟ್ಟುಕೊಳ್ಳಬೇಕು. ಗಾಂಧಾರನಿಗೆ ಧರ್ಮನೂ, ಧರ್ಮನಿಗೆ ಧೃತನೂ, ಕರ್ದಮನೂ, ಪ್ರಚೇತನೂ ಇವನಿಂದ ನೂರು ಮಂದಿ ಪ್ರಾಚೇತಸರು ಹುಟ್ಟಿದರು. ಇವರೆಲ್ಲರೂ ಮ್ಲೇಚರಿಗೂ ಅಧಿಪತಿಗಳಾಗಿ ಮೆರೆದರು.



# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ಯದು ವಂಶ ನಿರೂಪಣೆ

**ಬಭೂವುಸ್ತು ಯದೋಃ ಪುತ್ರಾಃ ಪಂಚ ದೇವಸುತೋಪಮಾಃ ।**
**ಸಹಸ್ರದಃ ಪಯೋದಶ್ಚ ಕ್ರೋಷ್ಟಾ ನೀಲೋಽಂಜಿಕಸ್ತಥಾ ॥ 1 ॥**
**ಸಹಸ್ರದಸ್ಯ ದಾಯಾದಾಃ ತ್ರಯಃ ಪರಮಧಾರ್ಮಿಕಾಃ ।**
**ಹೈಹಯಶ್ಚ ಹಯಶ್ಚೈವ ರಾಜನ್! ವೇಣುಹಯಸ್ತಥಾ ॥ 2 ॥**
**ಹೈಹಯಸ್ಯಾಭವತ್ ಪುತ್ರೋ ಧರ್ಮನೇತ್ರ ಇತಿ ಸ್ಮೃತಃ ।**
**ಕೃತವೀರ್ಯಃ ಕೃತೌಜಾಶ್ಚ ಕೃತಕರ್ಮಾ ತಥೈವ ಚ ।**
**ಕೃತಾಗ್ನಿಸ್ತು ಚತುರ್ಥೋಽಭೂತ್ ಕೃತವೀರ್ಯಾತ್ ತಥಾರ್ಜುನಃ॥ 3 ॥**

ಯದುರಾಜನಿಗೆ ಸಹಸ್ರದ/ಸಹಸ್ರಾದ/ಸಹಸ್ರಜಿತ್ ಎಂಬ ಹೆಸರುಗಳುಳ್ಳ ಮಗನೂ ಹಾಗೂ ಕ್ರೋಷ್ಟಾ, ನೀಲ, ಅಂಜಿಕ, ಪಯೋದರೆಂಬ ಐದು ಮಂದಿ ದೇವತೆಗಳ ಮಕ್ಕಳಂತಿರುವ ಐದು ಮಂದಿ ಪುತ್ರರಾದರು. ಧರ್ಮಿಷ್ಠರೂ, ಪೂಜ್ಯರು ಆಗಿದ್ದರು. ಯದುವಿನ ಹಿರಿಯ ಮಗ ಸಹಸ್ರಾದನಿಗೆ ಹೈಹಯ, ಹಯ, ವೇಣುಹಯ ಸಹಸ್ರಾದನಿಗೆ ಶತಜಿತ್‌ನೂ, ಅವನಿಗೆ ಹೈಹಯಾದಿಗಳೆಂದು ತಿಳಯಬೇಕು.

ಹೈಹಯನ ಮಗನೇ ಧರ್ಮನೇತ್ರ. ಇವನಿಗೆ ಕಾರ್ತರಾಜನೂ, ಇವನಿಗೆ ಸಾಹಂಜ ಅಥವಾ ಸೋಹಂಜಿ ಅಥವಾ ಸಾಹುಜ ಮಗನಾದನು. ಸಾಹಂಜನು ಸಾಹಂಜೀ ಪಟ್ಟಣ ನಿರ್ಮಾಣ ಮಾಡಿ ವಾಸಿಸುತ್ತಿದ್ದನು. ಸೋಹಂಜಿಯಿಂದ ಮಹಿಷ್ಮಾನ್ ಇವನಿಂದ ಭದ್ರಸೇಣ್ಯ, ಇವನಿಗೆ

ದುರ್ಮದನು ದು'ರ್ಮದನಿಗೆ ಧನಕ ಅಥವಾ ಕನಕರಾಜನೂ ಹುಟ್ಟಿದರು. ಕನಕ ಅಥವಾ ಧನಕನಿಗೆ ಕೃತವೀರ್ಯ, ಕೃತಧರ್ಮ, ಕೃತೌಜಸ, ಕೃತಾಗ್ನಿಯೆಂಬ ನಾಲ್ಕು ಮಂದಿ ಮಕ್ಕಳು. ಕೃತವೀರ್ಯನೆ ಮಗನೆ ಕಾರ್ತವೀರ್ಯಾರ್ಜುನನು.

### ಕಾರ್ತವೀರ್ಯಾರ್ಜುನ

**ಯಸ್ತು ಬಾಹು ಸಹಸ್ರೇಣ ಸಪ್ತದ್ವೀಪೇಽಶ್ವರೋಽಭವತ್ ।**
**ಜಿಗಾಯ ಪೃಥಿವೀಮೇಕೋ ರಥೇನಾದಿತ್ಯವರ್ಚಸಾ ॥ 4 ॥**

**ಸ ಹಿ ವರ್ಷಾಯುತಂ ತಪ್ತ್ವಾ ತಪಃ ಪರಮ ದುಶ್ಚರಮ್ ।**
**ದತ್ತಮಾರಾಧಯಮಾಸ ಕಾರ್ತವೀರ್ಯೋಽತ್ರಿ ಸಂಭವಮ್ ॥ 5 ॥**

ಕಾರ್ತವೀರ್ಯಾರ್ಜುನನಿಗೆ ಸಾವಿರ ತೋಳುಗಳಿದ್ದವು. ಸೂರ್ಯನಂತೆ ಪ್ರಕಾಶಮಾನವಾದ ರಥ. ಅಪ್ರತಿಮ ತೇಜಸ್ಸು -ಪ್ರತಾಪಾದಿಗಳು ಅವನಲ್ಲಿದ್ದವು. ಶ್ರೀವಿಷ್ಣುವಿನ ವಿಶೇಷಾವೇಶದಿಂದಾಗಿ ಚತುಸ್ಸಾಗರ ಪರ್ಯಂತವಾದ ಭೂಮಂಡಲವನ್ನೆ ಗೆದ್ದು, ಸಪ್ತದ್ವೀಪಗಳಿಗೂ ಏಕಛತ್ರಾಧಿಪತಿಯಾಗಿದ್ದನು.

ಕಾರ್ತವೀರ್ಯಾರ್ಜುನನು ಹತ್ತು ಸಾವಿರ ವರ್ಷಗಳವರೆಗೆ ಘೋರ ತಪಸ್ಸನ್ನಾಚರಿಸಿ ಅತ್ರಿಮುನಿಯ ಮಗನಾಗಿ ಅವತರಿಸಿದ ದತ್ತಾತ್ರೇಯನನ್ನು ಮೆಚ್ಚಿಸಿಕೊಂಡು ನಾಲ್ಕು ವರಗಳನ್ನು ಪಡೆದಿದ್ದನು.

**ಪೂರ್ವಂ ಬಾಹುಸಹಸ್ರಂ ತು ಪ್ರಾರ್ಥಿತಂ ಸಮಹದ್ವರಮ್ ।**
**ಅಧರ್ಮೇ ವರ್ತಮಾನಸ್ಯ ಸದ್ಭಿಃ ತತ್ರ ನಿವಾರಣಮ್ ॥ 6 ॥**
**ಉಗ್ರೇಣ ಪೃಥಿವೀಂ ಜಿತ್ವಾ ಸ್ವಧರ್ಮೇಣಾನುರಂಜನಮ್ ।**
**ಸಂಗ್ರಾಮೇ ವರ್ತಮಾನಸ್ಯ ವಧಂ ಚಾಪ್ಯಧಿಕಾದ್ ರಣೇ ॥ 7 ॥**

ದತ್ತಾತ್ರೇಯನು ಕಾರ್ತವೀರ್ಯಾರ್ಜುನನಿಗೆ ನಾಲ್ಕು ವರಗಳನ್ನು ದಯಪಾಲಿಸಿದ್ದನು. 1) ಕಾರ್ತವೀರ್ಯಾರ್ಜುನನಿಗೆ ಬೇಕೆಂದಾಗ ಸಾವಿರ ತೋಳುಗಳು ಮೂಡುವುದು, 2) ಅರ್ಜುನನು ಅಧರ್ಮದಲ್ಲಿ ತೊಡಗಿದಾಗ ಯಾರಾದರೂ ದೊಡ್ಡವರು ಬಂದು ನನ್ನನ್ನು ಅಧರ್ಮ ಮಾರ್ಗದಿಂದ

ತಿರುಗಿಸಬೇಕು. 3) ಆಖಂಡ ಭೂಮಂಡಲವನ್ನೆಲ್ಲ ನನ್ನ ಸ್ವಂತ ಶಕ್ತಿಯಿಂದ ಗೆದ್ದು ಪ್ರಜೆಗಳನ್ನು ಸಂತೋಷಪಡಿಸಬೇಕು. 4) ಯುದ್ಧದಲ್ಲಿ ಸಾವಿರಾರು ವೀರಾಗ್ರಣಿಗಳನ್ನು ಕೊಂದು ಕೊನೆಯಲ್ಲಿ ನನಗಿಂತ ಬಲಿಷ್ಠನಾದ ಮಹಾಪುರುಷನಿಂದಲೇ ನಾನು ಮರಣ ಹೊಂದಬೇಕು. ಇದೇ ರೀತಿ ಸ್ವಧರ್ಮನಿಷ್ಠೆ. ಅಧರ್ಮ ನಿವಾರಣೆ. ಧರ್ಮಾನುಸಾರ ಪ್ರಜಾಪಾಲನೆ, ವೈರಿಗಳಂದ ಅಪರಾಜಯಗಳನ್ನು ಹೊಂದಿದ್ದನು.

## ಏಳುನೂರು ಯಜ್ಞಾಚರಣೆ

ತಸ್ಯ ಬಾಹು ಸಹಸ್ರಂ ತು ಯುದ್ಧ್ಯತಃ ಕಿಲ ಭಾರತ ।
ಯೋಗಾದ್ ಯೋಗೇಶ್ವರಸ್ಯೇವ ಪ್ರಾದುರ್ಭವತಿ ಮಾಯಯಾ ॥ 8 ॥

ಸಸಮುದ್ರಾ ಸನಗರಾ ಉಗ್ರೇಣ ವಿಧಿನಾ ಜಿತಾ ।
ತೇನ ಸಪ್ತಸು ದ್ವೀಪೇಷು ಸಪ್ತ ಯಜ್ಞಶತಾನಿ ಚ ।
ಸರ್ವೇ ಯಜ್ಞಾ ಮಹಾಬಾಹೋಃ ತಸ್ಯಾಸನ್ ಭೂರಿದಕ್ಷಿಣಾಃ ॥ 9 ॥

ಸರ್ವೇ ಕಾಂಚನ ಯೂಪಾಶ್ಚ ಸರ್ವೇ ಕಾಂಚನ ವೇದಯಃ ।
ಗಂಧರ್ವೈಃ ಅಪ್ಸರೋಭಿಶ್ಚ ನಿತ್ಯಮೇವೋಪಶೋಭಿತಾಃ ॥ 10 ॥

ಶ್ರೀಹರಿಯ ವರದಂತೆ ಯುದ್ಧಕ್ಕೆ ಹೊರಟ ಕೂಡಲೇ ಸಂಕಲ್ಪ ಮಾತ್ರದಿಂದಲೇ ಸಾವಿರ ತೋಳುಗಳು ಬರುತ್ತಿದ್ದವು. ಸಪ್ತ ದ್ವೀಪವತಿಯಾದ ಸಮುದ್ರ ವಲಯಾಂಕಿತ ಭೂ ಮಂಡಲವನ್ನೆಲ್ಲ ವಶಪಡಿಸಿಕೊಂಡು, ಏಳೂ ದೀಪಗಳಲ್ಲಿ ಏಳೇಳು ನೂರು ವಿಪುಲ ದಕ್ಷಿಣೆ ನೀಡಿ ಯಾಗ ಮಾಡಿದನು. ಅವನ ಯಜ್ಞಗಳಲ್ಲಿ ವೇದಿಕೆಗಳೆಲ್ಲ ಕಾಂಚನಮಯವಾಗಿತ್ತು. ಯಜ್ಞ ಸ್ತಂಭವೂ ಸಹ ಸುವರ್ಣಮಯವಾಗಿತ್ತು. ಭೂರಿ ದಕ್ಷಿಣಾಕವಾದ ಆ ಯಜ್ಞವು ಪ್ರೇಕ್ಷಣೀಯವಾದ್ದರಿಂದ ಅವುಗಳನ್ನು ನೋಡಲೆಂದೇ ದೇವಗಂಧರ್ವರೆಲ್ಲ ವಿಮಾನಾವಳಿಗಳಲ್ಲಿ ಬಂದು ನೆರೆದಿದ್ದರು. ವರೀದಾಸಾತ್ಮಜನಾದ ಉಪಬರ್ಹಣನೆಂಬ ನಾರದರು ಅವನ ಕೀರ್ತಿಗಾಥೆಗಳನ್ನು ಬಾಯಿ ತುಂಬಾ ಹೋಗಳದ್ದಾರೆ.

## ಗತಂ ನಷ್ಟಂ ಚ ಲಭ್ಯತೇ

ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪ್ರಾರ್ಥಿವಾಃ ।
ಯಜ್ಞೈಃ ದಾನೈಃ ತಪೋಭಿರ್ವಾ ವಿಕ್ರಮೇಣ ಶ್ರುತೇನ ಚ ॥ 11 ॥

**ಸ ಹಿ ಸಪ್ತಸು ದ್ವೀಪೇಷು ಖಡ್ಗೀ ಚರ್ಮೀ ಶರಾಸನೀ ।**
**ರಥೀ ದ್ವೀಪಾನನುಚರನ್ ಯೋಗೀ ಸಂದೃಶ್ಯತೇ ನೃಭಿಃ ॥ 12 ॥**
**ಅನಷ್ಟ ದ್ರವ್ಯತಾ ಚೈವ ನ ಶೋಕೋ ನ ಚ ವಿಭ್ರಮಃ ।**
**ಪಂಚಾಶೀತಿ ಸಹಸ್ರಾಣಿ ವರ್ಷಾಣಾಂ ವೈ ನರಾಧಿಪಃ ॥ 13 ॥**
**ಸ ಸರ್ವರತ್ನಭಾಕ್ ಸಮ್ರಾಟ್ ಚಕ್ರವರ್ತೀ ಬಭೂವ ಹ ॥ 14 ॥**

ಕಾರ್ತವೀರ್ಯಾರ್ಜುನನಷ್ಟು ಯಜ್ಞ ಮಾಡಿದವರೇ ಇಲ್ಲ. ಅವನಷ್ಟು ದಾನ ಮಾಡಿದ ರಾಜರನ್ನು ನಾವೆಲ್ಲಾ ಕಾಣೆವು. ತಪಸ್ಸು-ಪರಾಕ್ರಮಗಳಿಗೆ ಸರಿಸಾಟಿಯಿಲ್ಲ. ಈ ಲೋಕಗಳಲ್ಲಿ ಯಾವ ರಾಜರೂ ಕಾರ್ತವೀರ್ಯನು ಹೊಂದಿದ ಸ್ಥಿತಿಗತಿ ಹೊಂದಲಾರರು. ತನ್ನ ಯೋಗಶಕ್ತಿಯಿಂದ ಬಿರುಗಾಳಿಯಂತೆ ಒಮ್ಮೆಲೆ ಏಳೂ ದ್ವೀಪಗಳಲ್ಲಿಯೂ ಧನುರ್ಬಾಣಪಾಣಿ-ಯಾಗಿ ಕಾಣಿಸಿಕೊಳ್ಳುತ್ತಾನೆ. ಅವನ ರಾಜ್ಯದಲ್ಲಿ ಕಳ್ಳತನ ಮೊದಲಾದ ಯಾವುದೇ ಅಹಿತಕರ ಘಟನೆ ನಡೆಯಲು ಬಿಡುವುದಿಲ್ಲ. ಮಾಡುವ ಧೈರ್ಯವೂ ಯಾರಿಗೂ ಇರುವುದಿಲ್ಲ. ಹೀಗೆ ಎಂಭತ್ತೈದು ಸಾವಿರ ವರ್ಷ ಚಕ್ರವರ್ತಿ ಪದವಿಯಲ್ಲಿದ್ದು ಆಳಿದನು.

ಕಾರ್ತವೀರ್ಯನೇ ದಿವ್ಯಶಕ್ತಿಯಿಂದ ರಾಜ್ಯವಾಳಿದನು. ರಾಜ್ಯದ ಪಶುಧನ ರಕ್ಷಿಸುತ್ತಿದ್ದನು. ಎಲ್ಲಾ ಕ್ಷೇತ್ರಗಳನ್ನು ತಾನೇ ಸ್ವಯಂ ಕ್ಷೇತ್ರಪಾಲಕನಾಗಿ ಕಾಯುತ್ತಿದ್ದನು. ಸರಿಯಾಗಿ ಮಳೆಯಾಗದಿದ್ದಾಗ ತನ್ನ ಯೋಗಶಕ್ತಿಯಿಂದ ತಾನೇ ಮೇಘರೂಪ ಪಡೆದು ಸಮೃದ್ಧವಾಗಿ ಮಳೆಗಳನ್ನು ಸುರಿಸುತ್ತಿದ್ದನು.

ಸಾವಿರ ಬಾಹುಗಳಿಂದ ಶೋಭಿಸುತ್ತಿರುವ ಅವನು ಸಾವಿರ ಕಿರಣಗಳ ಸೂರ್ಯನು ಶರದೃತುವಿನಲ್ಲಿ ಶೋಭಿಸುವಂತೆ ಶೋಭಿಸುತ್ತಿದ್ದನು.

**ತಸ್ಯ ಬಾಹುಸಹಸ್ರೇಣ ಕ್ಷುಭ್ಯಮಾಣೇ ಮಹೋದಧೌ ।**
**ಭಯಾನ್ನಿಲೀನಾ ನಿಶ್ಚೇಷ್ಟಾಃ ಪಾತಾಲಸ್ಥಾಃ ಮಹಾಸುರಾಃ ॥ 15 ॥**
**ಪ್ರಾವರ್ತಯತ್‌ಂತದಾ ರಾಜಾ ಸಹಸ್ರೇಣ ಚ ಬಾಹುನಾ ।**
**ದೇವಾಸುರ ಸಮಾಕ್ಷಿಪ್ತಃ ಕ್ಷೀರೋದಮಿವ ಪರ್ವತಃ ॥ 16 ॥**

ಅರ್ಜುನನು ತನ್ನ ಲಲನೆಯರೊಂದಿಗೆ ಜಲಕ್ರೀಡೆಯಾಡುತ್ತಿರುವಾಗ ನರ್ಮದಾ ನದಿಯ ನೀರೆಲ್ಲವೂ ಅವರುದ್ಧವಾಗುತ್ತಿತ್ತು. ಸಮುದ್ರಕ್ಕೆ ಇಳಿದಾಗ

ಸಾವಿರ ತೋಳುಗಳಿಂದ ತಡೆದು ಹಿಡಿದಾಗ ಭಯಂಕರ ಆರ್ಭಟ ಮಾಡುತ್ತಿದ್ದ ಸಾಗರ ನದಿ ತಟಾಕದಂತೆ ಸ್ತಬ್ಧವಾಗುತ್ತಿತ್ತು. ಒಮ್ಮೊಮ್ಮೆ ತನ್ನ ದೀರ್ಘ ತೋಳುಗಳಿಂದ ಸಮುದ್ರದ ಅಲೆಗಳನ್ನೆಲ್ಲ ಅಪ್ಪಳಿಸಿದಾಗ ಪಾತಾಳದಲ್ಲಿದ್ದ ದೈತ್ಯರೆಲ್ಲರೂ ಹೆದರಿ ಎಲ್ಲೆಲ್ಲೂ ಅಡಗಿಕೊಳ್ಳುತ್ತಿದ್ದರು. ಪಾತಾಳದಲ್ಲಿರುವ ಸರ್ಪಗಳಿಗೆಲ್ಲ ಭಯವೇರ್ಪಟ್ಟು ಮತ್ತೆ ಮಂದರ ಪರ್ವತ ತಂದಿಟ್ಟು ಸಮುದ್ರ ಮಥನವಾಗುವುದೇ ಎಂಬ ಭ್ರಾಂತಿವುಂಟಾಗುತ್ತಿತ್ತು.

## ರಾವಣನ ತೀಟೆಗೆ ಉತ್ತರ

**ಸ ವೈ ಬದ್ಧ್ವಾ ಧನುರ್ಜ್ಯಾಭಿಃ ಉತ್ಸಿಕ್ತಂ ಪಂಚಭಿಃ ಶರೈಃ ।**
**ಲಂಕೇಶಂ ಮೋಹಯಿತ್ವಾ ತು ಸಬಲಂ ರಾವಣಂ ಬಲಾತ್ ॥ 17 ॥**

**ನಿರ್ಜಿತ್ಯೇವ ತಮಾನೀಯ ಮಾಹಿಷ್ಮತ್ಯಾಂ ಬಬಂಧ ತಮ್ ।**
**ಮುಮೋಚ ರಕ್ಷಃ ಪೌಲಸ್ತ್ಯಂ ಪುಲಸ್ತ್ಯೇನಾನುಯಾಚಿತಃ ॥ 18 ॥**

ಕಾರ್ತವೀರ್ಯನು ಲಂಕೇಶ ರಾವಣನನ್ನು ಐದು ಬಾಣಗಳಿಂದ ಅವನ ಸೇನಾ ಪರಿವಾರದೊಂದಿಗೆ ಸೋಲಿಸಿ, ಅವನನ್ನು ಬಂಧಿಸಿ ಮಾಹಿಷ್ಮತೀ ನಗರದಲ್ಲಿ ಕೈದಿಯನ್ನಾಗಿಟ್ಟಿದ್ದನು. ಈ ವಿಷಯ ತಿಳಿದು ಪುಲಸ್ತ್ಯರು ಕಾರ್ತವೀರ್ಯಾರ್ಜುನನ ಸಮೀಪ ಧಾವಿಸಿ ಬಂದು ತನ್ನ ಮೊಮ್ಮಗನನ್ನು ಬಿಡಬೇಕೆಂದು ಬೇಡಿದರು. ಅವನು ಅವರ ಪ್ರಾರ್ಥನೆ ಮನ್ನಿಸಿ ಕಳುಹಿಸಿಕೊಟ್ಟನು.

ಕಾರ್ತವೀರ್ಯನು ತನ್ನ ಸಾವಿರ ಬಾಹುಗಳಿಂದ ಧನುಷ್ಟೇಂಕಾರ ಮಾಡಿದನೆಂದರೆ ಪ್ರಲಯ ಕಾಲದ ಅಗ್ನಿಯೇ ತನ್ನ ಬಿಲ್ಲನ್ನು ಠೇಂಕರಿಸಿದಂತಿತ್ತು.

## ಪರಶುರಾಮನಿಂದ ತೋಳುಗಳ ಛೇದನ

**ಯಸ್ಯ ಬಾಹು ಸಹಸ್ರಸ್ಯ ಬಭೂವ ಜ್ಯಾತಲಸ್ವನಃ ।**
**ಯುಗಾಂತೇ ತ್ವಂಬುದಸ್ಯೇವ ಸ್ಫುಟತೋ ಹ್ಯಶನೇರಿವ ॥ 19 ॥**

**ಅಹೋ ಬತ ಮೃಧೇ ವೀರ್ಯಂ ಭಾರ್ಗವಸ್ಯ ಯದಚ್ಛಿನತ್ ।**
**ರಾಜ್ಞೋ ಬಾಹುಸಹಸ್ರಂ ತು ಹೈಮಂ ತಾಲವನಂ ಯಥಾ ॥ 20 ॥**

ದೈವದ ಚೇಷ್ಟೇ ಬಲು ವಿಚಿತ್ರ–ವಿಧಿ ಪ್ರಭಾವಕ್ಕೆ ಒಳಗಾದವರೇ ಇರುವುದಿಲ್ಲ. ಕಾರ್ತವೀರ್ಯನೇ ಜ್ವಲಂತ ಉದಾಹರಣೆ. ಇಷ್ಟು ಬಲಿಷ್ಠನಾದ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನೆಲ್ಲ ಭೃಗುವಂಶದ ಪರಶುರಾಮನು ಬಾಳೆಯ ಕಾಂಡಗಳನ್ನು ಕತ್ತರಿಸುವಂತೆ ಕತ್ತರಿಸಿ ಹಾಕಿದ. ಅಹೋ ಭಾರ್ಗವನ ಸಾಮರ್ಥ್ಯ.

## ಅಗ್ನಿಯಿಂದ ಭಿಕ್ಷೆಯಾಚನೆ

**ತೃಷಿತೇನ ಕದಾಚಿತ್ ಸ ಭಿಕ್ಷಿತಃ ಚಿತ್ರಭಾನುನಾ ।**
**ಸ ಭಿಕ್ಷಾಮದದಾದ್ ವೀರಃ ಸಪ್ತದ್ವೀಪಾನ್ ವಿಭಾವಸೋಃ ॥ 21 ॥**

**ಜಜ್ವಾಲ ತಸ್ಯ ಸರ್ವಾಣಿ ಚಿತ್ರಭಾನುಃ ದಿಧಕ್ಷಯಾ ।**
**ದದಾಹ ಕಾರ್ತವೀರ್ಯಸ್ಯ ಶೈಲಾಂಶ್ಚೈವ ವನಾನಿ ಚ ॥ 22 ॥**

**ಸ ಶೂನ್ಯಮಾಶ್ರಮಂ ರಮ್ಯಂ ವರುಣಸ್ಯಾತ್ಮಜಸ್ಯ ವೈ ।**
**ದದಾಹ ವನವದ್ ಭೀತಃ ಚಿತ್ರಭಾನುಃ ಸಹೈಹಯಃ ॥ 23 ॥**

**ವಸಿಷ್ಠ ನಾಮ ಸ ಮುನಿಃ ಖ್ಯಾತ ಆಪವ ಇತ್ಯುತ ।**
**ಯಸ್ಮಾನ್ನ ವರ್ಜಿತಮಿದಂ ವನಂ ತೇ ಮಮ ಹೈಹಯ ।**
**ತಸ್ಮಾತ್ ತೇ ದುಷ್ಕರಂ ಕರ್ಮ ಕೃತಮನ್ಯೋ ಹರಿಷ್ಯತಿ ॥ 24 ॥**

**ರಾಮೋ ನಾಮ ಮಹಾಬಾಹುಃ ಜಾಮದಗ್ನ್ಯಃ ಪ್ರತಾಪವಾನ್ ।**
**ಛಿತ್ವಾ ಬಾಹುಸಹಸ್ರಂ ತೇ ಪ್ರಮಥ್ಯ ತರಸಾ ಬಲೀ ॥ 25 ॥**

ಒಂದು ದಿನ ಅಗ್ನಿದೇವನು ಒಂದು ನನಗೆ ಬಹಳ ಹಸಿವಾಗಿದೆ. ಏನಾದರೂ ಭಿಕ್ಷೆ ನೀಡು ಎಂದು ಬೇಡಿದನು. ಉದಾರಿಯಾದ ಕಾರ್ತವೀರ್ಯನು ಸಪ್ತದ್ವೀಪವತಿಯಾದ ಈ ಅಖಂಡ ಭೂಮಂಡಲವನ್ನೆ ನಿನಗೆ ನೀಡಿದ್ದೇನೆ. ಅಗ್ನಿಯ ಗಿಡ ಬಳ್ಳಿ ಬೆಟ್ಟ ಬಯಲುಗಳನ್ನೆಲ್ಲ ತನ್ನ ಜ್ವಾಲೆಗಳಿಂದ ಕಬಳಿಸುತ್ತಾ ವರುಣನ ಪುತ್ರನಾದ ಆಪವ ವಶಿಷ್ಠನ ಆಶ್ರಮವನ್ನು ಸುಟ್ಟು ಹಾಕಿದನು. ಇದರಿಂದ ಕೋಪಗೊಂಡ ವಶಿಷ್ಠನು – ಕಾರ್ತವೀರ್ಯನೆ ನಿನಗೆ ಸೊಕ್ಕು ಅಧಿಕವಾಗಿದೆಯಷ್ಟೆ – ನಿನ್ನ ಈ ಘನ ಕಾರ್ಯಗಳನ್ನೆಲ್ಲ ನಿನ್ನ ಹೆಸರಿನ ಮತ್ತೊಬ್ಬನು ಅಪಹರಿಸುತ್ತಾನೆ. ಅಷ್ಟೆ ಅಲ್ಲ. ಪರಶುರಾಮನೆಂಬ ಬ್ರಾಹ್ಮಣನು ನಿನ್ನ ಸಾವಿರ ತೋಳುಗಳನ್ನು ಕತ್ತರಿಸಿ ಹಾಕುವನು. ನಿನ್ನನ್ನೂ ಕೊಂದು

ಹಾಕುವರು ಎಂದು ಶಪಿಸಿದನು. ಮಹರ್ಷಿಗಳ ಮಾತು ಹುಸಿಯಾಗುವುದೆ? ಭೃಗು ಕುಲೋತ್ಪನ್ನನಾದ ಪರಶುರಾಮನು ಪರಾಕ್ರಮಿಯಾದ ಕಾರ್ತವೀರ್ಯನನ್ನು ಕೈಗಳನ್ನೆಲ್ಲ ತಾಲವೃಕ್ಷದಂತೆ ಕಡಿದು ಹಾಕಿ ಕೊಂದು ಹಾಕಿದನು.

ಅದರಂತೆ ಪರಶುರಾಮನ ಇವನ ಸಾವಿರ ತೋಳುಗಳನ್ನು ಕತ್ತರಿಸಿ ಹಾಕಿದನು. ಇದು ಅವನೇ ಬೇಡಿಕೊಂಡ ವರವಾಗಿತ್ತು.

### ನೂರು ಮಂದಿ ನಿಶ್ಶೇಷ–ಐದು ಮಂದಿ ಸಶೇಷ

**ತಸ್ಯ ಪುತ್ರ ಶತಸ್ಯಾಸನ್ ಪಂಚ ಶೇಷಾ ಮಹಾತ್ಮನಃ ।**
**ಶೂರಸೇನಶ್ಚ ಶೂರಶ್ಚ ಧೃಷ್ಟೋಕ್ತಃ ಕೃಷ್ಣ ಏವ ಚ ॥ 26 ॥**
**ಜಯಧ್ವಜಶ್ಚ ನಾಮ್ನಾಽಽಸೀದ್ ಆವಂತ್ಯೋ ನೃಪತಿರ್ಮಹಾನ್ ॥ 27 ॥**

ಕಾರ್ತವೀರ್ಯನಿಗೆ ನೂರು ಮಂದಿ ಮಕ್ಕಳಿದ್ದರು. ಪರಶುರಾಮನೊಂದಿಗೆ ಯುದ್ಧ ಮಾಡುವಾಗ ಕಾರ್ತವೀರ್ಯಾರ್ಜುನನ ತೊಂಭತ್ತೈದು ಮಂದಿ ಮಕ್ಕಳು ಪರಶುರಾಮನಿಗೆ ಬಲಿಯಾದರು. ಶೂರಸೇನ, ಧೃಷ್ಟ, ಕೃಷ್ಣ, ಜಯಧ್ವಜ ಎಂಬ ಐದು ಮಕ್ಕಳು ಮಾತ್ರ ಉಳಿದರು.

ಇವರಲ್ಲಿ ಜಯಧ್ವಜನು ಅವಂತೀ ದೇಶದ ರಾಜನಾಗಿದ್ದನು. ಜಯಧ್ವಜನಿಗೆ ತಾಲಜಂಘನು ಮಗನಾದನು. ಇವನಿಗೆ ನೂರು ಮಂದಿ ಮಕ್ಕಳಾದರು. ಇವರೂ ತಾಲಜಂಘರೆಂದೆ ಪ್ರಸಿದ್ಧರಾದರು. ಇವರಲ್ಲದೆ,

ಹೈಹಯ ವಂಶದಲ್ಲಿ ವೀತಿಹೋತ್ರರು, ಸುಜಾತರು, ಭೋಜರು, ಅವಂತಿಗಳು, ತೌಂಡಿಕೇಯರು, ಭರತರು ಕ್ಷತ್ರಿಯರು ಜನಿಸಿದರು. ಇವರು ಅಪಾರಸಂಖ್ಯೆಯಲ್ಲಿರುವುದರಿಂದ ಹೆಸರುಗಳನ್ನು ಹೇಳರುವುದಿಲ್ಲ. ಇಲ್ಲಿಯವರೆಗೂ ಯದುವಿನ ಜ್ಯೇಷ್ಠ ಪುತ್ರನಾದ ಸಹಸ್ರದನ ಸಂತತಿ ಹೇಳದಂತಾಯಿತು. ಅವನ ದ್ವಿತೀಯ ಪುತ್ರನಾದ ಪಯೋದನ ಸಂತತಿ ನಿರೂಪಿಸುವೆ.

### ವೃಷಿ ವಂಶ

**ವೃಷಪ್ರಭೃತಿಯೋ ರಾಜನ್ ಯಾದವಾಃ ಪೂರ್ಣಕರ್ಮಿಣಃ ।**
**ವೃಷೋ ವಂಶಧರಃ ತತ್ರ ತಸ್ಯ ಪುತ್ರೋಽಭವನ್ ಮಧುಃ ॥ 28 ॥**

ಪಯೋದನಿಗೆ ವೃಷನು ಮಗನಾದನು. ವೃಷನಿಗೆ ಮಧುಯೆಂಬ ಮಗನು. ಮಧುವಿಗೆ ನೂರು ಮಂದಿ ಪುತ್ರರಾದರು. ಇವರಲ್ಲಿ ವೃಷಣನೊಬ್ಬನೇ ವಂಶೋದ್ಧಾರಕನೆನಿಸಿದ. ವೃಷಣನಿಂದ ಬೆಳೆದು ಬಂದವರೇ ವೃಷ್ಣಿಗಳು. ಮಧುವಿನ ಸಂತತಿಯವರು ಮಾಧವರು. ಇವರಿಗೆ ಯದುವು ಮೂಲನಾದ್ದರಿಂದ ಯಾದವರೆಂದು ಹೆಸರಾಯಿತು.

## ಕಾರ್ತವೀರ್ಯನ ಸ್ಮರಣೆ

**ನ ತಸ್ಯ ವಿತ್ತನಾಶೋಽಸ್ತಿ ನಷ್ಟಂ ಪ್ರತಿಲಭೇಚ್ಚ ಸಃ ।**
**ಕಾರ್ತವೀರ್ಯಸ್ಯ ಯೋ ಜನ್ಮ ಕೀರ್ತಯೇದಿಹ ನಿತ್ಯಶಃ ॥ 29 ॥**

ಯಾವನು ಪ್ರತಿನಿತ್ಯವೂ ಕಾರ್ತವೀರ್ಯನ ಜನ್ಮವೃತ್ತಾಂತ ಕೀರ್ತಿಸುವನೋ ಶ್ರವಣ ಮಾಡುವನೋ ಅವನಿಗೆ ಧನನಷ್ಟವಾಗುವುದಿಲ್ಲ. ನಷ್ಟವಾದ ವಸ್ತುವೂ ಲಭಿಸುತ್ತದೆ.

ಕಾರ್ತವೀರ್ಯಾರ್ಜುನನ ಮಕ್ಕಳ ವಂಶಗಳನ್ನು ಕೇಳಿ ಧಾರಣೆ ಮಾಡುವುದರಿಂದ ಮಾನವನ ಆಯಸ್ಸು, ಕೀರ್ತಿ, ಪುತ್ರ ಸಂತಾನ, ಐಶ್ವರ್ಯ, ಭೂಮಿ ಈ ಐದನ್ನು ಪಡೆಯುವನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಯದುವಂಶವೆಂಬಲ್ಲಿ
ಮುವತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಚತುಸ್ತ್ರಿಂಶೋऽಧ್ಯಾಯಃ

## ವೃಷ್ಣಿ ವಂಶ ನಿರೂಪಣೆ

**ಕ್ರೋಷ್ಟೋಸ್ತು ಶೃಣು ರಾಜೇಂದ್ರ ವಂಶಮುತ್ತಮ ಪೌರುಷಮ್ ।**
**ಯದೋಃ ವಂಶಧರಸ್ಯಾಥ ಯಜ್ವನಃ ಪುಣ್ಯಕರ್ಮಣಃ ॥ 1 ॥**

**ಕೋಷ್ಟುರ್ವಂಶಂ ಹಿ ಶೃತ್ವೇಮಂ ಸರ್ವಪಾಪೈಃ ಪ್ರಮುಚ್ಯತೇ ।**
**ಯಸ್ಯಾನ್ವವಾಯಜೋ ವಿಷ್ಣುಃ ಹರಿಃ ವೃಷ್ಣಿಕುಲೋದ್ಭವಃ ॥ 2 ॥**

ಜನಮೇಜಯನೇ ! ಯದುರಾಜನ ಮೂರನೇ ಮಗನಾದ ಕ್ರೋಷ್ಟುವಿನ ವಂಶ ವಿಸ್ತರಿಸುವೆನು ಕೇಳು. ಕ್ರೋಷ್ಟುವು ಯಜ್ಞಶೀಲನು, ಪುಣ್ಯ ಕಾರ್ಯ ಮಾಡುವವನಾಗಿದ್ದನು. ಈ ವಂಶದಲ್ಲಿಯೇ ವಿಷ್ಣುವು ವೃಷ್ಣಿಕುಲಾವ ತಂಸನಾದ ಶ್ರೀಕೃಷ್ಣನಾಗಿ ಅವತರಿಸಿದನಲ್ಲವೆ? ಈ ಕಥೆಯು ಸರ್ವಪಾಪಹಾರಕೂ ಸಕಲ ಪುಣ್ಯದಾಯಕವೂ ಆಗಿದೆ.

## ಅಕ್ರೂರ-ವಸುದೇವ-ಕುಂತ್ಯಾದಿಗಳು

**ಗಾಂಧಾರೀ ಚೈವ ಮಾದ್ರೀ ಚ ಕ್ರೋಷ್ಟೋಃ ಭಾರ್ಯೇ ಬಭೂವತುಃ ।**
**ಗಾಂಧಾರೀ ಜನಯಾಮಾಸ ಅನಮಿತ್ರಂ ಮಹಾಬಲಮ್ ॥ 3 ॥**

**ಮಾದ್ರೀ ಯುಧಾಜಿತಂ ಪುತ್ರಂ ತತೋऽನ್ಯಂ ದೇವಮೀಢುಷಮ್ ।**
**ತೇಷಾಂ ವಂಶಃ ತ್ರಿಧಾ ಭೂತ್ವಾ ವೃಷ್ಣೀನಾಂ ವಂಶವರ್ಧನಃ ॥ 4 ॥**

ಕ್ರೋಷ್ಟುವಿಗೆ ಗಾಂಧಾರೀ-ಮಾದ್ರಿ ಎಂಬ ಇಬ್ಬರು ಪತ್ನಿಯರಿದ್ದರು. ಗಾಂಧಾರಿಗೆ ಅನಮಿತ್ರನೂ, ಮಾದ್ರಿಯು ಯುಧಾಜಿತ್ ಹಾಗೂ

ದೇವಮೀಢುಷನೆಂಬ ಇಬ್ಬರು ಮಕ್ಕಳನ್ನು ಪಡೆದಳು. ಹೀಗೆ ವೃಷ್ಣಿಗಳ ವಂಶ ಈ ಮೂವರಿಂದಲೇ ವಿಶೇಷವಾಗಿ ಬೆಳೆಯಿತು. ಮಾದ್ರಿಯ ಮಕ್ಕಳಾದ ಯುಧಾಜಿತನಿಗೆ ವೃಷ್ಣಿ, ದೇವಮೀಢನಿಗೆ ಅಂಧಕರೆಂಬ ಮಕ್ಕಳಾದರು. ವೃಷ್ಣಿಗೆ ಶ್ವಫಲ್ಕ ಮತ್ತು ಚಿತ್ರಕ ಎಂಬ ಮಕ್ಕಳಾದರು. ಇವರಲ್ಲಿ ಶ್ವಫಲ್ಕನು ಮಹಾಧರ್ಮಿಷ್ಠನಾಗಿದ್ದ ಅವನಿದ್ದ ಸ್ಥಳದಲ್ಲಿ ರೋಗ ರುಜಿನ ಕ್ಷಾಮ ಡಾಮರ, ಬಿಸಿಲು ಬಿರುಗಾಳಿ ತಲೆದೋರುತ್ತಿದ್ದಿಲ್ಲ.

## ಮಳೆರಾಯ –ಶ್ವಫಲ್ಕ

**ಕದಾಚಿತ್ ಕಾಶಿರಾಜಸ್ಯ ವಿಭೋಃ ಭರತಸತ್ತಮ ।**
**ತ್ರೀಣಿ ವರ್ಷಾಣಿ ನಾವರ್ಷತ್ ವಿಷಯೇ ಪಾಕಶಾಸನಃ ॥ 5 ॥**

**ಸ ತತ್ರ ವಾಸಯಾಮಾಸ ಶ್ವಫಲ್ಕಂ ಪರಮಾರ್ಚಿತಮ್ ।**
**ಶ್ವಫಲ್ಕ ಪರಿವರ್ತೇ ಚ ವವರ್ಷ ಹರಿ ವಾಹನಃ ॥ 6 ॥**

ಹಿಂದೆ ಒಮ್ಮೆ ಕಾಶೀರಾಜನ ರಾಜ್ಯದಲ್ಲಿ ಮೂರು ವರ್ಷದವರೆಗೆ ಮಳೆಯನ್ನೆ ಸುರಿಸಲಿಲ್ಲ. ಇದರಿಂದಾಗಿ ಭಯಂಕರ ಬರಗಾಲ ತಲೆದೋರಿ ಹಾಹಾಕಾರವಾದಾಗ ಶ್ವಫಲ್ಕನ ಕಾಲ್ಗುಣವನ್ನು ಕೇಳಿ ತಿಳಿದಿದ್ದ ಕಾಶೀರಾಜನು – ದ್ವಾರಕೆಯಿಂದ ಶ್ವಫಲ್ಕನನ್ನು ಅತ್ಯಾದರದಿಂದ ಊರಿಗೆ ಬರ ಮಾಡಿಕೊಂಡು ಪೂಜೆ ಪುರಸ್ಕಾರ ಮಾಡಿದ. ಶ್ವಫಲ್ಕನು ಊರಿನಲ್ಲಿ ಪಾದವಿಡುತ್ತಿದ್ದಂತೆಯೇ ಇಂದ್ರದೇವನು ಧಾರಾಕಾರವಾಗಿ ಮಳೆ ಸುರಿಸಿದನು. ಕಾಶಿಯ ದೇಶದ ಭೂಮಿಯೆಲ್ಲ ಸುಜಲ ಸುಫಲಾ ಸಸ್ಯ ಶ್ಯಾಮಲಾ ಆಗಿ ಕಂಗೊಳಿಸಿತು.

## ಗರ್ಭದಲ್ಲೆ ಗೋದಾನ ಮಾಡಿಸಿದ ಗಾಂದಿನೀ

**ಶ್ವಫಲ್ಕಃ ಕಾಶಿರಾಜಸ್ಯ ಸುತಾಂ ಭಾರ್ಯಾಮವಿಂದತ ।**
**ಗಾಂದಿನೀಂ ನಾಮ ಸಾ ಗಾಂ ತು ದದೌ ವಿಪ್ರೇಷು ನಿತ್ಯಶಃ ॥ 7 ॥**

**ಸಾ ಮಾತುರುದರಸ್ಥಾ ತು ಬಹೂನ್ ವರ್ಷಗಣಾನ್ ಕಿಲ ।**
**ನಿವಸಂತೀ ನ ವೈ ಜಜ್ಞೇ ಗರ್ಭಸ್ಥಾಂ ತಾಂ ಪಿತಾಬ್ರವೀತ್ ॥ 8 ॥**

**ಜಾಯಸ್ವ ಶೀಘ್ರಂ ಭದ್ರಂ ತೇ ಕಿಮರ್ಥಮಿಹ ತಿಷ್ಠತಿ ।**
**ಪ್ರೋವಾಚ ಚೈನಂ ಗರ್ಭಸ್ಥಾ ಕನ್ಯಾ ಗಾಂ ಚ ದಿನೇ ದಿನೇ ।**
**ಯದಿ ದದ್ಯಾ ತತೋಽದ್ಯಾಹಂ ಜಾಯಯಿಷ್ಯಾಮಿ ತಾಂ ಪಿತಾ ॥ 9 ॥**

ಶ್ವಫಲ್ಕನಿಂದ ಧಾರಾಕಾರಾ ಮಳೆ ಸುರಿಯಿತು – ಕಾಶೀರಾಜನ ನೇತ್ರಗಳಲ್ಲಿ ಆನಂದ ಬಾಷ್ಪ ಸುರಿಯಿತು. ಸಂತುಷ್ಟನಾದ ಕಾಶಿರಾಜನು ತನ್ನ ಮಗಳಾದ ಗಾಂಧಿನಿಯನ್ನು ಕೊಟ್ಟು ವಿವಾಹ ಮಾಡಿದ. ಗಾಂಧಿನಿ ತನ್ನ ತಾಯಿಯ ಗರ್ಭದಲ್ಲಿದ್ದಾಗ ನವಮಾಸ ಕಳೆದು ಬಹಳ ವರ್ಷಗಳಾದರೂ ಗರ್ಭಕೋಶ ಬಿಟ್ಟು ಭೂಕೋಶಕ್ಕೆ ಬರಲಿಲ್ಲ. ತಂದೆಯು ಮಗಳನ್ನು ಕುರಿತು 'ಮಗಳೇ, ಎಷ್ಟು ದಿನ ಈ ಗರ್ಭಗುಡಿಯಲ್ಲಿ ಕುಳಿತುಕೊಳ್ಳುವಿ? ಹೊರಗೆ ಬರಬಾರದೆ. ತಾಯಿಗೂ ದುಃಖ ಕಡಮೆಯಾದೀತು' ಎಂದ.

ತಂದೆಯೇ ! ನಾನು ಭೂಮಿಗೆ ಬಂದ ಕೂಡಲೇ ಪ್ರತಿದಿನ ಒಂದು ಗೋದಾನ ಮಾಡಬೇಕೆಂದು ಸಂಕಲ್ಪ ಮಾಡಿರುವೆನು. ಈ ನನ್ನ ಇಚ್ಛ ಪೂರ್ತಿ ಮಾಡುವುದಿದ್ದರೆ ಇಂದೆ ಹೊರಬರುವೆನು ಎಂದಿತು. ತಂದೆ ಹಾಗೆ ಆಗಲಿ ಎಂದು ಹೇಳಿದ ಮೇಲೆ ಮಗು ಜನಿಸಿ ಬಂದಿತು. ಅವಳು ಜನ್ಮದಾರಭ್ಯ ಪ್ರತಿದಿನ ಗೋದಾನ ಮಾಡುಸುತ್ತಲೆ ಇದ್ದದ್ದರಿಂದ ಗಾಂದಿನೀ ಎಂದು ಪ್ರಖ್ಯಾತಳಾದಳು.

## ವದಾನ್ಯ ಅಕ್ರೂರ

**ದಾತಾ ಯಜ್ವಾ ಚ ಧೀರಶ್ಚ ಶ್ರುತವಾನ್ ಅತಿಥಿಪ್ರಿಯಃ ।**
**ಅಕ್ರೂರಃ ಸುಷುವೇ ತಸ್ಮಾತ್ ಶ್ವಫಲ್ಕಾದ್ ಭೂರಿದಕ್ಷಿಣಃ ॥ 10 ॥**

**ಅಕ್ರೂರೇಣ ಉಗ್ರ ಸೇನಾಯಾಂ ಸುಗಾತ್ರ್ಯಾಂ ಕುರುನಂದನ ।**
**ಪ್ರಸೇನಶ್ಚ ಉಪದೇವಶ್ಚ ಜಜ್ಞಾತೇ ದೇವವರ್ಚಸೌ ॥ 11 ॥**

ಕಾಶೀರಾಜನು ದೇಶಕ್ಕೆ ನಿರಂತರ ಸುಭಿಕ್ಷೆ ತಂದ ಶ್ವಫಲ್ಕನಿಗೆ ತನ್ನ ಮಗಳು ಗೋದಾನಿ ಗಾಂದಿನಿಯನ್ನು ನೀಡಿ ವಿವಾಹ ಮಾಡಿದ. ಇವರಿಂದ ಉದಾರ ಹೃದಯಿಯೂ, ಸ್ವಭಾವತಃ ಭಕ್ತನೂ ಜಾತ್ಯಾ ಉದಾರಿಯೂ ಆದ 'ಅಕ್ರೂರ'ನು ಹುಟ್ಟಿದನು. ಅತಿಥಿ ಸತ್ಕಾರ ಪರಾಯಣನಾದ ಆಕ್ರೂರನು ಶಾಸ್ತ್ರಗಳಲ್ಲಿ ಶ್ರೌತ

ಸಂಪ್ರದಾಯದಲ್ಲಿ ಹೇಳಿದ ಸಮಸ್ತ ಯಜ್ಞಗಳನ್ನು ಮಾಡಿ ಮುಗಿಸಿದ್ದ ಮಹಾನುಭಾವ. ಮುಕ್ತ ಹಸ್ತದಾನ. ಈ ಅಕ್ರೂರನ ಹಸ್ತ ಹಿಡಿದ ಧರ್ಮಪತ್ನಿಯೇ ಉಗ್ರಸೇನಾದೇವಿ. ಲಾವಣ್ಯೋದ್ಧಾಸಿನಿಯಾದ ಉಗ್ರಸೇನೆಯಲ್ಲಿ ಪ್ರಸೇನ ಮತ್ತು ಉಪದೇವರೆಂಬ ಇಬ್ಬರು ಪುತ್ರರಾದರು. ಶ್ವಫಲ್ಕ – ಗಾಂದಿನಿಯರಿಗೆ ಉಪಾಸಂಗ, ಮದ್ಗು–ಮೃದುರ, ಅರಿಮೇಜಯ, ಅವಿಕ್ಷಿಪ, ಉಪೇಕ್ಷ ಶತ್ರುಘ್ನ ಅರಿಮರ್ದನ, ಧರ್ಮದೃಕ್, ಯತಿಧರ್ಮಾ, ಗೃಧ್ರ, ಭೋಜ, ಅಂಧಕ, ಆವಾಹ ಪ್ರತಿವಾಹರೆಂಬ ವರಪುತ್ರರಾದರು. ಹಾಗೆಯೇ 'ವರಾಂಗನಾ' ಎಂಬ ಹೆಣ್ಣು ಮಗುವೂ ಹುಟ್ಟಿತು. ವರಾಂಗನೆಯನ್ನು ಮುಂದೆ ಜಾಂಬವತೀ ಪುತ್ರ ಸಾಂಬ ಕೈ ಹಿಡಿದನು.

### ಚಿತ್ರಕನ ವಂಶ

ಶ್ವಫಲ್ಕನ ತಮ್ಮನಾದ ಚಿತ್ರಕನಿಗೆ ಪೃಥು–ವಿಪೃಥು–ಅಶ್ವಗ್ರೀವ– ಅಶ್ವಬಾಹು ಸುಪಾರ್ಶ್ವಕ– ಗವೇಷಣ – ಅರಿಷ್ಟನೇಮಿ – ಅಶ್ವ – ಸುಧರ್ಮ – ಧರ್ಮಭೃತ್ – ಸುಬಾಹು ಬಹುಬಾಹು ಎಂಬ ಮಕ್ಕಳೂ, ಶ್ರವಿಷ್ಠಾ–ಶ್ರವಣಾ ಎಂಬಿಬ್ಬರು ಕನ್ಯಾಮಣಿಗಳೂ ಹುಟ್ಟಿದರು.

### ಮಾದ್ರಿಪುತ್ರ ದೇವ ಮೀಢುಷ ವಂಶ

**ಅಶ್ಮಕ್ಯಾಂ ಜನಯಾಮಾಸ ಶೂರಂ ವೈ ದೇವಮೀಢುಷಃ ।**
**ಮಹಿಷ್ಯಾಂ ಜಜ್ಞಿರೇ ಶೂರಾದ್ ಭೋಜ್ಯಾಯಾಂ ಪುರುಷಾ ದಶ ॥ 12 ॥**

### ವಸುದೇವ ಜನ್ಮ

**ವಸುದೇವೋ ಮಹಾಬಾಹುಃ ಪೂರ್ವಮಾನಕದುಂದುಭಿಃ ।**
**ಜಜ್ಞೇ ಯಸ್ಯ ಪ್ರಸೂತಸ್ಯ ದುಂದುಭ್ಯಃ ಪ್ರಾಣದನ್ ದಿವಿ ॥ 13 ॥**
**ಪಪಾತ ಪುಷ್ಪವರ್ಷಂ ಚ ಶೂರಸ್ಯ ಭವನೇ ಮಹತ್ ।**
**ಮನುಷ್ಯಲೋಕೇ ಕೃತ್ಸ್ನೇಽಪಿ ರೂಪೇ ನಾಸ್ತಿ ಸಮೋ ಭುವಿ ॥ 14 ॥**

ಕ್ರೋಷ್ಟುವಿನ ಗಾಂಧಾರೀ – ಮಾದ್ರಿಯರಲ್ಲಿ ಮಾದ್ರಿಯ ಮಗನಾದ ದೇವಮೀಢುಷನಿಂದ 'ಆಶ್ಮಕೀ' ಎಂಬ ಧರ್ಮಪತ್ನಿಯಲ್ಲಿ ಶೂರನೆಂಬ ಪುತ್ರನಾದನು. ಶೂರರಾಜನಿಗೆ ಭೋಜ್ಯಾ ಎಂಬ ಪಟ್ಟದರಸಿಯಲ್ಲಿ ವಸುದೇವ

ಮೊದಲಾದ ಹತ್ತು ಮಂದಿ ಪುತ್ರರಾದರು. ಇವರಲ್ಲಿ ಜ್ಯೇಷ್ಠನಾದ ವಸುದೇವನು ಜನಿಸಿದ ಕೂಡಲೇ ದೇವದುಂಧುಭಿಗಳು, ಚರ್ಮವಾದ್ಯಗಳು ಮೊಳಗಿದವು. ಶೂರನ ಮನೆಯಲ್ಲಿ ಪುಷ್ಪವೃಷ್ಟಿಯಾಯಿತು. ಇವನಿಗೆ 'ಆನಕ ದುಂದುಭಿ' ಎಂದೇ ಹೆಸರಾಯಿತು. ಚಂದ್ರನಂತೆ ಸುಂದರನಾದ ಆ ಆನಕ ದುಂದುಭಿಯ ಸೌಂದರ್ಯ ಇಡೀ ಮಾನವ ಕುಲದಲ್ಲಿ ಯಾರಿಗೂ ಇರಲಿಲ್ಲ.

### ವಸುದೇವನ ತಮ್ಮಂದಿರು

ವಸುದೇವನ ನಂತರ ದೇವಭಾಗ, ದೇವಶ್ರವ, ಅನಾಧೃಷ್ಟ, ಕನವಕ ಗೃಂಜಿಮ, ವತ್ಸವಾನ್, ಶ್ಯಾಮ, ಶಮೀಕ, ಗಂಡೂಷ ಎಂಬ ತಮ್ಮಂದಿರು ಹುಟ್ಟಿದರು. ಇವರಲ್ಲದೆ ಪೃಥುಕೀರ್ತಿ - ಪೃಥಾ - ಶ್ರುತಶ್ರವಾ - ಶ್ರುತದೇವಾ - ರಾಜಧಿದೇವಿ ಎಂಬ ಐದು ತಂಗಿಯರು ಹುಟ್ಟಿದರು.

### ಪೃಥಾ ಕುಂತಿಭೋಜನಿಗೆ ದತ್ತು

**ರಾಜಾಧಿದೇವೀ ಚ ತಥಾ ಪಂಚೈತಾಃ ವೀರಮಾತರಃ ।**
**ಪೃಥಾಂ ದುಹಿತರಂ ವವ್ರೇ ಕುಂತಿಸ್ತಾಂ ಕುರುನಂದನ ॥ 15 ॥**

**ಶೂರಃ ಪೂಜ್ಯಾಯ ವೃದ್ಧಾಯ ಕುಂತಿ ಭೋಜಾಯ ತಾಂ ದದೌ ।**
**ತಸ್ಮಾತ್ ಕುಂತೀತಿ ವಿಖ್ಯಾತಾ ಕುಂತೀಭೋಜಾತ್ಮಜಾ ಪೃಥಾ ॥ 16 ॥**

ಪಂಚಕನ್ಯೆಯರಲ್ಲಿ ಪೃಥೆಯನ್ನು ನೋಡಿದ ಕುಂತೀಭೋಜರಾಜನು "ಇವಳು ನನ್ನ ಮಗಳು" ಎಂದಾಗ ಶೂರನೂ ಹಿರಿಯನೂ ಪೂಜ್ಯರೂ ಆದ ಕುಂತೀಬೋಜನಿಗೆ ಪೃಥೆಯನ್ನು ದತ್ತು ನೀಡಿದ. ಇದರಿಂದಾಗಿ ಕುಂತೀ ಎಂಬ ಹೆಸರಾಯಿತು.

### ಸಾತ್ಯಕೀ ಜನನ

**ಅನಮಿತ್ರಾತ್ ಶಿನಿರ್ಜಜ್ಞೇ ಕನಿಷ್ಠಾದ್ ವೃಷ್ಣಿನಂದನಾತ್ ।**
**ಶೈನೇಯಃ ಸತ್ಯಕಃ ತಸ್ಮಾದ್ ಯುಯುಧಾನಶ್ಚ ಸಾತ್ಯಕಿಃ ॥ 17 ॥**

ವೃಷ್ಣಿಯ ಕೊನೆಯ ಮಗನಾದ ಅನಮಿತ್ರನಿಂದ ಶಿನಿಯೆಂಬುವನು ಹುಟ್ಟಿದನು. ಶಿನಿಯಿಂದ ಸತ್ಯಕನೂ, ಸತ್ಯಕನಿಗೆ ಸಾತ್ಯಕಿಯೂ ಹಾಗೂ ಯುಯುಧಾನರೆಂಬ ಇಬ್ಬರೂ ಮಕ್ಕಳಾದರು. ಯುಯುಧಾನನಿಗೆ

ಅಸಂಗನೂ, ಇವನಿಗೆ ಭೂಮಿಯೂ, ಇವನಿಂದ ಯುಗಂಧರನೂ ಹುಟ್ಟಿದರು. ಇಲ್ಲಿಗೆ ಅನಮಿತ್ರ ವಂಶವು ನಿಂತಿತು.

ಮಹಾಜ್ಞಾನಿಯಾದ ಉದ್ಧವನು ದೇವಭಾಗನ ಮಗ. ಇವನು ದೇವಸಮಾನವಾದ ಕೀರ್ತಿ ಶಾಲಿಯಾದ್ದರಿಂದ ದೇವಶ್ರವಾ ಎನಿಸಿದನು. ಅನಾದೃಷ್ಟಿಯು ಅಶ್ಮಕಿಯಲ್ಲಿ ನಿವೃತ್ತಶತ್ರು ಎಂಬ ಪುತ್ರನನ್ನು ಪಡೆದನು. ದೇವಶ್ರವನೆಂಬ ವಸುದೇವನ ಮೂರನೇ ತಮ್ಮನು 'ಶತ್ರುಘ್ನ'ನೆಂಬ ಪುತ್ರನನ್ನು ಪಡೆದನು. ಯಾವುದೋ ಕಾರಣಕ್ಕಾಗಿ ಈ ಮಗುವು ಕಾಡಿನಲ್ಲಿ ಬೇಡ ಜನಾಂಗದಿಂದ ಬೆಳೆಸಲ್ಪಟ್ಟು ಏಕಲವ್ಯನೆಂದು ನಿಷಾಧರಲ್ಲಿ ಪ್ರಸಿದ್ಧನಾದನು. ವತ್ಸಾವಂತನಿಗೆ ಸಂತಾನವಾಗಿರಲಿಲ್ಲ. ವಸುದೇವನಾದರೂ ತನ್ನ ಮಗನಾದ ಕೌಶಿಕನನ್ನು ಸಂಕಲ್ಪ ಪೂರ್ವಕ ದಾನ ಮಾಡಿದನು.

ವಸುದೇವನ ಮತ್ತೊಬ್ಬ ತಮ್ಮ ಗಂಡೂಷ ಎಂಬುವನಿಗೂ ಸಂತಾನವಿರಲಿಲ್ಲ. ಸಂತಾನದ ಚಿಂತೆಯಿಂದ ದುಃಖಪಡುತ್ತಿದ್ದ ಗಂಡೂಷನಿಗೆ ಶ್ರೀಕೃಷ್ಣನೇ ತನಗೆ ರುಕ್ಮಿಣಿಯಲ್ಲಿ ಹುಟ್ಟಿದ ಚಾರುದೇಷ್ಣ – ಸುದೇಷ್ಣ, ಪಂಚಾಲ – ಕೃತ ಲಕ್ಷಣರೆಂಬ ನಾಲ್ಕು ಮಕ್ಕಳನ್ನು ದತ್ತು ನೀಡಿದನು.

### ಚಾರುದೇಷ್ಣ ಪರಾಕ್ರಮ – ಕಾಗೆಗಳಿಗೆ ಮೃಷ್ಟಾನ್ನ

**ಅಸಂಗ್ರಾಮೇಣ ಯೋ ವೀರೋ ನಾವರ್ತತ ಕದಾಚನ ।**
**ರೌಕ್ಮಿಣೇಯೋ ಮಹಾಬಾಹುಃ ಕನೀಯಾನ್ ಪುರುಷರ್ಷಭ ॥ 18 ॥**

**ವಾಯಸಾನಾಂ ಸಹಸ್ರಾಣಿ ಯಂ ಯಂತಂ ಪೃಷ್ಠತೋಽನ್ವಯುಃ ।**
**ಚಾರುಮಾಂಸಾನಿ ಭೋಕ್ಷ್ಯಾಮಃ ಚಾರುದೇಷ್ಣ ಹತಾನಿ ತು ॥ 19 ॥**

### ವಸುದೇವ ತಂಗಿಯರ ವಿವಾಹ

**ಅಂತ್ಯಸ್ಯ ಶ್ರುತದೇವಾಯಾಂ ಜಗೃಹುಃ ಸುಷುವೇ ಸುತಃ ।**
**ಶ್ರುತಶ್ರವಾಯಾಂ ಚೈದ್ಯಸ್ಯ ಶಿಶುಪಾಲೋ ಮಹಾಬಲಃ ॥ 20 ॥**
**ಹಿರಣ್ಯಕಶಿಪುಃ ಯೋಽಸೌ ದೈತ್ಯರಾಜೋಽಭವತ್ ಪುರಾ ।**
**ಪೃಥುಕೀರ್ತ್ಯಾಂ ತನಯಃ ಸಂಜಜ್ಞೇ ವೃದ್ಧಶರ್ಮಣಃ ॥ 21 ॥**

ಕುಂತಿಯ ತಂಗಿಯಾದ ಶ್ರುತದೇವಳಿಗೆ ಅಂತ್ಯ ಎಂಬ ಪತಿಯಿಂದ ಜಗೃಹು ಎಂಬ ಪುತ್ರನಾದನು. ಶ್ರುತಶ್ರವೆಯನ್ನು ಚೇದಿರಾಜನಾದ ದಮಘೋಷನಿಗೆ ಕೊಡಲಾಗಿತ್ತು. ಇವಳಿಗೆ ದಮಘೋಷನಿಂದ ಶಿಶುಪಾಲನು ಹುಟ್ಟಿದನು. ಈ ಶಿಶುಪಾಲನೇ ಹಿಂದಿನ ಜನ್ಮದಲ್ಲಿ ಹಿರಣ್ಯಕಶಿಪುವಾಗಿ ಜನಿಸಿದ್ದನು. ಪೃಥುಕೀರ್ತಿಯನ್ನು ಕರೂಷದೇಶದ ವೃದ್ಧಶರ್ಮನಿಗೆ ವಿವಾಹ ಮಾಡಿಕೊಡಲಾಗಿತ್ತು. ವೃದ್ಧಶರ್ಮನಿಂದ ಪೃಥುಕೀರ್ತಿಯಲ್ಲಿ ಹುಟ್ಟಿದವನೇ ಮಹಾಬಲಿಷ್ಠನಾದ ದಂತವಕ್ತ್ರನು.

### ಭೀಮಾದಿಗಳ ಜನನ

ಮೂರನೇ ಮಗಳಾದ ಪೃಥಾಳನ್ನು ಕುಂತಿಯಾಗಿ ಪಾಂಡುರಾಜನು ಕೈಹಿಡಿದನು. ಕುಂತೀದೇವಿಗೆ ಯಮಧರ್ಮನಿಂದ ಯುಧಿಷ್ಠಿರ- ವಾಯುವಿನಿಂದ ಭೀಮಸೇನ, ದೇವೇಂದ್ರನಿಂದ ಅರ್ಜುನ ಎಂಬ ಪುತ್ರರಾದರು. ಇಂದ್ರ ಪರಾಕ್ರಮಿಯಾದ ಅರ್ಜುನನಿಗೆ ಸರಿಸಾಟಿ ಬಿಲ್ಲಾಳು ಯಾರು ಇದ್ದಿಲ್ಲ. ಪಾಂಡುರಾಜನಿಗೆ ಮಾದ್ರಿದೇವಿಯಲ್ಲಿ ನಕುಲಸಹದೇವರೂ ಹುಟ್ಟಿದರು.

ರುಗ್ಮಿಣಿಯಲ್ಲಿ ಕಡೆಯ ಮಗ ಚಾರುದೇಷ್ಣನು. ಮಹಾಪರಾಕ್ರಮಿ. ಸಂಗ್ರಾಮಾಂಗಣದಲ್ಲಿ ವೈರಿವೃಂದಗಳನ್ನೆಲ್ಲ ನಿಶ್ಚಿತವಾಗಿಯೂ ಕೊಂದು ಹಾಕುತ್ತಿದ್ದ. ಚಾರುದೇಷ್ಣನ ಯುದ್ಧವೆಂದರೆ ಕಾಗೆಗಳ ಹಿಂಡಿಗೆ ಮೃಷ್ಟಾನ್ನದ ಹಬ್ಬ. ಇವನು ಯುದ್ಧದಲ್ಲಿ ಕೊಂದು ಹಾಕಿದ ಶತ್ರುಮಾಂಸಗಳನ್ನು ತಿನ್ನಲು ಇವನು ಯುದ್ಧಕ್ಕೆ ಹೊರಟಾಗ ಅವನ ಹಿಂದೆ ತಪ್ಪದೆ ಹಿಂಬಾಲಿಸುತ್ತಿದ್ದವು.

ವಸುದೇವನ ತಮ್ಮ ಕನವಕನಿಗೆ ತಂತ್ರಿಜ – ತಂದ್ರಿಪಾಲರೆಂಬ ಮಕ್ಕಳಾದರು. ಹಾಗೆಯೇ ಗೃಂಜಮನ ಮಕ್ಕಳು ವೀರ ಮತ್ತು ಅಶ್ವಹನುಗಳೆಂಬುವರು. ಶ್ಯಾಮನು ಶ್ರೀಕೃಷ್ಣನ ಮತ್ತೊಬ್ಬ ಚಿಕ್ಕಪ್ಪ. ಅವನಿಗೆ ಸಂತತಿಯಿಲ್ಲದೆ ತನ್ನ ತಮ್ಮ ಶಮೀಕನನ್ನೆ ತನ್ನ ಮಗನಾಗಿಸಿಕೊಂಡನು.

**ಶ್ಯಾಮಪುತ್ರಃ ಶಮೀಕಸ್ತು ಶಮೀಕೇ ರಾಜ್ಯಮಾವಹತ್ ।**
**ಜುಗುಪ್ಸಮಾನೋ ಭೋಜತ್ವಾತ್ ರಾಜಸೂಯಮವಾಪ ಸಃ ॥ 22 ॥**

**ಅಜಾತಶತ್ರುಃ ಶತ್ರೂಣಾಂ ಜಜ್ಞೇ ತಸ್ಯ ವಿನಾಶನಃ ॥ 23 ॥**

ಶ್ಯಾಮನ ಪುತ್ರ ಶಮೀಕನು ಯಾದವ ವಂಶದ ಪ್ರಾದೇಶ ಮಾತ್ರ ಪರಿಮಿತವಾದ ರಾಜ್ಯ ನೋಡಿ ಜುಗುಪ್ಸೆಯಾಯಿತು. ತಾನು ಮಹಾರಾಜ ಗೌರವ ಹೊಂದಬೇಕೆಂಬ ಆಸೆಯಿಂದ ಧರ್ಮರಾಜನ ಸಹಾಯ ಪಡೆದು ಭೀಮಾರ್ಜುನರ ಸಹಾಯದಿಂದ ಸರ್ವಶತ್ರುನಾಶ ಮಾಡಿಸಿ ಮಹಾರಾಜನೆಂಬ ಗೌರವ ಹೊಂದಿದನು. ರಾಜಸೂಯಯಾಗವನ್ನು ಮಾಡಿದನು.

## ವಸುದೇವ ಸಂತಾನ

**ವಸುದೇವಸುತಾನ್ ವೀರಾನ್ ಕೀರ್ತಯಿಷ್ಯಾಮಿ ತಾನ್ ಶ್ರುಣು ।**
**ವೃಷ್ಣೇಃ ತ್ರಿವಿಧಮೇತತ್ ತು ಬಹುಶಾಖಂ ಮಹೌಜಸಮ್ ॥ 24 ॥**
**ಧಾರಯನ್ ವಿಪುಲಂ ವಂಶಂ ನಾನಾರ್ಥೈರಿಹ ಯುಜ್ಯತೇ ॥ 25 ॥**

ವಸುದೇವನ ವೀರಪುತ್ರರ ಬಗ್ಗೆ ಹೇಳುವೆ ಕೇಳಿರಿ. ಹಿಂದೆ ಹೇಳದಂತೆ ವೃಷ್ಣಿ ಕುಲವು ಅವನಿಂದ ಮೂರು ಶಾಖೆಗಳಂದ ಹೊರಟು ಅನೇಕ ಶಾಖೆಗಳಾಗಿ ವಿಭಕ್ತವಾದವು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವೃಷ್ಣಿ ವಂಶವೆಂಬಲ್ಲಿ
ಮುವತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




## ಅಥ ಪಂಚತ್ರಿಂಶೋಽಧ್ಯಾಯಃ

### ವಸುದೇವ ವಂಶ ನಿರೂಪಣೆ

*ವೈಶಂಪಾಯನ ಉವಾಚ –*

**ಯಾಃ ಪತ್ನ್ಯೋ ವಸುದೇವಸ್ಯ ಚತುರ್ದಶವರಾಂಗನಾಃ ।**
**ಪೌರವೀ ರೋಹಿಣೀ ನಾಮ ಇಂದಿರಾ ಚ ತಥಾ ವರಾ ॥ 1 ॥**

**ವೈಶಾಖೀ ಚ ತಥಾ ಭದ್ರಾ ಸುನಾಮ್ನೀ ಚೈವ ಪಂಚಮೀ ।**
**ಸಹದೇವಾ ಶಾಂತಿದೇವಾ ಶ್ರೀದೇವಾ ದೇವರಕ್ಷಿತಾ ॥ 2 ॥**

**ವೃಕದೇವೀ ಉಪದೇವೀ ಚ ದೇವಕೀ ಚೈವ ಸಪ್ತಮೀ ।**
**ಸುತನು ರ್ವಡವಾ ಚೈವ ದ್ವೇ ಏತೇ ಪರಿಚಾರಿಕೇ ॥ 3 ॥**

ಶ್ರೀಕೃಷ್ಣ ಪರಮಾತ್ಮನ ತಂದೆಯೆನಿಸಿದ ವಸುದೇವನಿಗೆ ರೋಹಿಣೀ – ಇಂದಿರಾ – ವೈಶಾಖೀ – ಭದ್ರಾ – ಸುನಾಮ್ನಿ–ಸಹದೇವಾ – ಶಾಂತಿದೇವಾ – ಶ್ರೀದೇವಾ – ದೇವರಕ್ಷಿತಾ – ವೃಕದೇವೀ – ಉಪದೇವೀ ಹಾಗೂ ದೇವಕೀ ಎಂಬ ಹನ್ನೆರಡು ಮಂದಿ ಪತ್ನಿಯರೂ ಹಾಗೂ ಸುತನು, ವಡವಾ ಎಂಬಿಬ್ಬರು ಭೋಗಪತ್ನಿಯರಿದ್ದರು. ಹೀಗೆ ಹದಿನಾಲ್ಕು ಮಂದಿ ಇದ್ದರು. ವೃಕದೇವಿಗೆ ಧೃತದೇವೀಯೆಂದೂ, ಶ್ರೀದೇವಿಯನ್ನು ಸುದೇವೀ ಎಂದೂ, ಸಹದೇವಾಳನ್ನು ಸುನಾಮ್ನಿ ಎಂದು ಕರೆಯುವರು.

ಇವರೆಲ್ಲರೂ ಸುಂದರಿಯರೂ ಸಾಧ್ವಿಗಳೂ ಪತಿಭಕ್ತಿಪರಾಯಣೆಯರೂ ಆಗಿದ್ದರು.

## ಬಾಹ್ಲೀಕ ಪುತ್ರಿ ರೋಹಿಣೀ ವಿವಾಹ

**ಪೌರವೀ ರೋಹಿಣೀ ನಾಮ ಬಾಹ್ಲೀಕಸ್ಯಾತ್ಮಜಾಽಭವತ್ ।**
**ಜ್ಯೇಷ್ಠಾ ಪತ್ನೀ ಮಹಾರಾಜ! ದಯಿತಾ ಆನಕ ದುಂದುಭೇಃ ॥ 4 ॥**
**ಲೇಭೇ ಜ್ಯೇಷ್ಠಂ ಸುತಂ ರಾಮಂ ಸಾರಣಂ ಶಠಮೇವ ಚ ।**
**ದುರ್ದಮಂ ದಮನಂ ಶ್ವಭ್ರಂ ಪಿಂಡಾರಕಮುಶೀನರಮ್ ॥ 5 ॥**

ದೇವಕ್ಯಾದಿಗಳ ವಿವಾಹವಾಗುವ ಮೊದಲೇ ಶಂತನುವಿನ ಅಣ್ಣನಾದ ಬಾಹ್ಲೀಕ ದೇಶದ ರಾಜ ಬಾಹ್ಲೀಕನ ಪುತ್ರಿಯಾದ ರೋಹಿಣಿಯನ್ನು ವಿವಾಹವಾಗಿದ್ದನು. ಮೂಲರೂಪದಲ್ಲಿ ಸುರಭಿಯೇ ಇವಳು. ಇವಳನ್ನು ಪೌರವೀಯೆಂದು ಕೌರವ್ಯಾಯಣೀಯೆಂದು ಕರೆಯುತ್ತಾರೆ. ವಸುದೇವನಿಗೆ ಅತ್ಯಂತ ದಯಿತಳಾದ ರೋಹಿಣಿಯಲ್ಲಿ ಬಲರಾಮ–ಸಾರಣ/ಶರಣ್ಯಾ, ಶಠ, ದುರ್ದಮ, ದಮನ, ಶುಭ್ರ, ಪಿಂಡಾರಕ, ಉಶೀನರರೆಂಬ ಎಂಟು ಮಂದಿ ಮಕ್ಕಳನ್ನು ಪಡೆದನು. ಸುಭದ್ರೆಯೆಂಬ ಹೆಣ್ಣುಮಗಳೂ ಜನಿಸಿದರು. ಸುಭದ್ರೆಗೆ ಚಿತ್ರಾ ಎಂದು ಹೆಸರಿತ್ತು.

## ಶ್ರೀಕೃಷ್ಣನ ಜನ್ಮ

**ವಸುದೇವಾಚ್ಚ ದೇವಕ್ಯಾಂ ಜಜ್ಞೇ ಶೌರಿಃ ಮಹಾಯಶಾಃ ।**
**ರಾಮಾಚ್ಚ ನಿಷಠೋ ಜಜ್ಞೇ ರೇವತ್ಯಾಂ ದಯಿತಃ ಸುತಃ ॥ 6 ॥**
**ಸುಭದ್ರಾಯಾಂ ರಥೀ ಪಾರ್ಥಾದ್ ಅಭಿಮನ್ಯುರಜಾಯತ ।**
**ಅಕ್ರೂರಾತ್ ಕಾಶಿಕನ್ಯಾಯಾಂ ಸತ್ಯಕೇತುರಜಾಯತ ॥ 7 ॥**

ವಸುದೇವನಿಂದ ದೇವಕೀದೇವಿಯಲ್ಲಿ ಸಾಕ್ಷಾತ್ ಭಗವಂತನೇ ಶ್ರೀಕೃಷ್ಣರೂಪದಿಂದ ಅವತರಿಸಿದನು. ಬಲರಾಮನಿಗೆ ರೇವತಿಯಲ್ಲಿ ನಿಶಠನೆಂಬ ತನಯನು ಹುಟ್ಟಿದನು. ತಂಗಿ ಸುಭದ್ರೆಯನ್ನು ಅರ್ಜುನನು ವಿವಾಹವಾಗಿದ್ದು ಅವನಲ್ಲಿ ಅಭಿಮನ್ಯುವೆಂಬ ಬುಧಾವತಾರನೂ ಅವತರಿಸಿದನು. ಅಕ್ರೂರನಿಂದ ಕಾಶಿರಾಜನ ಮಗಳನ್ನು, ಆಹುಕನ ಮಗಳಾದ 'ಭುತನು'ವನ್ನೂ ವಿವಾಹವಾಗಿದ್ದ. ಸತ್ಯಕೇತು ಮಗನಾದನು.

## ವಸುದೇವ ಇತರ ಭಾರ್ಯಾಪುತ್ರರು

ವಸುದೇವನಿಗೆ ಶಾಂತಿದೇವಾ ಭಾರ್ಯೆಯಲ್ಲಿ ಭೋಜ-ವಿಜಯರೆಂಬಿಬ್ಬರು ಮಕ್ಕಳಾದರು. ಸುನಾಮ ಅಥವಾ ಸುನಾಮ್ನಿಯಲ್ಲಿ ವೃಕದೇವ ಮತ್ತು ಗದರು. ದೇವರಕ್ಷಿತಳು. ಉಪಾಸಂಗವರನೆಂಬ ಮಗನನ್ನು, ವೃಕದೇವಿಗೆ 'ಅಗಾವಹ'ನೆಂಬ ಮಗನಾದನು. ವೃಕದೇವಿಯು ತ್ರಿಗರ್ತ (ಲಾಹೋರಿನ ಜಲಂಧರ) ರಾಜನ ಮಗಳು.

## ಕಾಲಯವನನ ಜನ್ಮ

**ಕನ್ಯಾ ತ್ರಿಗರ್ತ ರಾಜಸ್ಯ ಭ್ರಾತಾ ವೈ ಶೈಶಿರಾಯಣಃ ।**
**ಜಿಜ್ಞಾಸಾಂ ಪೌರುಷೇ ಚಕ್ರೇ ನ ಚಸ್ಕಂದೇಽಥ ಪೌರುಷಮ್ ॥ 8 ॥**
**ಕೃಷ್ಣಾಯಸ ಸಮಪ್ರಖ್ಯೋ ವರ್ಷೇ ದ್ವಾದಶಮೇ ತಥಾ ।**
**ಮಿಥ್ಯಾಭಿಶಪ್ತೋ ಗಾರ್ಗ್ಯಸ್ತು ಮನ್ಯುನಾಭಿಸಮೀರಿತಃ ॥ 9 ॥**

ತ್ರಿಗರ್ತ ರಾಜನಿಗೆ ವಿವಾಹ ಯೋಗ್ಯ ಕನ್ಯೆಯಿದ್ದಳು. ಇವಳನ್ನು ಯಾರಿಗೆ ನೀಡಬೇಕೆಂದು ವಿಚಾರಿಸುತ್ತಿರುವಾಗ ಮಹಾಸತ್ಯವಂತನಾದ ಗರ್ಗರ ಹೆಸರೂ ಬಂತು ತ್ರಿಗರ್ತರಾಜನ ಮಗನು ತನ್ನ ತಂಗಿಗೆ ಗರ್ಗನನ್ನು ನೀಡಲು ಜಿತೇಂದ್ರಿಯನಾದ ಗರ್ಗನು ಏನು ಸುಖ ನೀಡಬಲ್ಲನು? ಎಂದು ಅವನು ಪುರುಷನೋ ಅಪುರುಷನೋ ತಿಳಿಯಲು ಬಯಸಿದ. ಬಹಳ ಉಪಾಯಗಳಿಂದ ಅವನನ್ನು ಪರೀಕ್ಷಿಸಿದರೂ ಅವನು ಊರ್ಧ್ವರೇತಸ್ಕ-ನಾಗಿಯೆ ಇದ್ದ. ಇದನ್ನು ಸಭೆಯಲ್ಲಿ ಗರ್ಗನು 'ನಪುಂಸಕ'. ಇವನಿಗೆ ನನ್ನ ತಂಗಿ ನೀಡಲಾರೆ ಎಂದು ಜೋರಾಗಿ ಅಪಹಾಸ ಮಾಡಿದ. ಯದುಗಳೂ ಸಹ ಜೋರಾಗಿ ನಕ್ಕರು. ಮುನಿಯ ಜಿತೇಂದ್ರಿಯತ್ವ ತಿಳಿಯದೇ ಆಕ್ಷೇಪ ಮಾಡಿದ್ದ. ವೃಷ್ಣಿಗಳ ಪುರೋಹಿತನಾದ ಗರ್ಗನ ಎದುರಿಗೇನೆ ಬೇರೊಬ್ಬ ಶ್ಯಾಲನು ನಿನ್ನ ಭಾವ ಗರ್ಗನು ಷಂಡನೆಂದು ಹೇಳಿದ. ಇದನ್ನು ಕೇಳಿದ ಗರ್ಗನು ಭಕ್ತನಾದರೂ ಅಸುರಾವೇಶ ದೂಷಿತನಾಗಿ ಭಗವದಿಚ್ಛೆಯಿಂದ ಕೃಷ್ಣನನ್ನು ಹಾಗೂ ವೃಷ್ಣಿಗಳನ್ನೆ ಇಲ್ಲದಂತೆ ಮಾಡುವನೋ ಅವನಿಗಾಗಿ ನಾನು ಪ್ರಯತ್ನಿಸುವೆ ಎಂದು ಸುದಾರುಣ ತಪಸ್ಸನ್ನು ಮಾಡಿದನು. ಹನ್ನೆರಡು ತಿಂಗಳು ಕಠಿಣ ವ್ರತ ಮಾಡಿದ. ಕಬ್ಬಿಣದ ಚೂರುಗಳನ್ನು ತಿಂದು ತಪವಗೈದ.

ರುದ್ರದೇವನು ವರವನ್ನಿತ್ತನು. ವೃಷ್ಣ್ಯಂಧಕ ನಾಶಕಾರಿಯು ನಿನಗೆ ಮಗನಾಗುವನು ಎಂದು.

**ಗೋಪಕನ್ಯಾಮುಪಾದಾಯ ಮೈಥುನಾಯೋಪ ಚಕ್ರಮೇ ।**
**ಗೋಪಾಲೀ ತ್ವಪ್ಸರಾಃ ತಸ್ಯ ಗೋಪಸ್ತ್ರೀವೇಷಧಾರಿಣೀ ॥ 10 ॥**
**ಧಾರಯಾಮಸ ಗಾರ್ಗ್ಯಸ್ಯ ಗರ್ಭಂ ದುರ್ಧರ ಮಚ್ಯುತಮ್ ।**
**ಮಾನುಷ್ಯಾಂ ಗಾರ್ಗ್ಯಭಾರ್ಯಾಯಾಂ ನಿಯೋಗಾಚ್ಛೂಲಪಾಣಿನಃ॥ 11 ॥**

ರುದ್ರದೇವರ ವರ ಪಡೆದು ಗಾರ್ಗ್ಯನು ಮರಳಿ ಬರುವಾಗ ದಾರಿಯಲ್ಲಿ ಒಬ್ಬ ನಿಷ್ಪತ್ರಿಕನಾದ ಯವನರಾಜನು ಆದರ ಸತ್ಕಾರ ಮಾಡಿದನು. ಗಾರ್ಗ್ಯನನ್ನು ಸಂತಾನಕ್ಕಾಗಿ ಬೇಡಿದನು. ಗೋಪಿಕಾಸ್ತ್ರೀಯರಿಂದ ವಿಶೇಷ ಗೌರವ ಸಲ್ಲಿಸಿದ. ಅಸುರಾವೇಶದಿಂದ ಕೂಡಿ ಕೃಷ್ಣವಂಶವನ್ನೆ ನಾಶ ಮಾಡಲು ಪ್ರತಿಜ್ಞೆಗೈದ ಗರ್ಗರನ್ನು ಭಯಂಕರ ಆಸುರಿಯು ಅಪ್ಸರೆಯಾಗಿದ್ದು ಅವನನ್ನು ಸಮೀಪಿಸಿದಳು. ಗೋಪವೇಷ ಧರಿಸಿ ಬಂದ ಗೋಪಾಲೀ ವೇಷದ ಆಸುರಿಯು ಗೋಪಿಕಾ ವೇಷದಿಂದಲೇ ಇರುತ್ತಿದ್ದಳು. ಒಂದು ದಿನ ಗರ್ಗನು ಮನುಷ್ಯಲೋಕ ದುರ್ಲಭವಾದ ಗೋಪಿಕಾಲಲನೆಯ ಲಲಿತಲಾವಣ್ಯ ನೋಡಿ ಮರುಳಾಗಿ ಅವಳೊಂದಿಗೆ ರಮಿಸಿದನು. ಹೀಗೆ ರುದ್ರದೇವರ ವರದಿಂದಾಗಿ ದುಸ್ಸಹವಾದ ಆ ಗಾರ್ಗ್ಯನ ತೇಜಸ್ಸು ತುರುಗಾಹಿ ತಂಡದಲ್ಲಿರುವ ಗೋಪಾಲಿಯಿಂದ ಧರಿಸಲ್ಪಟ್ಟಿತು. ಹೀಗೆ ಹುಟ್ಟಿದವನೇ **ಕಾಲಯವನು**[1].

---

1. ಕಾಲಯವನ :
   ಗರ್ಗರು ಅಸುರಾವೇಶದಿಂದಾಗಿ ಕೃಷ್ಣ ವಿರುದ್ಧ ನಡೆಸಿದ. ಕೃಷ್ಣನು ಕಾಲಯವನನ್ನು ಕೊಂದಾಗ 25ರ ಹರೆಯುವನು. ಕಾಲಯವನ ಇಪ್ಪತ್ತು ವರ್ಷದವನು. ಕಾಲಯವನ ಹುಟ್ಟುವಾಗ ಐದಾರು ವರ್ಷ ಕೃಷ್ಣನಿಗೆ ಅದಕ್ಕಿಂತ ಮೊದಲು ಪರಿಹಾಸ ನಂತರ ಒಂದು ವರ್ಷ ತಪಸ್ಸು. ಕೃಷ್ಣನಿಗೆ ಮೂರು ನಾಲ್ಕು ವರ್ಷ ಮಾತ್ರ. ಆದ್ದರಿಂದ ಕೃಷ್ಣ ಪ್ರೇರಿತರಾದ ಯಾದವರು ನಕ್ಕಿದ್ದಲ್ಲ. ಪೂತನ್ಯಾದಿಗಳನ್ನು ಕೊಂದ ಶ್ರೀಕೃಷ್ಣನು ಇವರ ಬೆಂಬಲದಲ್ಲಿದ್ದಾನೆಂದೇ ಈ ಯಾದವರು ನನ್ನನ್ನು ಅಪಹಾಸ್ಯ ಮಾಡಿದ್ದು. ಅವನನ್ನು ಈ ಯಾದವರನ್ನು ಕೊಲ್ಲುವ ಮಗ ಪಡೆಯುತ್ತೇನೆ. ಆಗ ನಾನು ನಪುಂಸಕವೆಂದು ಹಳಿದವರಿಗೂ ಬುದ್ಧಿಕಲಿಸಿದಂತಾಗುತ್ತದೆ ಎಂದು. ಗರ್ಗರು ಎಷ್ಟು ವರ್ಷ ತಪಸ್ಸು ಮಾಡಿದ್ದು? ವಿಷ್ಣುಪುರಾಣವು ಹನ್ನೆರಡು ವರ್ಷ ಎಂದಿದೆ.

## ವಸುದೇವ ಇತರ ಭಾರ್ಯಾಪುತ್ರರು

ವಸುದೇವನಿಗೆ ಶಾಂತಿದೇವಾ ಭಾರ್ಯೆಯಲ್ಲಿ ಭೋಜ-ವಿಜಯರೆಂಬಿಬ್ಬರು ಮಕ್ಕಳಾದರು. ಸುನಾಮ ಅಥವಾ ಸುನಾಮ್ನಿಯಲ್ಲಿ ವೃಕದೇವ ಮತ್ತು ಗದರು. ದೇವರಕ್ಷಿತಳು. ಉಪಾಸಂಗವರನೆಂಬ ಮಗನನ್ನು, ವೃಕದೇವಿಗೆ 'ಅಗಾವಹ'ನೆಂಬ ಮಗನಾದನು. ವೃಕದೇವಿಯು ತ್ರಿಗರ್ತ (ಲಾಹೋರಿನ ಜಲಂಧರ) ರಾಜನ ಮಗಳು.

## ಕಾಲಯವನನ ಜನ್ಮ

**ಕನ್ಯಾ ತ್ರಿಗರ್ತ ರಾಜಸ್ಯ ಭ್ರಾತಾ ವೈ ಶೈಶಿರಾಯಣಃ ।**
**ಜಿಜ್ಞಾಸಾಂ ಪೌರುಷೇ ಚಕ್ರೇ ನ ಚಸ್ಕಂದೇऽಥ ಪೌರುಷಮ್ ॥ 8 ॥**
**ಕೃಷ್ಣಾಯಸ ಸಮಪ್ರಖ್ಯೋ ವರ್ಷೇ ದ್ವಾದಶಮೇ ತಥಾ ।**
**ಮಿಥ್ಯಾಭಿಶಪ್ತೋ ಗಾರ್ಗ್ಯಸ್ತು ಮನ್ಯುನಾಭಿಸಮೀರಿತಃ ॥ 9 ॥**

ತ್ರಿಗರ್ತ ರಾಜನಿಗೆ ವಿವಾಹ ಯೋಗ್ಯ ಕನ್ಯೆಯಿದ್ದಳು. ಇವಳನ್ನು ಯಾರಿಗೆ ನೀಡಬೇಕೆಂದು ವಿಚಾರಿಸುತ್ತಿರುವಾಗ ಮಹಾಸತ್ಯವಂತನಾದ ಗರ್ಗರ ಹೆಸರೂ ಬಂತು ತ್ರಿಗರ್ತರಾಜನ ಮಗನು ತನ್ನ ತಂಗಿಗೆ ಗರ್ಗನನ್ನು ನೀಡಲು ಜಿತೇಂದ್ರಿಯನಾದ ಗರ್ಗನು ಏನು ಸುಖ ನೀಡಬಲ್ಲನು? ಎಂದು ಅವನು ಪುರುಷನೋ ಅಪುರುಷನೋ ತಿಳಿಯಲು ಬಯಸಿದ. ಬಹಳ ಉಪಾಯಗಳಿಂದ ಅವನನ್ನು ಪರೀಕ್ಷಿಸಿದರೂ ಅವನು ಊರ್ಧ್ವರೇತಸ್ಕ-ನಾಗಿಯೆ ಇದ್ದ. ಇದನ್ನು ಸಭೆಯಲ್ಲಿ ಗರ್ಗನು 'ನಪುಂಸಕ'. ಇವನಿಗೆ ನನ್ನ ತಂಗಿ ನೀಡಲಾರೆ ಎಂದು ಜೋರಾಗಿ ಅಪಹಾಸ ಮಾಡಿದ. ಯದುಗಳೂ ಸಹ ಜೋರಾಗಿ ನಕ್ಕರು. ಮುನಿಯ ಜಿತೇಂದ್ರಿಯತ್ವ ತಿಳಿಯದೇ ಆಕ್ಷೇಪ ಮಾಡಿದ್ದ. ವೃಷ್ಣಿಗಳ ಪುರೋಹಿತನಾದ ಗರ್ಗನ ಎದುರಿಗೇನೆ ಬೇರೊಬ್ಬ ಶ್ಯಾಲನು ನಿನ್ನ ಭಾವ ಗರ್ಗನು ಷಂಡನೆಂದು ಹೇಳಿದ. ಇದನ್ನು ಕೇಳಿದ ಗರ್ಗನು ಭಕ್ತನಾದರೂ ಅಸುರಾವೇಶ ದೂಷಿತನಾಗಿ ಭಗವದಿಚ್ಛೆಯಿಂದ ಕೃಷ್ಣನನ್ನು ಹಾಗೂ ವೃಷ್ಣಿಗಳನ್ನೆ ಇಲ್ಲದಂತೆ ಮಾಡುವನೋ ಅವನಿಗಾಗಿ ನಾನು ಪ್ರಯತ್ನಿಸುವೆ ಎಂದು ಸುದಾರುಣ ತಪಸ್ಸನ್ನು ಮಾಡಿದನು. ಹನ್ನೆರಡು ತಿಂಗಳು ಕಠಿಣ ವ್ರತ ಮಾಡಿದ. ಕಬ್ಬಿಣದ ಚೂರುಗಳನ್ನು ತಿಂದು ತಪವಗೈದ.

ರುದ್ರದೇವನು ವರವನ್ನಿತ್ತನು. ವೃಷ್ಣ್ಯಂಧಕ ನಾಶಕಾರಿಯು ನಿನಗೆ ಮಗನಾಗುವನು ಎಂದು.

**ಗೋಪಕನ್ಯಾಮುಪಾದಾಯ ಮೈಥುನಾಯೋಪ ಚಕ್ರಮೇ ।**
**ಗೋಪಾಲೀ ತ್ವಪ್ಸರಾಃ ತಸ್ಯ ಗೋಪಸ್ತ್ರೀವೇಷಧಾರಿಣೀ ॥ 10 ॥**
**ಧಾರಯಾಮಸ ಗಾರ್ಗ್ಯಸ್ಯ ಗರ್ಭಂ ದುರ್ಧರ ಮಚ್ಯುತಮ್ ।**
**ಮಾನುಷ್ಯಾಂ ಗಾರ್ಗ್ಯಭಾರ್ಯಾಯಾಂ ನಿಯೋಗಾಚ್ಛೂಲಪಾಣಿನಃ॥ 11 ॥**

ರುದ್ರದೇವರ ವರ ಪಡೆದು ಗಾರ್ಗ್ಯನು ಮರಳಿ ಬರುವಾಗ ದಾರಿಯಲ್ಲಿ ಒಬ್ಬ ನಿಷ್ಪತ್ರಿಕನಾದ ಯವನರಾಜನು ಆದರ ಸತ್ಕಾರ ಮಾಡಿದನು. ಗಾರ್ಗ್ಯನನ್ನು ಸಂತಾನಕ್ಕಾಗಿ ಬೇಡಿದನು. ಗೋಪಿಕಾಸ್ತ್ರೀಯರಿಂದ ವಿಶೇಷ ಗೌರವ ಸಲ್ಲಿಸಿದ. ಅಸುರಾವೇಶದಿಂದ ಕೂಡಿ ಕೃಷ್ಣವಂಶವನ್ನೆ ನಾಶ ಮಾಡಲು ಪ್ರತಿಜ್ಞೆಗೈದ ಗರ್ಗರನ್ನು ಭಯಂಕರ ಆಸುರಿಯು ಅಪ್ಸರೆಯಾಗಿದ್ದು ಅವನನ್ನು ಸಮೀಪಿಸಿದಳು. ಗೋಪವೇಷ ಧರಿಸಿ ಬಂದ ಗೋಪಾಲೀ ವೇಷದ ಆಸುರಿಯು ಗೋಪಿಕಾ ವೇಷದಿಂದಲೇ ಇರುತ್ತಿದ್ದಳು. ಒಂದು ದಿನ ಗರ್ಗನು ಮನುಷ್ಯಲೋಕ ದುರ್ಲಭವಾದ ಗೋಪಿಕಾಲಲನೆಯ ಲಲಿತಲಾವಣ್ಯ ನೋಡಿ ಮರುಳಾಗಿ ಅವಳೊಂದಿಗೆ ರಮಿಸಿದನು. ಹೀಗೆ ರುದ್ರದೇವರ ವರದಿಂದಾಗಿ ದುಸ್ಸಹವಾದ ಆ ಗಾರ್ಗ್ಯನ ತೇಜಸ್ಸು ತುರುಗಾಹಿ ತಂಡದಲ್ಲಿರುವ ಗೋಪಾಲಿಯಿಂದ ಧರಿಸಲ್ಪಟ್ಟಿತು. ಹೀಗೆ ಹುಟ್ಟಿದವನೇ **ಕಾಲಯವನು**[1].

---

1. ಕಾಲಯವನ :

ಗರ್ಗರು ಅಸುರಾವೇಶದಿಂದಾಗಿ ಕೃಷ್ಣ ವಿರುದ್ಧ ನಡೆಸಿದ. ಕೃಷ್ಣನು ಕಾಲಯವನನ್ನು ಕೊಂದಾಗ 25ರ ಹರೆಯುವನು. ಕಾಲಯವನ ಇಪ್ಪತ್ತು ವರ್ಷದವನು. ಕಾಲಯವನ ಹುಟ್ಟುವಾಗ ಐದಾರು ವರ್ಷ ಕೃಷ್ಣನಿಗೆ ಅದಕ್ಕಿಂತ ಮೊದಲು ಪರಿಹಾಸ ನಂತರ ಒಂದು ವರ್ಷ ತಪಸ್ಸು. ಕೃಷ್ಣನಿಗೆ ಮೂರು ನಾಲ್ಕು ವರ್ಷ ಮಾತ್ರ. ಆದ್ದರಿಂದ ಕೃಷ್ಣ ಪ್ರೇರಿತರಾದ ಯಾದವರು ನಕ್ಕಿದ್ದಲ್ಲ. ಪೂತನ್ಯಾದಿಗಳನ್ನು ಕೊಂದ ಶ್ರೀಕೃಷ್ಣನು ಇವರ ಬೆಂಬಲದಲ್ಲಿದ್ದಾನೆಂದೇ ಈ ಯಾದವರು ನನ್ನನ್ನು ಅಪಹಾಸ್ಯ ಮಾಡಿದ್ದು. ಅವನನ್ನು ಈ ಯಾದವರನ್ನು ಕೊಲ್ಲುವ ಮಗ ಪಡೆಯುತ್ತೇನೆ. ಆಗ ನಾನು ನಪುಂಸಕವೆಂದು ಹಳಿದವರಿಗೂ ಬುದ್ಧಿಕಲಿಸಿದಂತಾಗುತ್ತದೆ ಎಂದು. ಗರ್ಗರು ಎಷ್ಟು ವರ್ಷ ತಪಸ್ಸು ಮಾಡಿದ್ದು? ವಿಷ್ಣುಪುರಾಣವು ಹನ್ನೆರಡು ವರ್ಷ ಎಂದಿದೆ.

## ಕಾಲಯವನ ಯುದ್ಧ ಸಿದ್ಧತೆ

**ಅಪುತ್ರಸ್ಯ ಸ ರಾಜ್ಞಸ್ತು ವವೃಧೇಽಂತಃ ಪುರೇ ಶಿಶುಃ ।**
**ಯವನಸ್ಯ ಮಹಾರಾಜ ಸ ಕಾಲಯವನೋಽಭವತ್ ॥ 12 ॥**
**ಸ ಯುದ್ಧ ಕಾಮೀ ನೃಪತಿಃ ಪರ್ಯಪೃಚ್ಛದ್ ದ್ವಿಜೋತ್ತಮಾನ್ ।**
**ವೃಷ್ಣ್ಯಂಧಕ ಕುಲಂ ತಸ್ಯ ನಾರದೋಽಕಥಯತ್ ವಿಭುಃ ॥ 13 ॥**

ಅಪುತ್ರವಂತನಾದ ಯವನನು ರುದ್ರದೇವರ ವರದಿಂದ ಮಹಾಪರಾಕ್ರಮಿಯೆಂದು ತಿಳದು ತನ್ನ ಅಂತಃಪುರದಲ್ಲಿಯೇ ಅವನನ್ನು ತಂದಿಟ್ಟು ಬೆಳೆಸಿದನು. ಹೀಗೆ ಬ್ರಹ್ಮರ್ಷಿಯಿಂದ ಬಲಿಷ್ಠ ಪುತ್ರ ಕಾಮಳಾದ ಗೋಪಾಲೀ ವೇಷದ ಆಸುರಿಯಲ್ಲಿ ಹುಟ್ಟಿ ಯವನನ ಮನೆಯಲ್ಲಿ ಬೆಳೆದು ಕಾಲಯವನನೇ ಆದನು. ಯವನ ರಾಜ ಸತ್ತ ಬಳಿಕ ಇವನೇ ಯವನ ರಾಜನಾದನು.

ರಾಜ್ಯಾರೂಢನಾದ ಕಾಲಯವನನು ಪ್ರಾಯ ತುಂಬಿದ ದೇಹದಲ್ಲಿ ಬಿಸಿರಕ್ತ ಉಕ್ಕಿದ ಬಲ ಪೌರುಷಗಳು ಸೊಕ್ಕಿ ಸಕಲ ವೈರಿಗಳನ್ನೂ ನಾಶ ಮಾಡಿದನು. ಎಲ್ಲ ರಾಜರೂ ಅವನ ದಾಸರಾದರು. ಮತ್ತಷ್ಟು ಮದ ನೆತ್ತಿಗೇರಿತು. ಯಾರನ್ನು ಹೊಡೆಯಲಿ? ಯಾರನ್ನು ಕೊಂದು ಹಾಕಲಿ ಎಂದೆ ಹೊಂಚು ಹಾಕುತ್ತಿದ್ದನು. ಒಂದು ನಾರದರು ಅವನ ಕಣ್ಣಿಗೆ ಬಿದ್ದರು. ನಾರದರೇ ! ಈಗ ಭೂಮಂಡಲದಲ್ಲಿ ನನ್ನೊಂದಿಗೆ ಯುದ್ಧ ಮಾಡಬಲ್ಲ ಶೂರರು ಯಾರಾದರು ಇರುವರೇ ಹೇಳ ಎಂದ. ನಿನ್ನೊಂದಿಗೆ ಹೋರಾಡಬಲ್ಲವರೆಂದರೆ ಯಾದವರು ಮಾತ್ರ ಎಂದರು. ಕಾಲಯವನನು ಕೋಟ್ಯಾವಧಿ ಮ್ಲೇಂಚರೊಂದಿಗೆ ಸೇರಿ ಚತುರಂಗ ಸೇನಾವಾಹಿನಿಯೊಂದಿಗೆ ಮಥುರಾಪುರಿಗೆ ನಡೆದನು.

---

**ಅಸ್ಮೈ ವರ್ಷೇತು ದ್ವಾದಶೇ ಹರಃ** (5.23.3) ಹರಿವಂಶವೂ ಮುಂದೆ (57 ಅ.6) **'ತತೋ ದ್ವಾದಶ ವರ್ಷಾಣಿ ಸೋಽಯಶ್ಚೂರ್ಣಮಭಕ್ಷಯತ್'** ಎಂದಿದೆ.

ತಾ.ನಿರ್ಣಯದಲ್ಲಿ ಒಂದೇ ವರ್ಷ ಎಂದಿದೆ. **'ಸ ಚೂರ್ಣಮಾಯಸಂ ತ್ವದನ್ ದದರ್ಶ ಚಾಬ್ದತಃ ಶಿವಮ್'** ಈ ನಿರ್ಣಯವು ಪ್ರಬಲವಾದದ್ದು. ಇಲ್ಲಿ ಹನ್ನೆರಡು ತಿಂಗಳು. ಕಠಿಣ ತಪಸ್ಸು ಮಾಡಿದ್ದರಿಂದ ವರ್ಷವೆನ್ನಲಾಗಿದೆ.

**ಅಹಸ್ತು ಮಾಸಶಬ್ದೋಕ್ತಂ ಯತ್ರ ಚಿಂತಾಯುತಂ ವ್ರಜೇತ್ ॥** – *ಭಾ. ತಾ.*

### ಶ್ರೀಕೃಷ್ಣ ಯಾದವರ ಸಮಾವೇಶ

**ಅಕ್ಷೌಹಿಣ್ಯಾ ತು ಸೈನ್ಯಸ್ಯ ಮಥುರಾ ಮಭ್ಯಯಾತ್ ತದಾ ।**
**ದೂತಂ ಸಂಪ್ರೇಷಯಾಮಾಸ ವೃಷ್ಣ್ಯಂಧಕ ನಿವೇಶನಮ್ ॥ 14 ॥**
**ತತೋ ವೃಷ್ಯಂಧಕಾಃ ಕೃಷ್ಣಂ ಪುರಸ್ಕೃತ್ಯ ಮಹಾಮತಿಮ್ ।**
**ಸಮೇತಾ ಮಂತ್ರಯಾಮಾಸುಃ ಯವನಸ್ಯ ಭಯಾತ್ ತದಾ ॥ 15 ॥**
**ಕೃತ್ವಾ ಚ ನಿಶ್ಚಯಂ ಸರ್ವೇ ಪಲಾಯನ ಪರಾಯಣಾಃ ।**
**ವಿಹಾಯ ಮಥುರಾಂ ರಮ್ಯಾಂ ಮಾನಯಂತಃ ಪಿನಾಕಿನಮ್ ॥ 16 ॥**
**ಕುಶಸ್ಥಲೀಂ ದ್ವಾರವತೀಂ ನಿವೇಶಯಿತುಮೀಪ್ಸವಃ ॥ 17 ॥**

ಕಾಲಯವನನು ದೊಡ್ಡ ಸೈನ್ಯದೊಂದಿಗೆ ಮಧುರೆಗೆ ಲಗ್ಗೆ ಇಟ್ಟ ಸಂಗತಿಯನ್ನು ತನ್ನ ದೂತನ ಮೂಲಕ ಸಂದೇಶ ಕಳುಹಿಸಿದ. ವೃಷ್ಣಿಗಳು ಅಂಧಕರೆಲ್ಲರೂ ಭಯಗ್ರಸ್ತರಾದರು. ಸಭೆ ಕರೆದು ರಾಜತಂತ್ರ ಕುಶಲನಾದ ಶ್ರೀಕೃಷ್ಣನಲ್ಲಿಗೆ ಮಂತ್ರಾಲೋಚನೆಗಾಗಿ ಬಂದರು. ಯಾದವರೆಲ್ಲರೂ ಈ ದೇಶ ಬಿಟ್ಟು ಬೇರೊಂದು ಸ್ಥಳಕ್ಕೆ ಹೋಗುವುದೆ ಯುಕ್ತವೆಂದು ತಿಳಿದರು. ಶ್ರೀಕೃಷ್ಣನು ಕಾಲಯವನನು ರುದ್ರದೇವನ ವರದಿಂದ ಅಜೇಯನಾಗಿದ್ದಾನೆ. ಅವನನ್ನು ಎದುರಿಸಲು ನಾವು ಸಮರ್ಥರಾದರೂ ರುದ್ರದೇವನ ವರವನ್ನು ಮಾನ್ಯ ಮಾಡೋಣ. ನಿವೆಲ್ಲರೂ ಬೇರೊಂದು ಮಾರ್ಗದಿಂದ ಹೊರಹೊರಡಿರಿ. ಕುಶಸ್ಥಲಿಯು ನಮಗೆ ಯೋಗ್ಯ ನಿರ್ಭಯ ಪ್ರದೇಶವಾಗಿದೆ. ಕಾಲಯವನ ಮಥುರೆಗೆ ಪ್ರವೇಶಿಸುವುದೊಳಗೆ ಮಥುರೆ ಖಾಲಿಯಾಗಲಿ. ಶ್ರೀಕೃಷ್ಣನ ಮಾತು ಸರ್ವಸಮ್ಮತವಾಯಿತು. **ದ್ವಾರಾವತಿ**[2]ಯೆಂಬ ಅಪರನಾಮವುಳ್ಳ ಕುಶಸ್ಥಲಿಗೆ ಆಗಮಿಸಿದರು.

---

2. ದ್ವಾರಾವತೀ :
ಶಂಯಾತಿಯ ಮಗ ಆನರ್ತನು. ಸುಕನ್ಯೆಯ ತಮ್ಮ. ಇವನಿಂದ ರೇವತನು ರೇವತನಿಂದ ಸಮುದ್ರ ಮಧ್ಯೆದಲ್ಲಿ ನಿರ್ಮಿತಪುರಿಯೇ ಕುಶಸ್ಥಲೀ. ಕುಶಗಳು ಸಮೃದ್ಧವಾಗಿ ಬೆಳೆದು ಸಾರ್ಥಕನಾಮ ಹೊಂದಿತ್ತು. ಇವನ ಮಗ ರೈವತ/ ಕಕುದ್ಮಿಯು. ರೈವತಕವೆಂಬ ಗಿರಿಯೂ ಅಲ್ಲಿತ್ತು. ರೇವತನ ಮೊಮ್ಮಗಳಾದ ರೈವತಿಯನ್ನೆ ಬಲರಾಮ ವಿವಾಹವಾದದ್ದು. ಈ ಕುಶಸ್ಥಲಿಯು ಕ್ರಮೇಣ

## ಕೃಷ್ಣ ಜನ್ಮ ಫಲಸ್ತುತಿ

**ಇತಿ ಕೃಷ್ಣಸ್ಯ ಜನ್ಮೇದಂ ಯಃ ಶುಚಿಃ ನಿಯತೇಂದ್ರಿಯಃ ।**
**ಪರ್ವಸು ಶ್ರಾವಯೇದ್ ವಿದ್ವಾನ್ ಅನೃಣಃ ಸ ಸುಖೀ ಭವೇತ್ ॥ 18 ॥**

ವಿದ್ವಾಂಸನಾದ ವ್ಯಕ್ತಿಯು ಜಿತೇಂದ್ರಿಯನಾಗಿ ಭಕ್ತಿಯಿಂದ ಈ ಕೃಷ್ಣಜನ್ಮ ವೃತ್ತಾಂತದಿಂದ ಕೂಡಿರುವ ಈ ಅಧ್ಯಾಯ ಪರ್ವಕಾಲಗಳಲ್ಲಿ ಪಠಿಸುವನೋ ಶ್ರವಣ ಮಾಡುವನೋ ಅವನು ಪಿತೃಋಣದಿಂದ ಮುಕ್ತನಾಗಿ ಸುಪುತ್ರನನ್ನು ಪಡೆದು ಇಹ ಪರಗಳಲ್ಲಿ ಸುಖಿಯಾಗುವನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶ್ರೀಕೃಷ್ಣ ಪ್ರಾದುರ್ಭಾವ-ದ್ವಾರಾವತೀ ನಿರ್ಮಾಣವೆಂಬಲ್ಲಿ
ಮುವತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

---

ಜಲಾಪ್ಲುತವಾಯಿತು. ಕೃಷ್ಣನು ಪುನಃ ಸಮುದ್ರವನ್ನೂ ದೂರ ಕಳಿಸಿ ಅಭಿವ್ಯಕ್ತಗೊಳಿಸಿ 'ದ್ವಾರಾವತೀ' ಎಂದು ಹೆಸರಿಟ್ಟ, ಸರ್ವವರ್ಣದವರಿಗೂ ಇದು ಮೋಕ್ಷ ಹೊಂದಲು ದ್ವಾರವಾಗಿತ್ತು. ಅನೇಕ ದ್ವಾರಗಳಿದ್ದದ್ದೂ ಹೌದು. ***ಕೃತಾಂ ದ್ವಾರವತೀಂ ನಾಮ ಬಹುದ್ವಾರಾಂ ಮನೋರಮಾಮ್*** ಶ್ರೀಕೃಷ್ಣನ ಆಜ್ಞೆಯಂತೆ ಸಮುದ್ರನು ಜಲರಹಿತವನ್ನಾಗಿಸಿ ಹನ್ನೆರಡು ಯೋಜನ ದ್ವಾರಕೆಯನ್ನು ಭೌವನನು ನಿರ್ಮಿಸಿದನು. ಭಗವಂತನು ದ್ವಾರಕೆಯ ಲವಣೋದಕವನ್ನು ಅಮೃತದಂತೆ ಸಿಹಿ ನೀರನ್ನಾಗಿಸಿದನು. ಶತ್ರುಗಳು ಯಾದವರಿಗೆ ತೊಂದರೆ ನೀಡದಂತೆ ಇರಲು ಇದನ್ನು ತಯಾರಿಸಿದನು.




# ಅಥ ಷಟ್‌ತ್ರಿಂಶೋಽಧ್ಯಾಯಃ

## ಜ್ಯಾಮಘ ವಂಶ ನಿರೂಪಣೆ

**ಕ್ರೋಷ್ಟೋರೇವಾಭವತ್ ಪುತ್ರೋ ವೃಜಿನೀವಾನ್ ಮಹಾಯಶಾಃ ।**
**ವೃಜಿನೀವತ್ ಸುತಶ್ಚಾಪಿ ಸ್ವಾಹಿಃ ಸ್ವಾಹಾಕೃತಾಂ ವರಃ ॥ 1 ॥**

ಯದುವಿನ ಮಗ ಕ್ರೋಷ್ಟುವಿಗೆ ವೃಜಿನೀವಾನ್ ಎಂಬ ಮಗನಿದ್ದನು. ಇವನ ಮಗನೇ ಸ್ವಾಹಿ. ಇವನು ಯಜ್ಞದಲ್ಲಿ ಸ್ವಾಹಾಕಾರಕ್ಕೆ ಪ್ರಸಿದ್ಧನು. ಅನೇಕ ಯಜ್ಞಗಳನ್ನು ಮಾಡಿದವನು. ಇವನು ಮಹಾವೀರನು.

ಸ್ವಾಹಿಯ ಮಗನೇ 'ರುಷದ್ಗು'. ಇವನು ಮಹಾವಾಗ್ಮಿಯಾಗಿದ್ದನು. ಭೂರಿದಕ್ಷಿಣೆಗಳಿಂದ ದೊಡ್ಡ ಯಾಗಗಳನ್ನು ಮಾಡಿದವನು. ರುಷದ್ಗುವಿಗೆ ಪುತ್ರ ಪೌತ್ರಾದಿಗಳನ್ನು ಪಡೆದು ಕುಲೋದ್ಧಾರ ಮಾಡುವ ಮಗನಾಗಬೇಕೆಂದು ಬಯಸಿದನು. ಪುತ್ರಕಾಮೇಷ್ಟಿ ಯಾಗವನ್ನು ಮಾಡಿದ್ದರ ಫಲವಾಗಿ 'ಚಿತ್ರರಥನು' ಜನಿಸಿದನು. ಚಿತ್ರರಥನ ಮಗನೇ ಶಶಬಿಂದುವು. ರಾಜರ್ಷಿಯೆನಿಸಿ ಹಿಂದಿನ ರಾಜರ್ಷಿಗಳಂತೆ ವಿಧಿವತ್ತಾದ ಅನೇಕ ದೈವಿಕ ಕರ್ಮಗಳನ್ನಾಚರಿಸುತ್ತಿದ್ದನು. ಶಶಬಿಂದುವಿಗೆ ಪೃಥುಶ್ರವಸನೂ. ಇವನ ಮಗನೆ ಉತ್ತರ. ಉತ್ತರನಿಂದ ಸುಯಜ್ಞನು. ಧರ್ಮಿಷ್ಠನೂ ಯಜ್ಞಶೀಲನೂ ಆದ ಉಶತನು. ಉಶತನ ಮಗ ಶಿನೇಯುವು. ಇವನಿಗೆ ಮರುತ್ತನು – ಮರುತ್ತನಿಗೆ ಕಂಬಲ ಬರ್ಹಿಷನು. ಕಂಬಲ ಬರ್ಹಿಷನಿಗೆ ನೂರು ಮಂದಿ ಮಕ್ಕಳಾದರೂ ರುಕ್ಮಕವಚನು ಮಾತ್ರ ಉಳಿದನು. ಮಹಾ ಪರಾಕ್ರಮಿಯಾದ ರುಕ್ಮಕವಚನು ಧನುರ್ಬಾಣಧಾರಿಯಾಗಿ ನೂರು ಮಂದಿ ಶತ್ರು ರಾಜರನ್ನು ಸಂಹರಿಸಿದನು. ಇವನ ಮಗನೇ ಪರಾಜಿತ. ಪರಾಜಿತನಿಗೆ ಐದು ಮಂದಿ

ಪುತ್ರರು. ರುಕ್ಮೇಷು - ಪೃಥುರುಕ್ಮ - ಜ್ಯಾಮಘ - ಪಾಲಿತ -ಹರಿ ಎಂದು. ಇವರಲ್ಲಿ ಪಾಲಿತ - ಹರಿ ಎಂಬ ಮಕ್ಕಳಿಬ್ಬರನ್ನು ವಿದೇಹರಾಜನಿಗೆ ದೇಶ ರಕ್ಷಣೆಗಾಗಿ ನೀಡಿದನು. ರುಕ್ಮೇಷುವು ಪೃಥುರುಕ್ಮನ ಜೊತೆಗೂಡಿ 'ಜ್ಯಾಮಘ'ನನ್ನು ದೇಶಬಿಟ್ಟು ಓಡಿಸಿ ತಾನೇ ರಾಜನಾದನು.

### ಜ್ಯಾಮಘ ಪರಾಕ್ರಮ

**ಪ್ರಶಾಂತಃ ಸ ವನಸ್ಥಸ್ತು ಬ್ರಾಹ್ಮಣೈಶ್ಚಾವ ಬೋಧಿತಃ ।**
**ಜಗಾಯ ರಥಮಾಸ್ಥಾಯ ದೇಶಮನ್ಯಂ ಧ್ವಜೀ ರಥೀ ॥ 2 ॥**

**ನರ್ಮದಾ ಕೂಲಮೇಕಾಕೀ ನಗರೀಂ ಮೃತ್ತಿಕಾವತೀಮ್ ॥ 3 ॥**

ಜ್ಯಾಮಘನು ಕಾಡಿಗೆ ಹೋಗಿ ತಪಸ್ಸಾಚರಣೆಯಲ್ಲಿ ತೊಡಗಿದ. ಜ್ಯಾಮಘನನ್ನು ಆಶ್ರಮದ ಮುನಿಬ್ರಾಹ್ಮಣರು ತಮ್ಮಲ್ಲಿಯೆ ಇರಿಸಿಕೊಂಡರು. ಕ್ರಮೇಣ ಅವನಿಗೆ ಕ್ಷತ್ರಿಯ ಧರ್ಮದ ಬಗ್ಗೆ ತಿಳುವಳಿಕೆ ನೀಡಿ ರಾಜನಿಗೆ ಆದ್ಯ ಕರ್ತವ್ಯ ಕ್ಷತ್ರಿಯ ಧರ್ಮಪಾಲನೆ - ದುಷ್ಟ ಶಿಕ್ಷಣ - ಶಿಷ್ಟ ರಕ್ಷಣ ಹೊರತು ತಪಸ್ಸಲ್ಲ ಎಂದು ಮನದಟ್ಟಾಗುವಂತೆ ಅರಣ್ಯಾ ಜೀವನ ನಡೆಸುತ್ತಿರುವುದು ಬ್ರಾಹ್ಮಣರಿಗೆ ಯೋಗ್ಯ ನಿನ್ನಂತಹ ಪರಾಕ್ರಮಿಗಲ್ಲ ಎಂದು ಕ್ಷಾತ್ರಧರ್ಮದ ವೀರವೃತ್ತಿಯನ್ನು ಉಪದೇಶಿಸಿ ಅವನಲ್ಲಿದ್ದ ವೀರ ರಸಕ್ಕೆ ಪುಷ್ಟಿ ಕೊಟ್ಟರು. ಬ್ರಾಹ್ಮಣರ ವೀರೋಪದೇಶದಿಂದ ಉತ್ತೇಜಿತನಾದ ರಾಜನು ರಥಾರೂಢನಾಗಿ ದಿಗ್ವಿಜಯ ಹೊರಟನು. ನರ್ಮದಾ ತೀರ ಪರಿಸರದ ಪ್ರದೇಶವನ್ನೆಲ್ಲ ಗೆದ್ದುಕೊಂಡನು.

ಮೇಕಲಾ, ಮೃತ್ತಿಕಾವತೀ, ಶುಕ್ತಿಮತೀ ನಗರಗಳು ವಶವಾದವು. ಶುಕ್ತವತಿಯಲ್ಲಿಯೇ ವಾಸ ಮಾಡುತ್ತಿದ್ದ.

### ಜ್ಯಾಮಘ-ಶೈಬ್ಯಾ-ವಿದರ್ಭ ರಾಜ

**ಜ್ಯಾಮಘಸ್ಯಾಭವದ್ ಭಾರ್ಯಾ ಶೈಬ್ಯಾ ಬಲವತೀ ಸತೀ ।**
**ಅಪುತ್ರೋऽಪಿ ಚ ರಾಜಾ ಸಾ ನಾನ್ಯಂ ಭಾರ್ಯಾಮವಿಂದತ ॥ 4 ॥**

**ತಸ್ಯಾಸೀದ್ ವಿಜಯೋ ಯುದ್ಧೇ ತತ್ರ ಕನ್ಯಾಮವಾಪ ಸಃ ।**
**ಭಾರ್ಯಾಮುವಾಚ ಸಂತ್ರಸ್ತಃ ಸ್ನುಷೇತಿ ಸ ನರೇಶ್ವರಃ ॥ 5 ॥**

**ಏತತ್ ಶ್ರುತ್ವಾಽಬ್ರವೀದ್ ದೇವೀ ಕಸ್ಯ ಚೇಯಂ ಸ್ನುಷೇತಿ ವೈ ।**
**ಯಸ್ತೇ ಜನಿಷ್ಯತೇ ಪುತ್ರಸ್ತಸ್ಯ ಭಾರ್ಯೋಪದಾನವೀ ॥ 6 ॥**
**ಉಗ್ರೇಣ ತಪಸಾ ತಸ್ಯಾಃ ಕನ್ಯಾಯಾಃ ಸಾ ವ್ಯಜಾಯತ ।**
**ಪುತ್ರಂ ವಿದರ್ಭಂ ಸುಭಗಾ ಶೈಬ್ಯಾ ಪರಿಣತಾ ಸತೀ ॥ 7 ॥**

ಜ್ಯಾಮಘನಿಗೆ ಶೈಬ್ಯಾಯೆಂಬ ಧರ್ಮಪತ್ನಿಯಿದ್ದಳು. ಇವಳಲ್ಲಿ ಸಂತಾನವಾಗಿರಲಿಲ್ಲ. ರಾಜನು ತನ್ನ ಪತ್ನಿಯ ಭಯದಿಂದಲೂ, ಅನುರಾಗದಿಂದಲೂ, ಬೇರೊಬ್ಬಳನ್ನು ವಿವಾಹ ಮಾಡಿಕೊಳ್ಳಲಿಲ್ಲ. ಅವಳ ಭಯದಿಂದಾಗಿ ಬೇರೊಬ್ಬಳನ್ನು ವಿವಾಹವಾಗುವ ಧೈರ್ಯವೂ ಇರಲಿಲ್ಲ.

ಒಂದು ಬಾರಿ ಜ್ಯಾಮಘನು ದಿಗ್ವಿಜಯಕ್ಕೆ ಹೋಗಿದ್ದ. ಶತ್ರುಗಳನ್ನೆಲ್ಲ ಸದೆ ಬಡಿದ ಕೆಲವರು ಸೋತು ಶರಣಾದರು. ಕೈದಿಗಳಲ್ಲಿ ಸುರದ್ರೂಪಿಣಿಯಾದ ಒಬ್ಬ ಕನ್ಯೆಯನ್ನು ನೋಡಿ ವಿವಾಹವಾಗಲೆಂದೇ ಅವಳನ್ನು ತನ್ನೊಂದಿಗೆ ರಥದಲ್ಲಿ ಕುಳ್ಳಿರಿಸಿ ಕರೆ ತಂದ. ರಾಜನು ಅರಮನೆಗೆ ಬಂದಾಗ ಕೆರಳದ ಶೈಬ್ಯೆಯು ಇವಳಾರು ಎಂದು ಕೇಳದಳು. ರಾಜನು ಬೆದರಿ ಬೆವರಿ ನಿಜ ಸ್ಥಿತಿ ಹೇಳಲಾರದೆ ತೊದಲುತ್ತಾ ಇವಳು ನಿನ್ನ ಸೊಸೆ ಎಂದು ಅಂಜುತ್ತಾ ನುಡಿದನು.

ಶೈಬ್ಯೆಯು – ನಾನಂತೂ ಇದುವರೆಗೂ ಹಡೆದಿಲ್ಲ. ನಿನಗೆ ಬೇರೆ ಮಕ್ಕಳಿಲ್ಲ. ಹೀಗಿರುವಾಗ ಇವಳು ನನ್ನ ಸೊಸೆ ಹೇಗಾದಳು ಎಂದಳು.

ಶೈಬ್ಯೆಯ ಕಿಡಿನುಡಿಗಳಿಂದ ಜ್ಯಾಮಘನ ವಿವೇಕವ ಉಡುಗಿ ಹೋಯಿತು. ನಿನಗೆ ಮುಂದೆ ಹುಟ್ಟಲಿರುವ ಮಗನಿಗೆ ಸೊಸೆಯಾಗಿ ಈ ಉಪದಾನವಿಯನ್ನು ತಂದಿದ್ದೇನೆ ಎಂದ. ಶೈಬ್ಯೆಗೆ ನಗು ಬಂತು – ಹಾಗೆ ಆಗಲಿ ಎಂದಳು.

ಜ್ಯಾಮಘನು ಹೇಳಿದ ನಿನ್ನ ಮಗನ ಮಡದಿ ಎಂಬ ಮಾತು ವಿಶ್ವೇದೇವತೆಗಳು ಪಿತೃಗಳು ಸುಮುಹೂರ್ತದಲ್ಲಿ ಹೇಳಿದ್ದ ಮಾತನ್ನು ಒಪ್ಪಿದರು. ಸೊಸೆಯ ವ್ರತೋಪವಾಸಗಳಿಂದ ಅತ್ತೆಗೆ ಮಗನಾಗಲಿ ಎಂದು ಆಶಿಸಿದಳು. ದೇವತಾನುಗ್ರಹದಿಂದ ವೃದ್ಧಳಾದ ಶೈಬ್ಯೆ ಗರ್ಭ ಧರಿಸಿದಳು. ದಿನ ತುಂಬಿದ ಬಳಿಕ 'ವಿದರ್ಭ ರಾಜ'ನಿಗೆ ಜನ್ಮವಿತ್ತಳು.

## ಕ್ರಥ ಕೈಶಿಕರು

**ರಾಜಪುತ್ರ್ಯಾಂ ತು ವಿದ್ವಾಂಸೌ ಸ್ನುಷಾಯಾಂ ಕ್ರಥ ಕೈಶಿಕೌ ।**
**ಲೋಮಪಾದಂ ತೃತೀಯಂ ತು ಪುತ್ರಂ ಪರಮಧಾರ್ಮಿಕಮ್ ॥ 8 ॥**

ವಿದರ್ಭನಿಗೆ ಆ ಕನ್ಯೆಯಾದ ಉಪದಾನವಿಯಲ್ಲಿ ಕ್ರಥ, ಕೈಶಿಕ, ಲೋಮಪಾದ, ಭೀಮರೆಂಬ ಮಕ್ಕಳಾದರು. ಲೋಮಪಾದನಿಗೆ ಬಭ್ರುವು, ಬಭ್ರುವಿಗೆ ಆಹ್ವತಿ ಎಂಬ ಮಗನೂ ಹುಟ್ಟಿದರು. ಆಹ್ವತಿಯು ಕೆಲವೆಡೆ ಕೃತಿಯೆನ್ನಲಾಗಿದೆ. ಆಹ್ವತಿಯ ಮಗನೇ ಪಂಡಿ ಪ್ರವರನಾದ ಕೌಶಿಕನು, ಕೌಶಿಕನಿಗೆ ಚೇದಿರಾಜನು ಹುಟ್ಟಿದರು. ಇವನಿಂದಲೇ ಚೈದ್ಯವಂಶವೆಂದು ಹೆಸರಾಗಿ ಶಿಶುಪಾಲಾದಿಗಳಿಗೆ ಮುಲವೆನಿಸಿತು.

ಮೂರನೇ ಭೀಮನೆಂಬ ವಿದರ್ಭರಾಜನ ಮಗನಿಗೆ ಕುಂತಿರಾಜನು ಹುಟ್ಟಿದ. ಕುಂತಿ-ಧೃಷ್ಟನೂ, ದೃಷ್ಟನಿಗೆ ಆವಂತ-ದಶಾರ್ಹ- ವಿಷಹರರೆಂಬ ಮೂವರು ಮಕ್ಕಳಾದರು. ಧೃಷ್ಟನಿಗೆ ಬಲನೆಂದು ನಾಮಾಂತರವಿತ್ತು. ಧೃಷ್ಟನಿಗೆ ದಶಾರ್ಹನಿಗೆ ಮಧ್ಯೆ ನಿವೃರ್ತಿಯೆಂಬವನು ಮಗನಾದನು. ಅವನಿಗೆ ಮೂವರು ಮಕ್ಕಳಾದರೆಂದು ತಿಳಿಯಬೇಕು. ದಾಶಾರ್ಹನಿಗೆ ವ್ಯೋಮನೂ, ವ್ಯೋಮನಿಂದ ಜೀಮೂತನೂ, ಜೀಮೂತನಿಂದ ಬೃಹತಿಯು, ಅವನಿಗೆ ಭೀಮರಥನೂ ಹುಟ್ಟಿದನು. ಬೃಹತಿಗೆ ವಿಕೃತಿಯೆಂಬ ಹೆಸರಿತ್ತು. ಭೀಮರಥನಿಂದ ನವರಥನೂ, ನವರಥನಿಂದ ದಶರಥನೂ, ಇವನಿಂದ ಶಕುನಿಯು ಹುಟ್ಟಿದನು. ಶಕುನಿಗೆ ಕರಂಭನೂ ಕರಂಭನಿಗೆ ದೇವರಾತನೂ ದೇವರಾತನಿಗೆ ದೇವಕ್ಷತ್ರನೂ, ಇವನ ಮಗನೇ ವೃದ್ಧಕ್ಷತ್ರ. ವೃದ್ಧಕ್ಷತ್ರನಿಗೆ ಮಧುವಂಶ ಮೂಲನಾದ ಮಧುರಾಜನು ಜನಿಸಿದ. ಇವನು ಹೆಸರಿಗೆ ತಕ್ಕಂತೆ ಮಧುಮಧುರಭಾಷಿಯೂ ಸುರಸಮಾನನೂ ಆಗಿದ್ದನು.

ಮಧುವಿನಿಂದ ಪುರುದ್ವಾನ್ ಅಥವಾ ಕುಕ್ಕೂರಕನೂ ಜನಿಸಿದನು. ವೈದರ್ಭಿಯಲ್ಲಿ ಮರುವಸನೆಂಬ ರಾಜನೂ, ಇವನಿಗೆ ಪುರದ್ವಾನನೂ, ಇಕ್ಷ್ವಾಕು ವಂಶದ ರಾಜಪುತ್ರಿಯಲ್ಲಿ 'ಸತ್ವಾನ್' ನಾಮಕ ಪುತ್ರನೂ, ಇವನು ಸರ್ವಗುಣ ಸಂಪನ್ನನೂ ಕೀರ್ತಿಶಾಲಿಯೂ ಆಗಿದ್ದನು.

ಇಮಾಂ ವಿಸೃಷ್ಟಿಂ ವಿಜ್ಞಾಯ ಜ್ಯಾಮಘಸ್ಯ ಮಹಾತ್ಮನಃ ।
ಯುಜ್ಯತೇ ಪರಯಾ ಕೀರ್ತ್ಯಾ ಪ್ರಜಾವಾಂಶ್ಚ ಭವೇನ್ನರಃ ॥ 9 ॥

ಹೀಗೆ ಜ್ಯಾಮಘನ ವಂಶಾವಳಿಯನ್ನು ಕೇಳಿದವರು ಸತ್ಪುತ್ರಶಾಲಿ-ಯಾಗುವನು, ಯಶೋವಂತನಾಗುವರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಜ್ಯಾಮಘ ವಂಶಾನು ಕೀರ್ತನಂವೆಂಬಲ್ಲಿ
ಮುವತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಸಪ್ತತ್ರಿಂಶೋಽಧ್ಯಾಯಃ

## ಬಭ್ರು ವಂಶ ನಿರೂಪಣೆ

*ವೈಶಂಪಾಯನ ಉವಾಚ-*

**ಸತ್ವತಾತ್ ಸತ್ವಸಂಪನ್ನಾನ್ ಕೌಸಲ್ಯಾ ಸುಷುವೇ ಸುತಾನ್ ।**
**ಭಜಿನಂ ಭಜಮಾನಂ ಚ ದಿವ್ಯಂ ದೇವಾವೃಧಂ ನೃಪಮ್ ॥ 1 ॥**

**ಅಂಧಕಂ ಚ ಮಹಾಬಾಹುಂ ವೃಷ್ಣಿಂ ಚ ಯದುನಂದನಮ್ ।**
**ತೇಷಾಂ ವಿಸರ್ಗಾಃ ಚತ್ವಾರೋ ವಿಸ್ತರೇಣೇಹ ತಾನ್ ಶೃಣು ॥ 2 ॥**

ಸತ್ವಾನ್‌ನೆಂಬ ಹೆಸರಿನ ಸಾತ್ವತನಿಗೆ ಕೌಸಲ್ಯಾಯೆಂಬುವಳಲ್ಲಿ ಭಜಮಾನ, ಅಭಜಿ ದಿವ್ಯ, ದೇವಾವೃಧ, ಅಂಧಕ, ವೃಷ್ಣಿ ಎಂಬ ಮಹಾಸತ್ವಶಾಲಿಗಳು ಮಕ್ಕಳಾದರು.

ಭಜಮಾನ ಹಿರಿಯನಾಗಿದ್ದು ಇವನಿಗೆ ಬಾಹ್ಯಕಾದೇವೀ –ಉಪಬಾಹ್ಯಕಾ-ದೇವಿಯರೆಂಬ ಇಬ್ಬರು ಪತ್ನಿಯರಿದ್ದರು. ಬಾಹ್ಯಕಾದೇವಿಯಲ್ಲಿ ಕೃಮಿ, ಕ್ರಮಣ, ಧೃಷ್ಟರಿಗೆ ನಾಮಾಂತರವಿತ್ತು. ಉಪಬ್ರಾಹ್ಮಣದೇವಿಯಲ್ಲಿ ಶತಾಜಿತ್, ಸಹಸ್ರಾಜಿತ್, ಅಯುತಾಜಿತ್, ದಾಸಕರೆಂಬ ನಾಲ್ಕು ಮಂದಿ ಮಕ್ಕಳಾದರು.

## ದೇವಾವೃಧ

**ಯಜ್ವಾ ದೇವಾವೃಧೋ ರಾಜಾ ಚಚಾರ ವಿಪುಲಂ ತಪಃ ।**
**ಪುತ್ರಃ ಸರ್ವಗುಣೋಪೇತೋ ಮಮ ಸ್ಯಾದಿತಿ ನಿಶ್ಚಿತಃ ॥ 3 ॥**

**ಸಂಯುಜ್ಯಾತ್ಮಾನಮೇವಂ ತು ಪರ್ಣಾಶಾಯಾಃ ಜಲಂ ಸ್ಪೃಶನ್ ।**
**ಸದೋಪಸ್ಪೃಶತಸ್ತಸ್ಯ ಚಕಾರ ಪ್ರಿಯಮಾಪಗಾ ॥ 4 ॥**

ಸತ್ವತನ ಮಗನಾದ ದೇವಾವೃಧನು ತನಗೆ ಸರ್ವಗುಣ ಸಂಪನ್ನನಾದ ಶ್ರೇಷ್ಠ ಮಗನಾಗಬೇಕೆಂದು ಚಿತ್ತವನ್ನು ನಿಗ್ರಹಿಸಿ ಅತ್ಯುಗ್ರ ತಪಸ್ಸನ್ನು ಮಾಡಿದನು. ಪರ್ಣಾಶಾ ನದಿಯು ಪವಿತ್ರ ತೀರ ಅವನ ತಪೋಭೂಮಿಯಾಗಿತ್ತು. ಆ ನದಿಯ ಪುಣ್ಯತೀರ್ಥದಿಂದಲೇ ಸ್ನಾನ ಪಾನಾಚಮನಾದಿಗಳನ್ನು ಮಾಡುತ್ತಾ ತಪೋ ನಿಷ್ಠನಾದ ದೇವಾವೃಧನ ನಿತ್ಯಸ್ನಾನ– ಆಚಮನಾದಿ ನಿರಂತರ ಸಹವಾಸದಿಂದ ಆ ನದಿ ದೇವತೆಗೆ ಅವನಲ್ಲಿ ಆಸ್ಥೆವುಂಟಾಯಿತು. ಅವನಿಗೆ ಪ್ರಿಯವುಂಟು ಮಾಡು.

ಈ ರಾಜನ ಮನದೇಷ್ಟೆಯನ್ನು ಪೂರೈಸುವ ವಿದ್ಯಾವಿನಯ ಸಂಪನ್ನಳಾದ ಮಹಿಳಾಮಣಿ ಎಲ್ಲಿರುವಳು? ಎಂದು ವಿಚಾರಿಸಿದಳು. ಆದರೆ ಅಂತಹ ಶೀಲಗುಣಶಾಲಿನಿಯಾದ ವನಿತೆ ಅವಳಿಗೆ ಕಂಡುಬರಲಿಲ್ಲ. ರಾಜನಿಗೆ ಇಚ್ಛೆ ಪೂರೈಸಲು ತಾನೇ ರಾಜನ ಮನೋಭೀಷ್ಟವನ್ನು ಪೂರ್ತಿ ಮಾಡಲು ತಾನೇ ಸೌಂದರ್ಯ ಸಾರದಂತಿರುವ ನಿರವದ್ಯ ರೂಪಧರಿಸಿ ಅವನ ಬಳ ಸುಳದಳು. ರಾಜನ ಅವಳ ಲಾವಣ್ಯ ಪೂರ್ಣವಾದ ಸೌಂದರ್ಯ ನೋಡಿ ಅವಳನ್ನು ವರಿಸಿದನು. ಮುಂದೆ ಅವನ ಸಂಕಲ್ಪದಂತೆ ಪರ್ಣಾಶೆಯು ತೇಜಸ್ವಿಯಾದ ಗರ್ಭಧರಿಸಿ ದಶಮಾಸ ಕಳೆದಂತೆ ಸರ್ವಲಕ್ಷಣ ಸಂಪನ್ನನಾದ 'ಬಭ್ರು' ಎಂಬ ಪುತ್ರನನ್ನು ಹಡೆದಳು.

## ಬಭ್ರುಗಾಥಾ

**ಅತ್ರ ವಂಶೇ ಪುರಾಣಜ್ಞಾಃ ಗಾಯಂತೀತಿ ಪರಿಶ್ರುತಮ್ ।**
**ಗುಣಾನ್ ದೇವಾವೃಧಸ್ತಸ್ಯಾಥ ಕೀರ್ತಯಂತೋ ಮಹಾತ್ಮನಃ ॥ 5 ॥**
**ಯಥೈವಾಗ್ರೇ ಸಮಂ ದೂರಾತ್ ಪಶ್ಯಾಮ ಚ ತದಂತಿಕೇ ।**
**ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈಃ ದೇವಾವೃಧಃ ಸಮಃ ॥ 6 ॥**
**ಷಷ್ಟಿಶ್ಚ ಷಟ್ ಚ ಪುರುಷಾಃ ಸಹಸ್ರಾಣಿ ಚ ಸಪ್ತ ಚ ।**
**ಏತೇಽಮೃತತ್ವಂ ಸಂಪ್ರಾಪ್ತಾಃ ಬಭ್ರುಃ ದೇವಾವೃಧಾದಪಿ ॥ 7 ॥**

ಬಭ್ರು ಹಾಗೂ ದೇವಾವೃಧರನ್ನು ಕುರಿತು ಪುರಾಣವೇತ್ತರು. ಹೀಗೆ ಗಾನ ಮಾಡುತ್ತಾರೆ. ದೂರದಿಂದ ಇವರ ಬಗ್ಗೆ ಏನನ್ನು ಕೇಳುತ್ತೇವೆಯೋ ಸಮೀಪದಿಂದಲೂ ಹಾಗೆ ಇವರ ಗುಣಗಳಿರುತ್ತವೆ. ಸಮೀಪದಲ್ಲಿ ಜನರ ಬಾಯಿಂದ ದೂರದಿಂದ ಕೇಳಿದ್ದೇವೆ. ಸಮೀಪಕ್ಕೆ ಹೋಗಿ ಕಣ್ಣಿನಿಂದಲೂ ನೋಡಿದ್ದೇವೆ. ಮಾನವರಲ್ಲಿ ಬಭ್ರು ಶ್ರೇಷ್ಠನಾದರೆ ದೇವಾವೃಧನು ದೇವತೆಗಳಿಗೆ ಸಮಾನ. ಈ ತಂದೆ-ಮಕ್ಕಳಿಂದ ಯುದ್ಧದಲ್ಲಿ ಮಡಿದು ಸ್ವರ್ಗವನ್ನೇರಿದವರು ಸುಮಾರು ಆರು ಸಾವಿರ ಎಪ್ಪತ್ತನಾಲ್ಕು ಮತ್ತೊಂದು ಯುದ್ಧದಲ್ಲಿ ಏಳು ಸಾವಿರದ ಅರವತ್ತಾರು, ಮತ್ತೊಂದರಲ್ಲಿ ಏಳು ಸಾವಿರದ ಅರವತ್ತಾರು ಮಂದಿ. ಬಭ್ರು ರಾಜನು ಮಹಾದಾನಶೀಲನೂ, ಯಜ್ಞಶೀಲನೂ, ವಿದ್ವಾಂಸನೂ, ಬ್ರಾಹ್ಮಣಪ್ರಿಯನೂ ಆಗಿದ್ದನು. ದೃಢಾಯುಧಗಳನ್ನು ಹೊಂದಿ ಕೀರ್ತಿವಂತನಾಗಿದ್ದನು.

### ಅಂಧಕ ವಂಶ - ಆಹುಕ - ಆಹುಕೀ

**ಅಂಧಕಾತ್ ಕಾಶ್ಯದುಹಿತಾ ಚತುರೋಽಲಭತಾತ್ಮಜಾನ್ ।**
**ಕಕುರಂ ಭಜಮಾನಂ ಚ ಶಮಿಂ ಕಂಬಲಬರ್ಹಿಷಮ್ ॥ 8 ॥**

**ಕಕುರಸ್ಯ ಸುತೋ ಧೃಷ್ಣುಃ ಧೃಷ್ಣೋಸ್ತು ತನಯಸ್ತಥಾ ।**
**ಕಪೋತರೋಮಾ ತಸ್ಯಾಶ್ಚ ತೈತ್ತಿರಿಃ ತನಯೋಽಭವತ್ ॥ 9 ॥**

**ಜಜ್ಞೇ ಪುನರ್ವಸುಃ ತಸ್ಮಾದಭಿಜಿತ್ ತು ಪುನರ್ವಸೋಃ ।**
**ತಸ್ಯ ವೈ ಪುತ್ರಮಿಥುನಂ ಬಭೂವಾಭಿಜಿತಃ ಕಿಲ ॥ 10 ॥**

**ಆಹುಕಶ್ಚಾಹುಕೀ ಚೈವ ಖ್ಯಾತೌ ಖ್ಯಾತಮತಾಂ ವರೌ ॥ 11 ॥**

ಅಂಧಕನಿಂದ ದೃಢಾಶ್ವನ ಮಗಳು ಕಕುರ, ಭಜಮಾನ, ಶಮಿ, ಕಂಬಲಬರ್ಹಿ ಎಂಬ ನಾಲ್ಕು ಪುತ್ರರನ್ನು ಪಡೆದಳು. ಕುಕುರನ ಮಗ ಧೃಷ್ಣುವು, ವೃಷ್ಣಿಯೆಂದು, ಧೃಷ್ಣನೆಂದೂ ವೃಷ್ಟನೆಂದೂ ನಾಮಾಂತರ. ಧೃಷ್ಣುವಿನಿಂದ ಕಪೋತರೋಮನು, ಇವನಿಗೆ ತೈತ್ತಿರಿಯೆಂಬ ಮಗನೂ, ತೈತ್ತರಿಗೆ ಪುನರ್ವಸುವೂ, ಇವನಿಗೆ ಅಭಿಜಿತ್‌ನು ಮಗನಾದನು. ಅಭಿಜಿತ್‌ನಿಗೆ ಆಹುಕನೆಂಬ ಮಗನೂ, ಆಹುಕೀ ಎಂಬ ಕನ್ಯೆಯೂ ಹುಟ್ಟಿದರು.

## ಆಹುಕ ಪ್ರಶಂಸೆ

ಶ್ವೇತೇನ ಪರಿವಾರೇಣ ಕಿಶೋರ ಪ್ರತಿಮೋ ಮಹಾನ್ ।
ಅಶೀತಿ ಚರ್ಮಣಾ ಯುಕ್ತಃ ಸ ನೃಪಃ ಪ್ರಥಮಂ ವ್ರಜೇತ್ ॥ 12 ॥
ನಾಪುತ್ರವಾನ್ ನಾಶತದೋ ನಾಸಹಸ್ರ ಶತಾಯುಷಃ ।
ನಾಶುದ್ಧ ಕರ್ಮಾ ನಾಯಜ್ವಾ ಯೋ ಭೋಜಮಭಿತೋ ವ್ರಜೇತ್ ॥ 13॥

ಆಹುಕನನ್ನು ಕುರಿತು ಈ ಶ್ಲೋಕ ಮನೆ ಮಾತಾಗಿದೆ. ಆಹುಕನ ರಾಜ್ಯವು ಸುಸಮೃದ್ಧವಾಗಿದ್ದಿತು. ಹೊರಗೆ ಹೊರಡುವಾಗ ಎಂಭತ್ತು ಕವಚಧಾರಿಗಳು, ಶ್ವೇತಛತ್ರ ಧರಿಸಿದ ಎಂಭತ್ತು ಶ್ವೇತ ಪರಿವಾರದವರೂ ಇವನ ಮುಂದೆ ಇರುತ್ತಿದ್ದರು. ಆಹುಕನ ರಾಜ್ಯದಲ್ಲಿ ಪುತ್ರಹೀನನಾಗಲೀ, ಜಿಪುಣನಾಗಲೀ, ಅಲ್ಪಾಯುಷಿಯಾಗಲೀ ಹುಡುಕಿದರೂ ಸಿಗುತ್ತಿದ್ದಿಲ್ಲ. ಎಲ್ಲರೂ ಸಾವಿರಾರು ವರ್ಷ ಆಯುಸ್ಸುಳ್ಳವರೆ. ಪ್ರಜೆಗಳು ದೈವಭಕ್ತಿ ಸ್ವ ಕರ್ತವ್ಯನಿಷ್ಠರಾಗಿರುತ್ತಿದ್ದರು. ಆಹುಕನು ಯುದ್ಧಕ್ಕೆ ಹೊರಟರೆ ಬಲಿಷ್ಠ ಆನೆಗಳಿಂದ ಕೂಡಿದ 21 ಸಾವಿರ ಮಹಾರಥಗಳು ಹೊರಡುತ್ತಿದ್ದವು. ರಥಗಳ ಧ್ವನಿಯು ಮೇಘನಾದದಂತೆ ಗಂಭೀರವಾಗಿದ್ದವು. ಆಹುಕನೂ ಸಹ ದೇವತೆಗಳನ್ನು ಯಜ್ಞಗಳಿಂದ ಸಂತೋಷಪಡಿಸುತ್ತಿದ್ದನು. ಅದಕ್ಕಾಗಿಯೇ ಆಹುಕನೆನಿಸಿರುವನು. (ಆ ಜುಹೋತಿ ಆಹುತಿದಾನೇನ ದೇವಾನ್)

## ಆಹುಕೀ ವಿವಾಹ

ಆಹುಕೀಂ ಚಾಪ್ಯವಂತಿಭ್ಯಃ ಸ್ವಸಾರಂ ದದುರಂಧಕಾಃ ।
ಆಹುಕಸ್ಯ ತು ಕಾಶ್ಯಾಯಾಂ ದ್ವೌ ಪುತ್ರೌ ಸಂಬಭೂವತುಃ ॥ 14 ॥
ದೇವಕಶ್ಚೋಗ್ರಸೇನಶ್ಚ ದೇವಪುತ್ರ ಸಮಾವುಭೌ ।
ದೇವಕಸ್ಯಾಭವನ್ ಪುತ್ರಾಃ ಚತ್ವಾರಃ ತ್ರಿದಶೋಪಮಾಃ ॥ 15 ॥
ದೇವವಾನ್ ಉಪದೇವಶ್ಚ ಸುದೇವೋ ದೇವರಕ್ಷಿತಃ ।
ಕುಮಾರ್ಯಃ ಸಪ್ತ ಚಾಪ್ಯಾಸನ್ ವಸುದೇವಾಯ ತಾ ದದೌ ॥ 16 ॥

## ದೇವಕ ವಂಶ

ಅಂಧಕಕುಮಾರನು ಆಹುಕಿಯನು ಅವಂತೀ ದೇಶದ ರಾಜಕುಮಾರನಿಗೆ ವಿವಾಹ ಮಾಡಿಕೊಟ್ಟರು. ಅವಳೆ ಅವಂತಿ ರಾಜನ ಪಟ್ಟದರಸಿಯಾದಳು. ಆಹುಕನು ಕಾಶಿರಾಜನ ಮಗಳನ್ನು ವಿವಾಹವಾಗಿ ದೇವತೆಗಳಕ್ಕಿಂತ ವರ್ಚಸ್ವಿಗಳಾದ ದೇವಕ-ಉಗ್ರಸೇನರೆಂಬ ಇಬ್ಬರು ಮಕ್ಕಳನ್ನು ಪಡೆದನು. ದೇವಕನಿಗೆ ದೇವವಾನ್, ಉಪದೇವ, ಸುದೇವ, ದೇವರಕ್ಷಿತ ಅಥವಾ ದೇವವರ್ಧನರೆಂಬ ಮಕ್ಕಳಾದರು. ದೇವಕನಿಗೆ ದೇವಕೀ, ಶಾಂತಿದೇವಿ, ಸುದೇವೀ, ದೇವರಕ್ಷಿತಾ, ವೃಕದೇವೀ, ಉಪದೇವೀ, ಸುನಾಮ್ನಿಯೆಂಬ ಏಳು ಕುಮಾರಿಯರಾದರು. ಈ ಏಳು ಕನ್ಯೆಯರನ್ನು ಶೂರನ ಮಗ ವಸುದೇವನೆ ವಿವಾಹವಾದನು.

ದೇವಕೀ, ಸಹದೇವಾ, ದೇವರಕ್ಷಿತಾ, ಶ್ರೀದೇವಾ, ಉಪದೇವಾ, ಶಾಂತಿದೇವಾ, ಧೃತದೇವಾ ಹೀಗೂ ಕರೆಯುವರು. ಇವರಲ್ಲಿ ಜ್ಯೇಷ್ಠ ಪುತ್ರಿಯನ್ನು ಆಹುಕನು ದತ್ತು ಪುತ್ರಿಯನ್ನಾಗಿ ಸ್ವೀಕರಿಸಿದ್ದನು.

## ಉಗ್ರಸೇನ ವಂಶ - ಕಂಸ ಜನ್ಮ

**ನವ ಉಗ್ರಸೇನಸ್ಯ ಸುತಾಃ ತೇಷಾಂ ಕಂಸಸ್ತು ಪೂರ್ವಜಃ ।**
**ನ್ಯಗ್ರೋಧಶ್ಚ ಸುನಾಮಾ ಚ ಕಂಕಃ ಶಂಕುಃ ಸುಭೂಮಿಪಃ ॥ 17 ॥**

**ರಾಷ್ಟ್ರಪಾಲೋಽಥ ಸುತನುಃ ಅನಾಧೃಷ್ಟಿಶ್ಚ ಪುಷ್ಟಿಮಾನ್ ।**
**ತೇಷಾಂ ಸ್ವಸಾರಃ ಪಂಚಾಸನ್ ಕಂಸಾ ಕಂಸವತೀ ತಥಾ ।**
**ಸುತನೂ ರಾಷ್ಟ್ರಪಾಲೀ ಚ ಕಂಕಾ ಚೈವ ವರಾಂಗನಾ ॥ 18 ॥**

**ಕುಕುರಾಣಾಮಿದಂ ವಂಶಂ ಧಾರಯನ್ ಅಮಿತೌಜಸಾಮ್ ।**
**ಆತ್ಮನೋ ವಿಪುಲಂ ವಂಶಂ ಪ್ರಜಾವಾನ್ ಆಪ್ನುಯಾನ್ ನರಃ ॥ 19 ॥**

ಉಗ್ರಸೇನನಿಗೆ ಕಂಸ, ನ್ಯಗ್ರೋಧ, ಸುನಾಮ, ಕಂಕ (ಕಂಹ್ವ), ಶಂಕು, ರಾಷ್ಟಪಾಲ, ಸುತನು (ಸುಭು), ಅನಾಧೃಷ್ಟಿ (ಅಭ್ಧಸೃಷ್ಟಿ), ಪುಷ್ಟಿಮಾನ್ (ತುಷ್ಟಿಮಾನ್) ಎಂಬ ನವಕುಮಾರರು ಹುಟ್ಟಿದರು.

ಕಂಸಾ, ಕಂಸವತೀ, ಸುತನೂ (ಸುರಭೂ), ರಾಷ್ಟ್ರಪಾಲಿಕಾ ಎಂಬ ಐದು

ಕನ್ಯೆಯರು. ಇವರು ವಸುದೇವನ ತಮ್ಮಂದಿರಾದ ದೇವಭಾಗ ಮೊದಲಾದವರು ವಿವಾಹವಾಗಿದ್ದರು.

ಕುಕುರವಂಶದ ಚರಿತ್ರೆಯನ್ನು ಶ್ರವಣ ಮಾಡಿದವರಿಗೆ ಶೌರ್ಯಶಾಲಿಯಾದ ಸಂತಾನ ಅಭಿವೃದ್ಧಿಯಾಗುವುದು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ದೇವಕ–ಉಗ್ರಸೇನ- ಕಂಸ ಜನನವೆಂಬಲ್ಲಿ
ಮುವತ್ತೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 38 ಹರಿಪರ್ವ

# ಅಥ ಅಷ್ಟತ್ರಿಂಶೋಽಧ್ಯಾಯಃ

## ಭಜಮಾನನ ವಂಶ ನಿರೂಪಣೆ

## ಸ್ಯಮಂತಕೋಪಾಖ್ಯಾನ

**ಭಜಮಾನಸ್ಯ ಪುತ್ರೋಽಥ ರಥಮುಖ್ಯೋ ವಿದೂರಥಃ ।**
**ರಾಜಾಧಿದೇವಃ ಶೂರಸ್ತು ವಿದೂರಥ ಸುತೋಽಭವತ್ ॥ 1 ॥**

ಸತ್ವತನ ಮಗ ಭಜಮಾನನು. ಇವನಿಗೆ ಮಹಾರಥಿಕನಾದ ವಿದೂರಥನು. ವಿದೂರಥನಿಗೆ ರಾಜಾಧಿದೇವನೂ, ರಾಜಾಧಿದೇವನಿಗೆ ವೀರ್ಯಾತಿರೇಕದಿಂದ ವಿಜೃಂಭಸುತ್ತಲ್ಲಿದ್ದ ದತ್ತ, ಅತಿದತ್ತ, ಶೋಣಾಶ್ವ, ಶ್ವೇತವಾಹನ, ಸಮೀ, ದಂಡಶರ್ಮ, ದಂಡಶತ್ರು, ಶತ್ರುಜಿತ್ ಎಂಬ ಗಂಡು ಮಕ್ಕಳೂ, ಶ್ರವಣೀ, ಶ್ರವಿಷ್ಟಾ ಎಂಬ ಕನ್ಯೆಯರಿಬ್ಬರಾದರು. ಶಮಿಯ ಮಗ ಪ್ರತಿಕ್ಷತ್ರ.

ಪ್ರತಿಕ್ಷತ್ರನ ಮಗ ಸ್ವಯಂಭೋಜ – ಇವನಿಗೆ ಭದಿಕ ಅಥವಾ ಹೃದಿಕನೆಂಬ ಮಗನಾದನು. ಹೃದಿಕನಿಗೆ ಕೃತವರ್ಮಾ, ದೇವಾಂತ, ನರಾಂತ, ಶತಧನ್ವಾ, ಬಿಷಗ್ವೈ, ಸುದಾಂತ, ತರಣ, ನಿಕಾಶ್ಯ, ಅಲೆದಾಂತ, ಕಾಮದಂಭಿ ಎಂಬ ಭೀಮ ಪರಾಕ್ರಮ ಮಕ್ಕಳಾದರು. ಇವರಲ್ಲಿ ಕೃತವರ್ಮನೆ ಹಿರಿಯನು. ದೇವಾಂತನ ಮಗನೆ ಕಂಬಲಬರ್ಹಿಷ. ಇವನು ಹಿರಿಯ ವಿದ್ವಾಂಸನು. ಇವನಿಗೆ ಅಸಮೌಜ ನಾಸಮೌಜ ಎಂಬಿಬ್ಬರು ಮಕ್ಕಳು. ಅಸಮೌಜ ನಿಷ್ಪುತ್ರಕನಾಗಿದ್ದನು. ಇವನಿಗೆ ಅಂಧಕವಂಶದವರಾದ ಸಂದಷ್ಟು – ಸುಚಾರು ಇವರಿಂದ ದತ್ತು ಪಡೆದ. ಕ್ರೋಷ್ಟುವಿಗೆ ಗಾಂಧಾರೀ–ಮಾದ್ರೀ ಎಂಬ

ಪತ್ನಿಯರಿದ್ದರು. ಮಾದ್ರಿಯ ಮಗ ಯುಧಾಜಿತ್‌ನು, ಇವನ ಮಗ ದೇವಮೀಢುಷ, ಗಾಂಧಾರಿಯ ಮಗ ಅನಮಿತ್ರ. ಅನಮಿತ್ರನಿಗೆ ನಿಘ್ನ. ನಿಘ್ನಿಗೆ ಸತ್ರಾಜಿತ್ ಹಾಗೂ ಪ್ರಸೇನನು.

**ಸತ್ರಾಜಿದಥ ಪ್ರಸೇನಶ್ಚ ಶತ್ರುಸೇನಾಜಿತಾವುಭೌ ।**
**ಪ್ರಸೇನೋ ದ್ವಾರವತ್ಯಾಂ ತು ನಿವಸಂತ್ಯಾಂ ಮಹಾಮಣಿಮ್ ॥ 2 ॥**

**ದಿವ್ಯಂ ಸ್ಯಮಂತಕಂ ನಾಮ ಸಮುದ್ರಾದುಪಲಬ್ಧವಾನ್ ।**
**ತಸ್ಯ ಸತ್ರಾಜಿತಃ ಸೂರ್ಯಃ ಸಖಾ ಪ್ರಾಣಸಮೋಽಭವತ್ ॥ 3 ॥**

ಪ್ರಸೇನ ಮತ್ತು ಸತ್ರಾಜಿತರಲ್ಲಿ ಸತ್ರಾಜಿತನು ಹಿರಿಯ. ಇವರಿಬ್ಬರೂ ಶೌರ್ಯವಂತರೂ. ದ್ವಾರವತಿಯಲ್ಲಿ ವಾಸಿಸುತ್ತಿದ್ದರು. ಸತ್ರಾಜಿತನಿಗೆ ಸೂರ್ಯನು ಪ್ರಾಣಮಿತ್ರನಾಗಿದ್ದನು. ಒಂದು ಬಾರಿ ಸತ್ರಾಜಿತನು ಸಮುದ್ರದ ದಂಡೆಯಲ್ಲಿದ್ದು ಸೂರ್ಯನು ಏಕಾಗ್ರಚಿತ್ತನಾಗಿ ಧ್ಯಾನಿಸಿದ. ಸಂತುಷ್ಟನಾದ ಸೂರ್ಯನು ಪ್ರತ್ಯಕ್ಷನಾಗಿ ಎದುರಿಗೆ ನಿಂತನು. ಸತ್ರಾಜಿತನಿಗೆ ಬೆಳಕಿನ ಪುಂಜ ಬಂದು ನಿಂತಂತಿತ್ತು. ಭಗವನ್ ಗಗನದಲ್ಲಿ ನಿನ್ನೊಂದು ಬೆಂಕಿಯ ಚೆಂಡು. ಎದುರಿಗೆ ಬಂದು ನಿಂತರೂ ಮಿತ್ರನನ್ನು ಕಣ್ತುಂಬ ನೋಡಲು ಸಾಧ್ಯವಾಗುತ್ತಿಲ್ಲ. ನೀನು ಭೂಮಿಗೆ ಬಂದೂ ಏನು ಪ್ರಯೋಜನವಾಗುತ್ತಿಲ್ಲ ಎಂದನು.

### ಸ್ಯಮಂತಕ ಸತ್ರಾಜಿತನಿಗೆ

**ಏತಚ್ಛ್ರುತ್ವಾ ತು ಭಗವಾನ್ ಮಣಿರತ್ನಂ ಸ್ಯಮಂತಕಮ್ ।**
**ಸ್ವಕಂಠಾದವಮುಚ್ಯೈವ ಏಕಾಂತೇ ನ್ಯಸ್ತವಾನ್ ವಿಭುಃ ॥ 4 ॥**

**ತತೋ ವಿಗ್ರಹವಂತಂ ತಂ ದದರ್ಶ ನೃಪತಿಸ್ತದಾ ।**
**ತದೇತನ್ ಮಣಿರತ್ನಂ ಮೇ ಭಗವಾನ್ ದಾತುಮರ್ಹತಿ ॥ 5 ॥**

**ತತಃ ಸ್ಯಮಂತಕಮಣಿಂ ದತ್ತವಾಂಸ್ತಸ್ಯ ಭಾಸ್ಕರಃ ।**
**ತಂ ಜನಾಃ ಪರ್ಯಧಾವಂತ ಸೂರ್ಯೋಽಯಂ ಗಚ್ಛತೀತಿ ಹ ॥ 6 ॥**

ಸೂರ್ಯನು ಮಿತ್ರನಿಗೆ ಸಂತೋಷಪಡಿಸಲು ಧರಿಸಿದ್ದ ಸ್ಯಮಂತಕ-

ಮಣಿಯನ್ನು ಕೊರಳನಿಂದ ತೆಗೆದು ಬದಿಗಿಟ್ಟನು. ಆಗ ಸೂರ್ಯನನ್ನು ನೋಡುವಂತಾದನು. ತೇಜಃಪುಂಜ ಶರೀರ ನೋಡಿ ಸಾಷ್ಟಾಂಗ ಪ್ರಣಾಮಗೈದ.

ಬಗೆಬಗೆಯ ಸ್ತೋತ್ರದಿಂದ ಪ್ರಸನ್ನ ಸೂರ್ಯದೇವನು ಬೇಕಾದ ವರ ಕೇಳು ಎಂದ. ಸತ್ರಾಜಿತನಿಗೆ ಸ್ಯಮಂತಕಮಣಿಯನ್ನೆ ಬೇಡಿದ. ಸೂರ್ಯನು ಆ ಮಣಿಯನ್ನು ನೀಡಿ ಮರೆಯಾದನು. ಸತ್ರಾಜಿತನು ಸೂರ್ಯನು ದಯಪಾಲಿಸಿದ ಸೂರ್ಯಮಣಿಯನ್ನು ಕೊರಳಲ್ಲಿ ಧರಿಸಿ ಊರಲ್ಲೆಲ್ಲ ತಿರುಗಾಡುತ್ತಿದ್ದನು. ರತ್ನದ ಕಿರಣ ಕಾಂತಿಯಿಂದಾ ದಶದಿಕ್ಕುಗಳೂ ಬೆಳಗಿದವು. ಜನರೆಲ್ಲರೂ ಸೂರ್ಯದೇವನೆ ಶ್ರೀಕೃಷ್ಣ ಸಂದರ್ಶನಕ್ಕಾಗಿ ಬರುತ್ತಿರುವನೆಂದು ಭಾವಿಸಿದರು. ಶ್ರೀಕೃಷ್ಣನು ಸೂರ್ಯನಲ್ಲ ಇವನು. ಸೂರ್ಯದತ್ತಮಣಿಯನ್ನು ಧರಿಸದ್ದಾನಷ್ಟೆ ಎಂದನು.

### ಸ್ಯಮಂತಕವನ್ನು ತಮ್ಮನಿಗೆ ನೀಡಿದ

**ತತ್ ಪ್ರಸೇನಜಿತಂ ದಿವ್ಯಂ ಮಣಿರತ್ನಂ ಸ್ಯಮಂತಕಮ್ ।**
**ದದೌ ಭ್ರಾತ್ರೇ ನರಪತಿಃ ಪ್ರೇಮ್ಣಾ ಸತ್ರಾಜಿದುತ್ತಮಮ್ ॥ 7 ॥**

**ಸ ಮಣಿಃ ಸ್ಯಂದತೇ ರುಗ್ಮಂ ವೃಷ್ಣ್ಯಂಧಕ ನಿವೇಶನೇ ।**
**ಕಾಲವರ್ಷೀ ಚ ಪರ್ಜನ್ಯೋ ನ ಚ ವ್ಯಾಧಿಭಯಂ ಹ್ಯಭೂತ್ ॥ 8 ॥**

**ಲಿಪ್ಸಾಂ ಚಕ್ರೇ ಪ್ರಸೇನಾತ್ತು ಮಣಿರತ್ನೇ ಸ್ಯಮಂತಕೇ ।**
**ಗೋವಿಂದೋ ನ ಚ ತಲ್ಲೇಭೇ ಶಕ್ತೋಽಪಿ ನ ಜಹಾರ ಹ ॥ 9 ॥**

ಸೂರ್ಯದತ್ತ ಸ್ಯಮಂತಕವನ್ನು ಸತ್ಯಾಜಿತನು ತನ್ನ ಮನೆಯಲ್ಲಿರಿಸಿದ. ಅದು ಪ್ರತಿದಿನವು ಎಂಟು ಭಾರ ಬಂಗಾರವನ್ನು ಇಟ್ಟಲ್ಲಿಯೇ ನೀಡುತ್ತಿತ್ತು. ಆ ಮಣಿಯಿರುವ ದೇಶದಲ್ಲಿ ಕಾಲಕಾಲಕ್ಕೆ ವೃಷ್ಟಿಯಾಗುತಿತ್ತು. ಬರಬೀಳುತ್ತಿದ್ದಲ್ಲ. ಯಾವುದೇ ರೋಗ ರುಜಿನಗಳು ಬರುವಂತಿಲ್ಲ. ಬೆಂಕಿಯ ಅನಾಹುತ ಜರಗುತ್ತಿದ್ದಿಲ್ಲ. ಹಾವು-ಕಳ್ಳರಿಂದ ಭಯವಿಲ್ಲ. ಇಂತಹ ಗುಣವನ್ನರಿತು ಶ್ರೀಕೃಷ್ಣನು ಸತ್ರಾಜಿತನ ಲೋಭವನ್ನು ತೋರಿಸಲೆಂದೆ ನನಗೆ ಆ ಮಣಿ ಕೊಡು ಎಂದಿದ್ದ. ಸಂಬಂಧ ಕೆಡಬಾರದೆಂದು ಬಲಾತ್ಕಾರವಾಗಿ

ತೆಗೆದುಕೊಳ್ಳಲು ಸಮರ್ಥನಾಗಿದ್ದರೂ ತೆಗೆದುಕೊಳ್ಳಲಿಲ್ಲ. ಶ್ರೀಕೃಷ್ಣ ಭಕ್ತನಾಗಿದ್ದರೂ ಲೋಭದಿಂದ ನೀಡಲಿಲ್ಲ. ಸತ್ರಾಜಿತನಿಗೆ ಶ್ರೀಕೃಷ್ಣನು ಉಗ್ರಸೇನನಿಗೆ ಕೊಡುವ ಇಷ್ಟವಿದೆಯೆಂದು ತಿಳಿದು ನನ್ನ ಬಳಿಯಿದ್ದರೆ ಪುನಃ ಕೇಳಬಹುದೆಂದು ತನ್ನ ತಮ್ಮ ಪ್ರಸೇನನಿಗೆ ಕೊಟ್ಟಿದ್ದನು. ಪ್ರಸೇನನಿಗೆ ಮಣಿಯ ಮಹಿಮೆ ತಿಳಿದಿದ್ದಿಲ್ಲ. ಅದು ಶುಚಿರ್ಭೂತರಾಗಿ ಭಕ್ತಿಯಿಂದ ಧರಿಸಿದರೆ ಸಕಲ ಅಭೀಪ್ಸಿತವನ್ನು ನೀಡುತ್ತಿತ್ತು. ಶುದ್ಧತೆ ಇಲ್ಲದೆ ಧರಿಸಿದರೆ ಧರಿಸಿದವರಿಗೆ ಮಾರಕವಾಗುತ್ತಿತ್ತು.

### ಮೃಗಯಾ ಹೋಗಿ ಸಿಂಹದಿಂದ ಸತ್ತ

**ಕದಾಚಿನ್ ಮೃಗಯಾಂ ಯಾತಃ ಪ್ರಸೇನಸ್ತಸ್ಯ ಭೂಷಿತಃ ।**
**ಸ್ಯಮಂತಕಕೃತೇ ಸಿಂಹಾದ್ ವಧಂ ಪ್ರಾಪ ವನೇಚರಾತ್ ॥ 10 ॥**
**ಅಥ ಸಿಂಹಂ ಪ್ರಧಾವಂತಮ್ ಋಕ್ಷರಾಜೋ ಮಹಾಬಲಃ ।**
**ನಿಹತ್ಯ ಮಣಿರತ್ನಂ ತದಾದಾಯ ಬಿಲಮಾವಿಶತ್ ॥ 11 ॥**
**ಪ್ರಾರ್ಥನಾಂ ತಾಂ ಮಣೇಃ ಬುಧ್ವಾ ಸರ್ವ ಏವ ಶಶಂಕಿರೇ ॥ 12 ॥**
**ಸ ಶಂಕ್ಯಮಾನೋ ಧರ್ಮಾತ್ಮಾ ನಕಾರೀ ತಸ್ಯ ಕರ್ಮಣಃ ।**
**ಆಹರಿಷ್ಯೇ ಮಣಿಮಿತಿ ಪ್ರತಿಜ್ಞಾಯ ವನಂ ಯಯೌ ॥ 13 ॥**

ಮಣಿಯ ಮಹಿಮಾತಿರೇಕವನ್ನೆ ತಿಳಿಯದ ಪ್ರಸೇನನು ಮಣಿಯನ್ನು ಕೊರಳಲ್ಲಿ ಧರಿಸಿ ಬೇಟೆಗೆ ಹೊರಟ. ಬೇಟೆಯಾಡುತ್ತಾ ಗಹನಾರಣ್ಯ ಪ್ರವೇಶಿಸಿದ. ಅಲ್ಲಿ ಒಂದು ಭಾರೀ ಸಿಂಹವೊಂದು ಎದುರು ಬಂದಿತು. ಪ್ರಸೇನ ಅದರೊಂದಿಗೆ ಹೋರಾಡಿದ ಬಲಿಷ್ಠ ಸಿಂಹದ ಮುಂದೆ ಪ್ರಸೇನ ಬಲ ಸಾಕಾಗದೆ ಅದರಿಂದ ಮೃತನಾದ. ಕೊರಳಲ್ಲಿ ಹೊಳೆಯುತ್ತಿದ್ದ ಸ್ಯಮಂತಕವನ್ನು ನೋಡಿ ಸಿಂಹಕ್ಕೆ ಕೌತುಕವೆನಿಸಿತು. ಅದನ್ನು ಬಾಯಲ್ಲಿ ಕಚ್ಚಿಕೊಂಡು ಅರಣ್ಯ ಪ್ರವೇಶಿಸಿತು. ಕರಡಿಗಳ ನಾಯಕನಾದ ಜಾಂಬವಂತನು ಸಿಂಹವು ರತ್ನವನ್ನು ಬಾಯಲ್ಲಿ ಕಚ್ಚಿಕೊಂಡು ಹೋಗುತ್ತಿರುವುದನ್ನು ನೋಡಿ ಆ ಸಿಂಹದ ಮೇಲೆರಗಿ ಅದನ್ನು ಕೊಂದು ಹಾಕಿ ಮಣಿಯನ್ನು ಹಿಡಿದುಕೊಂಡು ತನ್ನ ಗುಹೆಯನ್ನು ಪ್ರವೇಶಿಸಿದನು. ಬೇಟೆಗೆ ಹೋದ ತಮ್ಮನು ಬಹುದಿನಗಳಾದರೂ ಹಿಂತಿರುಗಿ

ಬಾರದಿದ್ದನ್ನು ನೋಡಿದ ಸತ್ರಾಜಿತನು. ಹಿಂದೆ ಕೃಷ್ಣ ಮಣಿಯನ್ನು ಅಪೇಕ್ಷಿಸಿದ್ದ. ಅವನೇ ಪ್ರಸೇನನನ್ನು ಕೊಂದು ಮಣಿ ಅಪಹರಿಸಿರಬೇಕೆಂದು ತೀರ್ಮಾನಿಸಿದ. ತನ್ನ ಪರಿವಾರದವರಿಗೆ ತನ್ನ ಸಂಶಯ ಅಭಿವ್ಯಕ್ತೀಕರಿಸಿದ. ಕರ್ಣಾಕರ್ಣಿಕೆಯಿಂದ ಕೃಷ್ಣನಿಗೂ ತಿಳಿಯಿತು. ಅಪವಾದ ಬಂದಾಗ ನಾವು ಸರಿಯಿದ್ದರೂ ಕಳಂಕ ತೊಳೆದು ಕೊಳ್ಳಬೇಕೆಂಬ ನೀತಿಯನ್ನು ತೋರಿಸುತ್ತಾ ಪ್ರಸೇನನನ್ನು ಹುಡುಕುತ್ತಾ ಬಲರಾಮ ಹಾಗೂ ಕೆಲವು ಯಾದವರೊಂದಿಗೆ ಅರಣ್ಯ ಪ್ರವೇಶಿಸಿದ.

### ಸಿಂಹಃ ಪ್ರಸೇನಮವಧೀತ್

**ಯತ್ರ ಪ್ರಸೇನೋ ಮೃಗಯಾ ಮಾಚರತ್ ತತ್ರ ಚಾಪ್ಯಥ ।**
**ಪ್ರಸೇನಸ್ಯ ಪದಂ ಗೃಹ್ಯ ಪುರುಷೈಃ ಆಪ್ತಕಾರಿಭಿಃ ॥ 14 ॥**
**ಋಕ್ಷವಂತಂ ಗಿರಿವರಂ ವಿಂಧ್ಯಂ ಚ ಗಿರಿಮುತ್ತಮಮ್ ।**
**ಅನ್ವೇಷಯನ್ ಪರಿಶ್ರಾಂತಃ ಸ ದದರ್ಶ ಮಹಾಮನಾಃ ॥ 15 ॥**
**ಸಾಶ್ವಂ ಹತಂ ಪ್ರಸೇನಂ ವೈ ನಾವಿಂದಚ್ಚ ಇಚ್ಛಿತಂ ಮಣಿಮ್ ॥ 16 ॥**

ಶ್ರೀಕೃಷ್ಣನು ಆಪ್ತ ಅನುಚರರಿಂದ ಕೂಡಿಕೊಂಡು ಪ್ರಸೇನನು ಬೇಟೆಗಾಗಿ ಹೋಗಿದ್ದ ಅರಣ್ಯಗಳಲ್ಲಿ ಹುಡುಕಲಾರಂಭಿಸಿದನು. ಋಕ್ಷವಂತ ಪರ್ವತ, ವಿಂಧ್ಯಪರ್ವತಗಳ ಭಾಗಗಳನ್ನೆಲ್ಲ ಹುಡುಕಿದ. ಸುಳಿವು ಸಿಗಲಿಲ್ಲ. ಒಂದು ದಿನ ಒಂದೆಡೆಯಲ್ಲಿ ಕುದುರೆಯೊಂದಿಗೆ ಮೃತನಾಗಿ ಬಿದ್ದಿದ್ದ ಪ್ರಸೇನನನ್ನು ನೋಡಿದ. ಮುಂದೆ ಸಿಂಹದ ಹೆಜ್ಜೆ ಗುರುತುಗಳನ್ನು ನೋಡಿ ಸಿಂಹವೆ ಪ್ರಸೇನನನ್ನು ಕೊಂದಿದೆ ಎಂದು ತಿಳಿದ. ಆದರೆ ಸ್ಯಮಂತಕಮಣಿ ಕಾಣಿಸಲಿಲ್ಲ. ಸಿಂಹದ ಹೆಜ್ಜೆಗಳನ್ನೆ ಅನುಸರಿಸಿ ನಡೆದಾಗ ಸಿಂಹ ಸತ್ತು ಬಿದ್ದಿತ್ತು. ಕರಡಿ ಗುರುತುಗಳಿಂದ ಕರಡಿಯ ಕೊಂದಿದೆ ಎಂದು ನಿಶ್ಚಯವಾಯಿತು.

### ಸಿಂಹೋ ಜಾಂಬವತಾ ಹತಃ

**ಋಕ್ಷೇಣ ನಿಹತೋ ದೃಷ್ಟಃ ಪಾದೈಃ ಋಕ್ಷಶ್ಚ ಸೂಚಿತಃ ।**
**ಪಾದೈರನ್ವೇಷಯಾಮಾಸ ಗುಹಾಮೃಕ್ಷಸ್ಯ ಮಾಧವಃ ॥ 17 ॥**

**ಧಾತ್ರ್ಯಾ ಕುಮಾರಮಾದಾಯ ಸುತಂ ಜಾಂಬವತೋ ನೃಪ ।**
**ಕ್ರೀಡಾಪಯಂತ್ಯಾ ಮಣಿನಾ ಮಾ ರೋದೀರಿತ್ಯಥೇರಿತಾಮ್ ॥ 18 ॥**

ಕರಡಿಯ ಹೆಜ್ಜೆಗಳು ಒಂದು ಗುಹೆಯ ಒಳಗೆ ಪ್ರವೇಶಿಸಿದ್ದವು. ಕೃಷ್ಣನೂ ಅದನ್ನು ಪ್ರವೇಶಿಸಿದ. ಸಿಂಹವನ್ನೆ ಕೊಂದು ಹಾಕಿದ ಕರಡಿಯ ಗುಹೆಯೊಳಗೆ ಹೋಗಲು ಯಾದವರು ಅಂಜಿದರು. ಶ್ರೀಕೃಷ್ಣನು ಅವರನ್ನು ದ್ವಾರದಲ್ಲಿಯೇ ನಿಲ್ಲಲು ಹೇಳ ತಾನೊಬ್ಬನೇ ಒಳಗೆ ಪ್ರವೇಶಿಸಿದನು. ಒಳಗೆ ನೋಡಿದಾಗ ಗುಹೆಯೊಳಗೆ ಧಾತ್ರಿಯೊಬ್ಬಳು ಜಾಂಬವಂತನ ಕುಮಾರನಿಗೆ ಸ್ಯಮಂತಕಮಣಿಯನ್ನು ತೋರಿಸುತ್ತಾ, ಅದರ ಕಥೆ ಹೇಳುತ್ತಾ ಅವನನ್ನು ಆಟವಾಡಿಸುತ್ತಿದ್ದಳು.

ಸಿಂಹವು ಪ್ರಸೇನನನ್ನು ಕೊಂದಿತು. ಸಿಂಹವನ್ನು ನಿಮ್ಮ ತಂದೆ ಕೊಂದು ಹಾಕಿದ, ಮುದ್ದು ಮಗುವೆ, ಅಳಬೇಡ, ಈ ಸ್ಯಮಂತಕ ನಿನಗೆ ಎಂದು ತೂಗುತ್ತಿದ್ದಳು.

## ಕೃಷ್ಣ-ಜಾಂಬವಂತರ ಯುದ್ಧ

**ಯುಯುಧೇ ವಾಸುದೇವಸ್ತು ಬಿಲೇ ಜಾಂಬವತಾ ಸಹ ।**
**ಬಾಹುಭ್ಯಾಮೇವ ಗೋವಿಂದಃ ದಿವಸಾನ್ಯೇಕವಿಂಶತಿಮ್ ॥ 19 ॥**

**ಪ್ರವಿಷ್ಟೇ ತು ಬಿಲಂ ಕೃಷ್ಣೇ ಬಲದೇವ ಪುರಃ ಸರಾಃ ।**
**ಪುರೀಂ ದ್ವಾರವತೀಮೇತ್ಯ ಹತಂ ಕೃಷ್ಣಂ ನ್ಯವೇದಯನ್ ॥ 20 ॥**

ಕೃಷ್ಣನಿಗೆ ಧಾತ್ರಿಯ ಶ್ಲೋಕದಿಂದ ರತ್ನದ ಕಳುವಿನ ಇತಿಹಾಸವೆ ಪತ್ತೆಯಾಯಿತು. ಒಳಗೆ ನೋಡಿದರೆ ದಾಸಿಯ ಕೈಯಲ್ಲಿ ಒಂದು ಕೂಸು. ಕೂಸಿನ ಕೈಯ್ಯಲ್ಲಿ ಸ್ಯಮಂತಕ ಮಣಿ. ಧಾತ್ರಿಯ ಸಮೀಪ ಶ್ರೀಕೃಷ್ಣ ಬಂದಂತೆ ಅಪೂರ್ವ ಪುರುಷನನ್ನು ನೋಡಿ ಭಯಗೊಂಡು ಕೂಗಿಕೊಂಡಳು. ಕಾಮಜ್ವರ ಪೀಡಿತ ಜಾಂಬವತಿಯಾದರೂ ಪದ್ಮನೇತ್ರನನ್ನು ನೋಡಿ ಜಾಂಬವಂತ ಏಳುವುದರೊಳಗೆ ಮಣಿ ತೆಗೆದುಕೊಂಡು ಹೋಗಿಬಿಡು ಎಂದಳು. ಶ್ರೀಕೃಷ್ಣನು ಬಾಲೆಯ ಮಾತನ್ನು ಕೇಳ ಶಂಖವನ್ನೂದಿದನು. ಜಾಂಬವಂತನು ಎಚ್ಚೆತ್ತುಕೊಂಡನು. ಈ ಎರಡು ಶಬ್ಧಗಳಂದ ಎಚ್ಚೆತ್ತ ಜಾಂಬವಂತನು ಗದೆ ಹಿಡಿದು ಯುದ್ಧಕ್ಕೆ ಧಾವಿಸಿ ಬಂದನು. ಮಣಿಗಾಗಿ ಬಂದಿರುವೆವು ಮಣಿಯನ್ನು ಕೊಡು ಎಂದಾಗ ನಿರಾಕರಿಸಿದ ಇಬ್ಬರಿಗೂ

ಇಪ್ಪತ್ತೊಂದು ದಿನ ಯುದ್ಧ ನಡೆಯಿತು. ಬಲರಾಮಾದಿಗಳು **ಇಪ್ಪತ್ತೊಂದು**[1] ದಿನಗಳಾದರೂ ಶ್ರೀಕೃಷ್ಣನು ಬಾರದೆ ಇದ್ದದ್ದನ್ನು ನೋಡಿ ಶ್ರೀಕೃಷ್ಣನು ಮೃತನಾಗಿರುವನೆಂದು ತಿಳದು ದ್ವಾರಕೆಗೆ ಬಂದು ಕೃಷ್ಣಮೃತಿಯನ್ನು ತಿಳಸಿದರು.

## ಜಾಂಬವತೀ ಕಲ್ಯಾಣ

**ವಾಸುದೇವಸ್ತು ನಿರ್ಜಿತ್ಯ ಜಾಂಬವಂತಂ ಮಹಾಬಲಮ್ ।**
**ಭೇಜೇ ಜಾಂಬವತೀಂ ಕನ್ಯಾಂ ಋಕ್ಷರಾಜಸ್ಯ ಸಮ್ಮತಾಮ್ ॥ 21 ॥**
**ಮಣಿಂ ಸ್ಯಮಂತಕಂ ಚೈವ ಜಗ್ರಾಹಾತ್ಮವಿಶುದ್ಧಯೇ ॥ 22 ॥**
**ಏವಂ ಸ ಮಣಿಮಾಹೃತ್ಯ ವಿಶೋಧ್ಯಾತ್ಮಾನಮಚ್ಯುತಃ ।**
**ದದೌ ಸತ್ರಾಜಿತೇ ತಂ ವೈ ಸರ್ವಸಾತ್ವತ ಸಂಸದಿ ॥ 23 ॥**

ಶ್ರೀಕೃಷ್ಣನು ಜಾಂಬವಂತನನ್ನು ಎದುರಿಸಿ ಯುದ್ಧ ಮಾಡಿ ಸೋಲಿಸಿದನು. ಜಾಂಬವತನಾದರು ಕೃಷ್ಣನ ಮುಷ್ಟಿಯ ಹೊಡೆತದಿಂದ ಬಲಕುಗ್ಗಿದವನಾಗಿ ಮೈಯೆಲ್ಲ ಬೆವತು ಆಶ್ಚರ್ಯದಿಂದ ನನ್ನನ್ನು ಎದುರಿಸಬೇಕಾದರೆ ವಿಷ್ಣುವೆ ಇರಬೇಕು ಎಂದು ಶ್ರೀಹರಿಯನ್ನು ಸ್ತೋತ್ರ ಮಾಡಿದನು.

ನೀನು ದಶಸ್ಯಂದನ ನಂದನನಾದ ಶ್ರೀರಾಮನೆ ನಂದನಂದನನಾಗಿ

---

1. **ಇಪ್ಪತ್ತೊಂದು ದಿನ :** ಹರಿವಂಶವು ಏಕವಿಂಶತಿ ದಿನ ಯುದ್ಧವೆಂದು ಹೇಳಿದೆ. ವಿಷ್ಣುಪುರಾಣವು - **ಅದೃಷ್ಟ್ವಾ ನಿರ್ಗಮಂ ಯದು ಸೈನಿಕಾಃ ಸಪ್ತಾಷ್ಟದಿನಾನಿ** - ಎಂದು ಏಳೆಂಟು ದಿವಸ ಕಾದು ಹೋದರೆಂದಿದೆ.

   ಭಾಗವತವು **'ಪ್ರತಿಕ್ಷ್ಯದ್ವಾದಶಾಹಾನಿ'** ಹನ್ನೆರಡು ದಿವಸ ಕಾದರೆಂದಿದೆ.

   ಹರಿವಂಶವೇ ಮುಂದೆ. **'ದ್ವಾರಕಾವಾಸಿನಃ ಸರ್ವೇ ಗತಾಸ್ತೇ ಸಪ್ತಮೇ ದಿನೇ'** ಏಳು ದಿನ ಕಾದು ಹೋದರೆಂದಿದೆ.

   ಭಾಗವತವು **'ಆಸೀತ್ ತದಷ್ಟಾವಿಂಶಾಹಂ'** ಇಪ್ಪತ್ತೆಂಟು ದಿನವೆಂದಿದೆ.

   ವಸ್ತುತಃ 28 ದಿನಗಳು ಯುದ್ಧ ನಡೆದಿದೆ. ಯಾದವರು ಕಾದದ್ದು ಏಳುದಿನ ನಂತರ ದ್ವಾರಕೆಗೆ ಹೋದರು. ಹರಿವಂಶ-ದ್ವಾರಕೆಗೆ ಹೋದ ಮೇಲೆ 21 ದಿನವೆಂದು ಹೇಳಿದ್ದು. ಭಾಗವತ ಅದನ್ನೂ ಸೇರಿಸಿ 28 ದಿನವೆಂದಿದೆ. ಹನ್ನೆರಡು ದಿನ ಕಾದದ್ದೆಂದು ಹೇಳಿದ್ದು ಹೇಗೆ? ಕೆಲವು ಕಡೆ ಏಳೆಂಟು ಅಂದರೆ ಹನ್ನೊಂದು ದಿನವೆಂದಿದೆ. ಇದೆಲ್ಲ ಏಳು ದಿವಸವಾದರೂ ದುಃಖದಿಂದಾಗಿ ಬಹಳ ದಿನಗಳಂತಾಗಿತ್ತು.

   **ಅಹಸ್ತು ಮಾಸಶಬ್ದೋಕ್ತಂ ಯತ್ರ ಚಿಂತಾಯುತಂ ವ್ರಜೇತ್** - *ಭಾ.ತಾ.*

ಅವತರಿಸಿರುವೆ. ನನ್ನಪರಾಧ ಕ್ಷಮಿಸು ಎಂದನು. ಶ್ರೀಕೃಷ್ಣನು ಭಲ್ಲೂಕ ರಾಜನನ್ನು ಎತ್ತಿ ಸುಖಕರವಾದ ಹಸ್ತದಿಂದ ಮೈದಡವಿ – ಜಾಂಬವಂತನೇ, ನಾವು ಈ ಮಣಿಯಿಂದಾಗಿ ಬಂದಿರುವ ಮಿಥ್ಯಾರೋಪವನ್ನು ಪರಿಹರಿಸಿಕೊಳ್ಳಲು ಮಣಿಗಾಗಿ ಬಂದಿರುವೆವು ಎಂದಾಗ ಜಾಂಬವಂತನು ತನ್ನ ಮಗಳಾದ ಜಾಂಬವತಿಯನ್ನು, ಸ್ಯಮಂತಕಮಣಿಯನ್ನು ಅರ್ಪಿಸಿ ಕೈಮುಗಿದ. ಶ್ರೀಕೃಷ್ಣನು ಜಾಂಬವಂತನನ್ನು ಅನುಗ್ರಹಿಸಿ ಕನ್ಯಾಮಣಿ ಹಾಗೂ ಸ್ಯಮಂತಕ ಮಣಿಯೊಂದಿಗೆ ದ್ವಾರಕೆಗೆ ಬಂದು ನಡೆದ ಸಂಗತಿ ಯಾದವರ ಮುಂದೆ ತಿಳಿಸಿ ಮಣಿಯನ್ನು ಸತ್ರಾಜಿತನಿಗೆ ನೀಡಿದನು. ಜಾಂಬವತಿಯನ್ನು ವಿವಾಹವಾದನು.

## ಸತ್ಯಭಾಮಾ ಕಲ್ಯಾಣ

**ಏವಂ ಮಿಥ್ಯಾಭಿಶಪ್ತೇನ ಕೃಷ್ಣೇನಾಮಿತ್ರ ಘಾತಿನಾ ।**
**ಆತ್ಮಾವಿಶೋಧಿತಃ ಪಾಪಾದ್ ವಿನಿರ್ಜಿತ್ಯ ಸ್ಯಮಂತಕಮ್ ॥ 24 ॥**

**ಸತ್ರಾಜಿತಃ ದಶ ತ್ವಾಸನ್ ಭಾರ್ಯಾಃ ತಾಸಾಂ ಶತಂ ಸುತಾಃ ।**
**ಖ್ಯಾತಿಮಂತಃ ತ್ರಯಸ್ತೇಷಾಂ ಭಂಗಕಾರಸ್ತು ಪೂರ್ವಜಃ ॥ 25 ॥**

**ಕುಮಾರ್ಯಶ್ಚಾಪಿ ತಿಸ್ರೋ ವೈ ದಿಕ್ಷು ಖ್ಯಾತಾ ನರಾಧಿಪ ।**
**ಸತ್ಯಭಾಮೋತ್ತಮಾ ಸ್ತ್ರೀಣಾಂ ವ್ರತಿನೀ ಚ ದೃಢವ್ರತಾ ।**
**ತಥಾ ಪ್ರಸ್ವಾಪಿನೀ ಚೈವ ಭಾರ್ಯಾಂ ಕೃಷ್ಣಾಯ ತಾಂ ದದೌ ॥ 26 ॥**

ಹೀಗೆ ಶ್ರೀಕೃಷ್ಣನು ತನ್ನ ಅಪರಾಧವಿಲ್ಲದಿದ್ದರೂ ಅಪವಾದ ಕಳೆದುಕೊಳ್ಳಲು ತನ್ನ ಸಾಮರ್ಥ್ಯದಿಂದ ಸ್ಯಮಂತಕಮಣಿಯನ್ನು ಸಾಧಿಸಿ, ತನ್ನ ಮೇಲೆ ಬಂದ ಅಪಕೀರ್ತಿ ತೊಳೆದುಕೊಂಡನು.

ಸತ್ರಾಜಿತನಿಗೆ ತನ್ನ ಮನಸ್ಸಿನಲ್ಲಿ ಬಹಳ ನಾಚಿಕೆಯಾಯಿತು. ತನ್ನ ಮೇಲೆ ಜಿಗುಪ್ಸೆಯಾಯಿತು. ಶ್ರೀಕೃಷ್ಣ ಎಂದರೆ ನಿಷ್ಕಲಂಕ ಚಂದ್ರನಿದ್ದಂತೆ. ಅಂತಹ ದೇವೋತ್ತಮನ ಮೇಲೆ ಇಲ್ಲಸಲ್ಲದ ಆರೋಪ ಮಾಡಿದೆ ಎಂದು ನೊಂದುಕೊಂಡ. ತಾನು ಮಾಡಿದ ಆರೋಪಕ್ಕೆ ಸರಿಯಾದ ಪ್ರಾಯಶ್ಚಿತ್ತವೇನು ಎಂದು ವಿಚಾರಿಸಿದ.

ಸತ್ರಾಜಿತನಿಗೆ ದಶಪತ್ನಿಯರಿದ್ದರು. ಇವರಲ್ಲಿ ನೂರು ಮಂದಿ ಪುತ್ರರಾದರು. ಇವರಲ್ಲಿ ಭಂಗಕಾರ, ವಾತಪತಿ, ವಸುಮೇಧ ಪ್ರಧಾನರು. ವಸುಮೇಧನಿಗೆ ಉಪಸ್ವಾವಾನ್ ಎಂದೂ ನಾಮಾಂತರವಿತ್ತು.

ನೂರು ಪುತ್ರರಲ್ಲದೆ ಸತ್ರಾಜಿತನಿಗೆ ಮೂವರು ಸುಂದರಿಯರಾದ ಕನ್ಯೆಯರೂ ಇದ್ದರು. ಇವರಲ್ಲಿ ಸತ್ಯಭಾಮೆಯು ಸಾಕ್ಷಾತ್ ಲಕ್ಷ್ಮೀದೇವಿಯ ಅವತಾರಳೂ, ಸರ್ವದೇವೋತ್ತಮಳೂ ಗುಣಶ್ರೇಷ್ಠಳೂ ಆಗಿದ್ದಳು. ಇವಳನ್ನೇ ಸತ್ರಾಜಿತನು ಶ್ರೀಕೃಷ್ಣನಿಗೆ ವಿವಾಹ ಮಾಡಿಕೊಟ್ಟು ಪಾಪ ತೊಳೆದುಕೊಂಡ. ಈ ಸ್ಯಮಂತಕೋಪಾಖ್ಯಾನದಲ್ಲಿ ಜಾಂಬವತೀಕಲ್ಯಾಣ ಸತ್ಯಭಾಮಾಕಲ್ಯಾಣ ಸೇರಿ ಮಂಗಳವಾದ್ದರಿಂದ ಇದರ ಶ್ರವಣಾದಿಗಳಿಂದ ಮಿಥ್ಯಾಪವಾದ ದೂರವಾಗುತ್ತದೆ.

ಸತ್ರಾಜಿತನ ಹಿರಿಯ ಮಗ ಭಂಗಕಾರಿಗೆ ಸಭಾಕ್ಷ, ನಾರೇಯ ಎಂಬ ಸುಂದರರೂ ಗುಣೋನ್ನತರೂ ಆದ ಮಕ್ಕಳಿದ್ದರು.

ಮಾದ್ರಿದೇವಿಯಲ್ಲಿ ಯುಧಾಜಿತ್‌ನಿಂದ ಶ್ವಫಲ್ಕ-ಚಿತ್ರಕರೆಂಬ ಇಬ್ಬರು ಪುತ್ರರಾದರು. ಗಾಂಧಿನಿಯಲ್ಲಿ ಶ್ವಫಲ್ಕನಿಂದ ಅಕ್ರೂರ ಜನಿಸಿದ. ಶ್ವಫಲ್ಕನಿಗೆ ಅಕ್ರೂರನಲ್ಲದೆ ಅಂಧಕ, ಭೋಜ, ಅರಿಮರ್ದನ, ಗೃಧ್ರ ಮೇದುರ, ಧರ್ಮ, ಮದ್ಗು, ಧರ್ಮಭೃತ್, ಉಪಮದ್ಗು, ಅರಿಮೇಜಯ, ಉಪೇಕ್ಷ, ಅರಿಕ್ಷೇಪ, ಆವಾಹ, ಪ್ರತಿವಾಹ ಎಂದು.

ಸುಂದರೀದೇವೀಯೆಂಬ ಕನ್ಯೆಯೂ ಇದ್ದಳು. ಇವಳನ್ನು ಸಾಂಬದೇಶದ ವಿಶ್ರುತಾಶ್ವ ವಿವಾಹವಾಗಿ ರೂಪ ಯೌವನ ಸಂಪನ್ನಳಾದ, ಸರ್ವರ ಮನಸ್ಸನ್ನು ಸೆಳೆಯುವ ಆಕರ್ಷಕ ಸೌಂದರ್ಯವಿರುವ ವಸುಂಧರಾ ಎಂಬ ಕನ್ಯೆ ಹುಟ್ಟಿದಳು.

ಅಕ್ರೂರನಿಗೆ ಉಗ್ರಸೇನಿಯಲ್ಲಿ ಪ್ರಸೇನ, ಉಪದೇವನೆಂಬ ಪುತ್ರರಾದರು. ಪ್ರಸೇನನಿಗೆ ವಸುದೇವನೆಂದು ನಾಮಾಂತರವಿತ್ತು.

ಚಿತ್ರಕನಿಗೆ ಪೃಥು, ಅಶ್ವಗ್ರೀವ, ಸುಪಾರ್ಶ್ವಕ, ಅಶ್ವಬಾಹು, ಗವೇಷಣ, ಧರ್ಮ, ಅರಿಷ್ಟನೇಮಿ, ಧರ್ಮಭೃತ್, ಸುಬಾಹು, ಶ್ರವಿಷ್ಠಾದೇವೀ ಶ್ರವಣಾದೇವೀ ಎಂಬ ಕನ್ಯೆಯರೂ ಹುಟ್ಟಿದರು.

ಈ ಶ್ರೀಕೃಷ್ಣನ ಮಹಿಮೆಯನ್ನು ವರ್ಣಿಸುವ ಉಪಾಖ್ಯಾನ ಕೇಳಿದವರಿಗೆ ಮಿಥ್ಯಾಪವಾದ ಬರುವುದಿಲ್ಲ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಸ್ಯಮಂತೋಪಾಖ್ಯಾನವೆಂಬಲ್ಲಿ
ಮುವತ್ತೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 39 ಹರಿಪರ್ವ

## ಅಥ ಏಕೋನಚತ್ವಾರಿಂಶೋಽಧ್ಯಾಯಃ

### ಮಣಿಗಾಗಿ ಸತ್ರಾಜಿತನ ಕೊಲೆ

*ವೈಶಂಪಾಯನ ಉವಾಚ-*

**ಯತ್ ತತ್ ಸತ್ರಾಜಿತೇ ಕೃಷ್ಣೋ ಮಣಿರತ್ನಂ ಸ್ಯಮಂತಕಮ್ ।**
**ಅದಾತ್ ತದ್ ಧಾರಯಾಮಾಸ ಬಭ್ರುರ್ವೈ ಶತಧನ್ವನಾ ॥ 1 ॥**

**ಸದಾ ಹಿ ಪ್ರಾರ್ಥಯಾಮಾಸ ಸತ್ಯಭಾಮಾಮನಿಂದಿತಾಮ್ ।**
**ಅಕ್ರೂರೋಽಂತರ ಮನ್ವಿಚ್ಛನ್ ಮಣಿಂ ಚೈವ ಸ್ಯಮಂತಕಮ್ ॥ 2 ॥**

**ಸತ್ರಾಜಿತಂ ತತೋ ಹತ್ವಾ ಶತಧನ್ವಾ ಮಹಾಬಲಃ ।**
**ರಾತ್ರೌ ತಂ ಮಣಿಮಾದಾಯ ತತೋಽಕ್ರೂರಾಯ ದತ್ತವಾನ್ ॥ 3 ॥**

**ಸಮಯಂ ಕಾರಯಾಮಾಸ ನಾವೇದ್ಯೋಽಯಂ ತ್ವಯೇತ್ಯುತ ।**
**ವಯಮಭ್ಯುಪಯಾಸ್ಯಾಮಃ ಕೃಷ್ಣೇನ ತ್ವಾಮಭಿದ್ರುತಮ್ ।**
**ಮಮಾದ್ಯ ದ್ವಾರಕಾ ಸರ್ವಾ ವಶಾ ತಿಷ್ಠತ್ಯಸಂಶಯಮ್ ॥ 4 ॥**

ಶ್ರೀಕೃಷ್ಣನು ಸ್ಯಮಂತಕವನ್ನು ಸತ್ರಾಜಿತನಿಗೆ ಮರಳ ನೀಡಿದನು. ಸುಂದರೀಮಣಿಯಾದ ಸತ್ಯಭಾಮೆಯನ್ನು ತನಗೆ ವಿವಾಹ ಮಾಡಿಕೊಡಬೇಕೆಂದು ಅಕ್ರೂರ-ಶತಧನ್ವಕೃತವರ್ಮಂದಿರು ಈ ಮೊದಲೇ ಕೇಳದ್ದರು. ಸತ್ಯಭಾಮೆ ಕನ್ಯಾಮಣಿ ಸಿಕ್ಕರೆ ಅಷ್ಟಾಷ್ಟಭಾರ ಬಂಗಾರವೀಯುವ ಸ್ಯಮಂತಕಮಣಿಯೂ ತಮಗೆ ಬರುವುದೆಂಬ ಹೃದ್ಗತ ಆಶೆಯಾಗಿತ್ತು. ಈ ಮಧ್ಯದಲ್ಲಿ ಸತ್ಯಭಾಮೆ ಶ್ರೀಕೃಷ್ಣನಿಗೆ ನೀಡಿದ್ದನು. ಅಕ್ರೂರನು ಅವಳ ಮೇಲಿನ

ವ್ಯಾಮೋಹ ಬಿಟ್ಟಿದ್ದರೂ ಮಣಿಯ ಮೇಲಿನ ವ್ಯಾಮೋಹ ಹೋಗಿರಲಿಲ್ಲ. ಈ ಮಣಿಯನ್ನು ಹೊಂದಲು ಅಕ್ರೂರನಿಗೆ ಕ್ರೂರವಾದ ಉಪಾಯ ಹೊಳೆಯಿತು. ಅವನು ಶತಧನ್ವನಲ್ಲಿ ಬಂದು ಹೇಳಿದ.

ಶತಧ್ವನನೇ! ನೀನು ಶ್ರೀಕೃಷ್ಣವಿಲ್ಲದಿರುವ ಸಮಯ ನೋಡಿ ಸತ್ರಾಜಿತನನ್ನು ಕೊಂದು ಹಾಕಿ ಆ ಮಣಿಯನ್ನು ನನಗೆ ತಂದುಕೊಡು ಎಂದು ಅವನನ್ನು ಪ್ರೇರಿಸಿ ಹುರಿದುಂಬಿಸಿ ಮಣಿಯನ್ನು ಹೊಂದುವ ಕುತಂತ್ರ ಮಾಡಿದ. ಶತಧನ್ವನು ಒಂದು ದಿನ ರಾತ್ರಿ ಶ್ರೀಕೃಷ್ಣ ಊರಿನಲ್ಲಿ ಇಲ್ಲದ ಸಮಯ ನೋಡಿ ರಾತ್ರಿಯಲ್ಲಿ ಮಲಗಿದ್ದ ಸತ್ರಾಜಿತನನ್ನು ಕೊಂದು ಹಾಕಿ ಮಣಿಯನ್ನು ಕದ್ದು ತಂದು ಅಕ್ರೂರನ ಕೈಗೆ ನೀಡಿದ. ಅಕ್ರೂರನು ಅದನ್ನು ತೆಗೆದುಕೊಂಡು – ಈ ಮಣಿ ನನ್ನ ಹತ್ತಿರವಿದೆಯೆಂದು ಯಾರಿಗೂ ಹೇಳಬೇಡ. ಶ್ರೀಕೃಷ್ಣನು ನಿನ್ನನ್ನು ಕೊಲ್ಲಲು ಬಂದಾಗ ನಾವೆಲ್ಲರೂ ನಿನ್ನ ಪಕ್ಷವಹಿಸುವೆವು. ಇಡೀ ದ್ವಾರಕಾ ಪಟ್ಟಣವು ಈಗ ನನ್ನ ವಶದಲ್ಲಿದೆ. ನೀನೇನೂ ಭಯಪಡಬೇಡ. ಎಂದು ಸಮಾಧಾನ ಮಾಡಿ ಕಳುಹಿಸಿದ.

## ಸತ್ಯಭಾಮೆಯ ದುಃಖದ ನಟನೆ

**ಹತೇ ಪಿತರಿ ದುಃಖಾರ್ತಾ ಸತ್ಯಭಾಮಾ ಯಶಸ್ವಿನೀ ।**
**ಪ್ರಯಯೌ ರಥಮಾರುಹ್ಯ ನಗರಂ ವಾರಣಾವತಮ್ ॥ 5 ॥**

**ಸತ್ಯಭಾಮಾ ತು ತದ್ ವೃತ್ತಂ ಭೋಜಸ್ಯ ಶತಧನ್ವನಃ ।**
**ಭರ್ತುರ್ನಿವೇದ್ಯ ದುಃಖಾರ್ತಾ ಪಾರ್ಶ್ವಸ್ಥಾಽಶ್ರೂಣ್ಯಮುಂಚತ್ ॥ 6 ॥**

**ಪಾಂಡವಾನಾಂ ಚ ದಗ್ಧಾನಾಂ ಹರಿಃ ಕೃತ್ವೋದಕ ಕ್ರಿಯಾಮ್ ।**
**ಕುಲ್ಯಾರ್ಥೇ ಚಾಪಿ ಪಾಂಡೂನಾಂ ನ್ಯಯೋಜಯತ ಸಾತ್ಯಕಿಮ್ ॥ 7 ॥**

ಸತ್ಯಭಾಮೆಯು ಶತಧನ್ವನಿಂದ ಹತನಾದದ್ದನ್ನು ಕೇಳಿ ದುಃಖಾರ್ತಳಾಗಿ ಶ್ರೀಕೃಷ್ಣನಿರುವಲ್ಲಿಗೆ ರಥದಲ್ಲಿ ಬಂದು ಶತಧನ್ವನು ತಂದೆಯನ್ನು ಹತ್ಯೆಗೈದ ವಿಚಾರ ತಿಳಿಸಿದಳು. ಈ ಸಂದರ್ಭದಲ್ಲಿ ಪಾಂಡವರು ಅರಗಿನ ಮನೆಯಲ್ಲಿ ಕುಂತಿ ಸಹಿತವಾಗಿ ದಗ್ಧರಾದರೆಂಬ ವಿಷಯ ಕೇಳಿ ಧೃತರಾಷ್ಟ್ರಾದಿಗಳನ್ನು ಮಾತನಾಡಿಸಿ ಬರಲು ಹಾಗೂ ಪಾಂಡವರಿಗೆ ಜಲಾಂಜಲಿ ನೀಡುವ ನಾಟಕ

ಮಾಡುವುದಕ್ಕಾಗಿ ಸಾತ್ಯಕಿ ಸಹಿತವಾಗಿ ಹಸ್ತಿನಾವತಿಗೆ ಹೋಗಿದ್ದನು. ತರ್ಪಣಾದಿ ವಿಧಿ ವಿಧಾನ ಮುಗಿಸಿದ ಲೀಲಾಮಾನುಷ ವಿಗ್ರಹನಾದ ಶ್ರೀಕೃಷ್ಣನು ಉಳಿದ ಉತ್ತರಕ್ರಿಯೆಗಾಗಿ ಸಾಂಗವಾಗಿ ಮಾಡಿಕೊಂಡು ಬರಲು ಸಾತ್ಯಕಿಯನ್ನು ವಾರಣಾವತದಲ್ಲಿಯೇ ಇರಿಸಿ ತಾನು ಭಾಮೆಯೊಂದಿಗೆ ದ್ವಾರಕೆಗೆ ಬಂದು ಸೇರಿದ.

**ತತಃ ತ್ವರಿತಮಾಗತ್ಯ ದ್ವಾರಕಾಂ ಮಧುಸೂದನಃ ।**
**ಪೂರ್ವಜಂ ಹಲಿನಂ ಶ್ರೀಮಾನ್ ಇದಂ ವಚನಮಬ್ರವೀತ್ ॥ 8 ॥**
**ಹತಃ ಪ್ರಸೇನಃ ಸಿಂಹೇನ ಸತ್ರಾಜಿತ್ ಶತಧನ್ವನಾ ।**
**ಸ್ಯಮಂತಕಃ ಸ ಮದ್ಗಾಮೀ ತಸ್ಯ ಪ್ರಭುರಹಂ ವಿಭೋ ॥ 9 ॥**
**ತದಾರೋಹ ರಥಂ ಶೀಘ್ರಂ ಭೋಜಂ ಹತ್ವಾ ಮಹಾಬಲಮ್ ।**
**ಸ್ಯಮಂತಕೋ ಮಹಾಬಾಹೋ ಹ್ಯಸ್ಮಾಕಂ ಸಭವಿಷ್ಯತಿ ॥ 10 ॥**

ಶ್ರೀಕೃಷ್ಣನು ಅಣ್ಣ ಬಲರಾಮನೊಂದಿಗೆ ಅಣ್ಣನೇ ! ಪ್ರಸೇನನನ್ನು ಸಿಂಹವು ಕೊಂದಿತು. ಅವನ ಅಣ್ಣನನ್ನು ಶತಧನ್ವನು ಕೊಂದು ಹಾಕಿದ್ದಾನೆ. ಅವರಿಬ್ಬರೂ ಸತ್ತ ಮೇಲೆ ಆ ಮಣಿಗೆ ನಾವೇ ಭಾಗಿಗಳು. ಆದ್ದರಿಂದ ಪಾಪಿಷ್ಠನಾದ ಶತಧನ್ವನನ್ನು ಕೊಂದು ನಮ್ಮ ರತ್ನ ನಾವು ಪಡೆಯೋಣ ನಡೆ. ಬೇಗ ರಥವನ್ನೇರು ಎಂದು ಹೇಳಿ ಇಬ್ಬರೂ ಕೂಡಿ ಶತಧನ್ವನ ಮೇಲೆ ಯುದ್ಧಕ್ಕೆ ಹೊರಟರು.

ಶತಧನ್ವನು ಕೃಷ್ಣನೊಂದಿಗೆ ಹೋರಾಡುವಷ್ಟು ಶಕ್ತಿಶಾಲಿಯಾಗಿರಲಿಲ್ಲ. ತಾವು ಮೊದಲೇ ಕರಾರು ಮಾಡಿಕೊಂಡಂತೆ ಅಕ್ರೂರ ಯಾದವರು ಸಹಾಯಕ್ಕೆ ಬರಬಹುದೆಂದು ಎಣಿಸಿ ಶ್ರೀಕೃಷ್ಣನೊಂದಿಗೆ ಯುದ್ಧಕ್ಕೆ ತೊಡಗಿದನು.

ಆದರೆ ಅಕ್ರೂರನು ಯುದ್ಧ ಸಂಭ್ರಮ ನೋಡಿ ಭಯಪಟ್ಟು ಶತಧನ್ವನಿಗೆ ಸಹಾಯ ಮಾಡಲಿಲ್ಲ. ಹೀಗಾಗಿ ದಿಗ್ಭ್ರಾಂತನಾಧ ಶತಧನ್ವನು ತನ್ನ ಬಳಿಯಿದ್ದ ವೇಗವಾಗಿ ಓಡುವ ಹೃದಯಾ ಎಂಬ ಕುದುರೆಯನ್ನೇರಿ ಗಂಟೆಗೆ ನೂರು ಯೋಜನದಂತೆ ಪ್ರಾಣಭಯದಿಂದ ಓಡ ಹತ್ತಿದ. ಕೃಷ್ಣಬಲರಾಮರೂ ರಥದಲ್ಲಿ ಕುಳಿತು ಗರುಡ ವೇಗದಿಂದ ಬೆನ್ನಟ್ಟಿ ಬರುತ್ತಿದ್ದರು. ಹೃದಯಾ ಕುದುರೆಯು

ನಿರಂತರ ಪ್ರಯಾಣ ಮಾಡಿ ದಾರಿಯಲ್ಲಿಯೇ ಪ್ರಾಣಬಿಟ್ಟು ಸತ್ತಿತು. ಶತಧನ್ವನು ಕಾಲ್ನಡಿಗೆಯಲ್ಲಿಯೇ ಓಡಲು ಪ್ರಾರಂಭಿಸಿದ. ಶ್ರೀಕೃಷ್ಣನು ಬಲರಾಮನಿಗೆ ಹೀಗೆಂದನು.

## ರತ್ನಕ್ಕಾಗಿ ಬಲರಾಮ ಹಂಬಲ

**ತಿಷ್ಠಸ್ವೇಹ ಮಹಾಬಾಹೋ ದೃಷ್ಟ ದೋಷಾ ಹಯಾ ಮಯಾ ।**
**ಪದ್ಭ್ಯಾಂ ಗತ್ವಾ ಹರಿಷ್ಯಾಮಿ ಮಣಿರತ್ನಂ ಸ್ಯಮಂತಕಮ್ ॥ 11 ॥**
**ಸ್ಯಮಂತಕಂ ನಾಪಶ್ಯದ್ ಹತ್ವಾ ಭೋಜಂ ಮಹಾಬಲಮ್ ।**
**ನಿವೃತ್ತಂ ಚಾಬ್ರವೀತ್ ಕೃಷ್ಣಂ ರತ್ನಂ ದೇಹೀತಿ ಲಾಂಗಲೀ ॥ 12 ॥**

ಅಣ್ಣನೇ, ರಥವನ್ನು ಇಲ್ಲಿಯೆ ನಿಲ್ಲಿಸು, ಶತಧನ್ವನ ಕುದುರೆ ಸತ್ತಿದ್ದು ಕಾಲ್ನಡಿಯಲ್ಲಿಯೇ ಓಡುತ್ತಿದ್ದಾನೆ. ಅವನ ಹಿಂದೆ ನಾನು ಹೋಗಿ ಅವನನ್ನು ಕೊಂದು ಮಣಿಯನ್ನು ತರುವೆನು. ನೀನಿಲ್ಲಿಯೇ ರಥದಲ್ಲಿರು ಎಂದು ಅವನನ್ನು ಬೆನ್ನ ಹತ್ತಿ ಮಿಥಿಲಾಪಟ್ಟಣದ ಸಮೀಪ ಬಂದಾಗ ಶತಧನ್ವನು ಕೈಗೆ ಸಿಕ್ಕಿದನು. ಕೃಷ್ಣನು ಅವನನ್ನು ಕೊಂದು ವಸ್ತ್ರೋಪವಸ್ತ್ರಗಳನ್ನೆಲ್ಲ ಶೋಧಿಸಿದನು. ಆದರೆ ಸ್ಯಮಂತಕ ಮಣಿ ಸಿಗಲಿಲ್ಲ.

ಹಿಂತಿರುಗಿ ಬಂದ ಕೃಷ್ಣನನ್ನು ಬಲರಾಮನು ಸ್ಯಮಂತಕವೆಲ್ಲಿ ಅದನ್ನು ನನಗೆ ಬೇಗ ಕೊಡು ಎಂದು ಕೇಳಿದನು. ರತ್ನವು ಶತಧನ್ವನ ಬಳಿ ಇರಲಿಲ್ಲ ಎಂದು ಹೇಳುತ್ತಿರುವಂತೆ ಬಲರಾಮನು ಕೋಪದಿಂದ ಅಣ್ಣನಿಗೆ ಸುಳ್ಳು ಹೇಳುವ ನಿನಗೆ ಧಿಕ್ಕಾರವಿರಲಿ.

## ಬಲರಾಮನ ಮಿಥಿಲಾಗಮನ

**ಧಿಕ್ ಶಬ್ಧ ಮಸಕೃತ್ ಕೃತ್ವಾ ಪ್ರತ್ಯುವಾಚ ಜನಾರ್ದನಮ್ ।**
**ಭ್ರಾತೃತ್ವಾತ್ ಮರ್ಷಯಾಮ್ಯೇಷ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ ॥ 13 ॥**
**ಕೃತ್ಯಂ ನ ಮೇ ದ್ವಾರಕಯಾ ನ ತ್ವಯಾ ನ ಚ ವೃಷ್ಣಿಭಿಃ ।**
**ಪ್ರವಿವೇಶ ತತೋ ರಾಮೋ ಮಿಥಿಲಾಮರಿಮರ್ದನಃ ॥ 14 ॥**

ಕೃಷ್ಣನೇ, ನಿನ್ನ ಲೋಭತನಕ್ಕೆ ಧಿಕ್ಕಾರ, ನಿನಗೂ ಧಿಕ್ಕಾರ, ಕಪಟಿ ನೀನು

ಅಣ್ಣನಿಗೂ ದ್ರೋಹ ಬಗೆಯುವವನು. ನಿನ್ನಂಥ ಸ್ವಾರ್ಥಾಂಧರಾದ ವಂಚಕ ಸಹವಾಸವೆ ನನಗೆ ಬೇಡ. ತಮ್ಮನೆಂದು ನಿನ್ನನ್ನು ಬಿಟ್ಟಿದ್ದೇನೆ. ಈ ಮಣಿಯನ್ನು ನೀನೆ ಇಟ್ಟುಕೊಂಡು ಸುಖವಾಗಿರು. ನನಗೆ ನೀನು ಬೇಡ, ನಿನ್ನ ದ್ವಾರಕೆಯೂ ಬೇಡ, ಯಾರ ಸಹವಾಸವೂ ಬೇಡ, ಬರುತ್ತೇನೆಂದು ಹೇಳಿ ವಿದೇಹ ನಗರಕ್ಕೆ ಹೊರಟು ಹೋದನು.

## ಮಿಥಿಲೇಶನ ಆದರ

**ಸರ್ವಕಾಮ್ಯೈಃ ಉಪಹೃತೈಃ ಮೈಥಿಲೇನಾಭಿಪೂಜಿತಃ ॥ 15 ॥**

ಮಿಥಿಲಾಧಿಪತಿಉಆದ ವಿದೇಹರಾಜನು ಸ್ವಯಂಪ್ರೇರಣೆಯಿಂದಲೇ ತನ್ನ ರಾಜ್ಯಕ್ಕೆ ದಯ ಮಾಡಿಸಿದ ಬಲದೇವನನ್ನು ಅತ್ಯಂತ ಆದರಾತಿಥ್ಯಗಳಿಂದ ಬರ ಮಾಡಿಕೊಂಡು ಸಂಭ್ರಮದ ಸ್ವಾಗತವನ್ನಿತ್ತು ಪೂಜಿಸಿದನು. ಹೀಗೆ ಬಲರಾಮನು ತನ್ನ ತಮ್ಮನ ಮೇಲೆ ವೈರ ಮಾಡಿ ದೂರ ಹೋದನು. ಮಣಿಗಾಗಿ ದೇವದೇವನನ್ನು ಅವಮಾನಿಸಿದನು.

## ಅಕ್ರೂರ ಯಜ್ಞಗಳು

**ಏತಸ್ಮಿನ್ನೇವ ಕಾಲೇ ತು ಬಭ್ರುಃ ಮತಿಮತಾಂ ವರಃ ।**
**ನಾನಾರೂಪಾನ್ ಕ್ರತೂನ್ ಸರ್ವಾನ್ ಆಜಹಾರ ನಿರರ್ಗಲಾನ್ ॥ 16 ॥**

**ಅಥ ರತ್ನಾನಿ ಚಾಗ್ರ್ಯಾಣಿ ದ್ರವ್ಯಾಣಿ ವಿವಿಧಾನಿ ಚ ।**
**ಷಷ್ಠಿ ವರ್ಷಾಣಿ ಧರ್ಮಾತ್ಮಾ ಯಜ್ಞೇಷು ವಿನಿಯೋಜಯತ್ ॥ 17 ॥**

**ಅಕ್ರೂರಯಜ್ಞಾ ಇತಿ ತೇ ಖ್ಯಾತಾಃ ತಸ್ಯ ಮಹಾತ್ಮನಃ ।**
**ಬಹ್ವನ್ನ ದಕ್ಷಿಣಾಃ ಸರ್ವೇ ಸರ್ವಕಾಮ ಪ್ರದಾಯಿನಃ ॥ 18 ॥**

ಅಕ್ರೂರನು ಶತಧನ್ವನಿಂದ ಮಣಿಯನ್ನು ಪಡೆದುಕೊಂಡದ್ದು ಯಾರಿಗೂ ತಿಳಿಯಲಿಲ್ಲ. ಆದರೆ ಅದು ನೀಡುವ ಸುವರ್ಣಭಾರಗಳಿಂದಾಗಿ ಯಾರಿಗೂ ತನ್ನ ಮೇಲೆ ಸಂದೇಹ ಬರಬಾರದೆಂದು ಸ್ಯಮಂತಕ ನೀಡುತ್ತಿದ್ದ ಧನಕನಕಾದಿಗಳಿಂದ ಅನೇಕ ವಿಧವಾದ ಯಜ್ಞಗಳನ್ನು ಮಾಡಿದನು. ಮುತ್ತು ರತ್ನಗಳನ್ನು ಧನಕನಾದಿ ದ್ರವ್ಯಗಳನ್ನು ವಿಪುಲವಾಗಿ ದಾನ ಮಾಡುತ್ತಿದ್ದನು. ಬ್ರಾಹ್ಮಣರಿಗೆ ಕೈ ತುಂಬಾ ದಕ್ಷಿಣೆ ದಾನ ಕೊಡುತ್ತಾ ಅಖಂಡ ಅರವತ್ತು ವರ್ಷ ಯಜ್ಞಸತ್ರವನ್ನು ಅನ್ನಸತ್ರವನ್ನು ನಡೆಸಿದನು.

ಅಕ್ರೂರನು ಶ್ರೌತವಿಭಾಗದಲ್ಲಿ ಹೇಳಿರುವ ಸಕಲ ಯಜ್ಞಗಳನ್ನೂ ಮಣಿಯ ಸಹಾಯ ಮಾಡಿ ಯಶಸ್ವಿಯಾದ ಇವುಗಳಿಗೆಲ್ಲ 'ಅಕ್ರೂರಯಜ್ಞ'ವೆಂದೆ ಪ್ರಸಿದ್ಧವಾಯಿತು. ಹೀಗೆ ಮೇಧಾವಿಯೂ ದೂರದರ್ಶಿಯೂ ಆದ ಅಕ್ರೂರನು ನಿರಂತರ ಅನ್ನಸಂತರ್ಪಣೆ ಭೂರಿ ದಕ್ಷಿಣೆಗಳಿಂದ ಕೀರ್ತಿಶಾಲಿಯಾಗಿ ಕಾಮಧೇನು ಕಲ್ಪವೃಕ್ಷ ಪ್ರಶಸ್ತಿಗೆ ಪಾತ್ರನಾದ.

## ದುರ್ಯೋಧನ ಗದಾಭ್ಯಾಸ

**ಅಥ ದುರ್ಯೋಧನೋ ರಾಜಾ ಗತ್ವಾ ತು ಮಿಥಿಲಾಂ ಪ್ರಭುಃ ।**
**ಗದಾಶಿಕ್ಷಾಂ ತತೋ ದಿವ್ಯಾಂ ಬಲಭದ್ರಾದ್ ಅವಾಪ್ತವಾನ್ ॥ 19 ॥**

**ಪ್ರಸಾದ್ಯ ತು ತತೋ ರಾಮೋ ವೃಷ್ಣ್ಯಂಧಕ ಮಹಾರಥೈಃ ।**
**ಆನೀತೋ ದ್ವಾರಕಾ ಮೇವ ಕೃಷ್ಣೇನ ಚ ಮಹಾತ್ಮನಾ ॥ 20 ॥**

ದುರ್ಯೋಧನನು ರಾಮಕೃಷ್ಣರಲ್ಲಿ ವೈಮನಸ್ಸು ಹುಟ್ಟಿ ಬಲರಾಮನು ಕೃಷ್ಣನನ್ನು ತ್ಯಜಿಸಿ ಮಿಥಿಲೆಯಲ್ಲಿರುವನೆಂದು ತಿಳಿದುಕೊಂಡನು. ಇವನ ಆಜನ್ಮ ವೈರಿಯಾದ ಭೀಮಸೇನನು ಗದಾ ವಿದ್ಯೆಯಲ್ಲಿ ಅಪ್ರತಿಮವೀರನೆಂದು, ಅವನಿಗೆ ಸರಿಸಾಟಿಯಾಗಬೇಕೆಂದು ಗದಾ ವಿದ್ಯೆಯಲ್ಲಿ ಅನಿತರ ಸಾಧಾರಣ ಪರಿನಿಷ್ಠಿತನಾದ್ದರಿಂದ ಈ ಸಂಧಿಯನ್ನು ಸಾಧಿಸಿ ಉರಗಕೇತನನ್ನು ಗದಾಭ್ಯಾಸಕ್ಕಾಗಿ ಮಿಥಿಲೆಗೆ ಬಂದು ಗದಾಭ್ಯಾಸವನ್ನು ಕಲಿತನು.

ಐದು ವರ್ಷಗಳಾದರೂ ಬಲರಾಮನು ದ್ವಾರಕೆಗೆ ಬಾರದಿದ್ದದ್ದರಿಂದ ಕೃಷ್ಣ ಮನದಲ್ಲಿ ನೊಂದು ಕೊಂಡನು. ಸ್ವಯಂ ತಾನು ಹಾಗೂ ಅನೇಕ ವೃಷ್ಣಿ ಅಂಧಕ ಪ್ರಧಾನರೊಂದಿಗೆ ಮಿಥಿಲೆಗೆ ಹೋಗಿ, ಅವನನ್ನು ಸಮಾಧಾನಪಡಿಸಿ ದ್ವಾರಕೆಗೆ ಬರಲು ಒಪ್ಪಿ ದ್ವಾರಕೆಗೆ ಬಂದನು. ಕೃಷ್ಣ ಬಲರಾಮರು ಪುನಃ ಒಂದಾಗಿದ್ದು ಅಕ್ರೂರನಿಗೆ ತನ್ನ ಗುಟ್ಟು ರಟ್ಟಾಗಬಹುದೆಂದು ದ್ವಾರಕೆಯನ್ನೆ ಬಿಟ್ಟು ಬೇರೆ ಊರಿಗೆ ಹೋದನು.

ಅಕ್ರೂರನು ಸತ್ರಾಜಿತ ಶತಧನ್ವನ ಮರಣಕ್ಕೆ ಮೂಲ ಕಾರಣವೆಂದು ಶ್ರೀಕೃಷ್ಣನಿಗೆ ತಿಳಿದೆ ಇತ್ತು. ಆದರೂ ಯಾದವರಲ್ಲಿ ಅಂತಃಕಲಹವೇರ್ಪಡುವುದು ಬೇಡವೆಂದೆ ಉಪೇಕ್ಷೆ ಮಾಡಿದ್ದನು.

**ಅಪಯಾತೇ ತಥಾಽಕ್ರೂರೇ ನಾವರ್ಷತ್ ಪಾಕಶಾಸನಃ ।**
**ಅನಾವೃಷ್ಟ್ಯಾ ಯದಾ ರಾಜ್ಯಮಭವದ್ ಬಹುಧಾ ಕೃಶಮ್ ॥ 21 ॥**

**ತತಃ ಪ್ರಾಸಾದಯಾಮಾಸುಃ ಅಕ್ರೂರಂ ಕುಕುರಾಂಧಕಾಃ ।**
**ಪುನಃ ದ್ವಾರವತೀಂ ಪ್ರಾಪ್ತೇ ತಸ್ಮಿನ್ ದಾನಪತೌ ತತಃ ॥ 22 ॥**

**ಪ್ರವವರ್ಷ ಸಹಸ್ರಾಕ್ಷಃ ಕಚ್ಛೇ ಜಲನಿಧೇಸ್ತದಾ ॥ 23 ॥**

ಅಕ್ರೂರನು ದ್ವಾರಕೆಯನ್ನು ಬಿಟ್ಟು ಹೋದ ಕೂಡಲೇ ದೇಶದಲ್ಲೆಲ್ಲ ಮಳೆ ಬೆಳೆಯಾಗದೆ ಭೀಕರ ಬರಗಾಲ ತಲೆದೋರಿತು. ಆಗ ಕುಕುರ ಅಂಧಕ ಮೊದಲಾದ ಯಾದವರು ಹೋಗಿ ಅಕ್ರೂರನನ್ನು ಮತ್ತೆ ದ್ವಾರಕೆಗೆ ಕರೆ ತಂದರು. ಅಕ್ರೂರನು ದ್ವಾರಾವತಿಯ ದ್ವಾರದಲ್ಲಿ ಕಾಲಿಡುತ್ತಿದ್ದಂತೆಯೇ ನಿರಂತರ ಧಾರಾಕಾರ ಮಳೆ ಪ್ರಾರಂಭವಾಗಿತ್ತು. ಜನರೆಲ್ಲರೂ ಅಕ್ರೂರನು ತಂದೆಯಂತೆಯೇ ಮಹಾಮಹಿಮನೆಂದು ಕೊಂಡಾಡಿದರು. ಇದು ಮಣಿಯ ಮಹಿಮೆಯೆಂದು ಶ್ರೀಕೃಷ್ಣನಿಗೆ ತಿಳಿದಿತ್ತು.

## ಅಕ್ರೂರನ ತಂಗಿ ಶ್ರೀಕೃಷ್ಣನಿಗೆ

**ಕನ್ಯಾಂ ಚ ವಾಸುದೇವಾಯ ಸ್ವಸಾರಂ ಶೀಲಸಮ್ಮತಾಮ್ ।**
**ಅಕ್ರೂರಃ ಪ್ರದದೌ ಧೀಮಾನ್ ಪ್ರೀತ್ಯರ್ಥಂ ಕುರುನಂದನ ॥ 24 ॥**

**ಅಥ ವಿಜ್ಞಾಯ ಯೋಗೇನ ಕೃಷ್ಣೋ ಬಭ್ರುಗತಂ ಮಣಿಮ್ ।**
**ಸಭಾಮಧ್ಯೆ ಗತಂ ಪ್ರಾಹ ತಮಕ್ರೂರಂ ಜನಾರ್ದನಃ ॥ 25 ॥**

**ಯದ್ ತದ್ ರತ್ನಂ ಮಣಿವರಂ ತವ ಹಸ್ತಗತಂ ವಿಭೋ ।**
**ತತ್ ಪ್ರಯಚ್ಛಸ್ವ ಮಾನಾರ್ಹ ಮಯಿ ಮಾನಾರ್ಯಕಂ ಕೃಥಾಃ ॥ 26 ॥**

ಅಕ್ರೂರನು ದ್ವಾರಕೆಗೆ ಬಂದ ಮೇಲೆ ಕೃಷ್ಣನ ಮನಸ್ಸನ್ನು ಒಲಿಸಿಕೊಳ್ಳಲು ಸೌಂದರ್ಯ ಸಂಪನ್ನಳಾದ ತನ್ನ ತಂಗಿಯನ್ನು ವಿವಾಹ ಮಾಡಿಕೊಟ್ಟನು. ಇದರಿಂದ ಬಾಂಧವ್ಯ ಬೆಳೆದು ಮನಸ್ತಾಪ ಹೋಗಬಹುದೆಂದು ಅವನ ಭಾವನೆ.

ಸರ್ವಜ್ಞನಾದ ಶ್ರೀಕೃಷ್ಣನಿಗೆ ಅಕ್ರೂರ ಯಜ್ಞಗಳಲ್ಲಿ ಅನ್ನದಾನ ಮುತ್ತು ರತ್ನ ದಾನಗಳನ್ನು ಮಾಡುತ್ತಾ ಅರವತ್ತು ವರ್ಷ ಧನವನ್ನು ನೀರಿನಂತೆ ಖರ್ಚು

ಮಾಡಿದ್ದರಿಂದ ಸ್ಯಮಂತಕಮಣಿ ಅಕ್ರೂರನ ಬಳಿಯೆ ಇದೆ ಎಂದು ಖಚಿತವಾಗಿ ತಿಳಿದಿದ್ದನು.

ಒಂದು ದಿನ ಯಾದವರ ಸಭೆಯಲ್ಲಿ ಶ್ರೀಕೃಷ್ಣನು ಅಕ್ರೂರನಿಗೆ – ಅಕ್ರೂರನೇ! ಸ್ಯಮಂತಕಮಣಿ ನಿನ್ನ ಹತ್ತಿರವಿದೆಯೆಂದು ನಮಗೆ ತಿಳಿದಿದೆ. ನನಗೆ ಆಪ್ತಬಂಧುವೂ ಆಗಿರುವ ನೀನು ನನಗೆ ವಂಚನೆ ಮಾಡದೆ ಕೊಟ್ಟು ಬಿಡು. ಇದರಿಂದಾಗಿ ಅಣ್ಣನವರಿಗೂ ನನಗೂ ವೈಮನಸ್ಸು ತೊಲಗುತ್ತದೆ. ಅರವತ್ತು ವರ್ಷದಿಂದಲೂ ನಿನ್ನ ಮೇಲೆ ನನಗೆ ಕೋಪವಿದ್ದೆ ಇದೆ ಎಂದು ಶ್ರೀಕೃಷ್ಣನು ಮೃದು ಮಧುರವೂ ಭಾವಗಂಭೀರವೂ ಮಾತುಗಳನ್ನು ಕೇಳಿ ಬುದ್ಧಿವಂತನಾದ ಅಕ್ರೂರನು ಎದುರುತ್ತರ ನೀಡದೆ ಬಟ್ಟೆಯಲ್ಲಿ ಸುತ್ತು ಇಟ್ಟಿದ್ದ ಮಣಿಯನ್ನು ಸಭೆಯಲ್ಲಿಯೇ ಒಪ್ಪಿಸಿ ಕೈಮುಗಿದು ತನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿದ.

ಅಕ್ರೂರನ ನಮ್ರತೆ ವಿನಯಾದಿಗಳಿಂದ ಪ್ರಸನ್ನನಾದ ಶ್ರೀಕೃಷ್ಣನು ಆ ಮಣಿಯನ್ನು ಪುನಃ ಅಕ್ರೂರನ ಕೊರಳಿನಲ್ಲಿಯೆ ಹಾಕಿದನು. ಕೃಷ್ಣನ ಕೈಯಿಂದ ಪರಮಾನುಗ್ರಹ ರೂಪದಲ್ಲಿ ತಿರುಗಿ ಬಂದ ಮಣಿಯನ್ನು ಧರಿಸಿ ಸೂರ್ಯದೇವನಂತೆ ಕಂಗೊಳಿಸಿದ.

## ಫಲಸ್ತುತಿ

ಯಸ್ತ್ವೇವಂ ಶ್ರುಣುಯಾನ್ನಿತ್ಯಂ ಶುಚಿರ್ಭೂತ್ವಾ ಸಮಾಹಿತಃ ।
ಸುಖಾನಾಂ ಸಕಲಾನಾಂ ಚ ಫಲಭಾಗೀಹ ಜಾಯತೇ ॥ 27 ॥

ಆ ಬ್ರಹ್ಮಭುವನಾಚ್ಚಾಪಿ ಯಶಃ ಖ್ಯಾತಿಃ ನ ಸಂಶಯಃ ॥ 28 ॥

ಯಾರು ಈ ಸ್ಯಮಂತಕೋಪಾಖ್ಯಾನವನ್ನು ಶುಚಿಯಾಗಿ ನಿತ್ಯವು ಶ್ರವಣ ಮಾಡುವರೋ ಅವರು ಸಕಲ ಸುಖಗಳ ಫಲಭಾಗಿಗಳಾಗುವರು. ಅವನ ಕೀರ್ತಿಯು ಬ್ರಹ್ಮಲೋಕದವರೆಗೂ ವ್ಯಾಪಿಸುತ್ತದೆ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಸ್ಯಮಂತಕಮಣಿ ಉಪಾಖ್ಯಾನವೆಂಬಲ್ಲಿ
ಮುವತ್ತೊಂಬತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಚತ್ವಾರಿಂಶೋಽಧ್ಯಾಯಃ

## ವಿಷ್ಣು ಮಹಿಮಾವರ್ಣನಮ್

*ಜನಮೇಜಯ ಉವಾಚ-*

ಯಜ್ಞವರಾಹ ಚರಿತ್ರೆ

**ಪ್ರಾದುರ್ಭಾವಾನ್ ಪುರಾಣೇಷು ವಿಷ್ಣೋರಮಿತ ತೇಜಸಃ ।**
**ಸತಾಂ ಕಥಯತಾಮೇವ ವಾರಾಹ ಇತಿ ನಃ ಶ್ರುತಮ್ ॥ 1 ॥**

**ಕಿಮಾತ್ಮಕೋ ವರಾಹಃ ಸ ಕಾ ಮೂರ್ತಿಃ ಕಾ ಚ ದೇವತಾ ।**
**ಕಿಮಾಚಾರಃ ಪ್ರಭಾವೋ ವಾ ಕಿಂ ವಾ ತೇನ ಪುರಾಕೃತಮ್ ॥ 2 ॥**

**ಯಜ್ಞಾರ್ಥಂ ಸಮವೇತಾನಾಂ ಮಿಷತಾಂ ಚ ದ್ವಿಜನ್ಮನಾಮ್ ।**
**ಮಹಾವರಾಹ ಚರಿತಂ ಕೃಷ್ಣ ದ್ವೈಪಾಯನೇರಿತಮ್ ॥ 3 ॥**

ಜನಮೇಜಯನು ವೈಶಂಪಾಯನರನ್ನು ಕುರಿತು ಗುರುಗಳೇ, ನಾನು ಭಗವಂತನ ಅವತಾರ ಕಥೆಗಳನ್ನು ಕೇಳಲಿಚ್ಛಿಸುವೆ. ದಶಾವತಾರಗಳಲ್ಲಿ ವರಾಹ ಅವತಾರದ ಕಥೆಯೂ ಇದೆಯೆಂದು ತಿಳಿದಿರುವೆನು. ಆ ಅವತಾರದ ಸ್ವರೂಪ ಪ್ರಯೋಜನ ಅದರಲ್ಲಿ ಮಾಡಿದ ಅದ್ಭುತ ಕರ್ಮಗಳನ್ನು ನನಗೆ ತಿಳಿಸುವ ಕೃಪೆ ಮಾಡಿ. ವರಾಹಾವತಾರದ ವಾಸ್ತವ ಸ್ವರೂಪ ಯಾವುದು – ಬಾಹ್ಯಕಾರ ಯಾವುದು ಪ್ರಾಕೃತವೋ ಅಪ್ರಾಕೃತವೋ ಇದನ್ನು ತಿಳಿಸಿರಿ.

**ಯಥಾ ನಾರಾಯಣೋ ಬ್ರಹ್ಮನ್ ವಾರಾಹಂ ರೂಪಮಾಸ್ಥಿತಃ ।**
**ದಂಷ್ಟ್ರಯಾ ಗಾಂ ಸಮುದ್ರಸ್ಥಾಂ ಉಜ್ಜಹಾರಾರಿಸೂದನಃ ॥ 4 ॥**

ಶತ್ರುನಾಶಕ ಶ್ರೀಹರಿಯು ಸಮುದ್ರದಲ್ಲಿ ಮುಳುಗಿದ್ದ ಭೂಮಿಯನ್ನು ಯಾವ ರೀತಿಯಲ್ಲಿ ಮೇಲೆ ತಂದನು? ಶ್ರೀಕೃಷ್ಣನು ವರಾಹಾವತಾರದಲ್ಲಿವೆ ಮೊದಲಾದ ಅವತಾರಗಳಲ್ಲಿ ಮಾಡಿದ ಕಾರ್ಯಗಳನ್ನು ತಿಳಿಸಿರಿ. ಇತರ ಅವತಾರಗಳನ್ನೆತ್ತಿ ಉದ್ದೇಶ-ಅವನು ಮಾಡಿದ ಲೋಕೋತ್ತರ ಕಾರ್ಯಗಳನ್ನು ತಿಳಿಸಿ.

ಶ್ರೀಹರಿಯು ವಸುದೇವನ ಕುಲದಲ್ಲಿ ಅವತರಿಸಿ ವಾಸುದೇವತ್ವವನ್ನು ಏಕೆ ಹೊಂದಿದನು? ದೇವಲೋಕ ಪರಿತ್ಯಜಿಸಿ ಮೃತ್ಯುಲೋಕಕ್ಕೆ ಬಂದದ್ದೇನು? ಶ್ರೀಕೃಷ್ಣ ದಿವ್ಯ ಶರೀರವನ್ನು ಮರೆ ಮಾಡಿ ಮಾನವರಂತೆ ಇದ್ದ ಕಾರಣವೇನು?

### ದಶಾವತಾರ ಪ್ರಶ್ನೆ

**ಗೋಪಾಯನಂ ಯಃ ಕುರುತೇ ಜಗತಃ ಸಾರ್ವಲೌಕಿಕಮ್ ।**
**ಸ ಕಥಂ ಗಾಂ ಗತೋ ದೇವೋ ವಿಷ್ಣುಃ ಗೋಪತ್ವ ಮಾಗತಃ ॥ 5 ॥**

**ಶ್ರೀಗರ್ಭಃ ಸ ಕಥಂ ಗರ್ಭೇ ಸ್ತ್ರಿಯಾ ಭೂಚರಯಾ ಧೃತಃ ।**
**ಯೇನ ಲೋಕಾನ್ ಕ್ರಮೈಃ ಜಿತ್ವಾ ತ್ರಿಭಿಃ ತ್ರೀನ್ ತ್ರಿದಶೇಪ್ಸಯಾ ॥ 6 ॥**

**ಯೋಽಂತ ಕಾಲೇ ಜಗತ್ ಪೀತ್ವಾ ಕೃತ್ವಾ ತೋಯಮಯಂ ವಪುಃ ।**
**ಲೋಕಮೇಕಾರ್ಣವಂ ಚಕ್ರೇ ದೃಶ್ಯಾದೃಶ್ಯೇನ ವರ್ತ್ಮನಾ ॥ 7 ॥**

**ಯೋ ವಿಷಾಣಾಗ್ರೇಣ ವಸುಧಾಂ ಉಜ್ಜಹಾರಾರಿಸೂದನಃ ।**
**ಯಃ ಪುರಾ ಪುರುಹೂತಾರ್ಥೇ ತ್ರೈಲೋಕ್ಯಮಿದಮವ್ಯಯಃ ॥ 8 ॥**

**ದದೌ ಜಿತ್ವಾಸುರಗಣಾನ್ ಸುರಾಣಾಂ ಸುರಸತ್ತಮಃ ।**
**ಯೇನ ಸೈಂಹಂ ವಪುಃ ಕೃತ್ವಾ ದ್ವಿಧಾ ಕೃತ್ವಾ ಚ ತತ್ ಪುನಃ ॥ 9 ॥**
**ಪೂರ್ವಂ ದೈತ್ಯೋ ಮಹಾವೀರ್ಯೋ ಹಿರಣ್ಯಕಶಿಪುರ್ಹತಃ ॥ 10 ॥**

ವಿಶ್ವ ವಂದ್ಯ ವಿಭೂತಿ ಸ್ವರೂಪನಾದ ವಿಷ್ಣುವು ಮನುಷ್ಯ ಮಾತ್ರನಾಗಿ ವಸುದೇವನ ಮನೆಯಲ್ಲಿ ಶ್ರೀಕೃಷ್ಣನಾಗಿ ಏಕೆ ಜನಿಸಿದನು. ಪ್ರಪಂಚಪಾಲಕನಾದ ಪಂಚರೂಪಿಯು ಪಶುಪಾಲಕನಾದದ್ದು ಅಚ್ಚರಿ. ಶ್ರೀಗರ್ಭನಾದ ಶ್ರೀಹರಿಯು ದೇವಕೀ ಗರ್ಭಗತನಾದದ್ದು ಅದ್ಭುತ.

ದೇವತಾಕಾರ್ಯಸಿದ್ಧಿಗಾಗಿ ವಾಮನನಾಗಿ ತ್ರಿವಿಕ್ರಮನಾಗಿರುವನು. ಇಂತಹ ಮಹತೋಮಹೀಮನು ದೇವಕೀ ಗರ್ಭದಲ್ಲಿ ಸೇರುವುದೆಂದರೆ ಆನೆಯನ್ನು ಸೇರಿನಲ್ಲಿ ತುರುಕಿಸಿದಂತಲ್ಲವೆ?

ವಿಷ್ಣುವೆ ವರಾಹರೂಪಧರಿಸಿ ಕೋರೆಹಲ್ಲುಗಳಿಂದ ಭೂದೇವಿಯನ್ನು ರಕ್ಷಿಸಿದವನು. ಅವನು ತೊಟ್ಟಿಲಲ್ಲಿ ಮಗುವಾಗಿ ಮಲಗಿರುವುದೇನು?

ಇನ್ನೊಮ್ಮೆ ಅರ್ಧಸಿಂಹ – ಅರ್ಧಮಾನವರೂಪ ಧರಿಸಿ ನರ–ಸಿಂಹ ರೂಪವೆತ್ತಿ ಮಹಾರಿಪುವಾದ ಹಿರಣ್ಯಕಶಿಪುವನ್ನು ಸೀಳಿ ಹಾಕಿದವನು. ಅವನಿಗೆ ಭಯಪಟ್ಟವನೆಂದು ರಕ್ಷೆ ನೀಡುವುದೆಷ್ಟು ಸರಿ?

ಸಮುದ್ರದಲ್ಲಿ ಔರ್ವವೆಂಬ ವಾಡವಾಗ್ನಿಯಾಗಿ ಸಮಸ್ತ ನೀರನ್ನೆ ಒಣಗಿಸಿ ಜಲಚರಗಳನ್ನೆಲ್ಲ ಹವಿಸ್ಸು ರೂಪದಿಂದ ಭಕ್ಷಿಸಿದವನು. ಇವನಿಗೆ ಹಾಲು ಬೆಣ್ಣೆ ಮೊಸರು ಸಾಕೆ?

ಸಾವಿರಾರು ತಲೆ, ಕೈ ಕಾಲು, ನೇತ್ರ ಪಾದಾದ್ಯವಯವವುಳ್ಳವನು ಎಂದು ಪುರುಷಸೂಕ್ತ ಪ್ರಶಂಸಿಸುತ್ತಿದೆ. ಹೀಗೆ ಅನಂತಾನಂತ ಅವಯವಾದಿ-ಗಳುಳ್ಳವನನ್ನು ಸಾಮಾನ್ಯ ಪುರುಷವೆನ್ನುವುದು ಹೇಗೆ?

ಯಾವ ನಾರಾಯಣನ ನಾಭಿ ಕಮಲದಿಂದ ಹದಿನಾಲ್ಕು ಲೋಕಾತ್ಮಕ ಪದ್ಮವು ಹುಟ್ಟಿತೋ, ಯಾವುದು ಜಗತ್‌ಸ್ರಷ್ಟಾರನ ಗೃಹವೆನಿಸಿದೆಯೋ ಅಂತಹವನು ಚಿಕ್ಕಮನೆಯಲ್ಲಿ ವಾಸಿಸುವುದೆಂತು?

**ಗರುಡಸ್ಥೇನ ಚೋತ್ಕ್ಷಿಪ್ತಃ ಕಾಲನೇಮಿಃ ನಿಪಾತಿತಃ ।**
**ನಿರ್ಜಿತಶ್ಚ ಮಯೋ ದೈತ್ಯಃ ತಾರಕಶ್ಚ ಮಹಾಸುರಃ ॥ 11 ॥**
**ಉತ್ತರಾಂತೇ ಸಮುದ್ರಸ್ಯ ಕ್ಷೀರೋದ ಸ್ಯಾಮೃತೋದಧೇಃ ।**
**ಯಃ ಶೇತೇ ಶಾಶ್ವತಂ ಯೋಗಮಾಸ್ಥಾಯ ತಿಮಿರಂ ಮಹತ್ ॥ 12 ॥**

ಗರುಡವಾಹನನಾದ ಶ್ರೀಹರಿಯು ಕಾಲನೇಮಿಯನ್ನೂ ಮಯಾಸುರ, ತಾರಕನನ್ನು ಸಂಹರಿಸಿ, ಕ್ಷೀರಸಮುದ್ರದ ಉತ್ತರ ತೀರದ ಅಮೃತ ಸಮುದ್ರದಲ್ಲಿ ನಿರ್ಭಯನಾಗಿರುವನು.

ದೇವತೆಗಳ ಉತ್ಪತ್ತಿಗೆ ಅರಣಿಯಂತೆ ಕಾರಣಳಾದ ಅದಿತಿದೇವಿಯು ಅವಳ ತಪಸ್ಸಿನಿಂದಾಗಿ ಗರ್ಭದಲ್ಲಿ ಧರಿಸಿದಳು. ಗರ್ಭದಿಂದ ಹೊರಬರುತ್ತಲೇ ವಾಮನನೆಂಬ ಮಾಣವವೇಷ ಧರಿಸಿ ಬಂದ. ಬಲಿಯಿಂದ ದೇವತೆಗಳನ್ನು ಬಂಧನದಿಂದ ಮುಕ್ತಗೊಳಸಿದನು. ವಾಮನನಾದವನು ತ್ರಿವಿಕ್ರಮರೂಪ ಹೊಂದಿ ಮೂರು ಲೋಕಗಳನ್ನೂ ಪಾದದಿಂದ ಆಕ್ರಮಿಸಿದನು. ಈ ಪಾದವನ್ನಾಶ್ರಯಿಸಿದ ದೇವತೆಗಳಗೆ ಭಯವಿಲ್ಲದಂತೆ ಮಾಡಿದನು.

ಹೋಮಗಳಗೆ ಅವಶ್ಯವಾದ ಚಮಸ-ಊಲೂಖಲ, ದಕ್ಷಿಣೆ-ದೀಕ್ಷೆ, ಆಹವನೀಯಾಗ್ನಿ-ವೇದೀ, ಸ್ರುಕ್-ಸ್ರುವ-ಕುಶಗಳು, ಪ್ರೋಕ್ಷಣೀ, ಧ್ರುವಾ-ಅವಭೃಥ ಸಾಮಗ್ರಿ ಭೋಗ್ಯ ಪದಾರ್ಥಗಳು, ಹವಿಸ್ಸನ್ನು ನೀಡುವ ಬ್ರಾಹ್ಮಣರು, ಹವಿಸ್ಸಿನ ಭಕ್ಷಕ ದೇವತೆಗಳು, ಶ್ರಾದ್ಧದಲ್ಲಿ ಕವ್ಯವನ್ನು ಭಕ್ಷಿಸುವ ಪಿತೃಗಳನ್ನು ಸೃಷ್ಟಿಸಿದನು. ಹೋಮದಲ್ಲಿ ವಿನಿಯೋಗಿಸುವ ಮಂತ್ರ ರೂಪ ಸಮಿತ್ತು ಪವಿತ್ರ ಪರಿಧಿ-ದ್ರವ್ಯಗಳು, ನಾನಾ ರೀತಿಯ ಯಜ್ಞಗಳು, ಇಟ್ಟಿಗೆಗಳು, ಹೋಮಕುಂಡ, ಸದಸ್ಯರು, ಯಜಮಾನ, ಇವುಗಳನ್ನು ಕ್ರಮಬದ್ಧ-ವಾಗಿಸಿದನು. ಕಾಲಗಳಲ್ಲಿ ಕ್ಷಣಲವಕಾಷ್ಠ ಕಲ ಪ್ರಾತಃ ಮಧ್ಯಂದಿನ ಸಾಯಂಕಾಲ-ಮುಹೂರ್ತ, ತಿಥಿ, ಮಾಸ, ಪಕ್ಷ, ವರ್ಷ, ಋತುಕಾಲಗಳನ್ನು, ನಿತ್ಯ ನೈಮಿತ್ತಿಕ, ಕಾಮ್ಯ ಕರ್ಮಗಳನ್ನು ಶ್ರುತಿ-ಸ್ಮೃತಿ-ಸಂಪ್ರದಾಯಗಳೆಂಬ ಪ್ರಮಾಣಗಳನ್ನು, ಮೊದಲಾದವುಗಳನ್ನು ಸೃಷ್ಟಿಸಿದನು.

ನಾರಾಯಣಪರಾ ವೇದಾಃ ನಾರಾಯಣಪರಾ ಕ್ರಿಯಾಃ ।
ನಾರಾಯಣಪರೋ ಧರ್ಮೋ ನಾರಾಯಣಪರಂ ತಪಃ ॥ 13 ॥

ನಾರಾಯಣಪರೋ ಮೋಕ್ಷೋ ನಾರಾಯಣಪರಾಯಣಮ್ ।
ಆದಿತ್ಯಾದಿಸ್ತು ಯೋ ದಿವ್ಯೋ ಯಶ್ಚ ದೈತ್ಯಾಂತಕೋ ವಿಭುಃ ।
ಸೇತುರ್ಯೋ ಲೋಕಸೇತೂನಾಂ ಮೇಧ್ಯೋಯೋ ಮೇಧ್ಯಕರ್ಮಣಾಮ್ ॥ 14 ॥

ಸಕಲವೇದಗಳಂದ ಪ್ರತಿಪಾದ್ಯ ಶ್ರೀಮನ್ನಾರಾಯುಣನೊಬ್ಬನೇ. ಸಕಲ ಕ್ರಿಯೆಗಳಗೂ ಗತಿ ಶ್ರೀಹರಿಯೇ, ಸಕಲಧರ್ಮಗಳಗೂ ಗುರಿ

ಶ್ರೀನಾರಾಯಣನೇ. ಆಶ್ರಯಗಳಿಗೂ ಪರಮಾಶ್ರಯನೂ, ಸತ್ಯ ತಪಸ್ಸು ಮೋಕ್ಷಗಳಿಗೂ ಆಧಾರಭೂತನು.

ಆದಿತ್ಯಾದಿಗ್ರಹಗಳಿಗೆ ಆಧಾರಭೂತನೂ ಆ ಶಿಂಶುಮಾರನೇ, ದೈತ್ಯಾಂಕನೂ ಆ ನೃಸಿಂಹನೇ ಪ್ರಲಯ ಕಾಲದಲ್ಲಿ ಸರ್ವವನ್ನೂ ಕಬಳಿಸುವ ಕಾಲನಾಮಕನಾಗಿ ಯಮನಾಗಿ, ಮೃತ್ಯುವಿಗೂ ಮೃತ್ಯುವಾಗಿ ಬ್ರಹ್ಮವಾಯು ಮೊದಲಾದವರನ್ನು ಅನ್ನವಾಗಿಯೂ, ಯಮ ಮೃತ್ಯು ಶಿವ ಚಕ್ರಗಳನ್ನು ಉಪ್ಪಿನಕಾಯಿ, ತುಪ್ಪದಂತೆ ಮಾಡಿ ಕಲಸಿ ತಿಂದು ತೇಗುತ್ತಾನೆ. ಇವನ ಮಹಿಮೆಬಲ್ಲವನಾರು?

ತೀರ್ಥ ಪಾದನಾದ ಈ ಪುಣ್ಯ ಶ್ಲೋಕನು ಪುಣ್ಯತಮ ಗಂಗಾದಿ ನದಿಗಳನ್ನು ಪಾದಾದಿಗಳಿಂದ ಸೃಷ್ಟಿಸಿ ಪಾವನಗೊಳಿಸುತ್ತಾ ಮಿಂದವರ ಪಾಪವನ್ನೆಲ್ಲ ಇಲ್ಲವಾಗಿಸುವನು. ಗಂಗೆಯಲ್ಲಿ ಹನಿಹನಿಯಲ್ಲಿಯೂ ತನ್ನ ಸನ್ನಿಧಾನವಿಟ್ಟು ಇತರ ನದಿಗಳಿಗಿಂತ ಉತ್ತಮೋತ್ತಮವಾಗಿಸಿದ್ದಾನೆ.

**ವಿಗ್ರಹೋ ವಿಗ್ರಹಾರ್ಹಾಣಾಂ ಗತಿರ್ಗತಿಮತಾಮಪಿ ।**
**ಆಕಾಶ ಪ್ರಭವೋ ವಾಯುಃ ವಾಯುಪ್ರಾಣೋ ಹುತಾಶನಃ ॥ 15 ॥**
**ದೇವಾಃ ಹುತಾಶನಪ್ರಾಣಾಃ ಪ್ರಾಣೋಽಗ್ನೇಃ ಮಧುಸೂದನ ।**
**ರಸಾದ್ವೈ ಶೋಣಿತಂ ಜಾತಂ ಶೋಣಿತಾತ್ ಮಾಂಸಮುಚ್ಯತೇ ॥ 16 ॥**
**ಮಾಂಸಾತ್ತು ಮೇಧಸೋ ಜನ್ಮ ಮೇಧಸೋಽಸ್ಥೀನಿ ಚೈವ ಹಿ ।**
**ಅಸ್ಥ್ನೋ ಮಜ್ಜಾ ಸಮಭವನ್ ಮಜ್ಜಾತಃ ಶುಕ್ರಮೇವ ಚ ॥ 17 ॥**
**ಶುಕ್ರಾದ್ ಗರ್ಭಃ ಸಮಭವತ್ ರಸಮೂಲೇನ ಕರ್ಮಣಾ ।**

ದೇವತೆಗಳೆಲ್ಲ ಅಗ್ನಿಪ್ರಾಣರು, ಅಗ್ನಿಗೂ ಪ್ರಾಣ ನಾರಾಯಣನು. ಇವನು ಅನ್ನದಿಂದ ಸಾರದಿಂದ ರಕ್ತವನ್ನು ರಕ್ತದಿಂದ ವೀರ್ಯವನ್ನೂ ವೀರ್ಯದಿಂದ ಗರ್ಭವನ್ನೂ ಸೃಷ್ಟಿಸುವನು. ರಕ್ತದಿಂದ ಮಾಂಸ-ಮೇದಸ್ಸು-ಮೂಳೆ-ಮಜ್ಜೆ-ವೀರ್ಯವು ವೀರ್ಯದಿಂದ ಗರ್ಭೋತ್ಪತ್ತಿಯು. ವೀರ್ಯ-ರಜಸ್ಸು ಸೇರಿದಾಗ ಗರ್ಭವೇರ್ಪಡುತ್ತದೆ. ಇವೆರಡಕ್ಕೂ ಚಂದ್ರ-ಅಗ್ನಿ ದೇವತೆಗಳು. ವೀರ್ಯವು

ಬಿಳಿಯಾಗಿದ್ದು ಕಫ ವರ್ಗಕ್ಕೆ ಸೇರಿ ಹೃದಯಲ್ಲಿದ್ದರೆ, ರಕ್ತವು ಪಿತ್ತ ವರ್ಗಕ್ಕೆ ಸೇರಿ ನಾಭಿಯಲ್ಲಿರುತ್ತದೆ.

ಹೃದಯವು ಮನಸ್ಸಿನ ಸ್ಥಾನವು. ನಾಭಿಯ ಕುಹರದಲ್ಲಿ ವಾಣಿಯ ಅಧಿಷ್ಠಾತೃ ದೇವತೆ ಅಗ್ನಿಯದೆ. ಮನಸ್ಸಿಗೆ ಪ್ರಜಾಪತಿ ದೇವತೆ. ವಾಯುವು ಪ್ರಾಣಾಪಾನ ವ್ಯಾನೋದಾನ ಸಮಾನ ರೂಪದಿಂದ ದೇಹದಲ್ಲಿರುವನು. ಹೃದಯದಲ್ಲಿ ಪ್ರಾಣವೂ ಗುದದಲ್ಲಿ ಅಪಾನವು, ನಾಭಿಯಲ್ಲಿ ಸಮಾನವು, ಕಂಠದಲ್ಲಿ ಉದಾನನೂ, ವ್ಯಾನನು ಸರ್ವಶರೀರದಲ್ಲಿಯೂ ಇರುವನು.

**ಪೃಥಿವೀ ವಾಯುರಾಕಾಶಂ ಆಪೋ ಜ್ಯೋತಿಶ್ಚ ಪಂಚಮಮ್ ।**
**ತಸ್ಯೇಂದ್ರಿಯಾಣಿ ವಿಷ್ಟಾನಿ ಸ್ವಂ ಸ್ವಂ ಯೋಗಂ ಪ್ರಚಕ್ರಿರೇ ॥ 19 ॥**

ಪೃಥಿವೀ-ಅಪ್-ವಾಯು-ಆಕಾಶ - ತೇಜಸ್ಸು ಪಂಚಭೂತಗಳಾಗಿವೆ. ಇವುಗಳೆ ಇಂದ್ರಿಯಗಳಾಗಿ ಕಣ್ಣು ಮೊದಲಾದವುಗಳಲ್ಲಿ ಸೇರಿಕೊಳ್ಳುತ್ತದೆ. ಇವುಗಳು ರೂಪರಸಗಂಧ ಸ್ಪರ್ಶ ಶಬ್ಧಗಳನ್ನು ಗ್ರಹಿಸುತ್ತವೆ. ವಾಕ್ ಪಾಣಿಪಾದ ಪಾಯೂಪಸ್ಥಗಳು ಕರ್ಮೇಂದ್ರಿಯಗಳು. ಇವೆಲ್ಲ ಸೇರಿ ಈ ಪಾರ್ಥಿವ ದೇಹವಾಗಿದೆ. ನವದ್ವಾರಗಳಿಂದ ಕೂಡಿದ ಈ ಶರೀರದಿಂದ ಬೆವರು ಮೂತ್ರ ವೀರ್ಯಾದಿಗಳು ಹೊರಬರುತ್ತವೆ. ಜ್ಞಾನೇಂದ್ರಿಯಗಳಲ್ಲಿ ಮನಸ್ಸಿನ ಪಾತ್ರವಿದೆ. ಮನಸ್ಸಿನ ಸಹಯೋಗವಿಲ್ಲವಾದರೆ ಜ್ಞಾನೇಂದ್ರಿಯಗಳೂ ಕಾರ್ಯ ಮಾಡಲಾರವು.

**ಇತ್ಯೇವಂ ಪುರುಷಃ ಸರ್ವಾನ್ ಸೃಜ್ಯಾನ್ ಲೋಕಾನ್ ಸನಾತನಾನ್ ।**
**ಕಥಂ ಲೋಕೇ ನೈಧನೇಽಸ್ಮಿನ್ ನರತ್ವಂ ವಿಷ್ಣುರಾಗತಃ ॥ 20 ॥**

**ಏಷ ಮೇ ಸಂಶಯೋ ಬ್ರಹ್ಮನ್ ಏವಂ ಮೇ ವಿಸ್ಮಯೋ ಮಹಾನ್ ।**
**ಕಥಂ ಗತಿಃ ಗತಿಮತಾಂ ಆಪನ್ನೋ ಮಾನುಷೀಂ ತನುಮ್ ॥ 21 ॥**

ಹೀಗೆ ಸಕಲ ಚರಾಚರ ಪ್ರಪಂಚಕ್ಕೆ ಮೂಲ ಕಾರಣನೆ ನಾರಾಯಣನಿರುವಾಗ ಮರಣಶೀಲವಾದ ಪ್ರಪಂಚದಲ್ಲಿ ಹುಟ್ಟುವುದೆಂದರೇನು?

ಇದೊಂದು ನನಗೆ ಸಂಶಯವು. ಗುರುಗಳೇ ! ನಾನು ಇದುವರೆಗೂ ನನ್ನ ಪೂರ್ವಜರ ಉತ್ಪತ್ತಿ ವಿಚಾರವನ್ನು ವಿಶದವಾಗಿ ಕೇಳಿರುವೆನು.

ಇನ್ನು ಮುಂದೆ ವಿಷ್ಣುವಿನ-ವೃಷ್ಣಿಗಳ ಉತ್ಪತ್ತಿಯನ್ನು ಯಥಾವತ್ತಾಗಿ ಕೇಳಲಿಚ್ಛಿಸುವೆನು. ದೇವಾದಿ ದೇವತೆಗಳೆಲ್ಲರೂ ಭಗವಂತನು ಅತ್ಯಂತ ಅದ್ಭುತಕ್ಕೆ ಅದ್ಭುತನೆಂದು ಹೇಳುವರು. ಅವನ ಆಶ್ಚರ್ಯ ಸಂಗತಿಗಳನ್ನು ನನಗೂ ಹೇಳಿರಿ. ಆಶ್ಚರ್ಯ ರೂಪನೂ, ಆಶ್ಚರ್ಯ ಮಹಿಮನೂ, ಆಶ್ಚರ್ಯ ಜಗನ್ನಾಥನೂ, ಇವನ ಆಶ್ಚರ್ಯಕರವಾದ ಆಖ್ಯಾನ ಹೇಳಿರಿ ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವಿಷ್ಣುಮಹಿಮಾವರ್ಣನವೆಂಬಲ್ಲಿ
ನಲವತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಏಕಚತ್ವಾರಿಂಶೋಽಧ್ಯಾಯಃ

## ವಿಷ್ಣು ಮಹಿಮಾವರ್ಣನಮ್

*ವೈಶಂಪಾಯನ ಉವಾಚ–*

**ಪ್ರಶ್ನಭಾರೋ ಮಹಾಂಸ್ತಾತ! ತ್ವಯೋಕ್ತಃ ಶಾರ್ಂಗಧನ್ವನಿ ।**
**ಯಥಾಶಕ್ತಿ ತು ವಕ್ಷ್ಯಾಮಿ ಶ್ರೂಯತಾಂ ವೈಷ್ಣವಂ ಯಶಃ ॥ 1 ॥**

**ಹಂತ ವಿಷ್ಣೋಃ ಪ್ರವೃತ್ತಿಂ ಚ ಶೃಣು ದಿವ್ಯಾಂ ಮಯೇರಿತಾಮ್ ।**

ಜನಮೇಜಯನೇ ! ಭಗವಂತನ ವಿಷಯದಲ್ಲಿ ಪ್ರಶ್ನೆಗಳ ಹೊರೆಯನ್ನೆ ನನ್ನ ಮೇಲೆ ಹೊರೆಸಿರುವೆ. ಯಥಾಶಕ್ತಿಯಾಗಿ ಉತ್ತರಿಸುವೆನು.

ಭಗವಂತನ ಕಥೆಯನ್ನು ಕೇಳುವುದರಲ್ಲಿ ನಿನ್ನ ಮನಸ್ಸು ಅತ್ಯಾಸಕ್ತ-ವಾಗಿರುವುದು ಪೂರ್ವಪುಣ್ಯದ ಫಲವೆಂದೆ ತಿಳಿ.

## ಪುರುಷಸೂಕ್ತ ಸುಮೇಯ

**ಸಹಸ್ರಾಕ್ಷಂ ಸಹಸ್ರಾಸ್ಯಂ ಸಹಸ್ರಚರಣಂ ಚ ಯಮ್ ।**
**ಸಹಸ್ರಶಿರಸಂ ದೇವಂ ಸಹಸ್ರಕರಮವ್ಯಯಮ್ ॥ 2 ॥**

**ಸಹಸ್ರಜಿಹ್ವಂ ಭಾಸ್ವಂತಂ ಸಹಸ್ರಮುಕುಟಂ ಪ್ರಭಮ್ ।**
**ಸಹಸ್ರದಂ ಸಹಸ್ರಾದಿಂ ಸಹಸ್ರಭುಜಮವ್ಯಯಮ್ ॥ 3 ॥**

ಭಗವಂತನು ಅನಂತಾನಂತನೇತ್ರನೂ, ಅನಂತಾಸ್ಯನೂ, ಅನಂತಪಾದ-ವುಳ್ಳವನೂ, ಅನಂತಕರವುಳ್ಳವನೂ, ಅನಂತ ನಾಲಿಗೆ, ಅನಂತ ಶಿರೋಮಂಡಿತ ಮಕುಟವುಳ್ಳವನೂ, ಸಹಸ್ರಾರು ಇಷ್ಟಾರ್ಥದನೂ,

ಅನಂತಾನಂತ ಜೀವಿಗಳಿಗೆ ಆದಿಕಾರಣನೂ ಅನಂತಾನಂತ-ಭುಜವುಳ್ಳವನೂ, ವಿಕಾರರಹಿತನೂ, ಯಜ್ಞರೂಪನೂ, ಯಜ್ಞಭೋಕ್ತನೂ ಯಜ್ಞಫಲದಾತೃವೂ, ಯಜಮಾನನೂ, ಹೋಮ ದ್ರವ್ಯನೂ ವಿಷ್ಣುವೆ ಆಗಿರುವನು.

ಯಜ್ಞೋಪಯೋಗಿ ವಸ್ತುಗಳಾದ ಪಾತ್ರೆಗಳು, ಪವಿತ್ರ ವೇದಿಕೆ, ದೀಕ್ಷೆ ಚರುಸ್ರುಕ್ ಸ್ರುವ ಸೋಮಬಳ್ಳಿ ಧಾನ್ಯ ಕೇರುವ ಶೂರ್ಪ, ಕುಟ್ಟುವ ಒರಳು, ಒನಕೆ, ಪ್ರೋಕ್ಷಣೀ ಪ್ರಣೀತಾ ಪಾತ್ರೆ – ಅಧ್ವರ್ಯು, ಸಾಮಗ ವಿಪ್ರ ಸದಸ್ಯ ಯೂಪ ಸಮಿತ್ತು ದರ್ಭೆ ಸೌಟು. ಹೋತೃ–ಇಟ್ಟಿಗೆಗಳು. ಚಿಕ್ಕ ದೊಡ್ಡ ಪ್ರಾಣಿಗಳು, ಪ್ರಾಯಶ್ಚಿತ್ತಗಳು ಮೊದಲಾದವುಗಳೆಲ್ಲ ಶ್ರೀಮನ್ನಾರಾಯಣನೆ ಇದ್ದು ಅವುಗಳ ಕಾರ್ಯ ಮಾಡಿ ಮಾಡಿಸುತ್ತಾನೆ.

## ಹರಿಯ ಅವತಾರೋದ್ದೇಶ

**ಯತ್ ಪೃಚ್ಛಸಿ ಮಹಾರಾಜ ಪುಣ್ಯಾಂ ದಿವ್ಯಾಂ ಕಥಾಂ ಶುಭಾಮ್ ।**
**ಯದರ್ಥಂ ಭಗವಾನ್ ವಿಷ್ಣುಃ ಸುರೇಶೋ ರಿಪುಸೂದನಃ ॥ 4 ॥**

**ದೇವಲೋಕಂ ಸಮುತ್ಸೃಜ್ಯ ವಸುದೇವ ಕುಲೇಽಭವತ್ ।**
**ತತ್ತೇಽಹಂ ಚ ಸಂಪ್ರವಕ್ಷ್ಯಾಮಿ ಶೃಣು ಸರ್ವಮಶೇಷತಃ ॥ 5 ॥**

**ಹಿತಾರ್ಥಂ ಸುಮರ್ತ್ಯಾನಾಂ ಲೋಕಾನಾಂ ಪ್ರಭವಾಯ ಚ ।**
**ಬಹುಶಃ ಸರ್ವಭೂತಾತ್ಮಾ ಪ್ರಾದುರ್ಭವತಿ ಕಾರ್ಯತಃ ॥ 6 ॥**

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾ ಸಂಭವತಿ ಪ್ರಭುಃ ॥ 7 ॥**

**ಧರ್ಮಸಂಸ್ಥಾಪನಾರ್ಥಾಯ ಆತ್ಮಾನಂ ಸೃಜತೇ ಪ್ರಭುಃ ॥ 8 ॥**

ಯಾವಾಗ ಜಗತ್ತಿನಲ್ಲಿ ಅಧರ್ಮವು ತಲೆದೋರಿ ಧರ್ಮವು ತಲೆತಗ್ಗಿಸುವಂತಾಗುವುದೋ ಆಗ ಶ್ರೀಹರಿಯು ಧರ್ಮವನ್ನೆತ್ತಲು ಅಧರ್ಮವನ್ನು ನಾಶ ಮಾಡಲು ಭೂಮಿಯಲ್ಲಿ ಅವತರಿಸುವನು. ಧರ್ಮಸಂಸ್ಥಾಪನೆಯೇ ಅವತಾರದ ಪ್ರಧಾನ ಉದ್ದೇಶವಾಗಿರುತ್ತದೆ.

ಶ್ರೀಮಹಾವಿಷ್ಣುವಿನ ಒಂದು ಶ್ರೇಷ್ಠತಮವಾದ ಮೂಲರೂಪವು ದೇವಲೋಕದಲ್ಲಿರುತ್ತಾ ನಿರಂತರ ಆಲೋಚನೆ ಮಾಡುತ್ತಿರುತ್ತದೆ. ನಿರಂತರ ಆಲೋಚನೆಯೇ ಶ್ರೀಹರಿಯ ತಪಸ್ಸು. ಅದೇ ಮೂರ್ತಿಯೇ ಪ್ರಜೆಗಳ ಸೃಷ್ಟಿ ಸಂಹಾರಕ್ಕಾಗಿ ಯೋಗ ನಿದ್ರೆಯಲ್ಲಿರುತ್ತದೆ. ಯೋಗಕ್ಕಾಗಿ ನಿದ್ರೆ ಹೊರತು ಭೋಗಕ್ಕಾಗಿ ಅಲ್ಲ.

ಭಗವಂತನು ಸಾವಿರ ಚತುರ್ಯುಗಗಳಷ್ಟು ಕಾಲ ಕಣ್ಣು ಮಾತ್ರ ಮುಚ್ಚಿದ್ದು ನಂತರ ಜಾಗ್ರತನಾಗುತ್ತಾನೆ. ಸೃಷ್ಟಿಗಾಗಿ ನಾನಾ ವಿಧ ದೇವತೆಗಳನ್ನು ಸೃಷ್ಟಿಸಿ, ಅವರಲ್ಲಿ ತಾನು ಪ್ರವೇಶಿಸಿ ಜಗತ್ತಿನ ಕಾರ್ಯ ನಡೆಸುವನು. ಬ್ರಹ್ಮದೇವರಲ್ಲಿ ಬ್ರಹ್ಮರೂಪದಿಂದಿದ್ದು ಬ್ರಹ್ಮನೆನಿಸಿ ಸೃಷ್ಟಿ ಮಾಡುವನು. ರುದ್ರನಲ್ಲಿ ಸಂಹಾರ ಕಾರ್ಯ ಮಾಡುತ್ತಾ ರುದ್ರನೆನಿಸುವನು. ಇಂದ್ರಾದಿ ಲೋಕಪಾಲಕರಲ್ಲಿ ಆಯಾಯ ಹೆಸರಿನಿಂದ ಇದ್ದು ಅವರಿಗೆ ಶಕ್ತ್ಯಾದಿಗಳನ್ನು ನೀಡುವನು.

### ಮಧುಕೈಟಭಾರಿ

ಯೇನ ಚಾರ್ಣವಮಧ್ಯಸ್ಥೌ ನಷ್ಟೇ ಸ್ಥಾವರಜಂಗಮೇ ।
ನಷ್ಟೇ ದೇವಾಸುರಗಣೇ ಪ್ರಣಷ್ಟೋರಗ ರಾಕ್ಷಸೇ ॥ 9 ॥

ಯೋದ್ಧುಕಾಮೌ ಸುದುಧರ್ಷೌ ದಾನವೌ ಮಧುಕೈಟಭೌ ।
ಹತೌ ಪ್ರಭವತಾ ತೇನ ತಯೋರ್ದತ್ವಾಮಿತಂ ವರಮ್ ॥ 10 ॥

ವಿಷ್ಣುವು ಮಹಾಪ್ರಲಯದಲ್ಲಿ ಆಲದೆಲೆಯ ಮೇಲೆ ಮಲಗಿದ್ದನು. ಅವನ ಕರ್ಣದ ಕಿಟ್ಟದಿಂದ ಹುಟ್ಟಿದ ಮಧುಕೈಟಭರು ಅವನನ್ನು ಎದುರಿಸಲು ಬಂದರು. ವಿಷ್ಣುವು ಮಾಡಿದ ಯುದ್ಧದ ವೈಖರಿ ನೋಡಿ ನಿನ್ನ ಯುದ್ಧದ ಕ್ರಮ ನಮಗೆ ಬಹಳ ಹಿಡಿಸಿದೆ. ವರವೊಂದನ್ನು ಬೇಡು ಎಂದರು. ನನ್ನಿಂದ ನೀವಿಬ್ಬರೂ ಸಾಯಬೇಕೆಂಬ ವರವನ್ನು ಬೇಡಿದನು. ಇಲ್ಲವೆನ್ನಲಾಗದೆ ನೀರಿಲ್ಲದ ಜಾಗದಲ್ಲಿ ಕೊಲ್ಲು ಎಂದಾಗ ತನ್ನ ತೊಡೆಯಲ್ಲಿರಿಸಿ ಕೊಂದು ಹಾಕಿದನು.

ಪುರಾ ಕಮಲನಾಭಸ್ಯ ಸ್ವಪತಃ ಸಾಗರಾಂಬಸಿ ।
ಪುಷ್ಕರೇ ಯತ್ರ ಸಂಭೂತಾಃ ದೇವಾಃ ಸರ್ಷಿಗಣಾಃ ಪುರಾ ॥ 11 ॥
ಏಷ ಪೌಷ್ಕರಕೋ ನಾಮ ಪ್ರಾದುರ್ಭಾವೋ ಮಹಾತ್ಮನಃ ॥ 12 ॥

ಪ್ರಲಯ ಸಮುದ್ರದಲ್ಲಿ ಮಲಗಿ ಸಮಾಧಿರೂಪವಾದ ನಿದ್ರೆಯನ್ನು ಮಾಡುತ್ತಿರುವ ಭಗವಂತನ ನಾಭಿಯಿಂದ ಜನಿಸಿದ ಕಮಲದಿಂದ ದಕ್ಷ ಪ್ರಜಾಪತಿಯೆ ಮೊದಲಾದ ಪ್ರಜೇಶ್ವರರಿಗೆ ಪತಿಯಾದ ಮಹಾತ್ಮನಾದ ಬ್ರಹ್ಮದೇವನು ಜನಿಸಿದನು. ಇದಕ್ಕೆ ಪುರುಷನಾಮಕ ಹರಿಯ ಮಹಿಮೆಯು.

## ಯಜ್ಞವರಾಹಾವತಾರ

**ವಾರಾಹಸ್ತು ಶ್ರುತಿಮುಖಃ ಪ್ರಾದುರ್ಭಾವೋ ಮಹಾತ್ಮನಃ ।**
**ಯತ್ರ ವಿಷ್ಣುಃ ಸುರಶ್ರೇಷ್ಠಃ ವಾರಾಹಂ ರೂಪಮಾಸ್ಥಿತಃ ॥ 13 ॥**
**ಮಹೀಂ ಸಾಗರ ಪರ್ಯಂತಾಂ ಸಶೈಲವನ ಕಾನನಾಮ್ ।**
**ವೇದಪಾದಃ ಯೂಪದಂಷ್ಟ್ರಃ ಕ್ರತುದಂತಃ ಚಿತೀಮುಖಃ ।**
**ಅಗ್ನಿಜಿಹ್ವಾ ದರ್ಭರೋಮಾ ಬ್ರಹ್ಮಶೀರ್ಷೋ ಮಹಾತಪಾಃ ॥ 14 ॥**

ವಿಷ್ಣುವಿನ ವಾರಾಹಾವತಾರವೂ ಶ್ರುತಿಯಲ್ಲಿ ವರ್ಣಿತವಾಗಿದೆ. ಹಂದಿಯ ವೇಷ ಧರಿಸಿ ಪರ್ವತ ವನ ಕಾನನ ಪೂರ್ಣವಾದ ಸಾಗರ ಪರ್ಯಂತ ಭೂಮಿಯನ್ನು ಕೋರೆದಾಡೆಯಲ್ಲಿ ಧರಿಸಿ ಯಥಾಸ್ಥಾನದಲ್ಲಿಟ್ಟನು.

ನಾಲ್ಕು ವೇದಗಳೇ ವರಾಹನ ನಾಲ್ಕು ಕಾಲುಗಳು. ಕೋರೆಹಲ್ಲು ಯಜ್ಞಸ್ತಂಭವು. ಅವನ ದಂತಗಳೇ ಯಜ್ಞವು, ಮುಖವೇ ಶ್ಯೇನಾಕಾರದ ಚಿತಿಯು. ನಾಲಿಗೆಯೇ ಅಗ್ನಿಯು. ರೋಮಗಳೇ ದರ್ಭಗಳು, ವೇದಗಳು ತಲೆಯಲ್ಲಿದ್ದವು. ಹಗಲುರಾತ್ರಿಗಳು ನೇತ್ರಗಳು, ವೇದಗಳೇ ಅವನ ಅಂಗಾಂಗಗಳು ಆಜ್ಯವೆ ಅವನು ಮೂಗು, ಮುಖವೆ ಸ್ರುವವು. ಸಾಮವೇದವೇ ಅವನ ಸ್ವರ. ನಖಗಳೇ ಪ್ರಾಯಶ್ಚಿತಗಳು. ಮೊಣಕಾಲುಗಳೇ ಪಶಗಳು. ಕರುಳು ಉದ್ಗಾತೃವು. ಲಿಂಗವೇ ಹೋಮವು, ಹಣ್ಣು ಬೀಜ ಔಷಧಿಗಳು ಅಂಡಕೋಶಗಳು. ಆಯಾಯ ಭಾಗಗಳಿಂದ ಅವುಗಳು ಜನಿಸಿದ್ದವು. ಮಂತ್ರಗಳು ನಿತಂಬಗಳು, ಭುಜಗಳೇ ವೇದಿಯು, ಶರೀರವೆ ಪ್ರಾಗ್ವಂಶವಾಗಿದ್ದಿತು. ಹೀಗೆ ಯಜ್ಞಾತ್ಮನಾದ ವರಾಹಮೂರ್ತಿಯು ಸಶೈಲವನ ಕಾನನ ಸಮಸ್ತ ಭೂಭಾಗವನ್ನುದ್ಧರಿಸಿದನು.

## ನೃಸಿಂಹಾವತಾರ

**ವಾರಾಹ ಏಷ ಕಥಿತಃ ನಾರಸಿಂಹಮತಃ ಶ್ರುಣು ।**
**ಯತ್ರ ಭೂತ್ವಾ ಮೃಗೇಂದ್ರೇಣ ಹಿರಣ್ಯಕಶಿಪುರ್ಹತಃ ॥ 15 ॥**

ಪುರಾ ಕೃತಯುಗೇ ರಾಜನ್ ಸುರಾರಿ ರ್ಬಲದರ್ಪಿತಃ ।
ದೈತ್ಯಾನಾಮಾದಿ ಪುರುಷಃ ಚಚಾರ ತಪ ಉತ್ತಮಮ್ ॥ 16 ॥
ದಶವರ್ಷ ಸಹಸ್ರಾಣಿ ಶತಾನಿ ದಶ ಪಂಚ ಚ ।
ಜಪೋಪವಾಸ ನಿರತಃ ಸ್ನಾನಮೌನ ದೃಢವ್ರತಃ ॥ 17 ॥
ಬ್ರಹ್ಮಾ ಪ್ರೀತೋಽಭವತ್ ತಸ್ಯ ತಪಸಾ ನಿಯಮೇನ ಚ ।

ಜನಮೇಜಯನೇ, ವಾರಾಹ ರೂಪವನ್ನು ನಿನಗೆ ತಿಳಿಸಿರುವೆನು. ನರಸಿಂಹಾವತಾರವನ್ನು ನಿನಗೆ ತಿಳಿಸುವೆ ಕೇಳು. ಹಿಂದೆ ಕೃತಯುಗದ ಕಡೆಯಲ್ಲಿ ಹಿರಣ್ಯಾಕ್ಷನನ್ನು ಕೊಂದ ಕೋಪದಿಂದಾಗಿ ವಿಷ್ಣುವಿನ ಮೇಲೆ ಸೇಡು ತೀರಿಸಿಕೊಳ್ಳಲು ಬಲದರ್ಪಿತ ಹಿರಣ್ಯಕಶಿಪುವು ಮಂದರ ದ್ರೋಣಿಗೆ ಹೋಗಿ ದುಶ್ಚರ ತಪಸ್ಸನ್ನಾಚರಿಸಿದನು. ಅವನ ತಪಸ್ಸು ಹನ್ನೊಂದು ಸಾವಿರದ ಐದು ನೂರು ವರ್ಷಗಳ ಕಾಲದಷ್ಟು ದೀರ್ಘವಾಗಿತ್ತು. ಜಪ, ಉಪವಾಸ, ಒಂದೇ ಆಸನ ಸ್ಥಿತಿ, ಮೌನ, ಮಂತ್ರಜಪದಿಂದ, ಶಮ ದಮ ಬ್ರಹ್ಮಚರ್ಯಾದಿಗಳಿಂದ ಬ್ರಹ್ಮದೇವನನ್ನು ಸಂತೋಷಪಡಿಸಿದನು.

ಬ್ರಹ್ಮದೇವನು ಹಂಸವಾಹನದಲ್ಲಿ ಅಷ್ಟವಸು, ದ್ವಾದಶಾದಿತ್ಯರು, ಸಾಧ್ಯರು, ಮರುತ್ತುಗಳಿಂದಲೂ, ಋಷಿವರ್ಯರಿಂದಲೂ ಕೂಡಿ ಅಲ್ಲಿಗೆ ಆಗಮಿಸಿದನು. ದೈತ್ಯವರ್ಯನೇ ! ನಿನ್ನ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ. ವರವನ್ನು ಬೇಡು ಎಂದನು.

### ಹಿರಣ್ಯಕಶಿಪುವಿನ ವರ

ನ ದೇವಾಸುರ ಗಂಧರ್ವಾ ನ ಯಕ್ಷರಕ್ಷೋರಗ ರಾಕ್ಷಸಾಃ ।
ನ ಮಾನುಷಾಃ ಪಿಶಾಚಾಶ್ಚ ನಿಹನ್ಯುಃ ಮಾಂ ಕಥಂಚನ ॥ 19 ॥
ಋಷಯೋ ವಾ ನ ಮಾಂ ಶಾಪೈಃ ಕ್ರುದ್ಧಾಃ ಲೋಕಪಿತಾಮಹ ।
ಶಪೇಯುಃ ತಪಸಾ ಯುಕ್ತಾಃ ವರಮೇತಂ ವೃಣೋಮ್ಯಹಮ್ ॥ 20 ॥
ನ ಶಸ್ತ್ರೇಣ ನ ಚಾಸ್ತ್ರೇಣ ಗಿರಿಣಾ ಪಾದಪೇನ ವಾ ।
ನ ಶುಷ್ಕೇಣ ನ ಚಾರ್ದ್ರೇಣ ಸ್ಯಾನ್ನ ಚಾನ್ಯೇನ ಮೇ ವಧಃ ॥ 21 ॥
ಪಾಣಿಪ್ರಹಾರೇಣೈಕೇನ ಸಭೃತ್ಯ ಬಲವಾಹನಮ್ ।
ಯೋ ಮಾಂ ನಾಶಯಿತುಂ ಶಕ್ತಃ ಸ ಮೇ ಮೃತ್ಯುರ್ಭವಿಷ್ಯತಿ ॥ 22 ॥

ಬ್ರಹ್ಮದೇವನೇ, ನನಗೆ ದೇವ, ಅಸುರ, ಯಕ್ಷ ಉರಗ, ಗಂಧರ್ವ, ರಾಕ್ಷಸ, ಮನುಷ್ಯ, ಪಿಶಾಚಿಗಳು ಇವರಿಂದ ನನಗೆ ಮೃತ್ಯು ಬರಬಾರದು. ತಪಸ್ವಿ ಋಷಿಗಳು ನನ್ನನ್ನು ಶಪಿಸಿ ಕೊಲ್ಲಬಾರದು. ಶಸ್ತ್ರದಿಂದ, ಅಸ್ತ್ರದಿಂದ, ಪರ್ವತಗಳಿಂದ, ವೃಕ್ಷ, ಒಣಗಿರುವ ಪದಾರ್ಥ, ಹಸೀ ಪದಾರ್ಥ, ಯಾವುದೇ ಇತರ ಆಯುಧಗಳಿಂದಾಗಲೀ ನನಗೆ ಮರಣವೇರ್ಪಡಬಾರದು.

ಯಾವನು ನನ್ನ ಸೇವಕ-ಸೈನ್ಯ-ವಾಹನ ಸಮೇತನಾಗಿರುವ ನನ್ನನ್ನು ಬರಿಗೈಯಿಂದಲೇ ಹೊಡೆದು ಬಡೆದು ಕೊಂದು ಹಾಕುವವನಿಂದ ನನಗೆ ಮೃತ್ಯು ಬರಲಿ.

**ಭವೇಯ ಮಹಮೇವಾರ್ಕಃ ಸೋಮೋ ವಾಯುರ್ಹುತಾಶನಃ ।**
**ಸಲಿಲಂ ಚಾಂತರಿಕ್ಷಂ ಚ ನಕ್ಷತ್ರಾಣಿ ದಿಶೋ ದಶ ॥ 23 ॥**
**ಧನದಶ್ಚ ಧನಾಧ್ಯಕ್ಷೋ ಯಕ್ಷಃ ಕಿಂಪುರುಷಾಧಿಪಃ ॥ 24 ॥**

ಇಂದ್ರ, ಚಂದ್ರ, ಸೂರ್ಯ, ಯಮ, ಅಗ್ನಿ, ವರುಣ, ವಾಯು, ಕುಬೇರ ಎಲ್ಲರ ಸಾಮರ್ಥ್ಯ ಶಕ್ತಿಗಳು ನನ್ನಲ್ಲಿ ಒಟ್ಟಾಗಿರಬೇಕು. ದಿಕ್ಪಾಲಕನೂ ನಾನೇ ಆಗಿರಬೇಕು.

ಹಿರಣ್ಯಾಕಶಿಪುವೇ ! ದಿವ್ಯವಾದ ಅದ್ಭುತವಾದ ಈ ಎಲ್ಲಾ ವರಗಳನ್ನೂ ನಿನಗೆ ನೀಡಿದ್ದೇನೆ. ನಿನ್ನ ಅಭೀಷ್ಟವೆಲ್ಲವೂ ಪೂರ್ಣವಾಗುತ್ತವೆ ಎಂದನು.

ಹೀಗೆ ವರ ನೀಡಿದ ಬ್ರಹ್ಮದೇವನು ವೈರಾಜವೆಂಬ ಬ್ರಹ್ಮಸದನಕ್ಕೆ ಹೋದನು.

ದುಷ್ಟದೈತ್ಯನಿಗೆ ಅವನು ಕೇಳಿದ್ದನ್ನೆಲ್ಲ ನೀಡಿದ್ದನ್ನು ನೋಡಿ ದೇವ ಋಷಿಗಳಿಗೆಲ್ಲ ಎದೆಯೊಡೆಯಿತು. ಎಲ್ಲರೂ ಒಂದುಗೂಡಿ ಸತ್ಯಲೋಕಕ್ಕೆ ಸಾರಿದರು.

ಬ್ರಹ್ಮದೇವನೇ, ದುಷ್ಟನಾದ ಹಿರಣ್ಯಕಶಿಪುವು ನೀನು ಕೊಟ್ಟಿರುವ ವರಗಳಿಂದ ನಮ್ಮನ್ನು ನಿರಂತರವಾಗಿ ಪೀಡಿಸುತ್ತಿರುತ್ತಾನೆ. ವರ ನೀಡಿದಂತೆ ಅವನ ವಧೋಪಾಯವನ್ನು ವಿಚಾರಿಸು ಎಂದರು.

## ಮಾಡಿದ್ದುಣ್ಣೊ ಮಹರಾಯ

**ಅವಶ್ಯಂ ತ್ರಿದಶಾಸ್ತೇನ ಪ್ರಾಪ್ತವ್ಯಂ ತಪಸಃ ಫಲಮ್ ।**
**ತಪಸೋऽಂತೇऽಸ್ಯ ಭಗವಾನ್ ವಧಂ ವಿಷ್ಣುಃ ಕರಿಷ್ಯತಿ ॥ 25 ॥**

ದೇವತೆಗಳೇ ! ತಪಸ್ಸಿಗೆ ಫಲ ದೊರೆಯಲೇಬೇಕು. ತಪಸ್ಸು ಮಾಡಿದ್ದಕ್ಕಾಗಿ ವರ ಬೇಡಿದ. ನಾನು ನೀಡಿದೆ. ನಮ್ಮನ್ನು ನಿಮ್ಮನ್ನು ಸರ್ವದಾ ರಕ್ಷಿಸುವ ವಿಷ್ಣುವೇ ಅವನನ್ನು ಮುಗಿಸುವನು. ನಿಶ್ಚಿಂತರಾಗಿರಿ ಎಂದರು.

### ಹಿರಣ್ಯಕಶಿಪುವಿನ ಉಪಟಳ

**ಲಬ್ಧಮಾತ್ರೇ ವರೇ ಚಾಪಿ ಸರ್ವಾಃ ಸೋಽಬಾಧತ ಪ್ರಜಾಃ ।**
**ಹಿರಣ್ಯಕಶಿಪುರ್ದೈತ್ಯೋ ವರದಾನೇನ ದರ್ಪಿತಃ ॥ 26 ॥**

**ಆಶ್ರಮೇಷು ಮಹಾಭಾಗಾನ್ ಮುನೀನ್ ವೈ ಶಂಸಿತವ್ರತಾನ್ ।**
**ಸತ್ಯಧರ್ಮರತಾನ್ ದಾಂತಾನ್ ಪುರಾ ಧರ್ಷಿತವಾಂಸ್ತು ಸಃ ॥ 27 ॥**

**ತ್ರೈಲೋಕ್ಯಂ ವಶಮಾನೀಯ ಸ್ವರ್ಗೇ ವಸತಿ ದಾನವಃ ।**
**ಯಜ್ಞಿಯಾನ್ ಕೃತವಾನ್ ದೈತ್ಯಾನ್ ದೇವಾಂಶ್ಚೈವಾಪ್ಯ ಯಜ್ಞಿಯಾನ್॥28॥**

ಹಿರಣ್ಯಕನು ವರ ಪಡೆದ ಮರುದಿನವೇ ದೇವಲೋಕದ ಮೇಲೆ ದಂಡೆತ್ತಿ ಹೋದ. ಇಂದ್ರಾದಿ ದೇವತೆಗಳನ್ನೆಲ್ಲ ಸೋಲಿಸಿ ಸ್ವರ್ಗ ಸಾಮ್ರಾಜ್ಯ ಸೂರೆಗೊಂಡ. ದೇವತೆಗಳಿಗೆ ಸೇರಬೇಕಾದ ಯಜ್ಞಭಾಗವನ್ನೆಲ್ಲ ದೈತ್ಯಾಧಮರಿಗೆ ಬರಿಸಿದ. ದೇವಗಣ ರುದ್ರಗಣ ಮರುದ್ಗಣ ಶ್ರೀಹರಿಯಲ್ಲಿ ಸಾಮೂಹಿಕ ಮೊರೆ ಹೋದರು.

**ತ್ರಾಯಸ್ವ ನೋಽದ್ಯ ದೇವೇಶ ಹಿರಣ್ಯಕಶಿಪೋರ್ಭಯಾತ್ ।**
**ತ್ವಂ ಹಿ ನಃ ಪರಮೋದೇವಃ ತ್ವಂ ಹಿ ನಃ ಪರಮೋಗುರುಃ ॥ 29 ॥**

**ಕ್ಷಯಾಯ ದಿತಿವಂಶಸ್ಯ ಶರಣ್ಯಸ್ತ್ವಂ ಭವಸ್ವ ನಃ ॥ 30 ॥**

ದೇವದೇವನೆ, ಹಿರಣ್ಯಕಶಿಪುವಿನ ಭಯದಿಂದ ನಮ್ಮನ್ನೆಲ್ಲ ರಕ್ಷಿಸು. ಬ್ರಹ್ಮಾದಿ ಸಕಲ ದೇವತೆಗಳಿಗೂ ನೀನೆ ರಕ್ಷಕನಾಗಿರುವಿ.

ಪರಮದೇವತೆಯೂ ಪರಮಗುರುವೂ ನೀನೇ ಆಗಿರುವೆ. ಕಮಲಾಕ್ಷನೇ ದೈತ್ಯರ ನಾಶ ಮಾಡುವುದರ ಮೂಲಕ ನಮಗೆ ಶರಣ್ಯನಾಗು.

### ಶ್ರೀಹರಿಯ ಅಭಯದಾನ

**ಭಯಂ ತ್ಯಜಧ್ವಮಮರಾಃ ಹ್ಯಭಯಂ ವೋ ದದಾಮ್ಯಹಮ್ ।**
**ತಥೈವ ತ್ರಿದಿವಂ ದೇವಾಃ ಪ್ರತಿಪತ್ಸ್ಯಥ ಮಾಚಿರಮ್ ॥ 31 ॥**

**ಅವಧ್ಯಮಮರೇಂದ್ರಾಣಾಂ ದಾನವೇಂದ್ರಂ ನಿಹನ್ಮ್ಯಹಮ್ ॥ 32 ॥**

ದೇವತೆಗಳೇ! ನಿರ್ಭಯರಾಗಿರಿ. ಅಭಯ ನೀಡಿರುವೆನು. ನೀವು ಸದ್ಯದಲ್ಲಿಯೇ ಹಿಂದಿನಂತೆ ಸ್ವರ್ಗ ಸ್ಥಾನವನ್ನು ಹೊಂದುವಿರಿ. ಬ್ರಹ್ಮ ವರದಿಂದ ಉದ್ಧಟನಾಗಿರುವ ದೇವೇಶ್ವರರಿಂದ ಅವಧ್ಯನಾಧ ಹಿರಣ್ಯಕಶಿಪುವನ್ನು ಸದ್ಯದಲ್ಲಿಯೇ ಕೊಲ್ಲುವೆನು.

## ನರ-ಸಿಂಹನಾದ ಪುರುಷಸಿಂಹ

**ನರಸ್ಯ ಕೃತ್ವಾರ್ಧದೇಹಂ ಸಿಂಹಸ್ಯಾರ್ಧತನುಂ ಪ್ರಭುಃ ।**
**ನಾರಸಿಂಹೇಣ ವಪುಷಾ ಪಾಣಿಂ ನಿಷ್ಪಿಷ್ಯ ಪಾಣಿನಾ ॥ 33 ॥**

**ದೈತ್ಯ ಸೋಽತಿಬಲಂ ದೀಪ್ತಂ ದೃಪ್ತಶಾರ್ದೂಲ ವಿಕ್ರಮಮ್ ।**
**ದೃಪ್ತೈಃ ದೈತ್ಯಗಣೈಃ ಗುಪ್ತಂ ಹತವಾನ್ ಏಕಪಾಣಿನಾ ॥ 34 ॥**

ವರನೀಡಿ ದೈತ್ಯ ಸಾರ್ವಭೌಮನ ಅರಮನೆಗೆ ಶ್ರೀಹರಿಯ ಆಗಮನ. ವಿಚಿತ್ರವೇಷ ಸಿಂಹವೂ ಅಲ್ಲ ಮಾನವನೂ ಅಲ್ಲ. ಅರ್ಧಸಿಂಹಾಕಾರ ಅರ್ಧ ಮಾನವಾಕಾರ ವೇಷದಿಂದ ಕಾಣಿಸಿಕೊಂಡ.

ಕಾರ್ಮುಗಿಲಿನಂತೆ ಶ್ಯಾಮಲವರ್ಣ, ಮೇಘದಂತೆ ಗಂಭೀರನಾದ, ಉದ್ದೀಪ್ತವಾದ ತೇಜಸ್ಸು ಮಳೆಗರೆಯುವ ಮೇಘದಂತೆಯೆ.

ದಟ್ಟ ಮೋಡದಂತೆ ಕೋಟಿ ಮಿಂಚುಗಳು ಒಂದೇ ಬಾರಿ ಮಿಂಚಿದಂತೆ. ಗುಡುಗುವ ಮೋಡದಂತೆ ಸಿಂಹನಾದದ ಅಬ್ಬರ, ಸಿಂಹದ ಗಾಂಭೀರ್ಯ ವ್ಯಾಘ್ರದ ಚಾತುರ್ಯ, ಗರುಡನ ವೇಗ. ಸಾವಿರ ಸಾವಿರ ವೀರಾಗ್ರಣಿಗಳೆಲ್ಲರನ್ನೂ ಒಂಟಿಕೈ ಏಟುಗಳಿಂದ ಕೊಂದು ಹಾಕಿದ. ಮರುಕ್ಷಣದಲ್ಲಿಯೇ ತನ್ನ ಮೇಲೆರಗಿದ ದೈತ್ಯನನ್ನು ಒಂದೇ ಮುಷ್ಟಿ ಹೊಡೆತನದಿಂದ ನೆಲಕಚ್ಚಿಸಿದ.

## ವಾಮನಾವತಾರ

**ನೃಸಿಂಹ ಏಷ ಕಥಿತಃ ಭೂಯೋಽಯಂ ವಾಮನೋಽಪರಃ ।**
**ಯತ್ರ ವಾಮನಮಾಶ್ರಿತ್ಯ ರೂಪಂ ದೈತ್ಯ ವಿನಾಶಕೃತ್ ॥ 35 ॥**

**ಬಲೇಃ ಬಲವತೋ ಯಜ್ಞೇ ಬಲಿನಾ ವಿಷ್ಣುನಾ ಪುರಾ ।**
**ವಿಕ್ರಮ್ಯೈಃ ತ್ರಿಭಿಃ ಅಕ್ಷೋಭ್ಯಾಃ ಕ್ಷೋಭಿತಾಸ್ತೇ ಮಹಾಸುರಾಃ ॥ 36 ॥**

ಬಲಿಯು ಮಹಾಬಲಿಷ್ಠ ಚಕ್ರವರ್ತಿ. ವಿರೋಚನನ ಮಗನಾದ ಬಲಿಯು ದೇವೇಂದ್ರ ಮೊದಲಾದವರನ್ನು ಗೆದ್ದು ತ್ರೈಲೋಕ್ಯಾಧಿಪತಿಯೆನಿಸಿದ. ಅದಿತಿ ದೇವಿಯು ದೇವತೆಗಳ ಅವಸ್ಥೆಗಾಗಿ ಮರುಗಿದಳು. ಉತ್ತಮ ತಪಸ್ಸನ್ನು ಮಾಡಿದಳು. ಫಾಲ್ಗುಣ ಪಯೋವ್ರತವನ್ನಾಚರಿಸಿದಳು. ಸಂತುಷ್ಟ ದೇವನು ತಾಯಿಯೇ! ಬಲಿಯನ್ನು ಬಂಧಿಸತಕ್ಕ ನಿನ್ನ ಮಗನಾಗಿ ಬರುವೆನು. ಮುಂದೆ ಭಾದ್ರಪದ ದ್ವಾದಶಿ ಶ್ರವಣ ನಕ್ಷತ್ರವಿರುವಾಗ ವಾಮನನಾಗಿ ಆವಿರ್ಭೂತನಾದನು. ಬ್ರಹ್ಮಾದಿಗಳೆಲ್ಲ ಜಾತಕರ್ಮ ಉಪನಯನಾದಿ ಪೂರೈಸಿದರು. ತಾಯಿಯ ಅನುಮತಿ ಪಡೆದು ನರ್ಮದಾ ನದಿಯ ಭೃಗುಕುತ್ಸದಲ್ಲಿ ಯಜ್ಞದಲ್ಲಿ ದೀಕ್ಷಿತನಾಗಿದ್ದ ಬಲಿಯ ಯಜ್ಞಶಾಲೆಗೆ ಬಂದನು. ಹೆಜ್ಜೆ ಹೆಜ್ಜೆಗೂ ಭೂಮಿಯೆಲ್ಲವೂ ಕಂಪಿಸಿತು. ಶುಕ್ರಾಚಾರ್ಯರು ಬಲಿಯೇ ದೇವರಾಜ್ಯವನ್ನು ಇಂದ್ರನಿಗೆ ಕೊಡಲೆಂದು ವಿಷ್ಣುವು ಈ ಮಾಣವಕ ವೇಷದಲ್ಲಿ ಬಂದಿದ್ದಾನೆ. ಅವನಿಗೆ ನಾನು ಇದನ್ನು ದಾನ ಮಾಡುವೆನೆಂದು ಹೇಳಬೇಡ. ಪ್ರತಿಜ್ಞೆ ಮಾಡಬೇಡ. ಬಲಿಯು ನಾರಾಯಣನು ಯಜ್ಞಕ್ಕೆ ಬಂದಿರುವಾಗ ನಿಷೇಧ ಮಾಡಲು ನನಗೆ ಸಾದ್ಯವಿಲ್ಲ.

ವಾಮನ ಮೂರ್ತಿಯೇ ! ನಿನ್ನ ಆಗಮನದಿಂದ ಪಿತೃಗಳು ಉದ್ಧಾರವಾದರು.

ವಾಮನನು ಬಲಿಯೇ, ನನಗೆ ಮೂರು ಹೆಜ್ಜೆ ಭೂಮಿ ದಾನ ಮಾಡು ಸಾಕು. ಅಗ್ನಿಯಿಡಲು ಅಗ್ನಿಹೋತ್ರಿಗಳಾದ ಗುರುಗಳಿಗೆ ಮೂರು ಹೆಜ್ಜೆ ದಾನ ಮಾಡು. ಬಲಿಯು ಚಿನ್ನದ ಗಿಂಡಿಯಿಂದ ನೀರನ್ನು ಬಿಡಲು ತೊಡಗಿದಾಗ ಶುಕ್ರನು ಆ ನೀರಿನ ಧಾರೆಗೆ ಅಡ್ಡಿವುಂಟು ಮಾಡಿದನು. ವಾಮನನು ದರ್ಭೆಯಿಂದ ಚುಚ್ಚಿ ಶುಕ್ರಾಚಾರ್ಯನ ನೇತ್ರಹೀನನ್ನಾಗಿಸಿದನು. ನೀರು ಧಾರೆ ಬಿತ್ತು. ವಾಮನ ಬೆಳೆಯಲು ಆರಂಭಿಸಿದ. ಪಾದವೊಂದರಲ್ಲಿ ಸಪ್ತದ್ವೀಪ ಸಹಿತ ಭೂಮಂಡಲವನ್ನು, ದ್ವಿತೀಯ ಪಾದದಿಂದ ಅಂತರಿಕ್ಷಾದಿ ಲೋಕಗಳೆಲ್ಲವೂ ಸ್ವರ್ಗವೂ ಆಕ್ರಮಿಸಲ್ಪಟ್ಟಿತು.

ಮಹಾವಿಷ್ಣುವು ತ್ರಿವಿಕ್ರಮನಾದಾಗ ದೈತ್ಯರೆಲ್ಲರೂ ನಾನಾಯುಧಗಳನ್ನು ಹಿಡಿದು ಮಹಾವಿಷ್ಣುವನ್ನು ಸುತ್ತುವರೆದರು. ದೈತ್ತಪ್ರಧಾನರಾದ ವಿಪ್ರಚಿತ್ತಿ,

ಶಿಬಿ, ಶಂಕುರಯೆ, ಶಂಕು, ಅಯ-ಶಿರಸ್, ಶಂಕುಶಿರಸ್, ಹಯಗ್ರೀವ ಮೊದಲಾದ ದೈತ್ಯನಾಯಕರು ನಾಲ್ಕು ದಿಕ್ಕುಗಳಿಂದ ಸುತ್ತುವರೆದರು.

**ಶತಘ್ನೀ ಚಕ್ರಹಸ್ತಾಶ್ಚ ತಥಾ ಪರಿಘ ಪಾಣಯಃ ।**
**ಮಹಾಶಿಲಾ ಪ್ರಹರಣಾಃ ಶೂಲಹಸ್ತಾಶ್ಚ ದಾನವಾಃ ॥ 37 ॥**

**ಅಶ್ಮಯಂತ್ರಾಯುಧೋಪೇತಾಃ ಭಿಂದಿಪಾಲಾಯುಧಾಸ್ತಥಾ ।**
**ಕೂರ್ಮಕುಕ್ಕುಟ ವಕ್ತ್ರಾಶ್ಚ ಶಶೋಲೂಕ ಮುಖಾಸ್ತಥಾ ॥ 38 ॥**

ಕೆಲವು ದಾನವರು ಶತಘ್ನಿ, ಚಕ್ರ ಪರಿಘ, ಮಹಾಶಿಲೆ, ಶೂಲ, ಕಲ್ಲಿನಯಂತ್ರ, ಭಿಂದಿಪಾಲ ಆಯುಧ ಧರಿಸಿದ್ದರು. ಪಾಶ, ಒನಕೆ, ಮುದ್ಗರಗಲನ್ನೆ-ಸೆಯುತ್ತಿದ್ದರು.

ಕೆಲವರಿಗೆ ಆಮೆ ಮುಖವೂ, ಹುಂಜು ಮುಖ, ಮೊಲ, ಗೂಬೆ, ಕತ್ತೆ, ಒಂಟೆ, ಹಂದಿ, ಭಯಂಕರ ಮೊಸಳೆ ಮುಖದವರು, ನರಿ ಮುಖದವರು, ತೋಳ, ಬೆಕ್ಕು, ಆನೆ, ಮೊದಲಾದ ಮುಖಗಳಿದ್ದವು. ಗೋವು, ಎಮ್ಮೆ, ಕುರಿ, ಹಲ್ಲಿ, ಮುಳ್ಳು ಹಂದಿ ಮುಖವನ್ನು ಹೊಂದಿದ್ದ ಕೆಲವರು ಆಯುಧಗಳಿಂದ ವಿಷ್ಣುವನ್ನು ಹೊಡೆಯಲು ಪ್ರಾರಂಭಿಸಿದರು.

**ಪ್ರಮಥ್ಯ ಸರ್ವಾನ್ ದೈತೇಯಾನ್ ಪಾದಹಸ್ತ ತಲೈಃ ಪ್ರಭುಃ ।**
**ರೂಪಂ ಕೃತ್ವಾ ಮಹಾಭೀಮಂ ಜಹಾರಾಶು ಸ ಮೇದಿನೀಮ್ ॥ 39 ॥**

ಗಿಡ್ಡ ವಾಮನ ದೊಡ್ಡ ತ್ರಿವಿಕ್ರಮನಾಗಿ ಬೆಳೆದು ಏರಿಬಂದ ದೈತ್ಯರೆಲ್ಲರನ್ನೂ ಕೈಗಳಿಂದ ಗುದ್ದಿ ಬೀಳಿಸಿದ. ಕಾಲಿನಿಂದ ತುಳುದು ಹಾಕಿ ಅವರಿಂದ ಭೂಮಂಡಲವನ್ನು ತನ್ನ ವಶಕ್ಕೆ ಮಾಡಿಕೊಂಡ.

## ಸೂರ್ಯಚಂದ್ರರು

**ತಸ್ಯ ವಿಕ್ರಮತೋ ಭೂಮಿಂ ಚಂದ್ರಾದಿತ್ಯೌ ಸ್ತನಾಂತರೇ ।**
**ನಭಃ ಪ್ರಕ್ರಮಮಾಣಸ್ಯ ನಾಭ್ಯಾಂ ಕಿಲ ಸಮಾಸ್ಥಿತೌ ॥ 40 ॥**

**ಪರಂ ಪ್ರಕ್ರಮಾಣಸ್ಯ ಜಾನುದೇಶೇ ಸ್ಥಿತಾವುಭೌ ॥ 41 ॥**

ದೈತ್ಯದಾನವರನೆಲ್ಲ ನೆಲದ ಪಾಲು ಮಾಡಿದ ಮೇಲೆ ಮಿತಿಮೀರಿ ಬೆಳೆದ ಇನ್ನೂ ಬೆಳೆಯುತ್ತಿರುವ ತ್ರಿವಿಕ್ರಮನ ವಿರಾಟ್ ದೇಹದ ಚಂದ್ರಸೂರ್ಯರು

ಅವನ ಸ್ತನಗಳ ಮಧ್ಯದಲ್ಲಿ ಕಾಣುತ್ತಿದ್ದರು. ಮತ್ತು ಬೆಳೆದು ಸ್ವರ್ಗವನ್ನು ಆಕ್ರಮಿಸಿದಾಗ ಚಂದ್ರಸೂರ್ಯರು ನಾಭ ಪ್ರದೇಶದಲ್ಲಿ ಕಂಡರು. ಸ್ವರ್ಗವನ್ನು ಅತಿಕ್ರಮಿಸಿ ಮಹರಾದಿಲೋಕಗಳಿಗೆ ಬೆಳೆದಾಗ ಸೂರ್ಯಚಂದ್ರರು ಅವನ ಮಂಡಿಯಲ್ಲಿ ಕಂಡರು. ಹೀಗೆ ವಿರಾಡ್ರೂಪದಿಂದ ತ್ರಿಲೋಕ ವ್ಯಾಪಿಸಿ ಆಕ್ರಮಿಸಿ ದೈತ್ಯ ರಾಜನಿಂದ ತ್ರೈಲೋಕ್ಯ ಸಾಮ್ರಾಜ್ಯವನ್ನು ವಶಪಡಿಸಿಕೊಂಡನು.

## ದತ್ತಾತ್ರೇಯಾವತಾರ

**ಭೂಯೋ ಭೂತಾತ್ಮನೋ ವಿಷ್ಣೋಃ ಪ್ರಾದುರ್ಭಾವೋ ಮಹಾತ್ಮನಃ ।**
**ದತ್ತಾತ್ರೇಯ ಇತಿ ಖ್ಯಾತಃ ಕ್ಷಮಯಾ ಪರಯಾ ಯುತಃ ॥ 42 ॥**
**ಸಹಯಜ್ಞಕ್ರಿಯಾ ವೇದಾಃ ಪ್ರತ್ಯಾನೀತಾ ಹಿ ತೇನ ವೈ ॥ 43 ॥**

ಅನಂತರ ವೇದಮಾರ್ಗಗಳು ಲುಪ್ತವಾದವು. ಯಜ್ಞ ಯಾಗಗಳು ನಷ್ಟವಾದವು. ಧರ್ಮವು ಶಿಥಿಲವಾಗಿ ವರ್ಣಸಾಂಕರ್ಯವಾಯಿತು. ಅಧರ್ಮ ರಭಸದಿಂದ ಸಾಗುತ್ತಿತ್ತು. ಸತ್ಯನಿಷ್ಠೆಯೆಂಬುದೆ ಕಾಣುತ್ತಿರಲಿಲ್ಲ. ಧರ್ಮವು ಸಂಕಟದಲ್ಲಿ ಸಿಕ್ಕಿ ಪ್ರಜೆಗಳು ವಿನಾಶ ಹೊಂದುತ್ತಿದ್ದರು. ಇಂತಹ ಧರ್ಮವು ನಾಶದ ಅಂಚಿನಲ್ಲಿದ್ದಾಗ ದತ್ತಾತ್ರೇಯನಾಗಿ ಅವತರಿಸಿ ವೈದಿಕ ಪ್ರಕ್ರಿಯೆ, ಯಜ್ಞಯಾಗಾದಿಗಳನ್ನು ಪುನಃ ಪ್ರತಿಷ್ಠಾಪಿಸಿದನು. ನಾಲ್ಕು ವರ್ಣಗಳು ಸೇರದೆ ಪ್ರತೇಕ ಪ್ರತ್ಯೇಕವಾಗಿರುವಂತೆ ಮಾಡಿದನು. ಹೈಹಯ ವಂಶದ ಕಾರ್ತವೀರ್ಯಾರ್ಜುನನಿಗೆ ಈ ವರಗಳನ್ನಿತ್ತನು.

## ಕಾರ್ತವೀರ್ಯನಿಗೆ ವರದಾನ

**ಏತದ್ ಬಾಹುದ್ವಯಂ ಯತ್ತೇ ಮೃಧೇ ಮಮ ಕೃತೇಽನಘ ।**
**ಶತಾನಿ ದಶ ಬಾಹೂನಾಂ ಭವಿಷ್ಯಂತಿ ನ ಸಂಶಯಃ ॥ 44 ॥**
**ಪಾಲಯಿಷ್ಯಸಿ ಕೃತ್ಸ್ನಾ ಚ ವಸುಧಾಂ ವಸುಧಾಧಿಪ ।**
**ದುರ್ನಿರೀಕ್ಷೋಽರಿ ವೃಂದಾನಾಂ ಧರ್ಮಜ್ಞಶ್ಚ ಭವಿಷ್ಯಸಿ ॥ 45 ॥**

ಕಾರ್ತವೀರ್ಯನೇ, ನಿನಗಿರುವ ಎರಡು ತೋಳುಗಳು ಯುದ್ಧ ಕಾಲದಲ್ಲಿ ಸಾವಿರ ತೋಳುಗಳಾಗುವುವು. ಈ ಸಮಗ್ರ ಭೂಮಂಡಲವನ್ನು

ಪರಿಪಾಲಿಸುವೆ. ಶತ್ರುಗಳು ನಿನ್ನನ್ನು ನೋಡಲು ಅಸಮರ್ಥರಾಗುವರು. ಧರ್ಮಮರ್ಮವೇತ್ತನೂ ಆಗಿರುತ್ತಿ ಎಂದು ವರವನ್ನಿತ್ತನು.

### ಪರಶುರಾಮಾವತಾರ

**ಭೂಯಶ್ಚ ಜಾಮದಗ್ನ್ಯೋಽಯಂ ಪ್ರಾದುರ್ಭಾವೋ ಮಹಾತ್ಮನಃ ।**
**ಯತ್ರ ಬಾಹು ಸಹಸ್ರೇಣ ವಿಸ್ಮಿತಂ ದುರ್ಜಯಂ ರಣೇ ॥ 46 ॥**

**ರಾಮೋಽರ್ಜುನ ಮನೀಕಸ್ಥಂ ಜಘಾನ ನೃಪತಿಂ ಪ್ರಭುಃ ।**
**ರಥಸ್ಥಂ ಪಾರ್ಥಿವಂ ರಾಮಃ ಪಾತಯಿತ್ವಾಽರ್ಜುನಂ ಭುವಿ ॥ 47 ॥**

**ಧರ್ಷಯಿತ್ವಾ ಯಥಾಕಾಮಂ ಕ್ರೋಶಮಾನಂ ಚ ಮೇಘವತ್ ।**
**ಕೃತ್ಸ್ನಂ ಬಾಹುಸಹಸ್ರಂ ಚ ಚಿಚ್ಛೇದ ಭೃಗುನಂದನಃ ॥ 48 ॥**

**ತ್ರಿಸ್ಸಪ್ತಕೃತ್ವಃ ಪೃಥಿವೀ ತೇನ ನಿಃ ಕ್ಷತ್ರಿಯಾ ಕೃತಾ ।**
**ಸರ್ವಪಾಪ ವಿನಾಶಾಯ ವಾಜಿಮೇಧೇನ ಚೇಷ್ಟವಾನ್ ॥ 49 ॥**

**ತಸ್ಮಿನ್ ಯಜ್ಞೇ ಮಹಾದಾನೇ ದಕ್ಷಿಣಾಂ ಭೃಗುನಂದನಃ ।**
**ಮಾರೀಚಾಯ ದದೌ ಪ್ರೀತಃ ಕಶ್ಯಪಾಯ ವಸುಂಧರಾಮ್ ॥ 50 ॥**

ಶ್ರೀಹರಿಯು ಜಮದಗ್ನಿಯು ಮಗನಾದ ಪರಶುರಾಮ ಅವತರಿಸಿದನು. ಮಹಾವಿಷ್ಣುವಿನ ಈ ಅವತಾರದಲ್ಲಿ ಅವನು ದತ್ತಾತ್ರೇಯನ ಪ್ರಸಾದದಿಂದ ಯುದ್ಧದಲ್ಲಿ ಸಾವಿರ ತೋಳುಗಳನ್ನು ಪಡೆದು ಅತಿಗರ್ವಿತನಾಗಿದ್ದ, ಯುದ್ಧದಲ್ಲಿ ಯಾರಿಂದಲೂ ಜಯಿಸಲು ಅಸಾಧ್ಯನಾಗಿದ್ದ ಕಾರ್ತವೀರ್ಯನನ್ನು ರಣರಂಗದಲ್ಲಿ ಸಂಹಾರ ಮಾಡಿದನು.

ಕಾರ್ತವೀರ್ಯನು ರಥದಲ್ಲಿ ಕುಳಿತಿದ್ದನು. ಜ್ಞಾತಿ ಬಾಂಧವರೊಡನೆ ಯುದ್ಧಕ್ಕೆ ಸಿದ್ಧನಾಗಿ ಬಂದಿದ್ದನು. ಅವನನ್ನು ರಥದಿಂದ ಕೆಳಕ್ಕೆ ಎಳೆದು ಹಾಕಿ ಅವನ ಎದೆಯ ಮೇಲೆ ಕುಳಿತು, ಮೇಘ ಗಂಭೀರ ನಾದ ಮಾಡುತ್ತಾ, ಅರ್ಜುನನ ಸಾವಿರ ಬಾಹುಗಳನ್ನು ಸೌತೆಕಾಯಿಯಂತೆ ಕತ್ತರಿಸಿ ಹಾಕಿದನು. ಮುಂದೆ ದುಷ್ಟಕ್ಷತ್ರಿಯ ರಾಜರನ್ನೆಲ್ಲ ಕೊಂದು ಹಾಕಿದನು. ರಾಜಮಹಾರಾಜರ ದೇಹಗಳಿಂದ ಭೂಮಂಡಲ ತುಂಬಿಸಿ, ಬ್ರಾಹ್ಮಣರ ಸಂಖ್ಯೆ ಹೆಚ್ಚಿಸಿದನು. ಇದರಿಂದ ಪಾಪಬಂದಂತೆ ನಟಿಸಿ, ಅಶ್ವಮೇಧಯಾಗ ಮಾಡಿ ಪ್ರಾಯಶ್ಚಿತ್ತ ಮಾಡಿಕೊಂಡು ಯಾವುದೇ ಪಾಪ ಮಾಡಿದರೂ ಪ್ರಾಯಶ್ಚಿತ್ತ ಮಾಡಿಕೊಳ್ಳಿರಿ

ಎಂಬ ನೀತಿಯನ್ನು ತೋರಿಸಿದರಷ್ಟೆ. ಪ್ರಲಯದಲ್ಲಿ ಬ್ರಹ್ಮಾದಿ ದೇವತೆಗಳನ್ನೆ ನಾಶ ಮಾಡುವ ಭಗವಂತನಿಗೆ ಪಾಪವೆಲ್ಲಿದೆ?

ಪ್ರಾಯಶ್ಚಿತ್ತ ಮಾತ್ರದಿಂದ ಸಂಪೂರ್ಣ ಪಾಪನಾಶವಾಗದಿರಬಹುದು. ಅದಕ್ಕಾಗಿ ಮಹಾದಾನವನ್ನು ಮಾಡಿರಿ ಎಂದು ತಿಳಿಸಲು, ಕಶ್ಯಪರಿಗೆ ತಾನು ಗೆದ್ದ ಭೂಮಿಯನ್ನೇ ದಾನ ಮಾಡಿದನು.

ಪರಶುರಾಮನು ಅಶ್ವಮೇಧ ಮಹಾಯಜ್ಞದಲ್ಲಿ ವೇಗವಾಗಿ ಹೋಗುವ ವರುಣನ ಸಂಬಂಧಿ ಕುದುರೆಗಳನ್ನೂ, ರಥವನ್ನೂ, ಅಕ್ಷಯವಾದ ಚಿನ್ನದ ರಾಶಿಯನ್ನೂ ಸಾವಿರಾರು ಗೋವುಗಳನ್ನು, ಆನೆಗಳನ್ನೂ ದಾನ ಮಾಡಿದನು.

### ಲೋಕಹಿತಕ್ಕಾಗಿ ಪರಶುರಾಮನ ತಪಸ್ಸು

**ಅದ್ಯಾಪಿ ಚ ಹಿತಾರ್ಥಾಯ ಲೋಕಾನಾಂ ಭೃಗುನಂದನಃ ।**
**ಚರಮಾಣಸ್ತಪೋ ದೀಪ್ತಂ ಜಾಮದಗ್ನ್ಯಃ ಪುನಃ ಪುನಃ ॥ 51 ॥**
**ತಿಷ್ಠತೇ ದೇವವದ್ ಧೀಮಾನ್ ಮಹೇಂದ್ರೇ ಪರ್ವತೋಪಮೇ ।**
**ಏಷ ವಿಷ್ಣೋಃ ಸುರೇಶಸ್ಯ ಶಾಶ್ವತಸ್ಯಾವ್ಯಯಸ್ಯ ಚ ॥ 52 ॥**
**ಜಾಮದಗ್ನ್ಯಃ ಇತಿ ಖ್ಯಾತಃ ಪ್ರಾದುರ್ಭಾವೋ ಮಹಾತ್ಮನಃ ॥ 53 ॥**

ಪರಶುರಾಮನು ಈಗಲೂ ಜಗತ್ತಿಗೆ ಹಿತವನ್ನುಂಟು ಮಾಡುವ ಸಲುವಾಗಿ ಜಾಮದಗ್ನ್ಯನು ತೀವ್ರವಾದ ತಪಸ್ಸನ್ನು ಮಾಡುತ್ತಾ ಮಹೇಂದ್ರ ಪರ್ವತದಲ್ಲಿ ಚಿರಂಜೀವಿಯಾಗಿ ವಾಸ ಮಾಡುತ್ತಿದ್ದಾರೆ.

ಜನಮೇಜಯನೇ, ಸಮಸ್ತ ದೇವತಾಸ್ವಾಮಿಯಾದ ಸನಾತನನೂ ಅವಿನಾಶಿಯೂ ಆಗಿರುವ ವಿಷ್ಣುವಿನ ಪರಶುರಾಮಾವತಾರದ ಕಥೆಯು.

### ಶ್ರೀರಾಮಾವತಾರ

**ಚತುರ್ವಿಂಶೇ ಯುಗೇ ಚಾಪಿ ವಿಶ್ವಾಮಿತ್ರ ಪುರಸ್ಸರಃ ।**
**ರಾಜ್ಞೋ ದಶರಥಸ್ಯಾಥ ಪುತ್ರಃ ಪದ್ಮಾಯಿತೇಕ್ಷಣಃ ॥ 54 ॥**
**ಕೃತ್ವಾತ್ಮಾನಂ ಮಹಾಬಾಹುಃ ಚತುರ್ಧಾ ಪ್ರಭುರೀಶ್ವರಃ ।**
**ಲೋಕೇ ರಾಮ ಇತಿ ಖ್ಯಾತಃ ತೇಜಸಾ ಭಾಸ್ಕರೋಪಮಃ ॥ 55 ॥**

**ಪ್ರಸಾದನಾರ್ಥಂ ಲೋಕಸ್ಯ ರಕ್ಷಸಾಂ ನಿಧನಾಯ ಚ ।**
**ಧರ್ಮಸ್ಯ ಚ ವಿವೃದ್ಧ್ಯರ್ಥಂ ಜಜ್ಞೇ ತತ್ರ ಮಹಾಯಶಾಃ ॥ 56 ॥**

ಮನ್ವಂತರದಲ್ಲಿ ಕೃತ ತ್ರೇತಾದಿ ಚತುರ್ಯುಗಗಳು ಎಪ್ಪತ್ತೊಂದು ಇರುತ್ತವೆ. ಇವುಗಳಲ್ಲಿ ಇಪ್ಪತ್ತನಾಲ್ಕನೇ ಆವೃತ್ತಿಯ ತ್ರೇತಾಯುಗದಲ್ಲಿ ಶ್ರೀರಾಮನಾಗಿ ಅವತರಿಸಿದನು. ಕಮಲಾಯತೇಕ್ಷಣ ಪುಂಡರೀಕಾಕ್ಷನು ದಶರಥನ ಪುತ್ರನಾಗಿ ಅವತರಿಸಿದನು. ತನ್ನದೆ ಆದ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧಗಳೆಂಬ ನಾಲ್ಕು ರೂಪಗಳಲ್ಲಿ ವಾಸುದೇವನೇ ಶ್ರೀರಾಮನಾಗಿಯೂ, ಉಳಿದ ಲಕ್ಷ್ಮಣಾದಿಗಳಲ್ಲಿ ತನ್ನ ರೂಪ ಆವೇಶಗೊಳಿಸಿ ಜಗತ್ತಿನ ರಕ್ಷಣೆ ಮಾಡಿದನು. ಸೂರ್ಯವಂಶದಲ್ಲಿ ಸೂರ್ಯಪ್ರಕಾಶ ತೇಜಸ್ಸಿನಿಂದ ಕೂಡಿ ಅವತರಿಸಿದನು. ಶ್ರೀರಾಮದೇವನಾಗಿ ಅವತರಿಸಿದ ಉದ್ದೇಶವಾದರೂ ಶಿಷ್ಟರ ರಕ್ಷಣೆಗಾಗಿ ದುಷ್ಟರ ನಿಗ್ರಹಕ್ಕಾಗಿ ಈ ಶ್ರೀರಾಮನ ಅವತಾರವಾಗಿದೆ. ತನ್ನ ಧರ್ಮಾಚರಣೆಯಿಂದಾಗಿ ಧರ್ಮವೃದ್ಧಿಯನ್ನುಂಟು ಮಾಡಿದನು.

## ವಿಶ್ವಾಮಿತ್ರನಿಂದ ಅಸ್ತ್ರ ಪ್ರಾಪ್ತಿ

**ಯಸ್ಮೈ ದತ್ತಾನಿ ಚಾಸ್ತ್ರಾಣಿ ವಿಶ್ವಾಮಿತ್ರೇಣ ಧೀಮತಾ ।**
**ವಧಾರ್ಥಂ ದೇವಶತ್ರೂಣಾಂ ದುರ್ಧರಾಣಿ ಸುರೈರಪಿ ॥ 57 ॥**

**ಯಜ್ಞ ವಿಘ್ನಕರೋ ಯೇನ ಮುನೀನಾಂ ಭಾವಿತಾತ್ಮನಾಮ್ ।**
**ಮಾರೀಚಶ್ಚ ಸುಬಾಹುಶ್ಚ ಬಲೇನ ಬಲಿನಾಂ ವರೌ ॥ 58 ॥**

ಶ್ರೀವಿಷ್ಣುವಿನ ಅವತಾರನಾದ ಶ್ರೀರಾಮನನ್ನು ದುಷ್ಟನಿಗ್ರಹಕ್ಕಾಗಿ ವಿಶ್ವಾಮಿತ್ರನು ಕರೆದುಕೊಂಡು ಹೋಗಿ, ತಾನು ವಸಿಷ್ಠರ ನಿಗ್ರಹಕ್ಕಾಗಿ ಸಂಪಾದಿಸಿದ ಅಸ್ತ್ರಶಸ್ತ್ರಗಳನ್ನು ಲೋಕೋಪಕಾರಕ್ಕಾಗಿ ಶ್ರೀರಾಮನಿಗೆ ಒಪ್ಪಿಸಿದನು. ಶ್ರೀರಾಮದೇವನೂ ಋಷಿಯನ್ನು ಅನುಗ್ರಹಿಸಿಲೆಂದೆ ಅಸ್ತ್ರಶಸ್ತ್ರ ಸ್ವೀಕರಿಸಿದನು. ಅಸುರಮೋಹನ ಕಾರ್ಯದಲ್ಲಿ ವಿಶ್ವಾಮಿತ್ರರನ್ನೂ ಪಾತ್ರವನ್ನಾಗಿಸಿದ. ದಾರಿಯಲ್ಲಿ ಸುಕೇತುವಿನ ಪುತ್ರಿಯೂ ನಾಗಾಯುತ ಬಲಸಂಪನ್ನಳೂ ಆದ ತಾಟಿಕೆಯನ್ನೂ ಸಂಹರಿಸಿದನು. ಇವಳಿಗೆ ಸುಂದದೈತ್ಯನಿಂದ ಹುಟ್ಟಿದವನೇ ಮಾರೀಚ ಮಹಾನೀಚ. ಇನ್ನೊಬ್ಬ ದೈತ್ಯ ಸುಬಾಹು. ವಿಶ್ವಾಮಿತ್ರರ ಯಜ್ಞಕ್ಕೆ ಇಬ್ಬರೂ ತೊಂದರೆ ನೀಡುತ್ತಿದ್ದರು. ರಾಮನು ಯಜ್ಞದ ಆರನೇ ದಿನದಂದು ಸುಬಾಹುವನ್ನು ಕೊಂದು ಹಾಕಿದ. ಸುಬಾಹುವನ್ನು ಕೊಂದ ನಂತರ

ವಾಯುವ್ಯಾಸ್ತ್ರದಿಂದ ಅಭಿಮಂತ್ರಿತ ಬಾಣದಿಂದ ಮಾರೀಚನನ್ನು ನೂರು ಯೋಜನ ದೂರಕ್ಕೆಸೆದು ಮುಂದೆ ಅವನನ್ನು ಕೊಂದು ಹಾಕಿದ.

### ಸೀತಾ ಕಲ್ಯಾಣ

**ವರ್ತಮಾನೇ ಮುಖೇ ಯೇನ ಜನಕಸ್ಯ ಮಹಾತ್ಮನಃ ।**
**ಭಗ್ನಂ ಮಾಹೇಶ್ವರಂ ಚಾಪಂ ಕ್ರೀಡತಾ ಲೀಲಯಾ ಪುರಾ ॥ 59 ॥**

ಇದೇ ಸಮಯದಲ್ಲಿ ಜನಕನು ತನ್ನ ಪುತ್ರಿ ಸೀತಾದೇವಿಯ ಸ್ವಯಂವರವನ್ನು ಘೋಷಿಸಿದ್ದ. ವಿಶ್ವಾಮಿತ್ರರು ರಾಮನೊಂದಿಗೆ ಅಲ್ಲಿಗೆ ಬಂದರು. ದಾರಿಯಲ್ಲಿ ಅಹಲ್ಯೆಯನ್ನುದ್ಧಾರ ಮಾಡಿ ಗೌತಮನೊಂದಿಗೆ ಸೇರಿಸಿದ. ಮುಂದೆ ವಿದೇಹಕ್ಕೆ ಪ್ರಯಾಣ ಮಾಡಿ ಸ್ವಯಂಕರಕ್ಕಾಗಿ ತಂದಿರಿಸಿದ್ದ ಶೇಷನ ಶರೀರದಂತಿರುವ ಮಾಹೇಶ್ವರ ಧನಸ್ಸನ್ನು ಎಡಗೈಯಿಂದ ಅನಾಯಾಸವಾಗಿ ಎತ್ತಿ ಹಸನ್ಮುಖದಿಂದಲೇ ಹೆದೆ ಏರಿಸುವನು. ಇಂದ್ರನ ಐರಾವತಕ್ಕೆ ಕಬ್ಬಿನಜೆಲ್ಲೆ ಲೆಕ್ಕಕ್ಕಿದೆಯೇ? ಮಧ್ಯದಲ್ಲಿ ಮುರಿದುಬಿತ್ತು.

### ಹದಿನಾಲ್ಕು ವರ್ಷ ವನವಾಸ

**ಯಃ ಸಮಾಃ ಸರ್ವಧರ್ಮಜ್ಞಃ ಚತುರ್ದಶ ವನೇಽವಸತ್ ।**
**ಲಕ್ಷ್ಮಣಾನುಚರೋ ರಾಮಃ ಸರ್ವಭೂತೇ ಹಿತಃ ॥ 60 ॥**
**ರೂಪಿಣೀ ಯಸ್ಯ ಪಾರ್ಶ್ವಸ್ಥಾ ಸೀತೇತಿ ಪ್ರಥಿತಾ ಜನೈಃ ।**
**ಪೂರ್ವೋಚಿತಾ ತಸ್ಯ ಲಕ್ಷ್ಮೀಃ ಭರ್ತಾರಮನುಗಚ್ಛತಿ ॥ 61 ॥**

ಸಮಸ್ತ ಧರ್ಮದ ಮರ್ಮ ತಿಳಿದ ರಾಮನು ಋಷಿಮುನಿಗಳ ಸರ್ವಪ್ರಾಣಿಗಳ ಹಿತ ಬಯಸಿಯೇ ಕೈಕೇಯಿಯ ನೆಪದಲ್ಲಿ ವನವಾಸ ಕೈಗೊಂಡ. ಹದಿನಾಲ್ಕು ವರ್ಷ ಅರಣ್ಯದಲ್ಲಿ ತಮ್ಮನೊಂದಿಗೆ ಸುತ್ತಿ ತ್ರಿಶಿರ, ದೂಷಣ, ಖರಾದಿ ದೈತ್ಯವರ್ಯರನ್ನು ಕೊಂದು ಹಾಕಿದನು. ಸಾಕ್ಷಾತ್ ಲಕ್ಷ್ಮೀದೇವಿಯೇ ಸೀತಾರೂಪದಿಂದ ಅವನ ಪಾರ್ಶ್ವದಲ್ಲಿದ್ದಳು. ಕಾಡಿನಲ್ಲಿಯೂ ಪತಿಯನ್ನೆ ಅನುಸರಿಸಿ ಹೋಗುತ್ತಿದ್ದಳು. ಶ್ರೀರಾಮನು ತಂದೆಯ ವಾಕ್ಯ ಪೂರೈಸಲು ಹೊರಟಾದ್ದಾದರೂ ದೇವತೆಗಳ ಕಾರ್ಯವಾದ ದಶಗ್ರೀವ ವಧಾರ್ಥಕ್ಕೆ ಹೊರಟದ್ದು.

**ಚತುರ್ದಶ ತಪಸ್ತಪ್ತ್ವಾ ವನೇ ವರ್ಷಾಣಿ ರಾಘವಃ ।**
**ಜನಸ್ಥಾನೇ ವಸನ್ ಕಾರ್ಯಂ ತ್ರಿದಶಾನಾಂ ಚಕಾರ ಹ ॥ 62 ॥**
**ವಿರಾಧಂ ಚ ಕಬಂಧಂ ಚ ರಾಕ್ಷಸೌ ಭೀಮವಿಕ್ರಮೌ ॥ 63 ॥**

ವನವಾಸವೆಂಬ ತಪಸ್ಸಿನಲ್ಲಿ ಶರಭಂಗಾನುಗ್ರಹ, ವಿರಾಧೋದ್ಧಾರ, ಶೂರ್ಪಣಖಾಭಂಗ, ಮಯಾವೇಷದ ಮಾರೀಚನನ್ನು ಸಂಹಾರ ಮಾಡಿದನು. ಈ ಮಧ್ಯದಲ್ಲಿ ಸೀತೆಯ ಪ್ರತಿಕೃತಿ ಅಪಹರಿಸಿದ. ಸೀತೆಯ ಜಾಡನ್ನು ಹುಡುಕುಲು ಲಕ್ಷ್ಮಣನೊಂದಿಗೆ ಹೊರಟಾಗ ಶಾಪಗ್ರಸ್ತರಾದ ಶಾಪದಿಂದಾಗಿ ಈ ದೈತ್ಯವೇಷದಲ್ಲಿದ್ದ ಕಬಂಧ ಹಾಗೂ ವಿರಾಧರನ್ನು ಉದ್ಧರಿಸಿದನು. ತುಂಬುರುವು ಕುಬೇರ ಶಾಪದಿಂದ ವಿರಾಧನಾಗಿದ್ದರೆ ವಿಶ್ವಾವಸು ಶಾಪದಿಂದ ದನುರಾಕ್ಷಸನಾಗಿ ವಜ್ರಾಯುಧದಿಂದ ಕುಂಚಿತದೇಹವುಳ್ಳವನಾಗಿದ್ದ. ಶಬರಿಯು ಶಚಿ ಶಾಪದಿಂದ ನೈಷಾದಿಯಾಗಿದ್ದು ರಾಮನಲ್ಲಿನ ಭಕ್ತಿಯಿಂದಾಗಿ ಅವಳನ್ನು ಉದ್ಧರಿಸಿದ.

## ಸುಗ್ರೀವಸಖ್ಯ

**ಸುಗ್ರೀವಸ್ಯ ಕೃತೇ ಯೇನ ವಾನರೇಂದ್ರೋ ಮಹಾಬಲಃ ।**
**ವಾಲೀ ವಿನಿಹತೋ ಯುದ್ಧೇ ಸುಗ್ರೀವಶ್ಚಾಭಿಷೇಚತಃ ॥ 64 ॥**

ಶ್ರೀರಾಮನ-ಲಕ್ಷ್ಮಣರು ಶಬರಿಯ ಮಾತಿನಂತೆ ಸುಗ್ರೀವನೊಂದಿಗೆ ಸಖ್ಯ ಮಾಡಿಕೊಂಡು, ಸುಗ್ರೀವನ ಸಖ್ಯ ಶ್ರೀರಾಮನಿಗೇನೂ ಬೇಕಾಗಿಲ್ಲ. ಭಕ್ತ ಸುಗ್ರೀವನನ್ನು ಅನುಗ್ರಹಿಸುವುದಕ್ಕಾಗಿ ಈ ಸಖ್ಯ. ಸುಗ್ರೀವನ ಸಂದೇಹ ಪರಿಹರಿಸಿ ಅಣ್ಣ ವಾಲಿಯನ್ನು ಸಂಹರಿಸಿ ಹನುಮತ್ಪೂಜಿತನಾದನು. ಸುಗ್ರೀವನಿಗೆ ಅಭಿಷೇಕ ಮಾಡಿದ.

ಚಾತುರ್ಮಾಸ್ಯ ಕಾಲ ಸುಗ್ರೀವನಿಗೆ ಸುಖಕ್ಕಾಗಿ ವಿಶ್ರಾಂತಿಗಾಗಿಯೂ, ಮಳೆಗಾಲದಲ್ಲಿ ಸೀತೆಯನ್ನು ಹುಡುಕುವುದು ಕಷ್ಟವಾಗಬಹುದೆಂದು ಮಾಲ್ಯವಂತ ಪರ್ವತದಲ್ಲಿದ್ದನು. ಭೋಗಾಸಕ್ತ ಸುಗ್ರೀವನಿಗೆ ಎಚ್ಚರಿಕೆ ನೀಡಿ, ಅವನು ನಾಲ್ಕು ದಿಕ್ಕಿಗೆ ಕಪಿಗಳನ್ನು ಕಳುಹಿಸಿದನು. ಹನುಮದಾದಿಗಳು ದಕ್ಷಿಣ ದಿಕ್ಕಿಗೆ ಹೋಗಿ ನೂರು ಯೋಜನ ಹಾರಿ ಅಕ್ಷಾದಿಗಳನ್ನು ಯಮಕ್ಷಯಕ್ಕೆ ಕಳುಹಿಸಿ ಸೀತಾಸಂದೇಶಹಾರಕನಾದ ಹನುಮನಿಗೆ ತನ್ನನ್ನೆ ನೀಡಿ ಆಲಂಗಿಸಿದನು.

## ಲಂಕೆಗೆ ಲಗ್ಗೆ

ರಾವಣನ ಲಂಕೆಗೆ ಸೈನ್ಯಸಹಿತ ಸೇತು ಬಂಧಿಸಿ ಲಂಕೆಗೆ ಹೋಗಿ ಸೇರಿದನು. 36 ಕೋಟಿ ಕಪಿ ಸೇನಾನಾಯಕರು ಇಂದ್ರಜಿತ್ತು ಪ್ರಹಸ್ತ, ವಜ್ರದಂಷ್ಟ್ರಾದಿಗಳಿಂದ ಕೂಡಿ ಯುದ್ಧ ಮಾಡಿ ಅವರನ್ನು ಕೊಂದು ಹಾಕಿದರು.

**ದೇವಾಸುರ ಗಣಾನಾಂ ಹಿ ಯಕ್ಷಗಂಧರ್ವಭೋಗಿನಾಮ್ ।**
**ಅವಧ್ಯಂ ರಾಕ್ಷಸೇಂದ್ರಂ ತಂ ರಾವಣಂ ಯುದ್ಧ ದುರ್ಮದಮ್ ॥ 65 ॥**
**ಯುಕ್ತಂ ರಾಕ್ಷಸಕೋಟೀಭಿಃ ನೀಲಾಂಜನ ಚಯೋಪಮಮ್ ।**
**ತ್ರೈಲೋಕ್ಯ ರಾವಣಂ ಘೋರಂ ರಾವಣಂ ರಾಕ್ಷಸೇಶ್ವರಮ್ ॥ 66 ॥**

ರಾವಣನಾದರೂ ದೇವಾಸುರ ಯಕ್ಷ ಗಂಧರ್ವನಾಗರಿಂದ ಅವಧ್ಯನಾಗಿದ್ದನು. ಅನೇಕ ಯುದ್ಧ ಮಾಡಿ ಜಯಗಳಿಸಿ ದುರಹಂಕಾರಿಯಾಗಿ ಕೊಬ್ಬಿದ್ದನು. ನೀಲಾಂಜನ ಪರ್ವತೋಪಯನಾಗಿದ್ದ ತ್ರೈಲೋಕವನ್ನು ಅಳಸಿದ್ದ ಈ ರಾವಣನನ್ನು ಬ್ರಹ್ಮಾದಿ ವರದಿ ದಾನದಿಂದ ದರ್ಪಿಷ್ಟನಾಗಿದ್ದ ಅವನನ್ನು, ಸುತ್ತಲೂ ಬಾಣಗಳಿಂದ ಕತ್ತಲು ಕವಿಸಿದ. ಕೊಲ್ಲದೆ 'ನಾಳೆ ಸಾಯಲು ಬಾ' ಎಂದ.

### ಕುಂಭಕರ್ಣ ಎಚ್ಚರಿಕೆ

ಸೋತು ಸುಣ್ಣದಂತಾದ ರಾವಣನು ಮಂತ್ರಿಗಳೊಂದಿಗೆ ಚಿಂತಿಸಿ ಕುಂಭಕರ್ಣನನ್ನು ಎಬ್ಬಿಸುವುದೇ ಯೋಗ್ಯವೆಂದು ಅವನನ್ನು ಅನೇಕ ಪ್ರಯತ್ನಗಳಿಂದ ಎಬ್ಬಿಸಿದರು. ಗಿರಿಶೃಂಗಾದಿ ಸಹಿತರಾದ ಅನೇಕಾಯುಧಗಳಿಂದ ಹೊಡೆದುಬಡೆದರೂ ಗಾಯವೂ ಆಗದ ವಜ್ರಕಾಯ ಕುಂಭಕರ್ಣನನ್ನು ಬಾಣಗಳಿಂದ ತುಂಡಿರಿಸಿ ಮಹಾಪರಾಕ್ರಮ ತೋರಿದ. ರಾವಣನು 36 ಮಹೌಘ ಸಂಖ್ಯೆಯ ಸೈನ್ಯ ಸಹಿತ ಹೊರಟ (1 ಪಕ್ಕದಲ್ಲಿ 70 ಸೊನ್ನೆ = ಮಹೌಘ x 36 ರಷ್ಟು)

ವಿರೂಪನೇತ್ರ ಯೂಪನೇತ್ರ ಮಹಾಪಾರ್ಶ್ವ ಮಹೋದರ ಮಂತ್ರಿಗಳೂ ಸುತ್ತುವರೆದು ಹೊರಟರು. ಅವರನ್ನೆಲ್ಲ ಕೊಂದು ಹಾಕಿದ. ರಾಮ-ರಾವಣಯುದ್ಧ ನಡೆಯಿತು. ಅವನ ಹತ್ತು ತಲೆಗಳನ್ನು ಏಕಕಾಲದಲ್ಲಿ ಕತ್ತರಿಸಿ ಹಾಕಿದ. ತಲೆಗಳು ಪುನಃ ಮೂಡಿಬಂದವು. ವಜ್ರಾಯುಧ ಸದೃಶವಾದ ರಾವಣನ ಎದೆಯನ್ನು ಸೀಳ ಹಾಕಿದ. ರಾವಣನು ಸತ್ತು ಬಿದ್ದ.

## ಮಧುದೈತ್ಯನಾಶ

**ಮಧೋಶ್ಚ ತನಯೋ ದೃಪ್ತೋ ಲವಣೋನಾಮ ದಾನವಃ ।**
**ಹತೋ ಮಧುವನೇ ವೀರೋ ವರದೃಪ್ತೋ ಮಹಾಸುರಃ ॥ 67 ॥**

ಲವಣಾಸುರನು ಮಧುದಾನವ ಪುತ್ರ. ಶ್ರೀರಾಮಚಂದ್ರನು ಶತ್ರುಘ್ನನಿಂದ ಕೊಲ್ಲಿಸಿದ. ಮಧುಕೈಟಭರನ್ನು ಕೊಂದ ಬಾಣದಿಂದಲೇ ಕೊಂದದ್ದು ವಿಶೇಷ. ನಂತರ ಮಥುರಾಪುರೀ ನಿರ್ಮಾಣ ಅಸುರರನ್ನು ಭರತನಿಂದ ಕೊಲ್ಲಿಸಿದ.

## ಹತ್ತು ಅಶ್ವಮೇಧಯಾಗ

**ಏತಾನಿ ಕೃತ್ವಾ ಕರ್ಮಾಣಿ ರಾಮೋ ಧರ್ಮಭೃತಾಂ ವರಃ ।**
**ದಶಾಶ್ವ ಮೇಧಾನ್ ಜಾರೂಧ್ಯಾನ್ ಆಜಹಾರ ನಿರರ್ಗಲಾನ್ ॥ 68 ॥**

ಧರ್ಮಿಷ್ಠನಾದ ಶ್ರೀರಾಮಚಂದ್ರನು ಇಂತಹ ಅತ್ಯುದ್ಭುತವಾದ ಕಾರ್ಯಗಳನ್ನು ಮಾಡಿ ಮೂರುಪಟ್ಟು ದಕ್ಷಿಣೆಗಳನ್ನು ಋತ್ವಿಕ್ಕುಗಳಗೆ ನೀಡಿ ವೈಭವೋಪೇತವಾದ ಹತ್ತು ಅಶ್ವಮೇಧಯಾಗಗಳನ್ನು ನಡೆಸಿದ. ನಿರಂತರವಾಗಿ ನಡೆದ ಈ ಯಾಗ ಅಪೂರ್ವವಾಗಿತ್ತು.

## ರಾಮರಾಜ್ಯ ವೈಭವ

**ನಾಶ್ರೂಯಂತಾಶುಭಾ ವಾಚೋ ನಾಕುಲಂ ಮಾರುತೊ ವವೌ ।**
**ನ ವಿತ್ತ ಹರಣಂ ತ್ವಾಸೀದ್ ರಾಮೇ ರಾಜ್ಯಂ ಪ್ರಶಾಸತಿ ॥ 69 ॥**

**ಪರ್ಯದೇವನ್ ನ ವಿಧವಾಃ ನಾನರ್ಥಾಶ್ಚಾಭವಂಸ್ತದಾ ।**
**ಸರ್ವಮಾಸೀದ್ ಜಗದ್‌ದಾಂತಂ ರಾಮೇ ರಾಜ್ಯಂ ಪ್ರಶಾಸತಿ ॥ 70 ॥**

**ನ ಪ್ರಾಣಿನಾಂ ಭಯಂ ಚಾಪಿ ಜಲಾನಲ ನಿಘಾತಜಮ್ ।**
**ನ ಸ್ಮ ವೃದ್ಧಾಃ ಬಾಲಾನಾಂ ಪ್ರೇತಕಾರ್ಯಾಣಿ ಕುರ್ವತೇ ॥ 71 ॥**

**ನಾರ್ಯೋ ನಾತ್ಯಚರನ್ ಭರ್ತೄನ್ ಭಾರ್ಯಾಂ ನಾತ್ಯಚರತ್ ಪತಿಃ ।**
**ರಾಮೋ ಏಕೋಽಭವದ್ ಭರ್ತಾ ರಾಮಃ ಪಾಲಯಿತಾಽಭವತ್ ॥72 ॥**

ಶ್ರೀರಾಮನ ರಾಜ್ಯಭಾರದಲ್ಲಿ ಅಶುಭ ಅವಾಚ್ಯ ಶಬ್ಧಗಳನ್ನು ಯಾರೂ ಆಡುತ್ತಿದ್ದಿಲ್ಲ. ಕೇಳ ಬರುತ್ತಿದ್ದಿಲ್ಲ. ವಾಯುವು ಸುಖವಾಗಿ ಬೀಸುತ್ತಿದ್ದನು.

ಪ್ರಚಂಡವಾಯು ಬೀಸುತ್ತಿರಲಿಲ್ಲ. ವಿಧವೆಯರ ಕರುಣಾಪೂರ್ಣ ರೋದನವು ಎಂದೂ ಕೇಳ ಬರುತ್ತಿರಲಿಲ್ಲ. ರಾಮರಾಜ್ಯದಲ್ಲಿ ಕಳ್ಳತನ, ಸುಲಿಗೆ, ಕೊಲೆ, ಅನ್ಯಾಯ, ಭಯ, ಶತ್ರುಗಳ ಆಕ್ರಮಣ, ಅಕಾಲ ಮರಣ, ಪ್ರಾಣಿಭಯ, ಅಗ್ನಿಭಯ, ಚೋರಭಯ, ಜಲಗಂಡಗಳಿಂದ ಮರಣವಿರುತ್ತಿರಲಿಲ್ಲ. ವೃದ್ಧರೂ ಎಂದೂ ಚಿಕ್ಕವರಿಗೆ ಪ್ರೇತಕಾರ್ಯ ಶ್ರಾದ್ಧಗಳನ್ನು ಮಾಡುವ ಪ್ರಸಂಗವಿರಲಿಲ್ಲ. ಶ್ರೀರಾಮನ ರಾಜ್ಯಭಾರದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯಶೂದ್ರ ಜಾತಿಗಳಲ್ಲಿ ಕ್ಷತ್ರಿಯ ಬ್ರಾಹ್ಮಣರನ್ನೂ, ವೈಶ್ಯರು ಕ್ಷತ್ರಿಯರ ಸೇವೆಯನ್ನೂ, ಶೂದ್ರರು ವೈಶ್ಯರ ಹಾಗೂ ತ್ರೈವರ್ಣಿಕರ ಸೇವೆಯನ್ನು ಪ್ರೀತ್ಯದರಗಳಿಂದಲೇ ಮಾಡುತ್ತಿದ್ದರು. ಸೇವೆಯ ವಿಷಯದಲ್ಲಿ ಅಹಂಕಾರಾದಿಗಳನ್ನು ತೊರೆದು ಸೇವಿಸುತ್ತಿದ್ದರು.

ಸ್ತ್ರೀಯರು ತಮ್ಮ ಪತಿಯನ್ನು ತಿರಸ್ಕರಿಸಿದ ದೃಷ್ಟಾಂತಗಳಿದ್ದಿಲ್ಲ. ಇದೇ ರೀತಿ ಪತಿಗಳೂ ಸಹ ತಮ್ಮ ಪತ್ನಿಯನ್ನು ಬಿಟ್ಟು ಬೇರೆ ಸ್ತ್ರೀಯರಲ್ಲಿ ಅನುರಕ್ತರಾಗುತ್ತಿರಲಿಲ್ಲ. ಶ್ರೀರಾಮನ ಆಳ್ವಿಕೆಯಲ್ಲಿ ಭೂಮಿಯು ಗುಣದ ಹಿರಿಮೆಯಲ್ಲಿ ಬ್ರಹ್ಮಲೋಕಕ್ಕೆ ಸರಿಯೆನಿಸಿತ್ತು. ಪ್ರತಿಯೊಬ್ಬರೂ ವಿಷ್ಣುಭಕ್ತರೂ, ಧರ್ಮಹಾನಿಯೆಂಬುದು ಯಾರಿಗೂ ಇರಲಿಲ್ಲ. ಸಕಲರೋಗಾದಿಗಳಿಂದ ಮುಕ್ತರಾಗಿದ್ದರು. ರಾಮಚಂದ್ರನೊಬ್ಬನೆ ಸ್ವಾಮಿಯೂ, ಪಾಲಕನೂ ಆಗಿದ್ದನು.

**ಆಯುಃ ವರ್ಷ ಸಹಸ್ರಾಣಿ ತಥಾ ಪುತ್ರ ಸಹಸ್ರಿಣಃ ।**
**ಅರೋಗಾಃ ಪ್ರಾಣಿನಶ್ಚಾಸನ್ ರಾಮೇ ರಾಜ್ಯಂ ಪ್ರಶಾಸತಿ ॥ 73 ॥**

**ದೇವತಾನಾಂ ಋಷೀಣಾಂ ಚ ಮನುಷ್ಯಾಣಾಂ ಚ ಸರ್ವಶಃ ।**
**ಪೃಥಿವ್ಯಾಂ ಸಮವಾಯೋಽಭೂದ್ ರಾಮೇ ರಾಜ್ಯಂ ಪ್ರಶಾಪತಿ ॥ 74 ॥**

ಪ್ರಜೆಗಳ ಆಯುಸ್ಸು ಸಾವಿರ ವರ್ಷಗಳಷ್ಟು ದೀರ್ಘಕಾಲವಿತ್ತು. ಪ್ರಜೆಗಳೆಲ್ಲರೂ ಅನೇಕ ಸಂತಾನವುಳ್ಳವರಾಗಿದ್ದರು. ನಿಸ್ಸಂತಾನಿಯೊಬ್ಬನೂ ಇರಲಿಲ್ಲ. ರಾಮರಾಜ್ಯದಲ್ಲಿ ದೇವತೆಗಳು ಋಷಿಗಳು ಮನುಷ್ಯರೊಂದಿಗೆ ಸಮಾಗಮವಾಗುತ್ತಿತ್ತು. ಮನುಷ್ಯರು ಹಾಗೂ ಋಷಿಗಳೂ ದೇವಲೋಕಕ್ಕೂ ಹೋಗುವ ಸಾಮರ್ಥ್ಯ ಹೊಂದಿದ್ದರು. ಜನರೆಲ್ಲರೂ ದೈಹಿಕ ಹಾಗೂ ಆಧ್ಯಾತ್ಮಿಕವಾಗಿ ಬಲಿಷ್ಠರಾಗಿದ್ದರು. ಇಚ್ಛಾ ಮಾತ್ರದಿಂದ ಬಯಸಿದ್ದೆಲ್ಲವೂ ಲಭಿಸುತ್ತಿತ್ತು. ಸುಂದರರೂ ಸುರೂಪಿಗಳಿದ್ದರೆ ಹೊರತು ಕುರೂಪಿ ನೋಡಲು ಸಿಗುತ್ತಿರಲಿಲ್ಲ. ಮನಸ್ಸು, ಮಾತು ಶರೀರ ತ್ರಿಕರಣಗಳಿಂದಲೂ ವಿಷ್ಣುವೆ

ಆರಾಧ್ಯನಾಗಿದ್ದನು. ಧನಧಾನ್ಯಗಳ ಸಮೃದ್ಧಿ, ಗೋವುಗಳು ಅಧಿಕ ಪಪ್ಯವಾದ ಹಾಲನ್ನು ಸುರಿಸುತ್ತಿದ್ದವು. ದುಷ್ಟ ಸಂತಾನ ಯಾರಿಗೂ ಇರಲಿಲ್ಲ. ಕುಭಾರ್ಯೆವುಳ್ಳವರೂ ಇದ್ದಿಲ್ಲ.

## ಶ್ರೀರಾಮಗಾಥಾ

**ಗಾಥಾ ಅಪ್ಯತ್ರ ಗಾಯಂತಿ ಯೇ ಪುರಾಣವಿದೋ ಜನಾಃ ।**
**ರಾಮೇ ನಿಬದ್ಧ ತತ್ತ್ವಾರ್ಥಾಃ ಮಾಹಾತ್ಮ್ಯಂ ತಸ್ಯ ಧೀಮತಃ ॥ 75 ॥**

**ಶ್ಯಾಮೋ ಯುವಾ ಲೋಹಿತಾಕ್ಷೋ ದೀಪ್ತಾಸ್ಯೋ ಮಿತಭಾಷಿತಾ ।**
**ಆಜಾನುಬಾಹುಃ ಸುಮುಖಃ ಸಿಂಹಸ್ಕಂಧೋ ಮಹಾಭುಜಃ ॥ 76 ॥**

ರಾಮಚಂದ್ರನೇ ಸಾಕ್ಷಾತ್ತಾಗಿ ವಿಷ್ಣುವೆಂಬ ನಿಶ್ಚತ ತತ್ತ್ವಜ್ಞರಾದ ಪುರಾಣವೇತ್ತರು ಶ್ರೀರಾಮನ ಮಹಿಮೆಯನ್ನು ಹೀಗೆ ಹೇಳುವರು.

ಶ್ರೀರಾಮನು ನೀಲಮೇಘಶ್ಯಾಮಲನೂ, ಹದಿನಾರು ವರ್ಷದವನೂ, ನೇತ್ರಾಂತದಲ್ಲಿ ರಕ್ತಬಣ್ಣವನ್ನೂ, ದೇದೀಪ್ಯಮಾನ ಮುಖಮಂಡಲ-ಮುಡಿತನೂ, ಮಿತಭಾಷಿಯೂ, ಆಜಾನುದೋರ್ದಂಡಮಂಡಿತನೂ, ನಿಷ್ಕಲಂಕ ಚಂದ್ರಮಂಡಲನೂ ಸಿಂಹಸ್ಕಂಧನೂ ಮಹಾಭುಜನೂ ಆಗಿದ್ದನು.

**ದಶವರ್ಷ ಸಹಸ್ರಾಣಿ ದಶ ವರ್ಷಶತಾನಿ ಚ ।**
**ಅಯೋಧ್ಯಾಧಿಪತಿರ್ಭೂತ್ವಾ ರಾಮೋ ರಾಜ್ಯಮಕಾರಯತ್ ॥ 77 ॥**

ರಾಮಚಂದ್ರನು ಈ ಧರಣಿ ಮಂಡಲವನ್ನು ಹನ್ನೊಂದು ಸಾವಿರ ವರ್ಷಗಳ ಕಾಲ **ರಾಜ್ಯಭಾರ**[1] ಮಾಡಿದನು. ಶ್ರೀರಾಮನ ರಾಜ್ಯದಲ್ಲಿ ನಿರಂತರವೂ

---

1. **ರಾಮರಾಜ್ಯ ಎಷ್ಟು ವರ್ಷ? :**
   ರಾಮನು ಹನ್ನೊಂದು ಸಾವಿರ ವರ್ಷ ರಾಜ್ಯವಾಳಿದನೆಂದು ರಾಮಾಯಣ ಯುದ್ಧಕಾಂಡ (131-102)ದಲ್ಲಿ ಹೇಳಿದ್ದಾರೆ.
   ವಿಷ್ಣುಪುರಾಣದಲ್ಲಿ - **ಏಕಾದಶಾಬ್ದ ಸಾಹಸ್ರಂ ರಾಜ್ಯಮಕರೋತ್** - ಎಂದಿದೆ. ಭಾರತ ದ್ರೋಣಪರ್ವ (59-28)ರಲ್ಲಿ ಹರಿವಂಶದ ಶ್ಲೋಕವೆ ಇದೆ. ವನಪರ್ವ (150-18)ರಲ್ಲಿಯೂ ಹನುಮಂತನ ಮಾತಿದೆ. ಆದರೆ ಭಾಗವತದಲ್ಲಿ 9/9/18ರಲ್ಲಿ
   **ತ್ರಯೋದಶಾಬ್ಧ ಸಾಹಸ್ರಮಗ್ನಿಹೋತ್ರಮಖಂಡಿತಮ್** - ಎಂದು ಹದಿಮೂರು

ಋಗ್ವೇದಾದಿಗಳ ಪಾರಾಯಣ ನಡೆಯುತ್ತಿದ್ದವು. ಹಾಗೆ ಧನುಸ್ಸಿನ ಟೇಕಾರಶಬ್ಧವೂ ಇರುತ್ತಿತ್ತು. ದಾನ ಕೊಡಿರಿ ಎಂದು ಸೇವಕರಿಗೆ ಹೇಳುತಿದ್ದ ಮಾತೂ, ಯಥೇಚ್ಛಭೋಜನ ಮಾಡಿರಿ ಎಂದು ಅತಿಥಿಗಳಗೆ ಹೇಳುತ್ತಿದ್ದ ಮಾತುಗಳೂ ಅವಿಛನ್ನವಾಗಿ ಕೇಳಬರುತ್ತಿತ್ತು.

## ವೈಕುಂಠಯಾತ್ರೆ

**ಸತ್ವವಾನ್ ಗುಣಸಂಪನ್ನೊ ದೀಪ್ಯಮಾನಃ ಸ್ವತೇಜಸಾ ।**
**ಅತಿ ಚಂದ್ರಂ ಚ ಸೂರ್ಯಂ ಚ ರಾಮೋ ದಾಶರಥಿರ್ಭಭೌ ॥ 78 ॥**

**ಈಜೇ ಕ್ರತುಶತೈಃ ಪುಣ್ಯೈಃ ಸಮಾಪ್ತ ವರದಕ್ಷಿಣೈಃ ।**
**ಹಿತ್ವಾಽಯೋಧ್ಯಾಂ ದಿವಂ ಯಾತೋ ರಾಘವಃ ಸಮಹಾಬಲಃ ॥ 79 ॥**

**ಏವಮೇಷ ಮಹಾಬಾಹುಃ ಇಕ್ಷ್ವಾಕು ಕುಲನಂದನಃ ।**
**ರಾವಣಂ ಸಗಣಂ ಹತ್ವಾ ದಿವಮಾಚಕ್ರಮೇ ಪ್ರಭುಃ ॥ 80 ॥**

### ಸಮಾಯಾತ ಸಮಾಯಾತ

ಶ್ರೀರಾಮನು ಸೀತೆಯಲ್ಲಿ ಇಂದ್ರಾಗ್ನಿಗಳ ಅವತಾರ ಭೂತರಾದ ಕುಶ-ಲವರೆಂಬ ಕುಶಲರಾದ ಪುತ್ರರನ್ನು ಪಡೆದನು. ಹಾಗೆಯೆ ಪಾರ್ವತಿಯ ವರದಿಂದ ಕಲ್ಪಾಂತ ಆಯುಷ್ಯ ಪಡೆದು, ರುದ್ರನನ್ನು ಸಂಹರಿಸಿ, ರುದ್ರಪದವಿ

---

ಸಾವಿರ ವರ್ಷ ಎಂದಿದೆ. ಇವೆರಡರ ಅಭಿಪ್ರಾಯವೂ ಒಂದೇ. 360 ದಿನಗಳಿಗೆ ಒಂದು ವರ್ಷವೆಂದು ವ್ಯವಹರಿಸಿದಾಗ ಹನ್ನೊಂದು ಸಾವಿರ ವರ್ಷವೆಂದೂ, 327 ದಿನಕ್ಕೊಂದು ವರ್ಷ ತೆಗೆದುಕೊಂಡಾಗ ಹದಿಮೂರು ಸಾವಿರ ವರ್ಷವೆಂದು ತಿಳಿಯಬೇಕು. ಇದು ನಾಕ್ಷತ್ರಮಾಸ ಗಣನೆ.

**ನಾಕ್ಷತ್ರಮಾಸಗಣಿತಂ ತ್ರಯೋದಸಹಸ್ರಕಮ್** – *ಭಾ.ತಾ.*

327 x 27 = 324 ದಿನಗಳು = $\frac{13000 \times 324}{360}$ = 11700.

ಇಲ್ಲಿಯೂ ಸೀತೆಯೊಂದಿಗೆ 11 ಸಾವಿರ ವರ್ಷ ಸುಖವಾಗಿದ್ದ. ಸೀತೆಯು ಭೂಮಿಪ್ರವೇಶ ಮಾಡಿದ ಮೇಲೂ ಏಳನೂರು ವರ್ಷ ರಾಜ್ಯಭಾರ ಮಾಡಿದನೆಂದು ತಿಳಿಸುತ್ತದೆ.

**ಭೂಮಿ ಪ್ರವೇಶಾದೂರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ॥**

ಹೊಂದಿ, ಪಾರ್ವತಿಯನ್ನೆ ಅಪಹರಿಸಬೇಕೆಂಬ ದುರ್ಬುದ್ಧಿಯಿಂದ ತಪಸ್ಸನ್ನು ಮಾಡುತ್ತಿದ್ದ ಜಂಘನೆಂಬ ದೈತ್ಯನು, ಶಂಭೂಕನಾಗಿದ್ದನು. ಇವನ ತಪಸ್ಸು ದುರ್ಬುದ್ಧಿಯುಕ್ತವಾದ್ದರಿಂದ ಶ್ರೀರಾಮನು ಕೊಂದು ಹಾಕಿದನು. ಶ್ವೇತರಾಜನಿಂದ ಮಾಲೆ ಪಡೆದನು. ನಿತ್ಯಾವಿಯೋಗಿನಿಯಾದ ಸೀತೆಯನ್ನು ಪರಿತ್ಯಜಿಸಿದಂತೆ ನಾಟಕವಾಡಿದ. ಸಮವ್ಯಾಪ್ತಳೂ ನಿತ್ಯಾವಿಯೋಗಿನಿಯೂ ಆದ ಸೀತೆಯು ರಾಮನನ್ನು ಬಿಡುವುದೆಂದರೇನು? ಅಜ್ಞರಿಗೆ ಹಾಗೆ ಅನಿಸಿತು. ಅಶ್ವಮೇಧ, ಪೌಂಡರೀಕ, ವಾಜಪೇಯಾದಿ ಯಾಗಗಳನ್ನು ಮಾಡಿದ. ದುರ್ವಾಸರಿಗೆ ಅವನು ಕೇಳಿದ ಚತುರ್ವಿಧಾನ್ನ ನೀಡಿ ತೃಪ್ತಿಪಡಿಸಿದ. ತನ್ನ ಕಾರ್ಯ ಮುಗಿಯಿತೆಂದು ತಿಳಿದು ಮಹಾಪ್ರಸ್ಥಾನ ಹೊರಟ. ಕುಶನನ್ನು ರಾಜ್ಯದಲ್ಲಿ ಅಭಿಷೇಚಿಸಿದ. ಮೋಕ್ಷಕ್ಕೆ ಬರುವರೆಲ್ಲರೂ ಬನ್ನಿರಿ ಎಂದಾಗ ತೃಣದಿಂದಾರಂಭಿಸಿ ಪಿಪೀಲಿಕಾದಿ ಸಕಲ ಮುಕ್ತಿ ಯೋಗ್ಯರೂ ಅವನ ಹಿಂದೆ ಹೊರಟರು.

### ಜಾತಃ ಕಂಸಾದಿವಧಾರ್ಥಾಯ

*ವೈಶಂಪಾಯನ ಉವಾಚ –*

**ಅಪರಃ ಕೇಶವಸ್ಯಾಯಂ ಪ್ರಾದುರ್ಭಾವೋ ಮಹಾತ್ಮನಃ ।**
**ವಿಖ್ಯಾತೋ ಮಾಥುರೇ ಕಲ್ಪೇ ಸರ್ವಲೋಕ ಹಿತಾಯ ವೈ ॥ 81 ॥**

**ಯತ್ರ ಶಾಲ್ವಂ ಚ ಮೈಂದಂ ಚ ದ್ವಿವಿದಂ ಕಂಸಮೇವ ಚ ।**
**ಅರಿಷ್ಟ ಮೃಷಭಂ ಕೇಶಿಂ ಪೂತನಾಂ ದೈತ್ಯದಾರಿಕಾಮ್ ॥ 82 ॥**

**ನಾಗಂ ಕುವಲಯಾಪೀಡಂ ಚಾಣೂರಂ ಮುಷ್ಟಿಕಂ ತಥಾ ।**
**ದೈತ್ಯಾನ್ ಮಾನುಷ ದೇಹಸ್ಥಾನ್ ಸೂದಯಮಾಸ ವೀರ್ಯವಾನ್ ॥83॥**

ವೈಶಂಪಾಯನರು ಹೇಳುವರು – ರಾಜಾ ಜನಮೇಜಯನೇ ! ಮಾಥುರವೆಂಬ ಕಲ್ಪದಲ್ಲಿ ಕೇಶವನು ಮತ್ತೊಂದು ಅವತಾರವನ್ನೆತ್ತಿದನು. ಇದರಲ್ಲಿ ದುಷ್ಟರಾಗಿದ್ದು ಜಗತ್ತಿಗೆ ಕಂಟಕಪ್ರಾಯರಾಗಿದ್ದ ಸಾಲ್ವರಾಜ, ಮೈಂದ, ವಿವಿದ, ಕಂಸ, ಅರಿಷ್ಟಾಸುರ, ವೃಷಭಾಸುರ, ಕೇಶೀದೈತ್ಯ, ಪೂತನಾರಾಕ್ಷಸಿ, ಕುವಲಯಾಪೀಡವೆಂಬ ಆನೆಯನ್ನೂ, ಚಾಣೂರ–ಮುಷ್ಟಿಕರನ್ನೂ ಸಂಹಾರ ಮಾಡಿ ಭೂಭಾರವನ್ನಿಳುಹಿದನು. ಇದೇ ಕೃಷ್ಣಾವತಾರ.

ಶಿವನ ವರದೃಪ್ತ ಬಾಣಾಸುರನ ಸಾವಿರ ತೋಳುಗಳನ್ನು ಕತ್ತರಿಸಿ ಹಾಕಿದ. ನರಕಾಸುರನನ್ನು ಕೊಂದು ಕೆಡವಿದ. ಕಾಲಯವನನ್ನು ಕಾಲಯಮನ ಬಳಿ ಕಳುಹಿಸಿದ. ಸಮಸ್ತ ರಾಜರಲ್ಲಿ ಸೇರಿದ್ದ ಸಮಸ್ತ ಅಮೂಲ್ಯ ರತ್ನಗಳನ್ನು ತನ್ನ ವಶಮಾಡಿಕೊಂಡ. ಭೂಮಂಡಲಕ್ಕೆ ಒಂದು ದೊಡ್ಡ ಅರ್ಬುದ-ರೋಗದಂತಿದ್ದ ದುರಾಚಾರಿ ರಾಜಕುಲವನ್ನೆ ಸಂಹಾರ ಮಾಡಿದ.

## ವ್ಯಾಸಾವತಾರ - ಕಲ್ಕೀ

**ನವಮೇ ದ್ವಾಪರೇ ವಿಷ್ಣುಃ ಅಷ್ಟಾವಿಂಶೇ ಪುರಾಭವತ್ ।**
**ವೇದವ್ಯಾಸಸ್ತಥಾ ಜಜ್ಞೇ ಜಾತೂಕರ್ಣ್ಯಪುರಸ್ಸರಃ ॥ 84 ॥**
**ಏಕೋವೇದಃ ಚತುರ್ಧಾ ತು ಕೃತಸ್ತೇನ ಮಹಾತ್ಮನಾ ।**
**ಜನಿತೋ ಭಾರತೋ ವಂಶಃ ಸತ್ಯವತ್ಯಾಃ ಸುತೇನ ಚ ॥ 85 ॥**
**ಏತೇ ಲೋಕಹಿತಾರ್ಥಾಯ ಪ್ರಾದುರ್ಭಾವಾಃ ಮಹಾತ್ಮನಃ ॥ 86 ॥**

ವೈವಸ್ವತಮನ್ವಂತರದ ಇಪ್ಪತ್ತೆಂಟನೆಯ ದ್ವಾಪರದ ಕಡೆಯಲ್ಲಿ ಕೃಷ್ಣಾವತಾರಕ್ಕಿಂತ ಮೊದಲು ವ್ಯಾಸರು ಸತ್ಯವತೀ ಪರಾಶರರದಲ್ಲಿ ಕಾಣಿಸಿಕೊಂಡರು. ಹುಟ್ಟಿದ ಕೂಡಲೇ ಏಳು ವರ್ಷದವರಾದರು. ತಂದೆ ಉಪನಯನ ಮಾಡಿದರು. ಮೇರುವಿಗೆ ಹೊರಟರು. ಬ್ರಹ್ಮಾದಿ ದೇವತೆಗಳು, ಜಾತೂಕರ್ಣರೆ ಮೊದಲಾದವರು ಹಿಂಬಾಲಿಸಿದರು. ಮೂಲವೇದವೆನಿಸಿದ್ದ ವೇದಗಳನ್ನು ಉಪವೇದವನ್ನಾಗಿಯೂ, ಉಪವೇದಗಳನ್ನು ಇಪ್ಪತ್ತನಾಲ್ಕು, ನೂರೊಂದು, ಸಾವಿರ, ಹನ್ನೆರಡು ಅವಾಂತರ ವಿಭಾಗಗಳನ್ನಾಗಿಯೂ ಮಾಡಿದರು. ವೇದಾರ್ಥ ನಿರ್ಣಾಯಕ ಬ್ರಹ್ಮಸೂತ್ರವನ್ನೂ, ಸಮಸ್ತ ಶಾಸ್ತ್ರಾರ್ಥ ನಿದರ್ಶನವೆನಿಸಿದ ಮಹಾಭಾರತವನ್ನೂ ರಚಿಸಿದರು. ಭರತವಂಶವನ್ನು ಉದ್ಧರಿಸಿದರು. ಈ ಅವತಾರಗಳಗೆಲ್ಲ ಲೋಕಕ್ಕೆ ಹಿತವನ್ನು ಬಯಸುವುದು ಮಾತ್ರ ಹೊರತು ತನಗೆ ಯಾವುದೇ ಪ್ರಯೋಜನಾದಾಯಕವಾಗಿರುವುದಿಲ್ಲ.

ಸರ್ವಸಜ್ಜನ ಹಿತಕ್ಕಾಗಿ ಮುಂದೆಯೂ ಶ್ರೀಹರಿಯು ಶಂಬಲ ಗ್ರಾಮದಲ್ಲಿ ವಿಷ್ಣು ಯಶಸ್ಸೆಂಬ ಬ್ರಾಹ್ಮಣನ ಮನೆಯಲ್ಲಿ 'ಕಲ್ಕಿ' ನಾಮಧೇಯನಾಗಿ ಅವತರಿಸುವನು. ದುಷ್ಟಕುಲಾಂತಕನೂ ಧರ್ಮವಿವರ್ಧನೂ ಆಗಿ ದೇಶ ರಕ್ಷಿಸುವನು. ಕಲಿಯುಗದ ಸಂಧಿಯಲ್ಲಿ ರಾಜರೆಲ್ಲರೂ ನಾಶ ಹೊಂದಿ ಅರಾಜಕ, ಅಭದ್ರ ಸ್ಥಿತಿವುಂಟಾಗುತ್ತದೆ. ಪ್ರಜೆಗಳು ತಾವೆ ಕಚ್ಚಾಡಿ ಸಾಯುತ್ತಾರೆ.

ಪರಸ್ಪರ ಸಂಪತ್ತನ್ನು ಅಪಹರಿಸುವರು. ಹೀಗೆ ಕಷ್ಟ ಹೊಂದಿ ನಾಶ ಹೊಂದಿ ಇಲ್ಲವಾಗುತ್ತಾರೆ.

**ಕ್ಷೀಣೇ ಕಲಿಯುಗೇ ತಸ್ಮಿಂ ಸ್ತತಃ ಕೃತಯುಗಂ ಪುನಃ ।**
**ಪ್ರಪತ್ಸ್ಯತೇ ಯಥಾನ್ಯಾಯಂ ಸ್ವಭಾವಾದೇವ ನಾನ್ಯಥಾ ॥ 87 ॥**
**ಏತೇ ಚಾನ್ಯೇ ಚ ಬಹವೋ ದಿವ್ಯಾ ದೇವಗಣೈರ್ಯುತಾಃ ।**
**ಪ್ರಾದುರ್ಭಾವಾಃ ಪುರಾಣೇಷು ಗೀಯಂತೇ ಬ್ರಹ್ಮವಾದಿಭಿಃ ॥ 88 ॥**
**ಯತ್ರ ದೇವಾಶ್ಚ ಮುಹ್ಯಂತಿ ಪ್ರಾದುರ್ಭಾವಾನುಕೀರ್ತನೇ ।**
**ಪುರಾಣಂ ವರ್ತತೇ ಯತ್ರ ವೇದಶ್ರುತಿ ಸಮಾಹಿತಮ್ ॥ 89 ॥**

ಹೀಗೆ ಕಲಿಯುಗವು ಮುಗಿದು ಹೋಗುತ್ತಿದ್ದಂತೆಯೇ ಕಾಲಚಕ್ರದಂತೆ ಕೃತಯುಗವು ಪ್ರಾದುರ್ಭಾವವಾಗುತ್ತದೆ. ಹೀಗೆ ಯುಗಚಕ್ರವು ಒಂದಾದ ನಂತರ ಮತ್ತೊಂದು ಪ್ರಾಪ್ತವಾಗುತ್ತಿರುತ್ತವೆ. ಇದಕ್ಕೆ ಭಿನ್ನವಾದ ರೀತಿಯಲ್ಲಿ ಆಗಲಾರದು.

ಶ್ರೀಹರಿಯ ಈ ಹತ್ತು ಅವತಾರಗಳಲ್ಲದೆ ಇನ್ನು ಅನೇಕ ದ್ಯೋತನಾದಿ ಗುಣಗಳಿರುವ ಅನೇಕ ಅವತಾರಗಳನ್ನೂ ಬ್ರಹ್ಮವಾದಿಗಳು ಪುರಾಣಗಳಲ್ಲಿ ಕೀರ್ತಿಸಿದ್ದಾರೆ.

ಭಗವಂತನ ಅವತಾರಗಳ ಕೀರ್ತನದಲ್ಲಿ ದೇವತೆಗಳೂ ಸಹ ಮೋಹಗೊಳ್ಳುತ್ತಾರೆಂದು ಹೇಳುತ್ತಾರೆ. ಈ ಹರಿಯ ಅವತಾರ ವಿಷಯಗಳಲ್ಲಿ ಸಾಕ್ಷಾತ್ ವೇದವ್ಯಾಸರಿಂದ ರಚಿತವಾದ ಶೃತಿಮೂಲವಾಗಿರುವ ಪುರಾಣಗಳೇ ನಮಗೆ ಪರಮಪ್ರಮಾಣಗಳು. ಹರಿಯ ಅವತಾರಗಳ ಮಹಿಮೆಗಳ ವಿಷಯದಲ್ಲಿ ನಾನು ಇಲ್ಲಿ ಹೇಳಿರುವುದು ಸಂಕ್ಷೇಪ ಮಾತ್ರ.

**ಪ್ರೀಯಂತೇ ಪಿತರಸ್ತಸ್ಯ ಪ್ರಾದುರ್ಭಾವಾನುಕೀರ್ತನಾತ್ ।**
**ವಿಷ್ಣೋರತುಲವೀರ್ಯಸ್ಯ ಯಃ ಶೃಣೋತಿ ಕೃತಾಂಜಲಿಃ ॥ 90 ॥**

ಶ್ರೀಹರಿಯ ಅವತಾರ ಲೀಲೆಗಳನ್ನು ಪ್ರಾದುರ್ಭಾವಗಳನ್ನು ಕೀರ್ತನೆ ಮಾಡುವುದರಿಂದ ಪಿತೃದೇವತೆಗಳು ಪ್ರಸನ್ನರಾಗುವರು. ಸತ್ಸಂತಾನ ದಯಪಾಲಿಸುವರು. ಯಾರೂ ಈ ಅವತಾರಗಳ ಕಥೆಯನ್ನು ಶ್ರದ್ಧಾಭಕ್ತಿ

ಸಮನ್ವಿತರಾಗಿ ಶ್ರವಣ ಮಾಡುವುದರಿಂದ ಪಿತೃಗಳಿಗೂ ಅಕ್ಷಯ್ಯ ಲೋಕವುಂಟಾಗುತ್ತದೆ.

ಯಾವ ಮನುಷ್ಯನು ಯೋಗೇಶ್ವರನಾದ ಶ್ರೀಕೃಷ್ಣನ ತನ್ನಿಚ್ಛೆಯಂತೆ ಪ್ರಕಟಗೊಳಿಸುವ ಅವತಾರ ಕಥೆಗಳನ್ನು ಕೇಳುವುದರಿಂದ ಸರ್ವಪಾಪಗಳಿಂದ ಮುಕ್ತನಾಗುವನು. ಭಗವಂತನ ಅನುಗ್ರಹದಿಂದಾಗಿ ವಿಪುಲ ಧನಧಾನ್ಯಾಭಿವೃದ್ಧಿಯನ್ನು ಹೊಂದುವನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಹರ್ಯವತಾರವೆಂಬಲ್ಲಿ
ನಲವತ್ತೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥



# ಅಥ ದ್ವಿಚತ್ವಾರಿಂಶೋಽಧ್ಯಾಯಃ

## ವಿಷ್ಣುವಿನ ಅಚಿಂತ್ಯಾದ್ಭುತ ಶಕ್ತಿ

*ವೈಶಂಪಾಯನ ಉವಾಚ-*

**ವಿಶ್ವತ್ತಂ ಶ್ರುಣು ಮೇ ವಿಷ್ಣೋಃ ಹರಿತ್ವಂ ಚ ಕೃತೇ ಯುಗೇ ।**
**ವೈಕುಂಠತ್ವಂ ಚ ದೇವೇಷು ಕೃಷ್ಣತ್ವಂ ಮಾನವೇಷು ಚ ॥ 1 ॥**
**ಈಶ್ವರತ್ವಂ ಚ ತಸ್ಯೇದಂ ಗಹನಾಂ ಕರ್ಮಣಾಂ ಗತಿಮ್ ।**
**ಸಂಪ್ರತ್ಯತೀತಾಂ ಭಾವ್ಯಾಂ ಚ ಶ್ರುಣು ರಾಜನ್ ಯಥಾತಥಮ್ ॥ 2 ॥**

ಭಗವಂತನು ವಿಶ್ವ[1]ನಾಮಕನಾಗಿರುವನು. 1) ವಿನಾಮಕ ಪಕ್ಷಿಯ ಮೇಲೆ ಕುಳಿತು ಗರುಡವಾಹನನಾದವನು. 2) ಪೂರ್ಣಗುಣಾದ್ದರಿಂದಲೂ. 3) ವಾಯುದೇವರ ಅಂತರ್ಯಾಮಿಯಾದ್ದರಿಂದಲೂ. ಜಾಗ್ರವಸ್ಥಾ

---

1. ವಿಶ್ವ : 1) ವಿನಾ ಪಕ್ಷಿಣಾ ಶ್ವಯತೀತಿ ವಿಶ್ವಃ. 2) ವಿಶ್ವ ಪೂರ್ಣಂ ಸರ್ವಗುಣಪೂರ್ಣತ್ವಾಚ್ಚ, 3) ವಿಶ್ವಸ್ಯ ವಾಯೋಃ ಅಂತರ್ಯಾಮಿತ್ವಾಚ್ಚ, 4) ಜಾಗ್ರತ್ ಪ್ರವರ್ತಕತ್ವಾತ್ ವಿಶ್ವಃ, 5) ವಿಶೇಷೇಣ ವ್ಯಾಪ್ತತ್ವಾತ್, ವಿಶೇಷೇಣ ಜ್ಞಾನರೂಪತ್ವಾಚ್ಚ ವಿಶ್ವಃ. 6) ವಿ=ವಿಶಿಷ್ಟಃ. ಶಂ ಆನಂದಃ ವಂ ಜ್ಞಾನಂ ಯಸ್ಯ ಸಃ

ಹರಿಃ – ಸರ್ವಯಜ್ಞಾದಿ ಭಾಗಹಾರಿತ್ವಾತ್ ಹರಿಃ ಗೀತಭಾ. 2) ಹ = ಜ್ಞಾನ (ಓಹಾಙ್‌ಗತೌ) ಅತಿಶಯಿತ ಸುಖರೂಪಸೂ. (ರಮುಕ್ರೀಡಾಯಾಂ). 3) ಶತ್ರೂನ್ ಹರತೀತಿ ಹರಿಃ ಹಸಿರುಬಣ್ಣವುಳ್ಳ ಹರಿಯು. ಹರಿತಃ ಶ್ರೇಷ್ಠಃ ವರ್ಣ ತಸ್ಮಾತ್ ಹರಿರಿತಿ.

ವೈಕುಂಠಃ – 1) ವೈಕುಂಠಲೋಕ ನಿರ್ಮಾತಾ, 2) ವಿಕುಂಠಾನಾಮಕ ಋಷಿ ಪತ್ನ್ಯಾಂ ಅವತರಿತಃ. 3) ವಿಗತಃ ಕುಂಠಃ ಸರ್ವತ್ರ ಸಂಚಾರಃ ಯಸ್ಯ ಸಃ

ಪ್ರೇರಕನಾದ್ದರಿಂದಲೂ. 4) ವಿಶೇಷ ಸರ್ವತ್ರ ವಾಪ್ತನೂ ಜ್ಞಾನರೂಪನೂ ಆಗಿದ್ದರಿಂದಲೂ. 5) ವಿಶಿಷ್ಟ ಆನಂದ ಜ್ಞಾನಪೂರ್ಣನಾದ್ದರಿಂದಲೂ ವಿಶ್ವನು.

ಸರ್ವಯಜ್ಞಭೋಕ್ತೃವೂ. ಅತಿಶಯಿತ ಜ್ಞಾನಾದಿ ರೂಪನೂ ಅಪ್ರಾಕೃತವಾದ ಹಸಿರು ಬಣ್ಣವುಳ್ಳವನೂ. ಪಾಪಹಾರಕನೂ. ದುರ್ಜನರ ಪುಣ್ಯಹಾರಕನೂ. ಯೋಗ್ಯತೆ ಮೀರಿ ನಡೆಸುವ ಪುಣ್ಯ ಅಪಹರಿಸುವ ಏಧಮಾನದ್ವಿಟ್ ಆಗಿದ್ದರಿಂದ ಹರಿ ಎನಿಸುವನು.

'ಅನ್ಯತ್ರ ಸ್ಥಿತರಾದ ಜೀವರನ್ನು ಏಕತ್ರ ಸೇರಿಸುವವನೂ. ಸರ್ವಲೋಕದಲ್ಲಿಯೂ ಅಪ್ರತಿ ಹ್ಯತ ಸಂಚಾರಿಯೂ. ವೈಕುಂಠಲೋಕ ನಿರ್ಮಾತೃವೂ ವೈಕುಂಠಾಧಿಪತಿಯೂ. ಆದ್ದರಿಂದ ವೈಕುಂಠಕ್ಕೆ ಶಬ್ಧವಾಚ್ಯವೂ ಸಂಸಾರ ನಿರ್ವತಕನೂ. ಮೋಹಜಾಲವನ್ನು ಪರಿಹರಿಸುವವನೂ. ಪೂರ್ಣಬಲ ಪ್ರಾಣಗಳನ್ನುಳ್ಳವನು. ಸರ್ವರನ್ನೂ ತನ್ನೆಡೆಗೆ ಆಕರ್ಷಿಸುವವನೂ. ಆದ್ದರಿಂದ ಕೃಷ್ಣಶಬ್ಧವಾಚ್ಯನಾಗಿರುವನು ಶ್ರೀಹರಿಯು. ವಿಶ್ವತ್ವವನ್ನು. ಪಾಪಹಾರಿತ್ವವನ್ನೂ ನಿಯಂತೃತ್ವವನ್ನೂ ಸರ್ವರನ್ನು ತನ್ನ ಗುಣಗಳಿಂದ ತನ್ನೆಡೆಗೆ ಆಕರ್ಷಿಸುವುದನ್ನೂ ತನ್ನಲ್ಲಿ ಯಾವಾಗಲೂ ಇದ್ದೂ ತನ್ನಿಚ್ಛೆಯಂತೆ ಕೃತಾದಿಯುಗಗಳಲ್ಲಿ ಮಾತ್ರ ತೋರಿಸುವನು. ಇಂತಹ ಶ್ರೀಕೃಷ್ಣನ ವರ್ತಮಾನ. ಭವಿಷ್ಯದ ಕಾರ್ಯಗಳನ್ನು ಅದರ ರಹಸ್ಯವನ್ನು ಯಥಾವತ್ತಾಗಿ ಹೇಳುವೆನು.

**ಅವ್ಯಕ್ತೋ ವ್ಯಕ್ತಲಿಂಗಸ್ಥೋ ಯತ್ರೈವ ಭಗವಾನ್ ಪ್ರಭುಃ ।**
**ನಾರಾಯಣೋ ಹ್ಯನಂತಾತ್ಮಾ ಪ್ರಭವೋऽವ್ಯಯ ಏವ ಚ ॥ 3 ॥**

ಶ್ರೀಹರಿಯು ಪರಿಮಳವು ಹೂವಿನಲ್ಲಿದ್ದರೂ ಕಣ್ಣಿಗೆ ಕಾಣಿಸದಂತೆಯೂ. ಅರಣಿಯಲ್ಲಿ ಅಗ್ನಿಯಿದ್ದರೂ ಮಥನ ಮಾಡದೆ ಕಾಣದಂತೆಯೂ ಶ್ರೀಹರಿಯೂ ಸರ್ವತ್ರ ಇದ್ದರೂ ಉಪಾಸನೆಗಳಿಂದ ಮಾತ್ರ ವ್ಯಕ್ತನಾಗುವನು. ಬ್ರಹ್ಮಾದಿಗಳಿಗೆ ವ್ಯಕ್ತನಾಗಿಯೇ ಇರುತ್ತಾನೆ. ದೇಶತಃ ಕಾಲತಃ ಗುಣತಃ ವ್ಯಾಪ್ತನಾಗಿರುವನು. ಸರ್ವಜಗತ್ತನ್ನು ಸೃಷ್ಟ್ಯಾದಿಗಳಿಂದ ಅನುಗ್ರಹಿಸುವವನಾದರೂ ತಾನೂ ಮಾತ್ರ ಹುಟ್ಟದೆ ನಾಶ ಹೊಂದದೆ ಶಾಶ್ವತನಾಗಿರುವನು.

ಏಷ ನಾರಾಯಣೋ ಭೂತ್ವಾ ಹರಿರಾಸೀತ್ ಕೃತೇಯುಗೇ ।
ಬ್ರಹ್ಮಾ ಶಕ್ರಶ್ಚ ಸೋಮಶ್ಚ ಧರ್ಮಃ ಶುಕ್ರೋ ಬೃಹಸ್ಪತಿಃ ॥ 4 ॥
ಅದಿತೇರಪಿ ಪುತ್ರತ್ವಮೇತ್ಯ ಯಾದವನಂದನಃ ।
ಏಷ ವಿಷ್ಣುರಿತಿ ಖ್ಯಾತಃ ಇಂದ್ರಾವರಜೋಽಭವತ್ ॥ 5 ॥
ಪ್ರಸಾದಜಂ ಹ್ಯಸ್ಯ ವಿಭೋರದಿತ್ಯಾಃ ಪುತ್ರಜನ್ಮ ತತ್ ।
ವಧಾರ್ಥಂ ಸುರಶತ್ರೂಣಾಂ ದೈತ್ಯ ದಾನವ ರಕ್ಷಸಾಮ್ ॥ 6 ॥

ಕೃತಯುಗದಲ್ಲಿ ನಾರಾಯಣನು ಎಲ್ಲರೂ ಪಾಪವನ್ನು ಹರಿಸಿ ಹರಿಯಾದನು. ಇವನೇ ಬ್ರಹ್ಮನೆಂದು, ಇಂದ್ರನೆಂದೂ, ಚಂದ್ರನೆಂದೂ, ಧಾರಕನಾದ್ದರಿಂದ ಧರ್ಮನೂ, ಶೋಕಪರಿಹಾರಕನಾಗಿದ್ದು ಶುಕ್ರನೂ, ಗುಣಗಳಿಂದ ಬೃಹತ್ತಾದ ವಾಯುವಿಗೆ ಸ್ವಾಮಿಯಾದ್ದರಿಂದ ಬೃಹಸ್ಪತಿಯೂ ಆಗಿರುವನು.

ಈ ಯಾದವನಂದನ ಶ್ರೀಹರಿಯೇ ಅದಿತೀದೇವಿಯು ಪುತ್ರನಾಗಿ ಅವತರಿಸಿ ವಿಷ್ಣು ಎನಿಸಿದನು. ಇಂದ್ರದೇವನ ತಮ್ಮನಾಗಿ ಉಪೇಂದ್ರನಾದನು. ದೇವತೆಗಳ ವೈರಿಗಳಾದ ದೈತ್ಯದಾನವ ರಾಕ್ಷಸರನ್ನು ನಿಗ್ರಹ ಮಾಡುವ ಸಲುವಾಗಿ ಅದಿತಿಯ ಪುತ್ರನಾಗಿ ಅವತರಿಸಿದನು.

ಸೃಷ್ಟಿಯ ಆರಂಭದಲ್ಲಿ ಬ್ರಹ್ಮಾಂಡ ಸೃಷ್ಟಿಸಿ ಅದರಲ್ಲಿ ತಾನಿದ್ದು ಸೃಷ್ಟಿಕರ್ತನಾದ ಬ್ರಹ್ಮದೇವನನ್ನು ಸೃಷ್ಟಿಸಿದನು. ಹಿಂದಿನ ಕಲ್ಪಗಳಲ್ಲಿ ಮರಿಚಿ ಮೊದಲಾದ ಪ್ರಜಾಪತಿಗಳನ್ನು ಸೃಷ್ಟಿಸಿದ್ದನು. ಈ ಪ್ರಜಾಪತಿಗಳೆಲ್ಲರೂ ಹರಿಯವಂಶವನ್ನು ಅಭಿವೃದ್ಧಿ ಮಾಡಿದರು.

ಈ ಮಹಾನುಭಾವರೇ ವೇದ ಶಾಖೆಗಳನ್ನಾಗಿ ವಿಂಗಡಿಸಿದರು.

ಏತದಾಶ್ಚರ್ಯಭೂತಸ್ಯ ವಿಷ್ಣೋಃ ನಾಮಾನು ಕೀರ್ತನಂ ।
ಕೀರ್ತನೀಯಸ್ಯ ಲೋಕೇಷು ಕೀರ್ತ್ಯಮಾನಂ ನಿಬೋಧ ಮೇ ॥ 7 ॥

ಹೀಗೆ ಹದಿನಾಲ್ಕು ಲೋಕಗಳಲ್ಲಿಯೂ ಸರ್ವರಿಂದಲೂ ಕೀರ್ತನೀಯನೂ, ಸಮಸ್ತ ವಸ್ತುಗಳಿಗಿಂತಲೂ ಆಶ್ಚಯತಮನೂ ಆದ ಶ್ರೀಕೃಷ್ಣನ ವೇದಪ್ರತಿಪಾದ್ಯ ನಾಮ-ಸಂಕೀರ್ತನೆಗಳ ಉಲ್ಲೇಖವನ್ನು ನಿನಗೆ ತಿಳಿಸುತ್ತೇನೆ ಕೇಳು.

## ತಾರಕಾಮಯ ಯುದ್ಧ

**ವೃತ್ತೇ ವೃತ್ರವಧೇ ತಾತ ವರ್ತಮಾನೇ ಕೃತಯುಗೇ ।**
**ಆಸೀತ್ ತ್ರೈಲೋಕ್ಯ ವಿಖ್ಯಾತಃ ಸಂಗ್ರಾಮಃ ತಾರಕಾಮಯಃ ॥ 8 ॥**
**ತತ್ರಾಸನ್ ದಾನವಾಃ ಘೋರಾಃ ಸರ್ವೇ ಸಂಗ್ರಾಮದರ್ಪಿತಾಃ ॥**
**ಘ್ನಂತಿ ದೇವಗಣಾನ್ ಸರ್ವಾನ್ ಸಯಕ್ಷೋರಗರಕ್ಷಸಾನ್ ॥ 9 ॥**
**ತೇ ವಧ್ಯಮಾನಾಃ ವಿಮುಖಾಃ ಕ್ಷೀಣಪ್ರಹರಣಾಃ ರಣೇ ।**
**ತ್ರಾತಾರಂ ಮನಸಾ ಜಗ್ಮುಃ ದೇವಂ ನಾರಾಯಣಂ ಹರಿಮ್ ॥ 10 ॥**

ಹಿಂದೆ ಕೃತಯುಗದಲ್ಲಿ ವೃತ್ರಾಸುರನನ್ನು ಇಂದ್ರದೇವರು ಸಂಹರಿಸಿದ ನಂತರ ದೇವ-ದಾನವರಲ್ಲಿ ತಾರಕಾಮಯವೆಂಬ ಘೋರ ಯುದ್ಧವುಂಟಾಯಿತು. ಯುದ್ಧ ದುರ್ಮದರಾದ ದೈತ್ಯದಾನವರು ದೇವತೆಗಳನ್ನು ಹೊಡೆಯಲು ಪ್ರಾರಂಭಿಸಿದರು. ನಿರಂತರವಾಗಿ ದೈತ್ಯರಿಂದ ಆಘಾತವನ್ನನುಭವಿಸಿದ ದೇವತೆಗಳ ಆಯುಧಗಳು ಕೈಯಿಂದ ಜಾರತೊಡಗಿದವು. ಯುದ್ಧ ವಿಮುಖರಾದ ದೇವತೆಗಳು ಸರ್ವರಕ್ಷಕನಾದ ಶ್ರೀಹರಿಯನ್ನೇ ಶರಣು ಹೊಂದಿದರು.

### ಉತ್ಪಾತಗಳು

ಈ ಮಧ್ಯದಲ್ಲಿಯೇ ಮೇಘಗಳು ಕಬ್ಬಿಣ ಸಮಾನವಾದ ಜ್ವಾಲೆಗಳೆ ಇಲ್ಲದಿರುವ ಬೆಂಕಿಯನ್ನು ಸುರಿಸತೊಡಗಿದವು. ಬೆಂಕಿಯ ಮಳೆ ಗ್ರಹನಕ್ಷತ್ರಗಳಿಂದ ಕೂಡಿದ ಚಂದ್ರಾರ್ಕರನ್ನೆ ಅವರಿಸುವಂತಿತ್ತು. ಮೇಘಗಳ ಮಧ್ಯದಲ್ಲಿ ಚಂಚಲಗಳಾದ ಕೋಲ್ಮಿಂಚುಗಳು ಮಿಂಚಿದವು. ಮೇಘಗಳ ಗರ್ಜನೆ ಭಯಂಕರವಾಗಿದ್ದತ್ತು. ಏಳು ರೀತಿ ಗಾಳಿಯು ಜೋರಾಗಿ ಬೀಸುತ್ತಾ ಇದ್ದದ್ದರಿಂದ ಮೇಘಗಳು ಒಂದಕ್ಕೊಂದು ಘರ್ಷಿಸುತ್ತಿದ್ದವು. ಸಿಡಿಲು-ಗುಡುಗುಗಳ ಆರ್ಭಟ. ನಿರಂತರ ಮುಸಲ ಗಾತ್ರದ ಜಲಧಾರೆಗಳೂ. ವಜ್ರವೇಗದಂತಿರುವ ಪ್ರಚಂಡಗಾಳಿ ಮಹಾಘೋರ ಉತ್ಪಾತಗಳಿಂದ ಅಂಬರವನ್ನೆ ಸುಡುತ್ತಿವೆಯೋ ಎಂಬಂತೆ ಕಾಣುತಿತ್ತು. ಉಲ್ಕೆಪಾತಗಳು. ಬೀಳುತ್ತಿದ್ದು. ಮೇಲೆ ಹಾರಾಡುತ್ತಿರುವ ವಿಮಾನಗಳು ಕೆಳಗೆ ಬಿದ್ದವು. ಚತುರ್ಯುಗಸಹಸ್ರ ಕಾಲವಾದ ನಡೆಯಬೇಕಾದ ಪ್ರಲಯ ಕಾಲದ ಭಯವೀಗಲೇ ಉಂಟಾಗಿತ್ತು. ಪ್ರಪಂಚವೆ ಗಾಢಾಂಧಕಾರದಲ್ಲಿ ಮುಳುಗಿತ್ತು. ನಿಬಿಡ ಕತ್ತಲೆಯಲ್ಲಿ ಯಾವ ದಿಕ್ಕು ಕಾಣುತ್ತಿರಲಿಲ್ಲ. ಅಮಾವಾಸ್ಯೆಯೇ

ಮೂರ್ತಿಮತ್ತಾಗಿ ಬಂದಂತಾಗಿತ್ತು. ಆಕಾಶದಲ್ಲಿ ಯಾವುದೇ ರೀತಿಯ ಬೆಳಕು ಇರಲಿಲ್ಲ.

## ಶ್ರೀಹರಿಯ ಪ್ರಾದುರ್ಭಾವ

**ತಾನ್ ಘನೌಘಾನ್ ಸತಿಮಿರಾನ್ ದೋರ್ಭ್ಯಾಮುತ್ಕ್ಷಿಪ್ಯ ಸ ಪ್ರಭುಃ ।**
**ವಪುಃ ಸಂದರ್ಶಯಾಮಾಸ ದಿವ್ಯಂ ಕೃಷ್ಣವಪುರ್ಹರಿಃ ॥ 11 ॥**
**ಬಲಾಹಕಾಂಜನನಿಭಂ ಬಲಾಹಕತನೂರುಹಮ್ ।**
**ತೇಜಸಾ ವಪುಷಾ ಚೈವ ಕೃಷ್ಣಂ ಕೃಷ್ಣವಪುರ್ಹರಿಃ ॥ 12 ॥**
**ದೀಪ್ತಪೀತಾಂಬರಧರಂ ತಪ್ತಕಾಂಚನಭೂಷಣಮ್ ।**
**ಧೂಮಾಂಧಕಾರವಪುಷಾ ಯುಗಾಂತಾಗ್ನಿಮಿವೋತ್ಥಿತಮ್ ॥ 13 ॥**

ಇಂತಹ ತಮಃಪ್ರಧಾನ ವಾತಾವರಣದಲ್ಲಿ ನೀಲಮೇಘಶ್ಯಾಮಲನಾದ ಶ್ರೀಹರಿಯು ತನ್ನೆರಡೂ ಕೈಗಳಿಂದ ಮೇಘಗಳನ್ನೆಲ್ಲವನ್ನೂ ಹಾಗೂ ಮೇಘಗಳೊಂದಿಗಿದ್ದ ಅಂಧಕಾರವನ್ನೂ ಕಿತ್ತೆಸೆದು ತನ್ನ ದಿವ್ಯಸ್ವರೂಪಾ-ವಿರ್ಭವಗೊಳಿಸಿದನು.

ಭಗವಂತನ ಶಾರೀರಿಕ ಕಾಂತಿ ಇಂದ್ರನೀಲಮಣೀಯಂತಿದ್ದಿತು. ಅವನ ರೋಮಗಳೂ ಕಪ್ಪಾಗಿದ್ದು, ಶರೀರವು ಅಂಜನ ಪರ್ವತದಂತಿತ್ತು. ಥಳಥಳ ಹೊಳೆಯುವ ಪೀತಾಂಬರ ಧರಿಸಿದ್ದು ಪುಟವಿಡಿದ ಚಿನ್ನದಾಭರಣಗಳನ್ನು ಧರಿಸಿದ್ದ ಶ್ರೀಕೃಷ್ಣನು ಅಂಬರ ಮಧ್ಯದಲ್ಲಿ ಸೂರ್ಯನಂತೆ ಪ್ರಾದುರ್ಭವಿಸಿದನು.

ಅಷ್ಟಭುಜಯುಕ್ತನೂ, ಎತ್ತಿನ ಡುಬ್ಬದಂತಿರುವ ಎಂಟು ಭುಜಗಳು ನಾನಾ ರತ್ನಗಳಿಂದ ಅಲಂಕೃತನಾಗಿದ್ದನು. ನೇತ್ರಗಳು ಸೂರ್ಯಚಂದ್ರರಿಂದ ಹೊಳೆಯುತ್ತಿತ್ತು. ಒಂದು ಕೈಯಲ್ಲಿ ನಂದಕಖಡ್ಗವನ್ನೂ, ಸರ್ಪಸದೃಶಬಾಣವನ್ನೂ ಮತ್ತೊಂದರಲ್ಲಿ ನೇಗಿಲನ್ನೂ, ಶಂಖಚಕ್ರ ಗದೆಯನ್ನೂ, ಶಾಂರ್ಗಧನಸ್ಸನ್ನೂ, ಅಭಯ ಪ್ರದನಾದ ಶ್ರೀಹರಿಯನ್ನು ದೇವತೆಗಳು ನೋಡಿದರು.

ಶ್ರೀಹರಿಯು ಕುಳಿತಿರುವ ರಥವು ಹಸಿರುಬಣ್ಣದ ಕುದುರೆಗಳಿಂದ ಸಜ್ಜಾಗಿದ್ದಿತು. ಗರುಡಧ್ವಜದಿಂದ ಶೋಭಾಯಮಾನವಾಗಿ ರಥದ ಮಧ್ಯಭಾಗದಲ್ಲಿ ಅಚ್ಚುಮರವಿದ್ದಿತು. ಶೇಷದೇವನೇ ಕುದುರೆಗಳ ಕಡಿವಾಣರೂಪದಲ್ಲಿದ್ದನು. ರಥದ ಮೂಕಿಯು ಮೇರುಪರ್ವತವಾಗಿತ್ತು.

ಇಂತಹ ದಿವ್ಯರಥವನ್ನೇರಿದ ಶ್ರೀಹರಿಯನ್ನು ನೋಡಿದ ಇಂದ್ರಾದಿ ದೇವತೆಗಳು ಅಂಜಲಿಬದ್ಧರಾಗಿ ಜಯಜಯ ಘೋಷದೊಂದಿಗೆ ಮೊರೆಹೊಕ್ಕರು. ನಿಮಗೆ ಮಹಾಯುದ್ಧದಲ್ಲಿ ಬಂದಿರುವ ಕಷ್ಟ ತಿಳಿದಿರುವೆ. ನಿಮಗೆ ನಾನು ಅಭಯವಿತ್ತಿದ್ದೇನೆ ಎಂದು ಹೇಳಿ ದೈತ್ಯರೊಂದಿಗೆ ಯುದ್ಧ ಮಾಡಲು ಇಚ್ಛಿಸಿ ಹೀಗೆಂದನು.

**ಶಾಂತಿಂ ಭಜತ ಭದ್ರಂ ವೋ ಮಾ ಭೈಷ್ಟ ಮರುತಾಂ ಗಣಾಃ ।**

**ಜಿತಾ ಮೇ ದಾನವಾಃ ಸರ್ವೇ ತ್ರೈಲೋಕ್ಯಂ ಪ್ರತಿಗೃಹ್ಯತಾಮ್ ॥ 14 ॥**

ದೇವತೆಗಳೇ ಶಾಂತಿಯಿಂದಿರಿ. ನಿಮಗೆ ಮಂಗಳವಾಗುತ್ತದೆ. ಹೆದರಬೇಡಿರಿ. ನಾನು ದೈತ್ಯವರ್ಗವನ್ನು ಕೊಂದನೆಂದೆ ತಿಳಿಯಿರಿ ನಿಮ್ಮ ಲೋಕಗಳನ್ನು ನೀವು ಹೊಂದಿರಿ ಎಂದನು.

ಸತ್ಯಸಂಕಲ್ಪನಾದ ಶ್ರೀಹರಿಯ ಆಶ್ವಾಸನೆಯಿಂದ ಸರ್ವದೇವತೆಗಳೂ ಸಂತುಷ್ಟರದರು. ಕ್ಷೀರ ಸಮುದ್ರದಿಂದ ಅಮೃತವನ್ನು ಪಡೆದಂತೆ ಆಯಿತು.

ಹರಿಯ ಅವಿರ್ಭಾವದಿಂದ ಅಂಧಕಾರ ಇಲ್ಲವಾಯಿತು. ಮೇಘಗಳು ಚದುರಿ ಹೋದವು. ಮಂದಮಾರತವು ಚಂದವಾಗಿ ಬೀಸಿ ಹಿತವುಂಟು ಮಾಡಿತು.

ದಿಕ್ಕುಗಳೆಲ್ಲ ಪ್ರಸನ್ನವಾದವು. ನಕ್ಷತ್ರಗಳು ಮಿನುಗಿದವು. ತೇಜೋರಾಶಿಗಳೆಲ್ಲ ಸೂರ್ಯಚಂದ್ರರನ್ನು ಪ್ರದಕ್ಷಿಣೆ ಮಾಡತೊಡಗಿದವು. ನದಿಗಳು ಪ್ರಸನ್ನವಾದವು. ಗ್ರಹಗಳ ಪರಸ್ಪರ ಯುದ್ಧ ನಿಂತಿತು. ಸ್ವರ್ಗಾದಿ ಮಾರ್ಗಗಳೆಲ್ಲ ಧೂಳು ರಹಿತವಾದವು. ಸಮುದ್ರವು ಕ್ಷೋಭೆಯಿಲ್ಲದೆ ಮೊದಲಿನಂತಾಯಿತು.

ಮಾನವರು ಮೊದಲಿನಂತೆಯೇ ಶುಭಕಾರ್ಯದಲ್ಲಿ ತೊಡಗಿದರು. ಮಹರ್ಷಿಗಳು ಶೋಕರಹಿತರಾಗಿ ವೇದಾಧ್ಯಯನ ಪ್ರಾರಂಭಿಸಿದರು. ಹವನಹೋಮಾದಿಗಳು ಪುನಃ ಪ್ರಾರಂಭವಾದವು. ಹೀಗೆ ದೇವದೇವನಾದ ವಿಷ್ಣುವಿನ 'ನಾನು ಶತ್ರುಗಳನ್ನು ನಿಗ್ರಹಿಸುತ್ತೇನೆ' ಎಂಬ ಅಭಯ ವಾಕ್ಯ ಕೇಳಿ ಸರ್ವರೂ ಸಂತುಷ್ಟರಾಗಿ ನಿಶ್ಚಿಂತಮನಸ್ಕರಾದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ತಾರಕಾಮಯ ಯುದ್ಧೇ ಶ್ರೀಹರಿ ಅಭಯದಾನವೆಂಬಲ್ಲಿ
ನಲವತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 43 ಹರಿಪರ್ವ

## ಅಥ ತ್ರಿಚತ್ವಾರಿಂಶೋಽಧ್ಯಾಯಃ

*ವೈಶಂಪಾಯನ ಉವಾಚ–*

**ತತೋಽ ಭಯಂ ವಿಷ್ಣುಮಯಂ ಶ್ರುತ್ವಾ ದೈತೇಯ ದಾನವಾಃ ।**

**ಉದ್ಯೋಗಂ ವಿಪುಲಂ ಚಕ್ರುಃ ಯುದ್ಧಾಯ ಯುಧಿ ದುರ್ಜಯಾಃ ॥ 1 ॥**

**ಮಯಸ್ತು ಕಾಂಚನಮಯಂ ತ್ರಿನಲ್ವಾಂತರಮವ್ಯಯಮ್ ।**

**ಚತುಶ್ಚಕ್ರಂ ವಿಕ್ರಮಂತಂ ಸುಕಲ್ಪಿತಮಹಾಯುಧಮ್ ॥ 2 ॥**

ಜನಮೇಜಯನೇ, ವಿಷ್ಣುವಿನಿಂದ ತಮಗೆ ಭಯ ಬರಲಿದೆಯೆಂದು ತಿಳಿದು ದೈತ್ಯದಾನವರೆಲ್ಲರೂ ಯುದ್ಧಕ್ಕಾಗಿ ಬಹು ರೀತಿಯ ಯುದ್ಧ ಸಿದ್ಧತೆಯನ್ನು ಮಾಡಿದರು. ಮಯಾಸುರನು ಹನ್ನೆರಡು ಮಾರುಗಳಷ್ಟು ವಿಸ್ತೃತ ತನ್ನ ರಥದಲ್ಲಿ ಕುಳಿತಿದ್ದನು. ಚತುಶ್ಚಕ್ರಶೋಭಿತವೂ, ಸರ್ವತ್ರ ಅಪ್ರತಿಹತವಾಗಿ ಸಂಚರಿಸಬಲ್ಲದ್ದೂ, ನಾನಾ ವಿಧ ಆಯುಧ ಉಪೇತವೂ, ಸುಮಧುರವಾಗಿ ಕಿಣಿಕಿಣಿ ಘಂಟಾನಾದಿತವೂ, ಹುಲಿಯ ಚರ್ಮ ಪರಿಷ್ಕೃತವೂ ರತ್ನಖಚಿತವೂ, ಸುಂದರ ಹಾಗೂ ದೃಢ ಅಚ್ಚುಮರವುಳ್ಳದ್ದಾಗಿದ್ದು ರಥಶ್ರೇಷ್ಠವೆನಿಸಿತ್ತು. ರಥದಲ್ಲಿ ಸುಂದರ ಆಸನವಿತ್ತು ಕೃತ್ರಿಮ ಮೃಗಗಳು, ಪಕ್ಷಿಗಳಿಂದಲೂ ಅಲಂಕೃತವಾಗಿತ್ತು. ಅದು ನಡೆಯುವಾಗ ಮೇಘದಂತೆ ಗಂಭೀರವಾದ ಶಬ್ಧ ಹೊರಹೊಮ್ಮುತ್ತಿತ್ತು.

ಧ್ವಜ ಪತಾಕೆಗಳಿಂದ ಸುಶೋಭಿತವಾಗಿತ್ತು. ಇಂತಹ ರಥದಲ್ಲಿ ಕುಳಿತು ಯುದ್ಧಾಕಾಂಕ್ಷಿಯಾದ ಮಯಾಸುರನು ಸುರಸೈನ್ಯವನ್ನು ದಿಟ್ಟಿಸಿದನು.

ತಾರಕಾಸುರನಾದರೂ ಒಂದು ಯೋಜನ ವಿಸ್ತಾರ ರಥದಲ್ಲಿ ಕುಳಿತಿದ್ದನು. ಇದೊಂದು ಅಚ್ಛೇದ್ಯಾಭೇದ್ಯ ಆಯನದ ರಥವಾಗಿತ್ತು. ಇದು ಕಾಗೆಯ ಚಿಹ್ನೆಯಿರುವ ಧ್ವಜವನ್ನು ಹೊಂದಿತ್ತು. ಕಾಡಿಗೆಯ ಪರ್ವತದಂತೆ ಕಪ್ಪುಬಣ್ಣದ್ದಾಗಿದ್ದು ಎಂಟು ಕಬ್ಬಿಣದ ಗಾಲಿಗಳಿಂದ ಕೂಡಿತ್ತು. ಪರಿಘಾಯುಧ, ಶತ್ರುಗಳ ಮೇಲೆ ಎಸೆಯಲು ದೊಡ್ಡ ಬಂಡೆಗಳಿಂದಲೂ ಯುಕ್ತವಾಗಿತ್ತು. ಪ್ರಾಸ, ಮುದ್ಗರ, ತೋಮರ, ಕೊಡಲಿಗಳಿಂದ ತುಂಬಿತ್ತು. ಶತ್ರುಗಳ ನಾಶಕ್ಕೆಂದೆ ತಯಾರಾದ ಈ ರಥವನ್ನು ಸಾವಿರ ಕತ್ತೆಗಳು ಎಳೆಯುತ್ತಿದ್ದವು.

ವಿರೋಚನನೆಂಬ ದೈತ್ಯನು ತನ್ನ ಕೈಯಲ್ಲಿ ಮಹಾಗದೆ ಹಿಡಿದು ಮಹಾಪರ್ವತದಂತೆ ಕಾಣುತ್ತಿದ್ದನು. ಶತ್ರುನಿಗ್ರಹ ಪ್ರವೀಣನಾದ ಹಯಗ್ರೀವಾಸುರನು ಸಾವಿರ ಕುದುರೆಗಳಿಂದ ಯುಕ್ತ ರಥದಲ್ಲಿ ಯುದ್ಧಸನ್ನದ್ಧನಾಗಿ ಕುಳಿತಿದ್ದನು. ವರಾಹಾಸುರನಾದರೂ ಸಾವಿರ ಮೊಳವುಳ್ಳ ರಥದಲ್ಲಿ ದೀರ್ಘ ಧನಸ್ಸನ್ನು ಹಿಡಿದು ಟೇಂಕಾರ ಮಾಡುತ್ತಾ ಮುಂದೆ ನಿಂತಿದ್ದನು.

ಖರಾಸುರನು ದೇವತೆಗಳ ಮೇಲಿನ ಚಿಮ್ಮುತ್ತಿರುವ ನೇತ್ರ ಜಲದಿಂದ ರೋಷಕಷಾಯನೇತ್ರನಾಗಿ ದರ್ಪದಿಂದ ಅಗ್ರಭಾಗದಲ್ಲಿಯೆ ನಿಂತಿದ್ದನು. ದಂತದಿಂದ ತುಟಿಯನ್ನು ಕಚ್ಚಿ ತನ್ನ ಕೋಪ ತೋರಿಸುತ್ತಿದ್ದನು.

ತ್ವಷ್ಟುವೆಂಬ ಮಹಾಬಲಿಷ್ಠನೂ ಹದಿನೆಂಟು ಕುದುರೆಗಳಿಂದ ಕೂಡಿದ ರಥದಲ್ಲಿ ಆಸೀನನಾಗಿ ಯುದ್ಧರಂಗ ಪ್ರವೇಶಿಸಿ ವ್ಯೂಹಕ್ರಮದಲ್ಲಿ ಸಂಚರಿಸುತ್ತಿದ್ದನು. ವಿಪ್ರಚಿತ್ತಿಯ ಮಗ ಶ್ವೇತಾಸುರನು ಯುದ್ಧ ದುರ್ಮದನಾಗಿ ಸೇನೆಯ ಮುಂದಾಳುವಾಗಿದ್ದನು. ಬಲಿಯ ಪುತ್ರ ಅರಿಷ್ಟನು ಪರ್ವತಗಳ ಶಿಲೆಗಳನ್ನೆ ಆಯುಧವನ್ನಾಗಿ ಹಿಡಿದು ಯುದ್ಧಕ್ಕೆ ಆಗಮಿಸಿ ಮತ್ತೊಂದು ಪರ್ವತದಂತೆಯೇ ತೋರುತ್ತಿದ್ದನು.

ಕಿಶೋರನೆಂಬ ದೈತ್ಯನು ಚಾಟಿಯಿಂದ ಪ್ರೇರಿಸಲ್ಪಟ್ಟ ಕುದುರೆಯಂತೆ ಯುದ್ಧೋತ್ಸಾಹಗಳಿಂದ ಕೂಡಿ ಸೈನ್ಯದ ಮಧ್ಯಭಾಗದಲ್ಲಿದ್ದನು. ಪರ್ವತದಲ್ಲಿ ಉದಯಿಸಿದ ಸೂರ್ಯನಂತೆ ಭಾಸಮಾನನಾಗಿದ್ದನು.

ಲಂಬಾಸುರನು ಜೋತಾಡುವ ಮೇಘದಂತೆ ಇದ್ದು ಜೋತಾಡುವ ಉದ್ದ ಉದ್ದನೆಯ ಹಾರಗಳಿಂದ ಹಿಮಾಚ್ಛಾದಿತ ಸೂರ್ಯನಂತೆ ಕಂಡುಬರುತ್ತಿದ್ದ.

ವಕ್ರಯುದ್ಧದಲ್ಲಿ ಪ್ರವೀಣನಾದ ರಾಹುದೈತ್ಯನು ಅಟ್ಟಹಾಸ ಮಾಡುತ್ತಾ ಸೇನೆಯ ಮುಂದೆ ನಿಂತಿದ್ದು, ಕಣ್ಣುಗಳಿಂದಲೇ ನುಂಗಿ ಬಿಡುವಂತೆ ನೋಡುತ್ತಾ, ಹಲ್ಲನ್ನು ಕಡಿಯುತ್ತಾ ಯುದ್ಧ ನಿರೀಕ್ಷಣೆಯಲ್ಲಿದ್ದನು.

ರಾಕ್ಷಸರಲ್ಲಿ ಕೆಲವರು ಕುದುರೆಗಳ ಮೇಲೂ, ಆನೆ, ಸಿಂಹ, ಹುಲಿ, ಹಂದಿ, ಕರಡಿಗಳ ಮೇಲೆ ಕುಳಿತು ಯುದ್ಧಕ್ಕೆ ಬರುತ್ತಿದ್ದರು. ಕೆಲವರಂತು ಗಾರ್ಧಭ ವಾಹನರೂ, ಉಷ್ಟ್ರ ವಾಹನರೂ, ಮೇಘ ವಾಹನರೂ, ನಾನಾ ವಿಧ ಪಕ್ಷಿ ವಾಹನರೂ ವಾಯು ವಾಹನದವರೂ ಇದ್ದರು.

ಭಯಂಕರವೂ ವಿಕಾರವೂ ಆಗಿದ್ದ ಮುಖಗಳಿರುವ ಪದಾತಿಗಳು ಏಕಪಾದಿಗಳೂ, ದ್ವಿಪಾದಿಗಳೂ, ಆಗಿದ್ದರು. ಜೋರಾಗಿ ಸಿಂಹನಾದ ಮಾಡುತ್ತಿದ್ದರು. ಭುಜಗಳನ್ನು ತೊಡೆಗಳನ್ನು ತಟ್ಟುತ್ತಾ ಮದಭರಿತ ಸಿಂಹಗಳಂತೆ ಘರ್ಜಿಸುತ್ತಿದ್ದರು. ದೈತ್ಯನಾಯಕರು ಒಳ್ಳೆಯ ತರಬೇತಿ ಹೊಂದಿದ ಬಿಲ್ಲಾಳುಗಳಾಗಿದ್ದರು.

ಅವರಲ್ಲಿ ಕೆಲವರು ಗದಾಪಾಣಿಗಳೂ, ಪರಿಘಾಯುಧರೂ, ಪಾಶಗಳಿಂದಲೂ ಪ್ರಾಸಗಳಿಂದಲೂ ಕತ್ತಿ, ತೋಮರ, ಅಂಕುಶಗಳು, ಪಟ್ಟಿಶಗಳೂ, ಶತಘ್ನಿಯೆಂಬ ನೂರು ಅಲಗುಗಳಿಂದ ಕೂಡಿದ ಆಯುಧಗಳಿಂದ ಯುದ್ಧ ಮಾಡಲು ಹಾತೊರೆಯುತ್ತಿದ್ದರು. ಇವರಿಗೆಲ್ಲ ಯುದ್ಧವೆಂದರೆ ಕ್ರೀಡೆಯಿದ್ದಂತೆ.

ಹೀಗೆ ದೈತ್ಯ ದಾನವ ಸೈನ್ಯವು ಯುದ್ಧ ಮಾಡಲು ಬಲದಿಂದಾಗಿ ಉನ್ಮತ್ತವಾಗಿತ್ತು. ಮೇಘಗಳ ಸಮೂಹದಂತೆ ದೇವತೆಗಳ ಎದುರಿಗೆ ನಿಂತಿತ್ತು. ದೇವತೆಗಳ ಸೈನ್ಯವು ಮೂವತ್ತಮೂರು ಕೋಟಿ, ಆದರೂ ಬೇರೆ ಬೇರೆ ಅಂಶಗಳಿಂದ ಮಹೌಘ, ಮಹೌಘ ಅಕ್ಷೌಹಿಣೀ ಸೈನ್ಯವಿತ್ತು. ದೈತ್ಯ ಸೈನ್ಯವಾದರೂ ದೇವಸೈನ್ಯಕ್ಕಿಂತಲೂ ಮಹೌಘಪಟ್ಟು ಅಧಿಕವಿತ್ತು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ದೇವಾಸುರ ಸಂಗ್ರಾಮವೆಂಬಲ್ಲಿ
ನಲವತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 44 ಹರಿಪರ್ವ

# ಅಥ ಚತುಶ್ಚತ್ವಾರಿಂಶೋಽಧ್ಯಾಯಃ

## ದೇವತೆಗಳ ಯುದ್ಧೋದ್ಯೋಗ

*ವೈಶಂಪಾಯನ ಉವಾಚ-*

**ಶ್ರುತಸ್ತೇ ದೈತ್ಯಸೈನಸ್ಯ ವಿಸ್ತಾರಸ್ತಾತ ವಿಗ್ರಹೇ ।**
**ಸುರಾಣಾಂ ಸರ್ವಸೈನ್ಯಸ್ಯ ವಿಸ್ತಾರಂ ವೈಷ್ಣವಂ ಶ್ರುಣು ॥ 1 ॥**
**ಆದಿತ್ಯಾಃ ವಸವೋ ರುದ್ರಾಃ ಅಶ್ವಿನೌ ಚ ಮಹಾಬಲೌ ।**
**ಸಬಲಾಃ ಸಾನುಗಾಶ್ಚೈವ ಸಂನಹ್ಯಂತ ಯಥಾಬಲಮ್ ॥ 2 ॥**
**ಪುರುಹೂತಸ್ತು ಪುರತೋ ಲೋಕಪಾಲಃ ಸಹಸ್ರದೃಕ್ ।**
**ಗ್ರಾಮಣೀಃ ಸರ್ವದೇವಾನಾಂ ಆರುರೋಹ ಸುರದ್ವಿಪಮ್ ॥ 3 ॥**

ಜನಮೇಜಯನೇ ! ಈ ಯುದ್ಧದ ಸಮಯದಲ್ಲಿ ವಿಸ್ತಾರವಾಗಿದ್ದ ದೈತ್ಯಸೈನ್ಯವನ್ನು ಕೇಳಿರುವೆ. ಇನ್ನು ಮುಂದೆ ವಿಷ್ಣುವಿನ ಬೆಂಬಲ ಪಡೆದಿದ್ದ ದೇವಸೈನ್ಯ ವಿಸ್ತಾರವನ್ನು ಹೇಳುವೆ ಕೇಳು.

ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಮಹಾಬಲಿಷ್ಠ ಅಶ್ವಿನಿದೇವತೆಗಳು ಇವರೆಲ್ಲರೂ ತಮ್ಮ ತಮ್ಮ ಸೈನ್ಯದೊಂದಿಗೆ ಕೂಡಿಕೊಂಡು ದೈತ್ಯರೊಂದಿಗೆ ಯುದ್ಧ ಮಾಡಲು ಕವಚಗಳನ್ನು ಧರಿಸಿ ಯುದ್ಧ ಸನ್ನದ್ಧರಾಗಿ ನಿಂತಿದ್ದರು.

ಇವರೆಲ್ಲರ ಮುಂದೆ ಸಮಸ್ತದೇವತೆಗಳ ನಾಯಕನೂ, ಸಹಸ್ರನೇತ್ರನೂ ಆಗಿರುವ ಇಂದ್ರದೇವನು ಸ್ವರ್ಗೀಯ ಐರಾವತವನ್ನೇರಿ ಹೊರಟನು. ಅವನ ಪಕ್ಕದಲ್ಲಿಯೇ ಗರುಡನಂತೆ ಅತಿವೇಗವಾಗಿ ಚಲಿಸುವ ಚಕ್ರಗಳಿಂದ ಕೂಡಿದ ಚಿನ್ನದಿಂದ ಖಚಿತವಾದ ರಥವಿತ್ತು.

ಇಂದ್ರದೇವನ ಹಿಂಭಾಗದಲ್ಲಿ ದೇವ ಗಂಧರ್ವ ಯಕ್ಷರೆಲ್ಲರೂ ಹಿಂದೆ ಬರುತ್ತಿದ್ದರು. ಸದಸ್ಯರು ಬ್ರಹ್ಮರ್ಷಿಗಳೆಲ್ಲರೂ ಇಂದ್ರನನ್ನು ಸ್ತೋತ್ರ ಮಾಡುತ್ತಿದ್ದರು. ಸಿಡಿಲಿನ ಭಯಂಕರ ಆರ್ಭಟದೊಡನೇ ಹುಟ್ಟುತ್ತಿರುವ ಮಿಂಚುಗಳಿಂದಲೂ, ಇಂದ್ರಧನಸ್ಸುಗಳಿಂದಲೂ ಕೂಡಿರುವ ಮೇಘಗಳ ಗುಂಪು ದೇವರಾಜನನ್ನು ಅನುಸರಿಸುತ್ತಿದ್ದವು. ಇಂದ್ರನ ರಥವನ್ನು ರಕ್ಷಿಸುತ್ತಿದ್ದವು. ಸೋಮಯಾಗದಲ್ಲಿ ಯಾರನ್ನು ಬ್ರಾಹ್ಮಣರು ಸ್ತುತಿಸುವರೋ, ಯಾರು ಪ್ರಯಾಣ ಹೊರಟನೆಂದರೆ ನೂರಾರು ತೂರ್ಯ ಧ್ವನಿಗಳು ಮೊಳಗುವವೋ, ಯಾವಾತನನ್ನು ನೂರಾರು ಅಪ್ಸರಾಗಣಗಳು ನೃತ್ಯಗಾನಾದಿಗಳಿಂದ ಸಂತೋಷಪಡಿಸುತ್ತಾ ಹೋಗುವವೋ ಅಂತಹ ಇಂದ್ರದೇವನು ಸ್ವಚ್ಛವಾದ ಐರಾವತವನ್ನೇರಿ ಯುದ್ಧರಂಗಕ್ಕೆ ಹೋಗುತ್ತಿದ್ದನು.

**ಯುಕ್ತೋ ಹರಿಸಹಸ್ರೇಣ ಭಾತಿ ಯುಕ್ತೋ ಮನೋಮಾರುತ ರಂಹಸಾ ।**
**ಸ ಸ್ಯಂದನವರೋ ಭಾತಿ ಯುಕ್ತೋ ಮಾತಲಿನಾ ತದಾ ।**
**ಕೃತ್ಸ್ನಃ ಪರಿವೃತೋ ಮೇರುಃ ಭಾಸ್ಕರಸ್ಯೇವ ತೇಜಸಾ ॥ 4 ॥**

ಇಂದ್ರದೇವನ ಹಿಂದೆ ಬರುತ್ತಿದ್ದ ರಥವು ಧ್ವಜದಿಂದ ಶೋಭಿತವೂ ಸಾವಿರ ಕುದುರೆಗಳಿಂದ ಎಳೆಯಲ್ಪಡುತ್ತಿರುವ, ಮಾತಲಿಯು ಸಾರಥಿಯಾಗಿ ಆ ರಥವರವು ಸೂರ್ಯನಂತೆಯೇ ಭಾಸಮಾನವಾಗಿತ್ತು. ತೇಜಸ್ಸಿನಿಂದ ಸಮಗ್ರವಾಗಿ ಪ್ರಕಾಶಿಸುತ್ತಿರುವ ರಥವು ಸುವರ್ಣ ಪರ್ವತ ಮೇರುವಿನಂತೆ ತೋರುತ್ತಿತ್ತು.

## ಯಮಧರ್ಮನ ಯುದ್ಧೋದ್ಯೋಗ

**ಯಮಸ್ತು ದಂಡಮುದ್ಯಮ್ಯ ಕಾಲಯುಕ್ತಂ ಚ ಮುದ್ಗರಮ್ ।**
**ತಸ್ಥೌ ಸುರಗಣಾನೀಕೇ ದೈತ್ಯಾನ್ ನಾದೇನ ಭೀಷಯನ್ ॥ 5 ॥**

ಯಮಧರ್ಮರಾಜನು ತನ್ನ ಕಾಲದಂಡವನ್ನೂ, ಮುದ್ಗರಾಯುಧವನ್ನು ಹಿಡಿದು ಮಹಾಭಯಂಕರನಾಗಿ ತನ್ನ ಘರ್ಜನೆಯಿಂದಲೇ ದೈತ್ಯರನ್ನೂ ನಡುಗಿಸುತ್ತಾ ಸೈನ್ಯದ ಮುಂದೆ ನಿಂತಿದ್ದನು.

ವರುಣನಾದರೂ ಪಾಶ ಹಿಡಿದು ಯುದ್ಧವಾಗುವುದನ್ನು ಕಾಯುತ್ತಾ ತೀರವನ್ನು ನುಗ್ಗಿ ದಾಟಿ ಬರುವ ಸಮುದ್ರನಂತೆ ವೇಗವಾಗಿ ದೇವಸೈನ್ಯದ ಮಧ್ಯಬಂದು ನಿಂತನು. ಶಂಖ, ಮುತ್ತಿನ ಅಂಗದಗಳನ್ನು ಧರಿಸಿದ

ಪಾಶಿಯನ್ನು ನಾಲ್ಕು ಸಮುದ್ರಾಧಿ ದೇವತೆಗಳೂ, ಭಯಂಕರ ಸರ್ಪಗಳೂ ಕಾವಲಾಗಿದ್ದವು. ಜಲಮಯ ಶರೀರವುಳ್ಳ ವರುಣನು ತನ್ನ ಪಾಶವನ್ನು ಹಿಂದೆ - ಮುಂದೆ ಅಲ್ಲಾಡಿಸುತ್ತಾ, ಚಂದ್ರಕಿರಣದಂತೆ ಶೋಭಿಸುವ ಕುದುರೆಗಳಿಂದಲೂ ಅಲೆಗಳ ರೂಪದಲ್ಲಿರುವ ನೀರಿನ ಶಬ್ಧದೊಂದಿಗೆ ವಿಹರಿಸುತ್ತಾ ಇದ್ದನು. ಶ್ವೇತ ವಸ್ತ್ರಧಾರಿಯಾಗಿದ್ದು ಹವಳದಂತಹ ಕೆಂದುಟಿಮಣಿಮಯ ಆಭರಣಗಳು ಅವನ ಶ್ಯಾಮಲ ದೇಹವನ್ನು ಅಲಂಕರಿಸಿದ್ದವು.

ಮಹಾಶಕ್ತಿವಂತನೂ, ನವವಿಧಿಗಳಿಗೆ ಸ್ವಾಮಿಯು, ರಾಜರಾಜೇಶ್ವರನೂ ಯಕ್ಷರಾಕ್ಷಸರಿಗೆ ನಾಯಕನೂ ಆದ ನರವಾಹನ ಕುಬೇರನು ಯುದ್ಧ ಸನ್ನದ್ಧನಾಗಿ ಅಲ್ಲಿಗೆ ಬಂದನು. ಅವನ ಪಲ್ಲಕ್ಕಿಯನ್ನು ಮನುಷ್ಯರು ಹೊತ್ತಿದ್ದರು. ಶಂಖನಿಧಿ-ಪದ್ಮನಿಧಿಗಳೊಂದಿಗೆ ಗದಾಪಾಣಿ ಕುಬೇರನು ಯುದ್ಧಕ್ಕೆ ಬಂದಿದ್ದನು. ಪುಷ್ಪಕವಿಮಾನದಲ್ಲಿ ಕುಳಿತು ಶಿವನಂತೆಯೇ ಶೋಭಿಸುತ್ತಿದ್ದನು.

**ಪೂರ್ವಂ ಪಕ್ಷಂ ಸಹಸ್ರಾಕ್ಷಃ ಪಿತೃರಾಜಸ್ತು ದಕ್ಷಿಣಮ್ ।**
**ವರುಣಃ ಪಶ್ಚಿಮಂ ಪಕ್ಷಮುತ್ತರಂ ನರವಾಹನಃ ॥ 6 ॥**
**ಸೂರ್ಯಃ ಸಪ್ತಾಶ್ವಯುಕ್ತೇನ ರಥೇನಾಂಬರಗಾಮಿನಾ ।**
**ಸಹಸ್ರರಶ್ಮಿಯುಕ್ತೇನ ಭ್ರಾಜಮಾನಃ ಸ್ವತೇಜಸಾ ॥ 7 ॥**

ದೇವ ಸೈನ್ಯದ ಪೂರ್ವಭಾಗದ ರಕ್ಷಣೆಯ ಭಾರವನ್ನು ಇಂದ್ರದೇವನೂ ದಕ್ಷಿಣದಿಕ್ಪತಿ ಯಮನು ದಕ್ಷಿಣಭಾಗ ಭಾರವನ್ನೂ, ಪಶ್ಚಿಮದಿಗಧಿಪತಿ ಪಾಶಿಯು ಪಶ್ಚಿಮದಿಕ್ಕಿನ ಭಾರವನ್ನೂ, ರುದ್ರಮಿತ್ರನೂ ಉತ್ತರದಿಗಧಿಪತಿಯಾದ ಕುಬೇರನು ಉತ್ತರದಿಕ್ಕಿನ ಸೈನ್ಯ ರಕ್ಷಣಾಭಾರ ಹೊತ್ತಿದ್ದನು. ಹೀಗೆ ಚತುರ್ದಿಕ್ಕಿನ ರಕ್ಷಣಾಭಾರವನ್ನು ಬಹು ಎಚ್ಚರಿಕೆಯಿಂದ ನಿಂತಿದ್ದ ಚತುರ್ಯುದ್ಧಶೂರರು ಸೈನ್ಯವನ್ನು ರಕ್ಷಿಸುತ್ತಿದ್ದರು.

ಸೂರ್ಯದೇವನು ಸಪ್ತಸಪ್ತಿಗಳಿಂದಯುಕ್ತವಾಗಿದ್ದ ಆಕಾಶಸಂಚಾರಿಯಾದ ರಥದಲ್ಲಿ ಕುಳಿತು ಯುದ್ಧಕ್ಕಾಗಿ ಆಗಮಿಸುತ್ತಿದ್ದನು. ಅವನ ರಥವು ಮೇರುಪರ್ವತ, ಸ್ವರ್ಗದ ಬಾಗಿಲಿನವರೆಗೂ ಹರಡಿತ್ತು. ಈ ರಥದಿಂದಲೇ ಸೂರ್ಯನು ಜಗತ್ತನ್ನು ಬೆಳಗುವುದು.

ಚಂದ್ರದೇವನು ಹತ್ತು ಬಿಳಿಕುದುರೆಗಳನ್ನು ಹೂಡಿದ್ದ ರಥದಲ್ಲಿ ಕುಳಿತು ತನ್ನ

ಶರೀರ ಕಾಂತಿಯಿಂದ ದಶದಿಕ್ಕನ್ನು ಬೆಳಗುತ್ತಿದ್ದನು. ಹಿಮವನ್ನೇ ಆಯುಧವನ್ನಾಗಿ ಹಿಡಿದಿದ್ದ ಚಂದ್ರನನ್ನೆ ದೈತ್ಯರೆಲ್ಲರೂ ನೋಡುತ್ತಿದ್ದರು.

ಸಮಸ್ತ ಚರಾಚರ ಪ್ರಪಂಚಕ್ಕೆ ಜೀವನದಾತನಾದ ವಾಯುದೇವನು ತನ್ನ ತೇಜಸ್ಸಿನಿಂದಲೇ ದೈತ್ಯರನ್ನು ವ್ಯಥೆಗೊಳಸುತ್ತ ರಣರಂಗದಲ್ಲಿ ಪ್ರಚಂಡವಾಗಿ ಗಾಳ ಬೀಸತೊಡಗಿದನು. ಸಕಲ ಪ್ರಾಣಿಗಳಲ್ಲಿ ಪ್ರಾಣಾಪಾನಾದಿಗಳಂದ ತನ್ನನ್ನೆ ವಿಭಾಗಿಸಿ ರಕ್ಷಿಸುತ್ತಾ, ಪ್ರವಹ ಆವಹ ಸಂವಹಾದಿಗಳಂದ ಇಡೀ ಜಗತ್ತನ್ನೇ ಧರಿಸಿರುವವನು. ವಾಯುದೇವನು ಅಗ್ನಿ ಉರಿಯಲು ಅಶ್ಯನಾದ್ದರಿಂದ ಅಗ್ನಿರಥವೆನಿಸಿರುವನು. ಆಕಾಶಗಾಮಿಯೂ ಶೀಘ್ರಗಾಮಿಯೂ ಆದ ವಾಯುದೇವನು ಶಬ್ಧಕ್ಕೆ ಮೂಲನಾಗಿರುವನು. ಇಂತಹ ವಾಯುವು ರಣರಂಗದಲ್ಲಿ ವೈರಿಗಳ ಮೇಲೆ ಪ್ರಚಂಡಗಾಳ ಬೀಸಿ ತನ್ನ ಕೋಪ ತೋರಿದನು.

ಮರುತ್ತು ಗಣದವರು ವಿದ್ಯಾಧರ, ದೇವಗಂಧರ್ವರೊಂದಿಗೆ ಪೊರೆಬಿಟ್ಟ ಹಾವಿನಂತಿದ್ದ ಖಡ್ಗಗಳನ್ನು ಒರೆಯಿಂದ ತೆಗೆದು ಯುದ್ಧಕ್ಕಾಗಿ ಝಳಪಿಸಿದರು. ತಕ್ಷಕ ವಾಸುಕಿ ಮೊದಲಾದ ಸರ್ಪಪ್ರಧಾನರು ಬಾಯ್ದೆರೆದು ವಿಷವನ್ನು ಉಗುಳುತ್ತಾ ದೇವತೆಗಳಗೆ ಬಾಣಗಳಾಗಿ ಸಂಚರಿಸುತ್ತಿದ್ದವು. ಪರ್ವತಾಭಿಮಾನಿಗಳು, ದೊಡ್ಡ ದೊಡ್ಡ ಬಂಡೆಗಳಂದಲೂ, ಶಿಖರಗಳಂದಲೂ, ಶಾಖೋಪಶಾಖೆಗಳಂದ ಕೂಡಿದ್ದ ವೃಕ್ಷಗಳಂದಲೂ ರಾಕ್ಷಸರನ್ನು ಹೊಡೆಯಲು ಸನ್ನದ್ಧರಾಗಿದ್ದರು.

**ಅರಿಘ್ನಂ ಅಮರಾನೀಕೇ ಚಕ್ರಂ ಚಕ್ರಗದಾಧರಃ ।**
**ಸಪರೀವೇಷಮುದ್ಯಂತಂ ಸವಿತುರ್ಮಂಡಲಂ ಯಥಾ ॥ 8 ॥**
**ಸವ್ಯೇನಾಲಂಭ್ಯ ಮಹತೀಂ ಸರ್ವಾಸುರವಿನಾಶಿನೀಮ್ ।**
**ಕರೇಣ ಕಾಲೀಂ ವಪುಷಾ ಶತ್ರುಕಾಲಪ್ರದಾಂ ಗದಾಂ ॥ 9 ॥**

ಶ್ರೀಮಹಾವಿಷ್ಣುವು ಸಕಲೇಂದ್ರಿಯ ಪ್ರೇರಕನಾಗಿ ಹೃಷಿಕೇಶನೆಂದೂ ಹದಿನಾಲ್ಕು ಲೋಕಾತ್ಮಕ ಕಮಲವನ್ನು ನಾಭಿಯಲ್ಲಿ ಅಭಿವ್ಯಕ್ತಗೊಳಸಿ ಪದ್ಮನಾಭನೆಂದೂ, ಮೂರು ಪಾದಗಳನ್ನೂ ಬೆಳೆಸಿ ಹದಿನಾಲ್ಕು ಲೋಕಗಳನ್ನೂ ಮೂರು ಹೆಜ್ಜೆಯಿಂದ ಅಳೆದು ತ್ರಿವಿಕ್ರಮನೆಂದೂ ಸಮುದ್ರಿಕ್ತಗುಣವುಳ್ಳ ಬ್ರಹ್ಮದೇವನಿಗೆ ಕಾರಣನೆನಿಸಿ ಸಮುದ್ರಯೋನಿಯೂ.

ಮಧುನಾಮಕ ದೈತ್ಯಹಾರಿಯೂ ಸಕಲಯಜ್ಞಫಲಭೋಕ್ತೃವೂ, ಸಕಲಕ್ರತುಗಳಲ್ಲಿ ಸತ್ಕೃತನೂ, ಭೂಮಿ ನೀರು ಅಗ್ನ್ಯಾದಿ ಪಂಚಭೂತ ನಿರ್ಮಾತೃವೂ, ಜಗತ್ತಿಗೆ ಮೂಲ ಕಾರಣನೂ, ಜಗತ್ತಿಗೆ ಗುರುಗಳಾದ ಬ್ರಹ್ಮಾದಿಗಳಗೂ ಗುರುವು, ಉತ್ಕೃಷ್ಟ ಸರ್ವಜ್ಞನೂ, ಸೂರ್ಯಾಗ್ನಿಯಂತೆ ಪ್ರಕಾಶಮಾನನೂ, ಶ್ರೀಹರಿಯು ಶತ್ರುಸಂಹಾರಕವಾದ ಸುದರ್ಶನಚಕ್ರವನ್ನು ಧರಿಸಿ ಪರಿಧಿಯಿಂದ ಸುತ್ತುವರೆದಿರುವ ಸೂರ್ಯನೋಪಾದಿ-ಯಲ್ಲಿರುವವನೂ, ಗರುಡಧ್ವಜ ಶ್ರೀಮನ್ನಾರಾಯಣನು ತನ್ನ ವಾಮಹಸ್ತದಲ್ಲಿ ಶತ್ರುಮರ್ದನದಲ್ಲಿ ಖ್ಯಾತಿಯೆತ್ತಿದ್ದ ಗದೆಯನ್ನೂ ಧರಿಸಿದ್ದು ಉಳಿದ ಕೈಗಳಿಂದ ಶಾಂರ್ಗ ನಂದಕ ಮೊದಲಾದ ಆಯುಧಗಳನ್ನು ಧರಿಸಿದ್ದನು.

**ಸ ಕಶ್ಯಪಸ್ಯಾತ್ಮಭವಂ ದ್ವಿಜಂ ಭುಜಗಭೋಜನಮ್ ।**
**ಪವನಾಧಿಕಸಂಪಾತಂ ಗಗನಕ್ಷೋಭಣಂ ಖಗಮ್ ॥ 10 ॥**

**ಭುಜಗೇಂದ್ರೇಣ ವದನೇ ನಿವಿಷ್ಟೇನ ವಿರಾಜಿತಮ್ ।**
**ಅಮೃತಾರಂಭನಿಮುಕ್ತಂ ಮಂದರಾದ್ರಿಮಿವೋಚ್ಛ್ರಿತಮ್ ॥ 11 ॥**

**ದೇವಾಸುರ ವಿಮರ್ದೇಷು ಶತಶೋ ದೃಷ್ಟವಿಕ್ರಮಮ್ ।**
**ಮಹೇಂದ್ರೇಣಾಮೃತಸ್ಯಾರ್ಥೇ ವಜ್ರೇಣ ಕೃತಲಕ್ಷಣಮ್ ॥ 12 ॥**

**ಶಿಖಿನಂ ಚೂಡಿನಂ ಚೈವ ತಪ್ತಕುಂಡಲ ಭೂಷಣಮ್ ।**
**ಭೋಗಿ ಭೋಗಾವಸಕ್ತೇನ ಮಣಿರತ್ನೇನ ಭಾಸ್ವತಾ ॥ 13 ॥**

**ನೀಲಲೋಹಿತ ಪೀತಾಭಿಃ ಪತಾಕಾಭಿರಲಂಕೃತಮ್ ।**
**ಅರುಣಾವರಜಂ ಶ್ರೀಮಾನ್ ಆರುಹ್ಯ ಸಮರೇ ಹರಿಃ ॥ 14 ॥**

ಶ್ರೀಮನ್ನಾರಾಯಣನು ದುಷ್ಟ ಸರ್ಪಭಕ್ಷಕನಾದ, ಕಶ್ಯಪನ ಪುತ್ರನೂ, ಅರುಣನ ಸೋದರನೂ, ಪಕ್ಷಿಶ್ರೇಷ್ಠನೂ, ಆದ ಗರುಡನ ಮೇಲೆ ರಣರಂಗಕ್ಕೆ ಆಗಮಿಸಿದನು. ಪ್ರವಹವಾಯುವಿನಿಗಿಂತಲೂ ವೇಗಶಾಲಿಯೂ, ತನ್ನ ಹಾರುವಿಕೆಯಿಂದ ಗಗನತಲವನ್ನೇ ಕ್ಷೋಭೆಗೊಳಿಸುವ, ತನ್ನ ಬಾಯಲ್ಲಿ ಸರ್ಪವನ್ನು ಕಚ್ಚಿಕೊಂಡಿರುವ, ಸಮುದ್ರಮಥನ ಕಾಲದಲ್ಲಿ ಕಡೆಗೋಲಾಗಿದ್ದ ಮಂದರ ಪರ್ವತದಂತೆ ಶರೀರವುಳ್ಳವನೂ, ದೇವಾಸುರ ಸಂಗ್ರಾಮದಲ್ಲಿ ಬಹಳ ಬಾರಿ ತನ್ನ ಪರಾಕ್ರಮದಿಂದ ಮೆರೆದವನೂ, ಅಮೃತ ತರಲು ಸ್ವರ್ಗಕ್ಕೆ

ಲಗ್ಗೆ ಇಟ್ಟಾಗ ಇಂದ್ರದೇವನ ವಜ್ರಾಯುಧವನ್ನು ಹಾಕಿದರೂ ಏನೂ ಆಗಲಿಲ್ಲ. ಆದರೂ ವಜ್ರಾಯುಧವು ಶ್ರೀಹರಿಯ ವಿಭೂತಿರೂಪವಿದ್ದ ಕಾರಣ ಅದಕ್ಕೆ ಅವಮಾನವಾಗಬಾರದೆಂದು ತಾನೇ ಒಂದು ಗರಿಯನ್ನು ಬೀಳಿಸಿದವನು, ಆ ಚಿಹ್ನೆಯನ್ನು ಇನ್ನೂ ಹೊಂದಿರುವವನೂ, ತಲೆಯಲ್ಲಿ ಮುಕುಟ-ಪ್ರಾಯವಾದ ಪಿಂಛವುಳ್ಳವನೂ, ಪಾದದಿಂದ ಮೊಣಗಂಟಿನವರೆಗೂ ಹಳದಿಬಣ್ಣ, ಅಲ್ಲಿಂದ ಹೊಕ್ಕಳನವರೆಗೂ ಬಿಳಬಣ್ಣ, ಅಲ್ಲಿಂದ ಕುತ್ತಿಗೆ ತನಕ ಕೆಂಪುವರ್ಣ, ಅಲ್ಲಿಂದ ತಲೆಯವರೆಗೂ ಹಸುರಾಗಿರುವ ತಲೆಯಲ್ಲಿ ಕಪ್ಪು ಬಣ್ಣ ಹೀಗೆ ಪಂಚವರ್ಣಗಳಿಂದ ಅಲಂಕೃತನಾದ ಗರುಡನನ್ನು ಏರಿ ಶ್ರೀಹರಿಯು ಯುದ್ಧಕ್ಕೆ ಬಂದಿದ್ದನು.

ಸಮಸ್ತ ದೇವತೆಗಳೂ, ತಪಸ್ವಿ ಮುನಿಗಳೂ ಶ್ರೇಷ್ಠ ಮಂತ್ರಮಯ ಸ್ತುತಿಗಳಿಂದ ಸ್ತುತಿ ಮಾಡುತ್ತಲಿದ್ದರು. ಈ ಯುದ್ಧದಲ್ಲಿ ದೇವತೆಗಳ ಸಂಘಟಕ ಕುಬೇರನಾಗಿದ್ದರೆ ಯಮರಾಜನು ಸೇನಾದಂಡಾಧಿಪತಿಯಾಗಿದ್ದನು. ಸಮುದ್ರರಾಜನು ಸಮುದ್ರದಂತೆ ದೇವಸೈನ್ಯವನ್ನೆಲ್ಲ ಪರಿಖಾರೂಪದಿಂದ ವ್ಯಾಪಿಸಿದ್ದನು. ಇಂದ್ರದೇವನು ಮುಂದಾಳುವಾಗಿದ್ದು ವಾಯುವು ಸರ್ವತ್ರ ವೇಗವಾಗಿ ಸಂಚರಿಸುತ್ತಿದ್ದು ಭಯಂಕರ ಶಬ್ಧವಾಗುತ್ತಿತ್ತು. ವಾಯುವಿನ ಗಾಳಿಯಿಂದ ಅಗ್ನಿಯು ಮತ್ತಷ್ಟು ಪ್ರಜ್ವಲಿಸುತ್ತಿದ್ದನು. ಇಂತಹ ದೇವಸೈನ್ಯವು ದೈತ್ಯದಾನವರೊಂದಿಗೆ ಕಾದಾಡಲು ಹವಣಿಸುತ್ತಿತ್ತು.

**ವಿಷ್ಣೋಃ ಜಿಷ್ಣೋಃ ಸಹಿಷ್ಣೋಶ್ಚ ಭ್ರಾಜಿಷ್ಣೋಃ ತೇಜಸಾ ವೃತಮ್ ।**
**ಬಲಂ ಬಲವದುದ್ಭೂತಂ ಯುದ್ಧಾಯ ಸಮವರ್ತತ ॥ 15 ॥**

**ಸ್ವಸ್ತ್ಯಸ್ತು ದೇವೇಭ್ಯಃ ಇತಿ ಸ್ತುತ್ವಾ ತತ್ರಾಂಗಿರಾಬ್ರವೀತ್ ।**
**ಸ್ವಸ್ತ್ಯಸ್ತು ದೈತ್ಯೇಭ್ಯ ಇತಿ ಉಶನಾ ವಾಕ್ಯಮಾದದೇ ॥ 16 ॥**

ದೇವತಾಸೈನ್ಯಕ್ಕೆ ಸರ್ವತ್ರವ್ಯಾಪ್ತನೂ, ಸರ್ವದಾ ಜಯಶೀಲನೂ, ಶತ್ರುದಾಳಿಯನ್ನು ಸಹಿಸಲು ಶಕ್ತನೂ, ಸೂರ್ಯರಂತೆ ಕಾಂತಿಯುಕ್ತನೂ ಆದ ಶ್ರೀಮನ್ನಾರಾಯಣನ ತೇಜಸ್ಸಿನಿಂದ ಕೂಡಿ ಶತ್ರುಗಳಿಂದ ಆಕ್ರಮಣ ಮಾಡಲು ಅಸಾಧ್ಯವಾಗಿತ್ತು. ಅತ್ಯುತ್ಸಾಹದಿಂದ ಯುದ್ಧಕ್ಕೆ ಉಭಯ ಸೇನೆಗಳೂ ತಯಾರಿ ನಡೆಸಿದ್ದವು.

## ಬೃಹಸ್ಪತಿ - ಶುಕ್ರಾಚಾರ್ಯರಿಂದ ಶುಭಾಶಂಸನ

ಇದೇ ಸಮಯದಲ್ಲಿ ದೇವತೆಗಳ ಗುರುಗಳಾದ ಬೃಹಸ್ಪತ್ಯಾಚಾರ್ಯರು ಶಾಂತಿರಸ್ತು ತುಷ್ಟಿರಸ್ತು ಸ್ವಸ್ತ್ಯಸ್ತು ಎಂಬ ಪುಣ್ಯಾಹ ಮಂತ್ರಗಳಿಂದ ಪುಣ್ಯಾಹವಾಚನ ಪೂರ್ವಕ ಶುಭಾಶಂಸನೇ ಕೋರಿದರು. ಇತ್ತ ದೈತ್ಯ ಗುರು ಶುಕ್ರಾಚಾರ್ಯರೂ ಸಹ ತಮ್ಮ ದೈತ್ಯ ವರ್ಗಕ್ಕೆ ಸ್ವಸ್ತಿಯಾಗಲಿ ಎಂದು ಆಶೀರ್ವದಿಸಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ದೇವದಾನವ ಯುದ್ಧೋದ್ಯೋಗವೆಂಬದಲ್ಲಿ
ನಲವತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




## ಅಥ ಪಂಚಚತ್ವಾರಿಂಶೋಽಧ್ಯಾಯಃ

### ದೇವ-ದಾನವ ಸಂಗ್ರಾಮ

*ವೈಶಂಪಾಯನ ಉವಾಚ-*

**ತಾಭ್ಯಾಂ ಬಲಾಭ್ಯಾಂ ಸಂಜಜ್ಞೇ ತುಮುಲೋ ವಿಗ್ರಹಸ್ತದಾ ।**
**ಸುರಾಣಾಮಸುರಾಣಾಂ ಚ ಪರಸ್ಪರ ಜಯೈಷಿಣಾಮ್ ॥ 1 ॥**

**ದಾನವಾಃ ದೇವತ್ಯೈಃ ಸಾರ್ಧಂ ನಾನಾಪ್ರಹರಣೋದ್ಯತಾಃ ।**
**ಸಮೀಯುಃ ಯುದ್ಧ್ಯಮಾನಾ ವೈ ಪರ್ವತಾಃ ಪರ್ವತೈರಿವ ॥ 2 ॥**

**ಧರ್ಮಾಧರ್ಮ ಸಮಾಯುಕ್ತಂ ದರ್ಪೇಣ ವಿನಯೇನ ಚ ॥ 3 ॥**

ಜನಮೇಜಯನೇ, ದೇವ-ದಾನವ ಕಾಳಗ ಪ್ರಾರಂಭವಾಯಿತು. ದೇವ ದಾನವನರ ಘೋರ ಯುದ್ಧದಲ್ಲಿ ಒಬ್ಬರು ಮತ್ತೊಬ್ಬರನ್ನು ಗೆಲ್ಲಬೇಕೆಂಬ ಮಹತ್ವಾಕಾಂಕ್ಷೆ ಹೊಂದಿದ್ದರು. ದಾನವರು ನಾನಾ ವಿಧ ಆಯುಧಗಳನ್ನು ಹಿಡಿದು ಪರಸ್ಪರ ಯುದ್ಧ ಮಾಡುತ್ತಿದ್ದರು. ಪರ್ವತಗಳು ಪರ್ವತಗಳೊಂದಿಗೆ ಯುದ್ಧ ಮಾಡಿದಂತೆ ಇತ್ತು. ಅಥವಾ ಧರ್ಮ-ಅಧರ್ಮಗಳಗೆ ಯುದ್ಧವೇರ್ಪಟ್ಟಂತೆಯೂ, ವಿನಯಕ್ಕೆ-ಅಹಂಕಾರಕ್ಕೆ ಯುದ್ಧ ನಡೆಯುತ್ತಿದ್ದಂತೆ ತೋರುತ್ತಿತ್ತು.

ದೇವಾಸುರರ ದೊಡ್ಡ ದೊಡ್ಡ ಪರ್ವತಗಳಿಂದಲೂ ಕೈಗಳಿಂದಲೂ, ಮುಷ್ಟಿಗಳಿಂದಲೂ ಕಾಲುಗಳಿಂದಲೂ ಹಾಗೂ ಮಹಾಸ್ತ್ರಗಳಿಂದಲೂ ಹೊಡೆದುಕೊಂಡರು. ದೇವ ದೈತ್ಯರು ರಥಗಳಲ್ಲಿ ಕುಳಿತು, ಆನೆ, ಕುದುರೆಗಳಲ್ಲಿ ಕುಳಿತು ಶತ್ರು ಸೈನ್ಯದ ಮೇಲೇರಿ ಹೋಗುತ್ತಿದ್ದರು. ಕತ್ತಿ ಮೊದಲಾದ ಆಯುಧ

ಹಿಡಿದು ಆಕಾಶಕ್ಕೆ ನೆಗೆಯುತ್ತಿದ್ದರು. ಮುಸಲಗಳನ್ನು ಶತ್ರು ಸೈನ್ಯದ ಮೇಲೆ ಬಿಸಾಕುತ್ತಿದ್ದರು. ಧನುಸ್ಸಿನ ಜ್ಯಾವನ್ನು ಎಳೆದು ಒಂದರ ಹಿಂದೆ ಮತ್ತೊಂದಂತೆ ನಿರಂತರ ಬಾಣಗಳನ್ನು ಬಿಡುತ್ತಿದ್ದರು. ಮುದ್ಗರಾಯುಧದಿಂದಲೂ, ಕತ್ತಿಯಿಂದಲೂ ಮಹಾಸ್ತ್ರಗಳಿಂದಲೂ, ಪರ್ವತಗಳಿಂದ ಯುದ್ಧ ನಡೆಯಿತು. ರಕ್ತದ ಕೋಡಿಯೇ ಹರಿಸಿದರು. ದೇವತೆಗಳನ್ನು ದೈತ್ಯವರ್ಯರು ಪ್ರಹರಿಸಿದರು. ಬಲಿಷ್ಠರಾದ ದೈತ್ಯರಿಂದ ಹೊಡೆಯಲ್ಪಟ್ಟ ಇಂದ್ರಾದಿ ದೇವತೆಗಳು ಬಹಳ ಗಾಯಗೊಂಡರು. ವಕ್ಷಸ್ಥಳಗಳನ್ನು ಕತ್ತಿಯಿಂದ ಸೀಳಿದರು. ಮಾಯಾಪಾಶದಿಂದ ದೇವತೆಗಳು ನಡುಗಿದರು. ಮಂತ್ರ ಶಕ್ತಿಯಿಂದ ದೇವಸೈನ್ಯವು ಸ್ತಂಭಿಸಲ್ಪಟ್ಟಿರುವಂತೆ ಕಾಣುತ್ತಿತ್ತು.

ಇಂದ್ರ ದೇವನ ಪರಾಕ್ರಮ

ಈ ಸಮಯದಲ್ಲಿ ಇಂದ್ರದೇವನು ವಜ್ರಾಯುಧ ಪ್ರಹಾರಗಳಿಂದ ದೈತ್ಯರ ಮಯಾಪಾಶವನ್ನು ಕತ್ತರಿಸಿ ಹಾಕಿ, ದೈತ್ಯರ ಸೈನ್ಯದೊಳಗೆ ನುಗ್ಗಿ ಹೋದನು. ತನಗೆ ಎದುರಾಗಿ ಬಂದ ದೈತ್ಯರ ತಲೆಗಳನ್ನು ಉರುಳಿಸುತ್ತಾ, ಅತ್ಯಂತ ಪ್ರಬಲವಾದ 'ತಾಮಸ'ವೆಂಬ ಅಸ್ತ್ರ ಪ್ರಯೋಗಿಸಿ, ಸರ್ವತ್ರ ಅಂಧಕಾರವೇರ್ಪಡಿಸಿದನು.

**ತೇಽನ್ಯೋನ್ಯಂ ನಾವಬುದ್ಧ್ಯಂತ ದೇವಾನ್ ವಾ ದಾನವಾನಪಿ ।**
**ಘೋರೇಣ ತಮಸಾಽಽವಿಷ್ಟಾಃ ಪುರುಹೂತಸ್ಯ ತೇಜಸಾ ॥ 4 ॥**

**ಮಾಯಾ ಪಾಶೈಶ್ಚ ವಿಮುಕ್ತಾಶ್ಚ ಯತ್ನವಂತಃ ಸುರೋತ್ತಮಾಃ ।**
**ವಪೂಂಷಿ ದೈತ್ಯಸಂಘಾನಾಂ ತಮೋಭೂತಾನ್ಯಪಾತಯನ್ ॥ 5 ॥**

ಇಂದ್ರದೇವನ ತಾಮಶಾಸ್ತ್ರದ ಪರಿಣಾಮದಿಂದಾಗಿ ಯುದ್ಧ ಮಾಡುತ್ತಿರುವರಲ್ಲಿ ದೇವತೆಗಳನ್ನಾಗಲೀ ದಾನವರನ್ನಾಗಲೀ ತಿಳಿಯಲಾಗುತ್ತಿರಲಿಲ್ಲ. ವಜ್ರಾಯುಧ ಪ್ರಹಾರದ ಪ್ರಭಾವದಿಂದಾಗಿ ಮಾಯಾಪಾಶದಲ್ಲಿ ಸಿಕ್ಕಿಹಾಕಿಕೊಂಡಿದ್ದ ದೇವತೆಗಳು ಈಗ ಇಂದ್ರದೇವನ ಸಾಮರ್ಥ್ಯದಿಂದಾಗಿ ಮಾಯಾಪಾಶದಿಂದ ವಿಮುಕ್ತರಾಗಿದ್ದರು.

ಯುದ್ಧೋದ್ಯೋಗ ಮಾಡುತ್ತಿದ್ದ ದೇವತೆಗಳು ತಮಸ್ಸಿನಿಂದ ಆಚ್ಛಾದಿತರಾಗಿದ್ದ ದೈತ್ಯರನ್ನು ಕತ್ತಿ ಬಾಣಾದಿ ಆಯುಧಗಳಿಂದ ಛಿನ್ನ ಭಿನ್ನ ಮಾಡಿದರು. ಅಂಧಕಾರದಿಂದಾಗಿ ದೈತ್ಯರು ಕಪ್ಪಾಗಿ ಕಾಣುತ್ತಿದ್ದ ದೈತ್ಯರನ್ನು

ಸಂಹರಿಸಿದರು. ದೈತ್ಯರ ಗುಂಪು ಮೂರ್ಛೆಗೊಂಡು ರಣರಂಗದಲ್ಲಿ ನೆಲೆ ತಪ್ಪಿತು. ದೈತ್ಯರೆಲ್ಲರೂ ರೆಕ್ಕೆ ಕತ್ತರಿಸಿ ಹಾಕಿದ ಪರ್ವತಗಳಂತೆ ಕಂಡರು.

## ಮಯಾಸುರನ ಮಾಯೆ

**ತದಾಸೃಜತ್ ಮಹಾಮಾಯಾಂ ಮಯಸ್ತಾಂ ತಾಮಸೀಂ ದಹನ್ ।**
**ಯುಗಾಂತಾಗ್ನಿಮಿವಾತ್ಯುಗ್ರಾಂ ಸೃಷ್ಟಾಂ ಔರ್ವೇಣ ವಹ್ನಿನಾ ॥ 6 ॥**
**ಸಾ ದದಾಹ ತಮಃ ಸರ್ವಂ ಮಾಯಾ ಮಯವಿಕಲ್ಪಿತಾ ।**
**ದೈತ್ಯಾಶ್ಚ ದೀಪ್ತವಪುಷಃ ಸದ್ಯಃ ಉತಸ್ಥುರಾಹವೇ ॥ 7 ॥**

ಇಂದ್ರದೇವರು ತಾಮಸಿ ಅಸ್ತ್ರ ಬಿಟ್ಟಾಗ ದೈತ್ಯರ ಸ್ಥಿತಿ ನೋಡಿದ ಮಯಾಸುರನು ತಮಸ್ಸನ್ನು ನಾಶ ಮಾಡುವ ಸಲುವಾಗಿ ಮಹಾಮಾಯೆಯೊಂದನ್ನು ನಿರ್ಮಿಸಿದನು. ಇದು ಪ್ರಲಯ ಕಾಲದ ಅಗ್ನಿಯಂತೆ ಜಾಜ್ವಲ್ಯಮಾನವಾಗಿತ್ತು. ಅತ್ಯುಗ್ರವಾದ ಇದನ್ನು ಔರ್ವವೆಂಬ ಅಗ್ನಿಯು ಸೃಷ್ಟಿಸಿದ್ದನು. ಈ ಮಯನ ಮಹಾಮಾಯೆಯು ಇಂದ್ರದೇವನ ತಮಸ್ಸನ್ನು ಸುಟ್ಟು ಹಾಕಿತು. ಪುನಃ ದೈತ್ಯರ ಶರೀರ ಮೊದಲಿನಂತೆಯೇ ಪ್ರಕಾಶ ಹೊಂದಿತು. ಮರುಕ್ಷಣವೇ ದೈತ್ಯರೇಲ್ಲರೂ ಯುದ್ಧ ಪ್ರಾರಂಭಿಸಿದರು.

ದೇವತೆಗಳಾದರೂ ಮಹಾಮಾಯೆಯ ತಾಪದಿಂದಾಗಿ ಸುಡಲ್ಪಟ್ಟವರಾಗಿ ತಾಪ ಪರಿಹಾರಕ್ಕಾಗಿ ತಂಪಾದ ನೀರಿನಲ್ಲಿ ಆಶ್ರಯ ಪಡೆಯಲು ಶೀತಕಿರಣನಾದ ಚಂದ್ರನನ್ನು ಸಮೀಪಿಸಿದರು. ಸಂತಪ್ತರಾಗಿದ್ದ ದೇವತೆಗಳು ತಮ್ಮ ನಾಯಕನಾದ ಇಂದ್ರನನ್ನೇ ಮೊರೆ ಹೋದರು.

ತಮ್ಮ ಸಂಕಷ್ಟವನ್ನು ಅವನ ಮುಂದೆ ತೋಡಿಕೊಂಡರು. ಮಾಯೆಯ ಸಾಮರ್ಥ್ಯದಿಂದ ತಮ್ಮ ಸೈನ್ಯವೆಲ್ಲವೂ ಸುಡುತ್ತಿರುವಾಗ ಇಂದ್ರನ ಆದೇಶದಂತೆ ವರುಣನು ಹೀಗೆ ಹೇಳಿದನು.

*ವರುಣ ಉವಾಚ–*

**ಪುರಾ ಬ್ರಹ್ಮರ್ಷಿಜಃ ಶಕ್ರ ತಪಸ್ತೇಪೇಽತಿದಾರುಣಮ್ ।**
**ಊರ್ವೋ ಮುನಿಃ ಸ ತೇಜಸ್ವೀ ಸದೃಶೋ ಬ್ರಹ್ಮಣೋ ಗುಣೈಃ ॥ 8 ॥**

ದೇವೇಂದ್ರನೇ, ಹಿಂದೆ ಊರ್ವನೆಂಬ ತೇಜಸ್ವಿಯಾದ ಋಷಿಯಿದ್ದನು. ಇವನು ಭೃಗು ಋಷಿಯ ಮಗನು. ಗುಣಗಳಿಂದ ವಸಿಷ್ಠರಿಗೆ ಸದೃಶನಾಗಿದ್ದನು.

ಒಂದು ಬಾರಿ ಅತ್ಯಂತ ಕಠೋರವಾದ ತಪಸ್ಸನ್ನು ಪ್ರಾರಂಭಿಸಿದನು. ಅವನ ತಪಸ್ಸಿನ ಜ್ವಾಲೆಯಿಂದಾಗಿ ಜಗತ್ತೇ ಪರಿತಪಿಸಿತು. ಋಷಿಗಳು ದೇವತೆಗಳು ಬ್ರಹ್ಮರ್ಷಿಗಳೊಂದಿಗೆ ಅವನ ಬಳ ಬಂದರು.

**ಹಿರಣ್ಯಕಶಿಪುಶ್ಚೈವ ದಾನವೋ ದಾನವೇಶ್ವರಃ ।**
**ಋಷಿಂ ವಿಜ್ಞಾಪಯಾಮಾಸ ಪುರಾ ಪರಮತೇಜಸಮ್ ॥ 9 ॥**

**ಋಷಿವಂಶೇಷು ಭಗವನ್ ಛಿನ್ನಮೂಲಮಿದಂ ಕುಲಮ್ ।**
**ಏಕಸ್ತ್ವಂ ಅನಪತ್ಯಶ್ಚ ಗೋತ್ರಂ ಯನ್ನಾನು ವರ್ತಸೇ ।**
**ಕೌಮಾರಂ ವ್ರತಮಾಸ್ಥಾಯ ಕ್ಲೇಶಮೇವಾನುವರ್ತಸೇ ॥ 10 ॥**

**ಬಹೂನಿ ವಿಪ್ರ ಗೋತ್ರಾಣಿ ಮುನೀನಾಂ ಭಾವಿತಾತ್ಮನಾಮ್ ।**
**ಏಕದೇಹಾನಿ ತಿಷ್ಠಂತಿ ವಿಭಕ್ತಾನಿ ವಿನಾ ಪ್ರಜಾಃ ।**
**ತತ್ ಪ್ರವರ್ತಸ್ವ ವಂಶಾಯ ವರ್ಧಯಾತ್ಮಾನಮಾತ್ಮನಾ ॥ 11 ॥**

ಇಂದ್ರದೇವನೇ, ದೇವತೆಗಳು ಋಷಿಗಳು ಅವನನ್ನು ಭೇಟಿ ಮಾಡುವ ಮೊದಲೇ ಹಿರಣ್ಯಕಶಿಪುವು ಊರ್ವನನ್ನು ಸಮೀಪಿಸಿ ಜಗತ್ಕ್ಷಯಕಾರಕ ತಪಸ್ಸನ್ನು ನಿಲ್ಲಿಸು ಎಂದು ಪ್ರಾರ್ಥಿಸಿದ್ದ. ಅವನು ತಪಸ್ಸನ್ನು ನಿಲ್ಲಿಸಲಿಲ್ಲ. ದೇವತೆಗಳೆಲ್ಲ ಅವನ ಬಳ ಹೋಗಿ – ಋಷಿ ವಂಶದಲ್ಲಿಯೇ ಭೃಗುವಂಶವು ಶ್ರೇಷ್ಠವಾಗಿದ್ದು. ಈಗ ಅದು ನಾಶವಾಗುವುದರಲ್ಲಿದೆ. ಈ ವಂಶದ ಕಡೆ ಕುಡಿಯೆಂದರೆ ನಿನೋಬ್ಬನೆ. ನೀನಾದರೂ ನೈಷ್ಠಿಕಬ್ರಹ್ಮಚಾರಿಯಾಗಿರುವೆ. ವಂಶ ಮುಂದುವರಿಸಲು ಪ್ರಯತ್ನಿಸುತ್ತಿಲ್ಲ. ಯಾವಾಗಲೂ ತಪಸ್ಸಿನಲ್ಲಿಯೇ ಕಳೆಯುತ್ತಿರುವೆ. ಅಂತಃಕರಣ ಶುದ್ಧವಾಗಿರುವ ಮುನಿಗಳ ಎಷ್ಟೋ ಗೋತ್ರಗಳು ಹಾಗೂ ಸಂತತಿಗಳು ಒಬ್ಬ ವ್ಯಕ್ತಿಯನ್ನೆ ಅವಲಂಬಿಸಿರುತ್ತದೆ. ವಂಶೋದ್ಧಾರಕನು ನಿನ್ನಂತೆ ಒಬ್ಬನೆ ಇರುತ್ತಾನೆ. ವಂಶೋದ್ಧಾರಕನಾದರೂ ಬ್ರಹ್ಮಚರ್ಯಾದಿಗಳಿಂದ ಕಾಲ ಕಳೆದು ಅವನಿಗೂ ಸಂತತಿಯಾಗದಿದ್ದರೆ ಆ ವಂಶವೇ ನಿರ್ನಾಮವಾಗುತ್ತದೆ. ಕುಲಗಳ ಮೂಲವೆ ನಾಶವಾದರೆ ಪುನಃ ವಂಶಾಭಿವೃದ್ಧಿ ಅಸಾಧ್ಯವೆ ಸರಿ. ಅದೃಷ್ಟವಶಾತ್ ನಿನ್ನ ವಂಶ ಇನ್ನೂ ಉಚ್ಛಿನ್ನಮೂಲವಾಗಿಲ್ಲ. ಕುಲ ಉಳಿಸಲು ನೀನೊಬ್ಬನು ಇನ್ನು ಇರುವೆ. ನೀನು ಉಳಿದಿರುವಾಗ ನಿನ್ನ ವಂಶ ನಾಶವಾಗಲು ಬಿಡಬಾರದು. ತಪಸ್ಸನ್ನು ಮಾಡುವುದು ತಪಸ್ವಿಗಳಿಗೆ ಶೋಭೆಯೇ. ತಪಸ್ಸಿನಿಂದ ಬ್ರಹ್ಮತೇಜಸ್ಸು

ವೃದ್ಧಿಯಾಗುತ್ತದೆ. ಆದರೂ ವಂಶವನ್ನು ಉದ್ಧರಿಸಿ ಪಿತೃಗಳನ್ನು ಉದ್ಧರಿಸುವುದೂ ಮಕ್ಕಳ ಕರ್ತವ್ಯವಾಗಿದೆ. ಆದ್ದರಿಂದ ವಿವಾಹವಾಗಿ ಸಂತಾನೋತ್ಪತ್ತಿಗೆ ಪ್ರಯತ್ನಿಸು. ಯೋಗ್ಯ ಕನ್ಯೆಯಲ್ಲಿ ನಿನ್ನ ತೇಜಸ್ಸನ್ನು ಆಧಾನಮಾಡು. ಆತ್ಮಾವೈ ಪುತ್ರನಾಮಾಸಿ ಎಂಬಂತೆ ನಿನ್ನ ದ್ವಿತೀಯ ಶರೀರವನ್ನು ಪ್ರಕಟಗೊಳಿಸು ಎಂದರು.

## ಮುನಿಯ ಕೋಪ

**ಸ ಏವಮುಕ್ತಃ ಮುನಿಭಿಃ ಮನಸಿ ತಾಡಿತಃ ।**
**ಜಗರ್ಹೇ ತಾನ್ ಋಷಿಗಣಾನ್ ವಚನಂ ಚೇದಬ್ರವೀತ್ ॥ 12 ॥**

**ಯಥಾಯಂ ಶಾಶ್ವತೋ ಧರ್ಮಃ ಮುನೀನಾಂ ವಿಹಿತಂ ಪುರಾ ।**
**ಸದಾ ಆರ್ಷಂ ಸೇವತಾಂ ಕರ್ಮ ವನ್ಯಮೂಲಫಲಾಶಿನಾಮ್ ॥ 13 ॥**

**ಬ್ರಹ್ಮಯೋನೌ ಪ್ರಸೂತಸ್ಯ ಬ್ರಾಹ್ಮಣಸ್ಯಾನುವರ್ತಿನಃ ।**
**ಬ್ರಹ್ಮಚರ್ಯಂ ಸುಚರಿತಂ ಬ್ರಹ್ಮಾಣಮಪಿ ಚಾಲಯೇತ್ ॥ 14 ॥**

ಬ್ರಹ್ಮರ್ಷಿಗಳು ಹೀಗೆ ಹೇಳುತ್ತಿರುವಾಗ ಊರ್ವನ ಮನಸ್ಸಿಗೆ ಖೇದವುಂಟಾಯಿತು. ಆ ಋಷಿಗಳೆಲ್ಲರನ್ನೂ ನಿಂದಿಸುತ್ತಾ ಹೀಗೆಂದನು.

ನಾನು ಅನುಷ್ಠಾನ ಮಾಡುತ್ತಿರುವ ಧರ್ಮ ಶಾಶ್ವತ ಧರ್ಮ. ನೀವು ಹೇಳುತ್ತಿರುವುದು ಕುಲಧರ್ಮ. ಕುಲಧರ್ಮದಿಂದ ಶಾಶ್ವತಧರ್ಮಕ್ಕೆ ಚ್ಯುತಿಬರಬಾರದೇ ಹೊರತು, ಶಾಶ್ವತ ಧರ್ಮದಿಂದ ಕುಲಧರ್ಮಕ್ಕೆ ಚ್ಯುತಿವುಂಟಾದರೆ ದೋಷವೇನಿಲ್ಲ. ನಾನಾದರೂ ಋಷಿಭೋಜ್ಯವಾದ ಅರಣ್ಯ ಹಣ್ಣು ಹಂಪಲನ್ನು ತಿಂದು ತಪಸನ್ನಾಚರಿಸುತ್ತಿರುವೆ. ಬ್ರಹ್ಮಚರ್ಯಪಾಲನೆ ದೊಡ್ಡ ತಪಸ್ಸು.

ಬ್ರಾಹ್ಮಣ ಜಾತಿಯಲ್ಲಿ ಜನಿಸಿ ಬ್ರಾಹ್ಮಣನ ಮುಖ್ಯಧರ್ಮವಾದ ಅಖಂಡ ಬ್ರಹ್ಮಚರ್ಯವನ್ನಾಚರಿಸಿದರೆ ಅದರಿಂದ ಬ್ರಹ್ಮನನ್ನೇ ಬೇಕಾದರೂ ವಿಚಲಿತಗೊಳಿಸುವನು.

ಗೃಹಸ್ಥರಿಗೆ ಷಟ್‌ಧರ್ಮವಿಹಿತವಾಗಿದೆ. ಯಜ್ಞಮಾಡುವುದು. ಮಾಡಿಸುವುದು ಅಧ್ಯಯನ ಅಧ್ಯಾಪನ, ದಾನ–ಪ್ರತಿಗ್ರಹ ಮಾಡುವುದೆಂದು ಜಿತೇಂದ್ರಿಯರಾದ ನಮ್ಮಂತಹ ಅರಣ್ಯೋಕಸ್ಸರಿಗೆ ಫಲಮೂಲಾದಿಗಳೆ ಜೀವಿಕೆ.

**ಅಂಬುಭಕ್ಷಾಃ ವಾಯುಭಕ್ಷಾಃ ದಂತೋಲೂಖಲಿಕಾಸ್ತಥಾ ।**
**ಅಶ್ಮಕುಟ್ಟಾ ದಶನಪಾಃ ಪಂಚಾತಪ ತಪಾಶ್ಚ ಯೇ ॥ 15 ॥**

ತಪಸ್ವಿಗಳಲ್ಲಿ ಕೆಲವರು **ನೀರಿ[1]ನಿಂದಲೇ** ಜೀವಿಸುವವರು, ಕೇವಲ ವಾಯುಸೇವನೆಯಿಂದ ಜೀವಿಸುವವರು, ದಂತ ಹಾಗೂ ಒರಳುಗಳಲ್ಲಿ ಧಾನ್ಯಕುಟ್ಟಿ ಹೊಟ್ಟನ್ನು ಬೇರ್ಪಡಿಸಿ ಹರಿಗರ್ಪಿಸಿ ತಿನ್ನುವವರು, ಕಲ್ಲಿನಿಂದ ಕುಟ್ಟಿ ಜೀವಿಸುವ ಅಶ್ಮಕುಟ್ಟರೂ, ಹಲ್ಲಿನಿಂದಲೇ ಜಗಿದು ತಿನ್ನುವ ದಶನಪರು, ಕೆಲವರು ಪಂಚಾಗ್ನಿ ಮಧ್ಯ ತಪಸ್ಸು ಮಾಡುವವರೂ ಇರುವರು.

ಗೆಡ್ಡೆ, ಗೆಣಸು ಆಹಾರಿಗಳು, ಹಣ್ಣನ್ನು ಮಾತ್ರ ತಿನ್ನುವವರೂ, ಹಣ್ಣು-ಗೆಡ್ಡೆಗೆಣಸು ತಿನ್ನುವವರೂ, ಕರು ಹಾಲು ಕುಡಿಯುವಾಗ ಬೀಳುವ ನೊರೆ ಭಕ್ಷಕರು. ಇಂತಹವರು,

**ಏತೇ ತಪಸಿ ತಿಷ್ಠಂತೋ ವ್ರತೈರಪಿ ಸುದುಷ್ಕರೈಃ ।**
**ಬ್ರಹ್ಮಚರ್ಯಂ ಪುರಸ್ಕೃತ್ಯ ಪ್ರಾರ್ಥಯಂತೇ ಪರಾಂ ಗತಿಮ್ ॥ 16 ॥**
**ಬ್ರಹ್ಮಚರ್ಯಾದ್ ಬ್ರಾಹ್ಮಣಸ್ಯ ಬ್ರಾಹ್ಮಣತ್ವಂ ವಿಧೀಯತೇ ।**
**ಏವಮಾಹುಃ ಪರೇಲೋಕೇ ಬ್ರಹ್ಮಬ್ರಹ್ಮವಿದೋ ಜನಾಃ ॥ 17 ॥**

ಅತ್ಯಂತ ದುಶ್ಚರ ತಪಸ್ಸನ್ನು ಬರುವುದೇ ಬ್ರಹ್ಮಚರ್ಯದಿಂದ ಇದೇ ಪರಲೋಕ ಗತಿ ಸಾಧನವೆಂದು ಬ್ರಹ್ಮವೇತ್ತರ ಮತವು.

ಬ್ರಹ್ಮಚರ್ಯದಲ್ಲಿಯೇ ಧೈರ್ಯವಡಗಿದೆ. ಧೈರ್ಯವಿಲ್ಲದವರಿಗೆ ಬ್ರಹ್ಮಚರ್ಯ ಅಸಾಧ್ಯವು. ಬ್ರಹ್ಮಚರ್ಯಯೇ ಒಂದು ಮಹಾತಪಸ್ಸು ಭೀಷ್ಮರು ಬ್ರಹ್ಮನುಷ್ಠಾನ ತಪಸ್ಸಿನಿಂದ ಸಿದ್ಧಿ ಪಡೆದರು. ಇಂತಹವರಿಗೆ ಬ್ರಹ್ಮಲೋಕವೆ ಪ್ರಾಪ್ತವಾಗುತ್ತದೆ.

---

1. **ಅಂಬುಭಕ್ಷಾಃ** – ಧ್ರುವನು ಒಂಬತ್ತನೆಯ ತಿಂಗಳಲ್ಲಿ ನೀರನ್ನು ಮಾತ್ರ ಕುಡಿದು ತಪಸ್ಸು ಮಾಡಿರುವನು.

   **ವಾಯುಭಕ್ಷಾಃ** – ಧ್ರುವನು ನಾಲ್ಕನೆ ತಿಂಗಳಿನಲ್ಲಿ ಹನ್ನೆರಡು ಹನ್ನೆರಡು ದಿವಸಕ್ಕೊಂದು ಬಾರಿ ವಾಯುಭಕ್ಷನಾಗಿ ತಪಸ್ಸನ್ನಾಚರಿಸಿರುವನು.

   **ವೈಖಾನಸಾಃ** – **ವೈಖಾನಸಾಃ ಮೂಲಭಕ್ಷಾಃ ಫಲಭಕ್ಷಾಃ ಉದುಂಬರಾಃ ।**
   **ವಾಲಖಿಲ್ಯಾಃ ಸರ್ವಭಕ್ಷಾಃ ಫೇನಪಾಃ ವತ್ಸಫೇನಪಾಃ ॥** –*ಭಾ.ತಾ. 3/13/43*

**ನಾಸ್ತಿಯೋಗಂ ವಿನಾ ಸಿದ್ಧಿಃ ನಾಸ್ತಿ ಸಿದ್ಧಿಂ ವಿನಾ ಯಶಃ ।**
**ನಾಸ್ತಿ ಲೋಕೇ ಯಶೋಮೂಲಂ ಬ್ರಹ್ಮಚರ್ಯಾತ್ ಪರಂ ತಪಃ ॥ 18 ॥**

ಶ್ರೀಹರಿಯಲ್ಲಿ ಮನಸ್ಸಿನ ಯೋಗವಿಲ್ಲದಿದ್ದರೆ ಅಪರೋಕ್ಷಜ್ಞಾನ ಸಿದ್ಧಿಯಾಗುವುದಿಲ್ಲ. ಅಪರೋಕ್ಷಜ್ಞಾನವಾಗದ ಹೊರತು ಮೋಕ್ಷವಿಲ್ಲ. ಈ ಮನಸ್ಸಿನ ಯೋಗವಾಗುವುದೇ ಬ್ರಹ್ಮಚರ್ಯದಿಂದ.

ಹೀಗೆ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ ಪಂಚೇಂದ್ರಿಯಗಳಿಂದ ಅನುಭವಿಸಲ್ಪಡುವ ಶಬ್ಧ ಸ್ಪರ್ಶಾದಿಗಳನ್ನೂ ತನ್ನಂಕೆಯಲ್ಲಿರಿಸಿಕೊಂಡು, ಬ್ರಹ್ಮಚರ್ಯ ವ್ರತನಿಷ್ಠನಾಗಿರಬೇಕು. ಹೀಗಿದ್ದರೆ ಬೇರೆ ತಪಸ್ಸೇಕೆ?

ಹರಿಯಲ್ಲಿ ಮನೋನಿಗ್ರಹವಿಲ್ಲದೆ ಕೇಶಬೋಳಸಿಕೊಂಡರೇನು ಫಲ?

ಭಗವತ್ಪ್ರೀತಿ ಕಾಮನೆಯಿಲ್ಲದೆ ಕೃಚ್ಛ್ರಾದಿವ್ರತಾನುಷ್ಠಾನಗಳು, ವೇದಾಧ್ಯಯನ ಮಾಡಿದ್ದರೂ, ಶ್ರೀಹರಿಯಲ್ಲಿ ಸರ್ವೇಂದ್ರಿಯ ವ್ಯಾಪಾರವನ್ನು ಅರ್ಪಿಸದೆ ಬ್ರಹ್ಮಚಾರಿಯೆನಿಸಿರುವುದು ಕೇವಲ ಡಂಬಾಚಾರವೇ ಸರಿ.

**ಕ್ವ ದಾರಾಃ ಕ್ವ ಚ ಸಂಯೋಗಃ ಕ್ವ ಚ ಭಾವ ವಿಪರ್ಯಯಃ ।**
**ಯದೇಯಂ ಬ್ರಹ್ಮಣಾ ಸೃಷ್ಟಾಃ ಮನಸಾ ಮಾನಸೀ ಪ್ರಜಾಃ ॥ 19 ॥**

**ಮನಸಾ ನಿರ್ಮಿತಾ ಯೋನಿಃ ಆಧಾತವ್ಯಾ ತಪಸ್ವಿನಾ ।**
**ನ ದಾರಯೋಗಂ ಬೀಜಂ ವಾ ವ್ರತಮುಕ್ತಂ ತಪಸ್ವಿನಾಮ್ ॥ 20 ॥**

ದೇವತೆಗಳೇ ! ಮಕ್ಕಳಾಗಬೇಕಿದ್ದರೆ ಬ್ರಹ್ಮದೇವನು ಮನಸ್ಸಿನಿಂದಲೇ ಪ್ರಜೆಗಳನ್ನು ಸೃಷ್ಟಿಸಿಲ್ಲವೆ? ಸನತ್ಕುಮಾರಾದಿಗಳ ಸೃಷ್ಟಿಯಲ್ಲಿ ಬ್ರಹ್ಮದೇವನಿಗೆ ಹೆಂಡಂದಿರಾಗಲಿ, ಅವರ ಸಂಪರ್ಕವಾಗಲೀ, ಮನಸ್ಸಿನ ವಿಕಾರವಾಗಲೀ ಎಲ್ಲಿತ್ತು! ತಪಸ್ವಿಯು ಮನಸ್ಸಿನಿಂದ ನಿರ್ಮಿತವಾದ ಜಗತ್ಕಾರಣ ಶ್ರೀಹರಿಯಲ್ಲಿ ಮಾನಸಿಕ ಸಂಕಲ್ಪದಿಂದಲೇ ಗರ್ಭಾಧಾನ ಮಾಡಬೇಕು. ಪತ್ನಿ ಸ್ವೀಕಾರ, ವೀರ್ಯಾಧಾನ ತಪಸ್ವಿಗಳಿಗೆ ಹೇಳಿದ ಮಾರ್ಗವಲ್ಲ.

ನಿಮಗೂ ಅಂತಹ ತಪಸ್ಸಿನ ಶಕ್ತಿಯಿದೆಯಾಗಿ ನೀವೂ ಆತ್ಮಬಲದಿಂದಲೇ ಪ್ರಜಾಪತಿಯಂತೆ ಪ್ರಜೆಗಳನ್ನು ಸೃಷ್ಟಿಸಬಹುದು. ಅದಕ್ಕಾಗಿ ವಿವಾಹಾದಿಗಳು ಬೇಕಿಲ್ಲ. ನೀವು ನನ್ನ ಮುಂದೆ ಆಡಿದ ಮಾತುಗಳೆಲ್ಲ ಸಜ್ಜನರಾಡುವ ಮಾತಲ್ಲ. ಆದರೂ ಧರ್ಮಾಧರ್ಮಶೂನ್ಯವಾದವನ್ನೇ ನನ್ನ ಮುಂದೆ ಆಡಿರುವಿರಿ.

ನೀವೆಲ್ಲರೂ ನನ್ನ ಬ್ರಹ್ಮಚರ್ಯದ ಪ್ರಭಾವ ಈಗಲೇ ನೋಡುವಿರಂತೆ. ಈಗ ನಾನು ಪತ್ನಿಯ ಸಂಬಂಧವಿಲ್ಲದೇನೆ ಅತ್ಯಂತ ಶ್ರೇಷ್ಠ ಪುತ್ರನನ್ನು ಮನಸ್ಸಿನಿಂದಲೇ ಸೃಷ್ಟಿಸುವೆನು. ನನ್ನ ಸ್ವರೂಪವೇ ಮತ್ತೊಂದು ಪುತ್ರರೂಪದಲ್ಲಿ ಹುಟ್ಟುತ್ತದೆ. ಈ ಶಿಶುವಾದರೂ ತನ್ನ ಶಕ್ತಿ ಸಾಮರ್ಥ್ಯದಿಂದ ಸಮಸ್ತ ಪ್ರಜೆಗಳನ್ನೂ ಭಸ್ಮ ಮಾಡಿಬಿಡುವುದೋ ಎಂಬಂತಹ ತೇಜಸ್ಸಿನ ಮೂರ್ತಿಯಾಗಿರುತ್ತದೆ.

**ಊರ್ವಸ್ತು ತಪಸಾऽऽವಿಷ್ಟೋ ನಿವೇಶ್ಯೋರುಂ ಹುತಾಶನೇ ।**
**ಮಮಂಥೈಕೇನ ದರ್ಭೇಣ ಪುತ್ರಸ್ಯ ಪ್ರಭವಾರಣಿಮ್ ॥ 21 ॥**

ತಪಸ್ಸಿನಿಂದ ಕೂಡಿದ ಊರ್ವನು ತನ್ನ ತೊಡೆಯನ್ನು ಯಜ್ಞೇಶ್ವರನ ಮೇಲಿಟ್ಟು ಪುತ್ರನಿಗಾಗಿ ಅರಣಿಯ ಸ್ಥಾನದಲ್ಲಿರುವ ತನ್ನ ತೊಡೆಯನ್ನು ದರ್ಭೆಯಿಂದ ಮಥನ ಮಾಡಿದನು. ಕೂಡಲೇ ತೊಡೆಯನ್ನೆ ಭೇದಿಸಿಕೊಂಡು ಅಗ್ನಿಯಂತೆ ಮಗನೊಬ್ಬನು ಜನಿಸಿದನು. ಜ್ವಾಲೆಗಳ ಮಾಲೆಯಂತಿರುವ ಸಮಸ್ತ ಜಗತ್ತನ್ನು ಸುಟ್ಟುಬಿಡುವಂತಹ ಕಾಂತಿವುಳ್ಳ ಆ ಊರು ಪುತ್ರನು ಔರ್ವ ಎಂಬ ನಾಮದಿಂದ ಖ್ಯಾತನಾದನು. ಅವನ ಮಾತು ಹೀಗಿತ್ತು.

**ಕ್ಷುಧಾ ಮೇ ಬಾಧತೇ ತಾತ! ಜಗದ್ ಭಕ್ಷೇ ತ್ಯಜಸ್ವ ಮಾಮ್ ।**
**ನಿರ್ದಹನ್ನಿವ ಭೂತಾನಿ ವವೃಧೇ ಸೋऽಂತಕೋऽನಲಃ ॥ 22 ॥**

ತಾತನೇ ! ನನಗೆ ಹಸಿವು ಬಹಳ ಪೀಡಿಸುತ್ತಿದೆ. ಈ ಹಸಿವನ್ನು ಪರಿಹರಿಸಿಕೊಳ್ಳಲು ಈ ಜಗತ್ತನ್ನೆ ಭಕ್ಷಿಸಲು ನನಗೆ ಆದೇಶ ನೀಡು.

ಹೀಗೆ ತಂದೆಯನ್ನು ಪ್ರಾರ್ಥಿಸಿ ಔರ್ವಾಗ್ನಿಯು ಸ್ಥಾವರ ಜಂಗಮ ಮೊದಲಾದ ಪ್ರಾಣಿ ಪ್ರಪಂಚವನ್ನು ಸುಟ್ಟು ಹಾಕಲು ಪ್ರಲಯ ಕಾಲ ಅಗ್ನಿಯಂತೆ ವೃದ್ಧಿಸಲು ಪ್ರಾರಂಭಿಸಿದನು.

ಈ ಸಮಯದಲ್ಲಿ ಬ್ರಹ್ಮದೇವರು ಅಲ್ಲಿಗೆ ಆಗಮಿಸಿದರು. ಬೆಂಕಿಯ ಜ್ವಾಲೆಗಳಂತೆ ಪ್ರಕಾಶಮಾನನಾಗಿರುವ, ಔರ್ವನ ಅಗ್ನಿಜ್ವಾಲೆಗಳಿಂದ ದುಃಖಪಡುತ್ತಿರುವ ಲೋಕಗಳನ್ನು ನೋಡಿ ಹೀಗೆ ಹೇಳಿದನು.

**ಧಾರ್ಯತಾಂ ಪುತ್ರಜಂ ತೇಜೋ ಲೋಕಾನಾಂ ಹಿತಕಾಮ್ಯಯಾ ।**
**ಅಸ್ಯಾಪತ್ಯಸ್ಯ ತೇ ವಿಪ್ರ ಕರಿಷ್ಯೇ ಸಾಹ್ಯಮುತ್ತಮಮ್ ॥ 23 ॥**

ಊರು ಮಹರ್ಷಿಯೇ, ಲೋಕಗಳನ್ನು ಸುಡುತ್ತಿರುವ ನಿನ್ನ ಪುತ್ರನ ತೇಜಸ್ಸನ್ನು ನೀನೇ ಧರಿಸು. ನಾನು ನಿನ್ನ ಪುತ್ರನಿಗೆ ಸಹಾಯ ಮಾಡುವೆ. ನಾನು ಹೇಳುವ ಮಾತನ್ನು ಲಾಲಿಸು. ನಿನ್ನ ಈ ಮಗನಿಗೆ ಅಮೃತಪ್ರಾಯವಾದ ಭೋಜನವನ್ನೂ ವಾಸ ಮಾಡಲು ಯೋಗ್ಯ ಜಾಗವನ್ನು ನೀಡುವೆನು ಎಂದನು.

ಋಷಿಯಾದರೂ ಬ್ರಹ್ಮದೇವನೇ, ನಾನು ಧನ್ಯನು. ನನ್ನ ಮೇಲೆ ಮಹಾನ್ ಅನುಗ್ರಹ ಮಾಡಿರುವೆ. ನನ್ನ ಮಗನಿಗೆ ಅಶನ-ವಸನ ನೀಡಿವೆಂದಿರುವೆಯಲ್ಲ.

ಈಗ ಈ ನನ್ನ ಪುತ್ರನಿಗೆ ಯೌವ್ವನ ಕಾಲವು ಪ್ರಾಪ್ತವಾಗಿದೆ. ಈಗ ಜೀವಿಸಲು ಭೋಜನದ ಅವಶ್ಯಕತೆ ಅವಶ್ಯವಾಗಿದೆ. ಈ ಕಾಲದಲ್ಲಿ ನೀಡುವ ಆಹಾರ ಪದಾರ್ಥಗಳಾವುವು. ಇವನಿಗೆ ಯಾವುದನ್ನು ವಾಸಯೋಗ್ಯ ಜಾಗವನ್ನೀಡುತ್ತಿ. ಇವನ ಯೋಗ್ಯತೆಗೆ ಯೋಗ್ಯವಾದ ಅನ್ನವಾವುದು? ಎಂದನು.

**ವಡವಾ ಮುಖೇऽಸ್ಯ ವಸತಿಃ ಸಮುದ್ರಾಸ್ಯೇ ಭವಿಷ್ಯತಿ ।**
**ಮಮ ಯೋನಿರ್ಜಲಂ ವಿಪ್ರ! ತಚ್ಚ ತೋಯಮಯಂ ವಪುಃ ॥ 24 ॥**

ಮುನಿಯೇ! ಹೆಣ್ಣು ಕುದುರೆಯ ಮುಖದಂತಿರುವ ಸಮುದ್ರವೇ ಇವನ ವಾಸಸ್ಥಾನವಾಗಿದೆ. ನನ್ನ ಜನ್ಮಕ್ಕೂ ಈ ನೀರೇ ಕಾರಣ. ಈ ಜಲವನ್ನೆ ನಿನ್ನ ಮಗನಿಗೆ ಭೋಜನ ರೂಪದಲ್ಲಿ ನೀಡುತ್ತೇನೆ. ಇವೆರಡರಿಂದ ಸುಖವಾಗಿರಲಿ. ನಿನ್ನ ಮಗನಾದ ಈ ಔರ್ವನನ್ನು ಜಲದಲ್ಲಿ ವಿಹರಿಸುತ್ತಾ, ಜಲಾಹಾರಿಯಾಗಿ ಇರಲಿ. ಪ್ರಲಯ ಕಾಲದಲ್ಲಿ ದೇವಾಸುರೋರಗ ಯಕ್ಷ ರಾಕ್ಷಸ ಕಿನ್ನರನ್ನು ಸುಟ್ಟು ಹಾಕುವನು.

ಬ್ರಹ್ಮದೇವನ ಅಣತಿಯಂತೆ ಔರ್ವನು ತನ್ನ ಕಾಂತಿಯನ್ನು ತನ್ನಲ್ಲಿ ಅಡಗಿಸಿಕೊಂಡು ಸಮುದ್ರದ ವಡವಾ ಮುಖವನ್ನು ಪ್ರವೇಶಿಸಿದನು. ಬ್ರಹ್ಮದೇವನು ತನ್ನ ಲೋಕಕ್ಕೆ ಹೊರಟು ಹೋದನು. ಇಂತಹ ಪರಮಾದ್ಭುತ ಘಟನೆ ನೋಡಿ ಹಿರಣ್ಯಕಶಿಪುವು ಊರ್ವನಿಗೆ ದಂಡಾಕಾರ ವಂದಿಸಿದನು.

**ಭಗವನ್ ಅದ್ಭುತಮಿದಂ ನಿರ್ವೃತ್ತಂ ಲೋಕಸಾಕ್ಷಿಕಮ್ ।**
**ತಪಸಾ ತೇ ಮುನಿಶ್ರೇಷ್ಠ! ಪರಿತುಷ್ಟಃ ಪಿತಾಮಹಃ ॥ 25 ॥**

**ಅಹಂ ತು ತವ ಪುತ್ರಸ್ಯ ತವ ಚೈವ ಮಹಾವ್ರತ ।**
**ಭೃತ್ಯ ಇತ್ಯವಗಂತವ್ಯಃ ಶ್ಲಾಘ್ಯೋಽಸ್ಮಿ ಯದಿ ಕರ್ಮಣಾ ॥ 26 ॥**

ಊರು ಮಹರ್ಷಿಯೇ! ಅದ್ಭುತವಾದ ಕಾರ್ಯವನ್ನು ಲೋಕದೆದುರೆ ನಿರ್ಮಿಸಿರುವೆ ನಿನ್ನ ತಪಃ ಸಾಮರ್ಥ್ಯ ಅದ್ಭುತ! ಅಮೋಘ! ಬ್ರಹ್ಮದೇವನೆ ಇದನ್ನು ಒಪ್ಪಿರುವನು. ನಾನು ಮಾಡಿದ ಕರ್ಮಗಳಿಂದ ನೀನು ನನ್ನನ್ನು ಶ್ಲಾಘಿಸುವುದಾದರೆ ನಿನಗೂ ಹಾಗೂ ನಿನ್ನ ಮಗನಿಗೂ ನಾನು ದಾಸನನ್ನಾಗಿ ಭಾವಿಸು. ನಾನು ನಿನಗೆ ಶರಣು ಬಂದಿರುವೆ. ನಿನ್ನ ಸೇವೆಯಲ್ಲಿಯೇ ನಾನು ನಿರತನಾಗಿರುವೆನು. ನನ್ನನ್ನು ನೀನು ರಕ್ಷಿಸು, ನನಗೆ ವಿಪತ್ತು ಬಂದದ್ದಾದರೆ ನಿನಗೆ ವಿಪತ್ತು ಬಂದಂತೆಯೇ ಸರಿ.

ಊರುವು ಹಿರಣ್ಯಕಶಿಪುವೇ ನೀನು ನನ್ನನ್ನು ಗುರುವನ್ನಾಗಿ ಸ್ವೀಕರಿಸಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿದೆ. ಮಹಾಸಾಮರ್ಥ್ಯಶಾಲಿಯಾದ ನೀನು ನನ್ನನ್ನು ತಂದೆಯನ್ನಾಗಿಯೊ ಗುರುವನ್ನಾಗಿಯೊ ಭಾವಿಸುವುದಾದರೆ ಇದೊಂದು ನನಗೆ ಮಹಾನನುಗ್ರಹವೆಂದೆ ತಿಳಿಯುವೆ. ನನ್ನ ತಪಸ್ಸಿನ ಸಾಮರ್ಥ್ಯದಿಂದಾಗಿ ನಿನಗೆ ಯಾವುದೇ ಭಯವಿರುವುದಿಲ್ಲ. ಈ ನನ್ನ ಪುತ್ರನಿಂದ ನಿರ್ಮಿಸಲ್ಪಟ್ಟ ಇಂಧನವಿಲ್ಲದೇ ಈ ಜ್ವಾಲೆಗಳ ರೂಪವಾದ ಈ ಮಾಯೆಯನ್ನು ಗ್ರಹಿಸು. ಅಗ್ನಿಗಳೂ ಕೂಡ ಈ ಮಾಯೆಯನ್ನು ಸ್ಪರ್ಶಿಸಲಾರವು.

ಇದು ನೀನು ಜೀವಿಸಿರುವವರೆಗೂ ನಿನ್ನ ರಕ್ಷಣೆ, ವಂಶರಕ್ಷಣೆ ಮಾಡುತ್ತಾ ಇರುತ್ತದೆ. ಸರ್ವಶತ್ರುದಾಹಕವಾಗಿರುವ ಈ ಪಾವಕನನ್ನು ಗ್ರಹಿಸು.

ಊರ್ವನು ಹೀಗೆ ಹೇಳಿದಾಗ ಹಾಗೆ ಆಗಲೆಂದು ಆ ಪಾವಕನನ್ನು ಸ್ವೀಕರಿಸಿದನು.

*ವರುಣ ಉವಾಚ –*

**ಸೈಷಾ ದುರ್ವಿಷಹಾ ಮಾಯಾ ದೇವೈರಪಿ ದುರಾಸದಾ ।**
**ಔರ್ವೇಣ ನಿರ್ಮಿತಾ ಪೂರ್ವಂ ಪಾವಕೇನೋರ್ವಸೂನುನಾ ॥ 27 ॥**

ದೇವೇಂದ್ರನೇ, ಈ ರೀತಿಯಲ್ಲಿ ಔರ್ವಾಗ್ನಿಯಿಂದ ನಿರ್ಮಿತ ಆ ಮಾಯಾ ಜ್ವಾಲೆಯು ದೇವತೆಗಳಿಗೆ ಸಹಿಸಲಸಾಧ್ಯವೆಂದೆ ನನ್ನ ಮತಿ. ಆದರೆ ಹಿರಣ್ಯಕಶಿಪು ಈಗ ನೃಸಿಂಹನಿಂದ ಮೃತನಾಗಿರುವನು. ಇದರಿಂದಾಗಿ

ಈ ಜ್ವಾಲೆಯ ಶಕ್ತಿ ಈಗ ಕಾರ್ಯನಿರ್ವಹಿಸಲಾರದು. ಈ ಮಾಯಾಜ್ವಾಲೆಯು ಹಿರಣ್ಯಕಶಿಪು ಜೀವಿಸಿರುವಷ್ಟು ಕಾಲಮಾತ್ರವೆ ಇರುತ್ತದೆ ಎಂದಿದ್ದನು. ಆದ್ದರಿಂದ ನೀರಿನಿಂದಲೇ ಆವಿರ್ಭಾವಿಸಿರುವ ಚಂದ್ರನನ್ನು ನನ್ನೊಂದಿಗೆ ಕಳುಹಿಸು, ಚಂದ್ರನ ಸಹಾಯದಿಂದ ನಾನು ನನ್ನಲ್ಲಿರುವ ಆ ಮಾಯಾಜ್ವಾಲೆಯನ್ನು ನಾಶ ಮಾಡುವೆನು ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಔರ್ವೋತ್ಪತ್ತಿವೆಂಬಲ್ಲಿ
ನಲವತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 46 ಹರಿಪರ್ವ

# ಅಥ ಷಟ್ಚತ್ವಾರಿಂಶತ್ತಮೋಽಧ್ಯಾಯಃ

*ವೈಶಂಪಾಯನ ಉವಾಚ-*

**ಏವಮಸ್ತ್ವಿತಿ ಸಂಹೃಷ್ಟಃ ಶಕ್ರಃ ತ್ರಿದಶವರ್ಧನಃ ।**
**ಸಂದಿದೇಶಾಗ್ರತಃ ಸೋಮಂ ಯುದ್ಧಾಯ ಶಿಶಿರಾಯುಧಮ್ ॥ 1 ॥**

**ಗಚ್ಛ ಸೋಮ ಸಹಾಯತ್ವಂ ಕುರು ಪಾಶಧರಸ್ಯ ವೈ ।**
**ಅಸುರಾಣಾಂ ವಿನಾಶಾಯ ಜಯಾಯ ಚ ದಿವೌಕಸಾಮ್ ॥ 2 ॥**

ವೈಶಂಪಾಯನರು ರಾಜನಿಗೆ ಜನಮೇಜಯನೇ, ದೇವತೆಗಳ ಬಲಾದಿಗಳಿಗೆ ಅಭಿವರ್ಧಕನಾದ ಸಹಸ್ರಾಕ್ಷನು ಪ್ರೀತನಾಗಿ ವರುಣನಿಗೆ ಹಾಗೆ ಆಗಲಿ ಎಂದು ಹೇಳಿ, ತನ್ನ ಮುಂದೆ ನಿಂತಿದ್ದ ಹಿಮವೆ ಆಯುಧವಾಗಿವುಳ್ಳ ಚಂದ್ರದೇವನಿಗೆ ನೀನು ವರುಣನಿಗೆ ಸಹಾಯಕನಾಗಿ ಯುದ್ಧಕ್ಕೆ ಹೊರಡು. ದೇವತೆಗಳ ಉಳಿವು-ದೈತ್ಯರ ಅಳಿವು ನಿನ್ನಿಂದಾಗಬೇಕು. ವರುಣನಿಗೆ ಸಹಾಯ ಹಸ್ತ ನೀಡು. ನಿನ್ನಂತಹ ಅಪ್ರತಿಮ ಸಾಹಸಿ ಯಾರಿದ್ದಾರೆ. ಗ್ರಹ ನಕ್ಷತ್ರಗಳಿಗೆ ಅಧಿಪತಿಗಳಿಗೂ ಅಧಿಪತಿಯು, ಪ್ರತಿಯೊಂದು ರಸಗಳಲ್ಲಿರುವ ರಸತತ್ತ್ವ ನೀನೆಂದೆ ಜ್ಞಾನಿಗಳ ಮತ. ಸಮುದ್ರದಂತೆ ನಿನ್ನ ಮಂಡಲದ ಕ್ಷಯ ವೃದ್ಧಿಗಳು ಅವ್ಯಕ್ತವಾಗಿರುತ್ತವೆ. ಹಗಲು-ರಾತ್ರಿ ಕಾಲ ಪರಿವರ್ತನೆ ನಿನ್ನಿಂದಲೇ. ನಿನ್ನ ಮಂಡಲದಲ್ಲಿ ಭೂಮಿಯ ನೆರಳು ಮೊಲವೆಂಬ ಹೆಸರಿನಿಂದ ಇದೆ. ನೀನು ಶಶಾಂಕನು. ಜ್ಯೋತಿರ್ವೇತ್ತರಾಗಲೀ, ಚಂದ್ರೋಪಾಸಕರಾಗಲಿ ನಿನ್ನ ನಿಜಸ್ವರೂಪ ಲೆಕ್ಕ ಹಾಕಿರುವುದಿಲ್ಲ. ನೀನು ಸೂರ್ಯಮಂಡಲದಿಂದ ಒಂದು ಲಕ್ಷ ಯೋಜನ ಮೇಲಿರುವೆ. ನಿನ್ನ ತೇಜಸ್ಸಿನಿಂದಲೇ ಈ ಅಂಧಕಾರ

ನೀಗುತ್ತದೆ. ನಿನ್ನ ಶ್ವೇತಕಿರಣಗಳು ಹಾಲಿನಂತಿದ್ದು ಹಿಮಮಯವಾಗಿವೆ. ಉಡುಗಳಿಗೆ ಪತಿಯಾದ ನೀನು ಸಂವತ್ಸರಾದಿ ರಚಿಸಿದವನು ನೀನೆ. ಯಜ್ಞಗಳಿಗೆ ರಸವಾದ ಔಷಧಿ ವನಸ್ಪತಿ ದೇವತೆಯು, ಯಜ್ಞಗಳಿಗೂ ರಸರೂಪನು, ನೀರು ಯಜ್ಞಾದಿಗಳಿಗೂ ಉತ್ಪತ್ತಿ ಸ್ಥಾನವಾಗಿರುವೆ. ಶ್ವೇತವರ್ಣದ ಹತ್ತು ಕುದುರೆಗಳನ್ನು ಹೊಂದಿರುವ ನೀನು ಅಮೃತಕ್ಕೆ ಆಧಾರನಾಗಿ ಅಮೃತಕಿರಣನೆನಿಸಿರುವಿ. ಸುಂದರರಾದ ಸ್ತ್ರೀ ಪುರುಷರಲ್ಲಿರುವ ಕಾಂತಿಯು ನಿನ್ನದೆ. ಸೋಮರಸದಿಂದ ಜೀವಿಸಿರುವ ದೇವತೆಗಳಿಗೆ ಸೋಮರಸಪ್ರದಾಯಕನು.

ಚಂದ್ರಮನ್ನೇ! ನೀನು ನಿನ್ನ ಸೈನ್ಯದೊಂದಿಗೆ ವರುಣನ ಜೊತೆಗೂಡಿ ಯುದ್ಧ ಮಾಡಿ ನಮ್ಮನ್ನೆಲ್ಲ ಸುಡುತ್ತಿರುವ ಆಸುರೀಮಾಯೆಯನ್ನು ಉಪಶಮನಗೊಳಿಸು.

ದೇವೇಂದ್ರನು ಹೀಗೆ ಆದೇಶಿಸಿದಾಗ ಚಂದ್ರದೇವನು – ದೇವರಾಜ ಇಂದ್ರನೇ! ನಾನು ವರುಣನೊಂದಿಗೆ ಯುದ್ಧಕ್ಕೆ ಹೋಗಿ ದೈತ್ಯರ ಮಾಯೆಯನ್ನು ನಾಶ ಮಾಡುವ ಹಿಮದ ವರ್ಷವನ್ನೆ ಸುರಿಸಿ ದೈತ್ಯರನ್ನು ದಿಕ್ಕು ತೋಚದಂತೆ ಮಾಡುವುದನ್ನು ನೀನೀಗಲೇ ನೋಡುವೆ.

**ತತೋ ಹಿಮಕರೋತ್ಸೃಷ್ಟಾಃ ಸಬಾಷ್ಪಾ ಹಿಮವೃಷ್ಟಯಃ ।**
**ವೇಷ್ಟಯಂತಿ ಸ್ಮ ತಾನ್ ಘೋರಾನ್ ದೈತ್ಯಾನ್ ಮೇಘಗಣಾ ಇವ ॥ 3 ॥**

**ತೌ ಪಾಶಶುಕ್ಲಾಂಶುಧರೌ ವರುಣೇಂದೂ ಮಹಾರಣೇ ।**
**ಜಘ್ನತುಃ ಹಿಮಪಾತೈಶ್ಚ ಪಾಶಘಾತೈಶ್ಚ ದಾನವಾನ್ ॥ 4 ॥**

**ಮೃಧೇ ಚೇರತುರಂಭೋಭಿಃ ಕ್ಷುಬ್ಧಾವಿವ ಮಹಾರ್ಣವೌ ।**
**ಶಾಮಯಾಮಾಸತುಃ ಮಾಯಾಂ ದೇವೌ ದೇತ್ಯೈಯ ನಿರ್ಮಿತಮ್ ॥5॥**

**ಶೀತಾಂಶು ಜಲ ನಿರ್ದಗ್ಧಾಃ ಪಾಶೈಶ್ಚ ಪ್ರಸಿತಾ ರಣೇ ।**
**ನ ಶೇಕುಃ ಚಲಿತುಂ ದೈತ್ಯಾ ವಿಶಿರಸ್ಕಾ ಇವಾದ್ರಯಃ ॥ 6 ॥**

ಚಂದ್ರನು ತನ್ನ ಸೈನ್ಯದೊಂದಿಗೆ ಯುದ್ಧಸನ್ನದ್ಧನಾಗಿ ತುಂತುರು ಮಳೆಯು ಮೇಘಗಳಂತೆ ದೈತ್ಯರನ್ನು ಆವರಿಸಿದವು.

ಈ ಭಯಂಕರ ಯುದ್ಧದಲ್ಲಿ ವರುಣ ಹಾಗೂ ಚಂದ್ರದೇವರು ಪಾಶ ಹಾಗೂ

ಹಿಮಪಾತದಿಂದ ದೈತ್ಯದಾನವರೆಲ್ಲರೂ ತಲೆಯಿಲ್ಲದ ಪರ್ವತಗಳಂತೆ ಅತ್ತಿತ್ತ ಚಲಿಸಲು ಸಮರ್ಥರಾಗಲಿಲ್ಲ. ದೈತ್ಯರು ನಿರ್ಮಿಸಿದ್ದ ಮಾಯಾಪಾಶವನ್ನು ವರುಣ-ಚಂದ್ರರು ನಾಶಗೊಳಿಸಿದರು. ಚಂದ್ರನ ಹಿಮಪಾತಗಳ ಹೊಡೆತದಿಂದಾಗಿ ಹಿಮಾಚ್ಛಾದಿತರಾಗಿ ಬಿಸಿಯೇ ಇಲ್ಲದ ಅಗ್ನಿಗಳಂತೆ ಇದ್ದರು. ಅಂತರಿಕ್ಷದಲ್ಲಿ ಹಾರಾಡುತ್ತಿದ್ದ ವಿಚಿತ್ರ ವಿಮಾನವು ಪ್ರಭೆಯಿಲ್ಲದೆ ಕೆಳಗೆ ಬಿದ್ದು ಪುನಃ ಮೇಲೆ ಹಾರುತ್ತಿದ್ದವು.

## ಕ್ರೌಂಚನ ಪಾರ್ವತೀ ಮಾಯೆ

**ತಾನ್ ಪಾಶ ಹಸ್ತಗ್ರಥಿತಾನ್ ಛಾದಿತಾನ್ ಹಿಮರಶ್ಮಿನಾ ।**
**ಮಯೋ ದದರ್ಶ ಮಾಯಾವೀ ದಾನವಾನ್ ದಿವಿ ದಾನವಃ ॥ 7 ॥**

**ಸ ಶಿಲಾಜಾಲವಿತತಾಂ ಗಂಡಶೈಲಾಟ್ಟ ಹಾಸಿನೀಮ್ ।**
**ಪಾದಪೋತ್ಕಟ ಕೂಟಾಗ್ರಾಂ ಕಂದರಾಕೀರ್ಣ ಕಾನನಾಮ್ ॥ 8 ॥**

**ನಿರ್ಮಿತಾಂ ಸ್ವೇನ ಪುತ್ರೇಣ ಕ್ರೌಂಚೇನ ದಿವಿ ಕಾಮಗಾಮ್ ।**
**ಪ್ರತಿಥಾಂ ಪಾರ್ವತೀಂ ಮಾಯಾಂ ಸಸೃಜೇ ದಾನವೋತ್ತಮಃ ॥ 9 ॥**

ಚಂದ್ರ-ವರುಣರು ದೈತ್ಯರನ್ನು ಸದೆಬಡಿಯುತ್ತಿದ್ದನ್ನು ನೋಡಿದ ಮಾಯಾವಿಮಾದ ಮಯಾಸುರನು (ಶಿಲ್ಪಿಯಲ್ಲ) ಕೂಡಲೇ ಸ್ವರ್ಗದಲ್ಲಿ ತನ್ನ ಮಗ ಕ್ರೌಂಚಾಸುರನು ನಿರ್ಮಿಸಿದ್ದ ಪರ್ವತಸಂಬಂಧವಾಗಿದ್ದು ಪಾರ್ವತೀ ಮಾಯೆಯನ್ನು ಪ್ರಕಟ ಮಾಡಿದನು. ಈ ಮಾಯೆಯ ಸ್ವೇಚ್ಛಾಚಾರಿಯಾಗಿದ್ದು ಎಲ್ಲಿ ಬೇಕಾದರೂ ಹೋಗುವ ಸಾಮರ್ಥ್ಯ ಪಡೆದಿತ್ತು. ಈ ಮಾಯೆಯಲ್ಲಿ ಬೃಹದಾಕಾರ ಪರ್ವತ ಶಿಲೆಗಳು ಒಳಗೊಂಡಿದ್ದವು. ಪರ್ವತದಿಂದ ಕಲ್ಲು ಬಂಡೆಗಳು ನಿರಂತರವಾಗಿ ಭಯಂಕರ ಶಬ್ಧದೊಂದಿಗೆ ಶಬ್ಧ ಮಾಡುತ್ತಾ ಅಟ್ಟಹಾಸ ಮಾಡುತ್ತಿರುವುದೋ ಎಂಬಂತೆ ಕಾಣುತ್ತಿತ್ತು. ಈ ಮಾಯೆಯ ಪರ್ವತ ಶಿಖರಗಳು, ಕಾಡುಗಳು, ಸಿಂಹ ವ್ಯಾಘ್ರಯ ಗಜಾದಿಗಳು ತುಂಬಿದ್ದವು. ವೃಕಗಳ ಗುಂಪಿನಿಂದ ಕೂಡಿರುವ ಮಾಯೆಯಿಂದಾಗಿ ಅಲ್ಲಿದ್ದ ವೃಕ್ಷಗಳು ಬಿರುಗಾಳಿಯಿಂದಾಗಿ ವೃಕ್ಷಗಳೆಲ್ಲವೂ ಭಯಂಕರವಾಗಿ ಹಾಗೆ ಹೀಗೆ ತೂಗಾಡುತ್ತಾ ಭಯಂಕರವಾಗಿದ್ದವು.

ಇಂತಹ ಮಾಯೆಯಿಂದಾಗಿ ನಿರಂತರ ಶಿಲೆಗಳ ವೃಷ್ಟಿಯಾಯಿತು. ನಿರಂತರ

ವೃಕ್ಷಗಳ ಪಾತದಿಂದಾಗಿ ದೇವತಾ ಸಮೂಹವನ್ನು ಘಾಸಿಗೊಳಿಸಿದನು. ಇವನ ಮಾಯೆಗೆ ಎದೆಗೊಡದೆ ವರುಣ-ಚಂದ್ರ ಅದೃಶ್ಯರಾದರು. ದೇವತೆಗಳ ಮೇಲೆ ಶಿಲಾವರ್ಷ ಹಾಗೂ ಕಬ್ಬಿಣದ ತುಂಡುಗಳೆಲ್ಲ ನಿರಂತರವಾಗಿ ಬಿದ್ದವು.

ಆ ದೇವತೆಗಳ ಗುಂಪಿನಲ್ಲಿ ಶ್ರೀಮನ್ನಾರಾಯಣ ಹೊರತಾಗಿ ಪ್ರತಿಯೊಬ್ಬ ದೇವತೆಯೂ ಅವನ ಮಾಯೆಗೆ ಬಲಿಯಾಗಿ ಧನುಸ್ಸನ್ನು ನಾನಾ ವಿಧ ಆಯುಧಗಳನ್ನು ಕಳೆದುಕೊಂಡು ಯತ್ನರಹಿತವಾದ್ದರು. ಈ ಮಾಯಾವಿಯ ಮಾಯಾ ಯುದ್ಧಕ್ಕೆ ಭಯಗೊಳ್ಳದ ಮಾಯಾವಿ ಗದಾಧರನು ಕೋಪಗೊಳ್ಳದೆ ಕಾಲ ನಿರೀಕ್ಷಣೆ ಮಾಡುತ್ತಿದ್ದನು.

ಮಯಾಸುರನ ಮಾಯೆಯು ಪ್ರತಿಕ್ಷಣ ಅಭಿವೃದ್ಧಿ ಹೊಂದುತ್ತಿತ್ತು. ಇದರ ವೇಗವನ್ನು ತಡೆಯುವಂತೆ ವಿಷ್ಣುವು ಅಗ್ನಿ-ವಾಯುಗಳಿಗೆ ಆದೇಶವಿತ್ತನು. ಅಗ್ನಿ ವಾಯುಗಳು ಪರಸ್ಪರವಾಗಿ ಹೊಂದಿಕೊಂಡು ಜ್ವಾಲಾವಾಹಿಗಳಾಗಿ ಪಾರ್ವತೀಮಾಯೆಯನ್ನು ವಿನಾಶಗೊಳಿಸಿದರು.

ಇಬ್ಬರೂ ದೈತ್ಯ ಸೈನ್ಯವನ್ನು ಭಸ್ಮ ಮಾಡಲಾರಂಭಿಸಿದರು. ವಾಯುದೇವನು ಜೋರಾಗಿ ಬೀಸುತ್ತಾ ದೈತ್ಯರನ್ನು ಸ್ಥಿರವಾಗಿ ನಿಲ್ಲಲೂ ಸಹ ಅವಕಾಶಕೊಡಲಿಲ್ಲ. ವಾಯುವಿನ ಬೆಂಬಲ ಪಡೆದ ಅಗ್ನಿಯು ತನ್ನ ಜ್ವಾಲೆಯನ್ನು ದೈತ್ಯರ ಮೇಲೆ ಹರಡಿದನು. ಅಗ್ನಿ ವಾಯುಗಳು ಆಟವಾಡುತ್ತಿರುವರೋ ಎಂಬಂತೆ ಸಂಚರಿಸಿದರು. ಹೀಗೆ ಅಗ್ನಿವಾಯುಗಳ ಪ್ರಭಾವದಿಂದಾಗಿ ದೈತ್ಯದಾನವರೆಲ್ಲರೂ ಸುಟ್ಟು ಬೂದಿಯಾದರು. ಕೆಲವರು ನಿಲ್ಲಲಾರದೆ ನೆಲಕಚ್ಚಿದರು. ಸುಟ್ಟು ಹೋದ ಕೆಲವರನ್ನು ಜೋರಾಗಿ ಬೀಸುತ್ತಿದ್ದ ಗಾಳಿಯು ಹಾರಿಸಿಕೊಂಡು ದೂರು ಬಿಸಾಕಿತು.

ವಾಯುವಿನ ಹೊಡೆತಕ್ಕೆ ಸಿಕ್ಕಿದ ವಿಮಾನಗಳು ಪುಡಿಯಾಗಿ ಎಲ್ಲಾ ಕಡೆ ಅವುಗಳ ತುಂಡುಗಳು ಬಿದ್ದವು. ದಾನವರ ಮಾಯೆ ಸಂಪೂರ್ಣವಾಗಿ ನಾಶ ಹೊಂದಿತು. ಸಂತುಷ್ಟರಾದ ದೇವತೆಗಳು ಗದಾಧರನನ್ನು ಸ್ತುತಿಸಿದರು. ಉಪೇಂದ್ರನಿಂದಾಗಿ ಇಂದ್ರದೇವನಿಗೆ ಜಯ ಲಕ್ಷ್ಮಿಯು ಹಾರ ಹಾಕಿದಳು. ಮಯನಿಗೆ ಪರಾಜಯವುಂಟಾಯಿತು. ಚಂದ್ರನ ಸಂಚಾರ ಮಾರ್ಗ ತೆರವಾಯಿತು. ಸೂರ್ಯ ತನ್ನ ಮಾರ್ಗದಲ್ಲಿ ಸಂಚಾರ ಮಾಡಲಾರಂಭಿಸಿದನು. ಪ್ರಪಂಚವೆಲ್ಲವೂ ಯಥಾಸ್ಥಿತಿಗೆ ತಲುಪಿ ಬ್ರಾಹ್ಮಣಾದಿ ಸರ್ವವರ್ಗದವರೂ ತಮ್ಮ ತಮ್ಮ ಕರ್ಮಗಳಲ್ಲಿ ತೊಡಗಿದರು.

ಅಗ್ನಿಹೋತ್ರಾದಿ ಪ್ರಾರಂಭವಾಗಿ ಧೇವತೆಗಳಗೆ ಸೇರಬೇಕಾದ ಆಹುತಿಗಳು ಅಗ್ನಿಯ ದ್ವಾರಾ ಬಂದು ತಲುಪಿದವು.

ಭೂಮಂಡಲದ ಸಕಲ ರಾಜನೂ ಸಹ ಪ್ರಜೆಗಳ ಪಾಲನೆಯಲ್ಲಿ ಆಸಕ್ತರಾದರು. ಲೋಕದಲ್ಲಿ ಸರ್ವತ್ರ ಹರಡಿದ್ದ ಅಜ್ಞಾನ ಕತ್ತಲೆ ಮಾಯವಾಯಿತು. ದಾರುಣವಾದ ತಪಸ್ಸು ನಾಶವಾಗಿ ಮೃದುವಾದ ತಪಸ್ಸು ತಲೆ ಎತ್ತಿತು. ಅಂದಿನಿಂದ ವಾಯ್ವಗ್ನಿಗಳಗೆ ಪ್ರಾಧಾನ್ಯವುಂಟಾಯಿತು.

## ಕಾಲನೇಮಿ ಯುದ್ಧ

**ಪೂರ್ವದೇವಭಯಂ ಶ್ರುತ್ವಾ ಮಾರುತಾಗ್ನಿಕೃತಂ ಮಹತ್ ।**
**ಕಾಲನೇಮಿರಿತಿ ಖ್ಯಾತೋ ದಾನವಃ ಪ್ರತ್ಯದೃಶ್ಯತ ॥ 10 ॥**
**ಶತಪ್ರಹರಣೋದಗ್ರಃ ಶತಬಾಹುಃ ಶತಾನನಃ ।**
**ಶತಶೀರ್ಷಾಸ್ಥಿತಃ ಶ್ರೀಮಾನ್ ಶತಶೃಂಗ ಇವಾಚಲಃ ॥ 11 ॥**
**ತ್ರೈಲೋಕ್ಯಾಂತರವಿಸ್ತಾರೋ ಧಾರಯನ್ ವಿಪುಲಂ ವಪುಃ ।**
**ದಿಧಕ್ಷಂತಮಿವಾಯಾಂತಂ ಸರ್ವಾನ್ ದೇವಗಣಾನ್ ಮೃಧೇ ॥ 12 ॥**

ಅಗ್ನಿ ಮತ್ತು ವಾಯುಗಳು ಸೇರಿ ದೈತ್ಯರನ್ನು ವಿನಾಶಗೊಳಸಿದರೆಂಬ ವಿಷಯ ತಿಳದ ಕಾಲನೇಮೀ ದೈತ್ಯನು ವಾಯ್ವಗ್ನಿಗಳನ್ನು ಎದುರಿಸಲು ನಿಂತನು. ತಲೆಯಲ್ಲಿ ಸೂರ್ಯನಂತಿರುವ ಮಹಾವೈಡೂರ್ಯ ಕಿರೀಟ, ಉಲಿಯುವ ನೂಪುರ, ಭುಜಕೀರ್ತಿಗಳನ್ನು ತೊಟ್ಟು ಬೆಳ್ಳಿಯ ಕವಚಧರಿಸಿ ಮೇರು ಪರ್ವತದಂತೆ ಶೋಭಿಸುತ್ತಿದ್ದನು. ಬ್ರಹ್ಮ ದೇವರಿಂದ ಸರ್ವಾಜೇಯತ್ವವನ್ನು ಹೊಂದಿದ್ದು ಸಹಸ್ರ ಶಿರಸ್ಸುಗಳು, ದ್ವಿಸಹಸ್ರ ಬಾಹುಗಳಂದಲೂ ಅಜೇಯನಾಗಿದ್ದನು. ಧೂಮ್ರವರ್ಣದ ಕೇಶವುಳ್ಳವನೂ ಹಸಿರು ಬಣ್ಣದ ಗಡ್ಡ-ಮೀಸೆಗಳು, ಬಾಯಿಯಿಂದ ಹೊರಬಂದ ಕೋರೆಹಲ್ಲುಗಳು, ಮೂರುಲೋಕ ವ್ಯಾಪಿಸಿದ್ದ ದೊಡ್ಡದೇಹ ಹೊಂದಿದ್ದನು. ಬಾಹುಗಳಂದ ಆಕಾಶವನ್ನೆ ತೂಗುತ್ತಿರುವಂತೆ ಭಾಸಮಾನವಾಗುತ್ತಿತ್ತು. ಕಾಲುಗಳಂದ ಪರ್ವತಗಳನ್ನು ಚೆಂಡಿನಂತೆ ಚಿಮ್ಮುತ್ತಿದ್ದನು. ಅವನ ಉಸಿರಾಡುವ ವೇಗದ ಗಾಳಯಿಂದಾಗಿ ಮಳೆ ಹೊತ್ತಿದ್ದ ಮೇಘಗಳು ದೂರ ಚಲಿಸುತ್ತಿದ್ದವು. ಅವನ ನೇತ್ರಗಳು ಕೆಂಪಾಗಿದ್ದು ವಿಶಾಲ ಹಾಗೂ ವಕ್ರವಾಗಿದ್ದವು. ತೇಜಸ್ಸಿನಿಂದ ಬೆಳಗುತಿದ್ದ ಕಾಲನೇಮಿಯು ದೇವತಾ ಗಣಗಳನ್ನು ಬೆದರಿಸುತ್ತಾ, ವಿಶಾಲ ದೇಹದಿಂದ

ದಿಕ್ಕುಗಳನ್ನೇ ಆವರಿಸುತ್ತಿದ್ದನು. ಮೃತ್ಯ ದೇವತೆಯಂತಿದ್ದ ಕಾಲನೇಮಿಯ ತನ್ನ ದಷ್ಟಪುಷ್ಟವಾದ ತೋಳುಗಳನ್ನೆತ್ತಿ ದೇವತೆಗಳನ್ನೆಲ್ಲ ಪ್ರಹರಿಸಲಾರಂಭಿಸಿದನು. ದೇವತೆಗಳ ಹೊಡೆತದಿಂದ ನೆಲದ ಮೇಲೆ ಬಿದ್ದಿದ್ದ ದೈತ್ಯರನ್ನು ಏಳರಿ! ಎದ್ದು ನಿಲ್ಲರಿ, ಎಂದು ಕೂಗುತ್ತಾ ಯುದ್ಧ ಮಾಡುತ್ತಿದ್ದನು. ಶತ್ರುಗಳಿಗೆ ಕಾಲನಂತೆ ತಮ್ಮ ಸಮೀಪ ಬರುತ್ತಿರುವ ಅವನನ್ನು ನೋಡಿ ವಿಹ್ವಲರಾದರು. ಹೀಗೆ ಕಾಲನೇಮಿ ಯುದ್ಧಕ್ಕೆ ಬಂದಾಗ ಸೋತು ಹೋಗಿದ್ದ ಮಯ ರಾಕ್ಷಸನಿಗೆ ಬಲಬಂದು ಅವನನ್ನು ಎದುರುಗೊಂಡು ಆಲಂಗಿಸಿದನು. ದೇವತೆಗಳೆಲ್ಲರೂ ವ್ಯಥೆಗೊಂಡರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಾಲನೇಮಿ ಯುದ್ದವೆಂಬಲ್ಲಿ
ನಲವತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ಸಪ್ತಚತ್ವಾರಿಂಶತ್ತಮೋಽಧ್ಯಾಯಃ

### ಕಾಲನೇಮಿ ಯುದ್ಧ

ದಾನವಾಂಶ್ಚಾಪಿ ಪಿಪ್ರೀಷುಃ ಕಾಲನೇಮಿಃ ಮಹಾಸುರಃ ।
ವ್ಯವರ್ಧತ ಮಹಾತೇಜಾಃ ತಪಾಂತೇ ಜಲದೋ ಯಥಾ ॥ 1 ॥
ತ್ರೈಲೋಕ್ಯಾಂತರ್ಗತಂ ತಂ ತು ದೃಷ್ಟ್ವಾ ತೇ ದಾನವೇಶ್ವರಾಃ ।
ಉತ್ತಸ್ಥುರಪರಿಶ್ರಾಂತಾಃ ಪ್ರಾಪ್ಯೇವಾಮೃತಮುತ್ತಮಮ್ ॥ 2 ॥
ತೇ ವೀತಭಯ ಸಂತ್ರಾಸಾಃ ಮಯತಾರಾಪುರೋಗಮಾಃ ।
ತಾರಕಾಮಯ ಸಂಗ್ರಾಮೇ ಸತತಂ ಜಯಕಾಂಕ್ಷಿಣಃ ॥ 3 ॥

ರಾಜನೇ, ಗ್ರೀಷ್ಮಋತು ಕಳೆದ ನಂತರ ವರ್ಷ ಋತುವಿನಲ್ಲಿ ಮೇಘಗಳು ತುಂಬುವಂತೆ, ಮಹಾಸುರನಾದ ಕಾಲನೇಮಿಯು ದೈತ್ಯದಾನವರನ್ನು ಪೃಷ್ಟಿಗೊಳಸುವೇಚ್ಛೆಯಿಂದ ಪ್ರತಿಕ್ಷಣ ಅಭಿವೃದ್ಧಿಯಾಗತೊಡಗಿದನು. ಮೂರು ಲೋಕಗಳನ್ನು ವ್ಯಾಪಿಸಿಕೊಂಡಿರುವ ಕಾಲನೇಮಿಯನ್ನು ನೋಡಿದ ದೈತ್ಯವರ್ಯರು ಅಮೃತಪಾನ ಮಾಡಿದವರಂತೆ ಕೂಡಲೇ ಎದ್ದು ನಿಂತರು. ಅವರಿಗೆ ಆಯಾಸವಾವುದೂ ಇದ್ದಿಲ್ಲ.

ಮಯಾಸುರ, ತಾರಾಸುರ, ಮೊದಲಾದವರು ಕಾಲನೇಮಿಯು ರಣಾಂಗಣಕ್ಕೆ ಪ್ರವೇಶ ಮಾಡುತ್ತಿರುವಂತೆಯೇ ಸರ್ವಭಯ ಸಂತ್ರಾಸಗಳಂದ ಮುಕ್ತರಾದರು. ತಾರಕಾಮಯ ಸಂಗ್ರಾಮದಲ್ಲಿ ವಿಜಯಾಕಾಂಕ್ಷಿಗಳಾಗಿ ಪುನಃ ಮೆರೆದರು. ಮಯ, ತಾರ, ವರಾಹ, ಹಯಗ್ರೀವ, ಶ್ವೇತ, ಖರ, ಲಂಬ, ಬಲಿಪುತ್ರ ಅರಿಷ್ಟಾಸುರ, ಕಿಶೋರ, ಉಷ್ಟ್ರ, ವಕ್ರಯೋಧೀ ಸ್ವರ್ಭಾನು. ಇವರೆಲ್ಲರೂ ಕಾಲನೇಮಿಯ ಬಳ ಹೋದರು.

ಏತೇऽಸ್ತ್ರ ವಿದುಷಃ ಸರ್ವೇ ಸರ್ವೇ ತಪಸಿ ಸುವ್ರತಾಃ ।
ದಾನವಾಃ ಕೃತಿನೋ ಜಗ್ಮುಃ ಕಾಲನೇಮಿಮನುತ್ತಮಮ್ ॥ 4 ॥

ತೇ ಗದಾಭಿಃ ಗುರ್ವೀಭಿಶ್ಚಕ್ರೈಶ್ಚ ಸಪರಶ್ವಧೈಃ ।
ಅಶ್ಮಭಿಶ್ಚಾದ್ರಿಸದೃಶೈಃ ಗಂಡಶೈಲೈಶ್ಚ ದಂಶಿತೈಃ ॥ 5 ॥

ಈ ದೈತ್ಯರೆಲ್ಲರೂ ಅಸ್ತ್ರಶಸ್ತ್ರ ವಿದ್ಯಾಪ್ರವೀಣರಾಗಿದ್ದು, ತಪೋಬಲ ಸಮನ್ವಿತರಾಗಿದ್ದರು. ಅನೇಕ ವ್ರತಗಳನ್ನಾಚರಿಸುವವರೂ, ವಿದ್ವಾಂಸರೂ, ಕರ್ಮಕುಶಲಿಗಳೂ ಆಗಿದ್ದರು. ಅವರೆಲ್ಲರೂ ಭಯಂಕರ ಆಯುಧಗಳನ್ನು ಹಿಡಿದು ಕಾಲನೇಮಿಯನ್ನು ಸೇನಾವಾಹಿನೀ ಧುರಂಧರನನ್ನಾಗಿಸಿಕೊಂಡು ಯುದ್ಧಕ್ಕೆ ಸನ್ನದ್ಧರಾಗಿದ್ದರು.

ದೈತ್ಯವರ್ಯರೆಲ್ಲರೂ ಗದೆ, ಚಕ್ರಾಯುಧ, ಕೊಡಲಿ, ಹೆಬ್ಬಂಡೆಗಳು ಪಟ್ಟಿಶ, ಭಿಂದಿಪಾಲ, ಪರಿಘಾಯುಧ, ನೂರಾರು ಜನರನ್ನು ಕೊಲ್ಲಬಹುದಾದ ಶತಘ್ನಿಯನ್ನೂ, ಮುಸಲಾಯುಧ, ಮುದ್ಗರ, ನೇಗಿಲು, ಅನೇಕ ಯಂತ್ರಗಳು, ಲಾಳ ಮಂಡಿಗೆಗಳು, ವಿವಿಧ ಪಾಶಗಳು, ಪ್ರಾಸಾಯುಧ, ಸರ್ಪಾಯುಧ, ಬಾಣಗಳು, ವಜ್ರಾಯುಧಗಳು, ತೋಮರಗಳು, ಶೂಲಗಳು, ಇವೆ ಮೊದಲಾದ ಆಯುಧಗಳನ್ನು ಹಿಡಿದು ಯುದ್ಧಕ್ಕೆ ಹಾತೊರೆಯುತ್ತಿದ್ದರು.

## ದೇವತಾ ಸೈನ್ಯ ವರ್ಣನೆ

ದೇವತಾನಾಮಪಿ ಚಮೂ ರುರುಚೇ ಶಕ್ರಪಾಲಿತಾ ।
ದೀಪ್ತಾಃ ಶೀತೋಷ್ಣ ತೇಜೋಭ್ಯಾಂ ಚಂದ್ರ ಭಾಸ್ಕರ ವರ್ಚಸಾ ॥ 6 ॥

ವಾಯುವೇಗವತೀ ಸೌಮ್ಯಾ ತಾರಾಗಣಪತಾಕಿನೀ ।
ತೋಯದಾವಿದ್ಧವಸನಾ ಗ್ರಹನಕ್ಷತ್ರಹಾಸಿನೀ ॥ 7 ॥

ಯಮೇಂದ್ರ ಧನದೈಃ ಗುಪ್ತಾ ವರುಣೇನ ಚ ಧೀಮತಾ ।
ಸಂಪ್ರದೀಪ್ತಾಗ್ನಿಪವನಾ ನಾರಾಯಣಪರಾಯಣಾ ॥ 8 ॥

ಪಾಸಾಮುದ್ರೌಘಸದೃಶೀ ಭೀಮಾ ಯಕ್ಷಗಂಧರ್ವಶಾಲಿನೀ ।
ರರಾಜಾಸ್ತ್ರವತೀ ಭೀಮಾ ಯಕ್ಷ ಗಂಧರ್ವ ಶಾಲಿನೀ ॥ 9 ॥

ದೇವತಾ ಸೈನ್ಯ ಚಮೂವನ್ನು ಇಂದ್ರದೇವನು ರಕ್ಷಿಸುತ್ತಿದ್ದರು. ಸೂರ್ಯ-ಚಂದ್ರರು ಪ್ರಭೆಯಿಂದ ದೇದೀಪ್ಯಮಾನವಾಗಿತುತ. ಸೂರ್ಯನ ಉಷ್ಣ ಪ್ರಭೆ ಚಂದ್ರನ ಶೀತಲ ಪ್ರಭೆಯು. ದೇವತೆಗಳನ್ನು ಸಮಶೀತೋಷ್ಣವಾಗಿರುವಂತೆ ಮಾಡಿದ್ದವು. ಸೈನ್ಯವು ವಾಯುವೇಗವನ್ನು ಹೊಂದಿದ್ದು ನಕ್ಷತ್ರಗಳ ಸಮೂಹವೇ ಪತಾಕೆಯಂತೆ ಹಾರುತ್ತಿದ್ದವು. ಮೇಘಮಯವಾದ ವಸ್ತ್ರದಿಂದ ಆಚ್ಛಾದಿತವಾಗಿತ್ತು. ಗ್ರಹಗಳು ಹಾಗೂ ನಕ್ಷತ್ರಗಳು ಸೈನ್ಯದ ಮಂದಹಾಸದಂತೆ ಇದ್ದವು. ಪೂರ್ವಾದಿ ದಿಕ್ಕುಗಳ ಅಧಿಪತಿಗಳಾದ ಇಂದ್ರ, ಯಮ, ವರುಣ, ಕುಬೇರನಿಂದ ನಾಲ್ಕು ದಿಕ್ಕುಗಳಲ್ಲಿ ರಕ್ಷಿತವಾಗಿತ್ತು. ಸೈನ್ಯದಲ್ಲಿ ದೇದೀಪ್ಯಮಾನರಾದ ಅಗ್ನಿ ವಾಯುಗಳ ಉಪಸ್ಥಿತರಿದ್ದು ನಾರಾಯಣನನ್ನೆ ಆಶ್ರಯ ಪಡೆದಿತ್ತು. ಇದೊಂದು ಅಗಾದ ಸಮುದ್ರವೊ ಎಂಬಂತಿತ್ತು. ಯಕ್ಷಗಂಧರ್ವರಿಂದ ಕೂಡಿದ ಆ ಸೈನ್ಯವು ನಾನಾ ವಿಧ ಆಯುಧಗಳನ್ನು ಧರಿಸಿದ್ದರಿಂದ ಶತ್ರು ಭಯಂಕರವಾಗಿ ಕಾಣುತ್ತಿತ್ತು.

## ದೇವ-ದಾನವ ಯುದ್ಧ

ಮುಂದೆ ಎರಡೂ ಸೈನ್ಯಗಳು ಯುದ್ಧಕ್ಕಾಗಿ ಪ್ರಾರಂಭಿಸಿದರು. ಪ್ರಲಯದಲ್ಲಿ ಭೂಮಿ-ಆಕಾಶ ಒಂದಾಗುವಂತೆ ದೈತ್ಯ-ದೇವತೆಗಳು ಪರಸ್ಪರ ಸಮಾಗಮ ವುಂಟಾಯಿತು. ಈ ಸಂಗ್ರಾಮವು ಅತ್ಯಂತ ಘೋರವಾಗಿತ್ತು. ಇವೆರಡೂ ಸೇನಾವಾಹಿನಿಗಳು ಯುದ್ಧ ಮಾಡುತ್ತಿದ್ದರೆ ಕ್ಷಮೆ-ಪರಾಕ್ರಮಕ್ಕೂ, ವಿನಯ-ದರ್ಪಗಳಗೂ, ಯುದ್ಧವಾಗುತ್ತಿದ್ದಂತೆ ಭಾಸಮಾನವಾಗುತ್ತಿತ್ತು. ಪೂರ್ವ-ಪಶ್ಚಿಮ ಸಮುದ್ರಗಳು ಕ್ಷೋಭೆಗೊಂಡಾಗ ಮೇಲೆದ್ದ ಮೇಘಗಳಂತೆ ದೇವ-ದಾನವ ಸೈನ್ಯಗಳಂದ ಭಯಂಕರ ಸುರಾಸುರರು ಹೊರಬರುತ್ತಿದ್ದರು. ದೇವ-ದೈತ್ಯರು ರಣಕುತೂಹಲಗಳಾಗಿದ್ದು ಯುದ್ಧೋತ್ಸಾಹದಿಂದ ಮುನ್ನುಗ್ಗುತ್ತಿದ್ದರು. ಇವರು ಪುಷ್ಪಿತವಾದ ವನ ಹಾಗೂ ಪರ್ವತಗಳಂದ ಹೊರ ಬರುವ ಆನೆಗಳಂತಿದ್ದರು. ಎರಡು ಕಡೆಗಳಂದ ಸೈನಿಕರು ತಮಟೆ ಭೇರಿ ವಾದ್ಯಗಳನ್ನು ಮೊಳಗಿಸುತ್ತಿದ್ದರು. ಶಂಖಗಳನ್ನು ಧ್ವನಿಸಿದರು. ರಣವಾದ್ಯಗಳ ಈ ತುಮುಲ ಗಗನವನ್ನೇ ಪ್ರತಿಧ್ವನಿಸಿತು. ಬಿಲ್ಲಿನ ಹಗ್ಗ ಎಳೆಯುವ ಶಬ್ಧ, ಧನುಸ್ಸಿನ ಠೇಕಾರ, ದುಂದುಭಿವಾದ್ಯಗಳು ದೈತ್ಯರು ಮಾಡುತ್ತಿದ್ದ ಸಿಂಹನಾದ, ಹಾಗೂ ತರ್ಜನ ಶಬ್ಧಗಳನ್ನು ಮುಚ್ಚಿಬಿಟ್ಟವು.

ತೇಽನ್ಯೋನ್ಯಂ ಅಭಿಸಂಪೇತುಃ ಪಾತಯಂತಃ ಪರಸ್ಪರಂ ।
ಬಭಂಜುಃ ಬಾಹುಭಿಃ ಬಾಹೂನ್ ದ್ವಂದ್ವಮನ್ಯೇ ಯುಯುತ್ಸವಃ ॥ 10 ॥
ದೇವತಾಸ್ತ್ವಶನೀಃ ಘೋರಾಃ ಪರಿಘಾಂಶ್ಚ ಉತ್ತಮಾಯಸಾನ್ ।
ಸಸರ್ಜುರಾಜಾ ನಿಸ್ತ್ರಿಂಶಾನ್ ಗದಾ ಗುರ್ವೀಶ್ಚ ದಾನವಾಃ ॥ 11 ॥

ದೇವದಾನವರಿಬ್ಬರು ಪರಸ್ಪರವಾಗಿ ಒಬ್ಬೊಬ್ಬರನ್ನು ಮತ್ತೊಬ್ಬರನ್ನು ಪ್ರಹರಿಸಲು ಆಕ್ರಮಿಸುತ್ತಾ ತಮ್ಮ ಆಯುಧಗಳಿಂದ ಹೊಡೆದುಕೊಂಡರು. ಕೆಲವರು ದೇವತೆಗಳೊಂದಿಗೆ ದ್ವಂದ್ವಯುದ್ಧವನ್ನು ಮಾಡಲಿಚ್ಚಿಸಿ ತಮ್ಮ ತೋಳುಗಳಿಂದ ಎದುರಾಳಿಯ ತೋಳುಗಳನ್ನು ಮುರಿದುಹಾಕಿದರು. ದೇವತೆಗಳಾದರೂ ಆ ಯುದ್ಧದಲ್ಲಿ ವಜ್ರಾಯುಧಗಳನ್ನು ಲೋಹದಿಂದ ತಯಾರಾದ ಪರಿಘಾಯುಧಗಳನ್ನು ದಾನವರ ಮೇಲೆಸೆದರು. ದಾನವರೂ ಸಹ ಪ್ರತಿಯಾಗಿ ಕತ್ತಿ ಗದೆಗಳನ್ನೆಸೆದರು.

ಅನೇಕ ವೈರಿ ಸೈನ್ಯದವರು ಗದೆಗಳ ಹೊಡೆತದಿಂದ ಮೂಳೆಗಳನ್ನು ಮುರಿದುಕೊಂಡು ಮೂಲೆಗುಂಪಾದರು. ಕೆಲವರು ಬಾಣಗಳ ಹೊಡೆತದಿಂದ ಕೈಕಾಲು ತಲೆಗಳನ್ನು ಕಳೆದುಕೊಂಡರು. ಶಸ್ತ್ರಾಘಾತದಿಂದ ಭೂಮಿಗೆ ಕುಸಿದವರು ಕೆಲವರು. ತಮ್ಮ ವಾಹನದಿಂದ ತಲೆಕೆಳಗಾಗಿ ಭೂಮಿಗೆ ಉರುಳಿದವರು ಕೆಲವರು.

ಯುದ್ಧ ರಂಗದಲ್ಲಿ ಉಭಯಪಕ್ಷದವರೂ ರೋಷದಿಂದ ಆವೇಶಿತರಾಗಿದ್ದು ವೇಗವಾಗಿ ಚಲಿಸುವ ಕುದುರೆಗಳ ಮೇಲೆ. ಕುದುರೆ ಹೂಡಿರುವ ರಥಗಳಲ್ಲಿಯೂ. ಆಕಾಶಗಾಮಿ ವಿಮಾನದಲ್ಲಿಯೂ ಕುಳಿತು ಪರಸ್ಪರ ಯುದ್ಧ ಮಾಡಿಕೊಂಡರು. ಕೆಲವರು ಶತ್ರು ಸೈನ್ಯವನ್ನು ಧೈರ್ಯದಿಂದ ಎದುರಿಸಿದರೆ ಮತ್ತೆ ಕೆಲವು ಭಯದಿಂದ ಪ್ರಾಣ ಉಳಿಸಿಕೊಳ್ಳಲು ರಣಹೇಡಿಗಳಾಗಿ ಪಲಾಯನ ಸೂತ್ರ ಹೇಳಿದರು. ರಥಿಗಳಿಗೆ ರಥಿಗಳು. ಪದಾತಿಗಳನ್ನು ಪದಾತಿಗಳು ಎದುರಿಸುತ್ತಿದ್ದವು. ಯುದ್ಧದಲ್ಲಿ ಸಂಚರಿಸುತ್ತಿರುವ ರಥಗಳ ಗುಡುಗುಡು ಶಬ್ಧಗಳು ಗಗನದಲ್ಲಿ ಮೇಘಗಳ ಸಂಘರ್ಷಣೆಯಿಂದಾದ ಗುಡುಗು ಶಬ್ಧದಂತಿತ್ತು.

ಬಭಂಜಿರೇ ರಥಾನ್ ಕೇಚಿತ್ ಕೇಚಿತ್ ಸಂಮೃದಿತಾ ರಥೈಃ ।
ಸಂಬಾಧಮೇಕೇ ಸಂಪ್ರಾಪ್ಯ ನ ಶೇಕುಃ ಚಲಿತುಂ ರಥಾಃ ॥ 12 ॥

ದೇವತಾ ಸೈನ್ಯ ಚಮೂವನ್ನು ಇಂದ್ರದೇವನು ರಕ್ಷಿಸುತ್ತಿದ್ದರು. ಸೂರ್ಯ-ಚಂದ್ರರು ಪ್ರಭೆಯಿಂದ ದೇದೀಪ್ಯಮಾನವಾಗಿತುತ. ಸೂರ್ಯನ ಉಷ್ಣ ಪ್ರಭೆ ಚಂದ್ರನ ಶೀತಲ ಪ್ರಭೆಯು. ದೇವತೆಗಳನ್ನು ಸಮಶೀತೋಷ್ಣವಾಗಿರುವಂತೆ ಮಾಡಿದ್ದವು. ಸೈನ್ಯವು ವಾಯುವೇಗವನ್ನು ಹೊಂದಿದ್ದು ನಕ್ಷತ್ರಗಳ ಸಮೂಹವೇ ಪತಾಕೆಯಂತೆ ಹಾರುತ್ತಿದ್ದವು. ಮೇಘಮಯವಾದ ವಸ್ತ್ರದಿಂದ ಆಚ್ಛಾದಿತವಾಗಿತ್ತು. ಗ್ರಹಗಳು ಹಾಗೂ ನಕ್ಷತ್ರಗಳು ಸೈನ್ಯದ ಮಂದಹಾಸದಂತೆ ಇದ್ದವು. ಪೂರ್ವಾದಿ ದಿಕ್ಕುಗಳ ಅಧಿಪತಿಗಳಾದ ಇಂದ್ರ, ಯಮ, ವರುಣ, ಕುಬೇರನಿಂದ ನಾಲ್ಕು ದಿಕ್ಕುಗಳಲ್ಲಿ ರಕ್ಷಿತವಾಗಿತ್ತು. ಸೈನ್ಯದಲ್ಲಿ ದೇದೀಪ್ಯಮಾನರಾದ ಅಗ್ನಿ ವಾಯುಗಳ ಉಪಸ್ಥಿತರಿದ್ದು ನಾರಾಯಣನನ್ನೆ ಆಶ್ರಯ ಪಡೆದಿತ್ತು. ಇದೊಂದು ಅಗಾದ ಸಮುದ್ರವೊ ಎಂಬಂತಿತ್ತು. ಯಕ್ಷಗಂಧರ್ವರಿಂದ ಕೂಡಿದ ಆ ಸೈನ್ಯವು ನಾನಾ ವಿಧ ಆಯುಧಗಳನ್ನು ಧರಿಸಿದ್ದರಿಂದ ಶತ್ರು ಭಯಂಕರವಾಗಿ ಕಾಣುತ್ತಿತ್ತು.

## ದೇವ-ದಾನವ ಯುದ್ಧ

ಮುಂದೆ ಎರಡೂ ಸೈನ್ಯಗಳು ಯುದ್ಧಕ್ಕಾಗಿ ಪ್ರಾರಂಭಿಸಿದರು. ಪ್ರಲಯದಲ್ಲಿ ಭೂಮಿ-ಆಕಾಶ ಒಂದಾಗುವಂತೆ ದೈತ್ಯ-ದೇವತೆಗಳು ಪರಸ್ಪರ ಸಮಾಗಮ ವುಂಟಾಯಿತು. ಈ ಸಂಗ್ರಾಮವು ಅತ್ಯಂತ ಘೋರವಾಗಿತ್ತು. ಇವೆರಡೂ ಸೇನಾವಾಹಿನಿಗಳು ಯುದ್ಧ ಮಾಡುತ್ತಿದ್ದರೆ ಕ್ಷಮೆ-ಪರಾಕ್ರಮಕ್ಕೂ, ವಿನಯ-ದರ್ಪಗಳಿಗೂ, ಯುದ್ಧವಾಗುತ್ತಿದ್ದಂತೆ ಭಾಸಮಾನವಾಗುತ್ತಿತ್ತು. ಪೂರ್ವ-ಪಶ್ಚಿಮ ಸಮುದ್ರಗಳು ಕ್ಷೋಭೆಗೊಂಡಾಗ ಮೇಲೆದ್ದ ಮೇಘಗಳಂತೆ ದೇವ-ದಾನವ ಸೈನ್ಯಗಳಿಂದ ಭಯಂಕರ ಸುರಾಸುರರು ಹೊರಬರುತ್ತಿದ್ದರು. ದೇವ-ದೈತ್ಯರು ರಣಕುತೂಹಲಗಳಾಗಿದ್ದು ಯುದ್ಧೋತ್ಸಾಹದಿಂದ ಮುನ್ನುಗ್ಗುತ್ತಿದ್ದರು. ಇವರು ಪುಷ್ಪಿತವಾದ ವನ ಹಾಗೂ ಪರ್ವತಗಳಿಂದ ಹೊರ ಬರುವ ಆನೆಗಳಂತಿದ್ದರು. ಎರಡು ಕಡೆಗಳಿಂದ ಸೈನಿಕರು ತಮಟೆ ಭೇರಿ ವಾದ್ಯಗಳನ್ನು ಮೊಳಗಿಸುತ್ತಿದ್ದರು. ಶಂಖಗಳನ್ನು ಧ್ವನಿಸಿದರು. ರಣವಾದ್ಯಗಳ ಈ ತುಮುಲ ಗಗನವನ್ನೇ ಪ್ರತಿಧ್ವನಿಸಿತು. ಬಿಲ್ಲಿನ ಹಗ್ಗ ಎಳೆಯುವ ಶಬ್ಧ, ಧನುಸ್ಸಿನ ಠೇಕಾರ, ದುಂದುಭಿವಾದ್ಯಗಳು ದೈತ್ಯರು ಮಾಡುತ್ತಿದ್ದ ಸಿಂಹನಾದ, ಹಾಗೂ ತರ್ಜನ ಶಬ್ಧಗಳನ್ನು ಮುಚ್ಚಿಬಿಟ್ಟವು.

**ತೇऽನ್ಯೋನ್ಯಂ ಅಭಿಸಂಪೇತುಃ ಪಾತಯಂತಃ ಪರಸ್ಪರಂ ।**
**ಬಭಂಜುಃ ಬಾಹುಭಿಃ ಬಾಹೂನ್ ದ್ವಂದ್ವಮನ್ಯೇ ಯುಯುತ್ಸವಃ ॥ 10 ॥**
**ದೇವತಾಸ್ತ್ವಶನೀಃ ಘೋರಾಃ ಪರಿಘಾಂಶ್ಚ ಉತ್ತಮಾಯಸಾನ್ ।**
**ಸಸರ್ಜುರಾಜಾ ನಿಸ್ತ್ರಿಂಶಾನ್ ಗದಾ ಗುರ್ವೀಶ್ಚ ದಾನವಾಃ ॥ 11 ॥**

ದೇವದಾನವರಿಬ್ಬರು ಪರಸ್ಪರವಾಗಿ ಒಬ್ಬೊಬ್ಬರನ್ನು ಮತ್ತೊಬ್ಬರನ್ನು ಪ್ರಹರಿಸಲು ಆಕ್ರಮಿಸುತ್ತಾ ತಮ್ಮ ಆಯುಧಗಳಿಂದ ಹೊಡೆದುಕೊಂಡರು. ಕೆಲವರು ದೇವತೆಗಳೊಂದಿಗೆ ದ್ವಂದ್ವಯುದ್ಧವನ್ನು ಮಾಡಲಿಚ್ಛಿಸಿ ತಮ್ಮ ತೋಳುಗಳಿಂದ ಎದುರಾಳಿಯ ತೋಳುಗಳನ್ನು ಮುರಿದುಹಾಕಿದರು. ದೇವತೆಗಳಾದರೂ ಆ ಯುದ್ಧದಲ್ಲಿ ವಜ್ರಾಯುಧಗಳನ್ನು ಲೋಹದಿಂದ ತಯಾರಾದ ಪರಿಘಾಯುಧಗಳನ್ನು ದಾನವರ ಮೇಲೆಸೆದರು. ದಾನವರೂ ಸಹ ಪ್ರತಿಯಾಗಿ ಕತ್ತಿ ಗದೆಗಳನ್ನೆಸೆದರು.

ಅನೇಕ ವೈರಿ ಸೈನ್ಯದವರು ಗದೆಗಳ ಹೊಡೆತದಿಂದ ಮೂಳೆಗಳನ್ನು ಮುರಿದುಕೊಂಡು ಮೂಲೆಗುಂಪಾದರು. ಕೆಲವರು ಬಾಣಗಳ ಹೊಡೆತದಿಂದ ಕೈಕಾಲು ತಲೆಗಳನ್ನು ಕಳೆದುಕೊಂಡರು. ಶಸ್ತ್ರಾಘಾತದಿಂದ ಭೂಮಿಗೆ ಕುಸಿದವರು ಕೆಲವರು, ತಮ್ಮ ವಾಹನದಿಂದ ತಲೆಕೆಳಗಾಗಿ ಭೂಮಿಗೆ ಉರುಳಿದವರು ಕೆಲವರು.

ಯುದ್ಧ ರಂಗದಲ್ಲಿ ಉಭಯಪಕ್ಷದವರೂ ರೋಷದಿಂದ ಆವೇಶಿತರಾಗಿದ್ದು ವೇಗವಾಗಿ ಚಲಿಸುವ ಕುದುರೆಗಳ ಮೇಲೆ, ಕುದುರೆ ಹೂಡಿರುವ ರಥಗಳಲ್ಲಿಯೂ, ಆಕಾಶಗಾಮಿ ವಿಮಾನದಲ್ಲಿಯೂ ಕುಳಿತು ಪರಸ್ಪರ ಯುದ್ಧ ಮಾಡಿಕೊಂಡರು. ಕೆಲವರು ಶತ್ರು ಸೈನ್ಯವನ್ನು ಧೈರ್ಯದಿಂದ ಎದುರಿಸಿದರೆ ಮತ್ತೆ ಕೆಲವು ಭಯದಿಂದ ಪ್ರಾಣ ಉಳಿಸಿಕೊಳ್ಳಲು ರಣಹೇಡಿಗಳಾಗಿ ಪಲಾಯನ ಸೂತ್ರ ಹೇಳಿದರು. ರಥಿಗಳಿಗೆ ರಥಿಗಳು, ಪದಾತಿಗಳನ್ನು ಪದಾತಿಗಳು ಎದುರಿಸುತ್ತಿದ್ದವು. ಯುದ್ಧದಲ್ಲಿ ಸಂಚರಿಸುತ್ತಿರುವ ರಥಗಳ ಗುಡುಗುಡು ಶಬ್ಧಗಳು ಗಗನದಲ್ಲಿ ಮೇಘಗಳ ಸಂಘರ್ಷಣೆಯಿಂದಾದ ಗುಡುಗು ಶಬ್ಧದಂತಿತ್ತು.

**ಬಭಂಜಿರೇ ರಥಾನ್ ಕೇಚಿತ್ ಕೇಚಿತ್ ಸಂಮೃದಿತಾ ರಥೈಃ ।**
**ಸಂಬಾಧಮೇಕೇ ಸಂಪ್ರಾಪ್ಯ ನ ಶೇಕುಃ ಚಲಿತುಂ ರಥಾಃ ॥ 12 ॥**

ದೇವದಾನವ ಸಂಕ್ಷುಬ್ಧಂ ಸಂಕುಲಂ ಯುದ್ಧಮಾಬಭೌ ॥ 13 ॥

ಕೆಲವು ಸೈನಿಕರು ತಮ್ಮ ಎದುರಾಳ ರಥದಲ್ಲಿರುವ ಸೈನಿಕರನ್ನು ಪ್ರಹರಿಸುತ್ತಿದ್ದರು. ಕೆಲವು ಸೈನಿಕರು ವೇಗವಾಗಿ ಓಡಾಡುವ ರಥದ ಗಾಲಿಗಳಿಗೆ ಸಿಕ್ಕು ಅಸುನೀಗಿದರು. ಕೆಲವು ರಥಗಳ ಮುಂದೆ ಶತ್ರು ಪಕ್ಷ ರಥಗಳು ಅಡ್ಡಗಟ್ಟಿ ಮುಂದೆ ಹೋಗುವುದನ್ನು ತಡೆಯುತ್ತಿದ್ದವು. ಅವರಿಗೆ ಅದನ್ನು ಅತಿಕ್ರಮಿಸಿ ಹೋಗಲಾಗುತ್ತಿರಲಿಲ್ಲ. ಕೆಲವು ಯೋಧರು ಯುದ್ಧರಂಗದಲ್ಲಿ ತಮ್ಮ ಭುಜಗಳಿಂದ ದಬ್ಬಿಕೊಂಡು ಹೋಗುತ್ತಿದ್ದರು. ಯುದ್ಧಭೂಮಿಯಲ್ಲಿ ಕತ್ತಿ-ಚರ್ಮ ಹಿಡಿದು ವೈರಿಯೊಂದಿಗೆ ಹೋರಾಡುವಾಗ ಶತ್ರುವಿನ ಮೈಮೇಲಿದ್ದ ಆಭರಣಗಳು ಖಣಖಣ ಶಬ್ಧವನ್ನು ಮಾಡುತ್ತಿದ್ದವು. ಕೆಲವು ಶತ್ರುಗಳ ತಲೆ ಕತ್ತಿ ಪ್ರಹಾರದಿಂದ ಸೀಳ ಹೋಗಿ ರಕ್ತವನ್ನು ಸುರಿಸುತ್ತಿತ್ತು. ಗಗನದಲ್ಲಿ ಮೋಡಗಳೆರಡು ಸಂಘಟ್ಟಿಸಿದಾಗ ಜಲಧಾರೆಯನ್ನು ಸುರಿಸುವಂತೆ ರಕ್ತಧಾರೆ ಸುರಿಯುತ್ತಿತ್ತು. ಈ ಯುದ್ಧವು ಅಸ್ತ್ರಗಳು ಶಸ್ತ್ರಗಳಿಂದಲೇ ಹೆಣೆಯಲ್ಪಟ್ಟಿದ್ದು. ಎಲ್ಲಿ ನೋಡಿದರಲ್ಲಿ ಎಸೆದ ಗದೆಗಳನ್ನು ನೋಡಬಹುದಿತ್ತು. ಯುದ್ಧವು ಅತ್ಯಂತ ಘೋರವಾಗಿದ್ದು ಮೇಘಚ್ಛನ್ನ ದುರ್ದಿನದಂತೆ ಕಂಡುಬರುತ್ತಿತ್ತು.

ಈ ಯುದ್ಧದಲ್ಲಿ ದಾನವರೂ ಸುತ್ತಲೂ ನೆರೆದ ಮೇಘ ಸಂತತಿಯಂತಿದ್ದರು. ಅವರು ಝಳಪಿಸುತ್ತಿದ್ದ ಆಯುಧಗಳು ಮಿಂಚಿಗೆ ಸದೃಶವಾಗಿದ್ದವು. ಬಾಣಗಳಾದರೂ ಅಂಬುವರ್ಷದಂತಿತ್ತು.

## ಕಾಲನೇಮಿಯುದ್ಧ

ಏತಸ್ಮಿನ್ನಂತರೇ ಕ್ರುದ್ಧಃ ಕಾಲನೇಮಿಃ ಮಹಾಸುರಃ ।
ವ್ಯವರ್ಧತ ಸಮುದ್ರೋಘೈಃ ಪೂರ್ಯಮಾಣ ಇವಾಂಬುದಃ ॥ 14 ॥

ತಸ್ಯ ವಿದ್ಯುಚ್ಚಲಾಪೀಡಾಃ ಪ್ರದೀಪ್ತಾಶನಿವರ್ಷಿಣಃ ।
ಗಾತ್ರೇ ನಗಶಿರಃ ಪ್ರಖ್ಯಾ ವಿನಿಷ್ಪೇಷುಃ ಬಲಾಹಕಾಃ ॥ 15 ॥

ಈ ಸಮುಯದಲ್ಲಿಯೇ ಅತ್ಯಂತ ಕೋಪಗೊಂಡ ಮಹಾಸುರ ಕಾಲನೇಮಿಯು ಸಮುದ್ರ ಜಲದಿಂದ ಪರಿಪೂರ್ಣವಾಗಿ ಸಂವೃದ್ಧಿಗೊಳಸುವ ಮೇಘದಂತೆ ತನ್ನ ಶರೀರವನ್ನು ವೃದ್ಧಿ ಮಾಡತೊಡಗಿದನು. ತಲೆಯ ಮೇಲೆ ಮಿಂಚನ್ನೆ ಆಭರಣ ರೂಪದಿಂದ ಧರಿಸಿರುವ. ಪರ್ವತ ಶರೀರಕ್ಕೆ ಸದೃಶವಾದ

ಶರೀರ ಧರಿಸಿರುವ, ಸಿಡಿಲು-ಗುಡುಗನ್ನು ಹೊರಸೂಸುತ್ತಾ ಇರುವ, ಮಹಾಪರ್ವತ ಪ್ರಾಯವಾದ ಕಾಲನೇಮಿಯ ಶರೀರವನ್ನು ಮುಟ್ಟಿದ್ದೆ ತಡ ಚೂರು ಚೂರಾಗುತ್ತಿದ್ದರು. ಕಾಲನೇಮಿಯು ಕ್ರೋಧದಿಂದ ಬಿಡುತ್ತಿದ್ದ ನಿಟ್ಟುಸಿರು ಭಯಂಕರವಾಗಿದ್ದು ಅವನ ಹುಬ್ಬುಗಳ ಮಧ್ಯದಿಂದ ಬೆವರಿನ ಹನಿಹನಿಯಾಗಿ ಬಿದ್ದವು. ಸಿಡಿಲಿನಿಂದ ಕೂಡಿದ ಪ್ರಚಂಡ ವಾಯುವಿನಿಂದ ಯುಕ್ತನಾದ ಅಗ್ನಿಯ ಜ್ವಾಲೆಗಳನ್ನು ತನ್ನ ಬಾಯಿಂದ ಉಗುಳುತ್ತಿದ್ದ. ಅದೇ ಸಮಯದಲ್ಲಿ ಭಗವಂತನ ಆದೇಶದಂತೆ ಬ್ರಹ್ಮದೇವರು ನೀಡಿದ ವರದಂತೆ ಸರ್ವರಿಂದಲೂ ಅಜೇಯನಾಗಿದ್ದ ಕಾಲನೇಮಿಯ ತೋಳುಗಳು ಆಕಾಶದಲ್ಲಿ ಅಡ್ಡಡ್ಡವಾಗಿ ಬೆಳೆಯತೊಡಗಿದವು. ಈ ಬಾಹುಗಳೆಲ್ಲವೂ ಐದು ಹೆಡೆಗಳುಳ್ಳ ಸರ್ಪಗಳಂತೆ ಉದ್ದುದ್ದವಾದ ನಾಲಗೆಯನ್ನು ಚಾಚಿ ಶತ್ರು ಪಕ್ಷದವರನ್ನು ಕಬಳಿಸಲು ಬಾಯಿ ಬಿಡುತ್ತಿರುವಂತೆ ಕಾಣಿಸಿದವು. ಉಚ್ಛ್ರಿತ ಪರ್ವತಗಳು ಆಕಾಶವನ್ನು ವ್ಯಾಪಿಸಿಕೊಂಡಿರುವಂತೆ ಕಾಲನೇಮಿಯು ಹೊಡೆಯುತ್ತಿದ್ದ ನಾನಾವಿಧ ಅಸ್ತ್ರಶಸ್ತ್ರಗಳಿಂದಲೂ ಹಾಗೂ ಪರಿಘಾಯುಧ, ಮುಸಲಾಯುಧ ಬಿಲ್ಲು ಬಾಣಾದಿ ಆಯುಧಗಳಿಂದಲೂ ಆಕಾಶವು ತುಂಬಿಹೋಗಿತ್ತು. ಹೀಗೆ ಶತ್ರುಭಯಂಕರನಾದ ಕಾಲನೇಮಿಯು ಯುದ್ಧಭೂಮಿಯಲ್ಲಿ ಮುಂದೆ ನಿಂತಿದ್ದನು. ಗಾಳಿ ಬೀಸುತ್ತಿದ್ದಾಗ ಅವನ ವಸ್ತ್ರ ಹಾರಾಡುತ್ತಿತ್ತು. ಸಂಧ್ಯಾಕಾಲದ ಕೆಂಪಾದ ಸೂರ್ಯನಂತಿರುವ ಕೂದಲು ಹಾರಾಡುತ್ತಿತ್ತು. ಸುವರ್ಣಮಯ ಗಿರಿಯೇ ಎಂಬಂತಿದ್ದ. ತನ್ನ ತೊಡೆಗಳ ಹೊಡೆತದಿಂದ ಪರ್ವತಶಿಖರಗಳನ್ನು ಕೆಡವುತ್ತಾ ವೃಕ್ಷಗಳನ್ನು ಬೀಳಿಸುತ್ತಲೂ ದೇವತಾವೃಂದವನ್ನು ಸಂಹಾರಗೈಯ್ಯುತ್ತಿದ್ದನು. ಇದು ಇಂದ್ರದೇವನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕಡಿಯುತ್ತಿದ್ದನ್ನು ಸ್ಮರಣೆಗೆ ತರುತ್ತಿತ್ತು. ಈ ಯುದ್ಧದಲ್ಲಿ ಕಾಲನೇಮಿಯಿಂದ ಏಟು ತಿಂದ ದೇವತೆಗಳು ಓಡಿ ಹೋಗಲೂ ಶಕ್ತರಾಗಲಿಲ್ಲ. ಅವನ ಭುಜಗಳ ಪ್ರಹಾರದಿಂದ ಶಸ್ತ್ರಗಳ ಕತ್ತಿಗಳ ಪ್ರಹಾರದಿಂದಲೂ ದೇವತೆಗಳ ತಲೆ ಹಾಗೂ ಎದೆಗಳು ಛಿನ್ನವಾಗಿ ಹೋಗಿದ್ದವು. ಬಹುಮಂದಿ ಯಕ್ಷರು, ಗಂಧರ್ವರು ನಾಗರು ಕಾಲನೇಮಿಯ ಮುಷ್ಟಿಘಾತದಿಂದಲೇ ಹತರಾದರು. ಕೆಲವರು ಕತ್ತಿಯಿಂದ ಸೀಳಲ್ಪಟ್ಟರು. ಹೀಗೆ ಕಾಲನೇಮಿಯು ದೇವತಾಘವನ್ನು ಬಹು ಪೀಡಿಸಿದನು. ಅವನ ನಿರಂತರ ಆಕ್ರಮಣದಿಂದಾಗಿ ಪ್ರತೀಕಾರ ಮಾಡಲು ಎಷ್ಟೆ ಪ್ರಯತ್ನಿಸಿದರೂ ಸಾಧ್ಯವಾಗದೆ ಹೋದರು.

## ಇಂದ್ರ ವರುಣ ಕುಬೇರ ಯಮರ ಸೋಲು

ತೇನ ಶಕ್ರಃ ಸಹಸ್ರಾಕ್ಷಃ ಸ್ತಂಭಿತಃ ಶರಬಂಧನೈಃ ।
ಐರಾವತಗತಃ ಸಂಖ್ಯೇ ಚಲಿತುಂ ನ ಶಶಾಕ ಹ ॥ 16 ॥

ನಿರ್ಜಲಾಂಭೋದ ಸದೃಶಃ ನಿರ್ಜಲಾರ್ಣವ ಸಪ್ರಭಃ ।
ನಿರ್ವ್ಯಾಪಾರಃ ಕೃತಸ್ತೇನ ವಿಪಾಶೋ ವರುಣೋ ಮೃದೇ । 17 ॥

ರಣೇ ವೈಶ್ರವಣಃ ತೇನ ಪರಿಘೈಃ ಕಾಲರೂಪಿಭಿಃ ।
ವ್ಯಲಪತ್ ಲೋಕಪಾಲೇಶಃ ತ್ಯಾಜಿತೋ ಧನದಕ್ರಿಯಾಮ್ ॥ 18 ॥

ಯಮಃ ಸರ್ವಹರಸ್ತೇನ ದಂಡಪ್ರಹರಣೋ ರಣೇ ।
ಯಾಮ್ಯಾಮವಸ್ಥಾಂ ಸಮರೇ ನೀತಃ ಸ್ವಾಂ ದಿಶಮಾವಿಶತ್ ॥ 19 ॥

ಈ ಯುದ್ಧದಲ್ಲಿ ಐರಾವತವನ್ನೇರಿದ್ದ ಸಹಸ್ರಾಕ್ಷ ಇಂದ್ರದೇವನು ಕೂಡ ಕಾಲನೇಮಿಯ ಬಾಣ ಪ್ರಹಾರದಿಂದ ಅತ್ತಿತ್ತ ಅಲುಗದಂತಾದನು. ರಣಾಂಗಣದಿಂದ ಓಡಿ ಹೋಗಲೂ ಅಸಮರ್ಥನಾದನು. ಪಾಶೀಯ ಪಾಶವನ್ನು ಕಿತ್ತುಕೊಂಡು ವರುಣನನ್ನು ಯುದ್ಧಕ್ರಿಯೆಯಿಂದ ವಿರಮಿಸುವಂತೆ ಮಾಡಿದನು. ವರುಣನು ನೀರನ್ನು ಸುರಿಸಿಬರಿದಾದ ಬಿಳಿಯ ಮೇಘದಂತಾದನು. ಪಾಶರಹಿತ ವರುಣ ಜಲರಹಿತ ಸಮುದ್ರದಂತಾದನು. ಕುಬೇರನೂ ಸಹ ಕಾಲನೇಮಿಯ ಕಾಲರೂಪವಾದ ಪರಿಘಾಯುಧದಿಂದ ಹೊಡೆಯಲ್ಪಟ್ಟು ದುಃಖದಿಂದ ವಿಲಪಿಸುತ್ತಿದ್ದನು. ಈ ಸಂದರ್ಭದಲ್ಲಿ ತಾನು ಲೋಕ ಪಾಲೇಶನೆಂದಾಗಲೀ, ಧನಾಧ್ಯಕ್ಷನೆಂದಾಗಲೀ ಅರಿವು ಇರಲಿಲ್ಲ, ಹಾಗೆ ವಿಲಪಿಸಿದನು.

ಸಮಸ್ತ ಮಾನವರ ಪ್ರಾಣಹರಣ ಮಾಡುವ ದಂಡ ಪಾಶಧರನಾದ ಯುಮಧರ್ಮನೂ ಸಹ ಕಾಲನೇಮಿಯು ಪ್ರಹಾರದಿಂದಾಗಿ ಅಚೇತನನಂತಾದನು. ಯುದ್ಧವನ್ನು ಮುಂದುವರಿಸಲಾಗದೆ ದಕ್ಷಿಣ ದಿಕ್ಕಿನ ಮೂಲೆಯಲ್ಲಡಗಿದನು.

### ಲೋಕಪಾಲಕರ ಕಾರ್ಯಭಾರವಹಿಸಿದ

ಸ ಲೋಕಪಾಲಾನ್ ಉತ್ಸಾದ್ಯ ಕೃತ್ವಾ ತೇಷಾಂ ಚ ಕರ್ಮ ತತ್ ।
ದಿಕ್ಷು ಸರ್ವಾಸು ದೇಹಂ ಸ್ವಂ ಚತುರ್ಧಾ ವಿದಧೇ ತದಾ ॥ 20 ॥

**ಸ ನಕ್ಷತ್ರಪಥಂ ಗತ್ವಾ ದಿವ್ಯಂ ಸ್ವರ್ಭಾನುದರ್ಶಿತಮ್ ।**
**ಜಹಾರ ಲಕ್ಷ್ಮೀಂ ಸೋಮಸ್ಯ ತಂ ಚಾಸ್ಯ ವಿಷಯಂ ಮಹತ್ ॥ 21 ॥**
**ಚಾಲಯಾಮಾಸ ದೀಪ್ತಾಂಶುಂ ಸ್ವರ್ಗ ದ್ವಾರಾತ್ ಸ ಭಾಸ್ಕರಮ್ ।**
**ಸೋಽಗ್ನಿಂ ದೇವಮುಖೇ ದೃಷ್ಟ್ವಾ ಚಕಾರಾತ್ಮಮುಖೇ ಸ್ವಯಮ್ ।**
**ವಾಯುಂ ಚ ತರಸಾ ಜಿತ್ವಾ ಚಕಾರಾತ್ಮ ವಶಾನುಗಮ್ ॥ 22 ॥**

ಕಾಲನೇಮಿಯು ದಿಕ್ಪಾಲಕರನ್ನೂ ಸೋಲಿಸಿ ವಿಜಯಿಯಾದ ಮೇಲೆ, ನಾಲ್ಕು ದಿಕ್ಕುಗಳ ಕಾರ್ಯಭಾರ ವಹಿಸಲು ಯೋಗ್ಯವಾಗುವಂತೆ ತನ್ನ ದೇಹವನ್ನು ನಾಲ್ಕು ಭಾಗಗಳಾಗಿ ಮಾಡಿಕೊಂಡನು. ರಾಹುವು ತೋರಿಸಿದ ನಕ್ಷತ್ರಪಥಕ್ಕೆ ಹೋಗಿ ಚಂದ್ರದೇವನ ರಾಜ್ಯಸಂಪತ್ತನ್ನು ಅವನ ರಾಜ್ಯವನ್ನು ಅಪಹರಿಸಿ ನಾನೇ ಇನ್ನೂ ಮುಂದೆ ಚಂದ್ರನೆಂದು ಘೋಷಿಸಿದನು. ಮುಂದೆ ಪ್ರದೀಪ್ರಕಿರಣನಾದ ಸಹಸ್ರಕಿರಣ ಸೂರ್ಯನನ್ನೂ ಸಹ ಸ್ವರ್ಗದಿಂದ ಓಡಿಸಿ, ಅಯನಗಳಿಂದ ಸಹಿತ ಸಕಲ ಸೂರ್ಯಮಂಡಲವನ್ನೇ ಆಕ್ರಮಿಸಿದನು. ಸೂರ್ಯನಿಗೆ ಸಂಬಂಧಿಸಿದ್ದ ದಿನವಾರ ಕರ್ಮಗಳನ್ನು ಕಸಿದುಕೊಂಡನು. ಅಗ್ನಿಯು ದೇವತೆಗಳಿಗೆ ಸಕಲ ಯಜ್ಞಾಹುತಿಯನ್ನು ನೀಡುತ್ತಿದ್ದು ದೇವತೆಗಳ ಮುಖವೆನಿಸಿದ್ದನು. ಕಾಲನೇಮಿಯು ಅಗ್ನಿಯನ್ನು ಬಲಾತ್ಕಾರವಾಗಿ ಸೆಳೆದು ತಂದು ಇನ್ನೂ ಮುಂದೆ ನೀನು ದೇವತಾ ಮುಖನಲ್ಲ ಕಾಲನೇಮಿ ಮುಖ ತಿಳಿಯತೇ? ಎಂದು ತನಗೆ ಆಹುತಿ ಬರುವಂತೆ ಆಜ್ಞಾಪಿಸಿದನು. ಪ್ರವಹವಾಯುವನ್ನೂ ಸೋಲಿಸಿ ಇನ್ನೂ ಮುಂದೆ ತಾನು ಹೇಳಿದಂತೆ ಕೇಳಬೇಕೆಂದು ಕಟ್ಟಾಜ್ಞೆ ಮಾಡಿದನು. ಸಮುದ್ರಗಳು ನದನದಿಗಳು ಕಾಲನೇಮಿಯ ಅಧೀನವಾಗಿ ಹೋದವು. ಇವನ ಶರೀರದಲ್ಲಿ ಲೀನವಾಗಿ ಹೋದವು. ಹೀಗೆ ಆಕಾಶ ಹಾಗೂ ಭೂಮಿಯಲ್ಲಿರುವ ಸಕಲ ಜಲಾಭಿಮಾನಿಗಳನ್ನು ತನ್ನ ವಶ ಮಾಡಿಕೊಂಡು. ಪರ್ವತಕಾನನ ಸಹಿತ ಜಗತ್ತನ್ನು ನೀರಿನ ಮೇಲೆ ಸ್ಥಾಪಿಸಿದನು. ಪಂಚಭೂತಗಳಿಗೆ ಅಧಿಪತಿಯೂ, ಸರ್ವಲೋಕವನ್ನು ತನ್ನಂಕೆಯಲ್ಲಿರಿಸಿಕೊಂಡು ನಾನೇ ಬ್ರಹ್ಮದೇವನೆಂಬಂತೆ ವರ್ತಿಸಿದನು.

**ಸ ಲೋಕಪಾಲೈಕ ವಪುಃ ಚಂದ್ರ ಸೂರ್ಯಗ್ರಹಾತ್ಮವಾನ್ ।**
**ಪಾವಕಾನಿಲಸಂಘಾತೋ ರರಾಜ ಯುಧಿ ದಾನವಃ ॥ 23 ॥**

**ಪಾರಮೇಷ್ಠ್ಯೇ ಸ್ಥಿತಃ ಸ್ಥಾನೇ ಲೋಕಾನಾಂ ಪ್ರಭವಾಪ್ಯಯೇ ।**
**ತುಷ್ಟುವುಸ್ತಂ ದೈತ್ಯಗಣಾಃ ದೇವ ಇವ ಪಿತಾಮಹಮ್ ॥ 24 ॥**

ಕಾಲನೇಮಿಯು ತಾನೊಬ್ಬನೇ ಸಮಸ್ತ ದಿಕ್ ಪಾಲಕರ ರೂಪದಿಂದ ರಾರಾಜಿಸುತ್ತಾ. ಚಂದ್ರ ಸೂರ್ಯ ಗ್ರಹಗಳಗೂ ತಾನೇ ಬೆಳಕು ನೀಡುವವನಾಗಿ ಅವರೆಲ್ಲ ಕಾರ್ಯಗಳನ್ನು ಇವನೇ ನಿರ್ವಹಿಸುತ್ತಿದ್ದನು. ಅಗ್ನಿ ವಾಯುಗಳೂ ಅವನ ಶರೀರದಲ್ಲಿಯೇ ಆಶ್ರಯ ಪಡೆದಿದ್ದರು. ಹೀಗೆ ಸಕಲ ದೇವತೆಗಳನ್ನೂ ತನ್ನಲ್ಲಿಯೇ ಅಡಗಿಸಿಕೊಂಡು ದೇವತಾಕಾರ್ಯಗಳನ್ನೆಲ್ಲ ಇವನೇ ನಿರ್ವಹಿಸುತ್ತಿದ್ದನು.

ಪರಮೇಷ್ಠೀಲೋಕಕ್ಕೂ ಲಗ್ಗೆಯಿಟ್ಟು ಸಕಲಲೋಕಗಳ ಉತ್ಪತ್ತಿ ಸ್ಥಿತಿ ಸಂಹಾರಕನಾದ ಬ್ರಹ್ಮನಂತೆ ಆದನು. ದೇವತೆಗಳೆಲ್ಲ ಬ್ರಹ್ಮದೇವನನ್ನೂ ಸ್ತುತಿಸುವ ಪರಿಪಾಠದಂತೆ ದೈತ್ಯರೆಲ್ಲರೂ ಕಾಲನೇಮಿಯನ್ನು ಸ್ತುತಿಸುವ ಪರಿಪಾಠ ಪ್ರಾರಂಭವಾಯಿತು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಾಲನೇಮಿ ಯುದ್ಧವೆಂಬಲ್ಲಿ
ನಲವತ್ತೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ  ಹರಿಪರ್ವ

# ಅಥ ಅಷ್ಟಚತ್ವಾರಿಂಶೋಽಧ್ಯಾಯಃ

## ವಿಷ್ಣು–ಕಾಲನೇಮಿ[1] ಯುದ್ಧ

*ವೈಶಂಪಾಯನ ಉವಾಚ –*

**ಪಂಚ ತಂ ನಾಭ್ಯವರ್ತಂತ ವಿಪರೀತೇನ ಕರ್ಮಣಾ ।**
**ವೇದೋ ಧರ್ಮಃ ಕ್ಷಮಾ ಸತ್ಯಂ ಶ್ರೀಶ್ಚ ನಾರಾಯಣಾಶ್ರಯಾ ॥ 1 ॥**
**ಸ ತೇಷಾ ಮನುಪಸ್ಥಾನಾತ್ ಸಕ್ರೋಧೋ ದಾನವೇಶ್ವರಃ ।**
**ವೈಷ್ಣವಂ ಪದಮನ್ವಿಚ್ಛನ್ ಯಯೌ ನಾರಾಯಣಾಂತಿಕಮ್ ॥ 2 ॥**
**ಸ ದದರ್ಶ ಸುಪರ್ಣಸ್ಥಂ ಶಂಖ ಚಕ್ರಗದಾಧರಮ್ ।**
**ದಾನವಾನಾಂ ವಿನಾಶಾಯ ಭ್ರಾಮಯಂತಂ ಗದಾಂ ಶುಭಾಮ್ ॥ 3 ॥**
**ಸಜಲಾಂಭೋದಸದೃಶಂ ವಿದ್ಯುತ್ ಸದೃಶವಾಸಸಮ್ ।**
**ಸ್ವಾರೂಢಂ ಸ್ವರ್ಣಪತ್ರಾಢ್ಯಂ ಶಿಖಿನಂ ಕಾಶ್ಯಪಂ ಖಗಮ್ ॥ 4 ॥**
**ದಾನವೋ ವಿಷ್ಣುಮಕ್ಷೋಭ್ಯಂ ಬಭಾಷೇ ಕ್ಷುಬ್ಧ ಮಾನಸಃ ॥ 5 ॥**

ವೈಶಂಪಾಯನರು ಜನಮೇಜಯನನ್ನುದ್ದೇಶಿಸಿ ಹೀಗೆಂದರು ರಾಜನೇ ! ಕಾಲನೇಮಿಯು ಶಾಸ್ತ್ರ ವಿರುದ್ಧವಾಗಿ ವರ್ತಿಸುತ್ತಾ ಇದ್ದದ್ದರಿಂದ ವೇದ,

---

1. ಕಾಲನೇಮಿ :

ಕಾಲನೇಮಿಯು ಬ್ರಹ್ಮದೇವರಿಂದ ಸರ್ವಾಜೇಯತ್ವವನ್ನು ಪಡೆದು ಸಾವಿರ ತಲೆ, ಎರಡು ಸಹಸ್ರ ಬಾಹುಗಳನ್ನು ಹೊಂದಿದ್ದನು. ಇವನು ಇಂದ್ರ, ಯಮ, ವರುಣ, ವಾಯು, ಕುಬೇರ, ಸೂರ್ಯರನ್ನೂ ಗೆದ್ದು ಸಿಂಹನಾದ ಮಾಡಿದನು. ಸರ್ವಜೇಯತ್ವ

ಧರ್ಮ, ಕ್ಷಮೆ, ಸತ್ಯ ಹಾಗೂ ಶ್ರೀಮನ್ನಾರಾಯಣನನ್ನೆ ಆಶ್ರಯಿಸಿರುವ ಲಕ್ಷ್ಮೀದೇವಿ – ಈ ಐದು ವಸ್ತುಗಳು ಕಾಲನೇಮಿಯ ವಶವಾಗಿದ್ದಿಲ್ಲ.

ಈ ಐದು ವಸ್ತುಗಳು ಮಾತ್ರ ತನ್ನೆಡೆಗೆ ಬರದಿದ್ದದ್ದಕ್ಕಾಗೀ ಅತ್ಯಂತ ಕೋಪಗಂಡ ಕಾಲನೇಮಿಯು ಇವುಗಳನ್ನು ತನ್ನ ವಶ ಮಾಡಿಕೊಳ್ಳಲೆಂದು ನಾರಾಯಣನನ್ನು ಸಮೀಪಿಸಿದನು. ನಾರಾಯಣನಾದರು ಶಂಖ ಚಕ್ರ ಗದಾಧರನಾಗಿ, ಗರುಡನ ಮೇಲೆ ಆಸೀನನಾಗಿ ವಿರಾಜಿಸುತ್ತಿದ್ದನು. ದೈತ್ಯ ದಾನವರನ್ನು ಸದೆಬಡೆಯಲು ತನ್ನ ಕೌಮೋದಕೀ ಗದೆಯನ್ನು ಚಕ್ರದಂತೆ ತನ್ನ ಕೈಯಲ್ಲಿ ತಿರುಗಿಸುತ್ತಿದ್ದನು. ಅವನು ಶರೀರಕಾಂತಿ ನೀಲಶ್ಯಾಮ ಮೇಘದಂತೆ ವಿರಾಜಿಸುತ್ತಿತ್ತು. ಮಿಂಚಿನಂತೆ ಹೊಳೆಯುವ ಪೀತಾಂಬರ ಧರಿಸಿದ್ದನು. ಅವನು ಕುಳಿತಿದ್ದ ಕಶ್ಯಪಪುತ್ರ ಗರುಡನ ರೆಕ್ಕೆಗಳು ಸುವರ್ಣಮಯವಾಗಿದ್ದವು. ತಲೆಯ ಮೇಲೆ ಶಿಖೆ ಶೋಭಿಸುತ್ತಿತ್ತು. ನಿರ್ಭಯನಾಗಿ ಯುದ್ಧ ಭೂಮಿಯಲ್ಲಿ ನಿಂತಿರುವ ವಿಷ್ಣುವನ್ನು ನೋಡಿಯೇ ಕ್ಷುಬ್ಧಮನಸ್ಸಿನಿಂದ ಕೂಡಿ ಹೀಗೆಂದನು.

**ಅಯಂ ಸ ರಿಪುಪುರಸ್ಮಾಕಂ ಪೂರ್ವೇಷಾಂ ದಾನವರ್ಷಿಣಾಮ್ ।**
**ಅರ್ಣವಾವಾಸಿನಶ್ಚೈವ ಮಧೋರ್ವೈ ಕೈಟಭಸ್ಯ ಚ ॥ 6 ॥**
**ಅಯಂ ಸ ವಿಗ್ರಹೋಽಸ್ಮಾಕಂ ಅಶಾಮ್ಯಃ ಕಿಲ ಕಥ್ಯತೇ ।**
**ಯೇನ ನಃ ಸಂಯುಗೇಷ್ವಾದ್ಯಾಃ ಬಹವೋ ದಾನವೊ ಹತಾಃ ॥ 7 ॥**

ದಾನವರೇ ಕೇಳಿರಿ, ಈ ವಿಷ್ಣುವು ಹಿಂದಿನ ದಾನವ ಶ್ರೇಷ್ಠರಿಗೂ ಮತ್ತು ಸಮುದ್ರದಲ್ಲಿ ವಾಸವಾಗಿದ್ದ ಮಧುಕೈಟಭರಿಗೂ ಶತ್ರುವಾಗಿರುವನು. ಇಂದು ನಮಗೂ ಶತ್ರುವೆ. ಇವನು ನಮಗೆ ಯುದ್ಧವೆ ಮೂರ್ತಿಮತ್ತಾಗಿ ಬಂದಿರುವಂತಿರುವನು. ಇವನಿಗೂ ನಮಗೂ ಇರುವ ದ್ವೇಷ

---

ವರ ವಿಪ್ರಚಿತ್ತಿಗೂ ಲಭಿಸಿತ್ತು. ಆದರೂ ವಾಯುದೇವ ಅವನನ್ನು ಕೊಂದು ಹಾಕಿದ. ಕಾಲನೇಮಿಯಾದರೂ ಅಜೇಯತ್ವ ವರವನ್ನು – 'ಇವನಿಗೆ ಅಜೇಯತ್ವ ನೀಡು' ಎಂಬ ವಿಷ್ಣುವಿನ ಆಜ್ಞೆಯಿಂದಲೇ ನೀಡಿದ್ದು. ಇವನನ್ನು ನಾನು ಕೊಂದರೆ ವಿಷ್ಣುವಿನ ಆಜ್ಞೆ ಹಾಗೂ ಬ್ರಹ್ಮದೇವರ ವರವನ್ನೂ ಉಲ್ಲಂಘಿಸಿದಂತಾಗುತ್ತದೆ. ಎಂದೇ ವಾಯುವು ಸಮರ್ಥನಾದರೂ ಕಾಲನೇಮಿಯನ್ನು ಕೊಲ್ಲಲಿಲ್ಲ. ಆದ್ದರಿಂದ ನೀನು ಬಿಟ್ಟು ಕಾಲನೇಮಿಯನ್ನು ಕೊಲ್ಲಲು ಅನ್ಯರಿಗೆ ಸಾಧ್ಯವಿಲ್ಲವೆನ್ನಲಾಗಿದೆ. **'ತ್ವಮೇಕೋಽಸ್ಯ ಮೃಧೇ ಹಂತಾ ನಾನ್ಯಃ ಕಶ್ಚನ',**

ಪರಿಹಾರವಾಗುವುದೆಂದಿಲ್ಲ. ಇವನು ಹಿಂದೆ ನಡೆದಿದ್ದ ಅನೇಕ ಯುದ್ಧದಲ್ಲಿ ನಮ್ಮವರಾದ ಬಹಳ ದಾನವರನ್ನು ಕೊಂದು ಹಾಕಿರುವನು.

ಇವನು ಬಹಳವಾಗಿ ನಮ್ಮಲ್ಲಿ ನಿರ್ದಯತೇ ತೋರಿರುವನು. ಯುದ್ಧದಲ್ಲಿ ಅಸ್ತ್ರಶಸ್ತ್ರಗಳನ್ನು ಧರಿಸುವಾಗ ನಮ್ಮ ಮುಂದೆ ಇವನು ಬಾಲಕನಂತೆ ನಿರ್ಲಜ್ಜನು. ದಾನವರನ್ನೆಲ್ಲ ಕೊಂದು ದಾನವ ಸ್ತ್ರೀಯರ ಸೌಭಾಗ್ಯ ಹಾಳು ಮಾಡಿದವನು. ಅವರಿಗೆ ಸೀಮಂತೋನ್ನಯನವಿಲ್ಲದಂತೆ ಮಾಡಿದವನು.

ಇವನೇ ದೇವತಾ ಪಕ್ಷಪಾತಿಯಾದ ವಿಷ್ಣುವು. ಸ್ವರ್ಗದಲ್ಲಿರುವ ದೇವತೆಗಳ ವೈಕುಂಠನೂ ಇವನೇ. ಸಮುದ್ರಶಾಯಿಯಾಗಿದ್ದು ಅನೇಕಾನೇಕ ಸರ್ಪಗಳಿಗೆ ಆಶ್ರಯನಾದ ಅನಂತನಿಗೆ ಆಶ್ರಯನು. ಸ್ವಯಂಭು ಎನಿಸಿದ ಬ್ರಹ್ಮದೇವನಿಗೂ ಜನ್ಮಕಾರಣನಾಗಿದ್ದಾನೆ.

ಈ ವಿಷ್ಣುವು ದೇವತಾವೃಂದ ರಕ್ಷಕನು, ನಮಗೆಲ್ಲ ಕೆಟ್ಟದ್ದನ್ನು ಮಾಡಲು ಯಾವಾಗಲೂ ಕಟಿಬದ್ಧನಾಗಿರುವನು. ಇವನ ಮಹಾಕ್ರೋಧದಿಂದಾಗಿಯೇ ನಮ್ಮ ಪೂರ್ವಜ ಹಿರಣ್ಯಕಶಿಪುವು ಸುಹೃತನಾದನು.

**ಅಸ್ಯ ಛಾಯಾಂ ಸಮಾಸಾದ್ಯ ದೇವಾ ಮಖಮುಖೇ ಸ್ಥಿತಾಃ ।**
**ಆಜ್ಯಂ ಮಹರ್ಷಿಭಿಃ ದತ್ತಮಶ್ನುವಂತಿ ತ್ರಿಧಾ ಹುತಮ್ ॥ 8 ॥**
**ಅಯಂ ಸ ನಿಧನೇ ಹೇತುಃ ಸರ್ವೇಷಾಂ ದೇವವಿದ್ವಿಷಾಮ್ ।**
**ಯಸ್ಯ ತೇಜಃ ಪ್ರವಿಷ್ಟಾನಿ ಕುಲಾನ್ಯಸ್ಮಾಕಮಾಹವೇ ॥ 9 ॥**
**ಅಯಂ ಸ ಕಿಲ ಯುದ್ಧೇಷು ಸುರಾರ್ಥೇ ತ್ಯಕ್ತಜೀವಿತಃ ।**
**ಸವಿತುಃ ತೇಜಸಾ ತುಲ್ಯಂ ಚಕ್ರಂ ಕ್ಷಿಪತಿ ಶತ್ರುಷು ॥ 10 ॥**

ದೇವತೆಗಳೆಲ್ಲರೂ ಇವನನ್ನು ಅವಲಂಬಿಸಿಕೊಂಡಿರುವುದರಿಂದಲೇ ಅಗ್ನಿ ಮುಖಗಳಲ್ಲಿ ಋಷಿಗಳು ಮಾಡುವ ಯಜ್ಞಗಳಲ್ಲಿ ಮೂರು ವಿಧ ಆಹುತಿಗಳನ್ನು ಪಡೆಯುತ್ತಾರೆ. ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳಲ್ಲಿ ನಡೆಸುವ ಆಹುತಿಗಳು ಇವನ ಅನುಗ್ರಹದಿಂದಲೇ ಇವರಿಗೆ ತಲುಪುತ್ತದೆ. ದೇವತಾದ್ವೇಷಿಗಳಾದ ನಮ್ಮಂತಹ ಸಕಲ ದೈತ್ಯರನ್ನೂ ಸಂಹಾರಗೈಯ್ಯಲು ಮುಖ್ಯಕಾರಣನಾಗಿರುವನೂ ಈ ವಿಷ್ಣುವೇ. ಯುದ್ಧದಲ್ಲಿ ನಮ್ಮ ಅನೇಕ ಬಂಧುಬಾಂಧವರೆಲ್ಲರೂ ಇವನ ತೇಜಸ್ಸಿನಿಂದ ಸುಟ್ಟು ಹೋಗಿದ್ದಾರೆ. ಈ

ವಿಷ್ಣುವು ದೇವತೆಗಳಗಾಗಿ ತನ್ನ ಜೀವತವನ್ನೇ ಮುಡುಪಾಗಿಟ್ಟಿರುವನು. ಇವನ ಬಳ ಇರುವ ಸೂರ್ಯರ ಕೋಟಿ ಕಾಂತಿಗೆ ಸದೃಶವಾದ ಸುದರ್ಶನ ಚಕ್ರವಿದೆ. ಇದರಿಂದಲೇ ಇವನು ಯುದ್ಧ ಮಾಡುವನು. ಎಷ್ಟೋ ದೈತ್ಯರ ತಲೆಯನ್ನು ತರಿದದ್ದು ಇದೇ ಚಕ್ರವು.

**ಅಯಂ ಸ ಕಾಲೋ ದೈತ್ಯಾನಾಂ ಕಾಲಭೂತೇ ಮಯಿ ಸ್ಥಿತೇ ।**
**ಅತಿಕ್ರಾಂತಸ್ಯ ಕಾಲಸ್ಯ ಫಲಂ ಪ್ರಾಪ್ಸ್ಯತಿ ದುರ್ಮತಿಃ ॥ 11 ॥**

**ಅದ್ಯ ಮದ್ಬಾಣ ನಿಷ್ಪಿಷ್ಟೋ ಮಾಮೇವ ಪ್ರಣಮಿಷ್ಯತಿ ।**
**ಇಮಂ ನಾರಾಯಣಂ ಹತ್ವಾ ದಾನವಾನಾಂ ಭಯಾವಹಂ ॥ 12 ॥**

**ಕ್ಷಿಪ್ರಮೇವ ವಧಿಷ್ಯಾಮಿ ರಣೇ ನಾರಾಯಣಾಶ್ರಿತಾನ್ ॥ 13 ॥**

**ಜಾತ್ಯಂತರ ಗತೋಽಪ್ಯೇಷ ಮೃಧೇ ಬಾಧತಿ ದಾನವಾನ್ ।**
**ಏಷೋಽನಂತಃ ಪುರಾ ಭೂತ್ವಾ ಪದ್ಮನಾಭ ಇತಿಸ್ಮೃತಃ ॥ 14 ॥**

**ಜಘಾನೈಕಾರ್ಣವೇ ಘೋರೇ ತಾವುಭೌ ಮಧುಕೈಟಭೌ ।**
**ವಿನಿವೇಶ್ಯ ಸ್ವಕೇ ಊರೌ ನಿಹತೌ ದಾನವೇಶ್ವರೌ ॥ 15 ॥**

ದೈತ್ಯರೇ! ಇವನು ದೈತ್ಯರಿಗೆ ಮೃತ್ಯುವಾದರೇ ನಾನು ಆ ಮೃತ್ಯುವಿಗೂ ಮೃತ್ಯುವಾಗಿರುವೆನು. ಇವನು ಹಿಂದೆ ನಮ್ಮವರೆಲ್ಲರನ್ನೂ ಕೊಂದು ಫಲವನ್ನು ಇಂದು ನನ್ನಿಂದ ಅನುಭವಿಸಲಿರುವನು.

ನಮ್ಮ ಸೌಭಾಗ್ಯವಿದು. ಇಂದು ನನ್ನ ದೃಷ್ಟಿಗೆ ಗೋಚರನಾಗಿದ್ದಾನೆ. ಈ ವಿಷ್ಣುವನ್ನು ನನ್ನ ತೀಕ್ಷ್ಣವಾದ ಬಾಣ ಪುಂಜಗಳಿಂದ ಹಿಟ್ಟಿನಂತಾಗಿ ಭೂಮಿಯಲ್ಲಿ ಬಿದ್ದು ನನಗೆ ಪ್ರಣಾಮ ಮಾಡಲಿರುವನು. ದೈತ್ಯರಿಗೆ ಭಯವುಂಟು ಮಾಡುವ ವಿಷ್ಣುವನ್ನು ನಾನು ಕೊಂದು ಹಾಕಿ, ನಂತರ ಆಶ್ರಯ ತಪ್ಪಿ ನಿರಾಶ್ರಿತರಾದ ದೇವತೆಗಳನ್ನು ಕೊಂದು ಹಾಕುತ್ತೇನೆ.

ಮತ್ಸ್ಯ – ವರಾಹಾದಿ ಬೇರೆ ಜಾತಿಯನ್ನು ಹೊಂದಿದಾಗಲೂ ನಮ್ಮವರನ್ನು ಕೊಂದು ಹಾಕಿರುವ ಈ ವಿಷ್ಣುವು ದಾನವರನ್ನು ಪೀಡಿಸುತ್ತಲೇ ಇರುವನು. ವಸ್ತುತಃ ಇವನು ದೇಶ-ಕಾಲ-ಗುಣಗಳಿಂದ ಅಪರಿಚ್ಛಿನ್ನನಾಗಿದ್ದರೂ ಸಾಮಾನ್ಯ ಪದ್ಮನಾಭನೆಂಬ ಶರೀರ ಧರಿಸಿರುವನು. ಆ ಶರೀರದಲ್ಲಿಯೂ ನಮ್ಮ ಕುಲಕ್ಕೆ ಕಂಟಕಪ್ರಾಯನಾಗಿರುವನು. ಏಕಾರ್ಣವವಾದ

ಪ್ರಲಯೋದಕದಲ್ಲಿ ಮಲಗಿದ್ದು, ಮಧು-ಕೈಟಭರೆಂಬ ನಮ್ಮ ಪೂರ್ವಜರಾದ ದೈತ್ಯರನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ಸೀಳ ಹಾಕಿರುವನು.

## ಹಿರಣ್ಯಕಶಿಪು ವಧೆ

**ದ್ವಿಧಾ ಭೂತಂ ವಪುಃ ಕೃತಾ ಸಿಂಹಾರ್ಧಂ ನರಸಂಸ್ಥಿತಮ್ ।**
**ಪಿತರಂ ಮೇ ಜಘಾನೈಕೋ ಹಿರಣ್ಯಕಶಿಪುಂ ಪುರಾ ॥ 16 ॥**

## ಬಲಿಚಕ್ರವರ್ತಿ ನಿಗ್ರಹ

**ಶುಭಂ ಗರ್ಭಮಧತ್ತೇಮ ಮದಿತಿಃ ದೇವತಾರಣಿಃ ।**
**ಯಜ್ಞಕಾಲೇ ಬಲೆರ್ಯೋಽವ್ಯೆ ಕೃತ್ವಾ ವಾಮನರೂಪಕಮ್ ॥ 17 ॥**
**ತ್ರೀನ್ ಲೋಕಾನಾಜಹಾರೈಕಃ ಕ್ರಮಮಾಣ ತ್ರಿಭಿಃಕ್ರಮ್ಯೆಃ ॥ 18 ॥**

ಇವನು ಮತ್ತೊಂದು ನೃ-ಸಿಂಹಾಕಾರ ರೂಪದಲ್ಲಿ ಅರ್ಧನರನೂ, ಅರ್ಧಸಿಂಹನೂ ಆಗಿ ಕಂಬದಿಂದ ಪ್ರಕಟನಾಗಿ ನನ್ನ ತಂದೆಯಂತಿರುವ ಹಿರಣ್ಯಕಶಿಪುವನ್ನು ತನ್ನ ಕೂರುಗುರಿನಿಂದ ಸೀಳ ಹಾಕಿರುವನು.

ದೇವತಾ ಸ್ವರೂಪವಾದ ಅಗ್ನಿಯನ್ನು ಅರಣಿಯು ಪ್ರಕಟಗೊಳಸುವಂತೆ ಯಾವ ಅದಿತಿದೇವಿಯ ಶುಭ ಗರ್ಭಾಂಬುಧಿಯಲ್ಲಿ ಈ ವಿಷ್ಣುವನ್ನು ಧಾರಣ ಮಾಡಿ ವಾಮನರೂಪ ಆವಿರ್ಭಾವಕ್ಕೆ ಕಾರಣಳಾದಳು. ಈ ವಾಮನರೂಪವೇ ಬಲಿಚಕ್ರವರ್ತಿಯು ಯಾಗ ಮಾಡುತ್ತಿದ್ದ ಭೃಗುಕುತ್ಸ ಪ್ರದೇಶಕ್ಕೆ ಬಂದು, ತನ್ನ ಮಾತಿನಿಂದ ಬಲಿಯನ್ನು ತನ್ನ ವಶ ಮಾಡಿಕೊಂಡು ಮೂರು ಹೆಜ್ಜೆ ದಾನದ ನೆಪದಲ್ಲಿ ವಾಮನನೇ ತ್ರಿವಿಕ್ರಮನಾಗಿ ಮೂರು ಲೋಕಗಳನ್ನೂ ಆಕ್ರಮಿಸಿ, ಅವನನ್ನು ಪಾತಾಳಕ್ಕೆ ತಳ್ಳಿದನು.

ಈ ವಿಷ್ಣುವೆ ಈಗ ಪುನಃ ತಾರಕಾಮಯ ಯುದ್ಧದಲ್ಲಿ ಕಾಲಿಟ್ಟಿದ್ದಾನೆ. ಇಂದು ನನ್ನ ಬಾಣಗಳಿಂದ ಹೊಡೆತ ತಿಂದು ದೇವತೆಗಳೊಂದಿಗೆ ಮರಣ-ವನ್ನಪ್ಪುವನು.

ಜನಮೇಜಯನೇ! ಕಾಲನೇಮಿ ದೈತ್ಯನು ಹೀಗೆ ಯುದ್ಧ ಭೂಮಿಯಲ್ಲಿ ಅವಾಚ್ಯ ಶಬ್ಧಗಳಿಂದ ನಿಂದಿಸುತ್ತಾ ಯುದ್ಧ ಮಾಡಲು ಇಚ್ಛಿಸಿದನು.

**ಕ್ಷಿಪ್ಯಮಾಣೋಽಸುರೇಂದ್ರೇಣ ನ ಚುಕೋಪ ಗದಾಧರಃ ।**
**ಕ್ಷಮಾಬಲೇನ ಮಹತಾ ಸಂಸ್ಮಿತಂ ವಾಕ್ಯಮಬ್ರವೀತ್ ॥ 19 ॥**

**ಅಲ್ಪ ದರ್ಪಬಲೋ ದೈತ್ಯ ಸ್ಥಿತಃ ಕ್ರೋಧಾದ್ ಅಸದ್ ವದನ್ ।**
**ಹತಸ್ತ್ವ ಮಾತ್ಮನೋ ದೋಷೈಃ ಕ್ಷಮಾಂ ಯೋಽತೀತ್ಯ ಭಾಷಸೇ ॥ 20 ॥**
**ಅಧಮಸ್ತ್ವಂ ಮಮ ಮತೋ ಧಿಗೇತತ್ ತವ ವಾಗ್ ಬಲಮ್ ।**
**ನ ತತ್ರ ಪುರುಷಾಃ ಸಂತಿ ಯತ್ರ ಗರ್ಜಂತಿ ಯೋಷಿತಃ ॥ 21 ॥**

ಕಾಲನೇಮಿಯು ಹೀಗೆ ವಿಷ್ಣುವನ್ನು ಅನೇಕ ರೀತಿಯಲ್ಲಿ ನಿಂದಿಸುತ್ತಿದ್ದರೂ ಶಾಂತಸ್ವರೂಪನಾದ ಗದಾಧರನು ಸ್ವಲ್ಪವೂ ಕೋಪಗೊಳ್ಳಲಿಲ್ಲ. ಕ್ಷಮದಮಶೀಲ ಸಂಪನ್ನನಾದ ವಿಷ್ಣುವಿನಲ್ಲಿ ಇದೇನು ಆಶ್ಚರ್ಯವಲ್ಲ.

ಆದ್ದರಿಂದ ನಗುತ್ತಲೇ ಕಾಲನೇಮಿಯನ್ನುದ್ದೇಶಿಸಿ ಹೀಗೆಂದನು –

ದೈತ್ಯನೇ! ನಿನ್ನಲ್ಲಿರುವ ಬಲಪೌರುಷಗಳು ಅತ್ಯಲ್ಪವಾಗಿದೆ. ಆದರೂ ಮಹಾಪೌರುಷವಿರುವನಂತೆ ಕೋಪದಿಂದ ಬಾಯಿಗೆ ಬಂದಂತೆ ಹರಟುತ್ತಿರುವೆ. ಈ ನಿನ್ನ ದೋಷಗಳಿಂದಲೇ ನೀನು ಸಾಯಲಿರುವಿ.

ಅಧಮಪುರುಷನಾದ ನಿನ್ನ ಈ ಕೂಗಾಟದಿಂದ ಪುರುಷೋತ್ತಮನಾದ ನನಗೇನು ಹಾನಿಯಾದೀತು? ನಿನ್ನ ವಾಗಾಡಂಬರಕ್ಕೆ ಧಿಕ್ಕಾರವಿರಲಿ! ಪುರುಷಶೂನ್ಯವಾಗಿರುವ ಸ್ತ್ರೀಯರೇ ತುಂಬಿರುವ ಜಾಗದಲ್ಲಿ ನಿನ್ನಂತಹವರು ಹೀಗೆ ಹರಟುತ್ತಾರೆ. ವೀರಪುರುಷರಿರುವ ಸ್ಥಳದಲ್ಲಿ ಸಿಂಹದ ಮುಂದೆ ಗ್ರಾಮಸಿಂಹವು ರೋದನ ಮಾಡಿದರೆ ಸ್ವರ್ಗಕ್ಕೇನು ಕುಂದು?

**ಅಹಂ ತ್ವಾ ನಾಶಯಿಷ್ಯಾಮಿ ದೇವವ್ಯಾಪಾರಕಾರಕಮ್ ।**
**ಸ್ವೇಷು ಸ್ವೇಷು ಚ ಸ್ಥಾನೇಷು ಸ್ಥಾಪಯಿಷ್ಯಾಮಿ ದೇವತಾಃ ॥ 22 ॥**
**ಏವಂ ಬ್ರುವತಿ ತದ್ ವಾಕ್ಯಂ ಮೃಧೇ ಶ್ರೀವತ್ಸಧಾರಿಣೆ ।**
**ಜಹಾಸ ದಾನವಃ ಕ್ರೋಧಾತ್ ಹಸ್ತಾಂಚಕ್ರೇ ಚ ಸಾಯುಧಾನ್ ॥ 23 ॥**

ದೈತ್ಯವರ್ಯನೇ! ನೀನು ಸರ್ವದಿಕ್ಪಾಲಕರ ಕಾರ್ಯವನ್ನೆಲ್ಲ ಕಸಿದುಕೊಂಡು ಅವರ ವ್ಯಾಪಾರ ಮಾಡುತ್ತಿರುವೆಯಲ್ಲ. ನಿನ್ನನ್ನು ಸಂಹರಿಸಿ ಪುನಃ ದೇವತೆಗಳನ್ನು ಅವರವರ ಕಾರ್ಯದಲ್ಲಿ ಸ್ಥಾಪಿಸುತ್ತೇನೆ. ಶ್ರೀವತ್ಸಾಂಕನು ಹೀಗೆ ನುಡಿಯುತ್ತಿರಲು ಕಾಲನೇಮಿಯು ತಿರಸ್ಕಾರದ ನಗೆ ಬೀರಿ. ಕೋಪಗೊಂಡು ತನ್ನ ಆಯುಧಗಳನ್ನು ಕೈಗೆತ್ತಿಕೊಂಡನು.

### ಕಾಲನೇಮಿಯಿಂದ ವಿಷ್ಣುವಿಗೆ ಪ್ರಹಾರ

ಸ ಬಾಹು ಶಥಮುದ್ಯಮ್ಯ ಸರ್ವಾಸ್ತ್ರ ಗ್ರಹಣಂ ರಣೇ ।
ಕ್ರೋಧಾದ್ ದ್ವಿಗುಣರಕ್ತಾಕ್ಷೋ ವಿಷ್ಣುಂ ವಕ್ಷಸ್ಯತಾಡಯತ್ ॥ 24 ॥

ಸ ತಾಡ್ಯಮಾನೋಽತಿಬಲೈಃ ದೈತ್ಯೈಃ ಸರ್ವಾಯುಧೋದ್ಯತೈಃ ।
ನ ಚಚಾಲ ಹರಿರ್ಯುದ್ಧೇ ಅಕಂಪ್ಯಮಾನ ಇವಾಚಲಃ ॥ 25 ॥

ಕಾಲನೇಮಿಯು ತನ್ನ ಸಾವಿರ ಬಾಹುಗಳಲ್ಲಿ ನೂರು ಬಾಹುಗಳಲ್ಲಿ ನಾನಾ ವಿಧ ಆಯುಧಗಳನ್ನು ಧರಿಸಿದ್ದನು. ಕೋಪದಿಂದ ಕೆಂಗಣ್ಣನಾಗಿದ್ದ ಕಾಲನೇಮಿಯು ವಿಷ್ಣುವೆ ನೀನಿಂದು ಈ ಹೊಡೆತದಿಂದ ಸತ್ತೆ ಎಂದು ಬಲವಾಗಿ ವಿಷ್ಣುವಿನ ವಕ್ಷಸ್ಥಳಕ್ಕೆ ಹೊಡೆದನು.

ಕಾಲನೇಮಿಯು ವಿಷ್ಣುವನ್ನು ಧೈರ್ಯದಿಂದ ಎದುರಿಸುತ್ತಿರುವುದನ್ನು ನೋಡಿದ ಮಯ ತಾರ ಮೊದಲಾದ ದಾವಪುಮಗವರು ಯದುಪುಂಗವನ ನಾನಾ ವಿಧ ಆಯುಧಗಳನ್ನು ಹಿಡಿದು ಮೇಲೇರಿ ಬಂದರು.

ಅವರು ನಾನಾಪ್ರಹರಣಗಳಿಂದ ವಿಷ್ಣುವನ್ನು ಎಲ್ಲೆಡೆಯಿಂದಲೂ ಪ್ರಹಾರ ಮಾಡುತ್ತಿದ್ದರು.

ಆದರೂ ಶ್ರೀಹರಿಯು ಸ್ವಲ್ಪವೂ ಅವರ ಪ್ರಹಾರಗಳಿಂದ ವಿಚಲಿತನಾಗದೆ ಪರ್ವತದಂತೆ ನಿಶ್ಚಲವಾಗಿದ್ದನು. ಕಾಲನೇಮಿಯು ಈ ಮಧ್ಯದಲ್ಲಿ ಶ್ರೀಕೃಷ್ಣ ಹಾಗೂ ಸುಪರ್ಣನ ಮೇಲೆ ಯುದ್ಧಕ್ಕಿಳಿದನು.

### ಗರುಡನ ಮೇಲೆ ಗದಾಪ್ರಹಾರ

ಸಂಸಕ್ತಶ್ಚ ಸುಪರ್ಣೇನ ಕಾಲನೇಮೀ ಮಹಾಸುರಃ ।
ಸರ್ವಪ್ರಾಣೇನ ಮಹತೀಂ ಗದಾಮುದ್ಯಮ್ಯ ಬಾಹುಭಿಃ ॥ 26 ॥

ಮುಮೋಚ ಜ್ವಲಿತಾಂ ಘೋರಾಂ ಸಂರಬ್ಧೋ ಗರುಡೋಪರಿ ।
ಯದಾ ತಸ್ಯ ಸುಪರ್ಣಸ್ಯ ಪತಿತಾ ಮೂರ್ಧ್ನಿ ಸಾ ಗದಾ ।
ತದಾಽಽಗಮತ್ ಪದಾಭೂಮಿಂ ಪಕ್ಷೀ ವ್ಯಥಿತ ವಿಗ್ರಹಃ ॥ 27 ॥

ಮಹಾಸುರ ಕಾಲನೇಮಿಯು ಗರುಡನೊಂದಿಗೆ ಯುದ್ಧ ಪ್ರಾರಂಭಿಸಿದನು. ಮಹಾಸುರನು ತನ್ನ ಬಾಹುಗಳಿಂದ ಮಹಾಗದೆಯೊಂದನ್ನೆತ್ತಿ

ಸರ್ವಶಕ್ತಿಯನ್ನೂ ಕೇಂದ್ರೀಕರಿಸಿ ಅತಿಭಯಂಕರ ಗದೆಯನ್ನು ಗರುಡನ ಮೇಲೆ ಎಸೆದನು. ವಿಷ್ಣುವನ್ನೆ ವಿಸ್ಮಯಗೊಳಿಸಿದನು. ಗದೆಯು ಗರುಡನ ಮೇಲೆ ಬಿದ್ದು ಗರುಡನ ದೇಹವೆಲ್ಲ ಜರ್ಝರಿತವಾಯಿತು.

ಗರುಡನ ಮೇಲೆ ಮಾಡಿದ ಗದಾ ಪ್ರಹಾರ ಹಾಗೂ ತನ್ನ ಮೇಲೆ ಮಾಡಿದ ಪ್ರಹಾರದಿಂದಲೂ ಅತ್ಯಂತ ಕ್ರುದ್ಧನಾದ ಶ್ರೀವಿಷ್ಣುವು. ರಕ್ತನೇತ್ರನಾಗಿ ಸುದರ್ಶನವನ್ನು ಕೈಯಲ್ಲಿ ಹಿಡಿದನು. ಭಗವಂತನು ದಿಕ್ಕುವಿದಿಕ್ಕುಗಳು, ಆಕಾಶ-ಭೂಮಿಗಳಲ್ಲಿ ಕ್ರಮಿಸುತ್ತಾ ವೃದ್ಧಿಯಾಗತೊಡಗಿದನು.

ಮಹಾವಿಷ್ಣುವು ಮೂರುಲೋಕಗಳನ್ನೂ ಆಕ್ರಮಿಸುವ ತ್ರಿವಿಕ್ರಮನಂತೆ ತನ್ನ ಶರೀರವನ್ನು ದಿಕ್ಕು-ಉಪದಿಕ್ಕುಗಳಲ್ಲಿ ಭೂಮ್ಯಾಕಾಶಗಳಲ್ಲಿಯೂ ತುಂಬಿದನು. ದೇವತೆಗಳಿಗೆ ಅಭಯ ನೀಡಲು ಹೀಗೆ ವೃದ್ಧಿಯಾಗುತ್ತಿರುವ ಶ್ರೀಹರಿಯನ್ನು ನೋಡಿ ಋಷಿಗಳು ಗಂಧರ್ವರೊಂದಿಗೆ ವಿವಿಧ ಸ್ತುತಿಗೈಯ್ದರು.

**ಸ ದ್ಯಾಂಪಿ ಕಿರೀಟೇನ ಲಿಖನ್ ಸಾಭ್ರಮಂಬರಮುಂಬರೈ ।**
**ಪದ್ಭ್ಯಾಮಾಕ್ರಮ್ಯ ವಸುಧಾಂ ದಿಶಃ ಪ್ರಚ್ಛಾದ್ಯ ಬಾಹುಭಿಃ ॥ 28 ॥**
**ಸೂರ್ಯಸ್ಯ ರಶ್ಮಿತುಲ್ಯಾಭಂ ಸಹಸ್ರಾರಮರಿಕ್ಷಯಮ್ ।**
**ದೀಪ್ತಾಗ್ನಿ ಸದೃಶಂ ಘೋರಂ ದರ್ಶನೀಯಂ ಸುದರ್ಶನಮ್ ॥ 29 ॥**

ಈ ಸಮಯದಲ್ಲಿ ವಿಷ್ಣುವು ತನ್ನ ಕಿರೀಟದಿಂದ ಸ್ವರ್ಗಲೋಕದ ಸೀಮಾರೇಖೆಯನ್ನೆಳೆಯುತ್ತಿರುವನೋ ಎಂಬಂತೆ ತೋರುತ್ತಿತ್ತು. ತನ್ನ ವಸ್ತ್ರಗಳಿಂದ ಮೇಘಗಳಂತೆ ಪರ್ವತಗಳನ್ನು ಮುಚ್ಚುತ್ತಿರುವನೋ ಎಂಬಂತೆಯೂ. ನಾಲ್ಕು ತೋಳುಗಳಿಂದ ನಾಲ್ಕು ದಿಕ್ಕುಗಳನ್ನೂ ಆಕ್ರಮಿಸಿ. ಭೂಮಿಯನ್ನು ಆಕ್ರಮಿಸಿದ್ದನು.

### ಸುದರ್ಶನ ಚಕ್ರ ಸ್ವರೂಪ

ಕೋಟಿ ಸೂರ್ಯ ಸಮಪ್ರಭವಾದ. ಶತ್ರುನಾಶನದಲ್ಲಿ ಅದ್ವಿತೀಯ ಕರ್ಮ ಮಾಡುವ ಚಕ್ರವನ್ನು ಧರಿಸಿ ಗದಾಧರನು ನಿಂತಿದ್ದನು. ಸುದರ್ಶನ ಚಕ್ರಕ್ಕೆ ಸಾವಿರಾರು ತೀಕ್ಷ್ಣವಾದ ಅರಗಳಿದ್ದವು. ಪ್ರದೀಪ್ತವಾದ ಅಗ್ನಿಗೆ ಸದೃಶವಾಗಿದ್ದಿತು. ವಜ್ರಖಚಿತವಾದ ನಾಭಿಯಿದ್ದು ಅದರ ತುದಿ ಸುವರ್ಣಮಯವಾಗಿದ್ದಿತು. ದಾನವನರನ್ನು ಕೊಂದು ಅವರ ಮೇದಸ್ಸು. ಮಜ್ಜೆ. ಎಲುಬು. ರಕ್ತಗಳಿಂದ ಅಲಂಕೃತವಾಗಿ ಅದ್ವಿತೀಯ ಆಯುಧವಾಗಿತ್ತು.

ಅಲುಗಿನವರೆಗೂ ವ್ಯಾಪಿಸಿದ್ದ ಚಕ್ರವು ಪುಷ್ಪಾದಿರತ್ನಾಲಕಕಾರಗಳಿಂದ ಶೋಭಿಸುತ್ತಿತ್ತು.

ದುರ್ಗೆಯಿಂದ ಅಭಿಮನ್ಯವಾದ ಈ ಚಕ್ರವನ್ನೂ ಸಾಕ್ಷಾತ್ ನಾರಾಯಣನೇ ನಿರ್ಮಿಸಿದ್ದ. ಸರ್ವಶತ್ರ ಭಯಂಕರವಾದ ಹಾಗೂ ದಾನವರು ಮಾಡಿದ ಅತ್ಯಾಚಾರದಿಂದ ಉಂಟಾದ ಮಹರ್ಷಿಗಳ ಕೋಪ ನಿರ್ಮಿತವೋ ಎಂಬಂತೆ ಶತ್ರುಗಳ ತಲೆ ತೆಗೆಯಲು ಹವಣಿಸುತ್ತಿತ್ತು. ಇಂತಹ ಚಕ್ರವನ್ನು ದೈತ್ಯರ ಮೇಲೆ ಪ್ರಯೋಗ ಮಾಡಿದ ಕೂಡಲೇ ಸ್ಥಾವರ ಜಂಗಮಾತ್ಮಕ ಪ್ರಪಂಚವೆಲ್ಲ ಮೋಹಜಾಲದಲ್ಲಿ ಬೀಳುತ್ತಿದ್ದವು. ಚಕ್ರ ಪ್ರಯೋಗ ಮಾಡಿದ ಕೂಡಲೇ ಅದರಿಂದ ಕೊಲ್ಲಲ್ಪಟ್ಟ ದೈತ್ಯರ ಮಾಂಸಗಳನ್ನು ಮಾಂಸಭಕ್ಷಕ ಪ್ರಾಣಿಗಳು ತಿಂದು ತೇಗುತ್ತಿದ್ದವು. ಇಂತಹ ಯುಗಾಂತಾನಲ ತಿಗ್ಮನೇಮಿಯಿಂದ ತಿರುಗುವ ಸುದರ್ಶನವನ್ನು ಹಿಡಿದು ನಿಂತಿರುವ ಮಾಧವನು ಯುದ್ಧಭೂಮಿಯಲ್ಲಿ ತನ್ನ ದಿವ್ಯ ತೇಜಸ್ಸಿನಿಂದ ಕಾಲನೇಮಿಯ ತೇಜಸ್ಸನ್ನು ಅಪಹರಿಸುತ್ತಿದ್ದ ಮಹಾಚಕ್ರವನ್ನು ಕಾಲನೇಮಿಯ ಮೇಲೆ ಪ್ರಯೋಗಿಸಿ, ಅಸುರನ ಸಾವಿರ ತೋಳುಗಳನ್ನು ಕತ್ತರಿಸಿ ಹಾಕಿದನು.

## ಕಾಲನೇಮಿಯ ಶಿರೋಪಹಾರ

**ಚಿಚ್ಛೇದ ಬಾಹುಂ ಚಕ್ರೇಣ ಶ್ರೀಧರಂ ಕಾಲನೇಮಿನಃ ।**
**ತಚ್ಚ ವಕ್ತ್ರಶತಂ ಘೋರಂ ಸಾಗ್ನಿ ಚೂರ್ಣಾಟ್ಟಹಾಸಿನಮ್ ॥ 30 ॥**
**ತಸ್ಯ ದೈತ್ಯಸ್ಯ ಚಕ್ರೇಣ ಪ್ರಮಮಾಥ ಬಲಾದ್ ಹರಿಃ ॥ 31 ॥**
**ಸ ಛಿನ್ನಬಾಹುಃ ವಿಶಿರಾ ನ ಪ್ರಾಕಂಪತ ದಾನವಃ ।**
**ಕಬಂಧೋಽವಸ್ಥಿತಃ ಸಂಖ್ಯೇ ವಿಶಾಖ ಇವ ಪಾದಪಃ ॥ 32 ॥**

ಶ್ರೀಧರನು ಕಾಲನೇಮಿಯ ತೋಳುಗಳನ್ನೆಲ್ಲ ಕತ್ತರಿಸಿ ಹಾಕಿದ ನಂತರ ಅಟ್ಟಹಾಸ ಮಾಡುತ್ತಾ ನಗುತ್ತಿರುವಾಗ ಅಗ್ನಿಯ ಕಣಗಳು ಹೊರಬರುತ್ತಿರುವಂತೆ ಕಾಣುತ್ತಿರುವ ಅವನ ಸಾವಿರ ತಲೆಗಳನ್ನೂ ಚಕ್ರದಿಂದ ಬಲಾತ್ಕಾರವಾಗಿ ಕತ್ತರಿಸಿ ಉರುಳಿಸಿದನು. ಈಗ ರುಂಡಮುಂಡಗಳು ಬೇರ್ಪಟ್ಟು ಕೊಂಬೆಗಳನ್ನೆಲ್ಲ ಕಳೆದುಕೊಂಡು ಬೋಳಾದ ವೃಕ್ಷದಂತೆ ರಣರಂಗದಲ್ಲಿ ನಿಂತೇ ಇದ್ದಿತು. ಇದೇ ಸಮಯದಲ್ಲಿ ತನಗೆ ಪ್ರಹರಿಸಿದ ಕೋಪದಿಂದ ಕೂಡಿದ ಗರುಡನು ತನ್ನ ರೆಕ್ಕೆಗಳನ್ನು ಹರಡಿ, ವಾಯುವಿನಂತೆ

ವೇಗವಾಗಿ ಬಡಿಯುತ್ತಾ ಕಾಲನೇಮಿಯ ವಕ್ಷಃಸ್ಥಳಕ್ಕೆ ಬಲವಾಗಿ ಹೊಡೆದು ಕೆಳಗೆ ಉರುಳಿಸಿದನು. ಈ ರೀತಿ ಆ ಕಬಂಧ ಭೂಮಿಗುರುಳುವಾಗ ಭೂಮಿಯನ್ನೆ ಕಂಪನಗೊಳಿಸಿತು. ಕಾಲನೇಮಿಯು ಸತ್ತಾಗ ಶ್ರೀಹರಿಯ ಈ ಮಹಾಕಾರ್ಯವನ್ನು ಋಷಿ ಪ್ರಮುಖರು ಸಾಧುಸಾಧು ಎಂದು ಪ್ರಶಂಸಿದರು. ಇತರ ದುಷ್ಟದೈತ್ಯರಾದರೂ ವಿಷ್ಣುವಿನ ಬಾಹುಗಳಿಂದ ಬಂಧಿಸಲ್ಪಟ್ಟವರಾಗಿ ಯುದ್ಧದಲ್ಲಿ ಚಲಿಸಲೂ ಅಸಮರ್ಥರಾದರು.[2]

ಶ್ರೀಹರಿಯು ಕೆಲವು ದೈತ್ಯರ ತಲೆಗೂದಲುಗಳನ್ನು ಹಿಡಿದು ನೆಲಕ್ಕೆ ಅಪ್ಪಳಿಸಿದನು. ಮತ್ತೆ ಕೆಲವರ ಕುತ್ತಿಗೆಗಳನ್ನು ಹಿಸುಕಿಕೊಂದು ಹಾಕಿದನು. ಕೆಲವರಿಗೆ ಮುಖಕ್ಕೆ ಬಲವಾಗಿ ಗುದ್ದಿಯೂ, ಕೆಲವರನ್ನೂ ಸೊಂಟದಲ್ಲಿ ಹಿಡಿದು ಮೇಲೆತ್ತಿ ರಭಸದಿಂದ ನೆಲಕ್ಕೆ ಬಡಿದನು. ಹೀಗೆ ವಿಷ್ಣುವಿನಿಂದ ಭುಜಗಳು, ಗದೆ, ಚಕ್ರಗಳಿಂದ ಪ್ರಾಣವನ್ನು ಕಳೆದುಕೊಂಡರು.

## ಇಂದ್ರಕಾರ್ಯ ಪೂರೈಸಿದ ಉಪೇಂದ್ರ

**ತೇಷು ಸರ್ವೇಷು ದೈತ್ಯೇಷು ಹತೇಷು ಪುರುಷೋತ್ತಮಃ ।**
**ತಸ್ಥೌ ಶಕ್ರಪ್ರಿಯಂ ಕೃತ್ವಾ ಕೃತಕರ್ಮಾ ಗದಾಧರಃ ॥ 33 ॥**
**ತಸ್ಮಿನ್ ವಿಮರ್ದೇ ನಿರ್ವೃತ್ತೇ ಸಂಗ್ರಾಮೇ ತಾರಕಾಮಯೇ ।**
**ತಂ ದೇಶ ಮಾಜಗಾಮಾಶು ಬ್ರಹ್ಮಾಲೋಕಪಿತಾಮಹಃ ॥ 34 ॥**
**ದೇವದೇವೋ ಹರಿಂ ದೇವಂ ಪೂಜಯನ್ ವಾಕ್ಯಮಬ್ರವೀತ್ ॥ 35 ॥**

ಹೀಗೆ ಕಾಲನೇಮಿಯ ಸಂಹಾರಾನಂತರ ಪುರುಷೋತ್ತಮನಾದ ಗದಾಪಾಣಿಯು ಇಂದ್ರನ ಕಾರ್ಯವನ್ನು ನೆರವೇರಿಸಿ ಶಕ್ರನಿಗೆ ಸಂತೋಷಪಡಿಸಿದನು.

ಹೀಗೆ ತಾರಕಾಮಯ ಸಂಗ್ರಾಮ ಕೊನೆಯಾದ ಮೇಲೆ ಸತ್ಯಲೋಕಾಧಿಪತಿ ಬ್ರಹ್ಮದೇವನು ಬ್ರಹ್ಮರ್ಷಿ ಮಹರ್ಷಿಗಳಿಂದ ಕೂಡಿಕೊಂಡು,

---

2. ಕಾಲನೇಮಿ ವಧ –
ತಮಸ್ತ್ರ ಶಸ್ತ್ರಾಣಿ ಬಹೂನಿಬಾಹುಭಿಃ ಪ್ರವರ್ಷಮಾಣಂ ಭುವನಾಸ್ತದೇಹಂ ।
ಚಕ್ರೇಣ ಬಾಹೂನ್ ವಿನಿಕೃತ್ಯಕಾನಿ ಚ ನ್ಯವೇದಯಶ್ಚಾಶು ಯಮಾಯ ಪಾಪಂ॥
*– ತಾ.ನಿ. 11/194*

ಅನೇಕಾಪ್ಸರಾಸ್ತ್ರೀಯರೊಂದಿಗೆ ವಿಷ್ಣುವಿನ ಬಳಿ ಬಂದು ಯಥಾವತ್ತಾಗಿ ಸತ್ಕರಿಸಿ ಹೀಗೆ ಹೇಳಿದನು.

*ಬ್ರಹ್ಮೋವಾಚ –*

**ಕೃತಂ ದೇವ ಮಹತ್ಕಾರ್ಯಂ ಸುರಾಣಾಂ ಶಲ್ಯಮುದ್ಧೃತಮ್ ।**
**ವಧೇನಾನೇನ ದೈತ್ಯಾನಾಂ ವಯಂ ಹಿ ಪರಿತೋಷಿತಾಃ ॥ 36 ॥**

**ಯೋಽಯಂ ಹೃತಸ್ತ್ವಯಾ ವಿಷ್ಣೋ ಕಾಲನೇಮೀ ಮಹಾಸುರಃ ।**
**ತ್ವಮೇಕೋಽಸ್ಯ ಮೃಧೇ ಹಂತಾ ನಾನ್ಯಃ ಕಶ್ಚನ ವಿದ್ಯತೇ ॥ 37 ॥**

**ಏಷ ದೇವಾನ್ ಪರಿಭವನ್ ಲೋಕಾಂಶ್ಚ ಸಚರಾಚರಾನ್ ।**
**ಋಷೀಣಾಂ ಕದನಂ ಕೃತ್ವಾ ಮಾಮಪಿ ಪ್ರತಿಗರ್ಜತಿ ॥ 38 ॥**

**ಯದಯಂ ಕಾಲತುಲ್ಯಾಭಃ ಕಾಲನೇಮೀ ನಿಪಾತಿತಃ ।**
**ತದಾಗಚ್ಛಸ್ವ ಭದ್ರಂ ತೇ ಗಚ್ಛಾಮ ದಿವಮುತ್ತಮಮ್ ॥ 39 ॥**

**ಬ್ರಹ್ಮರ್ಷಯ ಸ್ತ್ವಾಂ ತತ್ರಸ್ಥಾಃ ಪ್ರತೀಕ್ಷಂತೇ ಸದೋಗತಾಃ ॥ 40 ॥**

ಬ್ರಹ್ಮದೇವರು ಹೇಳುವರು – ದೇವದೇವನೇ! ನೀನು ದೇವತೆಗಳ ಮಹಾಕಾರ್ಯವೊಂದನ್ನು ಸಾಧಿಸಿರುವೆ. ದೇವತೆಗಳಿಗೆ ಕಂಟಕಪ್ರಾಯರಾದ ದೈತ್ಯರನ್ನು ಸಂಹರಿಸಿರುವೆ. ಈ ದೈತ್ಯ ಸಂಹಾರ ನಮಗೆಲ್ಲ ಸಂತೋಷ ತಂದಿದೆ. ನಿನ್ನಿಂದ ಸಂಹರಿಸಲ್ಪಟ್ಟ ಈ ಮಹಾಸುರ ಕಾಲನೇಮಿಯನ್ನು ಕೊಲ್ಲಲು ನೀನು ಅಥವಾ ಕಶ್ಚನ ನೆನಸಿದ ವಾಯುದೇವನಿಂದಾಗಲಿ ಹೊರತು ಮತ್ತೊಬ್ಬರಿಂದ ಅಸಾಧ್ಯನಾಗಿದ್ದು. ಅವನನ್ನು ನೀನು ಕೊಂದು ಹಾಕಿರುವೆ. ಇವನಾದರೂ ಸಮಸ್ತ ದೇವತಾವೃಂದವನ್ನು, ಸಕಲ ಸ್ಥಾವರಜಂಗಮಾತ್ಮಕ ಪ್ರಾಣಿಗಳನ್ನೂ ತೃಣದಂತೆ ತಿರಸ್ಕರಿಸಿದ್ದ. ಜ್ಞಾನಬಲದಿಂದ ಕೂಡಿ ಸತ್ವಸಂಪನ್ನರಾದ ಋಷಿಗಳನ್ನೆ ಬೆದರಿಸುತ್ತಿದ್ದನ್ನಲ್ಲದೆ ಅವಧ್ಯತ್ವ ನೀಡಿದ್ದ ನನ್ನ ಮೇಲೂ ಬೆದರಿಕೆ ಹಾಕುತ್ತಿದ್ದ. ಇಂತಹ ಮೃತ್ಯುಪ್ರಾಯನಾದ ಕಾಲನೇಮಿಯು ನಿನ್ನಿಂದ ಯಮಸದನಕ್ಕೆ ಅತಿಥಿಯಾದ. ಸ್ವಾಮಿಯೇ! ನಿನಗೆ ಮಂಗಳವಾಗಲೀ. ನಾವಿನ್ನೂ ನಮ್ಮ ಲೋಕಕ್ಕೆ ಹೋಗೋಣ. ನನ್ನೊಂದಿಗೆ ಬಂದುಬಿಡು. ಅಲ್ಲಿ ದಿವ್ಯ ಸಭೆಯಲ್ಲಿ ಸನ್ನಿಹಿತರಾಗಿರುವ ವಸಿಷ್ಠಾದಿ ಬ್ರಹ್ಮರ್ಷಿಗಳೆಲ್ಲ ನಿನ್ನನ್ನು ನೋಡಿ ಕೃತಜ್ಞತೆ ಸಲ್ಲಿಸಲು ನಿನ್ನ

ಬರುವಿಕೆಯನ್ನೇ ಎದುರು ನೋಡುತ್ತಿರುವರು. ಅಲ್ಲಿ ನಿನಗೆ ವಿಶೇಷ ಗೌರವ ಮಾಡಲಿದ್ದೇವೆ. ದಿವ್ಯವಾದ ವೇದವಾಣಿಗಳಿಂದ ನಿನ್ನನ್ನು ನಾವು ಸ್ತೋತ್ರ ಮಾಡುವೆವು.

**ಕಿಂ ಚಾಹಂ ತವ ದಾಸ್ಯಾಮಿ ವರಂ ವರಭೃತಾಂ ವರ ।**
**ಸುರೇಷ್ವಪಿ ಸದೈತ್ಯೇಷು ವರಾಣಾಂ ವರದೋ ಭವಾನ್ ॥ 41 ॥**
**ನಿರ್ಯಾತಯೈತಾನ್ ತ್ರೈಲೋಕ್ಯಂ ಸ್ಫೀತಂ ನಿಹತ ಕಂಟಕಮ್ ।**
**ಅಸ್ಮಿನ್ನೇವ ಮೃಧೇ ವಿಷ್ಣೋ ಶಕ್ರಾಯ ಸಮಹಾತ್ಮನೇ ॥ 42 ॥**

ನೀನು ಮಾಡಿದ ಉಪಕಾರ ಸಾಧಾರಣವಾದದ್ದಲ್ಲ. ನಿನ್ನ ಈ ಉಪಕಾರಕ್ಕೆ ನಾನೇನು ಕೊಡಲು ಸಮರ್ಥ ? ಕೃತಕೃತ್ಯನಾದ ನಿನಗೆ ನಾವು ಕೊಡುವುದೇನಿದೆ? ಇಂದ್ರಾದಿ ದೇವತೆಗಳು ಪ್ರಹ್ಲಾದ ವಿಭೀಷಣ ಮೊದಲಾದ ದೈತ್ಯರಿಗೂ ವರವನ್ನು ದಯಪಾಲಿಸುವವನು. ನಿನಗೆ ನಾವೇನು ನೀಡಲಾರೆವು. ಭಕ್ತ್ಯಾದರಪೂರ್ವಕ ನಮೋವಾಕವನ್ನರ್ಪಿಸುವೆವು.

ಶ್ರೀವಿಷ್ಣುವೆ! ಈ ಯುದ್ಧರಂಗದಲ್ಲಿಯೇ ಮಹಾನುಭಾವನಾದ ಇಂದ್ರನಿಗೆ ಕಂಟಕರಹಿತವೂ, ಸಮೃದ್ಧವೂ ಆಗಿರುವ ಈ ತ್ರೈಲೋಕ್ಯಾಧಿಪತ್ಯವನ್ನು ವಹಿಸಿಕೊಡು ಎಂದನು.

*ವಿಷ್ಣುರುವಾಚ –*

**ಶ್ರೂಯತಾಂ ತ್ರಿದಶಾಃ ಸರ್ವೇ ಯಾಮತೋಽತ್ರ ಸಮಾಗತಾಃ ।**
**ಶ್ರವಣಾವಹಿತೈಃ ದೇಹೈಃ ಪುರಸ್ಕೃತ್ಯ ಪುರಂದರಮ್ ॥ 43 ॥**
**ಅಸ್ಮಿನ್ನಃ ಸಮರೇ ಸರ್ವೇ ಕಾಲನೇಮಿ ಮುಖಾ ಹತಾಃ ।**
**ದಾನವಾಃ ವಿಕ್ರಮೋಪೇತಾಃ ಶಕ್ರಾದಪಿ ಮಹತ್ತರಾಃ ॥ 44 ।**
**ತಸ್ಮಿನ್ ಮಹತಿ ಸಂಕ್ರಂದೇ ದ್ವಾವೇವ ತು ವಿನಿಸ್ಸೃತೌ ।**
**ವೈರೋಚನಶ್ಚ ದೈತ್ಯೇಂದ್ರಃ ಸ್ವರ್ಭಾನುಶ್ಚ ಮಹಾಗ್ರಹಃ ॥ 45 ॥**

ಭಗವಂತನು ಬ್ರಹ್ಮದೇವನ ಪ್ರಾರ್ಥನೆಯನ್ನು ಆಲಿಸಿ, ದಿವ್ಯವಾಣಿಯಿಂದ ಹೀಗೆಂದನು. ದೇವತೆಗಳೇ! ನೀವೆಲ್ಲರೂ ಇಂದ್ರನನ್ನು ಮುಂದಿಟ್ಟುಕೊಂಡು ಶರೀರೇಂದ್ರಿಯಗಳನ್ನು ಸಜ್ಜುಗೊಳಿಸಿ ಸಂದೇಶ ಕೇಳಲು ಇಲ್ಲಿಗೆ ಬನ್ನಿರಿ.

ಈ ಯುದ್ಧದಲ್ಲಿ ಇಂದ್ರದೇವನಿಗಿಂತಲೂ ವರದಿಂದ ಅಜೇಯರಾದ ಕಾಲನ್ನು ನಿಯಮನ ಮಾಡುವ ಕಾಲನೇಮಿ ಮೊದಲಾದ ದೈತ್ಯರು ಮೃತರಾಗಿರುವರು. ಸಾಯದೆ ಉಳಿದವರು ಇಬ್ಬರು ಮಾತ್ರ. ವಿರೋಚನನ ಪುತ್ರ ಬಲಿ ಹಾಗೂ ಸ್ವರ್ಭಾನು. ಇಂದ್ರ-ವರುಣ-ಯಮ-ಕುಬೇರಾದಿಗಳು ನಿಮ್ಮ ನಿಮ್ಮ ದಿಕ್ಪಾಲಕತ್ವವನ್ನು ಪುನಃ ಹೊಂದಿರಿ. ಯಮನು ದಕ್ಷಿಣ ದಿಕ್ಕನ್ನು, ಕುಬೇರ ಉತ್ತರ ದಿಕ್ಕನ್ನು ಪಾಲಿಸಲಿ. ಚಂದ್ರನು ಕಾಲಕಾಲಕ್ಕೆ ನಕ್ಷತ್ರಗಳೊಂದಿಗೆ ಸಂಚರಿಸುತ್ತಿರಲಿ. ಸೂರ್ಯನು ಅಯನಗಳಿಂದ ಕೂಡಿರುವ ಋತುಗಳೇ ಪ್ರಧಾನವಾದ ಸಂವತ್ಸರವನ್ನು ಆಶ್ರಯಿಸಲಿ. ಯಜ್ಞಯಾಗಗಳಲ್ಲಿ ಸದಸ್ಯರಿಂದ ನೀಡಲ್ಪಟ್ಟ ಹವಿರ್ಭಾಗಗಳು ಹಿಂದಿನಂತೆಯೇ ಆಯಾಯ ದೇವತೆಗಳಲ್ಲಿ ಬಂದು ಸೇರಲಿ. ಬ್ರಾಹ್ಮಣರು ವೇದೋಕ್ತ ಮಂತ್ರಗಳಿಂದ ಸಂಸ್ಕೃತಾಗ್ನಿಯಲ್ಲಿ ಹೋಮ ಮಾಡಲಿ. ಹವಿಸ್ಸಿನಿಂದ ದೇವತೆಗಳು ಪ್ರೀತರಾಗಿ ಇಷ್ಟಾರ್ಥ ನೀಡುವಂತಾಗಲಿ. ವೇದಾಧ್ಯಯನಿಂದ ಋಷಿ ಋಣವೂ, ಶ್ರಾದ್ಧಕರ್ಮದಿಂದ ಪಿತೃ ಋಣವು ತೀರುವಂತಾಗಲಿ, ಪ್ರವಹವಾಯುವು ತನ್ನ ಮಾರ್ಗದಲ್ಲಿ ಹಿಂದಿನಂತೆಯೇ ಸಂಚರಿಸಲಿ. ಅಗ್ನಿಯು ಪೂರ್ವಾಂಗ, ಉತ್ತರಾಂಗ ಪ್ರಾಯಶ್ಚಿತ್ತಗಳಿಂದ ಮೊದಲಿನಂತೆಯೇ ಜ್ವಲಿಸಲಿ. ತ್ರಿವರ್ಣದವರೂ ಸ್ವವಹಿತವಾದ ಕರ್ಮಗಳನ್ನು ಭಕ್ತಿಯಿಂದ ಭಗವದಾರಾಧನೆಯೆಂದು ಮಾಡುವಂತಾಗಲೀ, ಯಾಜ್ಞಿಕ ಬ್ರಾಹ್ಮಣರು ಯಜ್ಞಗಳು ನಿರಂತರ ನಡೆಯಲಿ. ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆ ನೀಡಲಿ.

**ಗಾಶ್ಚ ಸೂರ್ಯೋ ರಸಾನ್ ಸೋಮೋ ವಾಯುಃ ಪ್ರಾಣಾಂಶ್ಚ ಪ್ರಾಣಿಷು ।**
**ತರ್ಪಯಂತಃ ಪ್ರವರ್ತಂತಾಂ ಶಿವೈಃ ಸೌಮ್ಯೈಶ್ಚ ಕರ್ಮಭಿಃ ॥ 46 ॥**

**ದೈತೇಭ್ಯಸ್ತ್ಯಜ್ಯತಾಂ ಭೀಶ್ಚ ಶಾಂತಿಂ ವ್ರಜತ ದೇವತಾಃ ।**
**ಸ್ವಸ್ತಿ ವೋಽಸ್ತು ಗಮಿಷ್ಯಾಮಿ ಬ್ರಹ್ಮಲೋಕಂ ಸನಾತನಮ್ ॥ 47 ॥**

ಸೂರ್ಯನು ಭೂಮಿ, ಗೋವು ಶರೀರೇಂದ್ರಿಯಗಳನ್ನು, ಚಂದ್ರನು ರಸಗಳನ್ನೂ, ವಾಯುವು ಪ್ರಾಣಿಗಳ ಪಂಚಪ್ರಾಣಗಳನ್ನೂ ಪುಷ್ಟಿಗೊಳಿಸುತ್ತಾ ಕಲ್ಯಾಣಕರವಾದ ಸೌಮ್ಯ ಕರ್ಮಗಳಿಂದ ಲೋಕಹಿತವನ್ನು ಮಾಡುವಂತಾಗಲಿ. ಇಂದ್ರದೇವನು ಪರ್ವತಗಳ ಮೇಲೆ ಸುರಿಸುವ ಮಳೆಗಳಿಂದ ಜನಿಸುವ, ತ್ರಿಲೋಕಕ್ಕೂ ಮಾತೃವಿನಂತೆ ರಕ್ಷಣೆ ಮಾಡುವ ನದಿಗಳು ಭೂಮಂಡಲದ ವಿವಿಧ ದಿಕ್ಕುಗಳಲ್ಲಿ ಹರಿದು ಸಾಗರವನ್ನು ಸೇರಲಿ.

## ದೇವತೆಗಳಿಗೆ ಶ್ರೀಹರಿಯ ಅಭಯರಕ್ಷೆ

ದೇವತೆಗಳೇ, ಇನ್ನೂ ಮುಂದೆ ನೀವು ಯಾರಿಂದಲೂ ಭಯಪಡಬೇಕಿಲ್ಲ. ಶಾಂತರಾಗಿರಿ. ನಿಮಗೆಲ್ಲ ಮಂಗಳವಾಗಲಿ, ನಾನಿನ್ನು ನನ್ನ ಲೋಕಕ್ಕೆ ಹೋಗಿ ಸೇರುತ್ತೇನೆ ಎಂದನು.

ನಿಮ್ಮ ಗೃಹಗಳಲ್ಲಾಗಲೀ, ಯಾವುದೇ ಲೋಕಗಳಲ್ಲಾಗಲೀ, ವಿಶೇಷವಾಗಿ ಯುದ್ಧದಲ್ಲಾಗಲೀ ದೈತ್ಯರ ವಿಷಯದಲ್ಲಾಗಲೀ ಅವರನ್ನು ನಂಬಬೇಡಿ. ಅವರು ಕುಹಕ ಸ್ವಭಾವದವರು ಹಾಗೂ ಮುಂಗೋಪಿಗಳು. ಇವರು ಸಮಯಸಾಧಕರಾಗಿದ್ದು ಮೋಸ ಮಾಡಿ ನಿಮ್ಮನ್ನು ಪ್ರಹರಿಸುತ್ತಾರೆ. ಅವರಿಗೆ ಸ್ಥಿರವಾದ ಧರ್ಮವೆಂಬುದಿಲ್ಲ. ಋಜುಸ್ವಭಾವದವರೂ, ಸೌಮ್ಯ ಗುಣಗಳುಳ್ಳ ನಿಮ್ಮಂತೆ ಸರಳ ಬುದ್ಧಿವುಳ್ಳವರಲ್ಲ.

**ಅಹಂ ತು ದುಷ್ಟಭಾವಾನಾಂ ಯುಷ್ಮಾಸು ಸುದುರಾತ್ಮನಾಮ್ ।**
**ಅಸಮ್ಯಗ್ ವರ್ತಮಾನಾನಾಂ ಮೋಹಂ ದಾಸ್ಯಾಮಿ ದೇವತಾಃ ॥ 48 ॥**

**ಯದಾ ಚ ಸುದುರಾಧರ್ಷಂ ದಾನವೇಭ್ಯೋ ಭಯಂ ಭವೇತ್ ।**
**ತದಾ ಸಮುಪಗಮ್ಯಾಶು ವಿಧಾಸ್ಯೇ ವಸ್ತತೋಽಭಯಮ್ ॥ 49 ॥**

ಯಾವಾಗ ನಿಮಗೆ ದೈತ್ಯರಿಂದ ಸಹಿಸಲಸಾಧ್ಯವಾದ ಭಯ-ವೇರ್ಪಡುವುದೋ ಆಗ ನಾನು ಕೂಡಲೇ ಬಂದು ನಿಮಗೆ ಅಭಯವನ್ನು ನೀಡಿ, ನಿಮಗೆ ಅವರಿಂದ ಭಯವಿಲ್ಲದಂತೆ ಮಾಡುತ್ತೇನೆ.

ವೈಶಂಪಾಯನರು ಹೇಳುವರು - ರಾಜನೇ! ಸತ್ಯಕ್ಕಾಗಿ ಪರಾಕ್ರಮ ತೋರುವವನೂ ಮಹಾಕೀರ್ತಿವಂತನೂ ಆದ ಶ್ರೀಮನ್ನಾರಾಯಣನು ಹೀಗೆ ದೇವತೆಗಳಿಗೆ ಅಭಯ ನೀಡಿ ತನ್ನ ಲೋಕಕ್ಕೆ ತೆರಳಿದನು. ನೀನು ಕೇಳಿದ ಪ್ರಶ್ನೆಗೆ ಉತ್ತರವಿದು. ತಾರಕಾಮಯ ಸಂಗ್ರಾಮದಲ್ಲಿ ಆಶ್ಚರ್ಯರತ್ನನು ಅತ್ಯಾಶ್ಚರ್ಯ ಘಟನೆ ಮಾಡಿ ತೋರಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಾಲನೇಮಿ ವಧವೆಂಬಲ್ಲಿ
ನಲವತ್ತೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಹರಿಪರ್ವ 49 ಹರಿಪರ್ವ

# ಅಥ ಏಕೋನ ಪಂಚಾಶತ್ತಮೋಽಧ್ಯಾಯಃ

## ಬ್ರಹ್ಮಲೋಕದಲ್ಲಿ ವಿಷ್ಣುವಿಗೆ ಸತ್ಕಾರ

*ಜನಮೇಜಯ ಉವಾಚ –*

ಬ್ರಹ್ಮಣಾ ದೇವದೇವೇನ ಸಾರ್ಧಂ ಸಲಿಲಯೋನಿನಾ ।
ಬ್ರಹ್ಮಲೋಕಗತೋ ಬ್ರಹ್ಮನ್ ವೈಕುಂಠಃ ಕಿಂ ಚಕಾರ ಹ ॥ 1 ॥

ವೈಶಂಪಾಯನರೇ, ದೇವಾದಿದೇವನೂ ಕಮಲಯೋನಿಯಾದ ಬ್ರಹ್ಮನೊಂದಿಗೆ ಬ್ರಹ್ಮಲೋಕಕ್ಕೆ ಹೋಗಿ ಏನು ಮಾಡಿದ? ದೈತ್ಯರ ಸಂಹಾರ ಕಾರ್ಯವಾದ ಮೇಲೆ, ದೇವತೆಗಳೆಲ್ಲರೂ ವಿಷ್ಣುವನ್ನು ಸತ್ಕಾರ ಮಾಡಿದರು. ಪುನಃ ಬ್ರಹ್ಮದೇವನು ತನ್ನ ಲೋಕಕ್ಕೆ ಕರೆದೊಯ್ದನು.

ಬ್ರಹ್ಮಲೋಕದಲ್ಲಿ ವಿಷ್ಣುವಿಗೆ ಯಾವ ಸ್ಥಾನವಿದೆ? ಅವನ ಯೋಗ ಎಂತಹುದು? ಭಗವಂತನಿಗಿರುವ ನಿಯಮಾವಳಿಗಳು ಎಂತಹವು. ಬ್ರಹ್ಮಲೋಕದಲ್ಲಿರುವಾಗ ಈ ವಿಶಾಲ ಭೂಮಂಡಲವು ಎಂತಹ ಸಂಪತ್ತನ್ನು ಹೊಂದಿರುತ್ತದೆ.

ಕಥಂ ಸ್ವಪಿತಿ ಘರ್ಮಾಂತೇ ಬುಧ್ಯತೇ ಚಾಂಬುದಪ್ಲವೇ ।
ಕಥಂ ಚ ಬ್ರಹ್ಮಲೋಕಸ್ಥೋ ಧುರಂ ವಹತಿ ಲೌಕಿಕೀಮ್ ॥ 2 ॥

ಗ್ರೀಷ್ಮ ಋತುವಿನ ಅಂತ್ಯದಲ್ಲಿ ಆಷಾಢಶುದ್ಧೈಕಾದಶಿಯಂದು ಮಹಾವಿಷ್ಣುವು ನಾಲ್ಕು ತಿಂಗಳು ಮಲಗುವನಂತೆ. ಅವನು ಮಲಗುವುದೆಂದರೇನು? ಹಾಗೂ ಕಾರ್ತಿಕ ಶುದ್ಧ ದ್ವಾದಶಿ ಉತ್ಥಾನದ್ವಾದಶಿಯಂದು ಏಳುವನಂತೆ? ಏಳುವುದೆಂದರೇನು? ಬ್ರಹ್ಮಲೋಕದಲ್ಲಿದ್ದಾಗ ಭೂಮಿಯನ್ನು ರಕ್ಷಣೆ ಮಾಡುವುದು ಹೇಗೆ? ಈ ವಿಷ್ಣುವಿನ ದಿವ್ಯಕತೆಯನ್ನು ನನಗೆ ವಿಸ್ತರಿಸಿ ಹೇಳಿರಿ' ಎಂದನು.

*ವೈಶಂಪಾಯನ ಉವಾಚ –*

**ಶ್ರುಣು ನಾರಾಯಣಸ್ಯಾದೌ ವಿಸ್ತರೇಣ ಪ್ರವೃತ್ತಮಃ ।**
**ಬ್ರಹ್ಮಲೋಕಂ ಯಥಾರೂಢೋ ಬ್ರಹ್ಮಣಾ ಸಹ ಮೋದತೇ ॥ 3 ॥**

**ಕಾಮಂ ತಸ್ಯಗತಿಃ ಸೂಕ್ಷ್ಮಾ ದೇವೈರಪಿ ದುರಾಸದಾ ।**
**ತುತ್ತು ವಕ್ಷ್ಯಾಮ್ಯಹಂ ರಾಜನ್ ತನ್ಮೇ ನಿಗದತಃ ಶ್ರುಣು ॥ 4 ॥**

ಶ್ರೀಮನ್ನಾರಾಯಣ ಕರ್ಮಗಳಾವುವು? ಹೇಗೆ ಬ್ರಹ್ಮಲೋಕದಲ್ಲಿರುತ್ತಾ ಬ್ರಹ್ಮನೊಂದಿಗೆ ಸಂತೋಷಪಡುತ್ತಾನೆ. ಈ ಎಲ್ಲವನ್ನೂ ನಿನಗೆ ಹೇಳುತ್ತೇನೆ. ಕೇಳು. ಭಗವಂತನ ಲೀಲಾ ಚರಿತ್ರೆಗಳೆಲ್ಲವೂ ಅವನ ಇಚ್ಛೆಯಂತೆ ನಡೆಯುವಂತಹವು. ಅವು ಅತ್ಯಂತ ಸೂಕ್ಷ್ಮವಾಗಿದ್ದು ದೇವತೆಗಳಿಗೆ ತಿಳಿಯಲು ಅಸಾಧ್ಯವಾಗಿರುತ್ತದೆ. ಮಾನವರ ಪಾಡೇನು?

**ಏಷ ಲೋಕಮಯೋ ದೇವೋ ಲೋಕಾಶ್ಚೈತನ್ಮಯಾಸ್ತ್ರಯಃ ।**
**ಏಷ ದೇವಮಯಶ್ಚೈವ ದೇವಾಶ್ಚೈತನ್ಮಯಾ ದಿವಿ ॥ 5 ॥**

**ತಸ್ಯ ಪಾರಂ ನ ಪಶ್ಯಂತಿ ಬಹವಃ ಪಾರಚಿಂತಕಾಃ ।**
**ಏಷ ಪಾರಂ ಪರಂ ಚೈವ ಲೋಕಾನಾಂ ವೇದ ಮಾಧವಃ ॥ 6 ॥**

ಶ್ರೀಮನ್ನಾರಾಯಣನು ಸಕಲಲೋಕಗಳಲ್ಲಿಯೂ ಪ್ರಧಾನನು ಸರ್ವಲೋಕಗಳಲ್ಲಿಯೂ ನಿಯಾಮಕನಾಗಿರುವನು. ಸಮಸ್ತಲೋಕಗಳೂ ಇವನನ್ನೆ ಆಶ್ರಯಿಸಿವೆ. ಸಮಸ್ತ ದೇವತಾ ಪ್ರಧಾನನು. ನಿರಂತರವಾಗಿ ಇವನಲ್ಲೆ ಮನಸ್ಸನ್ನಿಟ್ಟಿದ್ದರು. ಇವನನ್ನು ಸಂಪೂರ್ಣ ತಿಳಿಯಲು ಸಾಧ್ಯವಾಗುವುದಿಲ್ಲ. ಅವನ ಗುಣಗಳ ಪಾರವನ್ನು ಭೂಮಿಯ ನೀರಿನ ಮಣ್ಣಿನ ಕಣಗಳನ್ನು ಎಣಿಸಬಲ್ಲ ಬ್ರಹ್ಮದೇವನೂ ಶ್ರೀಹರಿಯ ಗುಣಗಳಪಾರವನ್ನು ನೋಡಿರುವುದಿಲ್ಲ. ಆದರೆ ಮಾಧವನಾದರೂ ಈ ಪ್ರಪಂಚದ ಪಾರವನ್ನೆಲ್ಲ ಬಲ್ಲವನಾಗಿರುವನು.

ದೇವತೆಗಳಿಗೂ ಪೂರ್ಣಗೋಚರನಾಗದ, ದೇವತೆಗಳಿಂದಲೂ ಹುಡುಕಲ್ಪಡುತ್ತಿರುವ, ಬ್ರಹ್ಮಲೋಕದಲ್ಲಿ ನಡೆದ ಶ್ರೀಹರಿಯ ಪುರಾತನ ಚರಿತ್ರೆಯು ಹೇಗೆ ನಡೆಯಿತೋ ಹಾಗೆ ಹೇಳುವೆ ಕೇಳು.

ರಾಜನೇ, ವಿಷ್ಣುವು ಬ್ರಹ್ಮದೇವನೊಂದಿಗೆ ಬ್ರಹ್ಮಲೋಕಕ್ಕೆ ಹೋಗಿ ವೇದೋಕ್ತ ರೀತಿಯಲ್ಲಿ ಅಲ್ಲಿರುವವರೆಲ್ಲರಿಗೂ ನಮಸ್ಕರಿಸಿದನು.

ಪ್ರಾತಃಕಾಲದ ವೈದಿಕಕರ್ಮಗಳನ್ನು ಮುಗಿಸಿಕೊಂಡು ಪ್ರಾತಃ ಸವನದಲ್ಲಿ ಮಹರ್ಷಿಗಳೆಲ್ಲರೂ ಅಗ್ನಿಗೆ ಹವಿಸ್ಸು ನಿಡುತ್ತಿದ್ದರು. ಅಂತಹ ಅಗ್ನಿಯನ್ನು ಸಂದರ್ಶಿಸಿ ಅಗ್ನಿದೇವನಿಗೆ ಅಭಿವಾದನ ಮಾಡಿದನು. ಇದೆಲ್ಲ ಶಿಕ್ಷಣ ಹೊರತು ಬಂಧನವೆಂದು ತಿಳಿಯಬಾರದು.

ಮಹಾವಿಷ್ಣುವು ಪ್ರತಿಯೊಂದು ಯಜ್ಞದಲ್ಲಿ ಮುಖ್ಯವಾಗಿ ಯಜ್ಞಭೋಕ್ತೃವಾದ ತನ್ನದೆ ಆದ ಮತ್ತೊಂದು ರೂಪವನ್ನು ನೋಡಿದನು. ಅಲ್ಲಿ ಘೃತಾಹುತಿಗಳಿಂದ ಅಗ್ನ್ಯಂತರ್ಗತ ಪರಶುರಾಮನನ್ನು ತುಷ್ಟಿಪಡಿಸುತ್ತಿರುವ ಮಹರ್ಷಿಗಳಿಗೆ ಅಭಿವಾದನ ಮಾಡಿದನು. ಅಲ್ಲಿಂದ ಹೊರಟು ಯಜ್ಞಗಳಲ್ಲಿ ಬಲಿ ನೀಡುವಾಗ ಕಟ್ಟಿ ಹಾಕಲ್ಪಡುವ ಯೂಪದಾರುವನ್ನು ನೋಡಿದನು. ಸುವರ್ಣ ಬಳೆಗಳಿಂದ ವಿಭೂಷಿತವಾಗಿದ್ದವು. ನೂರಾರು ಸ್ವಸ್ತಿಕ್, ಚಕ್ರಾಬ್ಜ ಮೊದಲಾದ ಚಿಹ್ನೆಗಳನ್ನೂ ಸಂದರ್ಶಿಸಿದನು.

ಮಹರ್ಷಿಗಳು ವೇದಮಂತ್ರಗಳನ್ನುಚ್ಚರಿಸುತ್ತಾ ಘೃತದಿಂದ ಅಗ್ನಿದೇವನಿಗೆ ಆಹುತಿಗಳನ್ನು ನೀಡುತ್ತಿದ್ದರು. ಅವರೆಲ್ಲರೂ ಯಜ್ಞಪತಿಯಾದ ತನ್ನನ್ನೆ ಉದ್ಧೇಶಿಸಿ ಹೋಮ ಮಾಡುತ್ತಿದ್ದರು. ಹೋಮದ ಧೂಮವನ್ನು ಆಘ್ರಾಣಿಸುತ್ತಾ ವೇದಮಂತ್ರಗಳನ್ನು ಕೇಳುತ್ತಾ ಹೊರಟನು. ದೇವತೆಗಳೆಲ್ಲರೂ ಬ್ರಹ್ಮರ್ಷಿಗಳು ಪವಿತ್ರಧರಿಸಿ ಅರ್ಘ್ಯಪ್ರದಾನ ಮಾಡಲುದ್ಯುಕ್ತರಾಗಿದ್ದರು. ವಿಷ್ಣುವನ್ನು ನೋಡಿ ಹೀಗೆ ಮಾತನಾಡಿಕೊಂಡರು.

**ದೇವೇಷು ವರ್ತತೇ ಯದ್ ವೈ ತದ್ಧಿ ಸರ್ವಂ ಜನಾರ್ದನಾತ್ ।**
**ಯತ್ ಪ್ರವೃತ್ತಂ ಚ ದೇವೇಭ್ಯಃ ತದ್ ವಿದ್ಧಿ ಮಧುಸೂದನಾತ್ ॥ 7 ॥**

**ಕ್ಷೀರಾದ್ ಯಥಾ ದಧಿ ಭವೇದ್ ದಧ್ನಃ ಸರ್ಪಿರ್ಭವೇದ್ ಯಥಾ ।**
**ಮಥ್ಯಮಾನೇಷು ಭೂತೇಷು ತಥಾ ಲೋಕೋ ಜನಾರ್ದನಾತ್ ॥ 8 ॥**

ದೇವತೆಗಳಲ್ಲಿ ಏನೇನು ಸೌಂದರ್ಯಾ ಬಲಾದಿ ಸಂಪತ್ತಿರುವುದೋ ಅವೆಲ್ಲವೂ ಈ ಜನಾರ್ದನನ ಅನುಗ್ರಹದಿಂದ ಬಂದಿರುತ್ತವೆ. ದೇವತಾರಾಧನೆಯಿಂದ ಏನೇನು ಫಲ ದೊರೆಯುವುದೋ ಅವೆಲ್ಲವೂ ಮಧುಸೂದನನ ಇಚ್ಛೆಯಂತೆ ಪ್ರಾಪ್ತವಾಗುತ್ತದೆ.

ಹಾಲಿನಿಂದ ಮೊಸರಾದಂತೆ, ಮೊಸರಿನಿಂದ **ಘೃತ**[1]ವಾಗುವಂತೆ ಮನಸ್ಸೆಂಬ ಮಂಥಾನ ದಂಡದಿಂದ ವಿಚಾರವೆಂಬ ಮಥನ ನಡೆಸಿದಾಗ ಸಮಸ್ತ ವಸ್ತುಗಳೂ ಇವನಿಂದಲೇ ಪ್ರಾಪ್ತವಾದದ್ದೆಂದು ತಿಳಿಯಬಹುದು. ಇಂದ್ರಿಯಗಳು, ಪಂಚಭೂತಗಳು ಜಡವಾದ್ದರಿಂದ ಅವುಗಳನ್ನು ನಿಯಮಿಸುವ ತತ್ತ್ವಾಭಿಮಾನಿಗಳನ್ನು ಒಪ್ಪಬೇಕು. ಅವರೂ ಸಹ ಅಸ್ವತಂತ್ರರಾದ್ದರಿಂದ ಅವರನ್ನು ನಿಯಮಿಸುವ ಪರಮಾತ್ಮನನ್ನು ಒಪ್ಪಲೇಬೇಕು. ಈ ಭೂಮಿಯಲ್ಲಿ ಶರೀರಿಗಳಿಗೆ ಪಂಚಭೂತಗಳಿಂದಾಗಿ ದೇಹೇಂದ್ರಿಯಾದಿಗಳ ಪ್ರಾಪ್ತಿಯಾಗುತ್ತದೆ. ಹಾಗೆಯೆ ಮೇಲಿನ ಲೋಕದಲ್ಲಿರುವ ದೇವತೆಗಳಿಗೆ ಶ್ರೀಹರಿಯಿಂದಾಗಿ ಬಲೈಶ್ವರ್ಯಾದಿಗಳು ಉಂಟಾಗುತ್ತವೆ.

ಯಜ್ಞ ಮಾಡುವ ಯಜಮಾನನಿಗೆ ಶ್ರೀಹರಿಯೇ ಫಲವನ್ನು ನೀಡುವವನು. ಪವಿತ್ರ ವಸ್ತುಗಳಿಗೂ ಪಾವಿತ್ರ್ಯಾಪಾದಕನೂ, ಸರ್ವತಂತ್ರ ಸ್ವತಂತ್ರನೂ ಆಗಿರುವ ಶ್ರೀಹರಿಯ ಹಸ್ತದಲ್ಲಿಯೇ ಹದಿನಾಲ್ಕು ಲೋಕಗಳನ್ನು ವೇದಗಳೆಂಬ ಮೂಗುದಾರ ಹಾಕಿ ತನ್ನಂಕೆಯಲ್ಲಿರಿಸಿಕೊಂಡಿದ್ದಾನೆ. ಹೀಗೆ ಪರಸ್ಪರ ವಿಷ್ಣು ಮಹಿಮೆಯನ್ನು ವಿಚಾರಿಸುತ್ತಾ ತಮ್ಮ ಬಳಿಗೆ ಬಂದ ಹರಿಯನ್ನು ಸ್ವಾಗತ ಮಾಡಿದರು.

ಪದ್ಮನಾಭನೇ ನಿನಗೆ ಸುಸ್ವಾಗತವು. ವೇದಮಂತ್ರಗಳ ಮೂಲಕ ನಿನಗೆ ನೀಡುತ್ತಿರುವ ಯಜ್ಞೀಯಾಹುತಿಗಳನ್ನು ಸ್ವೀಕರಿಸುವವನಾಗು. ಯಾಜ್ಞೀಯ ಪವಿತ್ರ ಪಾದ್ಯ ನಿನಗಾಗಿಯೇ ಇದೆ. ನೀನು ಪರಮಪವಿತ್ರನಾದ ಅತಿಥಿಯೆಂದು ವೇದಗಳು ಹೊಗಳಿವೆ. ಇಂತಹ ನಿನ್ನ ದರ್ಶನವಿಂದು ಎಮಗಾಯಿತು.

ನೀನು ದೈತ್ಯರೊಂದಿಗೆ ಹೋರಾಡಲು ಹೊರಟಾಗ ನಮ್ಮ ಯಜ್ಞಕ್ರಿಯೆಗಳಾವುದು ನಡೆಯಲಿಲ್ಲ. ವಿಷ್ಣು ಸ್ಮರಣೆ ತಪ್ಪಿ ಹೋಗಿತ್ತು.

---

1. ಕ್ಷೀರಾದ್ ದಧಿ :
**ಘೃತಮಿವ ಪಯಸಿ ನಿಗೂಢಂ ಭೂತೇ ಭೂತೇ ವಸತಿ ವಿಜ್ಞಾನಮ್ ।**
**ಸತತಂ ಮಂಥಯಿತವ್ಯಂ ಮನಸಾ ಮಂಥಾನಭೂತೇನ ॥**
ಹಾಲಿನಲ್ಲಿ ತುಪ್ಪವಿರುವಂತೆ ವಿಜ್ಞಾನರೂಪಿ ಭಗವಂತನು ಪ್ರತಿಯೊಬ್ಬ ಪ್ರಾಣಿಗಳಲ್ಲಿಯೂ ತುಂಬಿರುವನು. ಮನಸ್ಸೆಂಬ ಕಡಗೋಲಿನಿಂದ ಕಡೆದಾಗ ಮಾತ್ರ ಅಭಿವ್ಯಕ್ತನಾಗುವನು.

ವಿಷ್ಣುಸ್ಮರಣೆಯಿಲ್ಲದ ಯಜ್ಞ ಯಾಗಾದಿಗಳೆಲ್ಲ ಆಸುರಗಳೆಂದು ಶಾಸ್ತ್ರಗಳು ಹೇಳವೆ. ಅದು ವಿಧಿವತ್ತಾಗುವುದಿಲ್ಲ.

ನಾವು ಯಜ್ಞ ಮಾಡುತ್ತಿರುವಾಗಲೇ ನೀನು ದರ್ಶನ ನೀಡಿದೆಯೆಂದರೆ ನಾವು ಮಾಡಿದ ಯಜ್ಞವು ಸಫಲವೆಂದು ಭಾವಿಸುವೆವು. ದಕ್ಷಿಣೆಯಿಂದ ಕೂಡಿದ ಯಜ್ಞವು ಸಫಲವಾಗುತ್ತದೆ ಎನ್ನಲು ನಿನ್ನ ಈ ದರ್ಶನವೇ ಸಾಕ್ಷಿಯಾಗಿದೆ.

ಋಷಿಗಳ ಮಾತನ್ನು ಕೇಳದ ಶ್ರೀಹರಿಯು 'ತಥಾಸ್ತು' ಎಂದು ಹೇಳ ಋಷಿಗಳೆಲ್ಲರನ್ನೂ ಸನ್ಮಾನಿಸಿದನು. ಬ್ರಹ್ಮದೇವನೂ ಸಹ ವಿಷ್ಣುವಿನ ಆಗಮನದಿಂದ ಆನಂದತುದಿಲನಾದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಾಲನೇಮಿ ವಧವೆಂಬಲ್ಲಿ
ನಲವತ್ತೊಂಬತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




# ಅಥ ಪಂಚಾಶತ್ತಮೋಽಧ್ಯಾಯಃ

*ವೈಶಂಪಾಯನ ಉವಾಚ –*

**ಋಷಿಭಿಃ ಪೂಜಿತಃ ತೈಸ್ತು ವಿವೇಶ ಹರಿರೀಶ್ವರಃ ।**
**ಪೌರಾಣಂ ಬ್ರಹ್ಮಸದನಂ ದಿವ್ಯಂ ನಾರಾಯಣಾಶ್ರಮಮ್ ॥ 1 ॥**

**ಸ ತದ್ ವಿವೇಶ ಹೃಷ್ಟಾತ್ಮಾ ತಾನಾಮಂತ್ರ್ಯ ಸದೋಗತಾನ್ ।**
**ಪ್ರಣಮ್ಯ ಚಾದಿದೇವಾಯ ಬ್ರಹ್ಮಣೇ ಪದ್ಮಯೋನಯೇ ॥ 2 ॥**

ವೈಶಂಪಾಯನ ಹೇಳುವರು – ಮಹಾವಿಷ್ಣುವು ಋಷಿಗಳಿಂದ ಹೀಗೆ ಪೂಜಿತನಾಗಿ ಪುರಾಣಪ್ರಸಿದ್ಧವಾದ ದಿವ್ಯವಾದ ವೈಕುಂಠದಲ್ಲಿರುವ ನಾರಾಯಣಾಶ್ರಮವನ್ನು ಪ್ರವೇಶಿಸಿದನು. ಯಾವಾಗಲೂ ಆನಂದಪೂರ್ಣನಾದ ಶ್ರೀಹರಿಯು ಯಜ್ಞಸಭೆಯಲ್ಲಿ ಮಿಲಿತರಾಗಿದ್ದ ಸಕಲ ಋಷಿವರ್ಯರಿಗೂ ಹೋಗಿ ಬರುವೆನೆಂದು ಹೇಳಿ, ಸೃಷ್ಟಿಕರ್ತನೂ, ಆದಿದೇವನೂ ತನ್ನ ಪುತ್ರನೂ ಆದ ಬ್ರಹ್ಮದೇವನಿಗೆ ಲೋಕಶಿಕ್ಷಣ ಹಾಗೂ ಅಸುರಮೋಹಕ್ಕಾಗಿಯು ಅವನಲ್ಲಿರುವ ಬ್ರಹ್ಮನೆಂಬ ತನ್ನನ್ನೆ ಪ್ರಣಾಮಗೈದು, ನಾರಾಯಣಾಶ್ರಮವೆಂದು ತನ್ನದೆ ನಾಮದಿಂದ ಪ್ರಖ್ಯಾತವಾದ ತನ್ನ ಮಂದಿರವನ್ನು ಪ್ರವೇಶಿಸಿದನು. ಆಶ್ರಮದಲ್ಲಿ ಶಾಂತಿಯಿರುತ್ತದೆಯಾಗಿ ಆಯುಧಗಳಿಗೆ ಕೆಲಸವಿಲ್ಲವಾದ್ದರಿಂದ ಎಲ್ಲಾ ಆಯುಧಗಳನ್ನೂ ಪರಿತ್ಯಜಿಸಿದ. ಈ ವೈಕುಂಠದಲ್ಲಿ ಸನಾತನ ಕಾಲದಿಂದ ಮುಕ್ತರಾಗಿದ್ದ ಅನೇಕ ಮುಕ್ತ ಬ್ರಹ್ಮಾದಿ ದೇವತೆಗಳನ್ನು ಋಷಿಗಳನ್ನು ನೋಡಿದ. ಅಲ್ಲಿರುವ ಸಮುದ್ರದಂತೆ ಶೋಭಿಸುತ್ತಿರುವ ತನ್ನ ಆಲಯವನ್ನು ನೋಡಿದನು. ಅಲ್ಲಿ ಮುಕ್ತ

ದೇವತಾಗಣಗಳು, ಮಹರ್ಷಿಗಳು ಇದ್ದರು. ಸಂವರ್ತಕವೆಂಬ ಪ್ರಲಯ ಕಾಲದ ಮೇಘಾಧಿಪತಿಯಿದ್ದನು. ನಕ್ಷತ್ರಾಭಿಮಾನಿ ದೇವತೆಗಳ, ಸಾಧ್ಯ ದೇವತೆಗಳಿರುವ, ಅಪ್ರಾಕೃತಸುರರಿಂದ ವಂದ್ಯವಾದ, ಅಯುತಾರ್ಕ ಸಮಪ್ರಭವಾದ, ಸಾಧನಾರಹಿತರಾದವರಿಗೂ ಹೊಂದಲು ಅಸಾಧ್ಯವೆನಿಸಿದ, ಸುರಾಸುರರಿಂದ ಯುದ್ಧ ಮಾಡಿ ಪಡೆಯಲಾಗದ್ದರಿಂದ ಅಯೋಧ್ಯವೆನಿಸಿದ, ವೈಕುಂಠಸ್ಥಾನವನ್ನು ಪ್ರವೇಶಿಸಿದ. ಅಲ್ಲಿ ಸೂರ್ಯನ ಕಾಂತಿಯಿಂದಾಗಲೀ, ಚಂದ್ರನ ಕಾಂತಿಯಿಂದಾಗಲೀ, ವಿದ್ಯುತ್ ಕಾಯದಿಂದಾಗಲಿ ಆ ಪ್ರದೇಶವು ಬೆಳಗುತ್ತಿರದೆ, ಶ್ರೀಹರಿಯ ಶರೀರ ಕಾಂತಿಯಿಂದಲೇ ಬೆಳಗುತ್ತಿರುತ್ತದೆ. ಭೌತಿಕ ವಾಯು ಸೂರ್ಯಚಂದ್ರರಿಗೆ ಅವಕಾಶವೀಯದೆ ಪ್ರಕೃಷ್ಟ ಸತ್ವರಾಶಿಯಾದ ಶ್ರೀಹರಿಯ ಕಾಂತಿ ಅಲ್ಲೆಲ್ಲ ಹರಡಿರುತ್ತದೆ.

**ಸ ತತ್ರ ಪ್ರವಿಶನ್ನೇವ ಜಟಾಭಾರಂ ಸಮುದ್ವಹನ್ ।**
**ಸಹಸ್ರಶೀರ್ಷೋ ಭೂತ್ವಾ ತು ಶಯನಾಯೋಪಚಕ್ರಮೇ ॥ 3 ॥**

**ಲೋಕಾನಾಮಂತ ಕಾಲಜ್ಞಾ ಕಾಲೀ ನಯನಶಾಲಿನೀ ।**
**ಉಪತಸ್ಥೇ ಮಹಾತ್ಮಾನಂ ನಿದ್ರಾ ತಂ ಕಾಲರೂಪಿಣೀ ॥ 4 ॥**

ಶ್ರೀಹರಿಯು ತನ್ನ ಆಲಯ ಪ್ರವೇಶ ಮಾಡುತ್ತಿರುವಂತೆಯೇ ತನ್ನ ನೀಲಾಲಕ ಕೇಶಭಾರವನ್ನು ಮೇಲೆತ್ತಿ ಕಟ್ಟಿ, ಸಹಸ್ರಶಿರಸ್ಕನಾಗಿ ಮಲಗಲಿಚ್ಛಿಸಿದನು. ಹರಿಯು ಈಗ ಲೋಕಗಳನ್ನು ಅಮತಗೊಳಿಸಲಿಚ್ಛಿಸಿರುವನೆಂದು ತಿಳಿದ ತಮೋಭಿಮಾನಿನೀಯಾದ ನೇತ್ರಗಳನ್ನು ಆಚ್ಛಾದಿಸಲುಪಕ್ರಮಿಸಿದ ಕಾಲರೂಪಣಿಯಾದ ದುರ್ಗೆಯು ಆ ಭಗವಂತನನ್ನು ಸೇವಿಸಲು ನಿಂತಳು. ಉಪಬರ್ಹಣ ರೂಪತಾಳಿ, ಹೊದ್ದಿಗೆಯಿಂದ ಅವನನ್ನು ಆಚ್ಛಾದಿಸಿ ಸೇವಿಸಿದಳು.

**ಸ ಶಿಶ್ಯೇ ಶಯನೇ ದಿವ್ಯೇ ಸಮುದ್ರಾಂಭೋದ ಶೀತಲೇ ।**
**ಹರಿರೇಕಾರ್ಣವೋಕ್ತೇನ ವ್ರತೇನ ವ್ರತಿನಾಂ ವರಃ ॥ 5 ॥**

ಭಕ್ತರನ್ನು ರಕ್ಷಿಸುವುದೇ ನನ್ನ ವ್ರತವೆಂದು ಘೋಷಿಸಿರುವ ವ್ರತಿಗಳಲ್ಲಿ ಶ್ರೇಷ್ಠನಾದ ಭಗವಂತನು ಸಮುದ್ರ ಹಾಗೂ ಮೇಘಗಳಿರುವ ತಂಪಾದ. ಹಾಸಿಗೆಯಲ್ಲಿ ಶೇಷಶಯನನು ಪವಡಿಸಿದನು. ಜಗತ್ತಿನ ಕ್ಷೇಮಕ್ಕಾಗಿ

ಮಲಗಿರುವ ಶ್ರೀಹರಿಯು ದೇವತಾಗಣ ಋಷಿಗಣಗಳೆಲ್ಲವೂ ಸೇವಿಸುತ್ತಿದ್ದರು. ಹೀಗೆ ನಾಲ್ಕು ಸಾವಿರ ಮಹಾಯುಗಗಳಷ್ಟು ದೀರ್ಘಕಾಲ ಭಗವಂತನು ಮಲಗುವ ನಟನೆ ಮಾಡುವನು.

## ಪದ್ಮೋತ್ಪತ್ತಿ

**ತಸ್ಯ ಸುಪ್ತಸ್ಯ ಶುಶುಭೇ ನಾಭಿಮಧ್ಯಾತ್ ಸಮುತ್ಥಿತಮ್ ।**
**ಆದ್ಯಂ ತಸ್ಯಾಸನಂ ಪದ್ಮಂ ಬ್ರಹ್ಮಣಃ ಸೂರ್ಯವರ್ಚಸಮ್ ।**
**ಸಹಸ್ರಪತ್ರಂ ವರ್ಣಾಢ್ಯಂ ಸುಕುಮಾರಂ ಸುಪುಷ್ಪಿತಮ್ ॥ 6 ॥**

ಯೋಗನಿದ್ರೆಯಲ್ಲಿದ್ದು ಸುಮ್ಮನೆ ಕಣ್ಣುಮುಚ್ಚಿರುವ ಶ್ರೀಹರಿಯ ನಾಭಿ ಮಧ್ಯದಿಂದ, ಉದರದಲಿದ್ದ ಗರ್ಭೋದಕವು ವಾಯುವಿನಿಂದ ಘನೀಭೂತವಾಗಿ ಪದ್ಮಾಕಾರವಾಗಿ ಹೊರಗೆ ಬಂದಿತು. ಹೀಗೆ ಶ್ರೀಹರಿಯೇ ಈ ಪದ್ಮಕೋಶವನ್ನು ಜೀವನ ಅದೃಷ್ಟದಿಂದ ಉನ್ಮುಖೀ ಕರಿಸಲ್ಪಟ್ಟ ಕಾಲವೆಂಬ ನಿಮಿತ್ತದಿಂದ ಸೂರ್ಯನಂತೆ ಬೆಳಗುತ್ತಾ ವ್ಯಕ್ತವಾಯಿತು. ಇದು ಬ್ರಹ್ಮದೇವನಿಗೆ ಆಸನವಾಗಿಯೂ, ಸಾವಿರ ದಳವುಳ್ಳದ್ದಾಗಿ ಸುಂದರ ವರ್ಣಗಳಿಂದ ಶೋಭಿಸುತ್ತಾ ಚೆನ್ನಾಗಿ ಅರಳಿ ಕೋಮಲವಾಗಿತ್ತು. ಬ್ರಹ್ಮದೇವನಿಗೆ ಆಸನವನ್ನು ಮಾಡಲೆಂದೇ ಪದ್ಮವು ಪೃಥಿವಿರೂಪವಾಗಿತ್ತು. ಬ್ರಹ್ಮಸೂತ್ರವನ್ನು ಧರಿಸಿದ ಕೈಗಳಿಂದ ಯುಕ್ತನಾಗಿದ್ದು ಮಲಗಿಕೊಂಡೇ ಮಹಾಮನನಶಾಲಿ ವಿಷ್ಣುವು ಈ ಜಗತ್ತನ್ನು ಸೃಷ್ಟ್ಯಾದಿಗಳಿಂದ ಆವೃತ್ತಿ ಮಾಡುತ್ತಲೇ ಇರುವನು. ಇವನಿಗೆ ಈ ಸೃಷ್ಟಿ ವ್ಯಾಪಾರ ಶ್ರಮವಿಲದಲೆ ನಡೆಸುವನೆಂದೇ 'ಅಕರ್ಮಾ' ಎಂದಿದೆ ಶ್ರುತಿ. ವಿಸ್ತಾರವಾಗಿದ್ದ ಮುಖದಿಂದ ಹೊರಟ ನಿಶ್ವಾಸಗಾಳಿಯಿಂದ ಪ್ರೇರಿತವಾಗಿ ಪ್ರಜೆಗಳ ಗುಂಪುಗಳು ವೇಗವಾಗಿ ಕೆಳಗೆ ಬಂದು ಬೀಳುತ್ತಿದ್ದವು ಹಾಗೂ ಮೇಲೆ ಹೋಗುತ್ತಿದ್ದವು.

**ತೇ ಸೃಷ್ಟಾಃ ಪ್ರಾಣಿನೋ ಮೇಧ್ಯಾ ವಿಭಕ್ತಾ ಬ್ರಹ್ಮಣ ಸ್ವಯಮ್ ।**
**ಚತುರ್ಧಾ ಸ್ವಾಂ ಗತಿಂ ಜಗ್ಮುಃ ಕೃತಾಂತೋಕ್ತೇನ ಕರ್ಮಣಾ ॥ 7 ॥**

**ನ ತಂ ವೇದ ಸ್ವಯಂ ಬ್ರಹ್ಮಾ ನಾಪಿ ಬ್ರಹ್ಮರ್ಷಯೋಽವ್ಯಯಾಃ ।**
**ವಿಷ್ಣೋಃ ನಿದ್ರಾಮಯಂ ಯೋಗಂ ಪ್ರವಿಷ್ಟಂ ತಮಸಾವೃತಮ್ ॥ 8 ॥**

ಭಗವಂತನಿಂದ ಹುಟ್ಟಿರುವ ಪ್ರಾಣಿಗಳನ್ನು ಬ್ರಹ್ಮನು ಬ್ರಾಹ್ಮಣ ಕ್ಷತ್ರಿಯ ವೈಶ್ಯ

ಶೂದ್ರರೆಂದು ನಾಲ್ಕು ವಿಭಾಗ ಮಾಡಿದನು. ಈ ನಾಲ್ಕು ವರ್ಗದವರು ತಮ್ಮ ತಮಗೆ ಯೋಗ್ಯವಾದ ಸಾಧನೆ ಮಾಡಿಕೊಂಡು ಶಾಸ್ತ್ರೋಕ್ತ ವಿಧಿಯಿಮದ ಮಾಡಿದ ಕಾರಣ ತಮ್ಮ ತಮ್ಮ ಯೋಗ್ಯಗತಿ ಹೊಂದಿದರು.

ಯೋಗನಿದ್ರೆಯಲ್ಲಿದ್ದು ಚಕ್ಷುರ್ನಿಮೀಲನ ಮಾಡಿ ಮಲಗಿದವನಂತೆ ಅನ್ಯತ್ರ ವ್ಯಾಪಾರರಹಿತನಾಗಿ ಮಲಗಿದ್ದ ಶ್ರೀಹರಿಯ ಸ್ವರೂಪ ತಿಳಿಯಲು ಬ್ರಹ್ಮದೇವನಾಗಲೀ, ಮುಕ್ತ ಬ್ರಹ್ಮರ್ಷಿಗಳಾಗಲೀ ತಿಳಿಯಲಾಗುವುದಿಲ್ಲ. ತಮೋಭಿಮಾನಿನಿಯಾದ ದುರ್ಗೆಯು ಅವನನ್ನು ಹೊದ್ದಿಗೆಯಂತೆ ಮುಚ್ಚಿದ್ದರೂ ಅವಳಿಗೂ ಶ್ರೀಹರಿಯನ್ನು ಸಂಪೂರ್ಣ ತಿಳಿಯಲು ಸಾಧ್ಯವೇ ಶ್ರೀಹರಿ.

ಬ್ರಹ್ಮಾದಿ ದೇವತೆಗಳು ಆಸೀನನಾಗಿರುವಾಗ, ಕೆಲವು ಸಮಯದಲ್ಲಿ ಮಲಗಿರುವಾಗಲೂ[1] ಅವನ ಸ್ವರೂಪವನ್ನು ಪೂರ್ಣ ತಿಳಿಯಲಾರರು.

**ಜಾಗತೀ ಕೋऽತ್ರ ಕಃ ಶೇತೇ ಕಶ್ಚ ಶಕ್ತಶ್ಚ ನೆಂಗತೇ ।**
**ಕೋ ಭೋಗವಾನ್ ಕೋ ದ್ಯುತಿಮಾನ್ ಕೃಷ್ಣಾತ್ ಕೃಷ್ಣತರಶ್ಚ ಕಃ ॥ 9 ॥**

ದಾಮೋದರನನ್ನು ಪೂರ್ಣವಾಗಿ ಯಾರೂ ಅರಿಯಲಾರರು. ಅಲ್ಪಸ್ವಲ್ಪ ಅರಿಯಬಹುದು. ಬ್ರಹ್ಮಾದಿಗಳ ಮನದಲ್ಲಿ ಕೆಲವು ಕಾಲದಲ್ಲೊಮ್ಮೆ ವ್ಯಕ್ತನಾಗುವನು. ಕೆಲವು ಕಾಲದಲ್ಲಿ ಮರೆಯಾಗುವನು. ಭಗವಂತನು ಇಲ್ಲಿ ಮಲಗಿರುವನು. ಆದರೆ ಜಾಗ್ರತನಾಗಿಯೇ ಇರುವವನಷ್ಟೆ? ಭಗವಂತನು ಪ್ರಲಯ ಕಾಲದಲ್ಲಿಯೂ ಸೃಷ್ಟಿಸುವ ಸಾಮರ್ಥ್ಯವುಳ್ಳವನಾದರೂ ಹೇಗೆ

---

1. ನಿದ್ರಾಮಯಂ :
ರಮಾದೇವಿಗೆ ಸುಪ್ತಿಯೆಂದರೆ ಸೃಷ್ಟ್ಯಾದಿ ವ್ಯಾಪಾರದಲ್ಲಿ ಅನಾಸಕ್ತಿಯು. ಹಾಗೂ ಹರಿಯಲ್ಲಿ ವಿಶೇಷ ಆಸಕ್ತಿಯು. ಶ್ರೀಹರಿಗೆ ನಿದ್ರೆಯೆಂದರೆ ಚಕ್ಷುರಿಂದ್ರಿಯ ಉಪರತವಾಗದೆ ಕೇವಲ ರೆಪ್ಪೆಯನ್ನು ಮುಚ್ಚಿರುವುದು.

**ಅನಾಸ್ಥಾऽನ್ಯತ್ರ ಚ ಪ್ರೋಕ್ತಾ ವಿಷ್ಣೋಃ ಚಕ್ಷುರ್ನಿಮೀಲನಮ್** । *-ಭಾ.ತಾ. 3/6/2*
**ಕೃಷ್ಣರಾಮಾದಿರೂಪಾಣಿ ಪರಿಪೂರ್ಣಾನಿ ಸರ್ವದಾ ।**
**ನ ಚಾಣು ಮಾತ್ರಂ ಭಿನ್ನಾನಿ ತಥಾಪ್ಯಸ್ಮಾನ್ ವಿಮೋಹಸಿ** ॥ *-ಗೀ.ಭಾ. 2/72*

ಎಲ್ಲಿಯಾದರೂ ಭಗವದ್ರೂಪಗಳಲ್ಲಿ ಪರಾವರತ್ವ ಹೇಳಿದ್ದರೆ ಅದು ಅಜ್ಞರು ಹೀಗೆ ತಿಳಿಯುವರೆಂದು ಹೇಳುವ ರೀತಿ. ಅಣು ಮಾತ್ರವೂ ಭೇದವಿರುವುದಿಲ್ಲ.

ಸುಮ್ಮನೆ ಅಸಮರ್ಥನಂತೆ ನಟಿಸುತ್ತಿರುವನು ನೋಡಿರಿ! ಭಗವಂತನು ಸ್ವತಃ ಆನಂದ ರೂಪಿಯು. ಅವನಿಗೆ ವಿಷಯ ವಸ್ತುಗಳಿಂದ ಭೋಗಬೇಕಾಗಿಲ್ಲ. ಆದರೂ ಮಲಗಿ ಸುಖ ಪಡೆದವನಂತೆ ತೋರುತ್ತಿರುವನು. ಅಹೋ ಆಶ್ಚರ್ಯ, ಎಂತಹ ವಿಡಂಬನೆ ಶ್ರೀಹರಿಯದೆಂದು ದೇವತೆಗಳು ವಿಚಾರ ಮಾಡುತ್ತಿರುತ್ತಾರೆ. ಸೃಷ್ಟಿ ಕಾಲದಲ್ಲಿ ಸರ್ವರನ್ನು ಆಕರ್ಷಿಸುವನು, ಮಲಗಿರುವಾಗ ಮತ್ತೂ ಆಕರ್ಷಿಸುವನು. (ಕಃ ಎಂದರೆ ಭಗವಂತನು) ಹೀಗೆ ದೇವತೆಗಳು ಭಗವಂತನ ಸ್ವರೂಪ ನಿರ್ಣಯಕ್ಕಾಗಿ ವಿಚಾರ ಮಾಡುತ್ತಿರುತ್ತಾರೆ. ಆದರೂ ಅವರಿಗೆ ಶ್ರೀಹರಿಯ ಜನ್ಮಕರ್ಮಗಳನ್ನು ತಿಳಿಯಲು ಸಾಧ್ಯವಾಗಿಲ್ಲ.[2]

ದೇವತೆಗಳೂ ಋಷಿಗಳು ಕೂಡ ಭಾಗವತಾದಿ ಮಹಾಪುರಾಣಗಳೆ ಮೊದಲಾದ ಪ್ರಾಚೀನವಾದ ಇತಿಹಾಸಗಳ ಮೂಲಕ ಶ್ರೀಹರಿಯನ್ನು ಕೇಳುತ್ತಲೇ ಇರುವರು. ಇದರಿಂದ ತಿಳಿಯುವ ಅಂಶನ ತಸ್ಯ ಸದೃಶಃ ಪುಮಾನ್ ಎಂಬುದು. ಭಗವಂತನ ಸಾಮರ್ಥ್ಯದಿಂದ ಪ್ರಕಟವಾದ ಲೀಲೆಗಾಗಿ ಕೈಗೊಂಡ ವ್ಯಾಪಾರಿಗಳೆಲ್ಲವೂ ಅಪೌರುಷೇಯ ಶ್ರುತಿ ಹಾಗೂ ಮಹಾಭಾರತದಂತಹ ಪೌರುಷೇಯ ಶ್ರುತಿಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ.

**ಭವಕಾಲೇ ಭವತ್ಯೇಷಃ ಲೋಕಾನಾಂ ಲೋಕಭಾವನಃ ।**
**ದಾನವಾನಾಮಭಾವಾಯ ಜಾಗತೀ ಮಧುಸೂದನಃ ॥ 10 ॥**

**ಸ ಹಿ ವೇದಾಶ್ಚ ಯಜ್ಞಾಶ್ಚ ಯಜ್ಞಾಂಗಾನಿ ಚ ಸರ್ವಶಃ ।**
**ಯಾ ತು ಯಜ್ಞಗತಿಃ ಪ್ರೋಕ್ತಾ ಸ ಏಷಃ ಪುರುಷೋತ್ತಮಃ ॥ 11 ॥**

ಪ್ರಲಯಕಾಲದಲ್ಲಿ ಮಲಗಿರುವ ಭಗವಂತನು ಸೃಷ್ಟಿಕಾಲ ಬಂದಾಗ ಎದ್ದವನಂತೆ ನಟಿಸುವನು. ಇವನ ಜಾಗರಣೆಯೆಂದರೆ ದುಷ್ಟಶಿಕ್ಷಣ ಹಾಗೂ ಶಿಷ್ಟ ರಕ್ಷಣ ಸ್ವರೂಪವಾಗಿರುತ್ತದೆ.[3]

2. ವಿಮೃಶಂತಿಸ್ಮ ದೇವಾಃ
ಏಕಂ ಚ ತತ್ತ್ವತೋ ಜ್ಞಾತುಂ ವಿನಾ ಸರ್ವಜ್ಞತಾಂ ನರಃ ।
ನ ಸಮರ್ಥೋ ಮಹೇಂದ್ರೋಽಪಿ ತಸ್ಮಾತ್ ಸರ್ವತ್ರ ಜಿಜ್ಞಸೇತ್ ॥ *ಗೀ.ಭಾ. 4/9*
ಜನ್ಮಕರ್ಮ ಚ ಮೇ ದಿವ್ಯಂ ಏವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ *ಗೀ. 4/9*

ಭಗವಂತನು ತನ್ನ ವ್ಯಾಪಾರವನ್ನು ನಿಲ್ಲಿಸಿದನೆಂದರೆ ದೇವತೆಗಳಾರೂ ಸಕ್ರಿಯರಾಗಿರಲು ಸಾಧ್ಯವಿರುವುದಿಲ್ಲ. ಮಲಗಿರುವ ಇವನನ್ನು ನೋಡಲೂ ಅಸಮರ್ಥರಾಗುವರು. ಚಾತುರ್ಮಾಸ್ಯದಲ್ಲಿ ಮಲಗಿರುವಾಗ ದೇವತೆಗಳೂ ಮಲಗಿರಲೇಬೇಕು. ಬಿಂಬಕ್ರಿಯೆಯಿಲ್ಲದಿರುವಾಗ ಪ್ರತಿಬಿಂಬದಲ್ಲಿ ಕ್ರಿಯೆ ಹೇಗಾದೀತು. (ಸ ಹಿ ಬಿಂಬಕ್ರಿಯೆಯ್ಯೆವ ಕ್ರಿಯವಾನ್).

ಸಮಸ್ತ ವೇದಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನು. ಯಜ್ಞಗಳೆಲ್ಲವೂ ನಾರಾಯಣನೇ ಮುಖ್ಯವಾಗಿ ಉದ್ದೇಶವುಳ್ಳವುಗಳು. ಬೇರೆ ದೇವತೆಗಳಲ್ಲಿ ಅಮುಖ್ಯವಾಗಿ ತಾತ್ಪರ್ಯವಿದೆ. ಹೊಂದಲ್ಪಡುವವರು, ಹೇಳಲ್ಪಡುವವರು, ಪೂಜಿಸಲ್ಪಡುವವರು ಇವರಲ್ಲಿ ಶ್ರೀಮನ್ನಾರಾಯಣನೇ ಸರ್ವೋತ್ತಮನಾಗಿರುವನು. ಯಜ್ಞಾಂಗಗಳೂ ಇವನದೆ. ಯಜ್ಞದಿಂದ ಹೊಂದಬಹುದಾದ ಗತಿಯೂ ಹರಿಯಿಂದಲೇ. ಇದರಿಂದಾಗಿ ಪುರುಷೋತ್ತಮನಾಗಿರುವನು.

**ತಸ್ಮಿನ್ ಸುಪ್ತೇ ನ ವರ್ತಂತೇ ಮಂತ್ರಪೂತಾಃ ಕ್ರತುಕ್ರಿಯಾಃ ।**
**ಶರತ್ ಪ್ರವೃತ್ತ ಯಜ್ಞೋಽಯಂ ಜಾಗರ್ತಿ ಮಧುಸೂದನಃ ॥ 12 ॥**
**ತದಿದಂ ವಾರ್ಷಿಕಂ ಚಕ್ರಂ ಕಾರಯತ್ಯಂಬುದೇಶ್ವರಃ ।**
**ವೈಷ್ಣವಂ ಕರ್ಮ ಕುರ್ವಾಣಃ ಸುಪ್ತೇ ವಿಷ್ಣೌ ಪುರಂದರಃ ॥ 13 ॥**

ಶ್ರೀಹರಿಯು ವರ್ಷ ಋತುವಿನಲ್ಲಿ ಮಲಗಿ ಕಣ್ಣು ಮುಚ್ಚಿದಾಗ ಅಂದರೆ ಚಾತುರ್ಮಾಸ್ಯದಲ್ಲಿ ಯಾವುದೇ ವಿವಾಹೋಪನಯನಾಂಗವಾಗಿ ಮಂತ್ರ

---

3. 1) ಲೋಕಭಾವನಃ ಲುಕ್ ಪ್ರಕಾಶೇ, ಜ್ಞಾನಸ್ವರೂಪನು, ಭಾವನಂ ರಕ್ಷಣಂ ಪ್ರೋಕ್ತಂ ಸೃಷ್ಟಿ ಸ್ಥಿತಿಶ್ಚ ಸಂಹಾರಃ ಭಾವನಂ

2) ನಾರಾಯಣ ಪರಾವೇದಾಃ ದೇವಾ ನಾರಾಯಣಾಂಗಜಾಃ ।
ನಾರಾಯಣ ಪರಾಲೋಕಾಃ ನಾರಾಯಣ ಪರಾಙ್ಮುಖಾಃ ।
ನಾರಾಯಣಪರಂಜ್ಞಾನಂ ನಾರಾಯಣ ಪರಾ ಗತಿಃ ।

3) ಪ್ರತಿಪಾದ್ಯೇಷು ಸ ಪರಃ ಇತ್ಯಾದಿ
ಗಮ್ಯೇಜ್ಯ ಜ್ಞೇಯ ವಾಚ್ಯೇಷು ಯೋಜ್ಯೇಷು ಚ ಪರೋಹರಿಃ ।
ತಪಸಾ ಯುಜ್ಯಮಾನಾನಾಂ ಸರ್ವಲೋಕೇಭ್ಯ ಏವ ಚ ॥ *–ಭಾ.ತಾ. 2/5/15/16*

ಪೂರ್ವಕರ್ಮಗಳು ನಿಷಿದ್ಧವಾಗಿರುತ್ತದೆ. ಭಗವಂತನ ಕಲ್ಯಾಣ ದೃಷ್ಟಿ ಬೀಳದಿರುವ ವಿವಾಹೋಪನಯನಗಳು ಊರ್ಜಿತವಾಗಲಾರವು. ವರ್ಷರ್ತು ಕಾರ್ತಿಕ ಉತ್ಥಾನ ದ್ವಾದಶೀಯಿಂದ ಏಳುವ ನಟನೆ ಮಾಡುತ್ತಾನೆ. ನಂತರ ಯಜ್ಞಯಾಗಾದಿ ಕ್ರಿಯೆಗಳೆಲ್ಲವೂ ಪ್ರಾರಂಭವಾಗುತ್ತವೆ.

ವಿಷ್ಣುವು ಶಯನ ಮಾಡಿದಾಗ ಮೇಘಗಳಿಗೆ ಅಧಿಪತಿಯಾದ ಇಂದ್ರದೇವನು ತಾನೇ ಭಗವದನುಗ್ರಹದಿಂದ ಜಲಾದಿಗಳನ್ನು ಜಗತ್ತಿಗೆ ಸುರಿಸಿ ಪಾಲಿಸುತ್ತಾನೆ.

ಈ ಪರಮಾತ್ಮನ ಬಂಧಕಶಕ್ತಿಯು ಮಾಯಾ ಎನಿಸಿದೆ. ಈ ಬಂಧಕಶಕ್ತಿಯಾದರೂ ಅತ್ಯಂತ ಗಹನವಾದದ್ದು. ಮಾಯಾಶಬ್ದವು ಗುಣಪ್ರಾಚುರ್ಯವೆಂಬರ್ಥ ತಿಳಿಸುತ್ತದೆ. (ಮಾಯಾಂ ತು ಮಹಿಮಾ ಪ್ರೋಕ್ತಾ) ಭಗವಂತನ ಮಾಯೆಯಿಂದಲೇ ಈ ಜಗತ್ತು ಅಜ್ಞಾನದಲ್ಲಿ ಮುಳುಗಿರುತ್ತದೆ. ಇದನ್ನೆ 'ನಿದ್ರಾ' ಎನ್ನುವರು. ಇದು ಹರಿಯಿಚ್ಛೆಯಂತೆ ನಮ್ಮನ್ನು ದ್ವೇಷಿಸುವಂತೆ ನಮ್ಮ ಮೇಲೆರಗುತ್ತದೆ. ಈ ಅಜ್ಞಾನವು ಘೋರವಾಗಿದ್ದು ಕಾಲರಾತ್ರಿಯಂತೆ ಇರುತ್ತದೆ. ಇದೊಂದು ತಮೋದ್ವಾರವೆನಿಸಿದ್ದು ಇದು ಇದ್ದಾಗ ದಿವಸ ಹೋದದ್ದೆ ಗೊತ್ತಾಗುವುದಿಲ್ಲ. ಇದು ಜೀವನದ ನೂರು ವರ್ಷಗಳಲ್ಲಿ ಐವತ್ತು ವರ್ಷ ಅಪಹರಿಸುತ್ತದೆ. ಇದೊಂದು ಸರ್ವಪ್ರಾಣಿಗಳಿಂದಲೂ ಪ್ರತಿಭಟಿಸಲು ಅಶಕ್ಯವಾಗಿರುವುದು. ಇದಕ್ಕೆ ಬಲಿಯಾಗದಿದ್ದವರು ವಿರಳ.

ಈ ನಿದ್ರಾರೂಪ ತಮಸ್ಸಿನಿಂದ ಆವಿಷ್ಟ ಪುರುಷನು ಪದೇ ಪದೇ ಆಕಳಿಸುತ್ತಾ ಇದರ ವೇಗವನ್ನು ತಡೆಯಲು ಅಸಮರ್ಥನಾಗುವನು. ಮಹಾಸಾಗರದಲ್ಲಿ ಮುಳುಗಿ ಹೋಗುತ್ತಿರುವ ಮನುಷ್ಯನಂತೆ ನಿದ್ರಾ ಸಮುದ್ರದಲ್ಲಿ ಮುಳುಗುವನು.

**ಅನ್ನಜಾ ಭುವಿ ಮರ್ತ್ಯಾನಾಂ ಶ್ರಮಜಾ ವಾ ಕಥಂಚನ ।**
**ಸೈಷಾ ಭವತಿ ಲೋಕಸ್ಯ ನಿದ್ರಾ ಸರ್ವಸ್ಯ ಲೌಕಿಕೀ ॥ 14 ॥**

**ಸ್ವಪ್ನಾಂತೇ ಕ್ಷೀಯತೇ ಹ್ಯೇಷಾ ಪ್ರಾಯಶೋ ಭುವಿ ದೇಹಿನಾಮ್ ।**
**ಮೃತ್ಯುಕಾಲೇ ಚ ಭೂತಾನಾಂ ಪ್ರಾಣಾನ್ ನಾಶಯತೇ ಭೃಶಮ್ ॥ 15 ॥**

ಮರಣವೆ ಸ್ವಭಾವವುಳ್ಳ ಮರ್ತ್ಯರಿಗೆ ಈ ನಿದ್ರೆಯು ದುಷ್ಟಾನ್ನದಿಂದ ಅತೀ

ಅನ್ನದಿಂದಲುಂಟಾಗಬಹುದು ಅಥವಾ ಶ್ರಮ ಸಾಧ್ಯವಾದ ಕಾರ್ಯ ಮಾಡಿದಾಗಲೂ ಉಂಟಾಗುತ್ತದೆ. ಈ ರೀತಿ ನಿದ್ರೆಯಿಂದ ಪಾರಲೌಕಿಕವಾದ ಯಾವುದೇ ಸಾಧನೆಯಾಗದೆ ಲೌಕಿಕ ಶ್ರಮ ಮಾತ್ರ ನಿವೃತ್ತವಾಗುತ್ತದೆ. ಈ ನಿದ್ರೆಯು ದೇಹಧಾರಿ ಮಾನವರಿಗೆ ನಿದ್ರಾ ನಂತರ ತಾನೇ ಎಚ್ಚರಿಕೆಯಾದಾಗ ಬಹುಶಃ ಇಲ್ಲವಾಗುತ್ತದೆ. ಆದರೆ ಅನಿರುದ್ಧನ ಸೇವೆಗೆ ಭಂಗವೊಡ್ಡಲು ಪುನಃ ಇಲಿಗೆ ಬೆಕ್ಕು ಹೊಂಚು ಹಾಕುತ್ತಿರುವಂತೆ ಕಾಯುತ್ತಿರುತ್ತದೆ. ಕೆಲವು ಬಾರಿ ಈ ನಿದ್ರೆಯೇ ಪ್ರಾಣಿಗಳ ಪ್ರಾಣಗಳನ್ನು ಅಪಹರಿಸಲೂಬಹುದು.

**ದೇವೇಷ್ವಪಿ ದಧಾರ್ಯೈನಾಂ ನಾನ್ಯೋ ನಾರಾಯಣಾದ್ ಋತೇ ।**
**ಸಖೀ ಸರ್ವಹರಸ್ಯೈಷಾ ಮಾಯಾ ವಿಷ್ಣುಶರೀರಜಾ ॥ 16 ॥**

**ಸೈಷಾ ನಾರಾಯಣಮುಖೇ ದೃಷ್ಟ್ವಾ ಕಮಲಲೋಚನಾ ।**
**ಲೋಕಾನಲ್ಪೇನ ಕಾಲೇನ ಗ್ರಸತೇ ಲೋಕಮೋಹಿನೀ ॥ 17 ॥**

ಈ ಸರ್ವಜ್ಞಾನ ಸಂಪತ್ತನ್ನೂ ಅಪಹರಿಸುವ, ಶ್ರೀವಿಷ್ಣುವಿನ ಮನಸ್ಸಿನಿಂದ ಹುಟ್ಟಿದ ಈ ಭಗವದಿಚ್ಛೆಯೆಂಬ ಮಾಯೆಯ ಸಖಿಯಾದ ಈ ನಿದ್ರಾದೇವಿಯನ್ನು ದೇವತೆಗಳಿಂದಲೂ ತಮ್ಮ ಅಧೀನದಲ್ಲಿಟ್ಟುಕೊಳ್ಳಲಾರರು. ಇದರ ನಿಗ್ರಹ ಕೇವಲ ಭಗವಂತನಿಂದ ಮಾತ್ರ ಸಾಧ್ಯ. ಹರಿಯನುಗ್ರಹ ವಿಶೇಷವಿರುವುದರಿಂದ ಪರಶುಕ್ಲತ್ರಯರನ್ನು ಇದರುಬಾಧಿಸಲಾರದು. ಆದ್ದರಿಂದಲೇ ವಾಯುದೇವರು ಪ್ರಲಯ ಕಾಲದಲ್ಲಿಯೂ ನಿದ್ರಾರಹಿತರಾಗಿದ್ದು ಹರಿಧ್ಯಾನ ಮಾಡುತ್ತಿರುತ್ತಾರೆ. (ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ)

ಶ್ರೀಹರಿಯ ಇಚ್ಛೆಯಂತೆ ಲೋಕವನ್ನೇ ಮೋಹಗೊಳಿಸುವ ಈ ಭಗವದಿಚ್ಛೆಯೆಂಬ ನಿದ್ರೆಯು ಶ್ರೀಹರಿಯು ನಿದ್ರಿಸುವುದನ್ನು ನೋಡಿ ಸಮಸ್ತ ಜಗತ್ತನ್ನೆ ನಿದ್ರೆಯಲ್ಲಿ ಕೆಡಹುವುದು. ಕೆಲವೆ ಕ್ಷಣದಲ್ಲಿ ಇಡೀ ಲೋಕವನ್ನೇ = ಜ್ಞಾನವನ್ನೇ (ಲುಕ್ ಪ್ರಕಾಶೇ) ನುಂಗಿ ಹಾಕುತ್ತಾಳೆ.

**ಏವಮೇಷಾ ಹಿತಾರ್ಥಾಯ ಲೋಕಾನಾಂ ಕೃಷ್ಣವರ್ತ್ಮನಾ ।**
**ಧ್ರಿಯತೇ ಸೇವನೀಯಾ ಹಿ ಪತ್ಯೇವ ಚ ಪತಿವ್ರತಾ ॥ 18 ॥**

**ತಸ್ಯ ವರ್ಷಸಹಸ್ರಾಣಿ ಶಯಾನಸ್ಯ ಮಹಾತ್ಮನಃ ।**
**ಜಗ್ಮುಃ ಕೃತಯುಗಂ ಚೈವ ತ್ರೇತಾ ಚೈವ ಯುಗೋತ್ತಮಮ್ ॥ 19 ॥**
**ಸ ತು ದ್ವಾಪರ ಪರ್ಯಂತೇ ಜ್ಞಾತ್ವಾ ಲೋಕಾನ್ ಸುದುಃಖಿತಾನ್ ।**
**ಪ್ರಾಬುಧ್ಯತ ಮಹಾತೇಜಾಃ ಸ್ತೂಯಮಾನೋ ಮಹರ್ಷಿಭಿಃ ॥ 20 ॥**

ಶ್ರೀಮನ್ನಾರಾಯಣನು ಸಕಲಲೋಕಗಳ ಹಿತಕ್ಕಾಗಿಯೇ ಈ ಮಾಯೆಯನ್ನು ಧಾರಣ ಮಾಡಿರುತ್ತಾನೆ. ಇದನ್ನು ಮುಂದಿನ ಕಾರ್ಯಗಳೆಲ್ಲ ಸುಗಮವಾಗಿ ಸಾಗಲು ಪತಿಯು ಪತಿವ್ರತೆಯನ್ನು ಸೇವಿಸುವಂತೆ ಸೇವಿಸಿದರೆ ಒಳಿತು.

ಹೀಗೆ ಅವ್ಯಯನಾದ ವಿಷ್ಣುವು ಯೋಗ ನಿದ್ರಾಮೀಲಿತಲೋಚನವಾಗಿ ಸಂಪೂರ್ಣ ಜಗತ್ತನ್ನು ನಿದ್ರೆಯಲ್ಲಿ ಮುಳುಗಿಸುತ್ತಾ ಶ್ರಮರಹಿತವಾದ ತನ್ನ ಸ್ವರೂಪದಲ್ಲಿಯೆ ರಮಿಸುತ್ತಿದ್ದನು. (ನಾರಾಯಣ + ಅಶ್ರಮ). ಹೀಗೆ ಮಲಗಿರುವಾಗಲೇ ಸಾವಿರ ವರ್ಷಗಳು ಕಳೆದವು.

ಕೃತ, ತ್ರೇತಾಯುಗಗಳು ಕಳೆದು ದ್ವಾಪರದ ಅಂಚಿನಲ್ಲಿರುವ ಪ್ರಪಂಚದ ಸಮಸ್ತ ಜನರೂ ಅತ್ಯಂತ ದುಃಖದಲ್ಲಿದ್ದಾರೆಂಬ ವಿಷಯ ತಿಳಿದು ಮಹರ್ಷಿಗಳ ಸ್ತೋತ್ರದಿಂದ ಎದ್ದಂತೆ ನಟಿಸಿದನು.

*ಋಷಯ ಊಚು–*

ಜಹೀಹಿ ನಿದ್ರಾಂ ಸಹಜಾಂ ಭುಕ್ತಪೂರ್ವಾಮಿವ ಸ್ರಜಮ್ ।
ಇಮೇ ತೇ ಬ್ರಹ್ಮಣಾ ದೇವಾತ ವ ದರ್ಶನಕಾಂಕ್ಷಿಣಃ ॥ 21 ॥

ಇಮೇ ತ್ವಾಂ ಬ್ರಹ್ಮವಿದ್ವಾಂಸೋ ಬ್ರಹ್ಮಸಂಸ್ತವವಾದಿನಃ ।
ವರ್ಧಯಂತಿ ಹೃಷೀಕೇಶ ಋಷಯಃ ಸಂಶಿತವ್ರತಾಃ ॥ 22 ॥

ಶ್ರುಣು ವಿಷ್ಣೋ ಶುಭಾ ವಾಚೋ ಭೂರ್ವ್ಯೋಮಾಗ್ನ್ಯನಿಲಾಂಭಸಾಮ್ ।
ಇಮೇ ತ್ವಾಂ ಸಪ್ತಮುನಯಃ ಸಹಿತಾಃ ಮುನಿಮಂಡಲೈಃ ।
ಸ್ತುವಂತಿ ದೇವ ದಿವ್ಯಾಭಿಃ ಗೇಯಾಭಿಃ ಗೀರ್ಭಿರಂಜಸಾ ॥ 23 ॥

ಉತ್ತಿಷ್ಠ ಶತಪತ್ರಾಕ್ಷ ಪದ್ಮನಾಭ ಮಹಾದ್ಯುತೇ ।
ಕಾರಣಂ ಕಿಂಚಿದುತ್ಪನ್ನಂ ದೇವಾನಾಂ ಕಾರ್ಯಗೌರವಾತ್ ॥ 24 ॥

ಭಗವಂತನೇ! ಹಿಂದೆ ಧಾರಣ ಮಾಡಿ ಉಪಯೋಗಿಸಿದ ಪುಷ್ಪಮಾಲೆಯನ್ನು ತ್ಯಜಿಸುವಂತೆ ಈ ಯೋಗನಿದ್ರೆಯನ್ನು ಬಿಟ್ಟೇಳು. ಬ್ರಹ್ಮದೇವನೊಂದಿಗೆ ಬಂದಿರುವ ಇಂದ್ರಾದಿದೇವತೆಗಳೂ ನಿನ್ನ ದರ್ಶನಾಕಾಂಕ್ಷಿಗಳಾಗಿದ್ದಾರೆ. ಉತ್ತಮವ್ರತನಿಷ್ಠರೂ ಬ್ರಹ್ಮವೇತ್ತರೂ ಆದ ಬ್ರಹ್ಮರ್ಷಿಗಳೆಲ್ಲರೂ ವೇದೋಕ್ತ ಮಂತ್ರ ಘೋಷಗಳೊಂದಿಗೆ ನಿನ್ನ ಮಹಿಮೆಗಳನ್ನು ಹಾಡುತ್ತಿದ್ದಾರೆ. ಪೃಥಿವ್ಯಾದಿ ಪಂಚಭೂತಾಭಿಮಾನಿಗಳಾದ ದೇವತೆಗಳ ಶುಭಕರ ಮಾತುಗಳನ್ನಾಲಿಸು. ಈ ಸಪ್ತರ್ಷಿಗಳ ಗೇಯವಾದ ಗಾನವನ್ನು ಕೇಳು.

ಭಗವಂತನೇ, ಕಮಲಪತ್ರಾಕ್ಷ ಮಹಾಕಾಂತಿಯುಕ್ತ ಪದ್ಮನಾಭನೇ, ನಿದ್ರೆಯಿಂದೇಳು. ಈಗ ದೇವತೆಗಳ ಕಾರ್ಯಗೌರವದ ನಿಮಿತ್ತವಾಗಿ ನಿನ್ನನ್ನು ಎಚ್ಚರಿಸಿದ್ದೇವೆ.

**ಸ ಸಂಕ್ಷಿಪ್ಯ ಜಲಂ ಸರ್ವಂ ತಿಮಿರೌಘಂ ವಿದಾರಯನ್ ।**
**ಉದತಿಷ್ಠದ್ ಹೃಷಿಕೇಶಃ ಶ್ರಿಯಾ ಪರಮಯಾ ಜ್ವಲನ್ ॥ 25 ॥**

**ಸ ದದರ್ಶ ಸುರಾನ್ ಸರ್ವಾನ್ ಸಮೇತಾನ್ ಸಪಿತಾಮಹಾನ್ ।**
**ವಿವಕ್ಷತಃ ಪ್ರಕ್ಷುಭಿತಾನ್ ಜಗದರ್ಥೇ ಸಮಾಗತಾನ್ ॥ 26 ॥**

*ಶ್ರೀಭಗವಾನುವಾಚ –*

**ಕುತೋ ವೋ ವಿಗ್ರಹೋ ದೇವಾಃ ಕುತೋ ವಾ ಭಯಮಾಗತಮ್ ।**
**ಕಸ್ಯ ವಾ ಕೇನ ವಾ ಕಾರ್ಯಂ ಕಿಂ ವಾ ಮಯಿ ನ ವರ್ತತೇ ॥ 27 ॥**

ವೈಶಂಪಾಯನರು ರಾಜನೇ ದೇವರ್ಷಿಗಳ ಪ್ರಾರ್ಥನೆಯನ್ನು ಕೇಳಿ ತನ್ನ ಸುತ್ತಲೂ ಇದ್ದ ಜಲರಾಶಿಯನ್ನು ಸಂಕ್ಷೇಪಗೊಳಿಸಿ, ದುರ್ಗಾದೇವಿಯಿಂದ ಆವರಿಸಲ್ಪಟ್ಟ ಕತ್ತಲೆಯನ್ನು ಸರಿಸುತ್ತಾ ಉಜ್ವಲಕಾಂತಿಯಿಂದ ಮೇಲೆದ್ದರು.

ಅವನ ಮುಂದೆ ವಿನೀತಿಕಂಧರರಾಗಿರುವ ಬ್ರಹ್ಮ ಸಹಿತರಾಗಿರುವ ಸಕಲ ದೇವತೆಗಳನ್ನು ನೋಡಿದನು. ಅವರೆಲ್ಲರೂ ಉದ್ವಿಗ್ನರಾಗಿದ್ದರು. ಲೋಕಹಿತಕ್ಕಾಗಿಯೇ ಅವರು ಬಂದಿರುವರೆಂದು ತಿಳಿದನು.

ನಿದ್ರೆಯಿಂದ ವಿಶ್ರಾಂತಿ ಹೊಂದಿದ ನೇತ್ರಗಳಂತೆ ತನ್ನನ್ನು ತೋರಿಸುತ್ತಾ, ದೇವತೆಗಳನ್ನುದ್ಧೇಶಿಸಿ ತತ್ವಾರ್ಥಯುಕ್ತವೂ, ಧರ್ಮಸಮ್ಮತವೂ, ಯುಕ್ತಿಯುಕ್ತವೂ ಆಗಿರುವ ಮಾತುಗಳನ್ನಾಡಿದನು.

ದೇವತೆಗಳೇ ! ಯಾರಿಂದ ಯುದ್ಧ ಮಾಡಬೇಕಾಗಿದೆ? ನಿಮಗೆ ಯಾರಿಂದ ಭಯವೇರ್ಪಟ್ಟಿದೆ? ಯಾವ ದೇವತೆಗೆ ಏನು ಅವಶ್ಯಕತೆಯಿದೆ? ಯಾರಿಗೆ ನನ್ನಿಂದ ಏನು ಉಪಕಾರವಾಗಬೇಕಿದೆ? (ಕೇನ = ವಿಷ್ಣುನಾ) ಯಾವುದು ತಾನೇ ನನ್ನಲ್ಲಿಲ್ಲ? ಎಲ್ಲವು ಇದೆಯಷ್ಟೆ!

**ಕಿಂ ಖಲ್ವಕುಶಲಂ ಲೋಕೇ ವರ್ತತೇ ದಾನವೋತ್ಥಿತಮ್ ।**
**ನೃಣಾಮಾಯಾಸಜನನಂ ಶೀಘ್ರಮಿಚ್ಛಾಮಿ ವೇದಿತುಮ್ ॥ 28 ॥**

**ಏಷ ಬ್ರಹ್ಮವಿದಾಂ ಮಧ್ಯೇ ವಿಹಾಯ ಶಯನೋತ್ತಮಂ ।**
**ಶಿವಾಯ ಭವತಾಮರ್ಥೇ ಸ್ಥಿತಃ ಕಿಂ ಕರವಾಣಿ ವಃ ॥ 29 ॥**

ಪ್ರಪಂಚದಲ್ಲಿ ಅಕುಶಲವಾಗುವಂತೆ ದೈತ್ಯರೇನಾದರೂ ಮಾಡಿರುವರೆ? ಅವರಿಂದ ಬಾಧೆವುಂಟಾಗಿಲ್ಲ ತಾನೆ? ಇದನ್ನು ಕೂಡಲೇ ನನಗೆ ತಿಳಿಸಿರಿ. ನಿಮಗೆ ಬಂದ ಭಯವಾವುದು? ಯಾರಿಂದ ? ಎಂದು ತಿಳಿಸಿರಿ.

ಇಷ್ಟು ಮಂದಿ ಬ್ರಹ್ಮಜ್ಞಾನಿಗಳ ಮಧ್ಯೆಯಿರುವ ನಾನು ನನ್ನ ಉತ್ತಮವಾದ ಶೇಷಶಯನ ಬಿಟ್ಟು ನಿಮ್ಮೆಲ್ಲರ ಕಾರ್ಯ ನಡೆಸಿಕೊಡಲೆಂದೇ ಕಟಿಬದ್ಧನಾಗಿ ನಿಂತಿದ್ದೇನೆ. ನಿಮಗೆ ಯಾವ ಕಾರ್ಯ ಸಾಧಿಸಿಕೊಡಲೆಂದು ತಿಳಿಸಿ ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶ್ರೀಹರಿಯ ನಿದ್ರೆಯಿಂದ ಉತ್ಥಾನವೆಂಬಲ್ಲಿ
ಐವತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




# ಅಥ ಏಕಪಂಚಾಶತ್ತಮೋಽಧ್ಯಾಯಃ

## ದೇವತೆಗಳ ನಾರಾಯಣ ಸ್ತುತಿ

*ವೈಶಂಪಾಯನ ಉವಾಚ –*

**ತಚ್ಛ್ರುತ್ವಾ ವಿಷ್ಣುಗದಿತಂ ಬ್ರಹ್ಮಾ ಲೋಕಪಿತಾಮಹಃ ।**
**ಉವಾಚ ಪರಮಂ ವಾಕ್ಯಂ ಹಿತಂ ಸರ್ವದಿವೌಕಸಾಮ್ ॥ 1 ॥**

**ನಾಸ್ತಿ ಕಿಂಚಿದ್ ಭಯಂ ವಿಷ್ಣೋ ಸುರಾಣಾಮಸುರಾಂತಕ ।**
**ಯೇಷಾಂ ಭವಾನ್ ಅಭಯದಃ ಕರ್ಣಧಾರೋ ರಣೇ ರಣೇ ॥ 2 ॥**

**ಶಕ್ರೇ ಜಯತಿ ದೇವೇಶೇ ತ್ವಯಿ ಚಾಸುರಸೂದನೇ ।**
**ಧರ್ಮೇ ಪ್ರಯತಮಾನಾನಾಂ ಮಾನವಾನಾಂ ಕುತೋಭಯಂ ॥ 3 ॥**

ವೈಶಂಪಾಯರು–ಜನಮೇಜಯನೇ ! ಭಗವಂತನು ಹೇಳಿದ ಮಾತನ್ನು ಕೇಳಿದ ಲೋಕಪಿತಾಮಹ ಚತುರ್ಮುಖನು – ಸಮಸ್ತದೇವತೆಗಳಿಗೂ ಹಿತಕರವಾದ ಮಾತನ್ನು ಹೇಳಲುಪಕ್ರಮಿಸಿದನು.

ಮಹಾವಿಷ್ಣುವೆ! ಅಸುರಾಂತಕರನಾದ ಅಭಯ ಪ್ರದಾತನಾಗಿ ನೀನಿರುವಾಗ ನಮಗೆ ಭಯವೆಲ್ಲಿಂದ? ಈ ಹಿಂದೆಯೂ ಪ್ರತಿಯೊಂದು ಯುದ್ಧದ ಸಂದರ್ಭವೇರ್ಪಟ್ಟಾಗ ಮಹಾನದಿಯನ್ನು ನಾವಿಕನು ದಾಟಿಸುವಂತೆ ಯುದ್ಧ ಸಿಂಧುವಿನಿಂದ ನೀನು ರಕ್ಷಣೆ ಮಾಡಿರುವಿ.

ದೇವತಾಧಿಪತಿಯಾದ ದೇವೇಂದ್ರನು ನಿನ್ನ ಅನುಗ್ರಹದಿಂದ ಸರ್ವಯುದ್ಧಗಳಲ್ಲಿಯೂ ಜಯುವನ್ನೇ ಹೊಂದುತ್ತಿರುವಾಗ, ಅಸುರಾಂತಕನಾದ ನೀನು ಮಾನವಕೋಟಿಯ ರಕ್ಷಕನಾಗಿರುವಾಗ

ಧರ್ಮಮಾರ್ಗದಲ್ಲಿಯೇ ನಡೆಯಬೇಕೆಂಬ ಸಜ್ಜನರಿಗೆ ಭಯವಾದರೂ ಎಲ್ಲಿಂದ?

**ಸತ್ಯೇ ಧರ್ಮೇ ಚ ನಿರತಾನ್ ಮಾನವಾನ್ ವಿಗತಜ್ವರಾನ್ ।**
**ನಾಕಾಲೇ ಧರ್ಮಿಣೋ ಮೃತ್ಯುಃ ಶಕ್ನೋತಿ ಪ್ರಸಮೀಕ್ಷಿತುಮ್ ॥ 4 ॥**
**ಮಾನವಾನಾಂ ಚ ಪತಯಃ ಪಾರ್ಥಿವಾಶ್ಚ ಪರಸ್ಪರಮ್ ।**
**ಷಡ್‌ಭಾಗ ಮುಪಭುಂಜಾನಾಃ ನ ಭಯಂ ಕುರ್ವತೇ ಮಿಥಃ ॥ 5 ॥**

ಯಾವ ಮಾನವರು ಸತ್ಯ ಧರ್ಮಗಳಲ್ಲಿಯೇ ಆಸಕ್ತರಾಗಿರುವರೋ ಅಂತಹ ಧಾರ್ಮಿಕರ ಕಡೆಗೆ ಮೃತ್ಯುದೇವತೆಯು ಅಕಾಲದಲ್ಲಿ ಕಣ್ಣೆತ್ತಿ ನೋಡಲೂ ಅಸಮರ್ಥಳಾಗಿರುವಳು.

ಇನ್ನು ರಾಜರುಗಳು ಪ್ರಜೆಗಳ ಆದಾಯದಲ್ಲಿ ಷಷ್ಟಾಂಶ ಭಾಗವನ್ನು ಪಡೆದು ಪರಸ್ಪರವಾಗಿ ಜಗಳವಾಡದೆ, ಪ್ರಜಾಹಿತಚಿಂತಕರಾಗಿರುವರು. ಪ್ರಜೆಗಳೂ ಸಹ ರಾಜರು ತಮ್ಮನ್ನು ಚೆನ್ನಾಗಿ ನೋಡುತ್ತಿರುವುದರಿಂದ ಆರನೇಭಾಗ ಹೋಯಿತೆಂದು ದುಃಖ ಪಡೆದೆ ರಾಜರನ್ನು ನಿಂದಿಸುತ್ತಿಲ್ಲ.

ಕಾರಣಾಂತರದಿಂದ ಕೋಶಾಗಾರಗಳು ಖಾಲಿಯಾದರೆ, ಪ್ರಜೆಗಳ ಮೇಲೆ ನ್ಯಾಯ ಮಾರ್ಗದಲ್ಲಿ ತೆರಿಗೆ ವಿಧಿಸಿ ಕೋಶಾಗಾರಗಳನ್ನು ತುಂಬಿಸಿಕೊಳ್ಳುವರು. ರಾಜರು ಯಾವುದೇ ರೀತಿಯ ಹೊರಲಾಗದ ತೆರಿಗೆಗಳಿಂದ ಕಷ್ಟಕ್ಕೀಡು ಮಾಡುತ್ತಿಲ್ಲ. ರಾಜರೆಲ್ಲರೂ ಕ್ಷಮಾಗುಣ-ಯುಕ್ತರಾಗಿದ್ದು ತಮ್ಮ ತಮ್ಮ ಪ್ರದೇಶಗಳನ್ನು ಪಾಲಿಸುತ್ತಿರುವರು. ತಪ್ಪು ಮಾಡಿದವರಿಗೂ ಸುಲಭವಾದ ಶಿಕ್ಷೆ ನೀಡುವರೆ ಹೊರತು ಕಠಿಣ ಶಿಕ್ಷೆಯಿರುವುದಿಲ್ಲ. ನಾಲ್ಕು ವರ್ಣದವರಿಗೂ ಅವರವರ ಯೋಗ್ಯತೆಗೆ ತಕ್ಕಂತೆ ರಕ್ಷಣೆ ದೊರೆಯುತ್ತಿದೆ. ಧನುರ್ವೇದ ಪಾರಂಗತರೂ, ವೇದವೇದಾಂತ ನಿಷ್ಣಾತರೂ ಕಾಲಕಾಲಕ್ಕೆ ಸರಿಯಾಗಿ ಯಜ್ಞಯಾಗಾದಿ ಜಗಚ್ಚಕ್ರಗಳಿಂದ ದೇವತೆಗಳನ್ನು ಸಂತೋಷಪಡಿಸುವವರೂ, ವ್ರತಗಳಲ್ಲಿ ದೀಕ್ಷೆ, ಬ್ರಹ್ಮಚರ್ಯ, ಮೊದಲಾದವುಗಳಿಂದ ಋಷಿಋಣ ರಹಿತರಾಗಿರುವರು. ಶ್ರಾದ್ಧಾದಿಗಳಿಂದ ಪಿತೃದೇವತೆಗಳನ್ನು, ಈ ರಾಜರಿಗೆ ವೈದಿಕ, ಲೌಕಿಕ, ಧರ್ಮಶಾಸ್ತ್ರೋಕ್ತ ಕರ್ಮಗಳನ್ನು ಸರಿಯಾಗಿ ತಿಳಿದಿರುವರು. ಇವರಿಗೆ ತಿಳಿಯದ ವಿಷಯವೆ ಇಲ್ಲವೆನ್ನಬಹುದು.

**ತೇ ಪರಾವರ ದೃಷ್ಟಾರ್ಥಾಃ ಮಹರ್ಷಿಸಮತೇಜಸಃ ।**
**ಭೂಯಃ ಕೃತಯುಗಂ ಕರ್ತುಂ ಉತ್ಸಹಂತೇ ನರಾಧಿಪಾಃ ॥ 6 ॥**

**ತೇಷಮೇವ ಪ್ರಭಾವೇಣ ಶಿವಂ ವರ್ಷತಿ ವಾಸವಃ ।**
**ನಿರುತ್ಪಾತಾ ಚ ವಸುಧಾ ಸುಪ್ರಚಾರಾಶ್ಚ ಖೇ ಗ್ರಹಾಃ ॥ 7 ॥**

**ಚಂದ್ರಮಾಶ್ಚ ಸನಕ್ಷತ್ರಃ ಸೌಮ್ಯಂ ಚರತಿ ಯೋಗತಃ ।**
**ಹವ್ಯೈಶ್ಚ ವಿವಿಧೈಃ ತೃಪ್ತಃ ಶುಭಗಂಧೋ ಹುತಾಶನಃ ॥ 8 ॥**

ಪರಾವರ ತತ್ವಗಳನ್ನು ತಿಳಿದವರೂ, ಮಹರ್ಷಿ ಸದೃಶ ತೇಜಸ್ವಿಗಳೂ ತಮ್ಮ ವ್ಯವಹಾರದಿಂದ ಪುನಃ ಕೃತಯುಗವನ್ನಾಗಿಸಲು ಪ್ರಯತ್ನ ಮಾಡುವಂತಿರುವರು. ಇವರ ಯಜ್ಞಯಾಗಾದಿ ಪುಣ್ಯದಿಂದಾಗಿ ಸಂತುಷ್ಟನಾದ ಇಂದ್ರದೇವನು ಅವಶ್ಯವಿದ್ದಷ್ಟು ಸುಖಕರ ಮಳೆಯನ್ನು ಸುರಿಸುತ್ತಾನೆ. ವಾಯುವು ಸುಖಕರವಾಗಿ ಧೂಳೇಳದಂತೆ ಬೀಸುವನು. ಭೂಮಿಯಲ್ಲಿ ಯಾವುದೇ ರೀತಿಯ ಉತ್ಪಾತಗಳ ಕುರುಹಿಲ್ಲ. ಗ್ರಹಗಳೆಲ್ಲವೂ ಅತಿಚಾರ-ವಕ್ರಾಚಾರವಿಲ್ಲದೆ ಯೋಗ್ಯವಾಗಿ ಸಂಚರಿಸುತ್ತವೆ. ಚಂದ್ರನು ಸಾಮಗತಿಯಲ್ಲಿ ಯಥೋಕ್ತ ರೀತಿಯಲ್ಲಿ ಸಂಚರಿಸುವನು.

ಅಗ್ನಿದೇವನು ನಾನಾ ವಿಧ ಆಹುತಿ ಸ್ವೀಕರಿಸುತ್ತಾ ಸಂತೋಷವಾಗಿರುವನು ಯಾವುದೇ ಅಗ್ನಿಪ್ರಮಾದಗಳಿಗೆ ಅವಕಾಶವಿತ್ತಿಲ್ಲವು.

ಹೀಗೆ ರಾಜರೂ, ಪ್ರಜೆಗಳೂ ಧರ್ಮದಿಂದಿರುವಾಗ ಯಜ್ಞಯಾಗಾದಿ ಧಾರ್ಮಿಕ ಕ್ರಿಯೆ ದಿನಂಪ್ರತಿ ಅಭಿವೃದ್ಧಿ ಹೊಂದುತ್ತಿವೆ. ಧರ್ಮಿಷ್ಟ ರಾಜ್ಯದಲ್ಲಿ ಮೃತ್ಯುವಿನ ಕಾಲನ ಭಯವಿರಲಾರದಷ್ಟೇ? ರಾಜರಲ್ಲಿ ವೈಮನಸ್ಯವಿಲ್ಲದೆ ಇರುವಾಗ ಯುದ್ಧದ ಪ್ರಸಂಗಗಳೂ ಇರುವುದಿಲ್ಲ. ಬಲಿಷ್ಠರಾದ ರಾಜರುಗಳಲ್ಲಿ ಲೆಕ್ಕವಿಲ್ಲದಷ್ಟು ಸೈನ್ಯವಾಹಿನಿಯಿರುವುದು. ಇದರ ಭಾರದಿಂದಾಗಿ ಭೂದೇವಿಯು ಸಂಕಟಪಡುತ್ತಿರುವಳು.

**ಸೇಯಂ ಭಾರ ಪರಿಶ್ರಾಂತಾ ಪೀಡ್ಯಮಾನಾ ನರಾಧಿಪೈಃ ।**
**ಪೃಥಿವೀ ಸಮನುಪ್ರಾಪ್ತಾ ನೌರಿವಾಸನ್ನ ವಿಪ್ಲವಾ ॥ 9 ॥**

**ಕ್ಷತ್ರಿಯಾಣಾಂ ವಪುರ್ಭಿಶ್ಚ ತೇಜಸಾ ಚ ಬಲೇನ ಚ ।**
**ನೃಣಾಂ ಚ ರಾಷ್ಟ್ರೈಃ ವಿಸ್ತೀರ್ಣೈಃ ಶ್ರಾಮ್ಯತೀವ ವಸುಂಧರಾ ॥ 10 ॥**

ಧರ್ಮಮಾರ್ಗದಲ್ಲಿಯೇ ನಡೆಯಬೇಕೆಂಬ ಸಜ್ಜನರಿಗೆ ಭಯವಾದರೂ ಎಲ್ಲಿಂದ?

**ಸತ್ಯೇ ಧರ್ಮೇ ಚ ನಿರತಾನ್ ಮಾನವಾನ್ ವಿಗತಜ್ವರಾನ್ ।**
**ನಾಕಾಲೇ ಧರ್ಮಿಣೋ ಮೃತ್ಯುಃ ಶಕ್ನೋತಿ ಪ್ರಸಮೀಕ್ಷಿತುಮ್ ॥ 4 ॥**
**ಮಾನವಾನಾಂ ಚ ಪತಯಃ ಪಾರ್ಥಿವಾಶ್ಚ ಪರಸ್ಪರಮ್ ।**
**ಷಡ್‌ಭಾಗ ಮುಪಭುಂಜಾನಾಃ ನ ಭಯಂ ಕುರ್ವತೇ ಮಿಥಃ ॥ 5 ॥**

ಯಾವ ಮಾನವರು ಸತ್ಯ ಧರ್ಮಗಳಲ್ಲಿಯೇ ಆಸಕ್ತರಾಗಿರುವರೋ ಅಂತಹ ಧಾರ್ಮಿಕರ ಕಡೆಗೆ ಮೃತ್ಯುದೇವತೆಯು ಅಕಾಲದಲ್ಲಿ ಕಣ್ಣೆತ್ತಿ ನೋಡಲೂ ಅಸಮರ್ಥಳಾಗಿರುವಳು.

ಇನ್ನು ರಾಜರುಗಳು ಪ್ರಜೆಗಳ ಆದಾಯದಲ್ಲಿ ಷಷ್ಟಾಂಶ ಭಾಗವನ್ನು ಪಡೆದು ಪರಸ್ಪರವಾಗಿ ಜಗಳವಾಡದೆ, ಪ್ರಜಾಹಿತಚಿಂತಕರಾಗಿರುವರು. ಪ್ರಜೆಗಳೂ ಸಹ ರಾಜರು ತಮ್ಮನ್ನು ಚೆನ್ನಾಗಿ ನೋಡುತ್ತಿರುವುದರಿಂದ ಆರನೇಭಾಗ ಹೋಯಿತೆಂದು ದುಃಖ ಪಡೆದೆ ರಾಜರನ್ನು ನಿಂದಿಸುತ್ತಿಲ್ಲ.

ಕಾರಣಾಂತರದಿಂದ ಕೋಶಾಗಾರಗಳು ಖಾಲಿಯಾದರೆ, ಪ್ರಜೆಗಳ ಮೇಲೆ ನ್ಯಾಯ ಮಾರ್ಗದಲ್ಲಿ ತೆರಿಗೆ ವಿಧಿಸಿ ಕೋಶಾಗಾರಗಳನ್ನು ತುಂಬಿಸಿಕೊಳ್ಳುವರು. ರಾಜರು ಯಾವುದೇ ರೀತಿಯ ಹೊರಲಾಗದ ತೆರಿಗೆಗಳಿಂದ ಕಷ್ಟಕ್ಕೀಡು ಮಾಡುತ್ತಿಲ್ಲ. ರಾಜರೆಲ್ಲರೂ ಕ್ಷಮಾಗುಣ-ಯುಕ್ತರಾಗಿದ್ದು ತಮ್ಮ ತಮ್ಮ ಪ್ರದೇಶಗಳನ್ನು ಪಾಲಿಸುತ್ತಿರುವರು. ತಪ್ಪು ಮಾಡಿದವರಿಗೂ ಸುಲಭವಾದ ಶಿಕ್ಷೆ ನೀಡುವರೆ ಹೊರತು ಕಠಿಣ ಶಿಕ್ಷೆಯಿರುವುದಿಲ್ಲ. ನಾಲ್ಕು ವರ್ಣದವರಿಗೂ ಅವರವರ ಯೋಗ್ಯತೆಗೆ ತಕ್ಕಂತೆ ರಕ್ಷಣೆ ದೊರೆಯುತ್ತಿದೆ. ಧನುರ್ವೇದ ಪಾರಂಗತರೂ, ವೇದವೇದಾಂತ ನಿಷ್ಣಾತರೂ ಕಾಲಕಾಲಕ್ಕೆ ಸರಿಯಾಗಿ ಯಜ್ಞಯಾಗಾದಿ ಜಗಚ್ಚಕ್ರಗಳಿಂದ ದೇವತೆಗಳನ್ನು ಸಂತೋಷಪಡಿಸುವವರೂ, ವ್ರತಗಳಲ್ಲಿ ದೀಕ್ಷೆ, ಬ್ರಹ್ಮಚರ್ಯ, ಮೊದಲಾದವುಗಳಿಂದ ಋಷಿಋಣ ರಹಿತರಾಗಿರುವರು. ಶ್ರಾದ್ಧಾದಿಗಳಿಂದ ಪಿತೃದೇವತೆಗಳನ್ನು, ಈ ರಾಜರಿಗೆ ವೈದಿಕ, ಲೌಕಿಕ, ಧರ್ಮಶಾಸ್ತ್ರೋಕ್ತ ಕರ್ಮಗಳನ್ನು ಸರಿಯಾಗಿ ತಿಳಿದಿರುವರು. ಇವರಿಗೆ ತಿಳಿಯದ ವಿಷಯವೆ ಇಲ್ಲವೆನ್ನಬಹುದು.

**ತೇ ಪರಾವರ ದೃಷ್ಟಾರ್ಥಾಃ ಮಹರ್ಷಿಸಮತೇಜಸಃ ।**
**ಭೂಯಃ ಕೃತಯುಗಂ ಕರ್ತುಂ ಉತ್ಸಹಂತೇ ನರಾಧಿಪಾಃ ॥ 6 ॥**
**ತೇಷಮೇವ ಪ್ರಭಾವೇಣ ಶಿವಂ ವರ್ಷತಿ ವಾಸವಃ ।**
**ನಿರುತ್ಪಾತಾ ಚ ವಸುಧಾ ಸುಪ್ರಚಾರಾಶ್ಚ ಖೇ ಗ್ರಹಾಃ ॥ 7 ॥**
**ಚಂದ್ರಮಾಶ್ಚ ಸನಕ್ಷತ್ರಃ ಸೌಮ್ಯಂ ಚರತಿ ಯೋಗತಃ ।**
**ಹವ್ಯೈಶ್ಚ ವಿವಿಧೈಃ ತೃಪ್ತಃ ಶುಭಗಂಧೋ ಹುತಾಶನಃ ॥ 8 ॥**

ಪರಾವರ ತತ್ವಗಳನ್ನು ತಿಳಿದವರೂ, ಮಹರ್ಷಿ ಸದೃಶ ತೇಜಸ್ವಿಗಳೂ ತಮ್ಮ ವ್ಯವಹಾರದಿಂದ ಪುನಃ ಕೃತಯುಗವನ್ನಾಗಿಸಲು ಪ್ರಯತ್ನ ಮಾಡುವಂತಿರುವವರು. ಇವರ ಯಜ್ಞಯಾಗಾದಿ ಪುಣ್ಯದಿಂದಾಗಿ ಸಂತುಷ್ಟನಾದ ಇಂದ್ರದೇವನು ಅವಶ್ಯವಿದ್ದಷ್ಟು ಸುಖಕರ ಮಳೆಯನ್ನು ಸುರಿಸುತ್ತಾನೆ. ವಾಯುವು ಸುಖಕರವಾಗಿ ಧೂಳೇಳದಂತೆ ಬೀಸುವನು. ಭೂಮಿಯಲ್ಲಿ ಯಾವುದೇ ರೀತಿಯ ಉತ್ಪಾತಗಳ ಕುರುಹಿಲ್ಲ. ಗ್ರಹಗಳೆಲ್ಲವೂ ಅತಿಚಾರ-ವಕ್ರಾಚಾರವಿಲ್ಲದೆ ಯೋಗ್ಯವಾಗಿ ಸಂಚರಿಸುತ್ತವೆ. ಚಂದ್ರನು ಸಾಮಗತಿಯಲ್ಲಿ ಯಥೋಕ್ತ ರೀತಿಯಲ್ಲಿ ಸಂಚರಿಸುವನು.

ಅಗ್ನಿದೇವನು ನಾನಾ ವಿಧ ಆಹುತಿ ಸ್ವೀಕರಿಸುತ್ತಾ ಸಂತೋಷವಾಗಿರುವನು ಯಾವುದೇ ಅಗ್ನಿಪ್ರಮಾದಗಳಿಗೆ ಅವಕಾಶವಿತ್ತಿಲ್ಲವು.

ಹೀಗೆ ರಾಜರೂ, ಪ್ರಜೆಗಳೂ ಧರ್ಮದಿಂದಿರುವಾಗ ಯಜ್ಞಯಾಗಾದಿ ಧಾರ್ಮಿಕ ಕ್ರಿಯೆ ದಿನಂಪ್ರತಿ ಅಭಿವೃದ್ಧಿ ಹೊಂದುತ್ತಿವೆ. ಧರ್ಮಿಷ್ಟ ರಾಜ್ಯದಲ್ಲಿ ಮೃತ್ಯುವಿನ ಕಾಲನ ಭಯವಿರಲಾರದಷ್ಟೇ? ರಾಜರಲ್ಲಿ ವೈಮನಸ್ಯವಿಲ್ಲದೆ ಇರುವಾಗ ಯುದ್ಧದ ಪ್ರಸಂಗಗಳೂ ಇರುವುದಿಲ್ಲ. ಬಲಿಷ್ಠರಾದ ರಾಜರುಗಳಲ್ಲಿ ಲೆಕ್ಕವಿಲ್ಲದಷ್ಟು ಸೈನ್ಯವಾಹಿನಿಯಿರುವುದು. ಇದರ ಭಾರದಿಂದಾಗಿ ಭೂದೇವಿಯು ಸಂಕಟಪಡುತ್ತಿರುವಳು.

**ಸೇಯಂ ಭಾರ ಪರಿಶ್ರಾಂತಾ ಪೀಡ್ಯಮಾನಾ ನರಾಧಿಪೈಃ ।**
**ಪೃಥಿವೀ ಸಮನುಪ್ರಾಪ್ತಾ ನೌರಿವಾಸನ್ನ ವಿಪ್ಲವಾ ॥ 9 ॥**
**ಕ್ಷತ್ರಿಯಾಣಾಂ ವಪುರ್ಭಿಶ್ಚ ತೇಜಸಾ ಚ ಬಲೇನ ಚ ।**
**ನೃಣಾಂ ಚ ರಾಷ್ಟ್ರೈಃ ವಿಸ್ತೀರ್ಣೈಃ ಶ್ರಾಮ್ಯತೀವ ವಸುಂಧರಾ ॥ 10 ॥**

**ಪುರೇ ಪುರೇ ನರಪತಿಃ ಕೋಟಿ ಸಂಖ್ಯೈಃ ಬಲೈರ್ವೃತಃ ।**
**ಭೂಮಿಪಾನಾಂ ಸಹಸ್ರೈಶ್ಚ ತೇಷಾಂ ಚ ಬಲಿನಾಂ ಬಲೈಃ ॥ 11 ॥**
**ಕರ್ಮಭೂಮಿಃ ಮನುಷ್ಯಾಣಾಂ ಭೂಮಿರೇಷಾ ವ್ಯಥಾಂ ಗತಾ ।**
**ಯಥಾ ನ ಸೀದೇತ್ ತತ್ ಕಾರ್ಯಂ ಜಗತ್ಯೇಷಾ ಹಿ ಶಾಶ್ವತೀ ॥ 12 ॥**

ರಾಜಮಹಾರಾಜರ ಲೆಕ್ಕವಿಲ್ಲದಷ್ಟು ಸೈನ್ಯವನ್ನು ಹೊಂದಿರುವುದರಿಂದ ಅವರ ಭಾರದಿಂದ ವಸುಂಧರೆಯು ಪೀಡಿತಳಾಗಿರುವಳು. ಜಲಪ್ರವಾಹದಲ್ಲಿ ಮುಳುಗಿ ಹೋಗಲಿರುವ ದೋಣಿಯಂತೆ ಸೈನ್ಯ ಪ್ರವಾಹದಲ್ಲಿ ಭೂಮಿಯು ಮುಳುಗುತ್ತಿರುವಳಂತೆ ಭಾಸಮಾನಳಾಗುತ್ತಿದ್ದಾಳೆ. ಕ್ಷತ್ರಿಯರ ದೇಹ ತೇಜಸ್ಸು ಬಲಗಳಿಂದಾಗಿ ಶ್ರಮಪಡುತ್ತಿರುವಳಂತೆ ಕಾಣುತ್ತಾಳೆ. ಅತ್ಯಂತ ಭಾರದಿಂದ ಆಕುಲಗೊಂಡಿರುವ ಭೂಮಿಯು ನಿರಂತರ ಬೆವರನ್ನು ಸುರಿಸುತ್ತಿರುವಳು. ಪ್ರತಿಯೊಂದು ಪತ್ತನದ ಅಧಿಪತಿರಾಜನು ಕೋಟಿ ಕೋಟಿ ಸೇನವಾಹಿನಿಯಿಂದ ಕೂಡಿದ್ದಾನೆ. ಒಂದೊಂದು ರಾಷ್ಟ್ರದಲ್ಲಿಯೂ ಲಕ್ಷೋಪಲಕ್ಷ ಗ್ರಾಮಗಳು ಹುಟ್ಟುಕೊಂಡಿವೆ. ಅನೇಕ ರಾಷ್ಟ್ರಗಳಿಂದಲೂ, ಗ್ರಾಮಗಳಿಂದಲೂ ಅವರ ಸೈನಿಕರಿಂದಲೂ, ಪ್ರಜೆಗಳಿಂದಲೂ ಭೂಮಿ ತುಂಬಿ ಹೋಗಿದೆ.

ಭೂಮಿಯಲ್ಲಿ ಎಲ್ಲಿ ನೋಡಿದರೂ ಜನನಿಬಿಡವಾಗಿದ್ದು ಜನಜಂಗುಳಿಯಿಲ್ಲದ ಪ್ರದೇಶ ದುರ್ಲಭವೇ ಸರಿ. ಕರ್ಮಭೂಮಿಯಾದ ಈ ಭೂದೇವಿಯು ಭಾರದಿಂದಾಗಿ ಕಷ್ಟಪಡುತ್ತಿದ್ದಾಳೆ. ಅವಳು ಹೊತ್ತಿರುವ ಭಾರದಿಂದ ಅವಳು ನಾಶ ಹೊಂದದಂತೆ ರಕ್ಷಿಸಬೇಕಾಗಿದೆ.

**ಸೇಯಂ ನಿರಾಮಯಂ ಕೃತ್ವಾ ನಿಶ್ಚೇಷ್ಟಾ ಕಾಲಮಗ್ರತಃ ।**
**ಪ್ರಾಪ್ತಾ ಮಮಾಲಯಂ ವಿಷ್ಣೋ ಭವಾಂಶ್ಚಾಸ್ಯಾಃ ಪರಾಗತಿಃ ॥ 13 ॥**
**ಅಸ್ಯಾ ಹಿ ಪೀಡನೇ ದೋಷೋ ಮಹಾನ್ ಸ್ಯಾನ್ ಮಧುಸೂದನ ।**
**ಕ್ರಿಯಾಲೋಪಶ್ಚ ಲೋಕಾನಾಂ ಪೀಡಿತಂ ಚ ಜಗದ್ ಭವೇತ್ ॥ 14 ॥**
**ಭಾರಾವತಾರಣಾರ್ಥಂ ಹಿ ಮಂತ್ರಯಾಮ ಸಹ ತ್ವಯಾ ॥ 15 ॥**

ಶ್ರೀಮನ್ನಾರಾಯಣನೇ! ನಿರಂತರವಾಗಿ ಭೂಮಿಗೆ ಪೀಡೆವುಂಟಾಗುವುದರಲ್ಲಿ ಮಹಾನ್ ದೋಷವಿದೆ. ಸಕಲ ಕರ್ಮಗಲೂ ಲುಪ್ತವಾಗುತ್ತದೆ. ಇದರಿಂದಾಗಿ ಜಗತ್ತು ಕಷ್ಟಕ್ಕೊಳಗಾಗುತ್ತದೆ. ರಾಜರ ಮಹಾಸೈನ್ಯಗಳ ಜಮಾವಣೆಯಿಂದಾಗಿ ಭೂಮಿಯು ಬಳಲಿರುವಳು. ಸರ್ವಂ ಸಹಳಾದರೂ, ಭಾರದಿಂದ

ಕುಸಿಯುತ್ತಿರುವಳು. ಇವಳ ಕಷ್ಟಗಳೆಲ್ಲವನ್ನೂ ಇವಳ ಮುಖದಿಂದಲೇ ಕೇಳಿ ತಿಳಿದಿದ್ದೇವೆ. ಇದನ್ನೂ ನಿನ್ನ ಮುಂದೆ ಪ್ರಸ್ತಾಪಿಸಿದ್ದೇವೆ. ಅವಳು ಭಾರದಿಂದಾಗಿ ನಾಶವಾಗದಂತೆ ಇರಲು ಯಾವುದಾದರೂ ಉಪಾಯವನ್ನು ಮನಗಾಣಬೇಕಿದೆ.

ಈಗ ಭೂಮಂಡಲದಲ್ಲಿರುವ ಸಮಸ್ತ ರಾಜರುಗಳು ಸನ್ಮಾರ್ಗದಲ್ಲಿಯೇ ಇರುವರು. ಮೂರೂ ವರ್ಣದವರೂ ಸಹ ಬ್ರಾಹ್ಮಣರಿಗೆ ಗೌರವ ನೀಡುತ್ತಿರುವರು.

**ಸರ್ವಂ ಸತ್ಯಪರಂ ವಾಕ್ಯಂ ವರ್ಣಾ ಧರ್ಮಪರಾಸ್ತಥಾ ।**
**ಸರ್ವೇ ವೇದಪರಾಃ ವಿಪ್ರಾಃ ಸರ್ವೇ ವಿಪ್ರಪರಾ ನರಾಃ ॥ 16 ॥**

**ಏವಂ ಜಗತಿ ವರ್ತಂತೇ ಮನುಷ್ಯಾ ಧರ್ಮಕಾರಣಾತ್ ।**
**ಯಥಾಧರ್ಮವಧೋ ನ ಸ್ಯಾತ್ ತಥಾ ಮಂತ್ರಃ ಪ್ರವರ್ತ್ಯತಾಮ್ ।**
**ಏತಾವದುಕ್ತ್ವಾ ವಿಶ್ವಾತ್ಮಾ ವಿರರಾಮ ಮಹಾದ್ಯುತಿಃ ॥ 17 ॥**

ಈ ಪ್ರಸ್ತುತ ಮನುಷ್ಯರ ಮಾತುಗಳೆಲ್ಲ ಸತ್ಯಪರವಾಗಿವೆ. ಮಿಥ್ಯಾ ಪರವಾಗಿಲ್ಲ. ಸಕಲ ವರ್ಣದವರೂ ತಮ್ಮ ತಮ್ಮ ಧರ್ಮದಲ್ಲಿ ಆಸಕ್ತರಾಗಿರುವರು. ಬ್ರಾಹ್ಮಣರಂತೂ ತಮಗೆ ವಿಶೇಷ ಕರ್ಮವೆನಿಸಿದ ನಿರಂತರ-ವೇದಾಧ್ಯಯನದಲ್ಲಿ ನಿರಂತರರಾಗಿರುವರು. ಬ್ರಾಹ್ಮಣರ ಆದೇಶದಂತೆ ಸರ್ವರೂ ನಡೆಯುತ್ತಿರುವರು. ಹೀಗೆ ಸಮಸ್ತ ಲೋಕವು ಧರ್ಮಿಷ್ಠರಾಗಿರುವಾಗ ಧರ್ಮಕ್ಕೆ ಹಾನಿಯಾಗದಂತೆ ಭೂಭಾರ ಕಡಿಮೆಯಾಗುವಂತೆಯೂ ಒಂದು ಉಪಾಯ ಹುಡುಕಬೇಕಾಗಿದೆ.

ಇದೊಂದು ಸತ್ವಥವೇ ಆಗಿದ್ದು ಧರ್ಮವೇ ಇದರ ಉತ್ತಮ ಸಾಧನವು. ಭೂಮಿಯ ಭಾರವನ್ನಿಳುಹಲು ಸಕಲ ರಾಜರ ವಧೆ ಆಗಲೇಬೇಕಾಗಿದೆ. ಅದಕ್ಕಾಗಿ ಮಂತ್ರಾಲೋಚನೆ ನಡೆಸಲು ಸರಿಯಾದ ಸ್ಥಳ ಮೇರುಪರ್ವತವು. ಅಲ್ಲಿಗೆ ನೀನು ಬಂದರೆ ಒಳಿತು. ಹೀಗೆ ಭೂಮಿಯೊಡನೆ ಬಂದಿದ್ದ ಬ್ರಹ್ಮದೇವನು ಅರುಹಿದನು.

**ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ**
**ದೇವತೆಗಳ ನಾರಾಯಣ ಸ್ತುತಿವೆಂಬಲ್ಲಿ**
**ಐವತ್ತೊಂದನೆಯ ಅಧ್ಯಾಯವು**
**॥ ಶ್ರೀಕೃಷ್ಣಾರ್ಪಣಮಸ್ತು ॥**

ಹರಿಪರ್ವ  ಹರಿಪರ್ವ

## ಅಥ ದ್ವಿಪಂಚಾಶತ್ತಮೋಽಧ್ಯಾಯಃ

*ವೈಶಂಪಾಯನ ಉವಾಚ –*

**ಬಾಢಮಿತ್ಯೇವ ಸಹ ತೈಃ ದುರ್ದಿನಾಂಭೋದ ನಿಸ್ವನಃ ।**
**ಪ್ರತಸ್ಥೇ ದುರ್ದಿನಾಕಾರಃ ಸುದುರ್ದಿನ ಇವಾಚಲಃ ॥ 1 ॥**

**ಸಮುಕ್ತಾಮಣಿ ವಿದ್ಯೋತಂ ಸಚಂದ್ರಾಂಭೋದ ವರ್ಚಸಮ್ ।**
**ಸಜಟಾಮಂಡಲಂ ಕೃತ್ಸ್ನಂ ಸ ಬಿಭ್ರತ್ ಶ್ರೀಧರೋ ಹರಿಃ ॥ 2 ॥**

ಶ್ರೀಮನ್ನಾರಾಣನು – ಬ್ರಹ್ಮದೇವರ ಮಾತಿಗೆ ಹಾಗೆ ಆಗಲಿ! ಎಂದು ಹೇಳುತ್ತಾ ಅವರೊಂದಿಗೆ ಮೇರುವಿಗೆ ಹೊರಡಲುನುವಾದನು. ಅವನ ವಾಣಿಯು ಮಳೆಗಾಲದ ಮೇಘದಂತೆ ಗಂಭೀರವಾಗಿದ್ದಿತು. ಅವನ ದೇಹವಾದರೂ ನೀಲಮೇಘಶ್ಯಾಮಲವಾಗಿದ್ದರಿಂದ ಮೇಘಯುಕ್ತ ಪರ್ವತದಂತೆ ಕಾಣುತ್ತಿದ್ದನು. ಅವನ ಜಟಾಮಂಡಲವು ಮುತ್ತಿನಮಣಿಗಳಿಂದ ಅಲಂಕೃತವಾಗಿ, ಕಪ್ಪಾದ ಮೋಡಗಳಲ್ಲಿ ಬಿಳಿಯಾದ ಚಂದ್ರನ ಕಾಂತಿಯಂತಿತ್ತು.

ಅವನ ವಿಶಾಲವೃಕ್ಷಸ್ಸಿನಲ್ಲಿದ್ದ ಬಿಳಿರೋಮರಾಜಿಗಳ ಸುಳಿಯಾದ ಶ್ರೀವತ್ಸಚಿಹ್ನೆಯು ಪ್ರಕಾಶಮಾನವಾಗಿತ್ತು.

ಹಳದಿ ಪೀತಾಂಬರ ಧರಿಸಿರುವ ಸಮಸ್ತಲೋಕಗಳಿಗೆ ಗುರುಗಳಾದ ಬ್ರಹ್ಮಾದಿಳಿಗೆ ಗುರುವಾದ ಶ್ರೀಹರಿಯು ಸಂಧ್ಯಾಕಾಲದ ಮೇಘಗಳಿಂದ ಯುಕ್ತ ಪರ್ವತದಂತಿದ್ದನು.

**ತಂ ವ್ರಜಂತಂ ಸುಪರ್ಣೇನ ಪದ್ಮಯೋನಿಗತಾನುಗಮ್ ।**
**ಅನುಜಗ್ಮುಃ ಸುರಾಃ ಸರ್ವೇ ತದ್ಗತಾಸಕ್ತ ಚಕ್ಷುಷಃ ॥ 3 ॥**
**ನಾತಿ ದೀರ್ಘೇಣ ಕಾಲೇನ ಸಂಪ್ರಾಪ್ತಾಃ ರತ್ನ ಪರ್ವತಮ್ ।**
**ದದೃಶುಃ ದೇವತಾಸ್ತತ್ರ ತಾಂ ಸಭಾಂ ಕಾಮರೂಪಿಣೀಮ್ ॥ 4 ॥**

ಬ್ರಹ್ಮದೇವನು ಮುಂದೆ ಹೋಗುತ್ತಿದ್ದರೆ ಶ್ರೀಹರಿಯು ಗರುಡಾರೂಢನಾಗಿ ಹಿಂಬದಿಯಲ್ಲಿ ಬರುತ್ತಿದ್ದನು. ಇತರ ದೇವತೆಗಳೆಲ್ಲ ಅವನನ್ನು ಹಿಂಬಾಲಿಸುತ್ತಾ ಅವನಲ್ಲಿಯೇ ನೆಟ್ಟದೃಷ್ಟಿವುಳ್ಳವರಾಗಿ ಹೊರಟರು. ಅತ್ಯಲ್ಪಕಾಲದಲ್ಲಿಯೇ ದೇವತೆಗಳೆಲ್ಲ ಬಂಗಾರದ ಪರ್ವತವಾದ ಮೇರು ಪರ್ವತ ತಲುಪಿದರು. ಅಲ್ಲಿರುವ ಕಾಮರೂಪಿಯಾದ ಬ್ರಹ್ಮದೇವನ ಸಭೆಯನ್ನು ನೋಡಿದರು. ಮೇರುವಿನ ಶಿಖರದಲ್ಲಿದ್ದ ಆ ಸಭೆಯು ಸೂರ್ಯತೇಜಸ್ಸಿನಂತೆ ಹೊಳೆಯುತ್ತಿತ್ತು. ಭಗವಂತನ ಮನಸ್ಸಿನ ಇಚ್ಛೆಯಂತೆ ಸ್ವತಃ ನಿರ್ಮಾಣವಾಗಿದ್ದು ಚಿತ್ರ ವಿಚಿತ್ರ ರತ್ನಗಳಿಂದ ಯುಕ್ತವಾಗಿದ್ದಿತು. ಅಮೂಲ್ಯವಾದ ರತ್ನರಾಶಿಗಳಿಂದ ಕೂಡಿದ್ದು ಸ್ವೇಚ್ಛಾನುಸಾರವಾಗಿ ಸಂಚರಿಸುವ ಸಾಮರ್ಥ್ಯ ಪಡೆದಿತ್ತು. ಸರ್ವರ್ತುಲಭ್ಯವಾಗುವ ಪುಷ್ಪಗಳಿಂದ ಅಲಂಕೃತವಾಗಿತ್ತು. ಇದರ ನಿರ್ಮಾತೃ ವಿಶ್ವಕರ್ಮನೆ ಆಗಿದ್ದು ದೇವತಾ ಸಂಬಂಧಿಯಾದ ಮಾಯೆಯನ್ನು ಇದು ಹೊಂದಿತ್ತು.

**ತಾಂ ಹೃಷ್ಟಮನಸಃ ಸರ್ವೇ ಯಥಾಸ್ಥಾನಂ ಯಥಾವಿಧಿ ।**
**ಯಥಾನಿದೇಶಂ ತ್ರಿದಶಾ ವಿವಿಶುಸ್ತೇ ಸಭಾಂ ಶುಭಾಮ್ ॥ 5 ॥**
**ಭದ್ರಾಸನೇಷು ಪೀಠೇಷು ಕುಥಾಸ್ವಾಸ್ತರಣೇಷು ಚ ।**

ಬ್ರಹ್ಮದೇವರ ಆದೇಶದಂತೆ ಸಕಲ ದೇವತೆಗಳೂ ಸಂತುಷ್ಟಮನಸ್ಕರಾಗಿ ಮಂಗಳಕರವಾದ ಸಭಾಭವನವನ್ನು ಪ್ರವೇಶಿಸಿ, ತಮ್ಮ ತಮ್ಮ ಯೋಗ್ಯ ಪೀಠಗಳಲ್ಲಿ ಆಸೀನರಾದರು. ಕೆಲವರು ವಿಮಾನಗಳಲ್ಲಿಯೂ, ಆಸನಗಳಲ್ಲಿಯೂ, ಭದ್ರಾಸನಗಳಲ್ಲಿ ಹಾಗೂ ಪೀಠ ರತ್ನಗಂಬಳಿಗಳ ಮೇಲೂ ಕುಳಿತರು.

**ತತಃ ಪ್ರಭಂಜನೋ ವಾಯುಃ ಬ್ರಹ್ಮಣಾ ಸಾಧು ಚೋದಿತಃ ।**
**'ಮಾ ಶಬ್ದಂ' ಇತಿ ಸರ್ವತ್ರ ಪ್ರಚಕ್ರಾಮಾಥ ತಾಂ ಸಭಾಮ್ ॥ 6 ॥**

**ನಿಶ್ಶಬ್ದಸ್ತಿಮಿತೇ ತಸ್ಮಿನ್ ಸಮಾಜೇ ತ್ರಿದಿವೌಕಸಾಮ್ ।**
**ಬಭಾಷೇ ಧರಣೀ ವಾಕ್ಯಂ ಖೇದಾತ್ ಕರುಣಭಾಷಿಣೀ ॥ 7 ॥**

ನಂತರ ಬ್ರಹ್ಮನ ಸೂಚನೆಯಂತೆ ವಾಯುದೇವನು ಸಭೆಯಲ್ಲಿ ಸರ್ವತ್ರ ಸಂಚರಿಸುತ್ತಾ 'ನಿಶ್ಶಬ್ಧವಾಗಿರಿ' ಎಂದು ಎಲ್ಲರಿಗೂ ಆದೇಶ ನೀಡಿದನು. ಸಕಲ ದೇವತೆಗಳೂ ಪ್ರಭಂಜನನ ಮಾತಿಗೆ ಓಗೊಟ್ಟು ಮೌನವಹಿಸಿದರು. ದೇವತಾ ಸಮಾಜವೆಲ್ಲವೂ ಮೌನವನ್ನು ಹೊಂದಿದಾಗ ಧರಣೀದೇವಿಯು ದುಃಖದಿಂದ ಕರುಣಾಜನಕ ಮಾತುಗಳನ್ನಾಡಿದಳು. ಅವಳ ಮಾತಿನಲ್ಲಿ ಖೇದವು ತುಂಬಿತ್ತು.

## ಭೂಮಿಯ ಅಳಲು

**ತ್ವಯಾ ಧಾರ್ಯಾ ತ್ವಹಂ ದೇವ ತ್ವಯಾ ವೈ ಧಾರ್ಯತೇ ಜಗತ್ ।**
**ತ್ವಂ ಧಾರಯಸಿ ಭೂತಾನಿ ಭುವನಾನಿ ಬಿಭರ್ಷಿ ಚ ॥ 8 ॥**

**ತ್ವಯಾ ಧೃತಂ ಧಾರಯಾಮಿ ನಾಧೃತಂ ಧಾರಯಾಮ್ಯಹಮ್ ।**
**ನ ಹಿ ತದ್ ವಿದ್ಯತೇ ಭೂತಂ ಯತ್ ತ್ವಯಾ ನಾನುಧಾರ್ಯತೇ ॥ 9 ॥**

ದೇವದೇವನೇ! ನಾನು ದುಃಖಸಾಗರದಲ್ಲಿ ಮುಳುಗುತ್ತಿದ್ದೇನೆ. ನನ್ನನ್ನು ನೀನು ಎತ್ತಿ ಹಿಡಿ. ನೀನು ಸಕಲ ಲೋಕಗಳಿಗೂ ಧಾರಕನಾಗಿರುವೆ. ವಿಷ್ಣು ಕೂರ್ಮ ರೂಪದಿಂದ ಸಮಸ್ತ ಭೂಮಂಡಲವನ್ನೂ ಸಕಲ ಪ್ರಾಣಿಗಳನ್ನೂ ಧರಿಸಿ ಪೋಷಣೆ ಮಾಡುತ್ತಿರುವಿ. ನೀನು ಧರಿಸಿರುವ ಪ್ರಾಣಿ ಪ್ರಪಂಚವನ್ನೇ ನಾನು ಧರಿಸಿರುವುದು ಹೊರತು ಸ್ವತಂತ್ರವಾಗಿಯಲ್ಲವು. ನೀನು ನಿನ್ನ ಬಲ ತೇಜಸ್ಸಿನಿಂದ ಧರಿಸಿರುವ ಪ್ರಪಂಚದಲ್ಲಿ ಒಂದು ಭಾಗ ನಿನ್ನನುಗ್ರಹದಿಂದ ಧರಿಸಿರುತ್ತೇನೆ.

ಈ ಬ್ರಹ್ಮಾಂಡದಲ್ಲಿ ನಿನ್ನಿಂದ ಧರಿಸದೆ ಇರುವ ವಸ್ತುವೇ ಇರುವುದಿಲ್ಲ. ಪ್ರತಿಯೊಂದು ಯುಗದಲ್ಲಿಯೂ ಭೂಮಿಗೆ ಭಾರವಾದಾಗ ಆ ಭಾರವನ್ನು ಜಗತ್ತಿನ ಹಿತಕ್ಕಾಗಿ ನೀನೇ ಇಳಸುತ್ತಿರುವೆ.

**ತವೈವ ತೇಜಸಾಕ್ರಾಂತಾಂ ರಸಾತಲ ತಲಂ ಗತಾಮ್ ।**
**ತ್ರಾಯಸ್ವ ಮಾಂ ಸುರಶ್ರೇಷ್ಠ ತ್ವಾಮೇವ ಶರಣಂ ಗತಾಮ್ ॥ 10 ॥**

**ದಾನವೈಃ ಪೀಡ್ಯಮಾನಾಹಂ ರಾಕ್ಷಸೈಶ್ಚ ದುರಾತ್ಮಭಿಃ ।**
**ತ್ವಾಮೇವ ಶರಣಂ ನಿತ್ಯಮುಪಯಾಸ್ಯೇ ಸನಾತನಮ್ ॥ 11 ॥**

ನಿನ್ನ ತೇಜಸ್ಸಿನಿಂದ ಸಕಲ ಭಾರವನ್ನು ಹೊರುವವಳಾದರೂ ಅತೀಭಾರದಿಂದಾಗಿ ರಸಾತಲದ ತಳದಲ್ಲಿ ಮುಳುಗಿ ಹೋಗುವುದರಲ್ಲಿರುವೆನು. ನೀನೇ ನನ್ನನ್ನು ಎತ್ತಲು ಸಮರ್ಥನೆಂದು ನಿನ್ನೆ ಶರಣು ಹೊಂದಿರುವೆನು.

ದಾನವರು ಹಾಗೂ ದುಷ್ಟಬುದ್ಧಿಯ ರಾಕ್ಷಸದವರಿಂದ ಪೀಡಿತಳಾಗಿರುವ ನಾನು ಸನಾತನನಾದ ನಿನ್ನನ್ನೆ ರಕ್ಷಕನನ್ನಾಗಿ ಹೊಂದಿರುವೆನು.

ನಾನು ಎಲ್ಲಿಯವರೆಗೆ ನನ್ನ ಧಾರಕನಾದ ನಿನ್ನನ್ನು ಮನಸಾ ಶರಣು ಹೊಂದುವುದಿಲ್ಲವೊ ಅಲ್ಲಿಯವರೆಗೂ ನನಗೆ ಭಯತಪ್ಪಿದ್ದಲ್ಲ. ಇದನ್ನು ಅನೇಕ ಭಾರಿ ನಾನು ಗಮನಿಸಿದ್ದೇನೆ.

## ಮಧುಕೈಟಭರು

**ಅಹಮಾದೌ ಪುರಾಣಸ್ಯ ಸಂಕ್ಷಿಪ್ತಾ ಪದ್ಮಯೋನಿನಾ ।**
**ಮಾಂ ಚ ಬಧ್ವಾ ಕೃತೌ ಪೂರ್ವಂ ಮೃಣ್ಮಯೌ ದ್ವೌ ಮಹಾಸುರೌ ॥ 12 ॥**
**ಕರ್ಣಸ್ರೋತೋದ್ಭವೌ ತೌ ಹಿ ವಿಷ್ಣೋರಸ್ಯ ಮಹಾತ್ಮನಃ ।**
**ಮಹಾರ್ಣವೇ ಪ್ರಸ್ವಪತಃ ಕಾಷ್ಠ ಕುಡ್ಯ ಸಮೌ ಸ್ಥಿತೌ ॥ 13 ॥**

ಹಿಂದೆ ಯುಗದಾರಂಭದಲ್ಲಿ ಕಮಲಯೋನಿಯಾದ ಚತುರ್ಮುಖನು ನನ್ನನ್ನು ಜಲದ ಮೇಲೆ ಸ್ಥಾಪಿಸಿದನು. ನನ್ನ ಮೃತ್ತಿಕೆಯಿಂದ ಉಂಡೆಯನ್ನಾಗಿಸಿ ಇಬ್ಬರು ಮಹಾಸುರರನ್ನು ನಿರ್ಮಿಸಿದ. ಇವರು ಈ ಮೊದಲು ಮಲಗಿರುವ ವಿಷ್ಣುವಿನ ಕಿವಿಯ ಕಿಟ್ಟದಿಂದ ಹುಟ್ಟಿದ್ದರು. ಹಾಗೆ ಹುಟ್ಟಿದ ಅವರಿಬ್ಬರೂ ಕಟ್ಟಿಗೆ ಹಾಗೂ ಗೋಡೆಯಂತೆ ಅಚೇತನರಾಗಿದ್ದರು. ನಂತರ ನನ್ನ ಮಣ್ಣಿನಿಂದ ಇವರ ಆಕಾರ ಮಾಡಿದ. ಬ್ರಹ್ಮದೇವನ ಪ್ರೇರಣೆಯಂತೆ ವಾಯುದೇವನು ಆ ಮಹಾಸುರರೊಳಗೆ ಪ್ರವೇಶ ಮಾಡಿದ. ಇದರಿಂದಾಗಿ ಆ ದೈತ್ಯರು ಆಕಾಶವನ್ನು ಆಕ್ರಮಿಸುವಂತೆ ಬೆಳೆದನು.

**ವಾಯು ಪ್ರಾಣೌ ತು ತೌ ಗೃಹ್ಯ ಪರ್ಯಮೃಶತ್ ಶನೈಃ ।**
**ಏಕಂ ಮೃದುತರಂ ಮೇನೇ ಕಠಿಣಂ ವೇದ ಚಾಪರಮ್ ॥ 14 ॥**

ವಾಯುದೇವನೆ ಪ್ರಾಣವಾಗುಳ್ಳ ಅವರಿಬ್ಬರನ್ನೂ ಮೆಲ್ಲನೆ ಸವರಿದನು. ಅವರಲ್ಲೊಬ್ಬನು ಮೃದುವಾದ ಅಂಗವುಳ್ಳವನೂ ಮತ್ತೊಬ್ಬನು ಕಠಿಣಾಂಗವುಳ್ಳವನಾಗಿದ್ದನು.

**ನಾಮನೀತು ತಯೋಶ್ಚಕ್ರೇ ಸ ವಿಭುಃ ಸಲಿಲೋದ್ಭವಃ ।**
**ಮೃದುಸ್ತ್ವಯಂ ಮಧುರ್ನಾಮ ಕಠಿಣಃ ಕೈಟಭೋಽಭವತ್ ॥ 15 ॥**

ಬ್ರಹ್ಮದೇವನು ಕೋಮಲಶರೀರವುಳ್ಳವನಿಗೆ ಮಧುಯೆಂದೂ, ಕಠಿಣ ಶರೀರಿಗೆ ಕೈಟಭನೆಂದು ನಾಮಕರಣ ಮಾಡಿದನು.

ನಾಮಕರಣವಾದ ಬಳಿಕ ಬಹಳ ಎತ್ತರವಾಗಿ ಬೆಳೆದರು. ಯಾರಿಂದಲೂ ಗೆಲ್ಲಲಸಾಧ್ಯವೆನಿಸಿದರು. ಯುದ್ಧ ಮಾಡುವ ಇಚ್ಛೆಯಿಂದ ಜಗತ್ತೆಲ್ಲ ಸಂಚರಿಸಿದರು. ಯುದ್ಧಕ್ಕಾಗಿ ಬಂದಿರುವ ಇವರನ್ನು ನೋಡಿ ಬ್ರಹ್ಮನು ನೀರಿನಲ್ಲಿಯೆ ಮರೆಯಾದನು. ಬ್ರಹ್ಮದೇವನು ಮಧುಕೈಟಭರೊಂದಿಗೆ ಯುದ್ಧ ಮಾಡುವ ಇಚ್ಛೆಯಿಲ್ಲದೆ ತಾನು ಜನಿಸಿದ ಶ್ರೀಹರಿಯ ನಾಭಿ ಕಲಮದಲ್ಲಿಯೇ ವಾಸಿಸಿದನು.

**ತಾವುಭೌ ಜಲಗರ್ಭಸ್ಥೌ ನಾರಾಯಣ ಪಿತಾಮಹೌ ।**
**ಬಹೂನ್ ವರ್ಷಗಣಾನ್ ಅಪ್ಸು ಶಯಾನ್ ನ ಚಕಂಪತುಃ ॥ 16 ॥**

**ಅಥ ದೀರ್ಘಸ್ಯ ಕಾಲಸ್ಯ ತಾವುಭೌ ಮಧುಕೈಟಭೌ ।**
**ಆಜಗ್ಮತುಃ ತಮುದ್ದೇಶಂ ಯತ್ರ ಬ್ರಹ್ಮಾ ವ್ಯವಸ್ಥಿತಃ ॥ 17 ॥**

ಹೀಗೆ ಬ್ರಹ್ಮ ವಿಷ್ಣುಗಳು ಬಹಳ ಕಾಲದವರೆಗೂ ನೀರಿನೊಳಗೆ ಅಲುಗಾಡದೆ ಮಲಗಿದ್ದರು. ಬಹುಕಾಲಾನಂತರ ಮಧುಕೈಟಭರು ಅವರಿಬ್ಬರಿರುವ ಪ್ರದೇಶಕ್ಕೆ ಸಂಚರಿಸುತ್ತಾ ಬಂದರು.

## ಬ್ರಹ್ಮನ ಭಯದ ನಟನೆ

**ದೃಷ್ಟ್ವಾ ತಾವಸುರೌ ಘೋರೌ ಮಹಾಕಾಯೌ ದುರಾಸದೌ ।**
**ಬ್ರಹ್ಮಣಾ ತಾಡಿತೋ ವಿಷ್ಣುಃ ಪದ್ಮನಾಲೇನ ವೈ ತದಾ ॥ 18 ॥**
**ಉತ್ಪಪಾತಾಥ ಶಯನಾತ್ ಪದ್ಮನಾಭೋ ಮಹಾದ್ಯುತಿಃ ॥ 19 ॥**

ಮಧುಕೈಟಭರು ತನ್ನ ಸಮೀಪಬಂದಂತೆಯೇ ಘೋರರೂಪಿಗಳಾದ

ಅವರನ್ನು ನೋಡಿದ ಬ್ರಹ್ಮದೇವನು ಭಯಗೊಂಡಂತೆ ನಟಿಸಿ, ಕಮಲದ ದಂಟಿನಿಂದ ವಿಷ್ಣುವನ್ನು ತಿವಿದು ಎಚ್ಚರಗೊಳಿಸಿದನು. ಮಹಾಸಾಮರ್ಥ್ಯ-ಶಾಲಿಯಾದ ವಿಷ್ಣುವು ಕೂಡಲೇ ಎದ್ದವನಂತೆ ತನ್ನನ್ನು ತೋರಿಸಿದನು. ವಿಷ್ಣುವಿಗೂ ಮಧುಕೈಟಭರಿಗೂ ಘನಘೋರ ಯುದ್ಧ ನಡೆಯಿತು. ಮಧುಕೈಟಭರು ಯಾವುದೇ ಆಯಾಸ ಹೊಂದದೆ ಹುರುಪಿನಿಂದ ಯುದ್ಧ ಮಾಡುತ್ತಿದ್ದರು. ತಮ್ಮಂತೆಯೇ ಆಯಾಸವಿಲ್ಲದೆ ಯುದ್ಧ ಮಾಡುತ್ತಿರುವ ವಿಷ್ಣುವನ್ನು ನೋಡಿ ಸಂತುಷ್ಟರಾಗಿ ಹೀಗೆ ಹೇಳಿದರು.

## ಮಧುಕೈಟಭರಿಂದ ವಿಷ್ಣುವಿಗೆ ವರದಾನ

**ಪ್ರೀತೌ ಸ್ವಃ ತವ ಯುದ್ಧೇನ ಶ್ಲಾಘ್ಯಸ್ತ್ವಂ ಮೃತ್ಯುರಾವಯೋಃ ।**
**ಆವಾಂ ಜಹಿ ನ ಯತ್ರೋರ್ವೀ ಸಲಿಲೇನ ಪರಿಪ್ಲುತಾ ॥ 20 ॥**

**ಹತೌ ಚ ತವ ಪುತ್ರತ್ವ ಪ್ರಾಪ್ನುಯಾವಃ ಸುರೋತ್ತಮ ।**
**ಯೋ ಹ್ಯಾವಾಂ ಯುಧಿ ನಿರ್ಜೇತಾ ತಸ್ಯಾವಾಂ ವಿಹಿತೌ ಸುತೌ ॥ 21 ॥**

**ಸ ತು ಗೃಹ್ಯ ಮೃಧೇ ದೋರ್ಭ್ಯಾಂ ದೈತ್ಯೌ ತಾವಭ್ಯಪೀಡಯತ್ ।**

ವಿಷ್ಣುವೇ, ನಮ್ಮೊಂದಿಗೆ ಸರಿಸಮಾನವಾಗಿ ಯುದ್ಧ ಮಾಡುತ್ತಿದ್ದರೂ ಆಯಾಸ ಬಳಲಿಕೆಯಿಲ್ಲದಿರುವ ನಿನ್ನ ಮೇಲೆ ನಾವು ಸುಪ್ರೀತರಾಗಿದ್ದೇವೆ. ನಿನ್ನ ಸಾಮರ್ಥ್ಯಕ್ಕೆ ಮೆಚ್ಚಿದ್ದೇವೆ. ಬೇಕಾದ ವರ ಕೇಳು ಎಂದರು. ವಿಷ್ಣುವು ನನಗೆ ಬೇರಾವುದೂ ವರಬೇಡ ನೀವಿಬ್ಬರೂ ನನ್ನಿಂದ ವಧ್ಯರಾಗುವ ವರ ನೀಡಿ ಎಂದ. ಮೋಸ ಹೋದ ದೈತ್ಯರು ಎಲ್ಲಾ ಕಡೆ ಜಲವೆ ತುಂಬಿದ್ದರಿಂದ ಅವನನ್ನು ವೋಸಗೊಳಿಸಲು ನೀರು ಎಲ್ಲಿ ಭೂಮಿಯನ್ನು ಆವರಿಸಿಕೊಂಡಿಲ್ಲವೋ ಅಲ್ಲಿ ನಮ್ಮನ್ನು ಸಂಹರಿಸು ಎಂದರು.

ನಿನ್ನಿಂದ ಹತರಾಗಿ ನಿನ್ನ ಪುತ್ರರಾಗುತ್ತೇವೆ. ಯುದ್ಧದಲ್ಲಿ ಯಾರು ನಮ್ಮನ್ನು ಜಯಿಸುವರೋ ಅವರಿಗೆ ನಾವು ಮಕ್ಕಳಾಗುವುದು ವಿಹಿತವಲ್ಲವೆ? ಎಂದಾಗ, ವಿಷ್ಣುವು ಅವರಿಬ್ಬರನ್ನು ನೀರಿನಿಂದ ಆವರಿಸಿಲ್ಲದ ತನ್ನ ತೊಡೆಯ ಮೇಲೆ ಹಾಕಿಕೊಂಡು ಸೀಳಿ ಹಾಕಿದನು.

**ತೌ ಹತೌ ಚಾಪ್ಲುತೌ ತೋಯೇ ವಪುರ್ಭ್ಯಾಂ ಏಕತಾಂ ಗತೌ ।**
**ಮೇದೋ ಮುಮುಚುತುಃ ದೈತ್ಯೌ ಮಥ್ಯಮಾನೌ ಜಲೋರ್ಮಿಭಿಃ ॥ 22॥**

**ಮೇದಸಾ ತಜ್ಜಲಂ ವ್ಯಾಪ್ತಂ ತಾಭ್ಯಾಮಂತರ್ದಧೇ ತತಃ ।**
**ನಾರಾಯಣಶ್ಚ ಭಗವಾನ್ ಅಸೃಜತ್ ಸ ಪುನಃ ಪ್ರಜಾಃ ॥ 23 ॥**

ವಿಷ್ಣುವು ಅವರಿಬ್ಬರನ್ನು ಸಂಹರಿಸಿ ಶರೀರಗಳನ್ನು ನೀರಿನಲ್ಲಿ ಬಿಸಾಡಿ ಹೊರಟನು. ನೀರಿನಲ್ಲಿ ತೇಲುತ್ತಾ ಅವರ ಶರೀರ ಒಂದಾದವು. ನೀರಿನ ಅಲೆಗಳು ಪುನಃ ಪುನಃ ಮಥಿಸಿದಾಗ ಅವರ ಶರೀರದಿಂದ ಮೇದಸ್ಸು ಹೊರಬಂದವು ಅದನ್ನು ಭೂಮಿಗೆ ಮೇತ್ತಿದ್ದರಿಂದ 'ಮೇದಿನೀ' ಎಂದು ಕರೆಯಲಾಯಿತು. ಕೂಡಲೇ ನೀರೆಲ್ಲವೂ ಅದೃಶ್ಯವಾಗಿ ಭೂಭಾಗವು ಕಾಣಿಸಿತು. ಅಲ್ಲಿ ನಾನಾ ವಿಧ ಪ್ರಾಣಿಗಳನ್ನು ಸೃಷ್ಟಿಸಿದನು.

**ದೈತ್ಯಯೋಃ ಮೇದಸಾಚ್ಛನ್ನಾ ಮೇದಿನೀತಿ ತತಃ ಸ್ಮೃತಾ ।**
**ಪ್ರಭಾವಾತ್ ಪದ್ಮನಾಭಸ್ಯ ಶಾಶ್ವತೀ ಜಗತೀ ಕೃತಾ ॥ 24 ॥**
**ವರಾಹೇಣ ಪುರಾ ಭೂತ್ವಾ ಮಾರ್ಕಂಡೇಯಸ್ಯ ಪಶ್ಯತಃ ।**
**ವಿಷಾಣೇನೇಹಮೇಕೇನ ತೋಯಮಧ್ಯಾತ್ ಸಮುದ್ಧೃತಾ ॥ 25 ॥**
**ಹತಾಹಂ ಕ್ರಮತಾ ಭೂಯಸ್ತದಾ ಯುಷ್ಮಾಕಮಗ್ರತಃ ।**
**ಬಲೇಃ ಸಕಾಶಾತ್ ದೈತ್ಯಸ್ಯ ವಿಷ್ಣುನಾ ಪ್ರಭವಿಷ್ಣುನಾ ॥ 26 ॥**

ಈ ಮಧು-ಕೈಟಭರ ಮೇದಸ್ಸಿನಿಂದ ಈ ಭೂಮಂಡಲವು ವ್ಯಾಪ್ತವಾಗಿರುವುದರಿಂದ ಈ ಭೂಮಿಯು 'ಮೇದಿನೀ' ಎಂದು ಪ್ರಸಿದ್ಧವಾಯಿತು. ಭಗವಂತನ ಅನುಗ್ರಹದಿಂದಾಗಿ ಈ ಜಗತ್ತು ಶಾಶ್ವತವಾಗಿ ಉಳಿಯುವಂತಾಯಿತು.

ಭೂದೇವಿಯು ಮುಂದುವರಿಸುತ್ತಾ – ಪೂರ್ವ ಕಾಲದಲ್ಲಿ ಶ್ರೀಹರಿಯು ವರಾಹರೂಪಧರಿಸಿ, ಮಾರ್ಕಂಡೇಯನು ನೋಡುತ್ತಿದ್ದಂತೆ ನೀರಿನಲ್ಲಿ ಮುಳುಗಿ ಹೋಗಿದ್ದ ನನ್ನನ್ನು ಕೋರೆದಾಡೆಯಲ್ಲಿರಿಸಿಕೊಂಡು ನೀರಿನಿಂದ ಮೇಲೆ ತಂದನು.

ಪುನಃ ಮತ್ತೊಮ್ಮೆ ನೀವೆಲ್ಲ ನೋಡುತ್ತಿರುವಂತೆಯೇ ಈ ಪ್ರಭಾವಶಾಲಿಯಾದ ಮಹಾವಿಷ್ಣುವು ತ್ರಿವಿಕ್ರಮಾವತಾರವನ್ನು ಧರಿಸಿ ಸಮಸ್ತ ಭೂಮಿ ಹಾಗೂ ಸ್ವರ್ಗಾದಿಗಳನ್ನು ತನ್ನ ಎರಡು ಹೆಜ್ಜೆಗಳಿಂದ ಅಳೆದು ಬಲಿಚಕ್ರವರ್ತಿಯ

ತಲೆಯ ಮೇಲಿಟ್ಟು ಸುತಲಲೋಕಕ್ಕೆ ಕಳುಹಿಸಿ, ನನ್ನನ್ನು ಅವನ ಹಿಡಿತದಿಂದ ಮುಕ್ತಗೊಳಿಸಿದನು.

**ಸಾಂಪ್ರತಂ ಖಿದ್ಯಮಾನಾಹಂ ಏನಮೇವ ಗದಾಧರಮ್ ।**
**ಅನಾಥಾ ಜಗತೋ ನಾಥಂ ಶರಣ್ಯಂ ಶರಣಂ ಗತಾ ॥ 27 ॥**

**ಅಗ್ನಿಃ ಸುವರ್ಣಸ್ಯ ಗುರುಃ ಗವಾಂ ಸೂರ್ಯೋ ಗುರುಃ ಸ್ಮೃತಃ ।**
**ನಕ್ಷತ್ರಾಣಾಂ ಗುರುಃ ಸೋಮೋ ಮಮ ನಾರಾಯಣೋ ಗುರುಃ ॥ 28 ॥**

ಈಗ ನನಗೆ ಅತ್ಯಂತ ಕಷ್ಟಪ್ರಾಪ್ತವಾಗಿದ್ದು ಅನಾಥಳಾದ ನಾನು ಶರಣಾಗತ ವತ್ಸಲನಾದ ಶ್ರೀಹರಿಯನ್ನೇ ಶರಣು ಹೊಂದಿರುವೆನು.

ಸುವರ್ಣಕ್ಕೆ ಅಗ್ನಿಯೇ ಗುರುವಾದರೆ, ಕಿರಣಗಳುಳ್ಳ ಚಂದ್ರಾದಿಗಳಿಗೆ ಸೂರ್ಯನೇ ಗುರುವು. ನಕ್ಷತ್ರಗಳಿಗೆ ಚಂದ್ರನು ಗುರುವು. ನನಗಾದರೂ ನಾರಾಯಣನೇ ಗುರುವು.

**ಯದಹಂ ಧಾರಯಾಮ್ಯೇಕಾ ಜಗತ್ ಸ್ಥಾವರ ಜಂಗಮಮ್ ।**
**ಮಯಾ ಧೃತಂ ಧಾರಯತೇ ಸರ್ವಮೇತದ್ ಗದಾಧರಃ ॥ 29 ॥**

**ಜಾಮದಗ್ನ್ಯೇನ ರಾಮೇಣ ಭಾರಾವತರಣೇಪ್ಸಯಾ ।**
**ರೋಷಾತ್ ತ್ರಿಃಸಪ್ತ ಕೃತ್ವೋಽಹಂ ಕ್ಷತ್ರಿಯೈಃ ವಿಪ್ರಯೋಜಿತಾ ॥ 30 ॥**

**ಸಾಸ್ಮಿ ವೇದ್ಯಾಂ ಸಮಾರೋಪ್ಯ ತರ್ಪಿತಾ ನೃಪಶೋಣಿತೈಃ ।**
**ಭಾರ್ಗವೇಣ ಪಿತುಃ ಶ್ರಾದ್ಧೇ ಕಶ್ಯಪಾಯ ನಿವೇದಿತಾ ॥ 31 ॥**

ಲೋಕದಲ್ಲಿ ನಾನೇ ಈ ಸ್ಥಾವರ-ಜಂಗಮಾತ್ಮಕವಾದ ಪ್ರಪಂಚವನ್ನು ಧಾರಣೆ ಮಾಡುತ್ತಿರುವೆನೆಂದು ತಿಳಿದಿರುವರು. ಆದರೆ ನನ್ನನ್ನೂ ಕೂಡಿದ ಈ ಸಮಸ್ತ ಪ್ರಪಂಚವನ್ನೂ ಗದಾಧರನೇ ಧಾರಣೆ ಮಾಡುತ್ತಾನೆ.

ಇದೇ ಭಗವಂತನೇ ಪರಶುರಾಮರೂಪಧಾರಣೆ ಮಾಡಿ, ಭೂಮಿಯ ಭಾರಭೂತರಾಗಿರುವ ದುಷ್ಟಕ್ಷತ್ರಿಯರೆಲ್ಲರನ್ನೂ ಕೋಪಗೊಂಡವನಂತೆ ಸಂಹರಿಸಿ 21 ಬಾರಿ ಕ್ಷತ್ರಿಯ ವಂಶ ನಾಶ ಮಾಡಿ, ಬ್ರಾಹ್ಮಣ ಕುಲವನ್ನು ಅಭಿವೃದ್ಧಿಪಡಿಸಿದನು.

ಪರಶುರಾಮದೇವನು ನನ್ನನ್ನೇ ರಣಯಜ್ಞ ಕುಂಡದಲ್ಲಿ ಸಮಾರೋಪಗೊಳಿಸಿ,

ದುಷ್ಟ ಕ್ಷತ್ರಿಯ ರಕ್ತಾಹುತಿಯಿಂದ ತೃಪ್ತಿಪಡಿಸಿದನು. ಹಾಗೂ ತನ್ನ ತಂದೆ ಜಮದಗ್ನಿಯ ಶ್ರಾದ್ಧದಲ್ಲಿ ನನ್ನನ್ನು ಮಹಾಬ್ರಾಹ್ಮಣನಾದ ಕಶ್ಯಪ ಮಹರ್ಷಿಗೆ ದಾನವನ್ನಾಗಿ ನೀಡಿದನು.

**ಮಾಂಸ ಮೇದೋಽಸ್ಥಿ ದುರ್ಗಂಧಾ ದಿಗ್ಧಾ ಕ್ಷತ್ರಿಯ ಶೋಣಿತೈಃ ।**
**ರಜಸ್ವಲೇವ ಯುವತಿಃ ಕಶ್ಯಪಂ ಸಮುಪಸ್ಥಿತಾ ॥ 32 ॥**

**ಸ ಮಾಂ ಬ್ರಹ್ಮರ್ಷಿರಪ್ಯಾಹಂ ಕಿಮುರ್ವಿ! ತ್ವಮವಾಙ್ಮುಖೀ ।**
**ವೀರಪತ್ನೀ ವ್ರತಮಿದಂ ಧಾರಯಂತೀ ವಿಷೀದಸಿ ॥ 33 ॥**

ಪರಶುರಾಮನ ಕೊಡಲಿ ಏಟಿನಿಂದ ನಾನು ರಕ್ತದ ಕೋಡಿಯಿಂದ ತೊಯ್ದು ಹೋಗಿದ್ದೆನು. ನನ್ನ ಮೇಲೆ ರಾಜರ ಮಾಂಸ, ಮೇಧಸ್ಸು, ಎಲುಬುಗಳುಗಳಿಂದ ತುಂಬಿ ಹೋಗಿದ್ದೆ. ಅವು ಕೊಳೆತು ದುರ್ಗಂಧ ನಾರುತ್ತಿದ್ದವು. ಇಂತಹ ಸ್ಥಿತಿಯಲ್ಲಿದ್ದ ನಾನು ರಜಸ್ವಲೆ ಸ್ತ್ರೀಯಂತೆ ಮಹರ್ಷಿ ಕಶ್ಯಪನ ಸೇವೆಯಲ್ಲಿ ನಿರತಳಾಗಿದ್ದೆನು.

ಇಂತಹ ಸ್ಥಿತಿಯಲ್ಲಿ ನಾನು ನಾಚಿಕೆಗೊಂಡವಳಂತೆ ತಲೆತಗ್ಗಿಸಿದ್ದೆನು. ನನ್ನನ್ನು ನೋಡಿದ ಕಶ್ಯಪರು – ಭೂಮಿಯೇ! ವೀರಪತ್ನಿಯಾದ ನೀನು ಹೀಗೇಕೆ ತಲೆಯನ್ನು ತಗ್ಗಿಸಿರುವೆ? ಎಂದು ಕೇಳಿದರು. ಇದು ವೀರಪತ್ನಿಯ ವ್ರತವಾಗಿದ್ದು ಇದನ್ನು ಮಾಡಿಯೂ ದುಃಖಪಡುತ್ತಿರುವೆಯೇಕೆ? ಎಂದು.

**ಸಾಹಂ ವಿಜ್ಞಾಪಿತವತೀ ಕಶ್ಯಪಂ ಲೋಕಭಾವನಮ್ ।**
**ಪತಯೋ ಮೇ ಹತಾಃ ಬ್ರಹ್ಮನ್ ಭಾರ್ಗವೇಣ ಮಹಾತ್ಮನಾ ॥ 34 ॥**

**ವಿಧವಾ ಶೂನ್ಯನಗರಾ ನ ಧಾರಯಿತುಮುತ್ಸಹೇ ।**
**ತನ್ ಮಹ್ಯಂ ದೀಯತಾಂ ಭರ್ತಾ ಭಗವನ್ ತ್ವತ್ಸಮೋ ನೃಪಃ ।**
**ರಕ್ಷೇತ್ ಸಗ್ರಾಮನಗರಾಂ ಯೋ ಮಾಂ ಸಾಗರ ಮಾಲಿನೀಮ್ ॥ 35 ॥**

ಕಶ್ಯಪರೇ! ಪರಶುರಾಮ ದೇವರು ನನ್ನ ಪತಿಯೆಲ್ಲರನ್ನೂ ಸಂಹರಿಸುವರು. ನಾನಿಂದು ಮಹಾಪರಾಕ್ರಮಿ ರಾಜರಿಂದ ವಿಹೀನಳಾಗಿದ್ದೇನೆ. ಶಸ್ತ್ರಜೀವಿ ರಾಜರು ಒಬ್ಬರೂ ಇರುವುದಿಲ್ಲ. ನನ್ನ ನಗರಗಳೆಲ್ಲವೂ ಕ್ಷತ್ರಿಯ ರಾಜರಿಂದ ಶೂನ್ಯವಾಗಿವೆ. ಇದರಿಂದಾಗಿ ಈ ಜಗತ್ತನ್ನು ಧರಿಸಿಕೊಂಡಿರಲಿಚ್ಛೆ ಇರುವುದಿಲ್ಲ.

ಆದ್ದರಿಂದ ಪೂಜ್ಯನೇ, ನಾನು ಹಿಂದಿನಂತೆ ಉತ್ಸಾಹ ಪೂರ್ಣೆಯಾಗಿರಬೇಕಾದರೆ ನನಗೊಬ್ಬ ಸರ್ವಸಮರ್ಥಪತಿಯನ್ನು ದಯಪಾಲಿಸು. ಆ ನನ್ನ ಪತಿಯಾಗುವವನು ನಿನ್ನಂತೆ ಮಹಾಸಾಮರ್ಥ್ಯಶಾಲಿಯಾಗಿರಬೇಕು. ನನ್ನ ಅವಯವಗಳಾದ ಗ್ರಾಮ, ನಗರ ಖೇಟ, ಖರ್ವಟ, ರಾಷ್ಟ್ರ, ಪಟ್ಟಣಗಳಿಂದ ಅಲಂಕೃತಳೂ ಸಮುದ್ರದೂರ್ಮಿಗಳೇ ಮಾಲೆಯಾಗಿರುವ ನನ್ನನ್ನು ರಕ್ಷಿಸುವವನಾಗಿರಬೇಕು.

**ತತೋ ಮಾಂ ಮಾನವೇಂದ್ರಾಯ ಮನವೇ ಸಪ್ರದತ್ತವಾನ್ ।**
**ಸಾ ಮನುಪ್ರಭವಂ ದಿವ್ಯಂ ಪ್ರಾಪ್ಯ ಇಕ್ಷ್ವಾಕುಕುಲಂ ನೃಪಮ್ ।**
**ವಿಫಲೇನಾಸ್ಮಿ ಕಾಲೇನ ಪಾರ್ಥಿವಾತ್ ಪಾರ್ಥಿವಂ ಗತಾ ॥ 36 ॥**

**ಏವಂ ದತ್ತಾಸ್ಮಿ ಮನವೇ ಮಾನವೇಂದ್ರಾಯ ಧೀಮತೇ ।**
**ಭುಕ್ತಾ ರಾಜಸಹಸ್ರೈಶ್ಚ ಮಹರ್ಷಿ ಕುಲಸಂಮಿತೈಃ ॥ 37 ॥**

ಕಶ್ಯಪರು ನನ್ನ ಮಾತನ್ನು ಕೇಳಿ, 'ಹಾಗೆ ಆಗಲಿ' ಎಂದು ನನ್ನನ್ನು ಮನುಷ್ಯೇಂದ್ರನಾದ ಮನುವಿಗೆ ವಿವಾಹ ಮಾಡಿಕೊಟ್ಟರು. ವೈವಸ್ವತ ಮನುವಿನಿಂದ ಮುಂದೆ ಇಕ್ಷ್ವಾಕು ವಂಶದ ರಾಜರಿಗೆ ಸೇರಿದೆನು. ನಂತರ ಒಬ್ಬೊಬ್ಬರಾಗಿ ನನ್ನನ್ನು ವರಿಸುತ್ತ ಬಂದರು. ಹೀಗೆ ಸಾವಿರಾರು ರಾಜರು ನನ್ನನ್ನು ಆಳಿದರು.

ಹೀಗೆ ಪೂಜ್ಯರಾದ ಕಶ್ಯಪರ ಮಹರ್ಷಿಯು ನನ್ನನ್ನು ಮೇಧಾವಿಯಾದ ಮನುವಿಗೆ ಕೊಡಲ್ಪಟ್ಟ ನನ್ನನ್ನು ತೇಜಸ್ವಿ ರಾಜರುಗಳೆಲ್ಲ ಭೋಗಿಸಿದರು. ಅನೇಕ ರಾಜಮಹಾರಾಜರು ನನ್ನನ್ನು ಜಯಿಸಿ ಸ್ವರ್ಗಲೋಕ ಸೇರಿದರು. ಅವರೆಲ್ಲರೂ ಕಾಲಧೀನರಾಗಿ ನನ್ನಲ್ಲಿಯೇ ಲೀನರಾಗಿದ್ದಾರೆ.

**ಮತ್ಕೃತೇ ವಿಗ್ರಹಾ ಲೋಕೇ ವೃತ್ತಾ ವರ್ತಂತ ಏವ ಚ ।**
**ಕ್ಷತ್ರಿಯಾಣಾಂ ಬಲವತಾಂ ಸಂಗ್ರಾಮೇಷ್ವನಿವರ್ತಿನಾಮ್ ॥ 38 ॥**

**ಏತದ್ ಯುಷ್ಮತ್ ಪ್ರವೃತ್ತೇನ ದೈವ್ಯೇನ ಪರಿಪಾಲ್ಯತೇ ।**
**ಜಗದ್ಧಿತಾರ್ಥಂ ಕುರುತ ರಾಜ್ಞಾಂ ಹೇತು ರಣಕ್ಷಯೇ ॥ 39 ॥**

**ಯದ್ಯಸ್ತಿ ಮಯಿ ಕಾರುಣ್ಯಂ ಭಾರ ಶೈಥಿಲ್ಯ ಕಾರಣಾತ್ ।**
**ಏಕಶ್ಚಕ್ರಧರಃ ಶ್ರೀಮಾನ್ ಅಭಯಂ ಮೇ ಪ್ರಯಚ್ಛತು ॥ 40 ॥**

ಈ ಪ್ರಪಂಚದಲ್ಲಿ ನನಗಾಗಿಯೇ ಬಲಿಷ್ಠರಾದ ರಾಜರು ಯುದ್ಧದಲ್ಲಿ ಮಡಿದು, ಯುದ್ಧದಲ್ಲಿ ಹಿಂತಿರುಗದೆ ಸ್ವರ್ಗ ಸೇರಿದ್ದರು. ನನಗಾಗಿಯೆ ಹಿಂದೆ ಅನೇಕ ಯುದ್ಧಗಳು ನಡೆದಿವೆ. ಮುಂದೆಯೂ ನಡೆಯುತ್ತಲೇ ಇರುತ್ತವೆ.

ನಿಮ್ಮಿಂದಲೇ ಆರಂಭವಾದ ಈ ವಿಶ್ವವು ಭಗವಂತನಿಂದ ಪರಿಪಾಲಿಸಲ್ಪಡುತ್ತಿದೆ. ಪ್ರಸ್ತುತ ಈಗ ರಣಭೂಮಿಯಲ್ಲಿ ರಾಜರ ಸಂಹಾರವಾಗಬೇಕಿದೆ. ಇದಕ್ಕಾಗಿ ರಾಜರ ಸಂಹಾರವಾಗಲು ಯಾವುದಾದರೂ ಉಪಾಯವನ್ನು ಹುಡುಕಿರಿ.

ದೇವತೆಗಳೇ, ಶ್ರೀಹರಿಗೆ ನನ್ನ ಮೇಲೇನಾದರೂ ದಯೆ ಇರುವುದಾದರೆ ನನ್ನ ಪ್ರಾರ್ಥನೆಯಂತೆ ನನ್ನ ಈ ಭೂಭಾರ ಹರಣವಾಗಲು ಅಭಯವನ್ನು ನೀಡಲಿ! ನಾನಾದರೂ ಭೂಭಾರದಿಂದ ಸಂತೃಪ್ತಳಾಗಿ ರಕ್ಷಕನನ್ನು ಅರಸುತ್ತಾ ಇಲ್ಲಿಗೆ ಬಂದಿದ್ದೇನೆ. ವಿಷ್ಣುವಿಗೆ ನಾನು ಶರಣು ಹೊಂದಿದ್ದೇನೆ. ಭಗವಂತನಾದ ಮಹಾವಿಷ್ಣುವು ನನ್ನ ಭಾರ ಇಳಸುವುದು ಯೋಗ್ಯವೆಂದು ಭಾವಿಸುವಿಯಾದರೆ ಆಶ್ವಾಸನೇ ನೀಡಲಿ ಎಂದಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಭೂಮಿಯ ಪ್ರಾರ್ಥನವೆಂಬಲ್ಲಿ
ಐವತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




## ಅಥ ತ್ರಿಪಂಚಾಶತ್ತಮೋಽಧ್ಯಾಯಃ

*ವೈಶಂಪಾಯನ ಉವಾಚ –*

ತೇ ಶ್ರುತ್ವಾ ಪೃಥಿವೀವಾಕ್ಯಂ ಸರ್ವ ಏವ ದಿವೌಕಸಃ ।
ತದರ್ಥಕೃತ್ಯಂ ಸಂಚಿಂತ್ಯ ಪಿತಾಮಹಮಥಾಬ್ರುವನ್ ॥ 1 ॥
ಭಗವನ್ ಕ್ರಿಯತಾಮಸ್ಯಾಃ ಧರಣ್ಯಾಃ ಭಾರಸಂತತಿಃ ।
ಶರೀರಕರ್ತಾ ಲೋಕಾನಾಂ ತ್ವಂ ಹಿ ಲೋಕಸ್ಯ ಚೇಶ್ವರಃ
ಯತ್ ಕರ್ತವ್ಯಂ ಮಹೇಂದ್ರೇಣ ಯಮೇನ ವರುಣೇನ ಚ ॥ 2 ॥

ಜನಮೇಜಯನೇ, ದೇವತೆಗಳೆಲ್ಲರೂ ಭೂತಾಯಿಯ ವಾಕ್ಯವನ್ನಾಲಿಸಿದರು. ಅವಳ ಸಲುವಾಗಿ ಮಾಡಬೇಕಾದ ಕರ್ತವ್ಯದ ಬಗ್ಗೆ ವಿಚಾರಿಸಿ ಬ್ರಹ್ಮದೇವನಿಗೆ ಹೀಗೆ ಹೇಳಿದರು.

ಬ್ರಹ್ಮನೇ, ನೀನು ಈ ಭೂಮಿಯ ಭಾರವನ್ನು ಇಳಿಸು. ನೀನೇ ಈ ಲೋಕದ ಜನರ ಸೃಷ್ಟಿಕರ್ತನು, ಜಗತ್ತಿನ ರಕ್ಷಕನೂ ನೀನೇ. ಭೂಭಾರವನ್ನು ಇಳಿಸುವ ಕಾರ್ಯದಲ್ಲಿ ಇಂದ್ರದೇವ, ಯಮ, ವರುಣ, ಕುಬೇರ, ಶ್ರೀಮನ್ನಾರಾಯಣ, ಚಂದ್ರ–ಸೂರ್ಯ, ವಾಯುಗಳು, ದ್ವಾದಶಾದಿತ್ಯರು, ಅಷ್ಟವಸುಗಳು ಲೋಕಕ್ಕೆ ಕಲ್ಯಾಣವನ್ನುಂಟು ಮಾಡುವ ಏಕಾದಶರುದ್ರರು, ಮಾಡಬೇಕಾದ ಕಾರ್ಯವನ್ನು ತಿಳಿಸು.

ದೇವವೈದ್ಯರಾದ ಅಶ್ವಿನಿಗಳು, ಸಾಧ್ಯರು, ಬೃಹಸ್ಪತಿ, ಶುಕ್ರರು, ಕಾಲ ಹಾಗೂ ಕಲಿಗಳಿಂದಲೂ ಯಾವ ಕಾರ್ಯ ಮಾಡಬೇಕೆಂದು ತಿಳಿಸು.

ಮಹೇಶ್ವರ, ವಿಶಾಕ, ಗುಹ, ಯಕ್ಷ, ರಾಕ್ಷಸ, ಗಂಧರ್ವ, ಚಾರಣ, ಮಹೋರಗ, ಪಕ್ಷಿಗಳು, ಪರ್ವತಗಳು, ಸಾಗರಗಳಿಂದಲೂ, ಗಂಗಾದಿನದಿಗಳಿಂದಲೂ ಯಾವ ಕಾರ್ಯವಾಗಬೇಕು ಎಂದು ಕೂಡಲೇ ನಮಗೆ ಆಜ್ಞಾಪಿಸು.

**ಯದಿ ತೇ ಪಾರ್ಥಿವಂ ಕಾರ್ಯಂ ಕಾರ್ಯಂ ಪಾರ್ಥಿವವಿಗ್ರಹೇ ।**
**ಕಥಮಂಶಾವತರಣಂ ಕುರ್ಮಃ ಸರ್ವೇ ಪಿತಾಮಹ ॥ 3 ॥**

**ಅಂತರಿಕ್ಷಗತಾ ಯೇ ಚ ಪೃಥಿವ್ಯಾಂ ಪಾರ್ಥಿವಾಶ್ಚ ಯೇ ॥**
**ಸದಸ್ಯಾನಾಂ ಚ ವಿಪ್ರಾಣಾಂ ಪ್ರಾರ್ಥಿವಾನಾಂ ಕುಲೇಷು ಚ ।**
**ಅಯೋನಿಜಾಶ್ಚೈವ ತನೂಃ ಸೃಜಾಮೋ ಜಗತೀತಲೇ ॥ 4 ॥**

ಪ್ರಭುವೇ ! ನಾವು ನಮ್ಮ ಅಂಶಗಳನ್ನು ಯಾವ ರೀತಿಯಲ್ಲಿ ಈ ಕಾರ್ಯಕ್ಕೆ ನಿಯೋಜಿಸಬೇಕೆಂದು ಹೇಳು. ಭೂದೇವಿಗೆ ಹಿತವಾಗುವ ಕಾರ್ಯವನ್ನು ಮಾಡುವ ಅಭಿಪ್ರಾಯವಿರುವುದಾದರೆ ರಾಜರ ಮಧ್ಯದಲ್ಲಿ ಯುದ್ಧ ಜ್ವಾಲೆ ಹರಡಲು ಯಾವುದಾದರೂ ಉಪಾಯವನ್ನು ಕೈಗೊಳ್ಳು.

ಬ್ರಹ್ಮದೇವನಾದರೂ ದೇವತೆಗಳೇ! ಭೂಮಿಯ ಭಾರವನ್ನು ಇಳಸಬೇಕೆಂಬ ಪ್ರಧಾನ ಕಾರ್ಯದಲ್ಲಿ ನೀವೆಲ್ಲರೂ ಒಮ್ಮತದಿಂದಿರುವಿರಿ. ನೀವು ಕೈಗೊಂಡಿರುವ ನಿಶ್ಚಯವು ನನಗೂ ಯುಕ್ತವಾಗಿಯೇ ಕಾಣುತ್ತಿದೆ. ನೀವೆಲ್ಲರೂ ನಿಮ್ಮ ತೇಜಸ್ಸಿಗೆ ತಕ್ಕಂತೆ ನಿಮ್ಮ ತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿರುವ ಅಂಶಗಳನ್ನು ನಿಮ್ಮ ಶರೀರಗಳಿಂದಲೇ ಸೃಜಸಿರಿ.

**ಪಾರ್ಥಿವೇ ಭಾರತೇ ವಂಶೇ ಪೂರ್ವಮೇವ ವಿಜಾನತಾ ।**
**ಪೃಥಿವ್ಯಾಂ ಸಂಭ್ರಮಮಿಮಂ ಶ್ರೂಯತಾಂ ಯನ್ಮಯಾ ಕೃತಮ್ ॥ 5 ॥**
**ಸಮುದ್ರೇಽಹಂ ಪುರಾ ಪೂರ್ವೇ ವೇಲಾಮಾಸಾದ್ಯ ಪಶ್ಚಿಮಾಮ್ ।**
**ಆಸಂ ಸಾರ್ಧಂ ತನೂಜೇನ ಕಶ್ಯಪೇನ ಮಹಾತ್ಮನಾ ॥ 6 ॥**

ದೇವತೆಗಳೇ ! ಭೂದೇವಿಗೆ ಬಂದಿರುವ ಈ ಭಯವನ್ನು ನಾನು ಈ ಹಿಂದೆಯೇ ತಿಳಿದಿದ್ದೆನು. ಇದಕ್ಕಾಗಿ ಭೂಮಂಡಲವ ಭರತವಂಶದ ಉಳಿವಿಗಾಗಿ ನಾನು ನಿಶ್ಚೈಯಿಸಿದ್ದ ವಿಷಯವನ್ನು ಹೇಳುವೆನು ಕೇಳಿರಿ.

## ವರುಣನ ಜನ್ಮ

ಹಿಂದೆ ನಾನು ಪೂರ್ವಸಮುದ್ರದ ಪಶ್ಚಿಮ ತೀರದಲ್ಲಿ ನನ್ನ ಪುತ್ರನಂತಿರುವ ಕಶ್ಯಪನಿಂದ ಕುಳಿತ್ತಿದ್ದೆನು. ಆಗ ನಾನು ಲೋಕ-ವೇದನುಸಾರಿಗಳಾದ ಮಾರ್ಗಗಳನ್ನವಲಂಬಿಸುತ್ತಿದ್ದವರ ಪ್ರಾಚೀನ ಕಥೆಗಳು. ಉತ್ತಮ ಗುಣವಂತನಾದ ಶ್ರೀಹರಿಯ ಮಹಿಮಾದ್ಯೋತಕವಾದ ಇತಿಹಾಸಗಳಲ್ಲಿ ಬರುವ ಶ್ರೀಹರಿಯ ಕಥೆಗಳನ್ನು ವಿಚಾರ ಮಾಡುತ್ತಿದ್ದೆನು. ಇದೇ ಸಂದರ್ಭದಲ್ಲಿ ಗಂಗೆಯೊಂದಿಗೆ ಸಮುದ್ರರಾಜನು, ಮೇಘಗಳ ಸಮೂಹಗಳಿಂದಲೂ ನಿರಿನಿಂದ ಕೂಡಿರುವ ಗಾಳಿಯಿಂದ ಸಹಿತನಾಗಿ ನಾನಿರುವ ಜಾಗಕ್ಕೆ ಬಂದನು.

**ಸ ವೀಚಿ ವಿಷಮಾಂ ಕುರ್ವನ್ ಗತಿಂ ವೇಗ ತರಂಗಿಣೀಮ್ ।**
**ಯಾದೋಗಣ ವಿಚಿತ್ರೇಣ ಸಂಛನ್ನಸ್ತೋಯ ವಾಸಸಾ ॥ 7 ॥**

ವರುಣನು ದೊಡ್ಡದಾದ ಹಾಗೂ ಚಿಕ್ಕಚಿಕ್ಕದಾದ ಅಲೆಗಳಿಂದ ತನ್ನ ಸ್ಥಿರ ಗಂಭೀರವಾದ ಗತಿಯನ್ನು ವಿಷಮ ರೀತಿಯಲ್ಲಿ ಏರುಪೇರು ಮಾಡುತ್ತಾ ನನ್ನ ಸಮೀಪಿಸಿದನು. ಆ ಅಲೆಗಳಲ್ಲಿ ತಿಮಿಂಗಿಲಾದಿ ಯಾದೋಜಂತುಗಳಿದ್ದವು. ನೀಲಿಯಾದ ವಿಚಿತ್ರವಾದ ವಸ್ತ್ರಧರಿಸಿದಂತೆ ಕಾಣುತ್ತಿದ್ದು, ಶಂಖಗಳು ಮತ್ತು ಮಾಣಿಕ್ಯಗಳಿಂದ ಶೋಭಾಯ-ಮಾನವಾಗಿದ್ದನು. ಹವಳ ಮಣಿಯಿಂದ ಅಲಂಕೃತನಾಗಿದ್ದು, ಪೂರ್ಣಚಂದ್ರನಿರುವುದರಿಂದ ಮೇಘ ಗಂಭೀರ ಧ್ವನಿ ಮಾಡುತ್ತಾ ಉಕ್ಕೇರಿ ಬಂದನು.

## ಬ್ರಹ್ಮನಿಗೆ ವರುಣಾಭಿಷೇಕ

**ಸ ಮಾಂ ಪರಿಭವನ್ನೇವ ಸ್ವಾಂ ವೇಲಾಂ ಸಮತಿಕ್ರಮನ್ ।**
**ಕ್ಲೇದಯಾಮಾಸ ಚಪಲೈಃ ಲಾವಣ್ಯೈಃ ಅಂಬುವಿಸ್ರವೈಃ ॥ 8 ॥**
**ತಂ ಚ ದೇಶಂ ವ್ಯವಸ್ಥಿತಃ ಸಮುದ್ರೋಽಬ್ಧಿಃ ವಿಮರ್ದಿತುಮ್ ।**
**ಉಕ್ತಃ ಸಂರಬ್ಧಯಾ ವಾಚಾ ಶಾಂತೋಽಸೀತಿ ಮಯಾ ತದಾ ॥ 9 ॥**
**ಶಾಂಓತೋಽಸೀತ್ಯುಕ್ತ ಮಾತ್ರಸ್ತು ತನುತ್ವಂ ಸಾಗರೋ ಗತಃ ।**
**ಸಂಹತೋರ್ಮಿತರಂಗೌಘಃ ಸ್ಥಿತೋ ರಾಜಶ್ರಿಯಾ ಜ್ವಲನ್ ॥ 10 ॥**

ನನ್ನನ್ನು ಸಮೀಪಿಸಿದ ಸಮುದ್ರರಾಜನು ನನ್ನನ್ನು ತಿರಸ್ಕಾರ ಮಾಡುತ್ತಾ ತನ್ನ ಮರ್ಯಾದೆಯನ್ನು ಉಲ್ಲಂಘಿಸಿ ಚಂಚಲವಾದ ಹಾಗೂ ಲವಣನಿಂದ ಕೂಡಿದ ಜಲಬಿಂದುಗಳಂದ ನನ್ನನ್ನು ಅಭಿಷೇಕಿಸಿ ತೋಯಿಸಿದನು. ಉಕ್ಕೇರಿ ಬರುತ್ತಿದ್ದ ತನ್ನ ನೀರಿನ ಅಲೆಗಳಂದಲೂ ನಾನು ಕುಳತಿರುವ ಸ್ಥಳವನ್ನು ನಾಶ ಮಾಡಲೆಂದೇ ಪ್ರಾರಂಭಿಸಿದನು. ಕೋಪಗೊಂಡ ನಾನು ಅವನಿಗೆ ಶಾಂತೋಸಿ ಶಾಂತನಾಗು ಎಂದು ಹೇಳದನು. ಶಾಂತೋಭವ ಎಂದ ಕೂಡಲೇ ಸಮುದ್ರನ ಉಬ್ಬರಿಳತ ಇಳಯಿತು. ವರುಣನ ಅಲೆಗಳು ತರಂಗಗಳು ಇಲ್ಲದಂತಾಯಿತು. ನಾನು ಮನಸ್ಸಿನಲ್ಲಿಯೇ ಭೂಭಾರವನ್ನು ಇಳಸುವ ಹಾಗೂ ನಿಮಗೆ ಹಿತವನ್ನುಂಟು ಮಾಡುವ ಬಗೆಗೆ ವಿಚಾರ ಮಾಡುತ್ತಾ ಗಂಗೆಗೂ ಹಾಗೂ ವರುಣನಿಗೂ ಪುನಃ **ಶಾಪ**[1]ವನ್ನು ನೀಡುತ್ತಾ ಹೀಗೆಂದನು.

**ಯಸ್ಮಾತ್ ತ್ವಂ ರಾಜತುಲ್ಯೇನ ವಪುಷಾ ಸಮುಪಸ್ಥಿತಃ ।**
**ಗಚ್ಛಾರ್ಣವ ಮಹೀಪಾಲೋ ರಾಜೈವ ತ್ವಂ ಭವಿಷ್ಯಸಿ ॥ 11 ॥**
**ತತ್ರಾಪಿ ಸಹಜಾಂ ಲೀಲಾಂ ಧಾರಯನ್ ಸ್ವೇನ ತೇಜಸಾ ।**
**ಭವಿಷ್ಯಸಿ ನೃಣಾಂ ಭರ್ತಾ ಭಾರತಾನಾಂ ಕುಲೋದ್ವಹಃ ॥ 12 ॥**
**ಶಾಂತೋಽಸೀತಿ ಮಯೋಕ್ತ ಸ್ತ್ವಂ ಯಚ್ಚಾಸಿ ತನುತಾಂ ಗತಃ ।**
**ಸುತನುರ್ಯಶಸಾ ಲೋಕೇ ಶಾಂತನುಸ್ತ್ವಂ ಭವಿಷ್ಯಸಿ ॥ 13 ॥**

ವರುಣನೇ ! ನೀನು ರಾಜನಿಗೆ ಅನುರೂಪವಾದ ಶರೀರವನ್ನು ಧರಿಸಿ ನನ್ನ

---

1. ಬ್ರಹ್ಮನ ಶಾಪ :
ಪೂರ್ವೋದಧೇಃ ತೀರಗತೇಽಬ್ಜ ಸಂಭವೇ ಗಂಗಾಯುತಃ ಪರ್ವಣಿ ಘೂರ್ಣಿತೋಽಬ್ಧಿಃ ।
ಅವಾಕ್ಷಿಪತ್ ತಸ್ಯ ತನೌ ನಿಜೋದಬಿಂದುಂ ಶಶಾಪೈನಮಥಾಬ್ಜಯೋನಿಃ ॥
*–ತಾ.ನಿ. 11/16*

ಸಮುದ್ರನು ಬ್ರಹ್ಮದೇವನಿಗೆ ನೀರಿನ ಅಭಿಷೇಕ ಮಾಡಿದ್ದರಿಂದ ಬ್ರಹ್ಮನ ಶಾಪವಿತ್ತಿದ್ದಲ್ಲ. ಹಾಗಿದ್ದಲ್ಲಿ ದೇವರಿಗೆ ಅಭಿಷೇಕ ಮಾಡಿದವರಿಗೆಲ್ಲ ಶಾಪಬರಬೇಕಾದೀತು. ಗಂಗಾಸಾಗರ ಸಂಗಮದಲ್ಲಿ ಬ್ರಹ್ಮನಿಗೆ ಗಂಗೆಯ ನೀರಿನಿಂದ ಅಭಿಷೇಕ ಮಾಡದೆ ಉಪ್ಪು ನೀರಿನ ಅಭಿಷೇಕ ಮಾಡಿದ್ದರಿಂದ ಶಾಪವೆಂದು ***'ಲಾವಣ್ಯೈಃ ಅಂಬುವಿಪ್ರುಷೈಃ'*** ಎಂದಿದೆ.

ಸಮೀಪಕ್ಕೆ ಬಂದಿರುವೆಯಾದ್ದರಿಂದ ನೀನು ಭೂಮಿಯನ್ನು ಪರಿಪಾಲಿಸುವ ಮಹಾಭಿಷಕ್ ಎಂದು ಹುಟ್ಟುವೆ. ಅಲ್ಲಿಯೂ ನೀನು ಸ್ವಾಭಾವಿಕ ಲೀಲೆಯನ್ನು ತೋರುತ್ತಾ ಮನುಷ್ಯರನ್ನು ಭರಣ ಪೋಷಣೆಗಳನ್ನು ಮಾಡುವೆ ಹಾಗೂ ಭರವಂಶದ ರಕ್ಷಣಾಭಾರವನ್ನು ವಹಿಸುವ ಶಕ್ತಿಯನ್ನು ಹೊಂದುವೆ. ಶಾಂತನಾಗುವೆ ಎಂದು ಹೇಳಿದ ಕೂಡಲೇ ಸೂಕ್ಷ್ಮರೂಪವನ್ನು ಹೊಂದಿದ ಕಾರಣ ನೀನು ಭೂಲೋಕದಲ್ಲಿಯೂ ಸುಂದರವಾದ ಶರೀರ ಹೊಂದಿ ಕೀರ್ತಿವಂತನಾಗಿ **ಶಾಂತ**[2]ನು ಎಂದು ಖ್ಯಾತನಾಗುವೆ.

ವಿಶಾಲವಾದ ಕಡೆಗಣ್ಣುಗಳಿರುವ ಸರ್ವಾಂಗ ಸುಂದರಿಯಾದ ನದಿಗಳಲ್ಲಿಯೇ ಪ್ರಧಾನಳಾದ ನಿನ್ನ ಪತ್ನಿ ಗಂಗಾದೇವಿಯೂ ಸಶರೀರಳಾಗಿ ರಾಜನಾದ ನಿನ್ನನ್ನು ಸೇವಿಸುತ್ತಾಳೆ.

**ಏವಮುಕ್ತಸ್ತು ಮಾಂ ಕ್ಷುಬ್ಧಃ ಸೋಽಭಿವೀಕ್ಷ್ಯಾರ್ಣವೋಽಬ್ರವೀತ್ ।**
**ಮಾಂ ಪ್ರಭೋ ದೇವದೇವಾನಾಂ ಕಿಮರ್ಥಂ ಶಪ್ತವಾನಸಿ ॥ 14 ॥**

**ಅಹಂ ತವ ವಿಧೇಯಾತ್ಮಾ ತ್ವತ್ಕೃತಃ ತ್ವತ್ಪರಾಯಣಃ ।**
**ಅಶಪೋಽಸದೃಶೈಃ ವಾಕ್ಯೈಃ ಆತ್ಮಜಂ ಮಾಂ ಕಿಮಾತ್ಮನಾ ॥ 15 ॥**

**ಭಗವನ್ ತ್ವತ್ಪ್ರಸಾದೇನ ವೇಗಾತ್ ಪರ್ವಣಿ ವರ್ಧಿತಃ ।**
**ಯದ್ಯಹಂ ಚಲಿತೋ ಬ್ರಹ್ಮನ್ ಕೋಽತ್ರ ದೋಷೋ ಮಹಾತ್ಮನಃ ॥ 16 ॥**

---

2. ಶಾಂತನು :
ಶಾಂತೋ ಭವೇತ್ಯೇವ ಮಯೋದಿತಸ್ತ್ವಂ ತನುತ್ವ ಮಾಪ್ತೋಽಥ ತತಶ್ಚ ಶಂತನುಃ।
ಇತೀರಿತಃ ಸೋಽಪಿ ನೃಪೋ ಬಭೂವ ಮಹಾಭಿಷಜ ನಾಮ ಹರೇಃ ಪದಾಶ್ರಮಃ॥
ಶಾಂತತನು ಎಂಬ ಆಕಾರಕ್ಕೆ ಅಕಾರಾಗಮ, ತಕಾರವೊಂದಕ್ಕೆ ನಾಶ. ಶಂತನು ಎಂದಾಯಿತು.
ಶಂತನು ತನ್ನ ಅಮೃತ ಹಸ್ತಗಳಿಂದ ವೃದ್ಧನನ್ನು ಮುಟ್ಟಿದರೆ ಕಂಠಗಳಲ್ಲಿರುವ ಘುರುಘುರು ಶಬ್ಧ ಹೋಗುತ್ತವೆ. ಮತ್ತೊಂದು ಬಾರಿ ಮುಟ್ಟಿದರೆ ಯುವಕನಾಗುವನು.
ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಸ ಸುಖಮಶ್ನುತೇ ।
ಪುನರ್ಯುವಾ ಚ ಭವತಿ ತಸ್ಮಾತ್ ತಂ ಶಂತನುಂ ವಿದುಃ ॥
ವಂಶ ನಿಲ್ಲುವ ಸ್ಥಿತಿಯಲ್ಲಿದ್ದಾಗ ವಂಶ ಮುಂದುವರಿಸಿದವನಾದ್ದರಿಂದಲೂ ಶಂತನು
ಶಾಂತಸ್ಯ ಜಜ್ಞೇ ಸಂತಾನಸ್ತಸ್ಮಾದಾಸೀತ್ ಸ ಶಂತನುಃ ।

**ಕ್ಷಿಪ್ತಾಭಿಃ ಪವನೈರದ್ಭಿಃ ಸ್ಪಷ್ಟೋ ಯದ್ಯಸಿ ಪರ್ವಣಿ ।**
**ಅತ್ರ ಮೇ ಕಿಂ ನು ಭಗವನ್ ವಿದ್ಯತೇ ಶಾಪಕಾರಣಮ್ ॥ 17 ॥**

ಸಮುದ್ರನು. ಬ್ರಹ್ಮದೇವನು ಶಾಪ ಕೊಡಲು ಮನಸ್ಸಿನಲ್ಲಿ ಕ್ಷೋಭೆ ಹೊಂದಿ ನನ್ನ ಕಡೆಗೆ ನೋಡುತ್ತಾ ಹೀಗೆಂದನು.

ಬ್ರಹ್ಮದೇವನೇ, ನೀನು ನನಗೇಕೆ ಶಾಪಕೊಟ್ಟಿರುವೆ. ಈ ನನ್ನ ಶರೀರವಿರುವುದೇ ನಿನ್ನಾದೇಶವನ್ನು ಪರಿಪಾಲಿಸಲೆಂದೇ. ನಾನು ನಿನ್ನ ಸೇವೆಯಲ್ಲಿಯೇ ನಿರತನಾಗಿದ್ದೇನೆ. ನಾನು ನಿನ್ನ ಮಗನೇ ಆಗಿರುವೆನು. ಹೀಗಿರುವಾಗ ನೀನು ನನಗೆ ಶಾಪಕೊಟ್ಟಿದೇಕೆ?

ನಿನ್ನ ಕೃಪೆಯಿಂದಲೇ ನಾನು ಹುಣ್ಣಿಮೆಯ ದಿನ ವೇಗವಾಗಿ ವರ್ಧಿಸುವೆನು. ಸ್ವಾಭಾವಿಕವಾದ ಈ ನಿಯಮದಿಂದ ಪ್ರೇರಿತನಾಗಿ ನಾನು ನನ್ನ ಎಲ್ಲೆ ಮೀರಿ ಮುಂದೆ ನೀನಿರುವ ಸ್ಥಳಕ್ಕೆ ಬಂದಿರುವೆ. ಹೀಗಿರುವಾಗ ನನ್ನ ತಪ್ಪೇನಿದೆ? ಇಂದು ಪೌರ್ಣಿಮೆಯಾದ್ದರಿಂದ ಪ್ರಬಲವಾದ ಗಾಳಿ ಬೀಸಿದಾಗ ಅದರಿಂದ ಪ್ರಚೋದಿತನಾಗಿ ನಿನ್ನ ಮೇಲೆ ನೀರೆರೆಚಿದೆ. ನೀನು ಒದ್ದೆಯಾಗಿ ಹೋದೆ. ನೀನು ನನಗೆ ಶಾಪಕೊಡುವ ಪ್ರಸಂಗವೇನಿದೆ?

**ಉದ್ಧತೈಶ್ಚ ಮಹಾವಾತೈಃ ಪ್ರವೃದ್ಧೈಶ್ಚ ಬಲಾಹಕೈಃ ।**
**ಪರ್ವಣಾ ಚೇಂದು ಯುಕ್ತೇನ ತ್ರಿಭಿಃ ಕ್ಷುಬ್ಧೋಽಸ್ಮಿ ಕಾರಣೈಃ ॥ 18 ॥**

ಪರ್ವ ದಿನಗಳಲ್ಲಿ ಬಿರುಗಾಳಿ ಬೀಸಿ ನನ್ನನ್ನು ಕ್ಷೋಭೆಗೊಳಿಸುತ್ತದೆ. ಮೇಘಗಳು ವೃದ್ಧಿಯಾಗುತ್ತವೆ. ಇಂದು ಚಂದ್ರನಿಂದ ಯುಕ್ತ **ಪರ್ವದಿನ**[3] ವಿರುತ್ತದೆ. ಈ ಮೂರು ಕಾರಣಗಳಿಂದ ನಾನು ಉದ್ವೇಗಗೊಂಡು ಎಲ್ಲೆ ಮಿರಿದ್ದೇನೆ. ಇದು ಅಕ್ಷಮ್ಯ ಅಪರಾಧವೆಂದು ನೀನು ತಿಳಿಯುವುದಾದರೆ ನಿನ್ನ ಪುತ್ರನೆಂಬ

---

3. ಪರ್ವಣಿ :

ಪರ್ವಕಾಲವೆಂದರೆ ಪೂರ್ಣಿಮೆ ಹಾಗೂ ಅಮಾವಾಸ್ಯೆಯಾಗಬಹುದು. ಹರಿವಂಶದಲ್ಲಿಯೇ *'ಪರ್ವಣಾ ಚೇಂದುಯುಕ್ತೇನ'* ಎನ್ನಲಾಗಿದೆ. ವಾದಿರಾಜರು ಅಮಾವಾಸ್ಯೆ ಎಂದಿದ್ದಾರೆ. ಅಮಾವಾಸ್ಯೆಯೆಂದರೆ ಸೂರ್ಯನ 'ಅಮಾ' ಎಂಬ ಕಿರಣದಲ್ಲಿ ಚಂದ್ರನು ಸೇರಿದ್ದರಿಂದಲೇ 'ಅಮಾವಾಸ್ಯೆ' ಎನ್ನಲಾಗಿದೆ. ಆದ್ದರಿಂದ ಅಮಾವಾಸ್ಯೆಯೆಂದಿಟ್ಟುಕೊಂಡರೆ ಬಾಧಕವೇನಿಲ್ಲ. ಪೂರ್ಣಿಮೆಯೇ ಆಗಬೇಕಿಲ್ಲ. ವರದರಾಜೀಯದಲ್ಲೂ ಅಮಾವಾಸ್ಯೆಯೆಂದಿದ್ದಾರೆ.

ಕಾರಣದಿಂದ ಕ್ಷಮಿಸು. ದಯ ಮಾಡಿ ಕ್ಷಮಿಸಿ ಶಾಪವನ್ನು ಹಿಂದಕ್ಕೆ ತೆಗೆದುಕೋ. ದೇವದೇವನೇ! ನೀನು ಬಿಟ್ಟು ನನಗೆ ಯಾರು ಆಶ್ರಯ ನೀಡಬಲ್ಲರು? ನಿನ್ನ ಶಾಪದ ಕಾರಣದಿಂದ ಜರ್ಝರಿತವಾಗಿದ್ದೇನೆ. ನನ್ನ ಮೇಲೆ ಕರುಣೆ ತೋರು.

**ಅಸ್ಯಾಸ್ತು ದೇವಗಂಗಾಯಾಃ ಗಾಂ ಗತಾಯಾಃ ತ್ವದಾಜ್ಞಯಾ ।**
**ಮಮ ದೋಷಾತ್ ಸದೋಷಾಯಾಃ ಪ್ರಸಾದಂ ಕರ್ತುಮರ್ಹಸಿ ॥ 19 ॥**

ಈ ದೇವ ಗಂಗೆಯಾದರೂ ನಿನ್ನಾಜ್ಞೆಯಿಂದಲೇ ಭೂಮಿಯಲ್ಲಿ ಅವತರಿಸಿದ್ದಾಳೆ. ಈ ಪ್ರಸಂಗದಲ್ಲಿ ಅವಳದೇನೂ ತಪ್ಪಿಲ್ಲ. ನನ್ನ ದೋಷದಿಂದಾಗಿ ಇವಳು ದೋಷಭಾಗಿನಿಯಾಗಿದ್ದಾಳೆ. ಯಾವ ತಪ್ಪೂ ಇಲ್ಲದ ಇವಳ ಮೇಲೂ ದಯೆ ಮಾಡು.

ದೇವತೆಗಳೇ ! ಸಮುದ್ರರಾಜನು ಭೂಭಾರಹರಣದ ಉದ್ದೇಶವನ್ನು ತಿಳಿಯದೆ ನನ್ನ ಶಾಪಾಗ್ನಿಯಿಂದ ಬಹಳ ಭಯಗೊಂಡಿರುವನು. ನಾನು ಅವನಿಗೆ ಸಮಾಧಾನ ಮಾಡುತ್ತಾ ಹೀಗೆ ಹೇಳಿದೆ.

**ಶಾಂತಿಂ ವ್ರಜ ನ ಭೇತವ್ಯಂ ಪ್ರಸನ್ನೋಽಸ್ಮಿ ಮಹೋದಧೇ ।**
**ಶಾಪೇಽಸ್ಮಿನ್ ಸರಿತಾಂ ನಾಥ ಭವಿಷ್ಯಂ ಶ್ರುಣು ಕಾರಣಮ್ ॥ 20 ॥**
**ತ್ವಂ ಗಚ್ಛ ಭಾರತೇ ವಂಶೇ ಸ್ವಂ ದೇಹಂ ಸ್ವೇನ ತೇಜಸಾ ।**
**ಆಧತ್ಸ್ವ ಸರಿತಾಂ ನಾಥ ತ್ಯಕ್ತ್ವೇಮಾಂ ಸಾಗರೀಂ ತನುಮ್ ॥ 21 ॥**

ಸಮುದ್ರನೇ, ಸಮಾಧಾನ ಮಾಡಿಕೋ. ನೀನೇನು ಭಯಪಡಬೇಕಾಗಿಲ್ಲ. ನಿನ್ನ ಶಾಪಕ್ಕೆ ಕಾರಣ ಹೇಳುವೆ. ನೀನು ನಿನ್ನ ಸಾಮರ್ಥ್ಯದಿಂದ ನಿನಗಿರುವ ಸಾಗರಮಯ ಶರೀರವನ್ನು ಪರಿತ್ಯಜಿಸಿ. ಒಂದು ಶರೀರ ಇಲ್ಲಿಯೆ ಇಡು. ಮತ್ತೊಂದು ಶರೀರವನ್ನು ಭರತವಂಶದ ಗರ್ಭದಲ್ಲಿಡು. ಈಗಲೇ ಹೊರಡು.

ಜಲೇಶ್ವರನೇ. ನೀನು ಭರತವಂಶದಲ್ಲಿ ರಾಜನಾಗಿ ಜನಿಸಿ. ರಾಜ್ಯಲಕ್ಷ್ಮಿಯಿಂದ ಸಂಪನ್ನನಾಗಿ ಬ್ರಾಹ್ಮಣಾದಿ ನಾಲ್ಕೂ ವರ್ಣಗಳ ಪ್ರಜೆಗಳನ್ನು ಧರ್ಮದಿಂದ ಪಾಲಿಸುವೆ.

ಈ ನಿನ್ನ ಪತ್ನಿಯಾದ ಗಂಗೆಯಾದರೂ ತನ್ನ ಸುಂದರಾಂಗಗಳಿಂದ ಶೋಭಾಯಮಾನಳಾಗಿ ಸುಂದರ ರೂಪವನ್ನು ಧರಿಸಿ ನಿನ್ನ ಸೇವಿಸುವಳು.

ಈ ಗಂಗೆಯೊಂದಿಗೆ ಆನಂದ ಹೊಂದುತ್ತಿರುವಾಗ ನಾನು ನೀಡಿದ ಶಾಪವನ್ನು ಸಂಪೂರ್ಣ ಮರೆಯುವೆ. ಆದ್ದರಿಂದ ತಡೆಮಾಡದೆ ರಾಜನಾಗಿ ಹುಟ್ಟಿ ನನ್ನಾದೇಶವನ್ನು ಪಾಲಿಸು. ನೀನು ಪ್ರಾಜಾಪತ್ಯ ವಿಧಿಯಿಂದ ಗಂಗೆಯೊಂದಿಗೆ ವಿವಾಹವಾಗು.

**ವಸನಃ ಪ್ರಚ್ಯುತಾಃ ಸ್ವರ್ಗಾತ್ ಪ್ರವಿಷ್ಟಾಶ್ಚ ರಸಾತಲಮ್ ।**
**ತೇಷಾಮುತ್ಪಾದನಾರ್ಥಾಯ ತ್ವಂ ಮಯಾ ವಿನಿಯೋಜಿತಃ ॥ 22॥**

**ಅಷ್ಟೌ ತಾನ್ ಜಾಹ್ನವೀ ಗರ್ಭಾನ್ ಅಪತ್ಯರ್ಥಂ ದಧಾತ್ವಿಯಮ್ ।**
**ವಿಭಾವಸೋಃ ತುಲ್ಯಗುಣಾನ್ ಸುರಾಣಾಂ ಪ್ರೀತಿವರ್ಧನಾನ್ ॥ 23 ॥**

ವರುಣನು ಮಹಾಭಿಷಕ್‌ನಾಗಿ ಭೂಮಿಯನ್ನಾಳಿ ಪುನಃ ಬ್ರಹ್ಮಲೋಕ ಸೇರಿದ. ಅಲ್ಲಿರುವಾಗ ದೇವತೆಗಳ ಸಭೆಯಲ್ಲಿದ್ದಾಗ ಗಂಗೆಯು ಉಟ್ಟಿದ್ದ ಬಟ್ಟೆ ಗಾಳಿಗೆ ಸರಿದಿದ್ದಾಗ ಎಲ್ಲರೂ ತಲೆತಗ್ಗಿಸಿದ್ದರು. ವರುಣನು ಮಾತ್ರ ನನ್ನ ಹೆಂಡತಿಯೆಂದು ನೋಡುತ್ತಲೆ ಇದ್ದ. ಇದನ್ನು ಮೊದಲೇ ತಿಳಿದಿದ್ದ ಬ್ರಹ್ಮದೇವನು ಈ ಅಪರಾಧಕ್ಕೆ ಹಿಂದೆಯೇ ಶಾಪ ನೀಡಿದ್ದ.

ಇದಲ್ಲದೆ ಸ್ವರ್ಗದಲ್ಲಿದ್ದ **ಅಷ್ಟವಸುಗಳು**[4] ನನ್ನ ಶಾಪದಿಂದ ರಸಾತಲದಲ್ಲಿ

---

4. **ಅಷ್ಟವಸುಗಳು :** ಆಪ, ಧರ, ಧ್ರುವ, ಸೋಮ, ಅನಿಲ, ಅನಲ, ಪ್ರತ್ಯಕ್ಷ, ಪ್ರಭಾಸರು. ಅಷ್ಟಮವಸುವನ್ನೆ ಪ್ರಭಾಸ, ವಿಭಾವಸು, ದ್ಯು ಎಂದು ನಾಮಗಳು. ಇವರಲ್ಲಿ ದ್ಯುವಿನ ಪತ್ನಿ ವರಾಂಗಿಯು ವರಸ್ತ್ರೀ ಎಂದೂ ಹೆಸರಿತ್ತು. ವರಾಂಗಿಯ ಸ್ನೇಹಿತೆ ವರಾಂಗಿ. ಜಿತವತಿಯೆಂದೂ ನಾಮಾಂತರ. ವರಾಂಗಿಗೆ ಜರಾಮರಣವಿಲ್ಲದಂತೆ ಮಾಡುವ ವಸಿಷ್ಠ ಧೇನು ನಂದಿನಿಯ ಹಾಲು ಕುಡಿದರೆ ಹತ್ತು ಸಾವಿರ ವರ್ಷ ಆಯುಸ್ಸುಯೌವ್ವನವುಂಟಾಗುತ್ತದೆ ಎಂದು ತಿಳಿದು ದ್ಯುವಿನ ಪತ್ನಿಗೆ ಹೇಳಿದಳು. ಅವಳಾದರೂ ತನ್ನ ಪತಿಯನ್ನು ನಂದಿನಿಗಾಗಿ ಪ್ರೇರೇಪಿಸಿದಳು. ದ್ಯುವಸುವು ತನ್ನ ಏಳು ತಮ್ಮಂದಿರ ಜೊತೆಗೆ ಹೊರಟು ಗೋವನ್ನು ಸೆಳೆದ. ವಸಿಷ್ಠ ಸಂಸ್ಥನಾದ ಬ್ರಹ್ಮನೆ ಶಾಪ ನೀಡಿದ. ದ್ಯುವಸುವಿಗೆ ಭೂಮಿಯಲ್ಲಿ ಹುಟ್ಟಬೇಕು. ತಮ್ಮಂದಿರ ಆಯುಸ್ಸು ಅವನಿಗೆ, 800 ವರ್ಷ ಜೀವಿಸಲಿ. ಸಹಾಯ ಮಾಡಿದ ಸೋದರರು ಕೇವಲ ಭೂಮಿಯಲ್ಲಿ ಹುಟ್ಟುವುದು ಮಾತ್ರ, ವಾಸವಿಲ್ಲ. ಇವರು ಏಳು ಮಂದಿ ಗಂಗೆಯ ಬಳಿ ಬಂದು ನಿನ್ನ ಗರ್ಭದಲ್ಲಿ ನಾವು ಬರುವೆವು. ನಮ್ಮನ್ನು ಹುಟ್ಟಿದ ಕೂಡಲೇ ನೀರನಲ್ಲಿ ಹಾಕಿ ಬಿಡು ಎಂದರು. ಗಂಗೆ ದೇವತಾ ಶರೀರದಿಂದಲೇ ಶಂತನುವಿನ ಪತ್ನಿಯಾಗುವಳೆಂದು ದೇವತಾಗರ್ಭದಲ್ಲಿಯೇ ಹುಟ್ಟಲು ಅವಳ ಬಳಿ ಬಂದರು.

**ಬಬಂಧ ತಾಂ ಗಾಮಥ ತಾನ್ ಶಶಾಪ ವಸಿಷ್ಠಸಂಸ್ಥಃ ಕಮಲೋದ್ಭವಃ ಪ್ರಭುಃ ॥**

– ತಾ.ನಿ.

ಬಿದ್ದಿದ್ದಾರೆ. ಅವರು ಮನುಷ್ಯ ರೂಪದಲ್ಲಿ ಹುಟ್ಟುವಂತೆ ಮಾಡುವುದೂ ನಿನ್ನ ಕಾರ್ಯವಾಗಿದೆ. ಈ ಅಷ್ಟ ವಸುಗಳು ಮನುಷ್ಯರಾಗಿ ಜನಿಸಲು ಈ ಗಂಗೆಯು ಇವರನ್ನು ಗರ್ಭದಲ್ಲಿ ಧರಿಸುವಳು. ಹೀಗೆ ಅಷ್ಟ ವಸುಗಳಿಗೆ ಜನ್ಮ ನೀಡಿದ ನಂತರ ಕುರುಕುಲದ ಮಹತ್ವ ಹೆಚ್ಚುತ್ತದೆ. ನಂತರ ಸಮುದ್ರದಲ್ಲಿಯೇ ಲೀನವಾಗುವ ಎಂದನು.

**ಅದ್ಯಾಪಿ ಭುವಿ ಗಾಂಗೇಯಃ ತತ್ರೈವ ವಸುರಷ್ಟಮಃ ।**
**ಸಪ್ತೇಮೇ ವಸವಃ ಪ್ರಾಪ್ತಾಃ ಸ ಏಕಃ ಪರಿಲಂಬತೇ ॥ 24 ॥**

**ದ್ವಿತೀಯಾಯಾಂ ಸ ಸೃಷ್ಟಾಯಾಂ ದ್ವಿತೀಯೋ ಶಾಂತನೋಸ್ತನುಃ ।**
**ವಿಚಿತ್ರವೀರ್ಯೋ ದ್ಯುತಿಮಾನ್ ಆಸೀದ್ ರಾಜಾ ಪ್ರತಾಪವಾನ್ ॥25॥**

ಸ್ವರ್ಗದಲ್ಲಿದ್ದ ಎಂಟು ಮಂದಿಯಲ್ಲಿ ಏಳು ಮಂದಿ ವಸುಗಳು ಸ್ವರ್ಗಕ್ಕೆ ಬಂದು ಸೇರಿದ್ದರು. ಅಷ್ಟಮವಸು ಗಂಗೆಯ ಮಗನಾಗಿ ಅಲ್ಲಿಯೇ ಇರುವನು. ಶಂತನು ಮುಂದೆ ಸತ್ಯವತಿಯನ್ನು ವಿವಾಹವಾಗಿ ವಿಚಿತ್ರವೀರ್ಯನನ್ನು ಸೃಷ್ಟಿಸಿದನು. ಪ್ರತಾಪಿಯಾದ ವಿಚಿತ್ರವೀರ್ಯನ ಇಬ್ಬರು ಮಕ್ಕಳಾದ ಪಾಂಡುರಾಜ, ಧೃತರಾಷ್ಟ್ರ ಎಂದು ಪ್ರಸಿದ್ಧರಾಗಿದ್ದಾರೆ. ಇವರಲ್ಲಿ ಪಾಂಡುವಿಗೆ ಕುಂತೀ-ಮಾದ್ರಿಯರೆಂಬ ಪತ್ನಿಯರಿದ್ದಾರೆ. ಧೃತರಾಷ್ಟ್ರನಿಗೆ ಗಾಂಧಾರಿಯೆಂಬ ಒಬ್ಬ ಪತ್ನಿಯಿದ್ದಳು. ಇವಳು ಯಾವಾಗಲೂ ಮಹಾಪತಿವ್ರತಸ್ಥಳಾಗಿದ್ದಳು.

**ತತ್ರ ವಂಶಾಃ ವಿಭಜ್ಯಂತಾಂ ವಿಪಕ್ಷಾಃ ಪಕ್ಷ ಏವ ಚ ।**
**ಪುತ್ರಾಣಾಂ ಹಿ ತಯೋಃ ರಾಜ್ಞೋ ಭವಿತಾ ವಿಗ್ರಹೋ ಮಹಾನ್ ॥26 ॥**

**ತೇಷಾಂ ವಿಮರ್ದೇ ದಾಯಾದ್ಯೇ ನೃಪಾಣಾಂ ಭವಿತಾ ಕ್ಷಯಃ ।**
**ಕ್ಷಯಂ ಯಾಸ್ಯಂತಿ ಶಸ್ತ್ರೇಣ ಮಾನವೈಃ ಸಹ ಪಾರ್ಥಿವಾಃ ॥ 27 ॥**

ಈ ಪಾಂಡು-ಧೃತರಾಷ್ಟ್ರರ ಮಕ್ಕಳಲ್ಲಿ ಮಹಾಯುದ್ಧವಾಗಲಿದೆ. ನೀವೆಲ್ಲರೂ ದೇವತೆಗಳೇ! ದುರ್ಯೋಧನ ಪಕ್ಷ-ಪಾಂಡವರ ಪಕ್ಷಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ನಿಮ್ಮ ಅಂಶಗಳನ್ನು ಅಭಿವ್ಯಕ್ತಗೊಳಿಸಿರಿ. ಪಿತೃ ಸಂಬಂಧಿ ರಾಜ್ಯವನ್ನು ವಿಭಾಗ ಮಾಡಿಕೊಳ್ಳುವಾಗ ಎರಡೂ ಪಕ್ಷದಲ್ಲಿ ಮಹಾಭಾರತ ಯುದ್ಧವೇರ್ಪಡುತ್ತದೆ. ಈ ಯುದ್ಧದಲ್ಲಿ ಅನೇಕ ರಾಜರುಗಳು ವಿನಾಶ ಹೊಂದುತ್ತಾರೆ. ಪ್ರಲಯ ಕಾಲದಂತೆ ಹದಿನೆಂಟು ಅಕ್ಷೌಹಿಣೀ ಸೈನ್ಯವನ್ನು ಕಬಳಿಸುತ್ತದೆ. ಭೂದೇವಿಯ ಭಾರವಿಳಿಯುತ್ತದೆ. ದ್ವಾಪರಾಂತ್ಯದಲ್ಲಿ ನಡೆಯಲಿರುವ ಈ ವಿನಾಶವನ್ನು ನಾನು ಬಹಳ ಹಿಂದೆಯೇ ತಿಳಿದಿದ್ದೇನೆ.

## ಅಶ್ವತ್ಥಾಮನಿಂದ ಭೂಭಾರಹರಣ

**ತತ್ರಾವಶಿಷ್ಟಾನ್ ಮನುಜಾನ್ ಸುಪ್ತಾನ್ ನಿಶಿ ವಿಚೇತಸಃ ।**
**ಧಕ್ಷ್ಯತೇ ಶಂಕರಸ್ಯಾಂಶಃ ಪಾವಕೇನಾಸ್ತ್ರ ತೇಜಸಾ ॥ 28 ॥**

ಈ ಮಹಾಭಾರತ ಯುದ್ಧದಲ್ಲಿ ಮೃತರಾಗದೆ ಉಳಿದಿರುವವರನ್ನು ರಾತ್ರಿಯಲ್ಲಿ ಮಲಗಿರುವಾಗ ರುದ್ರನ ಅವತಾರನಾದ ಅಶ್ವತ್ಥಾಮನು ತನ್ನ ಸಾಮರ್ಥ್ಯದಿಂದ ಕೊಂದು ಹಾಕುತ್ತಾನೆ. ಅತ್ಯಂತ ಕ್ರೂರವಾದ ವಿನಾಶವು ಪರಿಸಮಾಪ್ತವಾದಾಗ ಮೂರನೆಯದ್ದಾದ ದ್ವಾಪರಯುಗವು ಮುಗಿದಿರುತ್ತದೆ. ಭಗವಂತನಾದ ಶ್ರೀಕೃಷ್ಣನು ಪರಂಧಾಮಕ್ಕೆ ಹೊರಟು ಹೋದ ನಂತರ ಅತ್ಯಂತ ಭಯಂಕರವಾದ ಕಲಿಯುಗವು ಪ್ರಾಪ್ತವಾಗುತ್ತದೆ. ಅದನ್ನು ನೋಡಲು ದಾರುಣವಾಗಿರುತ್ತದೆ.

**ಅಧರ್ಮ ಪ್ರಾಯಪುರುಷಂ ಸ್ವಲ್ಪಧರ್ಮ ಪ್ರತಿಗ್ರಹಮ್ ।**
**ಉತ್ಸನ್ನ ಸತ್ಯಂ ಸಮಯೋಗಂ ವರ್ಧಿತಾನೃತ ಸಂಚಯಮ್ ॥ 29 ॥**

ಈ ಕಲಿಯುಗದಲ್ಲಿ ಪ್ರಾಯಶಃ ಪುರುಷರಲ್ಲಿ ಅಧರ್ಮವೇ ಅಧಿಕವಾಗಿರುತ್ತದೆ. ಧರ್ಮದಲ್ಲಿ ಸ್ವಲ್ಪಭಾಗವನ್ನು ಆಚರಿಸುವರು. ಸತ್ಯದ ವಿಚಾರವೇ ನಾಶವಾಗಿರುತ್ತದೆ. ನಿರಂತರವಾಗಿ ಮಿಥ್ಯಾವಾದಿಗಳಾಗಿರುವರು.

ಮುಂದೆ ರುದ್ರ ಹಾಗೂ ಸ್ಕಂಧನನ್ನು ಹೆಚ್ಚು ಆಶ್ರಯಿಸುತ್ತಾರೆ. ಅಲ್ಪ ಧರ್ಮ ಆಚರಣೆಯಿಂದಾಗಿ ಮಾನವರು ಪೂರ್ಣವಾಗಿ ಜೀವಿಸಿರುವುದಿಲ್ಲ.

ದೇವತೆಗಳೇ! ಭೂಭಾರವು ಕಡಮೆಯಾಗಬೇಕಾದರೆ ಭೂಮಂಡಲದಲ್ಲಿರುವ ರಾಜರೆಲ್ಲರೂ ಮೃತರಾಗಲೇಬೇಕು. ಆದ್ದರಿಂದ ನೀವೆಲ್ಲರೂ ಭೂಭಾರಹರಣದಲ್ಲಿ ಪಾತ್ರವಹಿಸಲು ಅಂಶಗಳಿಂದ ಅವತರಿಸಿರಿ. ತಡವಾಗುವುದು ಬೇಡ. ಧರ್ಮದ ಪಕ್ಷದಲ್ಲಿರುವ ದೇವತೆಗಳು ಕುಂತೀ-ಮಾದ್ರಿಯವರ ಗರ್ಭದಲ್ಲಿ ಹುಟ್ಟುವಂತೆ ನಿರ್ದೇಶಿಸಿರಿ. ಈ ಯುದ್ಧಕ್ಕೆ ಮೂಲಪುರುಷನು ಕಲಿಯೇ ಆಗಿರುವನು. ಅವನು ತನ್ನ ದೈತ್ಯರೊಂದಿಗೆ ಗಾಂಧಾರಿಯಲ್ಲಿ ಹುಟ್ಟಲಿ.

ಕಾಲನಿಯಾಮಕನಾದ ಪ್ರಭಾವಿತರಾದ ರಾಜರು ಎರಡು ಪಕ್ಷಗಳಲ್ಲಿ ಯಾವುದೊಂದರೊಂದು ಪಕ್ಷವನ್ನು ಬೆಂಬಲಿಸುತ್ತಾರೆ. ರಾಜ್ಯದಾಸೆಯಿಂದಾಗಿ ಎಲ್ಲಾ ರಾಜರೂ ಯುದ್ಧಪ್ರಿಯರಾಗುತ್ತಾರೆ.

ಭೂಮಿಯು ತನ್ನ ಸ್ಥಾನಕ್ಕೆ ಹೋಗಲಿ. ಭೂಭಾರಹರಣಕ್ಕಾಗಿ ಉಪಾಯವು ಈಗಾಗಲೇ ಆರಂಭವಾಗಿದೆ.

ಜನಮೇಜಯನೇ! ಬ್ರಹ್ಮದೇವನ ಮಾತನ್ನು ಕೇಳಿ ಭೂದೇವಿಯು ಭೂಮಂಡಲದ ರಾಜರ ವಧೆಯ ಸಲುವಾಗಿ ಕಾಲನೊಂದಿಗೆ ಹೊರಟು ಹೋದಳು.

**ದೇವಾನ್ ಚೋದಯನ್ ಬ್ರಹ್ಮಾ ನಿಗ್ರಹಾರ್ಥೇ ಸುರದ್ವಿಷಾಮ್ ।**
**ನರಂ ಚೈವ ಪುರಾಣರ್ಷಿಂ ಶೇಷಂ ಚ ಧರಣೀಧರಮ್ ॥ 30 ॥**

ನಂತರ ಬ್ರಹ್ಮದೇವನು ಪುರಾತನಮುನಿಯಾದ ನರನನ್ನೂ, ಶೇಷನನ್ನೂ, ಸನತ್ಕುಮಾರ, ಸಾಧ್ಯರು, ಅಗ್ನ್ಯಾದಿ ದೇವತೆಗಳು, ವರುಣ, ಯಮ, ಸೂರ್ಯ, ಚಂದ್ರ, ಗಂಧರ್ವ ಅಪ್ಸರೆಯರು, ರುದ್ರಾದಿತ್ಯರು, ಅಶ್ವಿನೀ ದೇವತೆಗಳನ್ನು ಅವತರಿಸಲು ಪ್ರಚೋದಿಸಿದನು. ನಂತರ ಸಕಲ ದೇವತೆಗಳೂ ಒಂದೊಂದಂಶದಿಂದ ಧರಣಿಯಲ್ಲಿ ಅವತರಿಸಿದರು.

**ಯಥಾ ತೇ ಕಥಿತಂ ಪೂರ್ವಮಂಶಾವತರಣಂ ಮಯಾ ।**
**ಅಯೋನಿಜಾ ಯೋನಿಜಾಶ್ಚ ತೇ ದೇವಾಃ ಪೃಥಿವೀತಲೇ ॥ 31 ॥**
**ದೈತ್ಯ ದಾನವ ಹಂತಾರಃ ಸಂಭೃತಾಃ ಪುರಷೇಶ್ವರಾಃ ।**
**ಕ್ಷೀರಿಕಾವೃಕ್ಷಸಂಕಾಶಾಃ ವಜ್ರಸಂಹನನಾಸ್ತಥಾ ॥ 32 ॥**

ಜನಮೇಜಯನೇ ! ನಾನು ನಿನಗೆ ಈ ಹಿಂದೆ ಆದಿಪರ್ವದಲ್ಲಿ ಹೇಳಿದಂತೆ ದೈತ್ಯ ದಾನವರನ್ನು ಸಂಹರಿಸುವ ದೇವತೆಗಳು ಯೋನಿಗಳಲ್ಲಿ ಹುಟ್ಟಿದವರು ಕೆಲವರು. ಮತ್ತೆ ಕೆಲವರು ಅಯೋನಿಜರಾಗಿ ಪೃಥಿವಿಯಲ್ಲಿ ಅವತರಿಸಿದರು. ಕ್ಷೀರಿವೃಕ್ಷಗಳಂತೆ ಅವರ ಶರೀರಗಳಿದ್ದವು. ವಜ್ರದಂತೆ ದೃಢವಾದ ಶರೀರವನ್ನು ಹೊಂದಿದ್ದರು.

ಕೆಲವರು ನಾಗಾಯುತ ಬಲಸಂಪನ್ನರಾದರು. ಪ್ರವಾಹ ರಭಸದಂತೆ ಬಲವುಳ್ಳವರು ಕೆಲವರು ಗದೆ ಪರಿಘ ಶಕ್ತ್ಯಾಯುಧಗಳ ಪ್ರಹಾರವನ್ನೂ ಸಹಿಸುವ ಓಜೋಬಲವುಳ್ಳವರಾಗಿದ್ದರು. ಕೆಲವರ ಬಾಹುಗಳು ಪರಿಘವೆಂಬ ಆಯುಧ ಸಮಾನವಾಗಿದ್ದವು. ಪರ್ವತಗಳನ್ನೆ ಕಿತ್ತು ಹೊಡೆಯಲು ಸಾಮರ್ಥ್ಯವುಳ್ಳವರಾಗಿದ್ದರು. ಪರಿಘಾಯುಧ ಹಿಡಿದ ಯುದ್ಧ ಮಾಡುವುದರಲ್ಲಿ ಪ್ರವೀಣರು. ನೂರಾರು, ಸಾವಿರಾರು ದೇವತೆಗಳು ವೃಷ್ಣಿವಂಶ, ಕುರುವಂಶ,

ಪಾಂಚಾಲವಂಶದಲ್ಲಿ ವೀರಾಧಿವೀರರಾಗಿ ರಾಜಕುಮಾರರಾಗಿಯೂ ಅವತರಿಸಿದರು. ಕೆಲವರು ಬ್ರಾಹ್ಮಣ ಕುಟುಂಬದಲ್ಲಿ ಅವತರಿಸಿದರು. ಮಹಾಸ್ತ್ರವೇತ್ತರೂ, ಮಹಾಧನುರ್ಧಾರಿಗಳು, ವೈದಿಕ ವ್ರತಾನುಷ್ಠಾನಗಳಲ್ಲಿ ಆಸಕ್ತರಾಗಿದ್ದರು. ಅವರು ಕೋಪಗೊಂಡದ್ದಾದರೆ ಪರ್ವತಗಳನ್ನೆ ಬುಡ ಸಹಿತ ಕಿತ್ತು ಹಾಕಬಲ್ಲರು. ಭೂಮಿಯನ್ನೇ ಸೀಳಬಲ್ಲರು. ಗಗನಕ್ಕೂ ಹಾರಬಲ್ಲರು. ಸಮುದ್ರವನ್ನೂ ಉಲ್ಲೋಲ ಕಲ್ಲೋಲ ಮಾಡಬಲ್ಲರು.

**ಏವಮಾದಿಶ್ಯ ತಾನ್ ಸರ್ವಾನ್ ಭೂತಭವ್ಯ ಭವತ್ಪ್ರಭುಃ ।**
**ನಾರಾಯಣೋ ಸಮಾವೇಶ್ಯ ಲೋಕಾನ್ ಶಾಂತಿಮುಪಾಗಮತ್ ॥ 33 ॥**

**ಭೂಯಃ ಶೃಣು ಯಥಾ ವಿಷ್ಣುರವತೀರ್ಣೋ ಮಹೀತಲೇ ।**
**ಪ್ರಜಾನಾಂ ವೈ ಹಿತಾರ್ಥಾಯ ಪ್ರಭುಃ ಪ್ರಾಣಿಹಿತೇಶ್ವರಃ ॥ 34 ॥**

**ಯಯಾತಿವಂಶಜಸ್ಯಾಥ ವಸುದೇವಸ್ಯ ಧೀಮತಃ ।**
**ಕುಲೇ ಪೂಜ್ಯೇ ಯಶಸ್ಕರ್ತಾ ಜಜ್ಞೇ ನಾರಾಯಣಃ ಪ್ರಭುಃ ॥ 35 ॥**

ಹೀಗೆ ಭೂತಭವ್ಯ ಭವತ್ ಸ್ವಾಮಿಯಾದ ಬ್ರಹ್ಮದೇವನು ದೇವತೆಗಳಿಗೆ ಆದೇಶ ನೀಡಿದರು. ನಾರಾಯಣನಿಗೆ ಜಗತ್ತಿನ ರಕ್ಷಣಾಭಾರವನ್ನು ವಹಿಸಿ ತಾನು ಶಾಂತಮನಸ್ಕನಾದನು.

ಜನಮೇಜಯನೇ ! ಸಕಲ ಪ್ರಾಣಿಗಳಿಗೂ ಹಿತವನ್ನುಂಟು ಮಾಡುವುದರಲ್ಲಿ ಸಮರ್ಥನಾದ ಮಹಾವಿಷ್ಣುವು, ಸಮಸ್ತ ಪ್ರಜೆಗಳ ಹಿತದ ಸಲುವಾಗಿ ಭೂಮಂಡಲದಲ್ಲಿ ಅವತರಿಸಿದ ಕಥೆ ಹೇಳುವೆ ಕೇಳು.

ಯಯಾತಿ ರಾಜನ ವಂಶದಲ್ಲಿ ಜನಿಸಿದ ಮಹಾಮೇಧಾವೀ ವಸುದೇವನ ಶ್ರೇಷ್ಠವಾದ ವಂಶದಲ್ಲಿ ಯಶೋವರ್ಧಕವಾದ ಕಾರ್ಯಗಳನ್ನು ಮಾಡುವ ಪ್ರಭುವಾದ ನಾರಾಯಣನು ಅವತರಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ದೇವತಾ ಅವತರಣವೆಂಬಲ್ಲಿ
ಐವತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಚತುಃಪಂಚಾಶತ್ತಮೋಽಧ್ಯಾಯಃ

## ನಾರದ–ನಾರಾಯಣ ಸಂಭಾಷಣೆ

*ವೈಶಂಪಾಯನ ಉವಾಚ –*

**ಕೃತಕಾರ್ಯೇ ಗತೇ ಕಾಲೇ ಜಗತ್ಯಾಂ ಚ ಯಥಾನಯಮ್ ।**
**ಅಂಶಾವತರಣೇ ವೃತ್ತೇ ಸುರಾಣಾಂ ಭಾರತೇ ಕುಲೇ ॥ 1 ॥**

**ಭಾಗೇಽವತೀರ್ಣೇ ಧರ್ಮಸ್ಯ ಶಕ್ರಸ್ಯ ಪವನಸ್ಯ ಚ ।**
**ಅಶ್ವಿನೋಃ ದೇವಭಿಷಜೋಃ ಭಾಗೇ ವೈ ಭಾಸ್ಕರಸ್ಯ ಚ ॥ 2 ॥**

**ಪೂರ್ವ ಮೇವಾವನಿಗತೇ ಭಾಗೇ ದೇವ ಪುರೋಧಸಃ ।**
**ವಸೂನಾಮಷ್ಟಮೇ ಭಾಗೇ ಪ್ರಾಗೇವ ಧರಣೀಂ ಗತೇ ॥ 3 ॥**

ವೈಶಂಪಾಯನರು ಜನಮೇಜಯನಿಗೆ – ರಾಜನ್ ! ಭೂದೇವಿ ಹಾಗೂ ಕಾಲಪುರುಷರು ಕೃತಕೃತ್ಯರಾಗಿ ತಮ್ಮ ಸ್ಥಾನಕ್ಕೆ ಹೋದರು. ನಂತರ ಭರತವಂಶದಲ್ಲಿ ದೇವತೆಗಳು ತಮ್ಮ ತಮ್ಮ ಅಂಶಗಳಿಂದ ಅವತರಿಸಿದರು. ಯಮಧರ್ಮ, ಇಂದ್ರದೇವ, ವಾಯುದೇವ, ಅಶ್ವಿನೀದೇವತೆಗಳು, ಸೂರ್ಯದೇವ ಇವರೆಲ್ಲರೂ ತಮ್ಮ ಅಂಶಗಳಿಂದ ಭೂಮಿಯಲ್ಲಿ ಅವತರಿಸಿದರು.

ದೇವ ಗುರುವಾದ **ಬೃಹಸ್ಪತಿ**[1]ಯು ಇವರೆಲ್ಲರಿಗಿಂತಲೂ ಮೊದಲೇ

1. ಬೃಹಸ್ಪತಿ – ದ್ರೋಣನಾಗಿ : ಬೃಹಸ್ಪತೇಃ ಬೃಹತ್ಕೀರ್ತೇಃ ದೇವರ್ಷೇಃ ವಿದ್ಧಿ ಭಾರತ। ಅಂಶಾದ್ ದ್ರೋಣಂ ಸಮುತ್ಪನ್ನಂ ಭಾರದ್ವಾಜ ಮಯೋನಿಜಮ್ ॥–*ಮ.ಭಾ.68/69*

ಅವತರಿಸಿದ್ದನು. ವಸುಗಳಲ್ಲಿ ಅಷ್ಟಮ ವಸುವಾದ ದ್ಯುವಸುವು ಈ ಮೊದಲೇ **ಭೀಷ್ಮ**[2]ನಾಗಿ ಅವತರಿಸಿರುವನು. ಶುಕ್ರ, ಸೋಮ ವರುಣರು ಅವತರಿಸಿದ್ದರು. ಮೃತ್ಯು-**ಕಲಿ**[3]ಗಳೂ ಹುಟ್ಟಿದ್ದರು. ರುದ್ರದೇವನು ಅಶ್ವತ್ಥಾಮನಾಗಿಯೂ, ಮಿತ್ರ, ಕುಬೇರ-ಭಗವದತ್ತನಾಗಿಯೂ, ಗಂಧರ್ವರು, ನಾಗರು, ಮೊದಲಾದ-ವರೆಲ್ಲರೂ ಅತರಿಸಿದ್ದರು. ಹೀಗೆ ಅವತರಿಸಿದ ಮೇಲೆ ನಾರದರು ನಾರಾಯಣನ ಬಳ ಬಂದು ಹೀಗೆಂದರು.

ನಾರದರ ತೇಜಸ್ಸು ಅತ್ಯುದ್ಭುತವಾಗಿತ್ತು. ಅಗ್ನಿಯಂತೆ ದೇದಿಪ್ಯಮಾನವಾದ ಶರೀರ ಅವರದು. ಸೂರ್ಯನಂತೆ ಪ್ರಕಾಶಮಾನ ನೇತ್ರ ದ್ವಂದ್ವಗಳು ದೇದಿಪ್ಯಮಾನ ಜಟಾಮಂಡಲ ಧರಿಸಿದ್ದ ನಾರದರು ಮಹತೀಯೆಂಬ ವೀಣೆಯನ್ನು ಮೀಟುತ್ತಾ, ಉತ್ತರೀಯವಾಗಿ ಕೃಷ್ಣಾಜನ ಧರಿಸಿದ್ದರು. ಹೇಮವರ್ಣದ ಜನಿವಾರ, ದಂಡ ಕಮಂಡಲ ಧರಿಸಿ ಕಾಂತಿಯಿಂದ ಇಂದ್ರನಂತಿದ್ದರು.

ಜಗತ್ತಿನ ರಹಸ್ಯ ಭೇದಿಸುವುದರಲ್ಲಿ ನಿಪುಣರೂ, ಆಗಿದ್ದು ಕಲಹಪ್ರಿಯರೆಂದು ಪ್ರಸಿದ್ಧರು. ಕ + ಲ + ಹ ಪ್ರಿಯರೆಂದರ್ಥ. ಕ ಬ್ರಹ್ಮಾ, ಲ ಲಯಕರ್ತಾ ಶಿವ, ಹರಿ ಹೀಗೆ ತ್ರಿಮೂರ್ತಿಗಳಿಗೆ ಪ್ರಿಯನೆಂದು ವಿದ್ವದ್ರೂಢಿಯು. ಅಜ್ಞರೂಢಿ ಜಗಳ ಪ್ರಿಯ ಎಂದು. ಚತುರ್ವೇದ ಪಾರಾಯಣ ಸಮರ್ಥರು ಉದ್ಗಾತೃಗಳು. ವಿದ್ವಾಂಸರು, ಸಂಗೀತಶಾಸ್ತ್ರ ಪಿತಾಮಹರಾಗಿದ್ದರು.

---

ತತಃ ಸಮಭವದ್ ದ್ರೋಣಃ ಕಲಶೇ ತಸ್ಯ ಧೀಮತಃ । *-ಆ.ಪ. 29/38*

ದ್ರೋಣರು ಭೀಮಾರ್ಜುನಾದಿಗಳಿಗೆ ಗುರುವಾಗುವುದರಿಂದ ಬ್ರಹ್ಮದೇವರ ಆವೇಶವಿತ್ತು. ಸರ್ವಜ್ಞನೂ ಆಗಿದ್ದನು.

ಜಿಹ್ವಾಗ್ರೇ ಚತುರೊ ವೇದಾನ್ ಹಸ್ತಾಗ್ರೇ ಸಶರಂ ಧನುಃ ।
ಉಭಯೋಃ ದ್ರೋಣ ಸಾಮರ್ಥ್ಯಂ ಶಾಪದಪಿಶರಾದಪಿ ॥

2. ಭೀಷ್ಮ :

ಸತುದೇವವ್ರತೋ ನಾಮ ಗಾಂಗೇಯ ಇತಿ ಚಾಭವತ್ ।
ದ್ಯುನಾಮಾ ಶಂತನೋಃ ಪುತ್ರಃ ಶಂತನೋರಧಿಕೋ ಗುಣೈಃ ॥*-ಮ.ಭಾ.ಆ.99/47*

3. ಕಲಿ :

ಕಲಿಃ ಸುಯೋಧನೋಭವತ್ ।

ವೈರಿಕೇಲಿಕಿಲೋ ವಿಪ್ರೋ ಬ್ರಾಹ್ಮಃ ಕಲಿರಿವಾಪರಃ ।
ದೇವಗಂಧರ್ವ ಲೋಕಾನಾಮಾದಿವಕ್ತಾ ಮಹಾಮುನಿಃ ॥ 4 ॥
ಸ್ಥಿತೋ ದೇವಸಭಾಮಧ್ಯೇ ಸಂರಬ್ಧೋ ವಿಷ್ಣುಮಬ್ರವೀತ್ ॥ 5 ॥

ನಾರದರಾದರೂ ಅಜ್ಞ ಮಂದಮತಿಗಳು ಕಲಹದಿಂದ ಸಂತೋಷ-ಪಡುವನೆಂದು ತಿಳಿಯುತ್ತಾರೆ. ಬ್ರಾಹ್ಮಣರೇ ಆಗಿದ್ದರೂ ಮತ್ತೊಬ್ಬ ಕಲಹಕಾರಿ ಕಲಿಯಂತೆ ಎಂದು ತಿಳಿಯುವರು. ಆದರೆ ದೇವಗಂಧರ್ವರಿಗೆ ಮುಖ್ಯ ಉಪದೇಶಕರು. ಇಂತಹ ನಾರದರು ದೇವಸಭೆಯಲ್ಲಿ ನಾರಾಯಣನಿಗೆ ಹೀಗೆಂದರು.

ಅಂಶಾವತರಣಂ ವಿಷ್ಣೋ ಯದಿದಂ ತ್ರಿದಶೈಃ ಕೃತಮ್ ।
ಕ್ಷಯಾರ್ಥೇ ಪೃಥಿವೀಂದ್ರಾಣಾಂ ಸರ್ವಮೇತದಕಾರಣಮ್ ॥ 6 ॥

ಶ್ರೀಮನ್ನಾರಾಯಣನೇ ! ಈಗಾಗಲೇ ದೇವತೆಗಳೆಲ್ಲರೂ ಭೂಭಾರಹಣರಕ್ಕಾಗಿ ಭೂಮಿಯಲ್ಲಿ ಅವತರಿಸಿರುವರು. ಇದು ವ್ಯರ್ಥವಾಗಿದೆ. ನೀನು ಅವತರಿಸದೆ ಭೂಭಾರಹರಣವಾಗಲಾರದು. ನರ-ನಾರಾಯಣರ ಸಹಾಯದಿಂದ ಮಾತ್ರ ದೇವತಾಕಾರ್ಯ ಸಿದ್ಧವಾಗುವುದು. ಆದ್ದರಿಂದ ನೀನು ಬೇಗನೆ ಭೂಭಾರ ಹರಣ ಕಾರ್ಯದಲ್ಲಿ ಅವತರಿಸು. ನೇತ್ರ ರಹಿತರಿಗೆ ನೇತ್ರ ದಾತೃವೂ, ಪ್ರಭುಗಳಿಗೆ ಪ್ರಭುವೂ, ಗತಿಶೀಲ ಪ್ರಾಣಿಗಳಿಗೆ ಪರಮಗತಿಯಾಗಿರುವೆ. ನೀನು ಭೂಭಾರಹರಣಕ್ಕಾಗಿ ದೇವತೆಗಳೆಲ್ಲರನ್ನೂ ಅವತರಿಸುವಂತೆ ಮಾಡಿ ನೀನು ಮಾತ್ರ ಅವತರಿಸದೆ ಇರುವುದು ಸಾಧುವಲ್ಲ ಸ್ವಾಮಿ.

## ನಾರದರ ಪ್ರಾರ್ಥನೆ

ತದಹಂ ತ್ವರಯಾ ವಿಷ್ಣೋ ಪ್ರಾಪ್ತಃ ಸುರಸಭಾಮಿಮ್ ।
ತವ ಸಂಚೋದನಾರ್ಥಂ ವೈ ಶ್ರುಣು ಚಾಪ್ಯತ್ರ ಕಾರಣಮ್ ॥ 7 ॥
ಯೇ ತ್ವಯಾ ನಿಹತಾಃ ದೈತ್ಯಾ ಸಂಗ್ರಾಮೇತಾರಮಯೇ ।
ತೇಷಾಂ ಶ್ರುಣು ಗತಿಂ ವಿಷ್ಣೋ ಯೇ ಗತಾಃ ಪೃಥಿವೀತಲಮ್ ॥ 8 ॥

ಪುರೀ ಪೃಥಿವ್ಯಾಂ ಮುದಿತಾ ಮಥುರಾನಾಮತಃ ಶ್ರುತಾ ।
ನಿವಿಷ್ಟಾ ಯಮುನಾ ತೀರೇ ಸ್ಫೀತಾ ಜನಪದಾಯುತಾ ॥ 9 ॥
ಮಧುರ್ನಾಮ ಮಹಾನಾಸೀದ್ ದಾನವೋ ಯುಧಿ ದುರ್ಜಯಃ ।
ತ್ರಾಸನಃ ಸರ್ವಭೂತಾನಾಂ ಬಲೇನ ಮಹತಾನ್ವಿತಃ ॥ 10 ॥
ಘೋರಂ ಮಧುವನಂ ನಾಮ ಯತ್ರಾಸೌ ನ್ಯವಸತ್ ಪುರಾ ।

ಶ್ರೀಹರಿಯೇ! ನಾನು ತ್ವರೆಯಿಂದ ಈ ಸಭೆಗೆ ಬಂದದ್ದು ನೀನು ಭೂಮಿಯಲ್ಲಿ ಬೇಗನೇ ಅವತರಿಸಲು ಪ್ರಚೋದಿಸಲೆಂದೆ. ಇನ್ನೊಂದು ಕಾರಣವೂ ಇದೆ. ತಾರಕಾಮಯ ಯುದ್ಧದಲ್ಲಿ ನಿನ್ನಿಂದ ಹತರಾದ ದೈತ್ಯದಾನವರೂ ಭೂಮಿಯಲ್ಲಿ ಹುಟ್ಟಿದ್ದಾರೆ. ಅವರು ಭೂಮಂಡಲದಲ್ಲಿ 'ಮಥುರಾ' ಎಂಬ ಹೆಸರಿನ ಪಟ್ಟಣವಿದೆ. ಸಸ್ಯಜಲಸಮೃದ್ಧವಾಗಿದ್ದು ಆನಂದದಾಯಕವಾಗಿದೆ. ಇದು ಯಮುನೆಯ ತೀರದಲ್ಲಿದೆ. ಅನೇಕ ನಗರ ಪಟ್ಟಣಗಳಿಂದ ಕೂಡಿದ ಮಥುರಾದಲ್ಲಿ ಮಧುನಾಮಕ ದೈತ್ಯನಿರುವನು. ಸರ್ವರಿಂದಲೂ ಅಜೇಯನೂ ಮಹಾ ಬಲಿಷ್ಠನೂ ಆಗಿದ್ದು ಸಕಲ ಪ್ರಾಣಿಗಳನ್ನು ಹಿಂಸಿಸುತ್ತಿರುವನು. ಅಲ್ಲಿಯೇ 'ಮಧುವನ'ವೆಂಬ ಹೆಸರಿನ ಆಕಾಶಚುಂಬಿ ವೃಕ್ಷಗಳಿಂದ ಯುಕ್ತವಾಗಿದೆ. ಮಧು ದೈತ್ಯನು ಮಧುವನದಲ್ಲಿ ವಾಸಿಸುತ್ತಿರುವನು. ಅವನ ಪುತ್ರನೇ ಲವಣಾಸುರ. ಇವನು ಮಹಾಪರಾಕ್ರಮಿಯಾಗಿದ್ದು ಸಕಲ ಪ್ರಾಣಿಗಳನ್ನು ಹಿಂಸಿಸುತ್ತಿರುವನು. ಅವನು ಸ್ವೇಚ್ಛಾಚಾರಿಯಾಗಿದ್ದು ಗರ್ವದಿಂದ ದುರಹಂಕಾರಿಯಾಗಿದ್ದು, ದೇವತೆ ಹಾಗೂ ಸಮಸ್ತ ಲೋಕಗಳನ್ನು ಕ್ಷೋಭೆಯನ್ನುಂಟು ಮಾಡುತ್ತಿದ್ದನು. ಅಯೋಧ್ಯಾದಲ್ಲಿದ್ದ ಸಮಸ್ತ ರಾಜರಿಗೂ ರಾಕ್ಷಸರಿಗೂ ಭಯಂಕರನಾಗಿದ್ದನು. ಶ್ರೀರಾಮನು ಅಯೋಧ್ಯೆಯನ್ನು ಆಳುತ್ತಿದ್ದನು. ತನ್ನ ಬಲಸಾಮರ್ಥ್ಯದಿಂದ ದುರಹಂಕಾರಿಯಾಗಿದ್ದ ಮಧು ದೈತ್ಯನು ಶ್ರೀರಾಮನಲ್ಲಿಗೆ ದೂತನ ಮೂಲಕ ಹೀಗೆ ಹೇಳಿದನು.

### ಮಧುವಿನ ದುರಹಂಕಾರತೆ

ವಿಷಯಾಸನ್ನ ಭೂತೋಽಸ್ಮಿ ತವ ರಾಮ ರಿಪುಶ್ಚ ಹ ।
ನ ಚ ಸಾಮಂತಮಿಚ್ಛಂತಿ ರಾಜನೋ ಬಲದರ್ಪಿತಮ್ ॥ 11 ॥
ರಾಜ್ಞಾ ರಾಜ್ಯವ್ರತಸ್ಥೇನ ಪ್ರಜಾನಾಂ ಹಿತಕಾಮ್ಯಯಾ ।
ಜೇತವ್ಯಾ ರಿಪವೋ ಸರ್ವೇ ಸ್ಫೀತಂ ವಿಷಯಮಿಚ್ಛತಾ ॥ 12 ॥

ರಾಮನೇ ! ನಾನು ನಿನ್ನ ರಾಜ್ಯದ ಸಮೀಪವೇ ಇದ್ದೇನೆ. ನಿನಗೆ ಮಹಾಶತ್ರುವೂ ಆಗಿದ್ದೇನೆ. ಪ್ರಾಯಃ ರಾಜರು ಇಂತಹ ಬಲಿಷ್ಠನಾದ ಸಾಮಂತ ರಾಜನು ಬದುಕಿರುವುದನ್ನು ಇಚ್ಛಿಸುವುದಿಲ್ಲ. ರಾಜ್ಯಪಾಲನೆಯೇ ಒಂದು ವ್ರತವೆಂದು ತಿಳಿಯುವ, ತನ್ನ ರಾಜ್ಯವು ಸಂಪತ್ತಿನಿಂದ ಸಮೃದ್ಧವಾಗಬೇಕೆಂದು ಆಶಿಸುವ ರಾಜನು ಪ್ರಜೆಗಳಿಗೆ ಹಿತವನ್ನುಂಟು ಮಾಡುವ ಆಶಯದಿಂದ ಎಲ್ಲ ಶತ್ರುಗಳನ್ನು ಜಯಿಸಿ ತನ್ನ ಅಂಕೆಯಲ್ಲಿಟ್ಟುಕೊಳ್ಳಬೇಕು.

ಯಾವ ರಾಜನ ಕೇಶವು ರಾಜ್ಯಾಭಿಷೇಕದ ಅವಭೃಥ ಸ್ನಾನ ಮಾಡಿ ಆರ್ದ್ರವಾಗಿದೆಯೋ, ಯಾರು ಪ್ರಜಾರಂಜನ ಮಾಡಲಿಚ್ಛಿಸುವನೋ ಅಂತಹ ರಾಜನು ಮೊದಲು ತನ್ನ ಇಂದ್ರಿಯಗಳನ್ನು ಜಯಿಸಬೇಕು. ಅಂತರಂಗದ ಶತ್ರು ಗೆದ್ದವನು ಬಾಹ್ಯ ಶತ್ರುಗಳನ್ನು ಖಂಡಿತವಾಗಿಯೂ ಜಯಿಸಬಲ್ಲ.

ಯಾವ ರಾಜನು ಉತ್ತಮ ವ್ಯವಹಾರವನ್ನು ಮಾಡಬೇಕೆಂಬ ಹಂಬಲವುಳ್ಳವನೋ ಅಂತಹ ರಾಜನಿಗೆ ನ್ಯಾಯ ನೀತಿಗಳ ಜ್ಞಾನವುಂಟು ಮಾಡುವುದರಲ್ಲಿ ಲೋಕದಂತಹ ಗುರುವೇ ಇಲ್ಲ.

ದ್ಯೂತವೇ ಮೊದಲಾದ ವ್ಯಸನಕ್ಕೆ ಯಾವ ರಾಜನು ಬಲಿಯಾಗಿಲ್ಲವೋ, ಧರ್ಮದಲ್ಲಿ ಆಸಕ್ತನಾಗಿರುವನೋ ಯಾರು ಮಹಾಬಲಿಷ್ಠನೋ ಅಂತಹ ರಾಜನಿಗೆ ಸಾಮಂತರಾಜರಿಂದ ಯಾವುದೇ ಭಯವಿರುವುದಿಲ್ಲ.

ಯಾರು ಶರೀರದೊಡನೆ ಹುಟ್ಟಿರುವ ಇಂದ್ರಿಯ ರೂಪ ಶತ್ರುಗಳು ಪ್ರಬಲರಾದಾಗ, ಹೊರಶತ್ರುಗಳಿಗೆ ಪ್ರಿಯವನ್ನುಂಟು ಮಾಡುವ ಮೋಹ, ಮದ, ಮಾತ್ಸರ್ಯಗಳಿಂದ ರಾಜನು ಧೈರ್ಯ ಗುಂದುವನು.

ರಾಮ! ನೀನು ಮೋಹವಶನಾಗಿ ಕೇವಲ ಒಬ್ಬ ಸ್ತ್ರೀಗೋಸ್ಕರ ಮಹತ್ತಾತ ಸೇನಾವಾಹಿನೀಯೊಂದಿಗೆ ಲಂಕೆಗೆ ಲಗೆ ಇಟ್ಟು ರಾವಣಾದಿಗಳನ್ನು ಕೊಂದು ಹಾಕಿರುವೆ. ಇದು ನ್ಯಾಯವೆ? ನೀನು ಪರಾಕ್ರಮ ತೋರಿರಬಹುದಾದರೂ ಅತ್ಯಂತ ನಿಂದ್ಯವಾದ ಕಾರ್ಯವಿದು.

ಇದಲ್ಲದೆ ವನವಾಸ ಮಾಡುತ್ತಿದ್ದು, ವನವಾಸಿ ಮುನಿ ವೃತ್ತಿಯನ್ನವಲಂಬಿಸಿ ಖರದೂಷಣಾದಿ ಹದಿನಾಲ್ಕು ಸಾವಿರ ಸೈನ್ಯವನ್ನು ಕೊಂದು ಹಾಕಿರುವೆ. ಇದೇನು ಮುನಿವೃತ್ತಿಗೆ ಹೇಳದ ವೃತ್ತಿಯೇ ಇದು?

**ಸತಾಮಕ್ರೋಧಜೋ ಧರ್ಮಃ ಶುಭಾಂ ನಯತಿ ಸದ್ಗತಿಮ್ ।**
**ಯತ್ತ್ವಯಾ ನಿಹತಾ ಮೋಹಾದ್ ದೂಷಿತಾಶ್ಚ ಆಶ್ರಮೌಕಸಃ ॥ 13 ॥**

ಕೋಪವನ್ನು ನಿಗ್ರಹಿಸುವುದೇ ಸಜ್ಜನರ ಲಕ್ಷಣ. ಈ ಧರ್ಮವೇ ಸದ್ಗತಿಯನ್ನು ಹೊಂದಿಸುತ್ತದೆ. ನೀನು ಆಶ್ರಮ ವಾಸಿಗಳ ವ್ರತವನ್ನು ಹಿಡಿದು ಸಂಹಾರಗೈದು ಬೇರೆ ಆಶ್ರಮವಾಸಿಗಳೂ ನಿನ್ನ ಮಾರ್ಗವನ್ನು ಅವಲಂಬಿಸುತ್ತಾರೆ. ಇದರಿಂದಾಗಿ ದುರಾಚಾರಕ್ಕೆ ಪ್ರವರ್ತಕ ನೀನಾದೆ.

ನಿಜವಾಗಲೂ ರಾವಣನು ಧನ್ಯನೇ ಸರಿ. ಗ್ರಾಮ್ಯಧರ್ಮದ ಮೇಲೆ ದೃಷ್ಟಿಯಿಟ್ಟಿರುವ ವೇಷದಲ್ಲಿ ವನವಾಸಿಯಾದ ನಿನ್ನಿಂದಲೇ ಸತ್ತನಲ್ಲವೆ? ಅದೂ ಒಬ್ಬ ಹೆಂಗಸಿಗಾಗಿ.

ದುರ್ಬುದ್ಧಿಯೂ ಜೀತೇಂದ್ರಿಯನಲ್ಲದವನೂ ಆಗಿರದ ರಾವಣನು ಆದ ರಾವಣನನ್ನು ಕೊಂದದ್ದು ವಿಶೇಷವೇನಲ್ಲ. ನಿನಗೆ ಅದಟು ಇದ್ದರೆ ನನ್ನೊಂದಿಗೆ ಯುದ್ಧ ಮಾಡು ಎಂದು.

**ತಸ್ಯ ದೂತಸ್ಯ ತಚ್ಛ್ರುತ್ವಾ ಭಾಷಿತಂ ರೂಕ್ಷವಾದಿನಃ ।**
**ಧೈರ್ಯಾದಸಂಭ್ರಾತವಪುಃ ಸಸ್ಮಿತಂ ರಾಘವೋಽಬ್ರವೀತ್ ॥ 14 ॥**

**ಅಸದೇತತ್ ತ್ವಯಾ ದೂತ! ಭಾಷಿತಂ ತಸ್ಯ ಗೌರವಾತ್ ।**
**ಯನ್ಮಾಂ ಕ್ಷಿಪಸಿ ದೋಷೇಣ ವೇದಾತ್ಮಾನಂ ಚ ಸುಸ್ಥಿರಮ್ ॥ 15 ॥**

ಶ್ರೀರಾಮನು ದೂತನ ಮಾತನ್ನು ಕೇಳಿ ದೂತನೇ! ನೀನು ನಿನ್ನ ದಾನವನ ಮೇಲಿಟ್ಟಿರುವ ನಂಬಿಕೆಯಿಂದ ನನ್ನೊಂದಿಗೆ ಅಂತಹ ಮಾತುಗಳನ್ನು ಹೇಳಬಾರದಿತ್ತು. ಇದು ನೀನು ನನ್ನ ಮೇಲೆ ಮಾಡುತ್ತಿರುವ ದೋಷಾರೋಪಣೆ ಹೊರತು ತಥ್ಯವಲ್ಲ. ನೀನೆ ನ್ಯಾಯ ಮಾರ್ಗದಲ್ಲಿಯೆ ಇರುವೆನೆಂದು ತಿಳಿದಿರುವೆ.

ನಾನು ಸಜ್ಜನರ ಮಾರ್ಗದಲ್ಲಿ ಮೂಢನಾಗಿದ್ದರೆ ನಿನಗೇನು ನಷ್ಟ? ರಾವಣನು ಹತನಾದರೇನು? ನನ್ನ ಪತ್ನಿ ಅಪಹಾರವಾದರೇನು? ಇದಕ್ಕೆಲ್ಲ ನೀನೇಕೆ ಪ್ರಲಾಪ ಮಾಡುತ್ತಿರುವೆ?

ನೀನು ನನ್ನನ್ನು ಅಸತ್ಪುರುಷವೆಂದ ಮಾತ್ರಕ್ಕೆ ಅಸತ್ತಾಗುವುದಿಲ್ಲ. ಸತ್ಪುರುಷರ ಹಾಗೂ ಅಸತ್ಪುರುಷರ ಹೃದಯದಲ್ಲಿರುವ ಭಗವಂತನು ಸಾಕ್ಷಿಯಿರುವಾಗ ಯಾರೊ ಹೇಳಿದ ಮಾತ್ರಕ್ಕೆ ಕಳಂಕಿತರಾಗುವುದಿಲ್ಲ.

ದೂತನೇ! ನೀನು ಮಾಡಬೇಕಾದ ಕೆಲಸ ಮಾಡಿಯಾಯ್ತು. ಈ ಕೂಡಲೇ ಇಲ್ಲಿಂದ ಹೊರಟುಹೋಗು. ನನ್ನಂತಹವರು ಜಂಬಕೊಚ್ಚಿ ಕೊಳ್ಳುವವರ ಹಾಗೂ ನೀಚರನ್ನಾಗಲೀ ಪ್ರಹರಿಸಲು ಮುಂದಾಗುವದಿಲ್ಲ. ನಿನ್ನ ದಾನವನನ್ನು ಕೊಲ್ಲಲು ನಾನು ಬರುವುದಿಲ್ಲ. ನನ್ನ ತಮ್ಮ ಶತ್ರುಘ್ನನು ಸಾಕು. ಅವನೇ ಎದುರಿಸುವನು.

ಶ್ರೀರಾಮನು ಹೀಗೆ ಹೇಳಿದಾಗ ರಾಘವನ ಅನುಜ್ಞೆಯನ್ನು ಪಡೆದು ಶತ್ರುಘ್ನ ಜೊತೆಗೆ ಮಧುವನಕ್ಕೆ ಹೋದನು. ಶತ್ರುಘ್ನನು ಲವಣ ರಾಕ್ಷಸನ ಪಟ್ಟಣಕ್ಕೆ ಹೋದನು. ಅವನ ಸಮೀಪದಲ್ಲಿಯೇ ಬೀಡುಬಿಟ್ಟನು.

ನಂತರ **ಲವಣಾಸುರ**[4]ನು ದೂತನಿಂದ ಎಲ್ಲ ವಿಷಯವನ್ನು ತಿಳಿದು. ಕ್ರೋಧಾವಿಷ್ಟನಾಗಿ ಯುದ್ಧ ಮಾಡಲು ಶತ್ರುಘ್ನನ ಮುಂದೆ ನಿಂತನು. ಶತ್ರುಘ್ನ ಹಾಗೂ ಲವಣಾಸುರರಿಗೂ ಘೋರವಾದ ಯುದ್ಧವೇರ್ಪಟ್ಟಿತು. ಪರಸ್ಪರ ಬಾಣಗಳನ್ನು ವರ್ಷಿಸಿದರು. ಶತ್ರುಘ್ನನು ನಿಶಿತ ಬಾಣಗಳಿಂದ ಲವಣನನ್ನು ಗಾಯಗೊಳಿಸಿದನು. ಲವಣನ ಕೈಯ್ಯಲ್ಲಿದ್ದ ಶೂಲವೂ ನಷ್ಟವಾಯಿತು. ದುರ್ಬಲನಾದಾಗ ಅಂಕುಶವನ್ನೆತ್ತಿಕೊಂಡನು. ಅದನ್ನೆತ್ತಿ ಶತ್ರುಘ್ನ ಕುತ್ತಿಗೆಗೆ

---

4. **ಲವಣಾಸುರ :**

**ಶತ್ರುಘ್ನತೋ ಲವಣ ಮುಲ್ಬಣಬಾಣ ದಗ್ಧಂ ।**

**ಕೃತ್ವಾ ಚಕಾರ ಮಧುರಾಂ ಪುರಮುಗ್ರವೀರ್ಯಃ ॥** *–ತಾ.ನಿ. 9/17*

ರಾಮನು ತನ್ನ ಬಾಣವನ್ನಿತ್ತು ಶತ್ರುಘ್ನನಿಂದ ಲವಣನನ್ನು ಕೊಲ್ಲಿಸಿದ. ಮಧುರಾಪುರಿಯನ್ನು ನಿರ್ಮಿಸಿದನು. ಈ ಮಧುರೆಯಲ್ಲಿಯೇ ಕೃಷ್ಣಾವತಾರ–ವಾಯಿತು. ಇದೇ ಶತ್ರುಘ್ನನೆ ಶ್ರೀಕೃಷ್ಣನ ಮೊಮ್ಮಗನಾಗಿ ಜನಿಸಿದ. ಲವಣನು ಲೋಲಾಯೆಂಬುವಳ ಪುತ್ರನು. ಕುಂಭೀನಸೀ ಅವನ ಪತ್ನಿಯು. ಇವಳು ಮಾಲ್ಯವಂತನು ಮಗಳು ಅನಲಾಯೆಂಬುವಳಲ್ಲಿ ಹುಟ್ಟಿದವಳು. ಈ ಮಾಲ್ಯವಂತನ ಸೋದರನಾದ ಸುಮಾಲಿಯ ಪುತ್ರಿಯಲ್ಲಿ ರಾವಣ ಹುಟ್ಟಿದ. ಕುಂಭೀನಸಿಯನ್ನು ಮಧುದೈತ್ಯ ಅಪಹಾರ ಮಾಡಿದ. ಇವರಲ್ಲಿ ಲವಣ ಹುಟ್ಟಿದ. ಇವನನ್ನು ಶತ್ರುಘ್ನ ರಾಮ ನೀಡಿದ ಬಾಣದಿಂದ ಕೊಂದು ಹಾಕಿದ. ಈ ಬಾಣದಿಂದಲೇ ಭಗವಂತನು ಮಧು ಕೈಟಭರನ್ನು ಕೊಂದಿದ್ದನು.

**ಶತ್ರುಘ್ನಶ್ಚ ಮಧೋಃ ಪುತ್ರಂ ಲವಣಂ ನಾಮ ರಾಕ್ಷಸಮ್ ।**

**ಹತ್ವಾ ಮಧುವನಂ ಚಕ್ರೇ ಮಧುರಾಂ ನಾಮ ವೈ ಪುರೀಂ ॥** *–ಭಾಗ 9/9/14*

ಹಾಕಿ ಅವನನ್ನು ಸೆಳೆದುಕೊಂಡು ಶತ್ರುಘ್ನನ ಕುತ್ತಿಗೆಯನ್ನಿರಿಯ-ಲಾರಂಭಿಸಿದನು. ಶತ್ರುಘ್ನನಾದರು ತನ್ನ ನಿಶ್ಚಿತವಾದ ಕತ್ತಿಯಿಂದ ಅವನ ಕುತ್ತಿಗೆಯನ್ನು ಕತ್ತರಿಸಿ ಹಾಕಿದನು. ರಾಮನು ನೀಡಿರುವ ಬಾಣದಿಂದ ಎದೆಗೆ ಹೊಡೆದು ಕೆಳಗೆ ಬೀಳಿಸಿ ನಂತರ ಕತ್ತಿಯಿಂದ ಕತ್ತರಿಸಿ ಹಾಕಿದನು ಎಂದು ಭಾವ.

## ಮಥುರಾ ನಿರ್ಮಾಣ

**ತಸ್ಮಿನ್ ಮಧುವನ ಸ್ಥಾನೇ ಮಥುರಾ ನಾಮ ಸಾ ಪುರೀ ।**
**ಶತ್ರುಘ್ನೇನ ಪುರಾ ಸೃಷ್ಟಾ ಹತ್ವಾ ತಂ ದಾನವಂ ರಣೇ ॥ 16 ॥**

ರಣದಲ್ಲಿ ಲವಣನನ್ನು ಸಂಹರಿಸಿ, ಅವನು ವಾಸಿಸುತ್ತಿದ್ದ ಮಧುವನವನ್ನು ನಾಶ ಮಾಡಿ ಇದೇ ಸ್ಥಳದಲ್ಲಿ ಮಥುರಾಪುರಿಯನ್ನು ನಿರ್ಮಿಸಿದನು.

ಈ ಮಥುರಾ ಪುರಿಯು ಅನೇಕ ಮನೆ ಮಹಡಿ ಉಪ್ಪರಿಗೆಗಳು, ಪ್ರಾಕಾರ ಮಹಾದ್ವಾರಗಳು ಸಮಸ್ತ ಪ್ರಜೆಗಳಿಂದಲೂ ತುಂಬಿತ್ತು. ಸೈನ್ಯ-ವಾಹನಗಳಿಂದ ತುಂಬಿತ್ತು. ಸುಂದರ ಸ್ತ್ರೀಯಂತೆ ಕಾಣುತ್ತಿತ್ತು.

ಮಥುರೆಯಲ್ಲಿ ಆರೋಗ್ಯದಿಂದಿರುವ ವೀರಪುರುಷರು. ಚತುರಂಗ ಬಲ, ಯಮುನಾ ನದಿಯ ತೀರವನ್ನೇ ಶೋಭಿಸುವಂತೆ ಮಾಡುತ್ತಿದ್ದ ಆ ಪಟ್ಟಣವು ಅರ್ಧಚಂದ್ರಾಕಾರದಲ್ಲಿತ್ತು. ರತ್ನಗಳಿಂದ ತುಂಬಿ, ತೋಟಗಳು, ಗದ್ದೆ ಸಸ್ಯಭರಿತವಾಗಿತ್ತು.

## ಉಗ್ರಸೇನನು ಕಂಸ

**ತಸ್ಯ ಪುರ್ಯಾಂ ಮಹಾವೀರ್ಯೋ ರಾಜಾ ಭೋಜಕುಲೋದ್ಭವಃ ।**
**ಉಗ್ರಸೇನ ಇತಿ ಖ್ಯಾತೋ ಮಹಾಸೇನ ಪರಾಕ್ರಮಃ ॥ 17 ॥**

**ತಸ್ಯ ಪುತ್ರತ್ವ ಮಾಪನ್ನೋ ಯೋಽಸೌ ವಿಷ್ಣೋತ್ವಯಾ ಹತಃ ।**
**ಕಾಲನೇಮಿಃ ಮಹಾದೈತ್ಯಃ ಸಂಗ್ರಾಮೇ ತಾರಕಾಮಯೇ ॥ 18 ॥**

**ಕಂಸೋ ನಾಮ ವಿಶಾಲಾಕ್ಷೋ ಭೋಜವಂಶವಿವರ್ಧನಃ ।**
**ರಾಜ್ಞಾಂ ಭಯಂಕರೋ ಘೋರಃ ಶಂಕನೀಯೋ ಮಹೀಕ್ಷಿತಾಮ್ ।**
**ಭಯದಃ ಸರ್ವಭೂತಾನಾಂ ಸತ್ವಘಾತ್ ಬಾಹ್ಯತಾಂ ಗತಃ ॥ 19 ॥**

**ನಾತ್ಮರಾಜ್ಯೇ ಪ್ರಿಯಕರಃ ಚಂಡಃ ಕರರುಚಿಃ ಸದಾ ।**
**ಸ ಕಂಸಸ್ತತ್ರ ಸಂಭೂತಃ ತ್ವಯಾ ಯುದ್ಧೇ ಪರಾಜಿತಃ ॥ 20 ॥**

ವಿಷ್ಣುವೇ! ತಾರಕಾಮಯ ಯುದ್ಧದಲ್ಲಿ ಕಾಲನೇಮಿಯನ್ನು ನೀನು ಕೊಂದು ಹಾಕಿದ್ದೆ. ಅವನೇ ಈಗ ಉಗ್ರಸೇನನ ಮಗನಾಗಿ ಹುಟ್ಟಿದ್ದಾನೆ. ಸರ್ವರನ್ನೂ ಹಿಂಸಿಸುವ ಪ್ರವೃತ್ತಿವುಳ್ಳ ಕಂಸನಾಗಿದ್ದಾನೆ. ಸಿಂಹದಂತೆ ಮಹಾಪರಾಕ್ರಮಿ. ಭೂಮಂಡಲದ ರಾಜರಿಗೆಲ್ಲ ಅತಿಭಯಂಕರನಾಗಿದ್ದಾನೆ. ಸದಾಚಾರ ವಿವರ್ಜಿತನೂ ಕ್ರೂರನು ಆದ ಕಂಸನು ಹಿಂದಿನ ದರ್ಪದಿಂದಲೇ ಉನ್ಮತ್ತನಾಗಿ ಈ ಜನ್ಮದಲ್ಲಿಯೂ ರಾಜರನ್ನು ಹಿಂಸಿಸುತ್ತಿದ್ದಾನೆ. ರಾಜ್ಯಕ್ಕೂ ಪ್ರಜೆಗಳಿಗೂ ಪ್ರಿಯವುಂಟು ಮಾಡದೆ ಅವರಿಂದ ತೆರಿಗೆಗಳನ್ನು ನಿರಂತರ ಸಂಗ್ರಹಿಸುತ್ತಾನೆ.

## ಹಯಗ್ರೀವಾಸುರ

**ಯೋಽಪ್ಯಸೌ ಹಯವಿಕ್ರಾಂತೋ ಹಯಗ್ರೀವ ಇತಿಸ್ಮೃತಃ ।**
**ಕೇಶೀ ನಾಮ ಹಯೋ ಜಾತಃ ಸ ತಸ್ಯೈವ ಜಘನ್ಯಜಃ ॥ 21 ॥**

**ಸ ದುಷ್ಟೋ ಹ್ರೇಷಿತಪಟುಃ ಕೇಸರೀ ನಿರವಗ್ರಹಃ ।**
**ವೃಂದಾವನೇ ವಸತ್ಯೇಕೋ ನೃಣಾಂ ಮಾಂಸಾನಿ ಭಕ್ಷಯನ್ ॥ 22॥**

ಯಾವ ದೈತ್ಯ, ಕುದುರೆಯಂತೆ ಸಂಚರಿಸುತ್ತಿದ್ದು ಹಯಗ್ರೀವನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನೋ ಅವನು ಇಗ 'ಕೇಶೀ' ಎಂಬ ಹೆಸರಿನಿಂದ ಕುದುರೆಯ ರೂಪದಲ್ಲಿ ಭೂಮಿಯಲ್ಲಿ ಹುಟ್ಟಿದ್ದಾನೆ. ಮಹಾದುಷ್ಟನಾಗಿದ್ದು ಕೆನೆಯುವುದರಲ್ಲಿ ನಿಸ್ಸೀಮನು. ಮುಖದ ಸುತ್ತಲೂ ಉದ್ದ ಉದ್ದವಾದ ಕೇಸರಗಳಿವೆ. ಒಂದು ರೀತಿ ಕಂಸನ ಚಿಕ್ಕ ತಮ್ಮನಂತೆಯೇ ಇದ್ದಾನೆ. ಮನುಷ್ಯರನ್ನು ಕೊಂದು ಅವರ ಮಾಂಸವನ್ನು ತಿನ್ನುತ್ತಾ ವೃಂದಾವನದಲ್ಲಿದ್ದಾನೆ.

## ಅರಿಷ್ಟಾಸುರ–ಕುವಲಯಾಪೀಡ ಆನೆ

**ಅರಿಷ್ಟೋ ಬಲಿಪುತ್ರಶ್ಚ ಕಕುದ್ಮೀ ವೃಷರೂಪಧೃಕ್ ।**
**ಗವಾಮರಿತ್ವಮಾಪನ್ನಃ ಕಾಮರೂಪೀ ಮಹಾಸುರಃ ॥ 23 ॥**

**ರಿಷ್ಟೋ ನಾಮ ದಿತೇಃ ಪುತ್ರಃ ವರಿಷ್ಠೋ ದಾನವೇಷು ಯಃ ।**
**ಸ ಕುಂಜರತ್ವಮಾಪನ್ನೋ ದೈತ್ಯಃ ಕಂಸಸ್ಯ ವಾಹನಃ ॥ 24 ॥**

ಬಲಿಯ ಪುತ್ರನಾದ ಮಹಾಸುರನಾದ ಅರಿಷ್ಟಾಸುರನು ದೊಡ್ಡ ಹಿಣಿಲುಳ್ಳ ಮಹಾ ಎತ್ತು ವೇಷ ಧರಿಸಿದ್ದಾನೆ. ಗೋವುಗಳಗೆಲ್ಲ ಮಹಾನಿಷ್ಟಕಾರಕನು. ಗುಟುರು ಹಾಕಿ ಗರ್ಭಬೀಳಸುವವನು. ಯಾವ ರೂಪವನ್ನಾದರೂ ಧರಿಸಬಲ್ಲನು.

ಮತ್ತೊಬ್ಬ ಮಹಾಸುರ ದಿತಿ ಪುತ್ರನಾದ ದಿಷ್ಟದೈತ್ಯ. ಇವನು ಭೂಮಿಯ ಭಾರಭೂತನಾದ ಕುವಲಯಾಪೀಡವೆಂಬ ಆನೆಯಾಗಿ ಕಂಸನಿಗೆ ವಾಹನವಾಗಿದ್ದಾನೆ.

## ಪ್ರಲಂಭ-ಧೇನುಕ

**ಲಂಬೋ ನಾಮೇತಿ ವಿಖ್ಯಾತೋ ಯೋಽಸೌ ದೈತ್ಯೇಷು ದರ್ಪಿತಃ ।**
**ಪ್ರಲಂಬೋ ನಾಮ ದೈತ್ಯೋಽಸೌ ವಟಂ ಭಾಂಡೀರ ಮಾಶ್ರಿತಃ ॥ 25 ॥**
**ಖರ ಇತ್ಯುಚ್ಯತೇ ದೈತ್ಯೋ ಧೇನುಕಃ ಸೋಽಸುರೋತ್ತಮಃ ।**
**ಘೋರಂ ತಾಲವನಂ ದೈತ್ಯಃ ಚರತ್ಯುದ್ವಾಸಯನ್ ಪ್ರಜಾಃ ॥26 ॥**

ದೈತ್ಯರಲ್ಲಿಯೇ ಮಹಾದುರಹಂಕಾರಿಯಾಗಿದ್ದ ಲಂಬ ದೈತ್ಯನೇ ಪ್ರಲಂಬಾಸುರನಾಗಿ ಹುಟ್ಟಿರುವನು. ಬಾಂಢೀರ ವೃಕ್ಷವೆಂಬ ಆಲದ ಮರವನ್ನಾಶ್ರಿಯಿಸಿರುವನು. ಖರಾಸುರನೆಂದು ವಿಖ್ಯಾತನಾದ ದೈತ್ಯಾಧಮನೇ ಧೇನುಕಾಸುರನಾಗಿ ಕತ್ತೆಯ ವೇಷದಲ್ಲಿರುವನು. ತಾಲವನದಲ್ಲಿರುತ್ತಾ ಅಲ್ಲಿಗೆ ಬಂದವರನ್ನೆಲ್ಲ ಕೊಂದು ಹಾಕುತ್ತಿದ್ದನು.

## ಚಾಣೂರ-ಮುಷ್ಟಿಕರು

**ವಾರಾಹಶ್ಚ ಕಿಶೋರಶ್ಚ ದಾನವೌ ಯೌ ಮಹಾಬಲೌ ।**
**ಮಲ್ಲೌ ರಂಗಗತೌ ತೌ ತು ಜಾತೌ ಚಾಣೂರಮುಷ್ಟಿಕೌ ॥ 27 ॥**
**ಯೌ ತೌ ಮಯಶ್ಚ ತಾರಶ್ಚ ದಾನವೌ ದಾನವಾಂತಕ ।**
**ಪ್ರಾಗ್ಜ್ಯೋತಿಷೇ ತೌ ಭೌಮಸ್ಯ ನರಕಸ್ಯ ಪುರೇ ಗತೌ ॥ 28 ॥**

ಹಿಂದೆ ವಾರಾಹ ಹಾಗೂ ಕಿಶೋರ ಎಂಬ ಹೆಸರಿನಿಂದ ಪ್ರಖ್ಯಾತರಾಗಿದ್ದ ಮಹಾಬಲಿಷ್ಠ ದಾನವರು. ಈಗ ಜನ್ಮತಾಳಿ, ಚಾಣೂರ-ಮುಷ್ಟಿಕರೆಂಬ ಹೆಸರಿನಿಂದ ಹುಟ್ಟಿದ್ದಾರೆ. ಇವರು ಕಂಸನಲ್ಲಿ ಮಹಾ ಜಗಜಟ್ಟಿಗಳಾಗಿದ್ದರು.

ಈ ದೈತ್ಯರೆಲ್ಲರೂ ನಿನ್ನಿಂದ ಕೊಲ್ಲಲ್ಪಟ್ಟವರೆ ಆಗಿರುವರು. ಇವರೆಲ್ಲ ಮಾನುಷರಾಗಿ ಸಕಲ ಸಜ್ಜನರೆಲ್ಲರನ್ನೂ ಬಾಧಿಸುತ್ತಿದ್ದಾರೆ. ನಿನ್ನ ಕಥೆಯನ್ನೇ ದ್ವೇಷ ಮಾಡುವವರಾಗಿದ್ದು, ನಿನ್ನ ಭಕ್ತರನ್ನು ಕೊಲ್ಲುತ್ತಿದ್ದಾರೆ. ನಿನ್ನ ಅನುಗ್ರಹದಿಂದಾಗಿ ದಾನವರೆಲ್ಲರೂ ಕ್ಷಯ ಹೊಂದಲೇಬೇಕು. ಹಿಂದೆ ಮಯ ಮತ್ತು ತಾರ ಎಂಬ ಹೆಸರಿನ ದೈತ್ಯರು ಈಗ ಪುನಃ ಹುಟ್ಟಿ ಭೂಮಿಯಲ್ಲಿ ಪ್ರಾಗ್ ಜ್ಯೋತಿಷ್ಯಪುರದ ರಾಜನಾದ ನರಕಾಸುರನ ಆಶ್ರಯದಲ್ಲಿದ್ದಾರೆ. ಇವರೆಲ್ಲರೂ ದುಷ್ಟರಾಗಿದ್ದು ಮನುಷ್ಯರೂಪ ದೈತ್ಯರನ್ನು ನೀನು ಕ್ಷಯಿಸಬೇಕು.

**ತ್ವತ್ತಸ್ತೇ ಬಿಭ್ಯತಿ ದಿವಿ ತ್ವತ್ತೋ ಬಿಭ್ಯತಿ ಸಾಗರೇ ।**
**ಪೃಥಿವ್ಯಾಂ ತವ ಬಿಭ್ಯಂತಿ ನಾನ್ಯತಸ್ತು ಕದಾಚನ ॥ 29 ॥**

ಈ ದೈತ್ಯರು ಯಾರಿಗೂ ಭಯಪಡುವುದಿಲ್ಲ. ನಿನ್ನನ್ನು ಕಂಡರೆ ಆಕಾಶ, ಸಾಗರ, ಭೂಮಿಯಲ್ಲಿ ಎಲ್ಲಿಯೇ ಇರಲಿ ನಿನಗೆ ಬಹಳ ಭಯಪಡುತ್ತಾರೆ. ಬೇರೆ ಯಾರನ್ನೂ ಕಂಡರೂ ಲಕ್ಷ್ಯವಿಲ್ಲ.

ಭಗವಂತನೇ, ದೈತ್ಯರು ದುರ್ವೃತ್ತಾಗಿದ್ದರೂ ನಿನ್ನಿಂದ ಕೊಲ್ಲಲ್ಪಟ್ಟರಾದರೆ ದುರಾಚಾರಿಯಾಗಿಲ್ಲದಿದ್ದರೆ ನಿನ್ನ ಪ್ರಾಪ್ತಿಯೆ ಆಗುತ್ತದೆ. ನಿನ್ನಿಂದ ಹೊರತಾಗಿ ಬೇರೆಯವರಿಂದ ಮೃತರಾದರೆಂದರೆ ಇವನಿಗೆ ತಾತ್ಕಾಲಿಕ ಸ್ವರ್ಗ ಲಭಿಸಿದರೂ ಅಲ್ಲಿಂದ ಭ್ರಷ್ಟರಾಗಿ ಭೂಮಿಯಲ್ಲಿ ಹುಟ್ಟುವರು.

**ತದಾಗಚ್ಛ ಸ್ವಯಂ ವಿಷ್ಣೋ ಗಚ್ಛಾಮಃ ಪೃಥಿವೀತಲಮ್ ।**
**ದಾನವಾನಾಂ ವಿನಾಶಾಯ ವಿಸೃಜಾತ್ಮಾನ ಮಾತ್ಮನಾ ॥ 30 ॥**

**ತವಾವತರಣೇ ವಿಷ್ಣೋ ಕಂಸಃ ಸ ವಿನಶಿಷ್ಯತಿ ।**
**ಸೇತ್ಸ್ಯತೇ ಚ ಸ ಕಾರ್ಯಾರ್ಥೋ ಯಸ್ಯಾರ್ಥೇ ಭೂಮಿರಾಗತಾ ॥ 31 ॥**

**ತ್ವಂ ಭಾರತೇ ಕಾರ್ಯಗುರುಸ್ತ್ವಂ ಚಕ್ಷುಸ್ತ್ವಂ ಚ ಪರಾಯಣಮ್ ।**
**ತದಾಗಚ್ಛ ಹೃಷಿಕೇಶ ಕ್ಷಿತೌ ತಾನ್ ಜಹಿ ದಾನವಾನ್ ॥ 32 ॥**

ವಿಷ್ಣುವೇ, ಭೂಮಂಡಲಕ್ಕೆ ದಾನವರ ನಾಶಕ್ಕಾಗಿ ಹೋಗೋಣ. ನೀನೇ ನಿನ್ನ ಅಂಶವನ್ನು ಪ್ರಕಟಿಸು. ನಿನ್ನದು ದಶ, ಶತ, ಸಹಸ್ರ, ಅನಂತರೂಪಗಳಿವೆ. ಕೆಲವು ವ್ಯಕ್ತವಾದರೆ ಕೆಲವು ಅವ್ಯಕ್ತಾವತಾರಗಳು. ದೇವತೆಗಳೂ ಸಹ

ಕೆಲವು ಬಾರಿ ನೋಡುವವರು. ಕೆಲವನ್ನು ನೋಡುವುದಿಲ್ಲ. ಆ ದೇವತೆಗಳೂ ಸಹ ನಿನ್ನೊಂದಿಗೆ ಭೂಮಂಡಲದಲ್ಲಿ ಅವತಾರವೆತ್ತುವರು. ನಿನ್ನ ಅವತಾರವಾದಾಗ ಕಂಸಾದಿ ದೈತ್ಯರು ಮೃತರಾಗುವರು. ಭೂಮಿಯು ಯಾವ ಕಾರ್ಯಕ್ಕಾಗಿ ಇಲ್ಲಿಗೆ ಬಂದಿದ್ದಳೋ ಅವಳ ಕಾರ್ಯವೂ ಸಿದ್ಧಿಸಿದಂತಾಯಿತು.

ಸ್ವಾಮಿಯೇ. ನೀನು ಭಾರತ ವರ್ಷದಲ್ಲಿ ಮಹಾಕಾರ್ಯವನ್ನೇ ಮಾಡಬೇಕು. ನೀನು ಸರ್ವಸಾತ್ವಿಕರಿಗೂ ನೇತಾರನಾಗಿರುವೆ. ಆದ್ದರಿಂದ ಈಗಲೇ ಭೂಮಿಯಲ್ಲಿ ಅವತರಿಸಿ. ನಿನ್ನ ಅವತಾರಕ್ಕಿಂತಲೂ ಮೊದಲೇ ಹುಟ್ಟಿರುವ ದೈತ್ಯರನ್ನೆಲ್ಲ ಕೊಂದು ಪ್ರಜೆಗಳನ್ನು ರಕ್ಷಿಸು ಎಂದರು ನಾರದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಅವತರಿಸಲು ನಾರದರ ಪ್ರಾರ್ಥನವೆಂಬಲ್ಲಿ
ಐವತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ಪಂಚಪಂಚಾಶತ್ತಮೋಽಧ್ಯಾಯಃ

### ಬ್ರಹ್ಮನು– ವಿಷ್ಣುವು ಅವತರಿಸಲು ಯೋಗ್ಯ ಸ್ಥಾನ ತಿಳಿಸುವುದು

*ವೈಶಂಪಾಯನ ಉವಾಚ –*

**ನಾರದಸ್ಯ ವಚಃ ಶ್ರುತ್ವಾ ಸಸ್ಮಿತಂ ಮಧುಸೂದನಃ ।**
**ಪ್ರತ್ಯುವಾಚ ಶುಭಂ ವಾಕ್ಯಂ ವರೇಣ್ಯಃ ಪ್ರಭುರೀಶ್ವರಃ ॥ 1 ॥**
**ವಿದಿತಾ ದೇಹಿನೋ ಜಾತಾ ಮಯ್ಯೈತೇ ಭುವಿ ದಾನವಾಃ ।**
**ಯಾಂ ಚ ಯಸ್ತನುಮಾದಾಯ ದೈತ್ಯಃ ಪುಷ್ಯತಿ ವಿಗ್ರಹಮ್ ॥ 2 ॥**

ಜನಮೇಜಯನೇ! ಸರ್ವೋತ್ತಮನೂ ಸವಶಕ್ತನೂ ಈಶ್ವರನೂ ಆದ ಮಧುಸೂದನನು ನಾರದರ ಮಾತನ್ನು ಕೇಳಿ ಮಂದಹಾಸ ಬೀರುತ್ತಾ ಹೀಗೆ ಉತ್ತರಿಸಿದನು.

ನಾರದನೇ! ಮೂರು ಲೋಕಗಳ ಹಿತಾರ್ಥವಾಗಿ ನೀನು ಹೇಳಿದ ಮಾತುಗಳು ಒಳ್ಳೆಯ ಪ್ರೇರಣೆಯಿಂದ ಕೂಡಿವೆ. ಅದಕ್ಕುತ್ತರವಿದು.

ದಾನವರೆಲ್ಲರೂ ಭೂಮಿಯಲ್ಲಿ ಹುಟ್ಟುವರೆಂಬ ವಿಷಯವು ನನಗ ತಿಳಿದೇ ಇದೆ. ಯಾವನು ಯಾವ ಮನುಷ್ಯ ಶರೀರವನ್ನು ಪಡೆದು ವೈರಭಾವಕ್ಕೆ ಪುಷ್ಟಿ ಕೊಡುತ್ತಿರುವನೆಂದೂ ತಿಳಿದಿದೆ. ಕಾಲನೇಮಿಯು ಭೂಮಂಡಲದಲ್ಲಿ ಉಗ್ರಸೇನ ಪುತ್ರನಾಗಿ ಜನಿಸಿ ಕಂಸನಾಗಿ ಹುಟ್ಟಿರುವುದು ನನಗೆ ಗೊತ್ತು ಕೇಶೀಯು ಕುದುರೆಯಾಗಿಯೂ, ಮಲ್ಲರಾದ ಚಾಣೂರ–ಮುಷ್ಟಿಕರನ್ನೂ, ಎತ್ತಿನವೇಷದಲ್ಲಿರುವ ಅರಿಷ್ಟಾಸುರನನ್ನೂ, ಖರಾಸುರ, ಪ್ರಲಂಬಾಸುರ, ಬಲಿಯ ಮಗಳಾದ ಪೂತನೆಯನ್ನು ತಿಳಿದಿರುವೆನು.

**ಕಾಲಿಯಂ ಚಾಪಿ ಜಾನಾಮಿ ಯಮುನಾಹ್ರದ ಗೋಚರಮ್ ।**
**ವೈನತೇಯಭಯಾದ್ ಯಸ್ತು ಯಮುನಾಹ್ರದಮಾವಿಶತ್ ॥ 3 ॥**

ಗರುಡನ ಭಯದಿಂದಾಗಿ ಸಮುದ್ರ ಬಿಟ್ಟು ಕಾಲಿಯ ಹುದಕ್ಕೆ ಬಂದಿರುವ ಕಾಲಿಯ ನಾಗನನ್ನೂ ಬಲ್ಲೆನು. ಭೂಮಂಡಲದ ರಾಜರೆಲ್ಲರನ್ನೂ ತನ್ನ ಅಂಕೆಯಲ್ಲಿಟುಕೊಂಡ ಜರಾಸಂಧನನ್ನೂ, ನರಕಾಸುರನನ್ನೂ, ಹಾಗೂ ಶೋಣಿತಪುರದಲ್ಲಿ ವಾಸ ಮಾಡುತ್ತಾ ಸಾವಿರ ತೋಳುಗಳುಳ್ಳ ಬಾಣಾಸುರನನ್ನೂ, ಭಾರತದಲ್ಲಿ ಮಹತ್ತರವಾಗಿ ಬೆಳೆದು ಭೂಭಾರ-ವಾಗಿರುವುದು ತಿಳಿದಿದೆ. ಅದನ್ನು ಇಳಿಸಬೇಕೆಂದು ತಿಳಿದಿದೆ. ಈ ರಾಜರೆಲ್ಲ ಪರಸ್ಪರ ಹೇಗೆ ಯುದ್ಧ ಮಾಡುತ್ತಾರೆ. ಅವರ ನಾಶ ಹೇಗಾಗುತ್ತದೆ. ಯುದ್ಧ ಮಾಡಿ ದೇಹ ತ್ಯಾಗ ಮಾಡಿದವರಿಗೆ ಸ್ವರ್ಗದಲ್ಲಿ ಯಾವ ರೀತಿಯ ಗೌರವಾದರಗಳು ಲಭಿಸುತ್ತದೆ. ಇವೆಲ್ಲ ನನಗೆ ಈ ಮೊದಲೇ ತಿಳಿದಿರುವೆನು. ಭೂಲೋಕಕ್ಕೆ ಹೋಗಿ ಮಾನವವೇಷ ಧರಿಸಿ ಈ ಭೂಭಾರಹರಣ ಕಾರ್ಯದಲ್ಲಿ ನನ್ನನ್ನು ತೊಡಗಿಸಿಕೊಳ್ಳುತ್ತೇನೆ.

**ಕಂಸಾದೀನ್ ಚಾಪಿ ತಾನ್ ಸರ್ವಾನ್ ವಧಿಷ್ಯಾಮಿ ಮಹಾಸುರಾನ್ ।**
**ತೇನ ತೇನ ವಿಧಾನೇನ ಯೇನ ಯಃ ಶಾಂತಿಮೇಷ್ಯತಿ ॥ 4 ॥**
**ಅಮೀಷಾಂ ಹಿ ಸುರೇಂದ್ರಾಣಾಂ ಹಂತವ್ಯಾ ರಿಪವೋ ಯುಧಿ ।**
**ಜಗತ್ಯರ್ಥೇ ಕೃತೋ ಯೋಽಯಮಂಶೋತ್ಸರ್ಗೋ ದಿವೌಕಸೈಃ ॥ 5 ॥**
**ಸುರ ದೇವರ್ಷಿ ಗಂಧರ್ವೈರಿತಶ್ಚಾನುಮತೇ ಮಮ ।**

ಯಾವ ಯಾವ ವಿಧಾನದಿಂದ ಯಾರು ಯಾರನ್ನು ಸಂಹರಿಸಬೇಕೋ ಅಂತಹುದೇ ವಿಧಾನವನ್ನು ಅನುಸರಿಸಿ ಕಂಸನೇ ಮೊದಲಾದವರನ್ನು ಸಂರಹಿಸುತ್ತೇನೆ. ನಾನು ಯೋಗಶಕ್ತಿಯಿಂದ ಅವರಲ್ಲಿ ಪ್ರವೇಶಿಸಿ ಅವರಲ್ಲಿರುವ ಅಂತರ್ಧಾನಶಕ್ತಿಯೇ ಮೊದಲಾದ ವಿದ್ಯೆಗಳನ್ನು ನಾಶ ಮಾಡುವೆ.

ನಾರದರೇ! ಭೂಮಿಯ ಹಿತಕ್ಕಾಗಿ ನನ್ನ ಆದೇಶದಂತೆ ದೇವರ್ಷಿ ಗಂಧರ್ವರು ಅವರವರ ಅಂಶಗಳಿಂದ ಭೂಮಿಯಲ್ಲಿ ಮಾನವರಾಗಿ ಹುಟ್ಟಿದ್ದಾರೆ. ನಾನು ಭೂಮಿಯಲ್ಲಿ ಇರುವ ದೈತ್ಯರನ್ನು ಸಂಹರಿಸಲು ಅವತರಿಸಲೇಬೇಕೆಂದು ನಿಶ್ಚಯ ಮಾಡಿದ್ದೆನು.

ನಿವಾಸಂ ನನು ಮೇ ಬ್ರಹ್ಮನ್ ವಿದಧಾತು ಪಿತಾಮಹಃ ।
ಯತ್ರ ದೇಶೇ ಯಥಾ ಜಾತೋ ಯೇನ ವೇಷೇಣ ವಾ ವಸನ್ ॥ 6 ॥
ತಾನಹಂ ಸಮರೇ ಹನ್ಯಾಂ ತನ್ಮೇ ಭ್ರೂಹಿ ಪಿತಾಮಹ ॥ 7 ॥

ಪಿತಾಮಹನೇ! ನಾನು ಯಾವ ದೇಶದಲ್ಲಿ ಅವತರಿಸಬೇಕು? ಹೇಗೆ ಅವತರಿಸಬೇಕು. ಎಲ್ಲಿದ್ದುಕೊಂಡು ದೈತ್ಯರನ್ನು ಸಂಹರಿಸಬೇಕು? ಎಂದು ನನಗೆ ತಿಳಿಸು ಎಂದನು.

*ಬ್ರಹ್ಮೋವಾಚ–*

ನಾರಾಯಣೇಮಂ ಸಿದ್ಧಾರ್ಥಮುಪಾಯಂ ಶ್ರುಣು ಮೇ ವಿಭೋ ।
ಭುವಿ ಯಸ್ತೇ ಜನಯಿತಾ ಜನನೀ ಚ ಭವಿಷ್ಯತಿ ॥ 8 ॥

ಯತ್ರ ತ್ವಂ ಚ ಮಹಾಬಾಹೋ ಜಾತಃ ಕುಲಕರೋ ಭುವಿ ।
ಯಾದವಾನಾಂ ಮಹದ್ ವಂಶಮುಖಿಲಂ ಧಾರಯಿಷ್ಯಸಿ ॥ 9 ॥

ತಾಂಶ್ಚ ಅಸುರಾನ್ ಸಮುತ್ಪಾಟ್ಯ ವಂಶಂ ಕೃತ್ವಾಽಽತ್ಮನೋ ಮಹತ್ ।
ಸ್ಥಾಪಯಿಷ್ಯಸಿ ಮರ್ಯಾದಾಂ ನೃಣಾಂ ತನ್ಮೇ ನಿಶಾಮಯ ॥ 10 ॥

ಶ್ರೀಮನ್ನಾರಾಯಣನೇ! ಯಾವುದರ ಮೂಲಕವಾಗಿ ನಿನ್ನ ಅವತಾರದ ಪ್ರಯೋಜನವು ಸಿದ್ಧವಾಗುವುದೋ ಅಂತಹ ಉಪಾಯವನ್ನು ನಾನು ನಿನ್ನ ಮುಂದೆ ಅರಿಕೆ ಮಾಡಿಕೊಳ್ಳುವೆನು ಕೇಳು. ಭೂಮಿಯಲ್ಲಿ ಯಾರು ನಿನ್ನ ತಂದೆ ತಾಯಿಗಳು. ಯಾವ ಸ್ಥಳದಲ್ಲಿ ನೀನು ಜನ್ಮ ಪಡೆಯಬೇಕು? ಹಾಗೆಯೇ ಸಮಸ್ತ ದೈತ್ಯರನ್ನು ಸಂಹಾರಗೈದು ಧರ್ಮವನ್ನು ಸ್ಥಾಪಿಸು.

### ವಸುದೇವ–ದೇವಕೀ ಅವತಾರ ಕಾರಣ

ಪುರಾ ಹಿ ಕಶ್ಯಪೋ ವಿಷ್ಣೋ ವರುಣಸ್ಯ ಮಹಾತ್ಮನಃ ।
ಜಹಾರ ಯಜ್ಞಿಯಾ ಗಾ ವೈ ಪಯೋದಾಸ್ತು ಮಹಾಮಖೇ ॥ 11 ॥
ಅದಿತಿಃ ಸುರಭಿಶ್ಚೈತೇ ದ್ವೇ ಭಾರ್ಯೇ ಕಶ್ಯಪಸ್ಯ ತು ।
ಪ್ರದೀಯಮಾನಾ ಗಾಸ್ತಾಸ್ತು ನೈಚ್ಛತಾಂ ವರುಣಸ್ಯ ವೈ ॥ 12 ॥
ತತೋ ಮಾಂ ವರುಣೋಽಭ್ಯೇತಿ ಪ್ರಣಮ್ಯ ಶಿರಸಾ ತತಃ ।
ಉವಾಚ ಭಗವನ್ ಗಾವೋ ಗುರುಣಾ ಮೇ ಹೃತಾ ಇತಿ ॥ 13 ॥

ಮಹರ್ಷಿ **ಕಶ್ಯಪನು**[1] ಮಹತ್ತಾದ ಯಜ್ಞ ಕೈಗೊಂಡರು. ಯಜ್ಞಕ್ಕಾಗಿ ಮಹಾತ್ಮನಾದ ವರುಣನಿಂದ ಹಾಲು ಕೊಡುವ ಗೋವುಗಳನ್ನು ಬೇಡಿ ತಂದಿದ್ದನು. ಆ ಹಸುಗಳು ಹಾಲು -ಘೃತಗಳ ಮೂಲಕವಾಗಿ ಆ ಮಹಾಯಜ್ಞಕ್ಕೆ ಉಪಯುಕ್ತವಾಗಿದ್ದವು. ಯಜ್ಞ ಮುಗಿದ ಮೇಲೆಯೂ ಕಶ್ಯಪನ ಪತ್ನಿಯರಾದ ಅದಿತಿ-ಸುರಭಿಯರು ವರುಣನಿಗೆ ಕೊಡಬೇಡಿರೆಂದರು. ಇದರಿಂದಾಗಿ ಕಶ್ಯಪರಿಗೆ ಕೊಡಲಿಲ್ಲ. ಆಗ ವರುಣನು ನನ್ನ ಬಳಿಗೆ ಬಂದರು. ನನ್ನನ್ನು ನಮಸ್ಕರಿಸಿ ಹೀಗೆ ಹೇಳಿದನು. ನನ್ನ ತಂದೆ ನನ್ನ ಗೋವುಗಳನ್ನು ತೆಗೆದುಕೊಂಡು ಕೆಲಸವಾದರೂ ನನಗಿನ್ನೂ ಕೊಡುತ್ತಿಲ್ಲ. ಈ ವಿಷಯದಲ್ಲಿ ಅದಿತಿ ಸುರಭಿಯರ ಅಭಿಪ್ರಾಯದಂತೆ ನಡೆಯುತ್ತಿದ್ದಾನೆ. ಈ ನನ್ನ ಗೋವು ಕಾಮಧೇನುಗಳು. ಅಮೃತಕ್ಕೆ ಸಮಾನವಾದ ಹಾಲನ್ನು ನಿರಂತರವಾಗಿ ಸುರಿಸುತ್ತವೆ.

**ಪ್ರಭುರ್ವಾ ವ್ಯುತ್ಥಿತೋ ಬ್ರಹ್ಮನ್ ಗುರುರ್ವಾ ಯದಿ ವೇತರಃ ।**
**ತ್ವಯಾ ನಿಯಮ್ಯಾಃ ಸರ್ವೇ ವೈ ತ್ವಂ ಹಿ ನಃ ಪರಮಾ ಗತಿಃ ॥ 14 ॥**

ಪಿತಾಮಹನೇ ! ಯಾರೇ ಆಗಲಿ, ಎಷ್ಟೆ ಸಾಮರ್ಥ್ಯದಿಂದಾಗಲಿ, ತಂದೆಯೆ ಆಗಲೀ, ಬೇರೆ ಯಾರೇ ಆಗಲೀ ಎಲ್ಲರನ್ನೂ ನೀನು ಮರ್ಯಾದೆಯನ್ನು

---

1. ಕಶ್ಯಪ-ವಸುದೇವ :

**ಬ್ರಹ್ಮಾ ಪ್ರಣಮ್ಯಾತ್ಮ ಕಾರಣಂ ಪ್ರಾದಾಂ ಪುರಾಽಹಂ ವರುಣಾಯ ಗಾಃಶುಭಾಃ ।**
**ಜಹಾರ ತಾಸ್ತಸ್ಯ ಪಿತಾಽಮೃತಸ್ರವಾಃ ಸ ಕೃಶ್ಯಪೋ ದ್ರಾಕ್ ಸಹಸಾಽತಿರ್ಗರ್ವಿತಃ ॥**
**ಮಾತ್ರಾ ತ್ವದಿತ್ಯಾ ಚ ತಥಾ ಸುರಭ್ಯಾ ಪ್ರಚೋದಿತೇನೈವ ಹೃತಾಸು ತಾಸು ।**
**ಶ್ರುತ್ವಾ ಜಲೇಶಾತ್ ಸ ಮಯಾ ತು ಶಪ್ತಃ ಕ್ಷೇತ್ರೇಷು ಗೋಜೀವನಕೋ ಭವೇತಿ ॥**
– *ತಾ. ನಿ. 11/223*

ತಾ. ನಿರ್ಣಯದಲ್ಲಿ ಇದೇ ವಿಷಯವನ್ನು ಕಶ್ಯಪರು ವಸುದೇವನಾಗಲು ಕಾರಣ ನೀಡಲಾಗಿದೆ. ಬ್ರಹ್ಮದೇವರ ಶಾಪದಿಂದಾಗಿ ವಿಪ್ರನಾಗಿದ್ದ ಕಶ್ಯಪರು ಕ್ಷತ್ರಿಯನಾಗಿ ಹುಟ್ಟಿ ವೈಶ್ಯರಂತೆ ಜೀವಿಸಬೇಕಾಯಿತು.

**ವಸುದೇವೋ ಮಹಾಬಾಹುಃ ಪೂರ್ವಮಾನಕ ದುಂದುಭಿಃ ।**
**ಜಜ್ಞೇಯಸ್ಯ ಪ್ರಸೂತಸ್ಯ ದುಂದುಭ್ಯಃ ಪ್ರಾಣದನ್ ದಿವಿ ।**
**ಪಪಾತ ಪುಷ್ಪವರ್ಷಂ ಚ ಶೂರಸ್ಯ ಭವನೇ ಮಹತ್ ।**
ಎಂದು ಹರಿವಂಶದಲ್ಲಿ ಬಂದಿದೆ (1/34/18–20)

ಅತಿಕ್ರಮಿಸಿ ನಡೆಯುದಂತೆ ನಿಯಮ ಮಾಡಬೇಕು. ನೀವೇ ನಮಗೆ ಪರಮಾಶ್ರಯರಾಗಿರುವಿರಿ.

ಪ್ರಪಂಚದಲ್ಲಿ ತನ್ನ ಕರ್ತವ್ಯವೇನೆಂದು ತಿಳಿಯದ, ಮಹಾಪ್ರಭಾವಶಾಲಿಯೂ ಶಕ್ತಿಶಾಲಿಯೂ ಆದ ಪುರುಷನಿಗೆ, ಶಿಕ್ಷೆಯ ಕ್ರಮವಿಲ್ಲದಿದ್ದರೆ ಜಗತ್ತಿನ ಎಲ್ಲ ಮರ್ಯಾದೆಗಳೂ ನಿಂತು ಹೋಗುತ್ತದೆ.

ಯಾವುದು ಹೇಗಾದರೂ ಇರಲಿ, ಮಾಡಬೇಕಾಗಿರುವ ಕರ್ತವ್ಯವನ್ನು ನಿರ್ದೇಶಿಸಿ ಹೇಳುವುದರಲ್ಲಿ ನೀನೆ ಅಧಿಕಾರಿಯು, ಪ್ರಭುವಾಗಿರುವೆ. ಆದ್ದರಿಂದ ನೀನು ಹೇಳಿ ನನ್ನ ತಂದೆಯಿಂದ ನನ್ನ ಗೋವುಗಳನ್ನು ನನಗೆ ತಲುಪಿಸುವಂತೆ ಆಜ್ಞಾಪಿಸು.

## ಗೋರಕ್ಷಣೆ-ಧರ್ಮರಕ್ಷಣೆ

**ಯಾ ಆತ್ಮ ದೇವತಾ ಗಾವೋ ಯಾ ಗಾವಃ ಸತ್ವಮವ್ಯಯಮ್ ।**
**ಲೋಕಾನಾಂ ತ್ವತ್ ಪ್ರವೃತ್ತಾನಾಮೇಕಂ ಗೋಬ್ರಾಹ್ಮಣಂ ಸ್ಮೃತಮ್ ॥15 ॥**

**ತ್ರಾತವ್ಯಾಃ ಪ್ರಥಮಂ ಗಾವಃ ತ್ರಾತಾಃ ತ್ರಾಯಂತಿ ತಾ ದ್ವಿಜಾನ್ ।**
**ಗೋ ಬ್ರಾಹ್ಮಣ ಪರಿತ್ರಾಣೇ ಪರಿತ್ರಾಣಂ ಜಗಾದ ಭವೇತ್ ॥ 16 ॥**

ಆ ಗೋವುಗಳ ಅಧಿದೇವತೆಯು ಸಾಕ್ಷಾತ್ ಪರಮಾತ್ಮ ಪರಬ್ರಹ್ಮನೇ ಆಗಿದ್ದಾನೆ. ಆ ಗೋವುಗಳೂ ಅವಿನಾಶಿನಿಯೂ ಸಾತ್ವಿಕ ಗುಣದ ಸಾಕಾರ ರೂಪವೂ ಆಗಿವೆ. ನಿನ್ನಿಂದ ವ್ಯಕ್ತವಾದ ಯಾವ ಯಾವ ಲೋಕಗಳಿವೆಯೋ ಆ ಎಲ್ಲಾ ಲೋಕಗಳಲ್ಲಿಯೂ ಗೋವುಗಳಿಗೂ ಬ್ರಾಹ್ಮಣರಿಗೆ ಸಮಾನವಾಗಿ ಗೌರವಿಸುತ್ತಾರೆ.

**ಯೇನಾಂಶೇನ ಹೃತಾಗಾವಃ ಕಶ್ಯಪೇನ ಮಹರ್ಷಿಣಾ ।**
**ಸ ತೇನಾಂಶೇನ ಜಗತೀಂ ಗತ್ವಾ ಗೋಪತ್ವಮೇಷ್ಯತಿ ॥ 17 ॥**

**ಯಾ ಚ ಸಾ ಸುರಭಿರ್ನಾಮ ಅದಿತಿಶ್ಚ ಸುರಾರಣೀಃ ।**
**ತೇಽಪ್ಯುಭೇ ತಸ್ಯ ಬಾರ್ಯೇ ವೈ ತೇನೈವ ಸಹ ಯಾಸ್ಯತಃ ॥ 18 ॥**

ಜಲಾಧಿಪತಿಯಾದ ವರುಣನು ಹೀಗೆ ಪ್ರಾರ್ಥಿಸಲು, ಗೋವುಗಳ ಕಾರಣತ್ವವನ್ನು ತಿಳಿದಿದ್ದ ನಾನು, ಗೋವುಗಳನ್ನು ಅಪಹರಿಸಿದ ಕಶ್ಯಪನನ್ನು

ಶಪಿಸಿದೆನು. ಯಾವ ಅಂಶದಿಂದ ಗೋವುಗಳನ್ನು ಅಪಹರಿಸಿದನೋ ಅದೇ ಅಂಶದಿಂದ ಅವನು ಭೂಮಿಯಲ್ಲಿ ಗೋಪಾಲನಾಗಿ ಹುಟ್ಟುತ್ತಾನೆ.

ಯಾವ ಸರುಭಿ ಹಾಗೂ ಅದಿತಿ ಈ ಇಬ್ಬರು ಭಾರ್ಯೆಯರೂ ಕಶ್ಯಪನ ಜೊತೆಯಲ್ಲಿರುವರು. ಕಶ್ಯಪನೇ ವಸುದೇವನೆಂಬ ಹೆಸರಿನಿಂದ ಹುಟ್ಟುವನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವಿಷ್ಣು ಅವತರಿಸಲು ಸ್ಥಳದ ನಿಗದಿವೆಂಬಲ್ಲಿ
ಐವತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

– : ಹರಿಪರ್ವ ಮುಕ್ತಾಯ : –

ವಿಷ್ಣುಪರ್ವ 01 ವಿಷ್ಣುಪರ್ವ

# ಅಥ ಪ್ರಥಮೋಽಧ್ಯಾಯಃ

*ವೈಶಂಪಾಯನ ಉವಾಚ–*

ಜ್ಞಾತ್ವಾ ವಿಷ್ಣುಂ ಕ್ಷಿತಿಗತಿಂ ಭಾಗಾಂಶ್ಚ ತ್ರಿದಿವೌಕಸಾಮ್ ।
ವಿನಾಶಶಂಸೀ ಕಂಸಸ್ಯ ನಾರದೋ ಮಥುರಾಂ ಯಯೌ ॥ 1 ॥

ಪ್ರೇಷಯಾಮಾಸ ಕಂಸಸ್ಯ ದೂತಂ ಸ ಮುನಿಪುಂಗವಃ ।
ಸ ದೂತಃ ಕಥಯಾಮಾಸ ಮುನೇರಾಗಮನಂ ವನೇ ॥ 2 ॥
ಸ ನಾರದಸ್ಯಾಗಮನಂ ಶ್ರುತ್ವಾ ತ್ವರಿತ ವಿಕ್ರಮಃ ।
ಸ ದದರ್ಶಾತಿಥಿಂ ಶ್ಲಾಘ್ಯಂ ದೇವರ್ಷಿಂ ವೀತಕಲ್ಮಶಮ್ ।
ಸೋಽಭಿವಾದ್ಯಾರ್ಷಯೇ ತಸ್ಮೈ ಪೂಜಾಂ ಚಕ್ರೇ ಯಥಾವಿಧಿ ॥ 3 ॥

ವೈಶಂಪಾಯನರು ಜನಮೇಜಯನಿಗೆ ರಾಜನೇ, ಶ್ರೀಮನ್ನಾರಾಯಣನು ಹಾಗೂ ದೇವತೆಗಳೆಲ್ಲರೂ ತಮ್ಮ ತಮ್ಮದೇ ಆದ ಅಂಶಗಳಿಂದ ಭೂಮಿಯಲ್ಲಿ ಅವತರಿಸಿರುವರು ಎಂಬುದನ್ನು ನಿಶ್ಚೈಸಿಕೊಂಡು, ದೇವಮುನಿ ನಾರದರು ದೇವತಾಕಾರ್ಯಕ್ಕೋಸ್ಕರ ಕಂಸನನ್ನು ಶೀಘ್ರವಾಗಿ ನಾಶ ಮಾಡಲಿಚ್ಛಿಸಿ ಮಥುರಾಪುರಿಗೆ ಹೊರಟರು.

ಮಥುರೆಯ ಉಪವನವೊಂದರಲ್ಲಿ ನಿಂತು ಕಂಸನಿಗೆ ದೂತನ ಮೂಲಕ ತಾನು ಬಂದಿರುವೆನೆಂದು ಹೇಳಿ ಕಳಿಸಿದರು. ದೂತನ ಮಾತನ್ನು ಕೇಳಿದ ಕಂಸನು ಬೇಗಬೇಗ ಹೆಜ್ಜೆಗಳನ್ನು ಇಡುತ್ತಾ ಉಪವನಕ್ಕೆ ಬಂದನು. ಅಲ್ಲಿದ್ದ ಪಾಪಲೇಪ ರಹಿತರೂ, ಅಗ್ನಿ ಸದೃಶರೂ, ಅತಿಥಿಗಳಾಗಿರುವ ಶ್ಲಾಘನೀಯ

ನಾರದರನ್ನು ನೋಡಿದನು. ನಾರದರಿಗೆ ಅಭಿವಾದನ ಮಾಡಿ ಯಥಾವತ್ತಾಗಿ ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ ಸುವರ್ಣಮಯ ಆಸನ ನೀಡಿದನು.

ಅನಂತರ ನಾರದರು ಪರಮ ಕೋಪಿಷ್ಠನಾದ ಕಂಸನಿಗೆ ಹೀಗೆ ಹೇಳಿದರು.

**ಪೂಜಿತೋಽಹಂ ತ್ವಯಾ ವೀರ ವಿಧಿ ದೃಷ್ಟೇನ ಕರ್ಮಣಾ ।**
**ಗತೇ ತ್ವೇವಂ ಮಮ ವಚಃ ಶ್ರೂಯತಾಂ ಗೃಹ್ಯತಾಂ ತ್ವಯಾ ॥ 4 ॥**
**ಅನುಸೃತ್ಯ ದಿವೋಲೋಕಾನ್ ಅಹಂ ಬ್ರಹ್ಮ ಪುರೋಗಮಾನ್ ॥ 5 ॥**
**ಗತಃ ಸೂರ್ಯ ಸಖಂ ತಾತ ವಿಪುಲಂ ಮೇರುಪರ್ವತಮ್ ।**
**ಸನಂದನವನಂ ಚೈವ ದೃಷ್ಟ್ವಾ ಚೈತ್ರರಥಂ ವನಮ್ ॥ 6 ॥**
**ದೃಷ್ಟಂ ಮೇ ಬ್ರಹ್ಮಸದನಂ ಬ್ರಹ್ಮರ್ಷಿ ಗಣ ಸೇವಿತಮ್ ।**
**ಸೋಽಹಂ ಕದಾಚಿತ್ ದೇವಾನಾಂ ಸಮಾಜೇ ಮೇರುಮೂರ್ಧನಿ ।**
**ಸಂಗೃಹ್ಯ ವೀಣಾಂ ಸಂಸಕ್ತಾಮಗಚ್ಛಂ ಬ್ರಹ್ಮಣಃ ಸಭಾಮ್ ॥ 7 ॥**

ವೀರ ಕಂಸನೇ, ಶಾಸ್ತ್ರ ವಿಧಿಗೆ ತಕ್ಕಂತೆ ನೀನು ನನ್ನನ್ನು ಸತ್ಕಾರ ಮಾಡಿರುವೆ. ಈ ಸತ್ಕಾರದಿಂದ ಸಂತುಷ್ಟನಾದ ನಿನಗೆ ಹೇಳಬೇಕಾದ ಮಾತನ್ನು ಹೇಳುವೆ. ಇದನ್ನು ಕೇಳಿ ಚಿಂತನ ಮಾಡಿ ಅವಶ್ಯವಾದದ್ದನ್ನು ಮಾಡುವವನಾಗು.

ನಾನೊಂದು ಬಾರಿ ಸಮಸ್ತ ದೇವಲೋಕಗಳನ್ನೂ ಸುತ್ತುತ್ತಾ ಸೂರ್ಯನು ಪ್ರದಕ್ಷಿಣ ಮಾಡುವ ಮೇರುಪರ್ವತಕ್ಕೆ ಬಂದನು. ಅಲ್ಲಿಂದ ಮುಂದೆ ನಂದನವನ, ಚೈತ್ರರಥವನ್ನೂ ನೋಡುತ್ತಾ ದೇವತೆಗಳೊಂದಿಗೆ ಸಕಲ ಪುಣ್ಯತೀರ್ಥಗಳಲ್ಲಿ ಮಿಂದು ಪುನೀತನಾದೆನು. ಮುಂದೆ ನಡೆದಾಗ ಸ್ಮರಣೆ ಮಾತ್ರದಿಂದಲೇ ಸಕಲಾಘಗಳನ್ನೂ ಪರಿಹರಿಸುವ ದೇವಗಂಗೆಯನ್ನೂ ನೋಡಿದೆ. ಅಲ್ಲಿ ಸ್ನಾನಾಚಮನಗಳನ್ನು ಮಾಡಿಕೊಂಡು ಹೊರಟು, ದೇವ ಗಂಧರ್ವರ ವಾದ್ಯಗಳಿಂದ ಸುಸ್ವರಿತಗೊಳ್ಳುತ್ತಿರುವ, ಅಪ್ಸರೆಯರ ಸುಮಧುರ ಗಾಯನಗಳಿಂದಲೂ ನಿನಾದಿತವಾಗಿದ್ದ ಬ್ರಹ್ಮದೇವನ ಸಭೆಯನ್ನು ನೋಡಿದೆನು.

ಬ್ರಹ್ಮನ ಸಭೆಯಲ್ಲಿ ಬಿಳಿಯಾದ ಉಷ್ಣೀಷಗಳನ್ನು ಧರಿಸಿ, ನಾನಾ ವಿಧ ರತ್ನಾಲಂಕಾರಗಳಿಂದ ವಿಭೂಷಿತರಾಗಿ ದಿವ್ಯಾಸನಗಳಲ್ಲಿ ಆಸೀನರಾಗಿದ್ದ ದೇವತೆಗಳು ಹಾಗೂ ಬ್ರಹ್ಮದೇವನೂ ಕುಳಿತ್ತಿದ್ದರು.

## ನಿನ್ನ ವಧೋಪಾಯ ಚಿಂತನೆ

ತತ್ರ ಮಂತ್ರಯತಾಮೇವಂ ದೇವತಾನಾಂ ಮಯಾ ಶ್ರುತಃ ।
ಭವತಃ ಸಾನುಗಸ್ಯೈವ ವಧೋಪಾಯಃ ಸುದಾರುಣಃ ॥ 8 ॥

ತತ್ರೈಷಾ ದೇವಕೀ ಯಾ ತೇ ಮಥುರಾಯಾಂ ಪಿತೃಷ್ವಸಾ ।
ಯೋಽಸ್ಯಾಂ ಗರ್ಭೋಽಷ್ಟಮಃ ಕಂಸ ಸ ತೇ ಮೃತ್ಯುಃ ಭವಿಷ್ಯತಿ ॥ 9 ॥

ದೇವಾನಾಂ ಸ ತು ಸರ್ವಸ್ವಂ ತ್ರಿದಿವಸ್ಯ ಗತಿಶ್ಚ ಸಃ ।
ಪರಂ ರಹಸ್ಯಂ ದೇವಾನಾಂ ಸ ತೇ ಮೃತ್ಯುಃ ಭವಿಷ್ಯತಿ ॥ 10 ॥

ದೇವತೆಗಳು ಬ್ರಹ್ಮನೊಂದಿಗೆ ಸಮಾಲೋಚನೆ ಮಾಡುತ್ತಿದ್ದರು. ಪರಿವಾರ ಸಹಿತನಾದ ನಿನ್ನನ್ನು ವಧಿಸುವುದು ಹೇಗೆಂದು ಉಪಾಯವನ್ನು ವಿಚಾರ ಮಾಡುತ್ತಿದ್ದರು. ಅದನ್ನು ನಾನು ಅಲ್ಲಿ ಕೇಳಿದ ವಾರ್ತೆಯಿದು.

ದೇವಕಿಯ ಆ ಎಂಟನೆಯ ಗರ್ಭವೇ ದೇವತೆಗಳ ಸರ್ವಸ್ವವೂ ಆಗಿದೆ. ಆ ಗರ್ಭದಲ್ಲಿರುವವನೇ ಸ್ವರ್ಗಲೋಕದ ದೇವತೆಗಳಿಗೆಲ್ಲ ಆಶ್ರಯನು. ಆ ಗರ್ಭವೆ ನಿನಗೆ ಮೃತ್ಯುವೆನಿಸಿದೆ. ಆದ್ದರಿಂದಲೇ ದೇವಕಿಯ ಆ ಅಷ್ಟಮ ಗರ್ಭವು ಮಹಾದಿವ್ಯವಾಗಿರುತ್ತದೆ. ಇದೇ ಗರ್ಭದಲ್ಲಿರುವ ವಿಷ್ಣುವೆ ನಿನಗೆ ಈ ಹಿಂದೆಯೂ ಕಾಲನೇಮಿಯಾಗಿರುವಾಗಲೂ ಮೃತ್ಯು ದೇವತೆಯಾಗಿತ್ತು. ಈಗಲೂ ನಿನಗೆ ಅದೇ ಮೃತ್ಯುವು. ಆದ್ದರಿಂದ ನೀನೀಗಲೇ ದೇವಕಿಯ ಗರ್ಭವನ್ನು ನಾಶ ಮಾಡಲು ಈಗಿನಿಂದಲೇ ಉದ್ಯೋಗ ಮಾಡು.

## ನಂದಗೋಪ–ಯಶೋದ

ವಸುದೇವ ಇತಿಖ್ಯಾತಃ ಗೋಷು ತಿಷ್ಠತಿ ಭೂತಲೇ ।
ಗಿರಿರ್ಗೋವರ್ಧನೋ ನಾಮ ಮಥುರಾಯಾಃ ತ್ವದೂರತಃ ॥ 11 ॥

ತತ್ರಾಸೌ ಗೋಷು ನಿರತಃ ಕಂಸಸ್ಯ ಕರದಾಯಕಃ ।
ತಸ್ಯ ಭಾರ್ಯಾದ್ವಯಂ ಜಾತಮದಿತಿಃ ಸುರಭಿಶ್ಚ ತೇ ॥ 12 ॥

ದೇವಕೀ ರೋಹಿಣೀ ಚೇಮೇ ವಸುದೇವಸ್ಯ ಧೀಮತಃ ।
ಸುರಭೀ ರೋಹಿಣೀ ದೇವೀ ಚಾದಿತಿರ್ದೇವಕೀ ತ್ವಭೂತ್ ॥ 13 ॥

**ತತ್ರ ತ್ವಂ ಶಿಶುರೇವಾದೌ ಗೋಪಾಲಕೃತ ಲಕ್ಷಣಃ ।**
**ವರ್ಧಯಸ್ವ ಮಹಾಬಾಹೋ ಪುರಾ ತ್ರೈವಿಕ್ರಮೇ ಯಥಾ ॥ 14 ॥**
**ಛಾದಯಿತ್ವಾಽಽತ್ಮಾನಂ ಮಾಯಯಾ ಯೋಗರೂಪಯಾ ।**
**ತತ್ರಾವತಾರ ಲೋಕಾನಾಂ ಭವಾಯ ಮಧುಸೂದನ ॥ 15 ॥**

ಗೋವರ್ಧನವೆಂಬ ಪರ್ವತರಾಜನ ಮಥುರಾ ಪಟ್ಟಣಕ್ಕೆ ಹತ್ತಿರದಲ್ಲಿದೆ. ಇಲ್ಲಿ ವಸುದೇವನು ಗೋವುಗಳ ರಕ್ಷಣೆಯಲ್ಲಿಯೇ ಆಸಕ್ತನಾಗಿದ್ದು, ಕಪ್ಪ ಕಾಣಿಕೆಯನ್ನು ಕಂಸನಿಗೆ ನೀಡುವನು. ಇವರ ಪೂರ್ವಭಾರ್ಯೆಯರಾದ ಅದಿತಿ-ಸುರುಭಿಯರು ದೇವಕೀ ರೋಹಿಣೀಯೆಂದು ಹೆಸರಿನಿಂದ ಭಾರ್ಯೆಯರಾಗುತ್ತಾರೆ.

ಮಹಾವಿಷ್ಣುವೇ ಆ ಮಥುರಾದಲ್ಲಿ ನೀನು ಮಗುವಾಗಿ ಜನಿಸಿ ಗೋಪಾಲಕರ ಲಕ್ಷಣ ಹೊಂದಿ ಬೆಳೆಯುವಂತೆ ವ್ಯಾಪಾರ ಮಾಡು. ಹಿಂದೆ ವಾಮನನಾಗಿ ಅವತರಿಸಿ ತ್ರಿವಿಕ್ರಮನಾದಂತೆ ಗೋಪಾಲಕನಾಗಿ ನಂತರ ನಿನ್ನ ವಿರಾಡ್ರೂಪವನ್ನು ತಾಳಬೇಕು. ನಿನ್ನ ನಿಜಸ್ವರೂಪವನ್ನು ಆಚ್ಛಾದಿಸಿ ಸಜ್ಜನರ ಉದ್ಧಾರಕ್ಕಾಗಿ ನೀನು ಅಲ್ಲಿ ಅವತಾರವೆತ್ತಬೇಕು.

ಅರಳಿದ ಕಮಲಕ್ಕೆ ಸದೃಶ ಕಣ್ಣುಗಳಿಂದ ಕೂಡಿರುವ, ಸರ್ವತ್ರ ವ್ಯಾಪಿಯಾದ ನೀನು, ಗೋಬಾಲ ರೂಪದಲ್ಲಿ ಬಾಲಕ್ರೀಡೆಗಳನ್ನಾಡುವಾಗ ಬಾಲಲೀಲೆಯನ್ನು ನೋಡುವ ಗೋಪಾಲಕ ವೃಂದವು ಬಾಲಭಾವವನ್ನೆ ಹೊಂದುತ್ತದೆ. ಬಾಲಲೀಲೆಯ ವ್ಯಾಪಾರ ನೋಡುವುದರಲ್ಲಿಯೇ ಲೀನವಾಗಿ ಹೋಗುತ್ತದೆ.

**ಜೀವಿತಂ ವಸುದೇವಸ್ಯ ಭವಿಷ್ಯತಿ ಸುಜೀವಿತಮ್ ।**
**ಯಸ್ತ್ವಯಾ ತಾತ ಇತ್ಯುಕ್ತಃ ಸ ಪುತ್ರ ಇತಿ ವಕ್ಷ್ಯತಿ ॥ 16 ॥**
**ಅಥವಾ ಕಸ್ಯ ಪುತ್ರತ್ವಂ ಗಚ್ಛೇಥಾಃ ಕಶ್ಯಪಾದ್ ಋತೇ ।**
**ಕಾ ಚ ಧಾರಯಿತುಂ ಶಕ್ತಾ ತ್ವಾಂ ವಿಷ್ಣೋ ಅದಿತಿಂ ವಿನಾ ॥ 17 ॥**

ನಿಶ್ಚಯವಾಗಿಯೂ ವಸುದೇವನ ಜೀವನವು ಸುಜೀವಿತವಾಗುತ್ತದೆ. ಏಕೆಂದರೆ ಪರಾತ್ಪರನಾದ ನೀನು ತಾತ! ಎಂದು ಕರೆಯುವೆ. ಅವನು ನಿನ್ನನ್ನು ಪುತ್ರ ಎಂದು ಕರೆಯುತ್ತಾನೆ.

ವಿಷ್ಣುವೇ ! ಕಶ್ಯಪನನ್ನು ಬಿಟ್ಟು ನೀನು ಬೇರೆ ಯಾರನ್ನು ತಾನೇ ತಂದೆಯನ್ನಾಗಿ ಮಾಡಿಕೊಳ್ಳುವೆ? ಅದಿತಿಯನ್ನು ಬಿಟ್ಟು ಬೇರೆ ಯಾರೂ ತಾನೇ ನಿನ್ನನ್ನು ಧರಿಸಲು ಸಾಧ್ಯ.

ಮಾಧವನೇ, ಭೂಮಿಯಲ್ಲಿ ಹುಟ್ಟಿರುವ ದೈತ್ಯರ ವಿರುದ್ಧ ವಿಜಯವನ್ನು ಗಳಿಸಲು ಇಲ್ಲಿಂದ ಮಥುರಾ ಕಡೆಗೆ ಪ್ರಸ್ಥಾನ ಮಾಡು. ನಾವೂ ಸಹ ನಮ್ಮ ನಮ್ಮ ನಿವಾಸಗಳಿಗೆ ಹೋಗುತ್ತೇನೆ.

ವೈಶಂಪಾಯನರು ಹೇಳುವರು.

**ಸ ದೇವಾನಭ್ಯನುಜ್ಞಾಯ ವಿವಿಕ್ತೇ ತ್ರಿದಿವಾಲಯೇ ।**
**ಜಗಾಮ ವಿಷ್ಣುಃ ಸ್ವಂ ದೇಶಂ ಕ್ಷೀರೋದಸ್ಯೋತ್ತರಾಂ ದಿಶಮ್ ॥ 18 ॥**

**ತತ್ರ ವೈ ಪಾರ್ವತೀ ನಾಮ ಗುಹಾಮೇರೋಃ ಸುದುರ್ಗಮಾ ।**
**ತ್ರಿಭಿಃ ತಸ್ಯೈವ ವಿಕ್ರಾಂತೈಃ ನಿತ್ಯಂ ಪರ್ವಸು ಪೂಜಿತಾ ॥ 19 ॥**

**ಪುರಾಣಂ ತತ್ರ ವಿನ್ಯಸ್ಯ ದೇಹಂ ಹರಿರುದಾರಧೀಃ ।**
**ಆತ್ಮಾನಂ ಯೋಜಯಾಮಾಸ ವಸುದೇವಗೃಹೇ ಪ್ರಭುಃ ॥ 20 ॥**

ದೇವಲೋಕದ ಪುಣ್ಯತಮ ದೇಶದಲ್ಲಿ ಕುಳಿತಿದ್ದ ವಿಷ್ಣುವು ದೇವತೆಗಳಿಗೆ ಹೋಗಲು ಅನುಜ್ಞೆಯಿತ್ತನು. ತಾನು ಕ್ಷೀರ ಸಮುದ್ರದ ಉತ್ತರ ದಿಕ್ಕಿನಲ್ಲಿದ್ದ ತನ್ನ ನಿವಾಸ ಸ್ಥಾನಕ್ಕೆ ಹೋದನು.

ಮೇರುಪರ್ವತದಲ್ಲಿ ಪಾರ್ವತೀಯೆಂಬ ಅತ್ಯಂತ ದುರ್ಗಮ ಗುಹೆಯೊಂದಿದೆ. ಅಲ್ಲಿ ಭಗವಂತನ ಮೂರು ಪಾದದ ಗುರುತುಗಳಿವೆ. ಪರ್ವಕಾಲಗಳಲ್ಲಿ ಮಹರ್ಷಿಗಳು ಪೂಜಿಸುತ್ತಾರೆ. ತನ್ನ ಪುರಾಣಪುರುಷ ರೂಪವನ್ನು ಅಲ್ಲಿಯೇ ಇಟ್ಟು ಒಂದಂಶದಿಂದ ವಸುದೇವನ ಮನೆಯಲ್ಲಿ ಅವತರಿಸಲು ನಿಶ್ಚಯಿಸಿದನು.

**ಏಷಾ ಮೇ ತ್ವದ್ಗತಾ ಪ್ರೀತಿಃ ಯದರ್ಥಂ ಚಾಹ ಮಾಗತಃ ।**
**ಭುಜ್ಯತಾಂ ಸರ್ವಕಾಮಾರ್ಥಃ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ ॥ 21 ॥**

ಕಂಸನೇ, ನಿನ್ನ ಮೇಲೆ ನನಗೆ ಅಪಾರವಾದ ಪ್ರೀತಿಯಿದೆ. ಇದರಿಂದಾಗಿ ನಾನು ಇಲ್ಲಿಗೆ ಬಂದಿರುವೆನು. ಈಗಲೇ ನೀನು, ನಿನಗೆ ಇಷ್ಟವಾದ

ಭೋಗಗಳನ್ನೆಲ್ಲ ಅನುಭವಿಸು. ನಿನಗೆ ಸ್ವಸ್ತಿಯಾಗಲಿ, ಹೋಗಿ ಬರುತ್ತೇನೆಂದು ಹೇಳಿ ಹೊರಟರು.

### ಕಂಸನ ಆಲೋಚನೆ

ನಾರದರು ಹೀಗೆ ಹೇಳಿ ಹೊರಟು ಹೋದಾಗ ಅವರ ಮಾತನ್ನು ವಿಚಾರ ಮಾಡುತ್ತಿದ್ದ ಕಂಸನು ಬಹಳ ಹೊತ್ತಿನವರೆಗೂ ತನ್ನ ದಂತಗಳನ್ನು ಪ್ರದರ್ಶಿಸುತ್ತಾ ಅಟ್ಟಹಾಸದಿಂದ ನಗುತ್ತಿದ್ದನು.

**ಪ್ರೋವಾಚ ಸಸ್ಮಿತಂ ಚೈವ ಭೃತ್ಯಾನಾಮಗ್ರತಃ ಸ್ಥಿತಃ ।**
**ಹಾಸ್ಯಃ ಖಲು ಸ ಸರ್ವೇಷು ನಾರದೋ ನ ವಿಶಾರದಃ ॥ 22 ॥**

ತನ್ನೆದುರಿಗೆ ಕುಳಿತಿದ್ದ ಭೃತ್ಯಗಳನ್ನು ನೋಡಿ - ಕಂಸನು ಈ ಕುಹಕಿ ನಾರದನು ಒಳ್ಳೆಯ ಹಾಸ್ಯಗಾರನಾದರೂ ಅದರಲ್ಲಿ ಕುಶಲಿಯಲ್ಲ.

ದೇವತೆಗಳು ವಿನೋದಕ್ಕಾಗಿ ಏನಾದರೂ ಹೇಳಿದ ಕೂಡಲೇ ಗಾಬರಿಯಾದವನಂತೆ ಅದನ್ನು ಸತ್ಯವೆಂದೆ ಭ್ರಮಿಸಿ, ತಾನು ಭಯ ಪಟ್ಟು, ಎಲ್ಲರ ಹಾಸ್ಯಕ್ಕೂ ಪಾತ್ರನಾಗುತ್ತಾನೆ.

### ಕಂಸನ ಜಂಭ

**ನಾಹಂ ಭೀಷಯಿತುಂ ಶಕ್ಯಃ ದೇವೈರಪಿ ಸವಾಸವೈಃ ।**
**ಆಸನಸ್ಥೋ ಶಯಾನೋ ವಾ ಪ್ರಮತ್ತಃ ಮತ್ತ ಏವ ಚ ॥ 23 ॥**

**ಯೋಽಹಂ ದೋರ್ಭ್ಯಾಮುದಾರಾಭ್ಯಾಂ ಕ್ಷೋಭಯೇಯಂ ಧರಾಮಿಮಾಮ್ ।**
**ಕೋಽಸ್ತಿ ಮಾಂ ಮಾನುಷೇ ಲೋಕೇ ಯಃ ಕ್ಷೋಭಯಿತುಮುತ್ಸಹೇತ್ ॥ 24 ॥**

**ಅದ್ಯಪ್ರಭೃತಿ ದೇವಾನಾಮೇಷ ದೇವಾನುವರ್ತಿನಾಮ್ ।**
**ನೃ ಪಕ್ಷಿ ಪಶುಸಂಘಾನಾಂ ಕರೋಮಿ ಕದನಂ ಮಹತ್ ॥ 25 ॥**

ಆದರೆ ನನ್ನನ್ನು ಈ ಇಂದ್ರಾದಿ ದೇವತೆಗಳು ಕೂಡಿ ಸೇರಿದರೂ, ಮಲಗಿರುವಾಗ ಮೈಮರೆತು ಕುಳಿತಿರುವಾಗ, ಮದಭರಿತನಾಗಿರಲಿ, ಉನ್ಮತ್ತನಾಗಿರಲಿ ನನ್ನನ್ನು ಭಯಪಡಿಸಲು ಸಾಧ್ಯವಿಲ್ಲ. ನಾನು ಈ

ಉದ್ದಂಡವಾದ ಭುಜದಂಡಗಳಿಂದ ಅಖಂಡ ಧರಾಮಂಡಲವನ್ನೇ ಕಂಪನ ಮಾಡಬಲ್ಲೆನು. ನಾನು ಇಂದಿನಿಂದ ಸಕಲ ದೇವತೆಗಳು ಹಾಗೂ ದೇವಾನುಚರರಾದ ಪಶುಪಕ್ಷಿ ಮುನಿ ಮಾನವರ ಸಂಹಾರ ಸತ್ರವನ್ನೆ ಆರಂಭಿಸಿವೆನು. ಎಲೈ ಕೇಶಿ, ಪ್ರಲಂಬ, ಧೇನುಕ, ಅರಿಷ್ಟ, ಪೂತನಾ, ಕಾಲಿಯ ಮೊದಲಾದ ದೈತ್ಯರೇ ! ಇಂದಿನಿಂದ ನೀವೆಲ್ಲರೂ ಮನಸ್ಸು ಬಂದ ರೀತಿಯಲ್ಲಿ ಭೂಮಿಯನ್ನೆಲ್ಲ ಸುತ್ತುತ್ತಿರಿ. ನನ್ನ ಪಕ್ಷವನ್ನು ನಿಂದಿಸುವುವವರನ್ನು ಕಂಡಕಂಡಲ್ಲಿ ತುಂಡಿರಿಸಿರಿ.

**ಗರ್ಭಸ್ಥಾನಾಮಪಿ ಗತಿಃ ವಿಜ್ಞೇಯಾ ಚೈವ ದೇಹಿನಾಮ್ ।**
**ನಾರದೇನ ಹಿ ಗರ್ಭೇಭ್ಯೋ ಭಯಂ ನಃ ಸಮುದಾಹೃತಮ್ ॥ 26 ॥**

**ಮಾಂ ಚ ವೊ ನಾಥಮಾಶ್ರಿತ್ಯ ನಾಸ್ತಿ ದೇವಕೃತಂ ಭಯಮ್ ।**
**ಸತು ಕೇಲಿ ಕಿಲೋ ವಿಪ್ರೋ ಭೇದಶೀಲಶ್ಚ ನಾರದಃ ।**
**ಸುಶ್ಲಿಷ್ಟಾನಪಿ ಲೋಕೇಽಸ್ಮಿನ್ ಭೇದಯನ್ ಲಭತೇ ರತಿಮ್ ॥ 27 ॥**

ಪ್ರಾಣಿಗಳ ಗರ್ಭಗಳಲ್ಲಿ ಯಾರಿರುವರೆಂಬುದನ್ನು ಅವರು ತಿಳಿಯಬೇಕಾಗಿದೆ. ಏಕೆಂದರೆ, ನಾರದರು ಎಂಟನೆಯ ಗರ್ಭದಿಂದ ನನಗೆ ಭಯವುಂಟೆಂದು ಹೇಳಿರುವನು. ಈಗ ಯಾರು ಯಾರು ಗರ್ಭಿಣಿಯರಿದ್ದಾರೆ ಎಂದು ನೀವೆಲ್ಲರೂ ತಿಳಿದು ಹುಡುಕಿ ಸಂಹಾರ ಮಾಡಿರಿ. ನೀವ್ಯಾರೂ ಕಲಹವೆಂಬ ಕ್ರೀಡೆಯಿಂದ ತಮಾಷೆ ನೋಡುವ ಈ ನಾರದನ ಪೊಳ್ಳು ನುಡಿಗಳನ್ನು ಕೇಳಿ ಭಯಪಡಬೇಡಿರಿ. ನನ್ನನ್ನೇ ನಾಥವನ್ನಾಗಿ ಹೊಂದಿರುವ ನಿಮಗೆ ಯಾರಿಂದಲೂ ಯಾವುದೇ ರೀತಿಯಲ್ಲಿಯೂ ಭಯವಿರುವುದಿಲ್ಲ. ಇವನು ಲೋಕದಲ್ಲಿ ಪರಸ್ಪರವಾಗಿ ಸ್ನೇಹದಿಂದದಿದ್ದವರ ಮಧ್ಯೆ ಕಲಹ ತಂದಿಟ್ಟು ಖುಷಿ ಪಡುವವನು.

ಮಹಾಚಪಲಚಿತ್ತನಾದ ಈ ಮುನಿಯು ಒಬ್ಬರಿಗೊಬ್ಬರು ಕಾಲು ಕೆರೆದು ಕಲಹ ವಾಡುವಂತೆ ಪ್ರೇರೇಪಿಸುತ್ತಾ ರಾಜರುಗಳಲ್ಲಿ ವೈರ ತಂದೊಡುತ್ತಾ. ತ್ರಿಲೋಕ ಸಂಚರಿಸುತ್ತಾನೆ.

**ಏವಂ ಸ ವಿಲಪನ್ನೇವ ವಾಙ್ಮಾತ್ರೇಣೈವ ಕೇವಲಮ್ ।**
**ವಿವೇಶ ಕಂಸೋ ಭವನಂ ದಹ್ಯಮಾನೇನ ಚೇತಸಾ ॥ 28 ॥**

ಹೀಗೆ ಕಂಸನು ಬಾಯಿ ಮಾತಿನಿಂದ ಮಾತ್ರ ತನ್ನ ಪ್ರತಾಪವನ್ನು ಹರಟುತ್ತಾ ಮನಸ್ಸಿನಲ್ಲಿಯೇ ಅಳುಕುತ್ತಾ ಅರಮನೆಗೆ ಹೋದನು. ಆದರೂ ಅಂತರಂಗದಲ್ಲಿ ಭಯವಿದ್ದರೂ ಬಹಿರಂಗದಲ್ಲಿ ಜಂಭ ಕೊಚ್ಚಿಕೊಳ್ಳುತ್ತಾ ಇದ್ದರೂ ಮನಸ್ಸಿನಲ್ಲಿ ಚಿಂತಾಗ್ನಿ ದಹಿಸುತ್ತಿತ್ತು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ನಾರದ-ಕಂಸ ಭೇಟಿವೆಂಬಲ್ಲಿ
ಮೊದಲನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




## ಅಥ ದ್ವಿತೀಯೋಽಧ್ಯಾಯಃ

*ವೈಶಂಪಾಯನ ಉವಾಚ-*

**ಸೋಽಜ್ಞಾಪಯತ ಸಂರಬ್ಧಃ ಸಚಿವಾನ್ ಆತ್ಮನೋ ಹಿ ತಾನ್ ।**
**ಯತ್ತಾ ಭವತ ಸರ್ವೇ ವೈ ದೇವಕ್ಯಾ ಗರ್ಭಕೃಂತನೇ ॥ 1 ॥**
**ಪ್ರಥಮಾದೇವ ಹಂತವ್ಯಾ ಗರ್ಭಾಸ್ತೇ ಸಪ್ತ ಏವ ಹಿ ।**
**ಮೂಲಾದೇವ ತು ಹಂತವ್ಯಃ ಸೋಽನರ್ಥಃ ಯತ್ರ ಸಂಶಯಃ ॥ 2 ॥**
**ದೇವಕೀ ಚ ಗೃಹೇ ಗುಪ್ತಾ ಪ್ರಚ್ಛನ್ನೈರಭಿರಕ್ಷಿತಾ ।**
**ಸ್ವೈರಂ ಚರತು ವಿಶ್ರಬ್ಧಾ ಗರ್ಭಕಾಲೇ ತು ರಕ್ಷ್ಯತಾಮ್ ॥ 3 ॥**

ರಾಜನೇ ! ಕ್ರೋಧದಿಂದ ತಪ್ತನಾದ ಕಂಸನು ತನ್ನ ಹಿತೈಷಿಗಳಾದ ಮಂತ್ರಿಗಳಿಗೆ ಹೇಳಿದನು.

ಮಂತ್ರಿಗಳೇ, ನೀವೆಲ್ಲರೂ ದೇವಕಿಯ ಗರ್ಭಗಳನ್ನು ವಿನಾಶಗೊಳಿಸು-ವುದರಲ್ಲಿ ಉದ್ಯುಕ್ತರಾಗಿರಿ. ಪ್ರಥಮ ಗರ್ಭದಿಂದಲೇ ಪ್ರಾರಂಭಿಸಿ ದೇವಕಿಯ ಸಪ್ತಗರ್ಭಗಳನ್ನೂ ನಾಶ ಮಾಡಿ, ನಂತರ ಎಂಟನೆಯ ಗರ್ಭವನ್ನೂ ನಾಶ ಮಾಡಬೇಕಾಗಿದೆ. ಸಂಶಯ ಬಂದಾಗ ಸಂಶಯದ ಮೂಲವನ್ನೇ ನಿರ್ಮೂಲ ಮಾಡಿ ಭಯದ ಬೀಜವೆ ಇರದಂತೆ ಮಾಡಿಕೊಳ್ಳುವುದು ಬುದ್ಧಿವಂತರ ಲಕ್ಷಣ ವೆಂದ.

ನನ್ನ ತಂಗಿ ದೇವಿಕಿಯು ನಮ್ಮ ಅರಮನೆಯಲ್ಲಿ ನಮ್ಮ ಗೂಢಾಚಾರರಿಂದ ರಕ್ಷಿಸಲ್ಪಡುತ್ತಾ ಇದ್ದು, ತನ್ನ ಇಚ್ಛೆಯಂತೆ ಓಡಾಡಿಕೊಂಡಿರಲಿ. ಆದರೆ

ಗರ್ಭಿಣಿಯಾದಳೆಂದರೆ ಅವಳನ್ನು ವಿಶೇಷವಾಗಿ ನಿಯಂತ್ರಣದಲ್ಲಿಡಬೇಕು. ಅರಮನೆಯಲ್ಲಿರುವ ಹಿರಿಯ ಸ್ತ್ರೀಯರು ಅವಳು ಋತುವತಿಯಾದ ದಿವಸಗಳನ್ನೂ ಲೆಕ್ಕದಲ್ಲಿಟ್ಟು ಗರ್ಭಧಾರಣೆಯ ದಿನಗಳನ್ನು ಮಾತ್ರ ಜಾಗರೂಕತೆಯಿಂದ ಎಣಿಸಲಕ್ಕೆ ತಿಳಿಸಿರಿ. ಗರ್ಭಧಾರಣೆಯಾದದ್ದು ನಿಶ್ಚಿತವಾದ ಕೂಡಲೇ ದೇವಕಿಗೆ ಸಂದೇಹವೇ ಬರದಂತೆ ಗೂಢಚಾರರು ಅವಳನ್ನು ಕಾಯುತ್ತಿರಲಿ. ಹತ್ತು ತಿಂಗಳು ತುಂಬಿದ ಮೇಲೆ ಮುಂದಿನದ್ದನ್ನು ನಾನು ನೋಡಿಕೊಳ್ಳುತ್ತೇನೆ.

**ವಸುದೇವಸ್ತು ಸಂರಕ್ಷ್ಯಃ ಸ್ತ್ರೀಸನಾಥಾಸು ಭೂಮಿಷು ।**
**ಅಪ್ರಮತ್ತೈಃ ಮಮ ಹಿತೈಃ ರಾತ್ರಾವಹನಿ ಚೈವ ಹಿ ॥ 4 ॥**

**ಸ್ತ್ರೀಭಿಃ ವರ್ಷವರೈಶ್ಚೈವ ವಕ್ತವ್ಯಂ ನ ತು ಕಾರಣಮ್ ॥ 5 ॥**

ವಸುದೇವನು ಮಾತ್ರ ಮೇಲಿಂದ ಮೇಲೆ ಇಲ್ಲಿಗೆ ಬಂದು ಹೋಗದಂತೆ ನಮ್ಮ ಅಂತಃಪುರದ ಸಂರಕ್ಷಕರಾದ ವೃದ್ಧ ಸ್ತ್ರೀಯು, ಷಂಡರು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿರಬೇಕು. ಹಗಲು ರಾತ್ರಿ ವಸುದೇವನನ್ನು ರಕ್ಷಿಸಿ. ಸ್ತ್ರೀಯರಿಗಾಗಲೀ ಷಂಡರಿಗಾಗಲಿ ಕಾರಣ ತಿಳಿಸಬಾರದು.

ವಿಶ್ವಾಸವುಳ್ಳ ಮನುಷ್ಯರಿಂದ ಮಾತ್ರ ಮಾಡಲು ಸಾಧ್ಯವಾಗುತ್ತದೆ.

ನನ್ನಂತಹ ಪರಾಕ್ರಮಿಗಳು ಯಾವ ಉಪಾಯದಿಂದ ದೈವದ ಪ್ರತಿಕೂಲವನ್ನು ನಿಷ್ಫಲಗೊಳಿಸುವರೆಂದು ಹೇಳುವೆನು ಕೇಳಿರಿ.

**ಮಂತ್ರಗ್ರಾಮೈಃ ಸುವಿಹಿತೈಃ ಔಷಧೈಶ್ಚ ಸುಯೋಜಿತೈಃ ।**
**ಯತ್ನೇನ ಚಾನುಕೂಲ್ಯೇನ ದೈವಮಪ್ಯನುಲೋಮ್ಯತೇ ॥ 6 ॥**

ವಿಧಿವತ್ತಾಗಿ ಮಾಡುವ ಮಹಾಮಂತ್ರಗಳ ಜಪದಿಂದಲೂ ವಿಧಿವತ್ತಾಗಿ ತಯಾರಿಸಿದ ಔಷಧ ಮತ್ತು ಯುಕ್ತ ಪ್ರಯತ್ನಗಳಿಂದ ಎಂತಹ ವಿಮುಖವಾದ ದೈವವನ್ನು ತಿರುಗಿಸಿ ನಮ್ಮ ಪೌರುಷಾಧೀನವನ್ನಾಗಿ ಮಾಡಿಕೊಳ್ಳ-ಬಹುದಾಗಿದೆ.

ಜನಮೇಜಯನೇ, ಹೀಗೆ ಕಂಸನು ದೇವಕಿಯ ಗರ್ಭವನ್ನು ವಿನಾಶ-ಗೊಳಿಸಲು ಯತ್ನಿಸತೊಡಗಿದನು.

**ಏವಂ ಶ್ರುತ್ವಾ ಪ್ರಯತ್ನಂ ವೈ ಕಂಸಸ್ಯಾರಿಷ್ಟ ಸಂಜ್ಞಿತಮ್ ।**
**ಅಂತರ್ಧಾನಂ ಗತೋ ವಿಷ್ಣುಃ ಚಿಂತಯಾಮಾಸ ವೀರ್ಯವಾನ್ ॥ 7 ॥**

**ಸಪ್ತೇಮಾನ್ ದೇವಕೀಗರ್ಭಾನ್ ಭೋಜಪುತ್ರೋ ವಧಿಷ್ಯತಿ ।**
**ಅಷ್ಟಮೇ ಚ ಮಯಾ ಗರ್ಭೇ ಕಾರ್ಯಮಾಧಾನಮಾತ್ಮನಃ ॥ 8 ॥**

ನಾರದರಿಂದ ದೇವಕಿಯ ಗರ್ಭವೇ ತನಗೆ ಮೃತ್ಯುದೇವತೆಯೆಂದು ಕೇಳಿದ ಕಂಸನು ಭಯ ಪೀಡಿತನಾದ, ಇದಕ್ಕಾಗಿ ತನ್ನ ರಕ್ಷಣೆಯ ಸಲುವಾಗಿ ಮಂತ್ರಿಗಳೊಡನೆ ಮಂತ್ರಾಲೋಚನೆ ಮಾಡಿದನು. ಜಗತ್ತಿಗೆ ಅರಿಷ್ಟವನ್ನುಂಟು ಮಾಡುವ ಕಂಸನ ಆ ಪ್ರಯತ್ನವನ್ನು ಅವ್ಯಕ್ತ ಸ್ವಭಾವದ ವಿಷ್ಣುವು ಯೋಚಿಸಿದನು. ಈ ಕಂಸನು ದೇವಕೀದೇವಿಯ ಏಳು ಗರ್ಭಗಳನ್ನು ನಾಶ ಮಾಡುತ್ತಾನೆ. ಎಂಟನೆಯ ಗರ್ಭವಾಗಿ ದೇವಕಿಯ ಜಠರದಲ್ಲಿ ನನ್ನನ್ನೆ ನಾನು ಪ್ರತಿಷ್ಠಿಸಿಕೊಳ್ಳುತ್ತೇನೆ.

**ತಸ್ಯ ಚಿಂತಯತಸ್ತೇವಂ ಪಾತಾಲಮಗಮನ್ ಮನಃ ।**
**ಯತ್ರ ತೇ ಗರ್ಭಶಯನಾಃ ಷಡ್ಗರ್ಭಾ ನಾಮ ನಾಮತಃ ॥ 9 ॥**

## ದೇವಕಿಯ ಮೊದಲ ಆರು ಪುತ್ರರು

**ವಿಕ್ರಾಂತವಪುಷೋ ದೀಪ್ತಸ್ತೇಽಮೃತ ಪ್ರಾಶನೋಪಮಾಃ ।**
**ಅಮರಪ್ರತಿಮಾ ಯುದ್ಧೇ ಪುತ್ರಾ ವೈ ಕಾಲನೇಮಿನಃ ॥ 10 ॥**

**ತೇ ತಾತತಾತಂ ಸಂತ್ಯಜ್ಯ ಹಿರಣ್ಯಕಶಿಪುಂ ಪುರಾ ।**
**ಉಪಾಸಾಂಚಕ್ರಿರೇ ದೈತ್ಯಾಃ ಪುರಾ ಲೋಕಪಿತಾಮಹಮ್ ।**
**ತೇಷಾಂ ಪ್ರೀತೋಽಭವದ್ ಬ್ರಹಾ ಷಡ್ಗರ್ಭಾಣಾಂ ವರಂ ದದೌ ॥ 11 ॥**

**ಷಡ್ಗರ್ಭಾಸುರರು**[1] ಹಂಸ, ಸುವಿಕ್ರಮ, ಕ್ರೋಧ, ದಮನ, ರಿಪುಮರ್ದನ, ಕ್ರೋಧಾ ಎಂಬ ಪ್ರಖ್ಯಾತರಾದ ಆರು ಜನ ದೈತ್ಯರು ಪಾತಾಲ ತಲದ

---

1. ಷಡ್ಗರ್ಭಾಸುರರು :
**ಮರೀಚಿಜಾಃ ಷಣ್ಮುನಿಯೋ ಬಭೂವುಃ ತೇ ಪ್ರಾಹಸನ್ ದೇವಲಂ ಕಾರ್ಶ್ಯಹೇತೋಃ ।**
**ತಚ್ಛಾಪತಃ ಕಾಲನೇಮಿಪ್ರಸೂತಾಃ ಅವಧ್ಯತಾರ್ಥಂ ತಪ ಏವಚಕ್ರುಃ ॥**
ಬ್ರಹ್ಮದೇವರ ಪುತ್ರರು ಮರೀಚಿಗಳು. ಅವರಿಗೆ ಆರು ಮಂದಿ ಪುತ್ರರು. ಅಸಿತ ದೇವಲರು ಕಶ್ಯಪರ ಪುತ್ರರು. ಹಿಮಾಲಯನ ಪುತ್ರಿಯಾದ ಏಕಪರ್ಣೆಯನ್ನು

ಜಲಗರ್ಭದಲ್ಲಿ ಅವಿತುಕೊಂಡಿದ್ದರು. ಅವರು ಅಮೃತಪಾನ ಮಾಡಿದ ದೇವತೆಗಳಂತೆ ದಿವ್ಯ ವರ್ಚಸ್ಸಿನಿಂದ ಕೂಡಿದ್ದರು. ರಣವಿಕ್ರಾಂತರಾಗಿದ್ದ ಅವರು ಕಾಲನೇಮಿಯ ಮಕ್ಕಳಾಗಿದ್ದರು. ಅವರು ತಮ್ಮ ದೈತ್ಯಜಾತಿ ಗುರುವೆನಿಸಿದ ಹಿರಣ್ಯಕಶಿಪುವನ್ನು ಬಿಟ್ಟು ತಂದೆಯ ತಂದೆಯೂ, ಸರ್ವಲೋಕ ಪಿತಾಮಹರೂ ಆದ ಬ್ರಹ್ಮದೇವರನ್ನೇ ಕುರಿತು ತೀವ್ರತರವಾದ ತಪಸ್ಸನ್ನು ಮಾಡಿದರು.

ಮಹಾಮುನಿಗಳಂತೆ ಜಟಾಮಂಡಲ ಮಂಡಿತರಾಗಿ ಅತ್ಯುತ್ಕುಟ ಭಕ್ತಿಯಿಂದ ತಪಸ್ಸನ್ನು ಆಚರಿಸಿದರು. ಅವರ ತಪಸ್ಸಿಗೆ ಮೆಚ್ಚಿದ ಬ್ರಹ್ಮದೇವನು

---

ವಿವಾಹವಾದವರು. ತಪಸ್ಸಿನಿಂದ ಕೃಶವಾದ ದೇವಲರನ್ನು ನೋಡಿ ಮರೀಚಿಪುತ್ರರು ಅಪಹಾಸ್ಯ ಮಾಡಿದರು. ಅಪಹಾಸ್ಯ ಮಹಾದೋಷಃ

**ಹೀನಾಂಗಾನ್ ಅತಿರಿಕ್ತಾಂಗಾನ್ ವಿದ್ಯಾಹೀನಾನ್ ವಯೋಽಧಿಕಾನ್ ।**

**ರೂಪ ದ್ರವಿಣ ಹೀನಾಂಶ್ಚ ಜಾತಿಹೀನಾನ್ ಚ ನಾಕ್ಷಿಪೇತ್ ॥** – *ಮ.ಭಾ. ಅಶ್ವ*

ಇವರು ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್, ಘೃಣಿ ಎಂದು ಹೆಸರಿತ್ತು.

**ಧಾತಾ ಪ್ರಾದಾದ್ ವರಮೇಷಾಂ ತಥೈವ ಶಶಾಪ ತಾನ್ ಕ್ಷ್ಮಾತಲೇ ಸಂಭವಧ್ವಮ್।**

**ತತ್ರ ಸ್ವತಾತೋ ಭವತಾಂ ನಿಹಂತೇತ್ಯಾತ್ಮಾನ್ಯತೋ ವರ ಲಿಪ್ಸೂನ್ ಹಿರಣ್ಯಃ ॥**

– *ತಾ. ನಿ. 12/13*

---

*ವಿಶೇಷಾಂಶ :*

ಷಡ್ಗರ್ಭ ದೈತ್ಯರನ್ನು ಅಗ್ನಿಪುರಾಣವು ಹಿರಣ್ಯಕಶಿಪುವಿನ ಪುತ್ರರೆಂದಿದೆ. ಬ್ರಹ್ಮಪುರಾಣವೂ ಹಿರಣ್ಯಕಶಿಪುವಿನ ಪುತ್ರರೆಂದಿದೆ.

**ಹಿರಣ್ಯಕಶಿಪೋಃ ಪುತ್ರಾಃ ಷಡ್ಗರ್ಭಾ ಯೋಗನಿದ್ರಯಾ ।** –*ಆಗ್ನೇಯ 12/4*

ಪದ್ಮಪುರಾಣದಲ್ಲಿ ಹಿರಣ್ಯಾಕ್ಷನ ಆರು ಮಂದಿ ಮಕ್ಕಳೆಂದಿದೆ.

**ಹಿರಣ್ಯಾಕ್ಷಸ್ಯ ಷಟ್ ಪುತ್ರಾಃ ।** –*ಪಾ. ಉತ್ತರ 245/126*

ಪುಂವ್ಯತ್ಯಾಸವೆಂಬ ಒಂದು ಪ್ರಭೇದವಿದೆಯಾಗಿ ಹಿರಣ್ಯಕಶಿಪುವನ್ನು ಹಿರಣ್ಯಾಕ್ಷ ಎಂದಿರಬಹುದು. ಹಾಗೆ ಕಂಸನಿಗೆ ಬದಲಾಗಿ ಕ್ರೂರತ್ವವೆಂಬ ಧರ್ಮದಿಂದಾಗಿ ಕಂಸನನ್ನೆ ಹಿರಣ್ಯಕಶಿಪು, ಹಿರಣ್ಯಾಕ್ಷ ಎನ್ನಲಾಗಿದೆ. ಇದಕ್ಕೆ ಅಸುರಮೋಹನವೂ ಉದ್ದೇಶವಿದೆ. ವಸ್ತುತಃ ಹಿರಣ್ಯಾಕ್ಷಸ್ಯ ಪುತ್ರಾ ಇವ ಪುತ್ರಾ, ಅವನ ಪುತ್ರರಂತೆ ಇದ್ದರೆಂದರ್ಥ.

ಪ್ರಸನ್ನನಾದನು. ದೈತ್ಯರೇ ನಿಮ್ಮ ತಪಸ್ಸಿನಿಂದ ಪ್ರಸನ್ನನಾಗಿದ್ದೇನೆ. ನಿಮಗೆ ಬೇಕಾದ ವರ ಬೇಡಿರಿ ಎಂದರು.

## ಅವಧ್ಯತ್ವ ವರ ಕೇಳಿದರು

*ಬ್ರಹ್ಮೋವಾಚ–*

**ಭೋ ಭೋ ದಾನವ ಶಾರ್ದೂಲಾಃ ತಪಸಾಹಂ ಸುತೋಷಿತಃ ।**
**ಬ್ರೂತ ವೋ ಯಸ್ಯ ಯಃ ಕಾಮಃ ತಸ್ಯ ತಂ ತಂ ಕರೋಮ್ಯಹಂ ॥ 12 ॥**
**ಯದಿ ನೋ ಭಗವಾನ್ ಪ್ರೀತೋ ದೀಯತಾಂ ನೋ ವರೋ ವರಃ ।**
**ಅವಧ್ಯಾಃ ಸ್ಯಾಮ ಭಗವನ್ ದೈವತೈಃ ಸಮಹೋರಗೈಃ ॥ 13 ॥**
**ಶಾಪಪ್ರಹರಣೈಶ್ಚೈವ ಸ್ವಸ್ತಿ ನೋಽಸ್ತು ಮಹರ್ಷಿಭಿಃ ।**

ಆಗ ಸಮಾನ ಹಾಗೂ ಏಕ ರೀತಿಯ ಅಶೋತ್ತರ ಹಿತಾಹಿತಗಳುಳ್ಳ ಆ ದಾನವೇಂದ್ರರು – ಬ್ರಹ್ಮದೇವನೇ ! ತಾವು ನಮ್ಮ ಮೇಲೆ ಪ್ರಸನ್ನರಾಗಿದ್ದರೆ ನಮಗೆ ದೇವ, ದಾನವ, ಉರಗ, ಮಹರ್ಷಿಗಳ ಅಮೋಘ ಅಸ್ತ್ರವಾದ ಶಾಪ ಕೋಪಾಕ್ಷರಗಳ ಮೂಲಕವೂ ನಮಗೆ ಮರಣವು ಬಾರದಂತೆ ವರ ನೀಡಿರಿ. ಯಕ್ಷ, ಗಂಧರ್ವನಾಯಕರು, ಸಿದ್ಧ ಚಾರಣ ಮಾನವರಿಂದಲೂ ನಮಗೆ ಮರಣವೇರ್ಪಡದಿರಲಿ ಎಂದರು.

ಬ್ರಹ್ಮದೇವರು ಅವರನ್ನುದ್ಧೇಶಿಸಿ ನಿಮ್ಮ ಇಚ್ಛೆಯಂತೆ ಅವಧ್ಯರಾಗುವಿರಿ. ಹೀಗೆ ಬ್ರಹ್ಮನು ಷಡ್ಗರ್ಭದಾನವರಿಗೆ ವರ ನೀಡಿ ಹೋದ ಮೇಲೆ ಬ್ರಹ್ಮದೇವನಿಂದ ಅವಧ್ಯತ್ವ ವಿಚಾರ ತಿಳಿದ ಹಿರಣ್ಯಕಶಿಪುವು ಕೋಪಾವಿಷ್ಟನಾಗಿ ಹೀಗೆ ಶಪಿಸಿದರು.

## ಹಿರಣ್ಯಕಶಿಪುವಿನ ಶಾಪ
## ತಂದೆಯಿಂದಲೇ ನೀವು ಕೊಲ್ಲಲ್ಪಡಿರಿ

**ಮಾಮುತ್ಸೃಜ್ಯ ವರೋ ಯಸ್ಮಾತ್ ಧೃತೋ ವಃ ಪದ್ಮ ಸಂಭವಾತ್ ।**
**ತಸ್ಮಾದ್ ವಃ ತ್ಯಾಜಿತಃ ಸ್ನೇಹಃ ಶತ್ರುಭೂತಾನ್ ತ್ಯಜಾಮ್ಯಹಮ್ ॥ 14 ॥**
**ಷಡ್ಗರ್ಭಾ ಇತಿ ಯೋಽಯಂ ವಃ ಶಬ್ಧಃ ಪಿತ್ರಾಭಿವರ್ಧಿತಃ ।**
**ಸ ಏವ ವೋ ಗರ್ಭಗತಾನ್ ಪಿತಾ ಸರ್ವಾನ್ ವಧಿಷ್ಯತಿ ॥ 15 ॥**

ದಾನವರೇ ! ದೈತ್ಯರಿಗೆಲ್ಲ ಗುರುವಾದ ನಾನಿರುವಾಗ ನನ್ನನ್ನು ತಿರಸ್ಕರಿಸಿ ಬ್ರಹ್ಮನಿಂದ ವರ ಪಡೆದಿರುವಿರಿ. ಇದರಿಂದಾಗಿ ನೀವು ನನ್ನ ಸ್ನೇಹವನ್ನೇ ತ್ಯಾಗ ಮಾಡಿದಂತಾಗಿದೆ. ಆದ್ದರಿಂದ ಶತ್ರುವಾಗಿರುವಿರಿ. ಶತ್ರುವಾದ ನಿಮ್ಮನ್ನು ನಾನೂ ತ್ಯಜಿಸಿದ್ದೇನೆ.

ಯಾವ ನಿಮ್ಮ ತಂದೆಯಾದ ಕಾಲನೇಮಿಯು ನಿಮಗೆ 'ಷಡ್ಗರ್ಭ'ರೆಂದು ನಾಮಕರಣ ಮಾಡಿ ಬೆಳೆಸಿರುವನೋ. ಆ ನಿಮ್ಮ ತಂದೆ ಕಾಲನೇಮಿಯೇ ಕಂಸರೂಪದಿಂದ ಹುಟ್ಟಿದಾಗ ಹುಟ್ಟಿದ ಕೂಡಲೇ ಕೊಂದು ಹಾಕಲಿ.

*ವೈಶಂಪಾಯನ ಉವಾಚ–*

**ಜಗಾಮಾಥ ತತೋ ವಿಷ್ಣುಃ ಪಾತಾಲಂ ಯತ್ರ ತೇಽಸುರಾಃ ।**
**ಷಡ್ಗರ್ಭಾಃ ಸಂಯತಾಃ ಸಂತಿ ಜಲೇ ಗರ್ಭಗೃಹೇಶಯಾಃ ॥ 16 ॥**
**ಸಂದದರ್ಶ ಜಲೇ ಸುಪ್ತಾನ್ ಷಡ್ಗರ್ಭಾನ್ ಗರ್ಭಸಂಸ್ಥಿತಾನ್ ।**
**ನಿದ್ರಯಾ ಕಾಲರೂಪಿಣ್ಯಾ ಸರ್ವಾನಂತರ್ಹಿತಾನ್ ಸ ವೈ ॥ 17 ॥**
**ಸ್ವಪ್ನರೂಪೇಣ ತೇಷಾಂ ವೈ ವಿಷ್ಣುಃ ದೇಹಾನಥಾವಿಶತ್ ।**
**ಪ್ರಾಣೇಶ್ವರಾಂಶ್ಚ ನಿಷ್ಕೃಷ್ಯ ನಿದ್ರಾಯೈ ಪ್ರದದೌ ತದಾ ॥ 18 ॥**

ವೈಶಂಪಾಯನರು ಜನಮೇಜಯನಿಗೆ ಹೇಳುವರು ಸರ್ವಜ್ಞನೂ ಸರ್ವಾಂತರ್ಯಾಮಿಯಾದ ಭಗವಂತನು. ಈ ಬ್ರಹ್ಮದೇವನ ಅವಧ್ಯತ್ವ ವರ ಹಾಗೂ ತಂದೆಯಿಂದಲೇ ವಧ್ಯತ್ವವೆಂಬ ಹಿರಣ್ಯಕಶಿಪುವಿನ ಶಾಪವೆರಡನ್ನೂ ಯೋಗ್ಯ ರೀತಿಯಲ್ಲಿ ಹೊಂದಿಸುವವನಾಗಿ ಮೊದಲು ತಾನು ಮೊದಲು ಪಾತಾಳ ಲೋಕಕ್ಕೆ ಹೋದನು. ಅಲ್ಲಿ ಕಾಲನಿದ್ರೆಯಿಂದ ಕೂಡಿ ನೀರಿನಾಳದಲ್ಲಿ ಗರ್ಭಗೃಹದಲ್ಲಿ ಮಲಗಿದ್ದ ಷಡ್ಗರ್ಭಾಸುರರ ಬಳಿಗೆ ಹೋದನು. ಅವರ ದೇಹದಲ್ಲಿ ಶ್ರೀಹರಿಯು ಸ್ವಪ್ನ ರೂಪದಿಂದ ಪ್ರವೇಶಿಸಿ ಅವರ ಜೀವವನ್ನು ಸೆಳೆದು ತನ್ನ ಯೋಗ ಮಾಯೆಯೆನಿಸಿದ **ದುರ್ಗೆ**[2]ಗೆ ಹಸ್ತಾಂತರಿಸಿ–

2. ದುರ್ಗಾ ತದಾ ತಾನ್ ಭಗವತ್ಪ್ರಚೋದಿತಾ ಪ್ರಸ್ವಾಪಯಿತ್ವಾ ಪ್ರಚಕರ್ಷ ಕಾಯಾತ್। ಕ್ರಮಾತ್ ಸಮಾವೇಶಯದಾಶು ದೇವಕೀ ಗರ್ಭಾಶಯೇ ತಾನ್ ನ್ಯಹನಚ್ಚ ಕಂಸಃ॥
– ತಾ.ನಿ. 12/14

**ಗಚ್ಛ ನಿದ್ರೇ ಮಯೋತ್ಸೃಷ್ಟಾ ದೇವಕೀ ಭವನಾಂತಿಕಮ್ ।**
**ಇಮಾನ್ ಪ್ರಾಣೇಶ್ವರಾನ್ ಗೃಹ್ಯ ಷಡ್ಗರ್ಭಾನ್ ದಾನವೋತ್ತಮಾನ್ ॥19॥**
**ಷಡ್ಗರ್ಭಾನ್ ದೇವಕೀ ಗರ್ಭೇ ಯೋಜಯಸ್ವ ಯಥಾಕ್ರಮಮ್ ।**
**ಜಾತೇಷ್ವೇತೇಷು ಗರ್ಭೇಷು ನೀತೇಷು ಚ ಯಮಕ್ಷಯಮ್ ।**
**ಕಂಸಸ್ಯ ವಿಫಲೇ ಯತ್ನೇ ದೇವಕ್ಯಾಃ ಸಫಲೇ ಶ್ರಮೇ ॥ 20 ॥**

ಭದ್ರೇ! ನಿದ್ರೆಯಿಸಿದ ದುರ್ಗೆಯೇ, ಈ ಷಡ್ಗರ್ಭರ ಜೀವವನ್ನು ನೀನು ತೆಗೆದುಕೊಂಡು ಒಂದಾದ ನಂತರ ಮತ್ತೊಂದು ಜೀವವನ್ನು ದೇವಕೀ ಗರ್ಭದಲ್ಲಿ ಇಡುವವಳಾಗು. ಮಗು ಹುಟ್ಟಿದ ಕೂಡಲೇ ಕಾಲನೇಮಿ ಕಂಸನು ಅದನ್ನು ಕೊಂದು ಹಾಕುತ್ತಾನೆ. ನಂತರ ಆ ಜೀವವನ್ನು ಪಾತಾಳದಲ್ಲಿರುವ ಪೂರ್ವ ಶರೀರದಲ್ಲಿಯೆ ಸ್ಥಾಪಿಸು. ಹೀಗೆ ಆರೂ ಮಕ್ಕಳನ್ನೂ ಕಂಸನು ಸಂಹಾರ ಮಾಡುವನು. ಕಂಸನು ತನ್ನ ಉದ್ಧೇಶಿಸಿದ ಕಾರ್ಯವು ಆರೂ ಜನರನ್ನು ಸಂಹಾರ ಮಾಡಿದರೂ ಅವನ ನಿಜವಾದ ಶತ್ರುವಾದ ನನ್ನನ್ನು ಕೊಲ್ಲಲಾಗದೆ ಶ್ರಮವೆಲ್ಲ ವ್ಯರ್ಥವಾಗುವುದು. ದೇವಕಿಯ ಮಗುವನ್ನು ರಕ್ಷಿಸಬೇಕೆಂದು ಮಾಡಿದ ಪ್ರಯತ್ನ ಸಫಲವಾಗುತ್ತದೆ.

**ಸಪ್ತಮೋ ದೇವಕೀಗರ್ಭೋ ಯೋಽಂಶಃ ಸೌಮ್ಯೋ ಮಮಾಗ್ರಜಃ ।**
**ಸ ಸಂಕ್ರಮಯಿತವ್ಯಸ್ತೇ ಸಪ್ತಮೇ ಮಾಸಿ ರೋಹಿಣೀಮ್ ॥ 21 ॥**
**ಸಂಕರ್ಷಣಾತ್ತು ಗರ್ಭಸ್ಯ ಸ ತು ಸಂಕರ್ಷಣೋ ಯುವಾ ।**
**ಭವಿಷ್ಯತ್ಯಗ್ರಜೋ ಭ್ರಾತಾ ಮಮ ಶೀತಾಂಶು ದರ್ಶನಃ ॥ 22 ॥**

ದುರ್ಗೆಯೇ ! ನೀನು ನಾನು ಹೇಳಿದ ಕಾರ್ಯವನ್ನು ಮಾಡಿದ ನಂತರ ನಿನ್ನ ಮೇಲೆ ನಾನು ವಿಶೇಷ ಅನುಗ್ರಹ ಮಾಡುತ್ತೇನೆ. ಈ ಅನುಗ್ರಹದಿಂದಾಗಿ ನೀನು ಈ ಭೂಲೋಕದಲ್ಲಿ ಸಕಲ ಜನರಿಂದಲೂ 'ದೇವಿ' ಎಂದು ಆರಾಧ್ಯ ದೇವತೆಯಾಗುವೆ.

ದೇವಕಿಯ ಸಪ್ತಮಗರ್ಭವು ನನ್ನದೆ ಆದ ಶುಕ್ಲ ಕೇಶವೆಂಬ ಅಂಶವುಳ್ಳದ್ದಾಗಿರುತ್ತದೆ. ನನಗಿಂತಲೂ ಮೊದಲು ಜನಿಸಿದ್ದರಿಂದ ನನಗೂ ಅಗ್ರಜನಾಗುವನು. ದೇವಕಿಯು ಏಳನೇ ಗರ್ಭಕ್ಕೆ ಏಳು ತಿಂಗಳು ತುಂಬಿದ ಕೂಡಲೇ ದೇವಕಿಯ ಗರ್ಭದಿಂದ ಅದನ್ನು ಸೆಳೆದೊಯ್ದು ವಸುದೇವನ ಹಿರಿಯ ಪತ್ನಿಯಾದ ರೋಹಿಣಿಯ ಉದರದಲ್ಲಿಡಬೇಕು. ಹೀಗೆ ಒಂದು

ಗರ್ಭದಿಂದ ಮತ್ತೊಂದು ಗರ್ಭಕ್ಕೆ ಸೆಳೆದೊಯ್ದರಿಂದ ಚೆಲುವನಾದ ನನ್ನ ಅಣ್ಣನಿಗೆ 'ಸಂಕರ್ಷಣ' ಎಂಬ ಹೆಸರು ಬರುತ್ತದೆ.

## ಭಯದಿಂದ ಗರ್ಭಸ್ರಾವ

**ಪತಿತೋ ದೇವಕೀಗರ್ಭೋ ಸಪ್ತಮೋಽಯಂ ಭಯಾದಿತಿ ।**
**ಅಷ್ಟಮೇ ಮಾಸಿ ಗರ್ಭಸ್ತೇ ಕಂಸೋ ಯತ್ನಂ ಕರಿಷ್ಯತಿ ॥ 23 ॥**
**ಯಾ ತು ಸಾ ನಂದಗೋಪಸ್ಯ ದಯಿತಾ ಭುವಿ ವಿಶ್ರುತಾ ।**
**ಯಶೋದಾಂ ನಾಮ ಭದ್ರಂ ತೇ ಭಾರ್ಯಾ ಗೋಪಕುಲೋದ್ವಹಾ॥24॥**
**ತಸ್ಯಾ ತ್ವ ನವಮೋ ಗರ್ಭಃ ಕುಲೇಽಸ್ಮಾಕಂ ಭವಿಷ್ಯಸಿ ।**
**ನವಮ್ಯಾ ಮೇವ ಸಂಜಾತಾ ಕೃಷ್ಣಪಕ್ಷಸ್ಯ ವೈ ತಿಥೌ ॥ 25 ॥**

ಏಳನೇ ಗರ್ಭವನ್ನು ನೀನು ಗೋಕುಲದಲ್ಲಿರುವ ವಸುದೇವನ ಮತ್ತೊಬ್ಬ ಪತ್ನಿ ರೋಹಿಣಿಯ ಉದರದಲ್ಲಿ ಸ್ಥಾಪಿಸುವುದರಿಂದಾಗಿ ದೇವಕಿಯ ಏಳನೇ ಗರ್ಭವು ಕಂಸನ ಭಯದಿಂದಾಗಿ ಗರ್ಭಸ್ರಾವವಾಯಿತೆಂದು ಸುದ್ದಿಯು ಹಬ್ಬುತ್ತದೆ. ಗರ್ಭವನ್ನು ಸೆಳೆದು ರೋಹಿಣಿಯ ಗರ್ಭಕ್ಕೆ ಸ್ಥಳಾಂತರಿಸಿದ್ದರಿಂದ ಅವನಿಗೆ ಸಂಕರ್ಷಣನೆಂದು ಹೆಸರಾಗುವುದು.

ಇದಾದ ಮೇಲೆ ನಾನೇ ಎಂಟನೆಯ ಮಗುವಾಗಿ ದೇವಕೀ ಗರ್ಭದಲ್ಲಿ ಸನ್ನಿಹಿತನಾಗುವೆನು. ಇದೇ ಎಂಟನೆಯ ಗರ್ಭವೆಂದು ತಿಳಿದ ಮೂರ್ಖ ಕಂಸನು ಇದರಿಂದಲೇ ನನಗೆ ಮರಣವೆಂದು ತಿಳಿದು ನನ್ನನ್ನು ನಾಶ ಮಾಡಲು ವಿಶ್ವ ಪ್ರಯತ್ನ ಮಾಡಲಿರುವನು.

ವಸುದೇವನ ಆಪ್ತಮಿತ್ರನೂ **ನಂದಗೋಪ**[3]ನಿಗೆ ಗೋವಳಗರ ಕುಲಕ್ಕೆ ಅಲಂಕಾರ ಪ್ರಾಯಳಾದ ಯಶೋದೆ ಎಂಬ ಪತ್ನಿಯಿರುವಳು.

---

3. ನಂದಗೋಪ :

ದ್ರೋಣೋ ವಸೂನಾಂಪ್ರವರೋ ಧರಯಾ ಸಹಭಾರ್ಯಯಾ ।
ಜಜ್ಞೇ ನಂದ ಇತಿಖ್ಯಾತಃ ಯಶೋದಾ ಸಾ ಧರಾಽಭವತ್ ॥–*ಭಾಗ 10/9/46–50*

ವಸುದೇವನಂತೆಯೇ ನಂದಗೋಪನಿಗೂ ಶೂರರಾಜನೇ ತಂದೆ. ವಸುದೇವ ಕ್ಷತ್ರಿಯ ಸ್ತ್ರೀಯ ಮಗನಾದರೆ. ನಂದನು ಶೂರನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು. ತಾಯಿಯ ಜಾತಿ ಬರುವುದೆಂಬ ನಿಯಮದಂತೆ ನಂದನು ವೈಶ್ಯನಾದ. ಇವನೂ

ಶ್ರಾವಣ ಮಾಸದ ಕೃಷ್ಣಪಕ್ಷದ ನವಮಿಯಂದು ನೀನು ಆ ಯಶೋದೆಯ ಉದರದಲ್ಲಿ ನನ್ನ ಅಣ್ಣ ತಮ್ಮಂದಿರಲ್ಲಿ ಒಂಭತ್ತನೆಯವಳಾಗಿ ಜನಿಸಿ ಬಾ. ನಾನೂ ಸಹ ಅದೇ ಶ್ರಾವಣ ವಧ್ಯ ಅಷ್ಟಮೀ ದಿನ ಅರ್ಧರಾತ್ರಿಯ ಸಮಯದಲ್ಲಿ ಅಭಿಜಿತ್ ಎಂಬ ಸಮಯದಲ್ಲಿ ದೇವಕಿಯ ಗರ್ಭದಿಂದ ಪ್ರಾದುರ್ಭೂತ-ನಾಗುವೆನು. ನೀನಾದರೂ ನಾನು ಹುಟ್ಟಿದ ಕೆಲವು ಸಮಯದಲ್ಲಿ ಯಶೋದೆಯಲ್ಲಿ ಜನಿಸು. ಒಂಭತ್ತನೇ ಗರ್ಭವಾಗಿ ಒಂಭತ್ತು ಹತ್ತು ನಿಮಿಷ ನಂತರ ಅವತರಿಸು. ಎಂದು ನವಮಿಯುಂದು ಅವತರಿಸು ಎಂಬಭಿಪ್ರಾಯದಿಂದ **ನವಮೀ**[4] ಎನ್ನಲಾಗಿದೆ. ನಂತರ ನೀನು ವಿಂಧ್ಯಾಚಲಕ್ಕೆ ಹೋಗು. ಅಲ್ಲಿ ಶುಂಭ ನಿಶುಂಭ ದೈತ್ಯರನ್ನು ಸಂಹರಿಸಿ ಇಂದ್ರಾದಿಗಳಿಂದ ಪೂಜಿತಳಾಗುವೆ.

**ಅಹಂ ತ್ವಭಿಜಿತೋ ಯೋಗೇ ನಿಶಾಯಾಂ ಯೌವ್ವನೇ ಸ್ಥಿತೇ ।**
**ಅರ್ಧರಾತ್ರೇ ಕರಿಷ್ಯಾಮಿ ಗರ್ಭಮೋಕ್ಷಂ. ಯಥಾಸುಖಮ್ ॥ 26 ॥**
**ಅಷ್ಟಮಸ್ಯ ತು ಮಾಸಸ್ಯ ಜಾತಾವಾವಾಂ ತತಃ ಸಮಮ್ ।**
**ಪ್ರಾಪ್ಸ್ಯಾವೋ ಗರ್ಭವ್ಯತ್ಯಾಸಂ ಪ್ರಾಪ್ತೇ ಕಂಸಸ್ಯ ನಾಶನೇ ॥ 27 ॥**
**ಅಹಂ ಯಶೋದಾಂ ಯಾಸ್ಯಾಮಿ ತ್ವಂ ದೇವಿ ಭಜ ದೇವಕೀಮ್ ।**
**ಆವಯೋಃ ಗರ್ಭಸಂಯೋಗೇ ಕಂಸೋ ಗಚ್ಛತು ಮೂಢತಾಮ್ ॥28 ॥**

ಮಧ್ಯರಾತ್ರಿಯ ಸಮಯದಲ್ಲಿ ಅಭಿಜಿನ್ಮುಹೂರ್ತ ಯೋಗದಲ್ಲಿ ಸುಖವಾಗಿ

---

ಸಹ ಪತ್ನಿ ಧರೆಯಿಂದ ಕೂಡಿಕೊಂಡು ಭಗವಂತನ ತಂದೆಯೆನಿಸಿಕೊಳ್ಳಬೇಕೆಂದು ಉಗ್ರ ತಪಸ್ಸು ಮಾಡಿರುವನು. ಬ್ರಹ್ಮದೇವನು ವರವನ್ನು ನೀಡಿದರು. ಆದ್ದರಿಂದ ವಸುದೇವ ದೇವಕಿಯರಿಗೆ ಮಗನಾಗಿ ತೋರಿಸಿ. ನಂದಗೋಪ-ಯಶೋದೆಯರ ಬಳಿ ಸಾರಿ ಅವರ ಪುತ್ರನೆನಿಸಿಕೋ.

**ತ್ವಾಮೇವತಸ್ಮಾತ್ ಪ್ರಥಮಂ ಪ್ರದರ್ಶ್ಯ ತತ್ರ ಸ್ವರೂಪಂ ಹಿ ತತೋ ವ್ರಜಂ ವ್ರಜ ॥ –** *ತಾ. 11/12/226*

---

4. **ನವಮ್ಯಾಂ ಸಂಜಾತಃ –**
ದುರ್ಗಾದೇವಿಯು ಕೃಷ್ಣಾಷ್ಟಮಿಯಂದು ಅವತರಿಸಿದಳು. ಪಾದ್ಮದಲ್ಲಿ ನಾನು ಅವತರಿಸಿದ ಮೇಲೆ ಕೆಲವು ಕ್ಷಣವಾದ ಮೇಲೆ ಜನಿಸು ಎಂದಿದ್ದಾನೆ ಶ್ರೀಕೃಷ್ಣ. ಆದ್ದರಿಂದ ದುರ್ಗಾಷ್ಟಮಿಯಂದೇ ಒಂಭತ್ತು ಹತ್ತು ಕ್ಷಣವಾದ ಮೇಲೆ ಅವತರಿಸಿದಳು.

ನಾನು ಗರ್ಭವನ್ನು ತ್ಯಜಿಸುತ್ತೇನೆ. ನಾವಿಬ್ಬರೂ ಅಣ್ಣ-ತಂಗಿಯರು ಗರ್ಭಧರಿಸಿದ ಎಂಟನೆಯ ತಿಂಗಳಲ್ಲಿ ಜನ್ಮ ತಾಳುವೆವು.

ಹೀಗೆ ನಾನು ನೀನು ಇಬ್ಬರೂ ಎಂಟನೆಯ ತಿಂಗಳಲ್ಲಿ ಒಂದೇ ದಿನ ಒಮದೇ ರಾತ್ರಿ ಸುಮಾರು ಒಂದೇ ಕಾಲಕ್ಕೆ ಜನಿಸಿ ಕಂಸನನ್ನು ಕೊಲ್ಲುವ ಉದ್ದೇಶದಿಂದ ಗರ್ಭಗಳನ್ನು ಅದಲು-ಬದಲು ಮಾಡಿಕೊಳ್ಳೋಣ. ಅಂದರೆ ಹುಟ್ಟಿದ ತಕ್ಷಣ ನಾನು ದೇವಕಿಯನ್ನು ಬಿಟ್ಟು ಯಶೋದೆಯ ಬಳಗೆ ಸಾರುವೆನು. ನೀನು ಯಶೋದೆಯನ್ನು ಬಿಟ್ಟು ದೇವಕಿಯ ಹತ್ತಿರ ಬರುವವಳಾಗು. ನಮ್ಮಿಬ್ಬರ ಈ ಗರ್ಭವವಿನಿಮಯದಿಂದಾಗಿ ಮೂಢಮತಿಯಾಗಿ ಕಂಸನು ನಿನ್ನನ್ನೆ ತನಗೆ ಮೃತ್ಯುರೂಪವಾದ ಎಂಟನೆಯ ಗರ್ಭವೆಂದು ತಿಳಿದು ಕಾಲು ಹಿಡಿದೆತ್ತಿ ಕಲ್ಲಿಗೆ ಬಡಿಯಲು ಹೋಗುವನು. ಆಗ ನೀನು ಅವನ ಕೈಯಿಂದ ಜಾರಿ ಗಗನಕ್ಕೆ ಜಿಗಿದು ಅಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆಯುವೆ.

ನಿನ್ನ ಶರೀರದ ಕಾಂತಿ ನನ್ನ ಶರೀರ ಕಾಂತಿಯಂತೆಯೇ ಶ್ಯಾಮಲವರ್ಣ. ಆದರೆ ಮುಖವು ಮಾತ್ರ ಬಲರಾಮನ ಬಣ್ಣದಂತೆ ಬಿಳಿಯಾಗಿದೆ.

ನನ್ನ ಉದ್ದಂಡ ತೋಳುಗಳಂತೆ ನಿನ್ನ ಬಾಹುಗಳಾದರೂ ಉದ್ದವಿದ್ದು ಮೂರು ಧಾರೆಯುಳ್ಳ ತ್ರಿಶೂಲ. ಸುವರ್ಣ ಹಿಡಿಯ ಖಡ್ಗ. ಮಧುಪಾತ್ರ. ವಿಮಲ ಕಮಲ ಧರಿಸಿರುವೆ. ನೀಲ ವರ್ಣದ ರೇಶಿಮೆ ಪೀತಾಂಬರ ಉಟ್ಟು ಹಳದಿ ವರ್ಣದ ಪೀತಾಂಬರವನ್ನು ಮೇಲು ಹೊದಿಕೆಯನ್ನು ಹೊದ್ದು. ಚಂದ್ರಪ್ರಭೆಯಂತಿರುವ ರತ್ನಹಾರವನ್ನು ವಕ್ಷಸ್ಥಳದಲ್ಲಿ ಧರಿಸುವೆ. ನಿನ್ನ ಮುಖವಾದರೂ ದಿವ್ಯವಾದ ಕರ್ಣಕುಂಡಲಗಳಿಂದ ಚಂದ್ರಮಂಡಲದಂತೆ ವಿರಾಜಿಸುವುದು. ಅದರ ಮೇಲೆ ಮನೋಹರವಾದ ಕೇಶಕಲಾಪಗಳ ಮೇಲೆ ಇರಿಸಿದ ಮುಕುಟವು ನಿನ್ನ ಕಟ್ಟಿದ ಕುರುಹುಗಳಿಗೆ ಕಲಸವಿಟ್ಟಂತೆ ತೋರುತ್ತಿರುತ್ತದೆ. ಭುಜಗಭೀಷಣವಾದ. ಬಾಹುಗಳಿಂದ ದಶದಿಕ್ಕುಗಳನ್ನೆಲ್ಲ ಬೆಳಗುವ ನಿನ್ನ ತೋಳು ಬಂದಿಗಳಲ್ಲಿ ನವಿಲಿನ ಗರಿಗಳು ಶೋಭಿಸುತ್ತಿದೆ. ಅಂತಹ ಮಯೂರ ಪಿಂಛದಿಂದ ಶೋಭಿಸುವ ಧ್ವಜದಿಂದ ಶೋಭಿಸುವವಳು ನೀನಾಗಿರುವೆ. ಘೋರಾಕಾರದ ಭೂತ ಗಣಗಳಿಂದ ಸುತ್ತುವರೆಯಲ್ಪಟ್ಟ ನೀನು ನನ್ನ ಅಪ್ಪಣೆಯಂತೆ ಕೌಮಾರ ವ್ರತವನ್ನು ಹಿಡಿದು ಸ್ವರ್ಗವನ್ನು ಪ್ರವೇಶಿಸುವೆ.

## ದುರ್ಗೆಗೆ ಇಂದ್ರನ ಸತ್ಕಾರ

**ತತ್ರ ತ್ವಾಂ ಶತದೃಕ್ ಶಕ್ರೋ ಮತ್ ಪ್ರದಿಷ್ಟೇನ ಕರ್ಮಣಾ ।**
**ಅಭಿಷೇಕೇಣ ದಿವ್ಯೇನ ದೈವತ್ಯೇ ಸಹ ಮೋಕ್ಷ್ಯಸೇ ॥ 29 ॥**

**ತತ್ರೈವ ತ್ವಾಂ ಭಗಿನ್ಯರ್ಥೇ ಗ್ರಹಿಷ್ಯತಿ ಸ ವಾಸವಃ ।**
**ಕುಶಿಕಸ್ಯ ತು ಗೋತ್ರೇಣ ಕೌಶಿಕೇ ತ್ವಂ ಭವಿಷ್ಯಸಿ ॥ 30 ॥**

ಅಲ್ಲಿ ಸ್ವರ್ಗಾಧಿಪತಿಯಾದ ದೇವೇಂದ್ರನು ಆನಂದದಿಂದ ನೂರು ಕಣ್ಣುಗಳನ್ನು ಅರಳಿಸಿ ನಿನಗೆ ಸ್ವಾಗತ ನೀಡಿ ನಾನು ಹೇಳಿದ ಕ್ರಮದಲ್ಲಿ ಸಕಲ ದೇವತೆಗಳಿಂದ ಕೂಡಿ 'ದೇವಿ' ಎಂಬ ಪಟ್ಟದಲ್ಲಿ ಅಭಿಷೇಕ ಮಾಡುವರು. ಅಂದಿನಿಂದ ನಿನ್ನನ್ನು ಇಂದ್ರನು ತನ್ನ ತಂಗಿಯೆಂದೆ ಭಾವಿಸುವನು. ಕುಶಿಕ ಗೋತ್ರದಿಂದಾಗಿ 'ಕೌಶಿಕೀ' ಎಂದು ನಾಮ ಹೊಂದಿದ ನಿನಗೆ ವಿಂಧ್ಯಾಚಲದಲ್ಲಿ ಶಾಶ್ವತ ಸ್ಥಾನವನ್ನು ಕಲ್ಪಿಸಿ ಪ್ರತಿಷ್ಠೆ ಮಾಡುವನು. ಭೂಮಂಡಲವೆಲ್ಲ ನಿನ್ನ ಪ್ರತಿಮೆಗಳ ಸ್ಥಾಪನೆಯಾಗುವುದು. ತ್ರೈಲೋಕ್ಯ ಸಂಚಾರಿಣಿ ಮನಬಂದ ರೂಪ ಧಾರಣೆಯಲ್ಲಿ ಸಮರ್ಥಳಾದ ನೀನು, ಭಕ್ತರು ಯಾವ ಫಲಾಪೇಕ್ಷೆಯಿಂದ ನಿನ್ನನ್ನು ಉಪಾಸನೆ ಮಾಡುವರೋ ಅವರ ಎಲ್ಲಾ ಬೇಡಿಕೆಗಳನ್ನೂ ಪೂರೈಸುವುದರಿಂದ ನಿನ್ನನ್ನು 'ವರದ ಮಹಾದೇವೀ' ಎಂದೇ ಎಲ್ಲರೂ ನಿನ್ನನ್ನು ಉಪಾಸಿಸುವರು. ಆ ವಿಂಧ್ಯಾಚಲದಲ್ಲಿ ಶುಂಭ-ನಿಶುಂಭ ರಾಕ್ಷಸರನ್ನು ಸಂಹರಿಸುವೆ. ಶ್ರಾವಣ ಮಾಸ ಕೃಷ್ಣಪಕ್ಷ ನವಮಿಯ ದಿನದಂದು ಜನರೆಲ್ಲರೂ ನಿನ್ನ ದೊಡ್ಡ ಉತ್ಸವ ಜಾತ್ರೆ ಮಾಡುವರು. ಮಾಂಸ ಮದ್ಯಗಳನ್ನು ಅರ್ಪಿಸುವರು.

ಈ ನನ್ನ ಪ್ರಭಾವ ತಿಳಿದುಕೊಂಡು ನಿನ್ನನ್ನು ಭಕ್ತಿಯಿಂದ ಪೂಜಿಸುವರೋ ಅವರಿಗೆ ಸಂತಾನ, ಸಂಪತ್ತುಗಳ ಕೊರತೆಗಳುಂಟಾಗುವುದಿಲ್ಲ.

**ಕಾಂತಾರೇಷ್ವವಸನ್ನಾನಾಂ ಮಗ್ನಾನಾಂ ಚ ಮಹಾರ್ಣವೇ ।**
**ದಸ್ಯುಭಿರ್ವಾ ನಿರುದ್ಧಾನಾಂ ತ್ವಂ ಗತಿಃ ಪರಮಾ ನೃಣಾಮ್ ॥ 31 ॥**
**ತ್ವಾಂ ತು ಸ್ತೋಷ್ಯಂತಿ ಯೇ ಭಕ್ತ್ಯಾ ಸ್ತವೇನಾನೇನ ವೈ ಶುಭೇ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ 32 ॥**

ಕಾಡಿನಲ್ಲಿ ಸಿಕ್ಕು ದಾರಿಗಾಣದವರಿಗೆ, ಸಮುದ್ರದಲ್ಲಿ ಮುಳುಗುವವರಿಗೂ ಕಳ್ಳಕಾಕರಿಂದ ಉಪದ್ರುತರಾದವರಿಗೂ ದೇವಿ ನೀನೆ ಗತಿಯಾಗುವೆ.

ಈ ಆರ್ಯಾಸ್ತವದಿಂದ ನಿನ್ನನ್ನು ಭಕ್ತಿಯಿಂದ ಪಠಿಸುವವರನ್ನು ನಾನು ಎಂದಿಗೂ ಬಿಡುವುದಿಲ್ಲ.

ಇತಿ ಶ್ರೀಹರಿವಂಶ ಖಿಲಭಾಗದಲ್ಲಿ
ಆರ್ಯಾಸ್ತವವೆಂಬಲ್ಲಿ
ಎರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 03 ವಿಷ್ಣುಪರ್ವ

# ಅಥ ತೃತೀಯೋಽಧ್ಯಾಯಃ

## ಆರ್ಯಾಸ್ತವ

**ಆರ್ಯಾಸ್ತವಂ ಪ್ರವಕ್ಷ್ಯಾಮಿ ಯಥೋಕ್ತ ಮೃಷಿಭಿಃ ಪುರಾ ।**
**ನಾರಾಯಣೀಂ ನಮಸ್ಯಾಮಿ ದೇವೀಂ ತ್ರಿಭುವನೇಶ್ವರೀಂ ॥ 1 ॥**

ಜನಮೇಜಯನೇ, ಹಿಂದೆ ಋಷಿವರ್ಯರು ಆರ್ಯೆಯಾದ ದುರ್ಗೆಯನ್ನು ಹೇಗೆ ಸ್ತೋತ್ರ ಮಾಡಿದರೊ ಹಾಗೆಯೇ ನಿನಗೆ ಹೇಳುತ್ತೇನೆ. ಮೂರುಲೋಕಗಳಿಗೆ ಒಡೆಯಳಾದ ನನ್ನ ನಮ್ಮಸಾರವು.

ದೇವಿಯೇ ನೀನೇ ಸಿದ್ಧಿಯು ಧೃತಿ, ಕೀರ್ತಿ, ಶ್ರೀ ವಿದ್ಯೆ, ಸನ್ಮತಿ ಎಲ್ಲವೂ ನೀನೆ. ಬೈಗು, ಬೆಳಗು, ನಿದ್ರೆ, ಕಾಲರಾತ್ರಿ, ನಿನ್ನಂದಿಲೆ ಆಗುವುದು. ಆರ್ಯಾ ಕಾತ್ಯಾಯನಿ, ಕೌಶಿಕ ಮೊದಲಾದ ನಾಮಗಳನ್ನು ಹೊಂದಿರುವೆ.

ನೀನು ಬ್ರಹ್ಮಚರ್ಯವ್ರತಪಾಲನ ಕತ್ರೀಯೂ, ಕಾರ್ತಿಕ ಸ್ವಾಮಿ ಸ್ಕಂದನಿಗೆ ತಾಯಿಯು, ಜಯಾ, ವಿಜಯಾ, ತುಷ್ಟಿ, ಪುಷ್ಟಿ, ಕ್ಷಮೆ, ದಯೆ ಎಲ್ಲವೂ ನಿನ್ನಿಂದಲೇ ಜಗತ್ತಿಗೆ ಒದಗುತ್ತದೆ. ನೀನು ಸರ್ವರಿಗೂ ಮೃತ್ಯುವಿನಂತಿದ್ದು ಯಮನಿಗೂ ಹಿರಿಯ ಅಕ್ಕಳೆನಿಸಿರುವೆ. ವಿರೂಪಾ ವಿಶಾಲಾಕ್ಷಿ ಮೊದಲಾದ ರೂಪವೇಷಧರಿಸಿ ಭಕ್ತರನ್ನು ಪಾಲಿಸುವಿ.

ಪರ್ವತಗಿರಿ ಶಿಖರಗಳಲ್ಲಿರುತ್ತಾ ಅಲ್ಲಿರುವ ಶಬರ ಪುಲಿಂದಾದಿಗಳಿಂದ ಪೂಜಿಸಲ್ಪಡುವಿ. ನವಿಲುಗರಿಯ ಗುರುತಿನ ಧ್ವಜವುಳ್ಳ ವಾಹನವೇರಿ ಸರ್ವಲೋಕದಲ್ಲಿಯೂ ಸಂಚರಿಸುವಿ.

ನೀನು ವಿಂಧ್ಯಾಚಲವಾಸಿನಿಯಾಗಿರುವಿ. ನಿನ್ನ ಕೈಯಲ್ಲಿ ತ್ರಿಶೂಲ, ಪಟ್ಟಶ

ಮೊದಲಾದ ಆಯುಧಗಳವೆ. ನಿನ್ನ ಧ್ವಜವು ಚಂದ್ರಾರ್ಕಚಿಹ್ನಿತವಾಗಿದೆ. ಆಚಂದ್ರಾರ್ಕ ಭಕ್ತರ ರಕ್ಷಣೆ ಮಾಡುವ ಎಂಬ ಭರವಸೆ.

ಶುಕ್ಲ ಏಕಾದಶಿ ಹಾಗೂ ಕೃಷ್ಣಪಕ್ಷದ ನವಮೀ ತಿಥಿಯು ನಿನ್ನ ಪೂಜಾಕಾಲವು. ನಂದಗೋಪನ ಪುತ್ರಿಯಾದರೂ ಸಮಸ್ತ ಭಕ್ತರನ್ನೂ ರಕ್ಷಿಸುವ ಜಗನ್ಮಾತೆಯು. ನಿನ್ನ ಸೌಂದರ್ಯದಿಂದಾಗಿ ನಾರುಮಡಿಯೇ ಅಲಂಕೃತವಾಗಿಲ್ಲ ನೀನಲ್ಲ.

ರೂಪದಲ್ಲಿ ನೀನು ಸಾಕ್ಷಾತ್ ಲಕ್ಷ್ಮೀದೇವಿಯೇ ಆದರೂ ದೈತ್ಯರಿಗೆ ಭಯಂಕರ ಕಾಣಲು ಮುಡಿಯನ್ನು ಕೆದರಿಕೊಂಡು, ಮದ್ಯಮಾಂಸಪ್ರಿಯಳಾದ ಮಾರಿಯಂತೆ ತೋರುವೆ. ನೀನು ದೇವತೆಗಳಗೆ ಗಾಯತ್ರಿ ಮಂತ್ರದಂತೆ ಗಾನ ಮಾಡಿದವರನ್ನು ರಕ್ಷಿಸುವ ಸ್ವಭಾವದವಳು. ಕನ್ಯೆಯು ಬ್ರಹ್ಮಚರ್ಯದ ಪುಣ್ಯವನ್ನೂ ಸುಮಂಗಲಿಯರಿಗೆ ಸೌಭಾಗ್ಯವನ್ನು ನೀಡುವವಳು.

ಯಜ್ಞದಲ್ಲಿ ವೇದಿಕೆ, ಋತ್ವಿಕ್ಕರ ದಕ್ಷಿಣೆ, ರೈತರ ನೇಗಿಲಿನ ಗೆರೆಯೂ ಸಾರ ನೀನೇ. ನೀನೆ ಭೂತಧಾರಿಣಿಯು ಸಾಗರದಲ್ಲಿ ಪ್ರಯಾಣ ಮಾಡುವ ಸಾಯಂತ್ರಿಕರಿಗೆ ರಕ್ಷಕಳು ನೀನೆ. ಸಮುದ್ರರಾಜನು ಎಲ್ಲೆ ಮೀರಿ ದಾಟದಂತೆ ನಿಯಂತ್ರಿಸಿ ಸಮುದ್ರ ತೀರವಾಸಿಗಳನ್ನು ರಕ್ಷಿಸುವವಳು ನೀನೆ. ಯಕ್ಷರಿಗೆಲ್ಲ ಅಧಿಪತಿ ಕುಬೇರನ ಜನನೀ ಎನಿಸಿರುವೆ. ಸರ್ಪಗಳಗೆಲ್ಲ ತಾಯಿ ಸುರಸೆಯಿದ್ದಂತೆ.

**ರಾಜದ್ವಾರೇಷು ತೀರ್ಥೇಷು ನದೀನಾಂ ಸಂಗಮೇಷು ಚ ।**
**ಪೂರ್ಣಾ ಚ ಪೂರ್ಣಿಮಾ ಚಂದ್ರೇ ಕೌಮುದೀತಿ ಚ ವಿಶ್ರುತಾ ॥ 2 ॥**

**ಇಂದ್ರಸ್ಯ ಚಾರುದೃಷ್ಟಿಸ್ತ್ವಂ ಸಹಸ್ರನಯನೇತಿ ಚ ।**
**ಶಕುನಾ ಪೂತನಾ ತ್ವಂ ಚ ರೇವತೀ ಚ ಸುದಾರುಣಾ ॥ 3 ॥**

ನಿನ್ನಿಂದಲೇ ಅರಮನೆ ಶೋಭಿಸುವುದು, ತೀರ್ಥಗಳು ಪ್ರಕಾಶಮಾನವು. ನದಿಗಳಗೆ ನಿನ್ನಿಂದ ಕಳೆ. ನದೀಸಂಗಮಗಳಗೆ ಸೊಬಗು, ಗಜಚರ್ಮಧರಿಸಿ ಭಯಂಕರಳಾಗುವೆ. ಚಂದ್ರನಿಗೂ ಕಾಂತಿದಾತೆಯು. ವಾಲ್ಮೀಕಿಯ ರಸ ಕಾವ್ಯ ವಾಣೀ ನಿನ್ನಿಂದಲೇ.

ಸಾವಿರಗಣ್ಣಿನ ತಾವರೆ ಮೊಗದ ನೀನು ಸಹಸ್ರಾಕ್ಷ ಇಂದ್ರದೇವನಿಗೂ ನೇತ್ರದಾನ ಮಾಡುವವಳು. ಪ್ರಾಣಿಗಳಗೆ ಹಸಿವು ನೀಗಿಸುವವಳು, ಪಂಡಿತರ

ಮೇಧಾ ಶಕ್ತಿ ಜನನಿಯು. ನೀನು ದುಷ್ಟರಿಗೆಲ್ಲ ಶಕುನೀ ಪೂತನಾ ರೇವತೀ ಮೊದಲಾದ ದುಷ್ಟಶಕ್ತಿಯಾಗಿರುವೆ. ಸರ್ವಪ್ರಾಣಿ ನಿದ್ರೆಜನಕಳೂ. ಬ್ರಹ್ಮವಿದ್ಯೆದಾತೃವೂ. ಅಕ್ಷರಗಳಲ್ಲಿ ಪ್ರಣವವೂ. ಸ್ತ್ರೀಯರಿಗೆ ಪಾರ್ವತಿಯಂತೆ ಸೌಭಾಗ್ಯದಾತೆಯೂ. ಪತಿವ್ರತೆಯರಲ್ಲಿ ಅರುಂಧತಿಯಂತೆಯೂ. ನಿತ್ಯಸೌಭಾಗ್ಯವಿರುವವರಲ್ಲಿ ನೀನು ಇಂದ್ರಾಣಿ ದೇವಿಯು.

**ಸಂಗ್ರಾಮೇಷು ಚ ಸರ್ವೇಷು ಅಗನಿ ಪ್ರಜ್ವಲಿತಷು ಚ ।**

**ನದೀತೀರೇಷು ಚೋರೇಷು ಕಾಂತಾರೇಷು ಭಯೇಷು ಚ ॥ 4 ॥**

**ಪ್ರವಾಸೇ ರಾಜಬಂಧೇ ಚ ಶತ್ರೂಣಾಂ ಚ ಪ್ರಮರ್ದನೇ ।**

**ಪ್ರಾಣಾತ್ಯಯೇಷು ಸರ್ವೇಷು ತ್ವಂ ಹಿ ರಕ್ಷಾ ನ ಸಂಶಯಃ ॥ 5 ॥**

ಸಂಗ್ರಾಮಗಳಲ್ಲಿ. ಅಗ್ನಿ ಪ್ರಲಯಗಳಲ್ಲಿ. ನದಿ ಪ್ರವಾಹ ಕಳ್ಳಕಾಕರ ಭಯದಲ್ಲಿ ದುರ್ಗಮವನಮಾರ್ಗ. ಪ್ರಯಾಣ. ರಾಜ್ಯದಲ್ಲಿ ಕ್ರಾಂತಿ. ವೈರಿ ವಿಜಯ. ಪ್ರಾಣಾಪಾಯ ಸಾವು ಸಂಕಟಗಳಲ್ಲಿ ಸಕಲ ಪ್ರಾಣಿ ರಕ್ಷಕಗಳು ನೀನೆ ಆಗಿರುವೆ.

ಇಂತಹ ನಿನ್ನ ಮೇಲೆ ಮಹಾಭಕ್ತಿ ಹೊಂದಿರುವ ನನ್ನನ್ನು ಸಕಲ ಪ್ರಾಪನಿರ್ಮುಕ್ತನನ್ನಾಗಿಸು. ಈ ಆರ್ಯಾಸ್ತವದಿಂದ ನಿನ್ನನ್ನು ಸ್ತುತಿಗೈಯ್ಯು-ವವನನ್ನು ಆರೇ ತಿಂಗಳಗೆ ಅವನ ಇಷ್ಟಾರ್ಥ ಪೂರ್ಣ ಮಾಡಿಕೊಡುವೆ. ಇದು ಖಂಡಿತ.

**ಅರ್ಚಿತಾ ತು ತ್ರಿಭಿರ್ಮಾಸೈಃ ದಿವ್ಯಂ ಚಕ್ಷುಃ ಪ್ರಯಚ್ಛಸಿ ।**

**ಸಂವತ್ಸರೇಣ ಸಿದ್ಧಿಂ ಚ ಯಥಾಕಾಮಂ ಪ್ರಯಚ್ಛಸಿ ॥ 6 ॥**

**ನೃಣಾಂ ಬಂಧಂ ವಧಂ ಘೋರಂ ಪುತ್ರನಾಶಂ ಧನಕ್ಷಯಂ ।**

**ವ್ಯಾಧಿ ಮೃತ್ಯುಭಯಂ ಚೈವ ಪೂಜಿತಾಂ ಶಮಯಿಷ್ಯಸಿ ॥ 7 ॥**

**ಮೋಹಯಿತ್ವಾ ಚ ತಂ ಕಂಸಂ ಏಕಾ ತ್ವಂ ಮೋಕ್ಷ್ಯಸೇ ಜಗತ್ ।**

**ಅಹಮಪ್ಯಾತ್ಮನೋ ವೃತ್ತಿಂ ಗೋಷು ಕುರ್ಯಾಂ ಚ ಗೋಪವತ್ ।**

**ಸ್ವವೃತ್ತ್ಯರ್ಥಮಹಂ ಚೈವ ಕರಿಷ್ಯೇ ಕಂಸಗೋಪತಾಮ್ ॥ 8 ॥**

ನಿನ್ನ ಪೂಜಿಸಿದ ಭಕ್ತರಿಗೆ ಪುತ್ರನಾಶವೆಂದಿಗೂ ಆಗುವುದಿಲ್ಲ. ಧನನಾಶವಿಲ್ಲ. ಬಂಧನ-ಮರಣ-ಬೇನೆಯಿರುವುದಿಲ್ಲ. ಅವರ ಸರ್ವತಾಪ ಹಾಗೂ ಪಾಪ

ಪರಿಹರಿಸುವೆ. ಇದು ವೇದವ್ಯಾಸದೇವರೇ ಸಾಕ್ಷಿ ನಿನ್ನನ್ನು ಪೂಜಿಸಿದವರ ರೋಗ, ಮೃತ್ಯು ಭಯಗಳನ್ನು ಪರಿಹರಿಸುವೆ.

ನಿನ್ನನ್ನೇ ಘಾತ ಮಾಡಲೆತ್ನಿಸಿದ ಹಿಂಸಾರೂಪನಾದ ಕಂಸನ ಎದೆಗೆ ಒದ್ದು ಮೋಹಗೊಳಿಸಿ, ಅವನು ಬೇಗದಲ್ಲಿಯೆ ಸಾಯುವಂತೆ ಮಾಡಿ ನೀನು ಮಾತ್ರ ಚಿರಕಾಲ ಪರ್ಯಂತ ಈ ಜಾಗದಲ್ಲಿ ಸುಖದಿಂದಿರುವೆ.

ದೇವಿಯೇ ! ನಾನಾದರೂ ಇನ್ನು ಮುಂದೆ ಕಂಸನ ವಶವರ್ತಿಯಾದ ನಂದಗೋಪನ ಮನೆಯಲ್ಲಿದ್ದು ಗೋಪಾಲನ ಕಾರ್ಯವನ್ನೆ ಅನುಸರಿಸುವೆನು ಎಂದು ಶ್ರೀಕೃಷ್ಣನು ದುರ್ಗೆಗೆ ಹೇಳಿದನು.

**ಏವಂ ತಾಂ ಸ ಸಂದಿಶ್ಯ ಗತೋಽಂತರ್ಧಾನಮೀಶ್ವರಃ ।**
**ಸಾ ಚಾಪಿ ತಂ ನಮಸ್ಕೃತ್ಯ ತಥಾಽಸ್ತ್ವಿತಿ ಚ ನಿಶ್ಚಿತಾ ॥ 9 ॥**

ದುರ್ಗೆಯಾದರೂ ನಿನ್ನ ಆದೇಶದಂತೆಯೇ ಆಗಲಿ ಎಂದು ಹೇಳಿ ಶ್ರೀಹರಿಗೆ ನಮಸ್ಕರಿಸಿ ಅವನ ಆದೇಶವನ್ನು ಶಿರಸಾ ಮಾನ್ಯ ಮಾಡಿದಳು.

ಶ್ರೀಹರಿಯೂ ಸಹ ಅಲ್ಲಿಯೆ ಅಂತರ್ಧಾನ ಹೊಂದಿದನು.

ಈ ಪುಣ್ಯಕರ ಸ್ತೋತ್ರ ಪಾರಾಯಣ ಮಾಡುವವರು. ಸರ್ವಾರ್ಥ ಸಿದ್ಧಿಯನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲ.

**ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ**
**ಆರ್ಯಾಸ್ತವವೆಂಬಲ್ಲಿ**
**ಮೂರನೆಯ ಅಧ್ಯಾಯವು**
**॥ ಶ್ರೀಕೃಷ್ಣಾರ್ಪಣಮಸ್ತು ॥**

ವಿಷ್ಣುಪರ್ವ  ವಿಷ್ಣುಪರ್ವ

## ಅಥ ಚತುರ್ಥೋಽಧ್ಯಾಯಃ

*ವೈಶಂಪಾಯನ ಉವಾಚ–*

ಕೃತೇ ಗರ್ಭವಿಧಾನೇ ತು ದೇವಕೀ ದೇವತೋಪಮಾ ।
ಜಗ್ರಾಹ ಸಪ್ತ ತಾನ್ ಗರ್ಭಾನ್ ಯಥಾವತ್ ಸಮುದಾಹೃತಾನ್ ॥ 1 ॥

ಷಡ್ಗರ್ಭಾನ್ ನಿಃಸೃತಾನ್ ಕಂಸಃ ತಾನ್ ಜಘಾನ ಶಿಲಾತಲೇ ।
ಆಪನ್ನಂ ಸಪ್ತಮಂ ಗರ್ಭಂ ಸಾ ನಿನಾಯಾಥ ರೋಹಿಣೀಮ್ ॥ 2 ॥

ಅರ್ಧರಾತ್ರೇ ಸ್ಥಿತಂ ಗರ್ಭಂ ಪಾತಯಂತೀ ರಜಸ್ವಲಾ ।
ನಿದ್ರಯಾ ಸಹಸಾಽಽವಿಷ್ಟಾ ಪಪಾತ ಧರಣೀ ತಲೇ ॥ 3 ॥

ಸಾ ಸ್ವಪ್ನಮಿವ ತಂ ದೃಷ್ಟ್ವಾ ಗರ್ಭಂ ನಿಸ್ಸೃತಮಾತ್ಮನಃ ।
ಅಪಶ್ಯಂತೀ ಚ ತಂ ಗರ್ಭಂ ಮುಹೂರ್ತಂ ವ್ಯಥಿತಾಽಭವತ್ ॥ 4 ॥

ಈ ರೀತಿಯಾಗಿ ವಿಷ್ಣು ಮತ್ತು ಯೋಗಮಾಯೆ ಇಬ್ಬರೂ ಸೇರಿ ದೇವಕಿ ದೇವಿಯಿಂದ ಜನಿಸಲಿರುವ ಎಲ್ಲ ಗರ್ಭಗಳ ಮೃತಿ, ಸ್ಥಿತಿ, ಗತಿಗಳ ವಿಷಯವಾಗಿ ಮಾತನಾಡಿ ಕರ್ತವ್ಯಾಂಶವನ್ನು ನಿರ್ಧರಿಸಿಕೊಂಡ ಮೇಲೆ ದೇವಾಂಗನೆಯಂತಿರುವ ದೇವಕೀ ದೇವಿಯು ಕ್ರಮವಾಗಿ ಏಳು ಗರ್ಭಗಳನ್ನು ಧಾರಣ ಮಾಡಿದಳು. ಕಂಸನ ಕಾರಾಗೃಹದಲ್ಲಿ ಬಂದಿಯಾಗಿದ್ದ ವಸುದೇವ ದೇವಕಿಯರು ತಾವು ಹಡೆದ ಆರೂ ಮಂದಿ ಪುತ್ರರನ್ನೂ ಒಂದೊಂದಾಗಿ ಕಂಸನಿಗೆ ಅರ್ಪಿಸಿದರು. ನಿರ್ದಯನಾದ ಕಂಸನು ದೇವಕಿಯ ಆರೂ ಮಕ್ಕಳನ್ನೂ ಕ್ರಮವಾಗಿ ಶಿಲೆಯ ಮೇಲೆ ಬಟ್ಟೆಯಂತೆ ಹೊಡೆದು ಕೊಂದನು. ಏಳನೆಯ ಬಾರಿ ದೇವಕಿಯ ಗರ್ಭ ನಿಂತಿತು.

ಅವಳ ಗರ್ಭದಲ್ಲಿ ಮೂಡಿದ ಏಳನೆಯ ಗರ್ಭವನ್ನು ಏಳನೆಯ ತಿಂಗಳಲ್ಲಿ ದೇವಕಿಯ ಗರ್ಭದಿಂದ ಯೋಗಮಾಯೆಯು ಸೆಳೆದು ರೋಹಿಣಿಯ ಗರ್ಭಾಗಾರಕ್ಕೆ ಸ್ಥಳಾಂತರಿಸಿದಳು.

ಇದೇ ವೇಳೆಯಲ್ಲಿ ವಸುದೇವನ ಹಿರಿಯ ಪತ್ನಿಯಾದ ರೋಹಿಣಿಯು ಗರ್ಭಿಣಿಯಾಗಿದ್ದಳು. ಆದರೆ ಇದ್ದಕ್ಕಿದ್ದಂತೆ ರಜಸ್ವಲೆಯಾದಂತೆ ಆಗಿ ಗರ್ಭಪಾತವಾಯಿತು. ಮಧ್ಯರಾತ್ರಿಯಲ್ಲಿ ಎಚ್ಚರದಪ್ಪಿ ಬಿದ್ದಿದ್ದಳು. ಆಗಲೇ ಅವಳಿಗೆ ಸ್ವಪ್ನ ಬಿತ್ತು. ಸ್ವಪ್ನದಲ್ಲಿ ತನ್ನ ಗರ್ಭಪಾತವಾಗಿ ಅದರ ಸ್ಥಾನದಲ್ಲಿ ಮತ್ತೊಂದು ಗರ್ಭವನ್ನು ಉದರದಲ್ಲಿಟ್ಟಂತಾಯಿತು. ಅವಳು ಎಚ್ಚರಗೊಂಡು ನೋಡಿದಾಗ ವಿಷ್ಣುಮಾಯೆಯಿಂದಾಗಿ ಪತನವಾದ ಗರ್ಭವೂ ಕಾಣದಂತಾಗಿತ್ತು. ಇದರಿಂದಾಗಿ ಮತ್ತಷ್ಟು ದುಃಖಿತಳಾಗಿದ್ದಳು. ಇವಳನ್ನು ನೋಡಿ ಕತ್ತಲಿನ ರಾತ್ರಿಯಲ್ಲಿ ಯೋಗಮಾಯೆಯು – ರೋಹಿಣಿ! ನೀನು ಭಯ ಪಡಬೇಕಾಗಿಲ್ಲ ನಿನ್ನ ಮೊದಲಿನ ಗರ್ಭವು ಪಾತವಾಗಿ ಅದರ ಸ್ಥಾನದಲ್ಲಿ ಮತ್ತೊಂದು ಆಕರ್ಷಣ ಮಾಡಿ ತಂದು ನಿನ್ನಲ್ಲಿ ಇಟ್ಟಿರುವೆನು.

ಅದರಿಂದ ನಿನಗೆ **ಸಂಕರ್ಷಣ**[1]ನೆಂಬ ಶ್ರೇಷ್ಠ ಕುಮಾರನು ಹುಟ್ಟಲಿರುವನು ಎಂದು ಆಶ್ವಾಸನೆಯನ್ನು ನೀಡಿದಳು.

ಸಾತಂ ಪುತ್ರಮವಾಪ್ಯೈವಂ ಹೃಷ್ಟಾ ಕಿಂಚಿದವಾಙ್‌ಮುಖೀ ।
ವಿವೇಶ ರೋಹಿಣೀ ವೇಶ್ಮ ಸುಪ್ರಭಾ ರೋಹಿನೀ ಯಥಾ ॥ 5 ॥

---

1. ಸಂಕರ್ಷಣ :

ಸ ತತ್ರ ಮಾಸತ್ರಯ ಮುಷ್ಯ ದುರ್ಗಯಾಽಪವಾಹಿತೋ ರೋಹಿಣೀ ಗರ್ಭಮಾಶು।
ನಿಯುಕ್ತಯಾ ಕೇಶವೇನಾಥ ತತ್ರ ಸ್ಥಿತ್ವಾ ಮಾಸಾನ್ ಸಪ್ತಜಾತಃ ಪೃಥಿವ್ಯಾಮ್ ॥
ಶೇಷದೇವನು ದೇವಕಿಯ ಗರ್ಭದಲ್ಲಿ ಮೂರು ತಿಂಗಳಿದ್ದು ನಂತರ ರೋಹಿಣಿಯ ಗರ್ಭ ಪ್ರವೇಶಿಸಿದ. ಅಲ್ಲಿ ಏಳು ತಿಂಗಳಿದ್ದು ನಂತರ ಜನಿಸಿದ.

ಸ್ಥಿತ್ವಾ ಮಾಸಾನ್ ಪಸ್ತ ಜಾತಃ ಪೃಥಿವ್ಯಾಮ್ ।
ಭೀಮಸೇನನುಯ ಎರಡು ತಿಂಗಳ ಮಗುವಾಗಿದ್ದಾಗ ಬಲರಾಮ ಹುಟ್ಟಿದ.
ಯದಾ ಸ ಮಾಸದ್ವಿತಯೀ ಬಭೂವ ತದಾ ರೋಹಿಣ್ಯಾಂ ಬಲದೇವೋ ಬಲಾಢ್ಯಃ।
*– ಶಾ.ನಿ. 12/106*

**ತಸ್ಯಗರ್ಭಸ್ಯ ಮಾರ್ಗೇಣ ಗರ್ಭಮಾಧತ್ತ ದೇವಕೀ ।**
**ಯದರ್ಥಂ ಸಪ್ತ ತೇ ಗರ್ಭಾಃ ಕಂಸೇನ ವಿನಿಪಾತಿತಾಃ ॥ 6 ॥**

ಸತ್ಸಂತಾನವು ತನಗೆ ದೇವತಾನುಗ್ರಹದಿಂದ ಆಗುವುದೆಂಬ ಸಮಾಚಾರವನ್ನು ಕೇಳದ **ರೋಹಿಣಿ**[2]ಯು ಸಮಾಧಾನ ಹೊಂದಿ, ರೋಹಿಣೀ ನಕ್ಷತ್ರದಂತೆ ಉಲ್ಲಸಿತ ಕಾಂತಿಯನ್ನು ಹೊಂದಿ ಸಂತುಷ್ಟಳಾದಳು.

ದೇವಕಿಯ ಏಳನೇ ಗರ್ಭವು ಎಲ್ಲಿ ಸ್ರಾವವಾಗಿ ಹೋಯಿತೋ, ಎಲ್ಲಿ ಬಿದ್ದಿತೋ, ಗರ್ಭವಾದರೂ ಎಲ್ಲಿ ಹೋಯಿತು ಎಂದು ಅರಸುತ್ತಿರುವಾಗಲೇ ದೇವಕಿಯ ಅಷ್ಟಮರಸನೆನಿಸಿದ ಅಷ್ಟಮ ಗರ್ಭವನ್ನು ಧರಿಸಿದಳು.

**ತಂ ತು ಗರ್ಭಂ ಪ್ರಯತ್ನೇನ ರರಕ್ಷುಸ್ತಸ್ಯ ಮಂತ್ರಿಣಃ ।**
**ಸೋಽಪ್ಯತ್ರ ಗರ್ಭವಸತೌ ವಸತ್ಯಾತ್ಮೇಚ್ಛಯಾ ಹರಿಃ ॥ 7 ॥**

**ಯಶೋದಾಪಿ ಸಮಾಧತ್ತ ಗರ್ಭಂ ತದಹರೇವ ತು ।**
**ವಿಷ್ಣೋಃ ಶರೀರಜಾಂ ನಿದ್ರಾಂ ವಿಷ್ಣು ನಿರ್ದೇಶ ಕಾರಿಣೇಮ್ ॥ 8 ॥**

ಯಾವ ಗರ್ಭವನ್ನು ವಿನಾಶಗೈಯುವ ಉದ್ದೇಶದಿಂದ ಕಂಸನು ಹಿಂದಿನ ಏಳು ಗರ್ಭಗಳನ್ನು ವಿನಾಕಾರಣ ಕೊಂದಿದ್ದನೋ ಅವನಿಗೆ ಮೃತ್ಯು ರೂಪವಾದ ಆ ಎಂಟನೆಯ ಗರ್ಭವನ್ನು ಅವನ ಮಂತ್ರಿಗಳೂ, ಪರಿಚಾರಕ ವರ್ಗದವರೆಲ್ಲರೂ ಕಣ್ಣಲ್ಲಿ ಕಣ್ಣಿಟ್ಟು ಬಹು ಜಾಗರೂಕರಾಗಿ ಕಾಯತೊಡಗಿದರು.

**ಶ್ರೀಕೃಷ್ಣಾವತಾರ**

ಶ್ರೀಮನ್ನಾರಾಯಣನಾದರೂ ಸ್ವೇಚ್ಛೆಯಿಂದಲೇ ದೇವಕಿಯ ಗರ್ಭಗುಡಿಯಲ್ಲಿ ನಿರಾಂತಕವಾಗಿ ನಿಶ್ಶಂಕೆಯಿಂದ ವಾಸ ಮಾಡುತ್ತಿದ್ದನು.

---

2. ರೋಹಿಣಿ ಎಲ್ಲಿದ್ದಳು?

ಕಂಸನು ನಿರಪರಾಧಿ ವಸುದೇವ ದೇವಕಿಯರನ್ನು, ಅವರ ಮಕ್ಕಳನ್ನು ಕೊಂದು ಹಾಕಲು ಸಂಕೋಲೆಯಿಂದ ಬಂಧಿಸಿಟ್ಟು, ಅವನ ಬೇರೆ ಪತ್ನಿಯರನ್ನು ಅವರು ಗರ್ಭಿಣಿಯರಾದಾಗೆಲ್ಲ ದೂರವಿಡುತ್ತಿದ್ದ. ಅವರ ಜೊತೆಗೆ ಇದ್ದರೆ ಮಗುವನ್ನು ಅದಲುಬದಲು ಮಾಡಬಹುದೆಂದು. ಹೀಗಾಗಿ ವಸುದೇವನಿಂದ ಗರ್ಭಧರಿಸಿದ ರೋಹಿಣೀ ನಂದಗೋಕುಲದಲ್ಲಿದ್ದಳು. ವಸುದೇವ ಮಥುರೆಯಲ್ಲಿ, ರೋಹಿಣಿ ನಂದಗೋಕುಲದಲ್ಲಿ. ಗರ್ಭ ಹೇಗೆ ಸಾಧ್ಯವಾಯಿತೆಂಬ ಪ್ರಶ್ನೆ ಏಳುವುದಿಲ್ಲ.

ಅವಳ ಗರ್ಭದಲ್ಲಿ ಮೂಡಿದ ಏಳನೆಯ ಗರ್ಭವನ್ನು ಏಳನೆಯ ತಿಂಗಳಲ್ಲಿ ದೇವಕಿಯ ಗರ್ಭದಿಂದ ಯೋಗಮಾಯೆಯು ಸೆಳೆದು ರೋಹಿಣಿಯ ಗರ್ಭಾಗಾರಕ್ಕೆ ಸ್ಥಳಾಂತರಿಸಿದಳು.

ಇದೇ ವೇಳೆಯಲ್ಲಿ ವಸುದೇವನ ಹಿರಿಯ ಪತ್ನಿಯಾದ ರೋಹಿಣಿಯು ಗರ್ಭಿಣಿಯಾಗಿದ್ದಳು. ಆದರೆ ಇದ್ದಕ್ಕಿದ್ದಂತೆ ರಜಸ್ವಲೆಯಾದಂತೆ ಆಗಿ ಗರ್ಭಪಾತವಾಯಿತು. ಮಧ್ಯರಾತ್ರಿಯಲ್ಲಿ ಎಚ್ಚರದಪ್ಪಿ ಬಿದ್ದಿದ್ದಳು. ಆಗಲೇ ಅವಳಿಗೆ ಸ್ವಪ್ನ ಬಿತ್ತು. ಸ್ವಪ್ನದಲ್ಲಿ ತನ್ನ ಗರ್ಭಪಾತವಾಗಿ ಅದರ ಸ್ಥಾನದಲ್ಲಿ ಮತ್ತೊಂದು ಗರ್ಭವನ್ನು ಉದರದಲ್ಲಿಟ್ಟಂತಾಯಿತು. ಅವಳು ಎಚ್ಚರಗೊಂಡು ನೋಡಿದಾಗ ವಿಷ್ಣುಮಾಯೆಯಿಂದಾಗಿ ಪತನವಾದ ಗರ್ಭವೂ ಕಾಣದಂತಾಗಿತ್ತು. ಇದರಿಂದಾಗಿ ಮತ್ತಷ್ಟು ದುಃಖಿತಳಾಗಿದ್ದಳು. ಇವಳನ್ನು ನೋಡಿ ಕತ್ತಲಿನ ರಾತ್ರಿಯಲ್ಲಿ ಯೋಗಮಾಯೆಯು – ರೋಹಿಣಿ! ನೀನು ಭಯ ಪಡಬೇಕಾಗಿಲ್ಲ ನಿನ್ನ ಮೊದಲಿನ ಗರ್ಭವು ಪಾತವಾಗಿ ಅದರ ಸ್ಥಾನದಲ್ಲಿ ಮತ್ತೊಂದು ಆಕರ್ಷಣ ಮಾಡಿ ತಂದು ನಿನ್ನಲ್ಲಿ ಇಟ್ಟಿರುವೆನು.

ಅದರಿಂದ ನಿನಗೆ **ಸಂಕರ್ಷಣ**[1]ನೆಂಬ ಶ್ರೇಷ್ಠ ಕುಮಾರನು ಹುಟ್ಟಲಿರುವನು ಎಂದು ಆಶ್ವಾಸನೆಯನ್ನು ನೀಡಿದಳು.

**ಸಾತಂ ಪುತ್ರಮವಾಪ್ಯೈವಂ ಹೃಷ್ಟಾ ಕಿಂಚಿದವಾಙ್ಮುಖೀ ।**
**ವಿವೇಶ ರೋಹಿಣೀ ವೇಶ್ಮ ಸುಪ್ರಭಾ ರೋಹಿನೀ ಯಥಾ ॥ 5 ॥**

---

1. ಸಂಕರ್ಷಣ :

ಸ ತತ್ರ ಮಾಸತ್ರಯ ಮುಷ್ಯ ದುರ್ಗಯಾಽಪವಾಹಿತೋ ರೋಹಿಣೀ ಗರ್ಭಮಾಶು।
ನಿಯುಕ್ತಯಾ ಕೇಶವೇನಾಥ ತತ್ರ ಸ್ಥಿತ್ವಾ ಮಾಸಾನ್ ಸಪ್ತಜಾತಃ ಪೃಥಿವ್ಯಾಮ್ ॥
ಶೇಷದೇವ[illegible] ದೇವಕಿಯ ಗರ್ಭದಲ್ಲಿ ಮೂರು ತಿಂಗಳಿದ್ದು ನಂತರ ರೋಹಿಣಿಯ ಗರ್ಭ ಪ್ರವೇ[illegible]ದ. ಅಲ್ಲಿ ಏಳು ತಿಂಗಳಿದ್ದು ನಂತರ ಜನಿಸಿದ.
ಸ್ಥಿತ್ವಾ ಮಾಸಾನ್ ಪಸ್ತ ಜಾತಃ ಪೃಥಿವ್ಯಾಮ್ ।
ಭೀಮಸೇನನುಯ ಎರಡು ತಿಂಗಳ ಮಗುವಾಗಿದ್ದಾಗ ಬಲರಾಮ ಹುಟ್ಟಿದ.
ಯದಾ ಸ ಮಾಸದ್ವಿತಯೀ ಬಭೂವ ತದಾ ರೋಹಿಣ್ಯಾಂ ಬಲದೇವೋ ಬಲಾಢ್ಯಃ।
*– ತಾ.ನಿ. 12/106*

**ತಸ್ಯಗರ್ಭಸ್ಯ ಮಾರ್ಗೇಣ ಗರ್ಭಮಾಧತ್ತ ದೇವಕೀ ।**
**ಯದರ್ಥಂ ಸಪ್ತ ತೇ ಗರ್ಭಾಃ ಕಂಸೇನ ವಿನಿಪಾತಿತಾಃ ॥ 6 ॥**

ಸತ್ಸಂತಾನವು ತನಗೆ ದೇವತಾನುಗ್ರಹದಿಂದ ಆಗುವುದೆಂಬ ಸಮಾಚಾರವನ್ನು ಕೇಳದ **ರೋಹಿಣಿ**[2]ಯು ಸಮಾಧಾನ ಹೊಂದಿ, ರೋಹಿಣೀ ನಕ್ಷತ್ರದಂತೆ ಉಲ್ಲಸಿತ ಕಾಂತಿಯನ್ನು ಹೊಂದಿ ಸಂತುಷ್ಟಳಾದಳು.

ದೇವಕಿಯ ಏಳನೇ ಗರ್ಭವು ಎಲ್ಲಿ ಸ್ರಾವವಾಗಿ ಹೋಯಿತೋ, ಎಲ್ಲಿ ಬಿದ್ದಿತೋ, ಗರ್ಭವಾದರೂ ಎಲ್ಲಿ ಹೋಯಿತು ಎಂದು ಅರಸುತ್ತಿರುವಾಗಲೇ ದೇವಕಿಯ ಅಷ್ಟಮರಸನೆನಿಸಿದ ಅಷ್ಟಮ ಗರ್ಭವನ್ನು ಧರಿಸಿದಳು.

**ತಂ ತು ಗರ್ಭಂ ಪ್ರಯತ್ನೇನ ರರಕ್ಷುಸ್ತಸ್ಯ ಮಂತ್ರಿಣಃ ।**
**ಸೋಽಪ್ಯತ್ರ ಗರ್ಭವಸತೌ ವಸತ್ಯಾತ್ಮೇಚ್ಛಯಾ ಹರಿಃ ॥ 7 ॥**

**ಯಶೋದಾಪಿ ಸಮಾಧತ್ತ ಗರ್ಭಂ ತದಹರೇವ ತು ।**
**ವಿಷ್ಣೋಃ ಶರೀರಜಾಂ ನಿದ್ರಾಂ ವಿಷ್ಣು ನಿರ್ದೇಶ ಕಾರಿಣೀಮ್ ॥ 8 ॥**

ಯಾವ ಗರ್ಭವನ್ನು ವಿನಾಶಗೈಯುವ ಉದ್ದೇಶದಿಂದ ಕಂಸನು ಹಿಂದಿನ ಏಳು ಗರ್ಭಗಳನ್ನು ವಿನಾಕಾರಣ ಕೊಂದಿದ್ದನೋ ಅವನಿಗೆ ಮೃತ್ಯು ರೂಪವಾದ ಆ ಎಂಟನೆಯ ಗರ್ಭವನ್ನು ಅವನ ಮಂತ್ರಿಗಳೂ, ಪರಿಚಾರಕ ವರ್ಗದವರೆಲ್ಲರೂ ಕಣ್ಣಲ್ಲಿ ಕಣ್ಣಿಟ್ಟು ಬಹು ಜಾಗರೂಕರಾಗಿ ಕಾಯತೊಡಗಿದರು.

### ಶ್ರೀಕೃಷ್ಣಾವತಾರ

ಶ್ರೀಮನ್ನಾರಾಯಣನಾದರೂ ಸ್ವೇಚ್ಛೆಯಿಂದಲೇ ದೇವಕಿಯ ಗರ್ಭಗುಡಿಯಲ್ಲಿ ನಿರಾಂತಕವಾಗಿ ನಿಶ್ಶಂಕೆಯಿಂದ ವಾಸ ಮಾಡುತ್ತಿದ್ದನು.

---

2. ರೋಹಿಣಿ ಎಲ್ಲಿದ್ದಳು?

ಕಂಸನು ನಿರಪರಾಧಿ ವಸುದೇವ ದೇವಕಿಯರನ್ನು, ಅವರ ಮಕ್ಕಳನ್ನು ಕೊಂದು ಹಾಕಲು ಸಂಕೋಲೆಯಿಂದ ಬಂಧಿಸಿಟ್ಟು, ಅವನ ಬೇರೆ ಪತ್ನಿಯರನ್ನು ಅವರು ಗರ್ಭಿಣಿಯರಾದಾಗೆಲ್ಲ ದೂರವಿಡುತ್ತಿದ್ದ. ಅವರ ಜೊತೆಗೆ ಇದ್ದರೆ ಮಗುವನ್ನು ಅದಲುಬದಲು ಮಾಡಬಹುದೆಂದು. ಹೀಗಾಗಿ ವಸುದೇವನಿಂದ ಗರ್ಭಧರಿಸಿದ ರೋಹಿಣೀ ನಂದಗೋಕುಲದಲ್ಲಿದ್ದಳು. ವಸುದೇವ ಮಥುರೆಯಲ್ಲಿ, ರೋಹಿಣಿ ನಂದಗೋಕುಲದಲ್ಲಿ. ಗರ್ಭ ಹೇಗೆ ಸಾಧ್ಯವಾಯಿತೆಂಬ ಪ್ರಶ್ನೆ ಏಳುವುದಿಲ್ಲ.

ವಿಷ್ಣುವು ದೇವಕಿಯು ಗರ್ಭವನ್ನು ಹೊಕ್ಕ ದಿನವೇ. ವಿಷ್ಣುವಿನ ನಿರ್ದೇಶದಂತೆ ನಡೆದುಕೊಳ್ಳುತ್ತಿದ್ದ ಯೋಗನಿದ್ರೆಯೂ ಕೂಡ ಯಶೋದೆಯ ಗರ್ಭವನ್ನು ಪ್ರವೇಶಿಸಿದಳು.

## ಶ್ರೀಕೃಷ್ಣ ಜನ್ಮೋತ್ಸವ

**ಗರ್ಭಕಾಲೇ ತ್ವಸಂಪೂರ್ಣೇ ಅಷ್ಟಮೇ ಮಾಸಿ ತೇ ಸ್ತ್ರಿಯೌ ।**
**ದೇವಕೀ ಚ ಯಶೋದಾ ಚ ಸುಷುವಾತೇ ಸಮಂ ತದಾ ॥ 9 ॥**

ಒಂಭತ್ತು ಮಾಸ ತುಂಬುವ ಮೊದಲೇ ಎಂಟನೆಯ ಮಾಸದಲ್ಲಿಯೇ ದೇವಕೀ ಮತ್ತು ಯಶೋದೆಯರು ಏಕಕಾಲದಲ್ಲಿ ಪ್ರಸವಿಸಿದರು.

**ಯಮೇವ ರಜನೀಂ ಕೃಷ್ಣೋ ಜಜ್ಞೇ ವೃಷ್ಣಿ ಕುಲೋದ್ಭವಃ ।**
**ತಾಮೇವ ರಜನೀಂ ಕನ್ಯಾಂ ಯಶೋದಾಪಿ ವ್ಯಜಾಯತ ॥ 10 ॥**

ಹರಿಯ ಅನುಜ್ಞೆಯಂತೆ ಅವನನ್ನು ಅನುಸರಿಸಿಯೇ **ಶ್ರೀದೇವಿ**[3]ಯೂ ಸಹ ಹುಟ್ಟಿದಳು. ಅದೇ ರಾತ್ರಿಯಲ್ಲಿ ಸ್ವಲ್ಪ ಸಮಯಾ ನಂತರ ಅಷ್ಟಮೀ ಹೋಗಿ ನವಮೀ ಪ್ರಾಪ್ತವಾದಾಗ ಗರ್ಭಧಾರಣೆಯ ನಂತರ ಎಂಟನೆಯ ತಿಂಗಳಲ್ಲಿ ಅರ್ಧರಾತ್ರಿಯಲ್ಲಿ ಸುಂದರವಾದ ಅಭಿಜಿನ್ಮುಹೂರ್ತದ ಸಮಯದಲ್ಲಿ ದೇವಕಿದೇವಿಯಲ್ಲಿ ಭಗವಂತನಾದ ಮಹಾವಿಷ್ಣುವು ಪುತ್ರನ ರೂಪದಲ್ಲಿ

---

3. **ಪ್ರಾವಟ್‌ಕಾಲೇ ಚ ನಭಸಿ ಕೃಷ್ಣಾಷ್ಟಮ್ಯಾಮಹಂ ನಿಶಿ ।**
**ಉತ್ಪತ್ಸ್ಯಾಮಿ ನವಮ್ಯಾಂ ತು ಪ್ರಸೂತಿಂ ತ್ವ ಮವಾಪ್ಸ್ಯಸಿ ॥**

*–ವಿ.ಪು. 5/1/78 ಬ್ರಾ.ಪು. 72/44*

***ನಭಸಿ ಗಗನೇ ಪ್ರಾವೃಟ್‌ಕಾಲೇ*** ಮೇಘಾವೃತವಾದ ಸಿಂಹಮಾಸದಲ್ಲಿ. ಚಾಂದ್ರಮಾನವಾದರೆ ಶ್ರಾವಣಮಾಸ, ಸೌರಮಾಸ ಪ್ರಕಾರ ಸಿಂಹಮಾಸ.

ಈ ದುರ್ಗೆಗೆ ಏಕಾನಂಗಾ ಎನ್ನಲಾಗಿದೆ. *ಪಾರ್ವತ್ಯಂಶಸಮುದ್ಭವಾ* ಎನ್ನಲಾಗಿದೆ. ಪಾರ್ವತ್ಯಂತರ್ಗತಳಾದ ತಮೋಭಿಮೋನಿನೀ ದುರ್ಗೆಯೆಂದರ್ಥ. ಇವಳನ್ನು ದುರ್ವಾಸರಿಗೆ ನೀಡಲಾಯಿತು ಎನ್ನಲಾಗಿದೆ.

**ದದೌ ದುರ್ವಾಸಸೇ ಭಕ್ತ್ಯಾ ಶಂಕರಾಂಶಾಯ ಭಕ್ತಿತಃ ॥** *–ಬ್ರ.ವೈ. 8/51*

ಭಕ್ತಿತಃ ಭಕ್ತಿಯಿಂದ ಆರಾಧಿಸಲೆಂದೇ ದುರ್ವಾಸರಿಗೆ ನೀಡಿದ್ದು.

ಜನ್ಮತಾಳಿದನು. ಅದೇ ರೀತಿ ಯೋಗಮಾಯೆಯು ಯಶೋದೆಯಲ್ಲಿ ಪುತ್ರಿಯ ರೂಪದಲ್ಲಿ ಜನ್ಮವೆತ್ತಿದಳು.

**ಸಾಗರಾಃ ಸಮಕಂಪಂತ ಚೇಲುಶ್ಚ ಧರಣೀಧರಾಃ ।**
**ಜಜ್ವಲುಶ್ಚಾಗ್ನಯಃ ಶಾಂತಾ ಜಾಯಮಾನೇ ಜನಾರ್ದನೆ ॥ 11 ॥**
**ಶಿವಾಶ್ಚ ಪ್ರವವುಃ ವಾತಾಃ ಪ್ರಶಾಂತಮಭವದ್ ರಜಃ ।**
**ಜ್ಯೋತೀಂಷ್ಯತಿ ಪ್ರಕಾಶಂತ ಜಾಯಮಾನೇ ಜನಾರ್ದನೇ ॥ 12 ॥**
**ಅಭಿಜಿನ್ನಾಮ ನಕ್ಷತ್ರಂ ಜಯಂತೀ ನಾಮ ಶರ್ವರೀ ।**
**ಮುಹೂರ್ತೋ ವಿಜಯೋ ನಾಮ ಯತ್ರ ಜಾತೋ ಜನಾರ್ದನಃ ॥ 13 ॥**

ಭಗವಂತನು ಅವತಾರ ಮಾಡಿದ ಸಮಯದಲ್ಲಿ ಸಮುದ್ರಗಳು ಕಂಪಿಸಿದವು. ಪರ್ವತಗಳೆಲ್ಲವೂ ನಡುಗಿದವು. ಶಾಂತವಾಗಿದ್ದ ಅಗ್ನಿಗಳು ತಮಗೆ ತಾವೇ ಪ್ರಜ್ವಲಿತವಾದವು. ಶ್ರೀಕೃಷ್ಣನ ಅವತಾರದಲ್ಲಿ ಗಾಳಿಯು ಸುಖವಾಗಿ ಬೀಸುತ್ತಿದ್ದವು. ಭೂಮಿಯಲ್ಲಿ ಎದ್ದಿದ್ದ ಧೂಳು ಉಡುಗಿ ಹೋದವು. ಗ್ರಹ ನಕ್ಷತ್ರಗಳು ಪ್ರಕಾಶಮಾನವಾಗಿ ಬೆಳಗತೊಡಗಿತು.

ಜಯಂತೀಯೆಂಬ ಎಂಬ ರಾತ್ರಿಯ ಅಭಿಜಿತ್ ನಕ್ಷತ್ರದಲ್ಲಿ ವಿಜಯನಾಮಕ ಮುಹೂರ್ತದಲ್ಲಿ ಅನಂತಕೋಟಿ ಬ್ರಹ್ಮಾಂಡ ನಾಯಕನೂ ಚರಾಚರ ಪ್ರಪಂಚಕ್ಕೆಲ್ಲ ಸೃಷ್ಟಿಸ್ಥಿತಿ ಸಂಹಾರ ನೀಡುವವನೂ ಆದ ಜಗನ್ನಾಥನು ಆ ದೇವಕಿಯ ಗರ್ಭಗುಡಿಯಿಂದ ಆವಿರ್ಭೂತನಾದನು.

ಬಲರಾಮನು ದೇವಕಿಯಲ್ಲಿ ಮೂರು ತಿಂಗಳಿದ್ದು, ರೋಹಿಣಿಯಲ್ಲಿ ಏಳು ತಿಂಗಳು ಕಳೆದು ಒಟ್ಟು ದಶಮಾಸಾನಂತರ ಅವತರಿಸಿದನು. ಶ್ರೀಹರಿಯು ವಸುದೇವನ[4] ದೇಹದಲ್ಲಿ ಪ್ರವೇಶಿಸಿದ್ದು ಋತುಕಾಲ ಬಂದಾಗ ದೇವಕಿಯ

---

4. ವಾಸುದೇವ ಹುಟ್ಟಲಿಲ್ಲ :
   1) ವ್ಯಕ್ತಃ ಚಿನ್ಮಾತ್ರ ಮೂರ್ತಿಃ ನ ಖಲು ಭಗವತಃ ಪ್ರಾಕೃತೋ ಜಾತು ದೇಹಃ
   2) ವಸುದೇವಸುತೋ ನಾಯಂ ನಾಯಂ ಗರ್ಭೇಽವಸತ್ ಪ್ರಭುಃ ॥
   *– ತಾ.ನಿ. 2/24*
   3) ನ ಶುಕ್ಲ ರಕ್ತಪ್ರಭವೋಽಸ್ಯ ಕಾಯಃ
   4) ನ ಜಾಯತೇ ಮ್ರಿಯತೇ ವಾ ಕದಾಚಿತ್ *–ಗೀತೆ*

ದೇಹ ಪ್ರವೇಶಿಸಿದನು. ಅವಳಲ್ಲಿ ಏಳುವರೆ ತಿಂಗಳಿದ್ದು ಎಂಟನೆಯ ತಿಂಗಳಲ್ಲಿ ಪ್ರಾದುರ್ಭೂತನಾದನು. ಅಂತು ಶ್ರಾವಣ ಕೃಷ್ಣಪಕ್ಷ ಸರಿರಾತ್ರಿಯಲ್ಲಿ ರೋಹಿಣೀ ನಕ್ಷತ್ರಯೋಗವಿದ್ದಾಗ ಅವತರಿಸಿದನು.

**ಅವ್ಯಕ್ತಃ ಶಾಶ್ವತಃ ಸೂಕ್ಷ್ಮೋ ಹರಿರ್ನಾರಾಯಣಃ ಪ್ರಭುಃ ।**
**ಜಾಯಮಾನೋ ಹಿ ಭಗವಾನ್ ನಯನೈಃ ಮೋಹಯನ್ ಪ್ರಭುಃ ॥14 ॥**

**ಅನಾಹತಾ ದುಂದುಭಯೋ ದೇವಾನಾಂ ಪ್ರಾಣದನ್ ದಿವಿ ।**
**ಆಕಾಶಾತ್ ಪುಷ್ಪವೃಷ್ಟಿಂ ಚ ವವರ್ಷ ತ್ರಿದೀಶೇಶ್ವರಃ ॥ 15 ॥**

ಅವ್ಯಕ್ತ ಸ್ವಭಾವದವನೂ, ಸನಾತನನೂ, ಸೂಕ್ಷ್ಮರೂಪನೂ, ಪಾಪಹಾರಕನೂ ಸರ್ವಸಮರ್ಥನೂ ಆದ ಶ್ರೀಮನ್ನಾರಾಯಣನು ಅವತಾರ ಮಾಡುತ್ತಿದ್ದಂತೆಯೇ ತನ್ನ ದಿವ್ಯ ನೇತ್ರಗಳಿಂದ ವಸುದೇವ–ದೇವಕಿಯರ ಮನಸ್ಸನ್ನು ಸೂರೆಗೊಂಡನು.

ಈ ಶ್ರೀಕೃಷ್ಣಾವಿರ್ಭಾವ ಕಾಲದಲ್ಲಿ ಸ್ವರ್ಗದ ದುಂದುಭಿಗಳು ಯಾರೊಬ್ಬರ ಪ್ರಯತ್ನವೂ ಇಲ್ಲದೆ ತಾವಾಗಿಯೆ ಶಬ್ಧ ಮಾಡತೊಡಗಿದವು. ಸ್ವರ್ಗಲೋಕಾಧಿಪತಿ ಇಂದ್ರದೇವನು ದೇವತೆಗಳೊಂದಿಗೆ ಹರ್ಷಾತಿರೇಕದಿಂದ ಪುಷ್ಪವೃಷ್ಟಿಯನ್ನು ಸುರಿಸಿ ಧನ್ಯನಾದನು. ದೇವಾಂಗನೆಯರು ಸುಸ್ವರವಾಗಿ ಸಂಗೀತ ಭಂಗಿಯಿಂದ ಮಂಗಳಗೀತೆಯನ್ನು ಹಾಡಿ ಮಧುಸೂದನನ್ನು ಸ್ತುತಿಸಿದರು.

ಗಂಧರ್ವರು ಗೀತೆ ಹಾಡಿದರು, ಮಹರ್ಷಿಗಳು ವೇದಮಂತ್ರಗಳಿಂದ ಸ್ತೋತ್ರ ಮಾಡಿದರು. ಅಪ್ಸರೆಯರು ಹಾಡಿ ಹಾಡಿ ಕುಣಿದರು.

5) ಅಜಾಯಮಾನೋ ಬಹುಧಾ ವಿಜಾಯತೇ ।

6) ಸೋಽಜನಿ ದೇವಕ್ಯಂತೇ ಯಸ್ಮಾದನುಕಂಪನಾ ದೇವಕ್ಯಂತೇ ।
ಅವದನ್ ದೇವಕ್ಯಂತೇ ಭುವನಂ ಹಿ ಸುರಾಃ ಸದೈವ ದೇವಕ್ಯಂತೇ ॥

*–ಯು.ಭಾ. 5*

ದೇವಕ್ಯಂತೇ ಸಮೀಪೇ ಸೋಽಜನಿ । ಕಿಮರ್ಥಂ? ದೇವಕ್ಯಂತೇ ದೇವಾನ್ ಕಾತ್ಕುರ್ವಂತೀತಿ ದೈತ್ಯಾಃ ತೇಷಾಂ ಅಂತೇ ನಾಶಾಯ । ದೈತ್ಯಾನಾಂ ನಿಧನಾಯ ಚೇತ್ಯುಕ್ತೇಃ । ಕಾನಿ ಶಿರಾಂಸಿ ಯಸ್ಯಸಃ ದೇವಃ ದೇವಕಃ ಶೇಷರೂಪೀ ಬಲರಾಮಃ। ತದಂತೇ ಅವತಾರಾ ನಂತರಂ ಸಾರ್ಧಮಾಸಾನ್ ಉಷಿತ್ವಾ ಜಾತಃ ।

## ಇಂದ್ರನಿಂದ ಸ್ತುತಿ

**ಜಾಯಮಾನೇ ಹೃಷಿಕೇಶೇ ಪ್ರಹೃಷ್ಟಮಭವತ್ ಜಗತ್ ।**
**ಇಂದ್ರಶ್ಚ ತ್ರಿದಶೈಃ ಸಾರ್ಧಂ ತುಷ್ಟಾವ ಮಧುಸೂದನಮ್ ॥ 16 ॥**

ಹೃಷಿಕೇಶನ ಅವತಾರವಾದಾಗ ಇಡೀ ಅಖಂಡ ಜಗದಂಡ ಮಂಡಲವು ಆನಂದ ನಿರ್ಭರವಾಗಿ ಕೃಷ್ಣಾವತಾರದ ಮಹೋತ್ಸವದಲ್ಲಿ ಲೀನವಾಗಿತ್ತು.

**ವಸುದೇವಶ್ಚ ತಂ ರಾತ್ರೌ ಜಾತಂ ಪುತ್ರ ಮಧೋಕ್ಷಜಮ್ ।**
**ಶ್ರೀವತ್ಸ ಲಕ್ಷಣಂ ದೃಷ್ಟ್ವಾ ಯುತಂ ದಿವ್ಯೈಶ್ಚ ಲಕ್ಷಣೈಃ ।**
**ಉವಾಚ ವಸುದೇವಸ್ತು ರೂಪಂ ಸಂಹರ ವೈ ಪ್ರಭೋ ॥ 17 ॥**

ಆ ಗರ್ಭಾಗಾರದಲ್ಲಿ ಪ್ರಾದುರ್ಭವಿಸಿದ **ಶ್ರೀಮನ್ನಾರಾಯಣ**[5]ನು ಸಾಕ್ಷಾತ್ ಪರಂಬ್ರಹ್ಮನೆ ಬಿರಿದ ತಾವರೆಯಂತೆ ಅರಳಿದ ಕಣ್ಣುಗಳು, ಚತುರ್ಬಾಹುಗಳು, ವಕ್ಷಸ್ಥಲದಲ್ಲಿ ಶ್ರೀವತ್ಸ ಚಿಹ್ನೆಯು, ಕನ್ನೈದಿಯ ಎಲೆಯಂತೆ ಶ್ಯಾಮಲ ಬಣ್ಣ, ದೇಹದಲ್ಲಿ ದಿವ್ಯಾಭರಣ, ಹೃದಯ ಕೌಸ್ತುಭಮಣಿ, ವನಮಾಲೆಗಳಿಂದ ಶೋಭಾಯಮಾನವಾಗಿಯೇ ಕಾಣಿಸಿದ ಈ ದಿವ್ಯಮೂರ್ತಿಯನ್ನು ವಸುದೇವ ಅಚ್ಚರಿಯಿಂದ ಕಣ್ಣರಳಿಸಿ ನೋಡಿದ. ಒಂದೆಡೆ ಸಂತೋಷ ಮತ್ತೊಮ್ಮೆ ಕಂಸನ ಕೌರ್ಯದಿಂದ ನಡುಗಿದ. ಆದರೂ ಪ್ರಸನ್ನ ಮಾತುಗಳಿಂದ ಆ ಮಧುರ ಮೂರುತಿಯನ್ನು ನೋಡಿ ಶ್ರೀಹರಿಗೆ ಹೀಗೆ ಹೇಳಿದನು.

**ಭೀತೋಽಹಂ ದೇವ ಕಂಸಸ್ಯ ತಸ್ಮಾದೇವಂ ಬ್ರವೀಮ್ಯಹಮ್ ।**
**ಮಮ ಪುತ್ರಾ ಹತಾಸ್ತೇನ ತವ ಜ್ಯೇಷ್ಠಾಂಬುಜೇಕ್ಷಣ ॥ 18 ॥**

ದೇವೇಶನೇ! ನಾನು ಕಂಸನ ದೆಸೆಯಿಂದ ಬಹಳ ಭಯಪಟ್ಟಿರುವೆ. ಈ

---

5. ತಮದ್ಭುತಂ ಬಾಲಕ ಮಂಬುಜೇಕ್ಷಣಂ ಚತುರ್ಭುಜಂ ಶಂಖ ಗದಾದ್ಯುದಾಯುಧಂ+
ಶ್ರೀವತ್ಸಲಕ್ಷ್ಮಂ ಗಲಶೋಭಿ ಕೌಸ್ತುಭಂ ಪೀತಾಂಬರಂ ಸಾಂದ್ರ ಪಯೋದಸೌಭಗಂ।
ಮಹಾರ್ಹವೈಡೂರ್ಯ ಕಿರೀಟ ಕುಂಡಲತ್ವಿಷಾ ಪರಿಷ್ವಕ್ತ ಸಹಸ್ರ ಕುಂಡಲಮ್ ।
ಉದ್ದಾಮ ಕಾಮಚ್ಯಂಗದ ಕಂಕಣಾದಿಭಿಃ ವಿರೋಚಮಾನಂ ವಸುದೇವ ಐಕ್ಷತ ॥
*- ಭಾಗ. 10/4/9.10*

ಕಾರಣದಿಂದಾಗಿ ನಾನು ಹೀಗೆ ಹೇಳುತ್ತಿದ್ದೇನೆ. ನಿನಗಿಂತ ಮೊದಲು ಹುಟ್ಟಿದ ಎಲ್ಲ ನನ್ನ ಮಕ್ಕಳೂ ಕಂಸನಿಂದಲೇ ಹತರಾಗಿದ್ದಾರೆ.

ನೀನಿಲ್ಲಿ ಬಂದಿಖಾನೆಯಲ್ಲಿ ಅವತರಿಸಿರುವಿ ಎಂದ ತಿಳಿದ ಮಾತ್ರಕ್ಕೆ ನೃಶಂಸ ಕಂಸನು ನಿನ್ನನ್ನು ಕೊಂದು ಹಾಕುವನು. ಆದ್ದರಿಂದ ಸ್ವಾಮಿನ್ ದಯ ಮಾಡಿ ಈ ನಿನ್ನ ಶಂಖ ಚಕ್ರಗಳಿಂದ ಕೂಡಿರುವ ಈ ದಿವ್ಯ ವಿಗ್ರಹವನ್ನು ಉಪಸಂಹರಿಸಿ ಶಿಶುವೇಷದಿಂದ ಚಿಕ್ಕ ಮಗುವಾಗಿ ಮಲಗು ಎಂದನು.

## ಭಗವಂತನ ಆದೇಶ

*ವೈಶಂಪಾಯನ ಉವಾಚ -*

**ವಸುದೇವ ವಚಃ ಶ್ರುತ್ವಾ ರೂಪಂ ಚಾಹರದಚ್ಯುತಃ ।**
**ಅನುಜ್ಞಾಪ್ಯ ಪಿತೃತ್ವೇನ ನಂದಗೋಪಗೃಹಂ ನಯ ॥ 19 ॥**

ವಸುದೇವನ ಮಾತನ್ನು ಆಲಿಸಿದ ಶ್ರೀಹರಿಯು ತಕ್ಷಣದಲ್ಲಿ ತನ್ನ ಚತುರ್ಭುಜಾತ್ಮಕವಾದ ರೂಪವನ್ನು ಉಪಸಂಹರಿಸುತ್ತಾ ಹೀಗೆಂದನು.

ವಸುದೇವ ದೇವಕಿಯರೇ! ನೀವು ಹಿಂದೆ ನನ್ನನ್ನು ಮೂರು ಜನ್ಮದಲ್ಲಿ ಮಗನಾಗಿ ಅವತರಿಸಬೇಕೆಂದು **ತಪಸ್ಸನ್ನಾಚರಿಸಿದಿರಿ**[6]. ಇದರ ಫಲವಾಗಿ ಪ್ರಶ್ನಿಗರ್ಭ ವಾಮನನಾಗಿ, ಈಗ ಶ್ರೀಕೃಷ್ಣನಾಗಿ ಅವತರಿಸಿದ್ದೇನೆ. ಇದನ್ನು ನಿಮಗೆ ತಿಳಿಸಲೆಂದೇ ಈ ದಿವ್ಯ ರೂಪ ತೋರಿಸಿದೆ. ಮಗುವಾಗಿದ್ದರೆ ನಿಮಗೆ ತಿಳಿಯುತ್ತಿರಲಿಲ್ಲ ಎಂದು ಹೇಳಿ ಪುಟ್ಟ ಮಗುವಾಗಿ ದೇವಕಿಯ ಮಡಿಲಲ್ಲಿ ಮಲಗಿದ. ನನ್ನನ್ನು ಈಗಲೇ ನಂದಗೋಪನ ಮನೆಗೆ ಕರೆದೊಯ್ಯು. ಅಲ್ಲಿ ಈಗ ತಾನೆ ಹುಟ್ಟಿರುವ ಹೆಣ್ಣು ಮಗುವನ್ನು ಇಲ್ಲಿಗೆ ತೆಗೆದುಕೊಂಡು ಬಾ ಎಂದನು.

---

6. ಸ ಕಂಜಯೋನಿ ಪ್ರಮುಖೈಃ ಸುರೈಃ ಸ್ತುತಃ ಪಿತ್ರಾ ಚ ಮಾತ್ರಾ ಚ ಜಗದಾ ಶೂರಜಮ್।
ನ ಕಂಸಭೀತ್ಯಾಭಿಯಯೌ ವ್ರಜಂ ಸಃ ಸ್ವ ಸಂಶ್ರಿತಾನಾಮಭಯಸ್ಯ ಕರ್ತಾ ।
ಸ್ವವಲ್ಲಭಾಂ ನಂದ ಕಲತ್ರಜಾತಾಂ ಮನೋರಮಾ ಮೀಕ್ಷಿತುಮೇವ ಸೋಽಗಾತ್ ॥
*-ರು.ವಿ. 1/57*

**ವಸುದೇವಸ್ತು ಸಂಗೃಹ್ಯ ದಾರಕಂ ಕ್ಷಿಪ್ರಮೇವ ಚ ।**
**ಯಶೋದಾಯಾಃ ಗೃಹಂ ರಾತ್ರೌ ವಿವೇಶ ಸುತವತ್ಸಲಃ ॥ 20 ॥**

**ಯಶೋದಾಯಾಃ ತ್ವವಿಜ್ಞಾತಃ ತತ್ರ ನಿಕ್ಷಿಪ್ಯ ದಾರಕಮ್ ।**
**ಪ್ರಗೃಹ್ಯ ದಾರಿಕಾಂ ಚೈವ ದೇವಕೀ ಶಯನೇ ನ್ಯಸತ್ ॥ 21 ॥**

ಅನಂತರ ಅದೇ ತಾನೆ ಅವತರಿಸಿದ ಎಳೆ ಮಗುವಿನ ಆದೇಶದಂತೆ ವಸುದೇವನು ಮಗುವಾಗಿ ಮಲಗಿದ ಆ ಕೂಸನ್ನು ದೇವಕಿಯ ಮಡಿಲಲ್ಲಿ ಮಲಗಿದ್ದ ಮಗುವನ್ನೆತ್ತಿಕೊಂಡು ಸೆರೆಮನೆ ದಾಟಿ ನಡೆದನು. ವಸುದೇವನಿಗೆ ವಿಚಿತ್ರ ವಾತ್ಸಲ್ಯ ಮಮತೆ ಉಕ್ಕಿದವು. ಹೇಗಾದರೂ ಮಾಡಿ ಇಂತಹ ಅದ್ಭುತ ಮಗುವನ್ನು ಕಂಸನ ಕೈಗೆ ಸಿಗದಂತೆ ರಕ್ಷಿಸಲೇಬೇಕೆಂಬ ಇಚ್ಛೆಯಿಂದ ದ್ರುತಗತಿಯಿಂದ ಯಶೋದೆಯ ಗರ್ಭಾಗಾರಕ್ಕೆ ಹೊರಟನು. ಬಂದಿಖಾನೆಯ ಕಾವಲುಗಾರರು ಯೋಗನಿದ್ರೆಯ ಮಾಯೆಯಿಂದಾಗಿ ಗಾಢನಿದ್ರೆಯಲ್ಲಿ ಮುಳುಗಿದ್ದರು. ದ್ವಾರಪಾಲಕರೆಲ್ಲರೂ ಗೊರಕೆ ಹೊಡೆಯುತ್ತಿದ್ದರು. ವಸುದೇವ ಮುಂದೆ ನಡೆದ.

ಶ್ರಾವಣ ಮಾಸವಾದ್ದರಿಂದ ಧಾರಾಕಾರವಾಗಿ ಮಳೆ ಸುರಿಯುತ್ತಿತ್ತು. ಕೃಷ್ಣಪಕ್ಷವಾದ್ದರಿಂದ ಕಗ್ಗತ್ತಲೆ. ಮೇಲೆ ವನಕೆಯಾಕಾರದಂಥ ಘೋರ ಮಳೆ. ಮೋಡಗಳ ಗುಡುಗು, ಮಿರಿಮಿರಿಮಿಂಚುವ ಮಿಂಚಿನಸುಳಿ. ಇಂತಹ ಕಾಳರಾತ್ರಿಯಲ್ಲಿ ಮಗುವನ್ನು ಶಿರದಲ್ಲಿ ಹೊತ್ತು ವಸುದೇವ ನಡೆದ. ಆಗ ನಾಗರಾಜನಾದ ಆದಿಶೇಷ ತನ್ನ ಹೆಡೆಬಿಡಿಸಿ ಕೊಡೆಯಂತೆ ಹರಿಯ ಮೇಲೆ ಹಿಡಿದರು. ಅವನ ಫಣಾಮಣಿಯ ಬೆಳಕು ವಸುದೇವನಿಗೆ ದಾರಿ ಬೆಳಕಾಗಿತ್ತು. ಮಳೆ ಹನಿಯೂ ಅವರ ಮೇಲೆ ಬೀಳಲಿಲ್ಲ. ದಾರಿಯಲ್ಲಿ ಯಮುನಾ ನದಿ ತುಂಬಿ ತುಳುಕುತ್ತಿದೆ. ವಸುದೇವ ಬಂದದ್ದನ್ನು ನೋಡಿ, ನೀರು ಮೊಣಕಾಲುವರೆಗೆ ಬಂದಿತು. ಹರಿಯನ್ನು ಹೊತ್ತ ವಾಸುದೇವನಿಗೆ ಪಾದಪ್ರಕ್ಷಾಲನ ಮಾಡಿದಂತಾಗಿತ್ತು. ನದೀ ದಾಟಿ ಗೋಕುಲ ಸೇರಿದ. ಅಲ್ಲಿ ವ್ರಜದಲ್ಲಿ ನಂದಪತ್ನಿ ಯಶೋದೆಯು ಕನ್ಯಾರತ್ನವನ್ನು ಹೆತ್ತು ಆಯಾಸದಿಂದ ಮಲಗಿದ್ದಳು ಎಲ್ಲರೂ ನಿದ್ರಾಮುದ್ರಿತ ನೇತ್ರರಾಗಿದ್ದರು. ನೇರವಾಗಿ ಪ್ರಸೂತಿ ಗೃಹಕ್ಕೆ ಹೊರಟ. ಯಮನೆಯನ್ನೂ ಪುನಃ ದಾಟಿ ಮಥುರೆಯ ಸೆರೆಮನೆಗೆ

ಬಂದು ಸೇರಿ. ಅಲ್ಲಿ ಮಗನನ್ನು ಕರೆದುಕೊಂಡು ಹೋದದ್ದಕ್ಕಾಗಿ ದುಃಖಿಸುತ್ತಿರುವ ದೇವಕಿಗೆ ಆ ಹೆಣ್ಣು ಮಗುವನ್ನು **ಕೊಟ್ಟ.**[7]

### ಕಂಸನ ಆತಂಕ

**ಪರಿವರ್ತೇ ಕೃತೇ ತಾಭ್ಯಾಂ ಗರ್ಭಾಭ್ಯಾಂ ಭಯ ವಿಕ್ಲವಃ ।**
**ವಸುದೇವಃ ಕೃತಾರ್ಥೋ ವೈ ನಿರ್ಜಗಾಮ ನಿವೇಶನಾತ್ ॥ 22 ॥**

**ಉಗ್ರಸೇನಸುತಾಯಾಥ ಕಂಸಾಯಾನಕ ದುಂದುಭಿಃ ।**
**ನಿವೇದಯಾಮಾಸ ತದಾ ತಾಂ ಕನ್ಯಾಂ ವರವರ್ಣಿನೀಮ್ ॥ 23 ॥**

**ತಚ್ಛ್ರುತ್ವಾ ತ್ವರಿತಃ ಕಂಸೋ ರಕ್ಷಿಭಿಃ ಸಹ ವೇಗಿಭಿಃ ।**
**ಆಜಗಾಮ ಗೃಹದ್ವಾರಂ ವಸುದೇವಸ್ಯ ವೀರ್ಯವಾನ್ ॥ 24 ॥**

**ಸ ತತ್ರ ತ್ವರಿತಂ ದ್ವಾರಿ ಕಿಂ ಜಾತಮಿತಿ ಚಾಬ್ರವೀತ್ ।**
**ದೀಯತಾಂ ಶೀಘ್ರಮಿತ್ಯೇವಂ ವಾಗ್ಭಿಃ ಸಮಭಿತರ್ಜಯತ್ ॥ 25 ॥**

ಇತ್ತ ವಸುದೇವನು ತನ್ನ ಗಂಡು ಮಗುವನ್ನು ಇತ್ತು ಯಶೋದೆಯ ಹೆಣ್ಣು ಮಗುವನ್ನು ತಂದು ದೇವಕಿಯ ಪಕ್ಕದಲ್ಲಿ ಮಲಗಿಸಿದ. ಹೀಗೆ ಎರಡು ಮಗುಗಳನ್ನು ಅದಲು–ಬದಲು ಮಾಡಿ ಕೃತಾರ್ಥನಾದನು.

---

7. ಪೂರ್ವಂ ಹಿ ನಂದಃ ಸ ಕರಂ ಹಿ ದಾತುಂ ।
ಬೃಹದ್ವನಾದ್ ನಿಸ್ಸೃತಃ ಪ್ರಾಪ ಕೃಷ್ಣಾಮ್ ॥ – *ತಾ.ನಿ. 12/79*
ಬೃಹದ್ವನದಿಂದ ಪಶ್ಚಿಮಕ್ಕೆ ಎರಡು ಕ್ರೋಶ ದೂರದಲ್ಲಿ ಮಥುರೆ ಇತ್ತು. ಇವರೆಡರ ಮಧ್ಯ ಯಮುನನದಿ ಹರಿಯುತ್ತಿತ್ತು. ನಂದನೇ ಮೊದಲಾದವರು ಕಂಸನಿಗೆ ವಾರ್ಷಿಕ ಕರ ನೀಡಲೆಂದು ಮಥುರೆಗೆ ಹೋಗುತ್ತಾ ಮಧ್ಯದಲ್ಲಿ ಬೀಡುಬಿಟ್ಟಿದ್ದರು. ಅವರೊಂದಿಗೆ ಗರ್ಭಿಣಿಯಾದ ಯಶೋದೆಯೂ ಬಂದಿದ್ದಳು. ಅವಳು ಅದೇ ದಿನದ ರಾತ್ರಿಯಲ್ಲಿಯೇ ಬಿಡಾರದಲ್ಲಿ ಹೆಣ್ಣು ಮಗುವಿಗೆ ಜನ್ಮ ನೀಡಿದ್ದಳು. ಯೋಗನಿದ್ರೆಯಿಂದಾಗಿ ಸುಖಪ್ರಸವವಾದ ನಂತರ ಅವಳಿಗೂ ಹಾಗೂ ಪರಿವಾರದವರಿಗೂ ನಿದ್ರೆಯೂ ಆವರಿಸಿತ್ತು. ಇದರಿಂದಾಗಿ ವಸುದೇವನಿಗೆ ಆ ಅರ್ಧರಾತ್ರಿಯ ನಂತರ ಮಥುರೆಯಿಂದ ಬಹಳ ದೂರವಿರುವ ಗೋಕುಲಕ್ಕೆ ಸ್ವಲ್ಪ ಕಾಲದಲ್ಲಿ ಹೋಗಿ ಬರುವುದಾದರೂ ಹೇಗೆ ಎಂಬ ಸಂಶಯಕ್ಕೆಡೆಯಿಲ್ಲ. – *ವಿ.ಪು. 5/3*
ಪ್ರಸವಾನಂತರವೂ ನಂದನು ಒಂದು ತಿಂಗಳಿದ್ದನು.

ಆದರೂ ಕಂಸನ ಭಯದಿಂದ ವ್ಯಾಕುಲನಾಗಿದ್ದ ವಸುದೇವನು ಮನೆಯಿಂದ ಕಂಸನ ಬಳಿ ಹೋದನು. ಉಗ್ರಸೇನ ಪುತ್ರನಾದ ಕಂಸನಿಗೆ – ತನಗೆ ಶ್ರೇಷ್ಠವೂ ಸುಂದರವೂ ಆದ ಹೆಣ್ಣು ಶಿಶುವು ಹುಟ್ಟಿರುವ ವಾರ್ತೆಯನ್ನು ಅರುಹಿದನು. ವಸುದೇವನ ಮಾತನ್ನು ಕೇಳುತ್ತಲೇ ದುಷ್ಟಕಂಸನು ವೇಗವಾಗಿ ಅಂಗರಕ್ಷಕರೊಡನೆ ಓಡಿ ಬಂದನು. ಬಾಗಿಲಿಗೆ ಬರುತ್ತಲೆ ಯಾವ ಮಗು ಹುಟ್ಟಿದೆ? ಅದನ್ನು ಈಗಲೇ ನನ್ನ ವಶಕ್ಕೊಪ್ಪಿಸಿರಿ ಎಂದು ಘರ್ಜಿಸಿದನು.

## ಹೆಣ್ಣಿನಿಂದ ಭಯಪಟ್ಟ ಕಂಸ

**ತತೋ ಹಾಹಾಕೃತಾಃ ಸರ್ವಾ ದೇವಕೀ ಭವನೇ ಸ್ತ್ರಿಯಃ ।**
**ಉವಾಚ ದೇವಕೀ ದೀನಾ ಬಾಷ್ಪಗದ್ಗದಯಾ ಗಿರಾ ॥ 26 ॥**

**ದಾರಿಕಾ ತು ಪ್ರಜಾತೇತಿ ಕಂಸಂ ಸಮಭಿಯಾಚತೀ ।**
**ಶ್ರೀಮಂತೋ ಮೇ ಹತಾಃ ಸಪ್ತ ಪುತ್ರಗರ್ಭಾಃ ತ್ವಯಾ ವಿಭೋ ॥ 27 ॥**

**ದಾರಿಕೇಯಂ ಹತೈವೈಷಾ ಪಶ್ಯಸ್ವ ಯದಿ ಮನ್ಯಸೇ ।**
**ದೃಷ್ಟ್ವಾ ಕಂಸಸ್ತು ತಾಂ ಕನ್ಯಾಮಾಕೃಷ್ಯತ ಮುದಾ ಯುತಃ ॥ 28 ॥**

ಕಂಸನ ತರ್ಜನೆಯನ್ನು ನೋಡಿ ದೇವಕಿಯ ಮಗುವನ್ನು ನೋಡಲು ಬಂದಿದ್ದ ಸ್ತ್ರೀಯರೆಲ್ಲರೂ ಹಾಹಾಕಾರ ಮಾಡಿದರು. ದೀನಳಾಗಿದ್ದ ದೇವಕಿಯು ಬಿಕ್ಕಿ ಬಿಕ್ಕಿ ರೋದಿಸುತ್ತಾ ಕಂಸನಿಗೆ ಹೇಳಿದಳು. ಕಂಸನೇ! ಈಗ ನನಗೆ ಹೆಣ್ಣು ಮಗು ಹುಟ್ಟಿದೆ. ಅತ್ಯಂತ ತೇಜಸ್ವಿಗಳಾದ ಏಳು ಮಂದಿ ಪುತ್ರರನ್ನೂ ಕೊಂದು ಹಾಕಿರುವಿ. ಈಗಲಾದರೂ ಒಂದು ಹೆಣ್ಣು ಶಿಶುವು ಹುಟ್ಟಿದೆ. ಇದು ಮೃತವಾದ ಪ್ರೇತದಂತಿದೆ. ಇದರಿಂದ ನಿನಗೇನು ಭಯವಿಲ್ಲ?

ಗಂಡಾದರೆ ನಿನಗೆ ಗಂಡಾಂತರ. ಹೆಣ್ಣಿನಿಂದ ಏನು ಹೆದರಿಕೆ ? ನಿನ್ನ ತಂಗಿಗೆ ಹೆಣ್ಣು ಮಗುವನ್ನಾದರೂ ಕರುಣಿಸು. ಇವಳನ್ನು ನೋಡುತ್ತಾದರೂ ಮೃತ ಮಕ್ಕಳ ದುಃಖ ಮರೆಯುತ್ತೇನೆ ಎಂದು ಅಳುತ್ತಾ ಕೇಳಿಕೊಂಡಳು. ಆದರೂ ಭಯಾಕ್ರಾಂತನಾದ ಕಂಸನಿಗೆ ದಯೆ ಬರಲಿಲ್ಲ. ತಂಗಿಯ ಕರುಣಾಕ್ರಂದನ ಅವನಿಗೆ ಕೇಳಿಸಲಿಲ್ಲ. ಕ್ರೂರನಾಗಿ ಅವಳ ಕೈಯಿಂದ ಆ ಕೂಸನ್ನು ಕಸಿದುಕೊಂಡ.

ಕೂಸನ್ನು ಶಿಲೆಗೆ ಅಪ್ಪಳಿಸಿದ

ಸ ಚೈನಾಂ ಗೃಹ್ಯ ಪುರುಷಃ ಸಮಾವಿಧ್ಯಾವಧೂಯ ಚ ।
ಉದ್ಯಚ್ಛನ್ನೇವ ಸಹಸಾ ಶಿಲಾಯಾಂ ಸಮಪ್ಪೋಥಯತ್ ॥ 29 ॥
ಸಾವಧೂತಾ ಶಿಲಾಪೃಷ್ಠೇಽನಿಷ್ಪಿಷ್ಟಾ ದಿವಮುತ್ಪತತ್ ।

ಆ ಹಸುಗೂಸನ್ನು ತನ್ನ ಕೈಯಿಂದ ಅದನ್ನು ಗರಗರ ತಿರುಗಿಸಿ ದೊಡ್ಡ ಶಿಲೆಗೆ ಅಪ್ಪಳಸಲು ದ್ಯುಕ್ತನಾದನು. ಕೂಡಲೇ ಆ ಎಳೆಗೂಸು ಅವನ ಕೈಯಿಂದ ಜಾರಿ ಮುಗಿಲಿಗೆ ಏರಿ ಸುಕುಮಾರ ರೂಪ ಬಿಟ್ಟು ಮುಡಿಕೆದರಿದ ಮಹಾಕಾಳಿಯಾಗಿ, ಮಂದಾರಾಮಾಲೆಯನ್ನು ಧರಿಸಿ, ದಿವ್ಯಚಂದನವನ್ನು ಲೇಪಿಸಿಕೊಂಡು ಮುಕುಟ ಮಂಡಿತಳಾಗಿ ಕಂಸನನ್ನು ತಿರಸ್ಕರಿಸಿ ನಡೆದಳು. ಚಂದ್ರಮುಖಿಯೂ ಚತುರ್ಭುಜಳೂ ಅವಳು ಕಪ್ಪು ಬಟ್ಟೆಯನ್ನುಟ್ಟು ಹಳದಿ ಮೇಲುದ ತೊಟ್ಟು ಮಿಂಚಿನಂತೆ ಥಳಥಳಿಸುವ ಮೈಬಣ್ಣದಿಂದಲೂ ಉದರ ರವಿಯಂತಿರುವ ನೇತ್ರದ್ವಂದ್ವಗಳು. ಆನೆಯ ಕುಂಭಸ್ಥಳದಂತೆ ಸ್ತನಗಳುಳ್ಳವಳೂ, ರಥದಂತೆ ವಿಸ್ತಾರವಾದ ಜಘನ ಪ್ರದೇಶವೂ, ಚಂದ್ರನನ್ನು ನಾಚಿಸುವ ಮುಖವುಳ್ಳವಳಾಗಿದ್ದಳು. ಗಾಢಾಂಧಕಾರವಾದ ಆ ಕಾಳರಾತ್ರಿಯಲ್ಲಿ ಭೀಕರವಾಗಿ ತೋರುತ್ತಿದ್ದಳು. ಅವಳ ಸುತ್ತಲೂ ಭೂಪತ್ರೇತಗಳು ನರ್ತನ ಮಾಡುತ್ತಿದ್ದವು. ಆ ಪಿಶಾಚ ಪರಿವಾರದೊಂದಿಗೆ ಅವಳೂ ಅಟ್ಟಹಾಸ ಮಾಡುತ್ತಾ, ಅತ್ಯುತ್ತಮ ಮಧುಪಾನ ಮಾಡಿ ವಿಕಟ ತಾಂಡವವಾಡುತ್ತಿದ್ದಳು.

ಜಹಾಸ ಚ ಮಹಾಹಾಸಂ ಕಂಸಂ ಚ ರುಷಿತಾಬ್ರವೀತ್ ।
ಕಂಸ ಕಂಸಾತ್ಮನಾಶಾಯ ಯದಹಂ ಘಾತಿತಾ ತ್ವಯಾ ॥ 30 ॥
ಸಹಸಾ ಚ ಸಮುತ್ಕ್ಷಿಪ್ಯ ಶಿಲಾಯಾಮಭಿಪೋಥಿತಾ ।
ತಸ್ಮಾತ್ ತವಾಂತ ಕಾಲೇಽಹಂ ಕೃಷ್ಯಮಾಣಸ್ಯ ಶತ್ರುಣಾ ॥ 31 ॥

ದೇವಿಯು ಕಂಸನನ್ನು ಕುರಿತು ನಿನ್ನ ನಾಶಕ್ಕಾಗಿಯೇ ನನ್ನನ್ನು ಎತ್ತಿ ಕಲ್ಲಿನ ಮೇಲೆ ಅಪ್ಪಳಿಸಿದೆ ಅಲ್ಲವೆ? ಇದರ ಫಲವಾಗಿ ನೀನು ನಿನ್ನ ವೈರಿಯಿಂದ ಸೆಳೆದು ಸೀಳಲ್ಪಡುತ್ತಲಿರುವಾಗ ನಾನು ಬಂದು ನನ್ನ ಕೈಯುಗುರುಗಳಿಂದ ನಿನ್ನ ಶರೀರವನ್ನು ಸೀಳಿ, ಬಿಸಿರಕ್ತವನ್ನು ಪಾನ ಮಾಡುತ್ತೇನೆ.

ಕಂಸನೇ! ಮೂರ್ಖನೇ! ನನ್ನನ್ನು ಕಗ್ಗಲ್ಲಿಗೆ ಅಪ್ಪಳಸಿದರೆ ಏನು ಲಾಭ? ನಿನ್ನನ್ನು ಕೊಲ್ಲುವವನು ಈಗಾಗಲೇ ಹುಟ್ಟಿರುವನು. ಅವನು ದೇವತೆಗಳ ದೊಡ್ಡ ಸೊತ್ತು. ಆದರೆ ನಿನಗೆ ಅವನೇ ಕುತ್ತು. ಹಿಂದೆಯೂ ನೀನು ಕಾಲನೇಮಿಯಾಗಿದ್ದಾಗಲೂ ಅವನಿಂದಲೇ ಕೊಲ್ಲಲ್ಪಟ್ಟಿದ್ದಿ. ಈಗಲೂ ನಿನಗೆ ಮರಣವು ಅವನಿಂದಲೇ. ಹೀಗೆ ಅತ್ಯಂತ ಭಯಂಕರವಾದ ಮಾತನ್ನು ಕಂಸನಿಗೆ ಹೇಳ, ತನಗೆ ಇಷ್ಟವಾದ ಮಾರ್ಗವನ್ನು ಹಿಡಿದು ಹೋಗುತ್ತಾ ತನ್ನ ಅನುಚರರೊಡನೆ ಆಕಾಶದಲ್ಲಿಯೂ ದೇವಲೋಕದಲ್ಲಿಯೂ ಸಂಚರಿಸುತ್ತಿದ್ದಳು.

**ಸಾ ಕನ್ಯಾ ವವೃಧೇ ತತ್ರ ವೃಷ್ಣಿ ಸಂಘ ಸುಪೂಜಿತಾ ।**
**ಪುತ್ರ ವತ್ ಪಾಲ್ಯಮಾನಾ ಸಾ ವಸುದೇವಾಜ್ಞಯಾ ತದಾ ॥ 32 ॥**
**ವಿದ್ಧಿ ಚೈನಾ ಮಥೋತ್ಪನ್ನಾಂ ಅಂಶಾದ್ ದೇವೀಂ ಪ್ರಜಾಪತೇಃ ।**
**ಏಕಾನಂಶಾಂ ಯೋಗಕನ್ಯಾಂ ರಕ್ಷಾರ್ಥಂ ಕೇಶವಸ್ಯ ತು ॥ 33 ॥**

ಯಾದವ ವಂಶೀಯವರಿಂದ ಪೂಜಿತಳಾದ ಆ ಕನ್ಯೆಯು ದೇವಪೂಜ್ಯಳಾಗಿ ಸ್ವರ್ಗದಲ್ಲಿಯೇ ಬೆಳೆಯತೊಡಗಿದಳು. ನಂತರ ದೇವಿಯು ಬಾಲರೂಪದಿಂದ ದೇವಕಿಯ ತಲ್ಪದಲ್ಲಿ ಶಯನ ಮಾಡಿದಳು. ಆದರೆ ಕಾರಾಗೃಹದಲ್ಲಿ ಯಾರೇ ಕಂಸಭೃತ್ಯರಿಗೆ ತಿಳಿಯಲ್ಪಡಲಿಲ್ಲ. ವಸುದೇವ ದೇವಕಿಯರು ಮಾತ್ರ ತಿಳಿದರು. ಇತರರಿಗೆ ಅದೃಶ್ಯಳಾಗಿ ಅವರಿಬ್ಬರಿಗೆ ದೃಶ್ಯಳಾಗಿದ್ದಳು. ಮುಂದೆಯೂ ಇವಳನ್ನು ಸುಭದ್ರೆಯಂತೆ ರೋಹಿಣೀ ದೇವಿಯು ಬೆಳೆಸಿದಳು. ಇವಳು ಕಂಸನಿಂದ ಅಪ್ಪಳಸಲ್ಪಟ್ಟ ದೇವಕೀ ತನಯೆಯೆಂದು ಯಾರಿಗೂ ತಿಳಿಯಲಿಲ್ಲ. ಪರಮಾತ್ಮನ ಪತ್ನಿಯಾದ **ದುರ್ಗೆ**[8]ಯನ್ನು. ಯೋಗ ಮಾಯೆಯಿಂದ ಕೂಡಿದ ತಮೋಭಿಮಾನಿನಿಯಾದ ಕನ್ಯೆಯನ್ನು ವಸುದೇವನಾಜ್ಞೆಯಿಂದ ಪೂಜಿಸಲ್ಪಟ್ಟಳು. ಇವಳ ಹೆಸರು ಏಕಾನಂಶಾ ಎಂದು ಇದರರ್ಥ

---

8. ಪಾರ್ವತ್ಯಂಶ ಸಮುದ್ಭವಾಃ – ದುರ್ಗೆಯು *ಪಾರ್ವತ್ಯಂಶಗರ್ತ ತಮೋಭಿಮಾನಿನೀ* ದುರ್ಗೆಯ ಅಂಶದಿಂದ ಹುಟ್ಟಿದವಳೆಂದರ್ಥ.

ಇವಳನ್ನು ವಿವಾಹದಲ್ಲಿ ದುರ್ವಾಸರಿಗೆ ನೀಡಲಾಯಿತು ಎಂದು ಬ್ರಹ್ಮವೈವರ್ತದಲ್ಲಿದೆ. ಇದರರ್ಥ –

**ದದೌ ದುರ್ವಾಸಸೇ ಭಕ್ತ್ಯಾ ಶಂಕರಾಂಶಾಯ ಭಕ್ತಿತಃ ।**

ಭಕ್ತಿತಃ ಭಕ್ತಿಯಿಂದ ಆರಾಧನೆ ಮಾಡಲು ದುರ್ವಾಸನಿಗೆ ನೀಡಿದರೆಂದರ್ಥ.

ಶ್ರೀಭೂದುರ್ಗೇ ಎಂಬ ಮೂರು ರೂಪವುಳ್ಳವಳಾದರೂ ಒಂದೇ ಅಂಶದವಳು. ಅಂಶದಿಂದಲೂ ಭೇದರಹಿತಳು.

## ಕಂಸನ ಪ್ರಾಯಶ್ಚಿತ್ತ

**ತಸ್ಯಾಂ ಗತಾಯಾಂ ಕಂಸಸ್ತು ತಾಂ ಮೇನೇ ಮೃತ್ಯು ಮಾತ್ಮನಃ ।**
**ವಿವಿಕ್ತೇ ದೇವಕೀಂ ಚೈವ ವ್ರೀಡಿತಃ ಸಮಭಾಷತ ॥ 34 ॥**

**ಮೃತ್ಯೋ ಸ್ವಸಃ ಕೃತೋ ಯತ್ನಸ್ತವ ಗರ್ಭಾ ಮಯಾ ಹತಾಃ ।**
**ಅನ್ಯ ಏವಾನ್ಯತೋ ದೇವಿ ಮಮ ಮೃತ್ಯುರುಪಸ್ಥಿತಃ ॥ 35 ॥**

**ನೈರಾಶ್ಯೇನ ಕೃತೋ ಯತ್ನಃ ಸ್ವಜನೇ ಪ್ರಹೃತಂ ಮಯಾ ।**
**ದೈವಂ ಪುರುಷಾಕಾರೇಣ ನ ಚಾತಿಕ್ರಾಂತವಾನಹಮ್ ॥ 36 ॥**

ದುರ್ಗೆಯು ಹೊರಟು ಹೋದ ಮೇಲೆ ಕಂಸನು ಇವಳೇ ನನಗೆ ಮೃತ್ಯು ಎಂದು ತಿಳಿದು ನಾಚಿಕೆಯಿಂದ ತಲೆ ತಗ್ಗಿಸಿ ಹೀಗೆಂದನು.

ತಂಗಿ ದೇವಕಿಯೇ! ನನಗೆ ಬರಲಿರುವ ಸಾವನ್ನು ತಪ್ಪಿಸಲು ನಾನು ನಿನ್ನೆಲ್ಲ ಹಸುಗೂಸುಗಳನ್ನೆಲ್ಲ ಕಟುಕನಂತೆ ಕೊಂದು ಹಾಕಿದೆ. ಆದರೆ ನನ್ನ ಯತ್ನವನ್ನೆಲ್ಲ ವಿಫಲಗೊಳಿಸಿ ಬೇರೆ ಕಡೆಯಿಂದಲೇ ಮೃತ್ಯುವು ನನ್ನ ಬಳಿ ಬರಲಿರುವುದು.

ನನ್ನ ಕಾರ್ಯ ಸಿದ್ಧಿಗಾಗಿ ನಾನು ಕ್ರೌರ್ಯದಿಂದಲೇ ಮಕ್ಕಳ ಹನನ ಕಾರ್ಯವನ್ನು ಮಾಡಿದೆ. ಆದರೆ ದೈವಸಂಕಲ್ಪವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ದೇವಕಿ ನೀನೀಗ ಮಕ್ಕಳನ್ನು ಕಳೆದುಕೊಂಡ ದುಃಖವನ್ನು ಬಿಟ್ಟುಬಿಡು. ನಿನ್ನ ಗರ್ಭಗಳ ನಾಶಕ್ಕೆ ನಾನು ನೆಪ ಮಾತ್ರ. ಕಾಲನಾಮಕ ಶ್ರೀಹರಿಯೇ ಕಾರಣ ಸಮಸ್ತ ಪ್ರಾಣಿಗಳಿಗೂ ಕಾಲನಾಮಕನೆ ಕಾರಣವಾಗಿದ್ದು ನನ್ನಂತಹವರು ನಿಮಿತ್ತ ಮಾತ್ರ ಮಾರಕರು.

## ದೇವಕಿಗೆ ಕಂಸನ ಸಮಾಧಾನ

**ಆಗಮಿಷ್ಯಂತಿ ವೈ ದೇವಿ ಯಥಾಭಾಗಮುಪದ್ರವಾಃ ।**
**ಇದಂ ತು ಕಷ್ಟಂ ಯಜ್ಜಂತುಃ ಕರ್ತಾಹಮಿತಿ ಮನ್ಯತೇ ॥ 37 ॥**

**ಮಾ ಕಾರ್ಷೀಃ ಪುತ್ರಜಾಂ ಚಿಂತಾಂ ವಿಲಾಪಂ ಶೋಕಜಂ ತ್ಯಜ ।**
**ಏವಂ ಪ್ರಾಯೋ ನೃಣಾಂ ಯೋನಿಃ ನಾಸ್ತಿ ಕಾಲಸ್ಯ ಸಂಸ್ಥಿತಿಃ ॥ 38 ॥**

ದೇವಕಿಯೇ ! ತನ್ನ ಭಾಗ್ಯ ಅಥವಾ ಕರ್ಮಗಳಿಗೆ ಅನುಸಾರವಾಗಿ ಉಪದ್ರವಗಳು ಬರುತ್ತಲೇ ಇರುತ್ತದೆ. ಆದರೆ ಮನುಷ್ಯನು ಇಂತಹ ಉಪದ್ರವಗಳಿಗೆ ತಾನೇ ಕಾರಣನೆಂದು ಭಾವಿಸುತ್ತಾನೆ. ಇದೊಂದು ಕಷ್ಟ ಸ್ಥಿತಿ.

ಸೋದರಿ ! ಪುತ್ರರನ್ನು ಕಳೆದುಕೊಂಡದ್ದರಿಂದ ಉಂಟಾಗಿರುವ ಚಿಂತೆಯನ್ನು ದೂರ ಮಾಡಿಕೋ. ಶೋಕಜನ್ಯವಾದ ಈ ಕೊರಗನ್ನು ಪರಿತ್ಯಜಿಸು.

ಇಂತಹ ಶೋಕ ಸಂತಾಪಾದಿಗಳು ಮನುಷ್ಯ ಮಾತ್ರರಿಗೆ ಇದ್ದೇ ಇರುತ್ತದೆ. ಕಾಲವು ಯಾವಾಗಲೂ ನಿಂತಲ್ಲಿಯೇ ನಿಲ್ಲುವುದಿಲ್ಲ. ನಿನಗೂ ಒಳ್ಳೆಯ ಕಾಲ ಬರಲಿದೆ. ಆದ್ದರಿಂದ ದುಃಖಪಡಬೇಡ.

**ಏಷ ತೇ ಪಾದಯೋಃ ಮೂರ್ಧ್ನಾ ಪುತ್ರವತ್ ತವ ದೇವಕಿ ।**
**ಮದ್ಗತಸ್ತಜ್ಯತಾಂ ರೋಷೋ ಜಾನಾಮ್ಯಪಕೃತಂ ತ್ವಯಿ ॥ 39 ॥**
**ಇತ್ಯುಕ್ತವಂತಂ ಕಂಸಂ ಸಾ ದೇವಕೀ ವಾಕ್ಯಮಬ್ರವೀತ್ ।**
**ಸಾಶ್ರುಪೂರ್ಣಮುಖಾ ದೀನಾ ಭರ್ತಾರ ಮುಪವೀಕ್ಷತೀ ॥ 40 ॥**

ಆದ್ದರಿಂದ ಅಕ್ಕ! ನಿನ್ನ ಪಾದಗಳ ಮೇಲೆ ತಲೆಯಿಟ್ಟು ಬೇಡಿಕೊಳ್ಳುತ್ತೇನೆ. ಮಗನಂತೆ ನನ್ನ ತಪ್ಪು ಕ್ಷಮಿಸು. ನನ್ನ ಮೇಲೆ ಕೋಪಗೊಳ್ಳಬೇಡ. ಎಂದು ಅಂಗಲಾಚಿ ಬೇಡಿದ ಕಂಸನ ಮೇಲೆ ದೇವಕಿಯ ಹೃದಯ ಕರಗಿತು. ಕಣ್ಣೀರಿನಿಂದ ತುಂಬಿದ ಮುಖದಿಂದ ದೀನಳಾದ ದೇವಕಿಯು ವಿಷ್ಣ ವದನನಾದ ವಸುದೇವನ ಕಡೆಗೆ ನೋಡಿ, ತನ್ನ ಕಾಲುಗಳ ಮೇಲೆ ಬಿದ್ದು ಕ್ಷಮೆಯಾಚಿಸುತ್ತಿದ್ದ ಕಂಸನಿಗೆ ಎದೆತುಂಬಿ ಕಂಸನೇ! ಏಳು ಎದ್ದೇಳು ಕಂಸ!

## ಕಾಲವೇ ಕಾರಣ ಕಂಸನಲ್ಲ

**ಮಮಾಗ್ರತೋ ಹತಾ ಗರ್ಭಾ ಯೇ ತ್ವಯಾ ಕಾಮರೂಪಿಣಾ ।**
**ಕಾರಣಂ ತ್ವಂ ನ ವೈ ಪುತ್ರ ! ಕೃತಾಂತೋಽಪ್ಯತ್ರ ಕಾರಣಮ್ ॥ 41 ॥**
**ಗರ್ಭೇ ಚ ನಿಯತೋ ಮೃತ್ಯುಃ ಬಾಲ್ಯೇಽಪಿ ನ ನಿವರ್ತತೇ ।**
**ಯುವಾಪಿ ಮೃತ್ಯೋಃ ವಶಗಃ ಸ್ಥವಿರೋ ಮೃತ ಏವ ತು ॥ 42 ॥**

**ಕಾಲಪಕ್ವಮಿದಂ ಸರ್ವಂ ಹೇತುಭೂತಸ್ತು ತ್ವದ್ವಿಧಃ ।**
**ಅಜಾತೇ ದರ್ಶನಂ ನಾಸ್ತಿ ಯಥಾ ವಾಯುಃ ತಥೈವ ಚ ॥ 43 ॥**

ಕಂಸ ! ನನ್ನ ಕಣ್ಣೆದುರಿಗೇ ನೀನು ನನ್ನ ಎಲ್ಲಾ ಮಕ್ಕಳನ್ನು ಶಿಲೆಗಪ್ಪಳಿಸಿ ಕೊಂದವನು ನೀನೇ ಆದರೂ, ನೀನೊಬ್ಬನೇ ಕಾರಣವಲ್ಲ ಮೃತ್ಯುವೂ ಇದಕ್ಕೆ ಕಾರಣವಾಗಿದೆ. ಗರ್ಭದಲ್ಲಿ ಜೀವ ಬಿದ್ದ ಕೂಡಲೇ ಅದಕ್ಕೆ ಮೃತ್ಯುವೆಂಬುದು ನಿಶ್ಚಿತವಾಗಿರುತ್ತದೆ. ಬಾಲ್ಯಾವಸ್ಥೆಯಲ್ಲಿಯೂ ಮೃತ್ಯುವು ದೂರವಾಗಿ ಬಿಡುವುದಿಲ್ಲ. ಯುವಕನು ಮೃತ್ಯುವಿಗೆ ವಶನೇ ಆಗಿರುತ್ತಾನೆ. ವೃದ್ಧಾಪ್ಯ ಬಂದಿತೆಂದರೆ ಅವನು ಮೃತಪ್ರಾಯನೇ ಸರಿ. ಈ ಸಕಲ ಜಗತ್ತನ್ನೂ ಕಾಲವೆ ಪಕ್ವಗೊಳಸುತ್ತದೆ. ನಿನ್ನಂತಹವರು ನಿಮಿತ್ತ ಮಾತ್ರ. ಗರ್ಭವು ಹುಟ್ಟದೆಯೇ ಇದ್ದಿದ್ದರೆ ಅದನ್ನು ನೋಡಲು ಸಾಧ್ಯವಾಗುತ್ತಲೇ ಇರಲಿಲ್ಲ. ಸರ್ವತ್ರ ವಾಯುವಿದ್ದೂ ಅದನ್ನು ನಾವು ನೋಡಲಾಗುವುದಿಲ್ಲ. ಮಗು ಹುಟ್ಟಿದರೂ ಅದು ಮೃತವಾದರೆ ಹುಟ್ಟಿದಿದ್ದಂತೆಯೇ ಭಾಸವಾಗುತ್ತದೆ. ಹುಟ್ಟದಿದ್ದರೇ ತೋರುವುದೇ ಇಲ್ಲ. ಮೊದಲು ಅದೃಶ್ಯವಾಗಿರುತ್ತದೆ. ವಿಧಾತನು ಎಲ್ಲಿಗೆ ಒಯ್ಯೊವನೋ ಅಲ್ಲಿಗೆ ಹೊರಟು ಹೋಗಬೇಕು. ಕಂಸನೇ! ನೀನು ಹೋಗಿ ಬಾ ! ಮೃತ ಮಕ್ಕಳ ದುಃಖದಿಂದ ನನ್ನ ಹೃದಯದಲ್ಲಿ ಉಂಟಾಗಿರುವ ದುಃಖದ ಬಗೆಗೆ ನೀನು ಯೋಚಿಸಬೇಡ.

**ಮೃತ್ಯುನಾ ಪ್ರಹೃತೇ ಪೂರ್ವಂ ಶೇಷೋ ಹೇತುಃ ಪ್ರವರ್ತತೇ ।**
**ವಿಧಿನಾ ಪೂರ್ವದೃಷ್ಟೇನ ಪ್ರಜಾಸರ್ಗೇಣ ತತ್ತ್ವತಃ ।**
**ಮಾತಾಪಿತ್ರೋಸ್ತು ಕಾರ್ಯೇಣ ಜನ್ಮತಸ್ತೂಪಪದ್ಯತೇ ॥ 44 ॥**

ಮೊದಲು ಮೃತ್ಯುವೇ ಚೇತನನನ್ನು ಪ್ರಹರಿಸುತ್ತದೆ. ಇತರರು ಕಾರಣಗಳಾಗಿ ಘಟಿಸುತ್ತವೆ. ವಸ್ತುತಃ ನೋಡಿದರೆ ಅದೃಷ್ಟ, ಜನ್ಮಾಂತರದ ಕರ್ಮಗಳು, ಸೃಷ್ಟಿಕರ್ತನ ಸಂಕಲ್ಪ, ಮಾತಾಪಿತೃಗಳ ಕರ್ಮ, ಇವುಗಳಿಂದ ಮೊದಲೇ ಮೃತ್ಯುವು ನಿಶ್ಚಿತವಾಗಿರುತ್ತದೆ.

ಇಂತಹ ಅನೇಕ ಕಾರಣಗಳಲ್ಲಿ ಯಾವುದಾದರೂ ನನ್ನ ಮಕ್ಕಳು ಹುಟ್ಟಿದೊಡನೆ ಮೃತವಾಗಿರಬಹುದು. ಕಾಲನು ನಿನ್ನನ್ನು ನಿಮಿತ್ತವನ್ನಾಗಿ ಮಾಡಿ-ಕೊಂಡಿರುವನೆ ಹೊರತು ನಿನ್ನಲ್ಲಿ ಯಾವ ದೋಷವೂ ಇಲ್ಲ ಎಂದಳು.

**ನಿಶಮ್ಯ ದೇವಕೀ ವಾಕ್ಯಂ ಸಃ ಕಂಸಃ ಸ್ವಂ ನಿವೇಶನಮ್ ।**
**ಪ್ರವಿವೇಶ ಸಸಂರಬ್ಧೋ ದಹ್ಯಮಾನೇನ ಚೇತಸಾ ।**
**ಕೃತ್ಯೇ ಪ್ರತಿಹತೇ ದೀನೋ ಜಗಾಮ ವಿಮನಾ ಭೃಶಮ್ ॥ 45 ॥**

ದೇವಕಿಯ ಮಾತನ್ನು ಕೇಳಿದ ಕಂಸನು – ತನ್ನ ಪ್ರಯತ್ನ ಫಲಿಸದೆ ಇದದ್ದಕ್ಕಾಗಿ ಮನಸ್ಸಿನಲ್ಲಿ ಪರಿತಪಿಸುತ್ತಾ ತನ್ನ ಅರಮನೆಗೆ ಹೊರಟನು. ತನ್ನ ಕೃಷ್ಣ ಹನನವಾಗದೆ ತನಗೆ ಮೃತ್ಯುವು ಅಪರಿಹಾರ್ಯವೆಂದು ದುರ್ಗೆಯು ಹೇಳಿದ್ದರಿಂದ ಚಿಂತಾಗ್ನಿಯು ಚಿತಾಗ್ನಿಯಂತೆ ದಹಿಸುತ್ತಿತ್ತು. ಶೀಘ್ರವಾಗಿ ತನ್ನ ಅರಮನೆಗೆ ಸೇರಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶ್ರೀಕೃಷ್ಣ ಜನ್ಮ –ದುರ್ಗಾಜನ್ಮವೆಂಬಲ್ಲಿ
ನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 05 ವಿಷ್ಣುಪರ್ವ

# ಅಥ ಪಂಚಮೋಽಧ್ಯಾಯಃ

## ನಂದನ ಮಥುರಾ ಪ್ರಯಾಣ

*ವೈಶಂಪಾಯನ ಉವಾಚ–*

**ಪ್ರಾಗೇವ ವಸುದೇವಸ್ತು ವ್ರಜೇ ಶುಶ್ರಾವ ರೋಹಿಣೀಮ್ ।**
**ಪ್ರಜಾತಾಂ ಪುತ್ರಮೇವಾಗ್ರೇ ಚಂದ್ರಾತ್ ಕಾಂತತರಾನನಮ್ ॥ 1 ॥**

**ಸ ನಂದಗೋಪಂ ತ್ವರಿತಃ ಪ್ರೋವಾಚ ಶುಭಯಾ ಗಿರಾ ।**
**ಗಚ್ಛಾನಯಾ ಸಹೈವ ತ್ವಂ ವ್ರಜಮೇವ ಯಶೋದಯಾ ॥ 2 ॥**

**ತತ್ರ ತೌ ದಾರಕೌ ಗತ್ವಾ ಜಾತಕರ್ಮಾದಿಭಿಃ ಗುಣೈಃ ।**
**ಯೋಜಯಿತ್ವಾ ವ್ರಜೇ ತಾತ ಸಂವರ್ಧಯ ಯಥಾಸುಖಮ್ ॥ 3 ॥**

ನಂದಗೋಪನು ಒಂದು ದಿನ ಯಶೋದೆಯೊಂದಿಗೆ ಕಂಸನಿಗೆ ಕರವನ್ನು ಕೊಡಲೆಂದು ಮಥುರಾಪುರಿಗೆ ಹೊರಟನು. ತಾನು ಬರುವವರೆಗೂ ಗೋವುಗಳನ್ನು ರಕ್ಷಿಸಲು ಗೋಪಾಲಕರಿಗೆ ಹೇಳಿ ಬಂದಿದ್ದನು.

ನಂದನು ಮಥುರೆಗೆ ಬಂದ ವರ್ತಮಾನವನ್ನು ಕೇಳಿದ ವಸುದೇವನು ಅವನನ್ನು ಭೇಟಿಯಾದನು. ತನ್ನ ಮಕ್ಕಳಾದ ಬಲರಾಮ ಕೃಷ್ಣನ ಯೋಗಕ್ಷೇಮ ವಿಚಾರಿಸಿದನು. ದೇವರನುಗ್ರಹದಿಂದ ನಿನಗೆ ಈ ವಯಸ್ಸಿನಲ್ಲಾದರೂ ಅತ್ಯುತ್ತಮ ಮುತ್ತಿನಂತಹ ಮಗ ಹುಟ್ಟಿದ್ದಕ್ಕಾಗಿ ನಂದನನ್ನು ಅಭಿನಂದಿಸಿದನು. ನಂದನು ಒಂದು ತಿಂಗಳ ಕಾಲ ಯಮುನಾ ತೀರದಲ್ಲಿದ್ದು ನಂತರ ಕಂಸನಿಗೆ ಕಾಣಿಕೆ ಕೊಡಲು ಹೊರಟ. ಕರ ನೀಡಿದ.

ಅಲ್ಲಿ ವಸುದೇವ ನಂದನನ್ನು ನೋಡಿ, ನಂದನೇ, ಬೇಗನೇ ಗೋಕುಲಕ್ಕೆ ಹಿಂತಿರುಗು. ಅನೇಕ ಉತ್ಪಾತಗಳಾಗುತ್ತಿದೆ. ಕಂಸನು ಎಲ್ಲ ಮಕ್ಕಳನ್ನು ಕೊಲ್ಲುತ್ತಿದ್ದಾನೆ. ನೀನು ಬೇಗ ಹೋಗು ಎಂದಾಗ ರಾತ್ರಿಯೇ ನಂದನು ಗೋಕುಲಕ್ಕೆ ಹಿಂತಿರುಗಿದ. ನನ್ನ ಹಾಗೂ ನಿನ್ನ ಮಕ್ಕಳಾದ ರಾಮಕೃಷ್ಣರಿಗೆ ಕ್ಷತ್ರಿಯ ಕುಲೋಚಿತ ಜಾತಕರ್ಮಾದಿ ಸಂಸ್ಕಾರಗಳಿಂದ ಸಂಸ್ಕರಿಸಿ, ಪಾಲನೆ-ಪೋಷಣೆ ಮಾಡು.

## ನಂದ-ವಸುದೇವರ ಭೇಟಿ

**ರೌಹಿಣೇಯಂ ಚ ಪುತ್ರಂ ಮೇ ಪರಿರಕ್ಷ ಶಿಶುಂ ವ್ರಜೇ ।**
**ಅಹಂ ವಾಚ್ಯೋ ಭವಿಷ್ಯಾಮಿ ಪಿತೃ ಪಕ್ಷೇಷು ಪುತ್ರಿಣಾಮ್ ॥ 4 ॥**
**ಯೋಽಹ ಮೇಕಸ್ಯ ಪುತ್ರಸ್ಯ ನ ಪಶ್ಯಾಮಿ ಶಿಶೋಃ ಮುಖಮ್ ।**
**ಹ್ರಿಯತೇ ಹಿ ಬಲಾತ್ ಪ್ರಜ್ಞಾ ಪ್ರಾಜ್ಞಸ್ಯಾಪಿ ಸತೋ ಮಮ ॥ 5 ॥**
**ಅಸ್ಮಾದ್ಧಿ ಮೇ ಭಯಂ ಕಂಸಾತ್ ನಿರ್ಘೃಣಾ ವೈ ಶಿಶೋರ್ವಧೇ ।**
**ವಿಘ್ನಾ ಹಿ ಬಹವೊ ಲೋಕೇ ಬಾಲಾನುತ್ತ್ರಾಸಯಂತಿ ಹಿ ।**
**ಉಭಾವಪಿ ಸಮಂ ನಾಮ್ನಾ ನಿರೀಕ್ಷಸ್ವ ಯಥಾ ಸುಖಮ್ ॥ 6 ॥**
**ವರ್ಧಮಾನಾವುಭಾವೇತೌ ಸಮಾನ ವಯಸೌ ಯಥಾ ।**
**ಶೋಭೇತಾಂ ಗೋವ್ರಜೇ ತಸ್ಮಿನ್ ನಂದಗೋಪ ತಥಾ ಕುರು ॥ 7 ॥**

ನಂದನೇ, ರೋಹಿಣಿಯ ಗರ್ಭಜಾತನಾದ ಬಲರಾಮನನ್ನು ರಕ್ಷಿಸು. ನಾನಾದರೂ ತಂದೆಯ ಕಡೆಯಲ್ಲಿರುವ ಪುತ್ರವಂತರಿಂದ ಅಪುತ್ರವಂತವೆಂಬ ನಿಂದೆಗೆ ಗುರಿಯಾಗುತ್ತೇನೆ. ಹೀಗಾಗಿ ನಾನು ಇದುವರೆಗೂ ನನ್ನ ಒಂದು ಶಿಶುವಿನ ಮುಖವನ್ನು ನೋಡಿರುವುದಿಲ್ಲ.

ಮಿತ್ರ ನಂದನೇ, ಸುಖದುಃಖಗಳು, ಸಂಯೋಗ-ವಿಯೋಗಗಳು ಪ್ರಾರಬ್ಧದ ಕಾರಣದಿಂದಾಗಿಯೆ ಸಂಭವಿಸುತ್ತದೆ ಎಂಬುದು ನನಗೆ ತಿಳಿದಿದೆ. ಆದರೂ ನಿರಂತರವಾದ ಭಯವು ನನ್ನಂತಹ ಪ್ರಜ್ಞಾವಂತನ ಬುದ್ಧಿಯನ್ನೂ ಅಪಹರಿಸುತ್ತದೆ. ಮಕ್ಕಳನ್ನೆಲ್ಲ ನಿರ್ದಯವಾಗಿ ಕೊಂದು ಹಾಕುತ್ತಿರುವಾಗ ಅದರಿಂದ ಭಯವು ನನ್ನನ್ನು ಕಾಡುತ್ತಿದೆ. ನನ್ನ ಮಗ ರೌಹಿಣೇಯನನ್ನು ಯಾವ ಉಪಾಯದಿಂದ ರಕ್ಷಿಸುವೆಯೋ ಆ ಉಪಾಯದಿಂದ ರಕ್ಷಿಸು. ನೀನು

ಪುತ್ರ ವಾತ್ಸಲ್ಯದಿಂದ ಸಲಹುತ್ತಿದ್ದರೂ ಶಿಶುಗಳಿಗೆ ಪೀಡೆ ಹೆಚ್ಚಾಗಿ ಬಾಲೋಪದ್ರವ ಬೆಳೆದು ಮಕ್ಕಳು ಬೆಳೆಯುವುದೇ ಕಷ್ಟವಾಗುತ್ತದೆ. ನಂದಗೋಪನೇ! ನಿನ್ನ ಮಗನು ದೊಡ್ಡವನು, ನನ್ನ ಮಗನು ಕಿರಿಯ. ಇಬ್ಬರನ್ನೂ ಸಮಾನ ದೃಷ್ಟಿಯಿಂದ ನೋಡುತ್ತಾ ಇರು. ಇವರಿಬ್ಬರ ಹೆಸರೂ ಸಮಾನ ಅರ್ಥ ನೀಡುವಂತಿರಬೇಕು. ಇಬ್ಬರೂ ವಯಸ್ಸಿನಲ್ಲಿ ಪ್ರಾಯಶಃ ಸಮಾನರೇ. ಇಬ್ಬರೂ ಜೊತೆಜೊತೆಯಾಗಿದ್ದು ಗೋಕುಲವನ್ನು ಶೋಭಾಯಮಾನವಾಗುವಂತೆ ಮಾಡಲಿ.

## ಮಕ್ಕಳ ರಕ್ಷಣೆ ಬಗ್ಗೆ ಎಚ್ಚರಿಕೆ

**ಬಾಲ್ಯೆ ಕೇಲಿಕಿಲಃ ಸರ್ವೋ ಬಾಲ್ಯೇ ಮುಹ್ಯತಿ ಮಾನವಃ ।**
**ಬಾಲ್ಯೇ ಚಂಡತಮಃ ಸರ್ವಃ ತತ್ರ ಯತ್ನಪರೋ ಭವ ॥ 8 ॥**

**ನಚ ವೃಂದಾವನೇ ಕಾರ್ಯೋ ಗವಾಂ ಘೋಷಃ ಕಥಂಚನ ।**
**ಭೇತವ್ಯಂ ತತ್ರ ವಸತಃ ಕೇಶಿನಃ ಪಾಪದರ್ಶಿನಃ ॥ 9 ॥**

ಆದರೆ ಮಕ್ಕಳು ಬಾಲ್ಯದಲ್ಲಿ ಕಿಡಿಗೇಡಿಗಳಾಗಿರುವುದು ಸ್ವಾಭಾವಿಕ. ಯಾವಾಗಲೂ ಆಟಪಾಠಗಳಲ್ಲಿಯೇ ಮನಸ್ಸು ಲೀನವಾಗಿರುತ್ತದೆ. ಬಾಲ್ಯಾವಸ್ಥೆಯೆಂದರೆ ಅದೊಂದು ಮೋಹಾವಸ್ಥೆ. ನಮ್ಮ ಚಪಲ ಬಾಲಕರ ಬಗ್ಗೆ ನೀನು ಜಾಗ್ರತೆವಹಿಸು.

ಅಲ್ಲಿಯೆ ಸಮೀಪದಲ್ಲಿರುವ ವೃಂದಾವನದಲ್ಲಿ ಮಾತ್ರ ಎಂದಿಗೂ ದನಗಳ ಹಟ್ಟಿ ನಿರ್ಮಿಸಬೇಡ. ಅಲ್ಲಿಯೇ ಭಯಂಕರವಾದ ಕೇಶೀ ದೈತ್ಯನಿರುವನು. ಇದರಂತೆ ಹಾವು-ಚೇಳು, ಪಶುಪಕ್ಷಿ, ಕ್ರಿಮಿ-ಕೀಟಗಳಿಂದಲೂ ಹಾಗೂ ಗೋಷ್ಠದಲ್ಲಿಯೆ ಇರುವ ಕರುಗಳು, ಗರ್ವಿಷ್ಠ ಗೂಳಿಗಳಿಂದಲೂ ಬಹಳ ಎಚ್ಚರಿಕೆ ವಹಿಸಬೇಕು. ರಾತ್ರಿ ಕಳೆಯುತ್ತಿದೆ, ಹಗಲು ಹರಿಯುತ್ತಿದೆ. ನೀನು ಬೇಗನೆ ಗೋಕುಲ ಸೇರು. ಪಕ್ಷಿಗಳೆಲ್ಲ ತಮ್ಮ ಚಿಲಿಪಿಲಿ ಧ್ವನಿಯಿಂದ ನಿನಗೆ ಮಂಗಳಾಶಂಸನ ಮಾಡುತ್ತಿವೆ. ಎಂದು ಉಪದೇಶಿಸುತ್ತಾ ಸ್ನೇಹದಿಂದ ಬೀಳ್ಕೊಟ್ಟನು

## ನಂದನ ಗೋಕುಲಕ್ಕೆ ಪ್ರಯಾಣ

ನಂದನು ವಸುದೇವನಿಂದ ಕೆಲವು ರಹಸ್ಯ ವಿಷಯಗಳನ್ನು ತಿಳಿದುಕೊಂಡನು.

ನಂತರ ನಂದಗೋಕುಲಕ್ಕೆ ಹೊರಟನು. ಹಾಗೂ ಭೋಯಿಗಳು ಒಯ್ಯುವ ಚಿಕ್ಕಮೇನೆಯಲ್ಲಿ ಮೆತ್ತಗಿನ ಹಾಸಿಗೆಯಲ್ಲಿ ಶ್ರೀಕೃಷ್ಣನನ್ನು ಮೆಲ್ಲಗೆ ಮಲಗಿಸಿ, ಯಮುನಾ ತೀರದ ತಂಪಾದ ಗಾಳಿ ಬೀಸುವ ಜನರ ಗದ್ದಲವಿಲ್ಲದ ನಂದನು ಪ್ರಯಾಣ ಮಾಡಿದನು. ಹೀಗೆ ಪ್ರಯಾಣ ಮಾಡುತ್ತಾ ಗೋವರ್ಧನ ಪರ್ವತದ ಸಮೀಪವಿರುವ ತಂಪಾದ ಗಾಳಿಯಿಂದ ಸೇವಿಸಲ್ಪಡುತ್ತಿದ್ದ ಶುಭಪ್ರದೇಶದಲ್ಲಿ ಗೋವುಗಳ ಗುಂಪನ್ನು ನೋಡಿದನು. ಆ ನಂದಗೋಕುಲವು ನದಿಯ ನೀರಿನ ತುಂತುರು ಹನಿಗಳಿಂದ ಸ್ನಾನ ಮಾಡಿದಂತೆಯೂ, ಹಕ್ಕಿಗಳ ಚಿಲಿಪಿರವದಿಂದಲೂ ಕರುಲ ಹಂಬಾರವದಿಂದಲೂ, ತುರುಹಾಗಿ ಬಾಲಕರ ಕೊಳಲು ನಾದದಿಂದಲೂ ಎತ್ತುಗಳಿಗೆ ಕಟ್ಟಿದ ಗಂಟೆಗಳ ನಾದದಿಂದಲೂ ನೀರು ತರಲು ಹೊರಟಿದ್ದ ನಾರಿಯರ ಕಂಕಣಗಳಿಂದಲೂ ಶಬ್ಧಾಯ-ಮಾನವಾಗಿತ್ತು.

ಹುಲ್ಲು ಮೇಯುತ್ತಿದ್ದ ಹಸುಗಳು, ಸಮತಟ್ಟಾದ ಪ್ರದೇಶಗಳು, ಎತ್ತುಗಳ ಹೆಗಲುಗಳಿಂದಲೂ ಕೊಂಬುಗಳಿಂದಲೂ ಅಲ್ಲಿರುವ ವೃಕ್ಷಗಳು ಉಜ್ಜಲ್ಪಟ್ಟಂತೆ ತೋರುತ್ತಿತ್ತು. ರಣಹದ್ದುಗಳು, ಮಾಂಸಪ್ರಿಯ ಕಾಡುಬೆಕ್ಕುಗಳು, ಪಕ್ಷಿಗಳು, ಪ್ರಾಣಿಗಳ ಮೇದಸ್ಸು ಮಾಂಸ ತಿನ್ನಲು ಹವಣಿಸುತ್ತಿದ್ದ ಗುಳ್ಳೆ ನರಿಗಳಿಂದ ಕೂಡಿದ್ದಿತು. ಕರುಗಳನ್ನು ಕಟ್ಟಿ ಹಾಕಲು ನೆಟ್ಟಿರುವ ಗೂಟಗಳು, ನೆಲವನ್ನು ಸೆಗಣಿಯಿಂದ ಸಾರಿಸಿ ಬಳಿದು ಅಲಂಕರಿಸಲಾಗಿತ್ತು. ಹುಲ್ಲಿನ/ಬಿದಿರಿನ ಚಾಪೆಗಳನ್ನು ಕೂಡಲು ಹಾಸಿದ್ದರು. ಹೃಷ್ಟರೂ ಪುಷ್ಟರೂ ಆದ ಗೋಪಾಲಕರಿಂದ ವ್ರಜವು ತುಂಬಿತ್ತು. ಮೊಸರನ್ನು ಕಡೆಯುವಾಗ ಗರ್ಗರ ಶಬ್ಧವು ಕೇಳಿ ಬರುತ್ತಿತ್ತು. ಮಜ್ಜಿಗೆ ತುಂಬಿ ತುಳುಕುತ್ತಿತ್ತು. ಕಡೆಯುವಾಗ ಚೀಳುತ್ತಿದ್ದ ಮೊಸರಿನ ನೊರೆಯಿಂದ ನೆಲವು ಒದ್ದೆಯಾಗಿತ್ತು. ಕಡೆಯುವಾಗ ಕೈಬಳೆಗಳ ಕಣ ಕಣ ಶಬ್ಧ ಮಾಡುತ್ತಿದ್ದವು. ಗೋಪಾಲಕರ ಮಕ್ಕಳಿಂದ ಆಟದ ಮೈದಾನ ತುಂಬಿಹೋಗಿತ್ತು. ತುಪ್ಪದಲ್ಲಿ ತಿಂಡಿಗಳನ್ನು ಕರಿಯುತ್ತಿದ್ದರಿಂದ ಘಮ್ಮನೆ ವಾಸನೆ ಹರಡಿತ್ತು. ನೀಲಿ ಹಳದಿ ಸೀರೆ ಧರಿಸಿ, ಕಾಡು ಹೂಗಳನ್ನು ಮುಡಿದ ಸ್ತ್ರೀಯರು ಕಂಚುಕಗಳಿಂದ ಸ್ತನಗಳನ್ನು ಬಿಗಿದು, ತಲೆಯ ಮೇಲೆ ನೀರಿನ ಬಿಂದಿಗೆ ಹೊತ್ತು ಯಮುನೆಯ ನೀರು ತರಲು ಹೋಗುತ್ತಿದ್ದ ಸ್ತ್ರೀ ಕೂಟದಿಂದ ತುಂಬಿತ್ತು.

## ನಂದನ ನಂದಗೋಕುಲ ಪ್ರದೇಶ

**ಸ ತತ್ರ ಪ್ರವಿಶನ್ ಹೃಷ್ಟೋ ಗೋವ್ರಜಂ ಗೋಪನಾದಿತಮ್ ।**
**ಪ್ರತ್ಯುದ್ಗತೋ ಗೋಪವೃದ್ಧೈಃ ಸ್ತ್ರೀಭಿಃ ವೃದ್ಧಾಭಿರೇವ ಚ ॥ 10 ॥**

**ನಿವೇಶಂ ರೋಚಯಾಮಾಸ ಪರಿವರ್ತೇ ಸುಖಾಶ್ರಯೇ ।**
**ಸಾ ಯತ್ರ ರೋಹಿಣೀದೇವೀ ವಸುದೇವ ಸುಖಾವಹಾ ॥ 11 ॥**

**ತತ್ರ ತಂ ಬಾಲಸೂರ್ಯಾಭಂ ಕೃಷ್ಣಂ ಗೂಢಂ ನ್ಯವೇಶಯತ್ ॥ 12 ॥**

ನಂದನು ಹಚ್ಚ ಹಸಿರಿನ ಪಚ್ಚೆ ಪೈರಿನ ನಾಡಾದ ಗೋಕುಲಕ್ಕೆ ಬರುತ್ತಿದ್ದಂತೆ ಅಲ್ಲಿರುವ ಗೋಪಾಲಕರ ಹಿರಿಯರೆಲ್ಲರೂ, ಗೋವುಗಳು, ಕರುಗಳು, ಯುವಕ ಯುವತಿಯರೊಂದಿಗೆ ಮುಂದೆ ಬಂದು ಆದರದಿಂದ ಎದುರುಗೊಂಡು ಸ್ವಾಗತ ಕೋರಿದರು. ನಂದನು ಮನೆಗೆ ಬಂದು ವಸುದೇವನ ಪ್ರೀತಿಯ ಪತ್ನಿಯಾದ ರೋಹಿಣಿಯು ಅಲ್ಲಿಯೇ ಇದ್ದಳು. ತನ್ನ ಮಗು ಶ್ರೀಕೃಷ್ಣನನ್ನು ಅಲ್ಲಿಯೇ ರಹಸ್ಯವಾಗಿರಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ನಂದನ ಗೋಕುಲ ಪ್ರವೇಶವೆಂಬಲ್ಲಿ
ಐದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 06 ವಿಷ್ಣುಪರ್ವ

# ಅಥ ಷಷ್ಠೋಽಧ್ಯಾಯಃ

## [1]ಶಕಟಾಸುರ ವಧೆ

*ವೈಶಂಪಾಯನ ಉವಾಚ–*

ತತ್ರ ತಸ್ಯಾಸತಃ ಕಾಲಃ ಸುಮಹಾನ್ ಅತ್ಯವರ್ತತ ।

ಗೋವ್ರಜೇ ನಂದಗೋಪಸ್ಯ ಬಲ್ಲವತ್ವಂ ಪ್ರಕುರ್ವತಃ ॥ 1 ॥

ದಾರಕೌ ಕೃತನಾಮಾನೌ ವವೃಧಾತೇ ಸುಖಂ ಚ ತೌ ।

ಜ್ಯೇಷ್ಠಃ ಸಂಕರ್ಷಣೋ ನಾಮ ಕನೀಯಾನ್ ಕೃಷ್ಣ ಏವ ತು ॥ 2 ॥

ಮೇಘ ಕೃಷ್ಣಸ್ತು ಕೃಷ್ಣೋಽಭೂತ್ ದೇಹಾಂತರಗತೋ ಹರಿಃ ।

ಜನಮೇಜಯನೇ! ಗೋಕುಲದಲ್ಲಿ ವಾಸ ಮಾಡುತ್ತಾ ಗೋಪಾಲಕನ

---

1. ಶಕಟಾಸುರ ವಧ :

ತದಾ ಶಯಾನಃ ಶಕಟಸ್ಯ ಸೋಽಧಃ ಪದಾಽಕ್ಷಿಪತ್ ತಂ ದಿತಿಜಂ ನಿಹಂತುಮ್ ।

ಅನಃ ಸಮಾವಿಶ್ಯ ದಿತೇಃ ಸುತೋಽಸೌ ಸ್ಥಿತಃ ಪ್ರತೀಪಾಯ ಹರೇಃ ಸುಪಾಪಃ ॥

ಕ್ಷಿಪ್ತೋಽನಸಿಸ್ಥಃ ಶಕಟಾಕ್ಷನಾಮಾ ಸ ವಿಷ್ಣುನೇತ್ರಾಸಹಿತಃ ಪಪಾತ ।

ಮಮಾರ ಚಾರು ಪ್ರತಿಭಗ್ನ ಗಾತ್ರೋ ವ್ಯತ್ಯಸ್ತ ಚಕ್ರಾಕ್ಷ ಮಭೂದನಶ್ಚ ॥ *–ತಾ.ನಿ. 12/ 90*

2) ಪದತಲ ವಿದಲಿತ ಗುರುತರ ಶಕಟಃ । – *ಕಂ. ಸ್ತುತಿ*

3) ಅಧುನೋಚ್ಛಕಟಂ ಲೋಲೀ ಪಾದಾಂಗುಷ್ಠೇನ ವಾತಪೇಶ ಶಕಟಂ ಲೋಲೀ । – *ಯ ಭಾ. 3*

ಕೆಲಸವನ್ನು ಮಾಡುತ್ತಿದ್ದ ನಂದಗೋಪನಿಗೆ ಅಲ್ಲಿಯೇ ಬಹಳ ದಿವಸಗಳು ಕಳೆದು ಹೋದವು. ವಸುದೇವನ ನಿರ್ದೇಶದಿಂದಾಗಿ ನಂದನು ಇಬ್ಬರೂ ಮಕ್ಕಳನ್ನೂ ಚೆನ್ನಾಗಿ ಪಾಲಿಸುತ್ತಿದ್ದನು. ಹಿರಿಯ ಮಗನಿಗೆ ಸಂಕರ್ಷಣನೆಂದು, ಕಿರಿಯ ಮಗುವಿಗೆ ಕೃಷ್ಣನೆಂದೂ ನಾಮಕರಣ ಮಾಡಿದ್ದನು. ಶ್ರೀಹರಿಯೆ ಅಪ್ರಾಕೃತ ಶರೀರವನ್ನು ಹೊಂದಿ ಶ್ರೀಕೃಷ್ಣನೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದ.

**ಶಕಟಸ್ಯ ತ್ವಧಃ ಸುಪ್ತಂ ಕದಾಚಿತ್ ಪುತ್ರಗೃದ್ಧಿನೀ ।**
**ಯಶೋದಾ ತಂ ಸಮುತ್ಸೃಜ್ಯ ಜಗಾಮ ಯಮುನಾಂ ನದೀಮ್ ॥ 3 ॥**
**ಶಿಶುಲೀಲಾಂ ತತಃ ಕುರ್ವನ್ ಸ ಹಸ್ತ ಚರಣೌ ಕ್ಷಿಪನ್ ।**
**ರುರೋದ ಮಧುರಂ ಕೃಷ್ಣಃ ಪಾದೌ ಊರ್ಧ್ವಂ ಪ್ರಸಾರಯನ್ ॥ 4 ॥**
**ಸ ತತ್ರೈಕೇನ ಪಾದೇನ ಶಕಟಂ ಪರ್ಯವರ್ತಯತ್ ।**
**ನ್ಯುಬ್ಜಂ ಪಯೋಧರಾಕಾಂಕ್ಷೀ ಚಕಾರ ಚ ರುರೋದ ಚ ॥ 5 ॥**

ಒಂದು ದಿನ ಪುತ್ರ ವತ್ಸಲೆಯಾದ ಯಶೋದೆಯು ಮನೆಯಲ್ಲಿ ಬಹಳ ಕೆಲಸವಿತ್ತು. ಇದಕ್ಕಾಗಿ ಶ್ರೀಕೃಷ್ಣನನ್ನು ಒಂದು ಗಾಡಿಯ ಕೆಳಗೆ ಮಲಗಿಸಿದ್ದಳು ಅವನು ಏಳುವುದರೊಳಗಾಗಿ ನದಿಗೆ ಹೋಗಿ ವಸ್ತ್ರ ಪ್ರಕ್ಷಾಲನಾದಿ ಕಾರ್ಯ ಮುಗಿಸಲೆಂದು ಯಮುನಾ ನದಿಗೆ ಹೋಗಿದ್ದಳು. ಆ ಸಮಯದಲ್ಲಿ ಎಚ್ಚರಗೊಂಡ ಕೃಷ್ಣನು ಕೈಕಾಲುಗಳನ್ನು ಮೇಲಕ್ಕೂ ಕೆಳಕ್ಕೂ ಆಚೆಈಚೆ ಅಲ್ಲಾಡಿಸುತ್ತಾ ಬಾಲಲೀಲೆಯನ್ನು ತೋರುತ್ತಿದ್ದನು. ಆಡುವ ಮಕ್ಕಳು ಇವನನ್ನು ನೋಡುತ್ತಿದ್ದರು. ಮರುಕ್ಷಣದಲ್ಲಿಯೇ ತನ್ನೆರಡೂ ಕಾಲುಗಳನ್ನು ಮೇಲೆತ್ತಿ ಮೆಲ್ಲಗೆ ಅಳಲಾರಂಭಿಸಿದನು. ಮಗುವಿಗೆ ಹಸಿವೆ ಆಗಿದ್ದಿತು.

ತಾಯಿಯ ಹಾಲನ್ನು ಬಯಸಿ ಅಳಲಾರಂಭಿಸಿದನು. ಎರಡೂ ಕಾಲುಗಳನ್ನೂ ಮೇಲೆ ಎತ್ತಿ ಅಳುವಾಗ ಅವರ ಕಾಲಿನ ಅಂಗುಷ್ಠ ಗಾಡಿಗೆ ತಗುಲಿತು. ಶ್ರೀಕೃಷ್ಣನು ತನ್ನ ಒಂದೇ ಕಾಲಿನ ತುದಿಯಿಂದ ಇಡೀ ಗಾಡಿಯನ್ನೇ ತಲೆಕೆಳಗು ಮಾಡಿಬಿಟ್ಟನು. ಅದರಲ್ಲಿದ್ದ ಮೊಸರಿನ ಪಾತ್ರೆ ಮಡಿಕೆಗಳಿಂದ ತುಂಬಿದ ಗಾಡಿಯು ಒಮ್ಮಲೇ ಉರುಳಿ ಬಿತ್ತು. ಬಂಡಿಯು ಕೂಡ ತಿರುಗಿ ಬಿದ್ದು ಪುಡಿಯಾಯಿತು. ಆಗ ಗೋಪಗೋಪಿಯರೆಲ್ಲರೂ ಹಾಹಾಕಾರ ಮಾಡುತ್ತಾ ಅಲ್ಲಿಗೆ ಓಡಿ ಬಂದರು. ಅದೇ ಸಮಯದಲ್ಲಿ ಮಗುವು ಎದ್ದಿರಬಹುದೆಂಬ ಭಯದಿಂದಲೇ ಯಮುನೆಯಲ್ಲಿ ಮಿಂದು ಮಗುವಿಗೆ

ಹಾಲು ಕೊಡಲೆಂದು ಓಡಿ ಬಂದಳು. ಆ ಸಮಯದಲ್ಲಿ ಕರುವಿಗೆ ಹಸುವು ಹಾಲು ಸುರಿಸುವಂತೆ ಹಾಲು ಸ್ರವಿಸುತ್ತಿತ್ತು. ಶರೀರವೆಲ್ಲವೂ ನೆನೆದು ಹೋಗಿತ್ತು. ಬಿರುಗಾಳಿಯೆ ಇಲ್ಲದೆ ಈ ಗಾಡಿಯು ತಲೆಕೆಳಗಾಗಿ ಬಿದ್ದಿರುವುದನ್ನು ಯಶೋದೆಯು ನೋಡಿ. ಅಯ್ಯೋ ಎಂದು ಚೀರುತ್ತ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡಳು. ಹಾಲನ್ನು ಕೊಟ್ಟಳು. ಎಂತಹ ಆಪತ್ತಿನಿಂದ ಪಾರಾದೆಯೋ ಮಗುವೆ! ಎಂದು ಭಯಭ್ರಾಂತಿ ಸ್ನೇಹದಿಂದ ಹಾಲನ್ನು ನೀಡಿದಳು.

**ಕಿಂ ತು ವಕ್ಷ್ಯತಿ ತೇ ಪುತ್ರ ಪಿತಾ ಪರಮಕೋಪನಃ ।**
**ತ್ವಯ್ಯಧಃ ಶಕಟೇ ಸುಪ್ತೇ ಅಕಸ್ಮಾಚ್ಚ ವಿಲೋಡಿತೇ ॥ 6 ॥**
**ಕಿಂ ಮೇ ಸ್ನಾನೇನ ದುಃಸ್ನಾನಂ ಕಿಂ ಚ ಮೇ ಗಮನೇ ನದೀಮ್ ।**
**ಪರ್ಯಸ್ತೇ ಶಕಟೇ ಪುತ್ರ! ಯಾ ತ್ವಾಂ ಪಶ್ಯಾಮ್ಯಪಾವೃತಾಮ್ ॥ 7 ॥**

ಬಿರುಗಾಳಿ ಬೀಸದೆ ಗೂಳಿಗಳ ಜಗಳವಿಲ್ಲದೆ ದೆವ್ವದಂತ ಈ ಗಾಡಿ ತಲೆಕೆಳಗಾಗಿ ಹೇಗೆ ಬಿದ್ದಿತು? ಆ ಗಾಡಿಯೂ ಸಹ ಮಗುವಿನ ಮೇಲೆ ಬೀಳದೆ ಮಗು ಸಂಕಟದಿಂದ ಪಾರಾಯಿತು. ಎಲ್ಲವೂ ದೈವಲೀಲೆ. ನನಗೆ ಈ ಸ್ನಾನವೇಕೆಬೇಕಿತ್ತು. ಸುಡಲಿ ಆ ಸ್ನಾನ. ನಾನೇಕೆ ಮಗುವೊಂದನ್ನೇ ಬಿಟ್ಟು ನದಿಗೆ ಹೋಗಬೇಕು? ಈ ಮಗುವಿನ ತಂದೆ ಬಂದು ಮಗುವೊಂದನ್ನೆ ಏಕೆ ಬಿಟ್ಟು ಹೋದೆ? ಎಂದಾಗ ಪರಮಕೋಪಿಷ್ಠನಾದ ಅವನಿಗೆ ನಾನೇನು ಉತ್ತರ ಹೇಳಲಿ?

ಈ ಬಂಡಿಯನ್ನು ಉರುಳಿಸಿದವರಾರು? ಎಂದು ಕೇಳಿದಾಗ ಅಲ್ಲಿಯೆ ಆಟವಾಡುತ್ತಿದ್ದ ಹುಡುಗರು – ಈ ಮಗುವೇ ಬಂಡಿಯನ್ನು ಒದ್ದು ಬೀಳಿಸಿದ್ದನ್ನು ನಾವೇ ನೋಡಿದ್ದೇವೆ ಎಂದರು. ಇದನ್ನು ಕೇಳಿ ಜನರಿಗೆ ಆಶ್ಚರ್ಯವಾಯಿತು.

## ನಂದಗೋಪನ ಭಯ

**ಏತಸ್ಮಿನ್ನಂತರೇ ಗೋಭಿರಾಜಗಾಮ ವನೇಚರಃ ।**
**ಕಾಷಾಯವಾಸಸೀ ಬಿಭ್ರನ್ ನಂದಗೋಪೋ ವ್ರಜಾಂತಿಕಮ್ ॥ 8 ॥**

**ಸದದರ್ಶ ವಿಪರ್ಯಸ್ತಂ ಭಿನ್ನ ಭಾಂಡ ಘಟೀಘಟಮ್ ।**
**ಭೀತಸ್ತ್ವರಿತ ಮಾಗತ್ಯ ಸಹಸಾ ಸಾಶ್ರುಲೋಚನಃ ।**
**ಅಪಿ ಮೇ ಸ್ವಸ್ತಿ ಪುತ್ರಾಯ ಇತ್ಯಸಕೃದ್ ವಚನಂ ವದನ್ ॥ 9 ॥**

ಇದೇ ಸಮಯದಲ್ಲಿ ಮುನಿವೇಷದಲ್ಲಿರುವ ತಪಸ್ವಿಯಾದ ನಂದಗೋಪನು ಕಾಡಿನಿಂದ ಗೋವುಗಳನ್ನು ಕರೆತಂದು. ಬಂದು ನೋಡಿದನು. ಅಲ್ಲಿ ನಿಲ್ಲಿಸಿದ್ದ ಗಾಡಿಯ ನೊಗ. ಹಲ್ಲುಗಳು. ಚಕ್ರಗಳು ತಲೆಕೆಳಗಾಗಿ ಒಳಗಿದ್ದ ಪಾತ್ರೆ ಪಡಗುಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಬಿದ್ದು ಚೂರುಚೂರಾಗಿದ್ದವು. ಅಚ್ಚುಮರ. ಗಾಡಿಯ ಮೂಕಿಯೂ ಒಂದು ಕಡೆ ಬಿದ್ದಿದ್ದಿತು. ನಂದಗೋಪನಿಗೆ ಭಯವಾಯಿತು. ಕಣ್ಣಲ್ಲಿ ನೀರು ಹರಿಯಿತು. ಹತ್ತು ಬಾರಿ ಪ್ರಶ್ನಿಸಿದನು. ನನ್ನ ಮಗನು ಕುಶಲಿ ತಾನೆ? ಆಗ ಹಾಲು ಕುಡಿಯುತ್ತಿದ್ದ ಮಗುವನ್ನು ನೋಡಿ ಜೀವ ಬಂದಂತಾಯಿತು.

**ಪ್ರತ್ಯುವಾಚ ಯಶೋದಾ ತಂ ಭೀತಾ ಗದ್ಗದಭಾಷಿಣೀ ।**
**ನ ವಿಜಾನಾಮ್ಯಹಂ ಕೇನ ಶಕಟಂ ಪರಿವರ್ತಿತಮ್ ॥ 10 ॥**

**ಅಹಂ ನದೀಂ ಗತಾ ಸೌಮ್ಯ ಚೈಲಪ್ರಕ್ಷಾಲನಾರ್ಥಿನೀ ।**
**ಆಗತಾ ಚ ವಿಪರ್ಯಸ್ತಮಪಶ್ಯಂ ಶಕಟಂ ಭುವಿ ॥ 11 ॥**

ಗೂಳಿಗಳು ಕಾದಾಡಿದ್ದರೆ ಈ ಗಾಡಿಯು ಬೀಳುವುದಿದೆ. ಅಂತಹ ಗೂಳಿಗಳು ಯುದ್ಧವಿಲ್ಲವೆಂದ ಮೇಲೆ ಈ ಗಾಡಿಯನ್ನು ಪುಡಿ ಮಾಡಿದವರು ಯಾರು? ಎಂದು ಯಶೋದೆಯನ್ನು ಕೇಳಿದನು.

ಅವಳು ಗಂಡನಿಗೆ ಭಯಪಟ್ಟು ಗದ್ಗದ ಧ್ವನಿಯಿಂದ ಸೌಮ್ಯವೇ. ಯಾರು ಗಾಡಿಯನ್ನು ತಲೆಕೆಳಗಾಗಿಸಿದವರೆಂದು ನನಗೆ ತಿಳಿದಿಲ್ಲ. ಬಟ್ಟೆ ಒಗೆದು ಬರಲು ಯಮುನೆಗೆ ಹೋಗಿದ್ದೆ. ಬಂದಾಗ ಈ ಅನರ್ಥ ನಡೆದುಹೋಗಿತ್ತು.

ಜನಮೇಜಯ! ಹೀಗೆ ಅವರಿಬ್ಬರೂ ಮಾತನಾಡಿಕೊಳ್ಳುತ್ತಿರುವಾಗ ಅಲ್ಲಿಯೇ ಆಟವಾಡುತ್ತಿದ್ದ ಗೋಪಬಾಲಕರು – ಈ ಮಗುವೆ ಗಾಡಿಯನ್ನು ಒಂದೇ ಕಾಲಿನಿಂದ ಒದ್ದು ಬೀಳಿಸಿದ್ದನ್ನು ನಾವೇ ನೋಡಿರುವೆವು. ಎಂದರು. ಈ ಮಾತನ್ನು ಕೇಳಿ ನಂದನಿಗೆ ಅಚ್ಚರಿಯಾಯಿತು. ಸಂತೋಷವೂ ಆಯಿತು. ಆದರೆ ಮರುಕ್ಷಣ ಭಯ ಆವರಿಸಿತು. ಇದೇನು ಮಾಯೆಯಿರಬಹುದು?

ಎಂದು ಚಿಂತಿಸಿದರೆ ಹೊರತು ಪ್ರತ್ಯಕ್ಷ ಸಾಕ್ಷಿಗಳ ಮಾತನ್ನು ನಂಬಲಿಲ್ಲ. ಎಲ್ಲರೂ ಆಶ್ಚರ್ಯ ಆಶ್ಚರ್ಯವೆಂದು ಉದ್ಗಾರ ಮಾಡಿ ಬಿದ್ದ ಗಾಡಿಯನ್ನೂ ಕಣ್ಣನ್ನರಳಿಸಿ ನೋಡುತ್ತಾ ನಿಂತರು. ಗಾಡಿಯನ್ನು ಸರಿಯಾಗಿ ಜೋಡಿಸಿದರು.

## ಪೂತನಾಜೀವಿತಾಹಾರೀ

***ವೈಶಂಪಾಯನ ಉವಾಚ–***

**ಕಸ್ಯಚಿತ್ವಥ ಕಾಲ್ಯ ಶಕುನೀ ವೇಷಧಾರಿಣೀ ।**

**ಧಾತ್ರೀ ಕಂಸಸ್ಯ ಭೋಜಸ್ಯ ಪೂತನೇತಿ ಪರಿಶ್ರುತಾ ॥ 12 ॥**

**ಪೂತನಾ ನಾಮ ಶಕುನೀ ಘೋರಾ ಪ್ರಾಣಭಯಂಕರೀ ।**

**ಆಜಗಾಮಾರ್ಧರಾತ್ರೇ ವೈ ಪಕ್ಷೌ ಕ್ರೋಧಾತ್ ವಿಧುನ್ವತೀ ॥ 13 ॥**

**ವ್ಯಾಘ್ರ ಗಂಭೀರ ನಿರ್ಘೋಷಂ ವ್ಯಾಹರಂತೀ ಪುನಃ ಪುನಃ ॥ 14 ॥**

ಮುಂದೆ ಒಂದು ದಿನ ಭೋಜರಾಜ ಕಂಸನ ದಾದಿಯಾದ **ಪೂತನಾ**[2] ಎಂಬ ಪ್ರಾಣಾಂತಿಕ ಬಾಲಗ್ರಹವು ಪಕ್ಷಿವೇಷದಲ್ಲಿ ಗೋಕುಲಕ್ಕೆ ಅರ್ಧರಾತ್ರಿ ವೇಳೆ ಹಾರುತ್ತಾ ಬಂದಳು. ಕೃಷ್ಣನ ಮೇಲಿನ ಕೋಪದಿಂದ ರೆಕ್ಕೆಗಳನ್ನು ಪಟ ಪಟನೆ ನೆಲಕ್ಕೆ ಬಡಿಯುತ್ತಿದ್ದಳು. ಹುಲಿಯಂತೆ ಗಂಭೀರ ಘೋರನಾದ ಮಾಡುತ್ತಿದ್ದು ಅಲ್ಲಿರುವ ಗಾಡಿಯ ಕೆಳಗೆ ಕುಳಿತು ಎಲ್ಲವನ್ನೂ ನೋಡಿಕೊಂಡಳು. ಕಂಸನಿಂದ ಪ್ರೇರಿತಳಾದ ದುಷ್ಟ ಪೂತನಿಯು ತನ್ನ

---

2. ಪೂತನಾ :

ಕಂಸನಿಗೆ ಹಾಲು ಕೊಟ್ಟು ಬೆಳೆಸಿದ ರಾಕ್ಷಸೀ. ಹಿಂದೆ ರಾಮನಿಂದ ಹತಳಾದ **ತಾಟಕೀ. ಪೂತಾನ್ ವಿನಷ್ಟಾನ್ ತನೋತೀತಿ ಪೂತನಾ । ಪೂಞ್ ವಿನಾಶೇ ಧಾತು.**

**ತತ್ರ ಚ ಪೂತನಿಕಾಯಾಃ ವಧಮಕರೋದ್ ಯನ್ನಿಜಾಃ ಸುಪೂತನಿಕಾಯಾಃ ।**

*–ಯ.ಭಾ.7*

ಪೂತನಿಯನ್ನು ಕೊಂದ ಹಾಗೂ ಶಾಪದಿಂದ ನೀಚದೇಹ ಪ್ರವೇಶಿಸಿರುವ ಆದರೆ ಭಕ್ತರಾದ ಊರ್ವಶೀ ಹಾಗೂ ರತ್ನಮಾಲೆಯರನ್ನೂ ಪವಿತ್ರಕಾಯರನ್ನಾಗಿಸಿದ.

**ಸಾ ತಾಟಕಾ ಚೋರ್ವಶೀ ಸಂಪ್ರವಿಷ್ಟಾ ಕೃಷ್ಣಾವಧ್ಯಾನಾತ್ ನಿರಯಂ ಸಂಜಗಾಮ।**

**ಸಾ ತೂರ್ವಶೀ ಕೃಷ್ಣ ಭುಕ್ತ ಸ್ತನೇನ ಪೂತಾ ಸ್ವರ್ಗಂ ಪ್ರಯಯೌ ತತ್ಕ್ಷಣೇನ ॥**

*–ತಾ. ನಿ. 12/87*

ವಿಷದ ಹಾಲಿನಿಂದ ವ್ರಜದ ನಿರ್ದಶ ಮಕ್ಕಳನ್ನೆಲ್ಲ ಕೊಂದು ಹಾಕುತ್ತಿದ್ದಳು. ಯಾವ ತಪ್ಪು ಮಾಡದವರನ್ನು ಕೊಲ್ಲದೆ ಬಿಡುತ್ತಿರಲಿಲ್ಲವಾಗಿ ಪೂತನಾ ಸಾರ್ಥಕ ನಾಮವಾಗಿತ್ತು (ಪೂತಾನಪಿ ನಯತಿ ಯಮಸದನಂ) ಪೂತನೆ ತನ್ನ ನಿಜಸ್ವರೂಪ ಮರೆ ಮಾಚಿ ಸುಂದರ ರೂಪ ತಾಳ ನಂದನ ಮನೆ ಪ್ರವೇಶಿಸಿದಳು. ವಸ್ತ್ರ ನಿರ್ಮಿತ ಗೃಹದಲ್ಲಿ ಕೃಷ್ಣ ಮಲಗಿದ್ದ. ಪೂತನಿ ಒಳಗೆ ಪ್ರವೇಶಿಸಿದಳು. ಇವಳು ಸಾಕ್ಷಾತ್ ಲಕ್ಷ್ಮಿಯೋ ದುರ್ಗೆಯೋ ಊರ್ವಶಿಯೋ ಇರಬೇಕೆಂದು ಜನ ಬರ ಮಾಡಿಕೊಂಡರು. ಆಸನ ನೀಡಿ ಪಾದ್ಯ ನೀಡಿದರು. ಅಮ್ಮ ನೀನಾರು? ಯಾವ ಊರು? ಹೆಸರೇನು? ನಾನು ಮಥುರೆಯಲ್ಲಿರುವೆ. ಬ್ರಾಹ್ಮನೊಬ್ಬನ ಪತ್ನಿ. ಜನರು ನಂದನಿಗೆ ಇಳ ವಯಸ್ಸಿನಲ್ಲಿ ಪುತ್ರನಾಗಿದ್ದಾನೆ ಎಂದು ಕೇಳ ಆಶೀರ್ವದಿಸಲು ಬಂದಿದ್ದೇನೆ ಎಂದಳು. ಮಗುವನ್ನು ಪೂತನಿಗೆ ನೀಡಿದಳು ಯಶೋದೆ.

## ಪ್ರಾಣ-ಹಾಲಾಹಲ-ಹಾಲು ಮೂರನ್ನು ಹೀರಿದ ಕೃಷ್ಣ

**ದದೌ ಸ್ತನಂ ಚ ಕೃಷ್ಣಾಯ ತಸ್ಮಿನ್ ಸುಪ್ತೇ ಜನೇ ನಿಶಿ ।**
**ತಸ್ಯಾಃ ಪಪೌ ಕೃಷ್ಣಃ ಪ್ರಾಣೈಃ ಸಹ ವಿನದ್ಯ ಚ ॥ 15 ॥**
**ಭಿನ್ನಸ್ತನೀ ತು ಸಹಸಾ ಪಪಾತ ಶಕುನೀ ಭುವಿ ॥ 16 ॥**

ಪೂತನಿಯು ಕೃಷ್ಣನನ್ನು ಆಡಿಸುವ ನೆಪದಿಂದ ತನ್ನ ತೊಡೆಯ ಮೇಲೇರಿಸಿಕೊಂಡು ವಿಷಲೇಪಿತ ಸ್ತನವನ್ನು ಅವನ ಬಾಯಲ್ಲಿಟ್ಟಳು. ಸರ್ವಜ್ಞ ಭಗವಂತನಿಗೆ ಇದು ತಿಳಿಯಿತು. ಹಾಲು ಕೊಡುವ ನೆಪದಲ್ಲಿ ಹಾಲಾಹಲ ನೀಡುತ್ತಿರುವಳೆಂದು ಬಗೆದು ಅವಳ ಸ್ತನವನ್ನು ಹೀರುತ್ತಾ ವಿಷಲಿಪ್ತವಾದ ಸ್ತನ್ಯವನ್ನು ಅಮೃತರಸದಂತೆ ಹೀರಿದ. ಎದೆಯ ಹಾಲಿನೊಂದಿಗೆ ಎದೆಯಲ್ಲಿದ್ದ ಪ್ರಾಣವಾಯುವನ್ನೂ ಹೀರಿ ಹಾಕಿದ. ಅವಳು ವಿಲಕ್ಷಣವಾಗಿ ವೇದನೆಯಿಂದ ಕಿರುಚುತ್ತಾ ಬಿಡೋ ಬಿಡೋ ಎಂದು ಬೊಬ್ಬೆ ಹಾಕಿದಳು. ಅವಳ ರೋದನ ಧ್ವನಿಗೆ ಭೂಮ್ಯಾಕಾಶವೆಲ್ಲ ನಡುಗಿತು. ಆದರೂ ಕೃಷ್ಣ ಅವಳ ಸ್ತನ ಬಿಡಲಿಲ್ಲ. ಅವಳ ಸ್ತನಗಳನ್ನೆ ಕತ್ತರಿಸಿ ಪಂಚಪ್ರಾಣಗಳನ್ನೆ ಹೀರಿ ಕೊಂದು ಹಾಕಿದ. ಪೂತನೆಯು ವಜ್ರಾಘಾತದಿಂದ ಪರ್ವತಗಳಂತೆ ಧೊಪ್ಪನೆ ಬಿದ್ದಳು. ಅವಳ ಆಕಾರ ವಿಕಾರವಾಯಿತು. ಮುಖ ಕರಾಳವಾಯಿತು. ಶರೀರ ದೊಡ್ಡ ಪರ್ವತದಷ್ಟಾಯಿತು. ಆ ಘಾತಕಿಯಾದ ಪೂತನಿಯ ಶರೀರದ ಮೇಲೆ

ಶ್ರೀಕೃಷ್ಣ ಆನಂದದಿಂದ ಆಟವಾಡುತ್ತಿದ್ದ. ಗೋಪಿಯರು ಮಗುವನ್ನೆತ್ತಿಕೊಂಡು ಗೋಮೂತ್ರದಿಂದ ಸ್ನಾನ ಮಾಡಿಸಿ, ಗೋಮಯದಿಂದ ಕೇಶವಾದಿ ದ್ವಾದಶಪುಂಡ್ರ ಹಚ್ಚಿ, ಭಗವಂತನ ಪುಣ್ಯನಾಮಗಳಿಂದ ರಕ್ಷೆ ಮಾಡಿದಳು.[3]

**ಇದಂ ಕಿಂ ತ್ವಿತಿ ಸಂತ್ರಸ್ತಾಃ ಕಸ್ಯೇದಂ ಕರ್ಮ ಚೇತ್ಯಪಿ ।**
**ನಂದಗೋಪಂ ಪುರಸ್ಕೃತ್ಯ ಗೋಪಾಸ್ತೇ ಪರ್ಯವಾರಯನ್ ॥ 17 ॥**

**ಆಶ್ಚರ್ಯ ಮಾಶ್ಚರ್ಯಮಿತಿ ಬ್ರುವಂತೋಽನುಯಯುಃ ಗೃಹಾನ್ ।**
**ಯಶೋದಾಂ ನಂದಗೋಪಸ್ತು ಪಪ್ರಚ್ಛ ಗತಸಂಭ್ರಮಃ ॥ 18 ॥**

**ಕೋಽಯಂ ವಿಧಿಃ ನ ಜಾನಾಮಿ ವಿಸ್ಮಯೋ ಮೇ ಮಹಾನಯಮ್ ।**
**ಪುತ್ರಸ್ಯ ಮೇ ಭಯಂ ತೀವ್ರಂ ಭೀರುತ್ವಂ ಸಮುಪಾಗತಮ್ ॥ 19 ॥**

ಉಳಿದೆಲ್ಲ ಗೋಪಾಲಕರು ವಜ್ರಾಹತರಾಗಿ ಹೊಡೆದು ಕೆಡವಿದಂತೆ ನಂದವ್ರಜದ ಊರಗಲ ಬಿದ್ದಿರುವ ಈ ದುರ್ದಾನವಿಯ ದೀರ್ಘೋತ್ತುಂಗ

---

3. ಕಾಲವ್ಯತ್ಯಾಸ :

ಭಾಗವತದಲ್ಲಿ ಮೊದಲು ಪೂತನಾವಧ. ತಾ. ನಿರ್ಣಯವೂ ಹಾಗೆ ಹೇಳಿದೆ. ಹರಿವಂಶದಲ್ಲಿ ಮೊದಲು ಶಕಟಾಸುರವಧೆ ನಂತರ ಪೂತನೆಯ ವಧೆ ನಿರೂಪಿತವಾಗಿದೆ. ಇದು ಕಾಲ ವ್ಯತ್ಯಾಸ. ಶ್ರೀಕೃಷ್ಣನು ಏಳು ದಿವಸದವನಾಗಿದ್ದಾಗ ಪೂತನೆ ಬಂದದ್ದು. ಶಕಟಾಸುರನಾದರೂ ಶ್ರೀಕೃಷ್ಣನಿಗೆ ನಾಲ್ಕು ತಿಂಗಳಾದಾಗ. ತಿಂಗಳೆಂದರೆ ಜನ್ಮ ನಕ್ಷತ್ರವೂ ಅಂದೇ ಬಂದಿತ್ತು. ಅಂದೆ ಮನೆಯಿಂದ ಹೊರಗೆ ಹೋಗುವ ಉಪನಿಷ್ಕ್ರಮಣವೂ ಸೇರಿತ್ತು. ಶ್ರೀಕೃಷ್ಣನಿಗೆ ತಾನು ಕಾಣಿಸಿ ಸರಿಯಾಗಿ ನೂರೆಂಟನೆಯ ದಿವಸ ಜನ್ಮ ನಕ್ಷತ್ರ ರೋಹಿಣಿಯ ಯೋಗವೂ ಇತ್ತು. ಪುಷ್ಯದಿಂದ ಶುಕ್ಲ ದ್ವಾದಶೀ ದಿನದಂದು ಅಂದು ಮಹೋತ್ಸವವಿತ್ತು.

ಪೂತನಿಗೆ ಒಳ್ಳೆ ಗತಿ?

**'ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀ ಗತಿಮ್'** –*ಭಾಗ.*

ಪೂತನಿಯೂ ಸದ್ಗತಿ ಹೊಂದಳೆಂದಿದೆ. ಪೂತನಾ ಎಂದರೆ ಪೂತನಾ ವಿಷ್ಣ ಊರ್ವಶೀ, ತುಂಬುರು ಸಂಗ ಮಾಡಿದ್ದ ಊರ್ವಶಿಗೆ ವಿತ್ತಪನ ಶಾಪದಿಂದಾಗಿ ರಾಕ್ಷಸೀ ಶರೀರ ಪ್ರವೇಶ. ಕೃಷ್ಣಭುಕ್ತಸ್ತನಳಾದ ಊರ್ವಶೀ ಸದ್ಗತಿ ಹೊಂದಿದಳು. ರತ್ನಮಾಲೆಯು ವಾಮನನ್ನು ನೋಡಿ ಪುತ್ರನಂತೆ ವಾಮನನಿಗೆ ಹಾಲು ಕುಡಿಸಲು ಇಚ್ಛಿಸಿದಳು. ಅವಳೂ ಈ ಶರೀರ ಸೇರಿ ಹಾಲನ್ನು ನೀಡಿ ಮುಕ್ತಿ ಹೊಂದಿದಳು. –ಬ್ರಹ್ಮ–ವೈವರ್ತ

ವಿಷದ ಹಾಲಿನಿಂದ ವ್ರಜದ ನಿರ್ದಶ ಮಕ್ಕಳನ್ನೆಲ್ಲ ಕೊಂದು ಹಾಕುತ್ತಿದ್ದಳು. ಯಾವ ತಪ್ಪು ಮಾಡದವರನ್ನು ಕೊಲ್ಲದೆ ಬಿಡುತ್ತಿರಲಿಲ್ಲವಾಗಿ ಪೂತನಾ ಸಾರ್ಥಕ ನಾಮವಾಗಿತ್ತು (ಪೂತಾನಪಿ ನಯತಿ ಯಮಸದನಂ) ಪೂತನೆ ತನ್ನ ನಿಜಸ್ವರೂಪ ಮರೆ ಮಾಚಿ ಸುಂದರ ರೂಪ ತಾಳ ನಂದನ ಮನೆ ಪ್ರವೇಶಿಸಿದಳು. ವಸ್ತ್ರ ನಿರ್ಮಿತ ಗೃಹದಲ್ಲಿ ಕೃಷ್ಣ ಮಲಗಿದ್ದ. ಪೂತನಿ ಒಳಗೆ ಪ್ರವೇಶಿಸಿದಳು. ಇವಳು ಸಾಕ್ಷಾತ್ ಲಕ್ಷ್ಮಿಯೋ ದುರ್ಗೆಯೋ ಊರ್ವಶಿಯೋ ಇರಬೇಕೆಂದು ಜನ ಬರ ಮಾಡಿಕೊಂಡರು. ಆಸನ ನೀಡಿ ಪಾದ್ಯ ನೀಡಿದರು. ಅಮ್ಮ ನೀನಾರು? ಯಾವ ಊರು? ಹೆಸರೇನು? ನಾನು ಮಥುರೆಯಲ್ಲಿರುವೆ. ಬ್ರಾಹ್ಮನೊಬ್ಬನ ಪತ್ನಿ. ಜನರು ನಂದನಿಗೆ ಇಳ ವಯಸ್ಸಿನಲ್ಲಿ ಪುತ್ರನಾಗಿದ್ದಾನೆ ಎಂದು ಕೇಳ ಆಶೀರ್ವದಿಸಲು ಬಂದಿದ್ದೇನೆ ಎಂದಳು. ಮಗುವನ್ನು ಪೂತನಿಗೆ ನೀಡಿದಳು ಯಶೋದೆ.

## ಪ್ರಾಣ–ಹಾಲಾಹಲ–ಹಾಲು ಮೂರನ್ನು ಹೀರಿದ ಕೃಷ್ಣ

**ದದೌ ಸ್ತನಂ ಚ ಕೃಷ್ಣಾಯ ತಸ್ಮಿನ್ ಸುಪ್ತೇ ಜನೇ ನಿಶಿ ।**
**ತಸ್ಯಾಃ ಪಪೌ ಕೃಷ್ಣಃ ಪ್ರಾಣೈಃ ಸಹ ವಿನದ್ಯ ಚ ॥ 15 ॥**
**ಭಿನ್ನಸ್ತನೀ ತು ಸಹಸಾ ಪಪಾತ ಶಕುನೀ ಭುವಿ ॥ 16 ॥**

ಪೂತನಿಯು ಕೃಷ್ಣನನ್ನು ಆಡಿಸುವ ನೆಪದಿಂದ ತನ್ನ ತೊಡೆಯ ಮೇಲೇರಿಸಿಕೊಂಡು ವಿಷಲೇಪಿತ ಸ್ತನವನ್ನು ಅವನ ಬಾಯಲ್ಲಿಟ್ಟಳು. ಸರ್ವಜ್ಞ ಭಗವಂತನಿಗೆ ಇದು ತಿಳಯಿತು. ಹಾಲು ಕೊಡುವ ನೆಪದಲ್ಲಿ ಹಾಲಾಹಲ ನೀಡುತ್ತಿರುವಳೆಂದು ಬಗೆದು ಅವಳ ಸ್ತನವನ್ನು ಹೀರುತ್ತಾ ವಿಷಲಿಪ್ತವಾದ ಸ್ತನ್ಯವನ್ನು ಅಮೃತರಸದಂತೆ ಹೀರಿದ. ಎದೆಯ ಹಾಲಿನೊಂದಿಗೆ ಎದೆಯಲ್ಲಿದ್ದ ಪ್ರಾಣವಾಯುವನ್ನೂ ಹೀರಿ ಹಾಕಿದ. ಅವಳು ವಿಲಕ್ಷಣವಾಗಿ ವೇದನೆಯಿಂದ ಕಿರುಚುತ್ತಾ ಬಿಡೋ ಬಿಡೋ ಎಂದು ಬೊಬ್ಬೆ ಹಾಕಿದಳು. ಅವಳ ರೋದನ ಧ್ವನಿಗೆ ಭೂಮ್ಯಾಕಾಶವೆಲ್ಲ ನಡುಗಿತು. ಆದರೂ ಕೃಷ್ಣ ಅವಳ ಸ್ತನ ಬಿಡಲಿಲ್ಲ. ಅವಳ ಸ್ತನಗಳನ್ನೆ ಕತ್ತರಿಸಿ ಪಂಚಪ್ರಾಣಗಳನ್ನೆ ಹೀರಿ ಕೊಂದು ಹಾಕಿದ. ಪೂತನೆಯು ವಜ್ರಾಘಾತದಿಂದ ಪರ್ವತಗಳಂತೆ ಧೊಪ್ಪನೆ ಬಿದ್ದಳು. ಅವಳ ಆಕಾರ ವಿಕಾರವಾಯಿತು. ಮುಖ ಕರಾಳವಾಯಿತು. ಶರೀರ ದೊಡ್ಡ ಪರ್ವತದಷ್ಟಾಯಿತು. ಆ ಘಾತಕಿಯಾದ ಪೂತನಿಯ ಶರೀರದ ಮೇಲೆ

ಶ್ರೀಕೃಷ್ಣ ಆನಂದದಿಂದ ಆಟವಾಡುತ್ತಿದ್ದ. ಗೋಪಿಯರು ಮಗುವನ್ನೆತ್ತಿಕೊಂಡು ಗೋಮೂತ್ರದಿಂದ ಸ್ನಾನ ಮಾಡಿಸಿ, ಗೋಮಯದಿಂದ ಕೇಶವಾದಿ ದ್ವಾದಶಪುಂಡ್ರ ಹಚ್ಚಿ, ಭಗವಂತನ ಪುಣ್ಯನಾಮಗಳಿಂದ ರಕ್ಷೆ ಮಾಡಿದಳು.[3]

**ಇದಂ ಕಿಂ ತ್ವಿತಿ ಸಂತ್ರಸ್ತಾಃ ಕಸ್ಯೇದಂ ಕರ್ಮ ಚೇತ್ಯಪಿ ।**
**ನಂದಗೋಪಂ ಪುರಸ್ಕೃತ್ಯ ಗೋಪಾಸ್ತೇ ಪರ್ಯವಾರಯನ್ ॥ 17 ॥**

**ಆಶ್ಚರ್ಯ ಮಾಶ್ಚರ್ಯಮಿತಿ ಬ್ರುವಂತೋऽನುಯಯುಃ ಗೃಹಾನ್ ।**
**ಯಶೋದಾಂ ನಂದಗೋಪಸ್ತು ಪಪ್ರಚ್ಛ ಗತಸಂಭ್ರಮಃ ॥ 18 ॥**

**ಕೋऽಯಂ ವಿಧಿಃ ನ ಜಾನಾಮಿ ವಿಸ್ಮಯೋ ಮೇ ಮಹಾನಯಮ್ ।**
**ಪುತ್ರಸ್ಯ ಮೇ ಭಯಂ ತೀವ್ರಂ ಭೀರುತ್ವಂ ಸಮುಪಾಗತಮ್ ॥ 19 ॥**

ಉಳಿದೆಲ್ಲ ಗೋಪಾಲಕರು ವಜ್ರಾಹತರಾಗಿ ಹೊಡೆದು ಕೆಡವಿದಂತೆ ನಂದವ್ರಜದ ಊರಗಲ ಬಿದ್ದಿರುವ ಈ ದುರ್ದಾನವಿಯ ದೀರ್ಘೋತ್ತುಂಗ

---

3. **ಕಾಲವ್ಯತ್ಯಾಸ :**
ಭಾಗವತದಲ್ಲಿ ಮೊದಲು ಪೂತನಾವಧ. ತಾ. ನಿರ್ಣಯವೂ ಹಾಗೆ ಹೇಳಿದೆ. ಹರಿವಂಶದಲ್ಲಿ ಮೊದಲು ಶಕಟಾಸುರವಧೆ ನಂತರ ಪೂತನೆಯ ವಧೆ ನಿರೂಪಿತವಾಗಿದೆ. ಇದು ಕಾಲ ವ್ಯತ್ಯಾಸ. ಶ್ರೀಕೃಷ್ಣನು ಏಳು ದಿವಸದವನಾಗಿದ್ದಾಗ ಪೂತನೆ ಬಂದದ್ದು. ಶಕಟಾಸುರನಾದರೂ ಶ್ರೀಕೃಷ್ಣನಿಗೆ ನಾಲ್ಕು ತಿಂಗಳಾದಾಗ. ತಿಂಗಳೆಂದರೆ ಜನ್ಮ ನಕ್ಷತ್ರವೂ ಅಂದೇ ಬಂದಿತ್ತು. ಅಂದೆ ಮನೆಯಿಂದ ಹೊರಗೆ ಹೋಗುವ ಉಪನಿಷ್ಕ್ರಮಣವೂ ಸೇರಿತ್ತು. ಶ್ರೀಕೃಷ್ಣನಿಗೆ ತಾನು ಕಾಣಿಸಿ ಸರಿಯಾಗಿ ನೂರೆಂಟನೆಯ ದಿವಸ ಜನ್ಮ ನಕ್ಷತ್ರ ರೋಹಿಣಿಯ ಯೋಗವೂ ಇತ್ತು. ಪುಷ್ಯದಿಂದ ಶುಕ್ಲ ದ್ವಾದಶೀ ದಿನದಂದು ಅಂದು ಮಹೋತ್ಸವವಿತ್ತು.

**ಪೂತನಿಗೆ ಒಳ್ಳೆ ಗತಿ?**

**'ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀ ಗತಿಮ್'** *–ಭಾಗ.*

ಪೂತನಿಯೂ ಸದ್ಗತಿ ಹೊಂದಳೆಂದಿದೆ. ಪೂತನಾ ಎಂದರೆ ಪೂತನಾ ವಿಷ್ಟ ಊರ್ವಶೀ, ತುಂಬುರು ಸಂಗ ಮಾಡಿದ್ದ ಊರ್ವಶಿಗೆ ವಿತ್ತಪನ ಶಾಪದಿಂದಾಗಿ ರಾಕ್ಷಸೀ ಶರೀರ ಪ್ರವೇಶ. ಕೃಷ್ಣಭುಕ್ತಸ್ತನಳಾದ ಊರ್ವಶೀ ಸದ್ಗತಿ ಹೊಂದಿದಳು. ರತ್ನಮಾಲೆಯು ವಾಮನನ್ನು ನೋಡಿ ಪುತ್ರನಂತೆ ವಾಮನನಿಗೆ ಹಾಲು ಕುಡಿಸಲು ಇಚ್ಛಿಸಿದಳು. ಅವಳೂ ಈ ಶರೀರ ಸೇರಿ ಹಾಲನ್ನು ನೀಡಿ ಮುಕ್ತಿ ಹೊಂದಿದಳು. *–ಬ್ರಹ್ಮ–ವೈವರ್ತ*

ಶರೀರ ನೋಡಿ ಆಶ್ಚರ್ಯ ಆಶ್ಚರ್ಯವೆಂದು ಉದ್ಗಾರ, ಇದೇನು ಇದೇನು ಈ ಭಯಂಕರ ದೇಹ ಯಾರದ್ದು? ಎಂದು ನಿಂತು ನೋಡಿ ನಂತರ ತಮ್ಮ ತಮ್ಮ ಮನೆಗೆ ಹೋದರು.

ನಂದಗೋಪನು ಯಶೋದೆಗೆ - ಇವಳಾರು? ಇಲ್ಲಿಗೆ ಹೇಗೆ ಬಂದಳು. ಎಂದು ಕೇಳದಾಗ ತನಗೆ ಯಾವುದೂ ತಿಳಿದಿಲ್ಲವೆಂದಳು. ಈ ಗದ್ದಲಕ್ಕೆ ನಾನು ಎಚ್ಚೆತ್ತೆ ಎಂದಳು. ಇದೆಲ್ಲವೂ ಕಂಸನು ಮಾಡಿರುವ ಕಪಟ ಕಾರಾಸ್ಥಾನವೇ ಇರಬೇಕೆಂದು ಭಾವಿಸಿದಳು.

ಯಶೋದೆ! ವಿಧಿಯ ಏನಾಟವೆಂದು ನನಗೆ ತಿಳಿಯದಾಗಿದೆ. ಈ ದೃಶ್ಯವನ್ನು ನೋಡಿದರೆ ಪರಮಾಶ್ಚರ್ಯವಾಗುತ್ತಿದೆ. ನನ್ನ ಮಗನಿಗೆ ಮಹತ್ತರವಾದ ಭಯವೆ ಬಂದಂತಾಗಿದೆ. ಇನ್ನೂ ಯಾವ ಆಪತ್ತು ಬರಬಹುದೆಂದು ನಮಗೆಲ್ಲ ಭಯವಾಗುತ್ತಿದೆ ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ತೋಕನಿಂದ ಪೂತನಾಜೀವಹರಣವೆಂಬಲ್ಲಿ
ಆರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 07 ವಿಷ್ಣುಪರ್ವ

# ಅಥ ಸಪ್ತಮೋಽಧ್ಯಾಯಃ

## ನಲಕೂಬರ ಮಣಿ ಗ್ರೀವ ಶಾಪ ವಿಮೋಚನೆ

*ವೈಶಂಪಾಯನರ ಉವಾಚ–*

ಕಾಲೇ ಗಚ್ಛತಿ ತೌ ಸೌಮ್ಯೌ ದಾರುಕೌ ಕೃತನಾಮಕೌ ।
ಕೃಷ್ಣ ಸಂಕರ್ಷಣೌ ಚೋಭೌರಿಂಗಿಣೌ ಸಮಪದ್ಯತಾಮ್ ॥ 1 ॥
ಏಕಮೂರ್ತಿಧರೌ ಕಾಂತೌ ಬಾಲಚಂದ್ರಾರ್ಕ ವರ್ಚಸೌ ।
ಏಕವೇಷಧರೌ ಏಕಂ ಪುಷ್ಯಮಾಣೌ ಶಿಶುವ್ರತಮ್ ॥ 2 ॥
ಏಕಕಾರ್ಯಾಂತರಗತೌ ಏಕದೇಹೌ ದ್ವಿಧಾಕೃತಮ್ ।

ಜನಮೇಜಯ ಕೇಳು ! ಇದಾದ ನಂತರ ಒಂದು ದಿನ ವಸುದೇವಾದಿ ಕ್ಷತ್ರಿಯರಿಗೆ ಗುರುಗಳಾದ ಗರ್ಗಾಚಾರ್ಯರು ಗೋಕುಲಕ್ಕೆ ವಸುದೇವನಾದೇಶದಂತೆ ಬಂದರು. ಇಬ್ಬರೂ ಮಕ್ಕಳಿಗೂ ನಾಮಕರಣಾದಿ ಕ್ಷತ್ರಿಯಯೋಗ್ಯ ಸಂಸ್ಕಾರ' ಮಾಡಲು ಬಂದಿದ್ದರು. ಗರ್ಗರು ಶ್ರೀಕೃಷ್ಣನ ಪರಮ ಆಪ್ತರೆಂದೇ ಅವರನ್ನೇ ಸಂಸ್ಕಾರಕ್ಕೆ ಕಳುಹಿಸಿದ್ದ. ನಂದ ವೈಶ್ಯ. ವಸುದೇವ ಕ್ಷತ್ರಿಯ. ಕ್ಷತ್ರಿಯ ಸಂಸ್ಕಾರವಾಗದೆ ಶ್ರೀಕೃಷ್ಣ ಕ್ಷತ್ರಿಯನಾಗಲಾರನೆಂದೆ ಈ ಸಂಸ್ಕಾರಕ್ಕಾಗಿ ಗರ್ಗರು ಬಂದಿದ್ದರು. ಭಗವಂತನ ಗುಣಗಾನ ಮಾಡುತ್ತಲೇ ಬಂದಿದ್ದರು (ಭಗವದ್ಗುಣಾನ್ ಗೃಣನ್ ಗಚ್ಛತಿತಿ

1. ಅಲಕ್ಷಿತೇಽಸ್ಮಿನ್ ರಹಸಿ ಮಾಮಕಯರಪಿ ಗೋವ್ರಜೇ ।
ಕುರು ದ್ವಿಜಾತಿ ಸಂಸ್ಕಾರಂ ಸ್ವಸ್ತಿವಾಚನ ಪೂರ್ವಕಮ್ ॥ – *ಭಾಗ. 10/8/10*

ಗರ್ಗಃ) ಗುಟ್ಟಾಗಿ ಬಲರಾಮ ಕೃಷ್ಣನಿಗೆ ನಾಮಕರಣ ಮಾಡಿದರು. ಜಾತಕರ್ಮಾದಿ ಸಂಸ್ಕಾರ ಮಾಡಿದರು. ಇವರಿಬ್ಬರೂ ನಿನ್ನ ಮಕ್ಕಳಲ್ಲ ವಸುದೇವನ ಮಕ್ಕಳೇ ಎಂದರು.

ಕೆಲವೆ ದಿನಗಳಲ್ಲಿ ರಾಮ-ಕೃಷ್ಣರು ತಮ್ಮ ಕೈಕಾಲುಗಳನ್ನು ಎಳೆಯುತ್ತಾ ತೆವಳುತ್ತಾ ಮನೆತುಂಬ ಹರಿದಾಡಲಾರಂಭಿಸಿದರು. ಮನೆಯ ಮುಂದಿನ ಹೊಸ್ತಿಲು ದಾಟಿ ಅಂಗಳಕ್ಕೆ ಇಳಿದರು. ಅಂಗಳದಲ್ಲಿ ಆಟವಾಡಿದರು. ಮೈತುಂಬಾ ಧೂಳು ಧೂಸರ. ಸೆಗಣಿ, ಕೆಸರುಗಳಿಂದ ಅಲಂಕೃತರಾಗಿ ವ್ರಜವೆಲ್ಲ ಓಡಾಡಿದರು. ಸಮಾನವಾದ ವೇಷ, ವಯಸ್ಸು, ವರ್ಚಸ್ಸುಗಳಿಂದ ಒಂದೇ ಜೀವ ಎರಡು ಶರೀರಗಳನ್ನು ಧರಿಸಿದಂತೆ ಇತ್ತು. ಬಾಲಚಂದ್ರ ಬಾಲ ಸೂರ್ಯರಂತೆಯೂ, ಇಬ್ಬರೂ ಒಂದೇ ಅಚ್ಚಿನಿಂದ ಮೂಡಿ ಬಂದ ಮೂರ್ತಿಗಳಂತಿದ್ದರು.

ಒಂದೇ ಆಸನ, ಒಂದೇ ಹಾಸಿಗೆ, ಒಂದೇ ಸಮಯದಲ್ಲಿ ಭೋಜನ, ಒಂದೇ ವಿಧವಾದ ವೇಷ, ಇದೇನು ಶಿಶುವ್ರತ ಮಾಡುತ್ತಿರುವರೋ ಎನಿಸುತ್ತಿತ್ತು. ದುಷ್ಟಶಿಕ್ಷಣ ಶಿಷ್ಟ ರಕ್ಷಣಕ್ಕಾಗಿ ಮೂರ್ತಿವೆತ್ತ ದೇವತೆಗಳಂತಿದ್ದರು. ಹೀಗಿದ್ದರೂ ಗೋಪಬಾಲಕರೆ ಆಗಿದ್ದರು. ಸರ್ಪದಂತೆ ನೀಳವಾದ ತೋಳುಗಳುಳ್ಳ ಶೇಷಸರ್ಪ ಹಾಗೂ ಸರ್ಪಶಯನನಂತೆ ಕಾಣಿಸುತ್ತಿದ್ದರು. ಬಲದರ್ಪಿತ ಆನೆಯ ಮರಿಗಳಂತೆಯೂ, ಧೂಳಿನಿಂದ ಧೂಸಂತರೂ ಭಸ್ಮದಿಂದ ಅಲಂಕೃತರೂ, ಸೆಗಣಿಯಿಂದ ಅಲಂಕೃತರೂ, ಅಗ್ನಿಪುತ್ರರಾದ ಶಾಖ-ವಿಶಾಖರಂತೆ ತೋರುತ್ತಿದ್ದರು.

## ಕೃಷ್ಣ–ದಾಮೋದರನಾದ

ಅತಿಪ್ರಸಕ್ತೌ ತೌ ದೃಷ್ಟ್ವಾ ಸರ್ವವ್ರಜ ವಿಚಾರಿಣೌ ।
ನಾಶಕತ್ ತೌ ವಾರಯಿತುಂ ನಂದಗೋಪಃ ಸುದುರ್ಮದೌ ॥ 3 ॥

ತತೋ ಯಶೋದಾ ಸಂಕ್ರುದ್ಧಾ ಕೃಷ್ಣಂ ಕಮಲಲೋಚನಮ್ ।
ಆನಾಯ್ಯ ಶಕಟೀಮೂಲೇ ಭರ್ತ್ಸಯಂತೀ ಪುನಃ ಪುನಃ ॥ 4 ॥

ದಾಮ್ನಾ ಚೈವೋದರೇ ಬಧ್ವಾ ಪ್ರತ್ಯಬಂಧದುಲೂಖಲೇ ।
ಯದಿ ಶಕ್ತೋಽಸಿ ಗಚ್ಛೇತಿ ತಮುಕ್ತ್ವಾ ಕರ್ಮ ಸಾಕರೋತ್ ॥ 5 ॥

ರಾಮಕೃಷ್ಣರು ತಂದೆ ತಾಯಿಗೆ ಆನಂದದಾಯಕವಾಗಿ ಸುಂದರ ಕುಮಾರರಾಗಿ ಬೆಳೆಯುತ್ತಾ, ಸರ್ವದಾ ವಿವಿದೆಡೆಗಳಲ್ಲಿಯೇ ಆಸಕ್ತರಾಗಿ ವ್ರಜದಲ್ಲಿ ಓಡಾಡುತ್ತಿದ್ದರು. ಇವರನ್ನು ಹಿಡಿಯುವುದೇ ಮಹಾಕಷ್ಟವಾಯಿತು ಆ ತಾಯಿಗೆ. ದನಗಳ ಕೊಟ್ಟಿಗೆಗೆ ನುಗ್ಗುವುದು, ಕರುಗಳ ಬಾಲ ಕೈಯಿಂದ ಜಗ್ಗುವುದು. ಇಬ್ಬರೂ ಒಂದು ಕಡೆ ನಿಲ್ಲದೆ ಚಕ್ರದಂತೆ ಊರೂ ತುಂಬಾ ಓಡಾಡುತ್ತಿದ್ದರು. ಅದರಲ್ಲಿಯೂ ಕೃಷ್ಣನ ಪಾದರಸದಂತ ಓಡಾಟ ತಾಯಿಗೆ ತಾಳಲಾಗಲಿಲ್ಲ. ಅವನ ಹುಡುಗಾಟ-ಸರ್ವತ್ರ ಅಲೆದಾಟ, ತುಂಟಾಟ ತಡೆಯಲಾಗದೆ ಕೊನೆಗೆ ಹಗ್ಗ ತಂದು ಕೃಷ್ಣನ ಉದರಕ್ಕೆ ಬಿಗಿದು ದಾಮೋದರನನ್ನಾಗಿಸಿ, ಒರಳಿಗೂ ಕಟ್ಟಿ ಹಾಕಿದಳು. ಗದರಿಸುತ್ತಾ, ಎಲೈ ತುಂಟ! ನಿನ್ನ ಚಂಚಲ ಚೇಷ್ಟೆಗಳಿಂದ ನನಗೆ ಸಾಕಾಗಿದೆ. ಇದಕ್ಕಾಗಿ ಒರಳಿಗೆ ಕಟ್ಟಿ ಹಾಕಿದ್ದೇನೆ. ನಿನಗೆ, ಆದರೆ ಬಿಡಿಸಿಕೊಂಡು ಹೋಗು ನೋಡೋಣ ಎಂದು ಹೇಳಿ ತನ್ನ ಮನೆಯ ಕಾರ್ಯದಲ್ಲಿ ವ್ಯಗ್ರಳಾದಳು.

**ವ್ಯಗ್ರಾಯಾಂತು ಯಶೋದಾಯಾಂ ನಿರ್ಜಗಾಮ ತತೋಽಂಗಣಾತ್ ।**
**ಸೋಽಂಗಣಾನ್ನಿಃಸೃತಃ ಕೃಷ್ಣಃ ಕರ್ಷಮಾಣಃ ಉಲೂಖಲಮ್ ॥ 6 ॥**
**ಯಮಲಾಭ್ಯಾಂ ಪ್ರವೃದ್ಧಾಭ್ಯಾಂ ಅರ್ಜುನಾಭ್ಯಾಂ ಚರನ್ ವನೇ ।**
**ಮಧ್ಯಾತ್ ನಿಶ್ಚಕ್ರಾಮ ತಯೋಃ ಕರ್ಷಮಾಣಃ ಉಲೂಖಲಮ್ ॥ 7 ॥**

ಯಶೋದೆಯು ತನ್ನ ಕಾರ್ಯದಲ್ಲಿ ವ್ಯಗ್ರಳಾದದ್ದನ್ನು ನೋಡಿದ ಶ್ರೀಕೃಷ್ಣ ತನ್ನನ್ನು ಕಟ್ಟಿದ ಒರಳನ್ನೆ ಸೆಳೆದುಕೊಂಡು ಹೊರಟ. ಬಾಲಕರಂತೆ ಚಾರುಚರಣಗಳಿಂದ ಚಂಕ್ರಮಣ ಮಾಡುತ್ತಾ ಒರಳನ್ನು ಜಗ್ಗಿಕೊಂಡೇ ಹೊರಟ. ಜನರೆಲ್ಲ ಬೆರಗಾಗಿ ನೋಡುತ್ತಾ ನಿಂತುಕೊಂಡಿರುವಾಗಲೇ ಮನೆಯಂಗಳವನ್ನು ದಾಟಿ ಬೀದಿಗೆ ಬಂದನು. ಅದನ್ನು ಎಳೆಯುತ್ತಿರುವಾಗ ತನಗೆ ಕಟ್ಟಿದ್ದ ಒರಳೂ ಸಹ ಬೀದಿಯಲ್ಲಿ ಉರುಳುತ್ತಾ ತನ್ನ ಹಿಂದೆ ಬರುತ್ತಿತ್ತು. ಎಳೆಯುತ್ತಾ ಓಣಿದಾಟಿ ಊರ ಹೊರಗೆ ಬಂದನು.

### ತರುಭಂಜನಾಗಿ ಗೋಪರಂಜನನಾದ

ನಂದಗೋಕುಲದ ಹೊರವಲಯದಲ್ಲಿ ಎರಡು ಮತ್ತಿ ವೃಕ್ಷಗಳು ಭಯಂಕರವಾಗಿ ಬೆಳೆದು ನಿಂತಿದ್ದವು. ಆ ಹೆಮ್ಮರಗಳ ನಡುವೆ ಹಾಯ್ದು

ತಾನು ಹೊರಗೆ ಬಂದ. ಆ ಒರಳು ಮಾತ್ರ ತಲೆಕೆಳಗಾಗಿ ಅಡ್ಡವಾಗಿ ಬಿದ್ದಿತು. ಆ ಜೋಡಿ ವೃಕ್ಷಗಳ ನಡುವೆ ಹೋಗಲಾಗದೆ ಗಿಡಕ್ಕೆ ಅಡ್ಡವಾಗಿ ಅಲ್ಲಿಯೆ ನಿಂತಿತು. ವೃಕ್ಷಗಳ ಸಂಧಿಯಿಂದ ಆಚೆ ಹೋಗಿದ್ದ ಕೃಷ್ಣನು ಈಚೆಯಿಂದ ಬಲವಾಗಿ ಎಳೆದನು. ಆಗ ಭಯಂಕರ ಶಬ್ದ ಮಾಡುತ್ತಾ ಆ ಗಗನಚುಂಬಿ ಮತ್ತೀ ಮರಗಳು ಪಟಪಟನೆ ಬಿರಿಯುತ್ತಾ ಉರುಳ ಕೃಷ್ಣನ ಎಡಕ್ಕೊಂದು ಬಲಕ್ಕೊಂದು ಬಿದ್ದವು. ಇವೆರಡರ ಮಧ್ಯೆ ಸುರಕ್ಷಿತವಾಗಿ ನಗುತ್ತಾ ನಿಂತುಕೊಂಡಿದ್ದನು.

**ನಿದರ್ಶನಾರ್ಥಂ ಗೋಪಾನಾಂ ದಿವ್ಯಂ ಸ್ವಬಲಮಾಸ್ಥಿತಃ ।**
**ತದ್ದಾಮ ತಸ್ಯ ಬಾಲಸ್ಯ ಪ್ರಭಾವಾಭವದ್ ದೃಢಮ್ ॥ 8 ॥**
**ಯಮುನಾ ತೀರ ಮಾರ್ಗಸ್ಥಾಃ ಗೋಪ್ಯಸ್ತಂ ದದೃಶುಃ ಶಿಶುಮ್ ।**
**ಕ್ರಂದಂತ್ಯೋ ವಿಸ್ಮಯಂತ್ಯಶ್ಚ ಯಶೋದಾಮೂಚುರಂಗನಾಃ ॥ 9 ॥**
**ಏಹ್ಯಾಗಚ್ಛ ಯಶೋದೇ ತ್ವಂ ಸಂಭ್ರಮಾತ್ ಕಿಂ ವಿಲಂಬಸೇ ।**
**ಯೌ ತಾವರ್ಜುನ ವೃಕ್ಷೌ ತು ವ್ರಜೇ ಸತ್ಯೋಪಯಾಚನೌ ॥ 10 ॥**
**ಪುತ್ರಸ್ಯೋಪರಿ ತಾವೇತೌ ಪತಿತೌ ತೇ ಮಹೀರುಹೌ ॥ 11 ॥**

ಶ್ರೀಕೃಷ್ಣನು ಒರಳನ್ನು ಎಳೆಯುತ್ತಿರುವಾ ಅವನ ಉದರ ಸಂಲಗ್ನವಾದ ಹಗ್ಗವೂ ಬಹಳ ದೃಢವಾಗಿಯೇ ಇತ್ತು. ಯಮುನಾ ತೀರದಲ್ಲಿದ್ದ ಗೋಪಿಯರು ಗಿಡದ ಮಧ್ಯೆಯಿರುವ ಶಿಶುವನ್ನು ನೋಡಿದರು. ಅದನ್ನು ನೋಡಿ ಆಶ್ಚರ್ಯಚಕಿತರಾದರು. ಅವರು ಅಳುತ್ತಾ ಯಶೋದೆಯ ಬಳಿಗೆ ಸಾರಿ ಹೀಗೆಂದರು. ಯಶೋದೆ! ಬೇಗ ಬಾ ಇಂತಹ ಮಹಾನರ್ಥ ಬಂದಿರುವಾಗ ಎಷ್ಟು ತಡ ಮಾಡುತ್ತಿರುವೆ. ನಮ್ಮ ಊರಾಚೆ ಇರುವ, ಸೇವಾಸೂತ್ರಗಳಿಂದ ಪೂಜಿಸುವವರಿಗೆ ಬೇಡಿದ್ದನ್ನೆಲ್ಲ ನೀಡುವ ಆ ಪವಿತ್ರವಾದ ಅರ್ಜುನ **ವೃಕ್ಷಗಳೆರಡು**[2] ಮುರಿದು ನಿನ್ನ ಕೃಷ್ಣನ ಮೇಲೆ ಬಿದ್ದಿವೆ.

---

2. ಅರ್ಜುನ ವೃಕ್ಷಪಾತ :

1) ಕುಬೇರಪುತ್ರರು ಕೈಲಾಸ ಉಪವನ ಪ್ರದೇಶದಲ್ಲಿ ಗಂಗೆಯಲ್ಲಿ ಪತ್ನಿಯೊಂದಿಗೆ ವಿಹರಿಸುತ್ತಿದ್ದರು. ಭಗವದಿಚ್ಛೆಯಂತೆ ನಾರದರು ಅಲ್ಲಿಗೆ ಬಂದಾಗ ನಾಚಿದ ವಿವಸ್ತ್ರ ಸ್ತ್ರೀಯರು ವಸ್ತ್ರಧರಿಸಿದರು. ಮಧುಪಾನ ಮತ್ತರಾದ ನಲಕೂಬರ-ಮಣಿಗ್ರೀವರು ವಸ್ತ್ರವಿಲ್ಲದ್ದೆ ದಿಗಂಬರರಾಗಿಯೇ ಇದ್ದರು. ಅವರ ಮೇಲಿನ

ಕರುವುಳ್ಳ ಕೊರಳಿಗೆ ಕಣ್ಣಿಯನ್ನು ಕಟ್ಟುವಂತೆ ಕೃಷ್ಣನ ಉದರಕ್ಕೂ ನೀನು ದಪ್ಪವಾದ ಹಗ್ಗವನ್ನು ಬಿಗಿದಿದ್ದರಿಂದ ಎಲ್ಲಿಯೂ ಹೋಗಲಾಗದೆ ಗಿಡಗಳ ಮಧ್ಯೆ ನಗುತ್ತಾ ಕುಳಿತಿದ್ದಾನೆ. ಮೂರ್ಖಳೇ ! ನೀನು ಮಹಾಬುದ್ಧಿವಂತಳೆಂದು ತಿಳಿದಿರುವಿ. ಇಂತಹ ಬಿಗಿಯಾದ ಹಗ್ಗವನ್ನು ಮಗುವಿಗೆ ಕಟ್ಟುವರೆ? ಶೀಘ್ರವಾಗಿ ಧಾವಿಸು. ಮೃತ್ಯುವಿನ ದವಡೆಯಿಂದ ಪಾರಾಗಿರುವ ನಿನ್ನ ಮಗನನ್ನು ಮೊದಲು ಹಗ್ಗಬಿಚ್ಚಿ ಎತ್ತಿಕೊ ಹೋಗು. ಎಂದು ನೀರಿಗೆ ಬಂದಿದ್ದ ನೀರೆಯರೆಲ್ಲ ಅವಳನ್ನು ಬೈಯ್ದರು.

**ಸಾ ಭೀತಾ ಸಹಸೋತ್ಥಾಯ ಹಾಹಾಕಾರಂ ಪ್ರಕುರ್ವತೀ ।**
**ತಂ ದೇಶಮಗಮದ್ ಯತ್ರ ಪಾತಿತೌ ತಾವುಭೌ ದ್ರುಮೌ ॥ 12 ॥**

ಅತ್ಯಂತ ಭಯಗೊಂಡ ಯಶೋದೆಯು ಕೆಲಸ ಬಿಟ್ಟು ಎದ್ದು ಹಾಹಾಕಾರ ಮಾಡುತ್ತಾ, ಅರ್ಜುನವೃಕ್ಷವಿದ್ದೆಡೆಗೆ ಬಂದಳು. ನನ್ನ ಮಗನಿಗೇನಾಯಿತು? ಎನ್ನುತ್ತಾ ಎರಡು ವೃಕ್ಷಗಳ ಮಧ್ಯದಲ್ಲಿದ್ದ ತನ್ನ ಪುಟ್ಟ ಕೃಷ್ಣನನ್ನು ನೋಡಿದಳು. ಹೊಟ್ಟೆಗೆ ಬಿದಿದ್ದ ಹಗ್ಗವು ಹಾಗೆಯೇ ಇತ್ತು. ಕೃಷ್ಣನು ಇನ್ನು ಎಳೆಯುತ್ತಲೇ ಇದ್ದ. ಗೋವ್ರಜದ ಗೋಪಿಯರು, ವೃದ್ಧರು, ತರುಣರು ಸಮಸ್ತರೂ ಈ ವೃಕ್ಷ ಬಿದ್ದ ಬಗ್ಗೆ ಮಾತನಾಡುತ್ತಿದ್ದರು. ಅನಾದಿಕಾಲದ ಮಹಾವೃಕ್ಷ ಬಿದ್ದ

---

ಅನುಗ್ರಹಕ್ಕಾಗಿ 'ವೃಕ್ಷವಾಗಿರಿ' ಎಂದರು. ಇಲ್ಲಿಯೂ ನಿನಗೆ ಸ್ಮರಣೆಯಿರುತ್ತದೆ ಎಂದು.

**ನಲತೀತಿ ಅತ್ತೀತಿ ನಲಃ ಣಲ ಅದನೇ, ನಾರಾಯಣಃ ತಂ ಕೂಜನ್ ವರಯತೀತಿ** – ನಾರಾಯಣನನ್ನು ನಿರಂತರ ಸ್ತುತಿಸುತ್ತಾ ವರ ಪಡೆದವನಾದ. ಗಾನದಿಂದ ಹರಿಯನ್ನು ಕೊಂಡಾಡುವವನು. **ಮಣಿಃ ಪ್ರಧಾನಂ ವಿಷ್ಣುಃ, ಭಗವನ್ನಾಮಾಖ್ಯಂ ರತ್ನಂ ಸರ್ವದಾ ಕಂಠೇಽಸ್ತೀತಿ ಮಣಿಗ್ರೀವಃ** ಇವರಿಬ್ಬರನ್ನೂ ತರುತ್ವರಿಂದ ಪಾರು ಮಾಡಿ, ಅಲ್ಲಿದ್ದ ಧುನಿ ಚಮೂಯೆಂಬ ಪಾರ್ವತೀ ವರದರ್ಪಿತ ದೈತ್ಯರನ್ನೂ ಸಂಹರಿಸಿದ

**ನಲಕೂಬರ ಮಣಿಗ್ರೀವೌ ಮೋಚಯಿತ್ವಾ ತು ಶಾಪತಃ ।**
**ಧುನಿಷ್ಟಮುಶ್ಚ ತೌ ತರೂ ಸಮಾಶ್ರಿತೌ ನಿಸೂದಿತೌ ॥**

2) **ಚಕ್ರೇ ಸೋಽರ್ಜುನನಾಶಂ ಪ್ರಾಪ್ನೋತಿ ಚ ಯತ್ ಸ್ಮೃತಿಃ ಸದಾರ್ಜುನನಾಶನಮ್॥** ಅರ್ಜುನವೃಕ್ಷ ನಾಶ ಮಾಡಿದ ಶ್ರೀಕೃಷ್ಣ ಶುದ್ಧ ಸಾತ್ವಿಕನು ಯಾರ ಸ್ಮರಣೆ ಮಾಡಿದ ಮಾತ್ರಕ್ಕೆ ಸದಾತನ ಸುಖವನ್ನು ಪಡೆಯುವನೋ ಅವನಿಗೆ ಇದೇನು ಮಹಾ.

ಪರಮಾದ್ಭುತ ನೋಡಲು ಕಾತರತೆಯಿಂದ ಅಲ್ಲಿ ನೆರೆದಿದ್ದರು. ಬಾಯಿಗೆ ಬಂದಂತೆ ಒಬ್ಬೊಬ್ಬರು ಒಂದೊಂದು ಮಾತನ್ನಾಡುತ್ತಿದ್ದರು.

**ಕೇನೇಮೌ ಪಾತಿತೌ ವೃಕ್ಷೌ ಘೋಷಸ್ಯಾಯತನೋಪಮೌ ।**
**ವಿನಾವಾತಂ ವಿನಾ ವರ್ಷಂ ವಿದ್ಯುತ್ ಪ್ರಪತನಂ ವಿನಾ ॥ 13 ॥**
**ವಿನಾ ಹಸ್ತಿಕೃತಂ ದೋಷಂ ಕೇನೇಮೌ ಪಾತಿತೌ ದ್ರುಮೌ ।**
**ಭೂಮೌ ನಿಪತಿತೌ ವೃಕ್ಷೌ ವಿತೋಯೌ ಜಲದಾವಿವ ॥ 14 ॥**

ಅಲ್ಲಿರುವ ತರುಣ, ವೃದ್ಧರೆಲ್ಲರೂ ಅಚ್ಚರಿಯಿಂದ ಬಿರುಗಾಳಿಯಿಲ್ಲ, ಮಳೆ ಬಿದ್ದಿಲ್ಲ, ಸಿಡಿಲು ಹೊಡೆದಿಲ್ಲ, ಮದ್ದಾನೆಯ ಬಂದು ತಿಕ್ಕಿಲ್ಲ, ಅಂದ ಮೇಲೆ ಇಂತಹ ಆಕಾಶಚುಂಬಿ ವೃಕ್ಷಗಳು ಬೀಳುವುದೆಂದರೇನು?

ಈ ವೃಕ್ಷಗಳೆರಡೂ ವ್ರಜವಾಸಿಗಳಿಗೆಲ್ಲ ಕಲ್ಪವೃಕ್ಷದಂತೆ ಕಾಮಿತಾರ್ಥ-ಪ್ರದಳಾಗಿದ್ದವಷ್ಟೆ! ಆದ್ದರಿಂದ ಈ ಗ್ರಾಮದೇವತೆಯಂತಿರುವ ಈ ಜೋಡಿ ವೃಕ್ಷಗಳು ಬಿದ್ದದ್ದು ಅವಲಕ್ಷಣದಂತೆ ತೋರುತ್ತದೆ. ಇದು ಮೂರನೇ ಉತ್ಪಾತವಾಗಿದೆ. ಪೂತನಾ, ಶಕಟಾಸುರ, ಅರ್ಜುನವೃಕ್ಷ ನಾಶ ಹೀಗೆ ಮೂರು ಉತ್ಪಾತಗಳನ್ನು ನೋಡಿದರೆ ಖಂಡಿತಾ ನಾವಿನ್ನು ಇಲ್ಲಿ ಇರುವುದು ಒಳ್ಳೆಯದಲ್ಲ.

ಭೂಮಿಯ ಮೇಲೆ ಬಿದ್ದಿರುವ ಈ ವೃಕ್ಷಗಳು ನೀರಿಲ್ಲದ ಮೋಡಗಳಂತೆ ತೋರುತ್ತಿವೆ. ನಂದಗೋಪನೇ! ಈ ವೃಕ್ಷಗಳೆರಡೂ ಸಹ ಈ ನಂದವ್ರಜದ ಜೊತೆಯಲ್ಲಿಯೇ ಹುಟ್ಟಿ ಬೆಳೆದಿದ್ದವು. ಗೋವ್ರಜಕ್ಕೆ ಯಾವಾಗಲೂ ಮಂಗಲವನ್ನೇ ಉಂಟು ಮಾಡಿವೆ. ಈ ವೃಕ್ಷಗಳು ಬೀಳುವಾಗಲೂ ನಿನ್ನ ಮಗನ ವಿಷಯದಲ್ಲಿ ಅವನ ಮೇಲೆ ಬೀಳದೆ ಮಗ್ಗಲಿಗೆ ಬಿದ್ದು ಪರಮ ಉಪಕಾರ ಮಾಡಿದೆ. ಆದ್ದರಿಂದ ನಾವು ಇನ್ನು ಇಲ್ಲಿರುವುದು ಸಮಂಜಸವೆನಿಸದು. ಅನ್ಯತ್ರ ಹೋಗೋಣ ಎನ್ನುತ್ತಿರುವಾಗಲೇ, ನಂದನು ಶ್ರೀಕೃಷ್ಣನ ಉದರಕ್ಕೆ ಬಿಗಿದಿದ್ದ ಹಗ್ಗವನ್ನು ಬಿಚ್ಚಿ ಒರಳಿನಿಂದ ಮುಕ್ತಗೊಳಿಸಿದನು. ಬಹಳ ಕಾಲದವರೆಗೂ ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಮುದ್ದಾಡುತ್ತಿದ್ದನು. ಎಷ್ಟು ನೋಡಿದರೂ ತೃಪ್ತನಾಗಲಿಲ್ಲ.

## ದಾಮೋದರನಾಮ ಹೊಂದಿದ ಕೃಷ್ಣ

**ಸ ಚ ತೇನೈವ ನಾಮ್ನಾ ತು ಕೃಷ್ಣೋ ವೈ ದಾಮ ಬಂಧನಾತ್ ।**
**ಗೋಷ್ಠೇ ದಾಮೋದರ ಇತಿ ಗೋಪೀಭಿಃ ಪರಿಗೀಯತೇ ॥ 15 ॥**
**ಏತದಾಶ್ಚರ್ಯಭೂತಂ ಹಿ ಬಾಲಸ್ಯಾಸೀದ್ ವಿಚೇಷ್ಟಿತಮ್ ॥ 16 ॥**

ಯಶೋದೆಯು ಹೀಗೆ ಶ್ರೀಕೃಷ್ಣನಿಗೆ ಹಗ್ಗವನ್ನು ಕಟ್ಟಿ ಹಾಕಿದ ಕಾರಣ ದಾಮೋದರನೆಂದು ಪ್ರಸಿದ್ಧನಾಗಿ ಗೋವಿಂದ-ದಾಮೋದರನೆಂದು ಗೋಪಿಕೆಯರು ಅವನ ಮೇಲೆ ಅನೇಕ ಹಾಡುಗಳನ್ನು ರಚಿಸಿ ಬಾಲಲೀಲೆಗಳನ್ನು ಹಾಡತೊಡಗಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಅರ್ಜುನವೃಕ್ಷಪಾತವೆಂಬಲ್ಲಿ
ಏಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥



# ಅಥ ಅಷ್ಟಮೋಽಧ್ಯಾಯಃ

## ಶ್ರೀಕೃಷ್ಣಲೀಲೆಗಳು

*ವೈಶಂಪಾಯನ ಉವಾಚ-*

ಏವಂ ತೌ ಬಾಲ್ಯಮುತ್ತೀರ್ಣೌ ಕೃಷ್ಣಸಂಕರ್ಷಣಾವುಭೌ ।
ತಸ್ಮಿನ್ನೇವ ವ್ರಜಸ್ಥಾನೇ ಸಪ್ತವರ್ಷೌ ಬಭೂವತುಃ ॥ 1 ॥

ನೀಲಪೀತಾಂಬರಧರೌ ಪೀತ ಶ್ವೇತಾನುಲೇಪನೌ ।
ಬಭೂವತುಃ ವತ್ಸಪಾಲೌ ಕಾಕಪಕ್ಷಧರಾವುಭೌ ॥ 2 ॥

ಪರ್ಣವಾದ್ಯಂ ಶ್ರುತಿಸುಖಂ ವಾದಯಂತೌ ವರಾನನೌ ।
ಶುಶುಭಾತೇ ವನಗತೌ ತ್ರಿಶೀರ್ಷಾವಿವ ಪನ್ನಗೌ ॥ 3 ॥

ಜನಮೇಜಯನೇ ಕೇಳು! ಶ್ರೀಕೃಷ್ಣ ಬಲರಾಮರು ಗೋಕುಲದಲ್ಲಿ ಬಾಲ್ಯವನ್ನು ಕಳೆದು ಏಳು ವರ್ಷದ ಹುಡುಗರಾದರು. ದಾಮೋದರನು ಹಳದಿ ಪೀತಾಂಬರ ಧರಿಸಿದ್ದರೆ, ಬಲರಾಮನು ನೀಲಾಂಬರವನ್ನು ಧರಿಸಿದ್ದನು. ಹಾಗೆಯೇ ಹಳದಿ ಗಂಧಲೇಪನ – ಬಿಳಗಂಧ ಲೇಪನವನ್ನೂ, ಕೆನ್ನೆಗಳ ಮೇಲೆ ಕೂದಲುಗಳನ್ನು ಇಳಬಿಟ್ಟಿದ್ದ ಇಬ್ಬರೂ ಕರುಗಳನ್ನು ಮೇಯಿಸಲು ಕಾಡಿಗೆ ಹೋಗಿ, ಎಲೆಗಳನ್ನು ಸುತ್ತಿ ಮಾಡಿದ ಪೀಪಿಗಳನ್ನು ಕಿವಿಗಿಂಪಾಗುವಂತೆ ಊದುತ್ತಾ, ಮೂರು ಹೆಡೆಗಳುಳ್ಳ ಸರ್ಪದಂತೆ ಕಾಣುತ್ತಿದ್ದರು. ನವಿಲುಗರಿಗಳಿಂದ ಯುಕ್ತವಾದ ಅಂಗದ ಹಾಗೂ ಕರ್ಣಕುಂಡಲ ಧರಿಸಿದ್ದರು. ವನಮಾಲೆಗಳಿಂದ ಅಲಂಕೃತರೂ, ಹಗ್ಗವನ್ನೇ ಯಜ್ಞೋಪವೀತದಂತೆ ಧರಿಸಿದ್ದರು. ಕೊಳಲನ್ನು

ಬಾರಿಸುತ್ತಾ ಇದ್ದರು. ಪರಸ್ಪರವಾಗಿ ನಗುತ್ತಾ, ಅಲ್ಲಲ್ಲಿ ಕ್ರೀಡೆಯಾಡುತ್ತಾ, ತರಗಲೆಗಳ ಹಾಸಿಗೆಗಳಲ್ಲಿ ಮಲಗುತ್ತಾ, ತೂಕಡಿಸುತ್ತಾ ಹೀಗೆ ಶ್ರೀಕೃಷ್ಣ-ಬಲರಾಮರು ಮಹಾವನವನ್ನೇ ಶೋಭಾಯಮಾನ-ವನ್ನಾಗಿಸುತ್ತಾ ಕರುಗಳನ್ನು ಕಾಯುತ್ತಿದ್ದರು. ಚಂಚಲ ಸ್ವಭಾವದ ಸಿಂಹದ ಮರಿಗಳಂತೆ ತಿರುಗಾಡುತ್ತಾ ಆಟವಾಡುತ್ತಿದ್ದರು. ಅವರಿಂದಾಗಿ ವನಕ್ಕೆಲ್ಲ ಒಂದು ಕಳೆ ತುಂಬಿ ಜೀವ ತುಂಬಿದಂತಾಗಿತ್ತು.

**ಅಥ ದಾಮೋದರಃ ಶ್ರೀಮಾನ್ ಸಂಕರ್ಷಣಮುವಾಚ ಹ ।**
**ಆರ್ಯ ನಾಸ್ಮಿನ್ ವನೇ ಶಕ್ಯಂ ಗೋಪಾಲೈಃ ಸಹ ಕ್ರೀಡಿತುಮ್ ॥ 4 ॥**
**ಅವಗೀತಮಿದಂ ಸರ್ವಮಾವಾಭ್ಯಾಂ ಭುಕ್ತಕಾನನಮ್**
**ಪ್ರಕ್ಷೀಣತೃಣಕಾಷ್ಠಂ ಚ ಗೋಪೈಃ ಮಥಿತ ಪಾದಪಮ್ ॥ 5 ॥**

ಒಂದು ದಿನ ದಾಮೋದರನು ಸಂಕರ್ಷಣನಿಗೆ ಅಣ್ಣ! ಇನ್ನು ಮುಂದೆ ನಾವಿಲ್ಲಿ ಗೋಗೋಪಾಲಕರೊಂದಿಗೆ ಕ್ರೀಡೆಯಾಡುವುದು ಶಕ್ಯವಾಗಲಾರದು. ಈ ಸ್ಥಳದಲ್ಲಿ ಒತ್ತಾಗಿ ಬೆಳೆದಿದ್ದ ಗಿಡಮರಗಳಂದ ಶೋಭಿಸುತ್ತಿದ್ದ ವನವನ್ನು ಈ ಗೋಪಾಲಕರು ಕಟ್ಟಿಗೆಗಾಗಿ, ಮನೆಗಾಗಿ, ಉರುವಲುಗಾಗಿ ಕತ್ತರಿಸಿ ಬಿಟ್ಟಿರುವುದರಿಂದ ಈಗ ಈ ವನವೆಲ್ಲ ಮಾಯವಾಗಿ ಆಕಾಶದಂತೆ ಬಟ್ಟ ಬಯಲಾಗಿದೆ.

### ವೃಂದಾವನಕ್ಕೆ ಹೋಗಲು ಸಲಹೆ

ಯಾವ ಹುಲ್ಲು ಸೌದೆಗಳು ನಮಗೆ ಹತ್ತಿರದಲ್ಲಿಯೆ ಲಭಿಸುತ್ತಿದ್ದವೋ ಅವುಗಳನ್ನು ಬಹಳ ದೂರ ಹೋಗಿ ತರಬೇಕಾಗಿದೆ. ಯಾವ ದುಂಡಾದ ಅಗಳಗಳಲ್ಲಿ ಹೆಬ್ಬಾಗಿಲುಗಳಾಗಿದ್ದು ನೋಡಲು ಚೆಂದವಾಗಿದ್ದವೋ ಅವುಗಳೆಲ್ಲ ಈಗ ದನದ ಕೊಟ್ಟಿಗೆಯಲ್ಲಿ ನೀರನ್ನು ಕಾಸಲು ಎರವಲುಗಳಾಗಿ ಹೋದವು. ಈ ಅರಣ್ಯದಲ್ಲಿ ನೀರೂ ಸಹ ದುರ್ಲಭವಾಗುತ್ತಿದೆ. ದನಕರುಗಳಿಗೆ ಇದರಿಂದ ಬಹಳ ತೊಂದರೆಯಾಗುತ್ತದೆ. ದ್ರುಮಗಳೆಲ್ಲ ವಿರಳವಾಗಿದೆ. ಆಶ್ರಯಕ್ಕೆ ಯೋಗ್ಯವಾಗಿಲ್ಲ. ಭಯಂಕರವಾಗಿ ಕಾಣುತ್ತಿದೆ. ವೃಕ್ಷಗಳಲ್ಲಿದ್ದ ಪಕ್ಷಿಗಳೂ ಕೂಡ ಬೇರೆಡೆಗೆ ವಲಸೆ ಹೋಗಿದೆ. ಇದು ವ್ಯಂಜನರಹಿತ ಅನ್ನದಂತಾಗಿದೆ. ಇಲ್ಲಿ ಸಿಗುವ ಸೌದೆಯನ್ನು ತರಕಾರಿಗಳನ್ನೂ, ದವಸ ಧಾನ್ಯ ಎಲ್ಲವನ್ನೂ ಕೊಂಡುಕೊಳ್ಳುವ ಪ್ರಸಂಗವು ಗೋಪಾಲಕರಿಗೆ ಬಂದಿದೆ. ಈ ಹಳ್ಳಿಯೂ ಪಟ್ಟಣವಾಗತೊಡಗಿದೆ.

**ಶೈಲಾನಾಂ ಭೂಷಣಂ ಘೋಷೋ ಘೋಷಾಣಾಂ ಭೂಷಣಂ ವನಮ್।**
**ವನಾನಾಂ ಭೂಷಣಂ ಗಾವಃ ತಾಶ್ಚಾಸ್ಮಾಕಂ ಪರಾಗತಿಃ ॥ 6 ॥**

**ತಸ್ಮಾದನ್ಯಂ ವನಂ ಯಾಮಃ ಪ್ರತ್ಯಗ್ರಯವಸೇಂಧನಮ್ ।**
**ಇಚ್ಛಂತ್ಯನುಪಭುಕ್ತಾನಿ ಗಾವೋ ಭೋಕ್ತುಂ ತೃಣಾನಿ ಚ ॥ 7 ॥**

**ತಸ್ಮಾದ್ ವನಂ ನವತೃಣಂ ಗಚ್ಛಂತು ಧನಿನೋ ವ್ರಜಾಃ ।**

ಪರ್ವತಗಳ ತಪ್ಪಲು ಪ್ರದೇಶದಲ್ಲಿ ಗ್ರಾಮಗಳರುವುದು ಪರ್ವತಗಳಿಗೆ ಅಲಂಕಾರ. ಗೋವ್ರಜದ ಸುತ್ತಲೂ ಅರಣ್ಯವಿದ್ದರೆ ಅದು ಗೋವುಗಳ ಸಮೂಹಕ್ಕೆ ಅಲಂಕಾರವು. ಎಲ್ಲೆಡೆ ಹುಲ್ಲು ಮೇಯುತ್ತಿರುವ ಗೋವುಗಳು ಅರಣ್ಯಕ್ಕೆ ಭೂಷಣ ಪ್ರಾಯವಾಗಿರುತ್ತದೆ. ಅಂತಹ ಗೋವುಗಳೇ ನಮಗೆ ಆಧಾರ.

ಅಣ್ಣನೇ! ಆದ್ದರಿಂದ ಹಚ್ಚ ಹಸಿರಾದ ತೃಣಾದಿಗಳಿಂದ ತುಂಬಿರುವ, ಉರುವುಲುಗಳಿಂದ ಸಮೃದ್ಧವಾದ ಮತ್ತೊಂದು ಅರಣ್ಯಕ್ಕೆ ನಾವೆಲ್ಲವೂ ಹೋಗೋಣ. ನಮ್ಮ ಗೋವುಗಳೂ ಸಹ ಯಾರಿಂದಲೂ ಭುಕ್ತವಲ್ಲದ ಹುಲ್ಲು ತಿನ್ನಲು ಆಸೆ ಪಡುತ್ತವೆ.

ಆದ್ದರಿಂದ ಗೋವ್ರಜದಲ್ಲಿ ಗೋಧನಿಕರು ಹಚ್ಚ ಹಸುರಾದ ತೃಣವಿರುವ ಅರಣ್ಯಕ್ಕೆ ಪ್ರಯಾಣ ಮಾಡಲಿ.

**ನ ದ್ವಾರ ಬಂಧಾವರಣಾ ನ ಗೃಹ ಕ್ಷೇತ್ರಿಣ ಸ್ತಥಾ ।**
**ಪ್ರಶಸ್ತಾ ವೈ ವ್ರಜಾ ಲೋಕೇ ಯಥಾ ವೈ ಚಕ್ರಧಾರಿಣಃ ॥ 8 ॥**

**ಶಕೃನ್ಮೂತ್ರೇಷು ತೇಷ್ವೇವ ಜಾತಕ್ಷಾರ ರಸಾಯನಮ್ ।**
**ನ ತೃಣಂ ಭುಂಜತೇ ಗಾವೋ ನಾಪಿ ತತ್ ಪಯಸೇ ಹಿತಮ್ ॥ 9 ॥**

ಯಾವ ಗೊಲ್ಲರ ಹಳ್ಳಿಯಲ್ಲಿ ಮನೆ ಬಾಗಿಲುಗಳು ಮುಚ್ಚಿವೆಯೋ ಮನೆಯ ಸುತ್ತಲೂ ಪ್ರಾಕಾರಾವರಣವಿದೆಯೋ, ಸ್ಥಿರವಾದ ಮನೆಗಳು ಸ್ಥಿರವಾದ ವ್ಯವಸಾಯ ಭೂಮಿಯಿರುವವೋ ಆ ಗೊಲ್ಲರ ಹಳ್ಳಿಯು ಪ್ರಶಸ್ತವಲ್ಲ. ಇದಲ್ಲದೆ ಗೋವುಗಳ ಕರುಗಳ ಸೆಗಣಿ, ಗಂಜಲ ಬಿದ್ದು ಹುಲ್ಲಿನ ರಸವೆಲ್ಲವೂ ಕ್ಷಾರಯುಕ್ತವಾಗಿದ್ದು ಆ ಹುಲ್ಲನ್ನು ಗೋವುಗಳು ತಿನ್ನಲಾರವು. ಮೇಯುವುದೂ

ಇಲ್ಲ. ಒಂದು ವೇಳೆ ಇಂತಹ ಕ್ಷಾರಯುಕ್ತ ತೃಣವನ್ನು ತಿಂದದ್ದಾದರೆ ಅಂತಹ ಹಸುಗಳ ಹಾಲೂ ಹಿತಕರವಲ್ಲ.

ಈ ಪ್ರದೇಶವೆಲ್ಲ ಸಮತಟ್ಟಾಗಿದೆ. ಹಸಿರು ವೃಕ್ಷಗಳಾವುವೂ ಇರುವುದಿಲ್ಲ. ಹೀಗಾಗಿ ಇದನ್ನು ತ್ಯಜಿಸಿ ಹುಲ್ಲು ನೀರು ಸಮೃದ್ಧವಾದ ಅರಣ್ಯಕ್ಕೆ ಗೋವುಗಳೊಂದಿಗೆ ಹೋಗೋಣ' ಎಂದನು.

## ವೃಂದಾವನ ಪ್ರಶಸ್ತ ವನ

**ಶ್ರೂಯತೇ ಹಿ ವನಂ ರಮ್ಯಂ ಪರ್ಯಾಪ್ತತೃಣ ಸಂಸ್ತರಮ್ ।**
**ನಾಮ್ನಾ ಬೃಂದಾವನಂ ನಾಮ ಸ್ವಾದು ವೃಕ್ಷ ಫಲೋದಕಮ್ ॥ 10 ॥**

ಇಲ್ಲಿಯೆ ನಮಗೆ ಸಮೀಪದಲ್ಲಿಯೇ ವೃಂದಾವನವೆಂಬ ಸುಂದರ ವನವಿದೆ. ಅಲ್ಲಿ ಸ್ವಚ್ಛವಾದ ನೀರು, ಬೇಕಾದಷ್ಟು ತೃಣ ಹುಲ್ಲುಗಾವಲುಗಳಿವೆ ಎಂದು ಕೇಳಿದ್ದೇನೆ. ಅಲ್ಲಿ ಸೊಳ್ಳೆಮಿಡತೆಗಳ ಕಾಟವಿರುವುದಿಲ್ಲ. ಮುಳ್ಳು ಕಂಟಕಗಳೂ ವಿಶೇಷವಾಗಿರುವುದಿಲ್ಲ. ಕದಂಬ ವೃಕ್ಷಗಳಿಂದ ತುಂಬಿರುವುದೆಂದೂ ಇಷ್ಟಾಗಿ ಯಮುನಾ ತೀರದಲ್ಲಿಯೆ ಇರುತ್ತದೆ. ಅಲ್ಲಿ ಬೀಸುವ ತಂಗಾಳಿ ಸುಗಂಧಮಯವಾಗಿದ್ದು ಸರ್ವಋತು ಆನಂದದಾಯಕವು ಗೋಪಿಕಾ ಸ್ತ್ರೀಯರ ಸುಖಸಂಚಾರಕ್ಕೆ ಯೋಗ್ಯವಾಗಿರುವುದು.

**ತತ್ರ ಗೋವರ್ಧನೋ ನಾಮ ನಾತಿದೂರೇ ಗಿರಿರ್ಮಹಾನ್ ।**
**ಭ್ರಾಜತೇ ದೀರ್ಘಶಿಖರೋ ನಂದನಸ್ಯೇವ ಮಂದರಃ ॥ 11 ॥**

**ಮಧ್ಯೇ ಚಾಸ್ಯ ಮಹಾಶಾಖೋ ನ್ಯಗ್ರೋಧೋ ಯೋಜನೋಚ್ಛ್ರಿತಃ ।**
**ಭಾಂಡೀರೋ ನಾಮ ಶುಶುಭೇ ನೀಲಮೇಘ ಇವಾಂಬರೇ ॥ 12 ॥**

**ತತ್ರಾಯಂ ಕಲ್ಪ್ಯತಾಂ ಘೋಷಃ ತ್ಯಜ್ಯತಾಂ ನಿರ್ಗುಣಂ ವನಮ್ ।**
**ಸಂತ್ರಾಸಯಾವೋ ಭದ್ರಂ ತೇ ಕಿಂಚಿದುತ್ಪಾದ್ಯ ಕಾರಣಮ್ ॥ 13 ॥**

ಆ ವೃಂದಾವನದ ಹತ್ತಿರವೆ ಮಂದರಗಿರಿಯಂತೆ ಉಚ್ಚ ಶಿಖರಗಳುಳ್ಳ ಹಾಗೂ ನಂದನವನದಂತೆ ಕುಸುಮ ಸುಂದರವಾದ 'ಗೋವರ್ಧನ'ವೆಂಬ ಪರ್ವತವಿದೆ. ಇದರ ಮಧ್ಯದಲ್ಲಿ ಅನೇಕ ಶಾಖೋಪಶಾಖೆಗಳಿಂದ ಕೂಡಿ ಹೆಮ್ಮರವಾಗಿ ಒಂದು ಯೋಜನದಷ್ಟು ಎತ್ತರವಾಗಿ ಗಗನ ಚುಂಬಿಯಾದ ನೀಲಮೇಘದಂತೆ ಮೆರೆಯುವ ಭಾಂಡೀರ'ವೆಂಬ ಆಲದ ಮರವಿದೆ.

ನಂದನವನದ ಮಧ್ಯೆ ಮಂದಾಕಿನೀ ನದಿಹರಿದಂತೆ ವೃಂದಾವನವೆಂಬ ಸುಂದರ ಸ್ತ್ರೀಯ ಬೈತಲೆಯಂತಿರುವ ಕಾಳಂದೀ ನದಿ ಹರಿಯುತ್ತಿದೆ. ನಾವೆಲ್ಲರೂ ಅಲ್ಲಿಗೆ ಹೋದರೆ ಗೋವರ್ಧನ, ಭಾಂಡೀರ, ಕಾಲಂದಿ ಈ ಮೂರರ ಉಪಯೋಗ ಮಾಡಿಕೊಳ್ಳಬಹುದು.

ನಾವೀಗ ಈ ರೂಕ್ಷಾರಣ್ಯವಾದ ಗೋಕುಲ ಬಿಟ್ಟು ಬೃಂದಾವನಕ್ಕೆ ಹೋಗೋಣ.

ಆದರೆ ಗೋಪ ಗೋಪಾಲಕರು ವಿಶೇಷ ಕಾರಣವಿಲ್ಲದೆ ಈ ವ್ರಜವನ್ನು ಬಿಟ್ಟು ಹೋಗಲು ಒಪ್ಪಲಾರರು. ಅದಕ್ಕಾಗಿ ಏನಾದರೂ ಭಯವುಂಟು ಮಾಡಿದರೆ ಅವರು ತಾವಾಗಿಯೇ ಈ ಸ್ಥಾನ ಬಿಟ್ಟು ಹೊರಡುವರು.

### ರೋಮ ರೂಪಗಳಿಂದ ವೃಕಗಳ ಸೃಷ್ಟಿ

**ಏವಂ ಕಥಯತಃ ತಸ್ಯ ವಾಸುದೇವಸ್ಯ ಧೀಮತಃ ।**
**ಪ್ರಾದುರ್ಬಭೂವುಃ ಶತಶೋ ರಕ್ತಮಾಂಸವಸಾಶನಾಃ ॥ 14 ॥**

**ಘೋರಾಶ್ಚಿಂತಯತಸ್ತಸ್ಯ ಸ್ವತನೂರುಹಜಾಸ್ತದಾ ।**
**ವಿನಿಷ್ಪೇತುಃ ಭಯಕರಾಃ ಸರ್ವಶಃ ಶತಶೋ ವೃಕಾಃ ॥ 15 ॥**

**ನಿಷ್ಪತಂತಿ ಸ್ಮ ಬಹವೋ ವ್ರಜಸೋತ್ಸಾದನಾಯ ವೈ ।**
**ತೇ ವೃಕಾಃ ಪಂಚಬದ್ಧಾಶ್ಚ ದಶಬದ್ಧಾಸ್ತಥಾ ಪರೇ ॥ 16 ॥**

**ತ್ರಿಂಶದ್ ವಿಂಶತಿ ಬದ್ಧಾಶ್ಚ ಶತಬದ್ಧಾ ಸ್ತಥಾ ಪರೇ ।**
**ನಿಶ್ಚೇರುಃ ತಸ್ಯ ಗಾತ್ರೇಭ್ಯಃ ಶ್ರೀವತ್ಸಕೃತ ಲಕ್ಷಣಾಃ ॥ 17 ॥**

ಭಗವಂತ ಶ್ರೀಕೃಷ್ಣನು ಹೀಗೆ ತನ್ನ ಅಭಿಪ್ರಾಯ ತಿಳಿಸುತ್ತಿರುವಾಗಲೇ ಅಚಿಂತ್ಯಾದ್ಭುತ ಶಕ್ತಿವುಳ್ಳ ಕೃಷ್ಣನ ಶರೀರದಿಂದ ಸಾವಿರಾರು ರಕ್ತಪಿಪಾಸುಗಳಾದ ಮಾಂಸಾಶನಿಗಳಾದ ವ್ಯಾಘ್ರಗಳಿಗೆ ಸಮಾನವಾದ ತೋಳುಗಳು ಹೊರಬಂದವು. ಇವು ಐದೈದು, ಹತ್ತತ್ತು, ಇಪ್ಪತ್ತು-ಮುವ್ವತ್ತರಂತೆ ಗುಂಪುಗುಂಪಾಗಿ ಹೊರಟು ಇವು ಗೋಕುಲದಲ್ಲಿ ಪ್ರವೇಶಿಸಿ ಗೋಪಗೋಪಿಯರ ಮೇಲೆ ಹಾರಿ ಹಿಂಸೆಯನ್ನುಂಟು ಮಾಡಿದುವು. ದನದ ಕೊಟ್ಟಿಗೆಗೆ ಹೋಗಿ ಹಸುಕರುಗಳನ್ನು ತಿಂದು ಹಾಕಿದವು. ಹಸುಗಳೆಲ್ಲವೂ ಭಯದಿಂದ ಕೂಗಾಡಿದವು. ಎತ್ತುಗಳನ್ನು ಬಡಿದವು. ಚಿಕ್ಕ ಮಕ್ಕಳನ್ನು

ಬಾಯಲ್ಲಿ ಕಚ್ಚಿಕೊಂಡು ಹೋದವು. ಶ್ರೀಕೃಷ್ಣನಿಂದ ಹೊರ ಹೊರಟ ತೋಳಗಳೆಲ್ಲವೂ ಶ್ರೀವತ್ಸದ ಚಿಹ್ನೆಯಿಂದ ಶೋಭಿತವಾಗಿದ್ದವು. ಅಂದರೆ ಶ್ರೀಕೃಷ್ಣನದೇ ಇದೊಂದು **ವೃಕಾವತಾರವು.**[1] ಹೀಗೆ ತೋಳಗಳು ಗೋಪಾಲಕ ಸಮೂಹವನ್ನು ಭಯಪಡಿಸಿ ಗೋವ್ರಜವನ್ನೆ ಅಲ್ಲಿಂದ ಹೋಗುವಂತೆ ಮಾಡಿದವು. ಈ ತೋಳಗಳಿಂದಾಗಿ ಅಡವಿಗೆ ಹೋಗದಂತಾಯಿತು. ನದಿಗೆ ಹೋಗುವಂತಿಲ್ಲ. ಹೊರಗಿನಿಂದ ತರುವಂತಿಲ್ಲ. ಮನೆಯಲ್ಲಿಯೇ ಬಾಗಿಲು ಹಾಕಿಕೊಂಡು ನಿಷ್ಕ್ರಿಯರಾಗಿ ನಿರುದ್ಯೋಗಿ-ಗಳಾದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವೃಕಗಳ ಹಾವಳಿವೆಂಬಲ್ಲಿ
ಎಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

1. ವೃಕಾವತಾರ:
ವೃಂದಾವನಂ ಯಿಯಾಸುಸ್ಸನ್ ನಂದಸೂನುಃ ಬೃಹದ್ವನೇ ।
ಸಸರ್ಜ ರೋಮಕೂಪೇಭ್ಯಃ ವೃಕಾನ್ ವ್ಯಾಘ್ರ ಸಮಾನ್ ಬಲೇ ॥ *–ತಾ.ನಿ. 13/26*

# ಅಥ ನವಮೋಽಧ್ಯಾಯಃ

## ವೃಂದಾವನಾಗಮನ

*ವೈಶಂಪಾಯನ ಉವಾಚ –*

ಏವಂ ವೃಕಾಂಶ್ಚ ತಾನ್ ದೃಷ್ಟ್ವಾ ವರ್ಧಮಾನಾನ್ ದುರಾಸದಾನ್ ।
ಸಸ್ತ್ರೀಪುಮಾನ್ ಸ ಘೋಷೋ ವೈ ಸಮಸ್ತೋಽಮಂತ್ರಯತ್ ತದಾ ॥1॥
ಸ್ಥಾನೇನೇನೇಹ ನ ನಃ ಕಾರ್ಯಂ ವ್ರಜಾಮೋಽನ್ಯನ್ ಮಹದ್ವನಮ್ ।
ಯಚ್ಛಿವಂ ಚ ಸುಖೋಷ್ಯಂ ಚ ಗವಾಂ ಚೈವ ಸುಖಾವಹಮ್ ॥ 2 ॥
ಅದ್ಯೈವ ಕಿಂ ಚಿರೇಣ ಸ್ಮವ್ರಜಾಮಃ ಸಹ ಗೋಧನೈಃ ।
ಯಾವದ್ ವೃಕೈಃ ವಧಂ ಘೋರಂ ನ ನಃ ಸರ್ವೋ ವ್ರಜೋ ವ್ರಜೇತ್॥3॥
ಮಮ ಪುತ್ರೋ ಮಮ ಭ್ರಾತಾ ಮಮ ವತ್ಸೋಽಥ ಗೌರ್ಮಮ ।
ವೃಕೈಃ ವ್ಯಾಪಾದಿತಾ ಹ್ಯೇವಂ ಕ್ರಂದಂತಿ ಸ್ಮ ಗೃಹೇ ಗೃಹೇ ॥ 4 ॥

ಜನಮೇಜಯ! ಹೀಗೆ ಹೊಡೆದೊಡಿಸಲು ಅಶಕ್ಯನಾಗಿದ್ದ ತೋಳಗಳು ದಿನಂಪ್ರತಿ ಹೆಚ್ಚುತ್ತಿರುವುದನ್ನು ನೋಡಿ ಗೋಕುಲದ ಸಮಸ್ತ ಸ್ತ್ರೀಯರು ಪುರುಷರು ಒಂದು ಕಡೆ ಮಿಳಿತರಾಗಿ ಸಮಾಲೋಚನೆ ನಡೆಸಿದರು. ಅವರಲ್ಲಿ ಒಬ್ಬ ಗೋಪಾಲಕ ಹೀಗೆಂದನು "ಗೋಪಗೋಪಿಯರೇ! ಇನ್ನು ಮುಂದೆ ನಾವು ಇಲ್ಲಿ ವಾಸ ಮಾಡುವುದು ಕಷ್ಟ. ಮತ್ತೊಂದು ಮಹಾವನಕ್ಕೆ ವಲಸೆ ಹೋಗೋಣ. ಈ ತೋಳಗಳ ಬಾಯಿಗೆ ನಾವೆಲ್ಲ ಬಿದ್ದು ಸಾಯುವುದಕ್ಕಿಂತ ಮೊದಲೇ ನಾವೆಲ್ಲ ಈ ಸ್ಥಳ ತ್ಯಜಿಸಿ ಅನ್ಯತ್ರ ಹೋಗಬೇಕು. ನಮ್ಮ

ಜೀವಾಳವಾದ ಗೋವುಗಳು, ನಾವು ಹಾಗೂ ನಮ್ಮ ಮಕ್ಕಳು, ಮರಿಗಳು ಎಲ್ಲಿ ನಿರ್ಭಯವಾಗಿದ್ದು ಸುಖವಾಗಿರಬಹುದೋ ಅಂತಹ ಸ್ಥಳಕ್ಕೆ ಹೋಗೋಣ. ಇನ್ನು ತಡ ಮಾಡಿ ಪ್ರಯೋಜನವಿಲ್ಲ.

ನಿಮಗೆಲ್ಲ ತಿಳಿದಿರುವಂತೆ ಬೂದಿ ಬಣ್ಣದ, ರಕ್ತವರ್ಣ ಯುಕ್ತವಾದ, ಕೋರೆ ಹಲ್ಲುಗಳಿಂದ ಉಗ್ರವಾಗಿರುವ, ಉಗುರುಗಳಿಂದ ಪರಚಿ ಹಾಕುವ, ಕಪ್ಪಾದ ಮುಖಗಳುಳ್ಳ ತೋಳಗಳು ರಾತ್ರಿ ವೇಳೆಯಲ್ಲಿ ಗರ್ಜಿಸುತ್ತಾ ಬರುತ್ತವೆ.

ಈ ಗೋಕುಲದಲ್ಲಿರುವ ಪ್ರತಿಯೊಂದು ಮನೆಯಲ್ಲಿಯೂ, ನನ್ನ ಮಗ ತೋಳಕ್ಕೆ ಸಿಕ್ಕಿಕೊಂಡ, ನನ್ನ ಸಹೋದರ ಹೋದ, ನನ್ನ ಕರು ಹೋಯಿತು, ನನ್ನ ಗೋವನ್ನು ಸಾಯಿಸಿತು ಎಂಬ ರೋಧನ ಕೇಳ ಬರುತ್ತಿದೆ.

ಗೋಪಾಲಕನ ಮಾತು ಅವರಿಗೆಲ್ಲ ಹಿಡಿಸಿತು. ಹೀಗೆ ಹೇಳುತ್ತಿರುವಾಗಲೇ ಗೋಪಿಯರ ರೋದನ, ಕರುಗಳನ್ನು ಕಳೆದುಕೊಂಡ ಗೋವುಗಳ ಆರ್ತನಾದ ಪ್ರಭಾವಿತರಾಗಿದ್ದ ಗೋಪಾಲ ವೃದ್ಧರೆಲ್ಲರೂ ವ್ರಜಸ್ಥಾನವನ್ನು ಬಿಡಲು ನಿಶ್ಚೈಯಿಸಿದರು.

**ತೇಷಾಂ ಮತಮಥಾಜ್ಞಾಯ ಗಂತುಂ ವೃಂದಾವನಂ ಪ್ರತಿ ।**
**ವ್ರಜಸ್ಯ ವಿನಿವೇಶಾಯ ಗವಾಂ ಚೈವ ಹಿತಾಯ ಚ ॥ 5 ॥**
**ನಂದಗೋಪೋ ಬೃಹದ್ವಾಕ್ಯಂ ಬೃಹಸ್ಪತಿರಿವಾದದೇ ।**
**ಅದ್ಯೈವ ನಿಶ್ಚಯ ಪ್ರಾಪ್ತಿಃ ಯದಿ ಗಂತವ್ಯಮೇವ ನಃ ॥ 6 ॥**
**ಶೀಘ್ರಮಾಜ್ಞಾಪ್ಯ ತಾಂ ಘೋಷಃ ಸಜ್ಜೀಭವತ ಮಾ ಚಿರಮ್ ।**

ಅವರ ನಿರ್ಧಾರವನ್ನು ಕೇಳಿದ ನಂದಗೋಪನು ಹೊರಡುವುದೇ ಆದರೆ ಶುಭಕಾರ್ಯಕ್ಕೆ ತಡವೇಕೆ? ಇಂದೇ ಹೊರಟುಬಿಡೋಣ? ಎಂದು ಹಳ್ಳಿಯಲ್ಲಿ ಎಲ್ಲಾ ಕಡೆಯಲ್ಲಿ ಘೋಷದ ಮೂಲಕ 'ಎಲ್ಲರೂ ತಮ್ಮ ತಮ್ಮ ವಸ್ತು, ಪಾತ್ರೆ ಸರಂಜಾಮುಗಳೊಂದಿಗೆ ವೃಂದಾವನಕ್ಕೆ ಹೊರಡಬೇಕು ತಯಾರಾಗಿರಿ' ಎಂದು ಘೋಷದ ಮೂಲಕ ತಿಳಿಸಿದನು.

ನಂದನ ಆದೇಶ ಕಿವಿಗೆ ಬೀಳುತ್ತಿದ್ದಂತೆಯೇ ಸಾಮಾನ್ಯ ಜನರು ಎಲ್ಲೆಡೆ ಓಡಾಡತೊಡಗಿದರು. ನಂದನು –

ವ್ರಜವಾಸಿಗಳೇ ! ಹಸುಗಳನ್ನು ಗೂಟದಿಂದ ಬಿಚ್ಚಿ ಪ್ರಯಾಣಕ್ಕೆ ಸಿದ್ಧರಾಗಿರಿ. ಪಾತ್ರೆ ಸರಂಜಾಮುಗಳನ್ನು ಗಾಡಿಯಲ್ಲಿಡಿರಿ. ಕರುಗಳನ್ನು ಗುಂಪಾಗಿ ಸೇರಿಸಿ ಗಾಡಿಗಳನ್ನು ಹೊಡೆಯಿರಿ. ಇಲ್ಲಿಂದ ಬೃಂದಾವನದಲ್ಲಿ ವಾಸಿಸಲು ಅಣಿಯಾಗಿರಿ ಎಂದನು.

**ತಚ್ಛ್ರುತ್ವಾ ನಂದಗೋಪಸ್ಯ ವಚನಂ ಸಾಧು ಭಾಷಿತಮ್ ।**
**ಉದತಿಷ್ಠದ್ ವ್ರಜಃ ಸರ್ವಃ ಶೀಘ್ರಂ ಗಮನಲಾಲಸಃ ॥ 7 ॥**

**ಪ್ರಯಾಹ್ಯುತ್ತಿಷ್ಠ ಗಚ್ಛಾಮಃ ಕಿಂ ಶೇಷೇ ಯಾಹಿ ಯೋ ಜಯ ।**

ನಂದಗೋಪನ ಮಾತನ್ನು ಕೇಳಿ ಎಲ್ಲಾ ಗೋಪಗೋಪಿಯರು ಉತ್ಸಾಹದಿಂದ ತಮ್ಮ ತಮ್ಮ ವಸ್ತುಗಳನ್ನೆಲ್ಲವನ್ನೂ ಚಕ್ಕಡಿಯೊಳಗೆ ಹಾಕಿ, ಅದರ ಹಿಂದೆ ಕರುಗಳ ಹಿಂಡನ್ನೂ, ಅದರ ಹಿಂದೆ ದನಗಳ ದಂಡನ್ನೂ ಹೊರಡಿಸಿ ತಾವೂ ಹೊರಟರು. ಹೀಗೆ ಹೊರಡುವಾಗ ಗೋಪರದ್ದೆಲ್ಲ ಬಹು ದೊಡ್ಡ ಕೋಲಾಹಲವುಂಟಾಯಿತು. ಹೊರಡು ಹೊರಡು ತಡವಾಯಿತು! ಏಳು ಎದ್ದೇಳು! ನಾವಾಗಲೇ ಹೊರಟಾಯಿತು. ನೀನಿನ್ನೂ ಮಲಗಿರುವೆಯಾ? ಬೇಗ ಹೊರಡು. ಹೀಗೆ ಒಬ್ಬೊಬ್ಬರು ಒಂದೊಂದು ರೀತಿ ಮಾತನಾಡುತ್ತಿದ್ದರು. ತಲೆಗಳ ಮೇಲೆ ಮೊಸರು ಕಡೆಯುವ ಪಾತ್ರೆಗಳನ್ನೂ ಬಿಂದಿಗೆ ಹಾಲಿನ ಪಾರೆಗಳನ್ನು ಹೊತ್ತುಕೊಂಡು ಆಕಾಶದಲ್ಲಿ ಕಾಣುವ ಸಾಲು ಸಾಲು ನಕ್ಷತ್ರಗಳಂತೆ ಕಂಡರು.

**ನೀಲಪೀತಾರುಣ್ಯೈಃ ತಾಸಾಂ ವಸ್ತ್ರೈಃ ಅಗ್ರಸ್ತನೋಚ್ಛ್ರಿತೈಃ ।**
**ಶಕ್ರಾಚಾಪಾಯತೇ ಪಂಕ್ತಿಃ ಗೋಪೀನಾಂ ಮಾರ್ಗಗಾಮಿನೀ ॥ 8 ॥**

ಹಸಿರು ಹಳದಿ ಕಪ್ಪು ಕೆಂಪು ಬಣ್ಣದ ವಿವಿಧ ವಸ್ತ್ರಗಳನ್ನು ಧರಿಸಿ ಬೀದಿಯಲ್ಲಿ ಬಳ್ಳಿಯಂತಿರುವ ದೇಹವನ್ನು ಬಳುಕಿಸುತ್ತಾ ನಡೆಯುತ್ತಿದ್ದರೆ ಅವರ ಗುಂಪು ಒಂದು ಕಾಮನಬಿಲ್ಲಿನಂತಿತ್ತು.

ಕೆಲವರು ಗೋಪಾಲಕರು ಚಿಕ್ಕದಾದ ಹಾಗೂ ಉದ್ದವಾದ ಹಗ್ಗಗಳ ಕಂತೆಯನ್ನು ಹೆಗಲ ಮೇಲಿಟ್ಟುಕೊಂಡು ಹೋಗುತ್ತಿದ್ದರು. ಕೆಲವು ಬಾರಿ ಗಾಳಿಯಿಂದ ಪ್ರೇರಿತವಾಗಿ ಸಾಲುಸಾಲಾಗಿ ಏಳುವ ಅಲೆಗಳಿಂದ ಕೂಡಿದ ಸಮುದ್ರದಂತೆಯೂ, ಕ್ಷಣ ಮಾತ್ರದಲ್ಲಿ ಚಾಳು ಭೂಮಿಯಂತೆಯೂ, ಇವರು ಚೆಲ್ಲಿದ ಅನ್ನಾಹಾರ ರೊಟ್ಟಿಗಳಿಂದ ಇವರು ಹೊರಟ ಕೂಡಲೇ ಸಾವಿರಾರು ಕಾಗೆಗಳಿಂದ ವ್ರಜವು ತುಂಬಿ ಹೋಯಿತು.

## ವೃಂದಾವನ ಪ್ರವೇಶ

**ತತಃ ಕ್ರಮೇಣ ಘೋಷಃ ಸ ಪ್ರಾಪ್ತೋ ವೃಂದಾವನಂ ವನಮ್ ।**
**ನಿವೇಶಂ ವಿಪುಲಂ ಚಕ್ರೇ ಗವಾಂ ಚೈವ ಹಿತಾಯ ಚ ॥ 9 ॥**

**ಶಕಟಾವರ್ತಪರ್ಯಂತಂ ಚಂದ್ರಾರ್ಧಾಕಾರ ಸಂಸ್ಥಿತಮ್ ।**
**ಮಧ್ಯೇ ಯೋಜನವಿಸ್ತೀರ್ಣಾಂ ತಾವದ್ ದ್ವಿಗುಣ ಮಾಯತಮ್ ॥ 10 ॥**

ಕ್ರಮವಾಗಿ ಪ್ರಯಾಣ ಮಾಡುತ್ತಾ ಗೋವ್ರಜವು ವೃಂದಾವನವನ್ನು ಬಂದು ಸೇರಿತು. ಗೋವು ಹಾಗೂ ತಮಗೆ ಹಿತವಾದ ವಾಸಕ್ಕಾಗಿ ಗೋಪಾಲಕರು ವಿಶಾಲವಾದ ಸ್ಥಳವನ್ನು ಆರಿಸಿಕೊಂಡರು. ಗಾಡಿಗಳನ್ನು ಅರ್ಧಚಂದ್ರಾಕಾರವಾಗಿ ನಿಲ್ಲಿಸಿದರು. ಅವರು ಆರಿಸಿದ ಪ್ರದೇಶ ಒಂದು ಯೋಜನ ಅಗಲವಾದರೆ ಎರಡು ಯೋಜನ ಉದ್ದವಿತ್ತು. ಚೆನ್ನಾಗಿ ಬೆಳೆದು ನಿಂತ ಮುಳ್ಳುಗಿಡಗಳು ಬೇಲಿಯಂತಿದ್ದವು. ನೆಲದಲ್ಲಿ ಮುಳ್ಳು ಗಿಡಗಳನ್ನು ಹೂಳ ಬೇಲಿ ಮಾಡಿದ್ದರಿಂದ ನಾಲ್ಕು ಕಡೆ ಸುರಕ್ಷಿತವಾಗಿತ್ತು.

ವೃಂದಾವನ ಪ್ರವೇಶವಾಗುತ್ತಿದ್ದಂತೆಯೆ ತಮ್ಮ ಮನೆ ಕಾರ್ಯಗಳಲ್ಲಿ ಆಸಕ್ತರಾದರು. ಕೆಲವರು ಕಡಗೋಲುಗಳನ್ನು ಹಗ್ಗದಿಂದ ಕಟ್ಟುತ್ತಿದ್ದರೆ ಕೆಲವರು ಮಂಥಾನ ಪಾತ್ರೆಗಳನ್ನು ನೀರಿನಿಂದ ತೆಗೆಯುತ್ತಿದ್ದರು. ಕೆಲವರು ಹಸುಕರುಗಳನ್ನು ಕಟ್ಟಲು ಗೂಟಗಳನ್ನು ನೆಟ್ಟು ಹಸುಗಳನ್ನು ಕಟ್ಟಿ ಹಾಕುತ್ತಿದ್ದರು. ಕೆಲವರು ಕಂಬಗಳನ್ನು ನಿಲ್ಲಿಸುತ್ತಿದ್ದರು. ಗೋಪಾಲಕರು ಕೆಲವರು ಮನೆಗೆ ಸೂರನ್ನು ಹಾಕುತ್ತಿದ್ದರು. ಪಕ್ಷಿಗಳಗಾಗಿ ಗೂಡುಗಳನ್ನು ಕಟ್ಟುತ್ತಿದ್ದರೆ ಮತ್ತೆ ಕೆಲವರು ಗೋಶಾಲೆಗೆ ಯೋಗ್ಯ ಜಾಗ ಅರಸುತ್ತಿದ್ದರೆ ಕೆಲವರು ಒರಳನ್ನು ಹೂಳುತ್ತಿದ್ದರು. ಬಟ್ಟೆ ಒಗೆಯುವುದು, ಅಡ್ಡವಾದ ವೃಕ್ಷಗಳ ರೆಂಬೆಗಳನ್ನು ತುಂಡು ಮಾಡುವುದು, ಕೊಡಲಿಗಳಿಂದ ಮರಗಳನ್ನು ಕತ್ತರಿಸಿ ಸೌದೆ ಸೀಳುತ್ತಿರುವುದು, ನೋಡಿದರೆ ವೃದ್ಧ ತರುಣ ಭೇದವಿಲ್ಲದೆ ಕಾರ್ಯನಿರತರಾಗಿದ್ದು ವೃಂದಾವನವು ವಿಚಿತ್ರ ಕಳೆಯಿಂದ ಕೂಡಿತ್ತು.

ಹೀಗೆ ಉಳದೆಲ್ಲ ಹೊಸಮನೆ ಸಿದ್ಧತೆ ಮಾಡಿ ವೇದಿಕೆ ತಯಾರಿಸಿದ ನಂತರ ಗೋಪಿಕಾ ಸ್ತ್ರೀಯರು ಮನೆ, ಅಂಗಳ, ವೃಂದಾವನಗಳನ್ನು ಸಾರಿಸಿ ರಂಗಾವಲಿ ಹಾಕಿ ಪೂರ್ವಾಭಿಮುಖವಾಗಿ ದೀಪ ಬೆಳಗಿದರು.

ನೀರು ತರುತ್ತಿರುವ ಗೋಪಿಯರು ಅತ್ತಿತ್ತ ಕಣ್ಣು ಹಾಯಿಸುತ್ತಾ ವೃಂದಾವನದ ಸೌಭಗಸಿರಿ ಅನುಭವಿಸುತ್ತಿದ್ದರು.

ಬೃಂದಾವನದ ನೀರು ಶುಚಿಯಾಗಿದ್ದು ಅನ್ನ ರುಚಿ, ಧಾನ್ಯ ರುಚಿ, ಹುಲ್ಲು ಹಚ್ಚ ಹಸಿರಾಗಿ ಸ್ವಾದಿಷ್ಟವಾಗಿದ್ದರಿಂದ ಗೋವುಗಳು ಯಥೇಷ್ಠವಾಗಿ ಹಾಲು ಕರೆದವು. ಅಲ್ಲಿ ಬೇಸಿಗೆ ಇದ್ದರೂ ಗಿಡಮರಗಳ ತಂಪಿನಿಂದಾಗಿ ಬಿಸಿಲಿನ ಬೇಗೆ ಇರಲಿಲ್ಲ. ಒಟ್ಟಾರೆ ಶ್ರೀಕೃಷ್ಣನ ಸಂಕಲ್ಪದಂತೆ ಗೋಪಾಲಕರೆಲ್ಲರೂ ಬೃಂದಾವನ ಸೇರಿ ನಂದನವನದಲ್ಲಿದ್ದಂತೆ ಆನಂದದಿಂದ ನಿಶ್ಚಿಂತರಾಗಿ ವಾಸ ಮಾಡಿದರು.

ನಂದನಂದನನಾದ ಗೋವಿಂದನು ಇರುವ ಸ್ಥಳದಲ್ಲಿ ಗೋವು-ಕರುಗಳು ಸಾಯುವುದಿಲ್ಲ. ಮನುಷ್ಯರಿಗೆ ತೊಂದರೆ ತೊಡಕಿಲ್ಲ. ಮೇವುಗಳಗೆ ಬರವಿಲ್ಲ. ಗೋವುಗಳು, ಗೋಪಾಲಕರು, ಬಲರಾಮ ಕೃಷ್ಣರಿಂದ ವಿಹಿತವಾದ ಬೃಂದಾವನ ಸೇರಿ ಅತ್ಯಾನಂದವಾಗಿ ವಾಸ ಮಾಡಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಬೃಂದಾವನ ಪ್ರವೇಶವೆಂಬಲ್ಲಿ
ಒಂಭತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 10 ವಿಷ್ಣುಪರ್ವ

# ಅಥ ದಶಮೋಽಧ್ಯಾಯಃ

## ವರ್ಷರ್ತುವರ್ಣನಮ್

*ವೈಶಂಪಾಯನ ಉವಾಚ–*

ತೌ ತು ಬೃಂದಾವನಂ ಪ್ರಾಪ್ತೌ ವಸುದೇವ ಸುತಾವುಭೌ ।
ಚೇರತುಃ ವತ್ಸಯೂಥಾನಿ ಚಾರಯಂತೌ ಸುರೂಪಿಣೌ ॥ 1 ॥

ಪೂರ್ಣಸ್ತು ಘರ್ಮಸಮಯಃ ತಯೋಸ್ತತ್ರ ವನೇ ಸುಖಮ್ ।
ಕ್ರೀಡತೋಃ ಸಹ ಗೋಪಾಲೈಃ ಯಮುನಾಂ ಚಾವಗಾಹತೋಃ ॥2 ॥

ತತಃ ಪ್ರಾವೃಡನುಪ್ರಾಪ್ತಾ ಮನಸಃ ಕಾಮದೀಪಿನೀ ॥ 3 ॥

ಗೋಪಾಲಕರೆಲ್ಲರೂ ಕುಟುಂಬಗಳೆಲ್ಲರೂ ಸುಖವಾಗಿ ಇರುತ್ತಿದ್ದರು. ನಂತರ ವಸುದೇವ ಪುತ್ರರಾದ ರಾಮಕೃಷ್ಣರು ಕರುಗಳ ಮಂದೆಯನ್ನು ಮೇಯಿಸುತ್ತಲೂ, ಅರಣ್ಯದಲ್ಲೆಲ್ಲ ಸಂಚರಿಸುತ್ತಿದ್ದರು. ಅಲ್ಲಿ ಕ್ರೀಡೆಯಿಂದ ಇರುತ್ತಾ, ಯಮುನೆಯಲ್ಲಿ ಸ್ನಾನಾದಿಗಳನ್ನು ಮಾಡುತ್ತಾ ಇರುವಾಗ ಗ್ರೀಷ್ಮರ್ತುವು ಸುಖವಾಗಿ ಕಳೆಯಿತು. ಮನಸ್ಸಿನ ಕಾಮನೆಗಳನ್ನು ಉದ್ದೀಪಿಸುವ ವರ್ಷಋತುವು ಪ್ರಾರಂಭವಾಯಿತು. ಕಾಮನಬಿಲ್ಲುನಿಂದ ಕಾಮೋದ್ದೀಪೀತವಾಗಿದ್ದ ನವಿಲುಗಳು ಗರಿಗೆದರಿ ಕುಣಿದುವು. ಮಹಾಮೇಘಗಳು ಯಥೇಚ್ಛವಾಗಿ ಮಳೆಗರೆದವು. ಮೇಘಗಳಿಂದಾಗಿ ಸೂರ್ಯನ ದರ್ಶನವೆ ದುರ್ಲಭವಾಗಿತ್ತು.

ಮೇಘವು ಇಡಿ ಬೃಂದಾವನವನ್ನು ತೊಳೆದಂತಾಯಿತು. ಇಂದ್ರಗೋಪವೆಂಬ ದೀಪದ ಹುಳಗಳು ಅಲ್ಲಲ್ಲಿ ರಾತ್ರಿಯಲ್ಲಿ ಕಂಡುಬಂದವು. ಮಳೆಯಿಂದ

ತೊಯ್ದಿದ್ದವು. ಗ್ರೀಷ್ಮದಲ್ಲಿ ಕಾಡಿನಲ್ಲಿ ಹುಟ್ಟಿದ್ದ ದಾವಾಗ್ನಿ ಈಗ ಮಳೆಯಿಂದಾಗಿ ಶಾಂತವಾಗಿತ್ತು. ನವಿಲುಗಳು ಮದನ ಬಾಣ ಪೀಡಿತಗಳಾಗಿ ಹಾಕುತ್ತಿದ್ದ ಕೇಕಾವಾಣಿಗಳಿಂದ ತುಂಬಿತ್ತು. ಕಾನನದ ಐಸಿರಿ ಹೀರಿದ ಮತ್ತ ಭೃಂಗಗಳ ಸಂಗೀತನಾದ, ತುಂಬಿ ಹರಿಯುತ್ತಿದ್ದ ನದಿಗಳ ಮಂಜುಳನಾದ, ದರೀಮುಖಗಳಲ್ಲಿ ಧುಮುಕುವ ಝುರಿಗಳ ಪ್ರಪಾತ ಘೋಷ, ಕಪ್ಪೆಗಳ ವಟಗುಟ್ಟುವಿಕೆ, ಪ್ರತಿಧ್ವನಿಸುತ್ತಿತ್ತು. ಪ್ರವಾಹಗಳು ದಂಡೆಯ ಮೇಲಿದ್ದ ವೃಕ್ಷಗಳನ್ನು ಕಿತ್ತು ಹಾಕುತ್ತಾ ನದಿಯ ಪಾತ್ರವನ್ನು ವಿಸ್ತಾರಗೊಳಿಸುತ್ತಿತ್ತು. ಪಕ್ಷಿಗಳು ನಿರಂತರ ಜಲಧಾರೆ ಬೀಳುತ್ತಿದ್ದರಿಂದ ಹಾರಿಹೋಗಲು ಅಸಮರ್ಥವಾಗಿದ್ದ – ಬಳಲಿದವರು ವೃಕ್ಷಾಶ್ರಯವನ್ನು ಬಿಡದಿರುವಂತೆ ಪಕ್ಷಿಗಳು ವೃಕ್ಷವನ್ನು ತ್ಯಜಿಸಿ ಅನ್ಯತ್ರ ಹೋಗಲ್ಲಿಲ್ಲ. ಮೇಘಗಳ ಮಧ್ಯದಲ್ಲಿ ಮುಳುಗುತ್ತಾ ತೇಲುತ್ತಾ ಇರುವನಂತೆ ಸೂರ್ಯನು ಕಾಣಿಸಿದನು.

ಹಚ್ಚ ಹಸಿರು ಹುಲ್ಲುಗಾವಲಿನಿಂದ ವ್ಯಾಪ್ತನಾಗಿದ್ದ ಆದರೆ ನೀರಿನಲ್ಲಿ ಮುಳುಗಿ ಹೋಗಿದ್ದ ಭೂಮಿಯು ದಾರಿಯೆಲ್ಲದೆ ಎಂದು ತಿಳಿಯಲು ಕೆಳಗೆ ಬಿದ್ದಿರುವ ವೃಕ್ಷಗಳೇ ಸಹಾಯ ಮಾಡುತ್ತಿದ್ದವು. ಪರ್ವತ ಶಿಖರಗಳು ನಿರಂತರವಾಗಿ ಜಲಧಾರೆಯನ್ನು ಸುರಿಸುತ್ತಿದ್ದರೆ ಇಂದ್ರನ ವಜ್ರದಿಂದ ಕತ್ತರಿಸಲ್ಪಟ್ಟ ರೆಕ್ಕೆಗಳಂತೆ ಕಾಣುತ್ತಿದ್ದವು. ಅತಿಯಾದ ವೃಷ್ಟಿಯಿಂದಾಗಿ ಸ್ಥಿಮಿತ ತಪ್ಪಿದ ಆನೆಗಳು ತಮ್ಮ ಶುಂಡಾದಂಡಗಳನ್ನೆತ್ತಿ ಮೇಘಗಳ ಘರ್ಜನೆಯನ್ನು ಅನುಸರಿಸಿ ಘೀಂಕರಿಸಿದವು.

ಪಶ್ಯ ಕೃಷ್ಣ ಘನಾನ್ ಕೃಷ್ಣಾನ್ ಬಲಾಕೋಜ್ವಲ ಭೂಷಣಾನ್ ।
ಗಗನೇ ತವ ಗಾತ್ರಸ್ಯ ವರ್ಣ ಚೋರಾನ್ ಸಮುಚ್ಛ್ರಿತಾನ್ ॥ 4 ॥

ತವ ನಿದ್ರಾಕರಃ ಕಾಲಸ್ತವ ಗಾತ್ರೋಪಮಂ ನಭಃ ।
ತ್ವಮಿವಾಜ್ಞಾತ ವಸತಿಂ ಚಂದ್ರೋ ವಸತಿ ವಾರ್ಷಿಕೀಮ್ ॥ 5 ॥

ವರ್ಷಾಕಾಲದಲ್ಲಿ ಆಕಾಶದಲ್ಲಿ ಮೇಘಗಳು ಮುಚ್ಚುತ್ತಿರುವುದನ್ನು ನೋಡಿದ ಬಲರಾಮನು – ಕೃಷ್ಣ! ಚಕ್ರವಾಕವೆಂಬ ಪಕ್ಷಿಗಳನ್ನೆ ಆಭರಣವನ್ನಾಗಿ ಹೊಂದಿರುವೆ, ನಿನ್ನ ಶರೀರ ಕಾಂತಿಯನ್ನೆ ಅಪಹರಿಸಿರುವ ಈ ಮೋಡಗಳನ್ನು ನೋಡಿದೆಯಾ? ಕೃಷ್ಣನೇ, ನಿನಗೆ ಈ ಚಾತುರ್ಮಾಸ್ಯ ಕಾಲವು ನಿದ್ರಾಕಾಲವಲ್ಲವೆ? ಆಕಾಶವು ಸಹ ನಿನ್ನ ಶರೀರಿ ಕಾಂತಿ ಹೊಂದಿದೆ. ಚಂದ್ರನೂ ಕೂಡ ಮೇಘದಲ್ಲಿ ಲೀನವಾಗಿ ಅವನೂ ಅಜ್ಞಾತವಾಸ

ಮಾಡುತ್ತಿರುವನೊ ಎಂಬಂತೆ ಭಾಸವಾಗುತ್ತಿದ್ದಾನೆ. ಮೇಘಗಳಿಂದ ಆವರಿಸಲ್ಪಟ್ಟ ಈ ದಿನದಲ್ಲಿ ಆಕಾಶವೂ ದುರ್ದಿನದಂತೆ ಕಾಣುತ್ತಿದೆ.

ನೀಲ ಮೇಘಗಳಿಂದ ಆಚ್ಛಾದಿಸಲ್ಪಟ್ಟ ಈ ಗೋವರ್ಧನ ಪರ್ವತವನ್ನು ನೋಡು! ಮಳೆಯಿಂದಾಗಿ ಕೃಷ್ಣಮೃಗಗಳು ತನ್ನ ಪ್ರೇಯಸಿಗಾಗಿ ಹಾತೊರೆಯುತ್ತಿವೆಯಲ್ಲವೆ?

ಶ್ರೀಹರಿಯೇ! ಬಾಣಗಳಿಂದ, ಜ್ಯಾಗಳಿಂದ ರಹಿತವಾದ ಮೂರು ಬಣ್ಣಗಳಿಂದ ಕೂಡಿರುವ ಕಾಮನಬಿಲ್ಲಿನಿಂದ ನಿನ್ನ ವಿಷ್ಣುಪದವು ಶೋಭಿಸುತ್ತಿದೆ. ಆಕಾಶಕ್ಕೆ ನೇತ್ರನಂತಿರುವ ಸೂರ್ಯನು ಸಂಚರಿಸುತ್ತಾ ಸ್ವಲ್ಪವೂ ಪ್ರಕಾಶಮಾನ-ನಾಗಿರುವುದಿಲ್ಲ. ತಾಪದಾಯಕ ಸೂರ್ಯನೂ ಶೀತಲಕಿರಣನಾಗಿ ತನ್ನ ಕಿರಣಗಳನ್ನೆಲ್ಲ ಕಳೆದುಕೊಂಡನೇ ಎಂಬಂತೆ ತೋರುತ್ತಿರುವನು.

ಕೃಷಿಕರು ವರ್ಷಾಕಾಲದಲ್ಲಿ ರಾತ್ರಿಗೂ ಹಗಲಿಗೂ ಅಂತರವನ್ನೆ ಕಾಣುತ್ತಿಲ್ಲ. ಮೇಘಗಳಿಂದ ಬಿದ್ದ ನೀರಿನಿಂದ ವಿಭೂಷಿತವಾದ ಬೃಂದಾವನವು ಚೈತ್ರರಥದಂತೆಯೆ ಕಾಣಿಸುತ್ತಿದೆ.

ಹೀಗೆ ಬಲರಾಮನು ವರ್ಷಾಕಾಲದ ಗುಣಧರ್ಮವನ್ನು ವರ್ಣಿಸುತ್ತಾ ಶ್ರೀಕೃಷ್ಣನೊಂದಿಗೆ ತನ್ನ ಮನೆ ಸೇರಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವರ್ಷ ಕಾಲ ಗುಣಧರ್ಮವೆಂಬಲ್ಲಿ
ಹತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಏಕದಶಮೋಽಧ್ಯಾಯಃ

## ಕಾಲೀಯನಾಗ ಮಥನ

*ವೈಶಂಪಾಯನ ಉವಾಚ –*

**ಕದಾಚಿತ್ ತು ತದಾ ಕೃಷ್ಣೋ ವಿನಾ ಸಂಕರ್ಷಣೇನ ವೈ ।**

**ಚಚಾರ ತದ್ವನಃ ರಮ್ಯಂ ಕಾಮರೂಪೀ ವರಾನನಃ ॥ 1 ॥**

**ಶ್ರೀವತ್ಸೇನೋರಸಾ ಯುಕ್ತಃ ಶಶಾಂಕ ಇವ ಲಕ್ಷ್ಮಣಾ ॥ 2 ॥**

ಒಂದು ದಿನ ಶ್ರೀಕೃಷ್ಣನು ದನಗಾಹಿ ಮಿತ್ರರೊಂದಿಗೆ ಯಮುನೆಯ ತೀರದ ವನಕ್ಕೆ ಹೋದನು ಅಂದು ಮಾತ್ರ ಬಲರಾಮನನ್ನು ಬಿಟ್ಟು ಒಬ್ಬನೆ ಕಾಡಿನಲ್ಲಿ ಸಂಚರಿಸುತ್ತಿದ್ದನು. ಕಪೋಲದಲ್ಲಿ ಕೂದಲು ಹಾರಾಡುತ್ತಿತ್ತು. ಪುಂಡರೀಕಾಕ್ಷನೂ, ಶ್ಯಾಮಲವರ್ಣನೂ, ಮೊಲದ ಚಿಹ್ನೆ ಹೊಂದಿರುವ ಚಾರುಚಂದ್ರಮನಂತೆ ಶ್ರೀವತ್ಸಚಿಹ್ನಿತನಾಗಿದ್ದನು. ಕಮಲದಂತಹ ಕೈಗಳು, ಕೆಂಪಾದ ಸುಕೋಮಲವಾದ ಪಾದಗಳು, ಸಿಂಹದಂತೆ ಗಂಭೀರ ನಡಿಗೆ, ಸೂಕ್ಷ್ಮವಸ್ತ್ರ ಉಟ್ಟು ಉತ್ತರೀಯ ಧರಿಸಿದ್ದ ಶ್ರೀಕೃಷ್ಣನು ಸಂಧ್ಯಾಕಾಲದ ಮೇಗದಂತೆ ಇದ್ದನು. ದೇವತಾವಂಧ್ಯವಾದ ತೋಳುಗಳು, ಮುಖವು ಕಮಲದಂತೆ ಸುವಾಸನೆ ಬೀರುತ್ತಿತ್ತು. ಮುಖವು ಗುಂಗುರು ಕೂದಲುಗಳಿಂದ ಕೂಡಿದ್ದು ದುಂಬಿಗಳ ಸಾಲುಗಳಿಂದ ಕೂಡಿದ ಕಮಲದಂತೆ ಇತ್ತು ವನಮಾಲೆಯನ್ನು ಕೊರಳಲ್ಲಿ ಧರಿಸಿದ್ದ ಶ್ರೀಕೃಷ್ಣನು – ನವಿಲಿನ ಪಿಂಛವನ್ನು ಶಿರದಲ್ಲಿ ಧರಿಸಿದ್ದನು.

**ಕ್ವಚಿದ್ ಗಾಯನ್ ಕ್ವಚಿದ್ ಕ್ರೀಡನ್ ಚಂಚೂರ್ಯನ್ ಕ್ವಚಿತ್ ಕ್ವಚಿತ್ ।**
**ಪರ್ಣವಾದ್ಯಂ ಶ್ರುತಿಸುಖಂ ವಾದಯಂಶ್ಚ ಕ್ವಚಿದ್ ವನೇ ॥ 3 ॥**

**ಗೋಪವೇಣುಂ ಸುಮಧುರಂ ಕಾಮಾತ್ ತಮಪಿ ವಾದಯನ್ ।**
**ಪ್ರಹ್ಲಾದನಾರ್ಥಂ ಚ ಗವಾಂ ಕ್ವಚಿದ್ ವನಗತೋ ಯುವಾ ॥ 4 ॥**

ಕೆಲವು ಬಾರಿ ಹಾಡುತ್ತಾ ಕ್ರೀಡೆಯಾಡುತ್ತಾ, ವನರಾಶಿಯನ್ನೂ ನೋಡುತ್ತಾ ಪರ್ಣದ ವಾದ್ಯ ಊದುತ್ತಾ, ಕೆಲವು ಬಾರಿ ವೇಣುಗಾನ ಮಾಡುತ್ತಾ ಗೋವುಗಳಿಗೆ ಆನಂದವುಂಟು ಮಾಡುತ್ತಾ ಸಂಚರಿಸುತ್ತಿದ್ದನು. ಗೋವುಗಳನ್ನು ಮೇಯಿಸುತ್ತಾ ಬಳ್ಳಿಗಳಿಂದ ಸಮಲಂಕೃತ ವೃಕ್ಷವೊಂದರ ಸಮೀಪದಲ್ಲಿದ್ದ ಯಮುನೆಯ ತೀರಕ್ಕೆ ಹೋದ.

### ಭಾಂಡೀರ ವಟವೃಕ್ಷ

**ಸ ಕದಾಚಿತ್ ವನೇ ತಸ್ಮಿನ್ ಗೋಭಿಃ ಸಹ ಪರಿಭ್ರಮನ್ ।**
**ದದರ್ಶ ವಿಪುಲೋದಗ್ರಂ ಶಾಖಿನಂ ಶಾಖಿನಾಂ ವರಮ್ ॥ 5 ॥**

**ನ್ಯಗ್ರೋಧಂ ಪರ್ವತಾಗ್ರಾಭಂ ಭಾಂಡೀರಂ ನಾಮ ನಾಮತಃ ॥ 6 ॥**

ಹೀಗೆಯೆ ಸಂಚರಿಸುತ್ತಿರುವಾಗ ಗೋವುಗಳನ್ನು ಮೇಯಿಸುತ್ತಾ ಇರುವಾಗ ವಿಶಾಲವೂ ಎತ್ತರವೂ ವೃಕ್ಷಗಳಲ್ಲಿಯೆ ಶ್ರೇಷ್ಠವಾದ ಒಂದು ವೃಕ್ಷವನ್ನು ನೋಡಿದನು. ಭೂಮಿಯಲ್ಲಿ ನಿಂತಿದ್ದ ಮಹಾಮೇಘದಂತೆಯೂ. ಚಿಗುರುಗಳು. ಫಲಗಳಿಂದಲೂ ಕೂಡಿದ್ದು ಅನೇಕ ಪಕ್ಷಿಗಳಿಗೆ ಆಶ್ರಯ ನೀಡಿತ್ತು.

ಮೇಘಗಳು ಬಂದು ತುದಿಯಲ್ಲಿ ನಿಲ್ಲುತ್ತಿದ್ದವು. ಇದನ್ನು ಆಶ್ರಯಿಸಿದವರಿಗೆ ಮಳೆಗಾಳಿ ಬಿಸಿಲಿನ ತಾಪವಿರುತ್ತಿರಲ್ಲಿಲ್ಲ. ಎಲ್ಲ ವೃಕ್ಷಗಳ ಆಧಿಪತ್ಯ ಹೊಂದಿರುವಂತೆ ತೋರುತ್ತಿತ್ತು. ಭಾಂಡೀರವೆಂದು ಪ್ರಖ್ಯಾತಿ ಹೊಂದಿದ ಪರ್ವತಶಿಖರ ಸಮಾನವಾದ ಈ ಆಲದ ಮರದಡಿಯಲ್ಲಿ ವಾಸಮಾಡಿಕೊಂಡಿರಲು ನಿಶ್ಚೈಯಿಸಿದನು. ದಿವಸಪೂರ್ತಿ ಮಿತ್ರರೊಂದಿಗೆ ಆನಂದದಿಂದ ಕಳೆದನು. ಈ ತಾಣವು ಸ್ವರ್ಗದ ತಾಣದಂತಿತ್ತು.

**ರಮಮಂತಿ ಸ್ಮ ಬಹವೋ ವನ್ಯೈಃ ಕ್ರೀಡನಕೈ ಸ್ತದಾ ।**
**ಗೋಪಾಲಾಃ – ಕೃಷ್ಣ ಮೇವಾನ್ಯೇ ಗಾಯಂತಿ ಸ್ಮ ರತಿಪ್ರಿಯಾಃ ॥ 7 ॥**

ತಮ್ಮೊಂದಿಗೆ ಕ್ರೀಡೆಯಾಡುತ್ತಲಿದ್ದ ಭಾಂಡೀರ ವೃಕ್ಷ ವಾಸಿಯಾದ ಶ್ರೀಕೃಷ್ಣನನ್ನು ಅರಣ್ಯದಲ್ಲಿ ಲಭ್ಯವಾಗುವ ಆಟದ ವಸ್ತುಗಳಿಂದ ಸಂತೋಷಪಡಿಸುತ್ತಿದ್ದರು. ಅನೇಕ ರೀತಿ ಅವನನ್ನು ಕೊಂಡಾಡುತ್ತಾ ಗಾಯನ ಮಾಡುತ್ತಿದ್ದರು.

ಹಾಗೆ ಹಾಡುತ್ತಿದ್ದಾಗ ಶ್ರೀಕೃಷ್ಣನು ಎಲೆಗಳಿಂದ ತಯಾರಾದ ವಾದ್ಯವನ್ನು ಕೊಳಲನ್ನೂದುತ್ತಾ ಹಿಮ್ಮೇಳ ಒದಗಿಸುತ್ತಿದ್ದನು. ಹೀಗೆ ಗೋವುಗಳನ್ನು ಮೇಯಿಸುತ್ತಾ ಯಮುನಾ ನದಿಯ ತೀರಕ್ಕೆ ಬಂದನು.

## ಯಮುನಾ ವರ್ಣನೆ

**ತರಂಗಾಪಾಂಗ ಕುಟಿಲಾಂ ವಾರಿಸ್ಪರ್ಶ ಸುಖಾನಿಲಾಮ್ ।**
**ತಾಂ ಚ ಪದ್ಮೋತ್ಪಲವತೀಂ ದದರ್ಶ ಯಮುನಾಂ ನದೀಮ್ ॥ 8 ॥**

ನದಿಯ ತರಂಗಗಳು ಯಮುನೆಯ ವಕ್ರದೃಷ್ಟಿಯವಳಂತೆಯೂ, ಕನ್ನೈದಿಯಿಂದ ಸಮಲಂಕೃತಳೂ ಆಗಿದ್ದಳು. ಪ್ರವಾಹ ಜೋರಾಗಿದ್ದು ತೀರದ ವೃಕ್ಷಗಳನ್ನು ಬಗ್ಗಿಸುತ್ತಿತ್ತು. ಹಂಸ ಕಾರಂಡವ ಸಾರಸ ಪಕ್ಷಿಗಳ ಮಧುರ ನಿನಾದ, ಚಕ್ರವಾಕ ಮಿಥುನದಿಂದ ಕೂಡಿತ್ತು. ಮೀನು ಮೊದಲಾದ ಜಲಚರ ತುಂಬಿದ್ದವು. ಕಮಲಗಳಿಂದ ತುಂಬಿದ್ದು ಪಾಚಿಯಿಂದಾಗಿ ಹಸಿರಾಗಿತ್ತು. ಆ ಯಮುನೆಗೆ ಪ್ರವಾಹವೇ ಪಾದಗಳು, ಉಭಯ ತೀರದ ಮರಳಿನ ರಾಶಿ ನಿತಂಬದಂತೆಯೂ, ಸುಳಿಯು ನಾಭಿಯಂತೆಯೂ, ತೀರವು ಒಡೆದು ಅಲ್ಲಿಂದ ಹೊರಟ ಸಣ್ಣ ಪ್ರವಾಹವು ನಡುಸಣ್ಣ ಉದರದಂತೆಯೂ, ತರಂಗಗಳು ತ್ರಿವಳಿಯಾಗಿಯೂ, ಹಂಸಗಳು ನಾರಿಯ ಮಂದಸ್ಮಿತದಂತೆಯೂ ಕೆಂದಾವರೆ ತುಟಿಗಳಾಗಿಯೂ, ನೀಲಕಮಲಗಳು ನೇತ್ರದಂತೆಯೂ ಪಾಚಿಯು ಕೇಶರಾಶಿಯಾಗಿಯೂ, ಚಕ್ರವಾಕದ ಜೋಡಿಯು ಸ್ತನಗಳಂತೆಯೂ ಕಾರಂಡವ ಪಕ್ಷಿಗಳು ಕರ್ಣಾಭರಣದಂತೆಯೂ ಇತ್ತು. ಮೊಸಳೆ ಕೂರ್ಮ ಮೀನುಗಳಿಂದ ತುಂಬಿದ್ದು ಮನುಷ್ಯರೇ ಮೊದಲಾದವರು ಅವಳ ಬಲರೂಪ ಸ್ತನ್ಯಪಾನ ಮಾಡುತ್ತಿದ್ದರು. ಇಂತಹ ಯಮುನೆಯನ್ನು ನೋಡುತ್ತಾ ಸಂಚರಿಸಿದನು.

**ದೀರ್ಘಂ ಯೋಜನ ವಿಸ್ತಾರಂ ದುಸ್ತರಂ ತ್ರಿದಶೈರಪಿ ।**
**ಗಂಭೀರ ಮಕ್ಷೋಭ್ಯ ಜಲಂ ನಿಷ್ಕಂಪಮಿವ ಸಾಗರಮ್ ॥ 9 ॥**

ಈ ನದಿಯು ಒಂದು ಯೋಜನದಷ್ಟು ವಿಸ್ತಾರವಾಗಿತ್ತು. ದೇವತೆಗಳಿಗೂ ಅಸಾಧ್ಯವಾದಂತಿತ್ತು. ಗಂಭೀರವಾಗಿದ್ದು ಸಮುದ್ರದಂತಿತ್ತು.

**ಅಭೋಗ್ಯಂ ತತ್ ಪಶೂನಾಂ ಹಿ ಅಪೇಯಂ ಚ ಜಲಾರ್ಥಿನಾಮ್**
**ಉಪಭೋಗ್ಯೈಃ ಪರಿತ್ಯಕ್ತಂ ಸುರೈಃ ತ್ರಿಷವಣಾರ್ಥಿಭಿಃ ॥ 10 ॥**
**ಆಕಾಶಾದಪ್ಯಸಂಚಾರ್ಯಂ ಖಗೈರಾಕಾಶ ಗೋಚರೈಃ ।**
**ತೃಣೇಷ್ವಪಿ ಪತತ್ಸ್ವಪ್ಸು ಜ್ವಲಂತಮಿವ ತೇಜಸಾ ॥ 11 ॥**
**ವಿಷಾನಲೇನ ಘೋರೇಣ ಜ್ವಾಲಾಪ್ರಜ್ವಲಿತ ದ್ರುಮಮ್ ॥ 12 ॥**

ಆ ಮಡುವು ಯೋಜನ ವಿಸ್ತೀರ್ಣವಾಗಿ ಪಾತಾಲದಂತೆ ಗಂಭೀರವಾಗಿದ್ದರೂ ಕೃಷ್ಣನು ನೀರೊಳಗೆ ಇಣಿಕಿ ನೋಡಿದಾಗ ಒಂದು ಮೀನಾಗಲೀ, ಮೊಸಳೆ ಏಡಿಗಳಾಗಲೀ ಆಮೆಯಾಗಲೀ ಯಾವುದೇ ಜಲಚರಗಳಿಂದ ತ್ಯಕ್ತವಾಗಿತ್ತು. ಆ ನದಿಯ ತೀರಪ್ರಾಂತದಲ್ಲಿಯೂ ಯಾವ ಪ್ರಾಣಿಯೂ ಓಡಾಡುತ್ತಿರಲ್ಲಿಲ್ಲ. ಜಲಚರ ಪ್ರಾಣಿ, ಸ್ಥಲಚರ ಪ್ರಾಣಿ ಉಭಯ ಪ್ರಾಣಿಗಳೂ ಹಣಿಕಿ ನೋಡುತ್ತಿರಲ್ಲಿಲ್ಲ ಇದು ಶ್ರೀಕೃಷ್ಣನಿಗೆ ಆಶ್ಚರ್ಯ ತಂದಿತು.

ಇದು ಪಶುಗಳ ಉಪಭೋಗಕ್ಕೆ ಅಯೋಗ್ಯವಾಗಿತ್ತು. ತ್ರಿಷವರ್ಣ ಮಾಡುವ ಋಷಿಗಳೆಲ್ಲರೂ ಇದನ್ನು ತ್ಯಜಿಸಿದ್ದರು. ಆಕಾಶದಲ್ಲಿ ಹಾರಾಡುವ ಪಕ್ಷಿಗಳು ಈ ಮಡುವಿನ ಮೇಲೆ ಹಾರಾಡಲು ಸಾಧ್ಯವಾಗುತ್ತಿರಲ್ಲಿಲ್ಲ. ನೀರಿನಲ್ಲಿ ಒಂದು ಗರಿಕೆಯ ಹುಲ್ಲು ಬಿದ್ದರು ಕ್ಷಣಾರ್ಧದಲ್ಲಿ ವಿಷದ ಜ್ವಾಲೆಯಿಂದ ಬೆಂದು ಹೋಗುತ್ತಿತ್ತು. ಇದರ ವಿಷಜ್ವಾಲೆಗೆ ಸುತ್ತಮುತ್ತಲಿರುವ ಗಿಡಮರಗಳೆಲ್ಲವೂ ಭಸ್ಮವಾಗಿದ್ದವು.

ತಂ ದೃಷ್ಟ್ವಾ ಚಿಂತಯಾಮಾಸ ಕೃಷ್ಣೋ ವೈ ವಿಪುಲಂ ಹ್ರದಮ್ ।
ಅಸ್ಮಿನ್ ಸ ಕಾಲಿಯೋ ನಾಮ ಕಾಲಾಂಜನ ಸಮೋಪಮಃ ॥ 13 ॥
ಉರಗಾಧಿಪತಿಃ ಸಾಕ್ಷಾದ್ ಹ್ರದೇ ವಸತಿ ದಾರುಣಃ ।
ಉತ್ಸೃಜ್ಯ ಸಾಗರಾವಾಸಂ ಯೋ ಮಯಾ ವಿದಿತಃ ಪುರಾ ॥ 14 ॥
ಭಯಾತ್ ಪತಗರಾಜಸ್ಯ ಸುಪರ್ಣಸ್ಯೋರಗಾಶಿನಃ ।
ತೇನೇಯಂ ದೂಷಿತಾ ಸರ್ವಾ ಯಮುನಾ ಸಾಗರಂಗಮಾ ॥ 15 ॥

**ತದಸ್ಯ ಸರ್ಪರಾಜಸ್ಯ ಕರ್ತವ್ಯೋ ನಿಗ್ರಹೋ ಮಯಾ ।**
**ಯಥೇಯಂ ಸರಿದಂಭೋದಾ ಭವೇತ್ ಶಿವಜಲಾಶಯಾ ॥ 16 ॥**

**ಏನಂ ಕದಂಬ ಮಾರುಹ್ಯ ತದೇವ ಶಿಶುಲೀಲಯಾ ।**
**ವಿನಿಪತ್ಯ ಹ್ರದೇ ಘೋರೇ ದಮಯಿಷ್ಯಾಮಿ ಕಾಲಿಯಮ್ ॥ 17 ॥**

ಸರ್ವಜ್ಞ ಚೂಡಾಮಣಿಗೆ ಈ ಮಡುವಿನ ವಿಷಯವೆಲ್ಲ ಕರತಲಾಮಲಕದಂತೆ ತೋರಿತು. ಅಮೃತವಾಹಿನಿಯಾದ ಈ ನದಿಯು ವಿಷವಾಹಿನೀ-ಯಾಕಾಯಿತು!

ಗರುಡನ ರೆಕ್ಕೆಯ ಜೋರಾಗಿ ಹೊಡೆತದಿಂದಾಗಿ ಕಾಳಿಯ ನಾಗನು ಸಮುದ್ರದ ರಮಣಕ ದ್ವೀಪ ತ್ಯಜಿಸಿ, ಈ ಯಮುನೆಯ ಆಳವಾದ ಮಡುವಿನಲ್ಲಿ ಬಂದು ವಾಸವಾಗಿದ್ದನು.

ಮಹಾವಿಷ ಉಗುಳುವ ಕಾಲಿಯನು ತನ್ನ ಕುಟುಂಬ ಪರಿವಾರದೊಂದಿಗೆ ಬಂದು ಆಳವಾದ ಜಲಾಶಯ ತಲದಲ್ಲಿ ವಾಸವಾಗಿದ್ದು ತಾನು ಹಾಗೂ ತನ್ನ ಕುಟುಂಬ ಸದಸ್ಯರು ಪೂತ್ಕಾರ ಮಾಡಿ ವಿಷಗಾಳಿಯನ್ನು ಸರ್ವತ್ರ ಹಬ್ಬಿದ್ದರು. ವಿಷದಗಾಳಿಯಿಂದಾಗಿ ವಾತಾವರಣವೆಲ್ಲವೂ ವಿಷಮಯವಾಗಿತ್ತು. ಇದನ್ನು ತಿಳಿದ ಶ್ರೀಕೃಷ್ಣನು ದೇವರ್ಷಿಗಳಿಗೂ ಪುಣ್ಯೋದಕವೆಂದು ಮಾನ್ಯಳಾಗಿದ್ದು ಉಪೇಯಳಾಗಿದ್ದ ಯಮುನೆಯು, ಈ ಪಶುಪಕ್ಷಿಗಳಿಗೆ ಅಪೇಯಳಾಗಿ ಅಪಾಯಳಾಗಿ ಅನುಪಾದೇಯಳಾಗಿರುವಳು. ಆದ್ದರಿಂದ ಈ ಕಾಲಿನಾಗನನ್ನು ನಿಗ್ರಹಿಸಿ, ವಿಷಚಕ್ರದಿಂದ ಯಮುನೆಯನ್ನು ಉದ್ಧರಿಸುತ್ತೇನೆ. ಜನ ಹಾಗೂ ದನಗಳು ಇದರ ವಿಷಪಾನದಿಂದ ಸಾಯದಂತೆ ಮಾಡುತ್ತೇನೆ. ಈ ಅರಣ್ಯವು ವಿಷಮಿಶ್ರಿತ ಅನ್ನದಂತೆ ಸ್ಪರ್ಶ ಮಾಡಲೂ ದುಸ್ಸಾಧ್ಯವಾಗಿದೆ. ಸಣ್ಣ ಸಣ್ಣ ವೃಕ್ಷಗಳೆಲ್ಲ ಬೆಳೆದು ನದಿಯ ಮಾರ್ಗವನ್ನು ತಡೆದಿದೆ. ಅಲ್ಲಿಯವರೆಗೂ ಹೋಗಲು ದಾರಿಯನ್ನು ಕಲ್ಪಿಸಬೇಕಾಗಿದೆ.

**ಏತದರ್ಥಂ ಚ ವಾಸೇಯಂ ವ್ರಜೇಽಸ್ಮಿನ್ ಗೋಪಜನ್ಮ ಚ ।**
**ಅಮೀಷಾಂ ಉತ್ಪಥಸ್ಥಾನಾಂ ನಿಗ್ರಹಾರ್ಥಂ ದುರಾತ್ಮ ನಾಮ್ ॥ 18 ॥**

ಏವಂ ಕೃತೇ ಬಾಹುವೀರ್ಯಂ ಲೋಕೇ ಖ್ಯಾತಿಂ ಗಮಿಷ್ಯತಿ ॥ 19 ॥

ಈ ಸರ್ಪರಾಜನನ್ನು ನಿಗ್ರಹಿಸಿ ಹ್ರದದ ನೀರನ್ನು ಶುದ್ಧಗೊಳಸಿ, ವ್ರಜವಾಸಿಗಳಿಗೆ ನೀರನ್ನು ಕುಡಿಯಲು ಉಪಯೋಗವಾಗುವಂತೆ ಮಾಡುವುದೇ ನನ್ನ ಕರ್ತವ್ಯವಾಗಿದೆ. ಇದಕ್ಕಾಗಿ ನಾನು ಅಲ್ಲಿಂದ ಇವರನ್ನು ಹೊರಡಿಸಿ ಇಲ್ಲಿಗೆ ಬಂದು ಇಲ್ಲಿಯೆ ವಾಸವಾಗಿರುವುದಲ್ಲವೆ. ನನ್ನ ಅವತಾರ ಕಾರ್ಯಗಳು ದುಷ್ಟದಮನ್ನೋದ್ಧೇಶದಿಂದಲೇ ಆಗಿರುತ್ತದೆ.

ನಾನು ಮಕ್ಕಳಾಟಿಕೆಯಂತೆ ಕದಂಬ ವೃಕ್ಷ ಹತ್ತು ಭಯಂಕರ ಸಾರ್ಪಹ್ರದದಲ್ಲಿ ಧುಮುಕಿ ಕಾಲಿಯನನ್ನು ನಿಗ್ರಹಿಸುತ್ತೇನೆ' ಎಂದು ನಿಶ್ಚೈಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಾಲಿಯ ನಿಗ್ರಹ ಸಂಕಲ್ಪ ಕರಣಂವೆಂಬಲ್ಲಿ
ಹನ್ನೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 12 ವಿಷ್ಣುಪರ್ವ

## ಅಥ ದ್ವಾದಶೋಽಧ್ಯಾಯಃ

ಸೋಪಸೃತ್ಯ ನದೀತೀರಂ ಬಧ್ವಾ ಪರಿಕರಂ ದೃಢಮ್ ।
ಆರೋಹಚ್ಚಪಲಃ ಕೃಷ್ಣಃ ಕದಂಬಶಿಖರಂ ಮುದಾ ॥ 1 ॥

ಕೃಷ್ಣಃ ಕದಂಬ ಶಿಖರಾತ್ ಲಂಬಮಾನೋ ಘನಾಕೃತಿಃ ।
ಹ್ರದಮಧ್ಯೇಽರೋಚ್ಛಬ್ಧಂ ನಿಪತನ್ನಂಬುಜೇಕ್ಷಣಃ ॥ 2 ॥

ಕೃಷ್ಣೇನ ಪತತಾ ತತ್ರ ಕ್ಷುಭಿತೋ ಯಮುನಾ ಹ್ರದಃ ।
ತೇನ ಶಬ್ಧೇನ ಸಂಕ್ಷುಬ್ಧಂ ಸರ್ಪಸ್ಯ ಭವನಂ ಮಹತ್ ॥ 3 ॥

ಉದತಿಷ್ಠತ್ ಜವಾತ್ ಸರ್ಪೋ ರೋಷಪರ್ಯಾಕುಲೇಕ್ಷಣಃ ।
ತತೋ ರಕ್ತಾಂತನಯನಃ ಕಾಲಿಯಃ ಸಮದೃಶ್ಯತ ॥ 4 ॥

ಹೀಗೆ ನಿಶ್ಚೈಯಿಸಿದ ಶ್ರೀಕೃಷ್ಣನು ಉತ್ತರೀಯದಿಂದ ಟೊಂಕಕಟ್ಟಿ ಅಲ್ಲಿಯೇ ಇದ್ದ ಕದಂಬವೃಕ್ಷವನ್ನೇರಿದನು. ಕದಂಬ ಗಿಡದ ತುದಿಗೆ ಕುಳಿತ ಕಪ್ಪು ಮೋಡದಂತೆ ಕ್ಷಣಕಾಲ ಕಂಡನು. ಶ್ರೀಕೃಷ್ಣನು **ಕದಂಬವೃಕ್ಷ**[1]ದಿಂದ

1. ಕದಂಬವೃಕ್ಷ :
ಕಾಲಿಯನಿಗೆ ಬ್ರಹ್ಮನಿಂದ ಅವಧ್ಯತ್ವ ವರವಿತ್ತು. ಗರುಡ ಹೊರತು ಇತರರಿಗೆ ಅವನ ವಿಷ ಸಹಿಸಲಸಾಧ್ಯವಾಗಿತ್ತು.
ಸಕಲ ವೃಕ್ಷಗಳು ವಿಷದಿಂದ ನಾಶವಾಗಿರುವಾಗ ಕದಂಬವೃಕ್ಷ ಹೇಗೆ ಬದುಕಿತ್ತು? ಗರುಡ ಸರ್ಪಮಾತೆಗೆ ಅಮೃತ ಒಯ್ಯುವಾಗ ಅಮೃತಧಾರೆಯನ್ನು ಈ ಗಿಡದ ಮೇಲೆ ಸ್ಥಾಪಿಸಿದ್ದ, ಇದರಿಂದ ಒಂದು ಹನಿ ಅಮೃತ ಬಿಂದು ಬಿದ್ದಿದ್ದರಿಂದ ಬದುಕಿತ್ತು.

ಮಡುವಿನ ನಡುಭಾಗಕ್ಕೆ ಹಾರಿದನು. ಅವನು ಬಿದ್ದ ಕೂಡಲೇ ಮಹಾಮೇಘವೇ ಹ್ರದದಲ್ಲಿ ಬಿದ್ದು ಒಡೆದು ಹೋದಂತೆ ಆ ಗಂಭೀರ ಜಲಾಶಯದ ನೀರೆಲ್ಲ ಅಲ್ಲೋಲಕಲ್ಲೋಲವಾಗಿ ಉದ್ವೇಲ ತರಂಗಗಳಿಂದ ಉಕ್ಕಿ ಹರಿಯಿತು. ಹಾರಿದ ವೇಗಕ್ಕೆ ಮಹಾಶಬ್ಧವುಂಟಾಗಿ ಸರ್ಪಗಳನ್ನೆಲ್ಲ ಬಡಿದು ಎಬ್ಬಿಸಿದಂತಾಯಿತು. ಕೋಪದಿಂದ ತಿರುಗುತ್ತಿದ್ದ ನೇತ್ರಗಳಿಂದ ಕೂಡಿದ ಕಾಲಿಯನು ಕೂಡಲೇ ನೀರಿನಿಂದ ಮೇಲೆದ್ದು ಬಂದನು. ಕೋಪದಿಂದ ಕೆಂಗಣ್ಣನಾದ ಅವನು ವಿಷದಿಂದ ಉರಿಯುವ ಜ್ವಾಲಾಮಾಲೆಗಳು ಹೆಡೆಗಳಿಂದ ಹೊರ-ಹೊಮ್ಮುತ್ತಿದ್ದನು.

## ಪಂಚಾಸ್ಯ ಕಾಲಿಯ

**ಪಂಚಾಸ್ಯಃ ಪಾವಕೋಚ್ಛ್ವಾಸಃ ಚಲಜಿಹ್ವೋನಲಾನನಃ ।**
**ಪೃಥುಭಿಃ ಪಂಚಭಿಃ ಘೋರೈಃ ಶಿರೋಭಿಃ ಪರಿವಾರಿತಃ ॥ 5 ॥**
**ತಸ್ಯ ಕ್ರೋಧಾಗ್ನಿ ಪೂರ್ಣೇಭ್ಯಃ ವಕ್ತ್ರೇಭ್ಯೋಭೂಚ್ಚ ಮಾರುತಃ ।**
**ದೃಷ್ಟ್ವಾ ಕೃಷ್ಣಂ ಹ್ರದಗತಂ ಕ್ರೀಡಂತಂ ಶಿಶುಲೀಲಯಾ ॥ 6 ॥**
**ಸೃಜತಾ ತೇನ ರೋಷಾಗ್ನಿಂ ಸಮೀಪೇ ತೀರಜಾಃ ದ್ರುಮಾಃ ।**
**ಕ್ಷಣೇನ ಭಸ್ಮಸಾನ್ನೀತಾಃ ಯುಗಾಂತಪ್ರತಿಮೇನ ವೈ ॥ 7 ॥**
**ತಸ್ಯ ಪುತ್ರಾಶ್ಚ ದಾರಾಶ್ಚ ಭೃತ್ಯಾಶ್ಚಾನ್ಯೇ ಮಹೋರಗಾಃ ।**
**ವಮಂತಃ ಪಾವಕಂ ಘೋರಂ ವಕ್ತ್ರೇಭ್ಯೋ ವಿಷಸಂಭವಮ್ ।**
**ಸಧೂಮಂ ಪನ್ನಗೇಂದ್ರಾಸ್ತೇ ನಿಪೇತುರಮಿತೌಜಸಃ ॥ 8 ॥**

ಕಾಲಿಯನಿಗೆ ಐದು ಹೆಡೆಗಳಿದ್ದು ಅವನು ಬುಸುಗುಟ್ಟಿದರೆ ಅಗ್ನಿಯ ಜ್ವಾಲೆಗಳೂ ಹೊರಬರುತ್ತಿದ್ದವು. ಮಿಂಚಿನಂತೆ ಚಂಚಲವಾದ ನಾಲಿಗೆಗಳು. ಅಗ್ನಿಯಂತೆ ದೇದೀಪ್ಯಮಾನವಾದ ಮುಖವುಳ್ಳ ಕಾಲಿಯನು ತನ್ನ ಭಯಂಕರ

---

ಈ ಹ್ರದಕ್ಕೆ ಬರಬಾರದೆಂದು ಸೌಭರಿ ಶಪಿಸಿದ್ದನು. ಇವರ ಶಾಪ ಗರುಡನಿಗೆ ಹೇಗೆ?

ವಿಷ್ಣುನಾ ವಿಷ್ಣುಭಕ್ತೈಶ್ಚ ಬ್ರಹ್ಮಶಾಪೋನುವರ್ತತೇ ।
ಅತಸ್ತು ಸೌಭರೇಃ ಶಾಪಂ ನಾತ್ಯವರ್ತತ್ ಖಗೇಶ್ವರ ॥ *–ಭಾ.ತಾ. 10/15*

ಶರೀರದಿಂದ ಮಡುವನ್ನೆ ಪೂರ್ಣವಾಗಿ ತುಂಬಿಸಿಬಿಟ್ಟನು. ಕೋಪದಿಂದ ಉರಿಯುತ್ತಿರುವ ಕಾಲಿಯನ ಪ್ರಭಾವದಿಂದಾಗಿ ಹ್ರದದ ನೀರೂ ಸಹ ಕಥಕಥ ಕುದಿಯುತ್ತಿತ್ತು. ಅವನ ಬೆಂಕಿಯಂತಿರುವ ವಿಷಾಗ್ನಿ ಜ್ವಾಲೆಗಳಿಂದ ಯಮುನೆಯ ತೀರದಲ್ಲಿದ್ದ ಸಮಸ್ತ ವೃಕ್ಷಗಳನ್ನೂ ಸುಟ್ಟು ಹಾಕಿದನು. ಅವನು ಮಾತ್ರವಲ್ಲದೆ, ಅವನ ಮಕ್ಕಳು, ಭಾರ್ಯೆಯರು, ಭೃತ್ಯರು ಹಾಗೂ ಇತರ ಮಹಾಸರ್ಪಗಳೂ ಆಪ್ತೇಷ್ಟ ಸೇನಾನಾಯಕರೂ ಸಾವಿನ ಬಾಯಿಯಂತಿದ್ದ ಆ ಮಡುವಿನಲ್ಲಿ ಧೈರ್ಯದಿಂದ ಕ್ರೀಡಿಸುತ್ತಿರುವ ಕುಮಾರನನ್ನು ಕೆಕ್ಕರಿಸಿ ನೋಡಿ, ಅವನನ್ನು ಕೊಂದು ಹಾಕಲು ನಿಂತರು. ಎಲ್ಲ ಸರ್ಪಗಳೂ ಸೇರಿ ಕೃಷ್ಣನನ್ನು ಬಂಧಿಸಿ ಅವನ ಕೈಕಾಲುಗಳು ಅಲ್ಲಾಡದಂತೆ ಮಾಡಿದವು. ಆ ಎಲ್ಲ ದಂದಶೂಕಗಳೂ ವಿಷ ಮಿಶ್ರಿತವಾಗಿದ್ದ ತೀಕ್ಷ್ಣವಾದ ದಂತಗಳಿಂದ ಕೃಷ್ಣನನ್ನು ಶರೀರಾದ್ಯಂತ ಕಚ್ಚಿದವು. ತಮ್ಮ ಸೂಜಿಯಂತಿರುವ ದಂತದ ನಳಿಕೆಗಳಿಂದ ಹಾಲಾಹಲದ ಕಾರಂಜಿಯನ್ನೆ ಹರಿಸಿದರು. ಇಷ್ಟಿದ್ದರೂ ಸರ್ಪಗಳ ವಿಷ ವಿಷಧರನ ತಲ್ಲಿಗೆ ಏನನ್ನೂ ಮಾಡಲಾಗಲ್ಲಿಲ್ಲ. ಈ ಮಧ್ಯದಲ್ಲಿ ಈ ದೃಶ್ಯ ನೋಡುತ್ತಿದ್ದ ಗೋಪಾಲಕರು ಕಣ್ಣೀರು ಸುರಿಸುತ್ತಾ ಗದ್ಗದ ಸ್ವರದಿಂದ ಅಳುತ್ತಾ ಬೃಂದಾವನಕ್ಕೆ ಹೋಗಿ ಹೀಗೆಂದರು.

*ಗೋಪಾ ಊಚುಃ–*

**ಏಷ ಮೋಹಂ ಗತಃ ಕೃಷ್ಣೋ ಮಗ್ನೋ ವೈ ಕಾಲಿಯೇ ಹ್ರದೇ ।**
**ಭಕ್ಷ್ಯತೇ ಸರ್ಪರಾಜೇನ ತದಾಗಚ್ಛತ ಮಾ ಚಿರಮ್ ॥ 9 ॥**
**ಏಷ ತೇ ಕೃಷ್ಯತೇ ಕೃಷ್ಣಃ ಸರ್ಪೇಣೇತಿ ಮಹಾಹ್ರದೇ ॥ 10 ॥**
**ನಂದಗೋಪಸ್ತು ತಚ್ಛ್ರುತ್ವಾ ವಜ್ರಪಾತೋಪಮಂ ವಚಃ ।**
**ಆರ್ತಃ ಸ್ಖಲಿತ ವಿಕ್ರಾಂತಃ ತಂ ಜಗಾಮ ಹ್ರದೋತ್ತಮಮ್ ॥ 11 ॥**

'ಕೃಷ್ಣನು ಕಾಲಿಯ ಮಡುವಿನಲ್ಲಿ ಬಿದ್ದಿದ್ದು ಘೋರ ಸರ್ಪಗಳೆಲ್ಲ ಬಂದು ಅವನನ್ನು ಬಿಗಿಯಾಗಿ ಬಂಧಿಸಿ ನಿರಂತರವಾಗಿ ಕಚ್ಚುತ್ತಿವೆ. ಆ ಕಾಲಿಯ ಸರ್ಪನು ಶ್ರೀಕೃಷ್ಣನನ್ನು ತಿನ್ನುವುದರಲ್ಲಿದ್ದಾನೆ. ಕೂಡಲೇ ಬನ್ನಿರಿ' ವಜ್ರದೇಟಿನಂತಿರುವ ವಾರ್ತೆಯನ್ನು ಕೇಳಿ ಸಂಭ್ರಾಂತರಾದ ನಂದ, ಯಶೋದೆಯರು ಬಲರಾಮನು ಹಾಗೂ ಉಳಿದ ಗೋಪಾಲಕರಿಂದ ಕೂಡಿ

ಹಾಹಾಕಾರ ಮಾಡುತ್ತಾ ಅಳುತ್ತಾ ಯಮುನಾ ಹ್ರದಕ್ಕೆ ಬಂದರು. ಆಗ ಹಾವುಗಳ ದೊಡ್ಡ ಗುಂಪೇ ಬಂದು ಕೃಷ್ಣನ ಶರೀರವನ್ನು ಬಲವಾಗಿ ಬಿಗಿದು, ತಲೆಯನ್ನು ಮೇಲೆ ಎತ್ತಿ ಜೋರಾಗಿ ಹೊಡೆದು ಸೂಜಿಗಳಂತಿರುವ ದಂತಗಳಿಂದ ಕಚ್ಚಿದವು. ನಂದಾದಿಗಳು ಇದನ್ನು ನೋಡಿ ನಿರಾಶೆಯಿಂದ ರೋದನ ಮಾಡತೊಡಗಿದರು. ಯಶೋದೆಯಂತು ತನ್ನನ್ನು ಹಿಡಿದುಕೊಂಡಿರುವ ಜನರಿಂದ ಕೈ ಕೊಸರಿಕೊಂಡು ಮಡುವಿಗೆ ಹಾರಲು ಯತ್ನಿಸಿದಳು. ಉಳಿದವರೆಲ್ಲ ಎದೆ ಎದೆ ಬಡಿದುಕೊಳ್ಳುತ್ತಾ ನಿಂತರು.

**ಯಾ ಪಶ್ಯಸಿ ಪ್ರಿಯಂ ಪುತ್ರಂ ಸರ್ಪರಾಜವಶಂ ಗತಮ್ ।**
**ಸ್ಪಂದಿತಂ ಸರ್ಪಭೋಗೇನ ಕೃಷ್ಯಮಾಣಂ ಯಥಾ ಮೃತಮ್ ॥ 12 ॥**
**ಅಶ್ಮಸಾರಮಯಂ ನೂನಂ ಹೃದಯಂ ತೇ ವಿಲಕ್ಷ್ಯತೇ ।**
**ಪುತ್ರಂ ಕಥಮಿಮಂ ದೃಷ್ಟ್ವಾ ಯಶೋದೇ ನಾವದೀರ್ಯಸೇ ॥ 13 ॥**

ಅಯ್ಯೋ ಕೃಷ್ಣ! ಹಾವು ಕಚ್ಚಿ ಸಾಯುವ ಪ್ರಸಂಗ ನಿನಗೆ ಬಂತೇ! ದುರ್ದೈವೀ ಯಶೋದೆಯೇ! ಇಂತಹ ಮುದ್ದು ಮಗು ಹಾವಿನ ಬಾಯಿಗೆ ಬಿದ್ದದ್ದನ್ನು ನೋಡುತ್ತಿದ್ದರೂ ಎದೆಯೊಡೆದು ಸಾಯದೆ ಇನ್ನೂ ಬದುಕಿರುವೆಯಲ್ಲ? ನಿನ್ನ ಹೃದಯ ಅಶ್ಮಸಾರವೆ ಸರಿ.

ಇನ್ನು ಈ ಮಡುವಿನಲ್ಲಿಯೇ ಹಾರಿಕೊಂಡು ನೀನು ಜೀವ ಬಿಡುವುದಾದರೆ ನಾವೆಲ್ಲರೂ ಧುಮುಕಿ ಪ್ರಾಣಬಿಡುವೆವು. ನಂದಗೋಪನು ಅಸಮರ್ಥನಾಗಿ ಸತ್ತ ಶವದಂತಿರುವನು.

**ದಿವಸಃ ಕೋ ವಿನಾ ಸೂರ್ಯಂ ವಿನಾ ಚಂದ್ರೇಣ ಕಾ ನಿಶಾ ।**
**ವಿನಾ ವೃಷೇಣ ಕಾ ಗಾವೋ ವಿನಾ ಕೃಷ್ಣೇನ ಕೋವ್ರಜಃ ॥ 14 ॥**
**ವಿನಾ ಕೃಷ್ಣಂ ನ ಯಾಸ್ಯಾಮೋ ವಿವತ್ಸಾ ಇವಧೇನವಃ ॥ 15 ॥**

ಸೂರ್ಯನಿಲ್ಲದ ದಿವಸದಂತೆ, ಚಂದ್ರನಿಲ್ಲದ ರಾತ್ರಿಯಂತೆ, ಎತ್ತಿಲ್ಲದ ಗೋವಿನಂತೆ, ಕೃಷ್ಣನಿಲ್ಲದೆ ವ್ರಜವು ಶೋಭಿಸುವುದಿಲ್ಲ. ಕರುಗಳನ್ನು ಕಳೆದುಕೊಂಡ ಹಸುಗಳಂತೆ ನಾವು ಖಂಡಿತವಾಗಿಯೂ ಕೃಷ್ಣನಿಲ್ಲದೆ ವ್ರಜಕ್ಕೆ ಹೋಗುವುದಿಲ್ಲ.

## ಬಲರಾಮನ ಧೈರ್ಯೋಕ್ತಿ

**ಕೃಷ್ಣ ಕೃಷ್ಣ ಮಹಾಬಾಹೋ ಗೋಪಾನಾಂ ನಂದವರ್ಧನ ।**
**ದಮ್ಯತಾಮೇಷ ವೈ ಕ್ಷಿಪ್ರಂ ಸರ್ಪರಾಜೋ ವಿಷಾಯುಧಃ ॥ 16 ॥**

**ಇಮೇ ನೋ ಬಾಂಧವಾಃ ತಾತ ತ್ವಾಂ ಮತ್ವಾ ಮಾನುಷಂ ವಿಭೋ ।**
**ಪರಿದೇವಂತಿ ಕರುಣಂ ಸರ್ವೇ ಮಾನುಷ ಬುದ್ಧಯಃ ॥ 17 ॥**

ಶ್ರೀಕೃಷ್ಣನೇ ಇದೇನಿದು! ಹುಡುಗಾಟ. ನೀನು ಮಾನವರಂತೆ ನಟಿಸುತ್ತಿರುವೆಯಲ್ಲ. ಈ ವಿಷದ ದಂತವೆ ಆಯುಧವಾಗಿವುಳ್ಳ ಕಾಲಿಯನನ್ನು ಮಣಿಸಿ, ನಂದಾದಿಗಳನ್ನೆಲ್ಲ ತಣಿಸು. ಮಾನುಷ ಬುದ್ಧಿಯವರಾದ ಇವರೆಲ್ಲರೂ ನಿನ್ನನ್ನು ಮನುಷ್ಯನೆಂದೆ ತಿಳಿದಿರುತ್ತಾರೆ. ವೇದ ಪ್ರತಿಪಾದ್ಯನೂ, ಜಗಜ್ಜನ್ಮಾದಿ ಕಾರಣನೂ, ವಿಶ್ವತಶ್ಚಕ್ಷುವಾದ ನಿನಗೆ ಈ ಯಃಕಶ್ಚಿತ್ ಚಕ್ಷುಶ್ರವವೊಂದು ಲೆಕ್ಕವೆ? ನಿಗ್ರಹಿಸು ಅವನನ್ನು! ಎಂದನು.

### ಶ್ರೀಕೃಷ್ಣನ ನನರ್ತ

**ತಚ್ಛ್ರುತ್ವಾ ರೋಹಿಣೇಯಸ್ಯ ವಾಕ್ಯಂ ಸಂಜ್ಞಾ ಸಮೀರಿತಮ್ ।**
**ವಿಕ್ರಮ್ಯಾಸ್ಫೋಟಯದ್ ಬಾಹೋ ಭಿತ್ವಾ ತನ್ನಗಬಂಧನಮ್ ॥ 18 ॥**

**ತಸ್ಯ ಪದ್ಭ್ಯಾಂ ಅಥಾಕ್ರಮ್ಯ ಭೋಗರಾಶಿಂ ಜಲೋತ್ಥಿತಮ್ ।**
**ಶಿರಸ್ತು ಕೃಷ್ಣೋ ಜಗ್ರಾಹ ಸ್ವಹಸ್ತೇನಾವನಾಮ್ಯ ಚ ॥ 19 ॥**

**ತಸ್ಯಾರುರೋಹ ಸಹಸಾ ಮಧ್ಯಮಂ ತನ್ಮಹಚ್ಛಿರಃ ।**
**ಸೋಽಸ್ಯಮೂರ್ಧ್ನಿ ಸ್ಥಿತಃ ಕೃಷ್ಣೋ ನನರ್ತ ರುಚಿರಾಂಗದಃ ॥ 20 ॥**

ಬಲರಾಮನ ಮಾತನ್ನು ಕೇಳಿದ ಕೃಷ್ಣನು ಮಂದಹಾಸ ಬೀರಿ, ತನ್ನೆರಡೂ ತೋಳುಗಳನ್ನು ಝಾಡಿಸಿ ಸರ್ಪಬಂಧನದಿಂದ ಮುಕ್ತನಾದನು. ಅದರ ಶರೀರವನ್ನು ಮೆಟ್ಟಿನಿಂತನು. ಅದರ ತಲೆಯನ್ನು ಹಿಡಿದು ಬಗ್ಗಿಸಿ, ಕಾಲಿಯನ ಮಧ್ಯದ ಹೆಡೆಯ ಮೇಲೆ ತನ್ನ ಅಡಿಯನ್ನಿಟ್ಟು ನರ್ತನವನ್ನು ಮಾಡಲಾರಂಭಿಸಿದನು. ಬ್ರಹ್ಮಾಂಡವನ್ನು ಹೊತ್ತಿರುವ ಹರಿಯ ಭಾರವನ್ನು ಹೊರಲಾರದೆ ರಕ್ತಕಾರತೊಡಗಿದ. ಕೃಷ್ಣನ ಪಾದ ಘಾತಗಳಿಂದ ಬಲಕುಗ್ಗಿತು. ತಲೆತಗ್ಗಿತು. ಬಾಲಕನ ಲೀಲಾತಾಂಡವ ನಡೆಯಿತು. ತನ್ನ ಕಚ್ಚಲು ಎತ್ತಿದ

ಹೆಡೆಯ ಮೇಲೆಯೇ ತನ್ನ ಪಾದ ಹಿಮ್ಮಡಿಯಿಂದ ಒದ್ದು ಅದು ರಕ್ತಕಾರಿ ನಮ್ರವಾಗುತ್ತಿತ್ತು.

## ಕಾಲಿಯನ ಶರಣಾಗತಿ

**ಮೃದ್ಯಮಾನಃ ಸ ಕೃಷ್ಣೇನ ಶಾಂತಮೂರ್ಧಾ ಭುಜಂಗಮಃ ।**
**ಆಸ್ಯೈಃ ಸರುಧಿರೋದ್ಗಾರೈಃ ಕಾತರೋ ವಾಕ್ಯಮಬ್ರವೀತ್ ॥ 21 ॥**

ಕೃಷ್ಣ ಪರಮಾತ್ಮನು ವಿಷಜ್ವಾಲೆಗಳಿಂದ ಪೂತ್ಕರಿಸುತ್ತಾ ಸೆಟೆದು ನಿಂತ ಹೆಡೆಗಳ ಮೇಲೆ ನರ್ತಿಸುತ್ತಿರುವಾಗ ಅವನ ಹೆಡೆಯಲ್ಲಿದ್ದ ರತ್ನಗಳನ್ನೆಲ್ಲ ಪುಡಿ ಮಾಡುತ್ತಿದ್ದನು. ಪಂಚಮುಖದಿಂದಲೂ ರಕ್ತದ ವಾಂತಿಯಾಯಿತು. ಇವನ ರಕ್ತದ ಕೋಡಿಯಿಂದ ಯಮುನೆಯ ಜಲವೆಲ್ಲ ಕೆಂಪಾಯಿತು. ಸಾಯುವ ಮಟ್ಟಕ್ಕೆ ಬಂದು ಶರಣು ಹೊಂದಿದ.

**ಅವಿಜ್ಞಾನಾನ್ ಮಯಾ ಕೃಷ್ಣ ರೋಷೋಽಯಂ ಸಂಪ್ರದರ್ಶಿತಃ ।**
**ದಮಿತೋಽಹಂ ಹತವಿಷೋ ವಶಗಸ್ತೇ ವರಾನನ ॥ 22 ॥**

**ತದಾಜ್ಞಾಪಯ ಕಿಂ ಕುರ್ಯಾಂ ಸದಾ ಸಾಪತ್ಯ ಬಾಂಧವಃ ।**
**ಕಸ್ಯ ವಾ ವಶತಾಂ ಯಾಮಿ ಜೀವಿತಂ ಮೇ ಪ್ರದೀಯತಾಮ್ ॥ 23 ॥**

ದೇವಾಧಿದೇವನೇ! ನಿನ್ನನ್ನು ಕೋಪದಿಂದ ಕಚ್ಚಿ ಮಹಾಪರಾಧ ಮಾಡಿದೆನು. ಅಜ್ಞಾನಿಯಾದ ನನ್ನ ಅಪರಾಧವನ್ನು ಕ್ಷಮಿಸು. ನಾವೆಲ್ಲರೂ ನಿನ್ನ ದಾಸಾನುವರ್ತಿಗಳು. ನನ್ನ ವಿಷದ ಮದವೆಲ್ಲ ಇಳಿಯಿತು. ನಿನ್ನ ಆಜ್ಞಾಪರಿಪಾಲಕನಾಗಿರುವೆ. ನನ್ನ ಜೀವದಾನ ಮಾಡು. ಅಷ್ಟೂಶ್ವಯ ಪೂರ್ಣನಾದ ನಿನ್ನನ್ನು ಹೀನ ಜಾತಿಯ ನಾನೆಂತು ನಿನ್ನಲ್ಲಿ ಸ್ತುತಿಸಲಿ. ಪ್ರಪಂಚವನ್ನೆಲ್ಲ ಸೃಷ್ಟಿಸಿದವನು ನೀನು ಎಂದ ಮೇಲೆ ನನ್ನನ್ನೂ ನೀನೇ ಸೃಷ್ಟಿಸಿದೆಯಲ್ಲವೆ? ವಿಭಿನ್ನ ಜಾತಿಯ ಜಂತುಗಳನ್ನೆಲ್ಲ ಸೃಷ್ಟಿಸಿ ಬೇರೆ ಬೇರೆ ಸ್ವಭಾವವನ್ನೂ ನಿಯತಗೊಳಿಸಿರುವವನೂ ನೀನೇ. ಹಾವಾಗಿ ಸೃಷ್ಟಿಸಿದೆ. ಹೆಡೆಯಿಂದ ಹೊಡೆಯುವುದು ಕಂಡದ್ದನ್ನೆಲ್ಲ ಕಚ್ಚಿ ಕೊಲ್ಲುವುದೆ ನಮ್ಮ ಧರ್ಮ. ನನ್ನ ದಾರ್ಷ್ಟ್ಯ ಉಡುಗಿದೆ. ಮನಸ್ಸು ಶಾಂತವಾಗಿದೆ ಎಂದು ಬೇಡಿದನು.

## ರಮಣಕ ದ್ವೀಪಕ್ಕೆ ಹೋಗೆಂದು ಆದೇಶ

**ತವಾಸ್ಮಿನ್ ಯಮುನಾತೋಯೇ ನೈವ ಸ್ಥಾನಂ ದದಾಮ್ಯಹಮ್ ।**
**ಗಚ್ಛಾರ್ಣವಜಲಂ ಸರ್ಪ ಸಭಾರ್ಯಃ ಸಹ ಬಾಂಧವಃ ॥ 24 ॥**

**ಯಶ್ಚೇಹ ಭೂಯೋ ದೃಶ್ಯೇತ ಸ್ಥಾನೇ ವಾ ಯದಿ ವಾ ಜಲೇ ।**
**ತವ ಭೃತ್ಯಃ ತನೂ ಜೋ ವಾ ಕ್ಷಿಪ್ರಂ ವಧ್ಯಃ ಸ ಮೇ ಭವೇತ್ ॥ 25 ॥**

ಸರ್ಪರಾಜನೇ, ಈ ಯಮುನಾಹ್ರದದಲ್ಲಿ ಇನ್ನು ಮುಂದೆ ನೀನು ಇರತಕ್ಕದ್ದಲ್ಲ. ಇದನ್ನು ಬಿಟ್ಟು ನಿನ್ನ ಮೊದಲಿನ ವಾಸಸ್ಥಾನವಾದ ಸಮುದ್ರದಲ್ಲಿರುವ ರಮಣಕ ದ್ವೀಪಕ್ಕೆ ಹೋಗು. ನೀನಾಗಲೀ ನಿನ್ನ ಪರಿವಾರದ ಮತ್ತಾರೆ ಆಗಲಿ ಈ ಕಾಲಿಯ ಮಡುವಿನಲ್ಲಿ ಕಂಡರೆ ತಕ್ಷಣದಲ್ಲಿ ಅವರನ್ನು ಸಂಹಾರ ಮಾಡುವೆ. ಈ ನೀರು ತಿಳಿಯಾಗಲಿ ಮೊದಲಿನಂತೆ ವಿಷಕಷಾಯ ಕಲುಷಿತ ದೋಷವಿಲ್ಲದೆ ಶುಚಿಯಾಗಿರಲಿ.

## ಮತ್ಪದಾಂಕಿತ ಚಿಹ್ನೆ

**ಮತ್ಪದಾನಿ ಚ ತೇ ಸರ್ಪ ದೃಷ್ಟ್ವಾ ಮೂರ್ಧಸು ಸಾಗರೇ ।**
**ಗರುಡಃ ಪನ್ನಗರಿಪುಃ ತ್ವಯಿ ನ ಪ್ರಹರಿಷ್ಯತಿ ॥ 26 ॥**

ಕಾಲಿಯನೇ! ಇದೀಗ ನಾನು ನಿನ್ನ ಹೆಡೆಗಳಲ್ಲಿ ನನ್ನ ಅಡಿಯಿರಿಸಿ ಕುಣಿದಾಡಿದ್ದು ಸಹ ನಿನ್ನ ಹಿತಕ್ಕಾಗಿಯೆ. ನಿನ್ನ ಫಣಾಮಂಡಲದಲ್ಲಿ ಮೂಡಿರುವ ನನ್ನ ಪಾದಚಿಹ್ನೆಗಳನ್ನು ಕಂಡು ನಿನ್ನ ಜಾತಿವೈರಿಯಾದ ಗರುಡನು ಇನ್ನು ನಿನಗೆ ಕೇಡು ಬಗೆಯಲಾರ. ಆದ್ದರಿಂದ ನಿರ್ಭಯನಾಗಿ ಸಮುದ್ರ ಸೇರು ಎಂದು ಆದೇಶವಿತ್ತನು.

ಕಾಲಿಯನು 'ಹಾಗೆ ಆಗಲಿ' ಎಂದು ಹೇಳಿ ಕೃಷ್ಣನ ಚರಣಗಳನ್ನು ತನ್ನ ಫಣಾಮಣಿ ಕಿರಣಗಳಿಂದ ಬೆಳಗಿ ಅಪ್ಪಣೆ ಪಡೆದು ತನ್ನ ಪತ್ನೀ ಪುತ್ರರಿಂದ ಪರಿವಾರದೊಂದಿಗೆ ರಮಣ ದ್ವೀಪಕ್ಕೆ ಹೋಗಿ ಸೇರಿದ.

## ಗೋಪಾಲಕರ ವಿಜಯೋತ್ಸಾಹ

**ನಿರ್ಜಿತೇ ತು ಗತೇ ಸರ್ಪೇ ಕೃಷ್ಣ ಮುತ್ತೀರ್ಯ ಧಿಷ್ಠಿತಮ್ ।**
**ವಿಸ್ಮಿತಾಃ ತುಷ್ಟುವುಃ ಗೋಪಾಃ ಚಕ್ರುಶ್ಚೈವ ಪ್ರದಕ್ಷಿಣಮ್ ॥ 27 ॥**

**ಅದ್ಯಪ್ರಭೃತಿ ಗೋಪಾನಾಂ ಗವಾಂ ಗೋಷ್ಠಸ್ಯ ಚಾನಘ ।**
**ಆಪತ್ಸು ಶರಣಂ ಕೃಷ್ಣಃ ಪ್ರಭುಶ್ಚಾಯತ ಲೋಚನಃ ॥ 28 ॥**

ಕಾಳಿಂಗನನ್ನು ಜಯಿಸಿ ದಡದಲ್ಲಿ ಬಂದು ನಿಂತಿದ್ದ ಶ್ರೀಕೃಷ್ಣನನ್ನು ನೋಡಿ ಆನಂದಬಾಷ್ಪ ಸುರಿಸುತ್ತಾ ಬಗೆಬಗೆಯಾಗಿ ಸ್ತೋತ್ರ ಮಾಡುತ್ತಾ ಅವನಿಗೆ ಪ್ರದಕ್ಷಿಣೆ ಬಂದರು. ಕಾಳಿಯನ ವಿಷದಿಂದ ದೂಷಿತವಾದ ಯಮುನೆಯ ನೀರಿನ ಮೇಲೆ ಗಾಳಿ ಬೀಸಿ ಗಿಡ ಮರಗಳೆಲ್ಲವೂ ಒಣಗಿ ಹೋಗಿದ್ದವು. ಘೋರವಾದ ಬೆಂಗಾಡು ಆಗಿತ್ತು. ಕೃಷ್ಣನು ತನ್ನ ಕರುಣಾದೃಷ್ಟಿ ಬೀರಿದ ಮಾತ್ರಕ್ಕೆ ಮತ್ತೆ ಗಿಡಮರಗಳೆಲ್ಲವೂ ಚಿಗಿತು ಹೂ ಕಾಯಿಗಳಿಂದ ಶೋಭಿಸಿತು.

ಸಮಸ್ತ ಗೋಪರು ನಂದರಾಜನಿಗೆ ಹೀಗೆ ಹೇಳಿದರು – ನಂದಗೋಪನೇ! ನಿನ್ನ ಮಗ ಅಸಾಮಾನ್ಯ ವ್ಯಕ್ತಿ. ಇಂತಹ ಸರ್ವ ಸಮರ್ಥ ಪುತ್ರನನ್ನು ಪಡೆದ ನೀನು ಧನ್ಯನು. ಭಗವಂತನು ನಿನಗೆ ವಿಶೇಷ ಅನುಗ್ರಹ ಮಾಡಿರುವನು. ಇನ್ನು ಮುಂದೆ ಸಮಸ್ತ ವ್ರಜವಾಸಿಗಳಿಗೂ ಗೋವುಗಳಿಗೂ ಆಪತ್ಕಾಲದಲ್ಲಿ ಆಪದ್ಬಾಂಧವನು ನಿನ್ನ ಮಗ ಶ್ರೀಕೃಷ್ಣನೇ – ಯಮುನಾ ನದಿ ಇಂದಿನಿಂದ ಸರ್ವರಿಗೂ ಸ್ನಾನ ಪಾನಗಳಿಗೆ ಯೋಗ್ಯವಾಯಿತು. ಇಂತಹ ಮಹಾಸತ್ವವುಳ್ಳ ಕೃಷ್ಣನು ನಮ್ಮ ಮುಂದೆ ಇದ್ದರೂ ಬೂದಿಮುಚ್ಚಿದ ಕೆಂಡದಂತೆ ಕಾಣದಾದವು. ಧಿಕ್ಕಾರವಿರಲಿ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಗೋಪಾಲಕರ ವಿಜಯೋತ್ಸವವೆಂಬಲ್ಲಿ
ಹನ್ನೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ತ್ರಯೋದಶೋಽಧ್ಯಾಯಃ

## ಧೇನುಕಾಸುರ ಭಂಜನ

*ವೈಶಂಪಾಯನ ಉವಾಚ –*

**ದಮಿತೇ ಸರ್ಪರಾಜೇ ತು ಕೃಷ್ಣೇನ ಯಮುನಾ ಹ್ರದೇ ।**
**ತಮೇವ ಚೇರತುಃ ದೇಶಂ ಸಹಿತೌ ರಾಮಕೇಶವೌ ॥ 1 ॥**

**ಆಜಗ್ಮತುಃ ತೌ ಸಹಿತೌ ಗೋಧನ್ಯೈಃ ಸಹ ಗಾಯಿನೌ ।**
**ಗಿರಿಂ ಗೋವರ್ಧನಂ ರಮ್ಯಂ ವಸುದೇವ ಸುತಾವುಭೌ ॥ 2 ॥**

**ಗೋವರ್ಧನಸ್ಯೋತ್ತರತೋ ಯಮುನಾ ತೀರಮಾಶ್ರಿತಮ್ ।**
**ದದೃಶಾತೇ ಚ ತೌ ವೀರೌ ರಮ್ಯಂ ತಾಲವನಂ ಮಹತ್ ॥ 3 ॥**

ಶ್ರೀಕೃಷ್ಣನು ಯಮುನೆಯ ಜಲಾಶಯದಲ್ಲಿ ಜಲೇಶಾಯಿಯಾದ ಬಿಲೇಶಯನನ್ನು (ಸರ್ಪ) ನಿಗ್ರಹಿಸಿದ ಮೇಲೆ ಬಲರಾಮ-ಕೃಷ್ಣರು ಯಮುನೆಯ ತೀರದಲ್ಲಿರುವ ಹಸಿರು ಹುಲ್ಲುಗಾವಲುಗಳಲ್ಲಿಯೂ ಗೋವರ್ಧನ ಗಿರಿಯ ಹಸಿರು ಶಾದ್ವಲಗಳಲ್ಲಿಯೂ ಗೋವತ್ಸಗಳನ್ನು ಮೇಯಿಸುತ್ತಾ ಸಂಚರಿಸುತ್ತಿದ್ದರು.

ಒಂದು ದಿನ ಗೋವರ್ಧನ ಪರ್ವತದ ಉತ್ತರಕ್ಕೆ ಕಲ್ಲುಮುಳ್ಳುಗಳಿಲ್ಲದ ಸಮತಾಲ ಭೂಮಿಯಲ್ಲಿ ದೊಡ್ಡ ತಾಳವನವಿದ್ದದ್ದು ಕಂಡುಬಂದಿತು. ಅದು ತಾಳೆ ಎಲೆಗಳಿಂದ ತುಂಬಿಹೋಗಿದ್ದ ತಾಳವನವನ್ನು ಉದ್ಧತವಾದ ಎರಡು ವೃಷಭಮರಿಗಳಂತೆ ಪ್ರವೇಶಿಸಿದರು. ಕರಿಬಣ್ಣದ ಮೃತ್ತಿಕೆಯಿರುವ, ಕಲ್ಲು

ಮುಳ್ಳುಗಳಿಲ್ಲದ ಆ ವನದಲ್ಲಿ ತಾಳವೃಕ್ಷಗಳು ಎತ್ತರವಾಗಿದ್ದು ಅದರ ಕಾಂಡಗಳು ದಪ್ಪವಾಗಿದ್ದವು. ಕೊಂಬೆಗಳ ಅಗ್ರಭಾಗಗಳಲ್ಲಿ ತಾಳೆಫಲಗಳಿಂದ ತುಂಬಿದ್ದ ಆ ತಾಳೆಮರಗಳು ಸೊಂಡಿಲುಗಳನ್ನೆತ್ತಿ ನಿಂತಿರುವ ಆನೆಗಳಂತೆ ಕಾಣುತ್ತಿದ್ದವು.

ತತ್ರ ದಾಮೋದರೋ ವಾಕ್ಯಮುವಾಚ ವದತಾಂ ವರಃ ।
ಅಹೋ ತಾಲಫಲೈಃ ಪಕ್ವೈಃ ವಾಸಿತೇಯಂ ವನಸ್ಥಲೀ ॥ 4 ॥

ಸ್ವಾದೂನ್ಯಾರ್ಯ ಸುಗಂಧೀನಿ ಶ್ಯಾಮಾನಿ ರಸವಂತಿ ಚ ।
ಪಕ್ವ ಫಲಾನಿ ಸಹಿ ತ ಪಾತಯಾವೋ ಲಘುಕ್ರಮೌ ॥ 5 ॥

ದುರ್ದಾನವ ಮರ್ದನ ಕಾರ್ಯದಲ್ಲಿ ದೀಕ್ಷಿತನಾದ ಕೃಷ್ಣನು ಅಣ್ಣನನ್ನು ಕುರಿತು– 'ಅಣ್ಣ ಬಲರಾಮನೇ! ನೋಡಿದೆಯಾ ಈ ತಾಳವನದಲ್ಲಿ ತಾಳೆ ಮರಗಳು ಕಳಿತು ಹಣ್ಣಾದ ಫಲಭಾರದಿಂದಾಗಿ ಬಾಗಿ ನಿಂತಿವೆ. ಇದರ ಸುಗಂಧವಾದರೂ ಗೋಪಾಲಕರ ಬಾಯಲ್ಲಿ ನೀರೂರಿಸಿದೆ. ಅವುಗಳನ್ನು ತಿನ್ನಬೇಕೆಂಬ ಹಂಬಲ ಗೋಪಾಲಕರಿಗೂ ಇದೆಯಾಗಿ ನಾವಿಬ್ಬರೂ ಕೂಡಿ ಈ ತಾಲವನದ ಫಕ್ವಫಲಗಳನ್ನೆಲ್ಲ ಉದುರಿಸೋಣ. ಮಿತ್ರರೆಲ್ಲರೂ ಯಥೇಚ್ಛವಾಗಿ ತಿನ್ನಲಿ' ಎಂದನು.

## ಬಲರಾಮನಿಂದ ತಾಲಫಲಪಾತನ

ದಾಮೋದರವಚಃ ಶ್ರುತ್ವಾ ರೌಹಿಣೇಯೋ ಹಸನ್ನಿವ ।
ಪಾತಯತ್ ಪಕ್ವತಾಲಾಗಿ ಚಾಲಯಾಮಾಸ ತಾಂಸ್ತರೂನ್ ॥ 6 ॥

ತತ್ರು ತಾಲವನಂ ನೃಣಾಮಸೇವ್ಯಂ ದುರತಿಕ್ರಮಮ್ ।
ದಾರುಣೋ ಧೇನುಕೋ ನಾಮ ದೈತ್ಯೋ ಗರ್ದಭ ರೂಪಧೃಕ್ ।
ಖರಯೂಥೇನ ಮಹತಾ ವೃತಃ ಸಮನುಸೇವತೇ ॥ 7 ॥

ದಾಮೋದರನ ಮಾತುಗಳನ್ನು ಕೇಳಿದ ಶ್ವೇತಕೇಶಿಯು ನಸುನಗುತ್ತಾ ತಾಳೆಯ ಫಲಗಳನ್ನು ಬೀಳಿಸುವ ಆಶಯದಿಂದ ತಾಳ ವೃಕ್ಷಗಳನ್ನು ಬಲವಾಗಿ ಅಲ್ಲಾಡಿಸಿದನು. ಆದರೆ ಆ ತಾಳವನವನ್ನು ಧೇನುಕನೆಂಬ ದುಷ್ಟ ದೈತ್ಯನು ಆಧಿಪತ್ಯ ಹೊಂದಿದ್ದು ಗೋವಳರಿಗೆ ಅದು ಅತ್ಯಂತ ದುರ್ಗಮವೆನಿಸಿತ್ತು. ಧೇನುಕಾಸುರನು ಕತ್ತೆಯ ವೇಷ ಧರಿಸಿದ್ದು ಗಣಪತಿಯ ವರದಿಂದಾಗಿ ಚಿರಾಯುವಾಗಿದ್ದ. ಬಲಿಷ್ಠನೂ ಯುದ್ಧಪ್ರಿಯನೂ. ಅಹಂಕಾರಿಯೂ ಆಗಿದ್ದ

ಧೇನುಕನು ಬಲರಾಮನು ತಾಳೆಯ ತೋಪಿನಿಂದ ಹಣ್ಣುಗಳನ್ನು ಉದುರಿಸುತ್ತಿದ್ದದ್ದನ್ನು ಕಂಡು ಅಲ್ಲಿಗೆ ಬಂದನು. ಕಾಡುಕತ್ತೆಯ ವೇಷದಲ್ಲಿದ್ದ ಧೇನುಕನು ಕೋಪದಿಂದ ಕೂದಲನ್ನು ಸೆಟೆದು, ಕಿವಿ ನಿಮಿರಿಸುತ್ತಾ ಕಣ್ಣನ್ನು ಕೆಂಪಗೆ ಮಾಡಿ, ಬಾಲಸುತ್ತಿಸುತ್ತಾ ಖುರಪುಟದಿಂದ ನೆಲವನ್ನು ಅಪ್ಪಳಿಸುತ್ತಾ, ಬಲರಾಮನನ ಎದೆಗೆ ಜೋರಾಗಿ ತನ್ನ ಹಿಂಗಾಲುಗಳಿಂದ ಒದ್ದನು.

**ತಾಲಾನಾಂ ತಮಧೋ ದೃಷ್ಟ್ವಾ ಸ ಧ್ವಜಾಕಾರ ಮವ್ಯಯಮ್ ।**
**ರೌಹಿಣೇಯಂ ಖರೋ ದುಷ್ಟಃ ಸೋ ದಶದ್ ದಶನಾಯುಧಃ ॥ 8 ॥**

ಬಾಯನ್ನು ತೆರೆದುಕೊಂಡು ಬರುತ್ತಿದ್ದ ಧೇನುಕನು ಸರ್ವಪ್ರಾಣಿಭಕ್ಷಕನಾದ ಹಂತಕನಂತೆಯೆ ಕಾಣುತ್ತಿದ್ದನು. ತಾಲವೃಕ್ಷಗಳ ಕೆಳಗಡೆ ನಿಂತಿರುವ ಬಲರಾಮನನ್ನು ನೋಡಿದನು. ತಾಲಚಿಹ್ನೆ ಹೊಂದಿರುವ ತಾಲಾಂಕನನ್ನು ದಂತಗಳನ್ನೆ ಆಯುಧವಾಗಿ ಹೊಂದಿರುವ ಧೇನುಕನು, ತನ್ನ ದಶನಗಳಿಂದ ಕಚ್ಚಿದನು. ಮರುಕ್ಷಣದಲ್ಲಿಯೇ ಧೇನುಕನು ಹಿಂದು ಮುಂದಾಗಿ ತಿರುಗಿ ಹಿಂದಿನಂತೆ ನಿರಾಯುಧನಾಗಿದ್ದ ಬಲರಾಮನನ್ನು ದಶನಾಯುಧ ಧೇನುಕನು ಎರಡೂ ಕಾಲುಗಳನ್ನೆತ್ತಿ ಬಲವಾಗಿ ಎದೆಗೆ ಪ್ರಹರಿಸುವುದರಲ್ಲಿದ್ದನು. ಕೂಡಲೇ ಚತುರನಾದ ಬಲದೇವನು ಆ ಕತ್ತೆಯ ಎರಡೂ ಕಾಲುಗಳನ್ನು ಹಿಡಿದು ಧೇನುಕನನ್ನೆತ್ತಿ ಗರಗರ ಸುತ್ತಲೂ ತಿರುಗಿಸುತ್ತಾ, ತಾಳೆಯ ಮರಕ್ಕೆಸೆದನು. ಇದರಿಂದ ಕಲ್ಲೊಗೆದು ಕೆಡವಿದಂತೆ ಗಿಡದ ಹಣ್ಣುಗಳೆಲ್ಲ ಟಪಟಪನೆ ನೆಲಕ್ಕೆ ಬಿದ್ದವು. ಅವುಗಳೊಂದಿಗೆ ನಡುಮುರಿದ, ತೊಡೆ ಒಡೆದ, ತಲೆ ಸಿಡಿದ, ಬೆನ್ನು ಮೂಳೆ ಪುಡಿಪುಡಿಯಾದ, ಕಿತ್ತಿದ ನಾಲಿಗೆ ವೃತ್ತಾಕ್ಷನಾದ ಧೇನುಕನು ಸತ್ತು ನೆಲಕ್ಕೆ ಬಿದ್ದನು

**ತಂ ಗತಾಸುಂ ಗತಶ್ರೀಕಂ ಪತಿತಂ ವೀಕ್ಷ್ಯ ಗರ್ದಭಮ್ ।**
**ಜ್ಞಾತೀಶ್ ತಥಾಪರಾನ್ ತಸ್ಯ ತೃಣರಾಜನಿ ಸೋಕ್ಷಿಪತ್ ॥ 9 ॥**
**ತಸ್ಮಿನ್ ಗರ್ದಭದೈತ್ಯೇ ತು ಸಾನುಗೇ ವಿನಿಪಾತಿತೇ ।**
**ರಮ್ಯಂ ತಾಲವನಂ ತದ್ಧಿ ಭೂಯೋ ರಮ್ಯ ತರಂ ಬಭೌ ॥ 10 ॥**

ನಂತರ ಸ್ವಲ್ಪಹೊತ್ತಿನಲ್ಲಿ ಧೇನುಕಾಸುರನ ಅನುಯಾಯಿಗಳಾದ ಕತ್ತೆವೇಷಧಾರಿಗಳಾದ ದೈತ್ಯರೆಲ್ಲರೂ ವಿಘ್ನೇಶ ವರದಿಂದಾಗಿ ಅವಧ್ಯ-ರಾಗಿದ್ದರು. ಇವರೆಲ್ಲರೂ ಒಟ್ಟಾಗಿ ರಾಮ-ಕೃಷ್ಣರನ್ನು ಕೊಲ್ಲಬೇಕೆಂದು ಒದ್ದು

ಕೆಡವಬೇಕೆಂದು ಏರಿ ಬಂದವು. ಬಲರಾಮ ಕೃಷ್ಣರಾದರೂ ಆ ಎಲ್ಲಾ ಕತ್ತೆ ಕುಟುಂಬದ ಗರ್ದಭಗಳನ್ನೆಲ್ಲ ಬಾಲಗಳೊಂದಿಗೆ ಕಾಲುಗಳನ್ನು ಹಿಡಿದು ತಿರುಗಿಸಿ ಮರಗಳ ಮೇಲೆಸೆದರು. ಈ ರಾಸಭಗಳೆಲ್ಲವೂ ಗಿಡಗಳಿಗೆ ತಗುಲಿ ಪ್ರಾಣ ಕಳೆದುಕೊಂಡು ಕೆಳಗೆ ಬಿದ್ದವು.

ಹೀಗೆ ಧೇನುಕಾಸುರ ಹತನಾದಾಗ ಮೊದಲೇ ರಮ್ಯವಾಗಿದ್ದ ತಾಲವನವು ಮತ್ತಷ್ಟು ಶೋಭೆಯಿಂದ ಶೋಭಿಸಿತು. ಮುಂದೆ ಯಾರಿಗೂ ಭಯವಿರಲಿಲ್ಲ. ಗೋವು ಗೋಪಾಲಕರೆಲ್ಲರೂ ನಿರಾತಂಕವಾಗಿ ಹುಲ್ಲ, ಹಣ್ಣುಗಳನ್ನು ತಿನ್ನುತ್ತಾ ಸಂಚರಿಸುತ್ತಿದ್ದರು.

ಗಜರಾಜ ಸದೃಶ ಮರಿಯಾನೆಗಳಂತೆ ಪರಾಕ್ರಮದಿಂದ ಕೂಡಿದ ಬಲರಾಮ ಕೃಷ್ಣರು ಮರದೆಲೆಗಳನ್ನು ಹರಡಿಕೊಂಡು ಆಸನವನ್ನಾಗಿ ಮಾಡಿಕೊಂಡು ಕುಳಿತರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಧೇನುಕಾಸುರವಧೆವೆಂಬಲ್ಲಿ
ಹದಿಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ಧೇನುಕನು ಬಲರಾಮನು ತಾಳೆಯ ತೋಪಿನಿಂದ ಹಣ್ಣುಗಳನ್ನು ಉದುರಿಸುತ್ತಿದ್ದದ್ದನ್ನು ಕಂಡು ಅಲ್ಲಿಗೆ ಬಂದನು. ಕಾಡುಕತ್ತೆಯ ವೇಷದಲ್ಲಿದ್ದ ಧೇನುಕನು ಕೋಪದಿಂದ ಕೂದಲನ್ನು ಸೆಟೆದು, ಕಿವಿ ನಿಮಿರಿಸುತ್ತಾ ಕಣ್ಣನ್ನು ಕೆಂಪಗೆ ಮಾಡಿ, ಬಾಲಸುತ್ತಿಸುತ್ತಾ ಖುರಪುಟದಿಂದ ನೆಲವನ್ನು ಅಪ್ಪಳಿಸುತ್ತಾ, ಬಲರಾಮನನ ಎದೆಗೆ ಜೋರಾಗಿ ತನ್ನ ಹಿಂಗಾಲುಗಳಿಂದ ಒದ್ದನು.

**ತಾಲಾನಾಂ ತಮಧೋ ದೃಷ್ಟ್ವಾ ಸ ಧ್ವಜಾಕಾರ ಮವ್ಯಯಮ್ ।**
**ರೌಹಿಣೇಯಂ ಖರೋ ದುಷ್ಟಃ ಸೋ ದಶದ್ ದಶನಾಯುಧಃ ॥ 8 ॥**

ಬಾಯನ್ನು ತೆರೆದುಕೊಂಡು ಬರುತ್ತಿದ್ದ ಧೇನುಕನು ಸರ್ವಪ್ರಾಣಿಭಕ್ಷಕನಾದ ಹಂತಕನಂತೆಯೆ ಕಾಣುತ್ತಿದ್ದನು. ತಾಲವೃಕ್ಷಗಳ ಕೆಳಗಡೆ ನಿಂತಿರುವ ಬಲರಾಮನನ್ನು ನೋಡಿದನು. ತಾಲಚಿಹ್ನೆ ಹೊಂದಿರುವ ತಾಲಾಂಕನನ್ನು ದಂತಗಳನ್ನೆ ಆಯುಧವಾಗಿ ಹೊಂದಿರುವ ಧೇನುಕನು, ತನ್ನ ದಶನಗಳಿಂದ ಕಚ್ಚಿದನು. ಮರುಕ್ಷಣದಲ್ಲಿಯೇ ಧೇನುಕನು ಹಿಂದು ಮುಂದಾಗಿ ತಿರುಗಿ ಹಿಂದಿನಂತೆ ನಿರಾಯುಧನಾಗಿದ್ದ ಬಲರಾಮನನ್ನು ದಶನಾಯುಧ ಧೇನುಕನು ಎರಡೂ ಕಾಲುಗಳನ್ನೆತ್ತಿ ಬಲವಾಗಿ ಎದೆಗೆ ಪ್ರಹರಿಸುವುದರಲ್ಲಿದ್ದನು. ಕೂಡಲೇ ಚತುರನಾದ ಬಲದೇವನು ಆ ಕತ್ತೆಯ ಎರಡೂ ಕಾಲುಗಳನ್ನು ಹಿಡಿದು ಧೇನುಕನನ್ನೆತ್ತಿ ಗರಗರ ಸುತ್ತಲೂ ತಿರುಗಿಸುತ್ತಾ, ತಾಳೆಯ ಮರಕ್ಕೆಸೆದನು. ಇದರಿಂದ ಕಲ್ಲೊಗೆದು ಕೆಡವಿದಂತೆ ಗಿಡದ ಹಣ್ಣುಗಳೆಲ್ಲ ಟಪಟಪನೆ ನೆಲಕ್ಕೆ ಬಿದ್ದವು. ಅವುಗಳೊಂದಿಗೆ ನಡುಮುರಿದ, ತೊಡೆ ಒಡೆದ, ತಲೆ ಸಿಡಿದ, ಬೆನ್ನು ಮೂಳೆ ಪುಡಿಪುಡಿಯಾದ, ಕಿತ್ತಿದ ನಾಲಿಗೆ ವೃತ್ತಾಕ್ಷನಾದ ಧೇನುಕನು ಸತ್ತು ನೆಲಕ್ಕೆ ಬಿದ್ದನು

**ತಂ ಗತಾಸುಂ ಗತಶ್ರೀಕಂ ಪತಿತಂ ವೀಕ್ಷ್ಯ ಗರ್ದಭಮ್ ।**
**ಜ್ಞಾತೀಶ್ ತಥಾಪರಾನ್ ತಸ್ಯ ತೃಣರಾಜನಿ ಸೋಕ್ಷಿಪತ್ ॥ 9 ॥**

**ತಸ್ಮಿನ್ ಗರ್ದಭದೈತ್ಯೇ ತು ಸಾನುಗೇ ವಿನಿಪಾತಿತೇ ।**
**ರಮ್ಯಂ ತಾಲವನಂ ತದ್ಧಿ ಭೂಯೋ ರಮ್ಯ ತರಂ ಬಭೌ ॥ 10 ॥**

ನಂತರ ಸ್ವಲ್ಪಹೊತ್ತಿನಲ್ಲಿ ಧೇನುಕಾಸುರನ ಅನುಯಾಯಿಗಳಾದ ಕತ್ತೆವೇಷಧಾರಿಗಳಾದ ದೈತ್ಯರೆಲ್ಲರೂ ವಿಘ್ನೇಶ ವರದಿಂದಾಗಿ ಅವಧ್ಯ-ರಾಗಿದ್ದರು. ಇವರೆಲ್ಲರೂ ಒಟ್ಟಾಗಿ ರಾಮ-ಕೃಷ್ಣರನ್ನು ಕೊಲ್ಲಬೇಕೆಂದು ಒದ್ದು

ಕೆಡವಬೇಕೆಂದು ಏರಿ ಬಂದವು. ಬಲರಾಮ ಕೃಷ್ಣರಾದರೂ ಆ ಎಲ್ಲಾ ಕತ್ತೆ ಕುಟುಂಬದ ಗರ್ದಭಗಳನ್ನೆಲ್ಲ ಬಾಲಗಳೊಂದಿಗೆ ಕಾಲುಗಳನ್ನು ಹಿಡಿದು ತಿರುಗಿಸಿ ಮರಗಳ ಮೇಲೆಸೆದರು. ಈ ರಾಸಭಗಳೆಲ್ಲವೂ ಗಿಡಗಳಿಗೆ ತಗುಲಿ ಪ್ರಾಣ ಕಳೆದುಕೊಂಡು ಕೆಳಗೆ ಬಿದ್ದವು.

ಹೀಗೆ ಧೇನುಕಾಸುರ ಹತನಾದಾಗ ಮೊದಲೇ ರಮ್ಯವಾಗಿದ್ದ ತಾಲವನವು ಮತ್ತಷ್ಟು ಶೋಭೆಯಿಂದ ಶೋಭಿಸಿತು. ಮುಂದೆ ಯಾರಿಗೂ ಭಯವಿರಲ್ಲಿಲ್ಲ. ಗೋವು ಗೋಪಾಲಕರೆಲ್ಲರೂ ನಿರಾತಂಕವಾಗಿ ಹುಲ್ಲ, ಹಣ್ಣುಗಳನ್ನು ತಿನ್ನುತ್ತಾ ಸಂಚರಿಸುತ್ತಿದ್ದರು.

ಗಜರಾಜ ಸದೃಶ ಮರಿಯಾನೆಗಳಂತೆ ಪರಾಕ್ರಮದಿಂದ ಕೂಡಿದ ಬಲರಾಮ ಕೃಷ್ಣರು ಮರದೆಲೆಗಳನ್ನು ಹರಡಿಕೊಂಡು ಆಸನವನ್ನಾಗಿ ಮಾಡಿಕೊಂಡು ಕುಳಿತರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಧೇನುಕಾಸುರವಧೆವೆಂಬಲ್ಲಿ
ಹದಿಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಚತುರ್ದಶೋಽಧ್ಯಾಯಃ

## ಪ್ರಲಂಬಾಸುರವಧೆ

**ಅಥ ತೌ ಜಾತಹರ್ಷೌ ತು ವಸುದೇವಸುತಾವುಭೌ ।**
**ತತ್ ತಾಲವನಮುತ್ಸೃಜ್ಯ ಭೂಯೋ ಭಾಂಡೀರಮಾಗತೌ ॥ 1 ॥**
**ಕ್ಷ್ವೇಡಯಂತೌ ಪ್ರಗಾಯಂತೌ ಪ್ರಚಿನ್ವಂತೌ ಚ ಪಾದಪಾನ್ ।**
**ನಾಮಭಿಃ ವ್ಯಾಹರಂತೌ ಚ ಸವತ್ಸಾ ಗಾಃ ಪರಂತಪೌ ॥ 2 ॥**

ಜನಮೇಜಯ! ವಸುದೇವ ಕುಮಾರರು ಧೇನುಕಾಸುರನನ್ನು ಸಂಹರಿಸಿ ತಮ್ಮ ವಾಸಸ್ಥಾನವಾದ ಭಾಂಡೀರ ಆಲದ ವೃಕ್ಷಕ್ಕೆ ಬಂದರು.

ಅವರು ಹಸುಗಳನ್ನು ಮೇಯಿಸುತ್ತಾ, ಸಸ್ಯ ಸಮೃದ್ಧ ಅರಣ್ಯವನ್ನು ನೋಡುತ್ತಾ ಕೆಲವು ವೇಳೆ ಪ್ರಾಣಿಗಳಂತೆ ಕೂಗುತ್ತಾ, ಹಾಡು ಹಾಡುತ್ತಾ, ಹಣ್ಣು ಹಂಪಲುಗಳನ್ನು ಸಂಗ್ರಹಿಸುತ್ತಾ, ಕರುಗಳಿಂದ ಕೂಡಿದ್ದ ಗೋವುಗಳ ಹೆಸರನ್ನು ಹಿಡಿದು ಕರೆಯುತ್ತಾ, ಹಗ್ಗಗಳನ್ನು ಹೆಗಲ ಮೇಲೆರಿಸಿ ಸಂಚರಿಸುತ್ತಿದ್ದರು. ಅವರಿಬ್ಬರೂ ಹೊಸದಾಗಿ ಮೂಡಿರುವ ಕೋಡುಗಳುಳ್ಳ ಹೋರಿಗಳಂತೆ ಶೋಭಿಸುತ್ತಿದ್ದರು.

ಬಲರಾಮನ ಕಾಂತಿ ಸುವರ್ಣದ ಚೂರ್ಣದಂತಿದ್ದರೆ ಶ್ರೀಕೃಷ್ಣನು ಇಂದ್ರನೀಲಮಣಿಕಾಂತಿ ಹೊಂದಿದ್ದನು. ಇವನು ಪೀತಾಂಬರ, ಅವನು ನೀಲಾಂಬರ ಧರಿಸಿದ್ದರು. ಹೂವುಗಳನ್ನು ಕರ್ಣಾಭರಣಗಳನ್ನಾಗಿ ಧರಿಸಿದ ರಾಮ ಕೃಷ್ಣರನ್ನು ಅನುಸರಿಸಿ ಅನೇಕ ಗೋಪಾಲಕರು ಹೋಗುತ್ತಿದ್ದರು. ದೇವತಾ ಪೂಜ್ಯರಾದರೂ ಮಾನವ ವೇಷ ಧರಿಸಿ ಮಾನವರಂತೆ

ಆಟಪಾಟಗಳಲ್ಲಿ ಆಸಕ್ತರಾಗಿದ್ದರು. ಹೀಗೆ ಸಂಚರಿಸುತ್ತಾ ವೃಕ್ಷ ಶ್ರೇಷ್ಠವಾದ ಆಲದ ವೃಕ್ಷದ ನೆರಳಿಗೆ ಬಂದರು. ಯುದ್ಧದಲ್ಲಿ ಅಸಾಧಾರಣ ಸಾಮರ್ಥ್ಯ ಹೊಂದಿದ್ದ ಬಾಲಬಲರಾಮ ಕೃಷ್ಣರು ಮುಷ್ಠಿಯುದ್ಧ ಮಾಡಿ ಗುದ್ದಾಡಿದರು. ಮರಕ್ಕೆ ದಾರವನ್ನೆಸೆದು ಹಗ್ಗಕಟ್ಟಿ ತೂಗುಯ್ಯಾಲೆಯಾಡುತ್ತಿದ್ದರು. ಕ್ಷೇಪಣಿಯೆಂಬ ಕಲ್ಲೆಸೆಯುವ ಯಂತ್ರದಿಂದ ಕಲ್ಲುಗಳನ್ನು ಬಹಳ ದೂರ ಎಸೆಯುತ್ತಿದ್ದರು.

## ಪ್ರಲಂಬನ ಆಗಮನ

**ತಯೋ ರಮಯತೋರೇವ ತಲ್ಲಿಪ್ಸುಃ ಅಸುರೊತ್ತಮಃ ।**
**ಪ್ರಲಂಬೋಽಭ್ಯಾಗಮತ್ ತತ್ರ ಛಿದ್ರಾನ್ವೇಷೀ ತಯೋಸ್ತದಾ ॥ 3 ॥**

**ಗೋಪಾಲವೇಷಮಾಸ್ಥಾಯ ವನ್ಯ ಪುಷ್ಪ ವಿಭೂಷಿತಃ ।**
**ಲೋಭಯಾನಃ ಸತೌ ವೀರೌ ಹಾಸ್ಯೈಃ ಕ್ರೀಡನಕೈಃ ತಥಾ ॥ 4 ॥**

**ಮಾನುಷಂ ವೇಷ ಮಾಸ್ಥಾಯ ಪ್ರಲಂಬೋ ದಾನವೋತ್ತಮಃ ।**

ಒಂದು ದಿನ ರಾಮಕೃಷ್ಣರು ತುರುಗಾಹಿ ಬಾಲಕರೊಡನೇ ಲೀಲೆಯಲ್ಲಿ ಮುಳುಗಿರುವಾಗ ಪ್ರಲಂಬನೆಂಬ ಅಸುರನು ಅಲ್ಲಿಗೆ ಬಂದನು. ತನ್ನ ಗುರುತು ಅವರಿಗೆ ಆಗಬಾರದೆಂದು ಗೊಲ್ಲರ ವೇಷಧರಿಸಿದ್ದ. ರಾಮಕೃಷ್ಣರನ್ನು ಕೊಲ್ಲಬೇಕೆಂದು ಅವನ ಹಂಚಿಕೆಯಾಗಿತ್ತು. ಗೋಪಾಲಕರೆಲ್ಲರೂ ದೇವಶತ್ರು ಪ್ರಲಂಬನೊಂದಿಗೆ ಆಟವಾಡುತ್ತಲೆ ಇದ್ದು ಅವರೆಲ್ಲರೂ ಗೋಪವೇಷಧರಿಸಿರುವ ಪ್ರಲಂಬನನ್ನು ತಮ್ಮ ಬಂಧುವೆಂದೆ ತಿಳಿದಿದ್ದರು.

**ಸ ತು ಛಿದ್ರಾಂತರ ಪ್ರೇಪ್ಸುಃ ಪ್ರಲಂಬೋ ಗೋಪತಾಂ ಗತಃ ।**
**ದೃಷ್ಟಿಂ ಪ್ರಣಿದಧೇ ಕೃಷ್ಣೇ ರೌಹಿಣೇಯೇ ಚ ದಾರುಣಮ್ ॥ 5 ॥**

**ಅವಿಷಹ್ಯಂ ತತೋ ಮತ್ವಾ ಕೃಷ್ಣಮದ್ಭುತ ವಿಕ್ರಮಮ್ ।**
**ರೌಹಿಣೇಯವಧೇ ಯತ್ನಮಕರೋದ್ ದಾನವೋತ್ತಮಃ ॥ 6 ॥**

ಗೋಪಾಲ ವೇಷಧರಿಸಿದ ಇವನು ರಾಮಕೃಷ್ಣರ ಮೇಲೆ ಕಣ್ಣಿಟ್ಟಿದ್ದನು. ಹಿಂದೆ ನಡೆದ ದೈತ್ಯವಧದಿಂದಾಗಿ ಶ್ರೀಕೃಷ್ಣನು ತನಗೆ ಅಸಾಧ್ಯನೆಂದರಿತು ಬಲದೇವನನ್ನು ಕೊಲ್ಲಲು ಯತ್ನ ಮಾಡುತ್ತಿದ್ದನು.

**ಹರಿಣಾಕ್ರೀಡನಂ ನಾಮ ಬಾಲಕ್ರೀಡನಕಂ ತತಃ ।**
**ಪ್ರಕ್ರೀಡಿತಾಸ್ತು ತೇ ಸರ್ವೇ ದ್ವೌ ದ್ವೌ ಯುಗಪದುತ್ಪತನ್ ॥ 7 ॥**

**ಕೃಷ್ಣಃ ಶ್ರೀದಾಮಸಹಿತಃ ಪುಪ್ಲುವೇ ಗೋಪಸೂನುನಾ ।**
**ಸಂಕರ್ಷಣಸ್ತು ಪ್ಲುತವಾನ್ ಪ್ರಲಂಬೇನ ಸಹಾನಘ ॥ 8 ॥**

ಗೋಪಾಲಕರೆಲ್ಲರೂ 'ಹರಿಣಾಕ್ರೀಡನಕ' ಎಂಬ ಜಿಂಕೆಯಂತೆ ಹಾರುವ ಆಟವನ್ನು ಪ್ರಾರಂಭಿಸಿದರು. ಈ ಜಿಂಕೆಯಂತೆ ಹಾರುವ ಆಟದಲ್ಲಿ ಇಬ್ಬಿಬ್ಬರು ಬಾಲಕರು ಜೋಡಿಯಾಗಿ ಜಿಂಕೆಯಂತೆ ಜಿಗಿಯುತ್ತಾ ಕುಪ್ಪಳಿಸುತ್ತಾ ನಿರ್ದಿಷ್ಟ ಸ್ಥಳವಾದ ಭಾಂಡೀರವೃಕ್ಷವನ್ನು ಮುಟ್ಟಿಬರಬೇಕು. ನಿರ್ದಿಷ್ಟ ಗುರಿಯನ್ನು ಮೊದಲು ಮುಟ್ಟಿದವರು ಗೆದ್ದು, ಸೋತವರು ಗೆದ್ದವರನ್ನು ತನ್ನ ಭುಜದ ಮೇಲೆ ಹೊತ್ತುಕೊಂಡು ತಾವು ಹೊರಟ ಸ್ಥಳಕ್ಕೆ ಓಡಬೇಕು. ಇದೇ ಹರಿಣಾಕ್ರೀಡ. ಈ ಆಟದಲ್ಲಿ ಗೋಪಾಲ ಬಾಲಕರು ದ್ವಂದ್ವ ದ್ವಂದ್ವವಾಗಿ ಜಿಗಿಯುತ್ತಾ ಓಡತೊಡಗಿದರು. ಶ್ರೀದಾಮನೆಂಬ ಗೊಲ್ಲನು ಶ್ರೀಕೃಷ್ಣನೊಂದಿಗೂ, ಬಲರಾಮನೊಂದಿಗೆ ಗೋಪವೇಷದಲ್ಲಿದ್ದ ಪ್ರಲಂಬಾಸುರನೂ ಜಿಗಿಯುತ್ತಾ ಹೊರಟರು.

**ಶ್ರೀದಾಮಮಜಯತ್ ಕೃಷ್ಣಃ ಪ್ರಲಂಬಂ ರೋಹಿಣೀಸುತಃ ।**
**ಗೋಪಾಲೈಃ ಕೃಷ್ಣಪಕ್ಷೀಯೈಃ ಗೋಪಾಲಾಃ ತ್ವಪರೇ ಜಿತಾಃ ॥ 9 ॥**
**ಭಾಂಡೀರ ಸ್ಕಂಧಮುದ್ದಿಶ್ಯ ಮರ್ಯಾದಾಂ ಪುನರಾಗಮನ್ ॥ 10 ॥**

ಈ ಕ್ರೀಡೆಯಲ್ಲಿ ಶ್ರೀಕೃಷ್ಣನು ಶ್ರೀದಾಮನನ್ನು, ಬಲರಾಮನು ಪ್ರಲಂಬನನ್ನು ಸೋಲಿಸಿಗೆದ್ದರು. ಇದರಂತೆ ಉಳಿದ ಕೃಷ್ಣನ ಪಕ್ಷದವರು ಬಲರಾಮನ ಪಕ್ಷದವರನ್ನು ಸೋಲಿಸಿದರು. ಸೋತವರೆಲ್ಲರೂ ಗೆದ್ದವರನ್ನು ಹೆಗಲ ಮೇಲೆ ಹೊತ್ತು, ಭಾಂಡೀರ ತಲುಪಿ, ವಿಜಯಶಾಲಿಗಳನ್ನು ಹೊತ್ತು ತಾವಿದ್ದ ಸ್ಥಳಕ್ಕೆ ಬಂದರು. ಶ್ರೀಕೃಷ್ಣನನ್ನು ಸೋತ ಶ್ರೀದಾಮನು ಹೊತ್ತು ನಡೆದನು.

**ಸಂಕರ್ಷಣಂ ತು ಸ್ಕಂಧೇನ ಶೀಘ್ರ ಮುತ್ಕ್ಷಿಪ್ಯ ದಾನವಃ ।**
**ದ್ರುತಂ ಜಗಾಮ ವಿಮುಖಃ ಸಚಂದ್ರ ಇವ ತೋಯದಃ ॥ 11 ॥**

**ಸ ಭಾರಮಸಹಂಸ್ತಸ್ಯ ರೌಹಿಣೇಯಸ್ಯ ಧೀಮತಃ ।**
**ವವೃಧೇ ಸುಮಹಾಕಾಯಃ ಶಕ್ರಾಕ್ರಾಂತ ಇವಾಂಬುದಃ ॥ 12 ॥**

ಪ್ರಲಂಬಾಸುರನ ಹೆಗಲ ಮೇಲೆ ಬಲರಾಮನು ಹತ್ತಿದ್ದ. ಅವರಿಬ್ಬರೂ ರಾಮಕೃಷ್ಣರನ್ನು ಹೊತ್ತು ಭಾಂಡೀಕ ಮರವನ್ನು ಮುಟ್ಟಿದರು. **ಶ್ರೀದಾಮನು**[1] ಶ್ರೀಕೃಷ್ಣನನ್ನು ಹೊತ್ತು ಹೊರಟ ಸ್ಥಳಕ್ಕೆ ಮರಳಿ ಬಂದ. ಆದರೆ ಬಲರಾಮನನ್ನು ಹೊತ್ತ ಪ್ರಲಂಬಾಸುರನು ಮಾತ್ರ ಪೂರ್ವ ಸ್ಥಳಕ್ಕೆ ಬಾರದೆ ಒಮ್ಮೆಲೆ ಆಕಾಶಕ್ಕೆ ಹಾರಿದ. ಕಪ್ಪಾದ ದೇಹವುಳ್ಳ ಪ್ರಲಂಬನು ಬಿಳಿಯಾದ ಬಲರಾಮನನ್ನು ಹೊತ್ತಿದ್ದರೆ ಮೇಘದಲ್ಲಿದ್ದ ಚಂದ್ರನಂತಿತ್ತು. ಬಲರಾಮನ ಭಾರವನ್ನು ತಡೆಯಲಾಗದೆ ರಾಕ್ಷಸನು ಗೋಪವೇಷ ತ್ಯಜಿಸಿ, ಕರಾಳವಿಕರಾಳವಾದ ದೈತ್ಯ ದೇಹವನ್ನು ಧರಿಸಿ ಭೂಮ್ಯಾಕಾಶ ಬೆಳೆದ. ಕಾಡಿನ ದಾವಾಗ್ನಿಯಿಂದ ಸುಟ್ಟು ಕರಕಾದ ಬೆಟ್ಟದ ತುದಿಯಲ್ಲಿ ತಾನಿರುವನಂತೆ ತೋರಿತು. ಚೆಂಡುಮಲ್ಲಿಗೆ ಹೂವಿನ ಹಾರ ಧರಿಸಿ ಚಂಡನಾಗಿದ್ದ ಶಿಖರದಂತಹ ಕಿರೀಟ, ಚಕ್ರದಂತೆ ತಿರುಗುವ ಕಣ್ಣುಗಳು ಕಾಲಿಟ್ಟರೆ ಭೂಮಿ ಕಂಪಿಸುತ್ತಿತ್ತು. ಇಂತಹ ರಕ್ಕಸನಿಂದ ಎತ್ತಲ್ಪಟ್ಟ ಬಲರಾಮನು ಗಗನದಿಂದಲೇ ಹೀಗೆಂದನು.

**ಹ್ರಿಯೇಹಂ ಕೃಷ್ಣ ದೈತ್ಯೇನ ಪರ್ವತೋದಗ್ರ ವರ್ಷ್ಮಣಾ ।**
**ಪ್ರದರ್ಶಯಿತ್ವಾ ಮಹತೀಂ ಮಾಯಾಂ ಮಾನುಷ ರೂಪಿಣೀಮ್ ॥ 13 ॥**

**ಕಥಮಸ್ಯ ಮಯಾ ಕಾರ್ಯಂ ಶಾಸನಂ ದುಷ್ಟಚೇತಸಃ ।**
**ಪ್ರಲಂಬಸ್ಯ ಪ್ರವೃದ್ಧಸ್ಯ ದರ್ಪಾದ್ ದ್ವಿಗುಣ ವರ್ಚಸಃ ॥ 14 ॥**

ದೈತ್ಯನ ಧಾವನ ರಭಸಕ್ಕೆ ಸಾವು ಬದುಕುಗಳ ತೂಗುಯ್ಯಾಲೆಯಲ್ಲಿ ತಾನು

---

1. ಶ್ರೀದಾಮಾನಂ ಪರಾಜಿತಃ –
ಭಾಗವತದಲ್ಲಿ ಶ್ರೀಕೃಷ್ಣನು ಸೋತು ಶ್ರೀದಾಮನನ್ನು ಹೊತ್ತುಕೊಂಡನೆಂದಿದೆ. ಶ್ರೀಹರಿಗೆ ಪರಾಜಯವೆಂಬುದು ಸರ್ವಥಾ ಇರುವುದಿಲ್ಲವಷ್ಟೆ.
**"ಉವಾಹ ಕೃಷ್ಣೋ ಭಗವಾನ್ ಶ್ರೀದಾಮಾನಂ ಪರಾಜಿತಃ ।** – *10/16/23.*
**ಉವಾಹ ಕೃಷ್ಣಂ ಶ್ರೀದಾಮಾ ಭಗವಂತಂ ಪರಾಜಿತಃ**
ಶ್ರೀಕೃಷ್ಣ ಸೋತನೆಂದರೆ ಬಹು ಪ್ರಮಾಣ ವಿರೋಧವೆಂದು ಆಚಾರ್ಯರು ಹೇಳುತ್ತಾರೆ. ಹರಿವಂಶದಲ್ಲಿ ಶ್ರೀದಾಮಮಜಯತ್ ಕೃಷ್ಣಃ ಎಂದಿದೆ. ಇದೇ ರೀತಿ ಬ್ರಾಹ್ಮಪುರಾಣದಲ್ಲಿ **'ಶ್ರೀದಾಮಾನಂ ತತಃ ಕೃಷ್ಣಃ ಪ್ರಲಂಬಂರೋಹಿಣೀಸುತಃ ಜಿತವಾನ್'** *–ಬ್ರಾಹ್ಮ – 187/3*
ಇದನ್ನೆ ಭಾ.ತಾತ್ಪರ್ಯದಲ್ಲಿ
**ಶ್ರೀದಾಮಾ ಕೃಷ್ಣಮುವಾಹ – ಹರಿವಂಶಾದಿವಚನಾತ್ ।**

ಬದುಕುವುದು ಕಷ್ಟವೆಂದು ಭಾವಿಸಿದ ಬಲದೇವನು ಕೃಷ್ಣ! ಪರ್ವತಾಕಾರದ ದೈತ್ಯನು ನನ್ನನ್ನು ಬಲಾತ್ಕಾರವಾಗಿ ಸೆಳೆದೊಯ್ಯುತ್ತಿದ್ದಾನೆ. ಇವನನ್ನು ನಾಶ ಮಾಡುವ ಪರಿ ಹೇಗೆ? ಗೋಪಾಲಕರೆಲ್ಲರಿಗೂ ಬಲದೇವನಿಗೆ ಪ್ರಾಣಸಂಕಟ ಬಂದೀತೆಂದೆ ತಿಳಿದರು. ಕೃಷ್ಣನಿಗೆ ಇದೇನು ಅಚ್ಚರಿಯೇನೂ ಆಗಲ್ಲಿಲ್ಲ. ಭಯವೂ ಆಗಲ್ಲಿಲ್ಲ. ಅಣ್ಣನೇ ಇಷ್ಟೇಕೆ ಭಯಪಡುವೆ? ಹೀಗೇಕೆ ಮಾನವರಂತೆ ನಟಿಸುತ್ತಿರುವೆ. ಮನುಷ್ಯನಾಗಿ ಅವತರಿಸಿದ ಮಾತ್ರಕ್ಕೆ ಮನುಷ್ಯನೆ ಆಗಿ ಹೋದೆಯಾ? ನೀನು ಯಾರು? ನಿನ್ನ ಸ್ವರೂಪವೇನು? ನಿನ್ನಲ್ಲಿರುವ ನನ್ನ ಶುಕ್ಲ ಕೇಶಾವೇಶವನ್ನೆಲ್ಲ ಸ್ಮರಿಸಿಕೋ.

**ಸ್ಮರ ನಾರಾಯಣಾತ್ಮಾನಂ ಲೋಕಾನಾಂ ತ್ವಂ ವಿಪರ್ಯಯೇ ।**
**ಅವಗಚ್ಛಾತ್ಮನಾತ್ಮಾನಂ ಸಮುದ್ರಾಣಾಂ ಸಮಾಗಮೇ ॥ 15 ॥**
**ಶಿರಃ ಖಂ ತೇ ಜಲಂ ಮೂರ್ತಿಃ ಪಾದೌ ಭೂಃ ದಹನೋ ಮುಖಮ್ ।**
**ವಾಯುರ್ಲೋಕಾಯುಃ ಉಚ್ಛ್ವಾಸೋ ಮನಃ ಸೋಮೋ ಹ್ಯಭೂತ್ ತವ॥**
**ಸಹಸ್ರಾಕ್ಷಃ ಸಹಸ್ರಾಂಗಃ ಸಹಸ್ರಚರಣೇಕ್ಷಣಃ ।**
**ಸಹಸ್ರ ಪದ್ಮಾನಾಭಸ್ತ್ವಂ ಸಹಸ್ರಾಂಶುಧರೋಽರಿಹಾ ॥ 16 ॥**

ಶುಕ್ಲಕೇಶಾತ್ಮಕ ನಾರಾಯಣನು ನಿನ್ನಲ್ಲಿರುವನು. ಪ್ರಲಯಕಾಲ ಬಂದಾಗ ನಿನ್ನಲ್ಲಿರುವ ಸಂಕರ್ಷಣನು ಸಮಸ್ತ ಲೋಕ ಸಂಹಾರವನ್ನು ಮಾಡುವನು. ಅಂತಹ ನಿನ್ನಲ್ಲಿರುವ ನನ್ನ ರೂಪವನ್ನೆ ಸ್ಮರಿಸಿಕೋ. ಪ್ರಲಯದಲ್ಲಿ ಸಮುದ್ರಗಳೆಲ್ಲ ಏಕಾಕಾರ ಹೊಂದಿದಾಗ ಆ ನಿನ್ನ ಈ ರೂಪವೆ ಶೇಷಶಾಯಿಯಾಗಿ ಮಲಗಿರುತ್ತದೆ. ಪುರುಷಸೂಕ್ತ ಹೇಳಿದಂತೆ ಶ್ರೀಹರಿಯ ತಲೆಯಿಂದ ಆಕಾಶವು ಜನಿಸಿ ಆಶ್ರಯ ಪಡೆದಿದೆ. ನಿನ್ನಿಂದಲೇ ಜಲಜಲಾಭಿಮಾನಿಗಳು ಹುಟ್ಟುವರು. ಭೂಮಿಯು ಪಾದದಿಂದ ಹುಟ್ಟಿದೆ. ನಿನ್ನ ಮುಖದಿಂದ ಅಗ್ನಿ ಹುಟ್ಟುವನು. ಲೋಕದ ಆಯುಸ್ಸೆನಿಸಿದ ವಾಯುವು ನಿನ್ನ ನಿಟ್ಟುಸಿರು. ನಿನ್ನ ಮನಸ್ಸಿನಿಂದ ಚಂದ್ರನ ಜನ್ಮವು.

ಅನಂತಾನಂತ ಮುಖಗಳನ್ನು ಹೊಂದಿರುವ ನಿನ್ನಂತರ್ಯಾಮಿಯು. ಅನಂತಾನಂತ ಕಾಲುಗಳು, ಅನಂತಾನಂತ ನೇತ್ರಗಳು, ಕಮಲನಾಭನೆ ಕೋಟಿ ಸೂರ್ಯಸಮಪ್ರಭೆವುಳ್ಳ ಚಕ್ರವು ನಿನ್ನ ಆಯುಧವು. ಯಾವುದನ್ನು ಉಪದೇಶ ಮಾಡಿಲ್ಲವೋ ಅದನ್ನು ಚಿಂತಿಸಲು ಅಸಾಧ್ಯವು.

ನಿನ್ನಂತರ್ಯಾಮಿಯ ಅಂತವನ್ನು ದೇವತೆಗಳೂ ನೋಡಿಲ್ಲ ಕಾರಣವೆ ನೀನು ದೇಶತಃ ಕಾಲತಃ ಗುಣತಃ ಅಪರಿಚ್ಛಿನ್ನನು-

ಕೃಷ್ಣಕೇಶನಾದ ನಾನು, ಶುಕಕೇಶಾವಿಷ್ಟನಾದ ನೀನು ಶೇಷನಾಗಿರುವೆ. ಲೋಕಗಳೆಲ್ಲ ನಾಶವಾದಾಗ ಉಳಿಯುವುದು ಭಗವಂತನೊಬ್ಬನೆ ಅವನೇ ಶೇಷರೂಪನು. ನಮ್ಮಿಬ್ಬರಲ್ಲಿ ದೇಹಭೇದ ಕಂಡರೂ ನಾನು ನಿನ್ನಂತರ್ಯಾಮಿಯು ಒಂದೇ ವ್ಯತ್ಯಾಸವಿರುವುದಿಲ್ಲ.

ಆದ್ದರಿಂದ ಮೂಢ ದೈತ್ಯನನ್ನು ಮುಷ್ಟಿಯಿಂದ ಬಡಿದು ಕೊಂದು ಹಾಕು ಎಂದು ಹುರಿದುಂಬಿಸಿದನು.

**ಸಂಸ್ಮಾರಿತಸ್ತು ಕೃಷ್ಣೇನ ರೌಹಿಣೇಯಃ ಪುರಾತನಮ್ ।**
**ಬಲೇನಾಪೂರ್ಯತ ತದಾ ತ್ರೈಲೋಕ್ಯಾಂತರಚಾರಿಣಾ ॥ 17 ॥**

**ತತಃ ಪ್ರಲಂಬಂ ದುರ್ವೃತ್ತಂ ಸ ಬದ್ಧೇನ ಮಹಾಭುಜಃ ।**
**ಮುಷ್ಟಿನಾ ವಜ್ರಕಲ್ಪೇನ ಮೂರ್ಧ್ನಿ ಚೈನಂ ಸಮಾಹನತ್ ॥ 18 ॥**

ಶ್ರೀಕೃಷ್ಣನ ಮಾತಿನಿಂದ ಶುಕ್ಲಕೇಶಾವೇಶವನ್ನು ಸ್ಮರಿಸಿದ ಕೂಡಲೇ ಮೈತುಂಬಾ ಬಲಬಂದಂತಾಯಿತು. ಬಲದೇವನು ತನ್ನ ವೀರ್ಯವತ್ತರವಾದ ಮುಷ್ಟಿಯನ್ನು ಬಿಗಿದು ನಡುನೆತ್ತಿಯ ಮೇಲೆ ಬಲವಾಗಿ ಗುದ್ದಿದನು. ಅದರಿಂದ ಅವನ ಶಿರಃಪಿಂಡ ಕಬಂಧದಲ್ಲಿ ಸೇರಿ ಅನಾರುಂಡವಾಯಿತು. ಕಬಂಧ ಶರೀರವನ್ನು ಕಾಲಿನಿಂದ ಜೋರಾಗಿ ಒದೆಯಲು ಗತಪ್ರಾಣನಾದ ಪ್ರಲಂಬ. ಅವನ ತಲೆ ಸೀಳಿರಕ್ತದ ಕೋಡಿ ಹರಿದು ಬಂತು. ಹೀಗೆ ಹಲಾಯುಧನು ತನಗೆ ಸಮಯೋಚಿತ ಸೂಚನೆ ನೀಡಿದ ಕೃಷ್ಣನನ್ನು ಆಲಿಂಗಿಸಿದನು. ದೇವತೆಗಳು ಹೂಮಳೆಗರೆದರು. ಅದ್ಭುತ ಬಲವನ್ನು ಹೊಗಳಿದರು. ಅಂದಿನಿಂದ ಬಲದೇವ, ಬಲರಾಮನೆಂದು ಪ್ರಖ್ಯಾತಿ ಪಡೆದ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಪ್ರಲಂಬಾಸುರ ವಧೆವೆಂಬಲ್ಲಿ
ಹದಿನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 15 ವಿಷ್ಣುಪರ್ವ

# ಅಥ ಪಂಚದಶೋಽಧ್ಯಾಯಃ

## ಇಂದ್ರದೇವನ ಯಜ್ಞಭಂಗ

*ವೈಶಂಪಾಯನ ಉವಾಚ-*

**ತಯೋಃ ಪ್ರವೃತ್ತಯೋರೇವಂ ಕೃಷ್ಣಸ್ಯ ಚ ಬಲಸ್ಯ ಚ ।**
**ವನೇ ವಿಚರತೋಃ ಮಾಸೌ ವ್ಯತಿಯಾತೌ ಸ್ಮ ವಾರ್ಷಿಕೌ ॥ 1 ॥**

**ವ್ರಜಮಾಜಗ್ಮತುಃ ತೌ ತು ವ್ರಜೇ ಶುಶ್ರುವುತುಸ್ತದಾ ।**
**ಪ್ರಾಪ್ತಂ ಶಕ್ರಮಹಂ ವೀರೌ ಗೋಪಾಂಶ್ಚೋತ್ಸವಲಾಲಸಾನ್ ॥ 2 ॥**

ರಾಜನೇ! ಹೀಗೆ ರಾಮಕೃಷ್ಣರು ಬಹುಬಾಲ ಲೀಲೆಗಳಲ್ಲಿ ತೊಡಗಿ ವನಗಳಲ್ಲಿ ಸಂಚರಿಸುತ್ತಾ ಕಾಲಕಳೆಯುತ್ತಿರುವಾಗಲೇ ಆ ವರ್ಷದಲ್ಲಿ ಎರಡು ತಿಂಗಳು ಕಳೆದವು. ಒಮ್ಮೆ ಅವರಿಬ್ಬರೂ ನಂದಾದಿಗಳಿರುವ ವ್ರಜಕ್ಕೆ ಬಂದರು. ಇಂದ್ರನ ವಾರ್ಷಿಕೋತ್ಸವ ಪ್ರಾಪ್ತವಾದದ್ದನ್ನು, ಗೋಪಾಲಕರೆಲ್ಲರೂ **ಇಂದ್ರೋತ್ಸವಾಚರಿಸಲು**[1] ಉತ್ಸುಕತೆಯಿಂದ ಇರುವರೆಂದು ತಿಳಿದುಕೊಂಡರು. ಶ್ರೀಕೃಷ್ಣನು ಕುತೂಹಲದಿಂದ ಹೀಗೆ ಹೇಳಿದನು.

---

1. ಇಂದ್ರೋತ್ಸವ :
ಇಂದ್ರದೇವನಿಗೆ ಅಸುರಾವೇಶನಿಮಿತ್ತ ಶ್ರೀಕೃಷ್ಣನನ್ನು ಮಾನುಷನೆಂದು ತಿಳಿದಿದ್ದನು ಇದನ್ನು ಹೋಗಲಾಡಿಸಿ ಅಮಾನುಷನೆಂದು ತಿಳಿಯಲೆಂದೆ ಯಜ್ಞಭಂಗೋದ್ದೇಶ.
**ಮಾ ಮಾನುಷೋಯಮಿತಿ ಮಾಮವಗಚ್ಛತಾಂ ಇತ್ಯವ್ಯಯೋಸ್ಯ ವಿದಧೇ ಮಹಭಂಗಮೀಶಃ ।** –*ತಾ.ನಿ. 13/62*

**ಕೋಽಯಂ ಶಕ್ರಮಹೋ ನಾಮ ಯೇನ ವೋ ಹರ್ಷ ಆಗತಃ ।**
**ತತ್ರ ವೃದ್ಧತಮಸ್ತ್ವೇಕೋ ಗೋಪೋ ವಾಕ್ಯಮುವಾಚ ಹ ॥ 3 ॥**
**ಶ್ರೂಯತಾಂ ತಾತ! ಶಕ್ರಸ್ಯ ಯದರ್ಥಂ ಧ್ವಜ ಇಷ್ಯತೇ ।**
**ದೇವಾನಾಮೀಶ್ವರಃ ಶಕ್ರೋ ಮೇಘಾನಾಂ ಚಾರಿಸೂದನ ॥ 4 ॥**
**ತಸ್ಯ ಚಾಯಂ ಮಹಃ ಕೃಷ್ಣ! ಲೋಕನಾಥಸ್ಯ ಶಾಶ್ವತಃ ॥ 5 ॥**

ಗೋಪಾಲಕರೇ! ನಿಮಗೆಲ್ಲ ಇಷ್ಟೊಂದು ಸಂತೋಷವುಂಟು ಮಾಡಿರುವ ಆ ಇಂದ್ರೋತ್ಸವವೆಂಬುದು ಯಾವುದು? ಎಂದನು.

ಗೋಪಾಲಕರಲ್ಲಿ ಹಿರಿಯನೊಬ್ಬನು ಶ್ರೀಕೃಷ್ಣನೇ, ಶಕ್ರನ ಧ್ವಜಕ್ಕೆ ಏಕೆ ನಾವೆಲ್ಲರೂ ಪೂಜೆ ಮಾಡಬೇಕೆಂಬುದನ್ನು ಕೇಳು.

ಶತ್ರುಗಳನ್ನು ಸಂಹಾರ ಮಾಡಲು ಸಮರ್ಥನೇ ಕೇಳು – ನಾವು ಬಹುಕಾಲದಿಂದಲೂ ಇಂದ್ರಧ್ವಜೋತ್ಸವವನ್ನು ಆಚರಿಸುತ್ತಾ ಬಂದಿರುವೆವು.

ಇದರ ಉದ್ಧೇಶವೆಂದರೆ ಇಂದ್ರದೇವನು ದೇವತೆಗಳಿಗೆಲ್ಲ ಅಧಿನಾಯಕನು. ತ್ರಿಲೋಕಾಧಿಪತಿ, ನಮ್ಮೆಲ್ಲರಿಗೂ ಅವನೇ ಒಡೆಯ ಹಾಗೂ ಮೇಘಗಳಿಗೆಲ್ಲಾ ನೀರನ್ನು ಪೂರೈಸುವವನು ಅವನೇ. ಅವನು ಅಪ್ಪಣೆ ಮಾಡಿದರೆ ಮಾತ್ರ ಮೇಘಗಳು ಮಳೆಗರೆಯುತ್ತವೆ. ಕಾಮನಬಿಲ್ಲನಿಂದ ಆಕಾಶ ರಂಗುರಂಗಾಗುತ್ತದೆ. ಈ ಮಳೆಯಿಂದ ಬೆಳೆದ ಸಸ್ಯಗಳನ್ನು ನಾವೆಲ್ಲರೂ ತಿಂದು ಬದುಕುವೆವು. ಮಳೆಯಿಂದಾಗಿ ಸವಿಯಾದ ನೀರುಗಳಿಂದ ಜಲಾಶಯಗಳು ತುಂಬಿ ಜಗತ್ತೇ ಅಮೃತಮಯವಾದಂತೆ ತೋರುತ್ತದೆ. ಎಲ್ಲಿ ನೋಡಿದರಲ್ಲಿ ಹಚ್ಚ ಹಸಿರು ಪೈರು ಬೆಳೆದು ನಿಲ್ಲುತ್ತದೆ. ಗೋವುಗಳೆಲ್ಲ ಈ ಎಳೆ ಹಸಿಹುಲ್ಲು ತಿಂದು ತುಷ್ಟವಾಗಿ ಪುಷ್ಟವಾಗಿ ಯಥೇಚ್ಛ ಹಾಲು ನೀಡುವುವು. ಕಾಳು ಕಡ್ಡಿಗಳೂ ಸಮೃದ್ಧವಾಗಿ ಬೆಳೆಯುತ್ತವೆ.

**ನಾಸಸ್ಯಾ ನಾತೃಣಾ ಭೂಮಿಃ ನ ಬಭುಕ್ಷಾರ್ದಿತೋ ಜನಃ ।**
**ದೃಶ್ಯತೇ ಯತ್ರ ದೃಶ್ಯಂತೇ ವೃಷ್ಟಿಮಂತೋ ಬಲಾಹಕಾಃ ॥ 6 ॥**
**ದುದೋಹ ಸವಿತುರ್ಗಾಃ ವೈ ಶಕ್ರೋ ದಿವ್ಯಾಃ ಪಯಸ್ವಿನೀಃ ।**
**ತಾಃಕ್ಷರಂತಿ ನವಂ ಕ್ಷೀರಂ ಮೇಧ್ಯಂ ಮೇಬಘೌಘಧಾರಿತಮ್ ॥ 7 ॥**

ಮಳೆಸುರಿಸುವ ಮೇಘಗಳು ಇದ್ದಲ್ಲಿ ಭೂಮಿಯಲ್ಲಿ ಧಾನ್ಯಗಳ ಅಭಾವವಿರಲಾರದು. ನವತೃಣಗಳ ಕೊರತೆ ಕಾಣದು. ಜನರು ಹಸಿವೆಯಿಂದ ಬಾಧಿತರಾಗುವುದಿಲ್ಲ. ತಿನ್ನಲ್ಲಿಕ್ಕೆ ಯಥೇಷ್ಟ ಅನ್ನವಿದ್ದಲ್ಲಿ ಅನ್ಯಾಯವಿಲ್ಲ ಅತ್ಯಾಚಾರವಿರುವುದಿಲ್ಲ. ಸೂರ್ಯದೇವನು ತನ್ನ ಕಿರಣಗಳಿಂದ ನೀರನ್ನು ಹೀರಿ ಮೇಘದಲ್ಲಿ ತುಂಬುವನು. ಅದನ್ನು ಇಂದ್ರನೇ ಅಮೃತದಂತಹ ನೀರನ್ನು ಕ್ಷೀರಧಾರೆಯಂತೆ ಸುರಿಸುವನು. ಗಾಳಿಯಿಂದ ಪ್ರೇರಿಸಲ್ಪಟ್ಟ ಮೇಘಗಳು ವೇಗವಾಗಿ ತಿರುಗುತ್ತಾ ಮಹಾನ್ ಶಬ್ಧವನ್ನುಂಟು ಮಾಡುತ್ತವೆ. ಇದನ್ನೆ ಮೇಘಗರ್ಜನೆ ಎನ್ನುವರು. ಗಾಳಿಯಿಂದ ಕೂಡಿರುವ ಮೇಘಗಳಿಂದಲೇ ಪರ್ವತವನ್ನು ಭೇದಿಸಬಹುದಾದ ವಜ್ರಾಯುಧ ಹಾಗೂ ಸಿಡಿಲುಗಳು ಹೊಡೆಯುತ್ತವೆ.

**ತಜ್ಜಲಂ ವಜ್ರ ನಿಷ್ಪೇಷೈಃ ವಿಮುಂಚತಿ ನಭೋಗತೈಃ ।**
**ಬಹುಭಿಃ ಕಾಮಗೈಃ ಮೇಘೈಃ ಶಕ್ರೋ ಭೃತ್ಯೈರಿವೇಶ್ವರಃ ॥ 8 ॥**

ಯಜಮಾನನು ಸೇವಕರಿಂದ ಕೆಲಸ ಮಾಡಿಸುವಂತೆ ಇಂದ್ರನು ಆಕಾಶದಲ್ಲಿ ವ್ಯಾಪಿಸಿರುವ ಮೇಘಗಳು ಮೇಘಘರ್ಜನೆಯೊಂದಿಗೆ ಮಳೆಗರೆಯುವಂತೆ ಮಾಡುವನು. ಮೇಘಗಳಾದರು ಕೆಲವು ಕಡೆ ದರ್ದಿನದಂತೆ ಆಕಾಶದಲ್ಲಿ ತುಂಬಿರುತ್ತದೆ. ಕೆಲವು ಕಡೆ ಭಿನ್ನ ಭಿನ್ನವಾಗಿರುವಂತೆಯೂ, ಕೆಲವೆಡೆ ತುಂಡು ತುಂಡಾದ ಕಜ್ಜಲದ ರಾಶಿಯಂತೆಯೋ, ಕೆಲವೆಡೆ ತುಂತುರು ಮಳೆಯನ್ನು ಸುರಿಸುತ್ತವೆ. ಹೀಗೆ ಇಂದ್ರದೇವನು ಜಗತ್ತು ಹಾಗೂ ಆಕಾಶವನ್ನು ನೀರಿನಿಂದ ಒಂದುಗೂಡಿಸುವನು.

**ಏವಮೇತತ್ ಪಯೋ ದುಗ್ಧಂ ಗೋಭಿಃ ಸೂರ್ಯಸ್ಯ ವಾರಿದೈಃ ।**
**ಪರ್ಜನ್ಯಃ ಸರ್ವಭೂತಾನಾಂ ಭವಾಯ ಭುವಿ ವರ್ಷತಿ ॥ 9 ॥**
**ಯಸ್ಮಾತ್ ಪ್ರಾವೃಡಿಯಂ ಕೃಷ್ಣ ಶಕ್ರಸ್ಯ ಭುವಿ ಭಾವಿನೀ ।**
**ತಸ್ಮಾತ್ ಪ್ರಾವೃಷಿ ರಾಜಾನಃ ಸರ್ವೇ ಶಕ್ರಂ ಮುದಾಯುತಾಃ ॥ 10 ॥**
**ಮಹೈಃ ಸುರೇಶಮರ್ಚಂತಿ ವಯಮನ್ಯೇ ಚ ಮಾನವಾಃ ॥ 11 ॥**

ಇದಕ್ಕೆಲ್ಲ ಮೂಲ ಇಂದ್ರದೇವನು. ಆದ್ದರಿಂದಲೇ ಜಗತ್ತಿನ ಜನರೆಲ್ಲರೂ ಇಂದ್ರನನ್ನು ಪೂಜೆ ಮಾಡುವ ಪದ್ಧತಿ ಬಂದಿದೆ. ಅದರಂತೆ ನಾವೆಲ್ಲರೂ

ಸೂರ್ಯಕಿರಣ ಕೂಪವಾದ ಆಕಳುಗಳನ್ನು ಹಿಂಡಿ ಅವುಗಳ ಕೆಚ್ಚಲುಗಳಿಂದ ಹಾಲು ಸುರಿದು ಎಲ್ಲರಿಗೂ ಅಮೃತಪ್ರಾಶನ ಮಾಡಿಸುವ ಈ ಶಚೀಪತಿಯ ಮಹೋಪಕಾರಕ್ಕೆ ಕೃತಜ್ಞತೆ ಸಲ್ಲಿಸಲು ಈ ಮಹೋತ್ಸವವನ್ನು ಹಮ್ಮಿಕೊಂಡಿದ್ದೇವೆ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಇಂದ್ರಯಾಗ ಪ್ರಸ್ತಾವೇವೆಂಬಲ್ಲಿ
ಹದಿನೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಷೋಡಶೋಽಧ್ಯಾಯಃ

## ಗೋವರ್ಧನ ಪೂಜೆ

**ಗೋಪವೃದ್ಧಸ್ಯ ವಚನಂ ಶ್ರುತ್ವಾ ಶಕ್ರಪರಿಗ್ರಹೇ ।**
**ಪ್ರಭಾವಜ್ಞೋಽಪಿ ಶಕ್ರಸ್ಯ ವಾಕ್ಯಂ ದಾಮೋದರೋಽಬ್ರವೀತ್ ॥ 1 ॥**
**ವಯಂ ವನಚರಾಃ ಗೋಪಾಃ ಸದಾ ಗೋಧನ ಜೀವಿನಃ ।**
**ಗಾವೋಽಸ್ಮದ್ ದೈವತಂ ವಿದ್ಧಿ ಗಿರಿಯಶ್ಚ ವನಾನಿ ಚ ॥ 2 ॥**
**ಕರ್ಷಕಾಣಾಂ ಕೃಷೀರ್ವೃತ್ತಿಃ ಪಣ್ಯಂ ವಿಪಣಿ ಜೀವಿನಾಮ್ ।**
**ಗಾವೋಽಸ್ಮಾಕಂ ಪರಾವೃತ್ತಿರೇತತ್ ತ್ರೈವಿದ್ಯಮುಚ್ಯತೇ ॥ 3 ॥**
**ವಿದ್ಯಯಾ ಯೋ ಯಯಾ ಯುಕ್ತಃ ತಸ್ಯ ಸಾ ದೈವತಂ ಪರಮ್ ।**
**ಸೈವ ಪೂಜ್ಯಾರ್ಚನೀಯಾ ಚ ಸೈವ ತಸ್ಯೋಪಕಾರಿಣೀ ॥ 4 ॥**
**ಯೋಽನ್ಯಸ್ಯ ಫಲಮಶ್ನತಃ ಕರೋತ್ಯನ್ಯಸ್ಯ ಸತ್ಕ್ರಿಯಾಮ್ ।**
**ದ್ವಾವನರ್ಥೌ ಸ ಲಭತೇ ಪ್ರೇತ್ಯ ಚೇಹ ಚ ಮಾನವಃ ॥ 5 ॥**

ಗೋಪವೃದ್ಧನ ಮಾತನ್ನು ಆಲಿಸಿದ ಶ್ರೀಕೃಷ್ಣ – ಇಂದ್ರದೇವನ ಶಕ್ತಿ ಸಾಮರ್ಥ್ಯವನ್ನು ತಿಳಿದಿದ್ದರೂ ನಿರ್ಭಯವಾಗಿ ನಕ್ಕು ಹೀಗೆಂದನು–

ಗೋಪಾಲಕರೇ, ನಾವೆಲ್ಲರೂ ವನಚರರು. ಗೋವಿನಿಂದಲೇ ಜೀವನ ನಿರ್ವಹಣೆ ಮಾಡುವವರು. ನಮಗೆ ಗೋವುಗಳು ಗಿರಿ ಪರ್ವತ ವನಗಳೇ ದೇವತೆಗಳಾಗಿವೆ. ಉಳುವವರಿಗೆ ಕೃಷಿವೃತ್ತಿ ನಿಯತ, ವ್ಯಾಪಾರದಿಂದ ಜೀವಿಸುವ ವೈಶ್ಯರಿಗೆ ಕ್ರಯವಿಕ್ರಯ ರೂಪ ವ್ಯಾಪಾರ ನಿಯತ.

ಗೋಪಾಲಕರಾದ ನಮಗೆ ಗೋವುಗಳ ಪಾಲನೇ ಪೋಷಣೆಗಳೇ ಸರ್ವಶ್ರೇಷ್ಠ ವೃತ್ತಿಯಾಗಿರುತ್ತದೆ. ರೈತರಿಗೆ ವ್ಯಾಪಾರೋದ್ಯೋಗ ಮಾಡುವವರಿಗೆ ಇಂದ್ರ ಬೇಕು. ಅವರಿಗೆ ಅವನೇ ದೇವರು. ಆದರೆ ನಮಗೆ ದನಕರುಗಳೇ ದೇವರು. ವನಚರರಾದ ನಮಗೆ ಕೃಷಿ ವಾಣಿಜ್ಯದ ಜೊತೆಗೆ ಪಶುಪಾಲನೆಯೂ ಒಂದು ಶ್ರೇಷ್ಠ ವೃತ್ತಿಯೆ. ನಮ್ಮ ದೇವತೆಗಳಾದ ಗೋವು, ಹುಲ್ಲುಗಾವಲು, ಪರ್ವತ ಈ ಮೂರೂ ನಮ್ಮ ದೇವತೆಗಳು. ಯಾರಿಗೆ ಯಾವ ವೃತ್ತಿ ವಿಹಿತವಾಗಿದೆಯೋ ಅವರಿಗೆ ಅದೇ ದೈವ. ಪಶು ಜೀವಿಗಳಿಗೆ ಪಶುಪಾಲನೆಯೇ ನಮ್ಮ ಧರ್ಮ.

ಸ್ವವಿಹಿತ ವೃತ್ತಿಯಿಂದ ಭಕ್ತಿಯಿಂದ ಭಗವದಾರಾಧನೆಯೆಂದು ಮಾಡಿದಾಗ ಭಗವಂತನು ಪ್ರೀತನಾಗುವನು. ಇದನ್ನು ಬಿಟ್ಟು ಬೇರೊಂದು ಜಾತಿಯವರಿಗೆ ಹೇಳಿದ ಧರ್ಮವನ್ನಾಚರಿಸಿದರೆ ಅಂತಹ ಮನುಷ್ಯನಿಗೆ ಇಲ್ಲಿ ಸುಖವಿಲ್ಲ, ಪರತ್ರ ಸದ್ಗತಿಯಿರುವುದಿಲ್ಲ.

**ಕೃಷ್ಯಂತಾ ಪ್ರಥಿತಾ ಸೀಮಾ ಸೀಮಾಂತಂ ಶ್ರೂಯತೇ ವನಮ್ ।**
**ವನಾಂತಾಃ ಗಿರಯಃ ಸರ್ವೇ ತೇ ಚಾಸ್ಮಾಕಂ ಗತಿರ್ಧ್ರುವಾ ॥ 6 ॥**

**ಶ್ರೂಯಂತೇ ಗಿರಿಯಶ್ಚಾಪಿ ವನೇಽಸ್ಮಿನ್ ಕಾಮರೂಪಿಣಃ ।**
**ಪ್ರವಿಶ್ಯ ತಾಸ್ತಾಸ್ತನವೋ ರಮಂತೇ ಸ್ವೇಷು ಸಾನುಷು ॥ 7 ॥**

**ಭೂತ್ವಾ ಕೇಸರಿಣಃ ಸಿಂಹಾಃ ವ್ಯಾಘ್ರಾಶ್ಚ ನಖಿನಾಂ ವರಾಃ ।**
**ವನಾನಿ ಸ್ವಾನಿ ರಕ್ಷಂತಿ ತ್ರಾಸಯಂತೋ ವನಚ್ಛಿದಃ ॥ 8 ॥**

ಬೇಸಾಯ ಮಾಡುವ ಹೊಲಗದ್ದೆಗಳು ಹಬ್ಬಿರುವವರೆಗೆ ನಾಗರೀಕತೆಯ ಸೀಮೆ ಇರುತ್ತದೆ. ಅಲ್ಲಿಂದ ಮುಂದೆ ವನರಾಜ್ಯ ಹಬ್ಬಿರುತ್ತದೆ. ವನಗಳ ಹರಿವಿನಾಚೆಗೆ ಗಿರಿಗಳ ಗಡಿಯು ಪ್ರಾರಂಭವಾಗುತ್ತದೆ. ವನಚರರಾದ ನಮಗೆ ಈ ಮೂರು ಬೇಕು. ವನದ ಎಲ್ಲೆಯಲ್ಲಿರುವ ಪರ್ವತಗಳ ಅಭಿಮಾನಿದೇವತೆಗಳಿದ್ದು ಇಚ್ಛಾನುಸಾರವಾಗಿ ರೂಪಗಳನ್ನು ಧರಿಸುವುದೆಂಬ ವಾರ್ತೆ ಕೇಳಿದ್ದೇವೆ. ಅವು ಅನೇಕ ರೂಪಧರಿಸಿ ಪರ್ವತಗಳ ಸಾನು ಪ್ರದೇಶದಲ್ಲಿ ವಿಹಾರಮಾಡುತ್ತಿರುತ್ತಾರೆ. ಕೆಲವು ಬಾರಿ ಕೇಸರದಿಂದ ಅಲಂಕೃತ ಸಿಂಹಗಳ, ಕೆಲವು ಬಾರಿ ಕೂರುಗುರುಗಳಿಂದ ಕೂಡಿದ ವ್ಯಾಘ್ರಗಳ ರೂಪವನ್ನು ಧರಿಸಿ, ಈ ವನಗಳ ರಕ್ಷಕರಂತಿದ್ದು ಅರಣ್ಯ ನಾಶ ಮಾಡಲು ಬರುವ

ಮಾನವರನ್ನು ಭಯಗೊಳಿಸುತ್ತಾ ಅರಣ್ಯಗಳನ್ನು ರಕ್ಷಿಸುತ್ತದೆ. ಹಾಗೆಯೇ ಪಶುಪಾಲನೆಯ ವೃತ್ತಿ ಹಿಡಿದು ಬೆಟ್ಟ ಬಯಲುಗಳಲ್ಲಿ ವಾಸಿಸುವ ಗೊಲ್ಲರನ್ನು ಕಾಮರೂಪಿಗಳಾದ ಈ ಗಿರಿ ದೇವತೆಗಳು ರಕ್ಷಣೆ ಒದಗಿಸುತ್ತಾರೆ. ಇವರಿಂದ ಉಪಕೃತರಾಗಿ ಇವರನ್ನೆ ನಾಶ ಮಾಡುವ ಕೃತಘ್ನರನ್ನು ನಿರ್ದಾಕ್ಷಿಣ್ಯವಾಗಿ ಸಿಂಹ ವ್ಯಾಘ್ರಾದಿ ರೂಪಗಳಿಂದ ಕೊಂದು ಹಾಕುತ್ತಾರೆ. ಆದ್ದರಿಂದ ನಾವೆಲ್ಲ ಗಿರಿಯಜ್ಞವನ್ನೆ ಮಾಡೋಣ ಗೋಪೂಜೆ, ಗೋವರ್ಧನ ಪೂಜೆಯೇ ನಮಗೆ ವಿಹಿತವಾಗಿದೆ. ಇಂದ್ರನಿಂದ ನಮಗೇನಾಗಬೇಕು.

ಮಂತ್ರಯಜ್ಞಪರಾ ವಿಪ್ರಾಃ ಸೀತಾಯಜ್ಞಾಶ್ಚ ಕರ್ಷಕಾಃ ।
ಗಿರಿಯಜ್ಞಾಸ್ತಥಾ ಗೋಪಾಃ ಇಜ್ಯೋಽಸ್ಮಾಭಿಃ ಗಿರಿರ್ವನೇ ॥ 9 ॥

ತನ್ಮಹ್ಯಂ ರೋಚತೇ ಗೋಪಾ ಗಿರಿಯಜ್ಞಃ ಪ್ರವರ್ತತಾಮ್ ।

ಬ್ರಾಹ್ಮಣರು ಮಂತ್ರಯಜ್ಞವನ್ನು ಮಾಡಬೇಕು. ಒಕ್ಕಲಿಗರು ನೇಗಿಲಯಜ್ಞ ಮಾಡಿ ನೇಗಿಲನ್ನು ಪೂಜಿಸಬೇಕು. ವನಗಿರಿಯಲ್ಲಿರುವ ನಾವೆಲ್ಲರೂ ಗಿರಿಯಜ್ಞ ಗೋಯಜ್ಞ ಮಾಡುವುದೇ ಯೋಗ್ಯವಾಗಿದೆ. ಆದ್ದರಿಂದ ನೀವೆಲ್ಲರೂ ಒಟ್ಟಾಗಿ ಗೋವರ್ಧನ ಗಿರಿಯನ್ನೆ ಪೂಜಿಸಿರಿ. ಗುಡ್ಡದ ಮೇಲಾಗಲಿ, ಗಿಡದ ಕೆಳಗಾಗಲೀ ಬೇರೊಂದು ವಿಶಾಲವೇದಿಕೆಯ ಮೇಲಾಗಲೀ ಸ್ವಸ್ತಿಪುಣ್ಯಾವಾಚನಾದಿ ಶುಭಕರ್ಮಗಳನ್ನು ಮಾಡಿ ಗೋವರ್ಧನ ಪೂಜೆ ಪ್ರಾರಂಭಿಸಿರಿ. ಅಲ್ಲಿ ಪವಿತ್ರವಾದ ಬಲಿಯಿತ್ತು ಗೋವುಗಳನ್ನು ಕರೆತಂದು ಹಾಲು ಕರೆಯಬೇಕು.

ಎಲ್ಲಾ ಗೋವುಗಳ ಹಾಲನ್ನು ಕರೆದ ನಂತರ ಶರದೃತುವಿನಲ್ಲಿ ಅರಳುವ ಹೂವುಗಳಿಂದ ಸಮಲಂಕೃತವಾದ ಗೋವುಗಳು ಗೋವರ್ಧನ ಪರ್ವತ ಪ್ರದಕ್ಷಿಣೆ ಬಂದು ಮನೆ ಸೇರಲಿ ಎಂದನು.

ಪ್ರಾಪ್ತಾ ಕಿಲೇಯಂ ಹಿ ಗವಾಂ ಸ್ವಾದುತೋಯ ತೃಣಾ ಗುಣೈಃ ।
ಶರತ್ ಪ್ರಮುದಿತಾ ರಮ್ಯಾ ಗತಮೇಘಜಲಾಶಯಾ ॥ 10 ॥

ಈ ಸಮಯದಲ್ಲಿಯೆ ಶರದೃತು ಪ್ರಾಪ್ತವಾಯಿತು. ಗೋವುಗಳಿಗೆ ಈ ಋತುವಿನಲ್ಲಿ ಸಿಗುವ ನೀರು ಹುಲ್ಲು ಬಹಳ ಸ್ವಾದುವಾಗಿರುತ್ತದೆ. ಮೇಘಗಳೆಲ್ಲ ನೀರು ಸುರಿಸಿ ಹೊರಟು ಹೋಗಿ ಆಕಾಶ ಸ್ವಚ್ಛವಾಗಿರುತ್ತದೆ. ಮೇಘಗಳು ಇಲ್ಲವಾದ್ದರಿಂದ ನವಿಲುಗಳ ಕೇಕಾವಾಣಿ ಕೇಳ ಬರುವುದಿಲ್ಲ. ವನವೆಲ್ಲ

ಪಚ್ಚೆ ಹಾಸಿದಂತೆ ಹಸಿರಾಗಿರುತ್ತದೆ. ಶರದೃತುವಿನಲ್ಲಿ ಎಲೆಗಳೆಲ್ಲ ಉದುರಿ ಹೋಗಿ ವೃಕ್ಷಗಳು ಪ್ರಸನ್ನವಾಗಿರುತ್ತದೆ. ಆಕಾಶ ರಾಜನು ಪಟ್ಟಾಭಿಷೇಕನಾಗಿರುತ್ತಾನೆ. ಬಿಳಿಮೇಘಗಳೇ ಕಿರೀಟವಾದರೆ ಬಿಳಿಯ ಹಂಸಗಳು ಚಾಮರಗಳು. ಬಿಳಿಯ ಚಂದ್ರನೆ ಶ್ವೇತಛತ್ರವು. ಸಮುದ್ರ ಗಾಮಿನಿಯರಾದ ನದಿಗಳು ನಗುವಿನಂತಿರುವ ಹಂಸಗಳಿಂದ ಕೂಡು ಸಮುದ್ರ ಸೇರುತ್ತದೆ. ಚಕ್ರವಾಕ ಪಕ್ಷಿಗಳೆರಡು ನದಿಗಳ ಸ್ತನಗಳಂತಿದ್ದರೆ ಮರಳಿನ ದಿಬ್ಬಗಳು ನಿತಂಬನ ಸ್ಥಾನದಲ್ಲಿರುತ್ತದೆ. ಶರದ್ರುತುವು ಸರೋವರವೆಲ್ಲ ಕನ್ನೈದಿಲೆಯ ಹೂವುಗಳಿಂದ ತುಂಬಿ, ಆಕಾಶದಲ್ಲಿ ನಕ್ಷತ್ರಪುಂಜಗಳು ತೋರುತ್ತಾ, ವನವು ಪುರುಷರ ಸ್ಥಾನದಲ್ಲಿದ್ದ ಕ್ರೌಂಚಗಳ ನಿನಾದದಿಂದಲೂ, ಹೊಂಬಣ್ಣದ ಸೀರೆ ಧರಿಸಿರುವ ಸ್ತ್ರೀಯರಂತೆ ತೋರುವ ಭತ್ತದ ತೆನೆಗಳಿಂದಲೂ ಸ್ತ್ರೀ ಪುರುಷರ ವಿವಾಹ ಕಲ್ಯಾಣಮಂದಿರದಂತೆ ವನವು ಕಾಣುತ್ತಿರುತ್ತದೆ. ನವಿಲುಗಳ ಗರಿಗಳು ಶಿಥಿಲಗೊಂಡು ಸರ್ವತ್ರ ಬಿದ್ದಿರುವ ವನಪ್ರದೇಶವು ಅನಂತ ಕಣ್ಣುಗಳನ್ನು ಹೊಂದಿರುವಂತೆ ತೋರುತ್ತದೆ.

ಸಾರಸ, ಬಕ ಮೊದಲಾದವು ಕಲಕಲನಾದ ಮಾಡುತ್ತಿವೆ. ಮೋಡಗಳೆಂಬ ವಸ್ತ್ರ ತ್ಯಜಿಸಿ ಚಂದ್ರನು ಸರ್ವಾಂಗ ಸುಂದರನಾಗಿದ್ದಾನೆ. ರಾಜರು ವಿಜಯಕಾಂಕ್ಷಿಗಳಾಗಿ ಹೊರಡುವಾಗ ಆರತಿ ಬೆಳಗಿಸಿಕೊಳ್ಳುತ್ತಾರೆ. ಕೇದಿಗೆ ಹೂವಿನ ಗಿಡ ರಾರಾಜಿಸುತ್ತಿವೆ. ಈ ಸಮಯದಲ್ಲಿಯೇ ದೇವತೆಗಳು ವರ್ಷಾಕಾಲದಲ್ಲಿ ಮಲಗಿದ ಭಗವಂತನನ್ನು ಎಬ್ಬಿಸುವ ಹಬ್ಬ ಆಚರಿಸುತ್ತಾರೆ.

ಗೋಪಾಲಕರೇ! ವರ್ಷಾ ಕಾಲ ಹೋಗಿ ಶರತ್ಕಾಲ ಪ್ರಾರಂಭವಾಗಿದೆ.

ಗೋವರ್ಧನ ಪರ್ವತವು ನೀಲ ಶ್ವೇತ ಸುವರ್ಣ ಬಣ್ಣದ ಪಕ್ಷಿಗಳಿಂದ ಕೂಡಿದ್ದು ಸುಂದರವಾಗಿದೆ. ಇಲ್ಲಿರುವ ಒಂದೊಂದು ವೃಕ್ಷವೂ ಮಹಾಸಾಧುಗಳಂತಿವೆ. ಇಂತಹ ರಮಣೀಯವಾದ ಗೋವರ್ಧನ ಪರ್ವತವೆ ನಮ್ಮ ನಿಜವಾದ ದೇವತೆ ಈ ಗಿರಿಯನ್ನು ಗೋವುಗಳನ್ನು ಪೂಜಿಸೋಣ. ಗೋವುಗಳ ಕೊಂಬುಗಳನ್ನು ಕಿರೀಟಗಳಿಂದ ನವಿಲುಗರಿಗಳಿಂದ ಅಲಂಕರಿಸೋಣ. ಕುತ್ತಿಗೆಗಳಿಗೆ ಚಿಕ್ಕಚಿಕ್ಕ ಘಂಟೆಗಳನ್ನು ಕಟ್ಟೋಣ

**ಶಿವಾಯ ಗಾವಃ ಪೂಜ್ಯಂತಾಂ ಗಿರಿಯಜ್ಞಃ ಪ್ರವರ್ತ್ಯತಾಮ್ ।**
**ಪೂಜ್ಯತಾಂ ತ್ರಿದಶೈಃ ಶಕ್ರೋ ಗಿರಿರಸ್ಮಾಭಿರಿಜ್ಯತಾಮ್ ॥ 11 ॥**

**ಕಾರಯಿಷ್ಯಾಮಿ ಗೋಯಜ್ಞಂ ಬಲಾದಪಿ ಸುಹೃದೋ ವಯಮ್ ।**
**ಯದ್ಯಸ್ತಿ ಮಯಿ ವಃ ಪ್ರೀತಿಃ ಯದಿ ವಾ ಸುಹೃದೋ ವಯಮ್ ॥ 12 ॥**
**ಗಾವೋ ಹಿ ಪೂಜ್ಯಾಃ ಸತತಂ ಸರ್ವೇಷಾಂ ನಾತ್ರ ಸಂಶಯಃ ।**
**ಏತನ್ಮಮ ವಚಃ ತಥ್ಯಂ ಕ್ರಿಯತಾಮವಿಚಾರಿತಮ್ ॥ 13 ॥**

ಶರತ್ಕಾಲದಲ್ಲಿ ದೊರೆಯುವ ವಿವಿಧ ಪುಷ್ಪಗಳಿಂದ ಗೋವುಗಳನ್ನು ಪೂಜಿಸೋಣ. ಗಿರಿಯಜ್ಞವನ್ನು ಮಾಡೋಣ. ದೇವತೆಗಳು ಬೇಕಾದರೆ ಇಂದ್ರನ ಪೂಜೆ ಮಾಡಲಿ. ನಮಗೆ ಅವನಿಂದೇನಾಗಬೇಕಿಲ್ಲ.

ಗೋಪಾಲರೇ! ನಿಮಗೆ ನನ್ನ ಮೇಲೆ ಪ್ರೀತಿ ವಿಶ್ವಾಸವಿರುವುದಾದರೆ ನಾವೆಲ್ಲರೂ ಸುಹೃದರೂ ಹಿತೈಷಿಗಳೂ ಆಗಿದ್ದರೆ ನನ್ನ ಮಾತು ಕೇಳಿ ನಿಮಗೆ ಶುಭವಾಗುತ್ತದೆ. ಹಾಗಿಲ್ಲವಾದರೆ ನಾನು ನಿಮ್ಮಿಂದ ಈ ಗಿರಿಪೂಜೆಯನ್ನು ಬಲಾತ್ಕಾರವಾಗಿಯಾದರೂ ಮಾಡುಸುವೆನು, ಬಿಡುವುದಿಲ್ಲ. ನಮ್ಮೆಲ್ಲರಿಗೂ ಗೋವುಗಳೇ ಸರ್ವದಾ ಪೂಜ್ಯವಾಗಿವೆ ಸಂಶಯಬೇಡ ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶರದೃತು ವರ್ಣನವೆಂಬಲ್ಲಿ
ಹದಿನಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ಸಪ್ತದಶೋಽಧ್ಯಾಯಃ

### ದಿವ್ಯರೂಪಹೊಂದಿ ಗಿರಿಯಜ್ಞ ಸ್ವೀಕರಿಸಿದ

ದಾಮೋದರ ವಚಃ ಶ್ರುತ್ವಾ ಹೃಷ್ಟಾಸ್ತೇ ಗೋಷು ಜೀವಿನಃ ।
ತದ್ವಾಗ್ ಅಮೃತಮಾಸಾದ್ಯ ಪ್ರತ್ಯೂಚುಃ ಅವಿಶಂಕಯಾ ॥ 1 ॥

ತವೈಷ ಬಾಲ! ಮಹತೀ ಗೋಪಾನಾಂ ಹಿತವರ್ಧಿನೀ ।
ಪ್ರೀಣಯತ್ಯೇವ ನಃ ಸರ್ವಾನ್ ಬುದ್ಧಿಃ ವೃದ್ಧಿಕರೀ ಗವಾಮ್ ॥ 2 ॥

ತ್ವಂ ಗತಿ ಸ್ತ್ವಂ ರತಿಶ್ಚೈವ ತ್ವಂ ವೇತ್ತಾ ತ್ವಂ ಪರಾಯಣಮ್ ।
ಭಯೇಷ್ವ ಭಯದಸ್ತ್ವಂ ನಃ ತ್ವಮೇವ ಸುಹೃದಾಂ ಸುಹೃತ್ ॥ 3 ॥

ತ್ವತ್ಕೃತೇ ಕೃಷ್ಣ ಘೋಷೋಽಯಂ ಕ್ಷೇಮೀ ಮುದಿತ ಗೋಕುಲಃ ।
ಕೃತ್ಸ್ನೋ ವಸತಿ ಶಾಂತಾರಿಃ ಯಥಾ ಸ್ವರ್ಗಂ ಗತಸ್ತಥಾ ॥ 4 ॥

ದಾಮೋದರನ ಆ ಸ್ಪಷ್ಟ ಮಾತುಗಳನ್ನು ಕೇಳಿ ಸಂತುಷ್ಟರಾದ ಗೋಪಾಲಕರಿಗೆ ಶ್ರೀಕೃಷ್ಣನ ಮಾತುಗಳು ಅಮೃತದಂತೆ ಆಪ್ಯಾಯಮಾನವಾಗಿತ್ತು. ಈ ವಚನಾಮೃತ ಪಾನ ಮಾಡಿದ ಅವರು ನಿಶ್ಶಂಕೆಯಿಂದ ಹೀಗೆಂದರು.

ಬಾಲಗೋಪಾಲನೇ ನಿನ್ನ ಈ ವಿಚಾರಧಾರೆಯು ಮಹತ್ವಾಂಶಯುಕ್ತವಾಗಿದೆ. ಗೋಪಾಲಕರೆಲ್ಲರಿಗೂ ಹಿತವುಂಟು ಮಾಡುವಂತಹುವು. ನಿನ್ನ ಮಾತುಗಳು ನಮಗೆಲ್ಲ ಹಿಡಿಸಿವೆ. ಗೋವುಗಳಿಗೂ ಹಿತವುಂಟಾಗುತ್ತದೆ.

ಕೃಷ್ಣ! ನೀನೆ ನಮಗೆಲ್ಲ ದಿಕ್ಕು. ನೀನೆ ನಮಗೆ ಆನಂದದಾಯಕನು. ನೀನು

ಸರ್ವಜ್ಞನಾಗಿದ್ದು ಭಯದ ಸನ್ನಿವೇಶಗಳಲ್ಲಿಯೂ ಅಭಯದಾಯಕ ನೀನೆ. ಸ್ನೇಹಿತರಲ್ಲಿಯೂ ವಿಶಿಷ್ಟ ಸ್ನೇಹಿತನಾಗಿರುವಿ.

ಈ ಗೋಕುಲವಿರುವುದೇ ನಿನಗಾಗಿ. ನೀನು ಇಲ್ಲಿರುವುದರಿಂದಲೇ ಇದು ಕ್ಷೇಮವಾಗಿದೆ. ಸಮಗ್ರ ವ್ರಜವು ಯಾವಾಗಲೂ ಸಂತುಷ್ಟವಾಗಿರುವುದು ನಿನ್ನಿಂದಲೇ. ಈ ಗ್ರಾಮವು ಶತ್ರು ಬಾಧೆಯಿಲ್ಲದೆ ಸ್ವರ್ಗದಲ್ಲಿ ಹೇಗೋ ಹಾಗೆ ಸುಖವಾಗಿದೆ.

ನಿನ್ನ ಅವತಾರವಾದಾಗಿನಿಂದಲೂ ಏನೇನು ಪೂತನಾಹರಣಾದಿ ಅದ್ಭುತಗಳನ್ನು ಮಾಡಿರುವೆಯೋ ಅದನ್ನು ದೇವತೆಗಳೂ ಮಾಡಲಾರರು. ನೀನು ಹೇಳದ ನಿಮ್ಮಿಂದ ಬಲಾತ್ಕಾರವಾಗಿಯಾದರೂ ಮಾಡಿಸುತ್ತೇನೆ' ಎಂಬ ಮಾತು ನಮ್ಮ ಮೇಲಿರುವ ಅಭಿಮಾನ ತೋರಿಸುತ್ತದೆ. ಬಲದಿಂದಲೂ, ಕೀರ್ತಿಯಿಂದಲೂ ಪರಾಕ್ರಮದಿಂದಲೂ ದೇವತೆಗಳ ಮಧ್ಯೆ ಇಂದ್ರನಂತೆ ಇರುವೆ.

ಗ್ರಹಗಣಗಳ ಮಧ್ಯದಲ್ಲಿ ಸೂರ್ಯನಂತೆಯೂ ಮನುಷ್ಯರಲ್ಲಿ ನೀನು ಬೆಳಗುತ್ತಿರುವಿ. ಕಾಂತಿ, ಶೋಭಾ ಸಂಪತ್ತಿ ಮಂದಹಾಸಯುಕ್ತ ನೀನು ಚಂದ್ರನಂತೆ ಇರುವಿ. ಸಮುದ್ರವು ತನ್ನ ಎಲ್ಲೆಯನ್ನು ಉಲ್ಲಂಘಿಸಲಾಗದಂತೆ ಗಿರಿಯಜ್ಞವನ್ನು ಮಾಡಿರಿ' ಎಂಬ ನಿನ್ನ ಆದೇಶ ಅನುಲ್ಲಂಘನೀಯವು.

ನೀನೆ ನಮಗೆ ಪ್ರಾಣ ಇಂದ್ರೋತ್ಸವ ಇಂದಿಗೆ ಇಲ್ಲಿಗೆ ನಿಲ್ಲಲಿ. ಶ್ರೀಕೃಷ್ಣ ಪ್ರಣೀತ ಗೋಯಜ್ಞ ಹಾಗೂ ಗಿರಿಯಜ್ಞಗಳೇ ನಮಗೆ ಊರಹಬ್ಬ.

**ಭಾಜನಾನ್ಯುಪಕಲ್ಪ್ಯಂತಾಂ ಪಯಸಃ ಪೇಶಲಾನಿ ಚ ।**
**ಕುಂಭಾಶ್ಚ ವಿನಿವೇಶ್ಯಂತಾಂ ಉದಪಾನೇಷು ಶೋಭನಾಃ ॥ 5 ॥**

**ಭಕ್ಷ್ಯಂ ಭೋಜ್ಯಂ ಚ ಪೇಯಂ ಚ ತತ್ ಸರ್ವಮುಪನೀಯತಾಮ್ ।**
**ಪ್ರವರ್ತ್ಯತಾಂ ಚ ಯಜ್ಞೋಽಯಂ ಸರ್ವಗೋಪಸುಸಂಕುಲಃ ॥ 6 ॥**

**ದಧ್ನೋ ಹ್ರದೋ ಘೃತಾವರ್ತಃ ಪಯಃ ಕುಲ್ಯಾ ಸಮಾಕುಲಃ ।**
**ಮಾಂಸರಾಶಿಃ ಪ್ರಭೂತಾಢ್ಯಃ ಪ್ರಕಾಶೌದನಪರ್ವತಃ ॥ 7 ॥**

ಗೋಪಾಲರೆಲ್ಲರೂ ಅಭಿಮಾನದಿಂದ ಹೀಗೆ ನುಡಿದು, ಗೋಉತ್ಸವ

ಗಿರಿಯುತ್ಸವಕ್ಕಾಗಿ ಸಿದ್ಧತೆ ಪ್ರಾರಂಭಿಸಿದರು. ಸ್ನಾನಪಾನಾದಿಗಳಿಗಾಗಿ ಹಂಡೆಗಳಲ್ಲಿ ನೀರು ತುಂಬಿಟ್ಟರು. ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಹಾಲನ್ನು ತುಂಬಿಸಿ, ದೋಣಿಗಳಲ್ಲಿ ಮೊಸರನ್ನು, ಚರಿಗೆಗಳಲ್ಲಿ ತುಪ್ಪವನ್ನು ತಂದಿಟ್ಟು, ಕೊಪ್ಪರಿಗೆಗಳಲ್ಲಿ ಬೆಣ್ಣೆ ತುಂಬಿಟ್ಟರು. ಇದಲ್ಲದೆ ಅನ್ಯರೀತಿಯ ಪಕ್ವಾನ್ನ, ಮೃಷ್ಟಾನ್ನ ಭಕ್ಷ್ಯ ಭೋಜ್ಯ ಲೇಹ್ಯ ಪೇಯ ಚೋಷ್ಯ ಮೊದಲಾದ ಎಲ್ಲಾ ಆಹಾರವನ್ನೂ, ಕೆಲವರಿಗೆ ಆಮಿಷಾಹಾರವನ್ನು ಮೂರುದಿನಗಳವರೆಗೆ ಸಾಕಾಗುವಷ್ಟು ಸಿದ್ಧಪಡಿಸಿದರು. ಅನ್ನದ ಪರ್ವತ ರಾಶಿ ಬಿದ್ದಿತ್ತು. ಹೀಗೆ ಗೋಗೋಪಾಲಕರಿಂದ ತುಂಬಿ ಹೋಗಿದ್ದ ಗಿರಿಯಜ್ಞವು ಆರಂಭವಾಯಿತು. ಗೋಪಾಲಕರು ಗೋಪಾಂಗನೆಯರು ಸಮ್ಮಿಲಿತರಾಗಿ ಅವಶ್ಯಕವಾದ ಕಾರ್ಯ ಮಾಡುತ್ತಿದ್ದರು.

ಭಕ್ಷ್ಯಗಳ ನೂರಾರು ರಾಶಿ ಕಲ್ಪಿತವಾಗಿದ್ದವು. ನಾನಾವಿಧ ಗಂಧ, ಮಾಲೆಗಳೂ ಧೂಪ ದೀಪಗಳಿಂದಲೂ ಗಿರಿಯಜ್ಞವು ಸುಶೋಭಿತವಾಗಿತ್ತು. ಯಜ್ಞವು ಆರಂಭವಾಗಿ ಆಜ್ಯಪಾತ್ರೆಮ ಚರುಸ್ಥಾಲೀ ಇಡಲ್ಪಟ್ಟು ಶುಭತಿಥಿಯಲ್ಲಿ ವಿಪ್ರರು ಯಜ್ಞವನ್ನಾರಂಭಿಸಿದರು.

## ಗಿರಿಯನ್ನ ಹರಿಯೆ ತಿಂದ

**ಯಜನಾಂತೇ ತದನ್ನಂ ತು ತತ್ ಪಯೋ ದಧಿ ಚೋತ್ತಮಮ್ ।**
**ಮಾಂಸಂ ಚ ಮಾಯಯಾ ಕೃಷ್ಣೋ ಗಿರಿರ್ಭೂತ್ವಾ ಸಮಶ್ನುತೇ ॥ 8 ॥**

**ತರ್ಪಿತಾಶ್ಚಾಪಿ ವಿಪ್ರಾಗ್ರ್ಯಾಃ ತುಷ್ಟಾಃ ಸಂಪೂರ್ಣಮಾನಸಾಃ ।**
**ಉತ್ತಸ್ಥುಃ ಪ್ರೀತಮನಸಃ ಸ್ವಸ್ತಿ ವಾಚ್ಯಂ ಯಥಾ ಸುಖಮ್ ॥ 9 ॥**

**ಭುಕ್ತ್ವಾ ಚಾವಭೃಥೇ ಕೃಷ್ಣಃ ಪಯಃ ಪೀತ್ವಾ ಚ ಕಾಮತಃ ।**
**ಸಂತೃಪ್ತೋಽಸ್ಮೀತಿ ದಿವ್ಯೇನ ರೂಪೇಣ ಪ್ರಜಹಾಸ ವೈ ॥ 10 ॥**

ಗಿರಿಗಾಗಿ ಮೀಸಲಾಗಿದ್ದ ಉತ್ತಮೋತ್ತಮವಾದ ಹಾಲು ಮೊಸರು ಪಕ್ವಾನ್ನಗಳನ್ನೆಲ್ಲ ಗೋವರ್ಧನಗಿರಿಯಲ್ಲಿ ಒಂದು ರೂಪದಿಂದ ಸರ್ವವನ್ನು ಅವನೆ ಭಕ್ಷಿಸಿದನು.

ಈ ಗಿರಿಯಜ್ಞದಲ್ಲಿ ಬ್ರಾಹ್ಮಣರೆಲ್ಲರೂ ಅನ್ನ ಪಾನ ದಾನ ದಕ್ಷಿಣೆಗಳಿಂದ

ತೃಪ್ತರಾದರು. ಅವರ ಮನೋರಥವೂ ಪೂರ್ಣವಾಗಿತ್ತು. ಎಲ್ಲರೂ ಸಮಾಧಾನವಾದ ಮನಸ್ಸಿನಿಂದ ಮನಃಪೂರ್ವಕ ಆಶೀರ್ವಚನ ನೀಡಿದರು.

**ಭುಕ್ತ್ವಾ ಬಾವಭೃಥೇ ಕೃಷ್ಣಃ ಪಯಃ ಪೀತ್ವಾ ಚ ಕಾಮತಃ ।**
**ಸಂತೃಪ್ತೋಽಸ್ಮೀತಿ ದಿವ್ಯೇನ ರೂಪೇಣ ಪ್ರಜಹಾಸ ವೈ ॥ 11 ॥**
**ತಂ ಗೋಪಾಃ ಪರ್ವತಾಕಾರಂ ದಿವ್ಯಸ್ರಗನುಲೇಪನಮ್**
**ಗಿರಿಮೂರ್ಧ್ನಿಸ್ಥಿತಂ ದೃಷ್ಟ್ವಾ ಕೃಷ್ಣಂ ಜಗ್ಮುಃ ಪ್ರಧಾನತಃ ॥ 12 ॥**
**ಭಗವಾನಪಿ ತೇನೈವ ರೂಪೇಣಾಚ್ಛಾದಿತಃ ಪ್ರಭುಃ ।**
**ಸಹಿತೈಃ ಪ್ರಣತೋ ಗೋಪೈಃ ವವಂದಾತ್ಮಾನಮಾತ್ಮನಾ ॥ 13 ॥**

ಈ ರೀತಿಯಲ್ಲಿ ಗಿರಿಯಜ್ಞವು ಮೂರುದಿನಗಳ ಕಾಲ ವಿಜೃಂಭಣೆಯಿಂದ ನಡೆದು, ಕೊನೆಯ ದಿನ ಅವಭೃಥ ಸ್ನಾನದ ಸಮಯದಲ್ಲಿ ಯಥೇಷ್ಟ ಅನ್ನ ಪಾನಾದಿಗಳನ್ನು ಸ್ವೀಕರಿಸಿ, ಸಾಕಾಗುವಷ್ಟು ಹಾಲು ಕುಡಿದು ನಾನು ಅತ್ಯಂತ ಸಂತುಷ್ಟನಾಗಿದ್ದೇನೆ ಎಂದು ಕೃಷ್ಣನು ದಿವ್ಯರೂಪದಿಂದ ನುಡಿದು ಜೋರಾಗಿ ನಕ್ಕನು.

ಆಗ ಗೋವರ್ಧನ ಪರ್ವತದ ಶಿಖರದ ತುದಿಯ ಮೇಲೆ ಶೈಲರೂಪ ಆಕಾರದಿಂದಲೇ ನಿಂತುಕೊಂಡ. ದೇವಲೋಕ ಮಂದಾರ ಮಾಲೆಗಳನ್ನು ಧರಿಸಿದ್ದ ಅವನನ್ನು ನೋಡಲು ಗೋಪಾಲಕರೆಲ್ಲ ಅತ್ತ ಓಡಿದರು. ಶ್ರೀಕೃಷ್ಣನೂ ಸಹ ತನ್ನದೆ ಆದ ಪರ್ವತರೂಪದ ಶರೀರಕ್ಕೆ ಎಲ್ಲರಂತೆ ನಮಸ್ಕರಿಸಿದನು.

**ತಮೂಚುಃ ವಿಸ್ಮಿತಾಗೋಪಾ ದೇವಂ ಗಿರಿವರೇ ಸ್ಥಿತಮ್ ।**
**ಭಗವಂಸ್ತ್ವದ್ವಶೇ ಯುಕ್ತಾ ದಾಸಾ ಕಿಂ ಕುರ್ಮ ಕಿಂಕರಾಃ ॥ 14 ॥**

ಗಿರಿಶಿಖರದ ಮೇಲಿರುವ ಪರ್ವತದ ದೇವತೆಗೆ ವಿಸ್ಮಿತರಾಗಿ ಹೀಗೆಂದರು. ಪೂಜ್ಯನೇ, ನಾವೆಲ್ಲರೂ ನಿನ್ನ ಅಧೀನರಾಗಿದ್ದೇವೆ. ನಿನ್ನದಾಸಾನುದಾಸರು ಸೇವಕರೂ ಆಗಿರುವೆವು. ನಾವೀಗ ನಿನಗೆ ಯಾವ ರೀತಿಯ ಸೇವೆಯನ್ನು ಮಾಡಬೇಕೆಂದು ಹೇಳು' ಎಂದರು.

ಪರ್ವತದಿಂದ ಹೊರಡುವ ವಾಣಿಯ ಮೂಲಕ ಪರ್ವತಾಧೀಶ್ವರನು – ಗೋಪಾಲಕರೇ, ಇಂದಿನಿಂದ ನಿಮಗೆಲ್ಲ ಗೋವುಗಳಲ್ಲಿ ದಯೆಯಿದ್ದದ್ದೆ

ನಿಜವಾದರೆ ನೀವೆಲ್ಲರೂ ಇಂದು ಮಾಡಿದಂತೆ ನನ್ನನ್ನೆ ಪೂಜಿಸಬೇಕು. ನಿಮಗೆಲ್ಲ ನಾನೇ ಪ್ರಧಾನ ದೇವತೆಯು. ನಿಮ್ಮ ಮನೋಭಿಲಾಷೆಯೆಲ್ಲವನ್ನು ನಾನು ಪೂರ್ಣ ಮಾಡುವೆನು. ಈ ನಂದಗೋಪನೆ ಮೊದಲಾದ ಗೋಪಾಲಕರಿಗೆ ಪ್ರೀತನಾದ ನಾನು ಸಾವಿರಾರು ಗೋವುಗಳು ಅಭಿವೃದ್ಧಿಯಾಗುವಂತೆ ಮಾಡುವೆನು. ಹಾಲು ಮೊಸರು ತುಪ್ಪಗಳನ್ನು ಉಪಭೋಗಿಸುವಿರಿ. ನಿಮ್ಮೊಂದಿಗೆ ಇದ್ದು ನಿಮಗೆಲ್ಲ ಆನಂದವುಂಟು ಮಾಡುವೆನು. ನೀವೆಲ್ಲರೂ ಕರುಗಳಿಂದ ಸಹಿತ ಗೋವುಗಳನ್ನು ಪ್ರದಕ್ಷಿಣೆ ಹಾಕಿಸಿರಿ. ಧೇನುಗಳಿಗೆ ನೀರಾಜನ ಮಾಡಿರಿ ಅದು ನನಗಿಷ್ಟ.

ಶ್ರೀಕೃಷ್ಣನು ಹೀಗೆ ಹೇಳಿದ ಕೂಡಲೇ ಗೋವುಗಳು ಹೋರಿಗಳೊಂದಿಗೆ ಗುಂಪು ಗುಂಪಾಗಿ ಪ್ರದಕ್ಷಿಣೆ ಬಂದವು. ಗೋವುಗಳ ತಲೆಯಲ್ಲಿ ಹೂವಿ ಕಿರೀಟಗಳು, ನಾಲ್ಕೂ ಕಾಲುಗಳಲ್ಲಿಯು ಹೂವಿನ ಅಂಗದಗಳನ್ನು ಸುತ್ತಿದ್ದರು.

ಗೋಪಾಲಕರೆಲ್ಲರೂ ಗೋಧನವೆನಿಸಿದ ಗೋವುಗಳನ್ನು ಬೆನ್ನು ಚಪ್ಪರಿಸಿ ಅವುಗಳನ್ನು ಪ್ರದಕ್ಷಿಣೆ ಹಾಕಿಸಿದರು. ಗೋಪಾಲಕರು ನವಿಲುಗರಿಗಳಿಂದ ಅಲಂಕೃತರಾಗಿದ್ದರು. ಗೋಪಾಲಕರು ಎತ್ತುಗಳ ಮೇಲೆ ಕುಳಿತ್ತಿದ್ದರು. ನೃತ್ಯ ಮಾಡುತ್ತಿದ್ದವರು ಕೆಲವರು ಪ್ರದಕ್ಷಿಣಾ ನಂತರ ಪರ್ವತಾಧಿದೇವತೆಯು ಅಲ್ಲಿಯೇ ಅಂತರ್ಧಾನ ಹೊಂದಿತು.

ನಂತರ ಶ್ರೀಕೃಷ್ಣನೂ ಗೋಪಾಲಕರೊಡನೇ ವ್ರಜ ಪ್ರವೇಶಿಸಿದನು. ಗಿರಿಯಜ್ಞದಲ್ಲಿ ನಡೆದ ಈ ದೈವೀಘಟನೆಯ ಅದ್ಭುತ ನೋಡಿ ಆಶ್ಚರ್ಯವಾಗಿ ಶ್ರೀಕೃಷ್ಣನನ್ನು ಕೊಂಡಾಡಿದರು.

ಇತಿ ಶ್ರೀಹರಿವಂಶ ಖಿಲಭಾಗದಲ್ಲಿ
ಗೋವರ್ಧನ ಪೂಜೆವೆಂಬಲ್ಲಿ
ಹದಿನೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಅಷ್ಟಾದಶೋಽಧ್ಯಾಯಃ

## ಮೇಘಗಳಿಗೆ ಇಂದ್ರನ ಆದೇಶ

*ವೈಶಂಪಾಯನ ಉವಾಚ–*

**ಮಹೇ ಪ್ರತಿಹತೇ ಶಕ್ರಃ ಸಕ್ರೋಧಃ ತ್ರಿದಶೇಶ್ವರಃ ।**
**ಸಂವರ್ತಕಂ ನಾಮ ಗಣಂ ತೋಯದಾನಾಮಥಾಬ್ರವೀತ್ ॥ 1 ॥**

**ಭೋ ಬಲಾಹಕಮಾತಂಗಾಃ ಶ್ರೂಯತಾಂ ಮಮ ಭಾಷಿತಂ ।**
**ಯದಿ ವೋ ಮತ್ಪ್ರಿಯಂ ಕಾರ್ಯಂ ರಾಜಭಕ್ತಿ ಪುರಸ್ಕೃತಮ್ ॥ 2 ॥**

**ಏತೇ ವೃಂದಾವನಗತಾಃ ದಾಮೋದರ ಪರಾಯಣಾಃ ।**
**ನಂದಗೋಪಾದಯೋ ಗೋಪಾಃ ವಿದ್ವಿಷಂತಿ ಮಮೋತ್ಸವಮ್ ॥ 3 ॥**

**ಆಜೀವೋ ಯಃ ಪರಸ್ತೇಷಾಂ ಗೋಪತ್ವಂ ಚ ಯತಃ ಸ್ಮೃತಮ್ ।**
**ತಾಃ ಗಾವಃ ಸಪ್ತರಾತ್ರೇಣ ಪೀಡ್ಯಂತಾಂ ವರ್ಷಮಾರುತೈಃ ॥ 4 ॥**

**ಐರಾವತಗತಶ್ಚಾಹಂ ಸ್ವಯಮೇವಾಂಬು ದಾರುಣಮ್ ।**
**ಸ್ರಕ್ಷ್ಯಾಮಿ ವೃಷ್ಟಿಂ ವಾತಂ ಚ ವಜ್ರಾಶನಿ ಸಮಪ್ರಭಮ್ ॥ 5 ॥**

**ಹತಾಸ್ತಾಃ ಸಪ್ರಜಾಃ ಗಾವಃ ತ್ಯಕ್ಷ್ಯಂತಿ ಭುವಿ ಜೀವಿತಮ್ ।**
**ಏವಮಾಜ್ಞಾಪಯಾಮಾಸ ಸರ್ವಾನ್ ಜಲಧರಾನ್ ಪ್ರಭುಃ ॥ 6 ॥**

ಹೀಗೆ ಶ್ರೀಕೃಷ್ಣನಿಂದಾಗಿ ತನ್ನ ಉತ್ಸವವು ಪ್ರತಿಬದ್ಧವಾದದ್ದನ್ನು ನೋಡಿ ಇಂದ್ರದೇವನಿಗೆ ಅತ್ಯಂತ ಕೋಪ ಬಂದಿತು. ತುಟಿಗಳು ಅದುರಿದವು.

ತಕ್ಷಣದಲ್ಲಿಯೇ ಸಂವರ್ತಕ'ವೆಂಬ ಮೇಘಗಳ ಗಣವನ್ನು ಕರೆದು ಹೀಗೆ ಆಜ್ಞಾಪಿಸಿದ. ಬಲಿಷ್ಠರಾದ ಮೇಘ ಮಾತಂಗಗಳೇ!

ರಾಜಭಕ್ತಿಯನ್ನೇ ಪ್ರಧಾನ ಕಾರ್ಯವಾಗಿರುವ ನೀವು ನನಗೆ ಅತ್ಯಂತ ಪ್ರಿಯವಾದ ಕಾರ್ಯವನ್ನೇ ಮಾಡಲು ಉಚಿತವೆನಿಸಿದರೆ ಈ ನನ್ನ ಮಾತಿನಂತೆ ನಡೆಯಿರಿ. ಭೂಮಿಯಲ್ಲಿ ಗೋಕುಲದಲ್ಲಿ ನಂದಗೋಪ ಎಂಬ ಗೋಪನಿರುವನಷ್ಟೆ! ಈಗ ಅವನಿಗೆ ಬುದ್ಧಿ ಕೆಟ್ಟಿದೆ. ಇದರಿಂದಾಗಿ ಬಹಳ ದುರಹಂಕಾರಿಯಾಗಿದ್ದಾನೆ. ದಾಮೋದರನ ಆಶ್ರಯ ಪಡೆದು ಅವನ ಮಾತಿನಂತೆ ನನಗೆ ನಡೆಯಬೇಕಾಗಿದ್ದ ವಾರ್ಷಿಕ ಪೂಜೆಯನ್ನು ತ್ಯಜಿಸಿದ್ದಾನೆ. ಅವರ ಜೀವಿಕೆಗೆ ಯಾವುದು ಪ್ರಧಾನಭೂತವಾಗಿರುವುದೋ ಹಾಗೂ ಯಾವ ಗೋವುಗಳ ಸಂಬಂಧದಿಂದಾಗಿ ಇವರೆಲ್ಲ ಗೋಪ'ವೆಂಬ ಹೆಸರಿನಿಂದ ಕರೆಯಲ್ಪಡುವರೋ ಅಂತಹ ಗೋವುಗಳನ್ನು ನಾಶ ಮಾಡಲು, ನೀವೆಲ್ಲರೂ ಸಪ್ತರಾತ್ರ ಅಖಂಡವಾಗಿ ಮುಸಲಾಕಾರವಾಗಿ ಜಡಿಮಳೆಯನ್ನು ಸುರಿಸಿರಿ. ಕುಂಭದ್ರೋಣ ಮಳೆಯಿಂದಾಗಿ ಗೋಸಂಪತ್ತೆಲ್ಲವೂ ನಾಶವಾಗುವಂತೆ ಮಾಡಿರಿ.

ನಾನೂ ಸಹ ಗಿರಿಶಿಖರದಂತಿರುವ ಐರಾವತವನ್ನೇರಿ ಬಂದು ನಿಮಗೆ ಸಿಡಿಲು, ಮಿಂಚುಗಳೊಂದಿಗೆ ಕೂಡಿದ ಅತಿದಾರುಣವಾದ ಮಳೆ ಹಾಗೂ ಚಂಡಮಾರುತ ಸೃಷ್ಟಿ ಮಾಡುತ್ತೇನೆ. ಮೇಘಗಳೇ! ನೀವೆಲ್ಲರೂ ಪ್ರಚಂಡ ವಾಯುವಿನಿಂದ ಕೂಡಿ ಬೃಂದಾವನದ ಮೇಲೆ ಘೋರವೃಷ್ಟಿ ಸುರಿಸಿದರೆ ಗೋಪಾಲಕರ ಸಹಿತ ವ್ರಜಭೂಮಿಯಲ್ಲಿರುವ ಗೋವುಗಳೆಲ್ಲ ಮೃತವಾಗುತ್ತವೆ. ಗೋವು ಮೃತವಾದರೆ ಗೋಪಾಲಕರೆಲ್ಲ ಸತ್ತಂತೆ ಎಂದು ಆಜ್ಞಾಪಿಸಿದನು.

## ಕುಂಭದ್ರೋಣ ಮಳೆ

**ತತಸ್ತೇ ಜಲದಾಃ ಕೃಷ್ಣಾಃ ಘೋರನಾದಾಃ ಭಯಾವಹಾಃ ।**
**ಆಕಾಶಂ ಛಾದಯಾಮಾಸುಃ ಸರ್ವತಃ ಪರ್ವತೋಪಮಾಃ ॥ 7 ॥**

**ವಿದ್ಯುತ್ ಸಂಪಾತ ಜನನಾಃ ಶಕ್ರಚಾಪ ವಿಭೂಷಿತಾಃ ।**
**ತಿಮಿರಾವೃತ ಮಾಕಾಶಂ ಚಕ್ರುಸ್ತೇ ಜಲದಾಸ್ತದಾ ॥ 8 ॥**

**ತೇಽನ್ಯೋನ್ಯಂ ವಪುಷಾ ಬದ್ಧಾಃ ನಾಗ ಯೂಥಾಯುತೋಪಮಾಃ ।**
**ದುರ್ದಿನಂ ವಿಪುಲಂ ಚಕ್ರುಃ ಛಾದಯಂತೋ ನಭಸ್ತಲಮ್ ॥ 9 ॥**

**ನೃಹಸ್ತ ನಾಗಹಸ್ತಾಭ್ಯಾಂ ವೇಣೂನಾಂ ಚೈವ ಸರ್ವತಃ ।**
**ಧಾರಾಭಿಃ ತುಲ್ಯ ರೂಪಾಭಿಃ ವವೃಷುಸ್ತೇ ಬಲಾಹಕಾಃ ॥ 10 ॥**

ಇಂದ್ರದೇವ ಆಜ್ಞೇ ಮಾಡುವುದೇ ತಡ ಮೋಡದ ಗಣಗಳೆಲ್ಲವೂ ಮುಗಿಲಿನಿಂದ ಯುದ್ಧಕ್ಕೆ ಹೊರಟವು. ಗಾಳಿಯು ರೊಂಯ್ಯೆಂದು ಬೀಸಿತು. ಪರ್ವತಾಕಾರದ ಕಾರ್ಮುಗಿಲುಗಳು ಗಗನವನ್ನೇ ಮುಚ್ಚಿಹಾಕಿದವು. ಕಾಮನಬಿಲ್ಲಿನಿಂದ ವಿಭೂಷಿತವಾದ, ಮಿಂಚಿನ ಸರಪಳಿಗಳನ್ನು ಹೊರಹೊಮ್ಮುತ್ತಿದ್ದ ಮೇಘಗಳು ಜೊತೆಜೊತೆ ಗೂಡಿ ಹೋಗುತ್ತಿರುವ ಆನೆಗಳಂತೆಯೇ ಕಾಣುತ್ತಿದ್ದವು. ಕೆಲವು ಮೇಘಗಳು ಸಮುದ್ರದಲ್ಲಿರುವ ಮೊಸಳೆಗಳಂತೆ ಕಾಣುತ್ತಿದ್ದವು. ಕೆಲವು ಮೇಘಗಳು ಮಹಾಹೆಬ್ಬಾವು-ಗಳಂತೆಯೂ ಸಾವಿರಾರು ಮತ್ತಗಜಗಳ ಗುಂಪು ಒಂದಕ್ಕೊಂದು ಮೆತ್ತಿಕೊಂಡು ಪ್ರಯಾಣ ಮಾಡುವಂತೆಯೂ ಕಾಣುತ್ತಿದ್ದವು. ಇವೆಲ್ಲ ಒಂದೆಡೆ ಸೇರಿ ಸುದಿನವಾಗಿದ್ದ ವೃಂದಾವನವನ್ನು ದುರ್ದಿನವನ್ನಾಗಿ ಮಾಡಿದವು.

ನೀರಿನ ಜಲಧಾರೆಗಳು ಮನುಷ್ಯರ ತೋಳುಗಳಂತೆಯೂ ಆನೆಯ ಶುಂದಾದಂಡಗಳಂತೆಯೂ, ಬಹಳ ಎತ್ತರವಾಗಿ ಬೆಳೆದಿರುವ ಬೊಂಬುಗಳಂತೆಯೂ ಇದ್ದವು. ಅನಂತವೂ ಅಗಾಧವೂ ಆದ ಈ ದುರ್ದಿನವು ಮಹಾಸಮುದ್ರದಂತೆಯೂ ಕಾಣಿಸಿದವು.

**ನೈವಾಪತನ್ ವೈ ಖಗಮಾಃ ದುದ್ರುವುಃ ಮೃಗಜಾತಯಃ ।**
**ಪರ್ವತಾಭೇಷು ಮೇಘೇಷು ಖೇ ನಂದತ್ಸು ಸಮಂತತಃ ॥ 11 ॥**

**ನಷ್ಟ ಸೂರ್ಯೇಂದು ಸದೃಶೈಃ ಮೇಘೈಃ ನಭಸಿ ದಾರುಣೈಃ ।**
**ಅತಿವೃಷ್ಟೇನ ಲೋಕಸ್ಯ ವಿರೂಪಮಭವದ್ ವಪುಃ ॥ 12 ॥**

ಆಕಾಶದಲ್ಲಿ ಪಕ್ಷಿಗಳ ಹಾರಾಟವಿಲ್ಲ. ಮೃಗಗಳ ಸಂಚಾರವಿಲ್ಲ, ಗ್ರಹತಾರೆಗಳ ಅದರ್ಶನ, ಚಂದ್ರ ಸೂರ್ಯರ ಕಾಂತಿಯಿಲ್ಲ. ಬಿಸಿಲಿಲ್ಲ, ಬೆಳಕಿಲ್ಲ, ಬರೇ ಗುಡ್ಡದಂತ ಮೇಘಗಳು ಅಬ್ಬರಿಸಿ ಧಾರಾಕಾರ ಮಳೆ ಸುರಿಸುತ್ತಿದ್ದವು. ನೆಲವೆಲ್ಲ

ಜಲಮಯ, ದಿನವೆಲ್ಲ ರಾತ್ರ, ನದಿಗಳೆಲ್ಲ ತುಂಬಿ ಸಮುದ್ರದಂತಾಗಿ ಪ್ರಪಂಚಕ್ಕೆಲ್ಲ ಪ್ರಳಯಕಾಲವೇ ಬಂದಂತಾಗಿತ್ತು.

ನವಿಲುಗಳು ಹರ್ಷೋೀತ್ಸಾಹದಿಂದ ಕೇಕೆಹಾಕುತ್ತಾ ಕುಣಿಯುತ್ತಿದ್ದವು-ಮೇಘಗಳ ಗುಡುಗುಗಳಿಂದ ವೃಕ್ಷಗಳು ನಡುಗುತ್ತಿದ್ದವು.

## ಪ್ರಲಯ ಪ್ರಾಪ್ತವಾಯಿತೋ

**ಪ್ರಾಪ್ತೋಽಂತಕಾಲೋ ಲೋಕಾನಾಂ ವ್ಯಕ್ತ ಮೇಕಾರ್ಣವಾ ಮಹೀ ।**
**ಇತಿ ಗೋಪಗಣಾ ವಾಕ್ಯಂ ವ್ಯಾಹರಂತಿ ಭಯಾರ್ದಿತಾಃ ॥ 13 ॥**

**ತೇನೋತ್ಪಾತಾಂಬುವರ್ಷೇಣ ಗಾವೋ ವಿಪ್ರಹತಾ ಭೃಶಮ್ ।**
**ಹಂಬಾರವೈಃ ಕ್ರಂದಮಾನಾಃ ನ ಚೇಲುಃ ಸ್ತಂಬಿತೋಪಮಾಃ ॥ 14 ॥**

**ಕಾಶ್ಚಿನ್ ಪ್ರಾಣಾನ್ ಜಹುಃ ಶ್ರಾಂತಾಃ ನಿಪೇತುಃ ಕಾಶ್ಚಿದಾತುರಾಃ ।**
**ಕಾಶ್ಚಿತ್ ಸವತ್ಸಾ ಪತಿತಾಃ ಗಾವಃ ಶೀಕರ ವೇಜಿತಾಃ ॥ 15 ॥**

**ಕಾಶ್ಚಿದ್ ಆಕ್ರಮ್ಯ ಕ್ರೋಡೇನ ವತ್ಸಾನ್ ತಿಷ್ಠಂತಿ ಮಾತರಃ ॥ 16 ॥**

**ವಿಮುಖಾಃ ಶ್ರಾಂತ ಸಕ್ಥ್ಯಶ್ಚ ನಿರಾಹಾರಾಃ ಕೃಶೋದರಾಃ ।**
**ಪೇತುರಾರ್ತಾ ವೇಪಮಾನಾಃ ಗಾವೋ ವರ್ಷಪರಾಜಿತಾಃ ॥ 17 ॥**

ಭಯಪೀಡಿತರಾದ ಗೋಪಾಲಕರು 'ಪ್ರಪಂಚಕ್ಕೆ ಅವಸಾನ ಕಾಲ ಬಂದಿದೆ. ಪ್ರಪಂಚವೆಲ್ಲವೂ ಅಖಂಡವಾದ ಜಲರಾಶಿಯಲ್ಲಿ ಮುಚ್ಚಿ ಹೋಗುವುದು ಖಂಡಿತ' ಎಂದು ಕೊಂಡರು. ಮಳೆಯಿಂದಾಗಿ ಗೋವುಗಳು ಹಂಬಾರವಗಳಿಂದ ತಮ್ಮ ದುಃಖವನ್ನು ತೋಡಿಕೊಂಡವು. ಕೆಲವು ಕಂಬದಂತೆ ನಿಂತಿದ್ದವು. ಚಲಿಸಲು ಸಾಧ್ಯವಾಗುತ್ತಿರಲ್ಲಿಲ್ಲ. ತೊಡೆ-ಕಾಲುಗಳ ಜಡವಾಗಿದ್ದವು. ಅಯತ್ನವಾಗಿಯೇ ತಲೆಯು ಗೊರಸುಗಳ ಕಡೆಬಾಗಿದ್ದವು. ನೆನೆದು ಹೋಗಿದ್ದ ರೋಮಗಳು ಸೆಟೆದು ನಿಂತಿದ್ದವು. ಕೆಚ್ಚು ಹೊಟ್ಟೆ ಒಣಗಿದ್ದವು. ಕೆಲವು ಮಳೆಯ ಆರ್ಭಟಕ್ಕೆ ಪ್ರಾಣ ತೊರೆದವು. ಕೆಲವು ನರಳುತ್ತಾ ಭೂಮಿಗೊರಗಿದವು.

**ಏವಂ ಚಿಂತಯಿತ್ವಾ ತು ಕೃಷ್ಣಃ ಸತ್ಯಪರಾಕ್ರಮಃ ।**
**ಬಾಹ್ವೋರ್ಬಲಂ ದರ್ಶಯಿಷ್ಯನ್ ಸಮೀಪಂ ತಂ ಮಹೀಧರಮ್ ॥ 18॥**
**ದೋರ್ಭ್ಯಾಮುತ್ಪಾಟಯಾಮಾಸ ಕೃಷ್ಣೋ ಗಿರಿವಾಪರಃ ।**
**ಸ ಧೃತಃ ಸಂಗತೋ ಮೇಘೈಃ ಗಿರಿಃ ಸವ್ಯೇನ ಪಾಣಿನಾ ॥ 19 ॥**
**ಗೃಹಭಾವಂ ಗತಸ್ತತ್ರ ಗೃಹಾಕಾರೇಣ ವರ್ಚಸಾ ॥ 20 ॥**
**ಭೂಮೇರುತ್ಪಾಟ್ಯಮಾನಸ್ಯ ತಸ್ಯ ಶೈಲಸ್ಯ ಸಾನುಷು ।**
**ಶಿಲಾಃ ಪ್ರಶಿಥಿಲಾಃ ಚೇಲುಃ ವಿನಿಷ್ಪೇತುಶ್ಚ ಪಾದಪಾಃ ॥ 21 ॥**

ಹೀಗೆ ಆಲೋಚಿಸಿದ ಕೃಷ್ಣ **ಗೋವರ್ಧನ**[1] ಗಿರಿಯ ಬಳಿ ಬಂದು, ತನ್ನ ಬಾಹು ಬಲವನ್ನು ತೋರಿಸುವವನಾಗಿ ತನ್ನೆರಡೂ ಕೈಗಳಿಂದ ಆ ಪರ್ವತವನ್ನೂ ನಾಯಿಕೊಡೆಯನ್ನು ಕಿತ್ತುವಂತೆ ಕಿತ್ತೆತ್ತಿದನು. ಎಡತೋಳಿನಿಂದ ಮೇಲೆತ್ತಿ ಹಿಡಿಯಲ್ಪಟ್ಟ ಆ ಪರ್ವತವು ಗೋಪಾಲಕರಿಗಾಗಿ ಶ್ರೀಕೃಷ್ಣ ನಿರ್ಮಿಸಿದ ಮಹಾನ್ ಛತ್ರಿಯಂತೆ ತೋರುತ್ತಿತ್ತು. ಗೋಪಾಲಕರನ್ನೆಲ್ಲ ಕರೆದು – ಇಲ್ಲಿ ಬನ್ನಿರಿ. ನಾನು ಎತ್ತಿದ ಬೆಟ್ಟದ ಅಡಿಯಲ್ಲಿ ಮಳೆಗಾಳಿ ಛಳಿ

1. **ಗೋವರ್ಧನ:**

ತಾಭಿರ್ನಿಪೀಡಿತ್ ಮುದೀಕ್ಷ್ಯ ಸ ಕಂಜನಾಭಃ ।
ಸರ್ವಂ ವ್ರಜಂ ಗಿರಿವರಂ ಪ್ರಸಭಂ ದಧಾರ ।
ವಾಮೇನ ಕಂಜದಲ ಕೋಮಲೇನೈವ
ತತ್ರಾಬಿಲಾಃ ಪ್ರವಿವಿಶುಃ ಪಶುಪಾಃ ಸ್ವಗೋಭಿಃ ॥ *–ತಾ.ನಿ. 13/65*

ಇಂದ್ರದೇವನ ಅಹಂಕಾರ ಖಂಡನೆಗಾಗಿಯೇ ಈ ಗಿರ್ಯುದ್ಧರಣ ವಸ್ತುತಃ ಗಿರಿಪೂಜೆ ಮಾಡಿರಿ' ಎಂದರೆ ಹರಿವಾಯುಗಳ ಪೂಜೆ ಮಾಡಿರಿ' ಎಂದರ್ಥ ಗಿರಿಃ ವಾಯುಃ ಸಮುದ್ದಿಷ್ಟಃ – ಕಾಲಕೂಟಗರಣಾದ್ಗಿರಿ:– ಹರಿವಾಯೂ.

ಸ ಚ ಬ್ರಾಹ್ಮಣ ಗಿರ್ಯಾದಿ ನಾಮಾ ವಿಷ್ಣು ರಜಃ ಪರಃ ।
ಏತಸ್ಮಾತ್ ಕಾರಣಾತ್ ಕೃಷ್ಣಂ ಶಕ್ರಸ್ಯ ವಿಮದಾಯ ತು ।
ಗಿರ್ಯಾದಿಸ್ಥಿತಮಾತ್ಮಾನಂ ಪೂಜಯಾಮಾಸ ವಲ್ಲವೈಃ । *–ಭಾ.ತಾ.*

ಗಿರಿಪೂಜೆಯೆಂದು ತಾನೆ ಅನ್ನಾದಿಭಕ್ಷಣ ಮಾಡಿದ್ದು ಸುಳ್ಳಾಯಿತಲ್ಲವೆ? ಎನ್ನುವಂತಿಲ್ಲ. **'ಗಿರುತಿ ನನ್ನಾದಿಕಂ ಇತಿ ಗಿರಿ,'** ಎಂಬಂತೆ ಪಾದಗಳಿಂದ ನದಿಗಳನ್ನು ಹೊರಚೆಲ್ಲಿದ ಆ ತೀರ್ಥಪಾದನೆ ಗಿರಿಯು. ಜಡವಾದ ಪರ್ವತಕ್ಕಾಗಲೀ

ಒಂದೂ ಇಲ್ಲ. ನಿರ್ಭಯವಾಗಿ ಎಲ್ಲರೂ ಬಂದು ನಿಂತುಕೊಳ್ಳಿರಿ. ನಾನು ನನ್ನ ಕಿರಿಬೆಟ್ಟಿನ ಮೇಲೆ ಈ ಪರ್ವತ ಹಿಡಿದಿದ್ದೇನೆ. ಅದು ಬೀಳುವುದೆಂಬ ಭಯ ಬೇಡಿರಿ. ನಿಮ್ಮ ನಿಮ್ಮ ವಸ್ತುಗಳೊಂದಿಗೆ ಬಂದು ಆಶ್ರಯ ಪಡೆಯಿರಿ' ಎಂದನು. ಆ ಸಮಯದಲ್ಲಿ ವಾಸ ಮಾಡುವ ಮನೆಯಂತೆ ಇರುವಂತೆ ಇತ್ತು. ಪರ್ವತವನ್ನು ಕಿತ್ತೆತ್ತಿದ ರಭಸಕ್ಕೆ ಅನೇಕ ಬಂಡೆಗಳು ಕಳಚಿ ಕೆಳಗುರುಳಿದವು. ವೃಕ್ಷಗಳೆಲ್ಲವೂ ನೆಲಕ್ಕುರುಳಿದವು. ಪುಷ್ಪಗಳೆಲ್ಲವೂ ಉದುರಿ ಕೃಷ್ಣನಿರುವ ಸಂಪುಟಕ್ಕೆ ಸಲ್ಲಿಸಿರುವ ಪುಷ್ಪದಂತೆ ಕಂಡವು. ಗೋಪಾಲಕರೆಲ್ಲರನ್ನು ಸಮುದ್ರದಿಂದ ಸಾಗಿಸಲು ಕೃಷ್ಣ ತಯಾರಿಸಿದ ದೊಡ್ಡ ಹಡಿಗಿನಂತಿತ್ತು. ಇದೊಂದು ಹಾರುವ ದೊಡ್ಡ ತಟ್ಟೆಯಂತಿತ್ತು.

ಕೆಲವು ಹಸುಗಳು ತಮ್ಮ ವತ್ಸಗಳನ್ನು ವಾತ್ಸಲ್ಯದಿಂದ ಕಾಲುಗಳ ಮಧ್ಯದಲ್ಲಿ ಸೇರಿಸಿಕೊಂಡಿದ್ದವು. ಕರುಗಳಿಂದ ವಿಮುಖವಾಗಿದ್ದ ಗೋವುಗಳು ದುಃಖದಿಂದ ಇದ್ದವು. ಗೋವುಗಳ ಮೊಣಕಾಲು ಮುರಿದಿದ್ದವು. ಥರಥರನೆ ನಡುಗುತ್ತಾ ಆಹಾರವಿಲ್ಲದೆ ಸಂಕಟದಿಂದ ಭೂಮಿಯಲ್ಲಿ ಬಿದ್ದವು.

ಕರುಗಳೆಲ್ಲವೂ ತಮ್ಮ ಕತ್ತನ್ನೆತ್ತಿ ಶ್ರೀಕೃಷ್ಣನ ಕಡೆ ನೋಡತೊಡಗಿದ್ದವು. ಗೋಹಿತನಾದ ನೀನು ನಮ್ಮನ್ನು ರಕ್ಷಿಸಲಾರೆಯ? ಎನ್ನುವಂತಿತ್ತು.

## ಶ್ರೀಕೃಷ್ಣನ ಕ್ರೋಧ

**ಗವಾಂ ತತ್ ಕದನಂ ದೃಷ್ಟ್ವಾ ದುರ್ದಿನಾಗಮನಜಂ ಮಹತ್ ।**
**ಗೋಪಾಂಶ್ಚಾಸನ್ನನಿಧನಾನ್ ಕೃಷ್ಣಃ ಕೋಪಂ ಸಮಾದಧೇ ॥ 22 ॥**
**ಸ ಚಿಂತಯಿತ್ವಾ ಸಂರಬ್ಧೋ ದೃಷ್ಟೋ ಯೋಗೋ ಮಯೇತಿ ಚ ।**
**ಆತ್ಮಾನ ಮಾತ್ಮಾನಾವಾಕ್ಯಮಿದಮೂಚೇ ಪ್ರಿಯಂವದಃ ॥ 23 ॥**
**ಅದ್ಯಾಹಂ ಇಮಮುತ್ಪಾಟ್ಯ ಸಕಾನನವನಂ ಗಿರಿಮ್ ।**
**ಕಲ್ಪಯೇಯಂ ಗವಾಂ ಸ್ಥಾನಂ ವರ್ಷತ್ರಾಣಾಯ ದುರ್ಧರಮ್ ।**
**ತ್ರಾಸ್ಯತೇ ಸವ್ರಜಾ ಗಾ ವೈ ಮದ್ವಶ್ಯಶ್ಚ ಭವಿಷ್ಯತಿ ॥ 24 ॥**

ಮಳೆಯ ಗಾಳ ನೀರಿನ ಪ್ರವಾಹದಲ್ಲಿ ಸಿಕ್ಕಿಕೊಂಡು ತೇಲಿ ಹೋಗುತ್ತಿರುವ ಗೋವುಗಳು ಕರುಗಳು ಗೋಪರು ಮಕ್ಕಳು ಪಾತ್ರೆ ಪಡಗಗಳು. ದನಕರುಗಳ

ದೀನಧ್ವನಿ. ಗೋಪ ಗೋಪಾಲಕರ ಹಾಹಾಕಾರ ಧ್ವನಿ ಕೇಳಿದ ಶ್ರೀಕೃಷ್ಣನು ಈಗ ತಾನು ಏನು ಮಾಡಬೇಕೆಂದು ಆಲೋಚಿಸಿ– "ತನಗೆ ಸಲ್ಲಬೇಕಾದ ಪೂಜೆ ತಪ್ಪಿದೆಯೆಂದು ಇಂದ್ರನಿಗೆ ಕೋಪ ಬಂದದ್ದಕ್ಕಾಗಿ ಗೋಪಾಲರನ್ನೂ ಗೋವುಗಳನ್ನು ನಾಶಮಾಡಲೆಂದೆ ಈ ಭಯಂಕರ ಮಳೆ ಸೃಷ್ಟಿಸಿದ್ದಾನೆ. ಹೇಗಾದರೂ ಮಾಡಿ, ಈಗ ನಾನು ನನ್ನನ್ನೆ ನಂಬಿರುವ ಗೋಗೋಬಾಲಕರನ್ನು ರಕ್ಷಿಸಬೇಕು. ಎಂದು ಚಿಂತಿಸಿ, ನಂದಾದಿ ಗೋಪಾಲಕರನ್ನೂ ರಕ್ಷಿಸಲು ನನಗೊಂದು ಉಪಾಯ ಹೊಳೆಯಿತು.

ನಾನೀಗಲೇ ಕಾನನಗಿರಿಗಳಿಂದ ಸಂಪನ್ನವಾಗಿರುವ ಈ ಗೋವರ್ಧನ ಪರ್ವತವನ್ನೇ ಬುಡಸಹಿತವಾಗಿ ಮೇಲೆತ್ತಿ ಕೊಡೆಯಂತೆ ಮಾಡಿ ಗೋಗೋಪಾಲಕರನ್ನು ರಕ್ಷಿಸುತ್ತೇನೆ, ನಾನು ಕಿತ್ತೇತ್ತುವ ಗೋವರ್ಧನ ಪರ್ವತದ ಕೆಳಭಾಗವು ಭವನದಂತೆ ರೂಪತಾಳ ಗೋ-ಗೋಪಿ-ಗೋಪರನ್ನು ರಕ್ಷಿಸುತ್ತದೆ. ಹಾಗೂ ಇದು ನನ್ನ ವಶದಲ್ಲಿಯೇ ಇರುತ್ತದೆ.' ಎಂದು ಆಲೋಚಿಸಿ,

**ನ ಮೇಘಾನಾಂ ಪ್ರವೃಷ್ಟಾನಾಂ ನ ಶೈಲಸ್ಯಾಶ್ಮ ವರ್ಷಿಣಃ ।**
**ವಿವಿದುಸ್ತೇ ಜನಾ ರೂಪಂ ವಾಯೋಸ್ತಸ್ಯ ಚ ಗರ್ಜತಃ ॥ 25 ॥**

**ಆಪ್ಲುತೋಯಂ ಗಿರಿಃ ಪಕ್ಷೈರಿತಿ ವಿದ್ಯಾಧರೋರಗಾಃ ।**
**ಗಂಧರ್ವಾಪ್ಸರಸಶ್ಚೈವ ವಾಚೋ ಮುಂಚಂತಿ ಸರ್ವಶಃ ॥ 26 ॥**

**ಬಾಹೂಪಧಾನೇ ಕೃಷ್ಣಸ್ಯ ಪ್ರಸುಪ್ತ ಇವ ಖೇ ಗಿರಿಃ ॥ 27 ॥**

ಕೃಷ್ಣನ ಮಾತನ್ನು ಕೇಳಿ ಎಲ್ಲ ಗೋಗೋಪೀ ಗೋಪಾಲಕರು ತಮ್ಮ ದನಕರುಗಳೊಂದಿಗೆ ಕೃಷ್ಣನು ಹಿಡಿದಿದ್ದ ಗೋವರ್ಧನ ಪರ್ವತದ ಕೆಳಗೆ ಬಂದು ನಿಂತರು. ಅಲ್ಲಿ ಒಂದು ಹನಿ ಮಳೆಯಿಲ್ಲ. ಬೆಚ್ಚಗಿರುವ ವಾತಾವರಣ, ಸುತ್ತಲೂ ಮಳೆ ಸುರಿಯುತ್ತಿದ್ದರೂ ಜಲವೃಷ್ಟಿಯನ್ನಾಗಲೀ, ಪರ್ವತದಿಂದ ಬೀಳುತ್ತಿದ್ದ ಕಲ್ಲು ಮಳೆಯನ್ನಾಗಲೀ, ಭಯಂಕರ ಗಾಳಿಯ ಶಬ್ಧವನ್ನಾಗಲೀ ಅರಿಯಲ್ಲಿಲ್ಲ. – ಏಳು ವರ್ಷದ ಬಾಲಕ ಕೈಯ್ಯಲ್ಲಿ ಏಳು ಯೋಜನ ಪರ್ವತ ಏಳುದಿನ ಪರ್ಯಂತ ಹೊತ್ತಿರುವ ಇವನನ್ನು ನೋಡುತ್ತಾ ಭಕ್ತಿಭಾವದಿಂದ ಯಾವುದರ ಗಮನವೂ ಇರಲ್ಲಿಲ್ಲ. ಪರ್ವತವು ಪರ್ವತಾಕಾರದ ಮೇಘಗಳಿಂದ

ಕೂಡಿ ರೆಕ್ಕೆಯನ್ನು ಬಿಚ್ಚಿ ನಾಟ್ಯವಾಡುತ್ತಿದ್ದ ಮಯೂರವೊ ಎಂಬಂತಿತ್ತು. ಮೇಘರೂಪವಾದ ರೆಕ್ಕೆಗಳಿಂದ ಆಕಾಶಕ್ಕೆ ಹಾರುವುದೊ ಎಂದು ಗಂಧರ್ವಾಪ್ಸರಸೆಯರು ತಮ್ಮಲ್ಲಿ ಮಾತನಾಡಿಕೊಂಡರು. ಪರ್ವತವೂ ಸುಸ್ಥಿರವಾಗಿ ಅಂಗೈಯಲ್ಲಿ ನಿಂತಿರುವಾಗ ಸುವರ್ಣಾದಿ ಧಾತುಗಳು ಹೊರಬಂದವು. ಪರ್ವತದ ಕೆಲವು ಭಾಗ ಬಿದ್ದು ಹೋಗಿದ್ದರೆ ಮತ್ತೆ ಮೇಘಗಳಲ್ಲಿ ಲೀನವಾಗಿತ್ತು. ಪರ್ವತದಲ್ಲಿದ್ದ ಸಿಂಹಗಳು ಮೇಘದಂತೆಯೆ ಘರ್ಜಿಸುತ್ತಿದ್ದವು. ಕೆಲವು ಸಿಂಹಗಳು ಮೊಸರು ಕಡೆಯುವಾಗ ಉಂಟಾಗುವ ಶಬ್ಧದಂತೆ ಗುರುಗುಟ್ಟುತ್ತಿದ್ದವು. ಈ ಪರ್ವತ ಶ್ರೀಕೃಷ್ಣನೆ ಹಿಡಿದ ಛತ್ರಿಯೋ ಎಂಬಂತಿತ್ತು. ಮೌನವಾಗಿದ್ದ ಪರ್ವತವು ಗುಹೆಗಳೆಂಬ ನೇತ್ರಗಳು ಮೋಡದಿಂದ ಆವರಿಸಿದ್ದರಿಂದ ಕಣ್ಣುಮುಚ್ಚಿದಂತಿತ್ತು. ಶ್ರೀಕೃಷ್ಣನ ತೋಳೆಂಬ ದಿಂಬನ್ನಾಶ್ರಯಿಸಿ ಮಲಗಿದಂತಿತ್ತು. ಭಯದಿಂದ ಪಕ್ಷಿಗಳೆಲ್ಲ ಹಾರಿದ್ದವು. ಕೇಕಾರವಶೂನ್ಯವೂ ಇಲ್ಲದ ಪರ್ವತವು ಆಧಾರವಿಲ್ಲದೆ ಆಕಾಶದಲ್ಲಿರುವಂತೆ ತೋರುತ್ತಿತ್ತು.

ವರ್ಷಾಘಾತಗಳಿಂದ ಪರ್ವತ, ಗಿಡಮರಗಳು ಕಂಪಿಸುತ್ತಿರುವಾಗ ಪರ್ವತ ಶೀತದಿಂದಾಗಿ ವಿಷಮ ಶೀತಜ್ವರದಿಂದ ನಡುಗುತ್ತಿದೆಯೋ ಎಂಬಂತಿತ್ತು.

**ಉತ್ತಮಾಂಗಗತಾಸ್ತಸ್ಯ ಮೇಘಾಃ ಪವನವಾಹನಾಃ ।**
**ತ್ವರ್ಯಮಾಣಾ ಮಹೇಂದ್ರೇಣ ತೋಯಂ ಮುಮುಚುರಕ್ಷಯಮ್ ॥28॥**

**ಸ ಲಂಬಮಾನಃ ಕೃಷ್ಣಸ್ಯ ಸಘನೋ ಗಿರಿಃ ।**
**ಚಕ್ರಾರೂಢ ಇವಾಭಾತಿ ದೇಶೋ ನೃಪತಿಪೀಡಿತಃ ॥ 29 ॥**

ಪರ್ವತದ ತುದಿಯಲ್ಲಿ ಇಂದ್ರಪ್ರೇರಿತ ಮೇಘಗಳು ಧಾರಾಕಾರ ಮಳೆ ಸುರಿಸುತ್ತಿವೆ. ಪರ್ವತವು ಕೃಷ್ಣ ಕೈಯಲ್ಲಿ ಇದ್ದು ಇಂದ್ರನೆಂಬ ಶತ್ರುವಿನ ಮೇಲೆ ಪ್ರಯೋಗ ಮಾಡಲಿರುವ ಚಕ್ರಪಾಣಿಯ ಚಕ್ರದಂತೆ ಇತ್ತು.

**ನಿವೇಶ್ಯ ತಂ ಕರೇ ಶೈಲಂ ತೋಲಯಿತ್ವಾ ಚ ಸಸ್ಮಿತಮ್ ।**
**ಪ್ರೋವಾಚ ಗೋಪ್ತಾ ಗೋಪಾನಾಂ ಪ್ರಜಾಪತಿರಿವ ಸ್ಥಿತಃ ॥ 30 ॥**

**ಏತದ್ ದೇವೈರಸಂಭಾವ್ಯಂ ದಿವ್ಯೇನ ವಿಧಿನಾ ಮಯಾ ।**
**ಕೃತಂ ಗಿರಿಗೃಹಂ ಗೋಪಾಃ ನಿರ್ವಾತಂ ಶರಣಂ ಗವಾಮ್ ॥ 31 ॥**

ಸರ್ವಸಮರ್ಥನಾದ ಕೃಷ್ಣನು ಗೋವರ್ಧನ ಪರ್ವತವನ್ನು ತನ್ನ ಅಂಗೈಯಲ್ಲಿಟ್ಟುಕೊಂಡು ಅದು ಬೀಳದ ರೀತಿಯಲ್ಲಿ ತೂಗಿ ನೋಡುತ್ತಾ ಹೀಗೆಂದನು.

ಗೋಪಾಲಕರೇ! ನಾನು ದಿವ್ಯವಾದ ವಿಧಿಯನ್ನು ಸರಿಸಿ ಅಲೌಕಿಕವಾದ ಉಪಾಯದಿಂದ ಈ ಗಿರಿಯನ್ನು ವಾಸಗೃಹವನ್ನಾಗಿ ಮಾಡಿರುವೆನು. ಇದು ದೇವತೆಗಳಿಗೂ ದುಸ್ಸಾಧ್ಯವೆಂದೆ ತಿಳಿಯಿರಿ. ಇಲ್ಲಿ ಮಳೆಗಾಳಿಗಳ ಭಯವಿಲ್ಲ. ಇದು ಐದು ಯೋಜನ ವಿಶಾಲ ಒಂದು ಯೋಜನ ಅಗಲವಿದೆ. ಇದರಲ್ಲಿ ನಿಮ್ಮ ಗೋವುಗಳಿಗೆ ಬೇರೆ ಬೇರೆ ಸ್ಥಳ ವ್ಯವಸ್ಥೆ ಮಾಡಿ. ನಿಮ್ಮ ನಿಮ್ಮ ಸ್ನಾನಪಾನ ಶಯನಾಶನಗಳಿಗೂ ಅನ್ಯಾನ್ಯ ಸ್ಥಾನ ವ್ಯವಸ್ಥೆ ಮಾಡಿಕೊಳ್ಳಿರಿ. ನಾನು ಇಚ್ಛಿಸಿದರೆ ಹದಿನಾಲ್ಕು ಲೋಕಗಳನ್ನೂ ರಕ್ಷಿಸಬಲ್ಲೆ. ಅತ್ಯಂತ ಚಿಕ್ಕದಾದ ಒಂದು ಗೋವ್ರಜ ರಕ್ಷಣೆ ಮಾಡಲಾರೆನೆ?

**ತತಃ ಕಿಲಕಿಲಾಶಬ್ದೋ ಗವಾಂ ಹಂಬಾರವೈಃ ಸಹ ।**
**ಗೋಪಾನಾಂ ತುಮುಲೋ ಜಜ್ಞೇ ಮೇಘನಾದಶ್ಚ ಬಾಹ್ಯತಃ ॥ 32 ॥**

**ಪ್ರಾವಿಶಂತ ತತೋ ಗಾವಃ ಗೋಪೈಃ ಯೂಥಪ್ರಕಲ್ಪಿತಾಃ ।**
**ತಸ್ಯ ಶೈಲಸ್ಯ ವಿಪುಲಂ ಪ್ರದರಂ ಗಹ್ವರೋದರಮ್ ॥ 33 ॥**

**ಕೃಷ್ಣೋಽಪಿ ಮೂಲೇ ಶೈಲಸ್ಯ ಶೈಲಸ್ತಂಬ ಇವೋಚ್ಛ್ರಿತಃ**
**ದಧಾರೈಕೇನ ಹಸ್ತೇನ ಶೈಲಂ ಪ್ರಿಯಮಿವಾತಿಥಿಮ್ ॥ 34 ॥**

ಶ್ರೀಕೃಷ್ಣನು ಹೀಗೆ ಹೇಳಿದ ಕೂಡಲೇ ಗೋಪಾಲಕರ ಬಾಯಿಂದ ಸಂತೋಷದಿಂದಾಗುವ ಕಿಲಕಿಲಶಬ್ಧವೂ, ಗೋವುಗಳ ಹಂಬಾರವವು ಕೇಳಿ ಬಂದಿತು. ಹೊರಗಡೆ ಮೇಘಗಳ ಆರ್ಭಟ ನಡದೇ ಇತ್ತು. ಗೋಪರು ಹಿಂಡು ಹಿಂಡಾಗಿ ಕಲ್ಪಿಸಿದ ಗೋವುಗಳು ಒಂದೊಂದಾಗಿ ವಿಶಾಲವೂ ಗುಹಾರೂಪವೂ ಆಗಿದ್ದ ಗೋವರ್ಧನ ಪರ್ವತದ ತಳಭಾಗ ಸೇರಿದವು. ಈ ಪರ್ವತಕ್ಕೆ ಆಧಾರಸ್ತಂಬದಂತೆ ಶ್ರೀಕೃಷ್ಣನೆ ಇದ್ದನು. ಗೋವರ್ಧನ ಗಿರಿಯು ಗೋವರ್ಧನನೆಂಬ ಒಬ್ಬ ಅತಿಥಿಯನ್ನು ಹಿಡಿದಂತೆ ಒಂದೇ ಹಸ್ತದಿಂದ ಧರಿಸಿದ್ದನು.

ನಂತರ ಭೀಕರ ಗಾಳಿ ಮಳೆಗಳಿಂದ ಆತುರರಾಗಿದ್ದ ಗೋಪಾಲಕರು ತಮ್ಮ ಪಾತ್ರೆ ಮೊದಲಾದ ಸರಂಜಾಮುಗಳೊಂದಿಗೆ, ಚಕ್ಕಡಿಗಳೊಂದಿಗೆ ಗಿರಿಯಿಂದ ನಿರ್ಮಿಸಿದ್ದ ಗೃಹಕ್ಕೆ ಪ್ರವೇಶ ಮಾಡಿದರು.

**ಅತಿದೈವಂ ತು ಕೃಷ್ಣಸ್ಯ ದೃಷ್ಟ್ವಾ ತತ್ ಕರ್ಮ ವಜ್ರಭೃತ್ ।**
**ಮಿಥ್ಯಾಪ್ರತಿಜ್ಞಃ ಜಲದಾನ್ ವಾರಯಾಮಾಸ ವೈ ವಿಭುಃ ॥ 35 ॥**

**ಸಪ್ತರಾತ್ರೇ ನಿವೃತ್ತೇ ಧರಣ್ಯಾಂ ವಿಗತೋತ್ಸವಃ ।**
**ಜಗಾಮ ಸಂವೃತೋ ಮೇಘೈಃ ವೃತ್ರಹಾ ಸ್ವರ್ಗಮುತ್ತಮಮ್ ॥ 36 ॥**

ಶ್ರೀಕೃಷ್ಣನು ತನ್ನ ಅಂಗೈಯ ಬೆರಳ ತುದಿಯಲ್ಲಿ ಕೊಡೆಗಿಂತ ಹಗುರವಾಗಿ ನಿಂತಿತ್ತು. ಗೋಪ ಗೋಪಿಯರಿಗೆ ಅಮಾನುಷ ಮಹಿಮೆಯನ್ನು ನೋಡಿ ಸಂತೋಷ, ಆಶ್ಚರ್ಯ ಮತ್ತೊಂದೆಡೆ ಅಭಿಮಾನ ಕೃತಜ್ಞತೆ ಹೊಂದಿ ಕಣ್ಣು ಮಿಟುಕಿಸದೆ ಅವನನ್ನೆ ನೋಡುತ್ತಿದ್ದರು. ಮೇಘಗಳು ಏಳು ಹಗಲು-ರಾತ್ರಿ ನಿರಂತರ, ಮಳೆಯನ್ನೇನೋ ಸುರಿಸಿದವು. ಇಂದ್ರನ ಆದೇಶ ಪಾಲಿಸಿದರೆ ವಿನಃ ಅವರ ಪ್ರಯತ್ನವೆಲ್ಲ ವ್ಯರ್ಥವಾಯಿತು. ನನಗೆ ವಿರುದ್ಧರಾದ ಗೋಪಾಲಕರನ್ನೆಲ್ಲ ವೃಷ್ಟಿಯಿಂದಲೇ ಸರ್ವನಾಶ ಮಾಡುವ ಪ್ರತಿಜ್ಞೆ ಭಂಗವಾಯಿತು. ಮೇಘಗಳಿಗೆಲ್ಲ ಮಳೆ ಸುರಿಸದಿರುವಂತೆ ಆದೇಶ ಮಾಡಿದನು. ಇಂದ್ರನು ಸಪ್ತರಾತ್ರ ಮಳೆಸುರಿಸಿ ಆನಂದರಹಿತನೂ, ನಿರುತ್ಸಾಹಿಯೂ ಆಗಿ ಸ್ವರ್ಗಕ್ಕೆ ಹಿಂತಿರುಗಿದನು.

**ಗಾವಃ ತೇನೈವ ಮಾರ್ಗೇಣ ಪರಿಜಗ್ಮುರ್ಯಥಾಗತಮ್ ।**
**ಸ್ವಂ ಚ ಸ್ಥಾನಂ ತತೋ ಘೋಷಃ ಪ್ರತ್ಯಯಾತ್ ಪುನರೇವ ಸಃ ॥ 37 ॥**

**ಕೃಷ್ಣೋಽಪಿ ತಂ ಗಿರಿಶ್ರೇಷ್ಠಂ ಸ್ವಸ್ಥಾನೇ ಸ್ಥಾವರಾಮಾತ್ಮವಾನ್ ।**
**ಪ್ರೀತೋ ನಿವೇಶಯಾಮಾಸ ಶಿವಾಯ ವರದೋ ವಿಭುಃ ॥ 38 ॥**

ಶ್ರೀಕೃಷ್ಣನು ಅತಿವೃಷ್ಟಿಯ ಅತಿಕಷ್ಟದಿಂದ ಗೋಗಣವನ್ನು ಗೋಪಾಲಕುಲವನ್ನು ರಕ್ಷಣೆ ಮಾಡಿದ್ದನ್ನು ನೋಡಿ ಇಂದ್ರದೇವನ ಅಸುರಾವೇಶ ಇಳಿದು ಮದ ಇಳಿಯಿತು. ಮೋಡಗಳೆಲ್ಲವೂ ಖಾಲಿಯಾಗಿ ಆಕಾಶ ಸ್ವಚ್ಛವಾಯಿತು. ಇಂದ್ರನ ಕತ್ತಲೆ ಸರಿಯುತ್ತಿದ್ದಂತೆ ಆಕಾಶದ

ಕತ್ತಲೆಯೂ ತೊಳಗಿತು. ಗೋಗೋಪಾಲಕರೆಲ್ಲರೂ ಅಲ್ಲಿಂದ ಹೊರಟು ತಮ್ಮ ತಮ್ಮ ಸ್ಥಾನ ಸೇರಿದರು.

ಅನಂತರ ಶ್ರೀಕೃಷ್ಣನು ಆ ಗೋವರ್ಧನ ಪರ್ವತವನ್ನು ಅದು ಇದ್ದ ಸ್ಥಳದಲ್ಲಿಯೇ ಪ್ರತಿಷ್ಠಾಪಿಸಿದನು. ಮಹಾಮಹಿಮೆಯನ್ನು ನೋಡಿದ ಗೋವಳರ ಕೌತುಕಕ್ಕೆ ಅಂತ್ಯವಿಲ್ಲದಾಯಿತು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಗೋವರ್ಧನ ಉದ್ಧರಣವೆಂಬಲ್ಲಿ
ಹದಿನೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ನವದಶೋಽಧ್ಯಾಯಃ

## ಸಹಸ್ರಾಕ್ಷನ ಅನಂತಾಕ್ಷನ ದರ್ಶನ

*ವೈಶಂಪಾಯನ ಉವಾಚ-*

**ಧೃತಂ ಗೋವರ್ಧನಂ ದೃಷ್ಟ್ವಾ ಪರಿತ್ರಾತಂ ಚ ಗೋಕುಲಮ್ ।**
**ಕೃಷ್ಣಸ್ಯ ದರ್ಶನಂ ಶಕ್ರೋ ರೋಚಯಾಮಾಸ ವಿಸ್ಮಿತಃ ॥ 1 ॥**
**ಸ ನಿರ್ಜಲಾಂಬುದಾಕಾರಂ ಮತ್ತಂ ಮದಜಲೋಕ್ಷಿತಮ್ ।**
**ಆರುಹ್ಯ ಐರಾವತಂ ನಾಗಮಾಜಗಾಮ ಮಹೀತಲಮ್ ॥ 2 ॥**

ಶ್ರೀಕೃಷ್ಣನು ಗೋವರ್ಧನಗಿರಿ ಎತ್ತಿ ಗೋವ್ರಜವನ್ನು ರಕ್ಷಿಸಿದ್ದನ್ನು ಸಹಸ್ರಾಕ್ಷನು ತನ್ನ ಸಾವಿರ ಕಣ್ಣಿನಿಂದ ನೋಡಿ ಆಶ್ಚರ್ಯ ಹೊಂದಿದನು. ಅಸುರಾವೇಶದಿಂದ ಮೊದಲು ಕಾಣದಿದ್ದ ಹರಿ ಮಹಿಮೆ ಈಗ ಕಣ್ಣಾರೆ ಕಂಡ ಇಂದ್ರದೇವನಿಗೆ ದಾಮೋದರನಲ್ಲಿ ಭಕ್ತಿ ಹುಟ್ಟಿತು. ಅಲ್ಲಿಯವರೆಗೂ ಹೋಗಿ ಕೃಷ್ಣನನ್ನು ಕಂಡು ಬರಬೇಕೆಂದು ಕುತೂಹಲವೇರ್ಪಟ್ಟಿತು. ಅದಕ್ಕಾಗಿ ಅವನು ನೀರಿಲ್ಲದ ಶರದೃತುವಿನ ನೀರದಂತೆ ಅಚ್ಚ ಬಿಳಿ ಬಣ್ಣದ ಐರಾವತವನ್ನೇರಿ ಭೂಲೋಕಕ್ಕೆ ಬಂದನು. ಶ್ರೀಕೃಷ್ಣನಾದರೂ ಗೋವರ್ಧನ ಗಿರಿಯ ಬಳಿ ಗೋವುಗಳನ್ನು ಮೇಯಿಸುತ್ತಾ ಕ್ರೀಡಿಸುತ್ತಿರುವ ನೀಲಕಮಲದಂತೆ ನೀಲಮೇಘಶ್ಯಾಮನಾದ, ಶ್ರೀವತ್ಸಲಾಂಛನಯುಕ್ತನೂ, ಆದರೆ ದನಗಾಹಿ ಗೋಪಾಲಕನಂತೆ ತನ್ನನ್ನೂ ತೋರಿಸಿಕೊಳ್ಳುತ್ತಿರುವ ಶ್ರೀಕೃಷ್ಣನನ್ನು ಸಹಸ್ರಕಣ್ಣುಗಳಿಂದ ಮನಸೇಚ್ಛೆ ನೋಡಿದನು.

**ದೃಷ್ಟ್ವಾ ಚೈನಂ ಶ್ರಿಯಾ ಜುಷ್ಟಂ ಮರ್ತ್ಯಲೋಕೇಽಮರೋಪಮಮ್ ।**
**ಸೂಪವಿಷ್ಟಂ ಶಿಲಾಪೃಷ್ಠೇ ಶಕ್ರಃ ಸವ್ರೀಡಿತೋಽಭವತ್ ॥ 3 ॥**

**ತಸ್ಯೋಪವಿಷ್ಟಸ್ಯ ಮುಖಂ ಪಕ್ಷಾಭ್ಯಾಂ ಪಕ್ಷಿಪುಂಗವಃ ।**
**ಅಂತರ್ಧಾನಂ ಗತಚ್ಛಾಯಾಂ ಚಕಾರೋರಗ ಭೋಜನಃ ॥ 4 ॥**

ಇಂದ್ರದೇವನಿಗೆ ಆ ದೇವತಾ ಸಾರ್ವಭೌಮನ ಗೋಪಾಲರೂಪವನ್ನು ಕಂಡು ಅವನ ಸಾವಿರ ಕಣ್ಣುಗಳೂ ಅಚ್ಚರಿಯಿಂದ ಅರಳಿದವು. ಆಗಲೇ ಗರುಡನು ಗಗನದಲ್ಲಿ ನಿಂತುಕೊಂಡು, ತನ್ನ ಎರಡೂ ರೆಕ್ಕೆಗಳನ್ನು ಮೇಲೆತ್ತಿ ಕೃಷ್ಣನ ಶರೀರದ ಮೇಲೆ ಬಿಸಿಲು ಬೀಳದಂತೆ ಬಿಡಿಸಿ ಹಿಡಿದಿದ್ದನು. ಇಂದ್ರನನ್ನು ನೋಡಿದ ಕೂಡಲೇ ಮರೆಯಾದ. ಇಂದ್ರನು ಐರಾವತದಿಂದ ಇಳಿದು ಬಂದ ದೇವೇಂದ್ರನು ದಿವ್ಯ ಮಾಲಿಕೆ, ದಿವ್ಯಘಂಧ, ವಿದ್ಯುತ್ತಿನಂತೆ ಪ್ರಕಾಶಮಾನವಾದ ಕಿರೀಟ–ಕುಂಡಲಗಳಿಂದಲೂ, ಐದು ಪುಷ್ಪಗುಚ್ಛಗಳಿಂದ ಮನೋಹಾರಿ ಹಾರ ಧರಿಸಿದ್ದನು. ವಿಕಸಿತ ಕಮಲಗಳಂತೆ ಇರುವ, ಇಚ್ಛೆಯಂತೆ ಬೇಕಾದ ರೂಪಧರಿಸಬಲ್ಲ ಸಾವಿರ ಕಣ್ಣುಗಳಿಂದ ಶ್ರೀಕೃಷ್ಣನನ್ನೆ ನೋಡುತ್ತಾ ವಿನೀತನಾಗಿ ಹೀಗೆಂದನು.

*ಇಂದ್ರ ಉವಾಚ–*

**ಕೃಷ್ಣ ಕೃಷ್ಣ ಮಹಾಬಾಹೋ ಜ್ಞಾತೀನಾಂ ನಂದಿವರ್ಧನ ।**
**ಅತಿದಿವ್ಯಂ ಕೃತಂ ಕರ್ಮ ತ್ವಯಾ ಪ್ರೀತಿಮತಾ ಗವಾಮ್ ॥ 5 ॥**
**ಮಯೋತ್ಸೃಷ್ಟೇಷು ಮೇಘೇಷು ಯುಗಾಂತಾವರ್ತಕಾರಿಷು ।**
**ಯತ್ ತ್ವಯಾ ರಕ್ಷಿತಾ ಗಾವಃ ತೇನಾಸ್ಮಿ ಪರಿತೋಷಿತಃ ॥ 6 ॥**
**ಸ್ವಾಯಂಭುವೇನ ಯೋಗೇನ ಯಶ್ಚಾಯಂ ಪರ್ವತೋತ್ತಮಃ ।**
**ಧೃತೋ ವೇಶ್ಮವದಾಕಾಶೇ ಕೋ ಹ್ಯೇತೇನ ನ ವಿಸ್ಮಯೇತ್ ॥ 7 ॥**
**ಪ್ರತಿಷಿದ್ಧೇ ಮಮ ಮಹೇ ಮಮೇಯಂ ರುಷಿತೇನ ವೈ ।**
**ಅತಿವೃಷ್ಟಿಃ ಕೃತಾ ಕೃಷ್ಣ ಗವಾಂ ವೈ ಸಾಪ್ತರಾತ್ರಿಕೀ ॥ 8 ॥**

ಶ್ರೀಕೃಷ್ಣನೇ! ನೀನು ಸಾಕ್ಷಾತ್ ಪರಮಾತ್ಮನೇ ಆಗಿದ್ದು ಭೂಭಾರಹರಣಕ್ಕಾಗಿ

ಭೂಮಿಯಲ್ಲಿ ಅವತರಿಸಿರುವೆ. ಇದನ್ನು ಮರೆತು ವಿವೇಕಶೂನ್ಯನಾಗಿ ನನ್ನಿ ಉತ್ಸವವನ್ನು ನೀನು ನಿಲ್ಲಿಸಿದೆಯೆಂಬ ಕೋಪದಿಂದ ಪ್ರಲಯಕಾಲದ ಮೇಘಗಳಿಗೆ ಆದೇಶ ನೀಡಿ ಗೋಪಾಲಕರನ್ನೆಲ್ಲ ನಾಶ ಮಾಡಲು ಯತ್ನಿಸಿದೆ. ಆದರೆ ಅವತಾರಿ ಪುರುಷನಾದ ನೀನು ಬೃಹದಾಕಾರದ ಗಿರಿಯನ್ನು ಬಾಲಕನೊಬ್ಬನು ನಾಯಿಕೊಡೆ ಕಿತ್ತುವಂತೆ ಕಿತ್ತಿ, ಬೆರಳ ಮೇಲೆತ್ತಿ ಹಿಡಿದು ಎಲ್ಲರನ್ನೂ ಕುತ್ತಿನಿಂದ ಪಾರು ಮಾಡಿದೆ. ಏಳು ವರ್ಷದ ಬಾಲಕ ಗುಡ್ಡವನ್ನು ಕಡ್ಡಿಯಂತೆ ಎತ್ತಿ ಏಳುದಿನಗಳವರೆಗೆ ನೆಗಹಿ ಹಿಡಿದ ಅದ್ಭುತ ಮಹಿಮೆ ಕಂಡು ಯಾರು ತಾನೆ ಆಶ್ಚರ್ಯಪಡುವುದಿಲ್ಲ. ಅಜ್ಞಾನದಿಂದ ಮಾಡಿದ ನನ್ನ ತಪ್ಪನ್ನು ಕ್ಷಮಿಸು.

## ಗೋವಿಂದ ಸ್ತುತಿ

ಶ್ರೀಕೃಷ್ಣ ನಿಶ್ಚಯವಾಗಿಯೂ ನೀನು ಮನುಷ್ಯರಂತೆ ತೋರುತ್ತಾ ವೈಷ್ಣವ ತೇಜಸ್ಸನ್ನು ಗೋಪನ ಮಾಡಿರುವಿ. ಕೋಪಗೊಂಡಂತೆ ನಟಿಸಿ ಅದನ್ನು ಪ್ರಕಟಗೊಳಿಸಿ ನಮ್ಮಂತಹವರನ್ನು ಹಾದಿಗೆ ತರುವಿ.

**ಸಾಧಿತಂ ದೇವತಾನಾಂ ಹಿ ಮನ್ಯೇಹಂ ಕಾರ್ಯಮವ್ಯಯಮ್ ।**
**ತ್ವಯಿ ಮಾನುಷ್ಯಮಾಪನ್ನೇ ಯುಕ್ತೇ ಚೈವ ಸ್ವತೇಜಸಾ ॥ 9 ॥**
**ದೇವಾನಾಂ ಯದ್ ಭವಾನ್ ನೇತಾ ಸರ್ವಕಾರ್ಯ ಪುರೋಗಮಃ ।**
**ಏಕಸ್ತ್ವಮಸಿ ದೇವಾನಾಂ ಲೋಕಾನಾಂ ಚ ಸಮಸ್ತಶಃ ॥ 10 ॥**
**ದ್ವಿತೀಯಂ ನಾತ್ರ ಪಶ್ಯಾಮಿ ಯಸ್ತೇಷಾಂ ಚ ಧುರಂ ವಹೇತ್ ॥ 11 ॥**

ನಿನ್ನ ಈ ಅದ್ಭುತ ಕಾರ್ಯ ನೋಡಿದಾಗ ದೇವತೆಗಳ ಕಾರ್ಯ ಸಾಧಿಸಲ್ಪಟ್ಟಿತೆಂದೇ ನನ್ನ ಭಾವನೆ. ಅಖಿಲಜಗದಾಧಾರನಾಗಿ ನೀನು ಧರೆಯ ಹೊರೆಯನ್ನು ಹಗುರ ಮಾಡಲೆಂದೆ ಅವತರಿಸಿ ಸಕಲ ದೇವತಾ ನೇತಾರನಾಗಿರುವಾಗ ಯಾವ ಕಾರ್ಯ ಅಸಾಧ್ಯ?

ನೀನು ಸ್ವತಂತ್ರನಾದವನು. ಪ್ರಧಾನನು (ಏಕಃ) ಸನಾತನನಾದವನು=ಅನಾದಿ ಕಾಲದಿಂದಲೂ ಇರುವವನು. ನಿನ್ನ ಹೊರತಾಗಿ ಭೂಮಿಯ ಭಾರ ಹೊರಲು ಯಾರಿಗೆ ಸಾಧ್ಯವಾದೀತು. ಭಾರವನ್ನು ಹೊರುವ ಶ್ರೇಷ್ಠ ವೃಷಭವನ್ನು ಗಾಡಿಯ ಮುಂದೆ ಹೂಡುವಂತೆ, ಕಷ್ಟದಲ್ಲಿರುವ ದೇವತಾಭಾರ ಹೊರಲು ಅಗ್ರೇಸರನಾಗಿರುವಿ.

ಈ ಜಗತ್ತಿನ ಹುಟ್ಟುಗಳೆಲ್ಲವೂ ನಿನ್ನ ಶರೀರದಲ್ಲಿಯೆ ಅಡಗಿದೆ. ಆಯಾಯ ಕಾಲಬಂದಾಗ ಅವರವರನ್ನು ಸೃಷ್ಟಿಸುವಿ. ಈ ವಿಷಯವು ವೇದವೇ ಸಾರಿ ಹೇಳುತ್ತದೆ.

ಚತುರ್ಮುಖನೂ ಸಹ ನಿನ್ನನ್ನು ಬುದ್ಧಿಯಿಂದಾಗಲೀ - ವಯಸ್ಸಿನಿಂದಾಗಲಿ ಅತಿಕ್ರಮಿಸಲಾರನು. ಮಗುವು ಓಡುವ ಸಾಮರ್ಥ್ಯವುಳ್ಳವವನನ್ನು ಮೀರಲಾರನಷ್ಟೆ.

**ಸ್ಥಾಣುಭ್ಯೋ ಹಿಮವಾನ್ ಶ್ರೇಷ್ಠಃ ಹ್ರದಾನಾಂ ವರುಣಾಲಯಃ ।**
**ಗರುತ್ಮಾನ್ ಪಕ್ಷಿಣಾಂ ಶ್ರೇಷ್ಠೋ ದೇವಾನಾಂ ಚ ಭವಾನ್ ವರಃ ॥ 12 ॥**
**ಅಪಾಮಧಸ್ತಾಲ್ಲೋಕೋ ವೈ ತಸ್ಯೋಪರಿ ಮಹೀಧರಾಃ ।**
**ನಾಗಾನಾಮುಪರಿಷ್ಟಾದ್ ಭೂಃ ಪೃಥಿವ್ಯುಪರಿ ಮಾನವಾಃ ॥ 13 ॥**

ಸ್ಥಾವರಗಳಲ್ಲಿ ಹಿಮಾಲಯನು, ಜಲಾಶಯಗಳಲ್ಲಿ ಸಮುದ್ರನೂ, ಪಕ್ಷಿಗಳಲ್ಲಿ ಗರುಡನೂ, ದೇವತೆಗಳಲ್ಲಿ ನೀನು ಶ್ರೇಷ್ಠನಾಗಿರುವಿ. ಭೂಮಿಯ ಕೆಳಗಡೆ ಜಲಲೋಕವಿದೆ. ಜಲದ ಮೇಲೆ ಪರ್ವತಗಳಿವೆ. ಪೃಥಿವಿಯನ್ನು ಪರ್ವತಗಳು ಹೊತ್ತಿವೆ. ಪೃಥಿವಿಯನ್ನು ದಿಗ್ಗಜಗಳು ಹೊತ್ತಿವೆ. ಆ ಪೃಥಿವಿಯಲ್ಲಿ ಮನುಷ್ಯರು ವಾಸಿಸುವರು. ಮನುಷ್ಯಲೋಕದಿಂದ ಮೇಲಿರುವುದೆ ಆಕಾಶಲೋಕ. ಇದೇ ಪಕ್ಷಿಗಳ ಮಾರ್ಗ. ಆಕಾಶದ ಮೇಲ್ಭಾಗದಲ್ಲಿ ಸೂರ್ಯನಿರುವನು. ಸ್ವರ್ಗಕ್ಕೆ ದ್ವಾರನೆಂದು ಹೇಳುವರು. ಸೂರ್ಯಲೋಕದ ಮೇಲೆ ದೇವತಾ ಸ್ವರ್ಗವಿರುವುದು. ವಿಮಾನಗಳಿಂದ ಅಲ್ಲಿಗೆ ಹೋಗಬಹುದು. ಅಲ್ಲಿ ನಾನು ದೇವೇಂದ್ರ ಪದವಿಯಲ್ಲಿ ನಿನ್ನಿಂದ ನಿಯುಕ್ತನಾಗಿರುವೆನು.

**ಸ್ವರ್ಗಾದೂರ್ಧ್ವಂ ಬ್ರಹ್ಮಲೋಕೋ ಬ್ರಹ್ಮರ್ಷಿಗಣ ಸೇವಿತಃ ।**
**ತತ್ರ ಸೋಮಗತಿಶ್ಚೈವ ಜ್ಯೋತಿಷಾಂ ಚ ಮಹಾತ್ಮನಾಮ್ ॥ 14 ॥**
**ತಸ್ಯೋಪರಿ ಗವಾಂ ಲೋಕಃ ಸಾಧ್ಯಾಸ್ತಂ ಪಾಲಯಂತಿ ಹಿ ।**
**ಸ ಹಿ ಸರ್ವಗತಃ ಕೃಷ್ಣಃ ಮಹಾಕಾಶಗತೋ ಮಹಾನ್ ॥ 15 ॥**

ಸ್ವರ್ಗಲೋಕದ ಮೇಲೆ ಬ್ರಹ್ಮರ್ಷಿಸೇವಿತ ಬ್ರಹ್ಮಲೋಕವಿದೆ. ಅದು ಸರ್ವತ್ರ ವ್ಯಾಪ್ತವಾಗಿದ್ದು ಸಾಧ್ಯರೆಂಬ ದೇವತೆಗಳು ಪಾಲಿಸುವರು. ಗೋಲೋಕದ

ಮೇಲೆ ನಿನ್ನ ಲೋಕವಿದೆ. ಅದರ ಬಗ್ಗೆ ಚತುರ್ಮುಖನನ್ನು ಹಲವು ಬಾರಿ ಪ್ರಶ್ನಿಸಿದರೂ ನಮಗೆ ತಿಳಿಯುತ್ತಿಲ್ಲ. ಪಾಪ ಮಾಡಿದವರನ್ನು ಶಿಕ್ಷಿಸಲು ನರಕಾದಿ ಲೋಕಗಳು ಭೂಮಿಯ ಕೆಳಗಡೆ ಇವೆ. ಈ ಭೂಮಿಯಾದರೂ ಕರ್ಮಭೂಮಿಯೆನಿಸಿದೆ. ಇಲ್ಲಿ ಸಾಧನ ನಡೆಸಿದ ಶಮದಮಾದಿ ಸಂಪತ್ತುಳ್ಳವರಿಗೆ ಸ್ವರ್ಗಲೋಕವು ಭಗವಂತನ ವಿಷಯಕ ನಿರಂತರ ಚಿಂತನೆವುಳ್ಳ ಋಜುಗಳಿಗೆ ಮಾತ್ರ ಬ್ರಹ್ಮಲೋಕ ಪ್ರಾಪ್ತಿಯು ಗೋಲೋಕ-ವಾದರೂ ಗೋವುಗಳಿಗೆ ಮಾತ್ರವಾದರೂ ಅತ್ಯಂತ ದುರ್ಲಭವಾಗಿರುತ್ತದೆ. ವೀರನೇ, ಇಂತಹ ಗೋಲೋಕವನ್ನು ನನ್ನ ಆಜ್ಞಾಪಾಲಕ ಗಾಳಿ ಮಳೆಯಿಂದಾಗಿ ನಾಶವಾಗುವುದರಲ್ಲಿತ್ತು. ನೀನು ಆ ಉಪದ್ರವ ಪರಿಹರಿಸಿರುವೆ. ಆದ್ದರಿಂದಲೇ ಬ್ರಹ್ಮದೇವನ ಅಣತಿ ಹಾಗೂ ಧೇನುಗಳ ಪ್ರಾರ್ಥನೆಯಿಂದಲೂ ನಾನಿಲ್ಲಿಗೆ ಬಂದಿರುವೆ.

**ಅಹಂ ಭೂತಪತಿಃ ಕೃಷ್ಣ! ದೇವರಾಜಃ ಪುರಂದರಃ ।**
**ಅದಿತೇಃ ಗರ್ಭಪರ್ಯಾಯೇ ಪೂರ್ವಜಸ್ತೇ ಪುರಾಕೃತಃ ॥ 16 ॥**
**ಏವಂ ಕ್ಷಾಂತಮನಾಃ ಕೃಷ್ಣ ಸ್ವೇನ ಸೌಮ್ಯೇನ ತೇಜಸಾ ।**
**ಬ್ರಹ್ಮಣಃ ಶ್ರುಣು ಮೇ ವಾಕ್ಯಂ ಗವಾಂ ಚ ಗಜವಿಕ್ರಮ ॥ 17 ॥**

ನಾನು ಸಮಸ್ತ ಪ್ರಾಣಿಗಳಿಗೂ ಅಧಿಪತಿಯಾದ ನನ್ನನ್ನು ಪುರಂದರವೆನ್ನುವರು. ನೀನು ಅದಿತಿಯ ಗರ್ಭದಲ್ಲಿ ಅವತರಿಸಿದಾಗ ನನ್ನನ್ನೆ ಜ್ಯೇಷ್ಠನನ್ನಾಗಿ ಮಾಡಿದೆ. ನಾವಾದರೂ ನಿನಗೆ ದ್ರೋಹಬಗೆದೆ. ದಯಾಮಯನಾದ ನೀನು ಅದನ್ನೆಲ್ಲ ಕ್ಷಮಿಸು.

ಪೂಜ್ಯನಾದ ಬ್ರಹ್ಮದೇವನೂ ದಿವ್ಯ ಧೇನುಗಳೂ ಹೇಳಿರುವ ಮಾತುಗಳನ್ನಾಲಿಸು.

ಕೃಷ್ಣನೇ, ನೀನು ನಿನ್ನ ಗೋರಕ್ಷಣಾದಿ ಕರ್ಮಗಳಿಂದ ಸಂತುಷ್ಟರಾಗಿದ್ದೇವೆ. ನೀನು ಗೋವು ಹಾಗೂ ಗೋಲೋಕವನ್ನೂ ರಕ್ಷಿಸಿರುವೆ. ನಿನ್ನಿಂದ ನಮ್ಮವಂಶ ವೃದ್ಧಿ ಹೊಂದುವುದು. ನಿನ್ನಿಂದ ರಕ್ಷಿತರಾದ ನಾವು ಉಳುವುದಕ್ಕಾಗಿ ಗಾಡಿಗಳಿಗಾಗಿ ಹೂಡಲು ಎತ್ತುಗಳನ್ನು ನೀಡಿ ರೈತರನ್ನು, ಹಾಲು ಮೊಸರು ತುಪ್ಪ ನೀಡಿ ಹವಿಸ್ಸಿನಿಂದ ದೇವತಾಗಣವನ್ನೂ, ಲಕ್ಷ್ಮೀಸನ್ನಿಧಾನವುಳ್ಳ ಸೆಗಣಿ

ಹಾಕಿ ಗೊಬ್ಬರದ ಮೂಲಕ ಸರ್ವಸಸ್ಯ ಬೆಳೆಯಲು ಅನುವು ಮಾಡಿ ಕೊಟ್ಟು ಲಕ್ಷ್ಮೀದೇವಿಯನ್ನೂ ಆನಂದಪಡಿಸುವ ನಮಗೆ ಇಂದಿನಿಂದ ನೀನೇ ಇಂದ್ರನಾಗಿರುವಿ.

**ತಸ್ಮಾತ್ ತ್ವಂ ಕಾಂಚನೈಃ ಪೂರ್ಣೈಃ ದಿವ್ಯಸ್ಯ ಪಯಸೋಘಟೈಃ**
**ಏಭಿರದ್ಯಾಭಿಷಿಂಚಸ್ವ ಮಯಾ ಹಸ್ತಾವನಾಮಿತೈಃ ॥ 18 ॥**

**ಅಹಂ ಕಿಲೇಂದ್ರೋ ದೇವಾನಾಂ ತ್ವಂ ಗವಾಮಿಂದ್ರತಾಂ ಗತಃ ।**
**ಗೋವಿಂದ ಇತಿ ಲೋಕಸ್ತ್ವಾಂ ಸ್ತೋಷ್ಯಂತಿ ಭುವಿ ಶಾಶ್ವತಮ್ ॥ 19 ॥**

**ಮಮೋಪರಿ ಯಥೇಂದ್ರಸ್ತ್ವಂ ಸ್ಥಾಪಿತೋ ಗೋಭಿರೀಶ್ವರಃ ।**
**ಉಪೇಂದ್ರ ಇತಿ ಕೃಷ್ಣ ತ್ವಾಂ ಗಾಸ್ಯಂತಿ ದಿವಿ ದೇವತಾಃ ॥ 20 ॥**

ಗೋಪಾಲನೇ, ಗೋವುಗಳ ಪ್ರಾರ್ಥನೆಯಂತೆ ಈ ನನ್ನ ಕೈಯ್ಯಲ್ಲಿರುವ ಸುವರ್ಣಮಯವಾದ ಕಲಶಗಳಲ್ಲಿ ತುಂಬಿರುವ ಕ್ಷೀರಧಾರೆಯಿಂದ ಗೋವುಗಳ ಇಂದ್ರಾಧಿಪತ್ಯದಲ್ಲಿ ಅಭಿಷೇಕ ಮಾಡಲು ದೇವೇಂದ್ರನ ಹಸ್ತದಿಂದಲೇ ಹಾಲಿನ ಕೊಡಗಳನ್ನು ಕಳುಹಿಸಿದ್ದೇವೆ. ಇದರಿಂದ ಅಭಿಷಿಕ್ತನಾಗಿ ನಮ್ಮನ್ನು ಅನುಗ್ರಹಿಸು.' ಎಂದು ಗೋಲೋಕದ ಕಾಮಧೇನು ಮೊದಲಾದವು ಸಂದೇಶಿಸಿವೆ' ಹಾಗೆಯೆ ಬ್ರಹ್ಮದೇವನೂ ಅತ್ಯಂತ ನಮ್ರರಾಗಿ ಗೋಲೋಕ ಪುರಂದರನಾಗಿರಬೇಕೆಂದು ವಿಜ್ಞಾಪಿಸಿಕೊಂಡಿರುವರು. ಆದ್ದರಿಂದ ಕೃಷ್ಣನೇ! ಇಂದಿನಿಂದ ನಾನು ದೇವತೆಗಳಿಗೆ ಇಂದ್ರ. ನಾನು ಕೇವಲ ಇಂದ್ರನಾದರೆ ನೀನು ನನಗಿಂತಲೂ ಉನ್ನತವಾದ ಸ್ಥಾನಮಾನ ನೀಡಿ ಉಪೇಂದ್ರ ಪದವಿಯಲ್ಲಿ ಪಟ್ಟಾಭಿಷಕ್ತನಾಗು. ಇಂದಿನಿಂದ ನೀನು ಸ್ವರ್ಗಾಧಿಪತಿ ಇಂದ್ರನಿಗಿಂತಲೂ ಎಲ್ಲದರಲ್ಲಿಯೂ ಅಧಿಕನಾದ್ದರಿಂದ ಉಪೇಂದ್ರನು ಎಂದೇ ಸ್ವರ್ಗಲೋಕದಲ್ಲಿ ಸ್ತೋತ್ರ ಮಾಡುತ್ತಾರೆ.

ಕೃಷ್ಣನೇ! ಶ್ರಾವಣ ಭಾದ್ರಪದ ಆಶ್ವಯುಜ ಕಾರ್ತೀಕವೆಂಬ ನಾಲ್ಕು ತಿಂಗಳುಗಳು ನನ್ನ ಪೂಜೆಗಾಗಿಯೇ ವಿಹಿತವಾಗಿದ್ದವು. ಇನ್ನು ನಿನ್ನ ಮುಂದೆ ನಾನು ಅರ್ಧನಾಗಿ ಹೋದ ಕುರುಹಾಗಿ ನನ್ನ ಕಡೆಯ ಎರಡು ತಿಂಗಳು ನಿನಗಾಗಿ ಬಿಟ್ಟುಕೊಡುತ್ತೇನೆ ಎಂದನು.

**ತತಃ ಶಕ್ರಸ್ತು ತಾನ್ ಗೃಹ್ಯ ಘಟಾನ್ ದಿವ್ಯಪಯೋಧರಾನ್ ।**
**ಅಭಿಷೇಕೇಣ ಗೋವಿಂದಂ ಯೋಜಯಾಮಾಸ ಯೋಗವಿತ್ ॥ 21 ॥**

**ದೃಷ್ಟ್ವಾ ತಮಭಿಷಿಕ್ತಂ ತು ಗಾವಸ್ತಾಃ ಸಹ ಯೂಥಪೈಃ ।**
**ಸ್ತನೈಃ ಪ್ರಸವಯುಕ್ತೈಶ್ಚ ನಿಷಿಚುಃ ಕೃಷ್ಣಮವ್ಯಯಮ್ ॥ 22 ॥**

ದಯಾಮಯ ಶ್ರೀಕೃಷ್ಣನು ಭಕ್ತ್ಯಾದರ ಪೂರ್ವಕ ಮಾತನ್ನು ಆಲಿಸಿ ಅವನ ಅಪರಾಧವನ್ನು ಕ್ಷಮಿಸಿದನು. ನಂತರ ಇಂದ್ರದೇವನು ದಿವ್ಯವಾದ ಗವ್ಯರಸದಿಂದ ತುಂಬಿರುವ ಮಂಗಲ ಕಲಶಗಳನ್ನೆತ್ತಿ ವೇದಜ್ಞರು ವೇದಮಂತ್ರ ಪಠಿಸುತ್ತಿರುವಾಗ ಕ್ಷೀರಾಭಿಷೇಕವನ್ನು ಘಂಟಾನಾದ ಪೂರ್ವಕವಾಗಿ ಪ್ರಾರಂಭಿಸಿದರು. ಗೋವಿಂದನಿಗೆ ಅಭಿಷೇಕ[1] ಮಾಡುತ್ತಿರುವಂತೆಯೇ ಸ್ವರ್ಗದಲ್ಲಿರುವ ಗೋವುಗಳೆಲ್ಲವೂ ತಮ್ಮ ತುಂಬು ಕೆಚ್ಚಲುಗಳಿಂದ ಹಾಲನ್ನು ಕರೆದವು. ಮೇಘಗಳೂ ಸಹ ಅಮೃತರಸ ಸುರಿಸಿ ಪ್ರಾಯಶ್ಚಿತ್ತ ಮಾಡಿಕೊಂಡವು.

ನಕ್ಷತ್ರ ಚಂದ್ರ ಸೂರ್ಯ ಮೊದಲಾದ ಪ್ರಕಾಶಕಾಯಗಳು ಫಳಫಳ ಹೊಳೆದು ದೀಪಾಲಂಕಾರ ಸೇವೆಗೈಯದ್ದರು.

**ತತಃ ಪ್ರವತ್ಸ್ಯತೇ ಪುಣ್ಯಾ ಶರತ್ ಸುಪ್ತೋತ್ಥಿತೇ ತ್ವಯಿ ।**
**ಲೋಕೇಽಸ್ಮಿನ್ ಕೃಷ್ಣ ನಿಖಿಲೇ ಯಥೈವ ತ್ರಿದಿನೇ ತಥಾ ॥ 23 ॥**

---

1. **ಗೋವಿಂದ ಪಟ್ಟಾಭಿಷೇಕ:**

1) **ಗೋವಿಂದ ಮೇನ ಮಭಿಷೀಚ್ಯ ಸ ಗೋಗಣೇಶೋ ಗೋಭಿರ್ಜಗಾಮ ಗುಣಪೂರ್ಣ ಮಮುಂ ಪ್ರಣಮ್ಯ ।**
**ಗೋಪೈಃ ಗಿರಾಂಪತಿರಪಿ ಪ್ರಣತೋಭಿಗಮ್ಯ ಗೋವರ್ಧನೋದ್ಧರಣ ಸಂಗತ ಸಂಶಯ್ಯೈಃ ಸ ॥**
ಗೋವಿಂದನೆಂಬ ನಾಮಧೇಯ ಶ್ರೀಹರಿಗೆ ಹೊಸದಾಗಿ ಇಟ್ಟಿದ್ದಲ್ಲ. ಗೋವಿಂದನಿಗೆ 'ಉಪೇಂದ್ರ'ವೆಂಬ ಪಟ್ಟದಲ್ಲಿ ಅಭಿಷೇಕ ಮಾಡಿದನೆಂದು ತಿಳಿಯಬೇಕು.

2) ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಅಚ್ಯುತಾನಂದ ಗೋವಿಂದನೆಂದು ಜಪ ಮಾಡಿದನೆಂದರ್ಥ.

**ನರಾಸ್ತ್ವಾಂ ಚೈವ ಮಾಂ ಚೈವ ಧ್ವಜಾಕಾರಾಸು ಯಷ್ಟಿಷು ।**
**ಮಹೇಂದ್ರಂ ಚಾಪ್ಯುಪೇಂದ್ರಂ ಚ ಮಹಯಂತಿ ಮಹೀತಲೇ ॥ 24 ॥**

ನನ್ನ ಆರಾಧನೆಯು ನಾಲ್ಕು ತಿಂಗಳದ್ದು ಶರದೃತುವಿನ ಎರಡು ತಿಂಗಳು ನಿನ್ನ ವಿಶೇಷ ಪೂಜೆಗಾಗಿ ಮೀಸಲು ಇಟ್ಟಿದ್ದೇನೆ. ಕಾಲನಿಯಾಮಕನಾದ ನಿನಗೆ ನನ್ನ ಕಾಲಕೊಡುವುದೆಂದರೇನು? ಈ ಕಾಲದಲ್ಲಿ ಭಕ್ತರು ನಿನ್ನನ್ನು ಆರಾಧಿಸಿ ಅನುಗ್ರಹ ಹೊಂದಲು ಎಂದಭಿಪ್ರಾಯವು. ಮಹಾವಿಷ್ಣು ಸ್ವರೂಪನೆ ಆದ ನೀನು ಚಾತುರ್ಮಾಸ್ಯ ಮಲಗಿ ಎದ್ದಾಗ ಶರತ್ಕಾಲ ಪ್ರಾರಂಭವಾಗಿರುತ್ತದೆ. ಈ ಭೂಲೋಕದ ಸಮಸ್ತ ಜನರೂ ಧ್ವಜಾಕಾರದ ದಂಡಗಳಲ್ಲಿ ನಿನ್ನನ್ನು ಇಂದ್ರನೆಂದೂ. ನಿನ್ನನ್ನು ಇಂದ್ರಾಧಿಕ ಉಪೇಂದ್ರನೆಂದೂ ಆವಾಹಿಸಿ ಪೂಜಿಸುವರು. ಯಾರು ನಮ್ಮಿಬ್ಬರ ಸಂಬಂಧವನ್ನು ಕಲ್ಪಿಸುವ ಮಹೇಂದ್ರೋಪೇಂದ್ರವೆಂಬ ಮಹೋತ್ಸವವನ್ನು ಆಚರಿಸುತ್ತಾ ನಮಗೆ ಗೌರವ ಸಲ್ಲಿಸುವರೋ ಅಂತಹವರು ಅನ್ಯಾಯಮಾರ್ಗ ತುಳಿಯದೆ ಸುಖಿಗಳಾಗಿರುವರು. ಹೀಗೆ ಇಂದ್ರದೇವನು ಉಪೇಂದ್ರನಿಗೆ ಅಭಿಷೇಕ ಮಾಡಿ ತನ್ನ ತಪ್ಪಿನ ಪ್ರಾಯಶ್ಚಿತ್ತವನ್ನು ಮಾಡಿಕೊಂಡನು. ನಂತರ ಶ್ರೀಕೃಷ್ಣನನ್ನು ಕುರಿತು ಇಂತು ಪ್ರಾರ್ಥಿಸಿಕೊಂಡನು.

**ಏಷ ತೇ ಪ್ರಥಮಃ ಕೃಷ್ಣ! ನಿಯೋಗೋ ಗೋಷು ಯಃ ಕೃತಃ ।**
**ಶ್ರೂಯತಾಮಪರಂ ಕೃಷ್ಣ ಮಮಾಗಮನ ಕಾರಣಮ್ ॥ 25 ॥**

**ಕ್ಷಿಪ್ರಂ ಪ್ರಸಾದ್ಯತಾಂ ಕಂಸಃ ಕೇಶೀ ಚ ತುರಗಾಧಮಃ ।**
**ಅರಿಷ್ಟಶ್ಚ ಮದಾವಿಷ್ಟೋ ರಾಜರಾಜ್ಯಂ ತತಃ ಕುರು ॥ 26 ॥**

**ಪಿತೃಷ್ವಸರಿ ಜಾತಸ್ತೇ ಮಮಾಂಶೋಽಹಮಿವ ಸ್ಥಿತಃ**
**ಸ ತೇ ರಕ್ಷ್ಯಶ್ಚ ಮಾನ್ಯಶ್ಚ ಸಖ್ಯೇ ಚ ವಿನಿಯುಜ್ಯತಾಮ್ ॥ 27 ॥**

**ತ್ವಯಾ ಹ್ಯನುಗೃಹೀತಃ ಸ ತವ ವೃತ್ತಾನುವರ್ತಕಃ ।**
**ತ್ವದ್ವಶೇ ವರ್ತಮಾನಶ್ಚ ಪ್ರಾಪ್ಸ್ಯತೇ ವಿಪುಲಂ ಯಶಃ ॥ 28 ॥**

ಶ್ರೀಕೃಷ್ಣನೇ ಗೋವುಗಳ ಪ್ರಾರ್ಥನೆಯಂತೆ ಗೋವಿಂದ ಪಟ್ಟಾಭಿಷೇಕವೆಂಬ ಮೊದಲನೆಯ ಕಾರಣದಿಂದ ಎರಡನೆ ಕಾರಣವನ್ನು ಹೇಳುವೆ ಕೇಳು! ನೀನು

ಆದಷ್ಟು ಬೇಗ ಕಂಸನನ್ನೂ, ತುರಗಾಧಮ ಕೇಶಿದೈತ್ಯನ್ನನೂ, ಮದಾವಿಷ್ಟ ಅರಿಷ್ಟಾಸುರನನ್ನೂ ಸಂಹರಿಸಬೇಕು. ನಂತರ ರಾಜರೆಲ್ಲರನ್ನೂ ನಿನ್ನ ವಶಕ್ಕೆ ತಂದುಕೋ.

ನಿನ್ನ ಸೋದರತ್ತೆಯಾದ ಕುಂತಿಯ ಉದರದಲ್ಲಿ ನನ್ನ ಅಂಶವೆ ಆದ ಒಬ್ಬ ಮಗನು ಜನಿಸಿದ್ದಾನೆ. ನೀನು ಅವನ ಮಿತ್ರನಾಗಿ ಅವನನ್ನು ಸುರಕ್ಷಿತವಾಗಿ ಕಾಪಾಡಬೇಕು, ಆದರಿಸಬೇಕು. ನೀನು ಅನುಗ್ರಹ ಮಾಡಿದರೆ ಅವನು ನಿನ್ನಾಚರಣೆಯನ್ನೇ ಅನುಸರಿಸಿ ನಡೆಯುವನು. ನೀನು ಕೃಪೆ ತೋರಿದರೆ ಭೂಮಂಡಲದಲ್ಲಿ ವಿಪುಲವಾದ ಕೀರ್ತಿಯನ್ನು ಗಳಿಸುವನು. ಭರತವಂಶದಲ್ಲಿಯೇ ಅವನನ್ನು ಮೀರುವ ಬಿಲ್ಲಾಳು ಮತ್ತೊಬ್ಬ ಇರಲಾರ. ನಿನ್ನನ್ನು ಹೊರತು ಬೇರೆ ಯಾರೊಂದಿಗೂ ರಮಿಸಲಾರ. ಮುಂದೆ ನಡೆಯುವ ಮಹಾಸಂಗ್ರಾಮ ಮಹಾಭಾರತ ಯುದ್ಧದಲ್ಲಿ ನರನಾರಾಯಣರಾದ ನೀವಿಬ್ಬರೂ ಸೇರಿದರೆ ಪ್ರಪಂಚ ರಾಜರೆಲ್ಲ ನಾಶ ಹೊಂದುವುದು ನಿಶ್ಚಿತ. ಇದರಿಂದಾಗಿ ನಿನ್ನ ಉದ್ಧೇಶ ನೆರವೇರುತ್ತದೆ. ಭೂಭಾರ ಹಗುರವಾಗುತ್ತದೆ. ರಣಾಂಗಣದಲ್ಲಿ ರಥಿಕನಾಗಿ ಹೊರಟಾಗ ನೀನು ಅವನ ಸಾರಥಿಯಾಗಿ ಬೆನ್ನ ಹಿಂದಿದ್ದು ರಕ್ಷಿಸಬೇಕು.

ಪ್ರತಿಜ್ಞಾತಂ ಮಯಾ ಕೃಷ್ಣ ಋಷಿಮಧ್ಯೇ ಸುರೇಷು ಚ ।
ಮಯಾ ಪುತ್ರೋಽರ್ಜುನೋ ನಾಮ ಸೃಷ್ಟಃ ಕುಂತ್ಯಾಂ ಕುಲೋದ್ವಹಃ ॥29॥

ಸೋಽಸ್ತ್ರಾಣಾಂ ಪಾರತತ್ವಜ್ಞಃ ಶ್ರೇಷ್ಠಶ್ಚಾಪವಿಕರ್ಷಣೇ ।
ತಂ ಪ್ರವೇಕ್ಷ್ಯಂತಿ ವೈ ಸರ್ವೇ ರಾಜಾನಃ ಶಸ್ತ್ರಯೋಧಿನಃ ॥ 30 ॥

ಅಕ್ಷೌಹಿಣೀಸ್ತು ಶೂರಾಣಾಂ ರಾಜ್ಞಾಂ ಸಂಗ್ರಾಮಶಾಲಿನಾಮ್ ।
ಸ ಏಕಃ ಕ್ಷತ್ರ ಧರ್ಮೇಣ ಯೋಜಯಿಷ್ಯತಿ ಮೃತ್ಯುನಾ ॥ 31 ॥

ತಸ್ಯಾಸ್ತ್ರ ಚರಿತಂ ಮಾರ್ಗಂ ಧನುಷೋ ಲಾಘವೇನ ಚ ।
ನಾನುಯಾಸ್ಯಂತಿ ರಾಜಾನೋ ದೇವಾ ವಾ ತ್ವಾಂ ವಿನಾ ಪ್ರಭೋ ॥ 32 ॥

ಕೃಷ್ಣನೇ, ನಾನು ಋಷಿಗಳ ಹಾಗೂ ದೇವತೆಗಳ ಮಧ್ಯದಲ್ಲಿ ಹೀಗೆ ಪ್ರತಿಜ್ಞೆ ಮಾಡಿರುವೆನು. ನನಗೆ ವಂಶೋದ್ಧಾರಕನಾದ ಅರ್ಜುನನೆಂಬ ಮಗನು

ಕುಂತಿಯಲ್ಲಿ ನನ್ನಿಂದ ಅವತರಿಸುವನು. ಅಸ್ತ್ರ ಶಸ್ತ್ರಾಸ್ತ್ರ ಪಾರಂಗತನೂ, ಮಹಾಬಿಲ್ಲಾಳುವೂ, ಸವ್ಯಸಾಚಿಯೂ ಆಗಿರುವನು. ಅವನ ಮುಂದೆ ಉಳಿದ ಧನುಷ್ಮಂತರೆಲ್ಲ ತಲೆ ಎತ್ತಲಾರರು.

ಮಹಾಭಾರತ ಸಂಗ್ರಾಮದಲ್ಲಿ ಕ್ಷತ್ರಧರ್ಮರಹಿತನಾಗಿ ಯುದ್ಧ ಮಾಡುತ್ತಾ ಮೂರು ಅಕ್ಷೋಹಿಣೀ ಸೈನ್ಯವನ್ನು ನಾಶ ಮಾಡುವನು. ಅಖಂಡ ಭೂಮಂಡಲದಲ್ಲಿ ನಿನ್ನನ್ನು ಹಾಗೂ ಭೀಮನನ್ನು ಹೊರತು ಮತ್ತಾವ ಬಿಲ್ಲಾಳುವೂ ಅವನ ಬಾಣಬಿಡುವ ಕೈಚಳಕವನ್ನೂ ಹೊಂದಲಾರರು. ಅವನು ನಿನಗೆ ಬಂಧುವೂ ಯುದ್ಧದಲ್ಲಿ ಸಹಾಯಕನೂ ಆಗುತ್ತಾನೆ.

**ಯಸ್ಯ ಯೋಗೋ ವಿಧಾತವ್ಯಃ ತ್ವಯಾ ಗೋವಿಂದ ಮತ್ಕೃತೇ ।**
**ದ್ರಷ್ಟವ್ಯಶ್ಚ ಯಥಾಹಂ ವೈ ತ್ವಯಾ ಮಾನ್ಯಶ್ಚ ನಿತ್ಯಶಃ ॥ 33 ॥**
**ತ್ವಯಾ ಚ ನಿತ್ಯಂ ಸಂರಕ್ಷ್ಯ ಅಹವೇಷು ಮಹತ್ಸು ಸಃ ।**
**ರಕ್ಷಿತವ್ಯಸ್ಯ ತ್ವಯಾ ತಸ್ಯ ನ ಮೃತ್ಯುಃ ಪ್ರಭವಿಷ್ಯತಿ ॥ 34 ॥**
**ಆತ್ಮಾ ತೇಽಹಂ ಯಥಾ ಶಶ್ವತ್ ತಥೈವ ತವ ಸೋಽರ್ಜುನಃ ।**

ಶ್ರೀಕೃಷ್ಣನೇ, ಅರ್ಜುನನ ಯೋಗಕ್ಷೇಮಗಳನ್ನು ನೀನು ನಿತ್ಯವೂ ತಿಳಿದಿರುವಿ. ಮಹಾಸಂಗ್ರಾಮವೇರ್ಪಟ್ಟಾಗ ಅವನನ್ನು ಅನುದಿನವೂ ನೀನು ರಕ್ಷಿಸುತ್ತ ಇರಬೇಕು. ನಿನ್ನಿಂದ ರಕ್ಷಿಸಲ್ಪಟ್ಟ ಅವನು ಖಂಡಿತ ಮೃತ್ಯು ವಶನಾಗುವುದಿಲ್ಲ.

ಹಿಂದೆ ನೀನು ತ್ರಿವಿಕ್ರಮನಾಗಿ ಮೂರು ಹೆಜ್ಜೆಗಳಿಂದ ಅಳೆಯುವ ಮೂಲಕ ಮೂರು ಲೋಕಗಳನ್ನು ಅಳೆದು ಅದರ ಫಲವಾಗಿ ಮೂರು ಲೋಕಗಳನ್ನು ಬಲಿ ಚಕ್ರವರ್ತಿಯಿಂದ ಪಡೆದಿರುವೆ. ಅದನ್ನು ನೀನು ಅಣ್ಣನೆಂದೆ ಬಗೆದು ನನಗೆ ನೀಡಿದೆ. ಸತ್ಯಮಯನೂ ಸತ್ಯಕ್ಕಾಗಿ ಪರಾಕ್ರಮ ತೋರುವ ನಿನ್ನನ್ನು ಆಶ್ರಯಿಸಿ ಶತ್ರು ಮರ್ದನಕ್ಕಾಗಿ ನಿನ್ನನ್ನು ನಿಯೋಜಿಸುವರು.

ನಿನ್ನ ಸೋದರತ್ತೆಯ ಮಗನಾದ ಅರ್ಜುನನ ರಕ್ಷಣೆ ಭಾರ ನಿನ್ನದೆ.

**ಕಂಸೇ ವಿನಿಹತೇ ಕೃಷ್ಣ ತ್ವಯಾ ಭಾವ್ಯರ್ಥ ದರ್ಶಿನಾ ।**
**ಅಭಿತಃ ತನ್ಮಹದ್ ಯುದ್ಧಂ ಭವಿಷ್ಯತಿ ಮಹೀಕ್ಷಿತಾಮ್ ॥ 35 ॥**

**ತತ್ರ ತೇಷಾಂ ನೃವೀರಾಣಾಮತಿ ಮಾನುಷಕರ್ಮಣಾಮ್ ।**
**ವಿಜಯಸ್ಯಾರ್ಜುನೋ ಭೋಕ್ತಾ ಯಶಸಾ ತ್ವಂ ಚ ಯೋಕ್ಷ್ಯಸೇ ॥36॥**
**ಏತನ್ಮೇ ಕೃಷ್ಣ ಕಾರ್ತ್ಸ್ನ್ಯೇನ ಕರ್ತುಮರ್ಹಸಿ ಭಾಷಿತಮ್ ॥ 37 ॥**

ನೀನು ಕಂಸನನ್ನು ಸಂಹಾರ ಮಾಡಿದ ನಂತರ ಕೆಲವು ಸಮಯದ ನಂತರ ಮಹಾಭಾರತ ಯುದ್ಧವು ಪ್ರಾರಂಭವಾಗುವುದು. ಈ ಸಮಯದಲ್ಲಿ ಸಕಲ ರಾಜರನ್ನೂ ನೀನೇ ನಿನ್ನ ಶಕ್ತಿಯಿಂದಲೇ ಪರಾಜಯಗೊಳಿಸಿ ವಿಜಯವನ್ನು ವಿಜಯನಿಗೆ ತಂದು ಕೊಡು. ಅದರ ಶ್ರೇಯಸ್ಸು ನಿನ್ನದಾಗಲಿ ಎಂದು ಬೇಡಿದನು.

ಅಚ್ಯುತನೆ! ನಾನೂ, ದೇವತೆಗಳೂ ಹಾಗೂ ಸತ್ಯವೂ ನಿನಗೆ ಪ್ರಿಯವಾದದ್ದೆ ಆದರೆ ನಾನು ಪ್ರಾರ್ಥಿಸಿರುವ ವರವನ್ನು ನಡೆಸಿಕೊಡು' ಎಂದನು.

**ಶಕ್ರಸ್ಯ ವಚನಂ ಶ್ರುತ್ವಾ ಕೃಷ್ಣೋ ಗೋವಿಂದತಾಂ ಗತಃ ।**
**ಪ್ರೀತೇನ ಮನಸಾ ಯುಕ್ತಃ ಪ್ರತಿವಾಕ್ಯಂ ಜಗಾದ ಹ ॥ 38 ॥**
**ಪ್ರೀತೋಽಸ್ಮಿ ದರ್ಶನಾದ್ ದೇವ ತವ ಶಕ್ರ ಶಚೀಪತೇ ।**
**ಯತ್ ತ್ವಯಾಭಿಹಿತಂ ಚೇದಂ ನ ಕಿಂಚಿತ್ ಪರಿಹಾಸ್ಯತೇ ॥ 39 ॥**

ಇಂದ್ರನ ಮಾತನ್ನು ಆಲಿಸಿದ ಗೋವಿಂದ ಪದವಿಯಲ್ಲಿರುವ ಶ್ರೀಕೃಷ್ಣನು ಸಂತುಷ್ಟಮನಸ್ಕನಾಗಿ ಶಕ್ರನೇ, ನಿನ್ನ ದರ್ಶನದಿಂದ ನಾನು ಸುಪ್ರೀತನಾಗಿರುವೆನು. ನೀನು ಏನೇನನ್ನು ಪ್ರಾರ್ಥಿಸಿರುವೆಯೋ ಅವುಗಳಲ್ಲಿ ಯಾವುದನ್ನೂ ಬಿಡದೆ ನಡೆಸಿಕೊಡುವನು. ಈ ಮಹೀಮಂಡಲದಲ್ಲಿ ನಿನ್ನಂಶದಿಂದ ಜನಿಸಿರುವ ಪಾರ್ಥನನ್ನು ನಾನು ಸರ್ವರೀತಿಯಿಂದಲೂ ರಕ್ಷಿಸುವೆನು. ನಾನು ಭೂಮಿಯಲ್ಲಿರುವವರೆಗೂ ಅವನನ್ನೂ ಯಾರೂ ಸೋಲಿಸಲಾರರು.

ನಾನು ನನ್ನ ಸೋದರತ್ತೆ ಕುಂತಿಯನ್ನೂ ಅವಳು ಪಾಂಡುರಾಜನನ್ನು ಕೈ ಹಿಡಿದು ನಿಯೋಗ ಪದ್ಧತಿಯಿಂದ ಯಮಧರ್ಮನಿಂದ ಧರ್ಮಜನನ್ನೂ, ವಾಯುವಿನಿಂದ ಭೀಮನನ್ನೂ, ಅಶ್ವಿನೀ ಅನುಗ್ರಹದಿಂದ ಮಾದ್ರಿಯಲ್ಲಿ ಜನಿಸಿದ ನಕುಲ-ಸಹದೇವರೆಂಬ ಇಬ್ಬರೂ ಅವಳೇ ಮಕ್ಕಳನ್ನೂ ತಿಳಿದಿರುವೆನು. ಅಷ್ಟೇ ಅಲ್ಲ ನನ್ನ ಸೋದರತ್ತೆ ಕುಂತಿಯು ಸೂರ್ಯನಿಂದ ಕನ್ಯೆಯಾಗಿರುವಾಗಲೇ

ಕರ್ಣನನ್ನು ಪಡೆದದ್ದೂ ತಿಳಿದಿದ್ದೇನೆ. ಅವನು ಸೂತನಾದ ವಿಷಯವೂ ನನಗೆ ತಿಳಿದಿದೆ. ಯುದ್ಧದ ಹಂಬಲವಿರುವ ದುಷ್ಟ ದುರ್ಯೋದನ ಹಂತಕರನ್ನೂ ಬಲ್ಲೆನು. ಕಿಂದಮ ಋಷಿಗಳ ಶಾಪಾಯುಧನ ಶಾಪದಿಂದ ಪಾಂಡು ಮೃತನಾದ ಸಂಗತಿ ನನಗೆ ವಿದಿತವೆ.

**ತದ್ಗಚ್ಛ ತ್ರಿವಿದಂ ಶಕ್ರ! ಸುಖಾಯ ತ್ರಿದಿವೌಕಸಾಮ್ ।**
**ನಾರ್ಜುನಸ್ಯ ರಿಪುಃ ಕಶ್ಚಿತ್ ಮಮಾಗ್ರೇ ಪ್ರಭವಿಷ್ಯತಿ ॥ 40 ॥**

**ಅರ್ಜುನಾರ್ಥೇ ಚ ತಾನ್ ಸರ್ವಾನ್ ಪಾಂಡವಾನಕ್ಷತಾನ್ ಯುಧಿ ।**
**ಕುಂತ್ಯಾ ನಿರ್ಯಾತಯಿಷ್ಯಾಮಿ ನಿವೃತ್ತೇ ಭಾರತೇ ಮೃಧೇ ॥ 41 ॥**

**ಯಚ್ಚ ವಕ್ಷ್ಯತಿ ಮಾಂ ಶಕ್ರ! ತನೂಜಸ್ತವ ಸೋಽಜುನಃ ।**
**ಭೃತ್ಯವತ್ ತತ್ ಕರಿಷ್ಯಾಮಿ ತವ ಸ್ನೇಹೇನ ಯಂತ್ರಿತಃ ॥ 42 ॥**

ಇಂದ್ರನೇ! ನನ್ನ ಸಮ್ಮುಖದಲ್ಲಿ ಅರ್ಜುನನ ಯಾವ ಶತ್ರುವೂ ಪರಾಜಯ ಹೊಂದದೆ ಇರಲಾರ. ಇದು ನಿಶ್ಚಯ. ದೇವತೆಗಳ ಸುಖಕ್ಕಾಗಿ ನೀನಿನ್ನು ಸ್ವರ್ಗಕ್ಕೆ ನಿಶ್ಚಿಂತೆಯಿಂದ ಹೋಗಿ ಬಾ. ಅರ್ಜುನನಿಗಾಗಿ ರಕ್ಷಣೆ ನೀಡಿ. ಮಹಾಭಾರತ ಯುದ್ಧಾ ನಂತರ ಪಾಂಡವರನ್ನೆಲ್ಲ ಕುಂತಿಯ ಸೇವೆಗಾಗಿ ಕಳುಹಿಸಿ ಕೊಡುವೆ. ನಿನ್ನ ಮೇಲಿರುವ ಸ್ನೇಹದಿಂದಾಗಿ ನಿನ್ನ ಮಗ ಅರ್ಜುನನು ಯಾವುದೇ ಕಾರ್ಯ ಹೇಳದರೂ. ದಾಸನು ಯಜಮಾನನ ಕಾರ್ಯ ಮಾಡಿಕೊಡುವಂತೆ ಅವನ ಕಾರ್ಯ ಮಾಡಿಕೊಡುವೆ.

**ಸತ್ಯಸಂಧಸ್ಯ ತಚ್ಛ್ರುತ್ವಾ ಪ್ರಿಯಂ ಪ್ರೀತಸ್ಯ ಭಾಷಿತಮ್ ।**
**ಕೃಷ್ಣಸ್ಯ ಸಾಕ್ಷಾತ್ ತ್ರಿದಿವಂ ಜಗಾಮ ತ್ರಿದಶೇಶ್ವರಃ ॥ 43 ॥**

ಸತ್ಯಪ್ರತಿಜ್ಞನಾದ ಶ್ರೀಕೃಷ್ಣನ ಅಭಿಮಾನ ಪೂರ್ವಕವಾದ ಪ್ರಿಯವಾಕ್ಯಗಳನ್ನು ಕೇಳಿ ದೇವೇಂದ್ರನು ಸ್ವರ್ಗಕ್ಕೆ ಹೊರಟು ಹೋದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಇಂದ್ರನಿಗೆ ಅರ್ಜುನ ರಕ್ಷಣೆ ಅಭಯವೆಂಬಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 20 ವಿಷ್ಣುಪರ್ವ

# ಅಥ ವಿಂಶೋಽಧ್ಯಾಯಃ

## ಶ್ರೀಕೃಷ್ಣನಿಗೆ ಗೋಪವೃದ್ಧರಿಂದ ಗೌರವ

*ವೈಶಂಪಾಯನ ಉವಾಚ-*

ಕೃಷ್ಣ ನೀನಾರು?

ಗತೇ ಶಕ್ರೇ ತತಃ ಕೃಷ್ಣಃ ಪೂಜ್ಯಮಾನೋ ವ್ರಜಾಲಯೈಃ ।
ಗೋವರ್ಧನ ಧರಃ ಶ್ರೀಮಾನ್ ವಿವೇಶ ವ್ರಜಮೇವ ಚ ॥ 1 ॥

ತಸ್ಯ ವೃದ್ಧಾ ಭಿನಂದಂತಿ ಜ್ಞಾತಯಶ್ಚ ಸಹೋಷಿತಾಃ ।
ಧನ್ಯಾಃ ಸ್ಮೋಽನುಗೃಹೀತಾಃ ಸ್ಮಃ ತ್ವದ್ವೃತ್ತೇನ ನಯೇನ ಚ ॥ 2 ॥

ಗಾವೋ ವರ್ಷಭಯಾತ್ ತೀರ್ಣಾಃ ವಯಂ ತೀರ್ಣಾಃ ಮಹಾಭಯಾತ್।
ತವ ಪ್ರಸಾದಾತ್ ಗೋವಿಂದ ದೇವತುಲ್ಯ ಪರಾಕ್ರಮ ॥ 3 ॥

ಧಾರಣೇನಾಸ್ಯ ಶೈಲಸ್ಯ ವಿದ್ಮಸ್ತ್ವಾಂ ಕೃಷ್ಣ ದೈವತಮ್ ।
ಕಸ್ತ್ವಂ ಭವಸಿ ರುದ್ರಾಣಾಂ ಮ್ಮರುತಾಂ ಚ ಮಹಾಬಲಃ ।
ವಸೂನಾಂ ವಾ ಕಿಮರ್ಥಂ ಚ ವಸುದೇವಃ ಪಿತಾ ತವ ॥ 4 ॥

ಜನಮೇಜಯನೇ ಕೇಳು – ಇಂದ್ರದೇವನು ಹೊರಟು ಹೋದ ಮೇಲೆ ವ್ರಜವಾಸಿಗಳಿಂದ ಪೂಜಿತನಾಗಿ ಶ್ರೀಕೃಷ್ಣನು ವೃಂದಾವನ ಪ್ರವೇಶಿಸಿದನು. ವ್ರಜದಲ್ಲಿ ವಾಸ ಮಾಡುತ್ತಿದ್ದ ವೃದ್ಧ ಗೋಪರು ಹಾಗೂ ಜ್ಞಾತಿ ಬಂಧುಗಳೆಲ್ಲರೂ ಶ್ರೀಕೃಷ್ಣನನ್ನು ಅಭಿನಂದಿಸುತ್ತಾ ಹೀಗೆಂದರು.

ಶ್ರೀಕೃಷ್ಣನೇ, ನಿನ್ನ ಪರಾಕ್ರಮ ಅಮಾನುಷವಾದದ್ದು. ನಿನ್ನ ವ್ಯವಹಾರದಿಂದ ನೀತಿಯಿಂದಲೂ ನಿನ್ನ ಅನುಗ್ರಹಕ್ಕೆ ಪಾತ್ರರಾಗಿ ದಾಟಲಸಾಧ್ಯವಾದ ಕಷ್ಟಗಳಿಂದ ಪಾರಾದ ನಾವೆ ಧನ್ಯರು. ನಮ್ಮ ಗೋವುಗಳೆಲ್ಲವೂ ಭಯಂಕರ ಮಳೆಯ ಭಯದಿಂದ ಕಾತರಗೊಂಡಿದ್ದವು. ನಾವೆಲ್ಲವರೂ ಸರ್ವನಾಶವಾಗುತ್ತೇವೆಂದು ತಿಳಿದಿದ್ದೆವು. ಆದರೆ ನಿನ್ನಿಂದ ನಾವೆಲ್ಲರೂ ಭಯದಿಂದ ಮುಕ್ತರಾದೆವು.

ಗೋವಿಂದನೇ, ನಾವೆಲ್ಲ ನಿನ್ನಲ್ಲಿ ಅಮಾನುಷವಾದ ಕಾರ್ಯಗಳನ್ನೇ ನೋಡುತ್ತಿದ್ದೇವೆ. ಮನುಷ್ಯ ಮಾತ್ರರಿಗೆ ಸ್ವಪ್ನದಲ್ಲಿಯೂ ಮಾಡಲಶಕ್ಯವಾದ ನಿನ್ನ ಅನೇಕ ಘನಕಾರ್ಯ ಅದರಲ್ಲಿಯೂ ಒಂದೇ ಬೆರಳಿನ ಮೇಲೆ ನಿರಂತರ ಏಳು ದಿವಸ ಬೆಟ್ಟದ ಮೇಲೆ ಬೆಟ್ಟವನ್ನು ಧರಿಸಿದ್ದನ್ನು ನೋಡಿದ ಮೇಲಂತೂ ನೀನೊಬ್ಬ ದೈವೀಪುರುಷನೆಂದು ನಮಗೆ ನಿಶ್ಚಿತವಾಗಿದೆ. ಆದರೆ ನಿಶ್ಚಿತವಾಗಿ ನೀನು ಇಂಥ ದೇವತೆಯೆಂದು ಮಾತ್ರ ತಿಳಿದಿಲ್ಲ. ಆದ್ದರಿಂದ ನೀನಾರು? ರುದ್ರಗಣದಲ್ಲಿ ಒಬ್ಬನೋ? ಮರುದ್ಗಣಕ್ಕೆ ಸೇರಿದವನೊಬ್ಬನೋ? ಅಷ್ಟವಸುಗಳಲ್ಲಿ ಯಾವನಾದರೂ ವಸುವಾಗಿರುವೆಯೋ? ನಿನ್ನಂಥ ಅಪ್ರಾಕೃತ ದೇಹಿಗೆ ನಮ್ಮಂತೆ ಗೋಹಿಂಡನು ಹಿಂಡಿ ಬದುಕುವ ವಸುದೇವನು ತಂದೆ ಹೇಗೆ? ನೀನಾದರೂ ಈ ಗೋಪಾಲಕ ವೇಷದಿಂದ ನಮ್ಮಂತ ಗೌಳಿಗರಲ್ಲಿ ಒಬ್ಬನಾಗಿ ಇರುವ ರಹಸ್ಯವೇನು? ವಿವಿಧ ಕ್ರೀಡೆಯನ್ನಾಡುವ ಉದ್ದೇಶವೇನು? ಹದಿನಾಲ್ಕುಲೋಕ ಪಾಲಕ ಗೋಪಾಲಕನಾದ ಬಗೆ ಹೇಗೆ?

**ದೇವೋ ವಾ ದಾನವೋ ವಾ ತ್ವಂ ಯಕ್ಷೋ ಗಂಧರ್ವ ಏವ ವಾ ।**
**ಅಸ್ಮಾಕಂ ಬಾಂಧವೋ ಜಾತಃ ಯೋಽಸಿ ಸೋಽಸಿ ನಮೋಸ್ತು ತೇ ॥ 5 ॥**
**ಕೇನಚಿದ್ ಯದಿ ಕಾರ್ಯೇಣ ವಸಸೀಹ ಯದೃಚ್ಛಯಾ ।**
**ವಯಂ ತವಾನುಗಾಃ ಸರ್ವೇ ಭವಂತಂ ಶರಣಂ ಗತಃ ॥ 6 ॥**

ಅಥವಾ ನೀನು ದೇವತೆಯೋ, ದಾನವನೋ, ಯಕ್ಷನೋ ಗಂಧರ್ವನೋ ಆಗಿರಬಹುದು. ನೀನು ಯಾರೇ ಆಗಿರು. ಈಗಂತೂ ನಮಗೆ ಆಪ್ತಬಂಧುವಾಗಿ ಆಪತ್ಕಾಲದಲ್ಲಿ ಆಪದ್ಬಾಂಧವನಾಗಿ ಬಂದಿರುವಿ. ನಮಗೆ ಅಷ್ಟೇ ಸಾಕು. ನೀನು ಯಾರೇ ಆಗಿದ್ದರೂ ಏನೇ ಆದರೂ ನಿನಗೆ ನಮ್ಮೆಲ್ಲರ ಅನಂತವಂದನೆಗಳು. ನಾವೆಲ್ಲರೂ ನಿನ್ನ ಆದೇಶಾನುಸಾರ ವರ್ತಿಸುವವರು ನಿನ್ನನ್ನೇ ನಂಬಿ ಬಂದಿದ್ದೇವೆ. ನಮ್ಮನ್ನು ಪಾಲಿಸು' ಎಂದರು.

**ಮನ್ಯಂತೇ ಮಾಂ ಯಥಾ ಸರ್ವೇ ಭವಂತೋ ಭೀಮ ವಿಕ್ರಮಮ್ ।**
**ತಥಾಹಂ ನಾವಮಂತವ್ಯಃ ಸ್ವಜಾತೀಯೋಽಸ್ಮಿ ಬಾಂಧವಃ ॥ 7 ॥**

**ಯದಿ ತ್ವವಶ್ಯಂ ಶ್ರೋತವ್ಯಂ ಕಾಲ ಸಂಪ್ರತಿಪಾಲ್ಯತಾಮ್ ।**
**ತತೋ ಭವಂತಃ ಶ್ರೋಷ್ಯಂತಿ ಮಾಂ ಚ ದ್ರಕ್ಷ್ಯಂತಿ ತತ್ವತಃ ॥ 8 ॥**

**ಯದ್ಯಯಂ ಭವತಾಂ ಶ್ಲಾಘ್ಯಃ ಬಾಂಧವೋ ದೇವಸಪ್ರಭಃ ।**
**ಪರಿಜ್ಞಾನೇನ ಕಿಂ ಕಾರ್ಯಂ ಯದ್ಯೇಷೋಽನುಗ್ರಹೋ ಮಮ ॥ 9 ॥**

ವ್ರಜದ ಹಿರಿಯ ಹಾಗೂ ಕಿರಿಯ ಗವಳಿಗರ ಮಾತನ್ನು ಕೇಳಿ ಕಮಲನಯನ ಕೃಷ್ಣನು – ಮಂದಹಾಸ ಬೀರಿ, ಗೋಪಾಲಕರೇ! ನೀವು ನನ್ನನ್ನು ಅತ್ಯಂತ ಪ್ರಚಂಡ ಪರಾಕ್ರಮಿಯೆಂದು ತಿಳಿದಿರುವಿರಿ, ಹಾಗೆ ತಿಳಿಯಬೇಡಿರಿ, ನಾನೇನು ಅಂಥಹ ದೊಡ್ಡ ವ್ಯಕ್ತಿಯೇನಲ್ಲ. ನನ್ನಲ್ಲಿ ನೀವು ತಿಳಿದಂತೆ ಅಂತಹ ಲೋಕೋತ್ತರ ಶಕ್ತಿಯೇನೂ ಇಲ್ಲ. ನಾನೂ ಸಹ ನಿಮ್ಮಂತೆ ಒಬ್ಬ ಸಾಮಾನ್ಯ ಗೋಪಾಲ ಅಷ್ಟೇ! ನಾನೂ ಸಹ ನಿಮ್ಮ ಜಾತಿಯವನಾದ ಆಪ್ತಬಾಂಧವನೆಂದು ತಿಳಿದರೆ ಸಾಕು. ಇನ್ನೂ ನನ್ನ ನಿಜವಾದ ಸ್ವರೂಪ ತಿಳಿಯಲಿಚ್ಛಿಸಿದರೆ ಕಾಲ ಪ್ರತೀಕ್ಷೆ ಮಾಡಿರಿ. ನನ್ನ ನಿಜರೂಪ ತೋರಿಸುವೆನು. ಈಗ ನನ್ನನ್ನು ನಿಮ್ಮ ಬಂಧು ಎಂದಿಷ್ಟು ತಿಳಿದರೆ ಅದೇ ನನ್ನ ಮೇಲೆ ನೀವು ಮಾಡಿರುವ ಉಪಕಾರವು ಅವನಾರೆಂದು ತಿಳಿಯುವುದರಿಂದ ನಿಮಗೇನು ಲಾಭ? ಅದನ್ನು ತಿಳಿಯಲು ಪ್ರಯತ್ನ ಮಾಡದಿರುವುದೇ ನೀವು ನನ್ನಲ್ಲಿ ಮಾಡುವ ಮಹಾನ್ ಅನುಗ್ರಹವು ಎಂದನು.

**ಏವ ಮುಕ್ತಾಸ್ತು ತೇ ಗೋಪಾಃ ವಸುದೇವಸುತೇನ ವೈ ।**
**ಬದ್ಧಮೌನಾಃ ದಿಶಃ ಸರ್ವೇ ಭೇಜಿರೇ ಪಿಹಿತಾನನಾಃ ॥ 10 ॥**

ಅದನ್ನು ಕೇಳಿ ಕೃಷ್ಣನನ್ನು ಪ್ರಶ್ನಿಸಲು ಬಂದ ಗೋಪವೃದ್ಧರು ಮೌನವಹಿಸಿದರು

**ಶರತ್ಕಾಲದ ಬೆಳದಿಂಗಳಲ್ಲಿ ವಿಹಾರ**

**ಕೃಷ್ಣಸ್ತು ಯೌವನಂ ದೃಷ್ಟ್ವಾ ನಿಶಿ ಚಂದ್ರಮಸೋ ವನಮ್**
**ಶಾರದೀಂ ಚ ನಿಶಾಂ ರಮ್ಯಾಂ ಮನಶ್ಚಕ್ರೇ ರತಿಂ ಪ್ರತಿ ॥ 11 ॥**

ಶ್ರೀಕೃಷ್ಣನ ಮಾತನ್ನು ಕೇಳಿ ಗೋಪಾಲಕರೆಲ್ಲರೂ ಸುಮ್ಮನಾದರು. ಮತ್ತೊಮ್ಮೆ ಎಂದೂ ಈ ವಿಚಾರವನ್ನೆತ್ತಲಿಲ್ಲ. ಆದರೂ ಪೂತನಿ. ಶಕಟ. ತೃಣಾವತಧ.

ಕಾಳಯ ಇವರ ನಿಗ್ರಹ ಹಾಗೂ ಗೋವರ್ಧನೋದ್ಧಾರ ನೋಡಿ ಇವನು ಯಾರೋ ದೇವಾಧಿದೇವನೆ ಇರಬೇಕೆಂದು ತಿಳಿದಿದ್ದರು.

ಮುಂದೆ ಕೆಲವು ದಿನಗಳು ಕಳೆದುಹೋದವು. ಶರತ್ಕಾಲ ಪ್ರಾಪ್ತವಾಯಿತು. ತಳ ನೀರಿನ ಕೊಳಗಳು, ರಾತ್ರಿಯಲ್ಲಿ ಕನ್ನೈದಿಲೇ ಅರಳ ನಿಂತವು. ಸರ್ವತ್ರ ಚಂದ್ರನ ಬೆಳದಿಂಗಳು ಹಾಲು ಚೆಲ್ಲಿದಂತೆ ಹರಡಿತ್ತು. ಚಂದ್ರನು ದಿವ್ಯಕಾಂತಿಯಿಂದ ಬೆಳಗುತ್ತಿರುವಾಗ ವಿಹಾರ ಮಾಡಲಚ್ಛಿಸಿದನು.

## ವಿವಿಧ ಕ್ರೀಡೆ

**ಸ ಕರೀಷಾಂಗಾರಾಸು ವ್ರಜರಥ್ಯಾಸು ವೀರ್ಯವಾನ್ ।**
**ವೃಷಾಣಾಂ ಜಾತದರ್ಪಾಣಾಂ ಯುದ್ಧಾನಿ ಸಮಯೋಜಯತ್ ॥ 12 ॥**
**ಗೋಪಾಲಾಂಶ್ಚ ಬಲೋದಗ್ರಾನ್ ಯೋಧಯಾಮಾಸ ವೀರ್ಯವಾನ್ ।**
**ವನೇ ಸ ವೀರೇ ಗಾಶ್ಚೈವ ಜಗ್ರಾಹ ಗ್ರಾಹವದ್ ವಿಭುಃ ॥ 13 ॥**

ಶ್ರೀಕೃಷ್ಣನು ಬೆರಣಿಯನ್ನು ಅಂಗರಾಗಗಳಂತೆ ಬಳದು ಕೊಂಡಿರುವ ಗೊಲ್ಲರ ಬೀದಿಗಳಲ್ಲಿ ದರ್ಪಿಷ್ಟವಾಗಿದ್ದ ಗೂಳಿಗಳ ನಡುವೆ ಕಾಳಗ ವೇರ್ಪಡಿಸಿದ. ಹಾಗೇ ಬಲಿಷ್ಠರಾದ ಗೋಪಾಲಕರ ನಡುವೆ ಜಟ್ಟಿಕಾಳಗ ಏರ್ಪಡಿಸಿದನು.

ಕಾಡಿನಲ್ಲಿ ಓಡಿಹೋಗುತ್ತಿದ್ದ ಗೂಳಿಗಳನ್ನು ಮೊಸಳೆಯ ಮನುಷ್ಯನನ್ನು ಹಿಡಿಯುವಂತೆ ಬಲವಾಗಿ ಹಿಡಿದು ನಿಲ್ಲಿಸುತ್ತಿದ್ದನು.

## ರಾಸಕ್ರೀಡೆ[1]

**ಯುವತೀಃ ಗೋಪಕನ್ಯಾಶ್ಚ ರಾತ್ರೌ ಸಂಕಾಲ್ಯ ಕಾಲವಿತ್ ।**
**ಕೈಶೋರಕಂ ಮಾನಯನ್ ವೈ ಸಹ ತಾಭಿಃ ಮುಮೋದ ಹ ॥ 14 ॥**

---

1. **ರಾಸಕ್ರೀಡೆ:**

ಪರೀಕ್ಷಿತನು ಶುಕರಲ್ಲಿ ಧರ್ಮರಕ್ಷಣೆಗಾಗಿ ಬಂದವನು ಪರನಾರೀಸಂಗ ಮಾಡಬಹುದೆ? ಶುಕರು – ಬೆಂಕಿಗೆ ಸಕಲ ವಸ್ತು ತಿಂದುಹಾಕುವ ಶಕ್ತಿಯಿದೆ ತಿನ್ನುತ್ತಾನೆ. ಅತೀ ತೇಜಸ್ಸು ಇರುವವರಿಗೆ ದೋಷವಿಲ್ಲ. ಪಾಪಕರ್ಮ ಮಾಡಿದರೂ ಜೀರ್ಣಿಸಿಕೊಳ್ಳಬಲ್ಲವರಿದ್ದಾರೆ. ಭಗವಂತನನ್ನು ನೋಡಿದ ಜ್ಞಾನಿಗಳಿಗೂ ಪಾಪಕರ್ಮ ಮಾಡಿದಾಗ ಅವರಿಗೆ ಅನಿಷ್ಟವಿಲ್ಲದಿರುವಾಗ ಭಗವಂತನಿಗೇನು ಅನಿಷ್ಟ? ಮತ್ತೊಂದು ವಿಷಯ – ಶ್ರೀಕೃಷ್ಣನು ಆಪ್ತಕಾಮನು ಯಾರಿಂದ ಅವನಿಗೆ

**ತಾಸ್ತಸ್ಯವದನಂ ಕಾಂತಂ ಕಾಂತಾ ಗೋಪಸ್ತ್ರಿಯೋ ನಿಶಿ ।**
**ಪಿಬಂತಿ ನಯನಾಕ್ಷೇಪೈಃ ಗಾಂ ಗತಂ ಶಶಿನಂ ಯಥಾ ॥ 15 ॥**
**ಹರಿತಾಲಾರ್ದ್ರಪೀತೇನ ಸ ಕೌಶೇಯೇನ ವಾಸಸಾ ।**
**ವಸಾನೋ ಭದ್ರ ವಸನಂ ಕೃಷ್ಣಃ ಕಾಂತತರೋಭವತ್ ॥ 16 ॥**

---

ಆಗಬಹುದಾದ್ದೇನೂ ಇಲ್ಲ. ಆದರೂ ಗೋಪಿಯರೊಂದಿಗೆ ರಮಿಸಿದನೆಂದರೆ ಗೋಪಿಯರಲ್ಲಿರುವ ತನ್ನ ಪತ್ನೀ ಲಕ್ಷ್ಮೀದೇವಿಯೊಂದಿಗೆ ರಮಿಸಿದನು. ರಮಾದೇವಿಯ ಅಪೇಕ್ಷೆಯೂ ಅವನಿಗಿರುವುದಿಲ್ಲ. ರಮಾದೇವಿಯಿಂದ ಅವಳಿಗಾಗಿ ರಮಿಸಿದರೂ ರಮಾದೇವಿಯಲ್ಲಿ ತನ್ನ ಸ್ತ್ರೀರೂಪವಿಟ್ಟು ರಮಿಸುವನು. **"ರಮಯಾ ರಮಮಾಣೋಪಿ ತಸ್ಥೇನೈವ ಸ್ತ್ರಿಯಾ ತ್ಮ ನಾ ರಮತೇ ।** –*ಭಾ.ತಾ.* ಇತರ ವಿವಾಹಿತ ಗೋಪಿಯರಲ್ಲಿ ರಮಿಸುವಾಗಲೂ ಅನಾಸಕ್ತಿಯಿಂದಲೇ ಇದ್ದ. ಮೂಢರು ಪರನಾರೀಸಕ್ತನೆಂದರು. **"ಮನ್ಯತೇ ತನ್ಮಯಂ ಲೋಕೋ ಹ್ಯಸಂಗಮಪಿ ಸಂಗಿನಂ"** ಗೋಪಿಯರು ಬೆಳದಿಂಗಳ ರಾತ್ರಿಯಲ್ಲಿ ಬಂದು ಸೇರಿ ಸುಖಿಸಿದರು. ಕೃಷ್ಣನು ಗೋಪಿಯರ ಶರೀರವನ್ನು ಎರಡು ಶರೀರವಾಗಿ ಮಾಡಿ, ಒಂದು ಶರೀರ ತನ್ನ ಬಳಿ ಇರುವಂತೆಯೂ, ಮತ್ತೊಂದು ಶರೀರ ತಮ್ಮ ಪತಿಯ ಪಕ್ಕದಲ್ಲಿಯೇ ಇರುವಂತೆಯೂ ಮಾಡಿದ್ದನು. ಇದರಿಂದ ಗಂಡಂದಿರೆ ಆಕ್ಷೇಪ ಮಾಡದಿರುವಾಗ ನೀವೇಕೆ ಆಕ್ಷೇಪ ಮಾಡುವಿರಿ.

ಪ್ರತಿಯೊಬ್ಬ ಅಂಗನೆಯರ ಮಧ್ಯದಲ್ಲಿ ಮಾಧವನಿರುತ್ತಿದ್ದನು. ಪ್ರತಿಯೊಬ್ಬ ಶ್ರೀಕೃಷ್ಣನ ಮಧ್ಯದಲ್ಲಿಯೂ ಅಂಗನೆಯರಿರುತ್ತಿದ್ದರು. ಈ ಮಂಡಲ ಮಧ್ಯದಲ್ಲಿ ಮತ್ತೊಬ್ಬ ಕೃಷ್ಣನು ಕೊಳಲೂದುತ್ತಾ ಇರುತ್ತಿದ್ದನು.

ಒಣಗಿರುವ ಸೆಗಣಿಯ ಧೂಳನ್ನು ಅಂಗರಾಗವಾಗಿ ಹೊಂದಿದ್ದ ಗೋಪಿಯರು ಕೃಷ್ಣನೊಡನೆ ರಮಿಸುತ್ತಾ ಹೆಣ್ಣಾನೆಗಳು ಸಲಗವನ್ನು ಸರಿಸುವಂತೆ ಅನುಸರಿಸಿ ಹೋಗುತ್ತಿದ್ದರು. ಗೋಪಿಯರು ಅರಳಿರುವ ನೇತ್ರಗಳಿಂದ ಕೃಷ್ಣರೂಪವನ್ನು ಪಾನಮಾಡುತ್ತಿದ್ದರು. ಶ್ರೀಕೃಷ್ಣನನ್ನು ಸೇರಿ ಅಧರಾಮೃತ ಲಾಲಸೆಯಿಂದ ಕೂಡಿದ್ದ ಅವರು ಶರಧೃತುವಿನ ರಾತ್ರಿ ಬೆಳದಿಂಗಳು ಹಾಲುಚೆಲ್ಲಿದಂತೆ ಇತ್ತು. ಸುಗಂಧ ಬೀರುವ ಮಂದಾಗಿಲದ ಹುಣ್ಣಿಮೆಯ ರಾತ್ರಿಯಲ್ಲಿ ಅವನೊಂದಿಗೆ ವಿಹರಿಸುತ್ತಾ ಮುಖಾರವಿಂದದ ರಸಪಾನ ಮಾಡಿದರು. ಶ್ರೀಕೃಷ್ಣನು ತಮ್ಮ ಹೆಸರನ್ನು ಕೂಗಿದಾಗಲಂತೂ ವರ್ಷಾತಿರೇಕದಿಂದ ಉಬ್ಬಿ ಹೋಗುತ್ತಿದ್ದರು.

ಬೈತಲೆಯನ್ನು ತೆಗೆದು ತಲೆಯ ಮುಡಿಯನ್ನು ಕಟ್ಟಿದ್ದರು. ರಾಸಕ್ರೀಡಾ ಸಮಯದಲ್ಲಿ ಅವು ಬಿಚ್ಚಿ ಹೋಗಿ ಸ್ತನಗಳ ಮೇಲೆ ಚದುರಿ ಬಿದ್ದಿದ್ದವು. ಹೀಗೆ ಬಗೆಬಗೆಯ ರಾಸಕ್ರೀಡೆ ಆಡಿದ ಕೃಷ್ಣನ ಸುಂದರವಾಗಿ ಗಾನ ಮಾಡಿದರು.

ಸಮಯಜ್ಞನಾದ ಶ್ರೀಕೃಷ್ಣನು ತನಗೆ ಇನ್ನೂ ಕಿಶೋರಾವಸ್ಥೆ ಮೀರಿಲ್ಲ. ಈಗ ಮಾಡುವ ವಿಹಾರ ವಿನೋದಗಳು ದೋಷಾವಹವಲ್ಲವೆಂದು ತಿಳಿದು, ರಮ್ಮಣಿಯವಾದ ಶರತ್ಕಾಲದ ಯಾಮಿನಿಯಲ್ಲಿ ಯುವತಿಯರಾದ ಗೋಪಕನ್ಯೆಯರನ್ನು ರಾತ್ರಿಯಲ್ಲಿ ಅರಣ್ಯಕ್ಕೆ ಕರೆದೊಯ್ದು ಅವರೊಂದಿಗೆ ವಿವಿಧ ವಿಹಾರ ಮಾಡಿದನು. ಕಾಂತಿಯುಕ್ತ ಆ ಕಾಂತೆಯರು ಧರೆಗಿಳಿದು ಬಂದ ಚಂದ್ರಮನ ಮುಖವನ್ನೆ ಹೋಲುವ ಶ್ರೀಕೃಷ್ಣ ಮುಖ ಕಮಲದ ಮಧುರಸವನ್ನು ದುಂಬಿಗಳಂತೆ ಹೀರುತ್ತಿದ್ದರು.

**ಸ ಬದ್ಧಾಂಗದ ನಿರ್ವ್ಯೂಹಃ ಚಿತ್ರಯಾ ವನಮಾಲಯಾ ।**
**ಶೋಭಮಾನೇ ಹಿ ಗೋವಿಂದಃ ಶೋಭಯಾಮಾಸ ತದ್ ವ್ರಜಮ್॥17॥**

**ನಮೋ ದಾಮೋದರಾಯೇತಿ ಗೋಪಕನ್ಯಾಃ ತದಾಬ್ರುವನ್ ।**
**ವಿಚಿತ್ರಂ ಚರಿತಂ ಘೋಷೇ ದೃಷ್ಟ್ವಾ ತತ್ತಸ್ಯ ಭಾಸ್ವತಃ ॥ 18 ॥**

ಗೋವ್ರಜದಲ್ಲಿ ತೇಜಸ್ವಿಯಾದ ಕೃಷ್ಣನ ಚಿತ್ರವಿಚಿತ್ರ ಮಹಿಮೆ ನೋಡುತ್ತಿದ್ದ ಆ ಗೋಪ ಕನ್ಯೆಯರು ದಾಮೋದರನೇ ನಿನ್ನ ಮಹಿಮೆಗೆ ನಮೋ ನಮೋ ಎಂದರು. ಶ್ರೀಕೃಷ್ಣನನ್ನು ಆಲಂಗಿಸಿದರು. ಪುನಃ ಪುನಃ ಚಂಚಲಕನ್ನೆಯರು ಎವೆಯಿಕ್ಕದೆ ಕೃಷ್ಣನನ್ನೆ ನೋಡುತ್ತಿದ್ದರು.

**ತಾ ವಾರ್ಯಮಾಣಾಃ ಪತಿಭಿಃ ಮಾತೃಭಿಃ ಭ್ರಾತೃಭಿಸ್ತಥಾ ।**
**ಕೃಷ್ಣಂ ಗೋಪಾಂಗನಾ ರಾತ್ರೌ ಮೃಗಯಂತೆ ರತಿಪ್ರಿಯಾಃ ॥ 19 ॥**

**ತಾಸ್ತು ಪಂಕ್ತೀಕೃತಾಃ ಸರ್ವಾ ರಮಯಂತಿ ಮನೋರಮಮ್ ।**
**ಗಾಯಂತ್ಯಃ ಶ್ರೀಕೃಷ್ಣ ಚರಿತಂ ದ್ವಂದ್ವಶೋ ಗೋಪಕನ್ಯಕಾಃ ॥ 20 ॥**

**ಕೃಷ್ಣಲೀಲಾನುಕಾರಿಣ್ಯಃ ಕೃಷ್ಣ ಪ್ರಣಿಹಿತೇಕ್ಷಣಾಃ ।**
**ಕೃಷ್ಣಸ್ಯ ಗತಿ ಗಾಮಿನ್ಯಃ ತರುಣ್ಯಸ್ತಾಃ ವರಾಂಗನಾಃ ॥ 21 ॥**

ಗೋಪಿಯರು ತಮ್ಮ ಪತಿಯಿಂದಲೂ ತಾಯಿ ತಂದೆ, ಅಣ್ಣ-ತಮ್ಮಂದಿರಿಂದಲೂ ಕೃಷ್ಣನ ಜೊತೆಗೆ ಹೋಗದಂತೆ ತಡೆಯಲ್ಪಟ್ಟರೂ, ಕೃಷ್ಣನೊಂದಿಗೆ ರಮಿಸುವ ಆಸೆಯಿಂದ ಕೃಷ್ಣ ಸಮುದ್ರ ಸೇರಿದರು. ಶ್ರೀಕೃಷ್ಣನಿಗಾಗಿ ರಾತ್ರಿಯೆಲ್ಲ ಹುಡುಕಾಡಿದರು. ಶ್ರೀಕೃಷ್ಣನನ್ನು ಹಿಡಿದು ಅವನನ್ನು ತಮ್ಮ ಮಧ್ಯದಲ್ಲಿ ಸೇರಿಸಿಕೊಂಡು ಮಂಡಲಾಕಾರವಾಗಿ ನಿಂತು

ಅವನೊಂದಿಗೆ ವಿಹರಿಸಿದರು. ಗೋಪಿಯರ ಅಕ್ಕ-ಪಕ್ಕಗಳಲ್ಲಿ ಶ್ರೀಕೃಷ್ಣರಿಬ್ಬರು ಇರುತ್ತಿದ್ದರು. ಶ್ರೀಕೃಷ್ಣನೊಂದಿಗೆ ಸೇರಿ ಕೃಷ್ಣಚರಿತ್ರೆ ಗಾನ ಮಾಡುತ್ತಾ ವಿಹರಿಸಿದರು. ಕೃಷ್ಣಲೀಲೆಗಳನ್ನೇ ಅನುಸರಿಸಿ ನಾಟ್ಯವಾಡುತ್ತಿದ್ದರು. ಅವನು ಹೋದಲ್ಲಿಗೆ ಹೋಗುತ್ತಿದ್ದರು. ಒಂದು ಕ್ಷಣ ಬಿಟ್ಟಿರುತ್ತಿರಲಿಲ್ಲ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ರಾಸಕ್ರೀಡೆವೆಂಬಲ್ಲಿ
ಇಪ್ಪತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 21 ವಿಷ್ಣುಪರ್ವ

## ಅಥ ಏಕವಿಂಶೋಽಧ್ಯಾಯಃ

### [1]ಅರಿಷ್ಟಾಸುರ ವಧೆ

*ವೈಶಂಪಾಯನ ಉವಾಚ–*

ಪ್ರದೋಷಾರ್ಧೇ ಕದಾಚಿತ್ತು ಕೃಷ್ಣೇ ರತಿಪರಾಯಣೇ ।
ತ್ರಾಸಯನ್ ಸಮದೋ ಗೋಷ್ಠಂ ಅರಿಷ್ಟಃ ಪ್ರತ್ಯದೃಶ್ಯತ ॥ 1 ॥
ನಿರ್ವಾಣಾಂಗಾರ ಮೇಘಾಭಃ ತೀಕ್ಷ್ಣ ಶೃಂಗೋಽರ್ಕಲೋಚನಃ ।
ಕ್ಷುರ ತೀಕ್ಷ್ಣಾಗ್ರ ಚರಣಃ ಕಾಲಃ ಕಾಲ ಇವಾಪರಃ ॥ 2 ॥
ಲೇಲಿಹಾನಃ ಸನಿಷ್ಪೇಷಂ ಜಿಹ್ವಯೌಷ್ಠೌ ಪುನಃ ಪುನಃ ।
ಗರ್ವಿತಾವಿದ್ಧಲಾಂಗೂಲಃ ಕಠಿಣ ಸ್ಕಂಧ ಬಂಧನಃ ॥ 3 ॥
ಶಕೃನ್ಮೂತ್ರೋಪಲಿಪ್ತಾಂಗಃ ಗವಾಮುದ್ವೇಜನೋ ಭೃಶಮ್ ।
ಮಹಾಕಟಿಃ ಸ್ಥೂಲಮುಖೋ ದೃಢಜಾನುಃ ಮಹೋದರಃ ॥ 4 ॥

1. ಅರಿಷ್ಟಾಸುರ:–
ನಾಮ್ನಾಪ್ಯರಿಷ್ಟ ಉರುಗಾಯ ವಿಲೋಮ ಚೇಷ್ಟೋ ಗೋಷ್ಠಂ ಜಗಾಮ
ವೃಷಭಾಕೃತಿರಪ್ಯವಧ್ಯಃ । ಶಂಭೋರ್ವರಾದಸುಗತಶ್ಚ ಸದೈವ ಕಂಸಂ
ಗಾಃ ಭೀಷಯಂತಮಮುಮಾಹ್ವಯದಾಶು ಕೃಷ್ಣಃ ॥ *–ತಾ.ನಿ.13/78*
ಅರಿಷ್ಟಾಸುರ ಎತ್ತಿನ ವೇಷ ಧರಿಸಿದ ದೈತ್ಯ ರುದ್ರ ವರದಿಂದ ಅವಧ್ಯತ್ವವಿತ್ತುಗುಟುರು ಹಾಕಿದನೆಂದರೆ ಗರ್ಭಿಣಿ ಗೋವುಗಳ ಗರ್ಭಸ್ರಾವವಾಗುತ್ತಿತ್ತು.

ಒಂದು ದಿನ ಶ್ರೀಕೃಷ್ಣನು ಬೆಳದಿಂಗಳ ರಾತ್ರಿಯಲ್ಲಿ ರಾಸಕ್ರೀಡೆಯಲ್ಲಿ ತೊಡಗಿದ್ದನು. ರಾತ್ರಿಯಲ್ಲಿ ಮೊದಲ ಅರ್ಧಭಾಗ ಕಳೆದಿತ್ತು. ಆಗ ದುಷ್ಟನೂ ಮಹಾದೋರ್ಬಲಿಷ್ಠನೂ ಆದ ಅರಿಷ್ಟನೆಂಬ ದೈತ್ಯನು ಎತ್ತಿನ ವೇಷ ಧರಿಸಿ ವ್ರಜಕ್ಕೆ ಬಂದನು. ಕಪ್ಪು ಮೋಡದಂತೆ ಬಣ್ಣವೂ ದಪ್ಪ ಶರೀರವುಳ್ಳ ಆ ದೈತ್ಯಾಧಮನು ಖುರಪುರದಿಂದ ನೆಲವನ್ನು ಕೆದರುತ್ತಾ ಉರಿಗಣ್ಣಿನಿಂದ ಕೆಕ್ಕೆದುರಿಸಿ ನೋಡುತ್ತಾ ಬರುತ್ತಿದ್ದನು. ಕಜ್ಜಲಪರ್ವತದಂತಹ ಸ್ಥೂಲದೇಹ, ಚೂಪಾದ ಕೋಡುಗಳುಳ್ಳ ದೈತ್ಯನು ಎಲ್ಲರಿಗೂ ಕಾಲಪುರುಷನಂತೆಯ ಕಾಣುತ್ತಿದ್ದ. ಅತ್ಯಂತ ಬಲಗರ್ವಿತ ದೈತ್ಯನು ಜೋಲ್ಲಾಲಿಗೆಯಿಂದ ತುಟಿಗಳನ್ನು ಸವರುತ್ತಾ, ತನ್ನ ಬಾಲವನ್ನು ಮೇಲಕ್ಕೆ ನಿಮಿರಿನಿಲ್ಲಿಸುತ್ತಾ, ಭಯಂಕರವಾಗಿ ಗುಟುರು ಹಾಕಿದಾಗ ತುರುಕರುಗಳಲ್ಲ ಗುಟುರುಧ್ವನಿಗೆ ಹೆದರಿ ಕಂಗಾಲಾಗಿ ಅಂಬಾರವರಿಂದ ಚದುರಿ ಹೋದವು. ಮಲಮೂತ್ರದಿಂದ ಅದರ ಅಂಗಾಂಗಗಳೆಲ್ಲವೂ ತೊಯ್ದು ಹೋಗಿದ್ದವು.

ಅರಿಷ್ಟಾಸುರನ ಹೆಗಲ ಮೇಲಿನ ಹಿಣಿಯು ಪರ್ವತವಂತೆ ಉಬ್ಬಿ ಪ್ರಮಾಣ ಮೀರಿ ಬೆಳೆದಿತ್ತು. ಪಾಪಿದೈತ್ಯನು ದಾರಿಯಲ್ಲಿ ಸಿಕ್ಕಿದ ಅಕ್ಕಪಕ್ಕದ ದೊಡ್ಡ ವೃಕ್ಷಗಳನ್ನೆಲ್ಲ ತಿವಿದು ಕೆಡವುತ್ತಿದ್ದನು. ಈ ತರುಘಾತದ ಚಿಹ್ನೆ ಹಣೆಯಲ್ಲಿ ಎದ್ದು ಕಾಣುತ್ತಿತ್ತು.

**ಗವಾರೋಹೇಷು ಚಪಲಃ ತರುಘಾತಾಂಕಿತಾನನಃ ।**

**ಯುದ್ಧ ಸಜ್ಜ ವಿಷಾಣಾಗ್ರೋ ದ್ವಿಷದ್ ವೃಷಭ ಸೂದನಃ ॥ 5 ॥**

**ಅರಿಷ್ಟೋನಾಮ ಹಿ ಗವಾಮರಿಷ್ಟೋ ದಾರುಣಾಕೃತಿಃ ।**

**ದೈತ್ಯೋ ವೃಷಭರೂಪೇಣ ಗೋಷ್ಠಾನ್ ವಿಪರಿಧಾವತಿ ॥ 6 ॥**

**ಪಾತಯಾನೋ ಗವಾಂ ಗರ್ಭಂ ದೃಪ್ತೋ ಗಚ್ಛತ್ಯನಾರ್ತವಮ್ ।**

**ಭಜಮಾನಶ್ಚ ಚಪಲಃ ಗೃಷ್ಟೀಃ ಸಂಪ್ರಚಚಾರ ಹ ॥ 7 ॥**

ಸೊಂಟ ಪ್ರದೇಶ ವಿಶಾಲವಾಗಿಯೂ, ದೊಡ್ಡದಾದ ಮುಖ, ಚಲಿಸುತ್ತಿರುವ ಗಂಗೆ ದೊಗಲು, ಕೊಂಬುಗಳನ್ನು ಕೆಳಗೆ ಮಾಡಿಕೊಂಡು ಹಾರುತ್ತಾ ಹೆದರಿಸುತ್ತಾ ಹೋಗುತ್ತಿದ್ದ ಇವನು ಗೋಷ್ಠಕ್ಕೆ ಗೋಪಾಲಕರಿಗೆ, ಗೋವುಗಳಿಗೆ

---

ಯಸ್ಯ ನಿರ್ಹ್ರಾದಿತೇನಾಂಗ ನಿಷ್ಠುರೇಣ ಗವಾಂ ನೃಣಾಮ್ ।
ಪತಂತ್ಯಕಾಲತೋ ಗರ್ಭಾಃ ಸ್ರವಂತಿ ಸ್ಮ ಭಯೇನ ವೈ ॥ *–ಭಾಗ 10/36/3,4*

ಅನಿಷ್ಟವುಂಟು ಮಾಡುವುದೇ ಇವನ ಉದ್ದೇಶವಿತ್ತು. ಕಂಸನಿಂದ ಪ್ರೇಷಿತನಾದ ಅರಿಷ್ಟಾಸುರನು ಬೆದೆಬಾರದ ಗೋವುಗಳ ಮೇಲೇರುವ ಚಪಲನೂ, ಒಂದು ಬಾರಿ ಮಾತ್ರ ಕರು ಹಾಕಿರುವ ತಾಯಿ ಗೋವುಗಳನ್ನು ಭೋಗಿಸುತ್ತಾ ಬಂದನು. ಗರ್ಭಧಾರಣೆಯಾದ ಗೋವುಗಳ ಗರ್ಭಪಾತ ಮಾಡಿಸುವವನಾಗಿ, ತನ್ನ ಚೂಪಾದ ಕೊಂಬುಗಳಿಂದ ಅನೇಕ ತುರುಕರುಗಳನ್ನು ತಿವಿದು ಅನಾಹುತವುಂಟು ಮಾಡಿದನು.

## ಕೇಶವನ ಮೇಲೆರಗಿದ ಅರಿಷ್ಟ

**ಗೋಷ್ಠೇಷು ನ ರತಿಂ ಲೇಭೇ ವಿನಾ ಯುದ್ಧೇನ ದುರ್ಮದಃ ।**
**ಕಸ್ಯಚಿತ್ ತ್ವಥ ಕಾಲಸ್ಯ ಸ ವೃಷಃ ಕೇಶವಾಗ್ರತಃ ॥ 8 ॥**
**ಆಜಗಾಮ ಬಲೋದಗ್ರೋ ವೈವಸ್ವತವಶೇ ಸ್ಥಿತಃ ।**
**ಚಕಾರ ನಿರ್ವೃಷಂ ಗೋಷ್ಠಂ ನಿರ್ವತ್ಸ ಶಿಶು ಪುಂಗವಮ್ ॥ 9 ॥**

ಇಷ್ಟೆಲ್ಲ ಅನಾಹುತ ಮಾಡಿದ್ದರೂ ಆ ಮದೋನ್ಮತ್ತ ಅರಿಷ್ಟನಿಗೆ ಅತ್ಯಾಚಾರದ ತೃಪ್ತಿವುಂಟಾಗಿದ್ದಿಲ್ಲ, ಕೊಂಬುಗಳನ್ನು ಮುಂದು ಮಾಡುತ್ತಾ ಯುದ್ಧಕ್ಕೆ ಸಜ್ಜಾಗಿಯೆ ಇರುತ್ತಿದ್ದನು. ಒಂದಾನೊಂದು ಸಮಯದಲ್ಲಿ ಯಮನ ಕೈಗೆ ಸಿಕ್ಕು ಬಿದ್ದಂತೆ ಶ್ರೀಕೃಷ್ಣನ ಸಮ್ಮುಖಕ್ಕೆ ಬಂದನು. ಎದುರಿಗಿದ್ದ ಶ್ರೀಕೃಷ್ಣನನ್ನೂ ಲೆಕ್ಕಿಸದೆ ಕೊಟ್ಟಿಗೆಗಳಿಗೆ ನುಗ್ಗಿ ಅಲ್ಲಿದ್ದ ಗೋವುಗಳಿಗೆ, ಎತ್ತುಗಳಿಗೆ ಬಾಧೆವುಂಟು ಮಾಡಿದನು. ಗೋವ್ರಜದಲ್ಲಿ ಒಂದು ಎತ್ತನ್ನೂ ಕರುವನ್ನೂ ಉಳಿಸದೆ ಓಡಿಸಿದನು. ಸಿಡಿಲು ಗುಡುಗಿನಿಂದ ಗುಡುಗುತ್ತಾ ಇರುವ ನೀಲಜೀಮೂತದಂತೆ ಸಿಂಹನಾದ ಮಾಡುತ್ತಿರುವ ಅರಿಷ್ಟಾಸುರನನ್ನು ಚಪ್ಪಾಳೆ ಹೊಡೆದು ತನ್ನ ಕಡೆಗೆ ಬರುವಂತೆ ಪ್ರೇರೇಪಿಸಿದ. ಮುರಾರಿಯ ಕರತಾಡನ ಶಬ್ಧವನ್ನು ಕೇಳಿ ಇದೊಂದು ಯುದ್ಧದ ಕರೆಯೆಂದೆ ಭಾವಿಸಿದ ಆ ದೈತ್ಯನು, ಕೃಷ್ಣನ ಕಡೆ ನುಗ್ಗಿದ.

**ಅಭ್ಯಧಾವತ ಗೋವಿಂದೋ ದೈತ್ಯಂ ವೃಷಭ ರೂಪಿಣಮ್ ।**
**ಸ ಕೃಷ್ಣಂ ಗೋವೃಷೋ ದೃಷ್ಟ್ವಾ ಹೃಷ್ಟಲಾಂಗೂಲ ಲೋಚನಃ ॥ 10 ॥**
**ತಮಾಪತಂತಂ ದುವೃತ್ತಂ ದೃಷ್ಟ್ವಾ ವೃಷಭರೂಪಿಣಮ್ ।**
**ತಸ್ಮಾತ್ ಸ್ಥಾನಾನ್ನ ವ್ಯಚಲತ್ ಕೃಷ್ಣೋ ಗಿರಿರಿವಾಚಲಃ ॥ 11 ॥**

ಶ್ರೀಕೃಷ್ಣನನ್ನು ನೋಡಿದ ಕೂಡಲೇ ಅರಿಷ್ಟಾಸುರನು ಪರಮಹರ್ಷದಿಂದ ಬಾಲವನ್ನು ನಿಮಿರಿಸಿ ಮೇಲೆತ್ತಿ ಅರಳಿದ ನೇತ್ರಗಳಿಂದ ನೋಡಿದ. ಚಪ್ಪಾಳೆಯಿಂದ ಉದ್ವೇಜಿತವಾಗಿ ಯುದ್ಧಕ್ಕಾಗಿ ಹಾತೊರೆಯಿತು. ತನ್ನ ಮೇಲೆ ಬೀಳಲು ಬರುತ್ತಿರುವ ಗೂಳಿಗೆ ಅಳುಕದೆ ತನ್ನ ಸ್ಥಾನದಿಂದ ಅಲ್ಲಾಡದೆ ಅಲ್ಲಿಯೆ ನಿಂತಿದ್ದ.

### ತಿವಿಯಲು ಬಂದ ಅರಿಷ್ಟ

ಸ ಕುಕ್ಷೌ ವೃಷಭೋ ದೃಷ್ಟಿಂ ಪ್ರಣಿದಾಯ ಧೃತಾನನಃ ।
ಕೃಷ್ಣಸ್ಯ ನಿಧನಾಕಾಂಕ್ಷೀ ತೂರ್ಣಮಭ್ಯುತ್ಪಪಾತ ಹ ॥ 12 ॥
ತಮಾಪತಂತಂ ವೇಗೇನ ಪ್ರತಿಜಗ್ರಾಹ ದುರ್ಧರಮ್
ಕೃಷ್ಣಃ ಕೃಷ್ಣಾಂಜನ ನಿಭೋ ವೃಷಂ ಪ್ರತಿವೃಷೋತ್ತಮಃ ॥ 13 ॥

ಕೃಷ್ಣನು ಆ ದುಷ್ಟ ವೃಷಭನ ದುಷ್ಟಾಟೋಪವನ್ನು ದಿಟ್ಟಿಸುತ್ತಾ ನಿಂತುಕೊಂಡನು. ದೈತ್ಯನು ತನ್ನ ಚೂಪಾದ ವಿಷಾಣಾಗ್ರದಿಂದ ಚುಚ್ಚಿ ಕೊಲ್ಲಬೇಕೆಂದು ಶ್ರೀಕೃಷ್ಣನ ಉದರದೆಡೆಗೆ ಗುರಿ ಇಟ್ಟು ಒಮ್ಮೆಲೆ ಏರಿಬಂದನು. ಆಗ ಗೂಳಿಗೆ ಪ್ರತಿಘೂಳಿಯಂತೆ ಅಧಿಕ ಬಲಿಷ್ಠ ಶ್ರೀಕೃಷ್ಣನು ಆ ದೈತ್ಯನ ಮುಖವನ್ನು ಹಿಡಿದು ತಿರುವಿದನು. ಆ ಎತ್ತಿನ ಬಾಯಿಂದ ನೊರೆ ಬಂದು. ಮೂಗಿನ ಹೊರಳೆಗಳಿಂದ ಹೊಡೆಯಲು ಘುಡಿಘುಡಿಸುತ್ತಾ ಕೃಷ್ಣನನ್ನು ಹೊಡೆಯಲು ಬಂದಿತು.

ಬಲವೇಗಗಳಿಂದ ಒಬ್ಬರ ಮೇಲೆ ಒಬ್ಬರು ಬಿದ್ದು ಅವರಿಬ್ಬರೂ ಹೋರಾಡುತ್ತಾ ಇರುವಾಗ ಮಳೆಗಾಲದ ಎರಡು ಹಿರಿದಾದ ಮೋಡಗಳು ವಾಯುಮಂಡಲದಲ್ಲಿ ಡಿಕ್ಕಿ ಹೊಡೆದು ಸಂಘರ್ಷ ಮಾಡುವಂತೆ ತೋರುತ್ತಿತ್ತು.

ತಸ್ಯ ದರ್ಪಬಲಂ ಹತ್ವಾ ಕೃತ್ವಾ ಶೃಂಗಾಂತರೇ ಪದಮ್ ।
ಆ ಪೀಡಯದರಿಷ್ಟಸ್ಯ ಕಂಠಂ ಕ್ಲಿನ್ನಮಿವಾಂಬರಮ್ ॥ 14 ॥
ಶೃಂಗಂ ಚಾಸ್ಯ ಪುನಃ ಸವ್ಯಂ ಉತ್ಪಾಟ್ಯ ಯಮದಂಡವತ್
ತೇನೈವ ಪ್ರಾಹರದ್ ವಕ್ತ್ರೇ ಸ ಮಮಾರ ಭೃಶಂ ಹತಃ ॥ 15 ॥
ಸ ಭಿನ್ನ ಶೃಂಗೋ ಭಗ್ನಾಸ್ಯೋ ಭಂಗಸ್ಕಂಧಶ್ಚ ದಾನವಃ ।
ಪಪಾತ ರುಧಿರೋದ್ಗಾರೀ ಸಾಂಬುಧಾರ ಇವಾಂಬುದಃ ॥ 16 ॥

ಈ ರೀತಿ ಯುದ್ಧವನ್ನು ಮಾಡುತ್ತಿರುವಾಗಲೇ ಗೋವಿಂದನು ಅರಿಷ್ಟಾಸುರನ ಎರಡೂ ಕೊಂಬುಗಳ ನಟ್ಟ ನಡುವೆ ತನ್ನ ಪುಟ್ಟಪಾದವಿಟ್ಟು ಗಟ್ಟಿಯಾಗಿ ಒತ್ತಿ ತುಳಿದು ಕಿತ್ತು ಅವನ ದರ್ಪ–ಬಲಗಳನ್ನಿಳಿಸಿ ಕಂಠವನ್ನು ಒತ್ತಿ, ಒದ್ದೆ ಬಟ್ಟೆಯನ್ನು ಹಿಂಡುವಂತೆ ಹಿಂಡಿ ಕೊಂದು ಹಾಕಿದನು.[2]

ಹಾಗೆಯೇ ಅವನ ಎಡಕೊಂಬನ್ನು ಕಿತ್ತು ಹಾಕಿ, ಯಮನ ದಂಡದಂತೆಯೇ ಇದ್ದ ಆ ಕೊಂಬಿನಿಂದಲೇ ಎತ್ತಿನ ಮುಖಕ್ಕೆ ಹೊಡೆದನು. ಅರಿಷ್ಟಾಸುರನು ತನ್ನ ಕೊಂಬನ್ನು ಮುರಿದುಕೊಂಡು, ಮುಖವು ಜಜ್ಜಿ ಹೋಗಿ, ತಿರುಚಿದ ಕುತ್ತಿಗೆವುಳ್ಳವನಾಗಿ ಮೇಘವು ಮಳೆಯನ್ನು ಸುರಿಸುವಂತೆ ರಕ್ತವನ್ನು ಸುರಿಸುತ್ತಾ ಗತಪ್ರಾಣನಾದನು. ಶ್ರೀಕೃಷ್ಣನು ವೃಷಭಾಸುರ ವಿಧ್ವಂಸಿಯಾದನು. ಮಹಾದೈತ್ಯನನ್ನೂ ಸಹ ನೆಲದ ಮೇಲೆ ಬೀಳಿಸಿ, ಯಜ್ಞದಲ್ಲಿ ಪಶುವನ್ನು ಸಂಹರಿಸುವಂತೆ ಸಂಹರಿಸಿದನು.

**ಗೋವಿಂದೇನ ಹತಂ ದೃಷ್ಟ್ವಾ ದೃಪ್ತಂ ವೃಷಭದಾನವಮ್ ।**
**ಸಾಧು ಸಾಧ್ವಿತಿ ಭೂತಾನಿ ತತ್ಕರ್ಮಾಸ್ಯಾಭಿತುಷ್ಟುವುಃ ॥ 17 ॥**

**ಸ ಚೋಪೇಂದ್ರೋ ವೃಷಂ ಹತ್ವಾ ಕಾಂತವಕ್ತ್ರೋ ನಿಶಾಮುಖೇ ।**
**ಅರವಿಂದಾಭಿನಯನಃ ಪುನರೇವ ರರಾಜ ಹ ॥ 18 ॥**

**ತೇಽಪಿ ಗೋವೃತ್ತಯಃ ಸರ್ವೇ ಕೃಷ್ಣಂ ಕಮಲಲೋಚನಂ ।**
**ಉಪಾಸಾಂಚಕ್ರಿರೇ ಹೃಷ್ಟಾಃ ಸ್ವರ್ಗೇ ಶಕ್ರಮಿವಾಮರಾಃ ॥ 19 ॥**

ಅರಿಷ್ಟಾಸುರನು ಗತಪ್ರಾಣನಾದ ಮೇಲೆ ಅಲ್ಲಿದ್ದ ಗೋಪಾಲಕರೆಲ್ಲರೂ ಭಲೇ ಭಲೇ! ಸಾಧು ಸಾಧು! ಎಂದು ಪ್ರಶಂಸೋದ್ಗಾರಗಳಿಂದ ಶ್ರೀಕೃಷ್ಣನನ್ನು ಜಂಭಾಸುರನನ್ನು ಕೊಂದ ದೇವೇಂದ್ರನನ್ನು ಹೊಗಳುವಂತೆ ಪ್ರಶಂಸಿಸಿದರು. ನಿರ್ಭಯವಾಗಿ ನಲಿದಾಡಿದರು. ಆ ರಾತ್ರಿಯಾರಂಭ ಕಾಲದಲ್ಲಿ

---

2. ಸೋಪ್ಯಸಸಾದ ಹರಿಮುಗ್ರ ವಿಷಾಣ ಕೋಟಿ ಮಗ್ರೇ ನಿಧಾಯ ಜಗೃಹೇ ಸ್ಯ ವಿಷಾಣಮೀಶಃ ।

ಭೂ ವಹೌ ನಿಪಾತ್ಯ ಚ ವೃಷಾಸುರಮುಗ್ರವೀರ್ಯಂ ಯಜ್ಞೇ ಯಥಾ ಪಶುಮಮಾರಯದಗ್ರ್ಯ ಶಕ್ತಿಃ । –*ತಾ.ನಿ. 13/79*

ಹೊಂದಾವರೆಯಂತೆ ಸುರಸುಂದರ ಲೋಚನವುಳ್ಳ ಶ್ರೀಕೃಷ್ಣನು ಮತ್ತೇ ಕೇಲೀವಿಲಾಸಗಳಿಂದ ರಂಜಿಸಿದನು. ಗೋಪಿವಲ್ಲವೀ ಜನರೆಲ್ಲ ಅವನನ್ನು ಉಪಾಸನೆ ಮಾಡಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಅರಿಷ್ಟಾಸುರವಧೆಪೆಂಬಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥



## ಅಥ ದ್ವಾವಿಂಶೋಽಧ್ಯಾಯಃ

### ಕಂಸನ ವಧೆ

ಕೃಷ್ಣಂ ವ್ರಜಗತಂ ಶ್ರುತ್ವಾ ವರ್ಧಮಾನಮಿವಾನಲಮ್ ।
ಉದ್ವೇಗಮಗಮತ್ ಶಂಕಮಾನಃ ತತೋ ಭಯಮ್ ॥ 1 ॥

ಪೂತನಾಯಾಂ ಹತಾಯಾಂ ಚ ಕಾಲಿಯೇ ಚ ಪರಾಜಿತೇ ।
ಧೇನುಕೇ ಪ್ರಲಯಂ ನೀತೇ ಪ್ರಲಂಬೇ ಚ ನಿಪಾತಿತೇ ॥ 2 ॥

ಕಕುದ್ಮಿನಿ ಹತೇಽರಿಷ್ಟೇ ಗೋಪೇಷು ಮುದಿತೇಷು ಚ ।
ಅಚಿಂತ್ಯಂ ಕರ್ಮ ತಚ್ಛ್ರುತ್ವಾ ವರ್ಧಮಾನೇಷು ಶತ್ರುಷು ।
ಪ್ರಾಪ್ತಾರಿಷ್ಟಮಿವಾತ್ಮಾನಂ ಮೇನೇ ಸ ಮಥುರೇಶ್ವರಃ ॥ 3 ॥

ಶ್ರೀಕೃಷ್ಣನು ವ್ರಜದಲ್ಲಿದ್ದು ಪೂತನೆಯನ್ನು ಕೊಂದು ಹಾಕಿ, ಕಾಲಿಯನನ್ನು ಮರ್ದನ ಮಾಡಿ, ಧೇನುಕಾಸುರನನ್ನು ನಿಗ್ರಹಿಸಿ, ಪ್ರಲಂಬನನ್ನು ಘಾತಿಸಿ, ಗೋವರ್ಧನ ಗಿರಿಯನ್ನು ಏಳು ದಿವಸ ಎತ್ತಿ ಹಿಡಿದು, ಇಂದ್ರದೇವನ ದರ್ಪವನ್ನು ಅಳಿಸಿ, ಗೋವುಗಳನ್ನು ರಕ್ಷಿಸಿ, ವೃಷಭಾಸುರನನ್ನು ನಾಮಾವಶೇಷಗೊಳಿಸಿ, ಮಗುವಿದ್ದಾಗಲೇ ಶಕಟವನ್ನೊದ್ದು ಗಾಡಿ ದೈತ್ಯನನ್ನು ಕೊಂದ, ಹೆಮ್ಮರಗಳನ್ನೆ ಉರುಳಿಸಿ, ಧುನಿ ಚಮೂಗಳನ್ನು ಕೊಂದ, ತನ್ನಿಂದ ಕಳುಹಿಸಲ್ಪಟ್ಟ ದೈತ್ಯರನ್ನು ಶಿಕ್ಷಿಸಿದ ವಿಚಾರವನ್ನು ತಿಳಿದ ಕಂಸನಿಗೆ ತನ್ನ ಮೃತ್ಯು ತನಗೆ ಸನ್ನಿಹಿತವಾಯಿತೆಂದು ಭಯಪಟ್ಟನು.

ತನಗೆ ಮೃತ್ಯುಪ್ರಾಯನಾದ ಕೃಷ್ಣನು ಕಾಡ್ಗಿಚ್ಚಿನಂತೆ ವ್ರಜದಲ್ಲಿ ಬೆಳೆಯುತ್ತಿರುವುದನ್ನು ನೋಡಿ ಅವನ ಕೈಕಾಲುಗಳೇ ಅಲ್ಲಾಡದಂತಾದವು. ಪ್ರಾಣವು ಕಂಠಕ್ಕೆ ಬಂದಂತಾಯಿತು.

## ಬಂಧುಗಳನ್ನೆಲ್ಲ ಕಲೆ ಹಾಕಿದ ಕಂಸ

**ತತೋ ಜ್ಞಾತೀನ್ ಸಮಾನಾಯ್ಯ ಪಿತರಂ ಚೋಗ್ರಶಾಸನಃ ।**
**ನಿಶಿ ಸ್ತಿಮಿತಮೂಕಾಯಾಂ ಮಥುರಾಯಾಂ ಜನಾಧಿಪಃ ॥ 4 ॥**
**ವಸುದೇವಂ ಚ ದೇವಾಭಂ ಕಂಕಂ ಚಾಹೂಯ ಯಾದವಮ್ ।**
**ಸತ್ಯಕಂ ದಾರುಕಂ ಚೈವ ಕಂಕಾವಂಗಾರಜಮೇವ ಚ ॥ 5 ॥**
**ಏತಾನ್ ಸ ಯಾದವಾನ್ ಸರ್ವಾನ್ ಆಭಾಷ್ಯ ಶ್ರುಣುತೇತಿ ಚ ।**
**ಉಗ್ರಸೇನ ಸುತೋರಾಜಾ ಪ್ರೋವಾಚ ಮಥುರೇಶ್ವರಃ ॥ 6 ॥**

ಆದರೂ ಭಂಡ ಕಂಸನು ಭೀಕರ ಮೌನದ ರಾತ್ರಿಯ ಏಕಾಂತದಲ್ಲಿ ವೇಳೆಯಲ್ಲಿ ಮಥುರೆಯಲ್ಲಿ ವಾಸವಾಗಿರುವ ತನ್ನ ಆಪ್ತೇಷ್ಟರನ್ನೆಲ್ಲಾ ತನ್ನ ಬಳಗೆ ಕರೆಯಿಸಿಕೊಂಡನು. ಇವರಲ್ಲಿ ಉಗ್ರಶಾಸನ ಕಂಸನ ತಂದೆ ಉಗ್ರಸೇನ ಮಹಾರಾಜನನ್ನೂ, ವಸುದೇವನನ್ನೂ, ಸತ್ಯಕ, ದಾರುಕ, ವಿಪೃಥು, ಕೃತವರ್ಮ, ಭೂರಿಶ್ರವ, ಅಕ್ರೂರ, ಕಂಕ, ಭೋಜ, ವೈರಣ, ವಿಕದ್ರು, ಭಯಶಂಕು, ಅಕ್ಷೋಭ್ಯರಾದ ಭೂರಿಶ್ರವ-ಭೂರಿತೇಜರೆಲ್ಲರನ್ನೂ ತನ್ನೆಡೆಗೆ ಕರೆಯಿಸಿಕೊಂಡನು.

ಈ ಬಂಧುಗಳನ್ನೆಲ್ಲಾ ಉದ್ದೇಶಿಸಿ ಬಂಧುಗಳೇ - ನೀವೆಲ್ಲರೂ ಮಾಡಬೇಕಾಗಿರುವ ಕರ್ತವ್ಯಗಳನ್ನು ತಿಳಿದಿರುವಿರಿ. ವೇದವೇತ್ತರಾದ ನಿಮಗೆ ಹೇಳುವುದೇನಿದೆ? ನ್ಯಾಯಮಾರ್ಗಾವಲಂಬಿಗಳೂ ಕರ್ತವ್ಯ ಪರಾಯಣರಾದ ನೀವು ದೇವತೆಗಳಷ್ಟೇ ಮಾನ್ಯರಾಗಿರುವಿರಿ. ಆಚಾರಾಚರಣದಲ್ಲಿ ಪರ್ವತಗಳಂತೆ ಅಚಲರು. ಗುರುಕುಲ ಶಿಕ್ಷಿತರಾದ ನೀವು ಸುಶಿಕ್ಷಿತರಾಗಿರುವಿರಿ. ಮಂತ್ರಾಲೋಚನೆಗಳನ್ನು ಗುಪ್ತವಾಗಿಡಬಲ್ಲಿರಿ. ನೀತಿಧರ್ಮ ಉಪದೇಶಕರಾದ ನೀವು ಶತ್ರು ರಾಷ್ಟ್ರ ನಾಶ ಮಾಡುವ ಸಾಮರ್ಥ್ಯ ಹೊಂದಿರುವಿರಿ. ಕುಂದಿಲ್ಲದ ಸದಾಚಾರವುಳ್ಳ ನೀವು ಬಯಸಿದರೆ ಸ್ವರ್ಗವನ್ನೂ ನೀಡಬಲ್ಲಿರಿ. ಹೀಗಿರುವಾಗ ಭೂಲೋಕದ ವಿಷಯದಲ್ಲಿ ಹೇಳುವುದೇನಿದೆ?

**ಋಷೀಣಾಮಿವ ವೋ ವೃತ್ತಂ ಪ್ರಭಾವೋ ಮರುತಾಮಿವ ।**
**ರುದ್ರಾಣಾಮಿವ ವೋ ಕ್ರೋಧಃ ದೀಪ್ತಿರಂಗೀರಸಾಮಿವ ॥ 7 ॥**

**ಧೃತಂ ಯದುಕುಲಂ ವೀರ್ಯೈಃ ಭೂತಲಂ ಪರ್ವತೈರಿವ ॥ 8 ॥**

ನಿಮ್ಮ ಚಾರಿತ್ರ್ಯವು ಋಷಿಗಳ ಚಾರಿತ್ರ್ಯದಂತೆಯೂ, ಪ್ರಭಾವ ಮರುದ್ಗಣದಂತೆಯೂ, ನಿಮ್ಮ ಕ್ರೋಧ ರುದ್ರರ ಕ್ರೋಧದಂತೆಯೂ, ನಿಮ್ಮ ತೇಜಸ್ಸಾದರೂ ಅಗ್ನಿಗಳ ತೇಜಸ್ಸಿನಂತೆಯೂ ಇರುತ್ತದೆ.

ಈ ಮಹತ್ತಾದ ಯಾದವಕುಲವು ನಾಶದ ಅಂಚಿನಲ್ಲಿದ್ದಾಗಲ್ಲೆಲ್ಲ ನೀವು ಪರ್ವತಗಳಂತೆ ದೃಢವಾಗಿ ಹಿಡಿದು ಉದ್ಧರಿಸಿರುವಿರಿ. ಹೀಗಿರುವಾಗ ನನಗೆ ಈಗ ಇಷ್ಟು ಅನರ್ಥ ಪರಂಪರೆ ಬಾಧಿಸುತ್ತಿದ್ದರೂ ನೀವು ಮಾತ್ರ ನನ್ನನ್ನು ರಕ್ಷಿಸದೆ ಉದಾಸೀನದಿಂದಿರುವಿರಿ.

### ಕೃಷ್ಣನೆಂಬ ಉಕ್ಕೇರುತ್ತಿರುವ ಸಾಗರದಿಂದ ನನಗೆ ಭಯ

**ಏಷ ಕೃಷ್ಣಃ ಇತಿ ಖ್ಯಾತೋ ನಂದಗೋಪಸುತೋ ವ್ರಜೇ ।**
**ವರ್ಧಮಾನ ಇವಾಂಬೋಧಿಃ ಮೂಲಂ ನಃ ಪರಿಕೃಂತತಿ ॥ 9 ॥**

**ಅನಮಾತ್ಯಸ್ಯ ಶೂನ್ಯಸ್ಯ ಚಾರಾಂಧಸ್ಯ ಮಮೈವ ತು ।**
**ಕಾರಣಾನ್ನಂದಗೋಪಸ್ಯ ಸ ತು ಗೋಪಿತೋ ಗೃಹೇ ॥ 10 ॥**

**ಉಪೇಕ್ಷಿತ ಇವ ವ್ಯಾಧಿಃ ಪೂರ್ಯಮಾಣ ಇವಾಂಬುಧಃ ।**
**ನದನ್ ಮೇಘ ಇವೋಷ್ಣಾಂತೇ ಸ ದುರಾತ್ಮಾ ವಿವರ್ಧತೇ ॥ 11 ॥**

ಕೃಷ್ಣನೆಂಬ ಹೆಸರಿನಿಂದ ಪ್ರಖ್ಯಾತನಾಗಿರುವ ನಂದಗೋಪನ ಮಗ ಈಗ ದಿನೇ ದಿನೇ ಸಾಗರದಂತೆ ವರ್ಧಮಾನನಾಗುತ್ತಿದ್ದಾನೆ. ಅವನು ನನ್ನನ್ನೇ ಸಮೂಲನಾಶ ಮಾಡಲು ಹೊರಟಂತಿದೆ.

ನನಗೆ ಹಿತಚಿಂತಕರಾದ ಯೋಗ್ಯ ಮಂತ್ರಿಗಳಿಲ್ಲ. ದಕ್ಷರಾದ ಗುಪ್ತಚಾರ ಇಲ್ಲ. ಗೂಢಚಾರರಿಲ್ಲದೆ ಕಣ್ಣಿದ್ದೂ ಅಂಧನಾಗಿದ್ದೇನೆ. ಇದರಿಂದಾಗಿ ನಂದಗೋಪನ ಮಗನು ಅವನ ಮನೆಯಲ್ಲಿ ನಿಶ್ಚಿಂತವಾಗಿ ಬೆಳೆಯುತ್ತಿದ್ದಾನೆ. ಉದಾಸೀನ ಮಾಡಿದ ರೋಗವು ದಿನೇ ದಿನೇ ಪ್ರವೃದ್ಧವಾಗಿ ಮೂಲತ್ಪಾಟನ ಮಾಡುವಂತೆಯೂ, ಮಳೆಗಾಲದ ಮೋಡದಂತೆಯೂ, ಘರ್ಜಿಸುವ

ಮೇಘದಂತೆಯೂ ನಿರಾತಂಕವಾಗಿ ನಿಶ್ಚಿಂತೆಯಿಂದ ಬೆಳೆಯುತ್ತಿದ್ದಾನೆ. ಇದಕ್ಕೆ ನನ್ನ ಆಪ್ತ ಸಚಿವರ ಉಪೇಕ್ಷೆಯೇ ಕಾರಣವಾಗಿದೆ.

### ಕೃಷ್ಣವೆಂಬುದು ದೈವವೋ ದೆವ್ವವೋ?

**ತಸ್ಯ ನಾಹಂ ಗತಿಂ ಜಾನೇ ನ ಯೋಗಂ ನ ಪರಾಕ್ರಮಮ್ ।**
**ನಂದಗೋಪಸ್ಯ ಭವನೇ ಜಾತಸ್ಯಾದ್ಭುತ ಕರ್ಮಣಃ ॥ 12 ॥**

**ಕಿಂ ತದ್ಭೂತಂ ಸಮುದ್ಭೂತಂ ದೇವಾಪತ್ಯಂ ನ ವಿದ್ಮಹೇ ।**
**ಅತಿದೇವೈ ರಮಾನುಷ್ಯೈಃ ಕರ್ಮಭಿಃ ಸೋಽನುಮೀಯತೇ ॥ 13 ॥**

ಆ ನಂದಕುಮಾರನ ಗತಿ ಶಕ್ತಿ ಪರಾಕ್ರಮ, ಮಹಿಮೆ ಪ್ರಭಾವ ಯಾವುದೂ ನನಗೆ ತಿಳಿಯದಂತಾಗಿದೆ. ಅದೇನು ಭೂತವೋ? ಪಂಚಮಹಾಭೂತ-ಗಳಲ್ಲೊಂದೋ ಅಥವಾ ದೇವಾ ಸಂತಾನವೋ? ಇದಾವುದೋ ತಿಳಿಯುತ್ತಿಲ್ಲ. ಆದರೆ ಅವನು ಮಾಡುತ್ತಿರುವ ಅತಿಮಾನುಷ ವ್ಯಾಪಾರ ಮಹಿಮೆಗಳನ್ನು ನೋಡುತ್ತಿದ್ದರೆ ಅವನು ಸಾಮಾನ್ಯ ಗೋಪಾಲಕನಲ್ಲವೆಂದು ಊಹಿಸಬಹುದು.

**ಪೂತನಾ ಶಕುನೀ ಬಾಲ್ಯೇ ಶಿಶುನೋತ್ತಾನಶಾಯಿನಾ ।**
**ಸ್ತನಪಾನೇಪ್ಸುನಾ ಪೀತಾ ಪ್ರಾಣೈಃ ಸಹ ದುರಾಸದಾ ॥ 14 ॥**

ಅವನಿನ್ನು ಮಗುವಾಗಿರುವಾಗಲೇ ಬಾಲಘಾತಘ್ನಿಯಾದ ಪೂತನೆಯೆಂಬುವಳ ಸುವನ್ನೆ ಹೀರಿ ಹಾಕಿದ. ಯಮುನಾಹ್ರದ ರಕ್ಕಸನಾದ ಕಾಲಿಯ ನಾಗನನ್ನು ಮರ್ದಿಸಿ ರಕ್ತ ಕಕ್ಕಿಸಿದನು. ಕ್ಷಣ ಮಾತ್ರ ಅಲ್ಲಿರಲು ಬಿಡದೆ ರಸಾತಲಕ್ಕೆ ಕಳುಹಿಸಿದನು. ಧೇನುಕಾಸುರನನ್ನು ತಾಲವೃಕ್ಷದ ತುದಿಯಿಂದ ಕೆಳಗೆ ಬೀಳಿಸಿ ಪ್ರಾಣ ಕಳೆದನು. ದೇವತೆಗಳಿಗೂ ಅಸಾಧ್ಯನಾದ ಪ್ರಲಂಬಾಸುರನನ್ನು ಮುಷ್ಟಿಯೊಂದರ ಏಟಿನಿಂದಲೇ ಗತಪ್ರಾಣ ಮಾಡಿದವನು. ಇಂದ್ರದೇವನ ಉತ್ಸವಕ್ಕೆ ಭಂಗ ತಂದು, ಕೋಪಗೊಂಡ ಇಂದ್ರ ಮಳೆಗರೆಯಲು ಗೋವರ್ಧನ ಪರ್ವತವನ್ನೇ ಕಿತ್ತು ಛತ್ರಿಯಂತೆ ಮಾಡಿ ಗೋಪಾಲಕರನ್ನು ರಕ್ಷಿಸಿದನು. ಅರಿಷ್ಟಾಸುರನ ಹಿಡಿದು ತುಳಿದು ಕೊಂಬನ್ನು ಕಿತ್ತು ಹಾಕಿದನು.

**ಅಬಾಲೋ ಬಾಲ್ಯಮಾಸ್ಥಾಯ ರಮತೇ ಶಿಶುಲೀಲಯಾ ।**

ಬಾಂಧವರೇ! ಸರಿಯಾಗಿ ಆಲೋಚಿಸಿರಿ. ಇವನು ಖಂಡಿತಾ ಬಾಲಕನಲ್ಲ.

ಬಾಲ್ಯಾವಸ್ಥೆಯನ್ನು ತಳೆದು ಶಿಶುವಿನಂತೆ ಬಾಲಲೀಲೆ ಮಾಡುತ್ತಿದ್ದಾನೆ. ಈ ಅದ್ಭುತಲೀಲೆ ನೋಡಿದರೆ ನನಗೂ ಕೇಶಿದೈತ್ಯನಿಗೂ ಮೃತ್ಯು ದೂರವಿರದೆಂದು ತೋರುತ್ತಿದೆ. ಹಿಂದಿನ ಜನ್ಮದಲ್ಲಿ ನನ್ನ ಮೃತ್ಯುರೂಪವಾಗಿ ಯಾವುದಿದ್ದಿತೋ ಅದೇ ಇಂದು ನನ್ನೊಂದಿಗೆ ಯುದ್ಧ ಮಾಡಲು ಇಲ್ಲಿಗೆ ಬಂದಿರುವಂತಿದೆ.

**ಕ್ವ ಚ ಗೋಪತ್ವಮಶುಭಂ ಮಾನುಷ್ಯಂ ಮೃತ್ಯುದುರ್ಲಭಮ್ ।**
**ಕ್ವ ಚ ದೇವ ಪ್ರಭಾವೇಣ ಕ್ರೀಡಿತವ್ಯಂ ವ್ರಜೇ ಮಮ ॥ 15 ॥**

**ಅಹೋ ನೀಚೇನ ವಪುಷಾಚ್ಛಾಯಿತ್ವಾऽऽತ್ಮನೋ ವಪುಃ ।**
**ಕೋऽಪ್ಯೇಷಃ ರಮತೇ ದೇವಃ ಶ್ಮಶಾನಸ್ಥ ಇವಾನಲಃ ॥ 16 ॥**

ಅಶುಭವೂ ಅಶುಚಿಯೂ ಆದ ಗೋಪಜನ್ಮವೆಲ್ಲಿ? ಮೃತ್ಯುವಿಗೂ ಸಿಗದ ನನ್ನ ಮನುಷ್ಯತ್ವವೆಲ್ಲಿ? ನಿಶ್ಚಯವಾಗಿಯೂ, ಯಾವುದೋ ದೇವತೆಯು ತನ್ನ ಶರೀರವನ್ನು ತುಚ್ಛವಾದ ಗೋಪವೇಷದಿಂದ ತನ್ನನ್ನು ಮರೆಸಿಕೊಂಡು ಸ್ಮಶಾನದಲ್ಲಿರುವ ಅಗ್ನಿಯಂತೆ ಇಲ್ಲಿ ಕ್ರೀಡೆಯಾಡುತ್ತಿದೆ.

### ವಾಮನ ನೃಸಿಂಹ ವರಾಹ ರೂಪಗಳು

**ಶ್ರೂಯತೇ ಹಿ ಪುರಾ ವಿಷ್ಣುಃ ಸುರಾಣಾಂ ಕಾರಣಾಂತರೇ ।**
**ವಾಮನೇನ ತು ರೂಪೇಣ ಜಹಾರ ಪೃಥಿವೀಮಿಮಾಮ್ ॥ 17 ॥**

**ಕೃತ್ವಾ ಕೇಸರಿಣೋ ರೂಪಂ ವಿಷ್ಣುನಾ ಪ್ರಭವಿಷ್ಣುನಾ ।**
**ಹತೋ ಹಿರಣ್ಯಕಶಿಪುಃ ದಾನವಾನಾಂ ಪಿತಾಮಹಃ ॥ 18 ॥**

ಹಿಂದೆ ಮಹಾವಿಷ್ಣುವು ದೇವತೆಗಳ ಕಾರ್ಯ ಸಾಧಿಸಿಕೊಡಲೆಂದು ವಾಮನವೆಂಬ ಮಾಣವವೇಷ ಧರಿಸಿ ಬಲಿಯನ್ನು ಸುತಲಲೋಕಕ್ಕೆ ಕಳುಹಿಸಿರುವನೆಂದೂ ಕೇಳಿದ್ದೇವೆ. ಇಷ್ಟೆ ಅಲ್ಲ. ಪ್ರಭಾವೀ ವಿಷ್ಣುವೇ ಪ್ರಹ್ಲಾದನಿಗಾಗಿ ನರಸಿಂಹ ರೂಪಧರಿಸಿ ದಾನವರ ಪಿತಾಮಹ ಹಿರಣ್ಯಕಶಿಪುವನ್ನು ಸಂಹರಿಸಿರುವನು.

ಹೀಗೆಯೇ ಅಚಿಂತ್ಯಾದ್ಭುತ ರೂಪ ಧರಿಸಿ ತ್ರಿಪುರಾಸುರರ ಅಮೃತ ಸಂಜೀವಿನೀ ವಾಪಿಯನ್ನು ಖಾಲಿ ಮಾಡಿ, ಶಿವನಿಗೆ ಅನುವು ಮಾಡಿಕೊಟ್ಟು ತ್ರಿಪುರಾಸುರ ಮಥನ ಗೈದನೆಂದೂ ಕೇಳಿದ್ದೇವೆ.

ಬೃಹಸ್ಪತಿಯ ಮಗನಾದ ಕಚನು ದಾರ್ದುರೀ ಮಾಯೆಯನ್ನು ಉಪಯೋಗಿಸಿ ಶುಕ್ರಾಚಾರ್ಯರ ಮೃತಸಂಜೀವಿನಿಯನ್ನು ಯಾರಿಗೂ ಹೇಳಿಕೊಡುವುದಿಲ್ಲವೆಂದು ಪ್ರತಿಜ್ಞೆಯನ್ನು ಮಿಥ್ಯೆಯನ್ನಾಗಿಸಿದರು. ಹಾಗೂ ತನ್ನ ದಾರ್ದುರೀ ಎಂಬ ಮಾಯೆಯಿಂದಲೇ ದೈತ್ಯರ ರಾಜ್ಯದಲ್ಲಿ ಹನ್ನೆರಡು ವರ್ಷ ಮಳೆ ಬೀಳದಂತೆ ತಡೆದ ಇತಿಹಾಸ ಕೇಳಿದ್ದೇವೆ.

ದೇಶತಃ ಕಾಲತಃ ಗುಣತಃ ಅಪರಿಚ್ಛಿನ್ನನಾದ ಭಗವಂತನು ಅನಂತಾನಂತ ತಲೆವುಳ್ಳ ಶ್ರೀಹರಿಯು ಹಂದಿಯ ವೇಷ ಧರಿಸಿ ಸಮುದ್ರದಲ್ಲಿ ಮುಳುಗಿದ್ದ ಭೂಮಿಯನ್ನುದ್ಧರಿಸಿದನು.

### ಕೂರ್ಮ, ಮೋಹಿನೀ ರೂಪ

ದೇವ-ದೈತ್ಯರು ಒಂದಾಗಿ ಅಮೃತಕ್ಕಾಗಿ ಸಮುದ್ರ ಮಥನ ನಡೆಸಿದಾಗ ಹದಿನಾಲ್ಕು ಅಪೂರ್ವ ವಸ್ತುಗಳು ಮೇಲೆ ಬಂದವು. ಅಮೃತವನ್ನು ಮೋಸದಿಂದ ತಾವೇ ಕುಡಿಯೇಕೆಂದಿರುವಾಗ ಮೋಹಕಮೋಹಿನೀ ರೂಪ ತಾಳಿ, ಅಮೃತವನ್ನು ದೇವತೆಗಳಿಗೆ ಹಂಚಿ, ದೈತ್ಯರಿಗೆ ವ್ಯಾಮೋಹವುಂಟು ಮಾಡಿ ಯುದ್ಧಕ್ಕೆ ಪ್ರಚೋದನೆ ನೀಡಿದನು. ಹೀಗೆ ಅಮೃತ ಮಥನ ಕಾಲದಲ್ಲಿ ಕಡೆಗೋಲಿನಂತಿರುವ ಮಂದರಾದ್ರಿಯು ನೀರಿನ ತಳಕ್ಕೆ ಸೇರಿದಾಗ ಮಹಾಕೂರ್ಮವೇಷಧರಿಸದನೆಂದೂ ಕೇಳಿದ್ದೇವೆ.

### ತ್ರಿವಿಕ್ರಮ-ರಾಮಾವತಾರ

**ವಪುರ್ವಾಮನಮಾಸ್ಥಾಯ ನಂದನೀಯಂ ಪುರಾ ಬಲೇಃ ।**
**ತ್ರಿಭಿಃ ಕ್ರಮೈಸ್ತು ತ್ರೀನ್ ಲೋಕಾನ್ ಜಹಾರ ತ್ರಿದಿವಾಲಯಮ್ ॥ 19 ॥**

**ಚತುರ್ಧಾ ತೇಜಸೋಭಾಗಂ ಕೃತ್ವಾ ದಾಶರಥೇ ಗೃಹೇ ।**
**ಸ ಏವ ರಾಮಸಂಜ್ಞೋ ವೈ ರಾವಣಂ ಪ್ರಶನತ್ ತದಾ ॥ 20 ॥**

ವಿಷ್ಣುವು ಹಿಂದೆ ವಾಮನನೆಂಬ ವಟು ರೂಪ ಧರಿಸಿ, ಮೂರು ಹೆಜ್ಜೆ ಭೂಮಿಯ ದಾನ ಬೇಡುವ ನೆಪದಿಂದ ಅಳೆದು ಬಲಿನಿಗ್ರಹ ಮಾಡಿ ಸ್ವರ್ಗಲೋಕಾಧಿಪತ್ಯದಿಂದ ಚ್ಯುತನನ್ನಾಗಿಸಿದನು. ಶ್ರೀವಿಷ್ಣುವೇ ದಶರಥನ ಮನೆಯಲ್ಲಿ ತನ್ನದೆ ಆದ ವಾಸುದೇವಾದಿ ಸ್ವರೂಪಾಂಶಗಳಿಂದ, ರಾಮಲಕ್ಷ್ಮಣ ಭರತ, ಶತ್ರುಘ್ನರೆಂಬ ನಾಲ್ಕು ರೂಪಗಳಿಂದ ಅವತರಿಸಿ, ರಾವಣಾದಿ ರಾಕ್ಷಸರನ್ನು ಸಂಹಾರ ಮಾಡಿರುವನು.

**ಏವಮೇಷ ನಿಕೃತ್ಯಾ ವೈ ತತ್ತದ್ರೂಪಮುಪಾಗತಃ ।**
**ಸಾಧಯತ್ಯಾತ್ಮನಃ ಕಾರ್ಯಂ ಸುರಾಣಾಮರ್ಥಸಿದ್ಧಯೇ ।**
**ತದೇಷ ನೂನಂ ವಿಷ್ಣುರ್ವಾ ಶಕ್ರೋ ವಾ ಮರುತಾಂ ಪತಿಃ ॥ 21 ॥**

ಈ ರೀತಿಯಲ್ಲಿ ವಿಷ್ಣುವು ದೇವತಾಕಾರ್ಯ ಸಿದ್ಧಿಗಾಗಿ ಅನೇಕ ರೂಪಗಳನ್ನು ಧರಿಸಿ ತನ್ನ ದುಷ್ಟಶಿಕ್ಷಣ –ಶಿಷ್ಟರಕ್ಷಣ ಕಾರ್ಯವನ್ನು ಸಾಧಿಸಿಕೊಳ್ಳುವನು. ಆದ್ದರಿಂದ ಇಲ್ಲಿ ಅವತರಿಸಿರುವವನು ವಿಷ್ಣುವೋ, ಇಂದ್ರನೋ, ವಾಯುದೇವನೋ ಆಗಿರಬೇಕು. ಅವನು ನನ್ನನ್ನು ಕೊಲ್ಲಲೆಂದು ಕೃಷ್ಣ ವೇಷದಿಂದ ಬಂದಿರಬಹುದು.

**ಮತ್ಸಾಧನೇಚ್ಛಯಾ ಪ್ರಾಪ್ತೋ ನಾರದೋ ಮಾಂ ಯದುಕ್ತವಾನ್ ।**
**ಅತ್ರ ಮೇ ಶಂಕತೇ ಬುದ್ಧಿಃ ವಸುದೇವಂ ಪ್ರತಿ ಧ್ರುವಾ ।**
**ಅಸ್ಯ ಬುದ್ಧಿವಿಶೇಷೇಣ ವಯಂ ಕಾತರತಾಂ ಗತಾಃ ॥ 22 ॥**

ಈ ವಿಷಯವನ್ನು ನಾರದರು ಈ ಮೊದಲೇ ತಿಳಿಸಿದ್ದರು. ನನ್ನ ಬುದ್ಧಿಯು ವಸುದೇವನ ವಿಷಯದಲ್ಲಿಯೇ ಸಂಶಯ ಹೊಂದುತ್ತಿದೆ. ಅವನಿಗಿರುವ ವಿಶಿಷ್ಟ ಬುದ್ಧಿಯಿಂದಾಗಿ ನಾವು ಭಯಪಡಬೇಕಾಗಿದೆ.

ನಾರದರಾದರೂ ನನಗೆ ಎರಡನೇ ಬಾರಿ ಖಟ್ವಾಂಗ ವನದಲ್ಲಿ ಭೇಟಿಯಾದಾಗ ಅವರು ಮತ್ತೊಮ್ಮೆ ನನ್ನನ್ನು ಕುರಿತು ಹೀಗೆ ಹೇಳಿದ್ದರು.

**ಯತ್ ತ್ವಯಾ ಹಿ ಕೃತೋ ಯತ್ನಃ ಕಂಸ! ಗರ್ಭಕೃತೇ ಮಹಾನ್ ।**
**ವಸುದೇವೇನ ತೇ ರಾತ್ರೌ ತತ್ಕರ್ಮ ವಿಫಲೀ ಕೃತಮ್ ॥ 23 ॥**

**ದಾರಿಕಾ ಯಾ ತ್ವಯಾ ರಾತ್ರೌ ಶಿಲಾಯಾಂ ಕಂಸ ಪಾತಿತಮ್ ।**
**ತಾಂ ಯಶೋದಾಸುತಾಂ ವಿದ್ಧಿ ಕೃಷ್ಣಂ ಚ ವಸುದೇವಜಮ್ ॥ 24 ॥**
**ರಾತ್ರೌ ವ್ಯಾವರ್ತಿತಾವೇತೌ ಗರ್ಭೌ ತವ ವಧಾಯ ವೈ ॥ 25 ॥**
**ವಸುದೇವೇನ ಸಂಧಾಯ ಮಿತ್ರರೂಪೇಣ ಶತ್ರುಣಾ ।**
**ಸಾತು ಕನ್ಯಾ ಯಶೋದಾಯಾ ವಿಂಧ್ಯೆ ಪರ್ವತ ಸತ್ತಮೇ ॥ 26 ॥**

ಕಂಸನೇ! ನೀನು ನಿನಗೆ ಮೃತ್ಯುವಾಗಬಹುದಾದ ದೇವಕಿಯ ಗರ್ಭವನ್ನು

ನಾಶ ಮಾಡಲು ಮಾಡಿದ ಪ್ರಯತ್ನವನ್ನೆಲ್ಲ ಒಂದೇ ರಾತ್ರಿಯಲ್ಲಿ ಆ ವಸುದೇವನು ವ್ಯರ್ಥವನ್ನಾಗಿ ಮಾಡಿಬಿಟ್ಟಿದ್ದಾನೆ. ಆ ದಿನ ನೀನು ದೇವಕಿಯ ದಾರಿಕೆಯೆಂದು ತಿಳಿದು ಕೊಲ್ಲಬೇಕೆಂದು ಕಲ್ಲಿನ ಮೇಲೆ ಅಪ್ಪಳಿಸಲು ಹೊರಟ ಆ ಮಗು ದೇವಕಿಯ ಮಗುವಲ್ಲ. ಅದು ಯಶೋದೆಯ ಪುತ್ರಿಕೆಯು. ಕೃಷ್ಣನು ವಸುದೇವನಿಂದ ದೇವಕಿಯಲ್ಲಿ ಜನಿಸಿದವನು. ನಿನಗೆ ಮುಂದೆ ಹಿತಮಿತ್ರನಂತೆ ಇದ್ದು ಶತ್ರುವಾದ ಆ ವಸುದೇವನು ನಿನ್ನನ್ನು ಕೊಲ್ಲಲೆಂದೆ ದೇವಕಿಯ ಗರ್ಭದಿಂದ ಎಂಟನೆಯ ಮಗುವಾಗಿ ಜನಿಸಿದ ಕೃಷ್ಣನನ್ನು, ಅಂದೇ ಆ ಗಾಡಾಂಧಕಾರದ ರಾತ್ರಿಯಲ್ಲಿಯೇ ಸೇವಕರ ಕಣ್ಣಿಗೆ ಮಣ್ಣೆರೇಚಿ ಗೋಕುಲಕ್ಕೆ ತೆಗೆದುಕೊಂಡು ಹೋದನು. ಅಂದೇ ಹಡೆದು ಮಲಗಿದ್ದ ಯಶೋದೆಯ ಮಗುವನ್ನು ನಿನಗೆ ನೀಡಿದನು. ಅದನ್ನು ಕೊಲ್ಲಲು ಉದ್ಯೋಗ ಮಾಡಿದೆ. ಆದರೆ ಗಗನಕ್ಕೆ ಹಾರಿ ಮಹಾದುರ್ಗಾ ರೂಪದಿಂದ ಈಗ ವಿಂಧ್ಯಪರ್ವತ ವಾಸಿನಿಯಾಗಿರುವಳು. ಶುಂಭ ನಿಶುಂಭ ಧೈತ್ಯರನ್ನು ಕೊಂದು ಹಾಕಿ, ಸರ್ವಮುನಿಜನ ವಂಧ್ಯಳಾಗಿಯೂ ಅಭಯಪ್ರದಮಾತೆ-ಯಾಗಿಯೂ ಪ್ರಸಿದ್ಧಳಾಗಿರುವಳು. ಹೀಗೆ ಮಕ್ಕಳ ಅದಲು-ಬದಲು ನಿನಗೆ ತಿಳಿಯಲಿಲ್ಲ. ಅದೇ ಈಗ ಗೋಕುಲದಲ್ಲಿ ಬೆಳೆಯುತ್ತಿದೆ.

ಸ್ಥಾನಂ ತಸ್ಯಾ ನಗೇ ವಿಂಧ್ಯೇ ನಿರ್ಮಿತಂ ಸ್ವೇನ ಕರ್ಮಣಾ ।
ರಿಪೂಣಾಂ ತ್ರಾಸಜನನೀ ನಿತ್ಯಂ ತತ್ರ ಮನೋರಮೇ ॥ 27 ॥

ವಸತೇ ಪರಮಪ್ರೀತಾ ದೇವತೈರಪಿ ಪೂಜಿತಾ ।
ಯಸ್ತ್ವಯಂ ನಂದಗೋಪಸ್ಯ ಕೃಷ್ಣ ಇತ್ಯುಚ್ಯತೇ ಸುತಃ ।
ದ್ವಿತೀಯೋ ವಸುದೇವಾದ್ ವೈ ವಾಸುದೇವೋ ಭವಿಷ್ಯತಿ ॥ 28 ॥

ದೇವತೆಗಳಿಂದಲೂ ಪೂಜಿಸಲ್ಪಡುತ್ತಿರುವ ಆ ಕನ್ಯೆ ಆ ವನದಲ್ಲಿ ವಾಸಿಸುತ್ತಿರುವಳು. ನಂದಗೋಪನ ಯಾವ ಮಗನು ಕೃಷ್ಣನೆಂದು ಕರೆಯಲ್ಪಡುತ್ತಿರುವನೋ ಅವನ ಬಗ್ಗೆ ಅವನು ತೋರಿರುವ ಅದ್ಭುತ ಮಹಿಮೆಗಳನ್ನೂ ನಾರದರು ಹೇಳಿರುವರು. ಪೂತನಾ ಜೀವಹರಣ ಮೊದಲಾದ ಅದ್ಭುತ ಮಹಿಮೆ ತೋರಿದ ವಾಸುದೇವನು ವಸುದೇವನ ದ್ವಿತೀಯ ಪುತ್ರ. ಅವನೇ ನಿನಗೆ ಬಂಧುವೂ ಮೃತ್ಯುವೂ ಆಗಿರುವನು

ಎಂದು ಎರಡು ಬಾರಿ ಹೇಳಿದ್ದಾರೆ ಎಂದು ನುಡಿದು ಅಕ್ರೂರನ ಕಡೆಗೆ ನೋಡಿದನು.

## ಅಕ್ರೂರನಿಗೆ ಕಂಸನ ಆದೇಶ

**ಬಾಂಧವೋ ಧರ್ಮತೋ ಮಹ್ಯಂ ಹೃದಯೇನಾಂತಕೋ ರಿಪುಃ ।**
**ಯಥಾ ಹಿ ವಾಯಸೋ ಮೂರ್ಧ್ನಿ ಪದ್ಭ್ಯಾಂ ಯಸ್ಯಾವತಿಷ್ಠತಿ ॥ 29 ॥**
**ನೇತ್ರೇ ತುದತಿ ತಸ್ಯೈವ ವಕ್ತ್ರೇಣ ಆಮಿಷ ಗೃದ್ಧಿನಾ ।**
**ವಸುದೇವಃ ತಥೈವಾಯಂ ಸಪುತ್ರಜ್ಞಾತಿ ಬಾಂಧವಃ ।**
**ಛಿನತ್ತಿ ಮಮ ಮೂಲಾನಿ ಭುಂಕ್ತೇ ಚ ಮಮ ಪಾರ್ಶ್ವತಃ ॥ 30 ॥**

ವಸುದೇವ ಪುತ್ರನು ನನಗೆ ತಂಗಿಯ ಮಗನಾಗಿದ್ದು ಸಮೀಪ ಬಂಧುವಾಗಿದ್ದಾನೆ. ಆದರೆ ನನ್ನ ನಾಶಕಾರ ಶತ್ರುವೂ ಆಗಿರುವನು. ಕಾಗೆಯು ಮಾಂಸದ ಆಸೆಯಿಂದ ಮನುಷ್ಯನ ತಲೆಯ ಮೇಲೆ ಕುಳಿತು ಕೊಕ್ಕಿನಿಂದ ಅವನ ಕಣ್ಣನ್ನು ಕುಕ್ಕುವುದು. ಇದೇ ರೀತಿ ವಸುದೇವನು ಬಂಧು ಬಾಂಧವರಿಂದ ಕೂಡಿ ನನ್ನಲ್ಲಿಯೇ ಇರುತ್ತಾ ನನ್ನ ಮೂಲವನ್ನೇ ಕತ್ತರಿಸುತ್ತಿರುವನು.

## ಕೃತಘ್ನನಿಗೆ ಉತ್ತಮ ಲೋಕವಿಲ್ಲ

**ಭ್ರೂಣಹತ್ಯಾಪಿ ಸಂತಾರ್ಯಾ ಗೋವಧಃ ಸ್ತ್ರೀವಧೋಽಪಿ ವಾ ।**
**ನ ಕೃತಘ್ನಸ್ಯ ಲೋಕೋಽಸ್ತಿ ಬಾಂಧವಸ್ಯ ವಿಶೇಷತಃ ॥ 31 ॥**

ಭ್ರೂಣ ಹತ್ಯೆಗೆ ಪ್ರಾಯಶ್ಚಿತ್ತವಿದೆ. ಗೋವಧೆ-ಸ್ತ್ರೀವಧೆಗಳಿಗೂ ಪ್ರಾಯಶ್ಚಿತ್ತಗಳಿರಬಹುದು. ಆದರೆ ಕೃತಘ್ನನಿಗೆ ಅದರಲ್ಲಿ ಬಂಧುವಿನಲ್ಲಿ ಕೃತಘ್ನತೆ ತೋರುವವನಿಗೆ ಯಾವುದೇ ಉತ್ತಮ ಗತಿಯಿಲ್ಲ.

ಹೊರಗೆ ಮಹಾಪ್ರೀತಿಯ ನಟನೆ, ಅಂತರಂಗದಲ್ಲಿ ಕೃತಘ್ನತೆ ಹೊಂದಿರುವವನು ಪತಿತರು ಬೀಳುವ ಮಾರ್ಗವನ್ನು ಹಿಡಿಯುವನು. ಯಾವನು ಪಾಪರಹಿತನ ವಿಷಯದಲ್ಲಿ ಪಾಪಬುದ್ಧಿ ಹೊಂದಿರುವನೋ ಅವನು ನರಕದ ದಾರುಣ ಮಾರ್ಗದಲ್ಲಿ ನಡೆದು ಹೋಗಬೇಕಾಗುತ್ತದೆ.

ಬಾಂಧವರೇ! ನಿಯಮಗುಣ ಸದಾಚಾರಗಳನ್ನು ನೋಡಿ ಮಿತ್ರರು ಯಾರೆಂದು ನೀವೇ ನಿರ್ಧಾರ ಮಾಡಿರಿ. ನಿಮ್ಮವನೇ ಆದ ನನ್ನನ್ನು ಬಯಸುವಿರೋ ಅಥವಾ ವಂಚಕ ವಸುದೇವ ಪುತ್ರನನ್ನು ಹೊಂದುವಿರೋ ನಿರ್ಧರಿಸಿರಿ.

ಆನೆಗಳ ಗುಂಪುಗಳಲ್ಲಿ ಪರಸ್ಪರ ಯುದ್ಧವೇರ್ಪಟ್ಟು ಅವುಗಳ ಘರ್ಷಣೆಗಳಿಂದಾಗಿ ಬಳ್ಳಿಗಳೆಲ್ಲವೂ ನಾಮಾವಶೇಷವಾಗುತ್ತದೆ. ಮುಂದೆ ಆ ಸ್ಥಳದಲ್ಲಿಯೇ ಆನೆಗಳು ವಾಸ ಮಾಡುತ್ತವೆ. ಹಾಗೆಯೇ ಬಂಧುಗಳಲ್ಲಿ ಭೇದವುಂಟು ಮಾಡಿ, ಬಂಧುಗಳನ್ನು ನಾಶ ಮಾಡಿ ತಾನು ಸುಖವಾಗಿ ಜೀವಿಸುವನು.

**ಕಾಲಸ್ತ್ವಂ ಹಿ ವಿನಾಶಾಯ ಮಯಾ ಪೃಷ್ಟೋ ವಿಜಾನತಾ ।**
**ವಸುದೇವ ಕುಲಸ್ಯಾಸ್ಯ ಯದ್ ವಿರೋಧಯಸೇ ಭೃಶಮ್ ॥ 32 ॥**
**ಸ್ಥಾನೇ ಯದುಕುಲಂ ಮೂಢ! ಶೋಚನೀಯಂ ತ್ವಯಾ ಕೃತಮ್ ॥ 33 ॥**

ವಸುದೇವನೇ, ನೀನು ಈ ಭೋಜವಂಶಕ್ಕೆ ಮೃತ್ಯುರೂಪದಲ್ಲಿರುವೆ. ಇದು ತಿಳಿದಿದ್ದರೂ ನಿನ್ನನ್ನು ಪಾಲನೆ ಪೋಷಣೆ ಮಾಡುತ್ತಿರುವೆ. ನೀನಾದರೂ ನನ್ನೊಂದಿಗೆ ವೈರವನ್ನು ಬೆಳೆಸಿಕೊಳ್ಳುತ್ತಿರುವೆ. ಮೂರ್ಖನಾದ ನಿನ್ನಿಂದಲೇ ಈ ಯದುವಂಶವು ಶೋಚನೀಯ ಸ್ಥಿತಿಗೆ ಇಳಿದಿದೆ.

### ಬಿಳಿಕೂದಿಲಿನಿಂದ ವೃದ್ಧನಾಗುವುದಿಲ್ಲ

**ವಸುದೇವ ವೃಥಾ ವೃದ್ಧ ಯನ್ಮಯಾ ತ್ವಂ ಪುರಸ್ಕೃತಃ ।**
**ಶ್ವೇತೇನ ಶಿರಸಾ ವೃದ್ಧಃ ನೈವ ವರ್ಷಶತೈರ್ಭವೇತ್ ।**
**ಯಸ್ಯ ಬುದ್ಧಿಃ ಪರಿಣತಾ ಸ ವೈ ವೃದ್ಧತರೋ ನೃಣಾಮ್ ॥ 34 ॥**

ವಸುದೇವನೇ, ನಾನು ಇಷ್ಟರವರೆಗೂ ವೃದ್ಧನೆಂದು ಪೋಷಿಸಿದ್ದೆಲ್ಲ ವ್ಯರ್ಥ ಮಾಡಿದೆ. ಕೂದಲು ಬಿಳಿಯಾದ ಮಾತ್ರಕ್ಕೆ ವೃದ್ಧನೆಂದು ಕರೆಯಲಾಗನು. ಯಾರ ಬುದ್ಧಿಯು ಪರಿಪಕ್ವವಾಗಿದೆಯೋ ಅವನು ವೃದ್ಧನು. ನೀನಾದರೂ ಕ್ರೂರ ಸ್ವಭಾವದವನು, ಬುದ್ಧಿಯಿಂದಲೂ ಶೂನ್ಯನು, ಶರತ್ಕಾಲದ ಮೇಘದಂತೆ ವಯಸ್ಸಿನಲ್ಲ ಮಾತ್ರ ವೃದ್ಧನಾಗಿರುವೆ.

ಅವಿವೇಕಿ ವಸುದೇವನೇ! ಕಂಸನು ಮೃತನಾದ ಮೇಲೆ ನನ್ನ ಮಗನು

ಮಥುರೆಯನ್ನು ಚೆನ್ನಾಗಿ ಪಾಲಿಸುವನೆಂದು ನೀನು ತಿಳಿದಿರಬಹುದಲ್ಲವೆ? ಇದಾವುದೂ ನಡೆಯದ ಸಂಗತಿ. ನನ್ನನ್ನು ಯುದ್ಧದಲ್ಲಿ ಎದುರಿಸುವ ಎದೆಗಾರಿಕೆ ಯಾರಿಗೆ ಇದೆ? ಈ ಆಶೆ ನುಚ್ಚುನೂರಾಗುವಂತೆ ಮಾಡುವೆನು.

**ಪ್ರಹರ್ತುಕಾಮೋ ವಿಶ್ವಸ್ತೇ ಯಸ್ತ್ವಂ ದುಷ್ಟೇನ ಚೇತಸಾ ।**
**ತತ್ತೇ ಪ್ರತಿಕರಿಷ್ಯೇಽಹಂ ಪುತ್ರಯೋಸ್ತವ ಪಶ್ಯತಃ ॥ 35 ॥**
**ನ ಮೇ ವೃದ್ಧವಧಃ ಕಶ್ಚಿದ್ ದ್ವಿಜಸ್ತ್ರೀವಧ ಏವ ಚ ।**
**ಕೃತಪೂರ್ವಃ ಕರಿಷ್ಯೇ ವಾ ವಿಶೇಷೇಣ ತು ಬಾಂಧವೇ ॥ 36 ॥**

ವಸುದೇವನೇ! ನಾನೂ ಯಾವಾಗಲೂ ನಿನ್ನಲ್ಲಿ ವಿಶ್ವಾಸವಿಟ್ಟಿದ್ದೆನು. ಆದರೆ ದುಷ್ಟನಾದ ನೀನಾದರೂ ನನ್ನನ್ನೆ ಮುಗಿಸುವ ಹಂಚಿಕೆಯಲ್ಲಿರುವೆ. ಇದಕ್ಕೆ ಪ್ರತಿಕಾರವನ್ನೂ ನಿನ್ನ ಕಣ್ಣು ಮುಂದೆ ಈ ನಿನ್ನ ಕೃಷ್ಣ-ಬಲರಾಮರ ಮೇಲೆ ತೀರಿಸಿಕೊಳ್ಳುತ್ತೇನೆ.

ನಾನು ಈ ಹಿಂದೆ ವೃದ್ಧರ, ಬ್ರಾಹ್ಮಣರ, ಸ್ತ್ರೀಯರನ್ನು ಕೊಂದವನಲ್ಲ. ಮುಂದೆಯೂ ಕೊಲ್ಲುವುದಿಲ್ಲ. ಅದರಲ್ಲಿಯೂ ಬಂಧುಬಾಂಧವರನ್ನು ಎಂದಿಗೂ ಕೈಯೆತ್ತುವವನ್ನಲ್ಲ.

ನೀನಾದರೂ ವಸುದೇವ! ಇಲ್ಲಿಯೆ ಹುಟ್ಟಿ ಬೆಳೆದು ನನ್ನ ತಂದೆಯಿಂದಲೇ ಪೋಷಣೆ ಪಡೆದವನು. ಇದಲ್ಲದೆ ನನ್ನ ತಂದೆಯ ತಂಗಿಯ ಗಂಡನಾಗಿರುವೆ. ಯದುಗಳಿಗೆಲ್ಲ ಗುರುವೂ, ಪೂಜ್ಯನೂ ಆಗಿರುವಿ. ನಾವಾದರೂ ನಿನ್ನಿಂದ ಸತ್ಪುರುಷರ ಮಧ್ಯದಲ್ಲಿ ನಿಂದೆಗೆ ಪಾತ್ರರಾಗಿರುತ್ತೇವೆ. ನಾನು ಜಯಗಳಿಸಬಹುದು ಅಥವಾ ಸೋತು ಸಾಯಬಹುದು. ಆದರೆ ನಿನ್ನ ದುರ್ನಯದಿಂದ ಯಾದವರೆಲ್ಲರೂ ಸಜ್ಜನರ ಮುಂದೆ ತಲೆಯೆತ್ತಿ ನಡೆಯಲಾರರು.

ಮುಂದೆ ನಡೆಯಲಿರುವ ಸಂಗ್ರಾಮದಲ್ಲಿ ನನ್ನನ್ನು ಕೊಲ್ಲುವ ಬಗ್ಗೆ ಉಪಾಯ ಯೋಚಿಸುತ್ತಿರುವೆ. ಇದರಿಂದ ಯಾದವರಿಗೆ ನಿನ್ನಲ್ಲಿದ್ದ ವಿಶ್ವಾಸ ನಾಶವಾಯಿತು. ನನ್ನ ಕೃಷ್ಣನ ಮಧ್ಯೆ ಶಾಂತಿಯನ್ನೆ ಹೊಂದದ ಅಶಾಂತಿವೇರ್ಪಟ್ಟಿದೆ. ನಮ್ಮಿಬ್ಬರಲ್ಲಿ ಒಬ್ಬರೂ ಸತ್ತಾಗಲೇ ಶಾಂತಿಯು ನೆಲೆಸುತ್ತದೆ.

## ರಾಮಕೃಷ್ಣರನ್ನು ತರಲು ಆದೇಶ

**ಗಚ್ಛ ದಾನಪತೇ ಕ್ಷಿಪ್ರಂ ತಾವಿಹಾನಯಿತುಂ ವ್ರಜಾತ್ ।**
**ನಂದಗೋಪಂ ಚ ಗೋಪಾಂಶ್ಚ ಕರದಾನ್ ಮಮ ಶಾಸನಾತ್ ॥ 37 ॥**

**ವಾಚ್ಯಶ್ಚ ನಂದಗೋಪೋ ವೈ ಕರಮಾದಾಯ ವಾರ್ಷಿಕಮ್ ।**
**ಶೀಘ್ರಮಾಗಚ್ಛ ನಗರಂ ಗೋಪ್ಯೈಃ ಸಹ ಸಮನ್ವಿತಃ ॥ 38 ॥**

ನಂತರ ಕಂಸನು ಅಕ್ರೂರನ ಕಡೆಗೆ ತಿರುಗಿ – ಅಕ್ರೂರ! ನೀನು ಈಗಲೇ ವೃಂದಾವನಕ್ಕೆ ಹೊರಡು. ಅಲ್ಲಿರುವ ರಾಮ–ಕೃಷ್ಣರನ್ನು ಇಲ್ಲಿಗೆ ಕರೆದು ತಾ. ನಂದಗೋಪಾದಿ ಗೋವಳರಿಗೂ – ನಮಗೆ ಬರಬೇಕಾದ ವಾರ್ಷಿಕ ಕರವನ್ನೂ ತೆಗೆದುಕೊಂಡು ಬೇಗನೆ ಬರಲು ಹೇಳು. ಹಾಗೆಯೇ ನಂದಾದಿಗಳಿಗೆ ಹೀಗೆ ಹೇಳು. ಕಂಸಮಹಾರಾಜರೂ ಅವನ ಪರಿವಾರರದವರೆಲ್ಲ ಯುದ್ಧ–ಮಲ್ಲಯುದ್ಧಗಳಲ್ಲಿ ಪಳಗಿರುವ ರಾಮಕೃಷ್ಣರ ಕೀರ್ತಿಯನ್ನು ಕೇಳಿ, ಅವರಿಬ್ಬರನ್ನೂ ನೋಡಲು ಅಪೇಕ್ಷೆ ಪಟ್ಟಿರುತ್ತಾರೆ. ಇಲ್ಲಿಯ ರಾಜರ ಆಖಾಡದಲ್ಲಿ ಪಳಗಿದ ಚಾಣೂರ ಮುಷ್ಟಿಕರೆಂಬ ಮಲ್ಲರಿರುವರು. ಅವರಿಬ್ಬರಿಗೂ ರಾಮಕೃಷ್ಣರಿಗೂ ಮಲ್ಲಯುದ್ಧವಾಗಲಿ. ನನ್ನ ಸೋದರತ್ತೆಯ ಮಕ್ಕಳು ಯುದ್ಧ ವಿಶಾದರೆಂದು ಪ್ರಖ್ಯಾತಿ ಪಡೆದಿರುವರು. ಅವರನ್ನು ನಾನು ನೋಡಲೇಬೇಕು. ಆ ಇಬ್ಬರನ್ನೂ ಕರೆದುಕೊಂಡು ವಾರ್ಷಿಕ ಕಂದಾಯ ಸಹಿತನಾಗಿ ಮಥುರೆಗೆ ಬಾ ಎಂದು ಹೇಳು.

## ಧನುರ್ಯಾಗ

**ವಕ್ತವ್ಯಂ ಚ ವ್ರಜೇ ತಸ್ಮಿನ್ ಸಮೀಪೇ ವ್ರಜವಾಸಿನಾಮ್ ।**
**ರಾಜಾ ಧನುರ್ಮಖಂ ನಾಮ ಕಾರಯಿಷ್ಯತಿ ವೈ ಸುಖೀ ॥ 39 ॥**

**ಶಾಸನಂ ಯದಿ ವಾ ಶ್ರುತ್ವಾ ಮಮ ತೌ ಪರಿಭಾಷಿತಮ್ ।**
**ನಾಗಚ್ಛೇತಾಂ ಯಥಾಕಾಲಂ ನಿಗೃಹ್ಯಾವಪಿ ತೌ ಮಮ ॥ 40 ॥**

ಅಕ್ರೂರ ! ಕಂಸರಾಜನು ಧರ್ನುಯಾಗವೆಂಬ ಉತ್ಸವವನ್ನು ಮಾಡಲಿರುವನು. ಈ ಉತ್ಸವಕ್ಕೆ ನೀವೆಲ್ಲರೂ ಅಲ್ಲಿಗೆ ಬರಬೇಕು ಎಂದು ಹೇಳಿ. ಈ ಕಂಸ ಮಹಾರಾಜರ ಉತ್ಸವಕ್ಕೆ ದೇಶ ವಿದೇಶಗಳಿಂದ ರಾಜಾಧಿರಾಜರೆಲ್ಲ

ಬರಲಿರುವರು. ಅವರಿಗಾಗಿ ಬೇಕಾಗುವ ಹಾಲು, ಮೊಸರು, ತುಪ್ಪ, ಕೆನೆ ಮೊದಲಾದವು ಬೇಡಿದಷ್ಟು ಬೇಕಾದಷ್ಟು ಸರಬರಾಜು ಮಾಡಲು ನೀವೆಲ್ಲರೂ ಮಥುರೆಯ ಸಮೀಪದ ಪಟ್ಟಣದಲ್ಲಿ ವಾಸಿಸಬೇಕು ಎಂದು ತಿಳಿಸು.

ನನ್ನ ಆದೇಶವನ್ನು ಕೇಳಿದ ಮೇಲೂ ರಾಮಕೃಷ್ಣರು ಬಾರದಿದ್ದರೆ ಬಲಾತ್ಕಾರವಾಗಿಯಾದರೂ ಕರತರಬೇಕು. ಹುಡುಗರ ವಿಷಯದಲ್ಲಿ ಸವಿ ಮಾತಿನಿಂದಲೇ ಮರಳು ಮಾಡಿ ಕರೆತರಬೇಕು. ನೀನು ಅವರನ್ನು ಕರೆದುಕೊಂಡು ಬಂದರೆ ನೀನು ನನಗೆ ಹಿತವನ್ನು ಬಯಸಿದಂತೆ. ವಸುದೇವನು ನಿನ್ನ ಮನದಲ್ಲಿ ಈಗಾಗಲೇ ತುಂಬಿಕೊಂಡಿರದಿದ್ದರೆ ಈ ಕಾರ್ಯವನ್ನು ನೀನು ಖಂಡಿತ ಸಾಧಿಸುವಿ. ಹೇಗಾದರೂ ಮಾಡಿ ಬಲರಾಮ ದಾಮೋದರರರನ್ನೂ ಇಲ್ಲಿಗೆ ಕರೆ ತರುವ ಭಾರ ನಿನ್ನ ಮೇಲಿಟ್ಟಿದ್ದೇನೆ.

## ವಸುದೇವನ ಮೌನವ್ರತ

**ಏವಮಾಕ್ಷಿಪ್ಯಮಾಣೋಽಪಿ ವಸುದೇವೋ ವಸೂಪಮಃ ।**
**ಸಾಗರಾಕಾರಮಾತ್ಮಾನಂ ನಿಷ್ಪ್ರಕಂಪಮಧಾರಯತ್ ॥ 41 ॥**
**ಕ್ಷಮಾಂ ಮನಸಿ ಸಂಧಾಯ ನೋತ್ತರಂ ಪ್ರತ್ಯಪದ್ಯತ ।**

ಹೀಗೆ ಕಂಸನು ನಾನಾ ರೀತಿಯಲ್ಲಿ ನಿಂದಿಸುತ್ತಿದ್ದರೂ ಯಾವ ಕ್ಷೋಭೆಗೊಳಗಾಗದ ಸಮುದ್ರದಂತೆ ತಾನು ಕ್ಷೋಭೆಗೊಳಗಾಗಲಿಲ್ಲ. ಧೈರ್ಯದಿಂದ ಮನಸ್ಸನ್ನು ನಿಯಂತ್ರಿಸಿದ್ದನು. ಕಂಸನು ಶಲ್ಯಗಳಂತೆ ಇರುವ ಚುಚ್ಚುಮಾತುಗಳಿಂದ ಚುಚ್ಚಲ್ಪಟ್ಟರೂ ಕ್ಷಮಾಗುಣವನ್ನೇ ಹೊಂದಿ ಯಾವುದೇ ಉತ್ತರವನ್ನೂ ನೀಡಲಿಲ್ಲ.

ಅಲ್ಲಿ ನೆರೆದಿದ್ದ ಯಾದವರು ಕಂಸನು ವಸುದೇವನನ್ನು ನಾನಾ ಬಗೆಯಿಂದ ನಿಂದಿಸುತ್ತಿದ್ದನ್ನು ಕೇಳುತ್ತಿದ್ದರು. ಅವರೆಲ್ಲರೂ ತಲೆಕೆಳಗೆ ಹಾಕಿ ಕಂಸನಿಗೆ 'ಧಿಕ್ಕಾರ'ವೆಂದು ಹಲವು ಬಾರಿ ನಿಂದಿಸಿದರು. ಅಕ್ರೂರನಾದರೂ ದಿವ್ಯದೃಷ್ಟಿಯಿಂದ ಸಕಲ ಘಟನೆಗಳನ್ನೂ ತಿಳಿಯಬಲ್ಲವನಾಗಿದ್ದು, ಕಂಸನು ಕೃಷ್ಣಬಲರಾಮರನ್ನು ಕರೆದು ತರಲ್ಲಿಕ್ಕೆ ಹೋಗುವ ಪ್ರಸಂಗ ಒದಗಿದ್ದರಿಂದ ಪರಮಾನಂದವಾಯಿತು. ಬಾಯಾರಿಕೆಯಿಂದ ಬಳಲಿದವನಿಗೆ ಗಂಗಾಜಲ

ದೊರೆತಂತೆ ಕಂಸನ ಆದೇಶದಿಂದ ಪರಮಪ್ರೀತನಾದನು. ಕೃಷ್ಣನನ್ನು ಕಾಣಬೇಕೆಂಬ ಹಂಬಲವುಳ್ಳ ಅವನಿಗೆ ಸುವರ್ಣಸಂಧಿ ದೊರೆತಂತಾಯಿತು.

**ತಸ್ಮಿನ್ನೇವ ಮುಹೂರ್ತೇ ತು ಮಥುರಾಯಾಃ ಸ ನಿರ್ಯಯೌ ।**
**ಪ್ರೀತಿಮಾನ್ ಪುಂಡರೀಕಾಕ್ಷಂ ದ್ರಷ್ಟುಂ ದಾನಪತಿಃ ಸ್ವಯಮ್ ॥ 42 ॥**

ಅಕ್ರೂರನು ಆಗಿದಾಗಿಯೇ ಮನೆಗೂ ಹೋಗದೆ ಕೃಷ್ಣನನ್ನು ನೋಡಲೆಂದು ಮಥುರೆಯಿಂದ ಪುಂಡರೀಕಾಕ್ಷನನ್ನು ನೋಡಲು ವೇಗವಾಗಿ ಬೃಂದಾವನಕ್ಕೆ ಹೋದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಅಕ್ರೂರ ಬೃಂದಾವನ ಪ್ರವೇಶೇವೆಂಬಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ತ್ರಯೋವಿಂಶೋಽಧ್ಯಾಯಃ

## ಕಂಸನಿಗೆ ಅಂಧಕನ ಸಲಹೆ

*ವೈಶಂಪಾಯನ ಉವಾಚ –*

**ಕ್ಷಿಪ್ತಂ ಯದುವೃಷಂ ದೃಷ್ಟ್ವಾ ಸರ್ವೇ ತೇ ಯದುಪುಂಗವಾಃ ।**
**ನಿಪೀಡ್ಯ ಶ್ರವಣಾತ್ ಹಸ್ತೈಃ ಮೇನಿರೇ ತಂ ಗತಾಯುಷಮ್ ॥ 1 ॥**

**ಅಂಧಕೋಽನುದ್ವಿಗ್ನಮನಾಃ ಧೈರ್ಯಾದವಿಕೃತಂ ಮನಃ ।**
**ಪ್ರೋವಾಚ ವದತಾಂ ಶ್ರೇಷ್ಠಃ ಸಮಾಜೇ ಕಂಸಮೋಜಸಾ ॥ 2 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! ಯಾದವರ ಸಭೆಯಲ್ಲಿ ಕಂಸನು ಯದುಭೂಷಣ ವಸುದೇವನನ್ನು ನಿಂದೆ ಮಾಡಿದ್ದನ್ನು ಕೇಳಿ ಯಾದವರೆಲ್ಲರೂ 'ಶಾಂತಂ ಪಾಪಂ' ಎಂದು ಕಿವಿ ಮುಚ್ಚಿಕೊಂಡರು. ಈ ಮಹಾನುಭಾವನನ್ನು ನಿಂದಿಸುವುದೆಂದರೆ ಆಯುಷ್ಯವು ಮುಗಿದಂತೆಯೇ ಎಂದುಕೊಂಡರು.

ಯಾದವರ ಸಮಾಜದಲ್ಲಿ ಅಂಧಕನೆಂಬುವನು ಮಹಾವಾಗ್ಮಿಯಾಗಿದ್ದು ಕಂಸನ ಮಾತಿನಿಂದ ಯಾವುದೇ ರೀತಿಯ ಉದ್ವೇಗ ಹೊಂದದೆ, ಧೈರ್ಯದಿಂದ ಯಾವುದೇ ರೀತಿಯ ಅಪಾರ್ಥಕ್ಕೆ ಎಡೆಯಿಲ್ಲದ ಮಾತುಗಳನ್ನಾಡಿದ.

**ಅಶ್ಲಾಘ್ಯೋ ಮೇ ಮತಃ ಪುತ್ರ ತವಾಯಂ ವಾಕ್ ಪರಿಶ್ರಮಃ ।**
**ಅಯುಕ್ತೋ ಗರ್ಹಿತಃ ಸದ್ಭಿಃ ಬಾಂಧವೇಷು ವಿಶೇಷತಃ ॥ 3 ॥**

**ಅಯಾದವೋ ಯದಿ ಭವಾನ್ ಶ್ರುಣು ತಾವದ್ ಯದುಚ್ಯತೇ ।**
**ನ ಹಿ ತ್ವಾಂ ಯಾದವಂ ವೀರ ಬಲಾತ್ ಕುರ್ವಂತಿ ಯಾದವಾಃ ॥ 4 ॥**

**ಅಶ್ಲಾಘ್ಯಾಃ ವೃಷ್ಣಯಃ ಪುತ್ರ ಯೇಷಾಂ ತ್ವಮನುಶಾಸಿತಾ ।**
**ಇಕ್ಷ್ವಾಕು ವಂಶಜೋ ರಾಜಾ ವಿನಿವೃತ್ತಃ ಸ್ವಯಂ ಸಕೃತ್ ॥ 5 ॥**

**ಭೋಜೋ ವಾ ಯಾದವೋ ವಾಽಪಿ ಕಂಸೋ ವಾಽಪಿ ಯಥಾ ತಥಾ ।**
**ಸಹಜಂ ತೇ ಶಿರಸ್ತಾತ ಜಟೀ ಮುಂಡೋಽಪಿ ವಾ ಭವ ॥ 6 ॥**

ಪುತ್ರನೇ! ಇದುವರೆಗೂ ಶ್ರಮದಿಂದ ನೀನು ಏನು ಮಾತನಾಡಿರುವೆಯೋ ಇದು ಪ್ರಶಂಸಾರ್ಹವಲ್ಲ. ಅಯುಕ್ತ ಹಾಗೂ ನಿಂದ್ಯವಾಗಿವೆ. ಅದರಲ್ಲಿಯೂ ನಿನ್ನ ಬಂಧುಗಳ ಬಗ್ಗೆ ಮಾತನಾಡಿರುವ ಮಾತುಗಳು ಅತ್ಯಂತ ನಿಂದ್ಯವೆನಿಸಿವೆ. ನೀನೇನಾದರೂ ಯಾದವನಲ್ಲವೆಂದು ಭಾವಿಸಿದ್ದರೆ ಯಾದವರು ನಿನ್ನನ್ನು ಬಲಾತ್ಕಾರವಾಗಿ ಯಾದವನೆಂದು ಗೌರವಿಸುತ್ತಿರಲಿಲ್ಲ. ನೀನು ಯಾರನ್ನು ಶಾಸನ ಮಾಡುತ್ತಿರುವೆಯೋ ಈ ವೃಷ್ಣಿಗಳೂ ಕೂಡ ಪ್ರಶಂಸಾರ್ಹರಲ್ಲ. ಹಾಗಿದ್ದಲ್ಲಿ ಈ ಯಾದವರೆಲ್ಲರೂ ಎಂದೋ ನಿನ್ನನ್ನು ತ್ಯಜಿಸಿ, ಇಕ್ಷ್ವಾಕುವಂಶದ ಅಸಮಂಜಸ ಮನೆ ತ್ಯಜಿಸಿ ತಪಸ್ಸಿಗೆ ಹೋದಂತೆ ಹೋಗುತ್ತಿದ್ದರು.

ನೀನು ಭೋಜನವಂಶೀಯನೋ, ಯಾದವೀಯನೋ, ಕಂಸನೊ ಆಗಿರು; ಜಟೆಯಿಂದಾದರೂ ಇರು ಮುಂಡಿಯಾಗಿಯಾದರೂ ಇರು. ನಿನ್ನ ತಲೆ ಮಾತ್ರ ನಿನ್ನ ಬುದ್ಧಿಯಂತೆ ಇದೆಯೆಂಬುದು ಮಾತ್ರ ಸತ್ಯ. ಇನ್ನು ನಿನ್ನ ತಂದೆಯಾದ ಉಗ್ರಸೇನನು ಶೋಚನೀಯನೆಂದೆ ನನ್ನ ಭಾವನೆ. ಅವನು ನಮ್ಮ ಕುಲಕ್ಕೆ ಕಳಂಕಪ್ರಾಯನು. ನಿನ್ನಂತಹ ದ್ರುಮಿಲಜಾತೀಯನನ್ನು ಮಗನನ್ನಾಗಿ ಪಡೆದನಲ್ಲವೆ?

**ನ ಚಾತ್ಮನೋ ಗುಣಾಂಸ್ತಾತ ಪ್ರವದಂತಿ ಮುನೀಷಿಣಃ ।**
**ಪರೇಣೋಕ್ತಾ ಗುಣಾ ಗೌಣ್ಯಂ ಯಾಂತಿ ವೇದಾರ್ಥ ಸಮ್ಮಿತಾಃ ॥ 7 ॥**

**ಪೃಥಿವ್ಯಾಂ ಯದುವಂಶೋऽಯಂ ನಿಂದನೀಯೋ ಮಹೀಕ್ಷಿತಾಮ್ ।**
**ಬಾಲಃ ಕೃತಾಂತಕೃನ್ ಮೂಢೋ ಯೇಷಾಂ ತ್ವಮನುಶಾಸಿತಾ ॥ 8 ॥**

ವಿವೇಕಿಗಳು ತಮ್ಮ ಗುಣಗಳನ್ನು ತಾವೇ ಹೊಗಳಕೊಳ್ಳಲಾರರು. ಬೇರೆಯವರಿಂದ ಪ್ರಶಂಸಿಸಲ್ಪಟ್ಟ ಗುಣಗಳು ಸಾಫಲ್ಯ ಹೊಂದುತ್ತದೆ. ವೇದಾರ್ಥಗಳಂತೆ ಪ್ರಾಮಾಣಿಕಗಳಾಗುತ್ತವೆ. ನಿನ್ನಂತಹ ಮೂರ್ಖನೂ, ಹಠವಾದಿಯೂ, ಹಿಂಸ್ರ ಸ್ವಭಾವನೂ ಈ ಯಾದವ ವಂಶದಲ್ಲಿ ಹುಟ್ಟಿದ್ದರಿಂದಲೇ ಯದುಕುಲವು ನಿಂದಿತವಾಗಿದೆ. ನೀನು ಮಾತನಾಡಿದ ಮಾತುಗಳೆಲ್ಲ ಸಮೀಚೀನ ವಚನಗಳೆಂದು ತಿಳಿದಿರುವಂತಿದೆ. ಇದರಿಂದಾಗಿ ನಿನ್ನ ಸ್ವರೂಪವೇನೆಂದು ತಿಳಯಿತೇ ಹೊರತು ಕಾರ್ಯ ಸಾಧಿಸಿದಂತಾಗಲಿಲ್ಲ.

**ಗುರೋರನವಲಿಪ್ತಸ್ಯ ಮಾನ್ಯಸ್ಯ ಮಹತಾಮಪಿ ।**
**ಕ್ಷೇಪಣಂ ಕಃ ಶುಭಂ ಮನ್ಯೇ ದ್ವಿಜಸ್ಯೇವ ವಧೇ ಕೃತೇ ॥ 9 ॥**

**ಮಾನ್ಯಾಶ್ಚೈವಾಭಿಗಮ್ಯಾಶ್ಚ ವೃದ್ಧಾಃ ತಾತ ಯಥಾಗ್ನಯಃ ।**
**ಕ್ರೋಧೋ ಹಿ ತೇಷಾಂ ಪ್ರದಹೇತ್ ಲೋಕಾನಂತರ್ಗತಾನಪಿ ॥ 10 ॥**

**ಬುಧೇನ ತಾತ ದಾಂತೇನ ನಿತ್ಯಮಭ್ಯುಚ್ಛ್ರಿತಾತ್ಮನಾ ।**
**ಧರ್ಮಸ್ಯ ಗತಿರನ್ವೇಷ್ಯಾ ಮತ್ಸ್ಯಸ್ಯ ಗತಿರಪ್ಸ್ವಿವ ॥ 11 ॥**

**ಕೇವಲಂ ತ್ವಂ ತು ದರ್ಪೇಣ ವೃದ್ಧಾನ್ ಅಗ್ನಿಸಮಾನಿಹ ।**
**ವಾಚಾ ತುದಸಿ ಮರ್ಮಘ್ನ್ಯಾ ಅಮಂತ್ರೋಕ್ತಾ ಯಥಾऽऽಹುತಿಃ ॥ 12 ॥**

ಯಾವನು ಅಹಂಕಾರರಹಿತನೂ, ಪೂಜ್ಯನೂ ಆದವನನ್ನು ಅಧಿಕ್ಷೇಪಿಸುವುದು ಬ್ರಾಹ್ಮಣನನ್ನು ವಧಿಸಿದರೆ ಹೇಗೆ ಶುಭಗತಿಯೇ ಇಲ್ಲವೋ ಹಾಗೆ ಶುಭಗತಿ ಹೊಂದಲಾರ. ಜ್ಞಾನವೃದ್ಧರು, ವಯೋವೃದ್ಧರಾದರೂ ಅಗ್ನಿಯಂತೆ ಸರ್ವದಾ ಆದರಣೀಯರು, ಸೇವ್ಯರು. ಅಂತಹವರ ಕ್ರೋಧವು ಯಾರ ಮೇಲೆಯೋ ಅವನ ಆಂತರಿಕ ಸಾಧನೆಯ ಫಲವಾದ ಉತ್ತಮಲೋಕಗಳನ್ನು ಹೋಗಗೊಡುವುದಿಲ್ಲ.

ಯಾರ ಆತ್ಮವು ಯಾವಾಗಲೂ ಉತ್ತಮ ಮಾರ್ಗವನ್ನೆ ಅರಸುತ್ತಿರುತ್ತದೊ ಅಂತಹ ಜಿತೇಂದ್ರಿಯ ಸಾಧಕನು ಧರ್ಮಮಾರ್ಗವನ್ನು ಸರ್ವದಾ ಅನ್ವೇಷಣೆ

ಮಾಡುತ್ತಿರುಬೇಕು. ಧರ್ಮದ ಮಾರ್ಗವಾದರೂ ನೀರಿನಲ್ಲಿ ಮೀನಿನ ಹೆಜ್ಜೆಯಂತೆ ಅತಿಸೂಕ್ಷ್ಮವಾಗಿರುತ್ತದೆ. ನೀನಾದರೂ ದರ್ಪಾಹಂಕಾರ-ಗಳಿಂದಾಗಿ ಅಗ್ನಿಯಂತೆ ತೇಜಸ್ವಿಗಳಾದ ವಸುದೇವರಂತಹ ವೃದ್ಧರನ್ನು ಮರ್ಮವನ್ನೆ ಭೇದಿಸುವ ವಾಕ್ ಶಲ್ಯಗಳಿಂದ ಘಾಸಿ ಮಾಡುತ್ತಿರುವೆ. ಮಂತ್ರೋಚ್ಚಾರಣೆಯಿಲ್ಲದೆ ಮಾಡಿದ ಆಹುತಿಗಳಂತೆ ಈ ನಿಂದಾ ವಾಕ್ಯಗಳು ನಿಷ್ಫಲವಾಗುತ್ತವೆ.

**ವಸುದೇವಂ ಚ ಪುತ್ರಾರ್ಥೇ ಯದಿಮಂ ಪರಿಗರ್ಹಸಿ ।**
**ತತ್ರ ಮಿಥ್ಯಾ ಪ್ರಲಾಪಂ ತೇ ನಿಂದಾಮಿ ಕೃಪಣಂ ವಚಃ ॥ 13 ॥**
**ದಾರುಣೇ ಚ ಪಿತಾ ಪುತ್ರೇ ನೈವ ದಾರುಣತಾಂ ವ್ರಜೇತ್ ।**
**ಪುತ್ರಾರ್ಥೇ ಹ್ಯಾಪದಃ ಕಷ್ಟಾಃ ಪಿತರಃ ಪ್ರಾಪ್ನುವಂತಿ ಹಿ ॥ 14 ॥**

ವಸುದೇವನಾದರೂ ತನ್ನ ಮಕ್ಕಳನ್ನು ರಕ್ಷಿಸುವ ಸಲುವಾಗಿ ಮಾಡಿದ ಕಾರ್ಯವನ್ನು ನೀನು ನಿಂದಿಸುತ್ತಿರುವಿ. ಇದೊಂದು ಮಿಥ್ಯಾಪ್ರಲಾಪವಾಗಿದೆ. ಇದಕ್ಕಾಗಿ ನಾನು ನಿನ್ನನ್ನು ನಿಂದಿಸುತ್ತಿರುವುದು. ಇನ್ನೊಂದು ವಿಷಯ ತಿಳಿದುಕೋ, ಪುತ್ರನು ಕ್ರೂರ ಸ್ವಭಾವದವನಾದರೂ ತಂದೆಯು ಮಗನಲ್ಲಿ ಕ್ರೂರಿಯಾಗಿರುವುದಿಲ್ಲ. ಪುತ್ರನ ಅಭಿವೃದ್ಧಿಗಾಗಿಯೇ ತಂದೆಯು ಅನೇಕ ತೊಂದರೆ ಎದುರಿಸಬೇಕಾಗುತ್ತದೆ.

**ಛಾದಿತೋ ವಸುದೇವೇನ ಯದಿ ಪುತ್ರಃ ಶಿಶುಸ್ತದಾ ।**
**ಮನ್ಯಸೇ ಯದ್ಯಕರ್ತವ್ಯಂ ತತ್ ಪೃಚ್ಛ ಪಿತರಂ ಸ್ವಕಮ್ ॥ 15 ॥**
**ಗರ್ಹತಾ ವಸುದೇವಂ ಚ ಯದುವಂಶಂ ಚ ನಿಂದತಾ ।**
**ತ್ವಯಾ ಯಾದವಪುತ್ರಾಣಾಂ ವೈರಜಂ ವಿಷಮಾರ್ಜಿತಮ್ ॥ 16 ॥**
**ಅಕರ್ತವ್ಯಂ ಯದಿ ಕೃತಂ ವಸುದೇವೇನ ಪುತ್ರಜಮ್ ।**
**ಕಿಮರ್ಥಮುಗ್ರಸೇನೇನ ಶಿಶುಸ್ತ್ವಂ ನ ವಿನಾಶಿತಃ ॥ 17 ॥**

ಅಂದು ಕೃಷ್ಣನು ಜನಿಸಿದಾಗ ಅದರ ರಕ್ಷಣೆಗಾಗಿ ಅದನ್ನು ಬೇರೆಡೆ ಸಾಗಿಸಿದನೆಂದು ನೀನು ಆಕ್ಷೇಪ ಮಾಡುತ್ತಿರುವೆಯಲ್ಲ. ಮಗುವಿನ ರಕ್ಷಣೆ

ಹೊಣೆ ತಂದೆಯದಲ್ಲವೆ? ಅದು ಅವನ ಕರ್ತವ್ಯವಲ್ಲವೆ? ಹಾಗಿದ್ದಲ್ಲಿ ನೀನು ಮಗುವಿದ್ದಾಗ ನಿನ್ನ ತಂದೆ ರಕ್ಷಿಸದೆ ಕತ್ತು ಹಿಸುಕಿ ಕೊಂದು ಹಾಕಬೇಕಾಗಿತ್ತು ಅಲ್ಲವೆ? ನೀನು ಸುಮ್ಮನೆ ಯದುವಂಶವನ್ನೂ, ವಸುದೇವನನ್ನು ನಿಂದಿಸುತ್ತಿರುವೆ. ಇದರಿಂದಾಗಿ ಬಂದ ಲಾಭ ಕೇವಲ ದ್ವೇಷವೆಂಬ ವಿಷ ಮಾತ್ರ.

**ಪುನ್ನಾಮ್ನೋ ನರಕಾತ್ ಪುತ್ರೋ ಯಸ್ಮಾತ್ ತ್ರಾತಾ ಪಿತೄನ್ ತದಾ ।**
**ತಸ್ಮಾದ್ ಬ್ರುವಂತಿ ಪುತ್ರೇತಿ ಪುತ್ರಂ ಧರ್ಮವಿದೋ ಜನಾಃ ॥ 18 ॥**

**ಜಾತ್ಯಾಂ ಹಿ ಯಾದವಃ ಕೃಷ್ಣಃ ಸ ಚ ಸಂಕರ್ಷಣೋ ಯುವಾ ।**
**ತ್ವಂ ಚಾಪಿ ವಿಧೃತಃ ತಾಭ್ಯಾಂ ಜಾತವೈರೇಣ ಚೇತಸಾ ॥ 19 ॥**

**ಉದ್ಧೂತಾನೀಹ ಸರ್ವೇಷಾಂ ಯದೂನಾಂ ಹೃದಯಾನಿ ವೈ ।**
**ವಸುದೇವೇ ತ್ವಯಾಽಽಕ್ಷಿಪ್ತೇ ವಾಸುದೇವೇ ಚ ಕೋಪಿತೇ ॥ 20 ॥**

**ಕೃಷ್ಣೇ ಚ ಭವತೋ ದ್ವೇಷ್ಯೇ ವಸುದೇವ ವಿಗರ್ಹಣಾತ್ ।**
**ಶಂಸಂತಿ ಚೇಮಾನಿ ಭಯಂ ನಿಮಿತ್ತಾನ್ಯಶುಭಾನಿ ತೇ ॥ 21 ॥**

ಪುತ್ರನಾದರೂ ಪುತ್ ಎಂಬ ಅನ್ನ ನೀರು ರಹಿತವಾದ ನರಕದಿಂದ ಪಿತೃಗಳನ್ನು ತಾರಣ ಮಾಡುವುದರಿಂದಲೇ ಪುತ್ರನೆನಿಸುವನು. ತಂದೆಯು ಪುತ್ರನನ್ನು ರಕ್ಷಿಸುವುದು ತಪ್ಪೇನಲ್ಲ. ಇದಲ್ಲದೆ ನೀನು, ಶ್ರೀಕೃಷ್ಣ ಬಲರಾಮರು ಯಾದವ ವಂಶದಲ್ಲಿಯೇ ಹುಟ್ಟಿದವರೂ ಹೀಗಿದ್ದರೂ ಅವರನ್ನು ವಿರೋಧಿಸುವುದು ಯುಕ್ತವೆ? ಇದು ನಿನ್ನ ಮೊದಲನೆ ಅಪರಾಧವು. ವಿನಾಕಾರಣ ವಸುದೇವನನ್ನು ನಿಂದಿಸುತ್ತಿರುವೆ. ಇದರಿಂದಾಗಿ ಕೃಷ್ಣನಲ್ಲಿ ಕೋಪದ ಬೀಜವನ್ನು ಬಿತ್ತಿರುವೆ. ಇದು ಯಾದವರೆಲ್ಲರೂ ಹೃದಯದಲ್ಲಿ ಅಸಮಾಧಾನಾಗ್ನಿ ಉರಿಯುತ್ತಿದೆ. ವಾಸುದೇವನಲ್ಲಿ ದ್ವೇಷ, ವಸುದೇವನಲ್ಲಿ ನಿಂದೆ ಇವೆರಡೂ ನಿನಗೆ ಮುಂದಾಗುವ ಭಯವನ್ನೂ ಸೂಚಿಸುತ್ತಿವೆ.

## ನಿನಗೀಗ ಗ್ರಹಣಗತಿ ಸರಿಯಿಲ್ಲ

**ಸರ್ಪಾಣಾಂ ದರ್ಶನಂ ತೀವ್ರಂ ದುಃಸ್ವಪ್ನಾನಾಂ ನಿಶಾಕ್ಷಯೇ ।**
**ಪುರ್ಯಾ ವೈಧವ್ಯ ಶಂಸೀನಿ ಕಾರಣೈರನು ಮೀಯತೇ ॥ 22 ॥**

**ಏಷ ಘೋರೋ ಗ್ರಹಃ ಸ್ವಾತೀಮುಲ್ಲಿಖನ್ ಖೇ ಗಭಸ್ತಿಭಿಃ ।**
**ವಕ್ರಮಂಗಾರಕಶ್ಚಕ್ರೇ ಚಿತ್ರಾಯಾಂ ಘೋರದರ್ಶನಃ ॥ 23 ॥**
**ಬುಧೇನ ಪಶ್ಚಿಮಾ ಸಂಧ್ಯಾ ವ್ಯಾಪ್ತಾ ಘೋರೇಣ ತೇಜಸಾ ।**
**ವೈಶ್ವಾನರಪಥೇ ಶುಕ್ರೋ ಹ್ಯತಿಚಾರಂ ಚಚಾರ ಹ ॥ 24 ॥**
**ಕೇತುನಾ ಧೂಮಕೇತೋಸ್ತು ನಕ್ಷತ್ರಾಣಿ ತ್ರಯೋದಶ ॥ 25 ॥**

ರಾತ್ರಿಯ ಕಡೆ ಯಾಮದಲ್ಲಿ ಸ್ವಪ್ನದಲ್ಲಿ ತೋರುವ ಸರ್ಪವು ಹಾಗೂ ಇತರರ ದುಃಸ್ವಪ್ನಗಳೂ ವೈಧವ್ಯ ಸೂಚಕವಾಗುವಂತೆ ಇದುವರೆಗೂ ಕಂಡುಬಂದ ಸೂಚನೆಗಳಂದಾಗಿ ಮಥುರಾ ಎಂಬ ಸ್ತ್ರೀಯು ತನ್ನ ಒಡೆಯನನ್ನು ಕಳೆದುಕೊಂಡು ವಿಧವೆಯಾಗುತ್ತಾಳೇನೊ?

ಘೋರವಾದ ಗ್ರಹ ರಾಹುವು ಸ್ವಾತೀ ನಕ್ಷತ್ರವನ್ನೂ ತನ್ನ ಕಿರಣಗಳಂದ ಸ್ಪರ್ಶಿಸುತ್ತಾ ಇರುವನು. ಭಯಂಕರ ಕುಜಗ್ರಹವು ಸರ್ವತೋಭದ್ರ ಚಕ್ರದಲ್ಲಿ ಕಂಸನ ನಕ್ಷತ್ರದಿಂದ ಹತ್ತನೇ ನಕ್ಷತ್ರವಾದ ಚಿತ್ತಾ ನಕ್ಷತ್ರವನ್ನು ಆಕ್ರಮಿಸಿರುವನು. ಇದು ಶತ್ರುವಾದ ಬುಧನ ಮನೆಯಾಗಿದೆ.

ಬುಧನಾದರೂ ಭಯಂಕರ ತೇಜಸ್ಸಿನಿಂದ ಪಶ್ಚಿಮ ಸಂಧ್ಯೆಯನ್ನು ವ್ಯಾಪಿಸಿದ್ದಾನೆ. ಶುಕ್ರನಾದರೂ ಸೂರ್ಯನನ್ನು ಅತಿಚಾರಗತಿಯಿಂದ ಅತಿಕ್ರಮಿಸ ಹೊರಟಿರುವನು. ಧೂಮಕೇತುವೆಂಬ ಕೇತುಗ್ರಹವು ತನ್ನ ಹಿಂಭಾಗದಲ್ಲಿ ಭರಣಿಯ ಮೊದಲಾದ ಹದಿಮೂರು ನಕ್ಷತ್ರಗಳು ಸ್ಪರ್ಶಿಸುತ್ತಿದ್ದಾನೆ. ಇದರಿಂದಾಗಿ ಚಂದ್ರನನ್ನು ಅನುಸರಿಸುತ್ತಿಲ್ಲ. ಸೂರ್ಯಮಂಡಲದಲ್ಲಿ ಸೂರ್ಯನಿಗೆ ಅಡ್ಡವಾಗಿ ಪರಿಘವೆಂಬ ದೋಷದಿಂದ ಗ್ರಸ್ತವಾಗಿದೆ. ಇದರ ಕಾಂತಿಯಿಂದ ಸೂರ್ಯಕಾಂತಿ ಮಂಕಾಗಿದೆ. ಪಶುಪಕ್ಷಿಗಳು ವಿರುದ್ಧ ದಿಕ್ಕಿಗೆ ಕೂಗುತ್ತಾ ಹೋಗುತ್ತಿವೆ.

ಉಭಯ ಸಂಧ್ಯೆಯಲ್ಲಿಯೂ ಹೆಣ್ಣು ನರಿಯು ಸ್ಮಶಾನದಿಂದ ಮಥುರೆಯ ಪಟ್ಟಣ ಕಡೆ ಬರುತ್ತಾ. ಕೆಟ್ಟ ಧ್ವನಿಯಿಂದ ಕಿರುಚುತ್ತಾ ಮಥುರೆಯನ್ನು ಸುತ್ತುತ್ತಿದೆ. ಸ್ವಲ್ಪ ಹೊತ್ತಿಗೆ ಮೊದಲು ಭಯಂಕರ ಉಲ್ಕೆಯೊಂದು ಸಿಡಿಲಿನಂತೆ ಶಬ್ಧ ಮಾಡುತ್ತಾ. ಭೂಮಿ ಪರ್ವತಗಳೆಲ್ಲ ಕಂಪಿಸುವಂತೆ ಮಾಡುತ್ತಾ ಭೂಮಿಗೆ ಅಪ್ಪಳಿಸಿತು.

ಈ ಹಿಂದೆ ರಾಹುವು ಸೂರ್ಯನನ್ನು ಆಕ್ರಮಿಸಿ ರಾಹುಗ್ರಹಣವುಂಟು ಮಾಡಿದ್ದನು. ಇದರ ಪ್ರಭಾವ ಆರು ತಿಂಗಳಿರುತ್ತದೆ. ರಾಹುವು ಹಗಲನ್ನು ರಾತ್ರಿಯನ್ನಾಗಿ ಮಾಡಿದ್ದನು. ಇನ್ನೂ ಅನೇಕ ಉತ್ಪಾತಗಳು, ಸಿಡಿಲು ಬೀಳುತ್ತಿವೆ. ಮೇಘಗಳು ನೀರನ್ನು ಸುರಿಸದೆ ರಕ್ತವರ್ಷವನ್ನುಂಟು ಮಾಡುತ್ತಿವೆ. ದೇವತಾ ಪ್ರತಿಮೆಗಳು ತಮ್ಮ ಸ್ಥಾನದಿಂದ ಕದಲುತ್ತಿವೆ. ಪಕ್ಷಿಗಳೆಲ್ಲ ಅನ್ಯತ್ರ ವಲಸೆ ಹೋಗುತ್ತಿವೆ.

**ಯಾನಿ ರಾಜವಿನಾಶಾಯ ದೈವಜ್ಞಾಃ ಕಥಯಂತಿ ಹ ।**
**ತಾನಿ ಸರ್ವಾಣಿ ಪಶ್ಯಾಮೋ ನಿಮಿತ್ತಾನ್ಯಶುಭಾನಿ ವೈ ॥ 26 ॥**

**ತ್ವಂ ಚಾಪಿ ಸ್ವಜನ ದ್ವೇಷೀ ರಾಜಧರ್ಮ ಪರಾಙ್ಮುಖಃ ।**
**ಅನಿಮಿತ್ತಾಗತ ಕ್ರೋಧಃ ಸನ್ನಿಕೃಷ್ಟಭಯೋ ಹ್ಯಸಿ ॥ 27 ॥**

ಕಂಸನೇ ! ದೈವಜ್ಞರು ಯಾವ ನಿಮಿತ್ತಗಳನ್ನು ರಾಜರ ವಿನಾಶ ಸೂಚಕಗಳೆಂದು ಹೇಳುವರೋ – ಆ ಎಲ್ಲಾ ಅಶುಭಗಳನ್ನೆಲ್ಲ ನಾವೀಗ ನೋಡುತ್ತಲಿದ್ದೇವೆ. ಇದಕ್ಕೆ ಪೂರಕವೊ ಎಂಬಂತೆ ನೀನಾದರೂ ಸ್ವಜನರನ್ನು ದ್ವೇಷಿಸುತ್ತಿರುವೆ. ರಾಜಧರ್ಮ ವಿರುದ್ಧವಾಗಿ ವರ್ತಿಸುತ್ತಿರುವೆ. ನಿಷ್ಕಾರಣವಾಗಿ ಕೋಪಿಸಿಕೊಳ್ಳುತ್ತಿರುವೆ. ಇವೆಲ್ಲ ನಿನಗೆ ಅತ್ಯಲ್ಪ ಕಾಲದಲ್ಲಿಯೇ ಮೃತ್ಯು ಭಯವನ್ನು ಸೂಚಿಸುತ್ತದೆ.

**ಯಸ್ತ್ವಂ ದೇವೋಪಮಂ ವೃದ್ಧಂ ವಸುದೇವಂ ವಸೂಪಮಮ್ ।**
**ಮೋಹಾತ್ ಕ್ಷಿಪಸಿ ದುರ್ಬುದ್ಧೇ ಕುತಸ್ತೇ ಶಾಂತಿರಾತ್ಮನಃ ॥ 28 ॥**

**ತ್ವದ್ಗತೇ ಯೋ ಹಿ ನಃ ಸ್ನೇಹಃ ತಂ ತ್ಯಜಾಮೋಽದ್ಯ ವೈ ವಯಮ್ ।**
**ಅಹಿತಂ ಸ್ವಸ್ಯ ವಂಶಸ್ಯ ನ ತ್ವಾಂ ಕ್ಷಣ ಮುಪಾಸ್ಮಹೇ ॥ 29 ॥**

ದುರ್ಬುದ್ಧಿವುಳ್ಳ ಕಂಸನೇ! ದೇವೋಪಮನೂ, ವಸುಸದೃಶನೂ, ವೃದ್ಧನೂ ಆದ ವಸುದೇವನನ್ನು ನಿನ್ನ ದೇಹದ ಮೇಲಿನ ಮೋಹದಿಂದ ನಿಂದಿಸುತ್ತಿರುವೆ. ಇದರಿಂದಾಗಿಯೇ ನಿನಗೆ ಮನಸ್ಸಿನಲ್ಲಿ ಅಶಾಂತಿವುಂಟಾಗಿದೆ. ಇಷ್ಟರವರೆಗೂ ನಿನ್ನ ಮೇಲೆ ಯಾವ ರೀತಿಯ ಪ್ರೀತಿಯಿಟ್ಟಿದ್ದೆವೋ ಅದನ್ನು ನಾವೆಲ್ಲರೂ ಈಗಲೇ ತ್ಯಜಿಸುತ್ತೇವೆ. ನಮ್ಮ ವಂಶಕ್ಕೆ ಅಹಿತವುಂಟು ಮಾಡುತ್ತಿರುವ ನಿನ್ನೊಂದಿಗೆ ಇರಲು ಇಷ್ಟಪಡುವುದಿಲ್ಲ.

ನಿಜವಾಗಿಯೂ, ಆ ದಾನಪತಿಯೆನಿಸಿದ ಅಕ್ರೂರನೇ ಧನ್ಯನು. ಏಕೆಂದರೆ, ನಿನ್ನಾದೇಶದಂತೆ ಅವನು ಬೃಂದಾವನದಲ್ಲಿರುವ ಕಮಲನಯನನೂ, ವಿಶಾಲಕ್ಷನೂ, ಅಕ್ಲಿಷ್ಟಕರ್ಮಕಾರಿಯೂ ಆದ ಶ್ರೀಕೃಷ್ಣನನ್ನು ನೋಡುವವನಷ್ಟೇ!

**ಭಿನ್ನಮೂಲೋ ಹ್ಯಯಂ ವಂಶೋ ಯದೂನಾಂ ತ್ವತ್ಕೃತೇ ಕೃತಃ ।**
**ಕೃಷ್ಣೋ ಜ್ಞಾತೀನ್ ಸಮಾನಾಯ್ಯ ಸ ಸಂಧಾನಂ ಕರಿಷ್ಯತಿ ॥ 30 ॥**
**ಕ್ಷಾಂತಮೇವ ತವಾನೇನ ವಸುದೇವೇನ ಧೀಮತಾ ।**
**ಕಾಲ ಸಮ್ಯಕ್ ಪರಿಜ್ಞಾನೋ ಬ್ರೂಹಿ ತ್ವಂ ಯದ್ಯದಿಚ್ಛಸಿ ॥ 31 ॥**
**ಮಹ್ಯಂ ತು ರೋಚತೇ ಕಂಸ! ವಸುದೇವ ಸಹಾಯವಾನ್ ।**
**ಗಚ್ಛ ಕೃಷ್ಣಸ್ಯ ನಿಲಯಂ ಸಂಧಿಸ್ತೇನ ಚ ರೋಚತಾಮ್ ॥ 32 ॥**

ನಿನ್ನಿಂದಾಗಿ ಈ ಯದುವಂಶ ಮೂಲವೆ ನಾಶವಾಗುತ್ತಿದೆ. ಶ್ರೀಕೃಷ್ಣನು ಇಲ್ಲಿಗೆ ಬರುವುದು ಖಂಡಿತ. ಯಾದವ ಬಂಧುಗಳನ್ನೆಲ್ಲ ಒಂದುಗೂಡಿಸಿ ಸಂಧಾನ ಮಾಡುವನು. ಮೇಧಾವಿ ವಸುಧೇವನೇನೋ ನಿನ್ನ ಅಪರಾಧಗಳನ್ನು ಸಹಿಸಿರುವನು. ಮೃತ್ಯುಗ್ರಸ್ತನಾಗಿ ವಿವೇಕ ಶೂನ್ಯನಾಗಿರುವ ನೀನು ನಿನಗಿಷ್ಟ ಬಂದಂತೆ ಅವಾಚ್ಯ ನುಡಿಗಳನ್ನಾಡುತ್ತಿರು. ಆದರೆ ನನ್ನ ಹಿತವಾದ ಮಾತುಗಳನ್ನು ಮಾತ್ರ ನಾನು ಹೇಳ ಬಿಡುವೆನು.

ಕಂಸನೇ ! ನೀನು ಬದುಕಬೇಕಾದರೆ ವಸುದೇವನೊಂದಿಗೆ ಶ್ರೀಕೃಷ್ಣನಿರುವ ಸ್ಥಳಕ್ಕೆ ಹೋಗಿ, ಅವನಿಗೆ ಶರಣು ಹೊಂದಿ ಅವನೊಂದಿಗೆ ಸಂಧಿ ಮಾಡಿಕೋ ಹೀಗಿದ್ದರೆ ಮಾತ್ರ ನಿನ್ನ ಜೀವ ಉಳಿಯಬಹುದು ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಂಸನಿಗೆ ಅಂಧಕನ ಉಪದೇಶವೆಂಬಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 24 ವಿಷ್ಣುಪರ್ವ

# ಅಥ ಚತುರ್ವಿಂಶೋಽಧ್ಯಾಯಃ

## ಕೇಶಿದೈತ್ಯನ ವಧೆ

*ವೈಶಂಪಾಯನ ಉವಾಚ –*

ಅಂಧಕಸ್ಯ ವಚಃ ಶ್ರುತ್ವಾ ಕಂಸಃ ಸಂರಕ್ತಲೋಚನಃ ।
ನ ಕಿಂಚಿದಬ್ರವೀತ್ ಕ್ರೋಧಾದ್ ವಿವೇಶ ಸ್ವಂ ನಿಕೇತನಮ್ ॥ 1 ॥

ತೇ ಚ ಸರ್ವೇ ಯಥಾವೇಶ್ಮ ಯಾದವಾಃ ಶ್ರುತವಿಸ್ತರಾಃ ।
ಜಗ್ಮುಃ ವಿಗತಸಂಕಲ್ಪಾಃ ಕಂಸ ವೈಕೃತಶಾಸನಾಃ ॥ 2 ॥

ಅಕ್ರೂರೋಽಪಿ ಯಥಾಽಽಜ್ಞಪ್ತಃ ಕೃಷ್ಣದರ್ಶನಲಾಲಸಾಃ ।
ಜಗಾಮ ರಥಮುಖ್ಯೇನ ಮನಸಾ ತುಲ್ಯಗಾಮಿನಾ ॥ 3 ॥

ಅಂಧಕನ ಹಿತೋಪದೇಶವನ್ನು ಕೇಳದ ಕಂಸನು ಕೋಪದಿಂದ ರಕ್ತನೇತ್ರನಾಗಿ ದುರುಗಟ್ಟಿ ನೋಡುತ್ತಾ ಏನನ್ನೂ ಹೇಳದೆ ತನ್ನ ಅರಮನೆಗೆ ಹೋದನು. ಅಂಧಕನ ಕಂಸೋಪದೇಶವನ್ನು ಸಮಗ್ರವಾಗಿ ಕೇಳದ ಯಾದವರು ಇದಕ್ಕೆ ಏನೂ ಉತ್ತರ ನೀಡದೆ ಕೋಪದಿಂದ ಎದ್ದು ಹೋದದ್ದನ್ನು ನೋಡಿ ನಿರಾಶಾಭಾವ ಹೊಂದಿ, ಅವರೂ ತಮ್ಮ ಮನೆಗಳಗೆ ಹೊರಟು ಹೋದರು.

ಇತ್ತ ಅಕ್ರೂರನು ಕಂಸನ ಅಣತಿಯಂತೆ ರಾಮಕೃಷ್ಣರನ್ನು ಕರೆತರಲೆಂದು ಮನೋವೇಗವುಳ್ಳ ರಥವೇರಿ ವ್ರಜದ ಕಡೆ ಹೊರಟನು.

## ಕೇಶಿದೈತ್ಯನ ಆರ್ಭಟ

**ಕೃಷ್ಣಸ್ಯಾಪಿ ನಿಮಿತ್ತಾನಿ ಶುಭಾನ್ಯಂಗ ಗತಾನಿ ವೈ ।**
**ಪಿತೃತುಲ್ಯೇನ ಶಂಸಂತಿ ಬಾಂಧವೇನ ಸಮಾಗಮಮ್ ॥ 4 ॥**

ಇತ್ತಲಾಗಿ ಶ್ರೀಕೃಷ್ಣನ ಬಲಗಣ್ಣು, ಬಲಭುಜ. ಬಲದ ಕೈ ತುರಿಸುವುದು, ಅದುರುವುದು ಇವುಗಳಿಂದ ಯಾರೋ ಪಿತೃ ಸಮಾನ ಬಂಧುವಿನ ಜೊತೆಗೆ ಸಮಾಗಮವಾಗುವ ಶುಭ ನಿಮಿತ್ತಗಳಾದವು.

**ಪ್ರಾಗೇವ ಚ ನರೇಂದ್ರೇಣ ಮಾಥುರೇಣೌಗ್ರ ಸೇನಿನಾ ।**
**ಕೇಶಿನಃ ಪ್ರೇಶಿತೋ ದೂತೋ ವಧಾಯೋಪೇಂದ್ರ ಕಾರಣಾತ್ ॥ 5 ॥**

**ಸ ಚ ದೂತವಚಃ ಶ್ರುತ್ವಾ ಕೇಶೀ ಕ್ಲೇಶಕರೋ ನೃಣಾಮ್ ।**
**ವೃಂದಾವನಗತೋ ಗೋಪಾನ್ ಬಾಧತೇ ಸ್ಮ ದುರಾಸದಃ ॥ 6 ॥**

ಕಂಸನು ಅಕ್ರೂರನನ್ನು ಕೃಷ್ಣನ ಬಳಿಗೆ ಕಳುಹಿಸುವ ಮೊದಲೇ ತನ್ನ ದೂತನೊಬ್ಬನನ್ನು ಕೇಶಿದೈತ್ಯನ ಬಳಿ ಕಳುಹಿಸಿ – ಕೃಷ್ಣನನ್ನು ಕೊಂದು ಹಾಕುವುದು ಎಂದು ಆದೇಶಿಸಿದ್ದನು. ಸರ್ವಗೋವ್ರಜಕ್ಕೂ ಕ್ಲೇಶವನ್ನುಂಟು ಮಾಡುವ ಕೇಶಿ ದೈತ್ಯನು ಪ್ರಜೆಗಳನ್ನು ಬಹಳವಾಗಿ ಪೀಡಿಸುತ್ತಿದ್ದ.

**ಮಾನುಷಂ ಮಾಂಸಮಶ್ನಾನಃ ಕ್ರುದ್ಧೋ ದುಷ್ಟ ಪರಾಕ್ರಮಃ ।**
**ದುರ್ದಾಂತೋ ವಾಜಿ ದೈತ್ಯೋಸೌ ಅಕರೋತ್ ಕದನಂ ಮಹತ್ ॥ 7 ॥**

**ನಿಘ್ನನ್ ಗಾಃ ವೈ ಸಗೋಪಾಲಾನ್ ಗವಾಂ ಪಿಶಿತಭೋಜನಃ ।**
**ದುರ್ಮದಃ ಕಾಮಚಾರೀ ಚ ಸ ಕೇಶೀ ನಿರವಗ್ರಹಃ ॥ 8 ॥**

**ತದರಣ್ಯಂ ಶ್ಮಶಾನಾಭಂ ನೃಣಾಂ ಮಾಂಸಾಸ್ಥಿಭಿರ್ಯುತಮ್ ।**
**ಯತ್ರಾಸ್ತೇ ಸ ಹಿ ದುಷ್ಟಾತ್ಮಾ ಕೇಶೀ ತುರಗದಾನವಃ ॥ 9 ॥**

ಕಂಸನ ಆದೇಶದಂತೆ ದುಷ್ಟಕೇಶಿದೈತ್ಯನು ವೃಂದಾವನಕ್ಕೆ ಬಂದು ಅಲ್ಲಿಯ ಗೋಪಾಲರಿಗೆಲ್ಲ ಉಪದ್ರವವನ್ನು ಕೊಡುತ್ತಿದ್ದನು. ಭಯಂಕರವಾದ ಕುದುರೆಯ ವೇಷ ಧರಿಸಿದ ದುಷ್ಟಕೇಶಿಯು ನರಮಾಂಸಲೋಲುಪನಾಗಿ

ಗೋಪಾಲರನ್ನು ಕೊಂದು ಮಾಂಸವನ್ನು ಭಕ್ಷಿಸುತ್ತಿದ್ದನು. ದುಷ್ಟಪರಾಕ್ರಮಿಯೂ, ಯಾರಿಂದಲೂ ತಡೆಯಲಸಾಧ್ಯನೂ ಆಗಿದ್ದನು. ಗೋವುಗಳ ಮಾಂಸ ಭಕ್ಷಿಸುತ್ತಲೂ, ಸ್ವೇಚ್ಛಾಚಾರಿಯಾಗಿ ಅಡೆ-ತಡೆಯಿಲ್ಲದವನಾಗಿದ್ದನು. ಕೆಲವೆ ದಿನಗಳಲ್ಲಿಯೇ ಕೇಶೀದೈತ್ಯನ ಹಿಂಸಾಚಾರದಿಂದಾಗಿ ಮನುಷ್ಯರ ಹಾಗೂ ಗೋವುಗಳ ಮಾಂಸ, ಮೂಳೆಗಳಿಂದ ತುಂಬಿ ಸ್ಮಶಾನ ಸದೃಶವಾಗಿತ್ತು.

ಕುದುರೆಯ ಗೊರಸಿನ ಬಲವಾದ ಏಟಿನಿಂದ ಭೂಮಿಯು ಕಂಪಿಸುತ್ತಿತ್ತು. ವೇಗವಾಗಿ ನುಗ್ಗುತ್ತಾ ಅಕ್ಕಪಕ್ಕದ ಗಿಡಮರಗಳನ್ನೆ ಉರುಳಿಸುತ್ತಿದ್ದನು. ಕುದುರೆಯ ಕೆನೆತದಿಂದ ಚಂಡಮಾರುತವನ್ನೆ ಸ್ಪರ್ಧಿಸುವಂತಿತ್ತು. ವೇಗವಾಗಿ ಹಾರುತ್ತಾ ಆಕಾಶದಲ್ಲಿ ಹಾರಾಡುತ್ತಿದ್ದನು. ಸ್ಥೂಲದೇಹದಿಂದ ಕೊಬ್ಬಿ ಹೋಗಿದ್ದ ಕೇಶಿಯು, ತನ್ನ ಕುತ್ತಿಗೆಯಲ್ಲಿ ಹಾರಾಡುತ್ತಿದ್ದ ಕೇಸರಗಳು ಮಿಂಚಿನಂತೆ ಹೊಳೆಯುತ್ತಿದ್ದವು. ಹಿಂಸಾದಿ ವೃತ್ತಿಯಲ್ಲಿ ಕಂಸನನ್ನೆ ಅನುಸರಿಸುತ್ತಿದ್ದ ಅವನು ರಾಕ್ಷಸನಂತಿದ್ದನು. ಸಮಸ್ತ ಗೋಪಾಲಕರನ್ನೂ ಕೊಂದು ಹಾಕುವ ದುರುದ್ದೇಶ ಹೊಂದಿದ ದೈತ್ಯನು ಈ ಬೃಂದಾವನವನ್ನೆಲ್ಲ ಜನಶೂನ್ಯವನ್ನಾಗಿಸಿದ್ದ. ಗೋವುಗಳಾಗಲೀ, ಅರಣ್ಯವಾಸಿ ಗೋಪಾಲರಾಗಲೀ ಅಲ್ಲಿ ವಾಸಮಾಡುತ್ತಿರಲಿಲ್ಲ. ನೃಗೋಮಾಂಸಾಶನಿಯಾದ ದುರಾಚಾರಿಯಾದ ಕೇಶಿಯು ತಾನಿರುವ ಮಾರ್ಗದಲ್ಲಿ ಯಾರನ್ನೂ ಬರಲು ಬಿಡುತ್ತಿರಲಿಲ್ಲ. ಕ್ರುದ್ಧನಾಗಿದ್ದ ಕೇಶಿಯು ಮನುಷ್ಯರಂತೆ ಶಬ್ಧ ಮಾಡುತ್ತಾ ತನ್ನ ಕೂದಲುಗಳಿಂದ ಎಷ್ಟೋ ಮೋಡಗಳನ್ನು ಚದುರಿಸುತ್ತಿದ್ದನು. ಅವನ ಕೆನೆಯುವ ಭಯಂಕರ ಶಬ್ಧದಿಂದಾಗಿ ಗೋಪಿಕಾ ಸ್ತ್ರೀಯರು, ಗೋಪಾಲಕರು ಭಯಪಟ್ಟರು. ಗೋವಿಂದನೆ ರಕ್ಷಿಸು, ಗೋಪಾಲನೇ ಕಾಪಾಡು! ಎಂದು ರೋದನ ಮಾಡುತ್ತಾ ತಮ್ಮ ತಮ್ಮ ಮಕ್ಕಳೊಂದಿಗೆ ಜಗನ್ನಾಥ ಶ್ರೀಕೃಷ್ಣನನ್ನು ಆಶ್ರಯಿಸಿದರು.

## ಕೇಶೀ-ಕೇಶವ ಯುದ್ಧ

**ತಾಸಾಂ ರುದಿತ ಶಬ್ದೇನ ಗೋಪಾನಾಂ ಕ್ರಂದಿತೇನ ಚ ।**
**ದತ್ವಾಽಭಯಂ ತು ಕೃಷ್ಣೋ ವೈ ಕೇಶಿನಂ ಸೋಽಭಿದುದ್ರುವೇ ॥ 10 ॥**

ಕೇಶೀಚಾಪ್ಯುನ್ನತಗ್ರೀವೋ ಪ್ರಕಾಶದಶನೇಕ್ಷಣಃ ।
ಹ್ರೇಷಮಾಣೋ ಜವೋದಗ್ರೋ ಗೋವಿಂದಾಭಿಮುಖೋ ಯಯೌ॥ 11॥
ತಮಾಪತಂತಂ ಸಂಪ್ರೇಕ್ಷ್ಯ ಕೇಶಿನಂ ಹಯದಾನವಮ್ ।
ಪ್ರತ್ಯುಜ್ಜಗಾಮ ಗೋವಿಂದಃ ತೋಯದಃ ಶಶಿನಂ ಯಥಾ ॥ 12 ॥

ಶ್ರೀಕೃಷ್ಣನು ಗೋಪಿಯರು ಅಳುವುದನ್ನೂ, ಗೋಪಾಲಕರ ಗೋಳಾಡುವ ಶಬ್ಧವನ್ನು ಕೇಳಿ ಅವರಿಗೆಲ್ಲ ಗೋಪಿಯರೇ! ಭಯಪಡಬೇಡಿರಿ ಎಂದು ಅಭಯ ನೀಡಿ, ಕೇಶಿಗೆ ಅಭಿಮುಖವಾಗಿ ಹೋದನು. ಕೇಶಿಯಾದರೂ ಕ್ರೂರ ಧ್ವನಿಯಿಂದ ಕೆನೆಯುತ್ತಾ ಖುರಪುಟಗಳಿಂದ ನೆಲವನ್ನೂ ಕೆದರುತ್ತಾ, ಎಡದಿಂದ ಬಲಕ್ಕೂ, ಬಲದಿಂದ ಎಡಕ್ಕೂ ಸಂಚರಿಸುತ್ತಾ ಮಂಡಲಾಕಾರವಾಗಿ ಸುತ್ತುತ್ತಾ, ತನ್ನೆರಡೂ ಕಾಲುಗಳಿಂದಲೂ ಗಿಡಮರಗಳನ್ನು ಒದ್ದು ಬೀಳಿಸುತ್ತಿದ್ದನು. ಮೈಯಿಂದ ಬೆವರು, ಬಾಯಿಂದ ನೊರೆ ಸುರಿಸುತ್ತಾ, ಗೊರಸಿನ ಹೊಡೆತದಿಂದ ಧೂಳೆಬ್ಬಿಸುತ್ತಾ, ಹಲ್ಲು ಕಡಿಯುತ್ತಾ ಕೃಷ್ಣನ ಮೇಲೇರಿ ಬಂದನು. ಇಂತಹ ಹ್ರೇಷಾರವದೊಂದಿಗೆ ಕಾದಲು ಬರುತ್ತಿರುವ ಕೇಶಿಯ ಸಮೀಪ ಚಂದ್ರನನ್ನು ಒಂದು ಮಹಾಮೇಘ ಆಕ್ರಮಿಸುವಂತೆ ಆಕ್ರಮಿಸಿದನು.

ಕೇಶಿನಸ್ತು ತಮಭ್ಯಾಶೇ ದೃಷ್ಟ್ವಾ ಕೃಷ್ಣಮವಸ್ಥಿತಮ್ ।
ಮನುಷ್ಯ ಬುದ್ಧಯೋ ಗೋಪಾಃ ಕೃಷ್ಣಮೂಚುಃ ಹಿತೈಷಿಣಃ ॥ 13 ॥
ಕೃಷ್ಣ ತಾತ ನ ಖಲ್ವೇಷ ಸಹಸಾ ತೇ ಹಯಾಧಮಃ ।
ಉಪಸರ್ಪ್ಯೋ ಭವಾನ್ ಬಾಲಃ ಪಾಪಶ್ಚೈವ ದುರಾಸದಃ ॥ 14 ॥

**ಕೇಶೀ**[1] ದೈತ್ಯನ ಸಮೀಪದಲ್ಲಿಯೇ ಹೋಗುತ್ತಿದ್ದ ಕೃಷ್ಣನನ್ನು ನೋಡಿ ಭಯಪಟ್ಟ ಕೃಷ್ಣನನ್ನು ತಮ್ಮಂತೆ ಮಾನವನೆಂದು ತಿಳಿದ ಗೋಪಿ-

---

1. ವಿಶೇಷಾಂಶ : ಕೇಶಿಯು ಹಯಗ್ರೀವನೆಂಬ ಅಸುರನು. ಪಾರ್ವತೀ ವರ ದರ್ಪಿತನಾಗಿದ್ದು ಹಯಗ್ರೀವಾಸುರನು. ವೇದಗಳನ್ನೆ ಅಪಹರಿಸಿದ್ದು ಮೀನಿನಿಂದ ಸತ್ತ. ಕೇಶಿಯಾದರೂ ಬಾಲಕೃಷ್ಣನಿಂದ ಸಾಯುತ್ತಾನೆ. ಅಶ್ವರೂಪ ಧರಿಸಿದನೆಂದರೆ ಶ್ವಃ ನಾಳೆ, ನಾನಿರುವುದು ನಿಶ್ಚಿತವಲ್ಲವೆಂಬರ್ಥ ಹೊರಡುತ್ತದೆ.
ಮೇ ನ ಜೀವಿತಾಶಾ ನನು ವಿದ್ಯತೇ ಶ್ವಃ ॥ -ರು.ವಿ. *10/11*

ಗೋಪಾಲರನ್ನು ಕೊಂದು ಮಾಂಸವನ್ನು ಭಕ್ಷಿಸುತ್ತಿದ್ದನು. ದುಷ್ಟಪರಾಕ್ರಮಿಯೂ, ಯಾರಿಂದಲೂ ತಡೆಯಲಸಾಧ್ಯನೂ ಆಗಿದ್ದನು. ಗೋವುಗಳ ಮಾಂಸ ಭಕ್ಷಿಸುತ್ತಲೂ, ಸ್ವೇಚ್ಛಾಚಾರಿಯಾಗಿ ಅಡೆ-ತಡೆಯಿಲ್ಲದವನಾಗಿದ್ದನು. ಕೆಲವೆ ದಿನಗಳಲ್ಲಿಯೇ ಕೇಶೀದೈತ್ಯನ ಹಿಂಸಾಚಾರದಿಂದಾಗಿ ಮನುಷ್ಯರ ಹಾಗೂ ಗೋವುಗಳ ಮಾಂಸ, ಮೂಳೆಗಳಿಂದ ತುಂಬಿ ಸ್ಮಶಾನ ಸದೃಶವಾಗಿತ್ತು.

ಕುದುರೆಯ ಗೊರಸಿನ ಬಲವಾದ ಏಟಿನಿಂದ ಭೂಮಿಯು ಕಂಪಿಸುತ್ತಿತ್ತು. ವೇಗವಾಗಿ ನುಗ್ಗುತ್ತಾ ಅಕ್ಕಪಕ್ಕದ ಗಿಡಮರಗಳನ್ನೆ ಉರುಳಿಸುತ್ತಿದ್ದನು. ಕುದುರೆಯ ಕೆನೆತದಿಂದ ಚಂಡಮಾರುತವನ್ನೆ ಸ್ಪರ್ಧಿಸುವಂತಿತ್ತು. ವೇಗವಾಗಿ ಹಾರುತ್ತಾ ಆಕಾಶದಲ್ಲಿ ಹಾರಾಡುತ್ತಿದ್ದನು. ಸ್ಥೂಲದೇಹದಿಂದ ಕೊಬ್ಬಿ ಹೋಗಿದ್ದ ಕೇಶಿಯು, ತನ್ನ ಕುತ್ತಿಗೆಯಲ್ಲಿ ಹಾರಾಡುತ್ತಿದ್ದ ಕೇಸರಗಳು ಮಿಂಚಿನಂತೆ ಹೊಳೆಯುತ್ತಿದ್ದವು. ಹಿಂಸಾದಿ ವೃತ್ತಿಯಲ್ಲಿ ಕಂಸನನ್ನೆ ಅನುಸರಿಸುತ್ತಿದ್ದ ಅವನು ರಾಕ್ಷಸನಂತಿದ್ದನು. ಸಮಸ್ತ ಗೋಪಾಲಕರನ್ನೂ ಕೊಂದು ಹಾಕುವ ದುರುದ್ದೇಶ ಹೊಂದಿದ ದೈತ್ಯನು ಈ ಬೃಂದಾವನವನ್ನೆಲ್ಲ ಜನಶೂನ್ಯವನ್ನಾಗಿಸಿದ್ದ. ಗೋವುಗಳಾಗಲೀ, ಅರಣ್ಯವಾಸಿ ಗೋಪಾಲರಾಗಲೀ ಅಲ್ಲಿ ವಾಸಮಾಡುತ್ತಿರಲಿಲ್ಲ. ನೃಗೋಮಾಂಸಾಶನಿಯಾದ ದುರಾಚಾರಿಯಾದ ಕೇಶಿಯು ತಾನಿರುವ ಮಾರ್ಗದಲ್ಲಿ ಯಾರನ್ನೂ ಬರಲು ಬಿಡುತ್ತಿರಲಿಲ್ಲ. ಕ್ರುದ್ಧನಾಗಿದ್ದ ಕೇಶಿಯು ಮನುಷ್ಯರಂತೆ ಶಬ್ಧ ಮಾಡುತ್ತಾ ತನ್ನ ಕೂದಲುಗಳಿಂದ ಎಷ್ಟೋ ಮೋಡಗಳನ್ನು ಚದುರಿಸುತ್ತಿದ್ದನು. ಅವನ ಕೆನೆಯುವ ಭಯಂಕರ ಶಬ್ಧದಿಂದಾಗಿ ಗೋಪಿಕಾ ಸ್ತ್ರೀಯರು, ಗೋಪಾಲಕರು ಭಯಪಟ್ಟರು. ಗೋವಿಂದನೆ ರಕ್ಷಿಸು, ಗೋಪಾಲನೇ ಕಾಪಾಡು! ಎಂದು ರೋದನ ಮಾಡುತ್ತಾ ತಮ್ಮ ತಮ್ಮ ಮಕ್ಕಳೊಂದಿಗೆ ಜಗನ್ನಾಥ ಶ್ರೀಕೃಷ್ಣನನ್ನು ಆಶ್ರಯಿಸಿದರು.

### ಕೇಶೀ-ಕೇಶವ ಯುದ್ಧ

**ತಾಸಾಂ ರುದಿತ ಶಬ್ದೇನ ಗೋಪಾನಾಂ ಕ್ರಂದಿತೇನ ಚ ।**
**ದತ್ವಾಽಭಯಂ ತು ಕೃಷ್ಣೋ ವೈ ಕೇಶಿನಂ ಸೋಽಭಿದುದ್ರುವೇ ॥ 10 ॥**

**ಕೇಶೀಚಾಪ್ಯುನ್ನತಗ್ರೀವೋ ಪ್ರಕಾಶದಶನೇಕ್ಷಣಃ ।**
**ಹ್ರೇಷಮಾಣೋ ಜವೋದಗ್ರೋ ಗೋವಿಂದಾಭಿಮುಖೋ ಯಯೌ॥ 11॥**
**ತಮಾಪತಂತಂ ಸಂಪ್ರೇಕ್ಷ್ಯ ಕೇಶಿನಂ ಹಯದಾನವಮ್ ।**
**ಪ್ರತ್ಯುಜ್ಜಗಾಮ ಗೋವಿಂದಃ ತೋಯದಃ ಶಶಿನಂ ಯಥಾ ॥ 12 ॥**

ಶ್ರೀಕೃಷ್ಣನು ಗೋಪಿಯರು ಅಳುವುದನ್ನೂ, ಗೋಪಾಲಕರ ಗೋಳಾಡುವ ಶಬ್ಧವನ್ನು ಕೇಳಿ ಅವರಿಗೆಲ್ಲ ಗೋಪಿಯರೇ! ಭಯಪಡಬೇಡಿರಿ ಎಂದು ಅಭಯ ನೀಡಿ, ಕೇಶಿಗೆ ಅಭಿಮುಖವಾಗಿ ಹೋದನು. ಕೇಶಿಯಾದರೂ ಕ್ರೂರ ಧ್ವನಿಯಿಂದ ಕೆನೆಯುತ್ತಾ ಖುರಪುಟಗಳಿಂದ ನೆಲವನ್ನೂ ಕೆದರುತ್ತಾ, ಎಡದಿಂದ ಬಲಕ್ಕೂ, ಬಲದಿಂದ ಎಡಕ್ಕೂ ಸಂಚರಿಸುತ್ತಾ ಮಂಡಲಾಕಾರವಾಗಿ ಸುತ್ತುತ್ತಾ, ತನ್ನೆರಡೂ ಕಾಲುಗಳಿಂದಲೂ ಗಿಡಮರಗಳನ್ನು ಒದ್ದು ಬೀಳಿಸುತ್ತಿದ್ದನು. ಮೈಯಿಂದ ಬೆವರು, ಬಾಯಿಂದ ನೊರೆ ಸುರಿಸುತ್ತಾ, ಗೊರಸಿನ ಹೊಡೆತದಿಂದ ಧೂಳೆಬ್ಬಿಸುತ್ತಾ, ಹಲ್ಲು ಕಡಿಯುತ್ತಾ ಕೃಷ್ಣನ ಮೇಲೇರಿ ಬಂದನು. ಇಂತಹ ಹ್ರೇಷಾರವದೊಂದಿಗೆ ಕಾದಲು ಬರುತ್ತಿರುವ ಕೇಶಿಯ ಸಮೀಪ ಚಂದ್ರನನ್ನು ಒಂದು ಮಹಾಮೇಘ ಆಕ್ರಮಿಸುವಂತೆ ಆಕ್ರಮಿಸಿದನು.

**ಕೇಶಿನಸ್ತು ತಮಭ್ಯಾಶೇ ದೃಷ್ಟ್ವಾ ಕೃಷ್ಣಮವಸ್ಥಿತಮ್ ।**
**ಮನುಷ್ಯ ಬುದ್ಧಯೋ ಗೋಪಾಃ ಕೃಷ್ಣಮೂಚುಃ ಹಿತೈಷಿಣಃ ॥ 13 ॥**
**ಕೃಷ್ಣ ತಾತ ನ ಖಲ್ವೇಷ ಸಹಸಾ ತೇ ಹಯಾಧಮಃ ।**
**ಉಪಸರ್ಪ್ಯೋ ಭವಾನ್ ಬಾಲಃ ಪಾಪಶ್ಚೈವ ದುರಾಸದಃ ॥ 14 ॥**

**ಕೇಶೀ**[1] ದೈತ್ಯನ ಸಮೀಪದಲ್ಲಿಯೇ ಹೋಗುತ್ತಿದ್ದ ಕೃಷ್ಣನನ್ನು ನೋಡಿ ಭಯಪಟ್ಟ ಕೃಷ್ಣನನ್ನು ತಮ್ಮಂತೆ ಮಾನವನೆಂದು ತಿಳಿದ ಗೋಪಿ-

---

1. ವಿಶೇಷಾಂಶ : ಕೇಶಿಯು ಹಯಗ್ರೀವನೆಂಬ ಅಸುರನು. ಪಾರ್ವತೀ ವರ ದರ್ಪಿತನಾಗಿದ್ದು ಹಯಗ್ರೀವಾಸುರನು. ವೇದಗಳನ್ನೆ ಅಪಹರಿಸಿದ್ದು ಮೀನಿನಿಂದ ಸತ್ತ. ಕೇಶಿಯಾದರೂ ಬಾಲಕೃಷ್ಣನಿಂದ ಸಾಯುತ್ತಾನೆ. ಅಶ್ವರೂಪ ಧರಿಸಿದನೆಂದರೆ ಶ್ವಃ ನಾಳೆ, ನಾನಿರುವುದು ನಿಶ್ಚಿತವಲ್ಲವೆಂಬರ್ಥ ಹೊರಡುತ್ತದೆ.
**ಮೇ ನ ಜೀವಿತಾಶಾ ನನು ವಿದ್ಯತೇ ಶ್ವಃ ॥** –*ಋ.ವಿ. 10/11*

ಗೋಪರೆಲ್ಲರೂ ಹೀಗೆಂದರು - ಕೃಷ್ಣ ಮಗುವೇ! ದೈತ್ಯಧಮನಾದ ತುರಂಗದೈತ್ಯನ ಬಳ ಕೂಡಲೇ ಸುಳಿಯಬೇಡ. ನೀನಿನ್ನು ಚಿಕ್ಕಬಾಲಕನಿರುವೆ. ಅವನಾದರೂ ಹಿಡಿಯಲಶಕ್ಯನಾದ ದೈತ್ಯನಾಗಿರುವನು. ಇವನಾದರು ಕಂಸನ ದೂತನಾಗಿದ್ದು ಕಂಸನಿಗೆ ಬಹಿಃಪ್ರಾಣನೆನಿಸಿರುವನು. ಯುದ್ಧದಲ್ಲಿ ಅಪ್ರತಿಮ ಪ್ರಾವೀಣ್ಯವಿದೆ. ಪಾಪಿಷ್ಠರಲ್ಲಿ ಅಗ್ರಗಣ್ಯನೂ ಯಾರಿಂದಲೂ ಕೊಲ್ಲಲಸಾಧ್ಯನು. ಶ್ರೀಕೃಷ್ಣನು ಇವರ ಮಾತನ್ನು ಕೇಳಿ ಅವರಿಗೆ ಸಮಾಧಾನ ಮಾಡಿ ಅವನೊಂದಿಗೆ ಸೆಣಸಾಡಲು ಹೊರಟನು.

ಗೋವಿಂದಮರವಿಂದಾಕ್ಷಂ ಹ್ರೇಷಿತೋದ್ಗಾರ ಶೀಕರೈಃ ।
ಸಫೇನೈಃ ವಕ್ತ್ರನಿರ್ಗೀರ್ಣೈಃ ಪ್ರೋಕ್ಷಯಾಮಾಸ ಭಾರತ ॥ 15 ॥
ರಜಸಾ ಚ ಹಯಃ ಕೃಷ್ಣಂ ಚಕಾರಾರುಣ ಮೂರ್ಧಜಮ್ ॥ 16 ॥

ಸ ಸಂಸಕ್ತಸ್ತು ಕೃಷ್ಣೇನ ಕೇಶೀ ತುರಗಸತ್ತಮಃ ।
ಪೂರ್ವಾಭ್ಯಾಂ ಚರಣಾಭ್ಯಾಂ ವೈ ಕೃಷ್ಣಂ ವಕ್ಷಸ್ಯತಾಡಯತ್ ॥ 17 ॥

ವಕ್ತ್ರೇಣ ಚಾಸ್ಯ ಘೋರೇಣ ತೀಕ್ಷ್ಣ ದಂಷ್ಟ್ರಾಯುಧೇನ ವೈ ।
ಅದಶತ್ ಬಾಹುಶಿಖರಂ ಕೃಷ್ಣಸ್ಯ ರುಷಿತೋ ಹಯಃ ॥ 18 ॥

ಕಮಲನಯನನಾದ ಶ್ರೀಕೃಷ್ಣನನ್ನು ಹ್ರೇಷಾರವ ಮಾಡುತ್ತಾ ಇರುವಾಗ ಹೊರಬರುತ್ತಿದ್ದ ನೊರೆಗಳಿಂದ ಗೋವಿಂದನನ್ನು ಪ್ರೋಕ್ಷಿಸಿದನು. ತುರಂಗದ ಹೊಡೆತದಿಂದ ಎದ್ದ ಧೂಳು ಕೃಷ್ಣನ ಕೂದಲನ್ನು ಪಿಂಗಲಬಣ್ಣವನ್ನಾಗಿಸಿದನು. ಕೃಷ್ಣನೊಂದಿಗೆ ಜೋರಾಗಿ ಯುದ್ಧವನ್ನಾರಂಭಿಸಿದ ಕೇಶಿಯು ತನ್ನೆರಡು ಕಾಲುಗಳನ್ನೆತ್ತಿ ಕೃಷ್ಣನ ಎದೆಗೆ ಒದ್ದನು. ಹಾಗೆಯೆ ಎಡಬಲ ಗೊರಸುಗಳಿಂದ ಜೋರಾಗಿ ಹೊಡೆದನು. ಕೋರೆಹಲ್ಲುಗಳನ್ನೆ ಆಯುಧವನ್ನಾಗಿಸಿದ್ದ ದೈತ್ಯನು ಕೃಷ್ಣ ಭುಜಗಳನ್ನು ಕಚ್ಚಿದನು.

ತಸ್ಯೋತ್ಕ್ಷಿಪ್ತಸ್ಯ ಬಲವಾನ್ ಕೃಷ್ಣೋಽಪ್ಯಮಿತವಿಕ್ರಮಃ ।
ಬಾಹುಮಾಭೋಗಿನಂ ಕೃತ್ವಾ ಮುಖೇಕ್ರುದ್ಧಃ ಸಮಾದಧತ್ ॥ 19 ॥

ಸ ತಂ ಬಾಹುಮಶಕ್ತೋ ವೈ ಖಾದಿತುಂ ಭೇತ್ತುಮೇವ ಚ ।
ದಶನೈಃ ಮೂಲನಿರ್ಮುಕ್ತೈಃ ಸಫೇನಂ ರುಧಿರಂ ವಮನ್ ॥ 20 ॥

ವಿಪಾಟಿತಾಭ್ಯಾಮೋಷ್ಠಾಭ್ಯಾಂ ಕಟಾಭ್ಯಾಂ ವಿದಲೀಕೃತಃ ।
ಅಕ್ಷಿಣೀ ವಿವೃತೇ ಚಕ್ರೇ ವಿಸೃತೇ ಮುಕ್ತಬಂಧನೇ ॥ 21 ॥

ಅಮಿತ ಬಾಹು ಬಲವುಳ್ಳ ದಾಮೋದರನೂ ಸಹ ಅತ್ಯಂತ ಕೋಪಗೊಂಡು ತನ್ನ ತೋಳನ್ನು ಮುಂದೆ ಚಾಚಿ ಬಲದರ್ಪಿತನಾಗಿದ್ದ **ಕೇಶಿ**[2]ಯ ಮೂತಿಗೆ ಬಲವಾಗಿ ಗುದ್ದಿದನು. ಕೇಶಿಗೆ ಆ ಏಟಿನಿಂದಾಗಿ ಅವನನ್ನು ಕಚ್ಚಲು, ಮುರಿಯಲು ಸಾಧ್ಯವಾಗಲಿಲ್ಲ. ಏಟಿನಿಂದಾಗಿ ಅವನ ಹಲ್ಲುಗಳೆಲ್ಲವೂ ಕಳಚಿಬಿದ್ದವು. ನೊರೆಯೊಂದಿಗೆ ರಕ್ತವನ್ನು ವಮನ ಮಾಡಿದನು. ಅವನ ತುಟಿ, ಕಪೋಲಗಳು ಛಿನ್ನವಾದವು. ಕಣ್ಣುಗುಡ್ಡೆಗಳು ಹೊರಗೆ ಬಂದವು. ಶರೀರದ ಬಂಧಗಳೆಲ್ಲ ಸಡಿಲವಾದವು. ಕಿವಿಗಳು ನಿಮಿರಿ ನಿಂತವು. ಏಳಲು ಮಹಾಪ್ರಯತ್ನ ಮಾಡಿದರೂ ಏಳಲಾಗದೆ ಒದ್ದಾಡಿದನು. ಬಿದ್ದಲ್ಲಿಯೇ ಮಲಮೂತ್ರ ವಿಸರ್ಜಿಸಿದನು.

ಕೇಶಿವಕ್ತ್ರ ವಿಲಗ್ನಸ್ತು ಕೃಷ್ಣ ಬಾಹುರಶೋಭತ ।
ವ್ಯಾಭುಗ್ನ ಇವ ಘರ್ಮಾಂತೇ ಚಂದ್ರಾರ್ಧ ಕಿರಣೈರ್ಘನಃ ॥ 22 ॥

ತಸ್ಯ ಕೃಷ್ಣಭುಜೋದ್ಧೂತಾಃ ಕೇಶಿನೋ ದಶನಾ ಮುಖಾತ್ ।
ಪೇತುಃ ಶರದಿ ನಿಸ್ತೋಯಾಃ ಸಿತಾಭ್ರಾವಯವಾ ಇವ ॥ 23 ॥

ವ್ಯಾದಿತಾಸ್ಯೋ ಮಹಾರೌದ್ರಃ ಸೋಽಸುರಃ ಕೃಷ್ಣಬಾಹುನಾ ।
ನಿಪಪಾತ ಯಥಾ ಕೃತ್ತೋ ನಾಗೋ ಹಿ ದ್ವಿದಲೀಕೃತಃ ॥ 24 ॥

ದ್ವಿಪಾದ ಪೃಷ್ಠ ಪುಚ್ಛಾರ್ಧೇ ಶ್ರವಣೈಕಾಕ್ಷಿ ನಾಸಿಕೇ ।
ಕೇಶಿನಃ ತದ್ ದ್ವಿಧಾಭೂತೇ ದ್ವೇ ಚಾರ್ಧೇ ರೇಜತುಃ ಕ್ಷಿತೌ ॥ 25 ॥

2. 1) ಶ್ರೀಕೃಷ್ಣನು ತನ್ನ ಬಾಹುವನ್ನು ಕೇಶಿಯ ಬಾಯಲ್ಲಿ ತೂರಿಸಿದನು. ಅದು ತ್ರಿವಿಕ್ರಮನ ಪಾದ ಬೆಳೆದಂತೆ ಬೆಳೆಯಿತು. ಹೇಗೆ ರೋಗವನ್ನು ಉಪೇಕ್ಷಿಸಿದರೆ ಅದು ಬೆಳೆಯುವುದೋ ಹಾಗೆ ಬೆಳೆಯಿತು.

ಯಥಾಽಮಯಃ ಸಂವವೃಧೇ ಉಪೇಕ್ಷಿತಃ ॥ –*ಭಾಗ 10/37/7*

2) ಪ್ರಾಪ ಸ ಕೇಶವಮವಾಪ ಮುಖೇಽಸ್ಯ ಬಾಹುಂ ।
ಪ್ರಾವೇಶಯತ್ ಸ ಭಗವಾನ್ ವವೃಧೇಽಸ್ಯ ದೇಹೇ ॥ – *ತಾ.ನಿ. 13/80*

ಕೇಶಿಯ ಬಾಯಿಯೊಳಗಿದ್ದ ತೋಳು ವರ್ಷಾಕಾಲದಲ್ಲಿ ಅರ್ಧಚಂದ್ರನ ಕಿರಣಗಳಿಂದ ವ್ಯಾಪ್ತವಾದ ಮೇಘದಂತೆಯೆ ಕಾಣಿಸಿತು.

ಶ್ರೀಕೃಷ್ಣನ ಬಾಹು ಪ್ರಹಾರದಿಂದ ಕೇಶಿಯ ಬಾಯಿಯಿಂದ ಹೊರಬಂದಿದ್ದ ಹಲ್ಲುಗಳು ಶರದೃತುವಿನಲ್ಲಿ ನೀರಿಲ್ಲದ ಮೋಡವು ಕೆಳಗೆ ಸರಿಯುವಂತೆ ಕೆಳಗೆ ಬಿದ್ದವು. ಕೇಶಿಯು ಆರ್ಭಟ ಇಳದು ಶಾಂತನಾದನು. ಶ್ರೀಕೃಷ್ಣನು ತನ್ನ ಭುಜಗಳೆರಡನ್ನೂ ಅಗಲ ಮಾಡಿಕೊಂಡು ದೈತ್ಯನ ಶರೀರವನ್ನು ಎರಡು ಭಾಗವಾಗಿ ಸೀಳ ಹಾಕಿದನು.

ಕೃಷ್ಣನಿಂದ ಸೀಳಲ್ಪಟ್ಟ ಆ ಅಶ್ವದೈತ್ಯನು ಎರಡು ಭಾಗವಾಗಿ ಕತ್ತರಿಸಲ್ಪಟ್ಟ ಎರಡು ಭಾಗಗಳೂ ಎರಡು ಕಾಲುಗಳಿಂದಲೂ, ಒಂದು ಪೃಷ್ಠಭಾಗ ಅರ್ಧಕ್ಕೆ ಸೀಳಲ್ಪಟ್ಟ ಬಾಲ, ಒಂದು ಕಣ್ಣು, ಒಂದು ಕಿವಿ, ಒಂದು ಮೂಗಿನ ಹೊರಳೆಗಳಾಗಿ ಅರ್ಧಾಕಾರಗಳು ಚಮತ್ಕಾರವಾಗಿ ತೋರುತ್ತಲಿದ್ದವು. ಕೇಶೀ ದೈತ್ಯನು ಕೃಷ್ಣನನ್ನು ಕಚ್ಚಿದ ತೋಳಿನ ಮೇಲಿನ ಕಲೆಗಳು ಕಾಡಿನಲ್ಲಿರುವ ಸಾಲು ವೃಕ್ಷಕ್ಕೆ ಕಾಡನೆಯು ತನ್ನ ದಂತದಿಂದ ತೀಡಿದಾಗ ಬಿದ್ದ ಕಲೆಯಂತಿತ್ತು.

**ತಂ ಹತ್ವಾ ಕೇಶಿನಂ ಯುದ್ಧೇ ಕಲ್ಪಯಿತ್ವಾ ಚ ಭಾಗಶಃ ।**
**ಕೃಷ್ಣಃ ಪದ್ಮಪ್ರಲಾಶಾಕ್ಷಃ ಹಸನ್ ತತ್ರೈವ ತಸ್ಥಿವಾನ್ ॥ 26 ॥**

ಪದ್ಮಪಲಾಶಾಕ್ಷನಾದ ಶ್ರೀಕೃಷ್ಣನು ಕೇಶಿಯನ್ನು ಸಂಹರಿಸಿ ಅವನನ್ನು ಎರಡು ಹೋಳುಗಳಾಗಿ ಸೀಳ ನಸುನಗುತ್ತಾ ಅಲ್ಲಿಯೇ ನಿಂತನು. ಕೃಷ್ಣನಿಂದ ಸಂಹರಿಸಲ್ಪಟ್ಟ ಕೇಶೀ ದೈತ್ಯನನ್ನು ನೋಡಿ ಗೋಪಿಯರು ಆನಂದ ಹೊಂದಿದರು. ಅವರ ವಿಘ್ನ ದೂರವಾಯಿತು. ಶ್ರಮವೂ ಇಲ್ಲದಾಯಿತು. ಶ್ರೀಕೃಷ್ಣನನ್ನು ಅವರವರ ಯೋಗ್ಯತಾನುಸಾರವಾಗಿ ಸ್ತುತಿಸಿದರು.

## ಗೋಪಿಕಾಸ್ತುತಿ

**ಅಹೋ ತಾತ ಕೃತಂ ಕರ್ಮ ಹತೋಽಯಂ ಲೋಕಕಂಟಕಃ ।**
**ದೈತ್ಯಃ ಕ್ಷಿತಿಚರಃ ಕೃಷ್ಣ! ಹಯರೂಪಂ ಸಮಾಸ್ಥಿತಃ ॥ 27 ॥**
**ಕೃತಂ ವೃಂದಾವನಂ ಕ್ಷೇಮಂ ಸೇವ್ಯಂ ನೃಮೃಗಪಕ್ಷಿಣಾಮ್ ।**
**ಘ್ನತಾ ಪಾಪಮಿಮಂ ತಾತ ಕೇಶಿನಂ ಹಯದಾನವಮ್ ॥ 28 ॥**

**ನೈತಸ್ಯ ಪ್ರಮುಖೇ ಸ್ಥಾತುಂ ಕಶ್ಚಿಚ್ಛಕ್ತೋ ಜಿಜೀವಿಷುಃ ।**
**ಅಪಿ ದೇವ ಸಮೂಹೇಷು ಕಿಂ ಪುನಃ ಪೃಥಿವೀತಲೇ ॥ 29 ॥**

ಕೃಷ್ಣನೇ, ನೀನು ಅದ್ಭುತ ಕಾರ್ಯ ಮಾಡಿರುವೆ. ಲೋಕಕಂಟಕನಾದ ಕೇಶಿಯನ್ನು ಕೊಂದು ಹಾಕಿರುವೆ. ಇವನು ಕುದುರೆ ರೂಪ ಧರಿಸಿ ಸರ್ವತ್ರ ಸಂಚಾರಿಯಾಗಿದ್ದು ಇವನ ಸಂಹಾರದಿಂದಾಗಿ ಮನುಷ್ಯ -ಮೃಗ-ಪಕ್ಷಿಗಳು ಕ್ಷೇಮದಿಂದಿರುವಂತೆ ಮಾಡಿದೆ.

ಈ ದುರಾತ್ಮನು ಅನೇಕ ಗೋಪಾಲಕರನ್ನೂ, ಗೋವುಗಳನ್ನೂ, ಬೇರೆ ದೇಶದ ಪ್ರಜೆಗಳೂ ಇವನಿಂದ ಹತರಾಗಿರುವರು. ಭೂಮಂಡಲದಲ್ಲಿಯೆ ಪ್ರಲಯವನ್ನುಂಟು ಮಾಡಲಿಚ್ಛಿಸಿದ್ಧ ಇವನ ಮುಂದೆ ಬದುಕಿರಬೇಕೆಂಬ ಆಸೆವುಳ್ಳವನು ಇವನ ಮುಂದೆ ನಿಲ್ಲುತ್ತಿರಲಿಲ್ಲ. ದೇವತೆಗಳೆ ಇವನನ್ನು ಕಂಡರೆ ಭಯಬೀಳುತ್ತಿರುವಾಗ ಮನುಷ್ಯರ ಬಗ್ಗೆ ಹೇಳುವುದೇನಿದೆ?

### ನಾರದ ಸ್ತುತಿ

ವೈಶಂಪಾಯನರು - ರಾಜನೇ ! ಈ ಸಮಯಕ್ಕೆ ಸರಿಯಾಗಿ ಗಗನಸಂಚಾರಿಗಳೂ ವಿಪ್ರವರ್ಯರೂ ಆದ ನಾರದರು ಅದೃಶ್ಯರಾಗಿ ಹೀಗೆಂದರು.

### ಕೇಶವನಿಂದ ಶವನಾದ ಕೇಶೀ

**ಯದಿದಂ ದುಷ್ಕರಂ ಕರ್ಮ ಕೃತಂ ಕೇಶಿಜಿಘಾಂಸಯಾ ।**
**ತ್ವಯ್ಯೇವ ಕೇವಲಂ ಯುಕ್ತಂ ತ್ರಿದಿವೇ ತ್ರ್ಯಂಬಕಸ್ಯ ವಾ ॥ 30 ॥**
**ಅಹಂ ಯುದ್ಧೋತ್ಸುಕಸ್ತಾತ ತ್ವದ್ಗತೇನಾಂತರಾತ್ಮನಾ ।**
**ಇದಂ ನರಹಯಂ ಯುದ್ಧಂ ದ್ರುಷ್ಟುಂ ಸ್ವರ್ಗಾದಿಹಾಗತಮ್ ॥ 31 ॥**
**ಪೂತನಾನಿಧನಾದೀನಿ ಕರ್ಮಾಣಿ ತವ ದೃಷ್ಟವಾನ್ ।**
**ಅಹಂ ತ್ವನೇನ ಗೋವಿಂದ ಕರ್ಮಣಾ ಪರಿತೋಷಿತಃ ॥ 32 ॥**
**ಹಯಾದಸ್ಮಾನ್ ಮಹೇಂದ್ರೋಽಪಿ ಬಿಭೇತಿ ಬಲಸೂದನಃ ।**
**ಕುರ್ವಾಣಾಚ್ಚ ವಪುರ್ಘೋರಂ ಕೇಶಿನೋ ದುಷ್ಟಚೇತಸಃ ॥ 33 ॥**

**ಯಸ್ಮಾತ್ ತ್ವಯಾ ಹತಃ ಕೇಶೀ ತಸ್ಮಾನ್ ಮಚ್ಛಾಸನಂ ಶೃಣು ।**
**ಕೇಶವೋ ನಾಮ ನಾಮ್ನಾ ತ್ವಂ ಖ್ಯಾತೋ ಲೋಕೇ ಭವಿಷ್ಯಸಿ ॥ 34 ॥**

ಕೇಶೀ ದೈತ್ಯನನ್ನು ಕೊಂದದ್ದನ್ನು ನೋಡಿದ ನಾರದರು ಅದೃಶ್ಯರೂಪದಿಂದಲೇ ನಿಂತು ಹೀಗೆಂದರು – ಕೃಷ್ಣನೇ, ನಿನ್ನ ಕೇಶೀ ನಿಗ್ರಹ ರೂಪವಾದ ದುಷ್ಕರ ಕಾರ್ಯದಿಂದ ನಿಜವಾಗಿಯೂ ನನಗೆ ಅತ್ಯಂತ ಸಂತೋಷವುಂಟಾಗಿದೆ. ಸರ್ವದಾ ಕಲಹಪ್ರಿಯನಾದ ನಾನು ಈ ನರ-ತರುಗಗಳ ಯುದ್ಧವನ್ನು ವೀಕ್ಷಿಸಲೆಂದೆ ಇಲ್ಲಿಗೆ ಬಂದಿದ್ದೆ. ನಿನ್ನ ಪೂತನಾವಧಾದಿ ಅನೇಕ ಲೀಲೆಗಳನ್ನು ಕಂಡ ನನಗೆ ಈ ಕೇಶಿಯ ವಿನಾಶ ನೋಡಬೇಕೆಂಬ ಹಂಬಲ ಹೊಂದಿದ್ದೆ. ಏಕೆಂದರೆ ಈ ಕೇಶೀ ದೈತ್ಯನಿಗೆ ದೇವೇಂದ್ರನೂ ಸಹ ಹೆದರುತ್ತಿದ್ದನು. ಇಂತಹ ದುರ್ದಮ ದೈತ್ಯನಾದ ಕೇಶಿಯನ್ನು ಶಾಸನ ಮಾಡಿದ್ದರಿಂದ ಇಂದು ಕೇಶವ ಎಂದು ಸಾರ್ಥಕಗೊಳಿಸಿದೆ. ಇದರಿಂದಾಗಿ 'ಕೇಶವ'ವೆಂದೆ ಲೋಕದಲ್ಲಿ ಪ್ರಖ್ಯಾತನಾಗುವೆ.

**ಸ್ವಸ್ತ್ಯಸ್ತು ಭವತೋ ಲೋಕೇ ಸಾಧು ಯಾಮ್ಯಹಮಾಶುಗಃ ।**
**ಕೃತ್ಯಶೇಷಂ ಚ ತೇ ಕಾರ್ಯಂ ಶಕ್ತಸ್ತ್ವಮಸಿ ಮಾ ಚಿರಮ್ ॥ 35 ॥**
**ಅಭ್ಯಾಶೇ ವರ್ತತೇ ಕಾಲೋ ಭಾರತಸ್ಯಾಹವೋದಧೇಃ ।**
**ಹಸ್ತಪ್ರಾಪ್ತಾನಿ ಯುದ್ಧಾನಿ ರಾಜ್ಞಾಂ ತ್ರಿದಿವಗಾಮಿನಾಮ್ ॥ 36 ॥**
**ಪಂಥಾನಃ ಶೋಧಿತಾ ವ್ಯೋಮ್ನಿ ವಿಮಾನಾರೋಹಣೋದ್ಧಗಾಃ ।**
**ಅವಕಾಶಾಃ ವಿಭಜ್ಯಂತೇ ಶಕ್ರಲೋಕೇ ಮಹೀಕ್ಷಿತಾಮ್ ॥ 37 ॥**

ಶ್ರೀಕೃಷ್ಣನೇ, ನಿನ್ನಿಂದ ಈ ಜಗತ್ತಿಗೆ ಇನ್ನೂ ಅಧಿಕ ಪ್ರಮಾಣದಲ್ಲಿ ಮಂಗಳವಾಗಲಿ, ನಿನಗೂ ಜಯವಾಗಲಿ. ನಾನು ಹೋಗಿ ಬರುತ್ತೇನೆ. ನೀನಾದರೂ ಇನ್ನೂ ಉಳಿದಿರುವ ಕಂಸವಧಾದಿ ಕಾರ್ಯಗಳನ್ನು ಶೀಘ್ರವಾಗಿ ಮಾಡಬೇಕಾಗಿದೆ. ನೀನು ದೈತ್ಯ ಹಂತಕನಾಗಿ ಇಲ್ಲಿರುವಾಗಲೇ ದೇವತೆಗಳೂ ಸಹ ಮನುಷ್ಯರಾಗಿ ಅವತರಿಸಿ ನಿನ್ನ ಬಲ ಆಶ್ರಯಿಸಿ ಅನೇಕ ವಿಡಂಬನೆ ಮಾಡುವರು. ಮಹಾಭಾರತ ಯುದ್ಧವು ಇನ್ನೇನು ಸನ್ನಿಹಿತವಾಗಲಿದೆ. ಯುದ್ಧದಲ್ಲಿ ಮೃತರಾದವರು ಸ್ವರ್ಗಕ್ಕೇರಲು ವಿಮಾನಗಳು ಪರಿಷ್ಕೃತಗಳಾಗಿವೆ. ವೀರಯೋಧರು ಮೇಲೆ ಹೊರಡಲು ಆಕಾಶದ ಮಾರ್ಗಗಳೂ ಪರಿಷ್ಕಾರ ಮಾಡಲ್ಪಟ್ಟಿವೆ.

## ನಾರದರ ಭವಿಷ್ಯವಾಣಿ

**ಉಗ್ರಸೇನಸುತೇ ಶಾಂತೇ ಪದಸ್ಥೇ ತ್ವಯಿ ಕೇಶವ ।**
**ಅಭಿತಃ ತನ್ಮಹದ್ ಯುದ್ಧಂ ಭವಿಷ್ಯತಿ ಮಹೀಕ್ಷಿತಾಮ್ ॥ 38 ॥**

**ತ್ವಾಂ ಚಾಪ್ರತಿಕರ್ಮಾಣಂ ಸಂಶ್ರಯಿಷ್ಯಂತಿ ಪಾಂಡವಾಃ ।**
**ಭೇದಕಾಲೇ ನರೇಂದ್ರಾಣಾಂ ಪಕ್ಷಗ್ರಾಹೋ ಭವಿಷ್ಯತಿ ॥ 39 ॥**

**ಏಷ ಮೇ ಕೃಷ್ಣ ಸಂದೇಶಃ ಶ್ರುತಿಭಿಃ ಖ್ಯಾತಿಮೇಷ್ಯತಿ ।**
**ದೇವತಾನಾಂ ದಿವಿಸ್ಥಾನಾಂ ಜಗತಶ್ಚ ಜಗತ್ಪತೇ ॥ 40 ॥**

ಉಗ್ರಸೇನನ ಪುತ್ರ ಕಂಸನು ನಿನ್ನಿಂದ ಹತನಾದ ಮೇಲೆ ನೀನು ಯಾದವರ ರಕ್ಷಣೆಯ ಸ್ಥಾನವನ್ನು ಅಲಂಕರಿಸುವೆ. ನಂತರ ಎಲ್ಲ ರಾಜರ ನಡುವೆ ಮಹಾಭಾರತ ಯುದ್ಧವು ನಡೆಯಲಿದೆ. ಅಸದೃಶ ಮಹಾಬಲಿಷ್ಠನಾದ ನಿನ್ನನ್ನು ಪಾಂಡವರು ಆಶ್ರಯಿಸುತ್ತಾರೆ. ಇತರ ರಾಜರೆಲ್ಲ ಒಂದೊಂದು ಪಕ್ಷ ಸೇರುವರು. ನೀನಾದರೂ ಧರ್ಮಿಷ್ಠರಾದ ಪಾಂಡವರ ಪಕ್ಷ ವಹಿಸುವೆ. ನೀನು ಯುದ್ಧಕ್ಕಾಗಿ ರಥದಲ್ಲಿ ಆಸೀನನಾದೆಯೆಂದರೆ ಭೂಭಾರಹರಣವಾಗಿ ರಾಜರೆಲ್ಲರೂ ರಾಜ್ಯ ಸಂಪತ್ತನ್ನೆಲ್ಲ ಕಳೆದುಕೊಳ್ಳುವರು, ಇದು ನಿಶ್ಚಿತ.

ಈ ನನ್ನ ಸಂದೇಶವಾದರೂ ಪಂಚಮ ವೇದದಲ್ಲಿ ನಿರೂಪಿತವಾಗಿದೆ. ಸರ್ವಸಮರ್ಥನೇ! ನಾನು ನಿನ್ನ ಅದ್ಭುತ ಪರಾಕ್ರಮ ನೋಡಿದೆನು. ನಿನ್ನ ದರ್ಶನವೂ ಆಯಿತು. ನಾನು ಹೋಗಿ ಬರುವೆನು. ಕಂಸನ ಮರಣಾನಂತರ ಪುನಃ ನಿನ್ನನ್ನು ಕಾಣುವೆ.

ನಾರದರು ಹೀಗೆ ಹೇಳಿ ಹೊರಟು ಹೋದರು. ಶ್ರೀಕೃಷ್ಣನೂ ಸಹ ಹಾಗೆ ಆಗಲಿ ಎಂದನು. ನಂತರ ಕೃಷ್ಣನಾದರೂ ಇಂತಹ ಘನಕಾರ್ಯ ಮಾಡಿದ್ದರೂ ಹಮ್ಮು ಬಿಮ್ಮು ಇಲ್ಲದೆ ಗೋಪಾಲಕರೊಡನೆ ಗೋಕುಲ ಸೇರಿದ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕೇಶೀವಧೆವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 25 ವಿಷ್ಣುಪರ್ವ

# ಅಥ ಪಂಚವಿಂಶೋಽಧ್ಯಾಯಃ

*ವೈಶಂಪಾಯನ ಉವಾಚ –*

ಅಥಾಸ್ತಂ ಗಚ್ಛತಿ ತದಾ ಮಂದರಶ್ಮೌ ದಿವಾಕರೇ ।
ಸಂಧ್ಯಾರಕ್ತತಲೇ ವ್ಯೋಮ್ನಿ ಶಶಾಂಕೇ ಪಾಂಡುಮಂಡಲೇ ॥ 1 ॥

ಕಿಂಚಿದಭ್ಯುದ್ಯತೇ ಸೋಮೇ ಮಂದರಾಶೌ ವಿರಾಜತಿ ।
ಈಷದ್ ವಿಗಾಹಮಾನಾಯಾಂ ರಜನ್ಯಾಂ ದಿವಸೇ ಗತೇ ॥ 2 ॥

ವಯೋಭಿಃ ವಾಸಮುಶತಾಂ ಬಂಧುಭಿಶ್ಚ ಸಮಾಗಮಮ್ ।
ಶಂಸದ್ಭಿಃ ಸ್ಯಂದನೇನಾಶು ಪ್ರಾಪ್ತೋ ದಾನಪತಿರ್ವ್ರಜಮ್ ॥ 3 ॥

ಕೃಷ್ಣನನ್ನು ನೋಡಬೇಕೆಂದು ಅತ್ಯುತ್ಸಾಹದಿಂದ **ಅಕ್ರೂರ**ನು ಮಥುರೆಯಿಂದ

---

1. ಅಕ್ರೂರ : ಅಕ್ರೂರ ಶ್ವಫಲ್ಕ ಹಾಗೂ ಕಾಶೀರಾಜಪುತ್ರಿ ಗಾಂದಿನಿಯರ ಪುತ್ರ. ಭಗವಂತನ ಸೇವೆಗಾಗಿ ಕಿಶೋರನೆಂಬ ಗಂಧರ್ವನು ಅಕ್ರೂರನಾದ. ಸ್ವಾಯಂಭುವ ಮನುವಿನ ಹಾಗೂ ಬ್ರಹ್ಮದೇವನ ಆವೇಶವಿದ್ದದ್ದರಿಂದ ವಿದ್ವಾಂಸನಾಗಿದ್ದ.

   ಸಂಸೇವನಾಯ ಸ ಹರೇರಭವತ್ ಪುರೈವ ನಾಮ್ನಾ ಕಿಶೋರ ಇತಿ ಯಃ ಸುರಗಾಯಕೋಽಭೂತ್ ।

   ಸ್ವಾಯಂಭುವಸ್ಯ ಚ ಮನೋಃ ಪರಮಾಂಶಯುಕ್ತಃ ಆವೇಶಯುಕ್ ಕಮಲಜಸ್ಯ ಬಭೂವ ವಿದ್ವಾನ್ ॥ – *ತಾ.ನಿ. 13/85*

ಹೊರಟು ವೃಂದಾವನಕ್ಕೆ ಬಂದಾಗ ಸೂರ್ಯನು ಅಸ್ತಂಗತನಾಗಲಿದ್ದ. ಅರುಣ ಬಣ್ಣ ಸರ್ವತ್ರ ಹರಡಿತ್ತು. ಚಂದ್ರನ ಶ್ವೇತ ಮಂಡಲ ಉದಯಿಸುತ್ತಿರುವಾಗಲೇ ದಾನಪತಿಯಾದ ಅಕ್ರೂರನು ಬೃಂದಾವನ ಪ್ರವೇಶಿಸಿದನು.

ವನವಾಸಿಗಳಾದ ವೈಖಾನಸರು ಸಾಯಂಕಾಲದ ಔಪಾಸನ ನಿರತರಾಗಿ ಮಂತ್ರಾಹುತಿ ನೀಡುತ್ತಿದ್ದರು. ಪಕ್ಷಿಗಳೆಲ್ಲ ಗೂಡು ಸೇರುತ್ತಿದ್ದವು. ಕತ್ತಲು ಕವಿಯಲಾರಂಭಿಸಿತ್ತು. ನರಿಗಳು ಕೂಗುತ್ತಿದ್ದವು. ಬಿಸಿಲಿನ ಬೇಗೆಗೆ ಬೆಂದ ಇಂದ್ರಗೋಪ ಹುಳುಗಳು ಆನಂದ ಹೊಂದಿದ್ದವು. ವೇದಾಭ್ಯಾಸಕ್ಕೆ ಸರಿಯಾದ ಕಾಲದಲ್ಲಿ ಸೂರ್ಯನು ಸಂಧ್ಯಾಗುಹೆ ಪ್ರವೇಶಿಸುತ್ತಿದ್ದನು. ಗೋವುಗಳೆಲ್ಲ ವ್ರಜಕ್ಕೆ ಹಿಂತಿರುಗುತ್ತಿದ್ದವು. ಗೋಪಿಯರು ಹಾಲು ಕರೆಯುತ್ತಿದ್ದರು. ಗೋಪಾಲಕರು ಹಸುಗಳ ಹೆಸರಿನಿಂದ ಕರೆಯುತ್ತಿದ್ದರು. ಬೆರಣಿಯನ್ನು ಹೊತ್ತಿಸುತ್ತಿದ್ದರು. ಅರಣ್ಯದಿಂದ ಕಟ್ಟಿಗೆ ಹೊರೆ ತರುವವರು ಕೆಲವರು, ಸೂರ್ಯಾಸ್ತವಾದರೆ ಚಂದ್ರೋದಯವಾಗುತ್ತಿತ್ತು. ಕೆಲವರು ಅಲ್ಲಲ್ಲಿ ಬೆರಣಿ ಹಚ್ಚಿ ಉರಿ ಮಾಡಿ ಬೆಳಕು ಮಾಡುತ್ತಿದ್ದರು. ಮೇಲೆ ಚಂದ್ರನಿದ್ದ. ಕೆಳಗೆ ಅಗ್ನಿ ಮೇಲೆ ಸೋಮ ಜಗತ್ತೆಲ್ಲ ಅಗ್ನಿಷ್ಟೋಮಾತ್ಮಕವಾದ ಸಂಧಿಕಾಲದಲ್ಲಿತ್ತು.

ಆಕಾಶದಲ್ಲಿ ಆಗ ತಾನೇ ನಕ್ಷತ್ರಗಳು ಮಿನುಗುತ್ತಿದ್ದವು. ಬಂಧುಗಳ ಆಗಮವನ್ನು ಮೊದಲೆ ತಿಳಿಸಬೇಕೆಂಬಂತೆ ಹಾರುತ್ತಿರುವ ಪಕ್ಷಿಗಳೊಂದಿಗೆ ರಥಾರೂಢನಾದ ಅಕ್ರೂರನು ವ್ರಜಕ್ಕೆ ಬಂದು ಸೇರಿದನು.

## ಶ್ರೀಕೃಷ್ಣ ದರ್ಶನ

ಪ್ರವಿಶನ್ನೇವ ಪಪ್ರಚ್ಛ ಸಾನ್ನಿಧ್ಯಂ ಕೇಶವಸ್ಯ ಸಃ ।
ರೌಹಿಣೇಯಸ್ಯ ಚಾಕ್ರೂರೋ ನಂದಗೋಪಸ್ಯ ಚಾಸಕೃತ್ ॥ 4 ॥

ಸ ನಂದಗೋಪಸ್ಯ ಗೃಹಂ ವಾಸಾಯ ವಿಬುಧೋಪಮಃ ।
ಅವತೀರ್ಯ ತತೋ ಯಾನಾತ್ ಪ್ರವಿವೇಶ ಮಹಾಬಲಃ ॥ 5 ॥

ಅಕ್ರೂರನು ರಥದಿಂದ ಇಳಿದ ಕೂಡಲೇ ಮೊದಲು ಅಲ್ಲಿದ್ದ ಗೋಪಾಲಕರನ್ನು ನೋಡಿ, ಶ್ರೀಕೃಷ್ಣನು ಊರಲ್ಲಿರುವನೋ? ಇಲ್ಲವೋ? ಬಲರಾಮನೆಲ್ಲಿರುವನು. ನಂದಗೋಪನ ಮನೆ ಎಲ್ಲಿದೆ? ಎಂದು ಕೇಳಿ ತಿಳಿದುಕೊಂಡು ನಂದನ ಮಂದಿರಕ್ಕೆ ಬಂದನು.

ಹರ್ಷಪೂರ್ಣೇನ ವಕ್ತ್ರೇಣ ಸಾಶ್ರುನೇತ್ರೇಣ ಚೈವ ಹಿ ।
ಪ್ರವಿಶನ್ನೇವ ಚ ದ್ವಾರಿ ದದರ್ಶಾದೋಹನೇ ಗವಾಮ್ ॥ 6 ॥

ವತ್ಸಮಧ್ಯೇ ಸ್ಥಿತಂ ಕೃಷ್ಣಂ ಸವತ್ಸಮಿವ ಗೋವೃಷಮ್ ।
ಸ ತಂ ಹರ್ಷ ಪರೀತೇನ ವಚಸಾ ಗದ್ಗದೇನ ವೈ ॥ 7 ॥

ಅಕ್ರೂರನು ನಂದಗೋಪನ ಗೃಹಪ್ರವೇಶ ಮಾಡುತ್ತಿದ್ದಂತೆಯೇ ಗೋವುಗಳನ್ನು ಕರೆಯುವ ಸ್ಥಳದಲ್ಲಿ ಕೆಲವು ಕರುಗಳ ಮಧ್ಯದಲ್ಲಿ ನಿಂತಿರುವ ಶ್ರೀಕೃಷ್ಣನನ್ನು ನೋಡಿದನು. ಕರುಗಳಿಂದ ಕೂಡಿರುವ ವೃಷಭದಂತೆ ಕೃಷ್ಣನು ಕಂಡ. ದೂರದಿಂದಲೇ ಮನುಷ್ಯ ರೂಪದಿಂದಿರುವ ಈ ಸಾಕ್ಷಾತ್ ಪರಬ್ರಹ್ಮನನ್ನು ನೋಡಿದ ಕೂಡಲೇ ಅಕ್ರೂರನಿಗೆ ಮೈಯೆಲ್ಲ ರೋಮಾಂಚನವಾಗಿ, ಕಣ್ಣುಗಳಲ್ಲಿ ಆನಂದಭಾಷ್ಪಸುರಿಸಿ, ಕಂಠ ಗದ್ಗದವಾಗಿ, ಭಕ್ತಿಭರದಿಂದ ತುಂಬಿ ಗದ್ಗದ ಮಾತಿನಿಂದ ಹೀಗೆಂದನು. ತಾತ ಕೇಶವ ಇಲ್ಲಿ ಬಾ ಎಂದು ಕರೆದನು. ಅಕ್ರೂರನು ಕೃಷ್ಣನನ್ನು ಹಿಂದೆ ಬಾಲ್ಯಾವಸ್ಥೆಯಲ್ಲಿ ಅಂಗಾತವಾಗಿ ಮಲಗಿದ್ದನ್ನು ನೊಡಿದ್ದನು. ಈಗಲಾದರೂ ಅಪೂರ್ವ ಕಾಂತಿಯಿಂದ ದೇದಿಪ್ಯಮಾನನಾದ ಅವ್ಯಕ್ತಯೌವನದಲ್ಲಿರುವ ಕೃಷ್ಣನನ್ನು ನೋಡಿ ಹರ್ಷಭರಿತನಾದನು.

## ಅಕ್ರೂರ ಸ್ತುತಿ

ಅಯಂ ಸ ಪುಂಡರೀಕಾಕ್ಷಃ ಸಿಂಹ ಶಾರ್ದೂಲ ವಿಕ್ರಮಃ ।
ಸಂಪೂರ್ಣ ಜಲಮೇಘಾಭಃ ಪರ್ವತ ಪ್ರವರಾಕೃತಿಃ ॥ 8 ॥

ಮೃಧೇಷ್ವಧರ್ಷಣೀಯೇನ ಸಶ್ರೀವತ್ಸೇನ ವಕ್ಷಸಾ ।
ದ್ವಿಷನ್ನಿಧನ ದಕ್ಷಾಭ್ಯಾಂ ಭುಜಾಭ್ಯಾಂ ಸಾಧು ಭೂಷಿತಃ ॥ 9 ॥

ಗೋಪವೇಷಧರೋ ವಿಷ್ಣುಃ ಉದಗ್ರಾಗ್ರ್ಯತನೂರುಹಃ ।
ಕಿರೀಟಲಾಂಛನೇನಾಪಿ ಶಿರಸಾ ಛತ್ರ ವರ್ಚಸಾ ॥ 10 ॥

ಕುಂಡಲೋತ್ತಮ ಯೋಗ್ಯಾಭ್ಯಾಂ ಶ್ರವಣಾಭ್ಯಾಂ ವಿಭೂಷಿತಃ ।
ಶೋಭತೇಽದ್ಯ ಭುವಿ ಶ್ರೇಷ್ಠಃ ತ್ರಿದಶಾನಾಂ ದುರಂಧರಃ ॥ 11॥

**ಅಯಂ ಭವಿಷ್ಯೇ ಕಥಿತೋ ಭವಿಷ್ಯ ಕುಶಲೈಃ ನರೈಃ ।**
**ಗೋಪಾಲೋ ಯಾದವಂ ವಂಶಂ ಕ್ಷೀಣಂ ವಿಸ್ತಾರಯಿಷ್ಯತಿ ॥ 12 ॥**
**ಅಸ್ಯೇದಂ ಶಾಸನೇ ಸರ್ವಂ ಜಗತ್ ಸ್ಥಾಸ್ಯತಿ ಶಾಶ್ವತಮ್ ।**
**ನಿಹತಾಮಿತ್ರ ಸಾಮಂತಂ ಸ್ಫೀತಂ ಕೃತಯುಗೇ ತಥಾ ॥ 13 ॥**

ಈ ಶಿಶುವೆ ಈಗ ಕಮಲನಯನನಾದ, ಸಿಂಹ ವ್ಯಾಘ್ರ ಪರಾಕ್ರಮಿಯೂ, ನೀರಿನಿಂದ ತುಂಬಿರುವ ಮೇಘಸಂಕಾಶನೂ, ಪರ್ವತದಂತೆ ಆಕೃತಿಯಿರುವ ಇವನೇ ಶ್ರೀಕೃಷ್ಣನಾಗಿದ್ದಾನೆ.

ಇವನ ವಕ್ಷ ಸ್ಥಲದಲ್ಲಿ ಶ್ರೀವತ್ಸ ಚಿಹ್ನೆಯೂ, ಶತ್ರು ಸಂಹಾರದಲ್ಲಿ ಸಮರ್ಥಗಳಾದ ದೇರ್ದಂಡ ಭುಜಮಂಡಿತನೂ ಉಪನಿಷದ್ ವೇದ್ಯನಾದ ಶ್ರೀಕೃಷ್ಣನು ಈಗ ಗೋಪವೇಷಧಾರಿಯಾಗಿದ್ದಾನೆ. ಮೇಲ್ಮುಖವೂ ಅಸಿತವೂ ಉಗುರು ಕೂದಲುಗಳಿಂದ ಅಲಂಕೃತಾಸ್ಯನೂ, ಶಿರಸ್ಸಿನಲ್ಲಿ ಕಿರೀಟ ಶೋಭಿತನೂ, ಶ್ರೇಷ್ಠ ಕುಂಡಲ ಧರಿಸಲು ಯೋಗ್ಯ ಶ್ರವಣಗಳು, ಹಾರ ಧರಿಸಲು ಯೋಗ್ಯ ವಿಶಾಲ ವಕ್ಷಸ್ಸು, ವೃತ್ತಾಕಾರವೂ, ನೀಳವಾಗಿಯೂ ಇರುವ ತೋಳುಗಳು, ಯೌವನದಿಂದ ಮನ್ಮಥನಿಗೆ ಆಶ್ರಯ ನೀಡುವಂತಿದ್ದು ಸಾವಿರಾರು ಹರೆಯ ಪ್ರಾಯದ ಕನ್ಯೆಯರ ಸೇವೆಗೆ ಯೋಗ್ಯವಾಗಿದೆ. ದಿವ್ಯಶರೀರದಲ್ಲಿ ಪೀತಾಂಬರಧರಿಸಿ ಸುಂದರನಾಗಿರುವನು. ಮೂರುಲೋಕಗಳನ್ನು ಆಕ್ರಮಿಸಿದ ಇವನು ಭೂಮಿಯಲ್ಲಿ ದ್ವಿಪಾದನಾಗಿದ್ದಾನೆ. ಕರದಲ್ಲಿ ಚಕ್ರಾಂಕಿತಚಿಹ್ನೆ, ಗದೆಯನ್ನು ಇಟ್ಟಿಸುವಂತಿರುವ ಮತ್ತೊಂದು ಹಸ್ತ ಇರುವುದು. ದೇವತಾ ಧುರಂಧರನಾದ ಇವನು ಅವತರಿಸಿದ್ದು ಯೋಗ್ಯರನ್ನು ಮೇಲೆ ಕರೆದೊಯ್ಯಲೆಂದು ಭವಿಷ್ಯ ನುಡಿಯುವುದರಲ್ಲಿ ಪ್ರವೀಣರು ಮುಂದೆ ಈ ಗೋಪಾಲಕನು ನಷ್ಟವಾಗಿ ಹೋಗಲಿರುವ ಯದುಕುಲವನ್ನು ವಿಸ್ತಾರ ಮಾಡುವನೆಂದು ಭವಿಷ್ಯ ನುಡಿದಿರುವರು. ಹಲವಾರು ನದಿಗಳು ಸಮುದ್ರವನ್ನು ತುಂಬಿಸುವಂತೆ ಸಹಸ್ರಾರು ಯಾದವರು ಇವನ ಅನುಗ್ರಹದಿಂದಾಗಿ ವಂಶವನ್ನು ತುಂಬಿಸುವರು.

ಇವನ ಶಾಸನ ಕಾಲದಲ್ಲಿ ಕೃತಯುಗವು ಪುನಃ ಕಾಣಿಸುತ್ತದೆ. ಇವನು ಸಮಸ್ತ ಜಗತ್ತನ್ನು ತನ್ನ ವಶದಲ್ಲಿಟ್ಟುಕೊಳ್ಳುವನು ಹಾಗೂ ರಾಜರೆಲ್ಲರನ್ನೂ

ಮೀರಿ ನಿಂತಿರುತ್ತಾನೆ. ಆದರೆ ಇವನು ಎಂದಿಗೂ ಯಾವುದೇ ರಾಜ್ಯಕ್ಕೆ ರಾಜನಾಗಲಾರ. ವಾಮನಾವತಾರವೆತ್ತಿ ಪಡೆದ ಸ್ವರ್ಗವನ್ನು ಇಂದ್ರನಿಗೆ ಇತ್ತ ಈಗಲೂ ಕಂಸಾದಿಗಳನ್ನು ಕೊಂದು ಬಂದ ಮಥುರಾಧಿಪತ್ಯವನ್ನು ಉಗ್ರಸೇನನಿಗೆ ನೀಡುವನು. ಅಖಂಡ ಭೂಮಂಡಲೇಶ್ವರನಿಗೆ ಈ ತುಂಡಾದ ಖಂಡ ರಾಜ್ಯವೇತಕ್ಕೆ?

ಬ್ರಾಹ್ಮಣರು ಇವನನ್ನೂ ಪುರಾಣ ಪುರುಷನೆಂದು ಹಾಡಿ ಹೊಗಳುತ್ತಾರೆ. ಇವನ ಬುದ್ಧಿಯಲ್ಲಿ ಮಾನವರಿಗೆ ನೂತನವಾದ ಜೀವನ ವಿಧಾನ ಕಲ್ಪಿಸಿಕೊಡಬೇಕೆಂಬ ವಿಚಾರವು ಮೂಡಿ ಬಂದಿದೆ.

**ಅಹಂ ತ್ವಸ್ಯಾದ್ಯ ವಸತಿಂ ಪೂಜಯಿಷ್ಯೇ ಯಥಾವಿಧಿ ।**
**ವಿಷ್ಣುತ್ವಂ ಮನಸಾ ಚೈವ ಪೂಜಯಿಷ್ಯಾಮಿ ಮಂತ್ರವತ್ ॥ 14 ॥**

**ಯಚ್ಚ ಜ್ಞಾತಿಪರಿಜ್ಞಾನಂ ಪ್ರಾದುರ್ಭಾವಶ್ಚ ವೈ ನೃಷು ।**
**ಅಮಾನುಷಂ ವೇದ್ಮಿ ಚೈನಂ ಯೇ ಚಾನ್ಯೇ ದಿವ್ಯ ಚಕ್ಷುಷಃ ॥ 15 ॥**

**ಸೋಽಹಂ ಕೃಷ್ಣೇನ ವೈ ರಾತ್ರೌ ಸಮ್ಮಂತ್ರ್ಯ ವಿದಿತಾತ್ಮನಾ ।**
**ಸಹಾನೇನ ಗಮಿಷ್ಯಾಮಿ ಸವ್ರಜೋ ಯದಿ ಮಂಸ್ಯತೇ ॥ 16 ॥**

**ಏವಂ ಬಹುವಿಧಂ ಕೃಷ್ಣಂ ದೃಷ್ಟ್ವಾ ಹೇತ್ವರ್ಥ ಕಾರಣೈಃ ।**
**ವಿವೇಶ ನಂದಗೋಪಸ್ಯ ಕೃಷ್ಣೇನ ಸಹ ಸಂಸದಮ್ ॥ 17 ॥**

ನಾನಿಂದು ಧನ್ಯನಾದೆ, ನನ್ನ ಬದುಕು ಸಾರ್ಥಕವಾಯಿತು. ಇಂದು ಇವನ ವಾಸಸ್ಥಾನವನ್ನೆ ವಿಧಿವತ್ತಾಗಿ ಪೂಜಿಸುವೆನು. ಇವನೇ ಸಾಕ್ಷಾತ್ ವಿಷ್ಣುವು. ವಿಷ್ಣುಪ್ರತಿಪಾದ್ಯ ಮಂತ್ರಗಳಿಂದ ಬಾಲಕೃಷ್ಣನನ್ನೆ ಅರ್ಚಿಸುತ್ತೇನೆ.

ಬಂಧುಬಾಂಧವರನ್ನು ತಿಳಿಯುವ ಸಾಮರ್ಥ್ಯ ಹಾಗೂ ಮಾನವನಾಗಿ ವೇಷಧರಿಸಿ ಮನುಷ್ಯರ ಮಧ್ಯದಲ್ಲಿ ಪ್ರದುರ್ಭವಿಸಿರುವನೋ, ಇವೆರಡೂ ಅಮಾನುಷ ಶಕ್ತಿಯಿಂದ ಮಾತ್ರ ಸಾಧ್ಯವು. ನಾರದಾದಿ ದಿವ್ಯ ಚಕ್ಷುಸ್ಸಿನ ಜ್ಞಾನಿಗಳೂ ಸಹ ಇವನನ್ನು ದೇವದೇವನೆಂದೆ ಅರ್ಚಿಸುತ್ತಾರೆ.

ಇಂತಹ ಶ್ರೀಕೃಷ್ಣನೊಂದಿಗೆ ನಾನು ಸಮಲೋಚನೆ ನಡೆಯುವ ಭಾಗ್ಯ ನನ್ನದಾಗಿದೆ. ಇಂದು ರಾತ್ರಿ ಪೂರ್ತಿ ಈ ಜಗನ್ನಾಥನೊಂದಿಗೆ ಸಂಭಾಷಣೆ ನಡೆಸಿ, ಪುನೀತನಾಗುತ್ತೇನೆ. ಸರ್ವವನ್ನು ತಿಳಿದ ಸರ್ವಜ್ಞನಿಗೆ ನಾನು

ಹೇಳುವುದೇನಿದೆ? ಕರ್ತವ್ಯವೆಂದು ತಿಳಿಸುತ್ತೇನೆ. ಅವನು ಮಥುರೆಗೆ ಬರಲು ಒಪ್ಪಿದರೆ ನಾಳೆ ಅವನೊಂದಿಗೆ ನಾನೂ ಹೋಗುವೆನು. ಇದೂ ಸಹ ನನಗೆ ಮಹಾಭಾಗ್ಯವು.

ಹೀಗೆ ಬಹಳ ರೀತಿಯಲ್ಲಿ ಚರಾಚರ ಪ್ರಪಂಚಕ್ಕೆ ಕಾರಣನೆಂದು ವಿಚಾರಿಸಿ, ಶ್ರೀಕೃಷ್ಣನನ್ನು ಪುನಃ ಪುನಃ ನೋಡುತ್ತಾ ಅವನೊಂದಿಗೆ ನಂದನ ಭವನ ಪ್ರವೇಶಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಅಕ್ರೂರ ಸ್ತುತಿವೆಂಬಲ್ಲಿ
ಇಪ್ಪತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 26 ವಿಷ್ಣುಪರ್ವ

## ಅಥ ಷಡ್ವಿಂಶೋಽಧ್ಯಾಯಃ

*ವೈಶಂಪಾಯನ ಉವಾಚ –*

**ಸ ನಂದಗೋಪಸ್ಯ ಗೃಹಂ ಪ್ರವಿಷ್ಟಃ ಸಹಕೇಶವಃ ।**
**ಗೋಪವೃದ್ಧಾನ್ ಸಮಾನೀಯ ಪ್ರೋವಾಚ ಅಮಿತದಕ್ಷಿಣಃ ॥ 1 ॥**

**ಕೃಷ್ಣಂ ಚೈವಾಬ್ರವೀತ್ ಪ್ರೀತ್ಯಾ ರೌಹಿಣೇಯೇನ ಸಂಗತಮ್ ।**
**ಶ್ವಃ ಪುರೀಂ ಮಥುರಾಂ ತಾತ ಗಮಿಷ್ಯಾಮಃ ಸುಖಾಯ ವೈ ॥ 2 ॥**

**ಸಮೃದ್ಧಃ ತತ್ರ ಕಂಸಸ್ಯ ಭವಿಷ್ಯತಿ ಧನುರ್ಮಹಃ ।**
**ತಂ ದ್ರಕ್ಷ್ಯಥ ಸಮೃದ್ಧಂ ಚ ಸ್ವಜನೈಶ್ಚ ಸಮೇಷ್ಯಥ ॥ 3 ॥**

ರಾಜನೇ ! ದಾನಪತಿಯಾದ ಅಕ್ರೂರನು ಕೃಷ್ಣನೊಂದಿಗೆ ನಂದನ ಗೃಹ ಪ್ರವೇಶಿಸಿ ಅಲ್ಲಿದ್ದ ಗೋಪವೃದ್ಧರನ್ನೆಲ್ಲ ಕರೆಯಿಸಿ ಹೀಗೆ ಹೇಳಿದನು. ಹಾಗೆಯೆ ಬಲರಾಮನೊಂದಿಗೆ ಇದ್ದ ಶ್ರೀಕೃಷ್ಣನಿಗೂ ಪ್ರೇಮಾದರಪೂರ್ವಕ ಹೀಗೆ ಹೇಳಿದನು.

ವತ್ಸ ಶ್ರೀಕೃಷ್ಣ! ನಾವೆಲ್ಲರೂ ನಮ್ಮೆಲ್ಲರ ಹಿತಕ್ಕಾಗಿ ನಾಳೆಯೆ ಮಥುರೆಗೆ ಪ್ರಯಾಣ ಮಾಡಬೇಕಾಗಿದೆ.

ವ್ರಜವಾಸಿಗಳಾದ ಸಮಸ್ತ ಗೋಪಾಲಕರೂ ಕಂಸನ ಆದೇಶದಂತೆ ಅವನಿಗೆ

ನೀಡಬೇಕಾದ ಕಪ್ಪಕಾಣಿಕಗಳೊಂದಿಗೆ ಪರಿವಾರದೊಡಗೂಡಿ ಅಲ್ಲಿಗೆ ಹೋಗಬೇಕು. ಕಂಸನು ಧನುರ್ಯಜ್ಞ ಮಾಡಲಿರುವನು. ಆ ಧನುರ್ಯಜ್ಞದಲ್ಲಿ ನೀವೆಲ್ಲರೂ ಭಾಗಿಗಳಾಗಿ ವೈಭವೋಪೇತ ಉತ್ಸವವನ್ನು ನೋಡಿ ಆನಂದಪಡಬಹುದು.

**ಪಿತರಂ ವಸುದೇವಂ ಚ ಸತತಂ ದುಃಖಭಾಜನಮ್ ।**
**ದೀನಂ ಪುತ್ರವಧಶ್ರಾಂತಂ ಯುವಾಮದ್ಯ ಸಮೇಷ್ಯಥಃ ॥ 4 ॥**
**ಸತತಂ ಪೀಡ್ಯಮಾನಂ ಚ ಕಂಸೇನ ಅಶುಭಬುದ್ಧಿನಾ ।**
**ದಶಾಂತೇ ಶೋಷಿತಂ ವೃದ್ಧಂ ದುಃಖೈಃ ಶಿಥಿಲತಾಂ ಗತಮ್ ॥ 5 ॥**
**ತಾಂ ಚ ದ್ರಕ್ಷ್ಯಸಿ ಗೋವಿಂದ ಪುತ್ರೈರಮೃದಿತಸ್ತನೀಮ್ ।**
**ದೇವಕೀಂ ದೇವಸಂಕಾಶಾಂ ಸೀದಂತೀಂ ವಿಹತಪ್ರಭಾಮ್ ॥ 6 ॥**
**ಪುತ್ರಶೋಕೇನ ಶುಷ್ಯಂತೀಂ ತ್ವದ್ದರ್ಶನ ಪರಾಯಣಾಮ್ ।**
**ವಿಯೋಗ ಶೋಕ ಸಂತಪ್ತಾಂ ವಿವತ್ಸಾಮಿವ ಸೌರಭೀಮ್ ॥ 7 ॥**

ಮಥುರೆಗೆ ಬಂದಾಗ ನಿಮ್ಮ ತಂದೆ ವಸುದೇವ ತಾಯಿ ದೇವಕಿಯರನ್ನೂ ನೋಡಬಹುದು. ಆರು ಮಕ್ಕಳ ನಿರಂತರ ವಧೆಯಿಂದಾಗಿ ತತ್ತರಿಸಿ ಅತ್ಯಂತ ದುಃಖಿಯಾಗಿರುವ ಇದರಿಂದಾಗಿ ದೈಹಿಕವಾಗಿ ದುರ್ಬಲನಾಗಿರುವ ವಸುದೇವನನ್ನೂ ಕಾಣಬಹುದು. ಕಂಸನ ಆಕ್ರಮಣ ವಸುದೇವನ ಮೇಲೆ ಇನ್ನೂ ನಡೆಯುತ್ತಲೇ ಇದೆ. ಕಂಸನ ಭಯದಿಂದಾಗಿ ರಕ್ತ ಮಾಂಸಗಳೆ ಇಲ್ಲದೆ ಕೃಶನಾಗಿದ್ದಾನೆ. ಹಗಲಿರುಳು ಚಿಂತೆಯೆಂಬ ಅಗ್ನಿಯಲ್ಲಿ ಬೇಯುತ್ತಿರುವನು. ಇನ್ನೂ ತಾಯಿ ದೇವಕಿಯ ಸ್ಥಿತಿ ಮಕ್ಕಳಿಗೆ ಸ್ತನ್ಯವನ್ನು ಕೊಟ್ಟೆ ಅರಿಯದವಳು. ದೇವಸದೃಶಳೂ ದಿನಂಪ್ರತಿ ಕೃಶಳಾಗುತ್ತಿರುವವಳೂ. ಕಾಂತಿವಿಹೀನಳೂ ಆದ ದೇವಕಿಯನ್ನೂ ನೀನು ನೋಡಬಹುದಾಗಿದೆ. ಕರುವೆ ಇಲ್ಲದೆ ಗೋವಿನಂತೆ ಪುತ್ರವಿರಹ ಶೋಕತಪ್ತಳಾದ ನಿನ್ನ ತಾಯಿ ಯಾವಾಗಲೂ ನಿನ್ನನ್ನೆ ನೋಡಬೇಕೆಂದು ಹಂಬಲಿಸುತ್ತಿರುವಳು. ನಿನ್ನ ತಾಯಿ ಹಣ್ಣಿನಿಂದ ಯಾವಾಗಲೂ ಕಣ್ಣೀರಿನ ಕೋಡಿ ಹರಿಯುತ್ತಿರುತ್ತದೆ. ದೀನಳಾದ ಅವಳು ಕಂಸನೆಂಬ ರಾಹುಗ್ರಸ್ತ ಚಂದ್ರನಂತಾಗಿದ್ದಾಳೆ. ನಿನ್ನ ಆಗಮನವನ್ನೆ ಎದುರು ನೋಡುತ್ತಿರುವಲು. ನಿನ್ನ ಜನ್ಮವಾಗುತ್ತಲೇ ನಿನ್ನಿಂದ ವಿಯುಕ್ತಳಾಗಿ

ತಪಸ್ವಿನೀ ದೇವಕಿಯನ್ನು ನೋಡಿ ಸಮಾಧಾನಿಸಬಹುದು. ನಿನ್ನ ರೂಪವೆ ಅವಳಿಗೆ ಮರೆತು ಹೋಗಿದೆ.

**ಯದಿ ತ್ವಾಂ ಜನಯಿತ್ವಾ ಸಾ ದೇವಕೀ ತಾತ ತಪ್ಯತೇ ।**
**ಅಪತ್ಯಾರ್ಥೋ ನು ಕಸ್ತಸ್ಯಾಃ ವರಂ ಹ್ಯೇವಾನಪತ್ಯತಾ ॥ 8 ॥**

**ಅಪುತ್ರಾಣಾಂ ಹಿ ನಾರೀಣಾಮೇಕಃ ಶೋಕೋ ವಿಧಿಯತೇ ।**
**ಸಪುತ್ರಾ ತ್ವಫಲೇ ಪುತ್ರೇ ಧಿಕ್ ಪ್ರಜಾತೇನ ತಪ್ಯತೇ ॥ 9 ॥**

**ತ್ವಂ ತು ಶಕ್ರಸಮಃ ಪುತ್ರೋ ಯಸ್ಯಾಃ ತ್ವತ್ ಸದೃಶೋಗುಣೈಃ ।**
**ಪರೇಷಾಮಪ್ಯಭಯದೋ ನ ಸಾ ಶೋಚಿತು ಮರ್ಹತಿ ॥ 10 ॥**

ನಿನ್ನಂತಹ ಸತ್ಪುತ್ರನನ್ನು ಪಡೆದೂ ಅವಳು ಇಷ್ಟು ದುಃಖವನ್ನು ಅನುಭವಿಸುವಳೆಂದರೆ ಅವಳಿಗೆ ಸಂತಾನ ಫಲವಾದರೂ ಏನಿದ್ದೀತು? ಅವಳು ಅನುಭವಿಸುತ್ತಿರುವ ದುಃಖ ನೋಡುತ್ತಿದ್ದರೆ ಅವಳಿಗೆ ಸಂತಾನವಾಗದಿದ್ದರೆ ಚೆನ್ನಾಗಿರುತ್ತಿತ್ತು. ಸ್ತ್ರೀಯರಿಗೆ ಮಕ್ಕಳಾಗದಿದ್ದರೆ ಮಕ್ಕಳಾಗಲಿಲ್ಲವೆಂಬ ಒಂದೇ ದುಃಖವಿದ್ದೀತು. ಆದರೆ ಮಕ್ಕಳಾಗಿದ್ದರೂ ಮಕ್ಕಳಿಂದ ಪಡೆಯಬಹುದಾದ ಸಂತೋಷ ಸಿಗದಿದ್ದರೆ ಅಥವಾ ಅವನಿಂದಾಗಿ ನಿರಂತರ ದುಃಖವೆ ಏರ್ಪಟ್ಟರೆ ಆ ಸಂತಾನಕ್ಕೆ ಧಿಕ್ಕಾರ ಸಂತಾನವೆನ್ನುವುದಿಲ್ಲವೆ ಜನ?

ಯಾವಳಿಗೆ ಇಂದ್ರನಿಗೆ ಸಮಾನವಾದ ಗುಣಗಣಪೂರ್ಣನಾದ ನಿನ್ನಂತಹ ಮಗನಿರುವಾಗ ಅವಳು ಎಂದಿಗೂ ಶೋಕಿಸಬಾರದು. ಕೃಷ್ಣನೇ ನಿನ್ನ ತಂದೆ ತಾಯಿಗಳು ಭಯದಿಂದ ಕಂಸನಿಗೆ ದಾಸರಂತಿರುವರು. ದುಷ್ಟಬುದ್ಧಿ ಕಂಸನು ನಿನ್ನ ಸಲುವಾಗಿ ಆ ವೃದ್ಧ ದಂಪತಿಗಳನ್ನು ಪೀಡಿಸುತ್ತಿದ್ದಾನೆ.

ನಿನ್ನನ್ನು ಗರ್ಭದಲ್ಲಿ ಹಾಕಿಕೊಂಡ ದೇವಕಿಯು ನಿನಗೆ ಭೂದೇವಿಯಂತೆ ಮಾನ್ಯಳಾಗಿದ್ದರೆ ಭೂದೇವಿಯನ್ನು ವರಾಹ ರೂಪದಿಂದ ಉದ್ಧರಿಸಿದಂತೆ ಅವಳನ್ನು ಉದ್ಧರಿಸು. ತನ್ನ ಪ್ರಾಣಕ್ಕಿಂತಲೂ ಪ್ರಿಯನೆಂದು ಪ್ರೀತಿಸುವ ವಸುದೇವನಿಗೆ ನಿನ್ನ ದರ್ಶನ ನೀಡಿದೆಯಾದರೆ ನೀನು ಮಹಾಧರ್ಮಕ್ಕೆ ಭಾಗಿಯಾಗುವೆ.

**ಯಥಾ ನಾಗಃ ಸುದುರ್ವೃತ್ತೋ ದಮಿತೋ ಯಮುನಾಹ್ರದೇ ।**
**ವಿಮೂಲಃ ಸ ಕೃತಃ ಶೈಲೋ ಯಥಾ ವೈ ಭೂಧರಸ್ತ್ವಯಾ ॥ 11॥**

**ದರ್ಪೋತ್ಸಿಕ್ತಶ್ಚ ಬಲವಾನ್ ಅರಿಷ್ಟೋ ವಿನಿಪಾತಿತಃ ।**
**ಪರಪ್ರಾಣಹರಃ ಕೇಶೀ ದುಷ್ಟಾತ್ಮಾ ಚ ಹಯೋ ಹತಃ ।**
**ಏತೇನೈವ ಪ್ರಯತ್ನೇನ ವೃದ್ಧೌ ಉದ್ಧೃತ್ಯ ದುಃಖಿತೌ ॥ 12 ॥**
**ನಿರ್ಭರ್ತ್ಸ್ಯಮಾನೋ ಯೈಃ ದೃಷ್ಟಃ ಪಿತಾ ತೇ ಕಂಸಸಂಸದಿ ।**
**ತೇ ಸರ್ವೇ ಚಕ್ರುರಶ್ರೂಣಿ ನೇತ್ರೈಃ ದುಃಖಾನ್ವಿತಾ ಭೃಶಮ್ ॥ 13 ॥**
**ಗರ್ಭಾವಕರ್ತನಾದೀನಿ ದುಃಖಾನಿ ಸುಬಹೂನ್ಯಪಿ ।**
**ಮಾತಾ ತೇ ದೇವಕೀ ಕೃಷ್ಣ ಕಂಸಸ್ಯ ಸಹತೇಽವಶಾ ॥ 14 ॥**

ಕೃಷ್ಣನೇ ! ಕಾಲಿಯ ಮಡುವಿನಲ್ಲಿದ್ದ ದುಷ್ಟ ಕಾಳಿಂಗನನ್ನು ಮರ್ದನ ಮಾಡಿರುವಿ – ಗೋವರ್ಧನ ಪರ್ವತವನ್ನು ಬುಡಸಹಿತ ಹಿಡಿದೆತ್ತಿ, ಇಂದ್ರ ಗರ್ವ ಮುರಿದು ಹಾಕಿರುವಿ. ಮದೋನ್ಮತ್ತನೂ ಮಹಾಬಲಿಷ್ಠನೂ ಆದ ಅರಿಷ್ಟಾಸುರನನ್ನು ಕೊಂದು ಹಾಕಿದಂತೆ, ಗೋ ನೃ ಪಶುಗಳನ್ನು ಸಂಹರಿಸಿದ್ದ ತುರಂಗವೇಷದ ಕೇಶಿಯನ್ನು ಎರಡು ಭಾಗ ಮಾಡಿದಂತೆ ಇಂದು ಇಂತಹುದೆ ವಿಶೇಷ ಪ್ರಯತ್ನದಿಂದ ವೃದ್ಧರೂ ದುಃಖಿತರೂ ಆದ ತಂದೆ ತಾಯಿಗಳನ್ನು ಉದ್ಧರಿಸಬೇಕು. ಅದಕ್ಕೆ ಸರಿಯಾದ ಉಪಾಯವನ್ನು ಹುಡುಕು. ಕಂಸನು ಮೊನ್ನೆಯ ಸಭೆಯಲ್ಲಿ ವಸುದೇವನನ್ನು ಬಹಳವಾಗಿ ನಿಂದಿಸಿದನು. ಸಭ್ಯರೆಲ್ಲರೂ ಇದರಿಂದ ಕಣ್ಣೀರು ಹಾಕಿದರು. ದೇವಕಿ ನಿನ್ನ ತಾಯಿ ತನ್ನ ಕಣ್ಣು ಮುಂದೆ ತನ್ನ ಮಕ್ಕಳನ್ನು ಅಪ್ಪಳಿಸಿ ಕೊಲ್ಲುತ್ತಿದ್ದರೂ ಅಸಹಾಯಳಾಗಿ ಸಹಿಸಿದಳು.

**ಮಾತಾಪಿತೃಭ್ಯಾಂ ಸರ್ವೇಣ ಜಾತೇನ ತನಯೇನ ವೈ ।**
**ಋಣಂ ವೈ ಪ್ರತಿಕರ್ತವ್ಯಂ ಯಥಾಯೋಗ ಮುದಾಹೃತಮ್ ॥ 15 ॥**

ಕೃಷ್ಣನೇ ! ಹುಟ್ಟಿದ ಮಕ್ಕಳೆಲ್ಲರೂ ತಂದೆ ತಾಯಿಗಳಿಗೆ ಯಥಾ ಯೋಗ್ಯತೆ ಸೇವೆಯನ್ನು ಮಾಡಿ ಅವರ ಋಣದಿಂದ ಮುಕ್ತರಾಗಬೇಕು. ಇದು ಶಾಸ್ತ್ರಸಿದ್ಧ. ನೀವೇನಾದರೂ ನಿನ್ನ ತಂದೆ ತಾಯಿಗಳ ವಿಷಯದಲ್ಲಿ ಮನಸ್ಸು ಮಾಡಿ ಅವರನ್ನು ಉದ್ಧರಿಸಿದ್ದೆ ಆದರೆ ಅವರಿಬ್ಬರೂ ಮಹಾಶೋಕದಿಂದ ಮುಕ್ತರಾಗುತ್ತಾರೆ.

ಹೀಗೆ ಅಕ್ರೂರನು ಹೇಳಿದ ಮಾತುಗಳನ್ನು ಕೇಳಿದ ಕೃಷ್ಣನು ಹಾಗೆ ಆಗಲಿ ಎಂದನು ಶ್ರೀಕೃಷ್ಣನಿಗೆ ಇದೆಲ್ಲ ತಿಳಿದಿದ್ದರೂ ಅವನ ಮಾತುಗಳನ್ನು ಕೇಳಿ ಕೋಪಕ್ಕೆ ವಶನಾಗದೆ ತಾನು ದೇವದೇವನೆಂಬುದನ್ನು ಖಾತ್ರಿಗೊಳಿಸಿದ.

**ಗೋಪಾಲಕರ ಮಥುರಾ ಪ್ರಯಾಣ**

ಸಭೆಯಲ್ಲಿ ನೆರೆದಿದ್ದ ಗೋಪಾಲಕರೆಲ್ಲರೂ ಅಕ್ರೂರನು ಹೇಳಿದ ಮಾತಿನಂತೆ ಮಥುರಾ ಪಟ್ಟಣಕ್ಕೆ ಹೋಗಲು ಸಿದ್ಧರಾದರು. ಕಂಸನಿಗೆ ನೀಡಬೇಕಾದ ಕರ, ಬಿಲ್ಲಿನ ಉತ್ಸವಕ್ಕೆ ಬೇಕಾದ ಹಾಲು, ಮೊಸರು ಮೊದಲಾದ ಗೋರಸಗಳನ್ನು ಅವನಿಗೆ ಕೊಡಬೇಕಾಗಿದ್ದ ಎಮ್ಮೆಯ, ಆಕಳ ತುಪ್ಪ ತಯಾರಿಸಿ ಹೊರಡಲು ಸಿದ್ಧರಾದರು.

**ಅಕ್ರೂರಸ್ಯ ಕಥಾಭಿಶ್ಚ ಸಹ ಕೃಷ್ಣೇನ ಜಾಗ್ರತಃ ।**
**ರೌಹಿಣೇಯ ತೃತೀಯಸ್ಯ ಸಾ ನಿಶಾ ವ್ಯತ್ಯ ವರ್ತತ ॥ 16 ॥**

ಶ್ರೀಕೃಷ್ಣನೊಂದಿಗೆ ಸಂಭಾಷಣೆ ನಡೆಸುತ್ತಿದ್ದ ಅಕ್ರೂರನಿಗೆ ರಾತ್ರಿ ಕಳೆದದ್ದೆ ಗೊತ್ತಾಗಲಿಲ್ಲ. ರಾತ್ರಿಪೂರ್ತಿ ಜಾಗರಣೆಯಾಯಿತು. ಅವರೊಂದಿಗೆ ಬಲರಾಮನೂ ಇದ್ದನು. ಮಾರನೇ ದಿನ ಪ್ರಭಾತ ಕಾಲ ಸನ್ನಿಹಿತವಾಯಿತು. ರಾತ್ರಿಯಲ್ಲಿ ಬೆಳಗುತ್ತಿದ್ದ ಚಂದ್ರನ ಕಾಂತಿ ಸೂರ್ಯನು ಬೆಳಗುತ್ತಿದ್ದಂತೆ ಕಡಮೆಯಾಗುತ್ತಿತ್ತು. ಪಕ್ಷಿಗಳ ಕಲಕಲ ಧ್ವನಿ ನಕ್ಷತ್ರಗಳು ಕಾಣಿಸದಾದವು. ಭೂಮಿ ತುಂತುರು ಹನಿಗಳಿಂದ ಒದ್ದೆಯಾಯಿತು. ನಿಶಾದೇವಿಯು ಅದೃಶ್ಯಳಾದಳು. ಒಬ್ಬ ಚಂದ್ರನು ತನ್ನ ರೂಪವನ್ನು ಕ್ಷೀಣಗೊಳಿಸುತ್ತಿರು–ವಂತೆಯೇ ಮತ್ತೊಬ್ಬ ಸೂರ್ಯನು ತನ್ನ ಸ್ವರೂಪವನ್ನು ವೃದ್ಧಿಗೊಳಿಸುತ್ತಿದ್ದನು.

ಬೃಂದಾವನದಿಂದ ಮಥುರೆಗೆ ಹೊರಡುವಾಗ ಮಾರ್ಗವು ಗೋವುಗಳಿಂದ ತುಂಬಿದ್ದವು. ಬೆಣ್ಣೆಗಾಗಿ ಕಡಗೋಲಿನಿಂದ ಕಡೆಯುತ್ತಿರುವ ಗರಗರ ಶಬ್ಧ ಕರುಗಳನ್ನು ಹಿಡಿದಿರುವ ಗೋಪಾಲಕರಿಂದ ಮಾರ್ಗಗಳು ತುಂಬಿ ಹೋಗಿದ್ದವು. ಹಾಲು ಮೊಸರಿನ ಮಡಿಕೆಗಳನ್ನು ಗಾಡಿಯಲ್ಲಿ ತುಂಬಿಸಿ ಗಾಡಿಗಳನ್ನು ಹೊಡೆದುಕೊಂಡು ಮಥುರೆಗೆ ವೇಗಗತಿಯಿಂದ ಹೊರಟರು. ಶ್ರೀಕೃಷ್ಣ ಬಲರಾಮ ಹಾಗೂ ಅಕ್ರೂರ ಈ ಮೂವರೂ ಮೂರು ಲೋಕಪಾಲಕರಂತೆ ರಥದಲ್ಲಿ ಕುಳಿತು ಹೊರಟರು.

**ಅಥಾಹ ಕೃಷ್ಣಮಕ್ರೂರೋ ಯಮುನಾತೀರಮಾಶ್ರಿತಃ ।**
**ಸ್ಯಂದನಂ ಚಾತ್ರ ರಕ್ಷಸ್ವ ಯತ್ನಂ ಚ ಕುರು ವಾಜಿಷು ॥ 17 ॥**

**ಯಮುನಾಯಾ ಹ್ರದೇ ಹ್ಯಸ್ಮಿನ್ ಸ್ತೋಷ್ಯಾಮಿ ಭುಜಗೇಶ್ವರಮ್ ।**
**ಶ್ರೀಮತ್ ಸ್ವಸ್ತಿಕ ಮೂರ್ಧಾನಂ ಪ್ರಣಮಿಷ್ಯಾಮಿ ಭೋಗಿನಮ್ ।**
**ಸಹಸ್ರಶಿರಸಂ ದೇವಂ ಅನಂತಂ ನೀಲವಾಸಸಮ್ ॥ 18 ॥**

ಯಮುನಾ ನದಿಯ 'ಬ್ರಹ್ಮಹ್ರದ' ಬರುತ್ತಲೇ ಅಕ್ರೂರನು ಶ್ರೀಕೃಷ್ಣನಿಗೆ ಹೀಗೆಂದನು. ಕೃಷ್ಣ! ರಥವನ್ನು ಇಲ್ಲಿಯೆ ನಿಲ್ಲಿಸು ಕುದುರೆಗಳ ಕಡಿವಾಣ ಹಿಡಿದುಕೋ. ಕುದುರೆಗಳಿಗೆ ಹುಲ್ಲು ತಿನ್ನಿಸಿ ನನ್ನ ಬರವನ್ನು ನಿರೀಕ್ಷಿಸುತ್ತಿರು. ನಾನೀಗ ಯಮುನೆಯ ಮಡುವಿನಲ್ಲಿ ಮುಳುಗಿ ದಿವ್ಯ ಭಾಗವತ ಮಂತ್ರಗಳಿಂದ ಭುಜಗೇಶ್ವರನಾದ ಅನಂತಪದ್ಮನಾಭನನ್ನು ಸಂತೋಷಪಡಿಸುತ್ತೇನೆ. ಅನಂತನಾದರೂ ತಲೆಯಲ್ಲಿ ಸ್ವಸ್ತಿಕ ಚಿಹ್ನೆ ಅಲಂಕೃತನಾಗಿದ್ದು ಸಾವಿರ ಶಿರಸ್ಸುಗಳಿಂದ ಶೋಭಿತನಾಗಿರುವನು. ನೀಲಾಂಬರನಾದ ಶೇಷನಿಗೆ ನಮಸ್ಕರಿಸಿ ಬರುವೆ. ಶೇಷದೇವನ ಬಾಯಿಂದ ಹೊರಬರುವ ವಿಷದ ಗಾಳಿಯು ಭಕ್ತರಿಗೆ ಅಮೃತದಂತೆ. ನಾನು ಪಾನ ಮಾಡುವೆ. ನಾನು ಬರುವವರೆಗೂ ನನ್ನನ್ನು ನಿರೀಕ್ಷಿಸಿರಿ ಎಂದು ಹೊರಟರು. ಕೃಷ್ಣನಾದರೂ –

**ತಮಾಹ ಕೃಷ್ಣಃ ಸಂಹೃಷ್ಟೋ ಗಚ್ಛ ಧರ್ಮಿಷ್ಟ ಮಾ ಚಿರಮ್ ।**
**ಆವಾಂ ಖಲು ನ ಶಕ್ತೌ ಸ್ವಃ ತ್ವಯಾ ಹೀನೌ ಉಪಾಸಿತಮ್ ॥ 19 ॥**

ಧರ್ಮಿಷ್ಠ ಅಕ್ರೂರನೇ ! ನೀನು ಸ್ನಾನ ಮಾಡಿ ಮಾಧ್ಯಾಹ್ನಿಕ ಮುಗಿಸಿ ಬೇಗ ಬಂದುಬಿಡು! ನೀನಿಲ್ಲದೆ ನಾವು ಬಹಳ ಕಾಲ ಇಲ್ಲಿರಲಾರೆವು ಎಂದ.

### ಅಕ್ರೂರನಿಗೆ ಶೇಷ ದರ್ಶನ

**ಸ ಹ್ರದೇ ಯಮುನಾಯಾಸ್ತು ಮಮಜ್ಜಾಮಿತ ದಕ್ಷಿಣಃ ।**
**ರಸಾತಲೇ ಸ ದದೃಶೇ ನಾಗಲೋಕಮಿಮಂ ಯಥಾ ॥ 20 ॥**

**ತಸ್ಯ ಮಧ್ಯೆ ಸಹಸ್ರಾಸ್ಯಂ ಹೇಮತಾಲೋಚ್ಛ್ರಿತ ಧ್ವಜಮ್ ।**
**ಲಾಂಗಲಾಸಕ್ತ ಹಸ್ತಾಗ್ರಂ ಮುಸಲೋಪಾಶ್ರಿತೋದರಮ್ ॥ 21 ॥**

ಅಸಿತಾಂಬರ ಸಂವೀತಂ ಪಾಂಡುರಂ ಪಾಂಡುರಾಸನಮ್ ।
ಕುಂಡಲೈಕಧರಂ ಮತ್ತಂ ಸುಪ್ತಮಂಬುರುಹೇಕ್ಷಣಮ್ ॥ 22 ॥
ರಕ್ತಚಂದನ ದಿಗ್ಧಾಂಗಂ ದೀರ್ಘಬಾಹುಮರಿಂದಮಂ ।
ಪದ್ಮನಾಭಸಿತಾಭ್ರಾಭಂ ಭಾಭಿಃ ಜ್ವಲಿತ ತೇಜಸಮ್ ।
ದದರ್ಶ ಭೋಗಿನಾಂ ನಾಥಂ ಸ್ಥಿತಮೇಕಾರ್ಣವೇಶ್ವರಮ್ ॥ 23 ॥

ಅಕ್ರೂರನು ಯಮುನಾ ನದಿಯ ಬ್ರಹ್ಮಹ್ರದದಲ್ಲಿ ಮುಳುಗಿದನು. ಅಲ್ಲಿಯೇ ರಸಾತಲ ಲೋಕವನ್ನು ನೋಡಿದನು. ನಾಗಲೋಕದ ಮಧ್ಯದಲ್ಲಿ ಸಾವಿರ ತಲೆಗಳಿಂದ ಶೋಭಿತನಾದ ಶೇಷ ದೇವನನ್ನು ನೋಡಿದನು. ಅವನ ಸಮೀಪವೇ ಸುವರ್ಣಮಯ ತಾಲ ಚಿಹ್ನೆಯ ಧ್ವಜವಿತ್ತು. ಒಂದು ಕೈಯಲ್ಲಿ ನೇಗಿಲನ್ನು ಹಿಡಿದಿತ್ತು. ಸೌನಂದವೆಂಬ ವನಕೆ ಉದರಕ್ಕೆ ಆಶ್ರಯ ನೀಡಿತ್ತು. ಅವನ ಆಸನ ಶುಭ್ರವಾಗಿತ್ತು. ನೀಲಿಯಾದ ವಸ್ತ್ರ ಧರಿಸಿದ್ದನು. ಒಂದು ಕಿವಿಯಲ್ಲಿ ಮಾತ್ರ ಕರ್ಣಾಭರಣ ಧರಿಸಿದ್ದನು. ಸರ್ಪಗಳಿಂದ ಕಲ್ಪಿತ ಆಸನದಲ್ಲಿ ಕುಳಿತು ಧ್ಯಾನ ಮಾಡಿ ಎದ್ದಿದ್ದ. ವಕ್ಷಃಸ್ಥಲದಲ್ಲಿ ಮಾಲೆಗಳು, ರಕ್ತಚಂದನಲ್ಲಿಪ್ತಾಂಗನಾಗಿದ್ದ. ಸರ್ಪಗಳ ಅಧಿರಾಜ ಶೇಷದೇವನನ್ನು ನೋಡಿದನು (ಇದು ಪ್ರತಿದಿವಸ ಕಾಣಿಸುತ್ತಿದ್ದ ರೂಪವು). ವಾಸುಕಿ ಮೊದಲಾದ ಸರ್ಪಗಳು ಇವನನ್ನು ಸೇವಿಸುತ್ತಿದ್ದರು. ಕಂಬಲ-ಅಶ್ವತರು ನಾಗಗಳು ಚಾಮರ ಹಾಕುತ್ತಿದ್ದವು. ಇತರ ಸೇವಕರು ಸುವರ್ಣಮಯ ಭಾಂಡಗಳಲ್ಲಿ ನೀರನ್ನು ತಂದು ಅಭಿಷೇಕಿಸುತ್ತಿದ್ದರು.

## ವಿಶ್ವರೂಪ ದರ್ಶನ

ತಸ್ಯೋತ್ಸಂಗೇ ಘನಶ್ಯಾಮಂ ಶ್ರೀವತ್ಸಾಚ್ಛಾದಿತೋರಸಮ್ ।
ಪೀತಾಂಬರಧರಂ ವಿಷ್ಣುಂ ಸೂಪವಿಷ್ಟಂ ದದರ್ಶ ಹ ॥ 24 ॥
ಅಪರಂ ಚೈವ ಸೋಮೇನ ತುಲ್ಯಸಂಹನನಂ ಪ್ರಭುಮ್ ।
ಸಂಕರ್ಷಣಮಿವಾಸೀನಂ ತಂ ದಿವ್ಯಂ ವಿಷ್ಟರಂ ವಿನಾ ।
ಸ ಕೃಷ್ಣಂ ತತ್ರ ಸಹಸಾ ವ್ಯಾಹರ್ತು ಮುಪಚಕ್ರಮೇ ॥ 25 ॥
ತಸ್ಯ ಸಂಸ್ತಂಭಯಾಮಾಸ ವಾಕ್ಯಂ ಕೃಷ್ಣಃ ಸ್ವತೇಜಸಾ ।

**ಉದತಿಷ್ಠತ್ ಪುನಸ್ತೋಯಾದ್ ವಿಸ್ಮಿತೋಽಮಿತ ದಕ್ಷಿಣಃ ।**
**ಸ ತೌ ರಥಸ್ಥೌ ಆಸೀನೌ ತತ್ರೈವ ಬಲಕೇಶವೌ ॥ 26 ॥**

ಅಕ್ರೂರನು ಬ್ರಹ್ಮಹ್ರದದಲ್ಲಿ ಮುಳುಗಿದಾಗ ಶೇಷದೇವರ ದೇಹದಲ್ಲಿ ಮಲಗಿರುವ ಅನಂತಪದ್ಮನಾಭ ರೂಪೀ ಶ್ರೀಕೃಷ್ಣನನ್ನು ನೋಡಿದನು. ಶೇಷರೂಪದಿಂದ ಹೊತ್ತುಕೊಂಡಿರುವ ಬಲರಾಮನನ್ನೂ ನೊಡಿ ಆಶ್ಚರ್ಯ ಚಕಿತನಾದನು. ರಥದಲ್ಲಿದ್ದ ಬಲರಾಮ ಕೃಷ್ಣರು ಇಲ್ಲಿಗೆ ಹೇಗೆ ಬಂದರು? ರಥದಲ್ಲಿಲ್ಲವೆ? ಪುನಃ ಮೇಲೆದ್ದು ನೋಡಿದನು. ಅಲ್ಲಿ ರಥದಲ್ಲಿಯೂ ಅವರೆ ಇದ್ದಾರೆ ನೀರಿನಲ್ಲಿಲ್ಲವೆ? ಎಂದು ಮುಳುಗಿದಾಗ ಅಲ್ಲಿ ಶೇಷನ ಮೇಲೆ ಕುಳಿತಿರುವ ಪೀತಾಂಬರಧಾರಿಯೂ, ಶ್ರೀವತ್ಸ ಚಿಹ್ನೆ ಎದೆಯಲ್ಲಿ, ನೀಲಮೇಘ ಕಾಂತಿ, ಚಂದ್ರನಂತೆ ಗೌರಾಂಗನಾಗಿದ್ದ ಪರಮಪುರುಷನನ್ನು ನೋಡಿದನು. ಸ್ನಾನ ಕಾಲದಲ್ಲಿ ಅಘಮರ್ಷಣ ಸೂಕ್ತ ಶೇಷಮಂತ್ರಗಳನ್ನು ಜಪಿಸಿ ಮಂತ್ರಸಿದ್ಧಿ ಪಡೆದಿದ್ದ ಅಕ್ರೂರನಿಗೆ ಪ್ರತಿದಿನ ಸ್ನಾನ ಕಾಲದಲ್ಲಿ ಶೇಷದೇವ ದರ್ಶನವಾಗುತ್ತಿದ್ದು. ಇಂದು ಶ್ರೀಕೃಷ್ಣನಲ್ಲಿ ಪರಮಭಕ್ತಿಯಿಂದ ಕರೆದುಕೊಂಡ ಬಂದಿರುವ ಸೇವೆಗೆ ಶೇಷನನ್ನು ಮಾತ್ರವಲ್ಲದೆ **ಅನಂತಪದ್ಮನಾಭ ರೂಪ**'ವನ್ನು ತೋರಿಸಿದ. ಇವನನ್ನು ನೋಡಿದಾಗ ಇವನೊಂದಿಗೆ ಮಾತನಾಡಲು ಬಯಸಿದ ಅಕ್ರೂರನಿಗೆ ವಾಕ್‌ಸ್ತಂಭದಿಂದ ಮಾತು ಹೊರಡದಂತೆ ಮಾಡಿದ. ಅಕ್ರೂರನು ಪುನಃ ಮಂತ್ರಗಳನ್ನೇ ಜಪಿಸುತ್ತಾ ಮೇಲೆ ಬಂದು ಅದೇ ಮಾರ್ಗವಾಗಿ ರಥದ ಹತ್ತಿರ ಬಂದನು.

---

1. ಅಕ್ರೂರ ದರ್ಶನ :
ಸಂಸ್ಥಾಪ್ಯ ತೌರಥವರೇ ಜಗತಾಭಿಮದ್ಯೌ ಶ್ವಾಪಲ್ಕಿರಾಶ್ವವತತಾರ ಯಮಸ್ವಸಾರಮ್।
ಸ್ನಾತ್ವಾ ಸ ತತ್ರ ವಿಧಿನಾ ವಿಧಿನೈವ ಕೃತಾಘಮರ್ಷಃ ಶೇಷಾಸನಂ ಪರಮಪುರುಷ ಮತ್ರ ಚೈಕ್ಷತ್ ॥
ನಿತ್ಯಂ ಹಿ ಶೇಷಮಭಿಪಶ್ಯತಿ ಸಿದ್ಧಮಂತ್ರೋ ದಾನೇಶ್ವರಃ ಸ ತು ತದಾ ದದೃಶೇ ಹರಿಂ ಚ ।
ಅಗ್ರೇ ಹಿ ಬಾಲತನು ಮತ್ರ ಸಮೀಕ್ಷ್ಯ ಕೃಷ್ಣಃ ಕಿಂ ನಾಸ್ತಿ ಯಾನ ಇತಿ ಯಾನ ಮುಖೋ ಬಭೂವ ।
ತತ್ರಾಪಿ ಕೃಷ್ಣಮಭಿವೀಕ್ಷ್ಯ ಪುನರ್ನಿಮಜ್ಜ್ಯ ಶೇಷೋರುಭೋಗ ಶಯನಂ ಪರಮಂ ದದರ್ಶ ॥ *–ತಾ. ನಿ. 13/94*

## ನಿನಗಿಂತ ಆಶ್ಚರ್ಯವೇನಿದೆ?

**ಕೀದೃಶಂ ನಾಗಲೋಕಸ್ಯ ವೃತ್ತಂ ಭಾಗವತೇ ಹ್ರದೇ ।**
**ಚಿರಂ ಚ ಭವತಾ ಕಾಲೋ ವ್ಯಾಕ್ಷೇಪೇಣ ವಿಲಂಬಿತಃ ॥ 27 ॥**

**ಮನ್ಯೇ ದೃಷ್ಟಂ ತ್ವಯಾಶ್ಚರ್ಯಂ ಹೃದಯಂ ತೇ ಯಥಾಚಲಮ್ ।**
**ಪ್ರತ್ಯುವಾಚ ಸ ತಂ ಕೃಷ್ಣಮಾಶ್ಚರ್ಯಂ ಭವತಾ ವಿನಾ ।**
**ಕಿಂ ಭವಿಷ್ಯತಿ ಲೋಕೇಷು ಸ್ಥಾವರೇಷು ಚರೇಷು ಚ ॥ 28 ॥**

**ತತ್ರಾಶ್ಚರ್ಯಂ ಮಯಾ ದೃಷ್ಟಂ ಕೃಷ್ಣ ಯದ್ ಭುವಿ ದುರ್ಲಭಮ್ ।**
**ತದಿಹಾಪಿ ಯಥಾ ತತ್ರ ಪಶ್ಯಾಮಿ ಚ ರಮಾಮಿ ಚ ॥ 29 ॥**

ಅಕ್ರೂರನ ಕೌತುಕದ ವಿಸ್ಫುರಿತ ನೇತ್ರಗಳನ್ನು ಕಂಡು ಶ್ರೀಕೃಷ್ಣನು ಅವನಿಗೆ ಹೇಳಿದ ಅಕ್ರೂರನೇ ! ನಿನ್ನ ಕಣ್ಣುಗಳು ಆಶ್ಚರ್ಯದಿಂದ ತಾವರೆಯಂತೆ ಅರಳಿವೆ. ಇದನ್ನು ನೋಡಿ ನೀನು ಯಮುನಾ ನದಿಯಲ್ಲಿ ಯಾವುದೋ ಅದ್ಭುತ ದೃಶ್ಯ ನೋಡಿದಂತಿದೆ. ಅದೇನು? ನೀನು ನೋಡಿದ್ದು? ಅದಕ್ಕೆ ಅಕ್ರೂರನು ಜಗನ್ನಾಥ ಶ್ರೀಕೃಷ್ಣನೇ ! ಯಮನೆಯ ನೀರಿನ ಆಳದ ಮಡುವಿನಲ್ಲಿ ನಾನೊಂದು ಅತ್ಯಾಶ್ಚರ್ಯಕರವಾದ ದೃಶ್ಯ ನೋಡಿದೆ.

ಅದರಲ್ಲಿ ನಾನು ಕಂಡ ಅತ್ಯಾಶ್ಚರ್ಯ ವಸ್ತುವೆ ಈಗ ನನ್ನ ಕಣ್ಣ ಮುಂದೆ ರಥದಲ್ಲಿ ಕೂತಿದೆ. ಇದೊಂದು ಆಶ್ಚರ್ಯ. ಚರಾಚರ ಪ್ರಪಂಚದಲ್ಲ ನಿನ್ನನ್ನು ಹೊರತುಪಡಿಸಿ ಬೇರೆ ಆಶ್ಚರ್ಯವೇನಿದ್ದೀತು? ನಾನು ನೋಡಿದ ಅಚ್ಚರಿಗಿಂತ ಬೇರೊಂದು ಅಚ್ಚರಿ ನೋಡಲಿಚ್ಛಿಸುವುದಿಲ್ಲ. ಇನ್ನೂ ಹೊರಡು ಮಥುರೆ ಸೇರಬೇಕಾಗಿದೆ. ಸೂರ್ಯನು ಅಸ್ತಂಗತನಾಗುವುದರೊಳಗೆ ನಾವು ಮಥುರೆಯಲ್ಲಿರಬೇಕು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಅಕ್ರೂರನಿಗೆ ವಿಶ್ವರೂಪ ದರ್ಶನವೆಂಬಲ್ಲಿ
ಇಪ್ಪತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 27 ವಿಷ್ಣುಪರ್ವ

# ಅಥ ಸಪ್ತವಿಂಶೋಽಧ್ಯಾಯಃ

## ರಜಕನ ವಧೆ

*ವೈಶಂಪಾಯನ ಉವಾಚ –*

ತೇ ತು ಯುಂಕ್ತ್ವಾ ರಥವರಂ ಸರ್ವ ಏವಾಮಿತೌಜಸಃ ।
ಕೃಷ್ಣೇನ ಸಹಿತಾಃ ಪ್ರಾಯನ್ ತಥಾ ಸಂಕರ್ಷಣೇನ ಚ ॥ 1 ॥
ಆಸೇದುಃ ತೇ ಪುರೀಂ ರಮ್ಯಾಂ ಮಥುರಾಂ ಕಂಸ ಪಾಲಿತಾಮ್ ।
ವಿವಿಶುಸ್ತೇ ಪುರೀಂ ರಮ್ಯಾಂ ಕಾಲೇ ರಕ್ತ ದಿವಾಕರೇ ॥ 2 ॥

ವೈಶಂಪಾಯುನರು ಜನಮೇಜಯು ರಾಜನಿಗೆ – ರಾಜನೇ. ಮಹಾತೇಜಸ್ವಿಗಳಾದ ಗೋಪಾಲಕರೆಲ್ಲ ರಥವನ್ನು ಹೂಡಿ ಸ್ವಲ್ಪ ಸಮಯದಲ್ಲಿಯೇ ಕೃಷ್ಣ–ಬಲರಾಮರೊಂದಿಗೆ ಮಥುರಾ ಪಟ್ಟಣ ಸೇರಿದರು. ಆಗ ಸೂರ್ಯನು ಕೆಂಪುಬಣ್ಣವನಾಗಿದ್ದನು.

ತೌ ತು ಸ್ವಭವನಂ ವೀರೌ ಕೃಷ್ಣ ಸಂಕರ್ಷಣಾವುಭೌ ।
ಪ್ರವೇಶಿತೌ ಬುದ್ಧಿಮತಾ ಹ್ಯಕ್ರೂರೇಣಾರ್ಕವರ್ಚಸೌ ॥ 3 ॥
ತಾವಾಹ ವರವರ್ಣಾಭೌ ಭೀತೋ ದಾನಪತಿಸ್ತದಾ ।
ತ್ಯಕ್ತವ್ಯಾ ತಾತ ಗಮನೇ ವಸುದೇವಗೃಹೇ ಸ್ಪೃಹಾ ॥ 4 ॥
ಯುವಯೋರ್ಹಿ ಕೃತೇ ವೃದ್ಧಃ ಕಂಸೇನ ಸ ನಿರಸ್ಯತೇ ।
ಭರ್ತ್ಸ್ಯತೇ ಚ ದಿವಾ ರಾತ್ರೌ ನೇಹ ಸ್ಥಾತವ್ಯಮಿತ್ಯಪಿ ॥ 5 ॥

ಅಕ್ರೂರನು ರಾಮಕೃಷ್ಣರಿಗೆ ಶೂರವೀರರೇ. ನೀವಿಬ್ಬರೂ ಇಲ್ಲಿಂದ ಮುಂದೆ ಕಾಲ್ನಡಿಗೆಯಲ್ಲಿಯೇ ನಡೆಯುತ್ತಾ ಹೋಗಿರಿ. ಈ ಪಟ್ಟಣದೊಳಗೆ ನಾನೊಬ್ಬನೇ ರಥದಲ್ಲಿ ಹೋಗುತ್ತೇನೆ. ನೀವು ಮಾತ್ರ ವಸುದೇವನ ಮನೆಗೆ ಹೋಗಬೇಡಿರಿ. ನೀನು ಅವನ ಮನೆಗೆ ಹೋದ ವಿಷಯ ತಿಳಿದರೆ ರಕ್ಕಸ ಕಂಸನು ಅವರಿಗೆ ನಾನಾ ವಿಧ ಉಪದ್ರವ ನೀಡುತ್ತಾನೆ. ನಿಮ್ಮ ಸಲುವಾಗಿಯೇ ಕಂಸನು ವಸುದೇವನನ್ನು ಮನೆಯಿಂದ ಹೊರಗೆ ಹಾಕುತ್ತಾನೆ. ನೀವಿಲ್ಲಿರಬಾರದು ಹೊರಟು ಹೋಗಿರಿ ಎಂದು ಹಗಲು-ರಾತ್ರಿ ಉಪಟಳ ನೀಡಿ ಭಯಪಡಿಸುತ್ತಿದ್ದಾನೆ. ಆದ್ದರಿಂದ ನಿಮ್ಮ ತಂದೆ ತಾಯಿಗಳ ಯೋಗಕ್ಷೇಮ ಪುತ್ರರಾದ ನಿಮ್ಮ ಕರ್ತವ್ಯವಾಗಿದೆ ಎಂದನು.

ಹೀಗೆ ಹೇಳಿದ ಅಕ್ರೂರನಿಗೆ ಕೃಷ್ಣನು – ಧರ್ಮಪತಿಯೇ ನೀನು ಸಮ್ಮತಿ ನೀಡಿದ್ದಾದರೆ, ನಾವಿಬ್ಬರೂ ವಸುದೇವನ ಮನೆಗೆ ಹೋಗುವುದಿಲ್ಲ. ಮೊದಲು ಮಥುರಾ ಪಟ್ಟಣ ನೋಡಲೆಂದು ಹೊರಟು ಅಕಸ್ಮಾತ್ತಾಗಿ ಕಂಸನ ಮನೆಗೂ ಭೇಟಿ ನೀಡುವೆವು ಎಂದನು.

## ಕೃಷ್ಣಬಲರಾಮರ ಮಥುರಾ ಪ್ರವೇಶ

**ಅಕ್ರೂರೋಽಪಿ ನಮಸ್ಕೃತ್ಯ ಮನಸಾ ಕೃಷ್ಣಮವ್ಯಯಮ್ ।**
**ಜಗಾಮ ಕಂಸಪಾರ್ಶ್ವಂ ತು ಪ್ರಹೃಷ್ಟೇನಾಂತರಾತ್ಮನಾ ॥ 6 ॥**
**ಅನುಶಿಷ್ಟೌ ಚ ತೌ ವೀರೌ ಪ್ರಸ್ಥಿತೌ ಪ್ರೇಕ್ಷಕಾವುಭೌ ।**
**ಆಲಾನಾಭ್ಯಾಮಿವೋನ್ಮುಕ್ತೌ ಕುಂಜರೌ ಯುದ್ಧಕಾಂಕ್ಷಿಣೌ ॥ 7 ॥**

ಅಕ್ರೂರನಾದರೂ ಮನಃ ಪೂರ್ವಕವಾಗಿ ಕೃಷ್ಣನನ್ನು ನಮಸ್ಕರಿಸಿ ತಾನೂ ಕಂಸನಿಗೆ ರಾಮಕೃಷ್ಣರನ್ನು ಕರೆತಂದಿರುವುದಾಗಿ ಹೇಳಲು ರಾಜಭವನಕ್ಕೆ ಹೋದನು.

ಸಂಕರ್ಷಣ-ವಾಸುದೇವರು ಯುದ್ಧ ಮಾಡುವ ಅಪೇಕ್ಷೆಯಿಂದ ಸರಪಳಿಯನ್ನು ಬಿಚ್ಚಿಬಿಟ್ಟಿದ್ದ ಗಜಬಂಧನ ಸ್ತಂಬದಿಂದ ಮುಕ್ತವಾಗಿದ್ದ ಎರಡು ಮದಗಜಗಳಂತೆಯೇ ತೋರುತ್ತಿದ್ದರು. ರಾಜಮಾರ್ಗದಲ್ಲಿ ಪಟ್ಟಣಿಗರು ಕೌತುಕದಿಂದ ನೋಡುತ್ತಾ ಗೌರವಿಸಿದರು. ಹೆಂಗಸರು ಉಲ್ಲಸಿತ ನೇತ್ರಗಳಿಂದ ಅವರನ್ನು ನಿರೀಕ್ಷಿಸಿದರು.

## ರಜೋಗ್ರಸ್ತರಜಕನ ವಧೆ

**ತೌ ತು ಮಾರ್ಗಗತಂ ದೃಷ್ಟ್ವಾ ರಜಕಂ ರಂಗಕಾರಕಮ್ ।**
**ಅಯಾಚೇತಾಂ ತತಸ್ತೌ ತು ವಾಸಾಂಸಿ ರುಚಿರಾಣಿ ವೈ ॥ 8 ॥**
**ರಜಕಃ ಸ ತು ಪ್ರಾಹ ಯುವಾಂ ಕಸ್ಯ ವನೇ ಚರೌ ।**
**ರಾಜವಾಸಾಂಸಿ ಯೌ ಮೌಢ್ಯಾತ್ ಯಾಚೇಥಾಂ ನಿರ್ಭಯಾವುಭೌ॥ 9 ॥**
**ಅಹಂ ಕಂಸಸ್ಯ ವಾಸಾಂಸಿ ನಾನಾದೇಶೋದ್ಧವಾನಿ ವೈ ।**
**ಕಾಮರಾಗಾಣಿ ಶತಶೋ ರಂಜಯಾಮಿ ವಿಶೇಷತಃ ॥ 10 ॥**

ರಾಜಮಾರ್ಗದಲ್ಲಿ ಬರುವಾಗ ಒಬ್ಬ ಬಟ್ಟೆಗಳಿಗೆ ಬಣ್ಣ ಹಾಕಿ ಮಡಿ ಮಾಡುವ **ರಜಕ**[1]ನು ಆನೆಯ ಮೇಲೆ ಕುಳಿತು ಬರುತ್ತಿದ್ದನು. ಅವನು ಕಂಸನ ಬಟ್ಟೆಗಳನ್ನು ಒಗೆದು ಮಡಿ ಮಾಡುವವನು. ಅವನ ಬಳಿ ತರತರದ ಪಟ್ಟಿ ಪೀತಾಂಬರಗಳಿದ್ದವು. ಅವನು ಗಿರಿಜಾದೇವಿಯ ವರದಿಂದ ದರ್ಪಿತನಾಗಿದ್ದ. ಭಗವಂತನು ಅವನನ್ನು ನೋಡಿ ಪೀತಾಂಬರ ಧರಿಸಿದ್ದರೂ ಅವನ ಯೋಗ್ಯತೆ ಬಹಿರಂಗಪಡಿಸಲೆಂದೇ ಹೀಗೆ ಕೇಳಿದನು – ರಜಕನೇ ! ನಮಗೆ ಯೋಗ್ಯವಾದ ರಾಜದುಸ್ತುಗಳು ಕೊಡುವಿಯಾ? ಅಗಸನಾದರೂ ಉಪಹಾಸಗರ್ಭಿತ ಧ್ವನಿಯಲ್ಲಿ ನೀವೆಲ್ಲಿಯ ಕಾಡು ಜನರೋ ಮಥುರೆಗೆ ಬಂದಿರುವಿರಿ. ಬೇರೆ ಬೇರೆ ದೇಶ ವಿದೇಶಗಳಿಂದ ಕಂಸ ಮಹಾರಾಜರು ತಮಗಾಗಿ ತರಿಸಿದ ಪೀತಾಂಬರಾದಿ ವಸ್ತ್ರಗಳನ್ನು ಬೇಡುವ ನೀವು ಅರಣ್ಯ

---

1. ರಜಕ : 1) ಆಸಾದ್ಯ ಕುಂಜರಗತಂ ರಜಕಂ ಯಯಾಚೇ ವಸ್ತ್ರಾಣಿ ಕಂಸದಯಿತಂ ಗಿರಿಜಾ ವರೇಣ । ಮೃತ್ಯುಜ್ಝಿತಂ ಸಪದಿತೇನ ದುರುಕ್ತಿವಿದ್ಧಃ ಪಾಪಂ ಕರಾಗ್ರ ಮೃದಿತಂ ವ್ಯನಯದ್ ಯಮಾಯ ॥ – *ತಾ.ನಿ. 13/97*

   2) ಏವಂ ವಿಕತ್ಥ ಮಾನಸ್ಯ ಕುಪಿತೋ ದೇವಕೀ ಸುತಃ ।
   ರಜಕಸ್ಯ ಕರಾಗ್ರೇಣ ಶಿರಃ ಕಾಯಾದಪಾಹರತ್ ॥ *–ಭಾಗ –10/41/37*

   3) ತತಸ್ತಸ್ಯ ದುರಾಲಾಪಂ ನಿಶಮ್ಯ ಸುದುರಾತ್ಮನಃ ।
   ಶಿರೋ ಜಹಾರ ಕಿಂ ಕಾರ್ಯಂ ಕರೋತ್ವಕೃತಕಿಲ್ಬಿಷಂ ॥ *–ಯ.ವಿ.11/4*

ಭಗವಂತನಿಗೆ ವಾಯುದೇವನೇ ವಸ್ತ್ರ. ವಸ್ತ್ರವಿಲ್ಲದ ಪೂಜೆ ನ್ಯೂನತಾ ದೋಷವುಳ್ಳದ್ದು. ವಸ್ತ್ರ ನೀಡದಿದ್ದ ರಜಕ ತಲೆ ಕಳೆದುಕೊಂಡ. ವಸ್ತ್ರ ನೀಡದ ನಾವು ವಾಯುವಿಗೆ ಭಗವಂತನಿಗೆ ಇರುವ ಸಂಬಂಧಜ್ಞಾನವಿಲ್ಲದ ಖಾಲಿ ತಲೆಯಾದೀತು. *–ಚ.ವೇ.*

ಮೂರ್ಖರೆಂದೆ ತೋರುತ್ತದೆ. ಬೆಟ್ಟ ಕಾಡುಗಳಲ್ಲಿ ಕಾಡುಮೃಗಗಳೊಂದಿಗೆ ಪಶುವಿನಂತೆ ಬೆಳೆದ ನಿಮಗೆ ಬದುಕಲಿಕ್ಕೆ ಇಷ್ಟವಿಲ್ಲವೆಂದೆ ತೋರುತ್ತದೆ. ನಾನಾರು ಗೊತ್ತೇ?

ನಾನು ಸಾಕ್ಷಾತ್ ಕಂಸರಾಜರ ಬಟ್ಟೆಗಳಿಗೆ ಅವನಿಚ್ಛಿಸಿದ ಬಣ್ಣ ಹಾಕಿ ಬೇಕಾದ ರಂಗು ರೂಪಗಳನ್ನು ತಂದುಕೊಡಬಲ್ಲ ರಾಜರಜಕನಿರುವೆನು. ಇನ್ನೊಂದು ಬಾರಿ ರಾಜವಸ್ತ್ರ ಕೇಳದರೆ ಜೀವವನ್ನೆ ಪಣವಾಗಿಡಬೇಕಾಗುತ್ತದೆ. ತೊಲಗಿರಿ ಇಲ್ಲಿಂದ ಎಂದು ಆರ್ಭಟಿಸಿದ.

### ರಜಕನ ಮೇಲೆ ಕೃಷ್ಣನ ಕೋಪ

**ತಸ್ಮೈ ಚುಕೋಪ ವೈ ಕೃಷ್ಣೋ ರಜಕಾಯಾಲ್ಪಮೇಧಸೇ ।**
**ಪ್ರಾಪ್ತಾರಿಷ್ಟಾಯ ಮೂರ್ಖಾಯ ಸೃಜತೇ ವಾಙ್ಮಯಂ ವಿಷಮ್ ॥ 11 ॥**
**ತಲೇನಾಶನಿಕಲ್ಪೇನ ಸ ತಂ ಮೂರ್ಧನ್ಯತಾಡಯತ್ ।**
**ಸ ಗತಾಸುಃ ಪಪಾತೋರ್ವ್ಯಾಂ ರಜಕೋ ವ್ಯಸ್ತ ಮಸ್ತಕಃ ॥ 12 ॥**
**ತಂ ಹತಂ ಪರಿದೇವಂತ್ಯೋ ಭಾರ್ಯಾಸ್ತಸ್ಯ ವಿಚುಕ್ರುಶುಃ ।**
**ತ್ವರಿತಂ ಮುಕ್ತಕೇಶ್ಯಶ್ಚ ಜಗ್ಮುಃ ಕಂಸನಿವೇಶನಮ್ ॥ 13 ॥**

ಅಗಸನ ವರ್ತನೆಯಿಂದ ಕೃಷ್ಣನಿಗೆ ಸಿಟ್ಟು ಬಂತು. ಈ ರಜಕನು ನನ್ನನ್ನು ಒದೆಯಲ್ಲಿಲ್ಲ, ಹೊಡೆಯಲಿಲ್ಲ, ಕೆಟ್ಟ ಮಾತುಗಳನ್ನಾಡಿರುವನು. ತಲೆಯಿಂದ ಮಾಡಿರುವ ಅಪರಾಧಕ್ಕೆ ತಲೆ ತೆಗೆಯುವುದೇ ಯುಕ್ತವೆಂದು ತಿಳಿದು ತನ್ನ ಕೈಯಿಂದ ತಲೆಗೆ ಒಂದು ಗುದ್ದಿದನು. ರಜಕನು ತಲೆ ಹೋಗಿ ನೆಲಕ್ಕುರುಳಿ ಅರೆಜೀವನಾದನು. ಅವನು ಸತ್ತದ್ದನ್ನು ನೋಡಿ ಅವನ ಸೇವಕರೆಲ್ಲರೂ ಓಡಿ ಹೋದರು. ರಜಕನ ಅನೇಕ ಹೆಂಡಂದಿರು ಹೆದರಿ ಕೆಟ್ಟ ದನಿಯಿಂದ ಕೂಗುತ್ತಾ ಕೂದಲುಗಳನ್ನು ಕೆದರಿಕೊಂಡು ದೂರು ಹೇಳಲು ಕಂಸನ ಮನೆಯ ಕಡೆ ಓಡಿದರು. ಕೃಷ್ಣನು ಮಡಿಬಟ್ಟೆಗಳ ಗಂಡು ಬಿಚ್ಚಿ, ತನಗೆ ಬೇಕಾದ ಬಟ್ಟೆಗಳನ್ನು ತೆಗೆದುಕೊಂಡು ಬಲರಾಮನಿಗೂ ನೀಡಿ, ಗೊಲ್ಲರಿಗೂ ಹಂಚಿದನು. ಉಳಿದ ಬಟ್ಟೆ ದಾರಿಯಲ್ಲಿ ಹಾಸಿ ನಡೆದಾಡಿದರು.

**ತಾವುಭೌ ಸುವಸನೌ ಜಗ್ಮತುಃ ಮಾಲ್ಯಕಾರಣಾತ್ ।**
**ವೀಥೀ ಮಾಲ್ಯಾಪಣಾನಾಂ ವೈ ಗಂಧಾಘ್ರಾತೌ ದ್ವಿಪಾವಿವ ॥ 14 ॥**

**ಗುಣಕೋ ನಾಮ ತತ್ರಾಸೀತ್ ಮಾಲ್ಯವೃತ್ತಿಃ ಪ್ರಿಯಂವದಃ ।**
**ಪ್ರಭೂತ ಮಾಲ್ಯಾಪಣವಾನ್ ಲಕ್ಷ್ಮೀವಾನ್ ಪ್ರಿಯದರ್ಶನಃ ॥ 15 ॥**

**ತಂ ಕೃಷ್ಣಃ ಶ್ಲಕ್ಷ್ಣಯಾ ವಾಚಾ ಮಾಲ್ಯಾರ್ಥಮಭಿಸೃಷ್ಟಯಾ ।**
**ದೇಹೀತ್ಯುವಾಚ ತತ್ಕಾಲೇ ಮಾಲಾಕಾರಮಕಾತರಮ್ ॥ 16 ॥**

ಅಲ್ಲಿಂದ ಬಲರಾಮಕೃಷ್ಣರು ಪುಷ್ಪಗಳಿಂದ ತಮ್ಮನ್ನು ಅಲಂಕರಿಸಿಕೊಳ್ಳಲು ಹೂವಿನಂಗಡಿಗಳ ಸಾಲಿನಲ್ಲಿ ಓಡಾಡಿದರು. ಅಲ್ಲಿ ವಿಧವಿಧವಾದ ಸುಗಂಧಿ ಹೂಗಳ ಸೌರಭ ಸಾರವನ್ನು ಆಘ್ರಾಣಿಸುತ್ತಾ ಗಜಗಳಂತೆ ಮುನ್ನಡೆಯುತ್ತಿದ್ದರು. ಅಲ್ಲಿ ಒಂದು ದೊಡ್ಡ ಹೂವಿನಂಗಡಿಯಲ್ಲಿ ಹೂವು ಹಾರಗಳನ್ನು ಮಾರುತ್ತಿದ್ದ ಗುಣಕನೆಂಬುವನು ಹರಿಭಕ್ತನಾದ ದ್ವಾರಪಾಲಕ ಸುಧಾಮನು. ಇವನು ಮೂಲದಲ್ಲಿ ಹರಿಗೃಹ ಮಾರ್ಜನ ಮಾಡುವುದು ಹಾಗೂ ಮಾಲೆ ಕಟ್ಟುವುದೇ ಕೆಲಸವಾಗಿತ್ತು. ಗುಣಕನು ಪ್ರಿಯಬಾಷಿಯಾಗಿದ್ದು ಸುಂದರನೂ ಆಗಿದ್ದನು. ಈ ಸಮಯದಲ್ಲಿ ಪುಷ್ಪಮಾಲೆಗಾಗಿ ಗುಣಕನನ್ನು ಸುಮಧುರವಾಣಿಯಿಂದ ಮಂದಹಾಸ ಬೀರುತ್ತಾ ಹೀಗೆಂದನು – ಗುಣಕನೇ, ನಮಗೆ ಧರಿಸಲು ಪುಷ್ಪಮಾಲೆ ಕೊಡಲಾರೆಯ? ಎಂದು. ಇದನ್ನು ಕೇಳಿದ ಅವರ ವರ್ಚಸ್ಸಿನಿಂದ ಇವರು ದೈವೀಪುರುಷರೆಂದು ತಿಳಿದು ಓಡಿ ಬಂದು ನಮಸ್ಕರಿಸಿ, ಆಸನದಲ್ಲಿ ಕುಳ್ಳಿರಿಸಿ, ಕಾಲು ತೊಳೆದು ಪುಷ್ಪಮಾಲೆ ಅರ್ಪಿಸಿದನು. ಗಂಧಹಚ್ಚಿ ತಾಂಬೂಲ ನಿಡಿದನು.

## ಗುಣಕನಿಗೆ ವರದಾನ

**ತಾಭ್ಯಾಂ ಪ್ರೀತೋ ದದೌ ಮಾಲ್ಯಂ ಪ್ರಭೂತಂ ಮಾಲ್ಯಜೀವನಃ ।**
**ಭವತೋಃ ಸ್ವಮಿದಂ ಚೇತಿ ಪ್ರೋವಾಚ ಪ್ರಿಯದರ್ಶನೌ ॥ 17 ॥**

**ಪ್ರೀತಃ ಸುಮನಸಾ ಕೃಷ್ಣೋ ಗುಣಕಾಯ ವರಂ ದದೌ ।**
**ಶ್ರೀಸ್ತ್ವಾಂ ಮತ್ ಸಂಭವಾ ಸೌಮ್ಯ ಧನೋಘೈರಭಿ ಪತ್ಸ್ಯತೇ ॥ 18 ॥**

ಅವರ ಮೇಲೆ ಪ್ರೀತನಾದ ಗುಣಕನು ಹಾರಾದಿಗಳನ್ನು ತಂದಿರಿಸಿ – ಸ್ವಾಮಿ ಇದೆಲ್ಲವೂ ನಿಮ್ಮದೆ. ಇದೆಲ್ಲ ನಿಮಗೆ ಅರ್ಪಿತವೆಂದನು.

ಅವನ ನಯ-ವಿನಯಗಳನ್ನು ನೋಡಿ ಸಂತುಷ್ಟನಾದ ಗೋವಿಂದನು ಅವನಿಗೆ ತನ್ನಲ್ಲಿ ನಿಶ್ಚಲ ಭಕ್ತಿಯನ್ನೂ, ತನ್ನ ಭಕ್ತರಲ್ಲಿ ಅಧಿಕ ಸ್ನೇಹವನ್ನೂ,

ಪ್ರಾಣಿಗಳಲ್ಲಿ ದಯೆಯನ್ನೂ ವರವಾಗಿ ನೀಡಿ, ನನ್ನನ್ನು ಹೂಹಾರಗಳಿಂದ ಸಂಪದ್ಯುಕ್ತನನ್ನಾಗಿ ಮಾಡಿದ ನಿನ್ನ ಮನೆಯಲ್ಲಿ ವಂಶಪಾರಂಪರ್ಯವಾಗಿ ಸಿರಿಸಂಪತ್ತುಗಳಿಂದ ತುಂಬಿ ಹೋಗುವುದು ಎಂದು ಅನುಗ್ರಹಿಸಿದನು.[2]

ಮಾಲಾಕಾರನಾದರೂ ಆ ಅಮೋಘ ವರವನ್ನು ಹೊಂದಿ ಶಾಂತಭಾವದಿಂದ ತಲೆ ತಗ್ಗಿಸಿ ವಿನೀತನಾಗಿ ನಿಂತನು. ಶ್ರೀಕೃಷ್ಣ ಚರಣಗಳಲ್ಲಿ ತಲೆಯಿಟ್ಟು ನಮಿಸಿದನು.

## [3]ತ್ರಿವಕ್ರೆಯ ಉದ್ಧಾರ

**ವಸುದೇವಸುತೌ ತೌ ಚ ರಾಜಮಾರ್ಗಗತಾವುಭೌ ।**
**ಕುಬ್ಜಾಂ ದದೃಶತುಃ ಭೂಯಃ ಸಾನುಲೇಪನಭಾಜನಾಮ್ ॥ 19 ॥**
**ತಮಾಹ ಕೃಷ್ಣಃ ಕುಬ್ಜೇತಿ ಕಸ್ಯೇದಮನುಲೇಪನಂ ।**
**ನಯಸಿ ಅಂಬುಜಪತ್ರಾಕ್ಷಿ ಕ್ಷಿಪ್ರಮಾಖ್ಯಾತುಮರ್ಹಸಿ ॥ 20 ॥**
**ಸಸ್ಮಿತಾ ಸಂಮುಖೀ ಭೂತ್ವಾ ಪ್ರತ್ಯುವಾಚಾಂಬುಜೇಕ್ಷಣಮ್ ।**
**ಕೃಷ್ಣಂ ಜಲದ ಗಂಭೀರಂ ವಿದ್ಯುತ್ ಕುಟಿಲಗಾಮಿನೀ ॥ 21 ॥**

---

2. ಗುಣಕನಿಗೆ ವರ:
ಸೋಽಪಿ ವವ್ರೇಽಚಲಾಂ ಭಕ್ತಿಂ ತಸ್ಮಿನ್ನೇವಾಖಿಲಾತ್ಮನಿ ।
ತದ್ಭಕ್ತೇಷು ಚ ಸೌಹಾರ್ದಂ ಭೂತೇಷು ಚ ದಯಾಂ ಪರಾಂ ॥
ಇತಿ ತಸ್ಮೈ ವರಂ ದತ್ವಾ ಶ್ರಿಯಂ ಚಾನ್ವಯವರ್ಧಿನೀಮ್ ॥ *–ಭಾಗ 10/41/51–52*

3. ತ್ರಿವಕ್ರಾ : ತ್ರಿವಕ್ರೆಯು ಮೂಲತಃ ಪಿಂಗಲಾಯೆಂಬ ಅಪ್ಸರಾ ಸ್ತ್ರೀ. ವಿದೇಹ ನಗರದಲ್ಲಿ ವೇಶ್ಯೆಯಾಗಿ ಜೀವನ ನಡೆಸುತ್ತಿದ್ದಳು. ಕೆಲವು ಕಾಲಾನಂತರ ಶ್ರೀಹರಿಯೇ ತನಗೆ ಪತಿಯೆಂದು ಪರಪುರುಷರನ್ನು ಇದುವರೆಗೆ ಸೇವಿಸಿದ್ದು ತಪ್ಪೆಂದು ತಿಳಿದು ಅನನ್ಯಭಕ್ತಿ ಮಾಡಿದಳು. ಈ ಜನ್ಮದ ಮೊದಲು ಒಬ್ಬ ಬ್ರಾಹ್ಮಣನ ಪುತ್ರಿಯಾಗಿದ್ದು ಅಕಾಲ ಮರಣಕ್ಕೆ ತುತ್ತಾದಳು. ಇವಳನ್ನು ಯುವಕರು ನಾಲ್ಕು ಮಂದಿ ಎತ್ತಲು ಪರಪುರುಷರ ಸಂಪರ್ಕದಿಂದ ಎಚ್ಚರಿಕೆಯಾಗಿ ಪರಪುರಷರ ಸಂಪರ್ಕದಿಂದಾಗುವ ಆನಂದ ತಿಳಿದಳು. ಆದರೆ ಕೂಡಲೇ ಪ್ರಾಣಬಿಟ್ಟಳು. ಸಾಯುವಾಗ ಪರಪುರುಷ ಸಂಪರ್ಕ ಇಚ್ಛಿಸಿದ ಅವಳು ದೇಹ ಮಾರಿಕೊಳ್ಳುವ ವೇಶ್ಯೆಯಾದಳು. ಮೂಲತಃ ಅಪ್ಸರೆಯಾದ ಇವಳು ದೇಹ ಮಾರಿಕೊಂಡದ್ದಕ್ಕಾಗಿ ತ್ರಿವಕ್ರೆಯಾಗಿದ್ದಳು. ಅವಳ ಭಕ್ತಿ ಹಾಗೂ ಗಂಧ ದಾನದಿಂದ ಶ್ರೀಕೃಷ್ಣನು ಸುಂದರಿಯನ್ನಾಗಿ ಮಾಡಿದ.

ರಾಮಕೃಷ್ಣರಿಬ್ಬರೂ ರಾಜಮಾರ್ಗದಲ್ಲಿ ಸಂಚರಿಸುತ್ತಾ ಇರುವಾಗ ಗಂಧದ ಕರಡಿಗೆಯನ್ನು ಕೈಯ್ಯಲ್ಲಿ ಧರಿಸಿ ಹೋಗುತ್ತಿರುವ ಕುಬ್ಜೆಯನ್ನು ನೋಡಿದರು. ಅವಳು ಬಿಲ್ಲಿನಂತೆ ಮೂರು ಕಡೆ ವಕ್ರವಾಗಿದ್ದಳು. ಕಮಲನಯನೇ! ಈ ಗಂಧವನ್ನು ಯಾರಿಗಾಗಿ ಧರಿಸಿರುವೆ ಎಂದನು. ಮಿಂಚಿನಂತೆ ವಕ್ರಗತಿಯಲ್ಲಿ ನಡೆಯುತಿದ್ದ ಕುಬ್ಜೆಯು ಮುಗುಳ್ನಗುತ್ತಾ ಕಮಲಪತ್ರಾಕ್ಷನೇ ! ನಾನು ಈ ಗಂಧವನ್ನು ರಾಜಕಂಸನ ಸ್ನಾನಗೃಹಕ್ಕೆ ಒಯ್ಯುತ್ತಿದ್ದೇನೆ. ನಿನ್ನನ್ನು ನೋಡಿದೊಡನೆಯೆ ನಾನು ವಿಸ್ಮಿತಳಾಗಿದ್ದೇನೆ. ನಾನು ನಿನಗಾಗಿಯೇ ಕಾಯುತ್ತಿರುವೆನು. ನೀನು ನನ್ನ ಹೃದಯವಲ್ಲಭನಾಗಿರುವಿ. ನಾನು ನಿನಗಾಗಿಯೇ ಕಾಯುತ್ತಿರುವೆನು. ನೀನು ನನ್ನ ಹೃದಯವಲ್ಲಭನಾಗಿರುವಿ. ಆದರೆ ನಾನಾರೆಂದು ನಿಮಗೆ ತಿಳಿಯದು. ನೀನು ಈ ಊರಿಗೆ ಹೊಸಬನಿರಬೇಕು. ನಾನಾದರೂ ಕಂಸನಿಗೆ ಅತಿಪ್ರಿಯಳು. ಗಂಧ ಸಿದ್ಧತೆಗಾಗಿ ನಾನು ನಿಯಮಿತಳಾಗಿದ್ದೇನೆ.

**ತಾಮುವಾಚ ಹಸಂತೀಂ ತು ಕೃಷ್ಣಃ ಕುಬ್ಜಾಮವಸ್ಥಿತಾಮ್ ।**
**ಆವಯೋಃ ಗಾತ್ರ ಸದೃಶಂ ದೀಯತಾಮನುಲೇಪನಮ್ ॥ 22 ॥**

**ವಯಂ ಹಿ ದೇಶಾತಿಥಯೋ ಮಲ್ಲಾಃ ಪ್ರಾಪ್ತಾಃ ವರಾನನೇ ।**
**ದ್ರಷ್ಟುಂ ಧನುರ್ಮಹದ್ ದಿವ್ಯಂ ರಾಷ್ಟ್ರೇ ಚೈವ ಮಹರ್ಧಿಮತ್ ॥ 23 ॥**

ಮಾನಿನಿ! ನಾವು ಈ ದೇಶದ ಅತಿಥಿಗಳಾಗಿ ಬಂದಿರುವ ಜಗಜ್ಜೆಟ್ಟಿಗಳು. ಸಂಪತ್ ಸಮೃದ್ಧ ಈ ದೇಶವನ್ನೂ, ಮಹಾಧನಸ್ಸನ್ನೂ ನೋಡಲು ಬಂದಿದ್ದೇವೆ. ನಮ್ಮ ಶರೀರಕ್ಕೆ ಅನುರೂಪವಾದ ಅಂಗರಾಗವನ್ನು ಕೊಡುವವಳಾಗು. ಕುಬ್ಜೆಯು ನಿನ್ನ ದರ್ಶನದಿಂದಲೇ ನನಗೆ ಬಹಳ ಸಂತೋಷವಾಗಿದೆ. ನಾನು ಕಂಸನಿಗೆ ಒಯ್ಯುತ್ತಿರುವ ಈ ಗಂಧಾನುಲೇಪನವನ್ನು ನೀನೆ ಸ್ವೀಕರಿಸು.

### ಗಂಧಧಾರಣೆ – ಕುಬ್ಜತೆ ನಿವಾರಣೆ

**ತಾವುಭೌ ಅನುಲಿಪ್ತಾಂಗೌ ಚಾರುಗಾತ್ರೌ ವಿರೇಜತುಃ ।**
**ತೀರ್ಥಗೌ ಪಂಕದಿಗ್ಧಾಂಗೌ ಯಮುನಾಯಾಂ ಯಥಾ ವೃಷೌ ॥ 24 ॥**

**ತಾಂ ಚ ಕುಬ್ಜಾಂ ಸ್ಥಗೋರ್ಮಧ್ಯೇ ದ್ವ್ಯಂಗುಲೇನಾಗ್ರಪಾಣಿನಾ ।**
**ಶನೈಃ ಸಂಪೀಡಯಾಮಾಸ ಕೃಷ್ಣೋ ಲೀಲಾವಿಧಾನವಿತ್ ॥ 25 ॥**

ಕುಬ್ಜೆಯ ಪ್ರಾರ್ಥನೆಯಂತೆ ಬಲರಾಮಕೃಷ್ಣರು ರಾಜಯೋಗ್ಯ ಅಂಗರಾಗವನ್ನು ಮೈಗೆಲ್ಲ ಹಚ್ಚಿಕೊಂಡರು. ಚಾರುಗಾತ್ರರಾದ ಇವರು ಮತ್ತೂ ಚೆಲುವರಾದರು. ಯಮನೆಯ ಕೆಸರಿನಲ್ಲಿ ಮುಳುಗೆದ್ದ ಎರಡು ಎತ್ತಿನಂತೆ ಕಾಣಿಸುತ್ತಿದ್ದರು. ಆಗ ಲೀಲಾವಿನೋದ ರಸಿಕನಾದ ಶ್ರೀಕೃಷ್ಣನು ಆ ಕುಬ್ಜೆಯ ಬೆನ್ನ ಮೇಲಿನ ಗೂನನ್ನು ತನ್ನ ಮುಂಗೈಯ ಎರಡು ಬೆರಳುಗಳಿಂದ ಮೆಲ್ಲನೆ ಒತ್ತಿ ಮೆತ್ತಗೆ ಹೊಡೆದನು.

ಡುಬ್ಬವು ಒಳಗೆ ಹೋಯಿತು. ನಂತರ ತನ್ನ ಕಾಲಿಂದ ಕುಬ್ಜೆಯ ಕಾಲನ್ನೊತ್ತಿ, ತನ್ನ ಎರಡೂ ಬೆರಳುಗಳಿಂದ ಗಲ್ಲವನ್ನು ಹಿಡಿದೆತ್ತಿದ. ಅವಳು ನೆಟ್ಟಗಾದಳು. ಹೀಗೆ ತ್ರಿಭಂಗಿಯನ್ನು ಸುಂದರಾಕೃತಿಯಾಗಿ ಮಾಡಿದ. ಇದರಿಂದಾಗಿ ಅವಳ ಗೂನೂ ಮಾಯವಾಗಿ ವನಲತೆಯಂತೆ ಉದ್ದವಾಗಿ ಎದ್ದು ನಿಲ್ಲುವುದಕ್ಕೂ, ನೇರವಾಗಿ ನಡೆಯಲ್ಲಕ್ಕೂ ತನಗೆ ಬರುತ್ತಿರುವುದನ್ನು ನೋಡಿ ಆನಂದ ಹೊಂದಿದಳು. ಇವನ ಚಮತ್ಕಾರ ನೋಡಿ ನಸುನಕ್ಕಳು. ಪ್ರಣಯ ತೋರಿದಳು.

**ಕ್ವ ಯಾಸ್ಯಸಿ ಮಯಾ ರುದ್ಧಃ ಕಾಂತ ತಿಷ್ಠ ಗೃಹಾಣ ಮಾಮ್ ।**
**ತೌ ಜಾತಹಾಸೌ ಅನ್ಯೋನ್ಯಂ ಸತಲಾಕ್ಷೇಪಮವ್ಯಯೌ ।**
**ವೀಕ್ಷ್ಯಮಾಣೌ ಪ್ರಹಸಿತೌ ಕುಬ್ಜಾಯಾಃ ಶ್ರುತ ವಿಸ್ತರೌ ॥ 26 ॥**

ಪ್ರಿಯತಮನೇ, ಪ್ರಣಯ ಪಾಶದಿಂದ ನಾನು ನಿನ್ನನ್ನು ನನ್ನ ಹೃದಯದಲ್ಲಿ ಕಟ್ಟಿ ಹಾಕಿರುವಾಗ ಎಲ್ಲಿಗೆ ಹೋಗುವೆ. ನಿಲ್ಲು ನನ್ನನ್ನು ಸ್ವೀಕರಿಸು ಎಂದು ವಯ್ಯಾರದಿಂದ ಬಳಕುತ್ತಾ ಹೇಳಿದಳು. ಈ ಕುಬ್ಜೆಯ ಮಾತನ್ನು ಕೇಳಿ ರಾಮ-ಕೃಷ್ಣರಿಬ್ಬರೂ ಚಪ್ಪಾಳೆ ಹಾಕುತ್ತಾ ಒಬ್ಬರಿಗೊಬ್ಬರು ಕೈ ಹಿಡಿದು ನಕ್ಕರು. ಅವಳ ಪೂರ್ವೇತಿಹಾಸ ತಿಳಿದ ಕೃಷ್ಣ - ಸಮಯ ಒದಗಿದಾಗ ನಿನ್ನಲ್ಲಿಗೆ ಬರುತ್ತೇನೆ ಎಂದು ಮಂದಹಾಸ ಬೀರುತ್ತಾ ಸಂಕೇತದ ಮೂಲಕ ತಿಳಿಸಿ ಅವಳಿಂದ ಬೀಳ್ಕೊಟ್ಟನು.

ಕುಬ್ಜೆಯಿಂದ ಮುಕ್ತರಾದ ಬಲರಾಮ ಕೃಷ್ಣರು ಕಂಸನ ಅರಮನೆಯನ್ನು ಪ್ರವೇಶಿಸಿದರು. ಅವರ ಭಾವ ಚೇಷ್ಟೆ ಯಾವುದೂ ತಿಳಿಯುತ್ತಿರಲಿಲ್ಲ. ಹಿಮಾಲಯದ ಅರಣ್ಯದಲ್ಲಿ ಮದಿಸಿದ ಸಿಂಹಗಳಂತೆ ತೋರುತ್ತಿದ್ದರು. ತಾವು ಬಂದ ಉದ್ದೇಶವನ್ನು ಪ್ರಕಟಗೊಳಿಸದೆ ಗೂಢವಾಗಿದ್ದರು.

## ರಾಮಕೃಷ್ಣರ ಆಯುಧಾಗಾರ ಪ್ರವೇಶ

ಧನುಃ ಶಾಲಾಂ ಗತೌ ತತ್ರ ಬಾಲಾವಪರಿತರ್ಕಿತೌ ।
ದಿದೃಕ್ಷಂತೌ ಮಹತ್ತತ್ರ ಧನುರಾಯೋಗ ಭೂಷಿತಮ್ ॥ 27 ॥
ಪಪ್ರಚ್ಛತುಶ್ಚ ತೌ ವೀರೌ ಆಯುಧಾಗಾರಿಕಂ ತದಾ ।
ಭೋಃ ಕಂಸಧನುಷಾಂ ಪಾಲ! ಶ್ರೂಯತಾಮಾವಯೋಃ ವಚಃ ॥ 28 ॥
ಕತರತ್ ತದ್ ಧನುಃ ಸೌಮ್ಯ! ಮಹೋಽಯಂ ಯಸ್ಯ ವರ್ತತೇ ।
ಆಯೋಗ ಭೂತಂ ಕಂಸಸ್ಯ ದರ್ಶಯಸ್ವ ಯದೀಚ್ಛಸಿ ।
ಸ ತಯೋರ್ದರ್ಶಯಾಮಾಸ ತದ್ ಧನುಃ ಸ್ತಂಭ ಸನ್ನಿಭಮ್ ॥ 29 ॥

ರಾಮಕೃಷ್ಣರಿಬ್ಬರೂ ಅನಿರೀಕ್ಷಿತವಾಗಿ ಶಿವಧನುಸ್ಸಿರುವ ಆಯುಧಾಗಾರವನ್ನು ಪ್ರವೇಶಿಸಿದರು. ಧನುಸ್ಸಾದರೂ ಪುಷ್ಪಮಾಲೆಗಳಿಂದ ಅಲಂಕೃತವಾಗಿತ್ತು. ಅವರು ಶಸ್ತ್ರಾಗಾರ ರಕ್ಷಕನನ್ನುದ್ದೇಶಿಸಿ ಧನುಸ್ ಪರಿಪಾಲಕನೇ! ಈ ಆಯುಧಾಗಾರದಲ್ಲಿರುವ ಯಾವ ಧನುಸ್ಸಿಗಾಗಿ ಈ ಧನುರ್ಯಾಗ ನಡೆಯಲಿದೆಯೋ ಆ ಧನಸ್ಸು ಎಲ್ಲಿದೆ? ಅದು ಯಾರಿಂದ ಬಂದದ್ದು ಹೇಳು. ನಿನಗೆ ಅಭ್ಯಂತರವಿಲ್ಲವಾದರೆ ನೀನು ಇಷ್ಟಪಟ್ಟರೆ ಅದನ್ನು ನಮಗೆ ತೋರಿಸು ಎಂದರು. ಆಗ ಶಸ್ತ್ರಾಗಾರಿಕನು ಅವರನ್ನು ಕರೆದುಕೊಂಡು ಹೋಗಿ ಅದ್ಭುತವಾದ ಬೃಹತ್‌ಸ್ತಂಭದಂತಿದ್ದ ಶಿವಧನುಸ್ಸನ್ನು ತೋರಿಸಿದನು.

## ಶಿವಧನುರ್ಭಂಗ

ಅನಾರೋಪ್ಯಮಸಂಭೇದ್ಯಂ ದೇವೈರಪಿ ಸವಾಸವೈಃ ।
ತದ್ ಗೃಹೀತ್ವಾ ತದಾ ಕೃಷ್ಣಃ ತೋಲಯಾಮಾಸ ವೀರ್ಯವಾನ್ ॥ 30 ॥
ಆರೋಪಯಾಮಾಸ ಬಲೀ ನಾಮಯಾಮಾಸ ಚಾಸಕೃತ್ ।
ಆನಾಯ್ಯಮಾನಂ ಕೃಷ್ಣೇನ ಪ್ರಕರ್ಷಾದುರಗೋಪಮಮ್ ॥ 31 ॥
ದ್ವಿಧಾಭೂತಮಭೂನ್ ಮಧ್ಯೇ ಧನುರಾಯೋಗ ಭೂಷಿತಮ್ ।
ಭಂಕ್ತ್ವಾ ತು ತದ್ ಧನುಃಶ್ರೇಷ್ಠಂ ಕೃಷ್ಣಃ ತ್ವರಿತವಿಕ್ರಮಃ ।
ನಿಶ್ಚಕ್ರಾಮ ಮಹಾವೇಗಃ ಸ ಚ ಸಂಕರ್ಷಣೋ ಯುವಾ ॥ 32 ॥

ಧನಸ್ಸನ್ನು ನೋಡಿದ ಕೃಷ್ಣನು – ಇಂದ್ರ ಚಂದ್ರಾದಿ ದೇವತೆಗಳಿಗೂ ಹೆದೆಯೇರಿಸಲಿಕ್ಕಾಗಲೀ, ಬಾಣ ಹೊಡೆಯುವುದಕ್ಕಾಗಲೀ ಅಸಾಧ್ಯವಾದ ದೀರ್ಘದಂಡದಂತಿರುವ ಆ ಮಹಾಧನುಸ್ಸನ್ನು ಅನಾಯಾಸದಿಂದೆತ್ತಿ ತನ್ನ ಎರಡೂ ತೋಳುಗಳಿಂದ ತೂಗಿ ನೋಡಿದನು.

ದೈತ್ಯಕುಲ ಪೂಜಿತವಾದ ಆ ಮಹಾಧನುಸ್ಸನ್ನು ತನಗಿಚ್ಛಾನುಸಾರವಾಗಿ ಎತ್ತಿದ ನಂತರ ಅದನ್ನು ಹಲವಾರು ಬಾರಿ ಬಗ್ಗಿಸಿ ಹೆದೆಯೇರಿಸಿದನು. ಸರ್ಪದಂತಿರುವ ಪುಷ್ಪಗಳಿಂದ ಅಲಂಕೃತವಾದ ಆ ಧನುಸ್ಸು ಬಲವಾಗಿ ಬಗ್ಗಿಸಲ್ಪಡುತ್ತಿರಲು ಎರಡು ಭಾಗವಾಗಿ ಮುರಿದು ಕೆಳಗೆ ಬಿತ್ತು.

ಹೀಗೆ ಅನಾಯಾಸವಾಗಿ ಧನಸ್ಸನ್ನು ಮುರಿದು ವೇಗವಾಗಿ ಅಲ್ಲಿಂದ ಹೊರಟು ಹೋದನು. ಬಲರಾಮನೂ ಅವನ ಹಿಂದೆ ಹೋದನು.

**ಧನುಷಃ ಭಂಗನಾದೇನ ವಾಯು ನಿರ್ಘೋಷ ಕಾರಿಣಾ ।**
**ಚಚಾಲಾಂತಃ ಪುರಂ ಸರ್ವಂ ದಿಶಶ್ಚೈವ ಪುಪೂರಿರೇ ॥ 33 ॥**

**ವೇಗೇನಾಯುಧ ಪಾಲಸ್ತು ಗಚ್ಛನ್ ಸಂಭ್ರಾತಮಾನಸಃ ।**
**ಶ್ರೂಯತಾಂ ಮಮ ವಿಜ್ಞಾಪ್ಯ ಮಾಶ್ಚರ್ಯಂ ಧನುಷೋ ಗೃಹೇ ॥ 34 ॥**

**ನಿರ್ವೃತ್ತಮಸ್ಮಿನ್ ಕಾಲೇ ಯಜ್ಞಗತಃ ಸಂಭ್ರಮೋಪಮಮ್ ।**
**ನರೌ ಕಸ್ಯಾಪ್ಯಸದೃಶೌ ಶಿಖಾವಿತತ ಮೂರ್ಧಜೌ ।**
**ದೇವಪುತ್ರೋಪಮೌ ವೀರೌ ಬಾಲಾವಿವ ಹುತಾಶನೌ ॥ 35 ॥**

**ತಯೋರೇಕಂಸ್ತು ಪದ್ಮಾಕ್ಷಃ ಶ್ಯಾಮಃ ಪೀತಾಂಬರಸ್ರಜಃ ।**
**ಜಗ್ರಾಹ ತದ್ಧನೂರತ್ನಂ ದುರ್ಗ್ರಾಹ್ಯಂ ದೇವತೈರಪಿ ॥ 36 ॥**

**ಆಕೃಷ್ಯಮಾಣಂ ತತ್ತೇನ ಬಿಭ್ರಾಣಂ ಬಾಹುಶಾಲಿನಾ ।**
**ಮುಷ್ಠಿದೇಶೇ ವಿಕೂಜಿತ್ವಾ ದ್ವಿಧಾಭೂತಮಭಜ್ಯತ ॥ 37 ॥**

ಆ ಬಿಲ್ಲು ಮುರಿದು ಬೀಳುವಾಗ ಬ್ರಹ್ಮಾಂಡವೆ ಸ್ಫೋಟವಾದಂತೆ ಭಯಂಕರವಾದ ಚಟಚಟ ಶಬ್ಧವೇರ್ಪಟ್ಟಿತು. ಅದರಿಂದ ಕಂಸನ ಅರಮನೆ ಅಂತಃಪುರಗಳೆಲ್ಲ ನಡುಗಿ ಹೋದವು. ಸಕಲದಿಕ್ಕುಗಳಲ್ಲಿಯೂ ಆ ಶಬ್ಧವು ಪ್ರತಿಧ್ವನಿತವಾಯಿತು. ಕಂಸನ ಧೈರ್ಯೋತ್ಸಾಹಗಳೆಲ್ಲ ಅಡಗಿ ಹೋದವು.

ಆಗ ಆಯುಧ ಪಾಲಕನು ಓಡೋಡುತ್ತಾ ಕಂಸನ ಬಳಿ ಬಂದು ಭಯ ಕಾತರತೆಯಿಂದ ಕಣ್ಣು ತಿರುಗಿಸುತ್ತಾ ಏದುಸಿರಿಡುತ್ತಾ ಹೀಗೆ ಹೇಳಿದನು.

ಮಹಾರಾಜ! ಆಯುಧಾಗಾರದಲ್ಲಿ ಇದೀಗ ನಡೆದ ಆಶ್ಚರ್ಯವೊಂದನ್ನು ಕೇಳು. ಕೆಲವು ಸಮಯದ ಹಿಂದೆ ನೀಲಾಂಬರಧಾರಿಯಾದ ಒಬ್ಬ ಬಿಳಿ ಮನುಷ್ಯ ಪೀತಾಂಬರಧಾರಿಯಾದ ಮತ್ತೊಬ್ಬ ನೀಲಿ ಮನುಷ್ಯರು ಯಾರಿಗೂ ಗೊತ್ತಾಗದಂತೆ ಆಯುಧಾಗಾರ ಪ್ರವೇಶಿಸಿದರು. ಕಾಮರೂಪಿಗಳಂತೆ ಗಗನದಿಂದ ಇಳಿದು ಬಂದವರಂತೆ ಒಮ್ಮೇಲೆ ಆಯುಧಾಗಾರದಲ್ಲಿ ಬಂದು ನಿಂತರು.

ಅವರಲ್ಲಿ ಪೀತಾಂಬರಧಾರಿಯು ದೇವದೈತ್ಯರಿಗೂ ಎತ್ತಲಾಗದ ಆ ದಿವ್ಯ ಶಿವ ಧನುಸ್ಸನ್ನು ಅನಾಯಾಸವಾಗಿ ಎತ್ತಿ ಹೆದೆಯೇರಿಸಿ ಲೀಲೆಯಿಂದ ಜಗ್ಗಿದಾಗ ಉಕ್ಕಿನ ಆ ಧನುಸ್ಸು ಮಧ್ಯದಲ್ಲಿಯೇ ಮುರಿದು ಎರಡು ತುಂಡಾಯಿತು. ಇದರಿಂದುಂಟಾದ ಭಯಂಕರ ಶಬ್ಧದಿಂದ ಭೂಮ್ಯಾಕಾಶಗಳೆಲ್ಲವೂ ಕಂಪಿಸಿವೆ. ಅದನ್ನು ಕಂಡು ಅಚ್ಚರಿಯಿಂದ ಹುಚ್ಚಾಗಿ ನಿಮ್ಮ ಸನ್ನಿಧಿಗೆ ಆ ಸಮಾಚಾರ ತಿಳಿಸಲು ಓಡಿಬಂದೆನು. ಅಂಜನಾಚಲದಂತಿದ್ದ ಆ ತರುಣನೆ ಮದ್ದಾನೆಯು ಬಾಳೆಕಂಬವನ್ನು ಮುರಿಯುವಂತೆ ಸಹಜವಾಗಿಯೇ ಧನುಸ್ಸನ್ನು ಮುರಿದು ಸೋದರನೊಂದಿಗೆ ವಾಯುವೇಗದಿಂದ ಹೊರಟು ಹೋದನು.

**ಶ್ರುತ್ವೈವ ಧನುಷೋ ಭಂಗಂ ಕಂಸೋ ವಿದಿತ ವಿಸ್ತರಃ ।**
**ವಿಸೃಜ್ಯಾಯುಧಪಾಲಂ ವೈ ಪ್ರವಿವೇಶ ಗೃಹೋತ್ತಮಮ್ ॥ 38 ॥**

ಜನಮೇಜಯನೇ, ಕಂಸನು ಧನುರ್ಭಂಗದ ವಾರ್ತೆಯನ್ನು ವಿಸ್ತಾರವಾಗಿ ಅವನಿಂದ ಕೇಳಿ ತಿಳಿದು ಆಯುಧಪಾಲನನ್ನು ಬೀಳ್ಕೊಟ್ಟು ತನ್ನ ಅರಮನೆಯನ್ನು ಪ್ರವೇಶಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶಿವಧನುರ್ಭಂಗೋನಾಮವೆಂಬಲ್ಲಿ
ಇಪ್ಪತ್ತೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

विष्णुपर्व 28 विष्णुपर्व

# ಅಥ ಅಷ್ಟಾವಿಂಶೋಽಧ್ಯಾಯಃ

## ಕಂಸನ ಚಿಂತೆ

*ವೈಶಂಪಾಯನ ಉವಾಚ –*

**ಸ ಚಿಂತಯಿತ್ವಾ ಧನುಷೋ ಭಂಗಂ ಭೋಜವಿವರ್ಧನಃ ।**
**ಬಭೂವ ವಿಮನಾ ರಾಜಾ ಚಿಂತಯನ್ ಭೃಶದುಃಖಿತ ॥ 1 ॥**
**ಕಥಂ ಬಾಲೋ ವಿಗತಿಭೀಃ ಅವಮತ್ಯ ಮಹಾಬಲಮ್ ।**
**ಪ್ರೇಕ್ಷ್ಯಮಾಣಸ್ತು ಪುರುಷೈಃ ಧನುರ್ಭಂಕ್ತ್ವಾ ವಿನಿರ್ಗತಃ ॥ 2 ॥**
**ಯಸ್ಯಾರ್ಥೇ ದಾರುಣಂ ಕರ್ಮ ಕೃತಂ ಲೋಕವಿಗರ್ಹಿತಮ್ ।**
**ಪಿತೃ ಸ್ವಸ್ರಾತ್ಮಜಾನ್ ವೀರಾನ್ ಷಡೇವಾಹಂ ನ್ಯಪೋಥಯಮ್ ॥ 3 ॥**
**ದೈವಂ ಪುರುಷಕಾರೇಣ ನ ಶಕ್ಯಮತಿವರ್ತಿತುಮ್ ।**
**ನಾರದೋಕ್ತಂ ಚ ವಚನಂ ನೂನಂ ಮಹ್ಯಮುಪಸ್ಥಿತಮ್ ॥ 4 ॥**

ಜನಮೇಜಯನೇ, ಭೋಜವಂಶೀಯನಾದ ಕಂಸನು ಧನುರ್ಭಂಗದ ಅಪಮಾನಕರವಾದ ವಿಚಾರವನ್ನು ದೂತನಿಂದ ಕೇಳಿ ಅವನ ತಾಪ ಚಿಂತೆಗಳು ಹೆಚ್ಚಾದವು. ಚಿಕ್ಕ ಬಾಲಕನು ಪ್ರಬಲವಾದ ನನ್ನ ಮಹಾಬಲನಾದ ರಕ್ಷಕನನ್ನು ಕಡೆಗಣಿಸಿ ಹಲವಾರು ರಕ್ಷಣಾದಳದವರು ನೋಡುತ್ತಿರುವಾಗಲೇ ಅಸ್ತ್ರಾಗಾರದಲ್ಲಿ ನಿರಾತಂಕವಾಗಿ ಪ್ರವೇಶಿಸಿ, ಮಹಾಧನುಸ್ಸನ್ನು ಮುರಿದು ಹಾಕಿ ಅಲ್ಲಿಂದ ಹೊರಟು ಹೋದನೆಂದು ಚಿಂತಾಕ್ರಾಂತನಾದನು.

ಯಾವ ಶ್ರೀಕೃಷ್ಣನನ್ನು ಕೊಲ್ಲಲೆಂದು ನಾನು ಲೋಕನಿಂದ್ಯವಾದ ಹೀನಕಾರ್ಯ ಮಾಡಿದೆನೋ, ಯಾವ ತಂದೆ ತಂಗಿಯ ಆರು ಮಂದಿ ವೀರ ಮಕ್ಕಳನ್ನು ಶಿಲೆಗೆ ಹೊಡೆದು ಕೊಂದೆನೋ ಆ ಬಾಲಕನೇ ಈ ಹುಡುಗನಾಗಿದ್ದಾನೆ.

ದೈವಸಂಕಲ್ಪವನ್ನು ಪುರುಷ ಪ್ರಯತ್ನದಿಂದ ಅತಿಕ್ರಮಿಸುವುದು ಅಸಾಧ್ಯವೇ ಸರಿ. ನಾರದರು ನನಗೆ ಈ ಹಿಂದೆ ಹೇಳಿದ್ದ ಮಾತುಗಳೆಲ್ಲ ಇಂದು ಸತ್ಯವಾಗುತ್ತಿವೆ.

**ಏವಂ ರಾಜಾ ವಿಚಿಂತ್ಯಾಥ ನಿಷ್ಕ್ರಮ್ಯ ಸ್ವಗೃಹೋತ್ತಮಾತ್ ।**
**ಪ್ರೇಕ್ಷಾಗಾರಂ ಜಗಾಮಾಶು ಮಂಚಾನಾಮವಲೋಕಕಃ ॥ 5 ॥**

ಹೀಗೆ ಯೋಚಿಸಿದ ಕಂಸನು ತನ್ನ ಮನೆಯಿಂದ ಹೊರಟು ರಂಗಶಾಲೆಗೆ ಬಂದನು. ಪ್ರೇಕ್ಷಾಗಾರವು ಪೀಠೋಪಕರಣಗಳಿಂದ ಯುಕ್ತವಾಗಿತ್ತು. ಶಿಲ್ಪಿಗಳು ಕುಳಿತುಕೊಳ್ಳುವ ಆಸನಗಳ ಸಾಲುಗಳನ್ನು ನಿರ್ಮಿಸಿದ್ದರು. ರಂಗಸ್ಥಳದ ಕೆಲವು ಭಾಗಗಳಲ್ಲಿ ಆಧಾರವಾಗಿ ಆರಾರು ಸ್ತಂಭಗಳಿದ್ದವು. ಗೋಡೆಗಳಿಗೆಲ್ಲ ಆನೆಯ ದಂತಗಳನ್ನು ನಿಲ್ಲಿಸಿದ್ದರು. ರಾಜರು ಕೂಡುವ ಸಿಂಹಾಸನಗಳಿದ್ದವು. ಸೋಪಾನಗಳಿಂದ ಅಲಂಕೃತವಾಗಿತ್ತು. ಎಷ್ಟೇ ಜನ ಬಂದರೂ ತನ್ನಲ್ಲಿ ಅಡಗಿಸಿಕೊಳ್ಳುವ ಸಾಮರ್ಥ್ಯ ಹೊಂದಿತ್ತು. ಏಕಕಾಲದಲ್ಲಿ ಸಾವಿರಾರು ಮಂದಿ ಕೂಡಬಹುದಿತ್ತು.

ಕಂಸನು ಕಾರ್ಯಕರ್ತರಿಗೆ ಹೀಗೆಂದನು.

## ರಂಗಸಿದ್ಧತೆ

**ಸ ದೃಷ್ಟ್ವಾ ಭೂಷಿತಂ ರಂಗಂ ಆಜ್ಞಾಪಯತ ಬುದ್ಧಿಮಾನ್ ।**
**ಶ್ವಃ ಸಚಿತ್ರಾಃ ಸಮಾಲ್ಯಶ್ಚ ಸಪತಾಕಾಸ್ತಥೈವ ಚ ॥ 6 ॥**

**ರಂಗವಾಟೇ ಕರೀಷಸ್ಯ ಕಲ್ಪ್ಯಂತಾಂ ರಾಶಯೋಽವ್ಯಯಾಃ ।**
**ಅಜ್ಞಾದೇಯಾ ಚ ಮಲ್ಲಾನಾಂ ಪ್ರೇಕ್ಷಕಾಣಾಂ ತಥೈವ ಚ ।**
**ಸಮಾಜೇ ಮಂಚಶೋಭಾಶ್ಚ ಕಲ್ಪ್ಯಂತಾಂ ಸೂಪಕಲ್ಪಿತಾಃ ॥ 7 ॥**

ರಂಗಭವನವನ್ನು ನೋಡಿ – ನಾಳೆಯಿಂದ ನೀವೆಲ್ಲರೂ ಮಂಚಗಳನ್ನು

ಪುಷ್ಪಾದಿಗಳಿಂದ ಅಲಂಕರಿಸಿರಿ. ಪತಾಕೆ ಹಾರಿಸಿರಿ. ಚಂದನಾದಿಗಳಿಂದ ಸುವಾಸಿತಗೊಳಿಸಿರಿ. ರತ್ನಗಂಬಳಿ ಹಾಸಿರಿ, ಶೀತಾಪಹಾರಕ ಬೆರಣಿಗಳ ರಾಶಿ ಹಾಕಿರಿ. ಚಿತ್ರಪಟಗಳಿರಲಿ, ಭೂಮಿಯನ್ನು ಅಗೆದು ಪಾನಕುಂಭ ಹೂತಿಡಿರಿ. ಉಪಾಹಾರದ ವಸ್ತುಗಳನ್ನಿಡಿರಿ. ಸ್ವಾದಿಷ್ಟ ಪಾನಕಾದಿ ಪೇಯಗಳಿರಲಿ ಮಲ್ಲಯುದ್ಧದ ನಿಯಮಬಲ್ಲ ತೀರ್ಪುಗಾರರನ್ನು ಕರೆಸಿರಿ. ಪ್ರಜೆಗಳನ್ನೆಲ್ಲ ಆಹ್ವಾನಿಸಿರಿ. ಹೀಗೆ ಹೇಳಿ ಕಂಸನು ಅರಮನೆಗೆ ಹೋದನು.

### ಚಾಣೂರ–ಮುಷ್ಟಿಕರು[1]

**ಆಹ್ವಾನಂ ತತ್ರ ಸಂಚಕ್ರೇ ತಸ್ಯ ಮಲ್ಲದ್ವಯಸ್ಯ ವೈ ।**
**ಚಾಣೂರಾಪ್ರಮೇಯಸ್ಯ ಮುಷ್ಟಿಕಸ್ಯ ತಥೈವ ಚ ॥ 8 ॥**

**ತೌ ತು ಮಲ್ಲೌ ಮಹಾವೀರ್ಯೌ ಬಲಿನೌ ಬಾಹುಶಾಲಿನೌ ।**
**ಕಂಸಸ್ಯಾಜ್ಞಾಂ ಪುರಸ್ಕೃತ್ಯ ಹೃಷ್ಟೌ ವಿವಿಶುತುಸ್ತದಾ ॥ 9 ॥**

**ತೌ ಸಮೀಪಗತೌ ದೃಷ್ಟ್ವಾ ಮಲ್ಲೌ ಜಗತಿ ವಿಶ್ರುತೌ ।**
**ಉವಾಚ ಕಂಸಃ ನೃಪತಿಃ ಸೋಪನ್ಯಾಸಮಿದಂ ವಚಃ ॥ 10 ॥**

ಕಂಸನು ಮನೆಗೆ ಬಂದವನೆ ತನ್ನ ಆಸ್ಥಾನ ಮಲ್ಲರಾದ ಚಾಣೂರ–ಮುಷ್ಟಿಕರೆಂಬ ಜಗಜ್ಜಟ್ಟಿಗಳಿಬ್ಬರನ್ನೂ ಕರೆಯಿಸಿ – ಅವರಿಗೆ ಕಠೋರವಾಗಿ ಆದೇಶಗೈದ– ಮಲ್ಲಕಲೆಯಲ್ಲಿ ಅಪ್ರತಿಮ ವೀರರಾದ ಜಟ್ಟಿಗಳೇ! ನೀವು ನಿಜವಾಗಿಯೂ ದ್ವಂದ್ವಯುದ್ಧದಲ್ಲಿ ಅಪ್ರತಿಮರು. ನಾನು ಇಷ್ಟು ದಿನ ನಿಮಗೆ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವ ಸಮಯ ಬಂದಿದೆ.

**ಯಾವೇತೌ ಮಮ ಸಂವೃದ್ಧೌ ವ್ರಜೇ ಗೋಪಾಲಕಾವುಭೌ ।**
**ಸಂಕರ್ಷಣಶ್ಚ ಕೃಷ್ಣಶ್ಚ ಬಾಲಾವಪಿ ಜಿತಶ್ರಮೌ ॥ 11 ॥**

---

1. **ಚಾಣೂರ–ಮುಷ್ಟಿಕ :**
ಚಾಣೂರ ಮುಷ್ಟಿಕರು ಇಬ್ಬರೂ ಮೂಲದಲ್ಲಿ ವಾರಾಹ–ಕಿಶೋರರೆಂಬ ದೈತ್ಯರು. ಇವರಲ್ಲಿ ಚಾಣೂರನು ಒರಿಸ್ಸಾ ದೇಶದವನಾದರೆ, ಮುಷ್ಟಿಕನು ಆಂಧ್ರಪ್ರದೇಶದವನು. ಇವರಿಬ್ಬರನ್ನೂ ಕಂಸನು ಸೋಲಿಸಿ ತನ್ನಂಕೆಯಲ್ಲಿಟ್ಟುಕೊಂಡಿದ್ದನು. ಇವರನ್ನು ಕೊಂದ ಶ್ರೀಕೃಷ್ಣನು ಚಾಣೂರಾಂಧ್ರ ನಿಷೂದನನೆಂಬ ಬಿರುದು ಪಡೆದ.
**ವರಾಹಶ್ಚ ಕಿಶೋರಶ್ಚ ಜಾತೌ ಚಾಣೂರ ಮುಷ್ಟಿಕ ।** – *ಅಂಶಾವತಾರ–29*

**ಏತೌ ರಂಗಗತೌ ಯುದ್ಧೇ ಯುದ್ಧ್ಯಮಾನೌ ವನೇಚರೌ ।**
**ನಿಪಾತಾನಂತರಂ ಶೀಘ್ರಂ ಹಂತವ್ಯೌ ನಾತ್ರ ಸಂಶಯಃ ।**
**ನಾವಜ್ಞಾತತ್ರ ಕರ್ತವ್ಯಾ ಕರ್ತವ್ಯೋ ಯತ್ನ ಏವ ಹಿ ॥ 12 ॥**

ನಾಳೆ ನಡೆಯುವ ಮಲ್ಲಯುದ್ಧಕ್ಕೆ ನನ್ನ ಬದ್ಧ ಶತ್ರುಗಳಾದ ರಾಮಕೃಷ್ಣರು ಬರಲಿದ್ದಾರೆ. ಕಾಡಿನಲ್ಲಿ ಬೆಳೆದ ಅವರಿಗೆ ರಂಗಸ್ಥಳದಲ್ಲಿ ಯುದ್ಧ ಮಾಡಿ ಅಭ್ಯಾಸವಿರುವುದಿಲ್ಲ. ನಿಮ್ಮೊಂದಿಗೆ ಹೋರಾಡುವಾಗ ನೆಲಕ್ಕೆ ಬೀಳುವುದು ನಿಶ್ಚಯ. ಅವರು ಬಿದ್ದ ಕೂಡಲೇ ಪುನಃ ಏಳದಂತೆಯೇ ಅಲ್ಲಿಯೇ ಕೊಂದು ಹಾಕಬೇಕು.

ಬಾಲಕರೆಂದಾಗಲಿ, ಚಪಲರೆಂದಾಗಲಿ ದಾಕ್ಷಿಣ್ಯ ತೋರಿಸಿ ಅವರನ್ನು ಉಪೇಕ್ಷೆ ಮಾಡಬೇಡಿರಿ. ಅವರನ್ನು ಸಂಹರಿಸಲು ಸಂಪೂರ್ಣ ಪ್ರಯತ್ನ ಮಾಡಬೇಕು. ಯುದ್ಧದಲ್ಲಿ ಅವರಿಬ್ಬರೂ ಸೋತು ಸತ್ತರೆ ನನಗೆ ಶ್ರೇಯಸ್ಸಾಗುತ್ತದೆ.

## ಮಲ್ಲರ ಪ್ರತಿವಚನ

**ನೃಪತೇಃ ಸ್ನೇಹಸಂಯುಕ್ತೈಃ ವಚೋಭಿಃ ಹೃಷ್ಟಮಾನಸೌ ।**
**ಊಚತುಃ ಯುದ್ಧ ಸಂಮತ್ತೌ ಮಲ್ಲೌ ಚಾಣೂರ ಮುಷ್ಟಿಕೌ ॥ 13 ॥**

**ಯದ್ಯಾವಯೋಃ ತೌ ಪ್ರಮುಖೇ ಸ್ಥಾಸ್ಯೇತೆ ಗೋಪಕಿಲ್ಬಿಷೌ ।**
**ಹತೌ ಇತ್ಯೇವ ಮಂತವ್ಯೌ ಪ್ರೇತರೂಪೌ ತಪಸ್ವಿನೌ ॥ 14 ॥**

ಕಂಸರಾಜನ ಮಾತುಗಳನ್ನು ಕೇಳಿ ಪರಮಹೃಷ್ಟರಾದ ಮದೋನ್ಮತ್ತ ಚಾಣೂರು ಮುಷ್ಟಿಕರು ಕಂಸನಿಗೆ ಹೀಗೆಂದರು – ಮಹಾರಾಜರೇ! ಆ ಗೋಪಾಲಬಾಲಕರು ಯಾವ ಕ್ಷಣದಲ್ಲಿ ನಮ್ಮೊಂದಿಗೆ ಯುದ್ಧಕ್ಕೆ ನಿಲ್ಲುವರೋ ಆ ಕ್ಷಣದಲ್ಲಿಯೇ ಶತ್ರುತಾಪಕರಾದ ಅವರಿಬ್ಬರೂ ಸತ್ತಂತೆ ತಿಳಿಯಿರಿ. ಯಾವುದೋ ಒಂದು ಅರಿಷ್ಟಗ್ರಹದಿಂದ ಆವಿಷ್ಟರಾಗಿರುವ ಅವರಿಬ್ಬರು ನಮ್ಮ ಮುಂದೆ ಯುದ್ಧಕ್ಕೆ ನಿಂತಿದ್ದಾದರೆ ನಾವು ಅವಶ್ಯ ಅವರು ಸಂಹರಿಸುತ್ತೇವೆ ಎಂದು ವಾಗ್ವಿಷವನ್ನು ಅವನ ಮುಂದೆ ಕಾರಿ ಅವನ ಅನುಮತಿ ಪಡೆದ ತಮ್ಮ ಮನೆಗೆ ಹೋದರು.

## ಮಾಹುತನಿಗೆ ಆದೇಶ

**ಮಹಾಮಾತ್ರಂ ತತಃ ಕಂಸೋ ಬಭಾಷೇ ಹಸ್ತಿಜೀವಿನಮ್ ।**
**ಹಸ್ತೀ ಕುವಲಯಾಪೀಡಃ ಸಮಾಜದ್ವಾರಿ ತಿಷ್ಠತು ॥ 15 ॥**

**ಬಲವಾನ್ ಮದಲೋಲಾಕ್ಷಃ ಚಪಲಃ ಕ್ರೋಧನೋ ನೃಪು ।**
**ದಾನೋತ್ಕಟಕಟಶ್ಚಂಡಃ ಪ್ರತಿವಾರಣರೋಷಣಃ ॥ 16 ॥**

**ಸ ಸಂನೋದಿತವ್ಯಸ್ತೇ ತಾವುದ್ದಿಶ್ಯ ವನೌಕಸೌ ।**
**ವಸುದೇವ ಸುತೌ ವೀರೌ ಯಥಾ ಸ್ಯಾತಾ ಗತಾಯುಷೌ ॥ 17 ॥**

**ತತಸ್ತೌ ಪತಿತೌ ದೃಷ್ಟ್ವಾ ವಸುದೇವಃ ಸಬಾಂಧವಃ ।**
**ಭಿನ್ನಮೂಲೋ ನಿರಾಲಂಬಃ ಸಭಾರ್ಯೋ ವಿನಶಿಷ್ಯತಿ ॥ 18 ॥**

ಕಂಸನು ಮಹಾಮಾತ್ರನೆಂಬ ಮಾಹುತನಿಗೆ ಹೇಳಿ ಕಳುಹಿಸಿದನು. ಅವನು ಬಂದ ಕೂಡಲೇ ಕಂಸನು ಮಾಹುತನೇ! ನಮ್ಮ ಮದೋನ್ಮತ್ತವಾದ **ಕುವಲಯಾಪೀಡ**[2]ವೆಂಬ ನಾಗಾಯುತ ಬಲವುಳ್ಳ ಪ್ರಚಂಡ ಆನೆಯನ್ನು ರಂಗಮಂಟಪದ ಹೆಬ್ಬಾಗಿಲ ಬಳಿ ನಿಲ್ಲಿಸು. ಅದನ್ನು ಚಂಚಲ ಸ್ವಭಾವದ ಗಂಡಾನೆಯನ್ನು ನಾಳೆ ಸಿಟ್ಟುಗೊಳ್ಳುವಂತೆ ಮಾಡಿರಿ. ರಾಮಕೃಷ್ಣರು ಬಂದಾಗ ಅವರ ಮೇಲೆ ಬಿಟ್ಟು ಬಿಡು. ಮನುಷ್ಯರನ್ನು ಕಂಡರೆ ಕೋಪಗೊಳ್ಳುವ ಮದ್ದಾನೆಯು ವನಚಾರಿಗಳಾದ ರಾಮಕೃಷ್ಣರಿಬ್ಬರನ್ನೂ ಸೊಂಡಿಲಿನಿಂದೆತ್ತಿ ನೆಲದ ಮೇಲೆ ಹಾಕಿ ಕೊಂದು ಹಾಕುತ್ತದೆ.

ಅವರ ಶವಗಳನ್ನು ವಸುದೇವ ದೇವಕಿಯರ ಮುಂದೆ ಎಸೆದಾಗ ಮಕ್ಕಳು ಸತ್ತರೆಂದು ವಸುದೇವನು ಪರಿವಾರದೊಂದಿಗೆ ಎದೆಯೊಡೆದು ಸಾಯುತ್ತಾನೆ. ಕೃಷ್ಣನನ್ನು ನಂಬಿದ ಯಾದವರೆಲ್ಲರೂ ಸತ್ತಂತೆಯೆ. ಈ ಮಲ್ಲರು ಹಾಗೂ ಆನೆಯಿಂದ ಕೊಲ್ಲಲಾಗದಿದ್ದರೆ ನಾನೆ ಸ್ವಯಂ ನನ್ನ ಶಕ್ತಿಯಿಂದ ಅವರಿಬ್ಬರನ್ನೂ ಕೊಂದು ಹಾಕಿ ಮಥರೆಯಲ್ಲಿ ಒಬ್ಬ ಯಾದವ ಪಿಳ್ಳೆಯೂ ಇಲ್ಲದಂತೆ ಮಾಡುವೆ ಎಂದನು.

## ಕಂಸನ ಜನ್ಮ ರಹಸ್ಯ

**ಪಿತಾ ಹಿ ಮೇ ಪರಿತ್ಯಕ್ತೋ ಯಾದವಾನಾಂ ಕುಲೋದ್ವಹಃ ।**
**ಶೇಷಾಶ್ಚ ಮೇ ಪರಿತ್ಯಕ್ತಾಃ ಯಾದವಾಃ ಕೃಷ್ಣ ಪಕ್ಷಿಣಃ ॥ 19 ॥**

2. ಕುವಲಯಾಪೀಡ :

ಕುವಲಯ ಭೂಮಂಡಲ. ಅದನ್ನೆ ಪೀಡಿಸುವ ರಿಷ್ಟನೆಂಬ ದಾನವನು ಆನೆಯ ವೇಷದಲ್ಲಿದ್ದನು. ಹತ್ತು ಸಾವಿರ ಆನೆಬಲ. ಕಂಸನ ವಾಹನವಾಗಿತ್ತು.

ನ ಚಾಹಮುಗ್ರ ಸೇನೇನ ಜಾತಃ ಕಿಲ ಸುತಾರ್ಥಿನಾ ।
ಮಾನುಷೇಣಾಲ್ಪವೀರ್ಯೇಣ ಯಥಾ ಮಾಮಾಹ ನಾರದಃ ॥ 20 ॥

ನಾನಾದರೂ ಯಾದವರ ಕುಲೋದ್ಧಾರನಾದ ನನ್ನ ತಂದೆಉಗ್ರಸೇನನನ್ನೆ ತ್ಯಜಿಸಿದವನು. ಹಾಗೆಯೆ ಕೃಷ್ಣನ ಪಕ್ಷಪಾತಿ ಯಾದವರೆಲ್ಲರನ್ನೂ ದೂರ ಮಾಡಿದ್ದೇನೆ. ವಸ್ತುತಃ ವಿಚಾರಿಸಿದರೆ ನಾನು ಈ ಅಲ್ಪ ವೀರ್ಯನಾದ ಉಗ್ರಸೇನನಿಂದ ಹುಟ್ಟಿದವನೇ ಅಲ್ಲ. ಈ ವಿಷಯವನ್ನು ನಾರದರು ಹೇಳಿದ್ದಾರೆ.

## ನಾರದರಿಂದ ಜನ್ಮ ರಹಸ್ಯ ಸ್ಫೋಟ

ಯಥಾ ಕಥಿತವಾನ್ ವಿಪ್ರೋ ಮಹರ್ಷಿಃ ನಾರದಃ ಪ್ರಭುಃ ।
ತಥಾಹಂ ಸಂಪ್ರವಕ್ಷ್ಯಾಮಿ ಯದಿ ತೇ ಶ್ರವಣೇ ಮತಿಃ ॥ 21 ॥
ಆಗತಃ ಶಕ್ರಸದನಾತ್ ಸವ್ಯೆ ಶಕ್ರಸಖೋ ಮುನಿಃ ।
ಚಂದ್ರಾಂಶು ಶುಕ್ಲವಸನೋ ಜಟಾಮಂಡಲ ಮುದ್ವಹನ್ ॥ 22 ॥
ಗಾತಾ ಚತುರ್ಣಾಂ ವೇದಾನಾಂ ವಿದ್ವಾನ್ ಗಂಧರ್ವ ವೇದವಿತ್ ।
ತಮಾಗತ ಮೃಷಿಂ-ದೃಷ್ಟ್ವಾ ಪೂಜಯಿತ್ವಾ ಯಥಾ ವಿಧಿ ॥ 23 ॥
ಪಾದ್ಯಾರ್ಘ್ಯ ಮಾಸನಂ ದತ್ವಾ ಸಂಪ್ರವೇಶ್ಯ ಉಪವಿಶ್ಯ ಚ ।
ಉವಾಚ ಚ ಪ್ರೀತಮನಾಃ ದೇವರ್ಷಿಃ ಭಾವಿತಾತ್ಮವಾನ್ ॥ 24 ॥

ಮಹಾಮಾತ್ರನೇ! ಬ್ರಹ್ಮರ್ಷಿ ನಾರದರು ಹೇಳಿದ ವಿಷಯ ಹೇಳುವೆ ಕೇಳು. ನಾರದರು ಇಂದ್ರನ ಮಿತ್ರರು. ಇಂದ್ರಭವನದಿಂದ ನನ್ನ ಭವನಕ್ಕೆ ಆಗಮಿಸಿದರು. ಚಂದ್ರಾಂಶುಗೌರವಾದ ವಸ್ತ್ರಧರಿಸಿ, ಮಿಂಚಿನಂತೆ ಹೊಳೆಯುವ ಜಟಾಜೂಟ ಮಂಡಿತರಾಗಿ. ಉತ್ತರೀಯವನ್ನಾಗಿ ಕೃಷ್ಣಾಜಿನ ಧರಿಸಿ, ಓಂಕಾರಮಯ ಯಜ್ಞೋಪವೀತ ಧರಿಸಿ, ದಂಡ ಕಮಂಡಲ ಸಹಿತರಾಗಿ ನನ್ನಲ್ಲಿಗೆ ಬಂದರು. ಮಹರ್ಷಿಗಳು ಬಂದೊಡನೆಯೇ ನಾನು ಅರ್ಘ್ಯ ಪಾದ್ಯಾದಿಗಳಿಂದ ಉಪಚರಿಸದೆ. ಮುನಿಗಳು ಪರಮಪ್ರೀತಾದರು. ವೀರನೇ! ನಾನೀಗ ನಿನಗೊಂದು ಗುಟ್ಟು ಹೇಳುವೆ, ಸಾವಧಾನಚಿತ್ತನಾಗಿ ಕೇಳು.

ಗತೋಽಹಂ ದೇವಸದನಂ ಸೌವರ್ಣಂ ಮೇರುಪರ್ವತಮ್ ।
ಸೋಽಹಂ ಕದಾಚಿದ್ ದೇವಾನಾಂ ಸಮಾಜೇ ಮೇರುಮೂರ್ಧನಿ ॥25 ॥

**ತತ್ರ ಮಂತ್ರಯತಾಮೇವಂ ದೇವತಾನಾಂ ಮಯಾ ಶ್ರುತಃ ।**
**ಭವತಃ ಸಾನುಗಸ್ಯೈವ ವಧೋಪಾಯಃ ಸುದಾರುಣಃ ॥ 26 ॥**

**ತತ್ರ ಯೋ ದೇವಕೀಗರ್ಭಃ ವಿಷ್ಣುಲೋಕ ನಮಸ್ಕೃತಃ ।**
**ಯೋಽಸ್ಯಾ ಗರ್ಭೋಽಷ್ಟಮಃ ಕಂಸ! ಸತೇ ಮೃತ್ಯುರ್ಭವಿಷ್ಯತಿ ॥ 27 ॥**

**ದೇವಾನಾಂ ಸ ತು ಸರ್ವಸ್ವಂ ತ್ರಿದಿವಸ್ಯ ಗತಿಶ್ಚ ಸಃ ।**
**ಪರಂ ರಹಸ್ಯಂ ದೇವಾನಾಂ ಸ ತೇ ಮೃತ್ಯುರ್ಭವಿಷ್ಯತಿ ॥ 28 ॥**

ನಾನೊಮ್ಮೆ ಮೇರುಪರ್ವತ ಶಿಖರದ ಮೇಲಿರುವ ಸ್ಥಳದಲ್ಲಿ ದೇವತೆಗಳೆಲ್ಲ ಸಭೆ ನಡೆಸಿದ್ದರು. ನಾನೂ ಅಲ್ಲಿಗೆ ಹೋದೆ. ದೇವತೆಗಳೆಲ್ಲ ಮಂತ್ರಾಲೋಚನೆ ಮಾಡುತ್ತಿದ್ದರು. ಅನುಯಾಯಿಗಳೊಂದಿಗೆ ಸಹಿತನಾದ ನಿನ್ನನ್ನು ಕೊಲ್ಲುವ ಉಪಾಯದ ಬಗ್ಗೆ ಹೇಳುತ್ತಿದ್ದ  ಮಾತುಗಳನ್ನು ಕೇಳಿದೆ. ದೇವಕಿಯ ಎಂಟನೆ ಗರ್ಭದಲ್ಲಿ ಸರ್ವಲೋಕ ನಮಸ್ಕೃತನಾದ ವಿಷ್ಣುವು ವಾಸಿಸುತ್ತಾನೆ. ಅವನೇ ನಿನ್ನ ಮೃತ್ಯುವಿಗೆ ಕಾರಣನಾಗುತ್ತಾನೆ. ಈ ವಿಷಯ ನಾನು ಕೇಳಿ ತಿಳಿದೆನು. ಆ ವಿಷ್ಣುವೆ ದೇವತೆಗಳಿಗೆಲ್ಲ ಸರ್ವಸ್ವವಾಗಿರುತ್ತಾನೆ. ಸ್ವರ್ಗಾದಿ ಲೋಕಗಳೂ ಅವನನ್ನೆ ಅವಲಂಬಿಸಿವೆ. ಅವನೇ ನಿನಗೆ ಮಾರಕನಾಗಿರುವನು.

ಕಂಸನೇ, ದೇವಕಿಯ ಎಲ್ಲಾ ಗರ್ಭಗಳನ್ನೂ ನಾಶ ಮಾಡಲು ಯತ್ನಿಸು. ಶತ್ರುವು ಬಂಧುವೆ ಆಗಿರಲಿ, ದುರ್ಬಲನೆ ಆಗಿರಲಿ ಉದಾಸೀನ ಮಾಡಬಾರದು.

## ದ್ರುಮಿಲ ನಿನ್ನ ತಂದೆ ಉಗ್ರಸೇನನಲ್ಲ

**ನ ಚಾಯಮುಗ್ರಸೇನಃ ಸ ಪಿತಾ ತವ ಮಹಾಬಲ ।**
**ದ್ರುಮಿಲೋ ನಾಮ ತೇಜಸ್ವೀ ಸೌಭಸ್ಯ ಪತಿರೂರ್ಜಿತಃ ॥ 29 ॥**

**ಶ್ರುತ್ವಾಹಂ ತದ್ ವಚಸ್ತಸ್ಯ ಕಿಂಚಿದ್ ರೋಷ ಸಮನ್ವಿತಃ ।**
**ಭೂಯೋಽಪೃಚ್ಛಂ ಕಥಂ ಬ್ರಹ್ಮನ್ ದ್ರುಮಿಲೋ ನಾಮ ದಾನವಃ ।**
**ಮಮ ಮಾತ್ರಾ ಕಥಂ ತಸ್ಯ ಬ್ರೂಹಿ ವಿಪ್ರ ಸಮಾಗಮಃ ॥ 30 ॥**

ನಾರದರ ಮಾತನ್ನು ಕೇಳಿದ ಕಂಸನಿಗೆ ಸ್ವಲ್ಪ ಕೋಪವೆ ಬಂದಿತು. ಆದರೂ ತೋರಗೊಡದೆ - ನಾರದರೇ, ದ್ರಮಿಲನೆಂಬ ದಾನವನು ನನ್ನ

ತಂದೆಯಾಗುವುದೆಂತು? ನನ್ನ ತಾಯಿ ಮಹಾಪತಿವ್ರತೆ ಅವಳಿಗೂ ದ್ರುಮಿಲನಿಗೆ ತಾಯಿಯೊಡನೆ ಸಮಾಗಮ ಹೇಗಾದೀತು? ಎಂದು ಕೇಳಿದನು.

**ಸುಯಾಮುನಂ ನಾಮ ನಗಂ ತವ ಮಾತಾ ರಜಸ್ವಲಾ ।**
**ಪ್ರೇಕ್ಷಿತುಂ ಸಹಿತಾ ಸ್ತ್ರೀಭಿಃ ಗತಾ ವೈ ಸಾ ಕುತೂಹಲಾತ್ ॥ 31 ॥**

ಉಗ್ರಸೇನನ ರಾಣಿಯು ಹಿಂದೊಮ್ಮೆ ರಜಸ್ವಲೆಯಾಗಿ ಋತುಸ್ನಾತಳಾಗಿದ್ದಾಗ ಸೂಯಾಮುನ ಎಂಬ ಪರ್ವತಕ್ಕೆ ಹೋಗಿದ್ದಳು. ಅಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಮಾರು ಹೋಗಿದ್ದಳು. ಗಿಡಬಳ್ಳಿಗಳಿಂದ ರಮಣೀಯವಾದ ಸರಸ್ತೀರದ ಕುಂಜಗಳಲ್ಲಿ ಸಖಿಯರಿಂದ ಕೂಡಿ ತಿರುಗಾಡಿ ಸೌಂದರ್ಯದ ಸವಿಯನ್ನು ಅನುಭವಿಸಿದಳು.

ಅವಳ ಮುಂದೆ ಇರುವ ಹಸಿರುಹಾಸಿದಂತಿರುವ ಹಾಸಿಗೆಯ ಮೇಲೆ ಕುಣಿದಾಡುವ ನವಿಲುಗಳು, ನರ್ತನ ಮಾಡುತ್ತಿದ್ದವು. ಪಂಚಮರಾಗದಿಂದ ಕೋಗಿಲೆಗಳು ಒಡತಿಯನ್ನು ಕರೆಯುತಿತದ್ದವು. ಸುಗಂಧವನ್ನು ಹೊತ್ತು ಮಂದಮಂದವಾಗಿ ಬೀಸುವ ಗಾಳಿ, ವನಕುಸುಮಗಳ ಶ್ರೀಗಂಧ ಪರಿಮಳ ಇವುಗಳಮದ ರೋಮಾಂಚಿತಗಾತ್ರಳಾಗಿದ್ದಳು.

## ದ್ರುಮಿಲನ ಆಗಮನ

**ಅಥ ಸೌಭಪತಿಃ ಶ್ರೀಮಾನ್ ದ್ರುಮಿಲೋ ನಾಮ ದಾನವಃ ।**
**ಭವಿಷ್ಯದ್ ದೈವಯೋಗೇನ ವಿಧಾತ್ರಾ ತತ್ರ ನೀಯತೇ ॥ 32 ॥**

**ಯದೃಚ್ಛಯಾ ಗತಸ್ತತ್ರ ಸುಯಾಮುನ ದಿದೃಕ್ಷಯಾ ।**
**ವಿಹಾಯ ಸಾ ಕಾಮಗಮೋ ಮನಸೋऽಪ್ಯಾಶುಗಾಮಿನಾ ॥ 33 ॥**

**ಸ ತಂ ಪ್ರಾಪ್ಯ ಪರ್ವತೇಂದ್ರಂ ಅವತೀರ್ಯ ರಥೋತ್ತಮಾತ್ ।**
**ಅಥಾಸೌ ಸೂತಸಹಿತಃ ಚಚಾರ ನಗಮೂರ್ಧನಿ ॥ 34 ॥**

ಇದೇ ಸಮಯಕ್ಕೆ ಸೌಭ ವಿಮಾನಕ್ಕೆ ಅಧಿಪತಿಯಾದ ದ್ರುಮಿಲನೆಂಬ ದಾನವ ರಾಜನು ಕಾಮಗಾಮಿಯಾದ ತನ್ನ ರಥದಲ್ಲಿ ಕುಳಿತು ದೈವಯೋಗವೆಂಬಂತೆ ಬ್ರಹ್ಮನಿಂದ ಪ್ರೇರಿತನಾಗಿ ಅವಳಿದ್ದ ಸುಯಾಮುನ ಪರ್ವತಕ್ಕೆ ಬಂದನು. ಮನಸ್ಸಿಗಿಂತಲೂ ವೇಗವುಳ್ಳ ಕಾಮಿಗಾಮಿ ರಥವನ್ನು ಅಲ್ಲಿಯೆ ಒಂದು

ಉಪವನದಲ್ಲಿ ನಿಲ್ಲಿಸಿದನು. ತನ್ನ ಸಾರಥಿಯೊಂದಿಗೆ ಪರ್ವತ ಶಿಖರದಲ್ಲಿ ಸಂಚರಿಸಿದನು. ಸಕಲ ಋತುಗಳ ಗುಣವುಳ್ಳ ನಂದನ–ವನದಂತಿರುವ ಕಾನನಗಳನ್ನು ಉಪವನವನ್ನೂ ನೋಡಿದನು. ನಾನಾ ವಿಧ ಪುಷ್ಪಗಳಿಂದ ಸುವಾಸಿತವೂ, ಅನೇಕ ಪ್ರಾಣಿಪಕ್ಷಿಗಳಿಗೆ ಆಶ್ರಯ ನೀಡಿದ್ದ, ಫಲಪುಷ್ಪಗಳಿಂದ ಸಮೃದ್ಧವೂ, ಔಷಧಿ ಲತೆಗಳಿಂದ ಪೂರ್ಣವಾಗಿದ್ದ, ಋಷಿ ಗಂಧರ್ವರಿಂದ ಸೇವಿತವಾಗಿದ್ದ ಸುಯಾಮುನ ಪರ್ವತವನ್ನು ದ್ರುಮಿಲನು ನೋಡಿದನು. ಅಲ್ಲಿ ವಿದ್ಯಾಧರರೂ, ಕಿಂಪುರುಷರೂ ಇದ್ದರು.

## ಉಗ್ರಸೇನರಾಣಿಯ ಮೇಲೆ ವಕ್ರದೃಷ್ಟಿ

**ದೂರಾದ್ ದದರ್ಶ ನೃಪತಿಃ ದೇವೀಂ ದೇವಸುತೋಪಮಾಮ್ ।**
**ಕ್ರೀಡಮಾನಾಂ ಸಖೀಭಿಶ್ಚ ಪುಷ್ಪಂ ಚೈವ ವಿಚಿನ್ವತೀಮ್ ॥ 35 ॥**
**ದೃಷ್ಟ್ವಾ ಸೌಭಪತಿಃ ದೂರಾದ್ ವಿಸ್ಮಯನ್ ಸೂತಮಬ್ರವೀತ್ ॥ 36 ॥**
**ಕಸ್ಯೇಯಂ ಮೃಗಶಾವಾಕ್ಷೀ ವನಾಂತರ ವಿಚಾರಿಣೀ ।**
**ರೂಪೌದಾರ್ಯ ಗುಣೋಪೇತಾ ಮನ್ಮಥಸ್ಯ ರತಿರ್ಯಥಾ ॥ 37 ॥**

ದ್ರುಮಿಲನು ಸಂಚರಿಸುತ್ತಾ ದೂರದಲ್ಲಿ ದೇವಕನ್ಯೆಯಂತಿರುವ ಸ್ತ್ರೀಯು ಸಖಿಯರೊಡನೆ ವಿಹರಿಸುತ್ತಿರುವುದನ್ನು ನೋಡಿದ. ಸುಂದರವಾದ ಶ್ರೋಣೀ ಪ್ರದೇಶವುಳ್ಳ ಯುವತಿಯೊಬ್ಬಳು ವಿಹರಿಸುವುದನ್ನು ನೋಡಿ ವಿಸ್ಮಿತನಾದನು. ಸೂತನೇ! ಜಿಂಕೆಮರಿಯ ಕಣ್ಣಿನಿಂದ ಎಲ್ಲರನ್ನೂ ತನ್ನಡೆಗೆ ಸೆಳೆಯುತ್ತಿರುವ ಈ ಸುಂದರೀಮಣಿ ರೂಪೋದಾರ್ಯ ಗುಣಸಂಪನ್ನಳೂ, ಇವಳು ಯಾರು? ಮನ್ಮಥನ ಪತ್ನಿ ರತಿಯೇ, ಇಂದ್ರನ ಪತ್ನಿ ಶಚಿಯೋ, ಬ್ರಹ್ಮನಿರ್ಮಿತ ತಿಲೋತ್ತಮಯೋ, ನಾರಾಯಣನ ಊರುಗಳನ್ನು ಭೇದಿಸಿಕೊಂಡು ಬಂದ ಪುರೂರವಸ್ಸಿನ ಪ್ರೇಯಸಿಯಾದ ಸ್ತ್ರೀರತ್ನವೆನಿಸಿದ ಊರ್ವಶಿಯೋ ಇವಳು ಯಾರಿರಬಹುದು?

ಹಿಂದೆ ದೇವಾಸುರರು ಸೇರಿ ಸಮುದ್ರ ಕಡೆದಾಗ ಅಲ್ಲಿಂದ ಹೊರಬಂದ ಲೋಕಪ್ರಿಯಳಾದ ಲಕ್ಷ್ಮೀದೇವಿಯು ಪ್ರಾದುರ್ಭವಿಸಿದಳಂತೆ. ಅವಳು ನಾರಾಯಣನ ತೊಡೆಯಲ್ಲಿರುವವಳು ಇಲ್ಲಿಗೇಕೆ ಬಂದಳು?

## ದ್ರುಮಿಲನ ಕಾಮವಶತೆ

ಕಾಮಸ್ಯ ವಶಮಾಪನ್ನೋ ಮನೋ ವಿಹ್ವಲತೀವ ಮೇ ।
ಭೃಶಂ ಕೃಂತತಿ ಮೇಽಂಗಾನಿ ಸಾಯಕೈಃ ಕುಸುಮಾಯುಧಃ ॥ 38 ॥
ಹೃದಯಾಗ್ನಿ ರ್ವರ್ಧಯತಿ ಆಜ್ಯಸಿಕ್ತ ಇವಾನಲಃ ।
ಕೇನೋಪಾಯೇನ ಕಿಂ ಕುರ್ಮೋ ಭಜೇನ್ಮಾಂ ಮತ್ತಗಾಮಿನೀ ॥ 39 ॥
ಏವಂ ಬಹು ಚಿಂತಯಾನೋ ನೋಪಲಭ್ಯ ಚ ದಾನವಃ ॥ 40 ॥

ಈ ಯುವತಿಯನ್ನು ನೋಡುತ್ತಿದ್ದಂತೆ ನನ್ನ ಮನಸ್ಸು ವ್ಯಾಕುಲಗೊಳ್ಳುತ್ತಿದೆ. ಕಾಮನು ನನ್ನ ಮೇಲೆ ಪಂಚಬಾಣ ಬಿಟ್ಟು ಪೀಡಿಸುತ್ತಿದ್ದಾನೆ. ತುಪ್ಪದಿಂದ ಅಗ್ನಿಯು ಉರಿಯುವಂತೆ ನನ್ನ ಹೃದಯಾದಲ್ಲಿರುವ ಕಾಮಾಗ್ನಿ ಪ್ರಜ್ವಲಸುತ್ತಿದೆ. ಈ ಕಾಮಾಗ್ನಿಯ ಶಾಂತಿಗಾಗಿ ನಾನೇನು ಮಾಡಲಿ? ಯಾವ ಉಪಾಯದಿಂದ ಇವಳು ನನ್ನ ವಶಳಾಗುವಳು? ಹೀಗೆ ಎಷ್ಟು ಉಪಾಯ ಯೋಚಿಸಿದರೂ ವಶ ಮಾಡಿಕೊಳ್ಳುವ ಉಪಾಯ ಹೊಳೆಯಲ್ಲಿಲ್ಲ. ದ್ರಮಿಲನು ಸಾತನಿಗೆ ತಾನು ಬರುವವರೆಗೂ ಇಲ್ಲಿಯೆ ಇರುವಂತೆ ಹೇಳ ತಾನು ಹೊರಟನು.

## ದ್ರುಮಿಲ ಉಗ್ರಸೇನ ರೂಪ ಧರಿಸಿದ

ಏವಮುಕ್ತ್ವಾ ದಾನವೇಂದ್ರೋ ಗಮನಾಯ ಮನೋ ದಧೇ ।
ವಾರ್ಯುಪಸ್ಪೃಶ್ಯ ಬಲವಾನ್ ಧ್ಯಾನಮೇವಾನ್ವಚಿಂತಯತ್ ॥ 41 ॥
ಮುಹೂರ್ತಂ ಧ್ಯಾನ ಮಾತ್ರೇಣ ದೃಷ್ಟಂ ಜ್ಞಾನಬಲಾತ್ ತತಃ ।
ಉಗ್ರಸೇನಸ್ಯ ಪತ್ನೀತಿ ಜ್ಞಾತ್ವಾ ಹರ್ಷಮುಪಾಗತಃ ॥ 42 ॥
ಉಗ್ರಸೇನಸ್ಯ ರೂಪಂ ವೈ ಕೃತ್ವಾ ಸ್ವಂ ಪರಿವರ್ತ್ಯ ಸಃ ।
ಉಪಾಸರ್ಪತ್ ಮಹಾಬಾಹುಃ ಪ್ರಹಸನ್ ದಾನವೇಶ್ವರಃ ॥ 43 ॥
ಸ್ಮಯಮಾನಶ್ಚ ಶನಕೈಃ ಜಗ್ರಾಹಾಮಿತ ವೀರ್ಯವಾನ್ ।
ಉಗ್ರಸೇನಸ್ಯ ರೂಪೇಣ ಮಾತರಂ ತೇ ವ್ಯಧರ್ಷಯತ್ ॥ 44 ॥

ದ್ರುಮಿಲನು ಅವಳನ್ನು ಸಂಧಿಸುವ ಮೊದಲು ಆಚಮನ ಮಾಡಿ ಧ್ಯಾನಕ್ಕೆ ಮಗ್ನನಾದನು. ಮುಹೂರ್ತ ಧ್ಯಾನಾನಂತರ ಆ ಯುವತಿಯು ಉಗ್ರಸೇನನ

ಪತ್ನಿಯೆಂದು ತಿಳಯಿತು. ಅತ್ಯಂತ ಸಂತೋಷದಿಂದ ಉಗ್ರಸೇನನ ರೂಪ ಧರಿಸಿದ. ನಸುನಗುತ್ತಾ ಯುವತಿಯ ಬಳ ಬಂದು ಮೆಲ್ಲಮೆಲ್ಲನೆ ಅವಳನ್ನಾಲಿಂಗಿಸಿದ. ನಂತರ ಅದೇ ರೂಪದಿಂದಲೇ ನಿನ್ನ ತಾಯಿಯ ಸತೀತ್ವವನ್ನು ಕೆಡಿಸಿದ. ಪತಿಯ ವಿಷಯದಲ್ಲಿ ಅತ್ಯಂತ ಸ್ನೇಹ ಹೊಂದಿದ್ದ ಅವಳು ತನ್ನ ಪತಿಯೆಂದೆ ಭಾವಿಸಿ ಅವನೊಂದಿಗೆ ವಿಹರಿಸಿದಳು.

ಆದರೆ ಅಂದಿನ ವಿಹಾರದಲ್ಲಿ ದಾನವೇಂದ್ರನ ರತಿವಿಚಿತ್ರತೆ, ದೇಹದ ಭಾರ ಕಂಡು ಅವಳಿಗೆ ಇವನು ನನ್ನ ಪತಿ ಅಲ್ಲವೆಂದು ಸಂಶಯ ಬಂದು ಕೂಡಲೇ ಸೆಟೆದು ನಿಂತಳು.

**ಸಾ ತಮಾಹೋತ್ಥಿತಾ ಭೀತಾ ನ ತ್ವಂ ಮಮ ಪತಿಃ ಧ್ರುವಮ್ ।**
**ಕಸ್ಯ ತ್ವಂ ವಿಕೃತಾಚಾರೋ ಯೇನಾಸ್ಮಿ ಮಲಿನೀಕೃತಾ ॥ 45 ॥**
**ಏಕಭರ್ತೃರ್ವ್ರತಮಿದಂ ಮಮ ಸಂದೂಷಿತಂ ತ್ವಯಾ ।**
**ಪತ್ಯುರ್ಮೇ ರೂಪಮಾಸ್ಥಾಯ ನೀಚ! ನೀಚೇನ ಕರ್ಮಣಾ ॥ 46 ॥**
**ಕಿಂ ಮಾಂ ವಕ್ಷ್ಯಂತಿ ರುಷಿತಾ ಬಾಂಧವಾಃ ಕುಲಪಾಂಸನೀಮ್ ।**
**ಜುಗುಪ್ಸಿತಾ ಚ ವತ್ಸ್ಯಾಮಿ ಪತಿಪಕ್ಷೈಃ ನಿರಾಕೃತಾ ॥ 47 ॥**

ದುರಾತ್ಮನೇ, ನಿಶ್ಚಯವಾಗಿಯೂ ನೀನು ನನ್ನ ಪತಿಯಲ್ಲ. ವಿಕೃತಾಚಾರಗಳುಳ್ಳ ನೀನು ಯಾರ ಮಗನೋ? ನನ್ನನ್ನೇಕೆ ಕಳಂಕಿತಳನ್ನಾಗಿಸಿದೆ. ನನ್ನ ಪತಿಯ ವೇಷ ಧರಿಸಿ ತುಚ್ಛವಾದ ಕಾರ್ಯ ಮಾಡಿ ನನ್ನ ಪಾತಿವ್ರತ್ಯ ಭಂಗ ಮಾಡಿರುವೆ. ನಿನ್ನೊಂದಿಗೆ ಸಮಾಗಮ ಮಾಡಿರುವ ಕುಲಪಾಂಸಿನಿಯಾದ ನನ್ನನ್ನು ನನ್ನ ಬಂಧುಗಳೆಲ್ಲ ಏನೆಂದು ಹೇಳುವರು? ನನ್ನ ಪತಿಯ ಬಂಧುಗಳು ನನ್ನನ್ನು ಖಂಡಿತವಾಗಲೂ ಪರಿತ್ಯಜಿಸುವರು. ನಂತರ ಜೀವನವಿಡಿ ಜುಗುಪ್ಸಿತ ಜೀವನ ಮಾಡಬೇಕಾಗುವುದು. ಪರಸ್ತ್ರೀ ಕಾಮುಕನಾದ ನಿನಗೆ ಧಿಕ್ಕಾರವಿರಲಿ.

ಹೀಗೆ ಧಿಕ್ಕೃತನಾಗಿ ತನ್ನನ್ನು ಆಕ್ಷೇಪಿಸುತ್ತಿರುವ ಯುವತಿಗೆ ದ್ರುಮಿಲನು ಹೀಗೆಂದನು.

**ಅಹಂ ವೈ ದ್ರುಮಿಲೋ ನಾಮ ಸೌಭಸ್ಯ ಪತಿರೂರ್ಜಿತಃ ।**
**ಕಿಂ ಮಾಂ ಕ್ಷಿಪಸಿ ರೋಷೇಣ ಮೂಢೇ ಪಂಡಿತಮಾನಿನಿ ॥ 48 ॥**

**ಮಾನುಷಂ ಪತಿಮಾಶ್ರಿತ್ಯ ನೀಚಂ ಮೃತ್ಯುವಶೇ ಸ್ಥಿತಮ್ ।**
**ವ್ಯಭಿಚಾರಾನ್ ನ ದುಷ್ಯಂತಿ ಸ್ತ್ರೀಯಃ ಸ್ತ್ರೀಮಾನಗರ್ವಿತೇ ॥ 49 ॥**
**ಶ್ರೂಯಂತೇ ಹಿ ಸ್ತ್ರಿಯೋ ಬಹ್ವ್ಯಃ ವ್ಯಭಿಚಾರ ವ್ಯತಿಕ್ರಮೈಃ ।**
**ಪ್ರಸೂತಾ ದೇವಸಂಕಾಶಾನ್ ಪುತ್ರಾನ್ ನಿಶ್ಚಲ ವಿಕ್ರಮಾನ್ ॥ 50 ॥**
**ಕಸ್ಯ ತ್ವಮಿತಿ ಯಚ್ಚಾಹಂ ತ್ವಯೋಕ್ತೋ ಮತ್ತಕಾಶಿನಿ ।**
**ಕಂಸಸ್ತಸ್ಮಾದ್ ರಿಪುಧ್ವಂಸೀ ತವ ಪುತ್ರೋ ಭವಿಷ್ಯತಿ ॥ 51 ॥**

ಮೂಢಳಾದ ಹೆಣ್ಣೆ! ನೀನು ಮಹಾಬುದ್ಧಿವಂತಳೆಂದು ಹೀಗೆ ಹರಟುತ್ತಿರುವೆ. ನಾನು ಸೌಭಪತಿಯಾದ ದ್ರುಮಿಲನೆಂಬ ಗಂಧರ್ವ ಕಾಮರೂಪಿಯು, ಓಜಸ್ಸು ತೇಜಸ್ಸಿನಿಂದಲೂ ಸಂಪನ್ನನು. ಮೃತ್ಯುವಶದಲ್ಲಿರುವ ತುಚ್ಛವಾದ ಉಗ್ರಸೇನನೆಂಬ ಪತಿಯನ್ನು ಹೊಂದಿ ನಿಷ್ಕಾರಣವಾಗಿ ನನ್ನನ್ನು ನಿಂದಿಸುತ್ತಿರುವೆ.

ಸ್ತ್ರೀಯರಿಗೆ ಅದರಲ್ಲಿಯೂ ಮಾನವ ಸ್ತ್ರೀಯರಿಗೆ ಪರಪುರುಷಸಂಗ ದೋಷಕಾರಿಯಲ್ಲ. ಕುಂತಿ, ಮದಯಂತಿ ಮೊದಲಾದ ಪತಿವ್ರತೆಯರು ದೇವತಾ ಪುರುಷರೊಡನೆ ಸಮಾಗಮ ನಡೆಸಿ ದೇವಸಮಾನ ಮಕ್ಕಳನ್ನು ಪಡೆದಿದ್ದಾರೆ. ನನ್ನಂತಹ ಮಹಾಪುರುಷನೊಂದಿಗೆ ನಿನ್ನಂಥ ಮಾನವ ಸ್ತ್ರೀ ಸಮಾಗಮ ವ್ಯಭಿಚಾರವಲ್ಲ. ಕಸ್ಯತ್ವಂ ಎಂದು ನೀನು ಕೇಳದೆಯಲ್ಲವೆ? ಈ ಕಾರಣದಿಂದ ನೀನು ಕಂಸನೆಂಬ ಹೆಸರಿನ ಶತ್ರು ವಿಧ್ವಂಸಕ ಮಹಾಪರಾಕ್ರಮಿಯಾದ ಮಗನನ್ನು ಪಡೆಯುವೆ.

**ಧಿಕ್ ತೇ ವೃತ್ತಂ ಸುದುರ್ವೃತ್ತಂ ಯಃ ಸರ್ವಾಃ ನಿಂದಸಿ ಸ್ತ್ರಿಯಃ ।**
**ಸಂತಿ ಸ್ತ್ರಿಯೋ ನೀಚವೃತ್ತಾಃ ಸಂತಿ ಚೈವ ಪತಿವ್ರತಾಃ ॥ 52 ॥**
**ಯಾಸ್ತ್ವೇಕಪತ್ನ್ಯಃ ಶ್ರೂಯಂತೇಽರುಂಧತೀ ಪ್ರಮುಖಾಃ ಸ್ತ್ರೀಯಃ ।**
**ಧೃತಾ ಯಾಭಿಃ ಪ್ರಜಾಃ ಸರ್ವಾಃ ಲೋಕಾಶ್ಚೈವ ಕುಲಾಧಮ ॥ 53 ॥**

ದುರ್ವೃತ್ತನೇ, ದೂರಸರಿ, ಜಗತ್ತಿನಲ್ಲಿ ಕೆಲವು ಸ್ತ್ರೀಯರು ದುಷ್ಟಾಚಾರಿಗಳಿರಬಹುದು. ಆದರೆ ಅರುಂಧತೀ ಮೊದಲಾದ ಪತಿವ್ರತಾ ಶಿರೋಮಣಿಗಳು ಎಷ್ಟು ಜನರಿಲ್ಲ. ಸತೀಕುಲ ಬೆಳಗಿಸುವ ಇಂತಹ ಕುಲಸ್ತ್ರೀಯರಿಂದಲೇ ಈ ಭೂಮಿ ನಿಂತಿದೆ. ಕುಂತಿ ಮದಯಂತಿಯರು

ಆಪದ್ಧರ್ಮದಲ್ಲಿ ಪತಿಯ ಅನುಮತಿ ಪಡೆದು ದೇವತಾ ಸಂಗ ಮಾಡಿರುವರು. ನಿನ್ನಂತೆ ವೇಷ ಬದಲಿಸಿ ಮೋಸ ಮಾಡಿಸಿಕೊಂಡವರಲ್ಲ.

## ಪತಿವ್ರತೆಯ ಶಾಪ

**ಯಸ್ತ್ವಯಾ ಮಮ ಪುತ್ರೋ ವೈ ದತ್ತಃ ವೃತ್ತವಿನಾಶನಃ ।**
**ನ ಮೇ ಬಹುಮತಸ್ತ್ವೇಷಃ ಶ್ರುಣು ಚಾಪಿ ಯದುಚ್ಯತೇ ॥ 54 ॥**

**ಉತ್ಪತ್ಸ್ಯತಿ ಪುಮಾನ್ ನೀಚ ಪತಿವಂಶೇ ಮಮಾದ್ಯ ಯಃ ।**
**ಭವಿಷ್ಯತಿ ಸ ತೇ ಮೃತ್ಯುಃ ಯಶ್ಚ ದತ್ತಸ್ತ್ವಯಾ ಸುತಃ ॥ 55 ॥**

ನೀನು ನನಗೆ ಮಹಾಬಲಿಷ್ಠನಾದ ಮಗನನ್ನು ಕೊಡುವೆನೆಂದು ಹೇಳಿ ಕೊಡಲಿರುವ ನಿನ್ನಂತೆ ದುರಾಚಾರಿಯಾದ ಈ ದುಷ್ಟ ಸಂತಾನವನ್ನು ನನ್ನ ಪತಿಯ ವಂಶದಲ್ಲಿಯೇ ಆವಿರ್ಭಾವ ಹೊಂದಲಿರುವ ಭಗವಂತನು ಕೊಂದು ಹಾಕುವನು.

**ದ್ರುಮಿಲಸ್ತ್ವೇವಮುಕ್ತಸ್ತು ಜಗಾಮಾಕಾಶಮೇವ ತು ।**
**ಜಗಾಮ ಚ ಪುರೀಂ ದೀನಾ ಮಾತಾ ತದಹರೇವ ತೇ ॥ 56 ॥**

**ಮಾಮೇವ ಮುಕ್ತ್ವಾ ಭಗವಾನ್ ನಾರದೋ ಮುನಿಸತ್ತಮಃ ।**
**ವಲ್ಲಕೀಂ ವಾದ್ಯಮಾನೋ ಹಿ ಸಪ್ತಸ್ವರ ವಿಮೂರ್ಛಿತಮ್ ॥ 57 ॥**

**ಗಾಯನೋ ಲಕ್ಷ್ಯವೀಥೀಂ ಸ ಜಗಾಮ ಬ್ರಹ್ಮಣೋಽಂತಿಕಮ್ ॥ 58 ॥**

ನಾರದರು ಕಂಸನಿಗೆ ಪೂರ್ವೇತಿಹಾಸ ಹೇಳುತ್ತಾ ಕಂಸನೇ ! ನಿನ್ನ ತಾಯಿಯು ಹೀಗೆ ಶಪಿಸಿದಾಗ ದ್ರುಮಿಲನು ಪ್ರತ್ಯುತ್ತರವನ್ನು ನೀಡದೆ ವಿಮಾನದ ಮೂಲಕ ಹೊರಟು ಹೋದನು.

ಇತ್ತ ನಿನ್ನ ತಾಯಿಯಾದರೂ ಅತಿದೀನಳಾಗಿ ಅಂದಿನ ದಿನವೇ ತನ್ನ ಪುರಕ್ಕೆ ಹೋಗಿ ಸೇರಿದಳು.

ಮಹಾಮಾತ್ರನೇ! ಹೀಗೆ ನನ್ನ ಜನ್ಮಚರಿತ್ರೆಯನ್ನು ನಾರದರು ನನಗೆ ಹೇಳಿ, ಅಗ್ನಿಯಂತೆ ಬೆಳಗುತ್ತಿದ್ದ ನಾರದರು ತಮ್ಮ ಮಹತೀವೀಣೆ ನುಡಿಸುತ್ತಾ ಬ್ರಹ್ಮಮಂದಿರಕ್ಕೆ ಹೊರಟುಹೋದರು.

ಮಾಸುತನೇ. ನನ್ನ ಅಮಾನುಷದೈತ್ಯಶಕ್ತಿ, ದಾರುಣವಾದ ವೀರ್ಯ ದುಸ್ಸಾಹ

ತೇಜಸ್ಸುಗಳನ್ನು ನೋಡಿದಾಗ ನಾರದರು ಹೇಳಿದ್ದು ನಿಜವೆಂದೆ ತಿಳಿಯುತ್ತದೆ. ಆದ್ದರಿಂದಲೇ ನನ್ನ ತಂದೆ ತಾಯಿಗಳು ನಾನು ಚಿಕ್ಕವನಿರುವಾಗಲೇ ನನ್ನನ್ನು ತ್ಯಜಿಸಿದ್ದಾರೆ. ಆದರೂ ನಾನು ನನ್ನ ಸ್ವಂತ ಶಕ್ತಿಯಿಂದ ಮುಂದೆ ಬಂದು ರಾಜ್ಯವನ್ನಾಳುತ್ತಿದ್ದೇನೆ. ನನ್ನ ತಂದೆ ತಾಯಿಗಳೂ, ಬಂಧುಬಾಂಧವರೆಲ್ಲರೂ ನಾನು ದೈತ್ಯಜಾತನೆಂದು ನನ್ನನ್ನು ದ್ವೇಷಿಸುತ್ತಿದ್ದಾರೆ. ಕೃಷ್ಣನ ಪಕ್ಷವಹಿಸಿದ್ದಾರೆ.

**ಏತಾನಪಿ ಹನಿಷ್ಯಾಮಿ ಯಾದವಾನ್ ಕೃಷ್ಣ ಪಕ್ಷಿಣಃ ।**
**ತದಿಮೌ ಘಾತಯಿತ್ವಾ ತು ಹಸ್ತಿನಾ ಗೋಪಕಿಲ್ಬಿಷೌ ॥ 59 ॥**

**ತದ್ ಗಚ್ಛ ಗಜಮಾರುಹ್ಯ ಸಾಂಕುಶ ಪ್ರಾಸ ತೋಮರಃ ।**
**ಸ್ಥಿರೋ ಭವ ಮಹಾಮಾತ್ರ ಸಮಾಜ ದ್ವಾರಿ ಮಾ ಚಿರಮ್ ॥ 60 ॥**

ನನ್ನನ್ನು ದ್ವೇಷಿಸುತ್ತಿರುವ ಕೃಷ್ಣಪಕ್ಷವಹಿಸಿರುವ ಸಮಸ್ತ ಯಾದವರನೆಲ್ಲ ಕೊಂದು ಹಾಕುವೆ. ಗೋಪಕುಲಕ್ಕೆ ಕಲಂಕಪ್ರಾಯರಾದ ರಾಮ-ಕೃಷ್ಣರನ್ನು ಕುವಲಯಾಪೀಡ ಆನೆಯಿಂದ ಕೊಲ್ಲಿಸಿ ನಂತರ ಯಾದವರ ಸಂಗತಿ ನೋಡುತ್ತೇನೆ. ಮಹಾಮಾತ್ರನೇ! ನೀನೀಗಲೇ ಅಂಕುಶ-ಪ್ರಾಸ ಹಿಡಿದು ಆನೆಯನ್ನೇರಿ ರಂಗಭೂಮಿಯ ಬಾಗಿಲಲ್ಲಿ ಸಿದ್ಧನಾಗಿ ನಿಲ್ಲು ಎಂದು ಹೇಳಿ ಕಳುಹಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ನಾರದರಿಂದ ಕಂಸನ ಜನ್ಮರಹಸ್ಯ ಬಹಿರಂಗವೆಂಬಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 29 ವಿಷ್ಣುಪರ್ವ

# ಅಥ ಏಕೋನತ್ರಿಂಶೋಽಧ್ಯಾಯಃ

## ರಂಗ ಪ್ರವೇಶ

*ವೈಶಂಪಾಯನ ಉವಾಚ-*

**ತಸ್ಮಿನ್ನಹನಿ ನಿವೃತ್ತೇ ದ್ವಿತೀಯೇ ಸಮುಪಸ್ಥಿತೇ ।**
**ಆಪೂರ್ಯತ ಮಹಾರಂಗಃ ಪರ್ಯೈಃ ಯುದ್ಧದಿದೃಕ್ಷುಭಿಃ ॥ 1 ॥**

**ಮಂಚಾಗಾರೈಃ ಸುನಿರ್ಯುಕ್ತೈಃ ಯುದ್ಧಾಯ ಸುವಿಭೂಷಿತೈಃ ।**
**ಶ್ರೇಣೀನಾಂ ಚ ಗಣಾನಾಂ ಚ ಮಂಚಾಃ ಭಾಂತ್ಯಚಲೋಪಮಾಃ ॥ 2 ॥**

**ಸೌವರ್ಣಾಃ ಪಾನಕುಂಭಾಶ್ಚ ಃಪಾನಭೂಮ್ಯಶ್ಚ ಶೋಭಿತಾಃ ।**
**ಫಲಾವದಂಶಪೂರ್ಣಾಶ್ಚ ಚಾಂಗೇಯರ್ಃ ಪಾನಯೋಜಿತಾಃ ॥ 3 ॥**

**ಪ್ರೇಕ್ಷಾಗಾರಃ ಸ ಕಂಸಸ್ಯ ಪ್ರಚಕಾಶೇಽಧಿಕಂ ಶ್ರಿಯಾ ।**
**ಶೋಭಿತೋ ಮಾಲ್ಯದಾಮ್ಯೈಶ್ಚ ನಿವಾಸಕೃತಲಕ್ಷಣಃ ॥ 4 ॥**

ಅಂದಿನ ರಾತ್ರಿ ಕಂಸನು ಭಯದಿಂದಲೇ ಕಾಲಕಳೆದನು. ಬೆಳಗ್ಗೆ ಮಥುರಾಪುರಿಯ ಜನರೆಲ್ಲ ರಂಗಮಂಟಪದಲ್ಲಿ ಸೇರತೊಡಗಿದರು. ವಿಶಾಲರಂಗಸ್ಥಳದಲ್ಲಿ ರಾಜ ಮಹಾರಾಜರು ಕುಳತುಕೊಳ್ಳುವ ವಿಶಾಲವಾದ ಪ್ರತ್ಯೇಕ ವೇದಿಕೆಯಿತ್ತು. ಮೃದುವಾದ ಆಸನಗಳನ್ನು ಹಾಸಿದ್ದರು. ಸಾಮಂತ ರಾಜರೆಲ್ಲರೂ ತಮ್ಮ ಯೋಗ್ಯತೆ ಉಚಿತಾಸನದಲ್ಲಿ ಕುಳತಿದ್ದರು. ಈ ಅಲಂಕೃತ ಮಂಚಗಾರಗಳು ಶರದೃತುವಿನ ಮೇಘದಂತೆ ಶೋಭಿಸುತ್ತಿದ್ದವು. ಶಿಲ್ಪಕಲೆಗಳಗೆ ಹೆಸರಾದ ಶ್ರೇಣೀ ಎಂಬ ಹೆಸರಿನ ಕೆಲಸಗಾರರಗಾಗಿಯೇ

ಪ್ರತ್ಯೇಕ ಮಂಚಗಳಿದ್ದವು. ಅಂತಪುರ ಸ್ತ್ರೀಯರಿಗಾಗಿ ಪ್ರತ್ಯೇಕ ಆಸನಗಳಿದ್ದವು. ಪತಾಕೆಗಳು ಹಾರಾಡುತ್ತಿದ್ದವು. ವೇಶ್ಯೆಯರಿಗೆ ಪ್ರತ್ಯೇಕ ಸ್ಥಳಗಳಿದ್ದುವು. ರತ್ನಗಂಬಳಿ ಸರ್ವತ್ರ ಹಾಸಿದ್ದರು. ನೀರಿನ ಮಡಿಕೆಗಳು ಹಣ್ಣಿನ ತುಂಡಿನಿಂದ ಕೂಡಿದ ಪಾತ್ರೆಗಳು, ನೀರು ಕುಡಿಯುವ ಪಾತ್ರೆಗಳಿದ್ದವು. ಮಲ್ಲಯುದ್ಧ ನೋಡಲು ಸ್ತ್ರೀಯರಿಗಾಗಿ ಪರದೆಗಳಿದ್ದವು.

**ರಾಜಾ ಕುವಲಯಾಪೀಡಃ ಸಮಾಜ ದ್ವಾರಿ ಕುಂಜರಃ ।**

**ತಿಷ್ಠತ್ವಿತಿ ಸಮಾಜ್ಞಾಪ್ಯ ಪ್ರೇಕ್ಷಾಗಾರಮುಪಾಯಯೌ ॥ 5 ॥**

**ತತಃ ಪ್ರವಿವಿಶುಃ ಮಲ್ಲಾಃ ರಂಗಮಾವಲಿತಾಂಬರಾಃ ।**

**ತ್ರಿಸ್ರಶ್ಚ ಭಾಗಶಃ ಕಕ್ಷಾಃ ಪ್ರಾವಿಶನ್ ಬಲಶಾಲಿನಃ ॥ 6 ॥**

ಅಷ್ಟರಲ್ಲಿ ಕಂಸನು 'ಕುವಲಯಾಪೀಡ ಗಜವು ಪ್ರೇಕ್ಷಾಗಾರದ ದ್ವಾರದಲ್ಲಿ ನಿಲ್ಲಲಿ' ಎಂದಾದೇಶಿಸಿದನು. ಬಿಳಿಯಾದ ವಸ್ತ್ರ ಧರಿಸಿದ ಕಂಸನು ಶ್ವೇತ್ರಛತ್ರ, ಬೆಳ್ಳಿಯ ಚಾಮರ, ಬಿಳಿಯ ಬೀಸಣಿಗೆ ಬಂಗಾರದ ಮುರುಟಗಳಿಂದ ಬಿಳಿಮೋಡಗಳ ಮಧ್ಯದಲ್ಲಿರುವ ಚಂದ್ರನಂತೆ ತೋರಿದ.

ಅವನು ಸಿಂಹಾಸನವೇರಿ ಕುಳಿತ. ಕೂಡಲೇ ನಾಗರಿಕರೂ, ಪ್ರೇಕ್ಷಕರು ಸಾಮಂತರೆಲ್ಲರೂ ಜಯಜಯವೆಂದು ಘೋಷಿಸಿ ಕುಳಿತರು. ನಂತರ ರಂಗಸ್ಥಳದ ಮೂರು ದಿಕ್ಕಿನ ಬಾಗಿಲುಗಳಿಂದ ಅತ್ಯಂತ ಬಲಿಷ್ಠರಾದ ಮೂವರು ಜಟ್ಟಿಗಳು ಒಳಗೆ ಪ್ರವೇಶಿಸಿದರು.

**ತತಸ್ತೂರ್ಯ ನಿನಾದೇನ ಕ್ಷ್ವೇಡಿತಾ ಸ್ಫೋಟಿತೇನ ಚ**

**ವಸುದೇವಸುತೌ ಹೃಷ್ಟೌ ರಂಗದ್ವಾರ ಮುಪಸ್ಥಿತೌ ॥ 7 ॥**

**ಊರ್ಧ್ವಪೀಡೌ ಸ್ರಗಾಪೀಡೌ ಬಾಹುಶಸ್ತ್ರ ಕೃತೌ ಯಮೌ ।**

**ಆಸ್ಫೋಟಯಂತೌ ಅನ್ಯೋನ್ಯಂ ಬಾಹೂ ಚೈವಾರ್ಗಲೋಪಮೌ ॥ 8 ॥**

**ತಾವಾಪತಂತೌ ತ್ವರಿತೌ ಪ್ರತಿಷಿದ್ಧೋ ವರಾನನೌ ।**

**ತೇನ ಮತ್ತೇನ ನಾಗೇನ ಚೋದ್ಯಮಾನೇನ ವೈ ಭೃಶಮ್ ॥ 9 ॥**

ಅವರಿಬ್ಬರೂ ತಮ್ಮ ಜುಟ್ಟನ್ನು ಪಿಂಡಿಕೆಯಾಕಾರ ಕಟ್ಟಿ ಅದರ ಸುತ್ತಲೂ ಪುಷ್ಪಮಾಲೆ ಸುತ್ತಿದ್ದರು. ಅವರಿಗೆ ತಮ್ಮ ನೀಳ್ತೋಳುಗಳೆ ಆಯುಧವಾಗಿದ್ದವು. ಅವುಗಳನ್ನು ಪರಸ್ಪರವಾಗಿ ತಟ್ಟಿಕೊಳ್ಳುತ್ತಿದ್ದರು. ಅವಸರದಿಂದ ರಂಗಶಾಲೆ

ಪ್ರವೇಶ ಮಾಡುತ್ತಿದ್ದಂತೆಯೇ ಮಾವಟಿಗನಿಂದ ಪ್ರಚೋದನೆ ಹೊಂದಿ ಮದಿಸಿದ್ದ ಆನೆಯು ಇಬ್ಬರೂ ಬಾಲಕರನ್ನು ಒಳಗೆ ಹೋಗದಂತೆ ತಡೆದು ನಿಲ್ಲಿಸಿತು.

**ಸ ಮತ್ತ ಹಸ್ತೀ ದುಷ್ಟಾತ್ಮಾ ಕೃತ್ವಾ ಕುಂಡಲಿನಂ ಕರಮ್ ।**
**ಚಕಾರ ಚೋದಿತೋ ಯತ್ನಂ ನಿಹಂತುಂ ಬಾಲಕೇಶವೌ ॥ 10 ॥**

**ತತಃ ಪ್ರಹಸಿತಃ ಕೃಷ್ಣಃ ತ್ರಾಸ್ಯಮಾನೋ ಗಜೇನ ವೈ ।**
**ಕಂಸಸ್ಯ ತನ್ಮತಂ ಚೈವ ಜಗರ್ಹೇ ಸ ದುರಾತ್ಮನಃ ॥ 11 ॥**

ಮದ ತುಂಬಿದ ಕುವಲಯಾಪೀಡ ಆದ ಮೇಲೆ ಕುಳಿತ ಮಾಹುತನು ಅಂಕುಶದಿಂದ ತಿವಿಯಲು ಸಂಕೇತವನ್ನು ಗ್ರಹಿಸಿದ ಭೂಭಾರಭೂತ ಆನೆಯು ತನ್ನ ಸೊಂಡಿಲ್ಲನ್ನೆತ್ತಿ ಅವರಿಬ್ಬರನ್ನೂ ಸಂಹರಿಸಲು ಉದ್ಯುಕ್ತವಾಯಿತು. ಮದವೇರಿದ ಆನೆ ತನ್ನ ಮೇಲೆರಿ ಬರುತ್ತಿದ್ದರೂ ನಿರ್ಭಯನಾಗಿ ನಗುತ್ತಲೇ ನಿಂತಿದ್ದನು. ಕಂಸನ ಕಪಟ ಕಾರಾಗಾರವನ್ನು ಬಹಳವಾಗಿ ನಿಂದಿಸಿದನು.

**ತ್ವರತೇ ಖಲು ಕಂಸೋಯಂ ಗಂತುಂ ವೈವಸ್ವತ ಕ್ಷಯಮ್ ।**
**ಯೋ ಮಾಮನೇನ ನಾಗೇನ ಪ್ರಧರ್ಷಯಿತುಮಿಚ್ಛತಿ ॥ 12 ॥**

**ಸನ್ನಿಕೃಷ್ಟೇ ತತೋ ನಾಗೇ ಗರ್ಜಮಾನೇ ಯಥಾ ಘನೇ ।**
**ಸಹಸೋತ್ಪತ್ಯ ಗೋವಿಂದಃ ಚಕ್ರೇ ತಾಲಸ್ವನಂ ಪ್ರಭುಃ ॥ 13 ॥**

ಈ ಆನೆಯಿಂದ ನನ್ನನ್ನು ಕೊಲ್ಲಲಪೇಕ್ಷಿಸಿರುವ ಈ ಕಂಸನು ನಿಶ್ಚಯವಾಗಿಯೂ ತಾನೇ ಯಮನ ಬಳಿಗೆ ಹೋಗಲು ತ್ವರೆ ಮಾಡುತ್ತಿರುವನು. ಅಷ್ಟರಲ್ಲಿ ಆನೆಯು ಮೇಘದಂತೆ ಗುಡುಗುತ್ತಾ ಕೃಷ್ಣನ ಸಮೀಪ ಬಂದಿತು. ಕೂಡಲೇ ಗೋವಿಂದನು ಮೇಲಕ್ಕೆ ಹಾರಿ ಚಪ್ಪಾಳೆ ತಟ್ಟಿದನು.

ಆನೆಯು ಮುಂಭಾಗದಲ್ಲಿ ನಿಂತು ಗರ್ಜನೆ ಮಾಡುತ್ತಿದ್ದ ಚಪ್ಪಾಳೆ ತಟ್ಟುತ್ತಾ ನೀರಹನಿಗಳಂದ ತುಂಬಿದ್ದ ಅದರ ಸೊಂಡಿಲನ್ನು ಎದೆಗೆ ಅಪ್ಪಿಕೊಂಡನು.

**ವಿಷಾಣಾಂತರಗೋ ಭೂತ್ವಾ ಪುನಶ್ಚರಣಮಧ್ಯಗಃ**
**ಬಬಾಧೇ ತಂ ಗಜಂ ಕೃಷ್ಣಃ ಪವನಸ್ತೋಯದಂ ಯಥಾ ॥ 14 ॥**

**ಸ ಹಸ್ತಾಗ್ರಾದ್ ವಿನಿಷ್ಕ್ರಾಂತೋ ವಿಷಾಣಾಗ್ರಾಚ್ಚ ದಂತಿನಃ ।**
**ವಿಮುಕ್ತಃ ಪದಮಧ್ಯಾಚ್ಚ ಕೃಷ್ಣೋ ದ್ವಿಪಮಪೋಥಯತ್ ॥ 15 ॥**

ಆನೆಯು ಅವನನ್ನು ಹಾಯ ಬಂದಾಗ ಅದರ ಗಂಡಸ್ಥಳದ ಒತ್ತಡಕ್ಕೆ ತನ್ನ ವಕ್ಷಃಸ್ಥಲ ನೀಡಿ ಹಿಂದೆ ದಬ್ಬಿದನು. ಆನೆಯು ತನ್ನ ಶಕ್ತಿಯನ್ನೆಲ್ಲ ಹಾಕಿ ಒತ್ತಿದರೂ ಹಿಂದೆ ಸರಿಯಲ್ಲಿಲ್ಲ. ಸೊಂಡಿಲನ್ನು ಹಿಡಿದು ಎರಡು ದಂತಗಳ ಮಧ್ಯೆ ಹತ್ತಿದನು. ಅಲ್ಲಿಂದ ಆನೆಯ ನಡುಭಾಗಕ್ಕೂ ಮೇಲಕ್ಕೂ ಕೆಳಕ್ಕೂ ಜಿಗಿದಾಡುತ್ತಾ ಆನೆಯ ಸೊಂಡಿಲನ್ನು ಹಾರಾಡಿಸುತ್ತಿದ್ದನು.

ಆನೆಯನ್ನು ಕೈಯಿಂದ ಗುದ್ದಿದನ್ನು ಅದರ ತಲೆ ತಿರುಗಲಾರಂಭಿಸಿತು. ನಂತರ ಆನೆಯ ನಾಲ್ಕು ಕಾಲುಗಳ ಮಧ್ಯ ಪ್ರವೇಶಿಸಿದನು. ಆನೆಯು ಅವನನ್ನು ಸೊಂಡಿಲಿನಿಂದ ಸೆಳೆಯಬೇಕೆಂದು ಪ್ರಯತ್ನಿಸಿತು. ಆದರೆ ಕೃಷ್ಣನಿರುವ ಸ್ಥಳವೆ ತಿಳಿಯಲಾಗಲ್ಲಿಲ್ಲ.

**ಸೋತಿಕಾಯಸ್ತು ಸಂಮೂಢೋ ಹಂತುಂ ಕೃಷ್ಣಮಶಕ್ನುವನ್ ।**
**ಗಜಃ ಸ್ವೇಷ್ವೇವ ಗಾತ್ರೇಷು ಮಥ್ಯಮಾನಃ ರರಾಸ ಹ ॥ 16 ॥**

**ಪಪಾತ ಭೂಮೌ ಜಾನುಭ್ಯಾಂ ದಶನಾಭ್ಯಾಂ ತುತೋದ ಚ ।**
**ಮದಂ ಸುಸ್ರಾವರೋಷಾಚ್ಚ ಘರ್ಮಾಪಾಯೇ ಯಥಾ ಘನಃ ॥ 17 ॥**

ಆ ಮದ್ದಾನೆಯು ಕೃಷ್ಣನನ್ನು ಹಿಡಿದು ಕೋರೆದಾಡೆಯಿಂದ ಚುಚ್ಚಿ ಕಾಲಿನಿಂದ ತುಳಿಯಬೇಕೆಂದು ಮಹಾಪ್ರಯತ್ನ ಮಾಡಿದರೂ ಆಗದೆ ಮಹಾಶ್ರಮವುಂಟಾಗಿ ಅದೇ ನಿತ್ರಾಣವಾಯಿತು. ತನ್ನ ಶರೀರವನ್ನೆ ಸೊಂಡಲಿನಿಂದ ಅಪ್ಪಳಿಸುತ್ತಾ ಕಿರುಚಿಕೊಂಡಿತು. ಕೃಷ್ಣನು ಇದರೊಂದಿಗೆ ಆಟಸಾಕೆಂದು ನಿಶ್ಚೈಸಿ ಆನೆಯನ್ನು ತನ್ನ ಕೈಗಳಿಂದ ದಬ್ಬಿ ಉರುಳಿಸಿದನು. ತನ್ನೆರಡೂ ಕಾಲುಗಳಿಂದ ಚೆನ್ನಾಗಿ ತುಳಿದನು.

**ಸ ತಸ್ಯ ಪ್ರಮುಖೇ ಪಾದಂ ಕೃತ್ವಾ ಕುಂಭಾದನಂತರಮ್ ।**
**ದೋರ್ಭ್ಯಾಂ ವಿಷಾಣಮುತ್ಪಾಟ್ಯ ತೇನೈವ ಪ್ರಾಹರತ್ ತದಾ ॥ 18 ॥**

**ಸ ತೇನ ವಜ್ರಕಲ್ಪೇನ ಸ್ವೇನ ದಂತೇನ ಕುಂಜರಃ ।**
**ಹನ್ಯಮಾನಃ ಶಕೃನ್ಮೂತ್ರಂ ಮುಮೋಚಾರ್ತೋ ರರಾಸ ಹ ॥ 19 ॥**

ಇದರೊಂದಿಗೆ ಆಟಸಾಕೆಂದು ಅವರ ಮೋರೆಯ ಮೇಲೆ ಒಂದು ಕಾಲನ್ನಿಟ್ಟು ಎರಡೂ ಕೈಗಳಿಂದ ಅದರ ದಂತಗಳನ್ನು ಕಿತ್ತಿಹಾಕಿದನು. ವಜ್ರದಂತೆ ಬಿರುಸಾದ ಅದರ ದಂತದಿಂದಲೇ ಅದನ್ನು ಚೆನ್ನಾಗಿ ಥಳಿಸಿದನು. ಅದರಿಂದ

ಜರ್ಜರಿತವಾದ ಮದ್ದಾನೆ ಕೆಟ್ಟದಾಗಿ ಹೂಂಕರಿಸುತ್ತಾ ಮಲಮೂತ್ರ ವಿಸರ್ಜಿಸಿತು. ಅದರ ಬಾಯಿಂದ ರಕ್ತ ಸುರಿಸಿತು.

**ಲಾಂಗೂಲಂ ಚಾಸ್ಯ ವೇಗೇನ ನಿಶ್ಚಕರ್ಷ ಹಲಾಯುಧಃ ।**
**ಶೈಲಪೃಷ್ಠಾರ್ಧ ಸಂಲೀನಂ ವೈನತೇಯ ಇವೋರಗಮ್ ॥ 20 ॥**
**ತೇನೈವ ಗಜದಂತೇನ ಕೃಷ್ಣೋ ಹತ್ವಾ ತು ದಂತಿನಂ ।**
**ಜಘಾನೈಕಪ್ರಹಾರೇಣ ಗಜಾರೋಹಣ ಮುಲ್ಬಣಮ್ ॥ 21 ॥**
**ಪಪಾತ ಸಮಹಾಮತ್ರೋ ವಜ್ರಭಿನ್ನ ಇವಾಚಲಃ ।**

ಇತ್ತಲಾಗಿ ಪರ್ವತ ಪೊಟರೆಯಿಂದ ಸರ್ಪವನ್ನು ಗರುಡನು ಸೆಳೆಯುವಂತೆ ಬಲರಾಮನು ಆನೆಯ ಬಾಲವನ್ನು ಹಿಡಿದು ಜಗ್ಗುತ್ತಿದ್ದನು. ದಂತದಿಂದ ಕುವಲಯಾಪೀಡವನ್ನು ಹೊಡೆದು ಕೊಂದು[1] ಹಾಕಿ ನಂತರ ಅದೇ ದಂತದಿಂದ ಮಾಹುತನನ್ನು ಹೊಡೆದು ಒಂದೆ ಪ್ರಹಾರದಿಂದ ಯಮಸದನಕ್ಕಟ್ಟಿದನು. ಆನೆಯಾದರೂ ದಂತವಿಹೀನವಾಗಿ ವಜ್ರಾಯುಧ ಹೊಡೆತದಿಂದ ರೆಕ್ಕೆ ಕಳೆದುಕೊಂಡ ಪರ್ವತದಂತೆ ಸಾದಿಯೊಂದಿಗೆ ನೆಲಕ್ಕುರುಳಿತು. ಹೀಗೆ ಆನೆ ಹಾಗೂ ಮಾಹುತರನ್ನು ಕೊಂದು ಹಾಕಿ. ದಂತವನ್ನು ಹೆಗಲಿಗೇರಿಸಿಕೊಂಡು ರಂಗಸ್ಥಳ ಪ್ರವೇಶಿಸಿದನು.

**ತತಸ್ತೌ ತೋರಣಾಂಗಾನಿ ಪ್ರಗೃಹ್ಯ ರಣಕರ್ಕಶೌ ।**
**ಗಜಸ್ಯ ಪಾದರಕ್ಷಾಂಶ್ಚ ಜಘ್ನತುಃ ಪುರುಷರ್ಷಭೌ ॥ 22 ॥**
**ತಾಂಶ್ಚ ಹತ್ವಾ ವಿವಿಶತುಃ ಮಧ್ಯಂ ರಂಗಸ್ಯ ತಾವುಭೌ ।**
**ನಾಸತ್ಯಾವಶ್ವಿನೌ ಸ್ವರ್ಗಾದವತೀರ್ಣಾವಿವೇಚ್ಛಯಾ ॥ 23 ॥**

ನಂತರ ಮಹಾದ್ವಾರದ ಕಬ್ಬಿಣದ ಸರಳು. ಅಗಳಿ – ಲಾಳಮುಂಡಿಗೆಗಳನ್ನು ಕಿತ್ತು ಅವುಗಳಿಂದಲೇ ಆನೆಯನ್ನು ರಕ್ಷಕರನ್ನೂ ಕೊಂದುಹಾಕಿದರು.

---

1. **ಕುವಲಯಾಪೀಡವಧೆ :**
**ವಿಕ್ರೀಡ್ಯ ತೇನಕರಿಣಾ ಭಗವಾನ್ ಸ ಕಿಂಚಿದ್ಧಸ್ತೇ ಪ್ರಗ್ರಹ್ಯ ವಿನಿಕೃಷ್ಯ ನಿಪಾತ್ಯ ಭೂಮೌ। ಕುಂಭೇ ಪದಂ ಪ್ರತಿನಿಧಾಯ ವಿಷಾಣಯುಗ್ಮಂ ಉತ್ಕೃಷ್ಯ ಹಸ್ತಿಪಮಹನ್ ನಿಪಾತ-ಸೋಽಥ ॥** – *ಶಾ.ನಿ. 13/114*

ಈ ಇಬ್ಬರೂ ರಂಗಪ್ರವೇಶ ಮಾಡುತ್ತಿದ್ದರೇ, ಅಶ್ವಿನೀದೇವತೆಗಳೇ ಭೂಮಿಗಿಳಿದು ಬಂದಂತೆ ತೋರುತ್ತಿದ್ದರು.

ನಂತರ ವೃಷ್ಣಿ-ಅಂಧಕ ಹಾಗೂ ಭೋಜಕುಲದ ಯಾದವರು, ವನಮಾಲೆಗಳನ್ನು ಧರಿಸಿದ್ದ ಕೃಷ್ಣ ಬಲರಾಮರನ್ನು ನೋಡಿದರು. ಅವರಿಬ್ಬರೂ ಸಿಂಹದಮರಿಗಳಂತೆ

ಗರ್ಜನೆ ಮಾಡುತ್ತಲೂ, ಕಿಲಕಿಲ ನಗುವುದು ತೋಳುಗಳನ್ನು ತಟ್ಟಿಕೊಳ್ಳುವದರಿಂದಲೂ ಅಲ್ಲಿ ನೆರೆದಿದ್ದ ಜನರನ್ನು ಸಂತೋಷಗೊಳಿಸಿದರು.

**ತೌ ದೃಷ್ಟ್ವಾ ಭೋಜರಾಜಸ್ತು ವಿಷಸಾದ ಮಹಾಮತಿಃ ।**
**ಪೌರಾಣಾಂ ಅನುರಾಗಂ ಚ ಹರ್ಷಂ ಚಾಲಕ್ಷ್ಯ ಭಾರತ ॥ 24 ॥**

**ತಂ ಹತ್ವಾ ಪುಂಡರೀಕಾಕ್ಷೋ ನದಂತಂ ದಂತಿನಾಂ ವರಮ್ ।**
**ಅವತೀರ್ಣೋಽರ್ಣವಾಕಾರಂ ಸಮಾಜಂ ಸಹ ಪೂರ್ವಜಃ ॥ 25 ॥**

ಪ್ರಜೆಗಳೆಲ್ಲ ಬಾಲಕರನ್ನು ನೋಡಿ ತಮಗಿದ್ದ ಅನುರಾಗವನ್ನು ಅವರ ಆಗಮನದಿಂದಾದ ಹರ್ಷವನ್ನೂ ನೋಡಿ ಬಹಳ ವ್ಯಥೆ ಹೊಂದಿದನು.

ಹೀಗೆ ಪುಂಡರೀಕಾಕ್ಷನು ಕುವಲಯಾಪೀಡಾನೆ ಸಂಹರಿಸಿ ಬಲರಾಮನೊಂದಿಗೆ ಜನರಿಂದ ತುಂಬಿದ್ದ ಸಮಾಜ ಪ್ರವೇಶಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕುವಲಯಾಪೀಡಾನೆ ಸಂಹಾರವೆಂಬಲ್ಲಿ
ಇಪ್ಪತ್ತೊಂಭತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ತ್ರಿಂಶೋऽಧ್ಯಾಯಃ

### ಚಾಣೂರ–ಮುಷ್ಟಿಕರೊಂದಿಗೆ ಯುದ್ಧ

**ಪ್ರವಿಶಂತಂ ತು ವೇಗೇನ ಮಾರುತಾವಲ್ಗಿತಾಂಬರಮ್ ।**
**ಪೂರ್ವಜಂ ಪುರತಃ ಕೃಷ್ಣಂ ಕಮಲಲೋಚನಮ್ ॥ 1 ॥**

**ಬಾಹುಶಬ್ಧಪ್ರಹಾರೇಣ ಚಾಲಯಂತಂ ವಸುಂಧರಾಮ್ ।**
**ಔಗ್ರಸೇನಿಃ ಸಮಾಲೋಕ್ಯ ದಂತಿದಂತೋದ್ಯತಾಯುಧಮ್ ।**
**ಕೃಷ್ಣಂ ಭೃಶಾಯಸ್ತಮುಖಃ ಸರೋಷಂ ಸಮುದೈಕ್ಷತ ॥ 2 ॥**

**ವಲ್ಗಮಾನೇ ತು ಗೋವಿಂದೇ ಸಕೃತ್ಸ್ನಃ ರಂಗಸಾಗರಃ ।**
**ಜನೌಘ ಪ್ರತಿನಾದೇನ ಪೂರ್ಯಮಾಣ ಇವಾಬಭೌ ॥ 3 ॥**

ಜನಮೇಜಯನೇ, ಶ್ರೀಕೃಷ್ಣನು ಬಲರಾಮನನ್ನು ರಂಗಶಾಲೆಗೆ ಪ್ರವೇಶ ಮಾಡುತ್ತಿದ್ದನು. ಆನೆಯನ್ನು ಸಂಹರಿಸಿದ್ದರಿಂದ ರಕ್ತದ ಚಿಹ್ನೆಗಳಂದ ಶೋಭಿಸುತ್ತಿದ್ದನು. ಭುಜವನ್ನು ತಟ್ಟುತ್ತಿದ್ದ ಶಬ್ಧದಿಂದಲೇ ಭೂಮಿಯನ್ನು ನಡುಗಿಸುತ್ತಿದ್ದನು. ಸಿಂಹದಂತಹ ಠೀವಿಯ ನಡಿಗೆ ಮಳೆಯನ್ನು ಸುರಿಸಬೇಕೆಂದು ಯೋಚಿಸುವ ಮೇಘದಂತೆ ಕಂಸನ ವಧೋಪಾಯವನ್ನು ಚಿಂತಿಸುತ್ತಿದ್ದನು. ಕುವಲಾಮಾಪೀಡದ ದಂತವನ್ನು ಆಯುಧವನ್ನಾಗಿ ಹಿಡಿದು ಬರುತ್ತಿರುವ ಶ್ರೀಕೃಷ್ಣನನ್ನು ನೋಡುತ್ತಲೆ ಕಂಸನು ಭಯದಿಂದ ತೇಜೋಹೀನನಾದನು. ಕ್ರೋಧಮೂರ್ಛಿತನಾಗಿ ಕೃಷ್ಣನನ್ನು ಕೆಂಗಣ್ಣಿನಿಂದ ದುರದುರನೆ ನೋಡಿದನು.

### ಚಾಣೂರ ಮುಷ್ಟಿಕರಿಗೆ ಆದೇಶ

ತತಃ ಕ್ರೋಧಾಭಿತಾಮ್ರಾಕ್ಷಃ ಕಂಸಃ ಪರಮ ಕೋಪನಃ ।
ಚಾಣೂರಮಾದಿಶದ್ ಯುದ್ಧೇ ಕೃಷ್ಣಸ್ಯ ಸುಮಹಾಬಲಮ್ ॥ 4 ॥
ಆಂಧ್ರಂ ಮಲ್ಲಂ ಚ ನಿಕೃತಿಂ ಮುಷ್ಟಿಕಂ ಚ ಮಹಾಬಲಮ್ ।
ಬಲದೇವಾಯ ಸಕ್ರೋಧೋ ದಿದೇಶಾದ್ರಿಚಯೋಪಮ್ ॥ 5 ॥

ಮಹಾಕ್ರೋಧಾವಿಷ್ಟನಾದ ಕಂಸನು ಮಹಾಬಲಿಷ್ಠರೂ ರುದ್ರದೇವರ ವರದಿಂದ ಅವಧ್ಯರು ಆಗಿದ್ದರು. ಕಂಸನು ಆಂಧ್ರಮಲ್ಲ ಮುಷ್ಟಿಕ ಕರೂಷ ದೇಶದ ಚಾಣೂರರನ್ನು ರಾಮಕೃಷ್ಣರೊಂದಿಗೆ ಯುದ್ಧ ಮಾಡಿ ಕೊಂದು ಹಾಕು ಎಂದು ಗುಡುಗಿದ. ಪರ್ವತೋಪಮವಾದ ಬೃಹದ್ಗಾತ್ರನಾದ ಮುಷ್ಟಿಕನನ್ನು ಬಲರಾಮನೊಂದಿಗೆ ಹೋರಾಡಲು ಆದೇಶಿಸಿದ.

### ಚಾಣೂರನ ಯುದ್ಧಾಸಕ್ತಿ

ಸ ತು ರೋಷೇಣ ಚಾಣೂರಃ ಕಷಾಯಿಕೃತ ಲೋಚನಃ ।
ಅಭ್ಯಾವರ್ತತ ಯುದ್ಧಾರ್ಥಂ ಅಪಾಂ ಪೂರ್ಣೋ ಯಥಾ ಘನಃ ॥ 6 ॥
ಅವಘೃಷ್ಟೇ ಸಮಾಜೇ ತು ನಿಶ್ಶಬ್ಧಸ್ತಿಮಿತೇ ಜನೇ ।
ಯಾದವಾಃ ಸಹಿತಾಃ ತತ್ರ ಇದಂ ವಚನ ಮಬ್ರುವನ್ ॥ 7 ॥

ಈ ಆದೇಶಕ್ಕಿಂತ ಮೊದಲೇ ಕಂಸನು ಚಾಣೂರನಿಗೆ ಮಹಾಪ್ರಯತ್ನ ಮಾಡಿ ನೀನು ಕೃಷ್ಣನನ್ನು ಕೊಲ್ಲಬೇಕೆಂದಿದ್ದನು. ನೀವು ನ್ಯಾಯ ಮಾರ್ಗವೋ ಅನ್ಯಾಯ ಮಾರ್ಗವೋ ಅವಲಂಬಿಸಿ ಅವರನ್ನು ಕೊಂದುಹಾಕಿರಿ. ನೀವು ಅವರನ್ನು ಕೊಂದರೆ ಈ ವಿಶಾಲಸಾಮ್ರಾಜ್ಯದಲ್ಲಿ ಅರ್ಧರಾಜ್ಯ ನಿಮಗೆ ಅರ್ಧರಾಜ್ಯ ನನಗೆ. ಹೇಗಾದರೂ ಕೊಂದು ಹಾಕಿರಿ ಎಂದಿದ್ದ.

ಚಾಣೂರನಾದರೂ ನೀರಿನಿಂದ ತುಂಬಿದ ಮೇಘವು ಗರ್ಜಿಸುವಂತೆ ಕೋಪದಿಂದ ಕೆಂಗಣ್ಣಿನಿಂದ ಯುದ್ಧ ಮಾಡುವುದಕ್ಕಾಗಿ ಕೃಷ್ಣನ ಬಳ ಬಂದನು. ಅಲ್ಲಿ ನೆರೆದಿದ್ದ ಸಭೆಯಲ್ಲಿ ಗದ್ದಲವೆದ್ದಿತು. ಕಂಸನು 'ಸುಮ್ಮನೆ ಕೂಡಿರಿ' ಎಂದು ಗದರಿಸಿ ಹೇಳಿದನು. ಸಭೆಯೆಲ್ಲವೂ ಭಯದಿಂದ ನಿಶ್ಯಬ್ಧವಾಯಿತು.

### ಯಾದವರ ರಂಗನಿಯಮಗಳು

ಬಾಹುಯುದ್ಧಮಿದಂ ರಂಗೇ ಸಪ್ರಾಶ್ನಿಕಮಕಾತರಮ್ ।
ಕ್ರಿಯಾಬಲ ಸಮಾಜ್ಞಾತಂ ಅಶಸ್ತ್ರಂ ನಿರ್ಮಿತಂ ಪುರಾ ॥ 8 ॥

ಹಿಂದೆ ಮಲ್ಲಯುದ್ಧದಲ್ಲಿ ಕೆಲವು ನಿಯಮಾವಳಿಗಳನ್ನು ಹಿಂದಿನಿಂದಲೂ ಬಂದಿರುತ್ತದೆ. ಮಲ್ಲಯುದ್ಧದಲ್ಲಿ ಅಸ್ತ್ರ-ಶಸ್ತ್ರ ಬಳಕೆ ನಿಷಿದ್ಧವು. ಜೋಡಿ ಸರಿಯಾಗಿರಬೇಕು. ಇದನ್ನು ನಿರ್ಧರಿಸಲು ಪ್ರಾಶ್ನಿಕಮಧ್ಯಸ್ಥನನ್ನು ನಿಯಮಿಸಬೇಕು. ಯುದ್ಧದಲ್ಲಿ ಪಟ್ಟುಗಳು, ಶಾರೀರಿಕಶಕ್ತಿ ಇವುಗಳಿಂದಲೇ ಎದುರಾಳಿಯನ್ನು ಸೋಲಿಸಬೇಕು. ಯೋಧರು ಶ್ರಮ ಹೊಂದಿದಾಗ ಅವರಿಗೆ ಕುಡಿಯಲು ನೀರು ನೀಡಬೇಕು. ಮಲ್ಲನ ಕೈದೇಹಾದಿಗಳು ಜಾರದಿರಲು ಬೆರಣಿಪುಡಿ ಒದಗಿಸಬೇಕು. ಪಟ್ಟುಗಳೂ ಸಹ ಇಬ್ಬರದೂ ಒಂದೆ ಆಗಿರಬೇಕು. ಒಬ್ಬೊಬ್ಬ ಯೋಧನೊಂದಿಗೆ ಒಬ್ಬನೇ ಕಾಳಗ ಮಾಡಬೇಕೆ ಹೊರತು ಬೇರೆಯವರೆಲ್ಲ ಸಹಾಯ ಮಾಡುವಂತಿಲ್ಲ.

**ಬಾಲೋ ವಾ ಯದಿ ವಾ ವೃದ್ಧೋ ಮಧ್ಯೋ ವಾಪಿ ಕೃಶೋಽಪಿ ವಾ ।**
**ಬಲಸ್ಥೋ ವಾ ಸ್ಥಿತೋ ರಂಗೇ ಜ್ಞೇಯಃ ಕಕ್ಷಾಂತರೇಣ ವೈ ।**
**ನಿಪಾತಾನಂತರಂ ಕಿಂಚಿತ್ ನ ಕರ್ತವ್ಯಂ ವಿಜಾನತಾ ॥ 9 ॥**

ಮಲ್ಲಯುದ್ಧಕ್ಕೆ ಇಳಿದವನು ಬಾಲಕನಾಗಿರಲಿ, ವೃದ್ಧನಾಗಿರಲಿ, ಮಧ್ಯಮವಯಸ್ಸಿನವನಾಗಲೀ, ಕೃಶನಾಗಿರಲಿ, ಬಲಿಷ್ಠನೇ ಆಗಿರಲಿ ಅವನಿಗೆ ಎದುರಾಳಿಯನ್ನು ತೀರ್ಮಾನಿಸುವಾಗ ಅವನಿಗೆ ಅನುರೂಪನಾದವನನ್ನೇ ಆರಿಸಿಕೊಡಬೇಕೆಂಬ ನಿಯಮವಿದೆ. ಒಬ್ಬನು ಮತ್ತೊಬ್ಬನಿಂದ ಕೆಳಗೆ ಬಿದ್ದರೆ ಆಗ ಹೊಡೆಯುವುದು ಬಡಿಯುವುದು ನಿಯಮ ವಿರುದ್ಧವು.

**ತದಿದಂ ಪ್ರಸ್ತುತಂ ರಂಗೇ ಯುದ್ಧಂ ಕೃಷ್ಣಾಂಧ್ರಮಲ್ಲಯೋಃ ।**
**ಬಾಲಃ ಕೃಷ್ಣಃ ಮಹಾನಾಂಧ್ರ ಕಥಂ ನ ಸ್ಯಾದ್ ವಿಚಾರಣಾ ॥ 10 ॥**

**ಅಹಂ ಬಾಲೋ ಮಹಾನಂಧ್ರೋ ವಪುಷಾ ಪರ್ವತೋಪಮಃ ।**
**ಯುದ್ಧಂ ಮಮಾನೇನ ಸಹ ರೋಚತೇ ಬಾಹುಶಾಲಿನಾ ॥ 11 ॥**

**ಯುದ್ಧ ವ್ಯತಿಕ್ರಮಃ ಕಶ್ಚಿನ್ನ ಭವಿಷ್ಯತಿ ಮತ್ಕೃತಃ ।**
**ನ ಹ್ಯಹಂ ಬಾಹುಯೋಧಾನಾಂ ದೂಷಯಿಷ್ಯಾಮಿ ಯನ್ಮತಮ್ ॥ 12 ॥**

ಪ್ರಸ್ತುತ ಮಲ್ಲಯುದ್ಧವು ವಿಷಮ ಯುದ್ಧವೆನಿಸಿದೆ. ಯಾಕೆಂದರೆ ಚಾಣೂರನು ಪ್ರಬಲನೂ ಮಹಾಕಾಯನಾಗಿರುವನು. ಕೃಷ್ಣನಾದರೂ ಚಿಕ್ಕಹುಡುಗನಿರುವನು. ಮಧ್ಯಸ್ಥರನ್ನೂ ನೇಮಿಸಿಲ್ಲ. ಸಮಾನ ವಯಸ್ಕರೂ ಆಗಿಲ್ಲ. ಹೀಗಿರುವಾಗ ಮಲ್ಲಯುದ್ಧ ನಡೆಸುವುದು ಅನ್ಯಾಯವೆಂದಾಗಿ ಮಾತನಾಡಲು ಸಭೆಯಲ್ಲಿ

ಗೊಂದಲವೇರ್ಪಟ್ಟಿತು. ಆಗ ಶ್ರೀಕೃಷ್ಣನೇ ತಾನು ಮುಂದೆ ಬಂದು ಸಮಾಧಾನ ಪಡಿಸುತ್ತಾ – ಸಭಿಕರೇ! ನಾನು ಚಿಕ್ಕವನಾದರೂ ಚಾಣೂರನು ಪರ್ವತದೇಹಿಯಾಗಿದ್ದರೂ ಚಿಂತೆಯಿಲ್ಲ. ಇಂತಹ ಭೀಮಕಾಯರ ಜೊತೆಗೆ ಯುದ್ಧ ಮಾಡುವುದು ನನಗಿಷ್ಟ. ನನ್ನ ಕಡೆಯಿಂದ ಯುದ್ಧದ ನಿಯಮಗಳ ಉಲ್ಲಂಘನೆ ಖಂಡಿತಾ ಆಗುವುದಿಲ್ಲ. ಬಾಹುಯುದ್ಧದ ನಿಯಮದಂತೆಯೆ ನಾನು ನಡೆಯುವೆ.

ಒಬ್ಬರು ಮತ್ತೊಬ್ಬರನ್ನು ಹಿಂದೆಕ್ಕೆ ದಬ್ಬುವ ಸಂಯಮವು, ತಾನಿರುವ ಸ್ಥಳದಲ್ಲಿಯೆ ನಿಂತಿರುವ ಸ್ಥಿರತೆ, ಒಂದೆಡೆ ನಿಂತಿರುವಾಗಲೇ ಕೈಕಾಲುಗಳನ್ನು ಸಂಚಾಲನೆ ಮಾಡುವ ವ್ಯಾಯಾಮವು. ಮರ್ಮಜಾಗಗಳಲ್ಲಿ ಹೊಡೆಯದಿರುವ ಸತ್ಕ್ರಿಯಯು, ಬಲಪ್ರದರ್ಶನ, ಇವುಗಳ ಮೂಲಕ ವಿಜಯ ಗಳಿಸಬಹುದು.

**ಅವೈರಮೇವಂ ಯದಯಂ ಸವೈರಂ ಕರ್ತುಮುದ್ಯತಃ ।**
**ಅತ್ರ ವೈ ನಿಗ್ರಹಃ ಕಾರ್ಯಃ ತೋಷಯಿಷ್ಯಾಮ್ಯಹಂ ಜಗತ್ ॥ 13 ॥**
**ಕಾರೂಷೇಷು ಪ್ರಸೂತೋಽಯಂ ಚಾಣೂರೋ ನಾಮ ನಾಮತಃ**
**ಬಾಹುಯೋಧೀ ಶರೀರೇಣ ಕರ್ಮಭಿಶ್ಚಾತ್ರ ಚಿಂತ್ಯತಾಮ್ ॥ 14 ॥**

ಸಭಿಕರೇ! ಮಲ್ಲಯುದ್ಧದಲ್ಲಿ ಯಾವುದೇ ರೀತಿಯ ದ್ವೇಷಾಸೂಯೆಗಳಿರಬಾರದು. ಆದರೆ ಚಾಣೂರನಾದರು ಕಂಸನ ಪ್ರೇರಣೆಯಂತೆ ದ್ವೇಷದಿಂದ ಮಾಡಲು ಅಪೇಕ್ಷಿಸಿದ್ದಾನೆ. ನನ್ನನ್ನು ಕೊಲ್ಲುವುದೆ ಇವರಿಬ್ಬರ ಉದ್ಧೇಶವಾಗಿದೆ. ಆದುದರಿಂದ ನಾನೀಗ ಇವರನ್ನು ವಧಿಸಲೇಬೇಕು. ಇದರಿಂದ ಜಗತ್ತಿಗೆಲ್ಲ ಸಂತೋಷವಾಗುತ್ತದೆ.

ಚಾಣೂರ ಮಲ್ಲನು ಕರೂಷ ದೇಶದವನು. (ಬಿಹಾರಿನ ಷಹಾಬಾದ್).

ಈ ಚಾಣೂರನು ಕೂಟಯೋಧಿಯು. ಕೆಳಗೆ ಬಿದ್ದವರನ್ನು ನಿರ್ದಾಕ್ಷಿಣ್ಯವಾಗಿ ಕೊಂದು ಹಾಕಿದ್ದಾನೆ. ತನ್ನ ಪ್ರತಾಪ ತೋರಿಸಬೇಕೆಂಬ ಹಂಬಲದಿಂದ ಮಲ್ಲಯುದ್ಧ ನಿಯಮಗಳನ್ನು ಮಣ್ಣುಪಾಲು ಮಾಡಿರುವನು.

ಶಸ್ತ್ರಗಳಿಂದ ಯುದ್ಧ ಮಾಡುವ ಶಸ್ತ್ರಯೋಧಿಗಳಿಗೆ ಎದುರಾಳಿಯನ್ನು ಕೊಲ್ಲುವುದೇ ಉದ್ಧೇಶವಾದರೆ ಮಲ್ಲಯುದ್ಧದಲ್ಲಿ ಎದುರಾಳಿಯನ್ನು ಭೂಮಿಗೆ ಕೆಡಹುವುದೇ ಸಿದ್ಧಿ ಕೊಲ್ಲುವುದಲ್ಲ.

ಶಸ್ತ್ರ ಯುದ್ಧದಲ್ಲಿ ಗೆದ್ದರೂ ಸತ್ತರೂ ಲಾಭವಿರುತ್ತದೆ. ಯುದ್ಧದಲ್ಲಿ

ಕೊಂದವನಿಗೂ, ಕೊಲ್ಲಲ್ಪಟ್ಟವನಿಗೂ ಸಿದ್ಧಿಯು. ಮಲ್ಲಯುದ್ಧವಾದರೂ ಶಾರೀರಿಕ ಬಲ, ಪಟ್ಟುಗಳು, ವರಸೆಗಳಿಂದ ಕೂಡಿದ್ದು ಇಲ್ಲಿ ಸಾಯುವವನಿಗೆ ಸ್ವರ್ಗವೆಲ್ಲಿಂದ? ಜಯಿಸುವನಿಗೂ ಎಂತಹ ಸುಖವಿದ್ದೀತು. ಮಲ್ಲರನ್ನು ಕೊಂದವರಿಗೆ ಪಾಪವೆ ಪ್ರಾಪ್ತವಾಗುತ್ತದೆ.

## ಶ್ರೀಕೃಷ್ಣ ಚಾಣೂರ ಯುದ್ಧ

**ಏವಂ ಸಂಜಲ್ಪತಸ್ತಸ್ಯ ಘೋರಂ ಯುದ್ಧಂ ಸುದಾರುಣಮ್ ।**
**ಉಭಾಭ್ಯಾಮಭವದ್ ಘೋರಂ ವಾರಣಾಭ್ಯಾಂ ವನೇ ಯಥಾ ॥ 15 ॥**

ಚಾಣೂರ– ಮುಷ್ಟಿಕರು ಆಖಾಡಕ್ಕೆ ನುಗ್ಗಿ ಬಂದರು. ಕೃಷ್ಣ ಚಾಣೂರನಿಗೂ ಮುಷ್ಟಿಕ ಬಲರಾಮರಿಗೂ ಯುದ್ಧ ಪ್ರಾರಂಭವಾಯಿತು. ಶಿವನ ವರದಿಂದ ಅವಧ್ಯನಾದ ಚಾಣೂರನು ಕಂಸನ ಪ್ರೀತಿಗಾಗಿ ಹೀಗೆಂದ. ಕೃಷ್ಣ–ರಾಜನೇ ದೈವವೆಂದು ಹೇಳುವರು. ರಾಜನಿಗೆ ಪ್ರಿಯವಾದದ್ದನ್ನು ಮಾಡಿದವನಿಗೆ ಸಿದ್ಧಿ ನಿಶ್ಚಿತ. ರಾಜ ಕಂಸನ ಪ್ರೀತಿಗಾಗಿ ನಾವಿಬ್ಬರೂ ಹೋರಾಡೋಣ' ಮುಷ್ಟಿಕನೊಂದಿಗೆ ಬಲರಾಮ ಯುದ್ಧ ಮಾಡಲಿ' ಎಂದನು. ಶ್ರೀಕೃಷ್ಣನು 'ಹಾಗೆ ಆಗಲಿ' ಎಂದನು. ಕೃಷ್ಣನು ಭಕ್ತಿಯು ಸಂಸಾರವನ್ನೆದುರಿಸುವಂತೆಯೂ ಚಾಣೂರನೊಂದಿಗೂ, ಮಹಾತ್ಮ್ಯ ಜ್ಞಾನವು ಪಾಪಸಮೂಹವನ್ನು ಎದುರಿಸುವಂತೆಯೂ ಮುಷ್ಟಿಕನನ್ನು ಬಲರಾಮನೂ ಎದರಿಸಿದನು.

ಕೃಷ್ಣಚಾಣೂರರು ಎರಡು ಮತ್ತವಾರಣಗಳಂತೆ ಅತಿಘೋರ ಹಾಗೂ ಭಯಂಕರ ಯುದ್ಧ ಪ್ರಾರಂಭವಾಯಿತು. ಮಾಡಿದ್ದಕ್ಕೆ ಪ್ರತಿಕಾರ ಮಾಡುವುದು, ಭುಜಗಳಿಂದ ದಬ್ಬುವುದು. ಕೆಳಗೆ ಬೀಳಿಸುವುದು, ದೂರಕ್ಕೆಸೆಯುವುದು, ಭೂಮಿಯಲ್ಲಿ ಕುಕ್ಕುವುದು, ಪುನಃ ಎತ್ತಿ ಪುನಃ ನೆಲಕ್ಕೆ ಅಪ್ಪಳಿಸುವುದು ನಡೆಯಿತು.

ಪರ್ವತಗಳೆರಡು ಡಿಕ್ಕಿ ಹೊಡೆಯುವಂತೆ ಢಿಕ್ಕಿ ಹೊಡೆಯುವುದು–, ವಕ್ಷಃಸ್ಥಳದಿಂದ ಹೊಡೆಯುವುದು ಮಂಡಿಗಳಿಂದ ಮೊಣಕೈ, ಹಿಮ್ಮಡಿ, ಪಾದಪ್ರಹಾರ, ಉಗುರುಗಳಿಂದ ಯುದ್ಧ ಮಾಡುತ್ತಿದ್ದರು. ಹೊಡೆದಾಗ ಬಂಡೆಗಳ ಸಂಘಟ್ಟನೆಯ ಶಬ್ಧವು ಬರುತ್ತಿತ್ತು. ಪ್ರೇಕ್ಷಕರಿಗೆ ಆನಂದದಾಯಕವಾಗಿತ್ತು. ಅವರು ಹರ್ಷೋದ್ಗಾರ ಮಾಡುತ್ತಿದ್ದರು.

## ಕಂಸನ ತಳಮಳ

**ತತಃ ಪ್ರಸ್ವಿನ್ನವದನಃ ಕೃಷ್ಣ ಪ್ರಣಿಹಿತೇಕ್ಷಣಃ ।**
**ನ್ಯವಾರಯತ ತೂರ್ಯಾಣಿ ಕಂಸಃ ಸವ್ಯೇನ ಪಾಣಿನಾ ॥ 16 ॥**

ಖೇ ಸಂಗತಾನ್ಯವಾದ್ಯಂತ ದೇವತೂರ್ಯಾಣ್ಯನೇಕಶಃ ।
ಅಂತರ್ಧಾನಗತಾಃ ದೇವಾಃ ವಿಮಾನೈಃ ಕಾಮರೂಪಿಭಿಃ ।
ಚೇರುಃ ವಿದ್ಯಾಧರೈಃ ಸಾರ್ಧಂ ಕೃಷ್ಣಸ್ಯ ಜಯಕಾಂಕ್ಷಿಣಃ ॥ 17 ॥

ಚಾಣೂರನು ಮಹಾಬಲಿಷ್ಠನಾಗಿದ್ದರೂ ಕೃಷ್ಣನ ಮುಂದೆ ಶಕ್ತಿಯಿದ್ದಷ್ಟು ಹೋರಾಡಿದ. ಅವನ ಶಕ್ತಿ ಕುಂದುತ್ತಾ ಬಂದಿತು. ಮೇಲೆ ಮಂಚದಲ್ಲಿ ದೂರದಲ್ಲಿ ಕುಳಿತು ಯುದ್ಧವನ್ನು ವೀಕ್ಷಿಸುತ್ತಿದ್ದ ಕಂಸನು ಚಾಣೂರನು ಕೃಷ್ಣನ ಮುಂದೆ ಘಾಸಿಗೊಳ್ಳುತ್ತಿರುವುದನ್ನು ನೋಡಿ ಸಂಕಟಪಟ್ಟ. ಚಾಣೂರನು ಅವನ ಕೈಲಿ ಕುಸಿಯುತ್ತಿರುವುದನ್ನು ನೋಡಿದಾಗ ರೋಷ ಹೆಚ್ಚಿತು. ಬೆವರು ಸುರಿಯಿತು. ಓಲಗದವರ ಮೇಲೆ ಹುಚ್ಚೆದ್ದು ರೇಗಾಡಿದ ಎಡಗೈಯಿಂದ ಸಂಜ್ಞೆ ಮಾಡಿ ವಾದ್ಯಘೋಷಗಳನ್ನು ನಿಲ್ಲಿಸುವಂತೆ ಸೂಚಿಸಿದ. ಕಂಸನು ವಾದ್ಯಗಳನ್ನು ನಿಲ್ಲಿಸುತ್ತಿದ್ದಂತೆಯೇ ದೇವತೆಗಳು ನಾನಾವಿಧ ವಾದ್ಯ ಮೊಳಗಿಸಿದರು. ಶ್ರೀಕೃಷ್ಣನು ಯುದ್ಧ ಮಾಡುತ್ತಿರುವಾಗ ಎಲ್ಲಾ ವಾದ್ಯಗಳೂ ತಾವಾಗಿಯೇ ವಾದನ ಮಾಡಲಾರಂಭಿಸಿದವು. ದೇವತೆಗಳೆಲ್ಲ ವಿಮಾನಗಳಲ್ಲಿ ಕುಳಿತು ಅದೃಶ್ಯರಾಗಿ ಸಂಚರಿಸುತ್ತಿದ್ದರು.

ಜಯಸ್ವ ಕೃಷ್ಣ ಚಾಣೂರಂ ದಾನವಂ ಮಲ್ಲರೂಪಿಣಮ್ ।
ಇತಿ ಸಪ್ತರ್ಷಯಃ ಸರ್ವೇ ಊಚುಶ್ಚೈವ ನಭೋಗತಾಃ ॥ 18 ॥

ಚಾಣೂರೇಣ ಚಿರಂ ಕಾಲಂ ಕ್ರೀಡಿತ್ವಾ ದೇವಕೀಸುತಃ ।
ಬಲಮಾಹಾರಯಾಮಾಸ ಕಂಸಸ್ಯಾಭಾವ ದರ್ಶಿವಾನ್ ॥ 19 ॥

ತತಶ್ಚಚಾಲ ವಸುಧಾ ಮಂಚಾಶ್ಚೈವ ಜುಘೂರ್ಣಿರೇ ।
ಮುಕುಟಾಚ್ಚಾಪಿ ಕಂಸಸ್ಯ ಪಪಾತ ಮಣಿರುತ್ತಮಃ ॥ 20 ॥

ಗಗನ ಮನೆಯಲ್ಲಿ ಮನೆ ಮಾಡಿರುವ ಸಪ್ತರ್ಷಿಗಳು 'ಶ್ರೀಕೃಷ್ಣನೇ ಈ ಚಾಣೂರನನ್ನು ಜಯಿಸು' ಎಂದು ಆಶಂಸಿದರು. ಹೀಗೆ ಶ್ರೀಕೃಷ್ಣನು ಚಿರಕಾಲ ವಿನೋದ ಮಾಡಿ ಇನ್ನು ಇವನನ್ನು ಮುಗಿಸಬೇಕೆಂದು ನಿಶ್ಚೈಯಿಸಿದನು. ಕೃಷ್ಣನ ಪಾದನ್ಯಾಸದಿಂದಾಗಿ ಭೂಮಿ ಚಲಿಸಿ, ಸಭೆಯು ಕಂಪಿತು. ಕಂಸ ಕುಳಿತಲ್ಲಿಯೇ ನಡುಗಿ, ಅವನ ತಲೆಯ ಮೇಲಿದ್ದ ಕಿರೀಟ ಅಲುಗಾಡಿ, ಅದರೊಂದು ಉತ್ತಮಮಣಿ ಕೆಳಗೆ ಬಿತ್ತು.

## ಚಾಣೂರ ಮರ್ದನ

**ದೋರ್ಭ್ಯಾಮಾನಮ್ಯ ಕೃಷ್ಣಸ್ತು ಚಾಣೂರಂ ಶೀರ್ಣಜೀವಿತಮ್ ।**
**ಪ್ರಾಹರನ್ ಮುಷ್ಟಿನಾ ಮೂರ್ಧ್ನಿ ವಕ್ಷಸ್ಯಾಹತ್ಯ ಜಾನುನಾ ॥ 21 ॥**

**ಪಪಾತ ಸ ತು ರಂಗಸ್ಯ ಮಧ್ಯೇ ನಿಸ್ಸೃತಲೋಚನಃ ।**
**ಚಾಣೂರೋ ವಿಗತ ಪ್ರಾಣಃ ಜೀವಿತಾಂತೇ ಮಹೀತಲೇ ॥ 22 ॥**

ಕೃಷ್ಣನು ತನ್ನ ಎರಡೂ ತೋಳುಗಳಿಂದ ಮಹಾಕಾಯನಾದ ಆ ಚಾಣೂರನನ್ನು ಬಗ್ಗಿಸಿ ನಡುನೆತ್ತಿಯ ಮೇಲೆ ಒಂದು ಮುಷ್ಠಿಯಿಂದ ಹೊಡೆದು ಎದೆಗೊಂದು ಬಲವಾಗಿ ಗುದ್ದು ಕೊಟ್ಟನು. ಕೂಡಲೇ ಕಣ್ಣುಗಳಿಂದ ನೀರು ಸಹಿತ ರಕ್ತದೊಂದಿಗೆ ಗುಡ್ಡೆಗಳು ಆಚೆ ಬಂದವು. ಚಾಣೂರನು ಗತಪ್ರಾಣನಾಗಿ ಬಿದ್ದನು.[1]

## ಮುಷ್ಟಿಕ–ತೋಶಲಕವಧೆ

**ರೌಹಿಣೇಯೋ ಹತೇ ತಸ್ಮಿನ್ ಚಾಣೂರೇ ಬಲದರ್ಪಿತೇ ।**
**ಜಗ್ರಾಹ ಮುಷ್ಟಿಕಂ ರಂಗೇ ಕೃಷ್ಣಃ ತೋಶಲಕಂ ಪುನಃ ॥ 23 ॥**

**ಕೃಷ್ಣಃ ತೋಶಲಮುದ್ಯಮ್ಯ ಗಿರಿಶೃಂಗೋಪಮಂ ಬಲೀ ।**
**ಭ್ರಾಮಯಿತ್ವಾ ಶತಗುಣಂ ನಿಷ್ಪಪೇಷ ಮಹೀತಲೇ ॥ 24 ॥**

**ಸಂಕರ್ಷಣಸ್ತು ಸುಚಿರಂ ಯೋಧಯಿತ್ವಾ ಮಹಾಬಲಃ ।**
**ಆಂಧ್ರಮಲ್ಲಂ ಮಹಾಮಲ್ಲೋ ಮಂಡಲಾನಿ ವ್ಯದರ್ಶಯತ್ ॥ 25 ॥**

**ಮುಷ್ಟಿನೈಕೇನ ತೇಜಸ್ವೀ ಸಾಶನಿಸ್ತನಯಿತ್ನುನಾ ।**
**ಶಿರಸ್ಯಭ್ಯಹನದ್ ವೀರೋ ವಜ್ರೇಣೇವ ಮಹಾಗಿರಿಮ್ ॥ 26 ॥**

---

1. ಚಾಣೂರ ವಧೆ:
ಉತ್ಕ್ಷಿಪ್ಯ ತಂ ಗಗನಗಂ ಗಿರಿಸನ್ನಿಕಾಶ ಮುದ್ಭ್ರಾಮ್ಯ ಚಾಥಶತಶಃ ಕುಲಿಶಾಕ್ಷಂಗಮ್॥
ಆವಿಧ್ಯ ದುರ್ಧರಬಲೋ ಭುವಿ ನಿಷ್ಪಿಪೇಷ ಚೂರ್ಣೀಕೃತಃ ಸ ನಿಪಪಾತ ಯಥಾ ಗಿರೀಂದ್ರಃ ॥
ವಜ್ರಾಯುಧದಿಂದಲೂ ಸೀಳಲಸಾಧ್ಯನಾದ ಚಾಣೂರನ ಮಹಾದೇಹವನ್ನು ಮೇಲೆತ್ತಿ ಗಗನದಲ್ಲಿ ನೂರಾರು ಬಾರಿ ತಿರುಗಿಸಿ, ನೆಲಕ್ಕೆ ಅಪ್ಪಳಿಸಿದ, ಕಾಲಿನಿಂದ ತುಳಿದು ಹೊಸಕಾಕಿದ.

ಬಲದಪೀಷ್ಠ ಚಾಣೂರನು ಕೃಷ್ಣನಿಂದ ಮೃತನಾದ ಮೇಲೆ ಮುಷ್ಟಿಕನೊಂದಿಗೆ ಹೋರಾಡುತ್ತಾ ಇದ್ದನು. ತೋಶಲಕನೆಂಬ ಮಲ್ಲನು ಕೃಷ್ಣನೊಂದಿಗೆ ಯುದ್ಧಾರಂಭಿಸಿದನು. ಬಲರಾಮನು ಮುಷ್ಟಿಕನೊಂದಿಗೆ ಬಹಳ ಹೊತ್ತು ಯುದ್ಧ ಮಾಡಿ ಕೊನೆಗೆ ಅಂಗೈತಲದಿಂದ ಬಲವಾಗಿ ಹೊಡೆದು ನಂತರ ಮುಷ್ಟಿಯಿಂದ ತಲೆಗೆ ಹೊಡೆದ. ಅವನ ತಲೆ ಸೀಳ ಕಣ್ಣುಗಳು ಆಚೆ ಬಂದು ಮೃತನಾದನು. ಕೃಷ್ಣನು ತೋಶಲಕನನ್ನು ಪರ್ವತ ಎತ್ತುವಂತೆ ಎತ್ತಿ ತಿರುಗಿಸಿ ನೆಲಕ್ಕೆ ಅಪ್ಪಳಸಿ ಕೊಂದು ಹಾಕಿದ. ಅವನ ಬಾಯಿಂದ ರಕ್ತದ ಕೋಡಿಹರಿಯಿತು.

ಹೀಗೆ ಶ್ರೀಕೃಷ್ಣ ಬಲರಾಮರಿಬ್ಬರೂ ಮುಷ್ಟಿಕ–ತೋಶಲಕರನ್ನು ಕೊಂದು ಹಾಕಿ ರಂಗಮಧ್ಯೆ ಕುಣಿಯುತ್ತಿದ್ದರು.

ಚಾಣೂರ ಮುಷ್ಟಿಕಾದಿಗಳು ನಿಧನ ಹೊಂದಿದಾಗ ರಂಗಾಭವನವು ನೋಡಲು ಜುಗುಪ್ಸೆ ತರುವಂತಿತ್ತು.

ಸಂಪ್ರೇಷಕರಾದ ನಂದಗೋಪಾದಿಗಳೆಲ್ಲರ ಅವಯವಗಳು ಭಯದಿಂದ ನಡುಗುತ್ತಿದ್ದವು.

### ವಸುದೇವ–ದೇವಕಿಯರ ಆನಂದಬಾಷ್ಪ

**ಹರ್ಷಜಂ ವಾರಿ ನೇತ್ರಾಭ್ಯಾಂ ವರ್ಷಮಾಣಾ ಪ್ರವೇಪತೀ ।**
**ಪ್ರಸ್ರವೋತ್ಪೀಡಿತಾ ಕೃಷ್ಣಂ ದೇವಕೀ ಸಮುದೈಕ್ಷತ ॥ 27 ॥**
**ಕೃಷ್ಣದರ್ಶನ ಜಾತೇನ ಬಾಷ್ಪೇಣಾಕುಲಿತೇಂದ್ರಿಯಃ ।**
**ವಸುದೇವೋ ಜರಾಂ ತ್ಯಕ್ತ್ವಾ ಸ್ನೇಹೇನ ತರುಣಾಯತೇ ॥ 28 ॥**

ಶ್ರೀಕೃಷ್ಣನ ದರ್ಶನದಿಂದ ಸಂತೋಷ ಹೊಂದಿದ ದೇವಕಿಯ ನೇತ್ರಗಳಿಂದ ಆನಂದಬಾಷ್ಪಗಳು ನಿರಂತರವಾಗಿ ಹರಿದವು. ಕೃಷ್ಣನನ್ನು ನೋಡಿದ ಕೂಡಲೇ ವಾತ್ಸಲ್ಯದಿಂದ ಎದೆಯಲ್ಲಿ ಹಾಲು ಉಕ್ಕಿತು. ಅವನನ್ನೆ ಎವೆಯಿಕ್ಕೆ ನೋಡುತ್ತಿದ್ದಳು. ವಸುದೇವನಿಗಂತೂ ಕಳೆದು ಹೋದ ಯೌವ್ವನ ಪುನಃ ಬಂದಂತಾಯಿತು. ಸ್ತ್ರೀಯರೆಲ್ಲರೂ ಶ್ರೀಕೃಷ್ಣನ ಮುದ್ದು ಮುಖವನ್ನು ನೇತ್ರ ಪಾತ್ರೆಗಳಿಂದ ಮನಸೇಚ್ಛೆ ಪಾನ ಮಾಡಿದರು.

### ಕಂಸನಿಗೆ ಮೈಯೆಲ್ಲ ಬೆವರು

**ಕಂಸಸ್ಯಾಥ ಮುಖೇ ಸ್ವೇದೋ ಭ್ರೂಭೇದಾಂತರಗೋಚರಃ ।**
**ಅಭವತ್ ರೋಷನಿರ್ಯಾಸಃ ಕೃಷ್ಣ ಸಂದರ್ಶನೇರಿತಃ ॥ 29 ॥**

**ಸೋಽಜ್ಞಾಪಯತ ಸಂಕ್ರುದ್ಧಃ ಪುರುಷಾನ್ ವ್ಯಾಯತಾನ್ ಬಹೂನ್ ।**
**ಗೋಪಾವೇತೌ ಸಮಾಜೌಘಾನ್ ನಿಷ್ಕ್ರಾಮ್ಯೇತಾಂ ವನೇಚರೌ ॥ 30 ॥**

**ನ ಚೇತೌ ದ್ರಷ್ಟುಮಿಚ್ಛಾಮಿ ವಿಕೃತೌ ಪಾಪದರ್ಶನೌ ।**
**ಗೋಪಾನಾಮಪಿ ಮೇ ರಾಜ್ಯೇ ನ ಕಶ್ಚಿತ್ ಸ್ಥಾತುಮರ್ಹತಿ ॥ 31 ॥**

ಕೃಷ್ಣನ ಸಂದರ್ಶನದಿಂದ ಕಂಸನ ಭ್ರೂಮಧ್ಯದಲ್ಲಿ ರೋಷದ ಕಾರಣದಿಂದ ಬೆವರು ಬರತೊಡಗಿತು. ಕೃಷ್ಣನ ಮೇಲಿರುವ ಕಾರಿಣ್ಯವೆ ಹೊಗೆಯ ರೂಪದಲ್ಲಿ ಕಾಣಿಸಿ ಮಾನಸಿಕಚಿಂತಾ ರೂಪವಾದ ಅಗ್ನಿಯಿಂದ ಅವನ ಹೃದಯ ಬೇಯತೊಡಗಿತು. ತುಟಿಗಳು ಕೋಪದಿಂದ ಅದುರುತ್ತಿದ್ದವು. ಮುಖವು ಕೆಂಪಾದ ಸೂರ್ಯನಂತೆ ಇತ್ತು. ಹೀಗೆ ಕೃಷ್ಣನ ಮೇಲೆ ಕೋಪಗೊಂಡಿದ್ದ ಅವನು ವ್ಯಾಯಾಮದಿಂದ ಕಠಿಣ ದೇಹ ಹೊಂದಿದ್ದ ಮಲ್ಲರಿಗೆ ಹೀಗೆ ಆಜ್ಞಾಪಿಸಿದನು.

ವನೇಚರರಾದ ಈ ರಾಮ ಕೃಷ್ಣರನ್ನು ಸಮಾಜವಾಟದಿಂದ ಹೊರಹಾಕಿರಿ. ವಿಕಾರ ಪ್ರಕೃತಿಯವರಾದ ಇವರನ್ನು ನಾನು ನೋಡಲಿಚ್ಛಸುವುದಿಲ್ಲ. ಇವರನ್ನು ಹಾಗೂ ಇವರ ಅನುಯಾಯಿಗಳಾದ ಗೋಪರಾರೂ ನನ್ನ ರಾಜ್ಯದಲ್ಲಿ ಇರಬಾರದು ಎಂದು ಗುಡುಗಿದನು.

ದುರ್ಬುದ್ಧಿವುಳ್ಳ ನಂದಗೋಪನು ನನ್ನ ವಿಷಯದಲ್ಲಿ ಮಹಾವಂಚನೆ ಮಾಡಿದ್ದಾನೆ. ಇವನನ್ನು ಸರಪಳಿಗಳಿಂದ ಬಂಧಿಸಿ ನನ್ನ ಕಾರಾಗೃಹದಲ್ಲಿಡಿ. ದುರಾಚಾರಿ ವಸುದೇವನು ನನ್ನನ್ನು ದ್ವೇಷಿಸುತ್ತಲೇ ಇರುವನು. ಇವನಿಗೆ ಯುವಕರಿಗೆ ನೀಡುವಂತೆ ಶಿಕ್ಷೆ ನೀಡಿರಿ.

### ಗೋಪರ ಆಸ್ತಿ ಮುಟ್ಟುಗೋಲು ಹಾಕಿರಿ

**ಯೇ ಚೇಮೇ ಪ್ರಾಕೃತಾಃ ಗೋಪಾಃ ದಾಮೋದರ ಪರಾಯಣಾಃ ।**
**ಹ್ರೀಯುತಾಂ ಗಾವ ಏತೇಷಾಂ ಯುಚ್ಚಾ ಸ್ತಿ ವಸು ಕಿಂಚನ ॥ 32 ॥**

**ಏವಮಾಜ್ಞಾಪಯಾನಂ ತಂ ಕಂಸಂ ಪರುಷಭಾಷಿಣಮ್ ।**
**ದದರ್ಶಾಯಸ್ತ ನಯನಃ ಕೃಷ್ಣಃ ಸತ್ಯಪರಾಕ್ರಮಃ ॥ 33 ॥**

**ಕ್ಷಿಪ್ತೇ ಪಿತರಿ ಚುಕ್ರೋಧ ನಂದಗೋಪೇ ಚ ಕೇಶವಃ ।**
**ಜ್ಞಾತೀನಾಂ ಚ ವ್ಯಥಾಂ ದೃಷ್ಟ್ವಾ ವಿಸಂಜ್ಞಾಂ ಚೈವ ದೇವಕೀಮ್ ॥ 34 ॥**

ಎಲೈ ಭೃತ್ಯರೇ! ಯಾರು ಈ ಕೃಷ್ಣನ ಜೊತೆಗೆ ಬಂದ ದನಗಾಹಿ ಗೋಪಾಲಕರು ಅಹಂಕಾರಿಗಳಾಗಿರುವರೋ ಅವರ ಬಳಯಿರುವ ದನಧಾನ್ಯಧನಾದಿಗಳನ್ನೆಲ್ಲ ಹೊಡೆದುಕೊಂಡು ಬನ್ನಿರಿ,

ಹೀಗೆ ಆಜ್ಞಾಪಿಸುತ್ತಾ ತನ್ನ ತಂದೆ ತಾಯಿಗಳ ವಿಷಯದಲ್ಲಿಯೂ, ಗೋಪ ಗೋಪಾಲಕರ ವಿಷಯದಲ್ಲಿಯೂ ಉನ್ಮತ್ತ ಪ್ರಲಾಪ ಮಾಡುತ್ತಾ ಕಿಂಕರರಿಗೆ ಆಜ್ಞಾಪಿಸುವುದನ್ನು ನೋಡಿ, ಶ್ರೀಕೃಷ್ಣನಿಗೆ ಕಂಸನ ಮೇಲೆ ಭಯಂಕರ ಸಿಟ್ಟು ಬಂತು. ಅವನ ಆದೇಶ ಕೇಳದ ದೇವಕಿ ಮೂರ್ಛೆ ಹೋಗಿದ್ದಳು. ಇದೂ ಅವನಿಗೆ ಮತ್ತೂ ಕೋಪ ಬರಿಸಿತು.

## ಕಂಸವಧೆ

**ಸ ಸಿಂಹ ಇವ ವೇಗೇನ ಕೇಶವೋ ಜಾತವಿಕ್ರಮಃ ।**
**ಆರುರುಕ್ಷುಃ ಮಹಾಬಾಹುಃ ಕಂಸನಾಶಾರ್ಥಮಚ್ಯುತಃ ॥ 35 ॥**

**ರಂಗಮಧ್ಯಾದ್ ಉತ್ಪಪಾತ ಕೃಷ್ಣಃ ಕಂಸಾಸನಾಂತಿಕಮ್ ।**
**ಅಸಜ್ಜದ್ ವಾಯುನಾಽಽಕ್ಷಿಪ್ತೋ ಯಥಾ ಖಸ್ಥೋ ಘನಾಘನಃ ॥ 36 ॥**

**ದದೃಶುಃ ನ ಹಿ ತಂ ಸರ್ವೇ ರಂಗಮಧ್ಯಾದವಪ್ಲುತಮ್ ।**
**ಕೇವಲಂ ಕಂಸ ಪಾರ್ಶ್ವಸ್ಥಂ ದದೃಶುಃ ಪುರವಾಸಿನಃ ॥ 37 ॥**

ಸತ್ಯ ಸಂಕಲ್ಪನಾದ ಕೃಷ್ಣನು ಕಂಸನನ್ನು ಮುಗಿಸಲೆಂದೆ ಅವನ ಮೇಲೆರಗಲು ನಿಶ್ಚಯ ಮಾಡಿದನು. ಮರುಕ್ಷಣವೆ ಒಂದೇ ಜಿಗಿತಕ್ಕೆ ಕಂಸನ ಬಳ ಹಾರಿನಿಂದ ಅಲ್ಲಿ ನೆರೆದಿದ್ದವರಿಗೆಲ್ಲ ರಂಗಭೂಮಿಯಿಂದ ಹಾರಿದ್ದು ತಿಳಯಲೆ ಇಲ್ಲ. ಕಂಸನಿಗೂ ತಿಳಯಲ್ಲಿಲ್ಲ. ಆಕಾಶದಂದಿಲೇ ಹಾರಿಬಂದನೆಂದು ಭ್ರಮಿಸಿದ.

ರಂಗಮಂಟಪದಲ್ಲಿ ತನ್ನ ಪರಿಘಾಯುಧವಂತಿದ್ದ ಕೈಯನ್ನು ಚಾಚಿ, ಕಂಸನ ಮುಡಿಗೆ ಕೈಹಾಕಿದನು. ತಲೆಯನ್ನು ಹಿಡಿಯುತ್ತಲೇ ಅವನ ವಜ್ರಖಚಿತ ಕಿರೀಟ ಭೂಮಿಗೆ ಬಿತ್ತು. ಯಾವುದು ದುಷ್ಟಗ್ರಹವು ತನ್ನ ತಲೆಗೂದಲನ್ನು ಹಿಡಿದಿರುವಂತೆ ಭಾಸವಾಯಿತು.

**ನಿಗೃಹೀತಶ್ಚ ಕೇಶೇಷು ಗತಾಸುರಿವ ನಿಶ್ವಸನ್ ।**
**ನ ಶಶಾಕ ಮುಖಂ ದ್ರಷ್ಟುಂ ಕಂಸಃ ಕೃಷ್ಣಸ್ಯ ವೈ ತದಾ ॥ 38 ॥**

**ವಿಕುಂಡಲಾಭ್ಯಾಂ ಕರ್ಣಾಭ್ಯಾಂ ಭಿನ್ನ ಹಾರೇಣ ವಕ್ಷಸಾ ।**
**ಪ್ರಲಂಬಾಭ್ಯಾಂ ಚ ಬಾಹುಭ್ಯಾಂ ಗಾತ್ರೈಃ ವಿಸೃತ ಭೂಷಣೈಃ ॥ 39 ॥**

**ಚಕರ್ಷ ಚ ಮಹಾರಂಗೇ ಮಂಚಾನ್ನಿಷ್ಕ್ರಮ್ಯ ಕೇಶವಃ ।**
**ಕೇಶೇಷು ತಂ ಬಲಾದ್ ಗೃಹ್ಯ ಕಂಸಂ ಕ್ಲೇಶಾರ್ಹತಾಂ ಗತಮ್ ॥ 40 ॥**

ಶ್ರೀಕೃಷ್ಣನು ಮುಡಿಯನ್ನು ಹಿಡಿದಾಗಲೇ ಕಂಸನು ಮೃತನಾದಂತೆ ಮೇಲುಸಿರು ಬಿಡುತ್ತಿದ್ದನು. ಈ ಸಮಯದಲ್ಲಿ ಕೃಷ್ಣನ ಮುಖವನ್ನು ನೋಡಲೂ ಸಾಧ್ಯವಾಗಲ್ಲಿಲ್ಲ. ಕರ್ಣಗಳಿಂದ ಕರ್ಣಕುಂಡಲಗಳು ಕಳಚಿಬಿದ್ದವು. ಕುತ್ತಿಗೆಯಲ್ಲಿದ್ದ ರತ್ನ ಹಾರವು ಛಿನ್ನವಾಯಿತು. ತೋಳುಗಳಲ್ಲಿ ಒಲವೆ ಇಲ್ಲದೆ ಜೋತಾಡುತ್ತಿದ್ದವು. ಅಂಗನಾದಿ ಆಭರಣಗಳು ಜಾರಿಬಿದ್ದವು. ಉತ್ತರೀಯವು ಕುತ್ತಿಗೆಗೆ ಸುತ್ತಿ ಹೋಗಿತ್ತು. ಕೃಷ್ಣನು ಕಂಸನನ್ನು ಸಿಂಹಾಸನದಿಂದ ಕೆಳಗೆ ಜಗ್ಗಿದ. ಕಂಸನು ಅನುಪಮವೇದನೆಯನ್ನನುಭವಿಸಿದನು.

### ಕಂಸವಿಧ್ವಂಸ

ಕೃಷ್ಣನು ಅವನ ಕೂದಲು ಹಿಡಿದು ಆ ಪ್ರೇಕ್ಷಾಗಾರದ ಮಂಚದಿಂದ ಸೆಳೆದು ರಂಗಸ್ಥಳಕ್ಕೆ ಎಳೆಯುತ್ತಾ ತಂದನು. ಅತ್ತ-ಇತ್ತ ಎಳೆದಾಡಿದನು. ದಾಮೋದರನು ದರದರ ಎಳೆದೊಯ್ಯುವಾಗ ರಂಗಭೂಮಿಯ ಸುತ್ತಲೂ ಗೆರೆಕೊರೆದು ತನ್ನ ಶರೀರದಿಂದ ಒಂದು ಕಂದಕದಂತಿರುವ ಕಾಲುವೆ ನಿರ್ಮಿಸಿದನು. ಎಡಗೈಯಿಂದ ಸಮಾಜವಾಟದಲ್ಲಿ ಎಳೆದಾಡುತ್ತಾ ಬಲಗೈಯಿಂದ ತಲೆಗೆ ಗುದ್ದುತ್ತಾ ಬಂದನು. ಕಾಲುಗಳಿಂದಲೂ ಒದ್ದನು. ಕಂಸನು ಗತಪ್ರಾಣನಾದನು.

ಕಂಸನಿಗಿಂತ ಮೊದಲು ದೈತ್ಯರಾದ ಹಾಗೂ ಮಹಾಮಲ್ಲರಾದ ಕೂಟ, ಕೋಸಲ ಅಥವಾ ತೋಶಲ ಎಂಬುವರನ್ನು ಕೃಷ್ಣ ಕೊಂದು ಹಾಕಿದ. ಛಲನೆಂಬ ಮತ್ತೊಬ್ಬನನ್ನು ಹಾಗೆಯೆ ಸುನೀಥ ಮೊದಲಾದ ಕಂಸನ ತಮ್ಮಂದಿರನ್ನು ಬಲರಾಮ ಪರಿಘದಿಂದ ಹೊಡೆದು ಕೊಂದ.

### ವೀರಸ್ವರ್ಗವು ಪಡೆಯದ ಕಂಸ

**ಸಮಾಜವಾಟೇ ಕ್ರೀಡಿತ್ವಾ ವಿಕೃಷ್ಯ ಚ ಗತಾಯುಷಮ್ ।**
**ಕೃಷ್ಣೋ ವಿಸರ್ಜಯಾಮಾಸ ಕಂಸದೇಹಮದೂರತಃ ॥ 41 ॥**

**ಅಸಂಗ್ರಾಮಹತಃ ಕಂಸಃ ಸ ಬಾಣೈಃ ಅಪರಿಕ್ಷತಃ ।**
**ಕೇಶಗ್ರಾಹಾನ್ ನಿರಸ್ತಾಸುಃ ವೀರಮಾರ್ಗಾನ್ ನಿರಾಕೃತಃ ॥ 42 ॥**

ಕೃಷ್ಣನು ಕೇವಲ ಕೈಯಿಂದ ಕೂದಲನ್ನು ಹಿಡಿದೆಳೆದ ಮಾತ್ರಕ್ಕೆ ಕಂಸ ಸತ್ತಿದ್ದರಿಂದಲೂ, ಅವನ ದೇಹದಲ್ಲಿ ಬಾಣಗಳ ಗಾಯವೂ ಇರಲಿಲ್ಲವಾದ್ದರಿಂದ ಯುದ್ಧದಲ್ಲಿ ಶಸ್ತ್ರಾಸ್ತ್ರ ಹತರಾದವರಿಗೆ ದೊರೆಯಬಹುದಾದ ವೀರಸ್ವರ್ಗವೂ ಅವನ ಪಾಲಿಗೆ ಇಲ್ಲವಾಯಿತು.

**ತಸ್ಯ ದೇಹೇ ಪ್ರಕಾಶಂತೇ ಸಹಸಾ ಕೇಶವಾರ್ಪಿತಾಃ ।**
**ಮಾಂಸಚ್ಛೇದಘನಾಃ ಸರ್ವೇ ನಖಾಗ್ರಾ ಜೀವಿತಚ್ಛಿದಃ ॥ 43 ॥**

ಆದರೆ ಕಂಸನ ಶರೀರವನ್ನು ಬಗೆದು ಅವನೊಳಗಿದ್ದ ಕಾಲನೇಮಿ ದೈತ್ಯನನ್ನು ಬ್ರಹ್ಮಾದಿ ದೇವತೆಗಳು ನೋಡುತ್ತಿದ್ದಂತೆ ಸೆಳೆದಾಗ, ಕಂಸನ ಜೀವಿತವನ್ನೆ ಕತ್ತರಿಸಿ ಹಾಕಿದ ಉಗುರುಗಳ ಗುರುತು ಮಾತ್ರ ಶೋಭಾಯಮಾನವಾಗಿ ಕಾಣುತ್ತಿತ್ತು.[2]

**ತಂ ಹತ್ವಾ ಪುಂಡರೀಕಾಕ್ಷಃ ಪ್ರಹರ್ಷಾದ್ ದ್ವಿಗುಣಪ್ರಭಃ ।**
**ವವಂದೇ ವಸುದೇವಸ್ಯ ಪಾದೌ ನಿಹತ ಕಂಟಕಃ ॥ 44 ॥**

**ಮಾತುಶ್ಚ ಶಿರಸಾ ಪಾದೌ ನಿಪೀಡ್ಯ ಯದುನಂದನಃ ।**
**ಸಾಸಿಂಚತ್ ಪ್ರಸವೋತ್ಪೀಡೈಃ ಕೃಷ್ಣಮಾನಂದನಿಃಸೃತೌ ॥ 45 ॥**

---

2. ಕಂಸವಿಧ್ವಂಸಃ:
ತಂ ಶ್ಯೇನವೇಗಮಭಿತಃ ಪ್ರತಿಸಂಚರಂತಂ ನಿಶ್ಛಿದ್ರಮಾಶು ಜಗೃಹೇ ಭಗವಾನ್ ಪ್ರಸಹ್ಯ
ಕೇಶೇಷು ಚೈನಮಭಿಮೃಶ್ಯ ಕರೇಣ ವಾಮೇನೋದ್ಧೃತ್ಯ
ದಕ್ಷಿಣ ಕರೇಣ ಜಘಾನ ಕೇsಸ್ಯ ॥ *–ತಾ.ನಿ. 13/128*
ಸಂಚಾಲಿತೇನ ಮುಕುಟೇನ ವಿಕುಂಡಲೇನ ಕರ್ಣದ್ವಯೇನ ವಿಗತಾಭರಣೋರಸಾಚ
ಸ್ರಸ್ತಾಂಬರೇಣ ಜಘನೇನ ಸುಶೋಚ್ಯರೂಪಃ ಕಂಸೋ ಬಭೂವ ನರಸಿಂಹಕರಾಗ್ರಸಂಸ್ಥಃ
ಕಂಸನ ದೇಹದಲ್ಲಿ ವಾಯುದೇವ, ಭೃಗುಋಷಿ ಕಾಲನೇಮಿ ದೈತ್ಯರಿದ್ದರು. ಮೂವರೂ ಸಹ ರಮೇಶ ಬಂಧಗಳೇ ಕಂಸನು ಸೋದರತ್ತೆಯ ಮಗ ಕೃಷ್ಣನ ಬಂಧುವೆ. ತಂಗಿಯ ಮಗನೂ ಹೌದು. ಕಂಸ ದ್ವೇಷ ಮಾಡಿದ್ದಕ್ಕಾಗಿ ತಮಸ್ಸಿಗೆ ಹೋದ. ಭೃಗುವಾದರೂ ಹರಿಯನ್ನು ಒದೆದದ್ದರಿಂದ ಹರಿಯನ್ನು ಪ್ರವೇಶಿಸಲ್ಲಿಲ್ಲ.

**ಬಲದೇವೋऽಪಿ ಧರ್ಮಾತ್ಮಾ ಕಂಸಭ್ರಾತರ ಮೂರ್ಜಿತಮ್ ।**
**ಬಾಹುಭ್ಯಾಮೇವ ತರಸಾ ಸುನಾಮಾನಮಪೋಥಯತ್ ॥ 46 ॥**

**ತೌ ಜಿತಾರೀ ಜಿತಕ್ರೋಧೌ ಚಿರವಿಪ್ರೋಷಿತೌ ವ್ರಜೇ ।**
**ಸ್ವಪಿತುರ್ಭವನಂ ವೀರೌ ಜಗ್ಮತುಃ ಹೃಷ್ಟಮಾನಸೌ ॥ 47 ॥**

ಕಮಲಾಕ್ಷನಾದ ಶ್ರೀಕೃಷ್ಣನು ಕಂಸನನ್ನು ವಿಧ್ವಂಸ ಮಾಡಿ ಲೋಕಕ್ಕೆ ಬಂದಿದ್ದ ಮಹಾಕಂಟಕವನ್ನು ಪರಿಹರಿಸಿ ದ್ವಿಗುಣ ಪ್ರಕಾಶದಿಂದ ಶೋಭಿಸಿದನು. ತಂದೆಯೂ ವಸುದೇವನ ಪಾದಗಳಿಗೆ ಎರಗಿ, ತಾಯಿಯಾದ ದೇವಕಿ ದೇವಿಯ ಪಾದಗಳನ್ನೂ ಮುಟ್ಟಿ ನಮಸ್ಕರಿಸಿದನು. ಶ್ರೀಕೃಷ್ಣನನ್ನು ನೋಡಿದ ಆನಂದದಿಂದಾಗಿ ಹಾಲುಕ್ಕಿ ಬಂದು ತನ್ನ ಸ್ತನ್ಯದಿಂದಲೇ ಕ್ಷೀರಾಭಿಷೇಕ ಮಾಡಿದಳು. ನಂತರ ಶ್ರೀಕೃಷ್ಣನು ಸಮಸ್ತ ಯಾದವರನ್ನೂ ಅವರವರ ಯೋಗ್ಯತಾನುಸಾರವಾಗಿ ಕುಶಲ ಪ್ರಶ್ನೆ ಮಾಡಿದನು.

ಇತ್ತ ಬಲರಾಮದೇವನು ಮಹಾಪರಾಕ್ರಮಿ 'ಸುನಾಮಾ' ಎಂಬ/ಅಥವಾ ಸುನೀಥನೆಂಬ ಕಂಸನ ತಮ್ಮನನ್ನು ತೋಳ್ಬಲದಿಂದಲೇ ಹೊಡೆದು ಕೊಂದು ಹಾಕಿದನು. ಕಂಸನನ್ನು ಕೊಂದ ಮೇಲೆ ಕೋಪನಟನೆಯೂ ಶಾಂತವಾಯಿತು.

ಹುಟ್ಟಿದಾಗ ತಂದೆ ತಾಯಿಯಂದಿರನ್ನು ಬಿಟ್ಟು, ಗೋಕುಲದಲ್ಲಿಯೆ ಬೆಳೆದು ಗೋಪವೇಷ ಧರಿಸಿ ಗೋವಳರಂತೆ ಇದ್ದ ರಾಮಕೃಷ್ಣರು, ಅತ್ಯಂತ ಪ್ರಮುದಿತರಾಗಿ ತಮ್ಮ ತಂದೆಯ ಮನೆಗೆ ಹೋದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಂಸ-ಕಂಸಾನುಚರವಧವೆಂಬಲ್ಲಿ
ಮುವ್ವತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 31 ವಿಷ್ಣುಪರ್ವ

# ಅಥ ಏಕತ್ರಿಂಶೋಽಧ್ಯಾಯಃ

## ಅಸ್ತಿ-ಪ್ರಾಸ್ತಿಯರ ಗೋಳಾಟ

**ಭರ್ತಾರಂ ಪತಿತಂ ದೃಷ್ಟ್ವಾ ಕ್ಷೀಣಪುಣ್ಯಮಿವ ಗ್ರಹಮ್ ।**
**ಕಂಸಪತ್ನ್ಯೋ ಹತಂ ಕಂಸಂ ಸಮಂತಾತ್ ಪರ್ಯವಾರಯನ್ ॥ 1 ॥**

**ಹಾ ಹತಾಃ ಸ್ಮ ಮಹಾಬಾಹೋ ಹತಾಶಾ ಹತಬಾಂಧವಾಃ ।**
**ವೀರಪತ್ನ್ಯೋ ಹತೇ ವೀರೇ ತ್ವಯಿ ವೀರವ್ರತಪ್ರಿಯೇ ॥ 2 ॥**

ವೈಶಂಪಾಯನರು ರಾಜನಿಗೆ – ರಾಜನ್! ಪುಣ್ಯವು ಕ್ಷಯ ಹೊಂದಿದ ನಂತರ ಭೂಮಿಯಲ್ಲಿ ಬೀಳುವ ವ್ಯಕ್ತಿಯಂತೆ, ನೆಲದ ಮೇಲೆ ಗತಾಸುವಾಗಿದ್ದ ಕಂಸನನ್ನು ನೋಡಿದ ಅವನ ಮಡದಿಯರು ಸುತ್ತುವರೆದು ಕುಳಿತರು.

ಭೂಪತಿಯಾಗಿದ್ದ ಕಂಸನು ಭೂಮಿಶಾಯಿಯಾಗಿ ಬಿದ್ದದ್ದನ್ನು ನೋಡಿ, ಮೃತವಾದ ಗಂಡುಜಿಂಕೆಯನ್ನು ನೋಡಿ ಹೆಣ್ಣುಜಿಂಕೆಗಳು ದುಃಖಪಡುವಂತೆ ದುಃಖಪಟ್ಟರು.

ಮಹಾವೀರನೇ! ವೀರವ್ರತಾಗ್ರಣಿಯಾಗಿದ್ದ ನೀನು ಮೃತನಾಗಿರಲು ನಾವೆಲ್ಲರೂ ಹಾಳಾಗಿ ಹೋದೆವು. ನಮ್ಮ ಆಸೆ ಆಕಾಂಕ್ಷೆಗಳೂ, ಬಂಧುಬಾಂಧವರೆಲ್ಲರೂ ಮೃತಪ್ರಾಯರೇ ಆದರು. ಮಹಾವೃಕ್ಷದಂತೆ ಆಶ್ರಯದಾತನಾಗಿದ್ದ ನೀನು ಮೃತನಾಗಿರಲು ನಾವೆಲ್ಲರೂ ಬುಡಕಡಿದ ವೃಕ್ಷದಂತೆ ನಿರಾಶ್ರಿತರಾಗಿದ್ದೇವೆ.

**ಕೋ ನಃ ಕೋಪಪರೀತಾಂಗೋಃ ರತಿಸಂಸರ್ಗಲಾಲಸಾಃ ।**
**ಲತಾ ಇವ ವಿಚೇಷ್ಟಂತೀಃ ಶಯನೀಯಾನಿ ನೇಷ್ಯತಿ ॥ 3 ॥**

ನಾವೆಲ್ಲರೂ ನಿನ್ನ ಸುಖಲಾಲಸೆಯಿಂದಾಗಿ ಪ್ರಣಯ ಕೋಪ ಹೊಂದಿ ನೆಲದ ಮೇಲೆ ಬಿದ್ದಿರುವಾಗ ನೀನು ಬಂದು ನಮ್ಮನ್ನು ಶಯ್ಯಾಗಾರಕ್ಕೆ ಎತ್ತಿಕೊಂಡು ಹೋಗಿ ಮಲಗಿಸಿ ಸುಖಪಡಿಸುತ್ತಿದ್ದೆ. ಇನ್ನು ಮೇಲೆ ಎತ್ತಿಕೊಂಡು ಹೋಗುವವರು ಯಾರು?

ನಿನ್ನ ಮುಖವನ್ನೀಗ ಸೂರ್ಯನು ನೀರಿಲ್ಲದ ಕಮಲವನ್ನು ಸುಡುವಂತೆ ಸುಟ್ಟುಹಾಕುತ್ತಿದ್ದಾನೆ. ನಿನ್ನ ಕರ್ಣಗಳು ಆಭರಣಗಳಿಲ್ಲದೆ ಶೋಭಿಸುತ್ತಿಲ್ಲ. ನಿನ್ನ ನೆತ್ತಿಯಲ್ಲಿದ್ದ ನವರತ್ನ ಖಚಿತ ಮುಕುಟವೆಲ್ಲಿ? ಇನ್ನು ಮುಂದೆ ನಿನ್ನ ಪತ್ನಿಯರು ಹೇಗೆ ಜೀವನ ಸಾಗಿಸಬೇಕು. ಹೇಗೆ ಜೀವಿಸಿರಬೇಕು? ಪತಿಗಳು ಪತಿವ್ರತೆಯರನ್ನು ತ್ಯಜಿಸಬಾರದಾಗಿರುವಾಗಿ ನೀನೇಕೆ ನಮ್ಮನ್ನು ಬಿಟ್ಟು ಲೋಕಾಂತರ ಸೇರಿದೆ. ನಿಜವಾಗಲೂ ಕಾಲವು ಮಹಾಬಲಿಷ್ಠವಾದದ್ದು. ಹೆಣ್ಣು ಕುರರ ಪಕ್ಷಿಯಂತೆ ವಿಲಪಿಸುತ್ತಿರುವ ನಿನ್ನ ಪತ್ನಿಯರಿಗೆ ಪ್ರತ್ಯುತ್ತರ ನೀಡಿ ಆನಂದ ಪಡಿಸು.

**ಅಹೋ ನಿಷ್ಕರುಣಾ ಯಾತ್ರಾ ನರಾಣಾಮೌರ್ಧ್ವದೇಹಕೀ**
**ಯತ್ ಪರಿತ್ಯಜ್ಯ ದಾರಾನ್ ಸ್ವಾನ್ ನಿರಪೇಕ್ಷಾ ವ್ರಜಂತಿ ಹಿ ॥ 4 ॥**

**ಅಪತಿತ್ವಂ ಸ್ತ್ರಿಯಾಃ ಶ್ರೇಯೋ ನ ತು ಶೂರಃ ಪತಿಃ ಸ್ತ್ರಿಯಾಃ ।**
**ಸ್ವರ್ಗಸ್ತ್ರೀಣಾಂ ಪ್ರಿಯಾಃ ಶೂರಾಃ ತೇಷಾಮಪಿ ಚ ತಾಃ ಪ್ರಿಯಾಃ ॥ 5 ॥**

ಪುರುಷರಿಗೆ ಪರಲೋಕಗಮನವೆಂಬುದು ಅತ್ಯಂತ ನಿಷ್ಕರುಣೆಯಿಂದ ಕೂಡಿದ್ದು. ತಮ್ಮ ಪ್ರಾಣಪ್ರಿಯರಾದ ಪ್ರೇಯಸಿಯರನ್ನೂ ತ್ಯಜಿಸಿ ಹೊರಟು ಹೋಗುವರು. ಸ್ತ್ರೀಯರಿಗೆ ಪತಿಯಿಲ್ಲದಿರುವುದೇ ಲೇಸು. ಪತಿಯಿರುವುದಾದರೂ ಶೂರವೀರರಾದವರು ಪತಿಯಾಗಲೇಬಾರದು ಶೂರರು ನಮ್ಮನ್ನು ಬಿಟ್ಟು ಸ್ವರ್ಗಸ್ತ್ರೀಯರಿಗೆ ಪ್ರಿಯರಾಗುವರು.

**ಹತ್ವಾ ಜರಾಸಂಧಬಲಂ ಜಿತ್ವಾ ಯಕ್ಷಾಂಶ್ಚ ಸಂಯುಗೇ ।**
**ಕಥಂ ಮಾನುಷ ಮಾತ್ರೇಣ ಹತಸ್ತ್ವಂ ಜಗತೀತಲೇ ॥ 6 ॥**

**ಇಂದ್ರೇಣ ಸಹ ಸಂಗ್ರಾಮಂ ಕೃತ್ವಾ ಸಾಯಕವಿಗ್ರಹಮ್ ।**
**ಅಮರ್ತ್ಯೈರಜಿತೋ ಯುದ್ಧೇ ಮರ್ತ್ಯೇನಾಪಿ ಕಥಂ ಹತಃ ॥ 7 ॥**

ವೀರಾಗ್ರಣೀಯೇ, ನೀನು ಜರಾಸಂಧನ ಬಲವನ್ನೆ ನಿರ್ನಾಮ ಮಾಡಿದೆ. ಇಂದ್ರನೊಡನೆ ಬಾಣ ಯುದ್ಧ ಮಾಡಿ ಅಮರರಾದ ದೇವತೆಗಳಿಂದಲೂ

ಸೋಲಲಿಲ್ಲ. ಮನುಷ್ಯಮಾತ್ರನಿಂದ ಹೇಗೆ ಸತ್ತೆ? ಅಕ್ಷೋಭ್ಯವಾದ ಮಹಾಸಾಗರವನ್ನು ಗೆದ್ದು ಅಖಂಡೈಶ್ವರ್ಯ ತಂದಿರುವೆ. ಇಂದ್ರನು ಮಳೆ ಸುರಿಸದಿದ್ದಾಗ ಬಾಣಗಳಿಂದ ಮೇಘಗಳಿಗೆ ಹೊಡೆದು ನೀರು ತರಿಸಿರುವೆ. ಹೋಗಲೇ ಬೇಕಿದ್ದರೆ ಹೋಗಿ ಬರುವೆ ಎಂದು ಒಂದು ಮಾತು ಹೇಳಿಯಾದರೂ ಹೋಗಬಾರದಿತ್ತೆ?

**ಏತಸ್ಮಿನ್ನಂತರೇ ಕಂಸಮಾತಾ ದೀನಾ ಪ್ರವೇಪತೀ ।**
**ಕ್ವ ಮೇ ವತ್ಸಃ ಕ್ವ ಮೇ ಪುತ್ರಃ ಇತಿ ರೋರೂಯತೀ ಭೃಶಮ್ ॥ 8 ॥**
**ಪುತ್ರಂ ಸಮಭಿವೀಕ್ಷಂತೀ ಹಾ ಹತಾಸ್ಮೀತಿ ವಾಶತೀ ।**
**ಸ್ನುಷಾಣಾಮಾರ್ತನಾದೇನ ವಿಲಲಾಪ ರುರೋದ ಹ ॥ 9 ॥**

ಕಂಸನ ಪತ್ನಿಯರು ರೋದಿಸುತ್ತಿರುವಾಗಲೇ ಕಂಸನ ತಾಯಿಯು ನಡುಗುತ್ತಾ ನನ್ನ ಮಗನೆಲ್ಲಿ? ನಿನ್ನ ಪುತ್ರನೆಲ್ಲಿ? ಎಂದು ಕೂಗುತ್ತಾ ಬಂದಳು. ಮಗನ ದುರವಸ್ಥೆ ನೋಡಿ ಅವಳ ಹೃದಯವು ಸಿಡಿದು ಹೋಯಿತು. ಬಾಡಿ ಹೋಗಿದ್ದ ಕಂಸನ ತಲೆಯನ್ನು ತೊಡೆಮೇಲಿಟ್ಟುಕೊಂಡು ಆರ್ತಸ್ವರದಿಂದ ಪುತ್ರನೇ, ನನ್ನನ್ನು ಬಿಟ್ಟು ಹೋದೆಯಾ? ನಿನ್ನ ಸಾವು ನೋಡಿದಾಗ ರಾವಣನ ಹೇಳಿದ ಮಾತು ಈಗ ಸತ್ಯವಾಗಿದೆ.

**ಏವಮೂರ್ಜಿತ ವೀರ್ಯಸ್ಯ ಮಮ ದೇವ ನಿಘಾತಿನಃ ।**
**ಬಾಂಧವೇಭ್ಯೋ ಭಯಂ ಘೋರಂ ದುರ್ನಿವಾರ್ಯಂ ಭವಿಷ್ಯತಿ ॥ 10 ॥**

ಬಾಂಧವರೇ, ನೀವೆಲ್ಲರೂ ನೋಡುತ್ತಿರುವಂತೆ ದಿನೆ ದಿನೆ ಅಭಿವೃದ್ಧಿ ಹೊಂದುತ್ತಿರುವೆ. ದೇವತೆಗಳನ್ನೂ ನಿಗ್ರಹಿಸಿರುವೆ. ಆದರೆ ನನಗೆ ಭಯವಿರುವುದು ನಮ್ಮ ಬಾಂಧವರಿಂದಲೇ, ಇದು ತಪ್ಪಿಸಲೂ ಸಾಧ್ಯವಿಲ್ಲ ಎಂದು ನಿನಗೆ ಸರಿಯಾಗಿ ಹೇಳಿದಂತಿದೆ.

ನಂತರ ಉಗ್ರಸೇನನನ್ನು ಕರೆದು – ನಿನ್ನ ಮಗನನ್ನು ನೋಡು. ವಜ್ರಾಹತ ಪರ್ವತದಂತೆ ಉರುಳಿರುವ ನಿನ್ನ ಮಗನನ್ನು ಪ್ರೇತತ್ವ ಹೊಂದಿ ಯಮಲೋಕಕ್ಕೆ ಹೋಗಿರುವ ಇವನಿಗೆ ಔರ್ಧ್ವದೇಹಿಕ ಕಾರ್ಯಗಳನ್ನು ನಡೆಸಬೇಕು. ಶ್ರೀಕೃಷ್ಣನಿಗೆ ಈ ವಿಷಯ ತಿಳಿಸಿ ಅಂತ್ಯೇಷ್ಟಿಯ ವ್ಯವಸ್ಥೆ ಮಾಡು.

**ಮರಣಾಂತಾನಿ ವೈರಾಣಿ ಶಾಂತೇ ಶಾಂತಿರ್ಭವಿಷ್ಯತಿ ।**
**ಪ್ರೇತಕಾರ್ಯಾಣಿ ಕಾರ್ಯಾಣಿ ಮೃತಃ ಕಿಮಪರಾಧ್ಯತೇ ॥ 11 ॥**

ವೈರಗಳು ಶತ್ರುಗಳು ಸಾಯುವವರೆಗೂ ಇರುತ್ತದೆ. ನಂತರ ಶತ್ರುವು ಶಾಂತನಾದೊಡನೆ ವೈರವೂ ಶಾಂತವಾಗುತ್ತದೆ. ಮೃತನಾದವನು ಮುಂದೆ ಯಾವ ಅಪರಾಧ ಮಾಡಬಲ್ಲನು? ಹೀಗೆ ಕಂಸನ ತಾಯಿ ಉಗ್ರಸೇನನಿಗೆ ಹೇಳುತ್ತಾ ಗೋಳಾಡಿದಳು. ಪುತ್ರನೇ, ನಾನು ನಿನ್ನ ತಾಯಿ ಬಂದಿದ್ದೇನೆ ಮಾತನಾಡು. ಏಳು ಎದ್ದೇಳು ನಿನ್ನ ವಿರಹದಿಂದ ಅತ್ಯಂತ ದೀನರಾಗಿರುವ ಜನರನ್ನೂ ಪುರವನ್ನೂ ರಕ್ಷಿಸು ಎಂದಳು. ಹೀಗೆ ತಾಯಿ ಹಾಗೂ ಪತ್ನಿಯರು ರೋದನ ಮಾಡುತ್ತಿರುವಾಗಲೇ ಸೂರ್ಯನು ಅಸ್ತಂಗತನಾದನು.

**ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ**
**ಕಂಸ ಪತ್ನಿ ಹಾಗೂ ತಾಯಿಯ ವಿಲಾಪವೆಂಬಲ್ಲಿ**
**ಮುವ್ವತ್ತೊಂದನೆಯ ಅಧ್ಯಾಯವು**
**॥ ಶ್ರೀಕೃಷ್ಣಾರ್ಪಣಮಸ್ತು ॥**




# ಅಥ ದ್ವಾತ್ರಿಂಶೋಽಧ್ಯಾಯಃ

## ಕಂಸನ ವಧೆಯ ಸಮರ್ಥನೆ

*ವೈಶಂಪಾಯನ ಉವಾಚ-*

ಉಗ್ರಸೇನಸ್ತು ಕೃಷ್ಣಸ್ಯ ಸಮೀಪಂ ದುಃಖಿತೋ ಯಯೌ ।
ಪುತ್ರಶೋಕಾಭಿಸಂತಪ್ತೋ ವಿಷಪೀತ ಇವ ಶ್ವಸನ್ ॥ 1 ॥

ಸ ದದರ್ಶ ಗೃಹೇ ಕೃಷ್ಣಂ ಯಾದವೈಃ ಪರಿವಾರಿತಮ್ ।
ಪಶ್ಚಾನುತ್ತಾಪಾದ್ ಧ್ಯಾಯಂತಂ ಕಂಸಸ್ಯ ನಿಧನಾವಿಲಮ್ ॥ 2 ॥

ಕಂಸನಾರೀ ವಿಲಾಪಾಂಶ್ಚ ಶ್ರುತ್ವಾ ಸಕರುಣಾನ್ ಬಹೂನ್ ।
ಗರ್ಹಮಾಣಃ ತಥಾಽಽತ್ಮಾನಂ ತಸ್ಮಿನ್ ಯಾದವಸಂಸದಿ ॥ 3 ॥

ಅಹೋ ಮಯಾತಿಬಾಲ್ಯೇನ ರೋಷಾದ್ ದೋಷಾನುವರ್ತಿನಾ ।
ವೈಧವ್ಯಂ ಸ್ತ್ರೀಸಹಸ್ರಾಣಾಂ ಕಂಸಸ್ಯಾಸ್ಯ ವಧೇ ಕೃತಮ್ ॥ 4 ॥

ಜನಮೇಜಯ! ಉಗ್ರಸೇನನು ಪುತ್ರಶೋಕದಿಂದ ಪರಿತಪಿಸುತ್ತಾ ವಿಷಣ್ಣವದನನಾಗಿ ಗರಕುಡಿದವನಂತೆ ಬಿಸಿಯುಸಿರು ಬಿಡುತ್ತಾ ದುಃಖದಿಂದ ಕೃಷ್ಣನ ಬಳ ಬಂದನು. ತಂದೆಯ ಮನೆಯಲ್ಲಿ ಯಾದವರಿಂದ ಸಹಿತನಾಗಿ ಕುಳಿತಿದ್ದ ಕೃಷ್ಣನನ್ನು ನೋಡಿ. ಬಾಷ್ಪಗದ್ಗದ ವಾದ ಕಂಠದಿಂದ ದೀನನಾದ ಉಗ್ರಸೇನನನ್ನು ನೋಡಿದನು.

ಕಂಸ ಪತ್ನಿಯರ ಅನೇಕ ರೀತಿಯಾದ ಹಾಗೂ ಕರುಣಾ ಜನಕವಾದ ಗೋಳನ್ನು ಕೇಳ ಕೃಷ್ಣನು ತನ್ನನ್ನೆ ನಿಂದಿಸಿಕೊಳ್ಳುತ್ತಾ ಜಗತ್ತಿಗೆ ಶಿಕ್ಷಣ

ನೀಡಿದನು. ಯಾರಾದರೂ ನಮ್ಮಿಂದ ತೊಂದರೆಗೀಡಾಗಿದ್ದರೆ ಅವರಿಗೆ ಸಮಾಧಾನ ಮಾಡಬೇಕೆಂಬ ನೀತಿಯನ್ನು ತೋರಿಸುತ್ತಾ ಹೀಗೆಂದನು.

ಅಹಾ! ನಾನು ಎಂತಹ ಅವಿವೇಕ ಕಾರ್ಯ ಮಾಡಿದೆ. ನನ್ನ ಕೋಪಕ್ಕೆ ಬಲಿಯಾಗಿ ಮಹಾಪರಾಧವನ್ನೆ ಮಾಡಿದೆ. ಕಂಸನನ್ನು ಕೊಂದು ಅವನ ಸಾವಿರಾರು ಪತ್ನಿಯರಿಗೆ ವೈಧವ್ಯವನ್ನುಂಟು ಮಾಡಿದೆ. ಸ್ತ್ರೀಯರ ವಿಷಯದಲ್ಲಿ ಸಾಮಾನ್ಯನಿಗೂ ದಯೆಯೇರ್ಪಡುತ್ತದೆ. ನಾನಾದರೂ ಅವರ ಪತಿಯನ್ನು ಸಂಹರಿಸಿ ಅವರಿಗೆ ದುಃಖಕ್ಕೆ ಕಾರಣನಾದೆ. ಈ ಸ್ತ್ರೀಯರ ವಿಷಯದಲ್ಲಿ ಯಮನಿಗೂ ದಯೆ ಬಂದೀತು.

## ಕಂಸನವಧೆ ಅನಿವಾರ್ಯವಾಗಿತ್ತು

**ಕಂಸಸ್ಯ ಹಿ ವಧಃ ಶ್ರೇಯಾನ್ ಪ್ರಾಗೇವಾಭಿಮತೋ ಮಮ ।**
**ಸತಾಮುದ್ವೇಜನೀಯಸ್ಯ ಪಾಪೇಷ್ವಭಿರತಸ್ಯ ಚ ॥ 5 ॥**
**ಲೋಕೇ ಪತಿತವೃತ್ತಸ್ಯ ಪುರುಷಸ್ಯಾಲ್ಪಮೇಧಸಃ ।**
**ಅಕ್ಲಿಷ್ಟಂ ಮರಣಂ ಶ್ರೇಯಃ ನ ವಿದ್ವಿಷ್ಟಸ್ಯ ಜೀವಿತಮ್ ॥ 6 ॥**
**ಕಂಸಃ ಪಾಪಪರಶ್ಚೈವ ಸಾಧೂನಾಮಪ್ಯಸಂಮತಃ ।**
**ಧಿಕ್ ಶಬ್ದ ಪತಿತಶ್ಚೈವ ಜೀವಿತೇ ಚಾಸ್ಯ ಕಾ ದಯಾ ॥ 7 ॥**

ಕಂಸನು ಯಾವಾಗಲೂ ಪಾಪಕರ್ಮರತನೂ ಸಜ್ಜನರಿಗೆ ತೊಂದರೆ ನೀಡುವವನೂ, ಸದಾಚಾರ ಭ್ರಷ್ಟನೂ ದುರಾಚಾರಿಯಾದ ಅವನನ್ನು ಇಡೀಲೋಕವೆ ದ್ವೇಷಿಸುತ್ತಿತ್ತು. ಇದಕ್ಕಾಗಿ ನಾನು ಮೊದಲೇ ಅವನನ್ನು ವಧಿಸುವುದು ಎಲ್ಲರಿಗೂ ಹಿತವೆಂದು ಹಿಂದೆಯೆ ಬಗೆದಿದ್ದೆ. ಸಾಧು ಸಜ್ಜನರ ಧಿಕ್ಕಾರ ಪಾತ್ರನಾದ ಅವನ ವಧೆ ಸರ್ವಸಮ್ಮತವಾಗಿತ್ತು.

## ಅವರವರ ಕರ್ಮವೆ ಕಾರಣ

**ಸ್ವರ್ಗೇ ತಪೋಭೃತಾಂ ವಾಸಃ ಫಲಂ ಪುಣ್ಯಸ್ಯ ಕರ್ಮಣಃ ।**
**ಇಹಾಪಿ ಯಶಸಾ ಯುಕ್ತಃ ಸ್ವರ್ಗಸ್ಥೈಃ ಅವಧಾರ್ಯತೇ ॥ 8 ॥**
**ಯದಿ ಸ್ಯುಃ ನಿರ್ವೃತಾ ಲೋಕಾಃ ಸ್ಯುಶ್ಚ ಧರ್ಮಪರಾಃ ಪ್ರಜಾಃ ।**
**ನರಾಃ ಧರ್ಮಪ್ರವೃತ್ತಾಶ್ಚ ನ ರಾಜ್ಞಾಮನಯಃ ಸ್ಪೃಶೇತ್ ॥ 9 ॥**

**ನಿಗ್ರಹೇ ದುಷ್ಟವೃತ್ತೀನಾಂ ಕೃತಾಂತಃ ಕುರುತೇ ಫಲಮ್ ।**
**ಇಷ್ಟಧರ್ಮೇಷು ಲೋಕೇಷು ಕರ್ತವ್ಯಂ ಪಾರಲೌಕಿಕಮ್ ॥ 10 ॥**

ಇಲ್ಲಿ ತಪೋನುಷ್ಠಾನ ನಿರತರು ಸ್ವರ್ಗದಲ್ಲಿ ವಾಸಿಸುತ್ತಾ ಸುಖಪಡುತ್ತಾರೆ. ಪುಣ್ಯವಂತರು ಇಲ್ಲಿಯೂ ಕೀರ್ತಿಪತಾಕೆ ಹಾರಿಸಿ; ಪರತ್ರ ದೇವತೆಗಳಿಂದ ಗೌರವ ಹೊಂದುತ್ತಾರೆ.

ಪ್ರಪಂಚದಲ್ಲಿ ಪ್ರಜೆಗಳು ಸಂತುಷ್ಟರಾಗಿದ್ದು ಧರ್ಮಾಸಕ್ತರಾಗಿ ಧರ್ಮದಲ್ಲಿಯೇ ಪ್ರವರ್ತಿಸುವರಾದರೆ ರಾಜರಿಗೆ ಆಪತ್ತು ಬರುವುದಿಲ್ಲ.

ಈ ಲೋಕದಲ್ಲಿ ರಾಜನು ಲೋಕಕಂಟಕರನ್ನು ನಿಗ್ರಹ ಮಾಡಿದರೆ ಯಮಧರ್ಮನು ಅದಕ್ಕೆ ತಕ್ಕ ಫಲನೀಡುತ್ತಾನೆ. ಧರ್ಮದಿಂದ ಪ್ರಾಪ್ತವಾದ ಸುಖವೆ ಸಮ್ಮಿತವಾಗಿರುತ್ತದೆ. ಪರಲೋಕದಲ್ಲಿ ಸುಖನೀಡುವ ಪುಣ್ಯಕರ್ಮಗಳನ್ನೆ ಪ್ರಜೆಗಳು ಮಾಡಬೇಕು.

ಧರ್ಮಾಸಕ್ತನಾದ ಮನುಷ್ಯನನ್ನು ದೇವತೆಗಳೂ ವಿಶೇಷವಾಗಿ ರಕ್ಷಿಸುವರು. ಏಕೆಂದರೆ ಲೋಕದಲ್ಲಿ ದುಷ್ಕೃತ್ಯ ಮಾಡುವವರೆ ಬಹಳ ಮಂದಿಯಿರುವರು ಪುಣ್ಯಾಜನರು ಅತಿವಿರಳವು.

**ಹತಃ ಸೋಽಯಂ ಮಯಾ ಕಂಸಃ ಸಾದ್ವೇತದವಗಮ್ಯತಾಮ್ ।**
**ಮೂಲಚ್ಛೇದಃ ಕೃತಸ್ತಸ್ಯ ವಿಪರೀತಸ್ಯ ಕರ್ಮಣಃ ॥ 11 ॥**

ಆದ್ದರಿಂದ ನಾನು ಈ ಕಂಸನನ್ನು ಕೊಂದಿದ್ದು ಲೋಕಕ್ಕೆ ಮಹಾನ್ ಕಂಟಕವನ್ನು ಪರಿಹರಿಸಿದಂತಾಗಿದೆ ಎಂದು ಭಾವಿಸಿರಿ. ಪಾಪಮೂಲನಾದ ಇವನನ್ನು ಕೊಂದು ಪಾಪದ ಮೂಲವನ್ನೆ ಕತ್ತರಿಸಿದ್ದೇನೆ. ನೀವೆಲ್ಲರೂ ದುಃಖಿತರಾದ ಸ್ತ್ರೀಯರನ್ನು ಸಮಾಧಾನಗೊಳಿಸಿರಿ ಹಾಗೆಯೆ ಅವನ ಬಳಿ ಕೆಲಸ ಮಾಡುತ್ತಿದ್ದ ಶಿಲ್ಪಿಗಳು, ಪೌರರನ್ನೂ, ಬೇಸಾಯಗಾರರನ್ನು ಸಮಾಧಾನ ಮಾಡಿರಿ.

**ಏವಂ ಬ್ರುವತಿ ಗೋವಿಂದೇ ವಿವೇಶಾವನತಾನನಃ ।**
**ಉಗ್ರಸೇನೋ ಯದೂನ್ ಗೃಹ್ಯ ಪುತ್ರಕಿಲ್ಬಿಷ ಶಂಕಿತಃ ॥ 12 ॥**
**ಸ ಕೃಷ್ಣಂ ಪುಂಡರೀಕಾಕ್ಷಂ ಉವಾಚ ಯದು ಸಂಸದಿ ।**

ಗೋವಿಂದನು ಹೀಗೆ ಹೇಳುತ್ತಿರುವಾಗಲೇ ತಲೆತಗ್ಗಿಸಿಕೊಂಡು ಕುಳಿತಿದ್ದ

ಯಾದವರೊಂದಿಗೆ ಒಳಗೆ ಬಂದನು. ಕಂಸನು ಮಾಡಿದ ಹೀನಕೃತ್ಯಗಳಿಂದ ಉಗ್ರಸೇನ ಭಯಪಟ್ಟಿದ್ದನು. ಅವನು ಕೃಷ್ಣನಿಗೆ ಹೀಗೆಂದನು.

### ಧರ್ಮಸಂಸ್ಥಾಪಕ ಕೃಷ್ಣ

**ಪುತ್ರೋ ನಿರ್ಯಾಪಿತಃ ಕ್ರೋಧಾತ್ ನೀತೋ ಯಾಮ್ಯಾಂ ದಿಶಂ ರಿಪುಃ।**
**ಸ್ವಧರ್ಮಾಧಿಗತಾ ಕೀರ್ತಿಃ ನಾಮ ವಿಶ್ರಾವಿತಂ ಭುವಿ ॥ 13 ॥**

**ಸ್ಥಾಪಿತಂ ಸತ್ಸು ಮಾಹಾತ್ಮ್ಯಂ ಶಂಕಿತಾ ರಿಪವಃ ಕೃತಾಃ ।**
**ಸ್ಥಾಪಿತೋ ಯಾದವೋ ವಂಶಃ ಗರ್ವಿತಾಃ ಸುಹೃದಃ ಕೃತಾಃ ॥ 14 ॥**

**ಪ್ರಕೃತಯೋಽನುಯಾಸ್ಯಂತಿ ಸ್ತೋಷ್ಯಂತಿ ತ್ವಾಂ ದ್ವಿಜಾತಯಃ ।**
**ಸಂಧಿಃ ವಿಗ್ರಹಮುಖ್ಯಾಸ್ತ್ವಾಂ ಪ್ರಣಮಿಷ್ಯಂತಿ ಮಂತ್ರಿಣಃ ॥ 15 ॥**

**ಹಸ್ತ್ಯಶ್ವ ರಥ ಸಂಪೂರ್ಣಂ ಪದಾತಿ ಗಣ ಸೇವಿತಮ್**
**ಪ್ರತಿಗೃಹಾಣ ಕೃಷ್ಣೇದಂ ಕಂಸಸ್ಯ ಬಲಮವ್ಯಯಮ್ ॥ 16 ॥**

ಕೃಷ್ಣನೇ! ನೀನು ಸಿಟ್ಟಿನಿಂದ ಲೋಕಕಂಟಕ ನನ್ನ ಮಗ ಕಂಸನನ್ನು ಯಮಸದನಕ್ಕೆ ಅಟ್ಟಿ ಮಹಾಕೀರ್ತಿವಂತನಾಗಿರುವೆ. ಪುನಃ ಯದುವಂಶವು ಭೂಮಿಯಲ್ಲಿ ಸ್ಥಾಪಿತವಾಯಿತು. ಸ್ವಧರ್ಮ ರಕ್ಷಿತವಾಯಿತು. ರಾಜ ಮಹಾರಾಜರಿಗೆಲ್ಲರಿಗೂ ನಿನ್ನ ಅದ್ಭುತ ಸಾಮರ್ಥ್ಯ ತಿಳಿಯಿತು. ಇದರಿಂದಾಗಿ ನಿನ್ನ ವೈರಿಗಳಿಗೆಲ್ಲ ಮರಣ ಶಂಕೆ ಬಂದಂತಾದರೆ, ನಿನ್ನ ಬಂಧು ಬಾಂಧವರಿಗೆ ಅಭಿಮಾನದಿಂದ ತಲೆಯೆತ್ತಿ ತಿರುಗಾಡುವಂತಾಯಿತು. ಮಿತ್ರರು ರಾಜರು ನಿನ್ನನ್ನೆ ಆಶ್ರಯಿಸುತ್ತಾರೆ. ಮಂತ್ರಿ ಪ್ರಜೆಗಳು ನಿನ್ನ ಅನುಸರಿಸಿ ನಡೆಯುತ್ತಾರೆ. ಬ್ರಾಹ್ಮಣರು ನಿನ್ನ ಗುಣಗಾನ ಮಾಡುವರು. ಸಂಧಿ ವಿಗ್ರಹ ಮೊದಲಾದ ರಾಜಕೀಯ ತಂತ್ರದಲ್ಲಿ ನಿಪುಣರಾದ ಮಂತ್ರಿಗಳೂ ನಿನಗೆ ತಲೆಬಾಗುತ್ತಾರೆ.

ಈ ಕಂಸನ ಚದುರಂಗ ಬಲ ಹಾಗೂ ಅಕ್ಷಯ ಸೈನ್ಯದ ಪಡೆಯೆಲ್ಲವನ್ನೂ ನೀನೇ ಪರಿಗ್ರಹಿಸು. ಧನಧಾನ್ಯಾದಿ ವ್ಯವಹಾರಗಳನ್ನು ನಿನ್ನಿಂದ ನಿಯುಕ್ತರೆ ವಹಿಸಿಕೊಳ್ಳಲಿ. ಕಂಸನ ಸ್ತ್ರೀಯರು ಸುವರ್ಣರಾಶಿ, ಯಾನಗಳೆಲ್ಲವೂ ವಶಮಾಡಿಕೊಳ್ಳಲಿ. ಕಂಸನ ಅಧ್ಯಾಯ ಮುಗಿಯಿತು. ಸಮಗ್ರ ಭೂಮಂಡಲಾಧಿಕಾರ ನಿನ್ನದೆ. ಎಲ್ಲರಿಗೂ ನೀನೇ ರಕ್ಷಕನೂ ಶಿಕ್ಷಕನೂ ಆಗಿರುವೆ.

### ಕಂಸನಿಗೆ ಅಂತ್ಯೇಷ್ಟಿ

**ಶೃಣುಷ್ವ ವದತಾಂ ವೀರ ಕೃಪಣಾನಾಮಿದಂ ವಚಃ ।**
**ಅಸ್ಯ ತ್ವತ್ಕೋಪದಗ್ಧಸ್ಯ ಕಂಸಸ್ಯಾಶುಭ ಕರ್ಮಣಃ ॥ 17 ॥**

**ತವ ಪ್ರಸಾದಾದ್ ಗೋವಿಂದ ಪ್ರೇತಕಾರ್ಯಂ ಕ್ರಿಯೇತ ಹ ।**
**ತಸ್ಯ ಕೃತ್ವಾ ನರೇಂದ್ರಸ್ಯ ವಿಪನ್ನಸ್ಯ ಔರ್ಧ್ವದೇಹಿಕಮ್ ॥ 18 ॥**

**ಪ್ರೇತ ಸತ್ಕಾರ ಮಾತ್ರೇಣ ಕೃತೇ ಬಾಂಧವ ಕರ್ಮಣಿ ।**
**ಆನೃಣ್ಯಂ ಲೌಕಿಕಂ ಕೃಷ್ಣ ಗತಾಃ ಕಿಲ ಭವಂತಿ ಹಿ ॥ 19 ॥**

ವಾಗ್ಮಿ ಶ್ರೀಕೃಷ್ಣನೇ, ದೀನನಾದ ನಾನು ಹೇಳುತ್ತಿರುವ ಮಾತನ್ನು ಕೇಳು. ನಿನ್ನ ಕೋಪಕ್ಕೆ ತುತ್ತಾಗಿ ಹೋದ ಈ ಪಾಪಕರ್ಮಿಯಾದ ಕಂಸನಿಗೆ ನೀನು ಅನುಮತಿಯಿತ್ತರೆ ಪ್ರೇತಕಾರ್ಯಗಳನ್ನು ಮಾಡುತ್ತೇನೆ. ಮೃತನಿಗೆ ಪ್ರೇತ ಸಂಸ್ಕಾರ ಮಾತ್ರದಿಂದ ಬಂಧುಗಳ ಕರ್ತವ್ಯ ನಡೆಸಿದಂತಾಗುತ್ತದೆ. ಲೌಕಿಕ ಋಣವು ತೀರುತ್ತದೆ. ಆದ್ದರಿಂದ ಚಿತೆಗೇರಿಸಿ ವಿಧಿಪೂರ್ವಕ ಅಗ್ನಿ ಸಂಸ್ಕಾರ ಮಾಡಿ ಜಲತರ್ಪಣ ನೀಡಿ ಅವನ ಋಣದಿಂದ ಮುಕ್ತನಾಗಬೇಕೆಂಬ ನನ್ನ ಆಸೆ ಪೂರೈಸು ಕಂಸನ ಉತ್ತರಕ್ರಿಯೆ ಮುಗಿದ ನಂತರ ನಾನು ನನ್ನ ಪತ್ನಿ ಹಾಗು ಸೊಸೆಯರೊಂದಿಗೆ ಕಾಡಿಗೆ ಹೋಗಿ ಮೃಗಗಳೊಂದಿಗೆ ಜೀವಿಸುತ್ತೇನೆ.

### ಉಗ್ರಸೇನನಿಗೆ ಕೃಷ್ಣನ ಸಾಂತ್ವನ

**ಏತಚ್ಛ್ರುತ್ವಾ ವಚಸ್ತಸ್ಯ ಕೃಷ್ಣಃ ಪರಮ ವಿಸ್ಮಿತಃ ।**
**ಪ್ರತ್ಯುವಾಚೋಗ್ರಸೇನಂ ವೈ ಸಾಂತ್ವ ಪೂರ್ವಮಿದಂ ವಚಃ ॥ 20 ॥**

**ಕಾಲಯುಕ್ತಮಿದಂ ತಾತ ತವೈತದ್ ಯದ್ ಪ್ರಭಾಷಿತಮ್ ।**
**ಸದೃಶಂ ರಾಜಶಾರ್ದೂಲ ವೃತ್ತಸ್ಯ ಚ ಕುಲಸ್ಯ ಚ ॥ 21 ॥**

ತಾತ! ನೀನಾಡಿರುವ ಮಾಡುಗಳು ಈ ಸಮಯಕ್ಕೆ ಅನುಗುಣವಾಗಿದೆ. ಈ ಮಾತು ನಿನ್ನ ಚಾರಿತ್ರ್ಯ, ಕುಲಕ್ಕೂ ಯೋಗ್ಯವಾಗಿದೆ.

**ಕುಲೇ ಮಹತಿ ತೇ ಜನ್ಮ ವೇದಾನ್ ವಿದಿತವಾನಸಿ ।**
**ಕಥಂ ನ ಜ್ಞಾಯತೇ ತಾತ ನಿಯತಿಃ ದುರತಿಕ್ರಮಾ ॥ 22 ॥**

**ಸ್ಥಾವರಾಣಾಂ ಚ ಭೂತಾನಾಂ ಜಂಗಮಾನಾಂ ಚ ಪಾರ್ಥಿವ ।**
**ಪೂರ್ವಜನ್ಮ ಕೃತಂ ಕರ್ಮ ಕಾಲೇನ ಪರಿಪಚ್ಯತೇ ॥ 23 ॥**
**ಲೋಕಪಾಲ ಸಮಾಸ್ತಾತ ಮಹೇಂದ್ರ ಸಮವಿಕ್ರಮಾಃ**
**ಕ್ಷಿತಿಪಾಲಾಃ ಕೃತಾಂತೇನ ನೀಯಂತೇ ನೃಪಸತ್ತಮ ॥ 24 ॥**

ಉಗ್ರಸೇನನೇ, ಮಹಾಕುಲದಲ್ಲಿ ಜನಿಸಿ, ವೇದಾಧ್ಯಯನ ಪಟುವಾಗಿದ್ದರೂ ನೀನು "ದೈವ ನಿಯಮವನ್ನುಂಘಿಸಿ ನಡೆಯಲಾಗದು' ಎಂಬ ನಿಯಮ ತಿಳಯದೆ ಹೋಗಿರುವುದು ನನಗೆ ಆಶ್ಚರ್ಯವಾಗಿದೆ. ಕಂಸನ ಮರಣ ಹೀಗೆಯೇ ಆಗಬೇಕಿತ್ತು. ಪ್ರತಿಯೊಂದು ಸ್ಥಾವರ-ಜಂಗಮಾತ್ಮಕ ಪ್ರಾಣಿಗಳು ಈ ಜನ್ಮದಲ್ಲಿ ಶುಭಾಶುಭಫಲ ಪಡೆಯಲು ಹಿಂದಿನ ಜನ್ಮಗಳ ಕರ್ಮವೆ ಕಾರಣವಾಗಿರುತ್ತದೆ.

ರಾಜನೇ! ಶಾಸ್ತ್ರಶ್ರವಣ ಮಾಡಿದವರು, ಧನವಂತರೂ, ದಾನಿಗಳು, ಸುಂದರವಾಗಿರುವವರು, ಬ್ರಾಹ್ಮಣಪ್ರಿಯರು, ನೀತಿಸಂಪನ್ನರು, ದೀನರನ್ನುದ್ಧರಿಸುವವರು, ಲೋಕಪಾಲಕರಿಗೆ ಸದೃಶರಾದ ಇಂದ್ರ ಪರಾಕ್ರಮಿಗಳೂ ಸಕಾಲ ಬಂದೊಡನೆಯೇ ತಾರತಮ್ಯವಿಲ್ಲದೆ ಆ ಸಮವರ್ತಿ ಯಮನ ವಶರಾಗುವರು.

ಎಂಥೆಂಥ ಧಾರ್ಮಿಕರಿದ್ದರು. ಪ್ರಜಾಪಾಲನೆಯ ತತ್ಪರರು, ಸ್ವವಿಹಿತ ವೃತ್ತಿಯಲ್ಲಿಯೆ ನಿರತರು, ದಾಂತರೂ ಸಹ ಕಾಲನಿಂದ ಸೆಳೆದೊಯ್ಯಲ್ಪಟ್ಟರು. ಇದೆಲ್ಲ ಅವರವರು ಮಾಡಿದ ಪುಣ್ಯಾಪಾಪಗಳೇ ಸುಖದುಃಖ ರೂಪದಿಂದ ಕಾಣುತ್ತವೆ. ಇದೊಂದು ಕಣ್ಣಿಗೆ ಕಾಣದ ಭಗವಂತನ ಇಚ್ಛೆಯು ದೇವತೆಗಳೂ ಹರೀಚ್ಛೆಯನ್ನು ತಿಳಯಲಾರರು.

**ಕಾಲೇನಾಭಿಹತಃ ಕಂಸಃ ಪೂರ್ವಕರ್ಮಪ್ರಚೋದಿತಃ ।**
**ನ ಹ್ಯಹಂ ಕಾರಣಂ ತತ್ರ ಕಾಲಃ ಕರ್ಮ ಚ ಕಾರಣಮ್ ॥ 25 ॥**
**ಅಥವಾಹಂ ಭವಿಷ್ಯಾಮಿ ಕಾರಣಂ ನಾತ್ರ ಸಂಶಯಃ ।**
**ಪರಾಯಣಪರಃ ಕಾಲಃ ಕಿಂ ಕರಿಷ್ಯತ್ಯಕಾರಣಃ ॥ 26 ॥**

ಕಂಸನು ಹಿಂದೆ ತಾನು ಮಾಡಿದ ಪಾಪಕರ್ಮಗಳಿಂದಾಗಿ ಕಾಲ ಬಂದಾಗ ಮೃತನಾದನು. ಅವನ ಮರಣಕ್ಕೆ ಕಾರಣ ನಾನಲ್ಲ. ಅವನ ಪೂರ್ವಕರ್ಮ ಹಾಗೂ ಸನ್ನಿಹಿತಕಾಲ ಕಾರಣವಾಗಿವೆ. ಹುಟ್ಟು ಸಾವು ನಿಯತವಾಗಿವೆ

ಅಥವಾ ಜಡವಾದ ಕಾಲವೇನು ಮಾಡೀತು? ಕಾಲ ನಿಯಾಮಕ ನಾನೇ ಕಾರಣ. ಕಾಲನೂ ನಾನೇ, ಕಾಲವು ಬಲಿಷ್ಠವಾದದ್ದು.

ಅವನ ಗತಿ ತಿಳಿಯುವುದು ಸುಲಭವಲ್ಲ. ಪುರುಷ– ಪ್ರಕೃತಿಗಳ ಅಂತರಗಳನ್ನು ವಿವೇಕಿಗಳು ಮಾತ್ರ ತಿಳಿಯುವರು. ಮೃತನಾದ ಈ ಕಂಸನಿಗೆ ರಾಜೋಚಿತ ಸಂಸ್ಕಾರವಾಗುತ್ತದೆ. ಈಗ ಹೇಳುವ ನನ್ನ ಮಾತು ಕೇಳು

### ಶ್ರೀಕೃಷ್ಣನ ರಾಜಾನಾಸಕ್ತ

**ನ ಹಿ ರಾಜ್ಯೇನ ಮೇ ಕಾರ್ಯಂ ನಾಪ್ಯಹಂ ನೃಪ! ಕಾಂಕ್ಷಿತಃ ।**
**ನ ಚಾಪಿ ರಾಜ್ಯಲುಬ್ಧೇನ ಮಯಾ ಕಂಸೋ ನಿಪಾತಿತಃ ॥ 27 ॥**

**ಕಿಂತು ಲೋಕಹಿತಾರ್ಥಾಯ ಕೀರ್ತ್ಯರ್ಥಂ ಚ ಸುತಸ್ತವ ।**
**ವ್ಯಂಗಭೂತಃ ಕುಲಸ್ಯಾಸ್ಯ ಸಾನುಜೋ ವಿನಿಪಾತಿತಃ ॥ 28 ॥**

**ಅಹಂ ಸ ಏವ ಗೋಮಧ್ಯೇ ಗೋಪೈಃ ಸಹ ವನೇಚರಃ ।**
**ಪ್ರೀತಿಮಾನ್ ವಿಚರಿಷ್ಯಾಮಿ ಕಾಮಚಾರೀ ಯಥಾ ಗಜಃ ॥ 29 ॥**

**ನ ಮೇ ಕಾರ್ಯಂ ನೃಪತ್ವೇನ ವಿಜ್ಞಾಪ್ಯಂ ಕ್ರಿಯತಾಮಿದಮ್ ॥ 30 ॥**

ರಾಜನೇ! ನಾನು ರಾಜ್ಯ ಭೋಗ ಅಧಿಕಾರಗಳ ಆಸೆಯಿಂದ ಕಂಸನನ್ನು ಕೊಂದದ್ದಲ್ಲ. ಕೇವಲ ಲೋಕಹಿತಕ್ಕಾಗಿಯೂ, ಧರ್ಮ ಸಂಸ್ಥಾಪನೆಗಾಗಿಯೂ ಕೀರ್ತಿಗಾಗಿಯೂ ಈ ಕುಲ ಕಂಟಕನನ್ನು ಕೊಂದಿರುವೆ. ನನಗೆ ರಾಜ್ಯವೂ ಬೇಡ, ಐಶ್ವರ್ಯವೂ ಬೇಡ. ಕಾಡಿನಲ್ಲಿ ಸ್ವೇಚ್ಛೆಯಿಂದ ವಿಹರಿಸುವ ಸಲಗದಂತೆ ನಾನು ಇನ್ನು ಮುಂದೆಯೂ ಗೋವುಗಳ ಮಧ್ಯದಲ್ಲಿ ಸಂಚರಿಸುವೆ. ಇದನ್ನು ನೂರು ಬಾರಿ ಶಪಥ ಮಾಡಿ ಹೇಳುತ್ತೇನೆ. ನನಗೆ ರಾಜ್ಯದಿಂದಾಗ– ಬೇಕಾದದ್ದೇನೂ ಇಲ್ಲ. (ವೈಕುಂಠಾಧಿಪತ್ಯವಿರುವ ನನಗೆ ಈ ಸಕುಂಠ ರಾಜ್ಯವೇತಕೆ) ಈಗ ನನ್ನ ಮಾತೊಂದು ನಡೆಸಿಕೊಡಬೇಕು.

### ಉಗ್ರಸೇನನಿಗೆ ಪಟ್ಟಾಭಿಷೇಕ

**ಯದಿ ತೇ ಮತ್ಪ್ರಿಯಂ ಕಾರ್ಯಂ ಯದಿ ವಾ ನಾಸ್ತಿ ತೇ ವ್ಯಥಾ ।**
**ಮಯಾ ನಿಸೃಷ್ಟಂ ರಾಜ್ಯಂ ಸ್ವಂ ಚಿರಾಯ ಪ್ರತಿಗೃಹ್ಯತಾಮ್ ॥ 31 ॥**

**ಭವಾನ್ ರಾಜಾಸ್ತು ಮಾನ್ಯೋ ಮೇ ಯದೂನಾಮಗ್ರಣೀಃ ಪ್ರಭುಃ ।**
**ವಿಜಯಾಯಾಭಿಷಿಚ್ಯಸ್ವ ಸ್ವರಾಜ್ಯೇ ನೃಪಸತ್ತಮ ॥ 32 ॥**

ಉಗ್ರಸೇನ ರಾಜನೇ ನೀನು ಯದುಕುಲದಲ್ಲಿ ಜ್ಯೇಷ್ಠನಾಗಿದ್ದು ನನಗೂ ಮಾನ್ಯನೆ ಆಗಿರುವಿ. ಆದ್ದರಿಂದ ಈ ಭೋಜಕುಲಕ್ಕೆಲ್ಲ ನೀನೆ ರಾಜನಾಗಿರು. ನಿನ್ನದೇ ಆದ ಪಟ್ಟಾಭಿಷಿಕ್ತನಾಗು. ನನಗೆ ನೀನು ಪ್ರಿಯವಾದ ಕಾರ್ಯ ಮಾಡಬೇಕೆಂಬ ಅಭಿಲಾಷೆಯಿದ್ದಲ್ಲಿ ಲೋಕಹಿತಕ್ಕಾಗಿ ನನಗೆ ನೀಡಿರುವ ರಾಜ್ಯವನ್ನು ಬಹುಕಾಲ ಆಳುವವನಾಗು.

### ಕಂಸನ ಉತ್ತರಕ್ರಿಯೆ

ಗೋವಿಂದನ ಮಾತುಗಳಿಗೆ ಉಗ್ರಸೇನ ಸುಮ್ಮನಾದ. ನಾಚಿಕೆಯಿಂದ ತಲೆತಗ್ಗಿಸಿದ ಉಗ್ರಸೇನನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ಕೃಷ್ಣನ ಆದೇಶದಂತೆ ಯಾದವರೆಲ್ಲರೂ ಉಗ್ರಸೇನ ಮಹಾರಾಜರನ್ನು ದೇವತೆಗಳು ಇಂದ್ರನ್ನೆಂಬಂತೆ ಅನುಸರಿಸಿದರು. ರಾತ್ರಿ ಕಳೆದ ಮೇಲೆ ಬೆಳಗ್ಗೆ ಸೂರ್ಯೋದಯವಾಯಿತು. ಯಾದವರೆಲ್ಲರೂ ಸೇರಿ ಕಂಸನ ದೇಹವನ್ನು ಶಿಬಿಕೆಯಲ್ಲಿಟ್ಟು ಯಮುನಾ ನದಿಯ ತೀರದಲ್ಲಿ ವಿಧಿವತ್ತಾಗಿ ದಹನ ಕ್ರಿಯೆ ನಡೆಸಿದರು– ಯಾದವರೆಲ್ಲರೂ ಕಂಸ, ಸುನಾಮಾರಿಬ್ಬರಿಗೂ ಜಲತರ್ಪಣ ನೀಡಿದರು.

**ಹಿರಣ್ಯಸ್ಯ ಸುವರ್ಣಸ್ಯ ದಶ ಕೋಟೀಃ ತಥಾ ಹರಿಃ ।**
**ಗಾವೋ ರತ್ನಾನಿ ವಾಸಾಂಸಿ ಗ್ರಾಮಾನ್ ನಗರ ಸಮ್ಮತಾನ್ ।**
**ದದೌ ಕಂಸಂ ಸಮುದ್ದಿಶ್ಯ ಬ್ರಾಹ್ಮಣೇಭ್ಯೋ ನೃಪೋತ್ತಮಃ ॥ 33 ॥**

ರಾಜನಾದ ಉಗ್ರಸೇನನು (ಹರಿಃ) ಕಂಸನ ಶ್ರಾದ್ಧಾಂಗ ಬ್ರಾಹ್ಮಣರಿಗೆ ಹತ್ತು ಕೋಟಿ ಸುವರ್ಣ, ಗೋವುಗಳು, ವಸ್ತ್ರಗಳನ್ನು ದಾನವಾಗಿ ನೀಡಿ ಕಂಸನಿಗೆ (ಭೃಗುವಿಗೆ) ಅಕ್ಷಯ ಲೋಕಸಿಗಲೆಂದು ನೀಡಿದನು.

ಹೀಗೆ ಜಲಾಂಜಲಿ ನೀಡಿ ದುಃಖದಿಂದ ಉಗ್ರಸೇನನೊಂದಿಗೆ ಮಥುರಾಪಟ್ಟಣಕ್ಕೆ ಬಂದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಉಗ್ರಸೇನ ಪಟ್ಟಾಭಿಷೇಕ –ಕಂಸನ ಅಂತ್ಯೇಷ್ಟಿವೆಂಬಲ್ಲಿ
ಮುವತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥



## ಅಥ ತ್ರಯಸ್ತ್ರಿಂಶೋಽಧ್ಯಾಯಃ

### ಸಾಂದೀಪಿನೀ ಗುರುಗಳು

**ಸ ಕೃಷ್ಣಸ್ತತ್ರ ಬಲವಾನ್ ರೌಹಿಣೇಯೇನ ಸಂಗತಃ ।**
**ಮಥುರಾಂ ಯಾದವಾಕೀರ್ಣಾಂ ಪುರೀಂ ತಾಂ ಸುಖಮಾವಸತ್ ॥ 1 ॥**

**ಪ್ರಾಪ್ತಯೌವ್ವನದೇಹಸ್ತು ಯುಕ್ತೋ ರಾಜಶ್ರಿಯಾ ಜ್ವಲನ್ ।**
**ಚಚಾರ ಮಥುರಾಂ ವೀರಃ ಸ ರತ್ನಾಕರ ಭೂಷಣಾಮ್ ॥ 2 ॥**

ಬಲಿಷ್ಠನಾದ ಶ್ರೀಕೃಷ್ಣನು ಬಲರಾಮನೊಂದಿಗೆ ಯಾದವರಿಂದ ಕೂಡಿದ ಮಥುರೆಯಲ್ಲಿ ಸುಖವಾಗಿ ವಾಸ ಮಾಡುತ್ತಿದ್ದನು. ಕಂಸವಧಾ ನಂತರ ತಂದೆತಾಯಿಗಳನ್ನು ಬಂಧನದಿಂದ ಬಿಡುಗಡೆ ಮಾಡಿ, ಅವರಿಗೆ ವಂದಿಸಿದನು. ತಂದೆ ವಸುದೇವನು ಶ್ರೀಕೃಷ್ಣ-ಬಲರಾಮರಿಗೆ ಉಪನಯನ ವಯಸ್ಸು ಪ್ರಾಪ್ತವಾಗಿದೆಯೆಂದು ತಿಳಿದು ಗರ್ಗಾಚಾರ್ಯರನ್ನು ಕರೆಸಿದನು.[1] ಅವರು

---

1. ದ್ವಿಜತ್ವ :
ದ್ವಿಜತ್ವಮುಪಗಮ್ಯ ಮುಮೋಚ ನಂದಮ್ । *–ತಾ.ನಿ. 14/1*
ಹರಿವಂಶದಲ್ಲಿ ಉಪನಯನ ಸಂಸ್ಕಾರ ಹೇಳಿಲ್ಲವಾದರೂ ಸೂಚಿತಃ ಗುರುಕುಲಕ್ಕೆ ವೇದಾಧ್ಯಯನಕ್ಕೆ ಹೋದರೆಂದ ಮೇಲೆ ಸಂಸ್ಕಾರವಾಗಿಯೆ ಇರಬೇಕು ಅಥವಾ ಹರಿವಂಶದಲ್ಲಿರುವ ಪ್ರಾಪ್ತಯೌವನ ದೇಹಸ್ತು – ಉಪನಯನಯೋಗ್ಯ ದೇಹ ಪ್ರಾಪ್ತವಾದಾಗ ಎಂದು, 'ಯುಕ್ತ' ಎಂಬ ಪದ ಉಪನಯನ ಯುಕ್ತನಾದನೆಂದು, *'ರಾಜಶ್ರಿಯಾ ಜ್ವಲನ್'* ಎಂಬುದರಿಂದ ಗಾಯತ್ರೀ ಜಪ, ಅಗ್ನಿಕಾರ್ಯಗಳನ್ನು ಮಾಡುತ್ತಿದ್ದನೆಂದು ಸೂಚಿತವು.

ಬಂದು ಉಪನಯನಕ್ಕೆ ಬೇಕಾದ ಸಾಮಗ್ರಿ ಸಿದ್ಧಪಡಿಸಿ ಉಪವೀತರನ್ನಾಗಿ ಮಾಡಿದರು. ಗಾಯತ್ರೀ ಉಪದೇಶಿಸಿದರು. ಅಸಂಖ್ಯ ಗೋದಾನಗಳಾದವು. ಉಪನಯನಾಂತರದಲ್ಲಿ ಅಗ್ನಿಕಾರ್ಯ ಮಾಡಿ ಲೋಕಶಿಕ್ಷಣ ನೀಡಿದನು.

**ಕಸ್ಯಚಿತ್ ತ್ವಥ ಕಾಲಸ್ಯ ಸಹಿತೌ ರಾಮಕೇಶವೌ ।**
**ಗುರುಂ ಸಾಂದೀಪನೀಂ ಕಾಶ್ಯಂ ಅವಂತೀಪುರ ವಾಸಿನಮ್ ॥ 3 ॥**

**ನಿವೇದ್ಯ ಗೋತ್ರಂ ಸ್ವಾಧ್ಯಾಯಮಾಚಾರೇಣಾಭ್ಯಲಂಕೃತೌ ।**
**ಪ್ರತಿಜಗ್ರಾಹ ತೌ ಕಾಶ್ಯೋ ವಿದ್ಯಾಃ ಪ್ರಾದಾಚ್ಚ ಕೇವಲಾಃ ॥ 4 ॥**

**ಅಹೋರಾತ್ರೈಃ ಚತುಃಷಷ್ಟ್ಯಾ ಸಾಂಗವೇದಮಧೀಯತಾಮ್ ।**
**ಅತೀವಾಮಾನುಷೀಂ ಮೇಧಾಂ ಚಿಂತಯಿತ್ವಾ ತಯೋರ್ಗುರುಃ ।**
**ಮೇನೇ ತಾವಾಗತೌ ವೀರೌ ದೇವೌ ಚಂದ್ರ ದಿವಾಕರೌ ॥ 5 ॥**

ಒಂದು ದಿನ ಪ್ರಾಕೃತರಂತೆ ಅವರಿಬ್ಬರೂ ಧನುರ್ವೇದಾದಿಗಳ ಅಧ್ಯಯನಕ್ಕೆಂದು ಕಾಶ್ಯಪ ಗೋತ್ರದ ಕಾಶೀ ದೇಶದಲ್ಲಿದ್ದು ಪ್ರಸ್ತುತ ಆವಂತಿಯಲ್ಲಿರುವ ಸಾಂದೀಪಿನೀ ಆಚಾರ್ಯರ ಬಳ ಹೋದರು. ಅಲ್ಲಿ ತಮ್ಮ ಗೋತ್ರ ಹೇಳ ಅಂದಿನವರೆಗೂ ತಾವು ಕಲಿತ ವಿದ್ಯೆಯನ್ನು ಹೇಳ, ಹೆಚ್ಚಿನ ವಿದ್ಯೆಗಾಗಿ ತಮ್ಮ ಬಳಗೆ ಬಂದವೆಂದರು. ಗುರುಕುಲ ವಾಸದಲ್ಲಿ ತೀರ ಸಾಮಾನ್ಯ ಜನರಂತೆ ಇರತೊಡಗಿದರು. ಮಥುರೆಯಲ್ಲಿ ರಾಜೈಶ್ವರ್ಯ ಭೋಗಿಸಿದರೂ ಗುರುಗಳ ಮುಂದೆ ವಿನೀತ ವೇಷದಲ್ಲಿ ಸರಳವಾಗಿದ್ದರು. ಗುರುಗಳ ಸೇವೆ ಶುಶ್ರೂಷೆ ಭಕ್ತಿಯಿಂದ ಮಾಡಿದರು. ಇದರಿಂದ ಸುಪ್ರೀತರಾದ ಸಾಂದೀಪಿನೀ ಗುರುಗಳು ಪ್ರೀತ್ಯಾದರ ಪೂರ್ವಕ ವಿದ್ಯೆಯನ್ನು ಹೇಳಕೊಟ್ಟರು. ಮಹಾಮೇಧಾವಿಗಳಾದ್ದರಿಂದ ಏಕಪಾಠಿಗಳಾದ್ದರಿಂದ ಒಂದೇ ಬಾರಿ ಹೇಳದ್ದನ್ನು ಗ್ರಹಿಸಿ ಬಿಡುತ್ತಿದ್ದರು. ಹೀಗಾಗಿ ಅರವತ್ತ ನಾಲ್ಕು ದಿನಗಳಲ್ಲಿ ಸಾಂಗೋಪಾಂಗ ವೇದಗಳನ್ನೆಲ್ಲ ಅಧ್ಯಯನ ಮಾಡಿಬಿಟ್ಟರು.

ಕೆಲವೆ ದಿವಸಗಳಲ್ಲಿಯೇ ಗುರುಗಳು ರಾಮಕೃಷ್ಣರಿಗೆ ಶಿಕ್ಷಾ, ಸಂಗ್ರಹ, ಸಿದ್ಧಿ, ಯೋಗಗಳೆಂಬ ನಾಲ್ಕು ಪಾದಯುಕ್ತ ಧನುರ್ವೇದವನ್ನು, ರಹಸ್ಯದಿಂದ ಯುಕ್ತವಾದ ಶಸ್ತ್ರಗಳನ್ನೂ ಉಪದೇಶಿಸಿದರು. ಅತಿಮಾನುಷ ಮೇಧಾಶಕ್ತಿಯಿರುವ ಇವರಿಬ್ಬರನ್ನೂ ಸೂರ್ಯ ಚಂದ್ರರೆ ಬಂದಿರುವರೆಂದು

ತಿಳಿದರು. ಪರ್ವ ಉತ್ಸವ ಕಾಲಗಳಲ್ಲಿ ಸಾಕ್ಷಾತ್ ವಿಷ್ಣುವನ್ನೆ ಪೂಜಿಸುತ್ತಿದ್ದನ್ನು ನೋಡಿ ಗುರುಗಳು ಸಂತುಷ್ಟರಾದರು.

## ಗುರುಗಳಿಗೆ ಗುರುದಕ್ಷಿಣೆ

**ಗುರುಂ ಸಾಂದೀಪನೀಂ ಕೃಷ್ಣಃ ಕೃತಕೃತ್ಯೋಽಭ್ಯಭಾಷತ ।**
**ಗುರ್ವರ್ಥಂ ಕಿಂ ದದಾನೀತಿ ರಾಮೇಣ ಸಹ ಭಾರತ ॥ 6 ॥**

**ತಯೋಃ ಪ್ರಭಾವಂ ಸ ಜ್ಞಾತ್ವಾ ಗುರುಃ ಪ್ರೋವಾಚ ಹೃಷ್ಟವಾನ್ ।**
**ಪುತ್ರಮಿಚ್ಛಾಮ್ಯಹಂ ದತ್ತಂ ಯೋ ಮೃತೋ ಲವಣಾಂಭಸಿ ॥ 7 ॥**

**ಪುತ್ರ ಏಕೋಽಪಿ ಮೇ ಜಾತಃ ಸ ಚಾಪಿ ತಿಮಿನಾ ಹತಃ ।**
**ಪ್ರಭಾಸೇ ತೀರ್ಥಯಾತ್ರಾಯಾಂ ತಂ ಮೇ ತ್ವಂ ಪುನರಾನಯ ॥ 8 ॥**

ಅಧ್ಯಯನ ಪೂರ್ಣವಾದ ಮೇಲೆ ರಾಮಕೃಷ್ಣರು ಮಥುರೆಗೆ ಪ್ರಯಾಣ ಮಾಡಲು ಹೊರಟು ನಿಂತರು. ಆಗ ಕೃಷ್ಣನು ಗುರುಗಳಿಗೆ ಆಚಾರ್ಯರೇ! ತಮಗೆ ಗುರುದಕ್ಷಿಣೆಯನ್ನು ಏನು ಕೊಡಲಿ ಎಂದನು. ಅರವತ್ತನಾಲ್ಕು ದಿವಸಗಳಲ್ಲಿ ಅವರ ಮಹಾಮಹಿಮೆಯನ್ನು ಕಂಡಿದ್ದರು. ಅವರು ಕೃಷ್ಣ ಹಿಂದೊಮ್ಮೆ ನಾನು ತೀರ್ಥಯಾತ್ರೆಗೆಂದು ಪತ್ನೀಪುತ್ರ ಸಹಿತನಾಗಿ ಪ್ರಭಾಸ ಕ್ಷೇತ್ರಕ್ಕೆ ಹೋಗಿದ್ದೆ. ಆಗ ಅಲ್ಲಿ ದಂಡೆಯಲ್ಲಿ ಕುಳಿತಿರುವಾಗ ಅಕಸ್ಮಾತ್ ಒಂದು ದೊಡ್ಡ ತಿಮಿಯು ನನ್ನ ಮಗನನ್ನು ಬಾಯಲ್ಲಿ ಕಚ್ಚಿಕೊಂಡು ಹೋಯಿತು. ನನಗೆ ಇರುವವನೆ ಒಬ್ಬ ಮಗ. ಅವನೂ ಹೀಗೆ ಮೃತನಾದ. ಅವನನ್ನು ತಂದು ಕೊಟ್ಟರೆ ಅದು ನನಗೆ ನಿಜವಾದ ಗುರುದಕ್ಷಿಣೆಯಾಗಿ ಆನಂದವಾಗುವುದೆಂದರು.

**ತಥೇತ್ಯಬ್ರವೀತ್ ಕೃಷ್ಣೋ ರಾಮಸ್ಯಾನುಮತೇ ಸ್ಥಿತಃ ।**
**ಗತ್ವಾ ಸಮುದ್ರಂ ತೇಜಸ್ವೀ ವಿವೇಶಾಂತರ್ಜಲಂ ಹರಿಃ ॥ 9 ॥**

**ಸಮುದ್ರಃ ಪ್ರಾಂಜಲಿಃ ಭೂತ್ವಾ ದರ್ಶಯಾಮಾಸ ಸ್ವಂ ತದಾ ।**
**ತಮಾಹ ಕೃಷ್ಣಃ ಕ್ವಾಸೌ ಭೋಃ ಪುತ್ರಃ ಸಾಂದೀಪನೇರಿತಿ ॥ 10 ॥**

**ಸಮುದ್ರಃ ಪ್ರತ್ಯುವಾಚೇದಂ ದೈತ್ಯಃ ಪಂಚಜನೋ ಮಹಾನ್ ।**
**ತಿಮಿರೂಪೇಣ ತಂ ಬಾಲಂ ಗ್ರಸ್ತವಾನಿತಿ ಮಾಧವ ॥ 11 ॥**

ಶ್ರೀಕೃಷ್ಣನು ಬಲರಾಮನ ಕಡೆ ನೋಡಿದಾಗ ಅವನು ಆಗಲೆಂದು ಸೂಚಿಸಿದನು. ನಂತರ ಶ್ರೀಕೃಷ್ಣನು ಸಮುದ್ರದ ಬಳ ಸಾರಿ ನೀರಿನಲ್ಲಿ ಧುಮುಕಿದನು. ಕೂಡಲೇ ಸಮುದ್ರರಾಜನು ಬದ್ಧಾಂಜಲಿಯಾಗಿ ಶ್ರೀಕೃಷ್ಣನಿಗೆ ನಮಸ್ಕರಿಸಿದನು. ತನ್ನ ಮುಂದೆ ದರ್ಶನ ನೀಡುತ್ತಿರುವ ಸಮುದ್ರರಾಜನನ್ನು ಕುರಿತು ಸಾಂದೀಪಿನೀ ಆಚಾರ್ಯರ ಪುತ್ರನನ್ನೆಲ್ಲಿಟ್ಟಿರುವಿ ಎಂದನು.

ಸಮುದ್ರನು ಆ ಗುರುಪುತ್ರನನ್ನು ನಾನು ಒಯ್ದಿರುವುದಲ್ಲ. ನನ್ನಲ್ಲಿಯೇ ಅಡಗಿರುವ ಪಂಚಜನನೆಂಬ ಅಸುರನು ಜಲಚರರೂಪಧರಿಸಿ ಎಳೆದುಕೊಂಡು ಹೋಗಿದ್ದಾನೆ ಎಂದನು

## ಪಂಚಜನ ದೈತ್ಯ ಸಂಹಾರ

**ಸ ತು ಪಂಚಜನಮಾಸಾದ್ಯ ಜಘಾನ ಪುರುಷೋತ್ತಮಃ ।**
**ನ ಚಾಸಸಾದ ತಂ ಬಾಲಂ ಗುರುಪುತ್ರಂ ತದಾಚ್ಯುತಃ ॥ 12 ॥**

**ಸ ತು ಪಂಚಜನಂ ಹತ್ವಾ ಶಂಖಂ ಲೇಭೇ ಜನಾರ್ದನಃ ।**
**ಯಸ್ತು ದೇವಮನುಷ್ಯೇಷು ಪಾಂಚಜನ್ಯ ಇತಿ ಶ್ರುತಃ ॥ 13 ॥**

ಪುರುಷೋತ್ತಮನು ಪಂಚಜನ ದೈತ್ಯನನ್ನು ಹುಡುಕಿ ಅವನನ್ನು ಕೊಂದು ಹಾಕಿದನು. ಅವನಲ್ಲಿಯೂ ಗುರುಪುತ್ರನಿರಲಿಲ್ಲ. ಆದರೆ ಉತ್ತಮವಾದ ಒಂದು ಶಂಖ ದೊರಕಿತು. ಪಂಚಜನನ ಬಳ ಲಭಿಸಿದ ಇದು ಪಾಂಚಜನ್ಯ'ವೆಂದು ಪ್ರಖ್ಯಾತವಾಯಿತು.

## ಕೃಷ್ಣನ ಯಮಪುರೀಗಮನ

**ತತೋ ವೈವಸ್ವತಂ ಘೋರಂ ನಿರ್ಜಿತ್ಯ ಪುರುಷೋತ್ತಮಃ**
**ಆಸಸಾದ ಚ ತಂ ಬಾಲಂ ಗುರುಪುತ್ರಂ ತದಾಚ್ಯುತಃ ॥ 14 ॥**

**ಆನಿನಾಯ ಗುರೋಃ ಪುತ್ರಂ ಚಿರಂ ನಷ್ಟಂ ಯಮಕ್ಷಯಾತ್ ।**
**ತತಃ ಸಾಂದೀಪನೇಃ ಪುತ್ರಃ ಪ್ರಭಾವಾದಮಿತೌಜಸಃ ॥ 15 ॥**

**ದೀರ್ಘಕಾಲಗತಃ ಪ್ರೇತಃ ಪುನರಾಸೀತ್ ಶರೀರವಾನ್ ।**
**ತದಶಕ್ಯಮಚಿಂತ್ಯಂ ಚ ದೃಷ್ಟ್ವಾ ಸುಮಹದದ್ಭುತಮ್ ॥ 16 ॥**

ಶ್ರೀಕೃಷ್ಣನು ಯಮನ ಪುರವಾದ ಸಂಯಮನೀಪುರಕ್ಕೆ ಹೋದನು. ಅಲ್ಲಿ

ಯಮಧರ್ಮನು ಸಂಭ್ರಮದಿಂದ ಬಂದು ಸಾಷ್ಟಾಂಗ ವಂದಿಸಿದನು. ಶ್ರೀಕೃಷ್ಣನು ಗುರುಪುತ್ರನನ್ನು ತಂದು ಕೊಡುವಂತೆ ಆದೇಶಿಸಿದನು. ಆದರೆ ಅಸುರಾವೇಶ ಗ್ರಸ್ತನಾದ ಯಮಧರ್ಮನು ಯುದ್ಧಕ್ಕೆ ಸಿದ್ಧನಾದನು. ಕೃಷ್ಣನು ಯುದ್ಧದಲ್ಲಿ ಯಮಧರ್ಮನನ್ನು ಜಯಿಸಿದನು. ಯಮಧರ್ಮನು ಶ್ರೀಹರಿಗೆ ಶರಣು ಬಂದು ಗುರುಪುತ್ರನನ್ನು ತಂದುಕೊಟ್ಟನು. ಅವನನ್ನು ಪಡೆದು ಪುನಃ ಅದ್ಭುತಶಕ್ತಿಯಿಂದ ಮೊದಲಿದ್ದಂತೆಯೇ ಹಿಂದಿನ ದೇಹವನ್ನು ಒದಗಿಸಿ ಸಾಂದೀಪಿನೀ ಗುರುಗಳಿಗೆ ಗುರುದಕ್ಷಿಣೆ ನೀಡಿ ಸಂತೋಷಪಡಿಸಿದನು.

**ಸರ್ವೇಷಾಮೇವ ಭೂತಾನಾಂ ವಿಸ್ಮಯಃ ಸಮಜಾಯತ ।**
**ಸ ಗುರೋಃ ಪುತ್ರಮಾದಾಯ ಪಾಂಚಜನ್ಯಂ ಚ ಮಾಧವಃ ।**
**ರತ್ನಾನಿ ಚ ಮಹಾರ್ಹಾಣಿ ಪುನರಾಯಾತ್ ಜಗತ್ಪ್ರಭುಃ ॥ 17 ॥**

**ರಾಕ್ಷಸೈಸ್ತಸ್ಯ ರತ್ನಾನಿ ಮಹಾರ್ಹಾಣಿ ಬಹೂನಿ ಚ ।**
**ಆನಾಯ್ಯಾವೇದಯಾಮಾಸ ಗುರುವೇ ವಾಸವಾನುಜಃ ॥ 18 ॥**

ಅಚಿಂತ್ಯಾದ್ಭುತವಾದ ಮೃತಪುತ್ರಾನಯನ ರೂಪವಾದ ಕಾರ್ಯವನ್ನು ನೋಡಿ ಸಮಸ್ತ ಪ್ರಾಣಿಗಳಿಗೂ ವಿಸ್ಮಯವುಂಟಾಯಿತು. ಶ್ರೀಕೃಷ್ಣನು ಪಾಂಚಜನ್ಯ ಶಂಖವನ್ನು ಅಮೂಲ್ಯ ರತ್ನಗಳನ್ನು ತೆಗೆದುಕೊಂಡು ಗುರುಪುತ್ರನೊಂದಿಗೆ ಬಂದನು. ಯಮಧರ್ಮನು ಕಾಣಿಕೆಯಾಗಿ ನೀಡಿದ್ದ ಬಹು ಅಮೂಲ್ಯಾಭರಣಗಳನ್ನು ಯಮನದೂತರಿಂದ ಹೊರೆಸಿಕೊಂಡು ಬಂದು ಗುರುಗಳ ಮುಂದೆ ಸುರುವಿದನು.

ಗದಾ ಪರಿಘ ಯುದ್ಧಗಳಲ್ಲಿ ಸರ್ವ ಶಸ್ತ್ರಾಸ್ತ್ರಗಳಲ್ಲಿಯೂ ಕೆಲವೆ ದಿವಸಗಳಲ್ಲಿ ಪ್ರವೀಣರಾಗಿ ಗುರುದಕ್ಷಿಣೆಯಾಗಿ ಅದೇ ರೂಪ ವಯಸ್ಸಿನ ಪುತ್ರನನ್ನೆ ರತ್ನರಾಶಿಯೊಂದಿಗೆ ನೀಡಿದನು. ಹಿಂದೆ ನಷ್ಟನಾದನೆಂದು ತಿಳಿದಿದ್ದ ಪುತ್ರನನ್ನು ಪಡೆದು ರಾಮಕೃಷ್ಣರನ್ನು ಬಹುವಾಗಿ ಪ್ರಶಂಸಿದರು. ನಂತರ ಗುರುಗಳ ಅನುಮತಿ ಪಡೆದು ಮಥುರೆಗೆ ಹಿಂದಿರುಗಿದರು. ಮಥುರೆಯಲ್ಲಿ ಉಗ್ರಸೇನಾದಿಗಳು ಮಹಾದ್ವಾರದ ಬಳಿ ಸ್ವಾಗತಿಸಿದರು. ಆನಂದ ಸೂಚಕವಾದ್ಯಗಳಾದವು. ಬೀದಿಗಳೆಲ್ಲ ತೋರಣಗಳಿಂದ ಅಲಂಕೃತವಾಗಿದ್ದವು. ಯಾದವರಿಗೆ ಅತ್ಯಂತ ಪ್ರಿಯವುಂಟು ಮಾಡುವ ಗಾಥೆ ಕೇಳಿ ಬರುತ್ತಿತ್ತು.

ಗೋವಿಂದ ರಾಮೌ ಸಂಪ್ರಾಪ್ತೌ ಭ್ರಾತರೌ ಲೋಕವಿಶ್ರುತೌ ।
ಸ್ವೇ ಪುರೇ ನಿರ್ಭಯಾಃ ಸರ್ವೇ ಕ್ರೀಡಧ್ವಂ ಸಹ ಬಾಂಧವೈಃ ॥ 19 ॥
ನ ತತ್ರ ಕಶ್ಚಿದ್ ದೀನೋ ವಾ ಮಲಿನೋ ವಾ ವಿಚೇತನಃ ।
ಮಥುರಾಯಾಮಭೂದ್ ರಾಜನ್ ಗೋವಿಂದೇ ಸಮುಪಸ್ಥಿತೇ ॥ 20 ॥
ನರನಾರೀಗಣಾಃ ಸರ್ವೇ ಭೇಜಿರೇ ಮನಸಃ ಸುಖಮ್ ।
ಯಾನಿ ಲಿಂಗಾನಿ ಲೋಕಸ್ಯ ಚಾಸನ್ ಕೃತಯುಗೇ ಪುರಾ ।
ತಾನಿ ಸರ್ವಾಣಿ ಅದೃಶ್ಯಂತ ಪುರೀಂ ಪ್ರಾಪ್ತೇ ಜನಾರ್ದನೇ ॥ 21 ॥

ವಿಖ್ಯಾತರಾದ ಬಲರಾಮ ಕೃಷ್ಣರು ಮಥುರೆಗೆ ಬಂದಿರುವರು. ನಾಗರಿಕರೇ ಇನ್ನು ಮುಂದೆ ನಿಮ್ಮ ಪುರದಲ್ಲಿ ಯಾವ ಭಯವೂ ಇಲ್ಲದೆ ಬಂಧುಗಳೊಂದಿಗೆ ವಿಹರಿಸಿರಿ.

ಗೋವಿಂದನು ಪ್ರವೇಶ ಮಾಡಿದ್ದರಿಂದ ಪಟ್ಟಣದಲ್ಲಿ ದೀನನಾಗಲೀ ದರಿದ್ರನಾಗಲೀ, ಬುದ್ಧಿ ಹೀನನಾಗಲೀ ಇಲ್ಲದಂತಾಯಿತು. ಮಥುರೆಯ ಸಮಸ್ತ ಪ್ರಾಣಿ ಪಶುಪಕ್ಷಿಗಳೂ ನಿಶ್ಚಿಂತವಾಗಿದ್ದವು. ನರ-ನಾರಿಯರೆಲ್ಲ ಮಾನಸಿಕಾನಂದ ಹೊಂದಿದರು. ಸುಖಸ್ಪರ್ಶವೂ ತಂಪಾಗಿದ್ದ ಗಾಳಿ ಬೀಸಿತು. ಹತ್ತು ದಿಕ್ಕೂ ಧೂಳು ರಹಿತವಾಗಿತ್ತು. ದೇವಾಲಯದ ದೇವತೆಗಳು ಭಕ್ತರ ಮೇಲೆ ಪ್ರಸನ್ನರಾಗಿದ್ದರು. ಒಟ್ಟಾರೆ ಕೃತಯುಗದ ಚಿಹ್ನೆ ಕಂಡು ಬಂದಿತ್ತು.

ಶ್ರೀಕೃಷ್ಣನು ಮಥುರೆಗೆ ಪ್ರವೇಶಿಸಿದಂತೆಯೇ ಇಂದ್ರನನ್ನು ದೇವತೆಗಳು ಹಿಂಬಾಲಿಸುವಂತೆ ಯದುಗಳು ಹಿಂಬಾಲಿಸಿದರು.

ವಸುದೇವಸ್ಯ ಭವನಂ ತತಸ್ತೌ ಯದುನಂದನೌ ।
ಪ್ರವಿಷ್ಟೌ ಹೃಷ್ಟವದನೌ ಚಂದ್ರಾದಿತ್ಯಾವಿವಾಚಲಮ್ ॥ 22 ॥
ತಾವಾಯುಧಾನಿ ವಿನ್ಯಸ್ಯ ಗೃಹೇ ಸ್ವೇ ಸ್ವೈರ ಚಾರಿಣೌ ।
ಚೇರತುಃ ಸುಮಹಾತ್ಮಾನೌ ಯಾದವೈಃ ಪರಿವಾರಿತೌ ।
ರೈವತಸ್ಯ ಸಮೀಪೇಷು ಸರಿತ್ಸು ವಿಮಲಾಸು ಚ ॥ 23 ॥

ಯದುವಂಶೋದ್ಧೀಪಕರಾದ ರಾಮ-ಕೃಷ್ಣರು ಸೂರ್ಯಚಂದ್ರರು ಮೇರುಪರ್ವತವನ್ನು ಪ್ರದೇಶಿಸುವಂತೆ ಸಂಪದ್ಭರಿತ ವಸುದೇವ ಭವನವನ್ನು ಪ್ರವೇಶಿಸಿದರು. ಸಂತುಷ್ಟ ಮುಖಮಂಡಲ ಅಪ್ರತಿಮ ತೇಜಸ್ಸು ಇಂದ್ರನಂತಹ

ಸುಂದರ ರೂಪಗಳಿಂದ ಬೆಳಗುತ್ತಿದ್ದರು. ಮನೆಗೆ ಬಂದೊಡನೆ ತಮ್ಮಲ್ಲಿದ್ದ ಆಯುಧಗಳನ್ನು ಮನೆಯೊಳಗಿಟ್ಟು ಮಥುರಾ ಪುರಿಯಲ್ಲಿ ಸ್ವೇಚ್ಛೆಯಾಗಿ ಫಲಪುಷ್ಪಭರಿತ ಉದ್ಯಾನಗಳಲ್ಲಿ ವಿಹರಿಸಿದರು. ನದಿಯ ತೀರ, ರೈವತಕ ಪರ್ವತದ ತಪ್ಪಲು ಪ್ರದೇಶಗಳಲ್ಲಿ ಹೀಗೆ ಉಗ್ರಸೇನನ ಅನುಯಾಯಿಗಳಾಗಿ ಮಥುರೆಯಲ್ಲಿ ವಿಹರಿಸಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶ್ರೀಕೃಷ್ಣರ ವಿದ್ಯಾಭ್ಯಾಸ-ಮೃತಾನಯನವೆಂಬಲ್ಲಿ
ಮುವತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 34 ವಿಷ್ಣುಪರ್ವ

## ಅಥ ಚತುಸ್ತ್ರಿಂಶೋಽಧ್ಯಾಯಃ

*ವೈಶಂಪಾಯನ ಉವಾಚ-*

**ಸ ಕೃಷ್ಣಸ್ತತ್ರ ಸಹಿತೋ ರೌಹಿಣೇಯೇನ ಸಂಗತಃ ।**
**ಮಥುರಾಂ ಯಾದವಾಕೀರ್ಣಾಂ ಪುರೀಂ ತಾಂ ಸುಖಮಾವಸತ್ ॥ 1 ॥**

**ಕಸ್ಯಚಿತ್ತ್ವಥ ಕಾಲಸ್ಯ ರಾಜಾ ರಾಜಗೃಹೇಶ್ವರಃ ।**
**ಶುಶ್ರಾವ ನಿಹತಂ ಕಂಸಂ ದುಹಿತೃಭ್ಯಾಂ ಮಹೀಪತಿಃ ॥ 2 ॥**

**ತತೋ ನಾತಿಚಿರಾತ್ ಕಾಲಾತ್ ಜರಾಸಂಧಃ ಪ್ರತಾಪವಾನ್**
**ಆಜಗಾಮ ಷಡಂಗೇನ ಬಲೇನ ಮಹತಾ ವೃತಃ ॥ 3 ॥**

ಜನಮೇಜಯನೇ, ಬಲರಾಮನೊಂದಿಗೆ ಕೃಷ್ಣನು ಮಥುರೆಯಲ್ಲಿ ಸುಖವಾಗಿ ವಾಸ ಮಾಡುತ್ತಿದ್ದನು. ಕೃಷ್ಣನು ಕಂಸನನ್ನು ಕೊಂದು ಹಾಕಿದ ಮೇಲೆ ಕಂಸನ ಇಬ್ಬರು ಪತ್ನಿಯರು ಅಸ್ತಿ-ಪ್ರಾಸ್ತಿಯೆಂಬುವರಿದ್ದರು. ಅವರಿಬ್ಬರೂ ಜರಾಸಂಧನ ಪುತ್ರಿಯರು. ಇವರು ಕಂಸನನ್ನು ಕೊಂದು ನಮ್ಮನ್ನು ಈ ಸ್ಥಿತಿಗೆ ತಂದಿದ್ದಾನೆ ಎಂದು ಚಾಡಿ ಹೇಳಿದರು. ತನ್ನ ಮಕ್ಕಳ ಗಂಡನನ್ನು ಕೊಂದು ಹಾಕಿದ ಕೃಷ್ಣನ ಮೇಲೆ ಜರಾಸಂಧನಿಗೆ ಮಹಾಕೋಪವುಂಟಾಯಿತು. ಮಹಾಪ್ರತಾಪಿಯಾದ ಜರಾಸುತನು ಕೃಷ್ಣ ಹಾಗೂ ಯಾದವರನ್ನು ನಿರ್ನಾಮ ಮಾಡಲು ರಥ, ಕುದುರೆ, ಪದಾತಿ, ಆನೆ ಮೊದಲಾದ ಷಡಂಗ ಸೈನ್ಯ ಸಹಿತ ದಂಡೆತ್ತಿ ಬಂದನು.

### ಅಸ್ತಿ-ಪ್ರಾಸ್ತಿ

**ಅಸ್ತಿಃ ಪ್ರಾಪ್ತಿಶ್ಚ ನಾಮ್ನಾ ತೇ ಮಾಗಧಸ್ಯ ಸುತೇ ಉಭೇ ।**
**ಉಭೇ ಕಂಸಸ್ಯ ತೇ ಭಾರ್ಯೇ ಪ್ರಾದಾದ್ ಬಾರ್ಹದ್ರಥೋ ನೃಪಃ ॥ 4 ॥**

**ಸ ತಾಭ್ಯಾಂ ಮುಮುದೇ ರಾಜಾ ಬಧ್ವಾ ಪಿತರಮಾಹುಕಮ್ ।**
**ಸಮಾಶ್ರಿತ್ಯ ಜರಾಸಂಧಮನಾದೃತ್ಯ ಚ ಯಾದವಾನ್ ।**
**ಶೂರಸೇನೇಶ್ವರೋ ರಾಜಾ ಯಥಾ ತೇ ಬಹುಶಃ ಶ್ರುತಃ ॥ 5 ॥**

ಜನಮೇಜಯನೇ! ಜರಾಸಂಧನಿಗೆ ಅಸ್ತಿ ಪ್ರಾಸ್ತಿ ಅಥವಾ ಪ್ರಾಪ್ತಿಯೆಂಬ ಸಂಶಯ-ವಿಪರ್ಯಯ ಜ್ಞಾನದಂತೆ ಇಬ್ಬರು ಪುತ್ರಿಯರು. ಅವರನ್ನು ಜರಾಸಂಧನ ಎದುರಿಗೆ ಕಂಸನು ಸ್ವಯಂವರದಲ್ಲಿ ಸೆಳೆದೊಯ್ದನು. ಅವನ ಧೈರ್ಯ ಸಾಹಸ ನೋಡಿ ಕಂಸನಿಗೆ ನೀಡಿದ್ದನು. ಕಂಸನು ಜರಾಸಂಧನ ಬೆಂಬಲ ಸಿಕ್ಕಿದಂತಾಗಿ ತಂದೆ ಉಗ್ರಸೇನನನ್ನೂ ಕಾರಾಗೃಹದಲ್ಲ ಹಾಕಿ ತಾನೇ ರಾಜನೆಂದು ಘೋಷಿಸಿಕೊಂಡನು.

ವಸುದೇವನಾದರೂ ಜ್ಞಾತಿಗಳ ಕಾರ್ಯಸಿದ್ಧಿಗಾಗಿ ಪ್ರಯತ್ನ ಪಡುತ್ತಿದ್ದು ಉಗ್ರಸೇನನ ಹಿತದಲ್ಲಿಯೆ ಆಸಕ್ತನಾಗಿರುತ್ತಿದ್ದ. ಇದು ಕಂಸನಿಗೆ ಹಿಡಿಸಲ್ಲಿಲ್ಲ. ಕೃಷ್ಣನು ಕಂಸನನ್ನು ಕೊಂದ ಮೇಲೆ ಭೋಜ, ವೃಷ್ಣಿ ಅಂಧಕರಿಂದ ಕೂಡಿದ ಉಗ್ರಸೇನನೆ ರಾಜನಾದ ಇದರಿಂದಾಗಿ ಜರಾಸಂಧ ಯುದ್ಧ ಹೂಡಿದ.

### ಜರಾಸಂಧನ ಮಥುರಾ ಮುತ್ತಿಗೆ

**ಪ್ರತಾಪಾವನತಾ ಯೇ ಚ ಜರಾಸಂಧಸ್ಯ ಪಾರ್ಥಿವಾಃ ।**
**ಮಿತ್ರಾಣಿ ಜ್ಞಾತಯಶ್ಚೈವ ಸಂಯುಕ್ತಾಃ ಸುಹೃದಸ್ತಥಾ ॥ 6 ॥**

**ತಮೇವಾನುಯಯುಃ ಸರ್ವೇ ಸೈನ್ಯೈಃ ಸಮುದಿತೈಃ ವೃತಾಃ ।**
**ಮಹೇಶ್ವಾಸಾಃ ಮಹಾವೀರ್ಯಾಃ ಜರಾಸಂಧ ಪ್ರಿಯೈಷಿಣಃ ॥ 7 ॥**

ಜರಾಸಂಧನು ಮಥುರೆಗೆ ಮುತ್ತಿಗೆ ಹಾಕುವಾಗ ಜರಾಸಂಧನ ಪ್ರತಾಪಕ್ಕೆ ಮಣಿದು ಸಾಮಂತರಾಜರಾದ ಅವರು, ಮಿತ್ರರು ಜ್ಞಾತಿಗಳೂ, ಸುಹೃದರು ಜರಾಸಂಧನಿಗೆ ಬೆಂಬಲ ನೀಡಲು ಮಹಾವೀರ್ಯರೂ ಮಹಾಧಾನುಷ್ಕರೂ ಬಂದಿದ್ದರು. ಇವರಲ್ಲಿ ಕರೂಷಾಧಿಪತಿ ದಂತವಕ್ತ್ರ, ಶಿಶುಪಾಲ, ಕಲಿಂಗಾಧಿಪತಿ ಶ್ರುತಾಯು, ಪೌಂಡ್ರಕ, ಸಾಂಕೃತಿ, ಕೇಶಿಕ, ಭೀಷ್ಮಕ, ಅವನ ಮಗ ರುಗ್ಮಿ,

ವೇಣುಧಾರಿ. ಶ್ರುತ. ಕ್ರಥ. ಅಂಶುಮಂತ ಅಂಗರಾಜ ವಂಗರಾಜ, ಕೋಶಲ, ಕಾಶಿ. ದಶಾರ್ಣ ರಾಜರು ಸುಖೇಶ್ವರ ವಿದೇಹರಾಜ, ಮದ್ರರಾಜ ಶಲ್ಯ ಯವನಾಧಿಪತಿ, ಭಗದತ್ತ ಸೌವೀರ ಪಾಂಡ್ಯ, ಸುಬಲ, ನಗ್ನಚಿತ, ಗೋನರ್ದ, ದುರ್ಯೋಧನ, ದುಶ್ಯಾಸನಾದಿಗಳು ಕೃಷ್ಣನ ಮೇಲಿನ ದ್ವೇಷದಿಂದಾಗಿ ಜರಾಸಂಧನೊಡನೆ ಮಥುರೆಗೆ ಬಂದಿದ್ದರು.

**ತೇ ಶೂರಸೇನಾನಾವಿಶ್ಯ ಪ್ರಭೂತಯವಸೇಂಧನಾನ್ ।**
**ಊಷುಃ ಸಂರುದ್ಧ್ಯ ಮಥುರಾಂ ಪುರಸ್ಕೃತ್ಯ ಬಲಂ ತದಾ ॥ 8 ॥**

ಶೂರಸೇನದೇಶವು ಯವಸಾದಿ ಧಾನ್ಯಗಳಿಂದಲೂ ಇಂಧನಗಳಿಂದಲೂ ಸಮೃದ್ಧವಾಗಿತ್ತು. ಇಂತಹ ಮಥುರೆಯನ್ನು ಆಕ್ರಮಿಸಿ ಹೊರಗಿನಿಂದ ಒಳಗೂ, ಒಳಗಿನಿಂದ ಹೊರಗೂ ಯಾರು ಬಾರದಂತೆ ತಡೆದಿದ್ದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಜರಾಸಂಧನ ಮಥುರಾಕ್ರಮಣವೆಂಬಲ್ಲಿ
ಮುವತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಪಂಚತ್ರಿಂಶೋಽಧ್ಯಾಯಃ

## ಜರಾಸಂಧ ಸೈನ್ಯ ವರ್ಣನೆ

**ಮಥುರೋಪವನೇ ಗತ್ವಾ ನಿವಿಷ್ಟಾಂಸ್ತಾನ್ ನರಾಧಿಪಾನ್ ।**
**ಅಪಶ್ಯತ್ ವೃಷ್ಣಯಃ ಸರ್ವೇ ಪುರಸ್ಕೃತ್ಯ ಜನಾರ್ದನಮ್ ॥ 1 ॥**

**ತತೋ ಹೃಷ್ಟಮನಾಃ ಕೃಷ್ಣೋ ರಾಮಂ ವಚನ ಮಬ್ರವೀತ್ ।**
**ತ್ವರತೇ ಖಲು ಕಾರ್ಯಾರ್ಥೋ ದೇವತಾನಾಂ ನ ಸಂಶಯಃ ॥ 2 ॥**

ವೈಶಂಪಾಯನರು ರಾಜನಿಗೆ ಜನಮೇಜಯನೇ! ಮಥುರೋಪವನದಲ್ಲಿ ಬೀಡುಬಿಟ್ಟಿದ್ದ ಎಲ್ಲ ರಾಜರನ್ನೂ ಕೃಷ್ಣ ಮೊದಲಾದವರು ನೋಡಿದರು. ಶ್ರೀಕೃಷ್ಣನು ಸಂತುಷ್ಟನಾಗಿ ಬಲದೇವನಿಗೆ ಹೀಗೆಂದನು. ಅಣ್ಣ ಬಲರಾಮನೇ ನೋಡು ಜರಾಸಂಧನು ತನ್ನ ಇಪ್ಪತ್ತಮೂರು ಅಕ್ಷೌಹಿಣಿಯೊಂದಿಗೆ ಬಂದಿದ್ದಾನೆ. ದೇವತೆಗಳು ಪ್ರಾರ್ಥಿಸಿದ್ದ ಭೂಭಾರಹರಣವು ಶೀಘ್ರವಾಗಿ ನಡೆಯುವಂತೆ ತೋರುತ್ತಿದೆ.

ಜರಾಸಂಧನು ತಾನಾಗಿಯೇ ಯುದ್ಧಕ್ಕೆ ನಮ್ಮಲ್ಲಿಗೆ ಬಂದಿರುವನು. ಜರಾಸಂಧನು ಸರಿಯಾದ ಸಮಯಕ್ಕೆ ನಮ್ಮಲ್ಲಿಗೆ ಬಂದಿದ್ದಾನೆ. ನಮ್ಮ ಯುದ್ಧ ಸಾಮರ್ಥ್ಯಕ್ಕೆ ಒರೆಗಲ್ಲಿನಂತೆ ಮೊದಲನೆಯ ಅಥಿತಿಯಾಗಿ ಬಂದಿರುವನು. ನಾವಿಬ್ಬರೂ ಇಲ್ಲಿಯೇ ಇರೋಣ, ಅವನ ಸೈನ್ಯವೆಷ್ಟಿದೆ ಎಂಬುದನ್ನು ನೋಡೋಣ. ನಂತರ ಯುದ್ಧ. ಹೀಗೆ ಹೇಳಿ ಸೈನ್ಯವನ್ನು ವೀಕ್ಷಿಸಿದ ಅದು ಇಪ್ಪತ್ತಮೂರು ಅಕ್ಷೌಹಿಣೀ ಇತ್ತು.

**ಇಮೇ ತೇ ಪೃಥಿವೀಪಾಲಾಃ ಪಾರ್ಥಿವೇ ವರ್ತ್ಮನಿ ಸ್ಥಿತಾಃ ।**
**ಯೇ ವಿನಾಶಂ ಗಮಿಷ್ಯಂತಿ ಶಾಸ್ತ್ರದೃಷ್ಟೇನ ಕರ್ಮಣಾ ॥ 3 ॥**
**ಪ್ರೋಕ್ಷಿತಾನ್ ಖಲ್ವಿಮಾನ್ ಮನ್ಯೇ ಮೃತ್ಯುನಾ ನೃಪಪುಂಗವಾನ್ ।**
**ಸ್ವರ್ಗಾಮೀತಿ ಚಾಪ್ಯೇಷಾಂ ವಪೂಂಷಿ ಪ್ರಚಕಾಶಿರೇ ॥ 4 ॥**
**ಸ್ಥಾನೇ ಭಾರಪರಿಶ್ರಾಂತಾ ವಸುದೇಯಂ ದಿವಂಗತಾ ॥ 5 ॥**

ಈ ಪೃಥಿವೀಪಾಲಕರೆಲ್ಲರೂ ರಾಜೋಚಿತ ಮಾರ್ಗದಲ್ಲಿಯೆ ನಡೆಯುತ್ತಿರುವರು. ಶಾಸ್ತ್ರದಲ್ಲಿ ಹೇಳದಂತೆ ವಿನಾಶವನ್ನೂ ಹೊಂದುತ್ತಾರೆ.

ಈ ರಾಜರೆಲ್ಲರನ್ನೂ ಮೃತ್ಯು ದೇವತೆಯು ರಮೇಶ ದೈವತವಾದ ಈ ರಣಯಜ್ಞದಲ್ಲಿ ಹೋಮದ್ರವ್ಯಾಹುತಿಯನ್ನಾಗಿ ಮಾಡಲು ಸಂಪ್ರೋಕ್ಷಿಸಿ ಕಳುಹಿಸಿದಂತಿದೆ. ಈ ರಾಜರ ಅತಿಭಾರದಿಂದಾಗಿ ಭೂದೇವಿಯು ಸ್ವರ್ಗಕ್ಕೆ ಹೊರಟು ಹೋಗಿದ್ದಾಳೆ. ಸದ್ಯದಲ್ಲಿಯೇ ಈ ಭೂಮಿಯು ನಮ್ಮ ಆಯುಧ ಪ್ರಹಾರಗಳಿಂದ ಜನರಹಿತಳಾಗಿ ಬಿಡುವಳು.

### ಜರಾಸಂಧ ಕೋಪ

ಇತ್ತ ಸಮಸ್ತರಾಜರಿಗೂ ಅಧಿಪತಿಯಾದ ಜರಾಸಂಧನು ಪರಮಕ್ರುದ್ಧನಾಗಿ ಸಾವಿರಾರು ರಾಜರೊಂದಿಗೆ ಎದುರಾದನು. ರಥಗಳು, ವಾಹನಗಳು ಯುದ್ಧೋಪಯೋಗಿ ಶಸ್ತ್ರಾಸ್ತ್ರಗಳಿಂದ ತುಂಬಿತ್ತು. ಸೈನಿಕರು ರಥದಲ್ಲಿ ಕುಳಿತು ರಾಜನನ್ನು ಅನುಸರಿಸಿ ಹೋಗುತ್ತಿದ್ದರು. ರಥ ಸೈನಿಕರ ಹಿಂದೆ ಗಜಸೈನ್ಯವಿತ್ತು.

**ನೃಪಃ ಪ್ರಯಾತೋ ಬಲವಾನ್ ಜರಾಸಂಧೋ ಧೃತವ್ರತಃ ।**
**ಸ ರಥೈಃ ಮೇಘ ನಿರ್ಘೋಷೈಃ ಗಜೈಶ್ಚ ಮಧು ಸಂಯುತೈಃ ॥ 6 ॥**
**ಸ ರಾಜಾ ಸಾಗರಾಕಾರಃ ಸಸೈನ್ಯಃ ಪ್ರತ್ಯದೃಶ್ಯತ ।**
**ಸಮವಾಯೀಕೃತಾಃ ಸರ್ವೇ ಯಮುನಾಮನು ತೇ ನೃಪಾಃ ।**
**ನಿವಿಷ್ಟಾಃ ಮಂತ್ರಯಾಮಾಸುಃ ಯುದ್ಧ ಕಾಲಕುತೂಹಲಾಃ ॥ 7 ॥**

ಗಜ, ರಥ, ಪದಾತಿ ಕುದುರೆ ಸೈನ್ಯದಿಂದ ಕೂಡಿದ ಸಾಗರದಂತಿದ್ದ ಜರಾಸಂಧನು ಮಥುರೆಗೆ ಮುತ್ತಿಗೆ ಹಾಕಿದನು. ಯಮುನಾನದಿಯ ತೀರದಲ್ಲಿ ಎಲ್ಲಾ ಯುದ್ಧಕ್ಕೆ ಕಾತರಿಸುತ್ತಿದ್ದ ರಾಜರೆಲ್ಲರೂ ಯುದ್ಧವನ್ನು ಯಾವಾಗ ಪ್ರಾರಂಭಿಸಬೇಕೆಂದು ಸಮಾಲೋಚಿಸುತ್ತಿದ್ದರು. ಜರಾಸಂಧನು ಹೀಗೆಂದನು.

## ಸೈನ್ಯಕ್ಕೆ ಆದೇಶ

**ಶೀಘ್ರಂ ಸಮಭಿವರ್ತಂತಾಂ ಬಲಾನಿ ಪೃಥಿವೀಕ್ಷಿತಾಮ್ ।**
**ಸರ್ವತೋ ನಗರೀ ಚೇಯಂ ಜನೌಘೈಃ ಪರಿವಾರ್ಯತಾಮ್ ॥ 8 ॥**

**ಅದ್ಯಪ್ರಭೃತಿ ಸೈನ್ಯೈರ್ಮೇ ಪುರೀರೋಧಃ ಪ್ರವರ್ತ್ಯತಾಮ್ ।**
**ಯಾವದೇತೌ ರಣೇ ಗೋಪೌ ವಸುದೇವ ಸುತಾವುಭೌ ॥ 9 ॥**

**ಸಂಕರ್ಷಣಂ ಚ ಕೃಷ್ಣಂ ಚ ಘಾತಯಾಮಿ ಶಿತೈಃ ಶರೈಃ ॥ 10 ॥**

ನಮ್ಮ ಮಿತ್ರರಾಜರ ಸೈನ್ಯಗಳು ಅತೀಶೀಘ್ರವಾಗಿ ಮಥುರಾ ಪುರಿಯನ್ನಾಕ್ರಮಿಸಲಿ ಸೈನಿಕರೆಲ್ಲರೂ ಘೇರಾಯಿಸಲಿ. ಕಲ್ಲೆಸೆಯುವ ಯಂತ್ರ, ಮುದ್ಗರಾದಿ ಆಯುಧ ಸಿದ್ಧವಾಗಿರಲಿ. ಈಗಿನಿಂದಲೇ ಮಥುರಾಪುರಿಯು ನಾಲ್ಕೂ ದಿಕ್ಕಿನಿಂದಲೂ ಆಕ್ರಮಿಸಲಿ. ರಾಮ–ಕೃಷ್ಣರನ್ನು ನಾನು ಬಾಣಗಳಿಂದ ಕೊಲ್ಲುವವರಿಗೂ ಆಕ್ರಮಣ ಸಾಗುತ್ತಿರಲಿ. ಒಂದು ಪಕ್ಷಿಯನ್ನು ಹೊರಗೆ ಹೋಗದಂತೆ ಬಾಣಗಳಿಂದ ಪಂಜರ ಮಾಡುವೆನು. ಶಲ್ಯ, ಕಲಿಂಗ, ಚೇಕಿತಾನ, ಬಾಹ್ಲಿಕ, ಗೋವರ್ದ, ಕರೂಷರಾಜ, ಇವರೆಲ್ಲರೂ ಪಶ್ಚಿಮದ್ವಾರ ಆಕ್ರಮಿಸಲಿ. ಉಲೂರ, ಏಕಲವ್ಯ ಬೃಹತ್‌ಕ್ಷತ್ರ, ಜಯದ್ರಥ ಕೌರವರು ಕೇಕಯರು ಪೂರ್ವ ದಿಕ್ಕಿನಲ್ಲಿಯೂ. ನಾನು, ದರಂದ, ಚೇದಿರಾಜರು ದಕ್ಷಿಣ ದಿಕ್ಕಿನ ದ್ವಾರವನ್ನು ಆಕ್ರಮಿಸುವೆವು.

ಹೀಗೆ ಆದೇಶ ನೀಡಿ ಸೈನ್ಯವನ್ನು ವ್ಯೂಹದಲ್ಲಿ ನಿಲ್ಲಿಸಿ ಯಾದವರನ್ನು ಆಕ್ರಮಿಸಿದನು.

**ತದ್ ಯುದ್ಧಮಭವದ್ ಘೋರಂ ತೇಷಾಂ ದೇವಾಸುರೋಪಮಮ್ ।**
**ಅಲ್ಪಾನಾಂ ಬಹುಭಿಃ ಸಾರ್ಧಂ ವ್ಯತಿಷಿಕ್ತರಥ ದ್ವಿಪಮ್ ।**
**ರಥಸ್ಥೌ ದಂಶಿತೌ ಚೈವ ಚೇರತುಃ ತತ್ರ ಯಾದವೌ ॥ 11 ॥**

ಈ ಸಮಯದಲ್ಲಿ ಯಾದವರೂ ಕೂಡ ವ್ಯೂಹಕ್ರಮದಿಂದ ಜರಾಸಂಧ ಸೈನ್ಯವನ್ನು ಎದುರಿಸಿದರು. ದೇವದಾನವ ಯುದ್ಧಕ್ಕೆ ಹೋಲುವ ಯುದ್ಧವು ಭಯಂಕರವಾಗಿ ನಡೆಯಿತು. ಆದರೆ ಯಾದವ ಅಲ್ಪ ಸಂಖ್ಯೆಯದಾಗಿದ್ದು ಬಹುಸಂಖ್ಯಾಕ ಜರಾಸಂಧನ ಸೈನ್ಯದೊಡನೆ ಯುದ್ಧವಾಡುತ್ತಿದ್ದರು.

ಯುದ್ಧ ಮಾಡಲು ಹೊರಟ ಕೃಷ್ಣ ಬಲರಾಮರನ್ನು ನೋಡಿದೊಡನೆಯೇ ಜರಾಸಂಧನ ಸೈನ್ಯ ಕ್ಷೋಭಿಗೊಂಡಿತು. ಕವಚಧಾರಿಗಳಾದ ರಾಮ-ಕೃಷ್ಣರು ಎರಡು ಮೊಸಳೆಗಳಂತೆ ಇದ್ದು ಶತ್ರು ಸೈನ್ಯವನ್ನು ಧ್ವಂಸ ಮಾಡುತ್ತಿದ್ದರು.

### ಆಯುಧಗಳು ಬಂದವು

**ತತಃ ಖಾನ್ ನಿಪತಂತಿ ಸ್ಮ ದಿವ್ಯಾನ್ಯಾಹವ ಸಂಪ್ಲವೇ ।**
**ಲೇಲಿಹಾನಾನಿ ದೀಪ್ತಾನಿ ಮಹಾಂತಿ ಸುದೃಢಾನಿ ಚ ॥ 12 ॥**

**ಪ್ರಭಯಾ ಭಾಸಮಾನಾನಿ ಪತಮಾನಾನಿ ಚಾಂಬರಾತ್ ।**
**ಹಲಂ ಸಂವರ್ತಕಂ ನಾಮ ಸೌನಂದಂ ಮುಸಲಂ ತಥಾ ॥ 13 ॥**

**ಧನುಷಾಂ ಪ್ರವರಂ ಶಾಂರ್ಗಂ ಗದಾ ಕೌಮೋದಕೀಂ ತಥಾ ।**
**ಜಗ್ರಾಹ ಪ್ರಥಮಂ ರಾಮೋ ಲಲಾಮಪ್ರತಿಮಂ ಹಲಮ್ ॥ 14 ॥**

**ಸರ್ಪಾಂತಮಿವ ಸರ್ಪೇಂದ್ರಂ ದಿವ್ಯ ಮಾಲಾಕುಲಂ ಮೃಧೇ ।**
**ಸವ್ಯೇನ ಸಾತ್ವತಾಂ ಶ್ರೇಷ್ಠೋ ಜಗ್ರಾಹ ಮುಸಲೋತ್ತಮಂ ॥ 15 ॥**

ಶ್ರೀಕೃಷ್ಣಬಲರಾಮರೂ ಯುದ್ಧ ಮಾಡುತ್ತಿರುವಾಗಲೇ ಹಿಂದಿನಂತೆಯೇ ನೇಗಿಲು ಮುಸಲಾದಿಗಳಂದ ಯುದ್ಧ ಮಾಡಬೇಕೆಂದೆನಿಸಿತು. ಕೂಡಲೇ ಆಕಾಶಮಾರ್ಗದಿಂದ ದಿವ್ಯಾಯುಧಗಳು ಬರತೊಡಗಿದವು. ಸಂವರ್ತಕವೆಂಬ ನೇಗಿಲು, ಸೌನಂದವೆಂಬ ಒನಕೆ, ಶಾಂರ್ಗ ಧನುಸ್ಸು, ಕಾಮೋದಕೀ ಗದೆ, ಬಂದವು. ಬಲದೇವನು ಬಲಗೈಯಿಂದ ನೇಗಿಲನ್ನು ನಂತರ ಎಡಗೈಯಿಂದ ಸೌನಂದ ಮುಸಲ ಹಿಡಿದನು. ಶಾಂರ್ಗವನ್ನು ಕೌನೋದಕಿವೆಂಬ ಗದೆಯನ್ನು ಕೃಷ್ಣನು ಧರಿಸಿದನು. ಬಲರಾಮನು ಸರ್ಪದಂತೆ ಇದ್ದ ನೇಗಿಲಿನಿಂದ ಅಂತಕನಂತೆ ಶತ್ರುಗಳ ತಲೆ ಒಡೆದನು. ದೊಡ್ಡ ಆನೆಗಳೆಲ್ಲ ನೇಗಿಲಿನ ಹೊಡೆತಕ್ಕೆ ಮಣಿದವು. ರಾಜರೆಲ್ಲರೂ ಭಯದಿಂದ ಜರಾಸಂಧನನ್ನು ಬಂದು ಸೇರಿದರು.

ಇವರನ್ನು ನೋಡಿ ಹೇಡಿಗಳೇ ಯುದ್ಧದಲ್ಲಿ ಬೆನ್ನು ತೋರಿಸುವುದು ಭ್ರೂಣಹತ್ಯಾ ಸಮವೆಂದು ತಿಳದಿಲ್ಲವೆ? ಎಂದನು.

ಶ್ರೀಕೃಷ್ಣನಾದರೂ ಗರುಡ ಚಿಹ್ನೆಯಿರುವ ರಥವನ್ನೇರಿ ಜರಾಸಂಧನನ್ನು ಎಂಟು

ಬಾಣಗಳಿಂದ ಹೊಡೆದನು. ಐದು ಬಾಣದಿಂದ ಸಾರಥಿಯನ್ನು ಕುದುರೆಗಳನ್ನು ಹೊಡೆದನು. ಜರಾಸಂಧನು ಕಷ್ಟದಲ್ಲಿರುವನೆಂದು ಚಿತ್ರಸೇನ ಕೈಶಿಕರು ಕೃಷ್ಣನನ್ನು ಎದುರಿಸಿದರು. ಮೂರು ಬಾಣಗಳನ್ನು ಕೈಶಿಕರು ಬಲರಾಮನಿಗೆ ಹೊಡೆದಾಗ ಬಲನು ಬಲಾಯುಧದಿಂದ ಕೈಶಿಕನ ಧನುಸ್ಸನ್ನು ತುಂಡು ಮಾಡಿದನು.

ಚಿತ್ರಸೇನನು ಒಂಭತ್ತು ಬಾಣಗಳನ್ನೂ, ಕೈಶಿಕ ಐದು ಬಾಣಗಳನ್ನೂ, ಜರಾಸಂಧ ಏಳು ಬಾಣಗಳಿಂದಲೂ ಬಲರಾಮನನ್ನು ಹೊಡೆದರು.

ಇವರೆಲ್ಲರಿಗೂ ತಲಾ ಮೂರು ಮೂರು ಬಾಣಗಳಿಂದ ಶ್ರೀಕೃಷ್ಣನು ಹೊಡೆದನು. ಬಲರಾಮನೂ ಐದೈದು ಬಾಣಗಳಿಂದ ಮೂವರು ವೀರರನ್ನು ಹೊಡೆದನು.

## ಬಲರಾಮ ಜರಾಸಂಧ ಯುದ್ಧ

**ಧನುಶ್ಚಿಚ್ಛೇದ ರಾಮಸ್ಯ ಜರಾಸಂಧೋ ಮಹಾಬಲಃ ।**
**ಗದಯಾ ಜಘಾನಾಶ್ವಾನ್ ಕ್ರೋಧಾತ್ ಸ ಮಗಧೇಶ್ವರಃ ॥ 16 ॥**

**ಆದಾಯ ಮುಸಲಂ ರಾಮೋ ಜರಾಸಂಧ ಮುಪಾದ್ರವತ್ ।**
**ತಯೋಸ್ತದ್ ಯುದ್ಧಮಭವತ್ ಪರಸ್ಪರವಧೈಷಿಣೋಃ ॥ 18 ॥**

ಜರಾಸಂಧನು ಬಲರಾಮನ ಧನಸ್ಸನ್ನೆ ಕತ್ತರಿಸಿ, ಗದೆಯಿಂದ ಕುದುರೆಗಳನ್ನು ಹೊಡೆದು ಕೊಂದನು. ಅದನ್ನು ನೋಡಿ ಮುಸಲಾಯುಧ ಹಿಡಿದು ಜರಾಸಂಧನನ್ನೆದುರಿಸಿದನು. ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂದು ಸ್ಪರ್ಧಿಸಿ ಯುದ್ಧ ಮಾಡಿದರು. ಈ ಮಧ್ಯೆ ಚಿತ್ರಸೇನನು ಬಲರಾಮನನ್ನು ಎದುರಿಸಿದಾಗ ಜರಾಸಂಧನ ಭೋಜ ಸೈನಿಕರನ್ನು ಸದೆಬಡೆದನು. ಸಾವಿರಾರು ಸಂಖ್ಯೆಯ ರಥ ಅಶ್ವ ಗಜ ಸೈನಿಕರು ಎದುರಾಳಿಯೊಡನೆ ಯುದ್ಧ ಮಾಡುತ್ತಿದ್ದರು. ಪ್ರಾಣದ ಹಂಗನ್ನೂ ತೊರೆದು ಹೋರಾಡಿದರು.

**ತತಃ ಶಿನಿಃ ಅನಾಧೃಷ್ಟಿಃ ಬಭ್ರುರ್ವಿಪೃಥುರಾಹುಕಃ ।**
**ಬಲದೇವಂ ಪುರಸ್ಕೃತ್ಯ ಸೈನ್ಯಸ್ಯಾರ್ಧೇನ ದಂಶಿತಾಃ ॥ 19 ॥**
**ದಕ್ಷಿಣಂ ಪಕ್ಷಮಾಸೇದುಃ ಶತ್ರುಸೈನ್ಯಸ್ಯ ಭಾರತ ॥ 20 ॥**

ಶಿನಿಯು ಅನಾಧೃಷ್ಟಿ ಬಭ್ರು ಮೊದಲಾದವರು ಬಲರಾಮನೊಂದಿಗೆ ದಕ್ಷಿಣ

ದ್ವಾರದ ಸೈನ್ಯದ ಮೇಲೆ ಬಿದ್ದರು. ಆ ಭಾಗಕ್ಕೆ ಶಿಶುಪಾಲ ಜರಾಸಂಧರೆ ರಕ್ಷಕರಾಗಿದ್ದರು. ಅವಗಾಹ, ಪೃಥು, ಕಂಕ ಮೊದಲಾದವರು ಕೃಷ್ಣನನ್ನು ಮುಂದು ಮಾಡಿಕೊಂಡು ಉಳಿದ ಅರ್ಧ ಸೈನ್ಯದೊಡನೆ ಜೀವದ ಹಂಗನ್ನು ತೊರೆದು ಹೋರಾಡುತ್ತಿದ್ದರು.

ಸಾತ್ಯಕಿ ಮೊದಲಾದವರು ಅಪಾರ ಸೈನ್ಯದಿಂದ ಜರಾಸಂಧನ ಸೈನ್ಯದ ಪುಚ್ಛಭಾಗದವನ್ನಾಕ್ರಮಿಸಿ ಅನೇಕ ಶತ್ರುರಾಜರೊಡನೆ ಯುದ್ಧವಾಡಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕೃಷ್ಣ - ಜರಾಸಂಧನ ಯುದ್ಧ ವರ್ಣನವೆಂಬಲ್ಲಿ
ಮುವತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಷಟ್‌ತ್ರಿಂಶೋಽಧ್ಯಾಯಃ

**ತತೋ ಯುದ್ಧಾನಿ ವೃಷ್ಣೀನಾಂ ಬಭೂವುಃ ಸುಮಹಾನ್ಯಥ ।**
**ಮಾಗಧಸ್ಯ ಮಹಾಮಾತ್ರೈಃ ನೃಪೈಶ್ಚೈವಾನುಯಾಯಿಭಿಃ ॥ 1 ॥**

**ರುಗ್ಮಿಣಾ ವಾಸುದೇವಸ್ಯ ಭೀಷ್ಮಕೇಣಾಹುಕಸ್ಯ ಚ ।**
**ಕ್ರಥೇನ ವಸುದೇವಸ್ಯ ಕೌಶಿಕಸ್ಯಾ ತು ಬಭ್ರುಣಾ ॥ 2 ॥**

ಜನಮೇಜಯನೇ! ನಂತರ ವೃಷ್ಣಿವಂಶದ ಯೋಧರಿಗೂ ಜರಾಸಂಧನ ಮಂತ್ರಿಗಳಿಗೂ ಘೋರ ಯುದ್ಧ ನಡೆಯಿತು. ರುಗ್ಮಿ-ಕೃಷ್ಣ, ಭೀಷ್ಮಕ-ಆಹುಕ, ಕ್ರಥ-ವಸುದೇವ, ಅಕ್ರೂರ-ಕೇಶಿಕ, ಗದ-ಶಿಶುಪಾಲ, ಶಂಕು-ದಂತವಕ್ತ್ರರಿಗೂ ದ್ವಂದ್ವಯುದ್ಧ-

**ಯುದ್ಧಮಾಸೀದ್ ಹಿ ಸೈನ್ಯಾನಾಂ ಸೈನಿಕೈಃ ಭರತರ್ಷಭ ।**
**ಅಹಾನಿ ಪಂಚ ಚೈಕಂ ಚ ಷಟ್ ಸಪ್ತಾಷ್ಟೌ ಚ ದಾರುಣಮ್ ॥ 3 ॥**

**ಜರಾಸಂಧಸ್ಯ ನೃಪತೇಃ ರಾಮೇಣಾಸೀತ್ ಸಮಾಗಮಃ ।**
**ಅವೇಕ್ಷ್ಯ ರುಗ್ಮಿಣೀಂ ಕೃಷ್ಣೋ ರುಗ್ಮಿಣಂ ನ ವ್ಯಪೋಥಯತ್ ॥ 4 ॥**

**ರಥೀರಾಮೋ ಜರಾಸಂಧಂ ಶರೈರಾಶೀವಿಷೋಪಮೈಃ ।**
**ಅನ್ಯೋನ್ಯಂ ವಿವಿಧೈರಸ್ತ್ರೈಃ ವಿಧ್ವಾ ವಿಧ್ವಾ ವಿನೇದತುಃ ।**
**ತೌ ಕ್ಷೀಣ ಶಸ್ತ್ರೌ ವಿರಥೌ ಹತಾಶ್ವೌ ಹತಸಾರಥೀ ॥ 5 ॥**

ಯಾದವರ ಹಾಗೂ ಜರಾಸಂಧನ ಸೈನ್ಯಗಳು ಹೀಗೆ ಇಪ್ಪತ್ತೇಳು ದಿನಗಳ

ಕಾಲ ಯುದ್ಧ ಮಾಡಿದರು. ಜರಾಸಂಧ-ಬಲರಾಮನಿಗೆ ಭಯಂಕರ ಯುದ್ಧವೇರ್ಪಟ್ಟಿತು. ಉಭಯ ಸೈನ್ಯದಲ್ಲಿಯೂ ರಕ್ತದ ಪ್ರವಾಹ ಹರಿದು ಸೈನ್ಯವೆಲ್ಲ ರಕ್ತದ ಕೆಸರಿನಲ್ಲಿ ನಿಂತು ಯುದ್ಧ ಮಾಡಬೇಕಾಯಿತು. ಅನಾರುಂಡ ದೇಹಗಳು ಸುತ್ತಲೂ ರಾಶಿರಾಶಿಯಾಗಿ ಬಿದ್ದಿದ್ದವು.

ರುಗ್ಮಿಯು ಕೃಷ್ಣನ ಮೇಲೆ ಕೃಷ್ಣಸರ್ಪದಂತಹ ಬಾಣಗಳನ್ನು ಬಿಟ್ಟನು. ಆದರೆ ರುಗ್ಮಿಯು ರುಗ್ಮಿಣಿಯ ಅಣ್ಣನೆಂದು ತಿಳಿದ ಕುಶಲತೆಯಿಂದ ತಪ್ಪಿಸಿಕೊಂಡನು.

ಬಲರಾಮ-ಜರಾಸಂಧರಲ್ಲಿ ಭಯಂಕರ ಸಂಗ್ರಾಮ ನಡೆಯಿತು. ಇಬ್ಬರೂ ಎಲ್ಲ ವಿಧವಾದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರು. ಇಬ್ಬರ ಹತ್ತಿರವಿದ್ದ ಆಯುಧಗಳೆಲ್ಲವೂ ತೀರಿಹೋದವು. ಇಬ್ಬರೂ ರಥಹೀನರಾದರು. ಸಾರಥಿಗಳೂ ಕುದುರೆಗಳೂ ಹತವಾದವು. ಬತ್ತಳಗೆ ಖಾಲಿಯಾದವು. ಆಗ ಗದಾಯುದ್ಧಕ್ಕಾಗಿ ಗದೆ ಹಿಡಿದು ಕಾದಾಡತೊಡಗಿದರು. ಇವರ ಯುದ್ಧ ನೋಡಲು ಸೈನಿಕರು ಯುದ್ಧ ನಿಲ್ಲಿಸಿ ಪ್ರೇಕ್ಷಕರಾದರು. ಮದಿಸಿದ ಆನೆಗಳಂತೆ ಹೋರಾಡುತ್ತಿದ್ದರು. ಇದನ್ನು ನೋಡಲು ದೇವ ಯಕ್ಷಗಂಧರ್ವಾದಿಗಳೆಲ್ಲ ಬಂದು ನೆರೆದರು. ಅವರ ಗರ್ಜನೆಗಳಿಂದ ದಶದಿಕ್ಕುಗಳಲ್ಲಿ ಪ್ರತಿಧ್ವನಿ ಬರುತ್ತಿತ್ತು. ಬಲರಾಮನ ಗದಾಪ್ರಹಾರವು ಸಿಡಿಲಿನ ಶಬ್ಧದಂತೆಯೂ, ಜರಾಸಂಧನು ಪರ್ವತ ಸೀಳ ಹೋಗುವ ಶಬ್ಧ ಹೊರಡಿಸುತ್ತಿತ್ತು. ಬಹಳ ಹೊತ್ತು ಕಾದಾಡಿ ಮುಹೂರ್ತಕಾಲ ವಿಶ್ರಮಿಸಿ ಪುನಃ ಗದಾಯುದ್ಧಾರಂಭಿಸಿದರು.

## ಅಶರೀರವಾಣಿ

ಅಥಾಪಶ್ಯತ್ ಗದಾಯುದ್ಧೇ ವಿಶೇಷಂ ತಸ್ಯ ವೀರ್ಯವಾನ್ ।
ರಾಮಃ ಕ್ರುದ್ಧಃ ಗದಾಂ ತ್ಯಕ್ತ್ವಾ ಜಗ್ರಾಹ ಮುಸಲೋತ್ತಮಮ್ ॥ 6॥

ತತೋಂತರಿಕ್ಷೇ ವಾಗಾಸೀತ್ ಸುಸ್ವರಾ ಲೋಕಸಾಕ್ಷಿಣೀ ।
ಉವಾಚ ಬಲದೇವಂ ತಂ ಸಮುದ್ಯತ ಹಲಾಯುಧಮ್ ॥ 7 ॥

ನ ತ್ವಯಾ ರಾಮ ವಧ್ಯೋಽಯಂ ಅಲಂ ಖೇದೇನ ಮಾನದ ।
ವಿದಿತೋಽಸ್ಯ ಮಯಾ ಮೃತ್ಯುಃ ತಸ್ಮಾತ್ ಸಾಧು ವ್ಯುಪಾರಮ ॥ 8 ॥

ಬಲರಾಮನು ಗದೆ ತ್ಯಜಿಸಿ ತನ್ನ ಹಲಾಯುಧವನ್ನು ಕೈಗೆತ್ತಿಕೊಂಡನು. ಕೋಪಾಟೋಪದಿಂದ ಕಾಲಾಂತಕನಂತೆ ನೇಗಿಲ ಹಿಡಿದು ನಿಂತದ್ದನ್ನು ನೋಡಿ ಒಮ್ಮೆಲೇ ಅಂತರಿಕ್ಷದಲ್ಲಿ ಅಶರೀರವಾಣಿ ನುಡಿಯಿತು.

ಬಲರಾಮ! ನೀನು ಇವನನ್ನು ವಧಿಸ ತಕ್ಕದ್ದಲ್ಲ. ಇವನನ್ನು ಕೊಲ್ಲುವವ ಬೇರೆಯಿರುವನು. ಅವನಾರೆಂದು ನನಗೆ ತಿಳಿದಿದೆ. ನೀನೀಗ ಯುದ್ಧದಿಂದ ವಿರಮಿಸು. ಜರಾಸಂಧನು ಸದ್ಯದಲ್ಲಿಯೆ ಸಾಯುವವನಿದ್ದಾನೆ.

ಅಶರೀರವಾಣಿಯನ್ನು ಕೇಳಿ ಜರಾಸಂಧನು ಖಿನ್ನನಾದನು. ಅವನ ದೈನ್ಯತೆ ನೋಡಿ ಬಲದೇವನು ಅಸ್ತ್ರ ಪ್ರಹಾರ ಮಾಡಲಿಲ್ಲ. ಇಬ್ಬರೂ ಯುದ್ಧದಿಂದ ಹಿಂದೆ ಹೋದರು. ಹಾಗೆಯೆ ಉಭಯ ಪಕ್ಷದ ಯುದ್ಧವೂ ನಿಂತಿತು.

ಜರಾಸಂಧನು ಪರಾಜಿತನಾಗಿ ಯುದ್ಧದಿಂದ ಹಿಂದಿರುಗಿದನು. ರಾತ್ರಿಯಾಗಿತ್ತು. ಯಾದವರು ಪುರಪ್ರವೇಶ ಮಾಡಿದರು.

ಈ ಹಿಂದೆ ಆಕಾಶದಿಂದ ಇಳಿದು ಬಂದಿದ್ದ ಆಯುಧಗಳೆಲ್ಲವೂ ಕ್ಷಣಮಾತ್ರದಲ್ಲಿ ಮಾಯವಾದವು. ಯಾದವರು ಜರಾಸಂಧನೊಂದಿಗೆ ಹದಿನೆಂಟು ಬಾರಿಯುದ್ಧ ಹೂಡಿದರೂ ಕೊಲ್ಲಲಾಗಲಿಲ್ಲ.

ಜರಾಸಂಧನ ಕಡೆ ಇಪ್ಪತ್ತು ಅಕ್ಷೌಹಿಣೀ ಸೈನ್ಯವಿದ್ದಿತು. ಯಾದವರಲ್ಲಿ ಅಲ್ಪಸಂಖ್ಯೆಯಿತ್ತು. ಹೀಗೆ ಜರಾಸಂಧನನ್ನು ಪರಾಜಯಗೊಳಿಸಿ ವೃಷ್ಣಿಗಳೆಲ್ಲ ಸಂತೋಷದಿಂದ ಇದ್ದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಜರಾಸಂಧನ ಪರಾಜಯವೆಂಬಲ್ಲಿ
ಮುವತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ಸಪ್ತತ್ರಿಂಶೋಽಧ್ಯಾಯಃ

### ಪುನಃ ಯುದ್ಧ ಸಿದ್ಧತೆ

*ವೈಶಂಪಾಯನ ಉವಾಚ –*

**ಸ ಕೃಷ್ಣಸ್ತತ್ರ ಬಲವಾನ್ ರೌಹಿಣೇಯೇನ ಸಂಗತಃ ।**
**ಮಥುರಾಂ ಯಾದವಾಕೀರ್ಣಾಂ ಪುರೀಂ ತಾಂ ಸುಖಮಾವಸತ್ ॥ 1 ॥**

**ಕಸ್ಯಚಿತ್ ತ್ವಥ ಕಾಲಸ್ಯ ರಾಜಾ ರಾಜಗೃಹೇಶ್ವರಃ ।**
**ಸಸ್ಮಾರ ನಿಹತಂ ಕಂಸಂ ಜರಾಸಂಧಃ ಪ್ರತಾಪವಾನ್ ॥ 2 ॥**

**ಯುದ್ಧಾಯ ಯೋಜಿತೋ ಭೂಯೋ ದುಹಿತೃಭ್ಯಾಂ ಮಹೀಪತಿಃ ।**
**ದಶ ಸಪ್ತ ಚ ಸಂಗ್ರಾಮಾನ್ ಜರಾಸಂಧಸ್ಯ ಯಾದವಾಃ ॥ 3 ॥**

**ದದುರ್ನ ಚೈನಂ ಸಮರೇ ಹಂತುಂ ಶೇಕುಃ ಮಹಾರಥಾಃ ।**
**ತತೋ ಮಗಧರಾಟ್ ಶ್ರೀಮಾನ್ ಚತುರಂಗ ಬಲಾನ್ವಿತಃ ।**
**ಭೂಯೋಽಪ್ಯಷ್ಟಾದಶಂ ಕರ್ತುಂ ಸಂಗ್ರಾಮಂ ಸ ಸಮಾರಭತ್ ॥ 4 ॥**

ವೈಶಂಪಾಯನು ಜನಮೇಜಯ ರಾಜನಿಗೆ ಹೇಳಿದರು – ರಾಜನೇ! ಮೊದಲನೆ ಯುದ್ಧದಲ್ಲಿ ಜರಾಸಂಧ ಪರಾಜಿತನಾದ ಮೇಲೆ ಶ್ರೀಕೃಷ್ಣನು ಬಲದೇವನೊಂದಿಗೆ ಯಾದವರಿಂದ ಪೂರ್ಣವಾಗಿದ್ದ ಮಥುರೆಯಲ್ಲಿ ಸುಖವಾಗಿದ್ದನು.

ಸ್ವಲ್ಪಕಾಲ ಕಳೆದ ನಂತರ ರಾಜಗೃಹಕ್ಕೆ ಅಧಿಪತಿಯಾದ ಜರಾಸಂಧನು ತನ್ನ ಅಳಿಯ ಕಂಸ ಕೃಷ್ಣನಿಂದ ಮೃತನಾದ ವಿಷಯವನ್ನು ಜ್ಞಾಪಿಸಿಕೊಂಡನು.

ಅವನ ಪುತ್ರಿಯರೂ ಸಹ ಮಥುರೆಯನ್ನು ಆಕ್ರಮಿಸುವಂತೆ ಪ್ರಚೋದಿಸಿದರು. ಜರಾಸಂಧನು ಪುನಃ ದ್ವಿತೀಯ ಬಾರಿಗೆ ಮಥುರಾ ಪುರಿಯನ್ನು ಆಕ್ರಮಿಸಿದನು. ಹೀಗೆ ಹದಿನೇಳು ಬಾರಿ ಯುದ್ಧ ಮಾಡಿದ. ಹದಿನೇಳು ಬಾರಿಯೂ ಸೋತು ಸುಣ್ಣನಾದ.[1] ತನಗೆ ಈಶ್ವರನ ಅನುಗ್ರಹವಿದ್ದದ್ದಕ್ಕಾಗಿ ಕೃಷ್ಣನಿಗೆ ಕೊಲ್ಲಲಾಗುತ್ತಿಲ್ಲವೆಂದೆ ಭ್ರಮಿಸಿದ. ಹದಿನೆಂಟನೇ ಬಾರಿ ಪುನಃ ಯುದ್ಧ ಮಾಡಲು ತೀರ್ಮಾನಿಸಿ 23 ಅಕ್ಷೋಹಿಣೀ ಏರಿಸಿ ಯುದ್ಧಕ್ಕೆ ಬಂದ. ಮೂರನೇ ಬಾರಿ ಬಂದಾಗ 23 ಅಕ್ಷೌಹಿಣೀ ಸೇರಿಸಿ, ಯಮುನಾ ತೀರದಲ್ಲಿ ಬೀಡುಬಿಟ್ಟರು. ಶ್ರೀಕೃಷ್ಣದೇವನು ತನ್ನ ಸೈನ್ಯವನ್ನು ಮೂರು ವಿಭಾಗ ಮಾಡಿ ಮೂರು ಕಡೆಗಳಂದಲೂ ಆಕ್ರಮಣ ಮಾಡಿದ. ಯುದ್ಧಕ್ಕೆ ಬರುವರೆಂಬ ಕಲ್ಪನೆಯಿಲ್ಲದೆ ಜರಾಸಂಧನ ಸೈನಿಕರು ಮದ್ಯಪಾನೀಯ ಸೇವಿಸಿ ಎಚ್ಚರ ಸ್ಥಿತಿಯಲ್ಲಿದ್ದರು. ಮೂರು ಕಡೆಯಿಂದಲೂ ಯಾದವರು ಮುತ್ತಿದಾಗ ಅವಸರವಾಗಿ ಎದ್ದು ಯುದ್ಧ ಮಾಡಲು ಯತ್ನಿಸಿದರೂ ಸೋತು ಹೋದರು. ಆಯುಧ ವಾಹನಗಳನ್ನೆಲ್ಲ ಬಿಟ್ಟು ಓಡಿಹೋದರು. ಪುನಃ ಬಾಣಾಸುರನ ಸಹಾಯ ಪಡೆದನು. ಕುಂಭಾಂಡ, ಕೂಪಕರ್ಣಗಳೆಂಬ ಮಂತ್ರಿಗಳು, ಮುನ್ನೂರು ರಾಕ್ಷಸರೂ ಯುದ್ಧಲ್ಲಿದ್ದರು. ಇವರೊಂದಿಗೆ ಪುನಃ ಯುದ್ಧವನ್ನಾರಂಭಿಸಿದ. ಸಾತ್ಯಕಿ ಕುಂಭಾಂಡನನ್ನು ಸೋಲಿಸಿ ಓಡಿಸಿದನು. ಯಾದವರ ಏಟು ತಾಳಲಾರದೆ ಸೈನ್ಯವೆಲ್ಲವೂ ಓಡಿಹೋಯಿತು. ಜರಾಸಂಧ ಪುನಃ ಸೋತ. ಹೀಗೆ ಹದಿನೇಳು ಬಾರಿ ಸೋತು ಹೋದ.

ಹದಿನೆಂಟನೆಯ ಬಾರಿ ಯುದ್ಧ ತಯಾರಿ ನಡೆಸಿದ್ದನು. ಇವನು ಪುನಃ ಬರುವನೆಂದು ತಿಳದು ಯಾದವರು ಸಭೆ ಸೇರಿದರು – ಸಭೆಯಲ್ಲಿ ವಿಕ್ರದುಯೆಂಬ ಯಾದವನು ನೀತಿಕೋವಿದನು ಹೀಗೆಂದನು.

---

1. ಪುನಃ ಯುದ್ಧ ಸೋಲು:

   1) ಪುನರ್ಯುದ್ಧಂ ಬಹುಶಃ ಕೇಶವೇನ ಕೃತ್ವಾ ಜಿತೋ ರಾಜಗಣೈಃ ಸಮೇತ ।
   *–ತಾ.ನಿ.16/27*

**ಮೃಧೇ ಮೃಧೇ ಜಿತೋಽಪಿ ಸನ್ ದೃಢಾಶಯಾ ಪುನಃ ಪುನಃ ।**
**ಸಮೀಹತೇ ಯುಧೇ ಶಿವಂ ನ ಚಾವಮನ್ಯತೇ ಕ್ವಚಿತ್ ॥** – *16/65*

2) ಜರಾಸಂಧನು ದ್ವಿತೀಯ ಬಾರಿ ಯುದ್ಧಕ್ಕೆ ಬಂದು ಬಲರಾಮನಲ್ಲಿ ಶುಕ್ಲಕೇಶಾವೇಶದಿಂದಾಗಿ ಬ್ರಹ್ಮ ವರವುಳ್ಳ ಜರಾಸಂಧನನ್ನು ಗೆದ್ದ. 3 ತಿಂಗಳೊಳಗೆ ಪುನಃ ಯುದ್ಧಕ್ಕೆ ಬಂದ.

## ವಿಕದ್ರುವಿನಿಂದ ಪೂರ್ವೇತಿಹಾಸ

**ಶ್ರೂಯತಾಂ ತಾತ ಗೋವಿಂದ! ಕುಲಸ್ಯಾಸ್ಯ ಸಮುದ್ಭವಃ ।**
**ಯುಕ್ತಂ ಚೇನ್ ಮನ್ಯಸೇ ಸಾಧೋ ಕರಿಷ್ಯಸಿ ವಚೋ ಮಮ ॥ 5 ॥**
**ಆಸೀದ್ ರಾಜಾ ಮನೋರ್ವಂಶೇ ಶ್ರೀಮಾನ್ ಇಕ್ಷ್ವಾಕುಸಂಭವಃ ।**
**ಹರ್ಯಶ್ವ ಇತಿ ವಿಖ್ಯಾತೋ ಮಹೇಂದ್ರ ಸಮವಿಕ್ರಮಃ ॥ 6 ॥**

ಹಿಂದೆ ಮನುವಿನ ವಂಶದಲ್ಲಿ ಹುಟ್ಟಿದ ಇಕ್ಷ್ವಾಕುರಾಜನಿಗೆ ಹರ್ಯಶ್ವನೆಂಬ ಪುತ್ರನಿದ್ದನು. ಅವನ ಪತ್ನಿಯೇ ಮಧುಮತೀ. ಮಧುವೆಂಬ ದಾನವೇಂದ್ರನ ಪುತ್ರಿಯು. ನವತಾರುಣ್ಯ ಸೌಗುಣ್ಯ ಸೌಜನ್ಯಗಳಿಂದ ಹರ್ಯಶ್ವನ ಮನಗೆದ್ದಿದ್ದಳು. ಹರ್ಯಶ್ವನ ಸೋದರನೊಬ್ಬನು ಇವನ ಮೇಲೆ ಅಸೂಯೆಯಿಂದ ರಾಜ್ಯದಿಂದ ಓಡಿಸಿ ಬಿಟ್ಟನು. ರಾಜನು ಕಾಡಿನಲ್ಲಿರಬೇಕಾಯಿತು. ರಾಜನ ಪತ್ನಿ ತನ್ನ ಪತಿಗೆ ವಿಣಿತಳಾಗಿ ನಾಥ! ತಾವು ಕಾಡಿನಲ್ಲಿ ವನೇಚರರಾಗಿರುವುದು ನನಗೆ ಸರಿಬರುತ್ತಿಲ್ಲ. ನನ್ನ ತಾಯಿಯ ಮನೆಗೆ ಹೋಗೋಣ. ಅಲ್ಲಿ ತಂದೆತಾಯಿಗಳು ನಿಮಗೆ ಆಶ್ರಯ ನೀಡುವರು. ನನ್ನ ತಮ್ಮ ಲವಣಾಸುರನು ನನಗಾಗಿ ಜೀವವನ್ನೂ ನೀಡಲು ಸಿದ್ಧ. ನಮ್ಮದೆ ಆದ ಮಧುವನದಲ್ಲಿ ವಿಹಾರ ಮಾಡೋಣ ಎಂದಾಗ ಹಾಗೆ ಆಗಲಿಯೆಂದು ಒಪ್ಪಿ. ಮಾವನಾದ ಮಧುವಿನ ಮನೆಗೆ ಬಂದನು. ಮಾವನಾದ ಮಧುವು ಅಳಿಯನಿಗೆ ದಿವ್ಯ ಸ್ವಾಗತ ಕೋರಿದ. ರಾಜ್ಯಭ್ರಷ್ಟನಾಗಿ ಬಂದ ಹರ್ಯಶ್ವನಿಗೆ ಮಧು ದಾನವನು ತನ್ನ ರಾಜ್ಯವನ್ನೆ ನೀಡಿದನು.

**ಪಾಲಯೈನಂ ಶುಭಂ ರಾಷ್ಟ್ರಂ ಸಮುದ್ರಾನೂಪಭೂಷಿತಮ್ ।**
**ಆನರ್ತಂ ನಾಮ ತೇ ರಾಷ್ಟ್ರಂ ಭವಿಷ್ಯತ್ಯಾಯತಂ ಮಹತ್ ॥ 7 ॥**
**ಅನುವಂಶಂ ಚ ವಂಶಸ್ತೇ ಸೋಮಸ್ಯ ಭವಿತಾ ಕಿಲ ।**
**ಆನರ್ತಂ ನಾಮ ತದ್ ರಾಷ್ಟ್ರಂ ಸುರಾಷ್ಟ್ರಂ ಗೋಧನಾಯುತಮ್ ।**
**ಅಚಿರೇಣೈವ ಕಾಲೇನ ಸಮೃದ್ಧಂ ಪ್ರತ್ಯಪದ್ಯತ ॥ 8 ॥**

ಹರ್ಯಶ್ವನೇ ಈ ರಾಜವನ್ನು ನೀನೆ ಪಾಲಿಸು. ನನ್ನ ಮಗ ಲವಣಾಸುರನೂ ನಿನಗೆ ಸಹಾಯ ಮಾಡುವನು. ನೀನು ರಾಜ್ಯಭಾರ ಮಾಡಿದೆಯೆಂದರೆ ಈ

ಕಾಡು ದುರ್ಗಮ ಅರಣ್ಯಗಳೆಲ್ಲ ಹೋಗಿ ಆನರ್ತವೆಂಬ ಹೊಸರಾಷ್ಟ್ರ ತಲೆಯೆತ್ತುತ್ತದೆ. ನಿನ್ನ ವಂಶವು ಮುಂದೆ ಯಯಾತಿ ರಾಜನ ವಂಶದಲ್ಲಿ ಲೀನವಾಗಿ ಸೂರ್ಯವಂಶವು ಚಂದ್ರವಂಶದ ಒಂದು ಶಾಖೆಯಾಗುವುದು ಎಂದು ಹೇಳಿ ತಪಸ್ಸಿಗೆ ಹೊರಟು ಹೋದ. ಹರ್ಯಶ್ವನು ಕೆಲವೆ ದಿನಗಳಲ್ಲಿ ಆನರ್ತರಾಷ್ಟ್ರ ಸಿದ್ಧಪಡಿಸಿದನು. ಫಲವತ್ತಾದ ಭೂಮಿಯಿಂದಾಗಿ ಆಹಾರ ಬೆಳೆ ನೀರು ಸಮೃದ್ಧವಾಗಿದ್ದವು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವಿಕದ್ರುವಿನ ಪೂರ್ವೇತಿಹಾಸವೆಂಬಲ್ಲಿ
ಮುವತ್ತೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಅಷ್ಟತ್ರಿಂಶೋಽಧ್ಯಾಯಃ

## ಹರ್ಯಶ್ವ ಸಂತಾನ ಯದುರಾಜ

**ತಸ್ಯೈವ ಚ ಸುವೃತ್ತಸ್ಯ ಪುತ್ರಕಾಮಸ್ಯ ಧೀಮತಃ ।**
**ಮಧುಮತ್ಯಾಂ ಸುತೋ ಜಜ್ಞೇ ಯದುರ್ನಾಮ ಮಹಾಯಶಾಃ ॥ 1 ॥**
**ರಾಜಲಕ್ಷಣ ಸಂಪನ್ನಃ ಸಪತ್ನೈಃ ದುರತಿಕ್ರಮಃ ।**
**ಸ ಏಕ ಏವ ತಸ್ಯಾಸೀತ್ ಪುತ್ರಃ ಪರಮಶೋಭನಃ ॥ 2 ॥**
**ದಶವರ್ಷಸಹಸ್ರಾಣಿ ಸ ಕೃತ್ವಾ ರಾಜ್ಯಮವ್ಯಯಮ್ ।**
**ಯದುರಿಂದ್ರ ಪ್ರತೀಕಾಶೋ ನೃಪೋ ಯೇನಾಸ್ಮ ಯಾದವಾಃ ॥ 3 ॥**

ಮಧುಮತಿಯಲ್ಲಿ ಹರ್ಯಶ್ವನಿಗೆ ಇಂದ್ರ ಪರಾಕ್ರಮಿಯಾದ ಒಬ್ಬನೇ ಯದು ಎಂಬ ರಾಜನು ಮಗನಾದನು. ಪೂರುರಾಜನಂತೆ ಸಾರ್ವಭಾಮಲಕ್ಷಣಗಳಂದ ಯುಕ್ತನಾಗಿದ್ದನು. ತಂದೆಯು ಹತ್ತು ಸಾವಿರ ವರ್ಷ ರಾಜ್ಯ ಮಾಡಿ ಸ್ವರ್ಗ ಸೇರಿದನು. ಯದುರಾಜನು ರಾಜನಾಗಿ ಪ್ರಜೆಗಳ ಪ್ರೀತಿವಿಶ್ವಾಸ ಸಂಪಾದಿಸಿದನು.

ಒಂದು ದಿನ ಜಲವಿಹಾರಕ್ಕೆಂದು ಸಮುದ್ರಕ್ಕೆ ಹೋಗಿ ವಿಹರಿಸುತ್ತಿರುವಾಗ ಧೂರ್ಮವರ್ಣನೆಂಬ ಸರ್ಪ ಅವನನ್ನು ಸೆಳೆದೊಯ್ದು ಪಾತಾಳಕ್ಕೆ ಬಂದನು. ಸಕಲಸಂಪತ್‌ಭರಿತವಾದ ನಾಗಲೋಕದಲ್ಲಿ ನಾಗಕನ್ನಿಕೆಯರು ಮಿಂಚುಗಳಂತೆ ಓಡಾಡುತ್ತಿದ್ದರು. ರತ್ನಪೀಠದ ಮೇಲೆ ಕೂಡಿಸಿದ ಧೂಮ್ರವರ್ಣನು ರಾಜನೇ, ನಿನ್ನ ತಂದೆ ಹರ್ಯಶ್ವನು ನಿನ್ನನ್ನು ರಾಜನನ್ನಾಗಿ ಮಾಡಿ ಸ್ವರ್ಗವೇರಿದನು. ಈ ಯದುವಂಶವೆಂದರೆ ಅನೇಕ ರಾಜರತ್ನಗಳ

ಗಣಿಯು. ಈ ವಂಶದಲ್ಲಿ ದೇವತೆಗಳೂ ಋಷಿಗಳೂ ಉರಗಗಳೂ ಮನುಷ್ಯರಾಗಿ ಜನಿಸಲಿವೆ. ಯೌವನಾಶ್ವ ರಾಜನ ತಂಗಿ ನನ್ನ ಪತ್ನಿ. ಇವಳಲ್ಲಿ ನನ್ನಿಂದ ಪಂಚಕನ್ಯೆಯರು ಜನಿಸಿದ್ದಾರೆ. ಇವರನ್ನು ನಿನಗೆ ವಿವಾಹ ಮಾಡಿಕೊಡುವೆನು. ಮುಂದೆ ನಿನ್ನ ವಂಶವು ಭೌಮ, ಕುಕುರ, ಭೋಜ, ಅಂಧಕ, ಯಾದವ, ದಾಶಾರ್ಹ, ವೃಷ್ಣ ಎಂದು ಸಪ್ತಶಾಖೆಗಳಾಗಿ ಹಬ್ಬುವುದು ಎಂದು ಹೇಳಿ ಪಾಣಿಗ್ರಹಣ ಮಾಡಿಸಿದನು. ರಾಜನೇ, ನಿನ್ನಿಂದ ಈ ಕನ್ಯೆಯರಲ್ಲಿ ತಂದೆಯ ಪರಾಕ್ರಮ – ತಾಯಿಯ ಸದ್ಗುಣ ಬೆಳೆಸಿಕೊಂಡ ಐದುಮಂದಿ ಪುತ್ರರಾಗುವರು. ಅವರೆಲ್ಲರೂ ಕಾಮರೂಪಿಗಳು ಜಲದಲ್ಲಿ ಸ್ವಚ್ಛಂದ ವಿಹಾರಿಗಳೂ ಆಗವರೆಂದು ವರ ನೀಡಿದನು. ರಾಜನು ಪಂಚತಾರೆಯರೊಂದಿಗೆ ಚಂದ್ರನಂತೆ ಮೇಲೆ ಬಂದನು. ಮುಂದೆ ಈ ಐದು ಸರ್ಪಕನ್ಯೆಯರಿಂದ ಮುಚುಕುಂದ, ಪದ್ಮವರ್ಣ, ಮಾಧವ, ಸಾರಸ, ಹರಿತ ಎಂಬ ಪಂಚಪುತ್ರರಾದರು. ಇವರಲ್ಲಿ ಮುಚುಕುಂದನು ವಿಂಧ್ಯಾದ್ರಿಯ ನರ್ಮದಾ ತೀರದಲ್ಲಿ 'ಮಾಹಿಷ್ಮತೀ' ನಗರ ಕಟ್ಟಿದನು.

ಪದ್ಮವರ್ಣನು ವೇಣಾನದಿಯ ತೀರದಲ್ಲಿ ಕರವೀರವೆಂಬ ಪಟ್ಟಣವನ್ನೂ, ಸರಸನು ಬನವಾಸಿ' ಎಂಬ ಪಟ್ಟಣವನ್ನೂ, ಹರಿತನು ಸಮುದ್ರ ನಡುವೆ ಇರುವ ದ್ವೀಪಗಳನ್ನೆ ಆಳುತ್ತಿದ್ದನು. ಅವನ ಮದ್ಗರವೆಂಬ ಮೀನಿನ ಪಡೆಯಿದ್ದು ಸಾಗರದೊಳಗಿನ ಅಮೂಲ್ಯ ರತ್ನರಾಶಿ ತಂದು ನೀಡುತ್ತಿದ್ದರು. ಮುಂದೆ ಯದುರಾಜನು ಮಾಧವನಿಗೆ ರಾಜ್ಯ ಒಪ್ಪಿಸಿ ಸ್ವರ್ಗಸ್ಥನಾದನು. ಅವನ ಮಗನೆ ಸತ್ವತ ಇವನಿಗೆ ಭೀಮನು ಮಗನಾದನು. ಇವನಿಂದ ಭೈಮರೆಂದು, ಸಾತ್ವವನಿಂದ ಸಾತ್ವತರೂ ಪ್ರಸಿದ್ಧರಾದರು.

ಭೀಮನು ರಾಜ್ಯ ಮಾಡುತ್ತಿರುವಾಗಲೇ ಶ್ರೀರಾಮಚಂದ್ರನು ಅಯೋಧ್ಯೆಯಾಳುತ್ತಿದ್ದನು. ಅದೇ ಸಮಯದಲ್ಲಿ ಶತ್ರುಜ್ಞನು ಮಧುವನಕ್ಕೆ ಹೋಗಿ ಲವಣಾಸುರನನ್ನು ಸಂಹರಿಸಿ ಮಧುವನವನ್ನೆಲ್ಲ ಕಡಿದು ಮಥುರಾ' ಎಂಬ ಪಟ್ಟಣ ನಿರ್ಮಿಸಿದನು.

**ತತಃ ಕುಶೇ ಸ್ಥಿತೇ ರಾಜ್ಯೇ ಲವೇ ತು ಯುವರಾಜನಿ ।**
**ಅಂಧಕೋ ನಾಮ ಭೀಮಸ್ಯ ಸುತೋ ರಾಜ್ಯಮಕಾರಯತ್ ॥ 4 ॥**
**ಅಂಧಕಸ್ಯ ಸುತೋ ಜಜ್ಞೇ ರೇವತೋ ನಾಮ ಪಾರ್ಥಿವಃ ।**
**ಋಕ್ಷೋಽಥ ರೇವತಾದ್ ಜಜ್ಞೇ ರಮ್ಯೇ ಪರ್ವತಮೂರ್ಧನಿ ॥ 5 ॥**

ಮುಂದೆ ರಾಮಲಕ್ಷ್ಮಣಾದಿಗಳು ಪರಂಧಾಮ ಸೇರಿದ ಮೇಲೆ ಶ್ರೀರಾಮನ ಪುತ್ರ ಕುಶನು ರಾಜನಾದಾಗ ಲವನು ಯುವರಾಜನಾದನು. ಮುಂದೆ ಮಧುದೈತ್ಯನ ದೌಹಿತ್ರ ಸಂಬಂಧಿಯಾದ ಭೀಮನು ಮಥುರೆ ಆಕ್ರಮಿಸಿದನು. ಅವನ ಮಗ ಅಂಧಕ, ಅವನ ಮಗ ರೈವತನು, ರೈವತನಿಂದ ಋಕ್ಷನು, ಹುಟ್ಟಿದನು. ರೈವತನಿಂದ ಈ ಗಿರಿಯಲ್ಲಿ ಋಕ್ಷನು ಜನಿಸಿದ್ದರಿಂದ 'ರೈವತಗಿರಿ' ಎಂದು ಹೆಸರಾಯಿತು.

ರೈವತನಿಗೆ ವಿಶ್ವಗರ್ಭನು ಅವನಿಗೆ ಮೂರು ಮಂದಿ ಪತ್ನಿಯರಲ್ಲಿ ವಸು, ಬಭ್ರು ಸುಕ್ಷೀಣ, ಸಭಾಕ್ಷರೆಂಬ ನಾಲ್ಕು ಮಂದಿ ಮಕ್ಕಳಾದರು. ಇದರಿಂದ ಮುಂದುವರೆದ ಯಾದವಕುಲದಲ್ಲಿ ಸಾಕ್ಷಾತ್ ನೀನೆ ಅವತರಿಸಿರುವೆ. ದೇವರಹಸ್ಯ ತಿಳಿದಿರುವ ನಿನಗೆ ಹೇಳುವುದೇನು? ನಾವೆಲ್ಲರೂ ನಿನ್ನ ಆದೇಶದಂತೆ ಯುದ್ಧ ದೀಕ್ಷೆ ಸ್ವೀಕರಿಸಿದ್ದೇವೆ.

ಕೃಷ್ಣ, ನಾನು ಬಾದರಾಯಣರಿಂದ ಕೇಳಿ ತಿಳಿದ ವಿಷಯ ತಿಳಿಸಿರುವೆ.

**ಜರಾಸಂಧಸ್ತು ಬಲವಾನ್ ನೃಪಾಣಾಂ ಮೂರ್ಧ್ನಿ ತಿಷ್ಠತಿ ।**
**ಅಪ್ರಮೇಯಬಲಶ್ಚೈವ ವಯಂ ಚ ಕೃಶ ಸಾಧನಾಃ ॥ 6 ॥**
**ನ ಚೇಯಮೇಕಾಹಮಪಿ ಪುರೀರೋಧಂ ಸಹಿಷ್ಯತಿ ।**
**ಕೃಶಭಕ್ತೇಂಧನಕ್ಷಾಮಾ ದುರ್ಗೈರಪರಿವೇಷ್ಟಿತಾಃ ॥ 7 ॥**

ಕೃಷ್ಣನೇ ವಸ್ತುಸ್ಥಿತಿ ನೋಡಿದರೆ ಮಹಾಸೈನ್ಯವಾಹಿನಿ ಮುಂದೆ ನಿಮ್ಮ ಅಲ್ಪ ಸೈನ್ಯ ಒಂದು ದಿನವೂ ಹೋರಾಡಲು ಸಮರ್ಥವಲ್ಲ. ಅವರಲ್ಲಿ ಅನ್ನ ಇಂಧನ ಸಾಮಗ್ರಿಗಳು ತುಂಬಿವೆ. ನಮ್ಮಲ್ಲಿ ಅನ್ನಾದಿ ಸಂಗ್ರಹ ಕರಗಿಹೋಗಿದೆ. ನಮ್ಮ ಕೋಟೆ ಕೊತ್ತಲಗಳು ದುರ್ಗದಂತಿದ್ದವು. ಈಗ ಅವೆಲ್ಲ ಬಿದ್ದು ಹೋಗಿ ಶತ್ರುಗಳಿಗೆ ಸುಲಭವಾಗಿದೆ. ದ್ವಾರಯಂತ್ರಗಳ ಕೊರತೆ, ಮೊಂಡಾಗಿರುವ ಶಸ್ತ್ರಾಸ್ತ್ರಗಳು, ಕಂಸನ ಭಯದಿಂದ ದೂರದೂರ ಪ್ರದೇಶದ ಜನರೆಲ್ಲ ಈಗ ನಿರ್ಭಯವಾಗಿ ಮಥುರೆಯಲ್ಲಿ ತುಂಬು ಹೋಗಿದ್ದಾರೆ.

ಕಂಸನಿರುವಾಗ ಅವನ ಬಲದರ್ಪಗಳಿಗೆ ಭಯಪಟ್ಟು ಈ ಊರಿನ ಮೇಲೆ ಧಾಳಿ ಮಾಡಲು ಹಿಂಜರಿಯುತ್ತಿದ್ದರು. ದುರ್ಗದ ಸಂರಕ್ಷಣೆ ಆಗ ಬೇಕಾಗಿದ್ದಿಲ್ಲ. ಹೀಗಿರುವಾಗ ನೂತನವಾಗಿ ತಲೆ ಎತ್ತಿರುವ ನಮ್ಮ ರಾಜ್ಯದಲ್ಲಿ ಬಹಳ ಸುಧಾರಣೆಯ ಅತ್ಯಗತ್ಯವಿದೆ. ಈಗ ನಮ್ಮ ಅಧೀನರಾಜರೂ ಅಂತಃ

ಶತ್ರುಗಳಾಗಿದ್ದಾರೆ. ಬಹಿಃಶತ್ರುಗಳೂ ಪ್ರಬಲರಾಗಿದ್ದಾರೆ. ಹೀಗಿರುವಾಗ ಏನು ಮಾಡಬೇಕೆಂದು ನೀನೆ ವಿಚಾರಿಸು. ಇದು ನನಗೆ ತೋರಿದ ವಿಜ್ಞಾಪನೆ ಹೊರತು ನಿನಗೆ ಬೋಧನೆಯಲ್ಲ. ನಮಗೆಲ್ಲ ನೀನೆ ನಾಯಕಮಣಿ ನೀನೆ ಈ ವಿಪತ್ತಿನಿಂದ ನಮ್ಮನ್ನೆಲ್ಲ ರಕ್ಷಿಸಬೇಕು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವಿಕದ್ರು ವಿಜ್ಞಾಪನವೆಂಬಲ್ಲಿ
ಮುವತ್ತೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಏಕೋನಚತ್ವಾರಿಂಶೋಽಧ್ಯಾಯಃ

## ಗೋಮಂತದಲ್ಲಿ ಕೃಷ್ಣ-ಬಲರಾಮರು

*ವೈಶಂಪಾಯನ ಉವಾಚ –*

**ವಿಕದ್ರೋಸ್ತು ವಚಃ ಶ್ರುತ್ವಾ ವಸುದೇವೋ ಮಹಾಯಶಾಃ ।**
**ಪರಿತುಷ್ಟೇನ ಮನಸಾ ವಚನಂ ಚೇದಮಬ್ರವೀತ್ ॥ 1 ॥**

**ಭಾಷಿತಾಃ ರಾಜಧರ್ಮಾಶ್ಚ ಸತ್ಯಾಶ್ಚ ಜಗತೋ ಹಿತಾಃ ।**
**ವಿಕದ್ರುಣಾ ಯದುಶ್ರೇಷ್ಠ ಯದ್ಧಿತಂ ತದ್ ವಿಧೀಯತಾಮ್ ॥ 2 ॥**

ವಿಕದ್ರುವಿನ ಮಾತು ಕೇಳಿ ಸಂತುಷ್ಟನಾದ ವಸುದೇವನು ಕೃಷ್ಣನಿಗೆ ವತ್ಸ ಸಂಧಿ ವಿಗ್ರಹಯಾನ ಆಸನ ದ್ವೈಧೀಭಾವ ಆಶ್ರಯವೆಂಬ ಆರು ವಿಧ ರಾಜತಂತ್ರಗಳನ್ನು ವಿಕದ್ರುವು ಚೆನ್ನಾಗಿ ಅರಿತು, ರಾಜ್ಯಕ್ಷೇಮ ಕೋರಿ ಸರಿಯಾದ ಸಲಹೆ ನೀಡಿದ ವಿಕದ್ರುವು ನಿಜಕ್ಕೂ ರಾಜನಾಗುವ ಲಕ್ಷಣಗಳನ್ನು ಹೊಂದಿರುವನು. ಇದನ್ನು ಕೇಳಿ ಸರ್ವರಿಗೂ ಶ್ರೇಯಸ್ಸಿನ ಮಾರ್ಗ ಆಲೋಚಿಸು ಎಂದನು.'

ಶ್ರೀಕೃಷ್ಣನು ಹೀಗೆಂದನು.

---

1. *ವಿಶೇಷಾಂಶ :*
ಬಲೈಶ್ವರ್ಯೋಽಪೀಚ್ಛಯಾರ್ಗಾತ್ ಸ ಕೃಷ್ಣಃ ।
ಸಂದರ್ಶಯನ್ ಬಲಿನಾಮಲ್ಪಸೇನಾದ್ಯುಪಸ್ಕರಾಣಾಂ ಬಹುಲೋಪಸ್ಕರೈಶ್ಚ ।
ಪ್ರಾಪ್ತೇ ವಿರೋಧೇ ಬಲಿಭಿಃ ನೀತಿಮಗ್ರ್ಯಾಂ ಯಯೌ ಸಶಾಮೋ ದಕ್ಷಿಣಶಾಂ ರಮೇಶಃ ॥ *–ತಾ.ನಿ. 16/2*

**ಶ್ರೂಯತಾಮುತ್ತರಂ ವಾಕ್ಯಂ ಶ್ರುತ್ವಾ ಚ ಪರಿಗೃಹ್ಯತಾಮ್ ।**
**ನಯೇನ ವ್ಯವಹರ್ತವ್ಯಂ ಪಾರ್ಥಿವೇನ ಯಥಾಕ್ರಮಮ್ ॥ 3 ॥**
**ಬಲಿನಃ ಸನ್ನಿಕೃಷ್ಟೇ ತು ನ ಸ್ಥೇಯಂ ಪಂಡಿತೇನ ವೈ ।**
**ಅಪಕ್ರಮೇದ್ಧಿ ಕಾಲಜ್ಞಃ ಸಮರ್ಥೋऽ ಯುದ್ಧಮುದ್ವಹೇತ್ ॥ 4 ॥**
**ಅಹಂ ತಾವತ್ ಸಹಾರ್ಯೇಣ ಮುಹೂರ್ತೇಽಸ್ಮಿನ್ ಪ್ರಕಾಶಿತೇ ।**
**ಜೀವಿತಾರ್ಥಂ ಗಮಿಷ್ಯಾಮಿ ಶಕ್ತಿಮಾನಪಿ ಅಶಕ್ತವತ್ ॥ 5 ॥**

ವಿಕದ್ರುವಿನ ಮಾತಿನ ಸಾರವನ್ನು ಗ್ರಹಿಸಿದ್ದೇನೆ. ಜರಾಸಂಧನ ಜೊತೆಯಾದವರಿಗೆ ವೈರ ದ್ವೇಷ ಬಂದದ್ದು ನನ್ನಿಂದ. ಆದ್ದರಿಂದ ನಾನೀಗ ಯುದ್ಧ ಮಾಡುವುದನ್ನು ಬಿಟ್ಟು ದೂರ ಸರಿಯಬೇಕು ಎಂಬ ಅಭಿಪ್ರಾಯವು ವಿಕದ್ರುವಿನ ಅಭಿಪ್ರಾಯವಾಗಿದೆ.

ಅತ್ಯಂತ ಬಲಿಷ್ಠರಾದ ಶತ್ರುರಾಜರು ನಮ್ಮನ್ನಾಕ್ರಮಿಸಿರುವಾಗ ಅಲ್ಪ ಸೈನ್ಯದವರು ಅವರನ್ನು ಎದುರಿಸದೇ ಹಿಂಜರಿದಂತೆ ತೋರಿಸಿ, ಸೈನ್ಯ ಕೂಡಿಸಿಕೊಂಡು ಸಮಯ ನೋಡಿ ಶತ್ರುವಿನ ಮೇಲೆ ಬಿದ್ದು ಸೋಲಿಸಬೇಕು ಇದು ರಾಜನೀತಿ. ಇದು ನನಗೂ ನಮ್ಮಂತವೆ.

ಅದಕ್ಕಾಗಿ ನಾನು ನನ್ನಣ್ಣನೊಂದಿಗೆ ಈ ಜರಾಸಂಧನಿಗೆ ಹೆದರಿದಂತೆ ನಟಿಸುತ್ತಾ ದಕ್ಷಿಣ ಪಥದ ಕಡೆ ಪಲಾಯನ ಮಾಡುತ್ತಾ ಸಹ್ಯಾದ್ರಿ ಕೊಲ್ಹಾಪುರ ಸೇರುತ್ತೇವೆ. ನಾನು ಅವನ ಸೈನ್ಯವನ್ನು ನಿಗ್ರಹಿಸಲು ಸಾಮರ್ಥ್ಯ ಹೊಂದಿದ್ದರೂ ಅಶಕ್ತನಂತೆ ಜೀವದ ರಕ್ಷಣೆಗಾಗಿ ಓಡಿಹೋಗುವೆ. ನಾವು ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡಿದವೆಂದು ತಿಳಿದ ಜರಾಸಂಧ ವಿಜಯದಿಂದ ಕೊಬ್ಬಿ ಮಥುರಾ ಪುರಿಯನ್ನು ಆಕ್ರಮಿಸದೆ ನಮ್ಮ ಹಿಂದೆ ಬೀಳುವನು. ಇದರಿಂದಾಗಿ ನಮ್ಮ ಮೂಲ ಸ್ಥಾನದ ರಕ್ಷಣೆಯೂ ಆಗುತ್ತದೆ. ಇದು ನಮ್ಮೆಲ್ಲರೂ ಶ್ರೇಯಸ್ಸಿನ ಯಾತ್ರೆಯಾಗುತ್ತದೆ. ದಕ್ಷಿಣ ಪಥದ ಪುಣ್ಯಾರಾಮಗಳು, ತೀರ್ಥಗಳು, ಪವಿತ್ರಕ್ಷೇತ್ರಗಳನ್ನು ನೋಡಬೇಕೆಂಬ ಹಂಬಲವೂ ಪೂರ್ತಿಯಾಗುವುದು.

### ಕರವೀರಪುರಕ್ಕೆ ಬಲರಾಮ ಕೃಷ್ಣರಯಾತ್ರೆ

**ಏವಮುಕ್ತ್ವಾ ತು ತೌ ವೀರೌ ಕೃಷ್ಣಸಂಕರ್ಷಣಾವುಭೌ ।**
**ಪ್ರಪೇದತುರಸಂಭ್ರಾಂತೌ ದಕ್ಷಿಣೌ ದಕ್ಷಿಣಾಪಥಮ್ ॥ 6 ॥**

**ಸಹ್ಯಪೃಷ್ಠೇಷು ರಮ್ಯೇಷು ಮೋದಮಾನಾವುಭೌ ತಥಾ ।**
**ತೌ ಚ ಸ್ವಲ್ಪೇನ ಕಾಲೇನ ಸಹ್ಯಾಚಲ ವಿಭೂಷಿತಮ್ ।**
**ಕರವೀರಪುರಂ ಪ್ರಾಪ್ತೌ ಸ್ವವಂಶೇನ ವಿಭೂಷಿತಮ್ ॥ 7 ॥**

ಹೀಗೆ ರಾಮಕೃಷ್ಣರು ಮಥುರೆಯಿಂದ ಹೊರಟು ನಿರ್ಭಯರಾಗಿ ದಕ್ಷಿಣದೇಶಕ್ಕೆ ಬಂದರು. ನೂರಾರು ದೇಶಗಳನ್ನು ಸಂದರ್ಶಿಸುತ್ತಾ ಸಹ್ಯಾದ್ರಿ ಘಟ್ಟಗಳನ್ನು ಏರಿ ಇಳಿಯುತ್ತಾ ಕೊಲ್ಹಾಪುರಕ್ಕೆ ಬಂದರು.

### ಪರಶುರಾಮದೇವರ ದರ್ಶನ

**ತೌ ತತ್ರ ಗತ್ವಾ ವೇಣಾಯಾಃ ನದ್ಯಾಸ್ತೀರಾಂತ ಮಾಶ್ರಿತಮ್ ।**
**ಆಸೇದತುಃ ಪ್ರರೋಹಾಢ್ಯಂ ನ್ಯಗ್ರೋಧಂ ತರುಪುಂಗವಮ್ ॥ 8 ॥**

**ಅಧಸ್ತಾತ್ ತಸ್ಯ ವೃಕ್ಷಸ್ಯ ಮುನೀಂ ದೀಪ್ತತಪೋಧನಮ್ ।**
**ಅಂಸಾವಸಕ್ತಪರಶುಂ ಜಟಾವಲ್ಕಲ ಧಾರಿಣಮ್ ।**
**ಕ್ಷತ್ರಾಂತಕರಮಕ್ಷೋಭ್ಯಂ ವಪುಷ್ಮಂತಮಿವಾರ್ಣವಮ್ ॥ 9 ॥**

ಕೊಲ್ಹಾಪುರದ ಸಮೀಪದಲ್ಲಿ ವೇಣಾನದಿಯು ಹರಿಯುತ್ತಿತ್ತು. ಅದರ ದಂಡೆಯ ಮೇಲೆ ಶಾಖೋಪಶಾಖೆಯಿಂದ ಶೋಭಿಸುವ ಮಹಾನ ಆಲದ ಗಿಡ. ಅದರ ಸಮೀಪ ಬಂದ ರಾಮಕೃಷ್ಣರು ವಟವೃಕ್ಷದಡಿ ತೇಜಸ್ವಿಯಾದ ಮರ್ಹರ್ಷಿಯನ್ನು ನೋಡಿದರು. ಬ್ರಹ್ಮರ್ಷಿಯು ನಾರು ಮಡಿ ಉಟ್ಟಿದ್ದರು. ಅಗ್ನಿಜ್ವಾಲೆಯಂತಿರುವ ಶರೀರಕಾಂತಿ ಹೊಂದಿದ್ದರು. ಸೂರ್ಯನೆ ಬಿಸಿಲಿನ ಬೇಗಗೆ ಬೇಸತ್ತು ನೆರಳನಲ್ಲಿ ಬಂದು ಕೂತಂತಿತ್ತು.

ಹೆಗಲ ಮೇಲೆ ಮಿಂಚಿನಂತೆ ಹೊಳೆಯುವ ಗಂಡುಕೊಡಲಿ. ಸಮುದ್ರದಂತೆ ಗಂಭೀರ ಮುಖ ಮುದ್ರೆ. ಯಜ್ಞೇಶ್ವರನಿಗೆ ಆಹುತಿಯನ್ನರ್ಪಿಸಿದ್ದರು. ತ್ರಿಷವಣ ಸ್ನಾನದಿಂದ ಶರೀರ ಆರ್ದ್ರವಾಗಿತ್ತು. ಅವನ ಸಮೀಪ ಹೋಮ ಧೇನುವಾದ ಕಾಮಧೇನುವ ಕರುವಿನೊಂದಿಗೆ ನಿಂತಿತ್ತು. ಪರಶುರಾಮನು ಅದನ್ನು ಕರೆದುಕೊಂಡು ಹೋಗುತ್ತಿದ್ದ. ಇದೆಲ್ಲ ಸ್ನಾನ ಹೋಮ ಗೋಸೇವೆ ಮಾಡಬೇಕೆಂದು ಶಿಕ್ಷಣ ಮಾತ್ರ. ಮಹೇಂದ್ರ ಪರ್ವತದಲ್ಲಿದ್ದು ಆಯಾಸ ಶ್ರಮವೆಂಬುದನ್ನೆ ಕಾಣದ ಭಾರ್ಗವರಾಮನನ್ನು ಕಂಡರು.

**ತ್ವಯಾ ಸಾಯಕವೇಗೇನ ಕ್ಷಿಪ್ತೋ ಭಾರ್ಗವ! ಸಾಗರಃ ।**
**ಇಷುಪಾತೇನ ನಗರಂ ಕೃತಂ ಶೂರ್ಪಾರಕಂ ತ್ವಯಾ ॥ 10 ॥**

**ಧನುಃ ಪಂಚಶತಾಯಾಮಃ ಇಷು ಪಂಚಾಶತೋಚ್ಛ್ರಯಮ್ ।**
**ಸಹ್ಯಸ್ಯ ನಿಕುಂಜೇಷು ಸ್ಫೀತೋ ಜನಪದೋ ಮಹಾನ್ ॥ 11 ॥**

ಪೂಜ್ಯರೇ! ಭೃಗುಕುಲಾವತಂಸರೂ ಕ್ಷತ್ರಿಯಾಂತಕರೂ ಆದ ನೀವು ಜಮದಗ್ನಿಯ ಪುತ್ರ ಪರಶುರಾಮರೆಂದು ಭಾವಿಸುತ್ತೇವೆ. ನಿನ್ನ ಬಾಣದಿಂದ ಸಾಗರವನ್ನೆ ಹಿಂದಕ್ಕೆ ಸರಿಸಿ, ಐದುನೂರು ಧನುಸ್ಸಿನಷ್ಟು ದೂರದ, ಐನೂರು ಬಾಣದಷ್ಟು ಅಗಲವಾದ ಶೂರ್ಪಾರಕ ಕ್ಷೇತ್ರ ರಚಿಸಿದೆ.

**ಛಿನ್ನಂ ಪರಶುನೈಕೇನ ಸ್ಮರತಾ ನಿಧನಂ ಪಿತುಃ ।**
**ಇಯಮದ್ಯಾಪಿ ರುಧಿರೈಃ ಕ್ಷತ್ರಿಯಾಣಾಂ ಹತದ್ವಿಷಾಮ್ ॥ 12 ॥**

ನಿನ್ನ ತಂದೆಯನ್ನು ಕೊಂದುಹಾಕಿದ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನೂ ನಿನ್ನ ಕೊಡಲಿಯಿಂದ ತುಂಡರಿಸಿರುವೆ. ದುಷ್ಟಕ್ಷತ್ರಿಯರನ್ನು ತರಿದೆ. ತಾವು ರೇಣುಕೆಯ ಪುತ್ರ ಪರಶುರಾಮನೆಂದು ತಿಳಿಯುವೆವು.

ನಾವಿಬ್ಬರೂ ಒಂದು ಪ್ರಶ್ನೆ ಕೇಳುವೆವು. ಇದಕ್ಕೆ ನಿಮ್ಮಿಂದ ಉತ್ತರ ಬಯಸುತ್ತೇನೆ.

**ಆವಯೋಃ ಮಥುರಾ ರಾಮ! ಯಮುನಾ ತೀರ ಶೋಭಿನೀ ।**
**ಯಾದವೌ ಸ್ವೋ ಮುನಿಶ್ರೇಷ್ಠ! ಯದಿ ತೇ ಶ್ರುತಿಮಾಗತೌ ॥ 13 ॥**

**ವಸುದೇವೋ ಯದುಶ್ರೇಷ್ಠಃ ಪಿತಾ ನೌ ಹಿ ಧೃತವ್ರತಃ ।**
**ತೌ ಸ್ವಃ ಕಂಸಭಯಾತ್ ತತ್ರ ಶಂಕಿತೌ ಪರಿವರ್ಧಿತೌ ।**
**ಅಥಾವಯೋಃ ಪುರಂ ರೋದ್ಧುಂ ಜರಾಸಂಧೋ ವ್ಯವಸ್ಥಿತಃ ॥ 14 ॥**

**ಅರಥೌ ಪತ್ತಿನೌ ಯುದ್ಧೇ ನಿಸ್ತನುತ್ರೌ ನಿರಾಯುಧೌ**
**ಜರಾಸಂಧೋದ್ಯಮಭಯಾತ್ ಪುರಾದ್ ದ್ವಾವೇವ ನಿಃಸೃತೌ ॥ 15 ॥**

ಭಾರ್ಗವ ರಾಮನೇ, ಮಥುರಾಪಟ್ಟಣವು ನಮ್ಮ ವಾಸಸ್ಥಾನವಾಗಿದೆ. ನಾವಿಬ್ಬರೂ ವಸುದೇವನ ಮಕ್ಕಳು. ಜನನಾದಾರಭ್ಯ ಕಂಸನ ಪಟ್ಟಣದಲ್ಲಿಯೆ ಬೆಳೆದೆವು. ಧರ್ಮಭ್ರಷ್ಟನಾಗಿದ್ದ ಕಂಸನನ್ನು ಕೊಂದು ಹಾಕಿ ಉಗ್ರಸೇನನಿಗೆ ಸಿಂಹಾಸನದಲ್ಲಿರಿಸಿದೆವು.

ಜರಾಸಂಧನು ತನ್ನ ಮಕ್ಕಳಿಗೆ ವೈಧವ್ಯವುಂಟು ಮಾಡಿದ ಪ್ರತಿಕಾರಕ್ಕಾಗಿ ಅನೇಕ ಬಾರಿ ಮಥುರೆಯನ್ನಾಕ್ರಮಿಸಿದ. ನಾವೂ ಅನೇಕ ಬಾರಿ ಸೋಲಿಸಿದೆವು. ಈಗ ನಮ್ಮಲ್ಲಿ ಯುದ್ಧ ಮಾಡಲು ರಥ, ಕವಚ, ಆಯುಧಗಳಿಲ್ಲ ಕೇವಲ ಪದಾತಿಗಳಂತಿದ್ದೇವೆ. ಜರಾಸಂಧನು ಪಟ್ಟಣವನ್ನು ಮುತ್ತಿರುವನೆಂದು ತಿಳಿದು ಭಯದಿಂದಲೆಂಬಂತೆ ಅಲ್ಲಿಂದ ಹೊರಟು ಬಂದಿದ್ದೇವೆ. ಈಗ ನಾವು ಮಾಡಬೇಕಾದ ಕಾರ್ಯವೇನೆಂದು ಸಲಹೆಗಾಗಿ ನಿಮ್ಮ ಬಳಿ ಬಂದಿದ್ದೇವೆ. ನಮಗೆ ಸಮಯೋಚಿತ ಸಲಹೆ ನೀಡಿರಿ.

## ಪರಶುರಾಮರ ಸಲಹೆ

**ಅಪರಾಂತಾದಹಂ ಕೃಷ್ಣಃ ಸಂಪ್ರತೀಹಾಗತಃ ಪ್ರಭೋ ।**
**ಏಕ ಏವ ವಿನಾ ಶಿಷ್ಯೈಃ ಯುವಯೋಃ ಮಂತ್ರಕಾರಣಾತ್ ॥ 16 ॥**
**ಜಾನೇ ತ್ವಾಂ ಕೃಷ್ಣ ಗೋಪ್ತಾರಂ ಜಗತಃ ಪ್ರಭುಮವ್ಯಯಮ್ ।**
**ದೇವಕಾರ್ಯಾರ್ಥಸಿದ್ಧ್ಯರ್ಥಂ ಅಬಾಲಂ ಬಾಲತಾಂಗತಮ್ ॥ 17 ॥**
**ನ ತ್ವಯಾವಿದಿತಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ ॥ 18 ॥**

ನೀವಿಬ್ಬರೂ ಬರುವಿರೆಂದು ತಿಳಿದೆ ಸಮುದ್ರ ತೀರ ಪ್ರದೇಶದಿಂದ ಇಲ್ಲಿಗೆ ಬಂದಿರುವೆನು. ಅದಕ್ಕಾಗಿಯೇ ಶಿಷ್ಯರನ್ನೂ ಕರೆತಂದಿಲ್ಲ. ನೀವಾರು? ಎಂದು, ವ್ರಜದಲ್ಲಿರುವಿರೆಂದೂ, ಕಂಸವಧೆ ಮೊದಲಾದ ವಿಷಯಗಳೆಲ್ಲ ನನಗೆ ತಿಳಿದಿದೆ.

ನೀನು ಜಗತ್ತನ್ನೆ ರಕ್ಷಿಸಲು ಬಂದಿರುವ ಸಾಕ್ಷಾತ್ ಶ್ರೀಮನ್ನಾರಾಯಣ ಸಿಂದೂ ನನಗೆ ಗೊತ್ತಿದೆ. ದೇವತಾಕಾರ್ಯ ಸಿದ್ಧಿಗಾಗಿ ಬಾಲಕನಲ್ಲದಿದ್ದರೂ ಈ ಬಾಲವೇಷ ಧರಿಸಿರುವೆ. ಈ ಮೂರು ಲೋಕದಲ್ಲಿ ನಿನಗೆ ತಿಳಿಯದ ವಿಷಯವೇನಿದೆ? ನಿನಗೆ ಸಲಹೆ ನೀಡುವುದಾದರೂ ಏನಿದೆ? ಆದರೂ ನಿಮಗೆ ಉತ್ತರ ನೀಡುವೆ.

## ಶೃಗಾಲ ವಧೆ

**ಪೂರ್ವಜೈಸ್ತವ ಗೋವಿಂದ ಪೂರ್ವಂ ಪುರಮಿದಂ ಕೃತಮ್ ।**
**ಪುರೇಽಸ್ಮಿನ್ ನೃಪತಿಃ ಕೃಷ್ಣ ವಾಸುದೇವೋ ಮಹಾಯಶಾಃ ॥ 19 ॥**
**ಶೃಗಾಲ ಇತಿ ವಿಖ್ಯಾತೋ ನಿತ್ಯಂ ಪರಮ ಕೋಪನಃ ।**
**ದಾಯಾದಾಃ ನಿಹತಾಃ ಸರ್ವೇ ವೀರ! ದ್ವೇಷಾನುಶಾಯಿನಾ ॥ 20 ॥**

ಗೋವಿಂದನೇ! ಹಿಂದಿನ ನಿನ್ನ ಪೂರ್ವಜರು ಕರವೀರಪುರವನ್ನು ನಿರ್ಮಿಸಿದರು. ಈ ಪುರದಲ್ಲಿ ಶೃಗಾಲ ವಾಸುದೇವನೆಂಬ ರಾಜನೂ ಮಹಾದ್ವೇಷಿಯೂ ದುರಹಂಕಾರಿಯೂ ಅಸೂಯಪರನಾದ ರಾಜನಿರುವನು. ಇವನು ನಿನ್ನ ವಂಶದ ರಾಜ್ಯಕ್ಕೆ ಉತ್ತರಾಧಿಕಾರಿಗಳನ್ನೆಲ್ಲ ಕೊಂದಿದ್ದಾನೆ. ಸ್ವೇಚ್ಛಾಚಾರಿಯೂ ದುರಾಚಾರಿಯೂ ಐಶ್ವರ್ಯ ಮದೋನ್ಮತ್ತನೂ, ತನ್ನ ಮಕ್ಕಳ ವಿಷಯದಲ್ಲಿಯೂ ಅತಿಕ್ರೂರತನ ತೋರುತ್ತಿರುವನು. ಇಂತಹ ದುಷ್ಟರಾಜನ ಕರವೀರಪುರದಲ್ಲಿ ವಾಸಿಸುವುದು ಯುಕ್ತವಲ್ಲ.

**ಶ್ರೂಯತಾಂ ಕಥಯಿಷ್ಯಾಮಿ ಯತ್ರೋಭೌ ಶತ್ರುಬಾಧನೌ ।**
**ಜರಾಸಂಧಂ ಬಲೋದಗ್ರಂ ಭವಂತೌ ಯೋಧಯಿಷ್ಯತಃ ॥ 21 ॥**

**ತೀರ್ತ್ವಾ ವೇಣಾಮಿಮಾಂ ಪುಣ್ಯಾಂ ನದೀಮದ್ಯೈವ ಬಾಹುಭಿಃ ।**
**ವಿಷಯಾಂತೇ ನಿವಾಸಾಯ ಗಿರಿಂ ಗಚ್ಛಾಮ ದುರ್ಗಮಮ್ ॥ 22 ॥**

ಕೃಷ್ಣ, ನೀವಿಬ್ಬರೂ ಎಲ್ಲಿದ್ದುಕೊಂಡು ಶತ್ರುವಿಗೆ ಪೀಡೆಕೊಡುತ್ತಾ ಮಹಾಬಲಿಷ್ಠ ಜರಾಸಂಧನೊಂದಿಗೆ ಯುದ್ಧ ಮಾಡಬೇಕೆಂದು ಹೇಳುವೆನು. ನಾವೆಲ್ಲರೂ ಈಗ ವೇಣಾನದಿಯನ್ನು ಈಜಿಕೊಂಡೇ ದಾಟಿ ಅತಿದುರ್ಗಮವಾದ ಯಜ್ಞಗಿರಿ'ಯಲ್ಲಿ ಒಂದು ದಿನ ಇರೋಣ. ಅಲ್ಲಿ ಮಾಂಸಭಕ್ಷಕರಾದ ದಸ್ಯುಗಳಿರುವರು. ಅಲ್ಲಿ ಖಟ್ವಾಂಗಾ ಎಂಬ ನದಿಯಿದೆ. ಅಲ್ಲಿರುವ ಫಲಮೂಲಗಳನ್ನು ತಿಂದು, ಕ್ರೌಂಚಪುರಕ್ಕೆ ಹೋಗೋಣ. ಅಲ್ಲಿಯ ನಿನ್ನ ವಂಶದಲ್ಲಿ ಜನಿಸಿದ ಮಹಾಕಪಿಯೆಂಬ ರಾಜನೊಬ್ಬನಿದ್ದಾನೆ. ಅವನನ್ನು ನೋಡದೆ ಅನಡುಹ' ಎಂಬ ತೀರ್ಥಕ್ಕೆ ಹೋಗಿ, ಅಲ್ಲಿಂದ ಗುಹೆಯ ಮೂಲಕ ಹೋಗಬಹುದಾದ 'ಗೋಮಂತಕ' ಪರ್ವತಕ್ಕೆ ಹೋಗೋಣ. ಇದೊಂದು ಎತ್ತರ ಶಿಖರವಾಗಿದ್ದು ದೇವತಾ ವಿಮಾನಗಳೂ ಬಂದಿಳಿಯುತ್ತವೆ. ನೀವು ಅಲ್ಲಿದ್ದುಕೊಂಡು, ದುರ್ಗಯುದ್ಧದ ಮೂಲಕ ಜರಾಸಂಧನನ್ನು ಗೆಲ್ಲಬಹುದು. ನಿಮಗೆ ಆಯುಧಗಳು ಹಿಂದಿನಂತೆಯೇ ಬರುತ್ತವೆ. ಕೌಮೋದಕೀ ಗದೆ, ಸಾನಂದ-ಮುಸಲಾದಿಗಳು ನಿಮಗೆ ಪ್ರಾಪ್ತವಾಗುತ್ತವೆ.

## ಚಕ್ರಮುಸಲ ಯುದ್ಧ

**ಸ ಚಕ್ರಮುಸಲೇ ನಾಮ ಸಂಗ್ರಾಮಃ ಕೃಷ್ಣವಿಶ್ರುತಃ ।**
**ದೇವತೈರಪಿ ನಿರ್ದಿಷ್ಟಃ ಕಾಲಸ್ಯಾದೇಶ ಸಂಜ್ಞಿತಃ ॥ 23 ॥**

**ಏಷ ತೇ ಪ್ರಥಮಃ ಕೃಷ್ಣ ಸಂಗ್ರಾಮೋ ಭುವಿ ಪಾರ್ಥಿವೈಃ ।**
**ಅತಃ ಪ್ರಭೃತಿ ಸಂಗ್ರಾಮೋ ಧರಣ್ಯಾಂ ಶಸ್ತ್ರಮೂರ್ಛಿತಃ ॥ 24 ॥**
**ಭವಿಷ್ಯತಿ ಮಹಾನ್ ಕೃಷ್ಣ! ಭಾರತಂ ನಾನು ವೈಶಸಮ್ ।**
**ತದ್ ಗಚ್ಛ ಕೃಷ್ಣ ಶೈಲೇಂದ್ರಂ ಗೋಮಂತಂ ಚ ನಗೋತ್ತಮಂ ॥ 25 ॥**
**ಇದಂ ಚೈವಾಮೃತ ಪ್ರಖ್ಯಂ ಹೋಮಧೇನೋಃ ಪಯೋಮೃತಮ್ ।**
**ಪೀತ್ವಾಗಚ್ಛತ ಭದ್ರಂ ವೋ ಮಯಾದಿಷ್ಟೇನ ವರ್ತ್ಮನಾ ॥ 26 ॥**

ಕೃಷ್ಣನೇ, ಮಹಾಯುದ್ಧ ನಡೆಯುವಾಗ ನಿನ್ನ ದಿವ್ಯಾಯುಧಗಳು ದೇವತೆಗಳ ವಿಜಯಕ್ಕಾಗಿ ಸ್ವೀಕರಿಸು. ಬಲದೇವನು ಹಲಾಯುಧ ಮುಸಲಾಯುಧ ಹಿಡಿಯಲಿ. ಭೂಭಾರ ಇಳಸಲು ಹೊರಟಿರುವ ನಿನಗೆ ಈ ಜರಾಸಂಧನು ಇಪ್ಪತ್ತಮೂರು ಅಕ್ಷೌಹಿಣಿಯನ್ನು ಹದಿನೆಂಟು ಬಾರಿ ತರುತ್ತಾನೆ. ಇದೊಂದು ನಿನಗೆ ಮೊದಲನೆ ತುತ್ತು. ಮುಂದೆ ನಡೆಯುವ ಮಹಾಭಾರತ ಯುದ್ಧವು ನಡೆಯುತ್ತದೆ. ಆದ್ದರಿಂದ ಈಗಲೇ ಗೋಮಂತಕಗಿರಿಗೆ ಹೋಗು ಜರಾಸಂಧನೊಡನೆ ಯುದ್ಧದಲ್ಲ ನಿನಗೆ ಜಯವಾಗುವುದು. ಹೋಗುವಾಗ ಈ ಹೋಮಧೇನುವಿನ ಅಮೃತಸದೃಶ ಹಾಲು ಕುಡಿದು ಹೋಗಿ, ನಾನು ಹೇಳದ ಮಾರ್ಗ ಹಿಡಿದು ಪ್ರಯಾಣಿಸಿರಿ! ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಪರಶುರಾಮ ದರ್ಶನವೆಂಬಲ್ಲಿ
ಮುವತ್ತೊಂಬತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

  

# ಅಥ ಚತ್ವಾರಿಂಶೋಽಧ್ಯಾಯಃ

## ಗೋಮಂತಾರೋಹಣ

*ವೈಶಂಪಾಯನ ಉವಾಚ –*

**ತತ್ತು ಧೇನ್ವಾಃ ಪಯಃ ಪೀತ್ವಾ ಬಲದರ್ಪ ಸಮನ್ವಿತೌ ।**

**ಗೋಮಂತಂ ಪರ್ವತಂ ದ್ರಷ್ಟುಂ ಮತ್ತನಾಗೇಂದ್ರಗಾಮಿನೌ ॥ 1 ॥**

**ಜಾಮದಗ್ನ್ಯಪ್ರದಿಷ್ಟೇನ ಮಾರ್ಗೇಣ ವದತಾಂ ವರೌ ॥ 2 ॥**

ಜನಮೇಜಯನೇ! ಹೋಮಧೇನುವಿನ ಅಮೃತೋಪಮ ಕ್ಷೀರವನ್ನು ಕುಡಿದು ಬಲಿಷ್ಠರೂ ಶತ್ರುದರ್ಪ ಮುರಿಯುವ ಶಕ್ತಿ ಸಂಪನ್ನರಾದರು. ಪರಶುರಾಮ ದೇವರು ಹೇಳಿದ ಮಾರ್ಗವಾಗಿ ಗೋಮಂತಕಕ್ಕೆ ಹೊರಟರು.

ಪರಶುರಾಮರೂ ಸಹ ಜೊತೆಗೆ ಹೊರಟಿದ್ದರು. ಈ ಮೂವರೂ ತ್ರೇತಾಗ್ನಿಗಳಂತಿದ್ದರು. ಕೆಲವು ದಿನಗಳ ನಂತರ ಮೂವರೂ ಗೋಮಂತ ಪರ್ವತ ಸೇರಿದರು.

### ಗೋಮಂತ ವರ್ಣನಮ್

ಗೋಮಂತದಲ್ಲಿ ನಾನಾವಿಧ ಬಳ್ಳಿಗಳು ಗಿಡ ಮರಗಳಿಂದ ಅಲಂಕೃತವಾಗಿತ್ತು. ಅನೇಕ ಧಾತುಗಳಿದ್ದವು. ನವಿಲುಗಳಿಂದ ತುಂಬಿತ್ತು. ದುಂಬಿಗಳ ನಾದ, ಮೇಘಗಳ ನಾದಕ್ಕೆ ಮಯೂರಗಳು ಕೇಕೆ ಹಾಕುತ್ತಿದ್ದವು. ಮೇಘಗಳು ಗಗನಚುಂಬಿ ಗಿಡಗಳನ್ನು ಅಲಿಂಗಿಸುತ್ತಿದ್ದವು. ಪಕ್ಷಿಗಳ ಕಲಕಲ ಶಬ್ದವು ಜಲಪಾತ ಬೀಳುವ ಧ್ವನಿ, ವ್ಯಾಘ್ರಗಳ ಗರ್ಜನೆಯಿಂದ ನಾದಿತವಾದ ಪರ್ವತದಲ್ಲಿ ದೇವತೆಗಳು ವಿಹರಿಸುತ್ತಿದ್ದರು. ಹಲಸು, ಮಾವು, ಏಲಕ್ಕಿ

ಗಿಡಗಳಿಂದ ಸುಂದರವಾಗಿತ್ತು. ಮೆಣಸು ಹಿಪ್ಪಲಿ ಗಿಡಗಳಿಂದ ಸುವಾಸಿತವಾಗಿತ್ತು. ಆನೆಯ ಹಿಂಡುಗಳು, ಜಿಂಕೆಯ ಸಮೂಹಗಳಿಂದ ಶೋಭಾಯಮಾನವಾಗಿತ್ತು. ಸಿದ್ಧ ಚಾರಣ ಗುಹ್ಯಕರ ತಾಣವಾಗಿದ್ದಿತು. ದಿವ್ಯ ವನಸ್ಪತಿಗಳು, ನಾನಾವಿಧ ಪುಷ್ಪಗಳು ಸುತ್ತಲೂ ತುಂಬಿದ್ದವು.

### ಗೋಮಂತದಲ್ಲಿ ವಾಸ

**ತೇ ಸಮಾಸಾದ್ಯ ಗೋಮಂತಂ ರಮ್ಯಂ ಭೂಮಿಧರೋತ್ತಮಂ ।**
**ರುಚಿರಂ ರುರುಚುಃ ಸರ್ವೇ ವಾಸಾಯಾಮರಸನ್ನಿಭಾಃ ॥ 3 ॥**

ಗೋಮಂತ ಪರ್ವತವೇರಿ ಬಂದ ಬಲರಾಮ ಕೃಷ್ಣ ಪರಶುರಾಮರು ಅಲ್ಲಿಯೇ ವಾಸಿಸಲು ಬಯಸಿದರು. ಸಂಕಲ್ಪ ಮಾತ್ರದಿಂದ ಸುಂದರ ನಿವಾಸವನ್ನು ಕಟ್ಟಿದರು. ಇಲ್ಲಿ ರಾಮಕೃಷ್ಣರು ವಾಸಿಸುವುದನ್ನು ನೋಡಿ ತಾನು ತನ್ನ ಸ್ಥಾನವಾದ ಶೂರ್ಪಾರಕಕ್ಕೆ ಹೋಗಿ ಬರುತ್ತೇನೆ ದೇವತೆಗಳೂ ನಿಮ್ಮನ್ನು ಗೆಲ್ಲಲು ಅಸಾಧ್ಯವಿರುವಿರಿ. ದಿವ್ಯಾಯುಧಗಳೂ ಇಲ್ಲಿಯೇ ಪ್ರಾಪ್ತವಾಗುವುವು.

ಕೃಷ್ಣನೇ ನಿನ್ನ ಭೂಭಾರಹರಣ ಇಲ್ಲಿಂದಲೇ ನಡೆಯಲಿ. ನೀನು ಯಾವಾಗ ಅಷ್ಟಭುಜಗಳಿಂದ ಕೂಡಿ ಚಕ್ರಾದ್ಯಾಯುಧ ಹಿಡಿಯುವೆಯೋ ಆಗ ಇಂದ್ರನೆ ಭಯಪಡುವನು. ಇನ್ನು ಇತರರ ಪಾಡೇನು?

**ವೈನತೇಯಾಯ ಚಾಹ್ವಾನಂ ವಾಹನಂ ಧ್ವಜಕರ್ಮಣಿ ।**
**ಕುರು ಶೀಘ್ರಂ ಮಹಾಬಾಹೋ ಗೋವಿಂದ ವದತಾಂ ವರ ॥ 4 ॥**

**ಯುದ್ಧ ಕಾಮಾಃ ನೃಪತಯಃ ತ್ರಿದಿವಾಭಿಮುಖೋದ್ಯತಾಃ ।**
**ಧಾರ್ತರಾಷ್ಟ್ರಸ್ಯ ವಶಗಾಃ ತಿಷ್ಠಂತಿ ರಣವೃತ್ತಯಃ ॥ 5 ॥**

ಮಾನವನೇ! ನೀನು ಕೈಗಳಲ್ಲಿ ಆಯುಧ ಧರಿಸಿ ಸಿದ್ಧನಾದಾಗ ಪೃಥಿವಿಯಲ್ಲಿರುವ ರಾಜರುಗಳ ಸ್ವರ್ಗಯಾತ್ರೆ ಪ್ರಾರಂಭವಾದಂತೆಯೇ.

ಈ ಯುದ್ಧದಲ್ಲಿ ನಿನ್ನ ಧ್ವಜದಂತಿರುವ ನಿನ್ನ ವಾಹನ ಗರುಡನಿಗೆ ಬರಲು ಆಹ್ವಾನ ಕಳಸು. ರಾಜರೆಲ್ಲರೂ ಧೃತರಾಷ್ಟನ ಮಗನ ವಶರಾಗಿ ಯುದ್ಧವನ್ನು ಎದುರು ನೋಡುತ್ತಿರುವರು. ಈ ರಾಜರ ಜನ್ಮ ನಕ್ಷತ್ರಗಳೆಲ್ಲವೂ ಕ್ರೂರಗ್ರಹಗಳಿಂದ ನೋಡಲ್ಪಟ್ಟಿವೆ.

**ತ್ವರಸ್ವ ಕೃಷ್ಣ ಯುದ್ಧಾಯ ದಾನವಾನಾಂ ಭಯಾಯ ಚ ।**
**ಸ್ವರ್ಗಾಯ ಚ ನರೇಂದ್ರಾಣಾಂ ದೇವತಾನಾಂ ಸುಖಾಯ ಚ ॥ 6 ॥**

**ಇತ್ಯುಕ್ತ್ವಾ ಜಾಮದಗ್ನ್ಯಸ್ತು ಕೃಷ್ಣ ಮಕ್ಲಿಷ್ಟಕಾರಿಣಮ್ ।**
**ಜಯಾಶಿಷಾ ವರ್ಧಯಿತ್ವಾ ಜಗಾಮಾಭೀಪ್ಸಿತಾಂ ದಿಶಮ್ ॥ 7 ॥**

ಮಹಾಬಾಹುವೇ! ದೈತ್ಯರ ನಿಧನಕ್ಕಾಗಿ, ರಾಜರನ್ನು ಸ್ವರ್ಗಕ್ಕೆ ಕಳಸಲು, ದೇವತೆಗಳಿಗೆ ಸುಖಕ್ಕಾಗಿಯೂ ಯುದ್ಧಕ್ಕೆ ಅವಸರ ಮಾಡು.

ನೀನು ನನ್ನನ್ನು ಸತ್ಕಾರ ಮಾಡಿದ್ದು ಸಮಸ್ತ ಲೋಕಗಳಿಗೂ ಸತ್ಕಾರ ಮಾಡಿದಂತೆಯೇ.

ನಿನ್ನ ಕಾರ್ಯ ಸಾಧನೆಗೆ ನಾನೂ ಸಾಧನೆ ಮಾಡುವೆ. ರಾಜರೊಂದಿಗೆ ಯುದ್ಧ ಮಾಡುವಾಗ, ಕಾಡಿನೊಳಗೆ ಸಿಕ್ಕಿದಾಗ, ನನ್ನನ್ನು ಸ್ಮರಿಸಿದರೆ ಜಯ ಖಂಡಿತ.

ಪರಶುರಾಮನು ಶ್ರೀಕೃಷ್ಣನಿಗೆ ವಿಜಯ ಸೂಚಕ ಆಶೀರ್ವಾದ ನೀಡಿ, ಅವನನ್ನು ಯುದ್ಧಕ್ಕೆ ಪ್ರೋತ್ಸಾಹಿಸಿ ಅಭೀಷ್ಟ ದಿಕ್ಕಿಗೆ ಪ್ರಯಾಣ ಬೆಳೆಸಿದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಗೋಮಂತ ಪರ್ವತಾರೋಹಣವೆಂಬಲ್ಲಿ
ನಲವತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಏಕಚತ್ವಾರಿಂಶೋಽಧ್ಯಾಯಃ

## ವಾರುಣೀ ಕಾಂತಿಶ್ರೀಯರ ಆಗಮನ

*ವೈಶಂಪಾಯನ ಉವಾಚ –*

**ಜಾಮದಗ್ನ್ಯೇ ಗತೇ ರಾಮೇ ತೌ ಯಾದವ ಕುಲೋದ್ವಹೌ ।**
**ಗೋಮಂತಶಿಖರೇ ರಮ್ಯೇ ಚೇರತುಃ ಕಾಮರೂಪಿಣೌ ॥ 1 ॥**

**ಅಥ ಸಂಕರ್ಷಣಃ ಶ್ರೀಮಾನ್ ವಿನಾ ಕೃಷ್ಣೇನ ವೀರ್ಯವಾನ್ ।**
**ಚಚಾರ ತಸ್ಯ ಶಿಖರೇ ನಗಸ್ಯ ನಗಸನ್ನಿಭಃ ॥ 2 ॥**

**ಪ್ರಪುಲ್ಲಸ್ಯ ಕದಂಬಸ್ಯ ಸುಚ್ಛಾಯೇ ನಿಷಸಾದ ಹ ।**
**ಮದ್ಯಸಂಸ್ಪರ್ಶಜೋ ಗಂಧಃ ಸಂಸ್ಪೃಶನ್ ಘ್ರಾಣಮಾಗತಃ ॥ 3 ॥**

ಪರಶುರಾಮದೇವನು ಹೊರಟು ಹೋದ ಮೇಲೆ ಮನ್ಮಥ ರೂಪಿಗಳಾದ ರಾಮ-ಕೃಷ್ಣರು ಗೋಮಂತ ಗಿರಿಯಲ್ಲಿ ಸಂಚರಿಸುತ್ತಾ ಇದ್ದರು. ವನಮಾಲೆ ಕೊರಳಲ್ಲಿ ನೀಲಾಂಬರ-ಪೀತಾಂಬರಧಾರಿಗಳಾಗಿಯೂ, ಆಗಿ ಕ್ರೀಡೆಗಾಗಿ ಗಿರಿಯಲ್ಲಿ ತಿರುಗಾಡುತ್ತಿದ್ದರು. ಪರ್ವತದಲ್ಲಿ ನಿಂತಾಗ ಚಂದ್ರ ಗ್ರಹಗಳ ಉದಯವನ್ನೂ ಸೂರ್ಯನ ಅಸ್ತವನ್ನು ನೋಡುತ್ತಿದ್ದರು.

ಒಂದು ದಿನ ಬಲರಾಮನೊಬ್ಬನೆ ಏಕಾಕಿಯಾಗಿ ಗಿರಿಯಲ್ಲಿ ತಿರುಗಾಡುತ್ತಿದ್ದನು. ಆಗ ಒಂದು ಕದಂಬವೃಕ್ಷದ ಛಾಯೆಯಲ್ಲಿ ಕುಳತನು. ಗಾಳಯು ಕದಂಬನ ಮೇಲೆ ಬೀಸಿದ ಸುಗಂಧಯುಕ್ತ ಗಾಳ ಬಲರಾಮನ ಮೂಗಿಗೆ ಬಡಿಯಿತು. ಆಗ ಬಲರಾಮನಿಗೆ ಮಧುಪಾನ ಮಾಡಬೇಕೆಂಬ ಮನಸ್ಸಾಯಿತು.

## ವಾರುಣೀ ಆಗಮನ

**ಕದಂಬ ಕೋಟರೇ ಜಾತಾ ನಾಮ್ನಾ ಕಾದಂಬರೀತಿ ಸಾ ।**
**ರೂಪಿಣೀ ವಾರುಣೀ ತತ್ರ ದೇವಾನಾಮಮೃತತಾರಿಣೀ ॥ 4 ॥**
**ಕಾದಂಬರೀಮದಕಲಂ ವಿದಿತ್ವಾ ಕೃಷ್ಣ ಪೂರ್ವಜಮ್ ।**
**ಮದಿರಾ ರೂಪಿಣೀ ಭೂತ್ವಾ ಕಾಂತಿಶ್ಚ ಶಶಿನಃ ಪ್ರಿಯಾ ॥ 5 ॥**
**ಶ್ರೀಶ್ಚ ದೇವೀ ವರಿಷ್ಠಾ ಸ್ತ್ರೀ ಸ್ವಯಮೇವಾಂಬುಜಧ್ವಜಾ ।**
**ಅಹಂ ತೇ ದಯಿತಾ ಕಾಂತಾ ವಾರುಣೀ ಸಮುಪಸ್ಥಿತಾ ।**
**ಸಮೀಪಂ ಪ್ರೇಷಿತಾ ಪಿತ್ರಾ ವರುಣೇನ ತವಾನಘ ॥ 6 ॥**

ಕದಂಬದ ಪೊಟರೆಯಲ್ಲಿ ಹುಟ್ಟಿ ಕಾದಂಬರೀ ಎಂಬ ಹೆಸರುಳ್ಳ, ಕದಂಬರ ನೀಲಾಂಬರನಾದ ಬಲರಾಮನ ಪತ್ನಿಯಾದ್ದರಿಂದಲೂ ಕಾದಂಬರಿಯೆನ್ನುವ ವರುಣನಿಂದ ಪ್ರೇಷಿತಳಾದ್ದರಿಂದ ವಾರುಣೀಯೆಂದು ಸಮುದ್ರ ಮಥನ ಕಾಲದಲ್ಲಿ ವರುಣ ಕಳುಹಿಸಿದ್ದರಿಂದಲೂ ವಾರುಣಿಯೆಂದು ಶೇಷಭಾರ್ಯೆಯಾದ್ದ ವಾರುಣಿಯೆಂಬ ಹೆಸರುಳ್ಳ ಇವಳೇ ಶೇಷನನ್ನು ಆಶ್ರಯಿಸಿದ್ದರಿಂದ ಶ್ರೀಯೆಂದೂ, ಶ್ರೀದೇವಿಯ ಆವೇಶದಿಂದಾಗಿಯೂ ಶ್ರೀ ಎಂದೂ< ಬಲರಾಮನಲ್ಲಿ ಶುಕ್ಲಕೇಶಾವೇಶದಿಂದಾಗಿ, ಅವಳ ಪತ್ನಿಯಾದ **ವಾರುಣಿ**[1]ಯಲ್ಲೂ ಲಕ್ಷ್ಮೀದೇವಿಯ ಆವೇಶವಿರುವುದರಿಂದ ಶ್ರೀಯೆಂದೂ ಹೆಸರುಳ್ಳ ವಾರುಣೀ ಅವನ ಬಳ ಬಂದಳು. ಹೀಗೆ ಮೂವರು ದೇವಾಂಗನೆಯರು ಅವನ ಸೇವೆಗಾಗಿ ಬಂದರು. ವಾರುಣಿಯೇ ರಮಾವೇಶದಿಂದ ಉತ್ತಮವಾದ ಶ್ರೀ ಯೆಂಬ ಮತ್ತೊಂದು ರೂಪತಾಳ ಬಂದಳು. ಕಾಂತಿಯೆಂಬ ಹೆಸರಿನ ಬಲರಾಮ ಪತ್ನಿಯೂ ನಾಗಲೋಕದಿಂದ ಬಂದಳು. ಚಂದ್ರನ ಪತ್ನಿ ಕಾಂತಿಯೂ ಸೇವೆ ಮಾಡಲು ಬಂದಿದ್ದಳು. ಶೇಷನ

---

1. ವಾರುಣೀ :
ತದಾವತೇರೂ ರೌಹಿಣೇಯಸ್ಯ ಚೈವಂ ಭಾರ್ಯಾಪ್ಯಾಯಾದ್ ವಾರುಣೀ ನಾಮ ಪೂರ್ವಾ ।
ಸೈವಾಪರಂ ರೂಪಮಾಸ್ಥಾಯ ಚಾಗಾತ್ ಶ್ರೀರಿತ್ಯಾಖ್ಯಂ ಸೇಂದಿರಾವೇಶಮಗ್ರ್ಯಮ್।
ಕಾಂತಿಶ್ಚಾಗಾತ್ ತಸ್ಯ ಸೋಮಸ್ಯ ಚ್ಯಾನ್ಯಾ ಭಾರ್ಯಾ।
ದ್ವಯೋಃ ಪೂರ್ವತನಾ ಸುರೂಪಾ ॥ *–ತಾ.ನಿ. 16/11*

ಭಾರ್ಯೆ ಕಾಂತಿಯಾದರೆ ಚಂದ್ರನ ಕಾಂತಿ ಭಾರ್ಯೆಯಲ್ಲ ಪ್ರೀತಿಪಾತ್ರಳು. ಕಾಂತಿಯೆಂಬ ಹೆಸರಿನ ಇವರಿಬ್ಬರೂ ಕಾಂತಿಗೆ ಅಭಿಮಾನಿಗಳು. ಕಾಂತಿಯು "ಚಂದ್ರನಿಗಿಂತಲೂ ಅಧಿಕ ಗುಣವುಳ್ಳವನಾದ್ದರಿಂದಲೂ ನಿನ್ನನ್ನು ಸಮೀಪಿಸಿದ್ದೇನೆ" ಎಂದಳು.

**ಬಲಂ ಜಯಸ್ವ ದೈತ್ಯಾನಾಂ ಬಲದೇವ ದಿವೀಶ್ವರ ।**
**ಅಹಂ ತೇ ದಯಿತಾ ಕಾಂತಾ ವಾರುಣೀ ಸಮುಪಸ್ಥಿತಾ ॥ 7 ॥**

**ತ್ವಾಮೇವಾಂತರ್ಹಿತಂ ಶ್ರುತ್ವಾ ಶಾಶ್ವತಂ ವಡವಾಮುಖೇ ।**
**ಕ್ಷೀಣಪುಣ್ಯೇವ ವಸುಧಾಂ ಪರ್ಯೇಮಿ ವಿಮಲಾನನ ॥ 8 ॥**

ಬಲರಾಮನೇ, ನೀನು ದೈತ್ಯರ ಸೈನ್ಯವನ್ನು ಸದೆಬಡೆ. ನಿನ್ನ ಪ್ರಾಣವಲ್ಲಭೆಯಾದ ನಾನು ನಿನ್ನೊಂದಿಗೆ ಯಾವಾಗಲೂ ಇರುವೆ. ಪಾತಾಲದಲ್ಲಿ ಶೇಷ ರೂಪದಿಂದ ಇರುವ ನಿನ್ನನ್ನು ನೋಡಲು ಹೋದೆ. ಆದರೆ ನಿನ್ನ ರೂಪ ನಿನ್ನ ಮುಖದಲ್ಲಿರುವ ವಡವಾನಲದಲ್ಲಿ ಅಂತರ್ಹಿತವಾಗಿತ್ತು. ಅದಕ್ಕಾಗಿ ಎಲ್ಲೆಡೆ ಅಲೆದು ನಿನ್ನಲ್ಲಿಗೆ ಬಂದಿರುವೆನು.

**ಅಹಂ ಕದಂಬಮಾಲೀನಾ ಮೇಘಕಾಲೇ ಮುಖಪ್ರಿಯಾ ।**
**ತೃಷಿತಂ ಮಾರ್ಗಮಾಣಾ ತ್ವಾಂ ಸ್ವೇನ ರೂಪೇಣ ಛಾದಿತಾ ॥ 9 ॥**
**ಸಮೀಪಂ ಪ್ರೇಷಿತಾ ಪಿತ್ರಾ ವರುಣೇನ ತವಾನಘ ।**
**ನಾಹಂ ತ್ವಯಾ ವಿನಾ ಲೋಕಾನುತ್ಸಹೇ ದೇವ ಸೇವಿತುಮ್ ॥ 10 ॥**

ನಾನು ಪುಷ್ಪಗಳಲ್ಲಿನ ಕೇಸರಗಳಲ್ಲಿ ವಾಸ ಮಾಡುತ್ತಿದ್ದೆನು. ಪಾತಾಳದಲ್ಲಿ ಶೇಷ ರೂಪದಲ್ಲಿ ನಿನ್ನ ಸೇವಿಸಿದೆನು. ನನಗೋಸ್ಕರ ಬಾಯಾರಿದ್ದ ನಿನ್ನನ್ನೆ ಅರಸುತ್ತಾ ವರ್ಷಾಕಾಲದಲ್ಲಿ ಕದಂಬ ವೃಕ್ಷದ ಪೊಟರೆಯಲ್ಲಿ ವಾಸವಾಗಿದ್ದೆ. ನನಗೆ ನಿನ್ನ ಮುಖದಲ್ಲಿ ವಾಸಿಸುವುದೇ ಇಷ್ಟ. ನನ್ನ ತಂದೆ ವರುಣನು ನಿನ್ನ ಬಳಿ ಕಳುಸಿರುವನು. ನಾನಾದರೂ ನಿನ್ನ ಹೊರತು ಯಾವ ಲೋಕಗಳನ್ನು ಇಚ್ಛಿಸೆನು.

**ಮದಿರಾನಂತರಂ ಕಾಂತಿಃ ಸಂಕರ್ಷಣಮುಪಸ್ಥಿತಾ ।**
**ಮದೇನಾಗಲಿತ ಶ್ರೋಣೀ ಕಿಂಚಿದಾಘೂರ್ಣಿತೇಕ್ಷಣಾ ॥ 11 ॥**

**ಪ್ರೋವಾಚ ಪ್ರಣಯಾತ್ ಕಾಂತಿಃ ಬದ್ಧಾಂಜಲಿಪುಟಾ ಸತೀ ।**
**ಅಹಂ ಚಂದ್ರಾದಪಿ ಗುರುಂ ಸಹಸ್ರ ಶಿರಸಂ ಪ್ರಭುಮ್ ॥ 12 ॥**

**ಸ್ವೈರ್ಗುಣೈರನುರಕ್ತಾ ತ್ವಾಂ ಯಥೇವ ಮದಿರಾ ತಥಾ ।**
**ಶ್ರೀಶ್ಚ ಪದ್ಮಾಲಯಾ ದೇವೀ ನಿಧೇಯಾ ವೈಷ್ಣವೋರಸಿ ।**
**ರೌಹಿಣೇಯೋರಸಿ ಶುಭಾ ಮಾಲೇವಾಮಲತಾಂಗತಾ ॥ 13 ॥**

ವಾರುಣಿಯು ಮೂರ್ತಿಮತ್ತಾಗಿ ಬಂದ ನಂತರ ಕಾಂತಿಯೆಂಬುವಳು ಮತ್ತೊಬ್ಬ ಶೇಷನ ಭಾರ್ಯೆ. ಅವಳೂ ಬಂದಳು. ಅವಳಾದ ನಂತರ ಚಂದ್ರನ ಭಾರ್ಯೆಯಾದ ಕಾಂತಿಯು ಕೈಜೋಡಿಸಿ - ಬಲದೇವನೇ, ಸಾವಿರ ಶಿರಸ್ಸುಳ್ಳವನೂ, ಪ್ರಭುವೂ ಆದ ನೀನು ನನ್ನ ಪತಿ ಚಂದ್ರನಿಗಿಂತಲೂ ಗುಣಾಧಿಕನಾದ್ದರಿಂದಲೂ, ನಿನ್ನ ಗುಣಕ್ಕೆ ಸೋತು ನಿನ್ನ ಸೇವೆಗಾಗಿಯೇ ಸ್ನೇಹಿತೆಯಂತೆ ಬಂದಿರುವವಳಾಗಿದ್ದೇನೆ.

ವಿಷ್ಣುವಿನ ವಕ್ಷ ಸ್ಥಲದಲ್ಲಿ ಶ್ರೀ ದೇವಿಯು ಹೇಗೆ ಶೋಭಿಸುವಳೋ ಹಾಗೆಯೇ ಶ್ರೀದೇವಿಯಿಂದ ಆವಿಷ್ಟಳಾದ್ದರಿಂದ ಶ್ರೀಯೆನಿಸಿರುವ ವಾರುಣಿಯು ಬಲರಾಮನ ವಕ್ಷಸ್ಥಲದಲ್ಲಿರುವ ಸುಂದರ ಮಾಲೆಯಂತೆ ಬಲರಾಮನೊಡನೇ ಸೇರಿದಳು.

ಬಲರಾಮನೇ, ನನ್ನೊಂದಿಗೆ ವಾರುಣಿ ಕಾಂತಿಯೊಂದಿಗೆ ಚಂದ್ರನಂತೆ ಪ್ರಕಾಶಿಸುತ್ತಿರುವೆ. ನೀನು ಅನಂತನಾಗಿದ್ದಾಗ ಧರಿಸಿದ್ದ ಕಿರೀಟ, ವಜ್ರಖಚಿತ ಏಕಕುಂಡಲ, ದಿವ್ಯಹಾರವನ್ನೂ ತಂದಿದ್ದೇನೆ. ಇವುಗಳನ್ನು ಧರಿಸು ಎಂದು ನೀಡಿದಳು.

## ಗರುಡನ ಆಗಮನ

**ತಾಭ್ಯಾ ಮುಭಾಭ್ಯಾಂ ಸಲ್ಲಾಪೇ ವರ್ತಮಾನೇ ಗೃಹೇ ಯಥಾ ।**
**ವೈವತೆಯೋ ತತೋಽಧ್ವಾನಮತಿಚಕ್ರಾಮ ವೇಗತಃ ॥ 14 ॥**

ಶ್ರೀಕೃಷ್ಣ-ಬಲರಾಮನು ಮನೆಯಲ್ಲಿ ಸಲ್ಲಾಪದಲ್ಲಿರುವಾಗಲೇ ವಿನತಾತನೂಜನು ಮಹಾ ವೇಗದಿಂದ ಸುದೀರ್ಘವಾದ ಮಾರ್ಗವನ್ನೂ ವೇಗವಾಗಿ ಅತಿಕ್ರಮಿಸಿ ಗೋಮಂತ ಪರ್ವತಕ್ಕೆ ಆಗಮಿಸಿದನು. ದುಷ್ಟರನ್ನು ಸದೆ ಬಡೆದು ಬಂದಿದ್ದ, ದೈತ್ಯರ ಪ್ರಹರಣಗಳ ಗುರುತು ಇನ್ನೂ ಅವನ

ಶರೀರದಲ್ಲಿ ಕಾಣುತ್ತಿದ್ದವು. ದೇವತೆಗಳ ವಿಜಯಸೂಚಕ ಗರುಡನು ಕೊರಳಲ್ಲಿ ದಿವ್ಯ ಮಾಲೆ ಹಾಗೂ ದಿವ್ಯ ಗಂಧ ಲೇಪಿಸಿಕೊಂಡಿದ್ದನು.

### ಬಲಿಯಿಂದ ಕಿರೀಟಾಪಹಾರ

**ಸುಪ್ತಸ್ಯ ಶಯನೇ ದಿವ್ಯೇ ಕ್ಷೀರೋದೇ ವರುಣಾಲಯೇ ।**
**ವಿಷ್ಣೋಃ ಕಿರೀಟಂ ದೈತ್ಯೇನ ಹೃತಂ ವೈರೋಚನೇನ ವೈ ॥ 15 ॥**

**ತದರ್ಥಸ್ತೇನ ಸಂಗ್ರಾಮಃ ಕೃತೋ ಗುರ್ವರ್ಥಮೋಜಸಾ ।**
**ಕಿರೀಟಾರ್ಥೇ ಸಮುದ್ರಸ್ಯ ಮಧ್ಯೇ ದೈತ್ಯಗಣೈಃ ಸಹ ॥ 16 ॥**

**ಮೋಕ್ಷಯಿತ್ವಾ ಕಿರೀಟಂ ತು ವೈಷ್ಣವಂ ಪತತಾಂ ವರಃ ।**
**ವ್ಯತ್ಯಕ್ರಮತ ವೇಗೇನ ಗಗನಂ ದೇವತಾಲಯಮ್ ॥ 17 ॥**

ಮುಕ್ತಿಯ ಅಮುಕ್ತಸ್ಥಾನದಲ್ಲಿರುವ ದೇವತೆ ಮೊದಲಾದವರಿಂದ ಪೂಜೆ ಸ್ವೀಕರಿಸಲು ಶ್ರೀಹರಿಯು ಬಂದಿದ್ದನು. ಅವನ ದರ್ಶನಕ್ಕಾಗಿ ಬಲಿಚಕ್ರವರ್ತಿಯೂ ಬಂದಿದ್ದ. ಬಲಿಗೆ ಅಸುರವೇಶಾವಿಷ್ಟನಾಗಿದ್ದನ್ನು ತೋರಿಸಲು ಭಗವಂತನು ಮಲಗಿದಂತೆ ನಟಿಸಿದ್ದ. ನೀವೂ ನಿದ್ರೆ ಮಾಡಿದಂತೆ ನಟಿಸಿರಿ ಎಂದು ದೇವತೆಗಳಿಗೆ ಸೂಚಿಸಿದ. ಬಲಿಯು ವಿಷ್ಣುವಿನ ಕಿರೀಟವನ್ನಪಹರಿಸಿ ಕೊಂಡು ಓಡಿಹೋದ. ದೇವತೆಗಳೆಲ್ಲ ನಕ್ಕರು. ಗರುಡನು ಅವನನ್ನು ಅಟ್ಟಿಸಿಕೊಂಡು ಪಾತಾಲದವರೆಗೂ ಹೋಗಿ ಅಲ್ಲಿ ಬಲಿಯನ್ನು ಸೋಲಿಸಿ ಯುದ್ಧಕ್ಕೆ ಬಂದ ದೈತ್ಯರನ್ನೂ ಸೋಲಿಸಿ ಕಿರೀಟ ತಂದಿದ್ದನು. ಪುರಪಾಲಕನಾಗಿದ್ದ ಗರುಡನು ಅದನ್ನು ತಂದು ಗೋಮಂತಕದಲ್ಲಿದ್ದ ಶ್ರೀಕೃಷ್ಣನ ಶಿರಸ್ಸಿನಲ್ಲಿಟ್ಟ ಅದು ಸರಿಯಾಗಿ ಕೂತಿತ್ತು. ಮೂಲ–ಅವತಾರಗಳಿಗೆ ಭೇದಕಿಂಚಿತ್ತೂ ಇಲ್ಲ ಎಂಬ ತತ್ವ ಗರುಡ ತೋರಿಸಿದ.

**ಸ ದದರ್ಶ ಗುರುಂ ಶೈಲೇ ವಿಷ್ಣುಂ ಕಾರ್ಯಾಂತರಾಗತಮ್ ।**
**ತೇನ ಕ್ರೀಡಾವಲಂಬೇ ನ ಕಿರೀಟೇನ ವಿರಾಜತಾ ॥ 18 ॥**

**ಸ ದೃಷ್ಟ್ವಾ ಮಾನುಷಂ ವಿಷ್ಣುಂ ಶೈಲರಾಜ ಶಿರೋ ಗತಮ್ ।**
**ಪ್ರಕಾಶಚೇಷ್ಟಾ ನಿರ್ಮುಕ್ತಂ ವಿಮೌಲಿಮಿವ ಮಾನುಷಮ್ ॥ 19 ॥**

ತನ್ನ ಸ್ವಾಮಿಯಾದ ವಿಷ್ಣುವು ಮನುಷ್ಯನಂತೆ ಅವತರಿಸಿ ಕಾರ್ಯಾಂತರ

ನಿಮಿತ್ತ ಗೋಮಂತ ಪರ್ವತ ಮೇಲೆ ಸಂಚರಿಸುತ್ತಿರುವುದನ್ನು, ದೈವಿಕ ವ್ಯಾಪಾರ ಬಿಟ್ಟು ಮಾನವನಂತೆ ಚೇಷ್ಟಿಸುತ್ತಿರುವ ಕಿರೀಟ ರಹಿತನಾದ ಶ್ರೀಕೃಷ್ಣನನ್ನು ನೋಡಿದನು.[2]

**ಅಭೀಜ್ಞಸ್ತಸ್ಯ ಭಾವಾನಾಂ ಗರುತ್ಮಾನ್ ಪತತಾಂ ವರಃ ।**
**ಚಿಕ್ಷೇಪ ಖಂ ಗತೋ ಮೌಲಿಂ ವಿಷ್ಣೋಃ ಶಿರಸಿ ಹೃಷ್ಟವತ್ ॥ 20 ॥**

**ಉಪೇಂದ್ರ ಮೂರ್ಧ್ನಿ ಸಾ ಮೌಲಿರಪಿನದ್ಧಾ ಇವಾಪತತ್ ।**
**ಶಿರಸಃ ಸ್ಥಾನ ನಿರ್ಯುಕ್ತಾ ಕೃಷ್ಣಂ ಚೈವಾನ್ವಶೋಭಯತ್ ॥ 21 ॥**

ಶ್ರೀಕೃಷ್ಣನ ಮಾನಸಿಕ ಭಾವವನ್ನು ಗ್ರಹಿಸಿದ ಗರುಡನು ಆ ಕಿರೀಟವನ್ನು ಆಕಾಶದಲ್ಲಿಯೇ ನಿಂತು ಅತ್ಯಂತ ಸಂತೋಷದಿಂದ ಶ್ರೀಕೃಷ್ಣನ ತಲೆಯ ಮೇಲೆ ಕಿರೀಟವನ್ನಿರಿಸಿದನು. ಆ ಕಿರೀಟವು ಉಪೇಂದ್ರನ ಶಿರಸ್ಸಿನಲ್ಲಿ ಮೊದಲೆ ಧರಿಸಿದ್ದನೋ ಎಂಬಂತೆ ಸ್ವಾಭಾವಿಕವಾಗಿ ಕಾಣುತ್ತಿತ್ತು. ಮಧ್ಯಾಹದಲ್ಲಿ ಮೇರುಶಿರಸ್ಸಿನಲ್ಲಿ ಪ್ರಕಾಶಮಾನನಾಗಿರುವಂತೆ ತೋರುತ್ತಿತ್ತು.

**ವೈನತೇಯ ಪ್ರಯೋಗೇಣ ವಿದಿತ್ವಾ ಮೌಲಿಮಾಗತಾಮ್ ।**
**ಕೃಷ್ಣಃ ಪ್ರಹೃಷ್ಟವದನಃ ರಾಮಂ ವಚನ ಮಬ್ರವೀತ್ ॥ 22 ॥**

**ತ್ವರತೇ ಖಲು ಕಾರ್ಯಾರ್ಥೋ ದೇವತಾನಾಂ ನ ಸಂಶಯಃ ।**
**ಯಥೇಯಮಾವಯೋಃ ಶೈಲೇ ಸಂಗ್ರಾಮರಚನಾ ಕೃತಾ ॥ 23 ॥**

ಗರುಡನು ತನ್ನ ಶಿರಸ್ಸಿನಲ್ಲಿ ಕಿರೀಟವನ್ನಲಂಕರಿಸಿದ್ದನ್ನು ನೋಡಿ ಕೃಷ್ಣನು ಬಲರಾಮನಿಗೆ ಹೀಗೆಂದನು. ಈ ಪರ್ವತದಲ್ಲಿರುವ ನಮಗೆ ಯುದ್ಧೋಪಯುಕ್ತ ವೇಷಭೂಷಣಗಳು ಕಿರೀಟಾದಿಗಳು ಚಕ್ರಾದಿ ಆಯುಧಗಳು ದೊರೆಯುತ್ತಿರುವುದನ್ನು ನೋಡಿದರೆ ದೇವತೆಗಳು ತಮ್ಮ ಭೂಭಾರಹರಣ ಕಾರ್ಯವನ್ನು ಬೇಗ ಪೂರೈಸು ಎನ್ನುವಂತಿದೆ.

ನಾನು ಕ್ಷೀರಸಾಗರದಲ್ಲಿ ಮಲಗಿದ್ದಾಗ ಬಲಿಯು ನನ್ನ ಕಿರೀಟವನ್ನು ಮೊಸಳೆ ರೂಪದಲ್ಲಿ ಬಂದು ಕದ್ದೊಯ್ದು. ಆ ಸಮಯಕ್ಕೆ ಪುರ ಪಾಲನೆಯ ಕಾರ್ಯ ನಿರ್ವಹಿಸುತ್ತಿದ್ದ ಗರುಡನು ಅವನಿಂದ ಕಿತ್ತು ತಂದು ನನ್ನ ತಲೆಯ ಮೇಲಿರಿಸಿರುವನು.

---

2. ಕಿರೀಟಂ ತತ್ ಕೃಷ್ಣಮೂರ್ಧ್ನಿ ಪ್ರವಿಷ್ಟಂ ತತ್ತುಲ್ಯಮಾಸೀತ್ ತಸ್ಯ ರೂಪೇಷ್ವಭೇದಾತ್।

## ಜರಾಸಂಧನು ಗೋಮಂತಕ್ಕೆ ಬಂದದ್ದು

**ಸುವ್ಯಕ್ತಂ ಸನ್ನಿಕೃಷ್ಟಃ ಸ ಜರಾಸಂಧೋ ನರಾಧಿಪಃ ।**
**ಲಕ್ಷ್ಯಂತೇ ಹಿ ಧ್ವಜಾಗ್ರಾಣಿ ರಥಾನಾಂ ವಾತರಂಹಸಾಮ್ ॥ 24 ॥**

**ಛತ್ರಾಣ್ಯಾರ್ಯ ವಿರಾಜಂತೇ ದಂಶಿತಾನಿ ಮಿತಾನಿ ಚ ।**
**ಕಾಲೇ ಖಲು ನೃಪಃ ಪ್ರಾಪ್ತೋ ಜರಾಸಂಧೋ ಮಹೀಪತಿಃ ।**
**ಆವಯೋಃ ಯುದ್ಧ ನಿಕರ್ಷಃ ಪ್ರಥಮಃ ಸಮರಾತಿಥಿಃ ॥ 25 ॥**

ಈಗ ಜರಾಸಂಧನು ಇಲ್ಲಿಗೆ ನಮ್ಮ ಹತ್ತಿರಕ್ಕೆ ಖಂಡಿತ ಬಂದಿರುವನು. ಜರಾಸಂಧನ ರಥಗಳು, ರಥಧ್ವಜಗಳು, ಚಂದ್ರ ಸದೃಶವಾದ ಶ್ವೇತಛತ್ರಗಳು, ಇವುಗಳು ಹಂಸಪಕ್ಷಿಗಳ ಸಾಲಿನಂತೆ ನಮ್ಮ ಕಡೆಗೆ ಬರುತ್ತಿದೆ. ಆದರೆ ಆ ಶಸ್ತ್ರಾಸ್ತ್ರಗಳೆಲ್ಲವೂ ಕ್ಷಣದಲ್ಲಿ ನಮ್ಮ ಕೈಯಲ್ಲಿ ವಿನಾಶ ಹೊಂದುವುದಂತೂ ನಿಶ್ಚಿತವೆ. ಜರಾಸಂಧನು ನಾವು ಯುದ್ಧಕ್ಕೆ ತಯಾರಾದಾಗಲೇ ಬಂದಿರುವನು. ನಮ್ಮ ಯುದ್ಧ ಕೌಶಲ್ಯ ಪ್ರದರ್ಶನಕ್ಕೆ ಓರೆಗಲ್ಲಾಗುತ್ತಾನೆ. ಇವನು ಯುದ್ಧರಂಗದಲ್ಲಿ ಮೊದಲಿನ ಸೋಲುವ ಅತಿಥಿಯೆನಿಸುವನು. ಅಣ್ಣ ಬಲರಾಮ! ಈಗ ನಾವಿಬ್ಬರೂ ಜೊತೆಯಲ್ಲಿಯೆ ಇರೋಣ. ಜರಾಸಂಧ ನಮ್ಮ ಬಳಗೆ ಇನ್ನೂ ಬಂದಿರುವುದಿಲ್ಲ. ಅವರು ಬಾರದೆ ಯುದ್ಧಾರಂಭ ಹೇಗೆ ಸಾಧ್ಯ. ಅದುವರೆಗೂ ಅವರ ಬಲವೆಷ್ಟಿದೆ ನೋಡುತ್ತಾ ಇರೋಣ.

**ಏವಮುಕ್ತ್ವಾ ತತಃ ಕೃಷ್ಣಃ ಸ್ವಸ್ಥಃ ಸಂಗ್ರಾಮಲಾಲಸಃ ।**
**ಜರಾಸಂಧವಧಂ ಪ್ರೇಪ್ಸುಃ ಚಕಾರ ಬಲದರ್ಶನಮ್ ॥ 26 ॥**

**ವೀಕ್ಷಮಾಣಶ್ಚ ತಾನ್ ಸರ್ವಾನ್ ನೃಪಾನ್ ಯದುವರೋಽವ್ಯಯಃ ।**
**ಆತ್ಮಾನಮಾತ್ಮನೋವಾಚ ಯತ್ ಪೂರ್ವಂ ದಿವಿ ಮಂತ್ರಿತಮ್ ॥ 27 ॥**

ಹೀಗೆ ಹೇಳಿ ಜರಾಸಂಧನ ನಿಗ್ರಹವನ್ನು ಆಶಿಸುತ್ತಾ ಅವನ ಸೈನ್ಯಬಲವನ್ನು ನೋಡುತ್ತಿದ್ದನು. ಆ ಸೈನ್ಯದ ರಾಜರುಗಳನ್ನು ನೋಡಿ ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು.

ಈ ಹಿಂದೆ ದೇವತೆಗಳೊಂದಿಗೆ ಮಂತ್ರಾಲೋಚನೆ ಮಾಡುವಾಗ ರಾಜಧರ್ಮದಲ್ಲಿದ್ದು ರಾಜೋಚಿತವಾಗಿ ಶಾಸ್ತ್ರವಿಧಿಯಿಂದ ಧರ್ಮಮಾರ್ಗದಲ್ಲಿ ಯುದ್ಧ ಮಾಡಿದವರೆಲ್ಲರೂ ಸ್ವರ್ಗಕ್ಕೇರುವರು. ಮೃತ್ಯು ದೇವತೆಯು

ರಣಮುಖದಲ್ಲಿ ಆಹುತಿಯನ್ನಾಗಿ ಮಾಡಲು ಪ್ರೋಕ್ಷಿಸಿದಂತಿದೆ. ಸ್ವಲ್ಪಕಾಲದಲ್ಲಿಯೇ ಭೂಮಿ ಭೂಭಾರವನ್ನು ಕಳೆದುಕೊಳ್ಳುವುದು ಆಕಾಶವಾದರೂ ಮೃತರಾಜರು ಸ್ವರ್ಗಕ್ಕೆ ಹೋಗುವುದರಿಂದ ರಾಜರಿಂದ ತುಂಬುವುದು ಎಂದು ಕೊಂಡನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಜರಾಸಂಧನ ಯುದ್ಧಾಭಿಗಮನವೆಂಬಲ್ಲಿ
ನಲವತ್ತೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 42 ವಿಷ್ಣುಪರ್ವ

# ಅಥ ದ್ವಿಚತ್ವಾರಿಂಶೋಽಧ್ಯಾಯಃ

## ಜರಾಸಂಧನಿಂದ ಪರ್ವತ ಆಕ್ರಮಣ

*ವೈಶಂಪಾಯನ ಉವಾಚ –*

**ಜರಾಸಂಧಸ್ತತಃ ಪ್ರಾಪ್ತೋ ನೃಪಃ ಸರ್ವ ಮಹೀಕ್ಷಿತಾಮ್ ।**
**ನರಾಧಿಪೈಃ ಬಲಯುತೈಃ ಅನುಯಾತೋ ಮಹಾದ್ಯುತಿಃ ॥ 1 ॥**

**ರಥೈಃ ಸಾಂಗ್ರಾಮಿಕೈಃ ಯುಕ್ತೈಃ ಅಸಂಗಗತಿಭಿಃ ಕ್ವಚಿತ್ ।**
**ಹೇಮಕಕ್ಷ್ಯೈಃ ಮಹಾಘಂಟೈಃ ವಾರಣೈಃ ವಾರಿದೋಪಮೈಃ ॥ 2 ॥**

**ವಾಜಿಭಿಃ ವಾಯುಸಂಕಾಶೈಃ ಪ್ಲವದ್ಭಿರಿವ ಪತ್ರಿಭಿಃ ।**
**ಖಡ್ಗಚರ್ಮ ಬಲೋದಗ್ರೈಃ ಪತ್ತಿಭಿಃ ಬಲಿನಾಂ ವರೈಃ ॥ 3 ॥**

**ಏವಂ ಚತುರ್ವಿಧೈಃ ಸೈನ್ಯೈಃ ಪ್ರಚಲದ್ಭಿರಿವಾಂಬುದೈಃ ॥ 4 ॥**

ಜನಮೇಜಯನೇ ಕೇಳು – ಜರಾಸಂಧನು ಗೋಮಂತ ಪರ್ವತದಲ್ಲಿ ಶ್ರೀಕೃಷ್ಣನಿರುವನೆಂದು ತಿಳಿದು ಅದರ ಬುಡಕ್ಕೆ ಬಂದನು. ಅವನನ್ನನುಸರಿಸಿ ಸಾಮಂತ ರಾಜರು ಹಾಗೂ ಕೃಷ್ಣ ದ್ವೇಷಿ ರಾಜರೆಲ್ಲ ಸೈನ್ಯದೊಂದಿಗೆ ಬಂದಿಳಿದರು.

ರಥಗಳಲ್ಲಿ ಯುದ್ಧದ ಸಾಮಗ್ರಿಗಳು ತುಂಬಿದ್ದವು. ವೇಗಶಾಲಿ ಕುದುರೆಗಳು ಎಳೆಯುತ್ತಿದ್ದವು. ಅವ್ಯಾಹತ ನಡೆಗೆಯಿತ್ತು. ರಥ ಸೈನ್ಯದ ಹಿಂದೆ ಗಜ ಸೈನ್ಯ ಹೊರಟಿತ್ತು. ಕಪ್ಪಾದ ಮೇಘಗಳಂತೆ ಆನೆಗಳಿದ್ದವು. ಸುವರ್ಣಮಯ ಹಗ್ಗ – ಘಂಟೆಗಳಿಂದ ಯುಕ್ತವಾಗಿದ್ದವು. ಮಾಹುತರು ಕುಳಿತ್ತಿದ್ದರು. ರಣಕುಶಲ

ಯೋಧರು ಕುಳಿತ್ತಿದ್ದರು. ಗಜ ಸೈನ್ಯದ ಹಿಂದೆ ಅಶ್ವಗಳ ಮೇಲೆ ಸವಾರರು ಕುಳಿತ್ತಿದ್ದರು. ಅಶ್ವ ಸೈನ್ಯದ ಮೇಲೆ ಕಾಲಾಳುಗಳು ಹೋಗುತ್ತಿದ್ದರು. ಕತ್ತಿ ಗುರಾಣಿ ಹಿಡಿದ ಅವರು ಯಮಭಟರಂತಿದ್ದರು. ಹೀಗೆ ಚತುರಂಗ ಬಲದೊಂದಿಗೆ ಜರಾಸಂಧನು ಮುತ್ತಿಗೆ ಹಾಕಿದನು. ಸೈನ್ಯದಿಂದ ಕೂಡಿದ್ದ ಜರಾಸಂಧನು ಸಾಗರದಂತೆ ತೋರುತ್ತಿದ್ದನು.

**ಸಬಲಾಸ್ತೇ ಮಹೀಪಾಲಾಃ ಜರಾಸಂಧ ಪುರೋಗಮಾಃ ।**
**ಪರಿವಾರ್ಯ ಗಿರಿಂ ಸರ್ವೇ ನಿವೇಶಾಯೋಪಚಕ್ರಮುಃ ॥ 5 ॥**

**ವೀತರಾತ್ರೇ ತತಃ ಕಾಲೇ ನೃಪಾಸ್ತೇ ಕೃತಃ ಕೌತುಕಾಃ ।**
**ಆರೋಹಣಾರ್ಥಂ ಶೈಲಸ್ಯ ಸಮೇತಾ ಯುದ್ಧಲಾಲಸಾಃ ॥ 6 ॥**

ಜರಾಸಂಧ ಪ್ರಮುಖ ಸೈನ್ಯದಿಂದ ಯುಕ್ತ ಸಮಸ್ತ ಭೂಪಾಲರೂ ಗೋಮಂತ ಪರ್ವತವನ್ನು ಸುತ್ತುವರೆದು ನಿವಾಸಕ್ಕಾಗಿ ವ್ಯವಸ್ಥೆ ಮಾಡತೊಡಗಿದರು.

ರಾತ್ರಿ ಕಳೆದು ಬೆಳಗಾಗುತ್ತಲೇ ಯುದ್ಧ ಲಾಲಸರಾದ ಜರಾಸಂಧಾದಿಗಳು ಮಂಗಲಾಚರಣೆಗಳಿಂದ ಸಂಪನ್ನರಾಗಿ ಪರ್ವತವನ್ನೇರಲು ಒಂದೆಡೆ ಸಮಾವೇಶಗೊಂಡರು. ಎಲ್ಲರೂ ಒಂದೆಡೆ ಸೇರಿ ಮಂತ್ರಾಲೋಚನೆ ನಡೆಸಿದರು. ಶಬ್ಧಗಳೆಲ್ಲವೂ ನಿಲ್ಲಿಸುವಂತೆ ಮಾಡಿದ ಜರಾಸಂಧನು ಬೃಹಸ್ಪತಿಯಂತೆ ಮಾತನಾಡಲಾರಂಭಿಸಿದನು. ರಾಜರೇ! ರಾಜರ ಸೈನ್ಯವೆಲ್ಲ ಪರ್ವತವನ್ನು ಶೀಘ್ರವಾಗಿ ಆಕ್ರಮಿಸಲಿ. ಪರ್ವತವನ್ನು ನಾಲ್ಕೂ ಕಡೆಯಲ್ಲಿ ಸುತ್ತುವರೆಯಲಿ. ಆಶ್ಮಯಂತ್ರ (ಕಲ್ಲು ಬಿಸಾಡುವ ಯಂತ್ರ), ಕ್ಷೇಪಣೀಗಳು (ಫಿರಂಗಿ) ಮುದ್ಗರಗಳು ಸ್ಥಾಪಿತವಾಗಲಿ. ಪ್ರಾಸ, ತೋಮರ ಬೆಟ್ಟದ ಮೇಲೆ ಹೋಗಲಿ. ಗುದ್ದಲಿ ಪಿಕಾಶಿಗಳಿಂದ ಪರ್ವತ ಹತ್ತುವ ಮಾರ್ಗ ಸುಗಮವಾಗಲಿ.

**ಅದ್ಯಪ್ರಭೃತಿ ಸೈನ್ಯೈರ್ಮೇ ಗಿರಿರೋಧಃ ಪ್ರವರ್ತ್ಯತಾಮ್ ।**
**ಯಾವದೇತೌ ಪಾತಯಾಮೋ ವಸುದೇವ ಸುತಾವುಭೌ ॥ 7 ॥**

**ಮಯಾನುಶಿಷ್ಟಾಃ ತಿಷ್ಠಂತು ಗಿರಿಭೂಮಿಷು ಭೂಮಿಪಾಃ ।**
**ತೇಷು ತೇಷ್ವಕಾಶೇಷು ಶೀಘ್ರ ಮಾರುಹ್ಯತಾಂ ಗಿರಿಃ ॥ 8 ॥**

ಈಗಿನಿಂದಲೇ ನೀವೆಲ್ಲ ಪರ್ವತವನ್ನು ಸಂಪೂರ್ಣ ಆವರಿಸಬೇಕು. ಬಲರಾಮ ಕೃಷ್ಣರನ್ನು ಕೊಲ್ಲುವವರೆಗೂ ಪರ್ವತವನ್ನು ಮುಕ್ತಗೊಳಿಸಬಾರದು.

ಪಕ್ಷಿಗಳನ್ನು ಹಾರಿಹೋಗಲು ಬಿಡದಂತೆ ಬಾಣಗಳಿಂದ ಪರ್ವತ ಮುಚ್ಚಿರಿ. ನನ್ನಿಂದ ನಿಗದಿತರಾದ ರಾಜರು ತಪ್ಪಲು ಪ್ರದೇಶದಲ್ಲಿಯೆ ಇದ್ದು ಅವಶ್ಯವಾದಾಗ ಬೆಟ್ಟಹತ್ತಿ ಹೋಗಲಿ.

ಮದ್ರರಾಜ, ಶ್ರುತಾಯು, ಚೇಕಿತಾನ ಬಾಹ್ಲೀಕಾದಿಗಳು ಪಶ್ಚಿಮ ದಿಕ್ಕಿನಿಂದಲೂ, ವೇಣುಧಾರಿ, ಸೋಮಿಕ, ರುಗ್ಮಿ, ದ್ರುಪದ, ದಂತವಕ್ತ್ರ, ವಿರಾಟ, ಭೂರಿಶ್ರವಸ್ ಬಾಣಾಸುರ ಇವರೆಲ್ಲ ಗೋಮಂತದ ಉತ್ತರದಿಂದ ಆಕ್ರಮಿಸಲಿ.

ಶಕುನಿಪುತ್ರ ಉಲೂರ, ಏಕಲವ್ಯ ಜಯದ್ರಥ, ಶಾಲ್ವ, ಸುಕೇತುಗಳು ಪೂರ್ವಭಾಗವನ್ನು ಆಕ್ರಮಿಸಲಿ.

ನಾನು, ದರದ, ಶಿಶುಪಾಲ ದಕ್ಷಿಣದಿಂದ ಆಕ್ರಮಿಸಿ ಧ್ವಂಸ ಮಾಡುತ್ತೇವೆ.

### ಗದಾಧಾರಿಗಳು ಪರ್ವತ ಪುಡಿ ಮಾಡಲಿ

**ಗದಿನೋ ವೈ ಗದಾಭಿಶ್ಚ ಪರಿಘೈಃ ಪರಿಘಾಯುಧಾಃ ।**
**ಅಪರೇ ವಿವಿಧೈಃ ಶಸ್ತ್ರೈಃ ದಾರಯಂತು ನಗೋತ್ತಮಮ್ ॥ 9 ॥**
**ಕಾರ್ಯೋ ಭೂಮಿಸಮಃ ಸರ್ವೋ ಭವದ್ಭಿಃ ವಸುಧಾಧಿಪೈಃ ॥ 10 ॥**

ಗದಾಧಾರಿಗಳು, ಪರಿಘಾಯುಧಧಾರಿಗಳೂ ಈ ಪರ್ವತವನ್ನು ಹೊಡೆದು ಪುಡಿಮಾಡಿ ಭೂಮಿ ಸಮ ಮಾಡಲಿ. ಇದು ಕೃಷ್ಣನಿಗೆ ಆಶ್ರಯ ನೀಡಿದ ದುಷ್ಫಲ.

ಜರಾಸಂಧನ ಆದೇಶದಂತೆ ಪರ್ವತವನ್ನು ಸಮುದ್ರವು ಭೂಮಿಯೆಂಬಂತೆ ಆಕ್ರಮಿಸಿದರು.

### ಪರ್ವತಕ್ಕೆ ಬೆಂಕಿ ಇಡೋಣ

### ಶಿಶುಪಾಲನ ಸಲಹೆ

ಈ ಸಮಯದಲ್ಲಿ ಶಿಶುಪಾಲನು ಜರಾಸಂಧನಿಗೆ – ರಾಜನೇ! ಈ ಪರ್ವತ ದುರ್ಗಮವಾಗಿದೆ. ಇದನ್ನು ನೆಲಸಮ ಮಾಡಿ ನಮಗೇನು ಲಾಭ. ಈ ಪರ್ವತದಲ್ಲಿ ಗಗನಚುಂಬಿ ಮರಗಳು ಕಂಟಕಿ ವೃಕ್ಷಗಳಿಂದ ತುಂಬಿದ್ದು ಹೋಗಲು ಕಠಿಣವಾಗಿದೆ.

ಆದ್ದರಿಂದ ಈ ಪರ್ವತವನ್ನು ಸುತ್ತುವರೆದು ಇಲ್ಲಿರುವ ಒಣಗಿದ ಗಿಡಮರಗಳಿಂದ ಈ ಪರ್ವತವನ್ನೂ ಸಂಪೂರ್ಣವಾಗಿ ಬೆಂಕಿ ಹಾಕಿ ಸುಡುವುದು ಯುಕ್ತವೆಂದು ನನಗೆ ತೋರುತ್ತದೆ. ನಾವು

ಪರ್ವತವನ್ನಾಕ್ರಮಿಸಿರುವುದರಿಂದ ಪರ್ವತವಾಸಿಗಳಿಗೆ ಆಹಾರ ಪದಾರ್ಥಗಳು ಹೊರಗಿನಿಂದ ಸರಬರಾಜಾಗುವುದಿಲ್ಲ. ಆಹಾರವಿಲ್ಲದೆ ಕೆಲವೇ ದಿವಸಗಳಲ್ಲಿ ಪರ್ವತ ವಾಸಿಗಳು ಸಾಯುತ್ತಾರೆ.

**ಯಾದವೌ ನಾವಮಂತವ್ಯೌ ದ್ವಾವಪ್ಯೇತೌ ರಣೇ ಸ್ಥಿತೌ ।**
**ಅವಿಜ್ಞಾತ ಬಲಾವೇತೌ ಶ್ರೂಯೇತೇ ದೇವಸಮ್ಮಿತೌ ॥ 11 ॥**

**ಕರ್ಮಭಿಃ ತ್ವಮರೌ ವಿದ್ಮೋ ಬಲಾವತಿ ಬಲಾನ್ವಿತೌ ।**
**ದುಷ್ಕರಾಣೀಹ ಕರ್ಮಾಣಿ ಕೃತವಂತೌ ಯದೂತ್ತಮೌ ॥ 12 ॥**

**ಶುಷ್ಕ ಕಾಷ್ಠೈಃ ತೃಣೈಃ ವೇಷ್ಟ್ಯ ಸರ್ವತಃ ಪರ್ವತೋಪಮಮ್ ।**
**ಅಗ್ನಿನಾ ದೀಪಯಿಷ್ಯಾಮೋ ದಹ್ಯೇತಾಂ ಗತಚೇತನೌ ॥ 13 ॥**

ಯದುವಂಶೀಯ ಈ ರಾಮಕೃಷ್ಣರು ಯುದ್ಧ ಸನ್ನದ್ಧರಾಗಿಯೇ ಇರುತ್ತಾರೆ. ಇವರನ್ನು ಬಾಲಕರೆಂದು ಉದಾಸೀನ ಮಾಡುವಂತಿಲ್ಲ ಇವರಲ್ಲಿ ಎಷ್ಟು ಬಲವಿದೆಯೆಂದು ಯಾರಿಗೂ ತಿಳಿದಿಲ್ಲ. ದೇವತೆಗಳಂತೆ ಮಹಾತೇಜಸ್ವಿ-ಗಳಿರುವರು. ಬಾಲಕರಿಬ್ಬರೂ ಮಹಾಬಲಿಷ್ಠರಾಗಿದ್ದು ಅಮಾನುಷ ಕರ್ಮಗಳನ್ನು ಮಾಡಿರುವರು. ಆದ್ದರಿಂದ ಪರ್ವತದ ಸುತ್ತಲೂ ಒಣಗಿದ ಕಟ್ಟಿಗೆ ತೃಣಗಳನ್ನು ರಾಶಿರಾಶಿಯಾಗಿ ಹಾಕಿ ಬೆಂಕಿ ಹಾಕೋಣ. ಇದರಿಂದ ಯದುಬಾಲಕರು ಸುಟ್ಟು ಭಸ್ಮರಾಗುತ್ತಾರೆ.

**ಯದಿ ಚೇನ್ ನಿಷ್ಕ್ರಮಿಷ್ಯೇತೇ ದಹ್ಯಮಾನಾವಿತೋಽಂತಿಕೇ ।**
**ಸಮೇತ್ಯ ಪಾತಯಿಷ್ಯಾಮಃ ತ್ಯಕ್ಷ್ಯತೋ ಜೀವಿತಃ ತತಃ ॥ 14 ॥**

**ವಾಕ್ಯಮೇತತ್ತು ರುರುಚೇ ಸಬಲಾನಾಂ ಮಹೀಕ್ಷಿತಾಮ್ ॥ 15 ॥**

ಒಂದು ವೇಳೆ ದಾವಾಗ್ನಿಯಿಂದ ತಪ್ಪಿಸಿಕೊಂಡು ಹೊರಕ್ಕೆ ಬಂದರೆಂದರೆ ನಾವೆಲ್ಲ ಸೇರಿ ಕೊಂದು ಹಾಕೋಣ. ಶಿಶುಪಾಲನ ಈ ಮಾತು ರಾಜರಿಗೆಲ್ಲ ರುಚಿಸಿತು. ಅವರೆಲ್ಲರೂ ಸೇರಿ ಪರ್ವತದ ಸುತ್ತಲೂ ಕಟ್ಟಿಗೆ ಒಣಹುಲ್ಲು, ಬಿದಿರು, ರೆಂಬೆಗಳನ್ನು ರಾಶಿರಾಶಿಯಾಗಿ ಹಾಕಿ ಬೆಂಕಿ ಹಾಕಿದರು. ವಾಯುವಿನ ಸಹಾಯದಿಂದ ಬೆಂಕಿ ಉಜ್ವಲವಾಗಿ ಸರ್ವತ್ರ ಹಬ್ಬಿಕೊಂಡು ಪರ್ವತದ ತುದಿಯನ್ನು ಮುಟ್ಟಿತು.

ಒಣಗಿದ ವೃಕ್ಷಗಳಿಂದ ಅಭಿವೃದ್ಧಿ ಹೊಂದಿದ ಅಗ್ನಿ ಪರ್ವತವನ್ನು ಸಂಪೂರ್ಣ ಸುಟ್ಟಿತು. ಪರ್ವತವು ಹಿಂಗೆ ಅಗ್ನಿಯಿಂದ ಸುಡುತ್ತಾ ಅನೇಕ ಗೈರಿಕಾದಿ

ಧಾತುಗಳು ಹರಿದುಬಂದವು. ಹಿಂಸ್ರ ಮೃಗಗಳೆಲ್ಲವೂ ಬೆಂಕಿಯ ಬೇಗೆಯಿಂದ ಅರುಚಾಡುತ್ತಿದ್ದವು. ಪರ್ವತ ಬಂಡೆಗಳೆಲ್ಲವೂ ಬೆಂಕಿಯಿಂದ ಕೆಂಪಾಗಿ ಕಾದು ಸಿಡಿದು ಬೆಂಕಿಯ ಉಂಡೆಗಳಂತೆ ಕೆಳಗೆ ಬೀಳುತ್ತಿದ್ದವು. ಬೆಂಕಿಯ ವೇಗಕ್ಕೆ ಸಣ್ಣಪುಟ್ಟ ನದಿಗಳೆಲ್ಲವೂ ಒಣಗಿ ಹೋದವು. ಪರ್ವತಗಳ ಬಿಲಗಳಿಂದ ಅರ್ಧಬೆಂದು ಹೋಗಿರುವ ಸರ್ಪಗಳು ಆಚೆಬರುತ್ತಿದ್ದವು. ಪರ್ವತಗಳ ಬಂಡೆಗಳು ಬೀಳುತ್ತಿದ್ದು ಇಂದ್ರದೇವನ ವಜ್ರಾಹತ ಪರ್ವತದ ರೆಕ್ಕೆಗಳಂತೆ ಇದ್ದವು. ವ್ಯೂಹಾಕಾರದಲ್ಲಿದ್ದ ಜರಾಸಂಧಾದಿಗಳು ಬೆಂಕಿಯ ಹಬೆ ತಾಳಲಾರದೆ ಅರ್ಧಕ್ರೋಶ ದೂರ ಸರಿದರು.

**ದಹ್ಯಮಾನೇ ನಗಶ್ರೇಷ್ಠೇ ಸೀದಮಾನ್ಯೈಃ ಮಹಾದ್ರುಮೈಃ ।**
**ಸರೋಷಂ ಹಿ ತದಾ ರಾಮೋ ವಚನಂ ಕೇಶಿಸೂದನಮ್ ।**
**ಬಭಾಷೇ ಪದ್ಮ ಪತ್ರಾಕ್ಷಂ ಸ ಸಾಕಾನ್ ಮಧುಸೂದನಂ ॥ 16 ॥**

ಹೀಗೆ ಪರ್ವತವೆಲ್ಲವೂ ಸುಟ್ಟು ಹೋಗುತ್ತಿದ್ದನ್ನು ಕಂಡು ಬಲರಾಮನು ಕೃಷ್ಣನಿಗೆ ಮಧುಸೂದನನೇ! ನಮ್ಮ ಮೇಲಿನ ವೈರದಿಂದಾಗಿ ಇಡೀ ಪರ್ವತಕ್ಕೆ ಬೆಂಕಿ ಹಾಕಿದ್ದಾರೆ. ನಮ್ಮಿಬ್ಬರ ಸಲುವಾಗಿ ಈ ಗೋಮಂತ ಪರ್ವತವು ನಾಶವಾದದ್ದಾದರೆ ನಮಗೆ ಅಪಕೀರ್ತಿವುಂಟಾಗುತ್ತದೆ. ನಮಗೆ ಆಶ್ರಯ ನೀಡಿದ ಈ ಪರ್ವತಕ್ಕೆ ಋಣವನ್ನು ತೀರಿಸಲು ನಮ್ಮ ಭುಜಬಲದಿಂದಲೇ ಯುದ್ಧ ಮಾಡೋಣ ಎಂದು ಹೇಳುತ್ತಾ ಪರ್ವತದ ತುದಿಯಿಂದ ಕೆಳಕ್ಕೆ ಹಾರಿದನು.

### ನೀರಿನ ಬುಗ್ಗೆಯಿಂದ ಬೆಂಕಿ ಆರಿತು

**ಅವಪ್ಲುತೇ ತತೋ ರಾಮೇ ಕೃಷ್ಣಃ ಕೃಷ್ಣಾಂಬುದೋಪಮಃ ।**
**ಗೋಮಂತಶಿಖರಾತ್ ಶ್ರೀಮಾನ್ ಆಪ್ಲುತೋಽಮಿತ ವಿಕ್ರಮಃ ॥ 17 ॥**
**ಜಲಾಕುಲೋಪಲಸ್ತತ್ರ ಪ್ರಸ್ರುತೋ ದ್ವಿರದೋ ಯಥಾ ।**
**ಸ ತೇನ ವಾರಿಣಾ ವಹ್ನಿಃ ತಕ್ಷಣಾತ್ ಪ್ರಶಮಂ ಯಯೌ ॥ 18 ॥**

ಬಲರಾಮನು ಪರ್ವತದಿಂದ ಹಾರಿದೊಡನೆಯೇ ಶ್ರೀಕೃಷ್ಣನೂ ಸಹ ಗೋಮಂತ ಪರ್ವತದಿಂದ ಕೆಳಗೆ ಹಾರಿದನು. ತನ್ನೆರಡೂ ಪಾದಗಳಿಂದ ಪರ್ವತವನ್ನು ಬಲವಾಗಿ ಒತ್ತಿದನು. ಇದರಿಂದಾಗಿ ಪರ್ವತವು ಹನ್ನೊಂದು ಯೋಜನ ಭೂಮಿಯಲ್ಲಿ ಕುಸಿಯಿತು. ಕೆಳಗಡೆ ಇದ್ದ ನೀರೆಲ್ಲವೂ ಮೇಲೆ

ಉಕ್ಕಿ ಹರಿಯಿತು. ನೀರು ಉಕ್ಕಿ ಹರಿದಿದ್ದರಿಂದ ಪರ್ವತದಲ್ಲಿ ಬೆಂಕಿಯು ತಾನೇ ಮೇಲಕ್ಕೆ ಉಕ್ಕಿ ಎಲ್ಲಾ ಕಡೆ ಹರಡಿದ್ದ ಬೆಂಕಿಯನ್ನೆಲ್ಲ ಆರಿಸಿತು.

ಪೀತಾಂಬರಧಾರಿಯಾಗಿದ್ದ ನೀಲಮೇಘಶ್ಯಾಮಲನೂ ಕಿರೀಟಧಾರಿಯೂ ಶ್ರೀವತ್ಸ ಚಿಹ್ನಿತ ಶ್ರೀಕೃಷ್ಣನು ಬಲರಾಮ ಹಾರಿದ ನಂತರ ರಾಜರ ಮಧ್ಯೆ ಹಾರಿದನು. ಪರ್ವತದಿಂದ ನೀರಿನ ಧಾರೆ ಹೊರಬರುತ್ತಿರುವುದನ್ನು ನೋಡಿದ ಜರಾಸಂಧಾದಿಗಳು ಭಯಪಟ್ಟರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಗೋಮಂತ ಪರ್ವತ ಅಗ್ನಿ ಉಪಶಮನವೆಂಬ
ನಲವತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ತ್ರಿಚತ್ವಾರಿಂಶೋಽಧ್ಯಾಯಃ

## ಶ್ರೀಕೃಷ್ಣ-ಜರಾಸಂಧ ಸೈನ್ಯದೊಂದಿಗೆ ಯುದ್ಧ

**ತೌ ನಗಾದವಪ್ಲುತೌ ದೃಷ್ಟ್ವಾ ವಸುದೇವಸುತಾವುಭೌ ।**
**ಕ್ಷುಬ್ಧಂ ನರವರಾನೀಕಂ ಸರ್ವಂ ಸಮೂಢ ವಾಹನಮ್ ॥ 1 ॥**
**ಬಾಹು ಪ್ರಹರಣೌ ತೌ ತು ಚೇರತುಃ ತತ್ರ ಯಾದವೌ ।**
**ಮಕರಾವಿವ ಸಂರಬ್ಧೌ ಸಮುದ್ರ ಕ್ಷೋಭಣಾವುಭೌ ॥ 2 ॥**
**ತತೋಽಂಬರತಲಾದ್ ಭೂಯಃ ಪತಂತಿ ಸ್ಮ ಮಹಾತ್ಮನೋಃ ।**
**ಮಧ್ಯೇ ರಾಜಸಹಸ್ರಸ್ಯ ಸಮರಂ ಪ್ರತಿಕಾಂಕ್ಷಿಣೋಃ ।**
**ತೃಷಿತಾನ್ಯಾಹವೇ ಭೋಕ್ತುಂ ನೃಪಮಾಂಸಾನಿ ಸರ್ವಶಃ ॥ 3 ॥**

ಜನಮೇಜಯನೇ ವಸುದೇವ ಪುತ್ರರಾದ ರಾಮ-ಕೃಷ್ಣರಿಬ್ಬರೂ ಪರ್ವತದಿಂದ ಹಾರಿ ಬಂದದ್ದನ್ನು ನೋಡಿ ಸೈನ್ಯವೆಲ್ಲವೂ ಕ್ಷೋಭೆಗೊಂಡಿತು. ಬಾಹುಗಳಿಂದಲೇ ಯುದ್ಧವನ್ನಾರಂಭಿಸಿದರು. ಅವರ ಮನಸ್ಸಿನಲ್ಲಿ ಈ ಹಿಂದಿನ ಯುದ್ಧದಲ್ಲಿ ಹೇಗೋ ಹಾಗೆ ತಮ್ಮ ಆಯುಧಗಳನ್ನು ನೆನೆಸಿದರು. ಕೂಡಲೇ ಆಕಾಶದಿಂದ ಸಂವರ್ತಕವೆಂಬ ನೇಗಿಲು, ಸೌನಂದವೆಂಬ ಒನಕೆ, ಸುದರ್ಶನಚಕ್ರ, ಕೌಮೋದಕಿ ಗದೆ ಹತ್ತು ದಿಕ್ಕು ಬೆಳಗುತ್ತಾ ಬಂದವು. ಅದನ್ನು ಸ್ವೀಕರಿಸಿ ಯುದ್ಧ ಪ್ರಾರಂಭ ಮಾಡಿದರು. ಬಲರಾಮಕೃಷ್ಣರು ಅನ್ಯೋನ್ಯವಾಗಿ ಆಶ್ರಯಿಸಿಕೊಂಡು ಯುದ್ಧ ಮಾಡುತ್ತಿದ್ದರು. ಶ್ರೀಕೃಷ್ಣನು ಅತುಲಪರಾಕ್ರಮ ತೋರುತ್ತಾ ಸದೆ ಬಡೆಯುತ್ತಿದ್ದನು.

ಬಲರಾಮನೂ ಕೋಪಗೊಂಡು ಸಂವರ್ತಕವೆಂಬ ನೇಗಿಲನ್ನು ಹಿಡಿದು ಶತ್ರುಗಳ ತಲೆಗಳನ್ನು ಯಮನಂತೆ ಒಡೆದು ಹಾಕುತ್ತಿದ್ದನು. ಹಲಾಯುಧದಿಂದ ಆನೆಗಳನ್ನು ಸೆಳೆದು ಒನಕೆಯಿಂದ ಮಣ್ಣಿನ ಹೆಂಟೆಯನ್ನು ಹೊಡೆಯುವಂತೆ ಹೊಡೆದು ಹಾಕಿದನು. ಹೀಗೆ ಯುದ್ಧದಲ್ಲಿ ಪ್ರಹಾರ ತಿಂದ ರಾಜರುಗಳು ಜರಾಸಂಧನ ಬಳಿಗೆ ಓಡಿಬಂದರು. ಅವರನ್ನು ನೋಡಿ ಹೇಡಿಗಳೇ,

**ಪರಾಕ್ರಾಂತಸ್ಯ ಸಮರೇ ವಿರಥಸ್ಯ ಪಲಾಯತಃ ।**
**ಭ್ರೂಣಹತ್ಯಾಮಿವಾಸಹ್ಯಾಂ ಪ್ರವದಂತಿ ಮನೀಷಿಣಃ ॥ 4 ॥**

**ಪತ್ತಿನೋ ಭುವಿ ಚೈಕಸ್ಯ ಗೋಪಸ್ಯಾಲ್ಪಬಲೀಯಸಃ ।**
**ಭೀತಾಃ ಕಿಂ ವಿನಿವರ್ತಧ್ವಂ ಧಿಗೇತಾಂ ಕ್ಷತ್ರವೃತ್ತಿತಾಮ್ ॥ 5 ॥**

ಸಮರಾಂಗಣದಲ್ಲಿ ಪರಾಕ್ರಮ ತೋರಬೇಕಾದ ಸಮಯದಲ್ಲಿ ಶತ್ರುಗಳಿಗೆ ಬೆನ್ನು ಹಾಕಿ ರಣಹೇಡಿಯಾಗಿ ಪಲಾಯನ ಮಾಡುವವನಿಗೆ ಭ್ರೂಣಹತ್ಯೆಯಂತಹ ಪಾಪವೆಂದು ಹೇಳುವರು. ಗೋಪಾಲಕರು ಏಕಾಂಗಿಯು ಯಾವುದೇ ರಥಗಜಾಶ್ವಗಳ ಬಲ ಇಲ್ಲದವನು. ಆದ್ದರಿಂದಲೇ ಅಲ್ಪ ಬಲನ ಮುಂದೆ ಚತುರಂಗ ಬಲ ಸಹಿತ ನೀವು ಹೆದರಿ ಓಡಿ ಬಂದಿರುವಿರಿ. ನೀವು ಕ್ಷತ್ರಿಯರಾಗಿ ನಿಮ್ಮ ಈ ವೃತ್ತಿಗೆ ಧಿಕ್ಕಾರವಿರಲಿ ಎಂದನು. ಹೋಗಿರಿ ಈಗಲೇ ಹೋಗಿರಿ. ನಾನಿವರನ್ನು ಯಮಪುರಿಗೆ ಕಳುಹಿಸುವವರೆಗೂ ನೀವು ಅವರೊಡನೆ ಯುದ್ಧ ಮಾಡುತ್ತಲೆ ಇರಬೇಕು. ಎಂದು ಆಜ್ಞೆ ಮಾಡಿದನು. ರಾಜರೆಲ್ಲರೂ ಪುನಃ ಶ್ರೀಕೃಷ್ಣ ಬಲರಾಮರ ಮೇಲೆ ಬಾಣಗಳ ಮಳೆಗರೆದರು.

**ತತಃ ಕೃಷ್ಣೋಽಂಬುದಾಕಾರಃ ಶಂಖಚಕ್ರಗದಾಧರಃ ।**
**ವ್ಯವರ್ಧತ ಮಹಾತೇಜಾಃ ವಾತಯುಕ್ತ ಇವಾನಲಃ ॥ 6 ॥**

**ಸ ಚಕ್ರೇಣಾರ್ಕತುಲ್ಯೇನ ದೀಪ್ಯಮಾನೇನ ತೇಜಸಾ ।**
**ಚಿಚ್ಛೇದ ಸಮರೇ ವೀರೋ ನೃಗಜಾಶ್ವಮಹಾರಥಾನ್ ॥ 7 ॥**

**ಗದಾ ನಿಪಾತವಿಹತಾ ಲಾಂಗಲೇನ ಚ ಕರ್ಷಿತಾಃ ।**
**ನ ಶೇಕುಸ್ತೇ ರಣೇ ಸ್ಥಾತುಂ ಪಾರ್ಥಿವಾಃ ನಷ್ಟಚೇತಸಃ ॥ 8 ॥**

ಶ್ರೀಕೃಷ್ಣನು ಅದಕ್ಕೆ ಪ್ರತಿಯಾಗಿ ಗದಾಪ್ರಹಾರದಿಂದ ಶತ್ರುಗಳಿಂದ ಬರುತ್ತಿದ್ದ ನೂರಾರು ಬಾಣಗಳ ಪ್ರಹಾರ ಎದುರಿಸುತ್ತಾ ಮಹಾವೃಷ್ಟಿಯ

ಮಹಾವೇಗವನ್ನು ಸಹಿಸಿಕೊಳ್ಳುವ ಎರಡು ಮಹಾಪರ್ವತದಂತೆ ನಿಂತರು. ಶತ್ರುಗಳಿಂದ ಬಾರಿಬಾರಿಗೂ ಪ್ರಹರಿಸಲ್ಪಡುತ್ತಿದ್ದರೂ ವಿಚಲಿತರಾಗದೆ ಯುದ್ಧ ಮಾಡುತ್ತಿದ್ದರು. ಗಾಳಿಯ ಸಹಾಯದಿಂದ ಬೆಂಕಿಯು ಉರಿಯುವಂತೆ ಶ್ರೀಕೃಷ್ಣನು ಚಕ್ರಾಯುಧದಿಂದ ಪದಾತಿ ಗಜರಥ, ಅಶ್ವ ಸೇನೆಯನ್ನು ತುಂಡರಿಸಿ ಹಾಕಿದನು. ಬಲರಾಮನು ನೇಗಿಲಿನಂತಿರುವ ಹಲಾಯುಧವನ್ನು ಚಾಚಿ ಶತ್ರುರಾಜರ ರಥಾಶ್ವಗಜಗಳನ್ನೆಲ್ಲ ರಾಶಿಹಾಕಿ ಒನಕೆಯಿಂದ ತಲೆ ಒಡೆದು ಹಾಕಿದನು. ಆನೆಗಳು ಘೀಳಟ್ಟವು. ಪದಾತಿಗಳು ಚಕ್ರದಿಂದ ತಲೆ ಕಳೆದುಕೊಂಡು ಅಸುನೀಗಿದರು.

ತಲೆಬುರುಡೆ ಎಲುವು ಮಾಂಸ ಮಜ್ಜೆಗಳ ಹೆಣಗಳ ರಾಶಿ ಭೂಮಿಯನ್ನೆಲ್ಲ ತುಂಬಿ ಬಿಟ್ಟವು.

**ಯುಗಾಂತಾರ್ಕಪ್ರಭಂ ಚಕ್ರಂ ಕಾಲೀಂ ಚೈವಾಯಸೀಂ ಗದಾಮ್ ।**
**ಗೃಹ್ಯ ಸೈನ್ಯಾವನಿಗತೋ ಬಭಾಷೆ ಕೇಶವೋ ನೃಪಾನ್ ॥ 9 ॥**
**ಕಿಮಿದಂ ಗಮ್ಯತೇ ಶೂರಾಃ ಕೃತಾಸ್ತ್ರಾಃ ದೃಢ ನಿಶ್ಚಯಾಃ ।**
**ಅದೃಷ್ಟದೋಷೇಣ ರಣೇ ಭವಂತೋ ಯೇನ ಪಾಲಿತಾಃ ।**
**ಸ ಇದಾನೀಂ ಜರಾಸಂಧ ಕಿಮರ್ಥಂ ನಾಭಿವರ್ತತೇ ॥ 10 ॥**

ಅನೇಕ ರಥಾದಿಗಳಿಂದ ಸಂಪನ್ನರಾಗಿರುವ ವೀರಾಗ್ರಣಿಗಳೇ ಅಸ್ತ್ರವಿದ್ಯೆಯಲ್ಲಿ ಮಹಾಪ್ರಾವಿಣ್ಯತೆ ಹೊಂದಿರುವ ನೀವೆಲ್ಲರೂ ಪಲಾಯನ ಮಾಡುತ್ತಿರುವಿರಿ. ನಾನು ನನ್ನ ಅಣ್ಣನೊಡನೆ ಪದಾತಿಯಾಗಿ ಯುದ್ಧಕ್ಕಾಗಿ ಒಬ್ಬನೇ ನಿಂತಿದ್ದೇನೆ. ಯುದ್ಧದಲ್ಲಿ ಯಾವುದೇ ರೀತಿ ದೋಷ ತಗಲದಂತೆ ಯುದ್ಧ ಮಾಡುವ ನಿಮ್ಮ ಪಾಲಕ ಜರಾಸಂಧನೇಕೆ ಮುಂದಕ್ಕೆ ಬರುತ್ತಿಲ್ಲ ಎಂದನು.

ಈ ಸಮಯದಲ್ಲಿ ದರದನು ಬಲರಾಮನೊಂದಿಗೆ ಯುದ್ಧಕ್ಕೆ ಬಂದನು. ಬಲರಾಮ ಬಾ ನನ್ನೊಂದಿಗೆ ಯುದ್ಧ ಮಾಡು ಎಂದನು. ಇಬ್ಬರಿಗೂ ಘನಘೋರ ಯುದ್ಧವಾಯಿತು. ಬಲರಾಮನು ಒನಕೆಯಿಂದ ಅವನ ತಲೆ ಒಡೆದು ಹಾಕಿದ. ಬಲರಾಮ–ಜರಾಸಂಧರಲ್ಲಿ ಯುದ್ಧ ಪ್ರಾರಂಭವಾಯಿತು. ಮಹೇಂದ್ರ–ವೃತ್ತರಿಗೆ ನಡೆದ ಯುದ್ಧದಂತಿತ್ತು. ಗದೆಗಳಿಂದ ಭೂಮಿಯನ್ನೆ ನಡುಗಿಸುತ್ತಾ ಯುದ್ಧ ಮಾಡಿದರು. ಸೈನಿಕರು ನೋಡುತ್ತಾ ನಿಂತರು. ದೇವ ಗಂಧರ್ವಾದಿಗಳೆಲ್ಲ ನೋಡಲು ಬಂದರು. ಇಬ್ಬರೂ ಮಂಡಲಾಕಾರವಾಗಿ ಓಡಾಡುತ್ತಾ ಗದೆಯಿಂದ ಹೊಡೆದುಕೊಳ್ಳುತ್ತಿದ್ದರು. ಜರಾಸಂಧನ ಗದೆಯಿಂದ

ಬಲರಾಮನಿಗೆ ಹೊಡೆದಾಗ ಬಲರಾಮನು ವಿಚಲಿತನಾಗಲಿಲ್ಲ. ಬಲರಾಮನ ಗದೆಯ ಪ್ರಹಾರವನ್ನು ವಿಫಲಗೊಳಿಸಿದನು.

### ಬಲರಾಮ-ಜರಾಸಂಧಯುದ್ಧ

ಜರಾಸಂಧನು ಬಹಳ ಯುದ್ಧ ಮಾಡಿ ಮುಸಲನ ಏಟಿಗೆ ಮೂರ್ಛಿತನಾದ. ನಂತರ ಎಚ್ಚೆತ್ತು ಬಲರಾಮನ ಎದೆಗೆ ಗದೆಯಿಂದ ಹೊಡೆದಾಗ ಬಲರಾಮನೂ ಮೂರ್ಛೆ ಬಿದ್ದ. ಬ್ರಹ್ಮನ ಅಜೇಯತ್ವ ವರದಿಂದಾಗಿ ಬಲರಾಮ ಮೂರ್ಛಿತನಾದ. ಶ್ರೀಕೃಷ್ಣನು ಗದೆಹಿಡಿದು ಜರಾಸಂಧನ ಎದೆ-ಕುತ್ತಿಗೆ ಭಾಗಕ್ಕೆ ಹೊಡೆದಾಗ ಭಾರಿ ಏಟಿನಿಂದಾಗಿ ರಕ್ತ ಸುರಿದು ಮೂರ್ಛೆ ಬಿದ್ದ.

ಪುನಃ ಇಬ್ಬರಿಗೂ ಸಂಜ್ಞೆ ಬಂದು ಯುದ್ಧದಲ್ಲಿ ತೊಡಗಿದರು. ಬಲರಾಮ ಕೋಪದಿಂದ ಕೆರಳಿ ಅವನ ತಲೆ ಹಿಡಿದು ಹೊಡೆದು ಕೊಲ್ಲಲು ಮುಸಲವನ್ನೆತ್ತಿದ.

ಆಗ ವಾಯುದೇವನು ಅಶರೀರವಾಣಿಯಿಂದ ಬಲರಾಮನೆ! ಜರಾಸಂಧನನ್ನು ಕೊಲ್ಲಲು ನಿನಗಾಗದು. ಬಾಹುಬಲ ವ್ಯರ್ಥ ಮಾಡಿಕೊಳ್ಳಬೇಡ. ನಿನ್ನ ಅಸ್ತ್ರಕ್ಕೂ ಅಮೋಘವೆಂಬ ಕೀರ್ತಿ ತಪ್ಪಿಸಬೇಡ. ಅವನು ಸದ್ಯದಲ್ಲಿಯೇ ಭೀಮನಿಂದ ಸಾಯಲಿರುವನೆಂದು ಹೇಳಿದನು.

### ಜರಾಸಂದನ ಪಲಾಯನ

**ಜರಾಸಂಧಸ್ತು ತಚ್ಛ್ರುತ್ವಾ ವಿಮನಾಃ ಸಮಪದ್ಯತ ।**
**ಪರಾಜಿತೇ ತ್ವಪಕ್ರಾಂತೇ ಜರಾಸಂಧೇ ಮಹೀಪತೌ ॥ 11 ॥**

**ದುದ್ರುವುಃ ಭೀತಮನಸೋ ವ್ಯಾಘ್ರಾಘ್ರಾತಾ ಮೃಗಾ ಇವ ॥ 12 ॥**

ಅಶರೀರವಾಣಿಯ ಮಾತನ್ನು ಆದರಿಸಿದ ಬಲರಾಮನು ಜರಾಸಂಧನನ್ನು ಪುನಃ ಹೊಡೆಯಲ್ಲಿಲ್ಲ. ಜರಾಸಂಧನು ಪರಾಜಿತನಾಗಿ ಓಡಿಹೋದ ಕೂಡಲೆ ಅವನ ಸೈನಿಕರು ಓಡಿಹೋದರು. ಹುಲಿಯಿಂದ ಆಘ್ರಾಣಿಸಿದ ಜಿಂಕೆಗಳಂತೆ ರಾಜರೆಲ್ಲರೂ ದಿಕ್ಕಾಪಾಲಾಗಿ ಓಡಿಹೋದರು.

**ದ್ರವತ್ಸು ರಥಮುಖ್ಯೇಷು ಚೇದಿರಾಜೋ ಮಹಾದ್ಯುತಿಃ ।**
**ಸ್ಮೃತ್ವಾ ಯಾದವ ಸಂಬಂಧಂ ಕೃಷ್ಣಮೇವಾನ್ವವರ್ತತ ॥ 13 ॥**
**ಅಹಂ ಪಿತೃಷ್ವಸುಃ ಭರ್ತಾ ತವ ಯಾದವನಂದನ ।**
**ಸಬಲಸ್ತ್ವಾಮುಪಾವೃತ್ತಃ ತ್ವಂ ಹಿ ಮೇ ದಯಿತಃ ಪ್ರಭೋ ॥ 14 ॥**

ರಾಜರೆಲ್ಲರೂ ಪ್ರಾಣಭಯದಿಂದ ಓಡುತ್ತಿರುವಾಗ ಮಹಾದ್ಯುತಿಯಾದ **ದಮಘೋಷ**ನು ತನಗೂ ಹಾಗೂ ಯಾದವರಿಗೂ ಇರುವ ಸಂಬಂಧ ಸ್ಮರಿಸಿ ಶ್ರೀಕೃಷ್ಣನನ್ನೆ ಅನುಸರಿಸಿದನು. ಕೃಷ್ಣನೇ! ನಾನು ನಿನ್ನ ಸೋದರತ್ತೆಯ ಗಂಡನು. ನಾನಾದರೂ ನಿನ್ನೊಂದಿಗೆ ಸಂಬಂಧ ಬಲಪಡಿಸಲು ಕರೂಷ ಹಾಗು ಚೇದಿ ಸೈನ್ಯಗಳೊಂದಿಗೆ ಬಂದಿರುವೆ. ನೀನು ನನಗೆ ಪರಮಪ್ರಿಯನಾಗಿರುವೆ. ಕೃಷ್ಣನೇ! ಜರಾಸಂಧನಿಗೆ ಶ್ರೀಕೃಷ್ಣನೊಂದಿಗೆ ಯುದ್ಧ ಮಾಡುವುದು ಬೇಡವೆಂದೆ. ಆದರೂ ಯುದ್ಧ ಮಾಡಿ ಸೋತ. ಅದಕ್ಕಾಗಿ ನಾನು ಅವನನ್ನು ಬಿಟ್ಟು ನಿನ್ನ ಬಳ ಬಂದಿರುವೆನು.

### ದಮಘೋಷನ ಪ್ರಾರ್ಥನೆಯಂತೆ ಕರವೀರಪುರಕ್ಕೆ

**ತದಿಮಾಂ ಸಂತ್ಯಜಾಶು ತ್ವಂ ಮಹೀಂ ಹತನರಾಕುಲಾಮ್ ।**
**ಕರವೀರ ಪುರಂ ಕೃಷ್ಣ ಗಚ್ಛಾಮಃ ಸಬಲಾನುಗಾಃ ।**
**ಶೃಗಾಲಂ ವಾಸುದೇವಂ ವೈ ದ್ರಕ್ಷ್ಯಾಮಃ ತತ್ರ ಪಾರ್ಥಿವಮ್ ॥ 15 ॥**

ಜರಾಸಂಧನು ಈಗ ಸೋತು ಓಡಿಹೋಗಿದ್ದರೂ ನಿನ್ನಲ್ಲಿ ವೈರಭಾವ ಬಿಡುವುದಿಲ್ಲ. ಪುನಃ ನಿನ್ನ ಮೇಲೆ ಏನಾದರೂ ಅಹಿತವನ್ನಾಚರಿಸಬಹುದು. ಹತರಾದ ಸೈನಿಕ ಶವಗಳಿಂದ ತುಂಬಿರುವ ಭೂತಪ್ರೇತ ರಾಕ್ಷಸರಿಗೆ ತಾಣವಾದ ಈ ಸ್ಥಳವನ್ನು ತ್ಯಜಿಸಿ, ಶೃಗಾಲವಾಸುದೇವನಿರುವ ಕರವೀರಪುರಕ್ಕೆ ಬೇಗನೆ ಹೋಗೋಣ ಎಂದನು.

**ಪಿತೃಷ್ವಸುಃ ಪತೇಃ ವಾಕ್ಯಂ ಶ್ರುತ್ವಾ ಚೇದಿಪತೇಃ ತದಾ ।**
**ವಾಕ್ಯಂ ಹೃಷ್ಟಮನಾಃ ಕೃಷ್ಣೋ ಜಗಾದ ಜಗತೋ ಗುರುಃ ॥ 16 ॥**
**ದೇಶಕಾಲ ವಿಶಿಷ್ಟಸ್ಯ ಹಿತಸ್ಯ ಮಧುರಸ್ಯ ಚ ।**
**ವಾಕ್ಯಸ್ಯ ದುರ್ಲಭಾಃ ಲೋಕೇ ವಕ್ತಾರಃ ಚೇದಿಸತ್ತಮ ॥ 17 ॥**

---

1. **ದಮಘೋಷ:**
ಕೃಷ್ಣೋ ಜಿತ್ವಾ ಮಾಗಧಂ ರೌಹಿಣೇಯಯುಕ್ತೋ ಯಯೌ ದಮಘೋಷೇಣ ಸಾರ್ಧಮ್ ।
ಪಿತೃಸ್ವಸಾಯಾಃ ಪತಿನಾ ತೇನ ಚೋಕ್ತಃ ಪೂರ್ವಂ ಜಿತೇನಾಪಿ ಯುಧಿ ಸ್ಮ ಬಾಂಧವಾತ್ ॥
ಹರಿವಂಶದ ಮೇಲಿನ ತಾತ್ಪರ್ಯವನ್ನು ಶ್ರೀಮಧ್ವಾಚಾರ್ಯರು ವ್ಯಾಖ್ಯಾನ ಮಾಡಿದಂತಿದೆ. *–ತಾ.ನಿ. 16/28*

ಜನಮೇಜಯನೇ! ಸೋದರತ್ತೆಯ ಪತಿಯಾದ ದಮಘೋಷನು ಹೇಳಿದ ಮಾತನ್ನು ಕೇಳಿ ಕೃಷ್ಣನು ಪರಮ ಸಂತುಷ್ಟನಾದನು.

ದಮಘೋಷನೇ! ನಾನು, ಕಲರಾಮ ಇಬ್ಬರೂ ನಿರಂತರ ಹೋರಾಟದಿಂದ ಬಹಳ ಆಯಾಸಗೊಂಡಿದ್ದೆವು. ಈ ಸಮಯದಲ್ಲಿ ಆತ್ಮೀಯ ಬಂಧುವಿನಂತೆ ದೇಶ ಕಾಲೋಚಿತ ಮಾತೆಂಬ ನೀರಿನಿಂದ ನಮ್ಮನ್ನು ಸಿಂಪಡಿಸಿ ಶ್ರಮ ಪರಿಹರಿಸಿರುವೆ. ಈ ಲೋಕದಲ್ಲಿ ದೇಶ ಕಾಲೋಚಿತವಾದ ಮಧುರವಾದ ಹಿತಕರವಾದ ಮಾತನ್ನು ಆಡುವವರೆ ದುರ್ಲಭ. ನಿನ್ನ ದರ್ಶನದಿಂದ ನಾವು ಸನಾಥರಾಗಿದ್ದೇವೆ. ನಿನ್ನಂತಹ ಆತ್ಮೀಯ ಬಂಧುವೊಬ್ಬನಿದ್ದರೆ ಸಾಧಿಸಲಸಾಧ್ಯ ಯಾವುದಿದೆ? ಯದಗಳಲ್ಲಿಯ ನೀನು ಮೊದಲನೆಯ ಬಂಧುವಾಗಿರುವೆ.

**ತದ್‌ಗಚ್ಛಾಮ ಮಹಾರಾಜ ಕರವೀರಂ ಪುರೋತ್ತಮಮ್ ।**
**ತ್ವಯೋದ್ಧಿಷ್ಟೇನ ಮಾರ್ಗೇಣ ಚೇದಿರಾಜ ಶಿವಾಯ ವೈ ॥ 18 ॥**

**ತೇ ತ್ರಿರಾತ್ರೋಷಿತಾಃ ಪ್ರಾಪ್ತಾಃ ಕರವೀರಂ ಪುರೋತ್ತಮಮ್ ।**
**ಶಿವಾಯ ಚ ಶಿವೇ ದೇಶೇ ನಿವಿಷ್ಟಾಃ ತ್ರಿದಶೋಪಮಾಃ ॥ 19 ॥**

**ರಾಜ್ಞಾಂ ಪರಾಜಯಂ ಯುದ್ಧೇ ಗೋಮಂತೇಽಚಲಸತ್ತಮೇ ।**
**ಶ್ರವಣಾದ್ ಧಾರಣಾದ್ ವಾಪಿ ಸ್ವರ್ಗಲೋಕಂ ವ್ರಜಂತಿ ಹಿ ॥ 20 ॥**

ದಮಘೋಷನೇ! ನೀನು ಹೇಳಿದಂತೆ ನೀನು ತೋರುವ ಮಾರ್ಗದಲ್ಲಿ ನಮ್ಮೆಲ್ಲರ ಒಳಿತಿಗಾಗಿ ಕರವೀರಪುರಕ್ಕೆ ಹೋಗೋಣ ಎಂದು ತ್ರೇತಾಗ್ನಿಗಳಂತೆ ರಥಗಳಲ್ಲಿ ಕುಳಿತು ಸುದೀರ್ಘ ಪ್ರಯಾಣ ಮಾಡುತ್ತಾ ಮೂರುದಿವಸ ಮುಗಿದು ನಾಲ್ಕನೆ ದಿನದಂದು ಕರವೀರಪುರ ಸೇರಿದರು.

ಹೀಗೆ ಗೋಮಂತಪರ್ವತದಲ್ಲಿ ನಡೆದ ರಾಜರ ಪರಾಜಯ ವಾರ್ತೆಯನ್ನು ಯಾರು ಶ್ರವಣ-ಧಾರಣ ಮಾಡುವವರೋ ಅವರು ಸ್ವರ್ಗವನ್ನು ಸೇರುವರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಜರಾಸಂಧ ಪಲಾಯನವೆಂಬಲ್ಲಿ
ನಲವತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




# ಅಥ ಚತುಶ್ಚತ್ವಾರಿಂಶೋಽಧ್ಯಾಯಃ

## ಶೃಗಾಲವಾಸುದೇವ ವಧೆ

*ವೈಶಂಪಾಯನ ಉವಾಚ-*

**ತಾನಾಗತಾನ್ ವಿದಿತ್ವಾಥ ಶೃಗಾಲೋ ಯುದ್ಧದುರ್ಮದಃ ।**

**ಪುರಸ್ಯ ಧರ್ಷಣಂ ಮತ್ವಾ ನಿರ್ಜಗಾಮೇಂದ್ರ ವಿಕ್ರಮಃ ॥ 1 ॥**

**ಸಾವಿತ್ರೇ ನಿಯಮೇ ಪೂರ್ಣೇ ಯಂ ದದೌ ಸವಿತಾ ಸ್ವಯಮ್ ।**

**ಆದಿತ್ಯ ರಶ್ಮಿಭಿರಿವ ರಶ್ಮಿಭಿರ್ಯೋ ನಿಗೃಹ್ಯತೇ ॥ 2 ॥**

**ಸ ಶೃಗಾಲೋಽಭ್ಯಯಾತ್ ಕೃಷ್ಣಂ ಶಲಭಃ ಪಾವಕಂ ಯಥಾ ॥ 3 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! **ಶೃಗಾಲವಾಸುದೇವ**ನು ಶ್ರೀಕೃಷ್ಣ-ಬಲರಾಮ-ದಮಘೋಷ ಮೂವರು ಸೈನ್ಯದೊಂದಿಗೆ

---

1. **ಶೃಗಾಲವಾಸುದೇವ:**
ಶೃಗಾಲನು ಮಧುದೈತ್ಯನ ಮಗ ಧುಂಧು ಎಂಬುವನು. ವಸುದೇವನಿಂದ ಕರಪೀರೇಶ್ವರನ ಪುತ್ರಿ ದನು ಎಂಬುವುಳಲ್ಲಿ ಪುತ್ರಿಕಾ ಪುತ್ರ ಧರ್ಮದಿಂದ ಹುಟ್ಟಿದವನು. ವಸುದೇವನನ್ನು ಕಂಸನು ಜೈಲಿನಲ್ಲಿ ಹಾಕಿದ್ದರಿಂದ ಪುನಃ ಬರಲಾಗಲಿಲ್ಲ. ದೇವಕಿಯನ್ನು ಮದುವೆಯಾಗಿ ತನ್ನ ತಾಯಿಗೆ ದ್ರೋಹ ಬಗೆದನೆಂದು ಯಾದವ ಶತ್ರುವಾದ. ಸೂರ್ಯಮಂತ್ರಗಾಯತ್ರೀ ಜಪದಿಂದಾಗಿ ಸೂರ್ಯನಿಂದ ಅವಧ್ಯತ್ವ ಹಾಗೂ ದಿವ್ಯರಥ ಪಡೆದವನು.
**ಸೂರ್ಯಪ್ರದತ್ತಂ ರಥಮಾರುಹ್ಯ ದಿವ್ಯಂ ।**
**ಪರಾದವಧ್ಯಃ ತಿಗ್ಮರುಚೇಃ ಸ ಕೃಷ್ಣಮ್** ॥ *-ತಾ.ನಿ. 16/31*

ಕರವೀರಪುರಕ್ಕೆ ಬಂದ ಸಮಾಚಾರ ಕೇಳಿ. ಅವರು ತನ್ನ ನಗರವನ್ನು ಆಕ್ರಮಿಸಲೆಂದೇ ಬಂದಿರುವವರು ಎಂದು ಭ್ರಮಿಸಿ ಅವರ ಮೇಲೆ ಒಮ್ಮೆಲೆ ಏರಿ ಬಂದನು. ಶೃಗಾಲನು ಹಸಿರು ಬಣ್ಣದ ಕುದುರೆಗಳನ್ನು ಹೂಡಿರುವ ರಥವು ಗರುಡನಂತೆಯೇ ಅಡೆತಡೆಯಿಲ್ಲದೆ ತೀವ್ರಗತಿಯಿಂದ ಚಲಿಸುತ್ತಿದ್ದವು. ಈ ರಥವಾದರೂ ಸೂರ್ಯದೇವನಿಂದ ಕೊಡಲ್ಪಟ್ಟಿತ್ತು. ಶೃಗಾಲನು ನಿಯಮ ಪೂರ್ವಕವಾಗಿ ಗಾಯತ್ರೀ ಜಪವನ್ನು ಮಾಡುತ್ತಾ ಸೂರ್ಯನನ್ನು ಸಂತೋಷಪಡಿಸಿದ್ದನು. ಇದರಿಂದ ಸುಪ್ರೀತ ರವಿಯು ಈ ರಥವನ್ನು ನೀಡಿದ್ದನು. ಈ ಮಹಾರಥದಲ್ಲಿ ಕುಳಿತು ಶೃಗಾಲನು ಶಲಭವು ಬೆಂಕಿಗೆ ವಿರುದ್ಧವಾಗಿ ಹೋಗುವಂತೆ ಹೊರಟನು. ಮೂರ್ತಿಮತ್ತಾದ ಪರ್ವತದಂತೆಯೆ ಹೊರಟು ಶ್ರೀಕೃಷ್ಣನ ಮೇಲೆ ಬಿದ್ದಾಗ ಕೃಷ್ಣನು ಯಾವುದೇ ವ್ಯಥೆ ಪಡಲ್ಲಿಲ್ಲ. ಶೃಗಾಲನು ಅವನ ಮೇಲೆ ಸಿಡಿಲಿನಂತೆ ಬಾಣಗಳನ್ನು ಮಳೆಗರೆದನು. ಮುಸಲ ಮೊದಲಾದ ಆಯುಧಗಳನ್ನೆಲ್ಲ ಬೀಸಿ ಒಗೆದನು. ಶೃಗಾಲನು ಪ್ರಯೋಗಿಸಿದ ಅಸ್ತ್ರಾಸ್ತ್ರಗಳು ತನ್ನ ಮೇಲೆ ಬಿದ್ದರೂ ಬೆಟ್ಟದಂತೆ ನಿರ್ವಿಕಾರನಾಗಿದ್ದನು.

**ವಾಸುದೇವಃ ಸ್ಮಿತಂ ಕೃತ್ವಾ ಪ್ರತಿಯುದ್ಧಾಯ ತಸ್ಥಿವಾನ್ ।**
**ತದ್ ಯುದ್ಧಮಭವತ್ ತಾಭ್ಯಾಂ ಸಮರೇ ಘೋರದರ್ಶನಮ್ ॥ 4 ॥**

**ಲೋಕೇಽಸ್ಮಿನ್ ವಾಸುದೇವೋಽಹಂ ಭವಿಷ್ಯಾಮಿ ಹತೇ ಯುಧಿ ।**
**ಹತೇ ಮಯಿ ತ್ವ ತ್ವಮಪ್ಯೇಕೋ ವಾಸುದೇವೋ ಭವಿಷ್ಯತಿ ॥ 5 ॥**

ಕೃಷ್ಣ! ಗೋಮಂತದಲ್ಲಿ ಯುದ್ಧ ಮಾಡಿ ಬಂದಿರುವೆನೆಂದು ಬೀಗಬೇಡ. ಸರಿಯಾದ ನಾಯಕರಿಲ್ಲದ, ದುರ್ಲಭ ರಾಜರೆ ಸೇರಿರುವ ಯುದ್ಧದಲ್ಲಿ ಪರಾಜಯಗೊಳಿಸಿದ್ದು ಆಶ್ಚರ್ಯವೇನಲ್ಲ. ನೀನು ಏಕಾಕಿಯಾಗಿರುವೆ. ನಾನು ಸೈನ್ಯಸಹಿತನಾಗಿದ್ದೇನೆ.

ಸೈನ್ಯಯುದ್ಧ ಸರಿಯೆನಿಸುವುದಿಲ್ಲ. ನಾನು ನೀನು ಇಬ್ಬರೆ ದ್ವಂದ್ವಯುದ್ಧ ಮಾಡೋಣ ಬೇರೆ ನಿಷ್ಪಾಪಿ ಸೈನಿಕರು ಏಕೆ ಸಾಯಬೇಕು.

ದ್ವಂದ್ವಯುದ್ಧದಲ್ಲಿ ನೀನು ಹತನಾದರೆ ನಾನೇ ವಾಸುದೇವನಾಗಿ ಉಳಿಯುವೆ. ನಾನು ಸತ್ತರೆ ನೀನೊಬ್ಬನೇ ವಾಸುದೇವನಾಗಿ ಉಳಿಯುವೆ.

**ಶೃಗಾಲಸ್ಯ ವಚಃ ಶ್ರುತ್ವಾ ವಾಸುದೇವಃ ಕ್ಷಮಾಪರಃ ।**
**ಈರ್ಷ್ಯಂತಂ ಪ್ರಹರಸ್ವೇತಿ ತಮುಕ್ತ್ವಾ ಚಕ್ರಮಾದದೇ ॥ 6 ॥**

**ತತಃ ಸಾಯಕಜಾಲಾನಿ ಶೃಗಾಲಃ ಕ್ರೋಧಮೂರ್ಛಿತಃ ।**
**ಚಿಕ್ಷೇಪ ಕೃಷ್ಣೇ ಘೋರಾಣಿ ಯುದ್ಧಾಯ ಲಘುವಿಕ್ರಮಃ ॥ 7 ॥**
**ಸೋಽಸ್ತ್ರ ಪ್ರಹಾರಾಭಿಹತಃ ಕಿಂಚಿದ್ ರೋಷಸಮನ್ವಿತಃ ।**
**ಚಕ್ರಮುದ್ಯಮ್ಯ ಗೋವಿಂದಃ ಶೃಗಾಲಸ್ಯ ಪರಿಕ್ಷಿಪತ್ ॥ 8 ॥**
**ಜಘಾನ ಸಮರೇ ಚಕ್ರಂ ಜಾತದರ್ಪಂ ಮಹಾಬಲಮ್ ॥ 9 ॥**

ಶೃಗಾಲನ ಮಾತನ್ನು ಕೇಳಿ ಕ್ಷಮಾಮೂರ್ತಿಯಾದ ಶ್ರೀಕೃಷ್ಣನು ಯುದ್ಧ ದುರ್ಮದನಾದ ಶೃಗಾಲನಿಗೆ ನೀನೆ ಆಯುಧ ಬಿಡು ಎಂದು ಹೇಳುತ್ತಾ ತನ್ನ ಚಕ್ರವನ್ನು ತೆಗೆದುಕೊಂಡನು. ಶೃಗಾಲನು ಕೋಪದಿಂದ ಬಾಣಗಳು ಮುಸಲಾಯುಧಗಳಿಂದ ಪ್ರಹರಿಸಿದನು.

ಅಸ್ತ್ರಗಳ ಪ್ರಯೋಗದಿಂದ ಗಾಯಗೊಂಡಂತೆ ನಟಿಸಿದ ಕೃಷ್ಣನು ಕುಪಿತನಂತೆ ಚಕ್ರಾಯುಧವನ್ನು ಶೃಗಾಲನ ಮೇಲೆ ಪ್ರಯೋಗಿಸಿದನು. ರಥದಲ್ಲಿ ಕುಳಿತಿದ್ದು ಚಕ್ರಬಿಟ್ಟರೂ ನನಗೆ ಸೂರ್ಯನ ವರವಿದೆಯೆಂದು ಅಲ್ಲಾಡದೆ ಕುಳಿತಿದ್ದ ಶೃಗಾಲನನ್ನು ಕೃಷ್ಣಕರ ಮುಕ್ತ ಚಕ್ರವು ಎದೆಯನ್ನು ಕತ್ತರಿಸಿ ಹಾಕಿತು. ಪರ್ವತ ಕೆಳಗುರುಳುವಂತೆ ಕೆಳಗೆ ಬಿದ್ದ. ಅವನ ಸೈನಿಕರು ಓಡಿಹೋದರು.

**ತತಃ ಸುದರ್ಶನಂ ಚಕ್ರಂ ಪುನರಾಯಾದ್ ಗುರೋಃ ಕರೇ ।**
**ತತೋ ಮೇಘನಿನಾದೇನ ಸ್ವರೇಣಾರಿ ವಿಮರ್ದನಃ ॥ 10 ॥**
**ಕೃಷ್ಣಃ ಕಮಲಪತ್ರಾಕ್ಷಃ ಜನಾನಾಮಭಯಂ ದದೌ ।**
**ನ ಬೇತವ್ಯಂ ನ ಭೇತವ್ಯಮಿತಿ ನಾನಾಭ್ಯಭಾಷತ ॥ 11 ॥**

ಕೆಲವರು ದುಃಖದಿಂದ ಅವನ ಶರೀರ ಬಿಡಲಿಚ್ಛಿಸದೆ ಅಲ್ಲಿಯೆ ದುಃಖಿಸುತ್ತಾ ಇದ್ದರು. ಶತ್ರು ಕೃಷ್ಣನು ಓಡಿಹೋಗುತ್ತಿರುವವರನ್ನು ಕುರಿತು ಭಯಪಡಬೇಡಿರಿ ಎಂದು ತನ್ನ ಅಭಯ ಹಸ್ತದಿಂದ ಧೈರ್ಯ ನೀಡಿದ. ನಾನೆಂದು ನಿರಪರಾಧಿಗಳನ್ನು ವಧಿಸುವುದಿಲ್ಲ. ಎಂದನು ಸೈನಿಕರ ವಿಕಾರ ಅಳುವಿನಿಂದಾಗಿ ರಾಜಮಹಿಷಿಯರು ಅಂತಃಪುರದಿಂದ ಬಂದರು. ಅವರೆಲ್ಲರೂ ಎದೆ ಬಡಿದು ಕೊಳ್ಳುತ್ತಾ ವಿಸ್ವರವಾಗಿ ಅಳತೊಡಗಿದರು.

**ತಸ್ಯ ಪದ್ಮಾವತೀ ನಾಮ ಮಹಿಷೀ ಪ್ರಮದೋತ್ತಮಾ ।**
**ರುದತೀ ಪುತ್ರಮಾದಾಯ ವಾಸುದೇವಮುಪಸ್ಥಿತಾ ॥ 12 ॥**

**ಯಸ್ತ್ವಯಾ ಪಾತಿತೋ ವೀರ ರಣಪ್ರೋಕ್ತೇನ ಕರ್ಮಣಾ ।**
**ತಸ್ಯ ಪ್ರೇತಗತಸ್ಯಾಯಂ ಪುತ್ರಸ್ತ್ವಾಂ ಶರಣಂ ಗತಃ ॥ 13 ॥**
**ಯದಿ ತ್ವಾಂ ಪ್ರಣಮೇತಾಸೌ ಕುರ್ಯಾದ್ ವಾ ಶಾಸನಂ ತವ ।**
**ನಾಯಮೇಕ ಪ್ರಹಾರೇಣ ಜನಃ ತಪ್ಯೇತ ದಾರುಣಮ್ ॥ 14 ॥**

ಜನಮೇಜಯನೇ! ನೀನು ಯಾವ ಶೃಗಾಲನನ್ನು ಸಂಹರಿಸಿದಿದೆಯೋ ಅವನ ಮಗನೇ ಈ ಶಕ್ರದೇವನು. ನಿನಗೆ ಶರಣು ಬಂದಿದ್ದಾನೆ. ನನ್ನ ಪತಿ ನಿನಗೆ ನಮಸ್ಕರಿದ್ದರೆ ನಿನ್ನಾದೇಶ ಪಾಲಿಸಿದ್ದರೆ. ಈ ಸ್ಥಿತಿ ಇವನಿಗೆ ಬರುತ್ತಿರಲ್ಲಿಲ್ಲ. ಈ ಬಾಲಕ ಶಕ್ರದೇವನು ನಿನ್ನ ಬಂಧುವಿನ ಪುತ್ರನೇ ಆಗಿರುವನು. ನೀನು ಇವನನ್ನು ಪುತ್ರನೆಂದೇ ಭಾವಿಸಿ ರಕ್ಷಿಸು ಎಂದಳು. ರಾಜಮಹಿಷಿ ಪದ್ಮಾವತಿಯ ಮಾತನ್ನು ಕೇಳಿ ಹೀಗೆಂದನು.

## ಶಕ್ರದೇವನಿಗೆ ಪಟ್ಟಾಭಿಷೇಕ

**ರಾಜಪತ್ನಿ ಗತೋ ರೋಷಃ ಸಹಾನೇನ ದುರಾತ್ಮನಾ ।**
**ಪ್ರಕೃತಿಸ್ಥಾ ವಯಂ ಜಾತಾಃ ದೇವಿ! ಸೈಷೋಽಸ್ಮಿ ಬಾಂಧವಃ ॥ 15 ॥**
**ಯೋಽಯಂ ಪುತ್ರಃ ಶೃಗಾಲಸ್ಯ ಮಮಾಪ್ಯೇಷ ನ ಸಂಶಯಃ ।**
**ಅಭಯಂ ಚಾಭಿಷೇಕಂ ಚ ದದಾಮ್ಯಸ್ಮೈ ಸುಖಾಯ ವೈ ॥ 16 ॥**
**ಆಹೂಯಂತಾಂ ಪ್ರಕೃತಯಃ ಪುರೋಧಾಃ ಮಂತ್ರಿಣಸ್ತಥಾ ।**
**ಪಿತೃ ಪೈತಾಮಹೇ ರಾಜ್ಯೇ ತವ ಪುತ್ರೋಽಭಿಷಿಚ್ಯತಾಮ್ ॥ 17 ॥**

ರಾಜಪತ್ನಿ ಪದ್ಮಾವತಿ! ನಿನ್ನ ಪತಿ ಮೃತನಾದಂತೆ ನನಗೆ ಅವನ ಮೇಲಿನ ಕೋಪವು ಹೊರಟು ಹೋಯಿತು. ನಾವೀಗ ನಿಮ್ಮಲ್ಲಿ ಮೊದಲಿನಂತೆಯೆ ಬಂಧುಭಾವ ಹೊಂದಿದ್ದೇವೆ. ಬಂಧುವೂ ಆಗಿರುವೆವು. ನಿಷ್ಕಲ್ಮಶವಾದ ನಿನ್ನ ಮಾತುಗಳಿಂದ ನನ್ನ ಕೋಪವು ದೂರವಾಗಿದೆ. ಈ ಪುತ್ರನು ನನ್ನ ಪುತ್ರನಂತೆಯೆ ಆಗಿರುವನು. ನಾನು ಇವನಿಗೆ ಅಭಯ ನೀಡಿದ್ದೇನೆ. ಈಗಲೇ ಈ ರಾಜ್ಯದಲ್ಲಿ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡುವೆನು. ಪುರೋಹಿತರು, ಮಂತ್ರಿಗಳನ್ನು ಕರೆಯಿರಿ ಎಂದನು.

**ಅಭಿಷಿಚ್ಯ ಶೃಗಾಲಸ್ಯ ಕರವೀರಪುರೇ ಸುತಮ್ ।**
**ಕೃಷ್ಣಃ ತದಹರೇವಾಶು ಪ್ರಸ್ಥಾನಮಭ್ಯರೋಚಯತ್ ॥ 18 ॥**

ಶ್ರೀಕೃಷ್ಣನು ಪುರೋಹಿತರು ಮಂತ್ರಿಗಳು ಬಂದಾಗ ಶಕ್ರದೇವನಿಗೆ ಸಿಂಹಾಸನದಲ್ಲಿ ಅಭಿಷೇಕ ಮಾಡಿದನು. ನಂತರ ಅಂದಿನ ದಿನವೇ ಹೊರಡುವುದುಚಿತವೆಂದು ಭಾವಿಸಿದನು. ರಥದಲ್ಲಿ ಕುಳಿತು ಮಥುರೆಗೆ ಪ್ರಯಾಣ ಬೆಳೆಸಿದನು.

ಇತ್ತ ಶೃಗಾಲನ ಶರೀರಕ್ಕೆ ಸಂಸ್ಕಾರ ಮಾಡಿ ಜಲಾಂಜಲಿಯನ್ನಿತ್ತರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶೃಗಾಲವಧ–ಶಕ್ರದೇವ ಪಟ್ಟಾಭಿಷೇಕವೆಂಬಲ್ಲಿ
ನಲವತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




# ಅಥ ಪಂಚಚತ್ವಾರಿಂಶೋಽಧ್ಯಾಯಃ

## ಮಥುರೆಯಲ್ಲಿ ಕೃಷ್ಣ ಬಲರಿಗೆ ಸ್ವಾಗತ

*ವೈಶಂಪಾಯನ ಉವಾಚ–*

ತೌ ತು ಸ್ವಲ್ಪೇನ ಕಾಲೇನ ದಮಘೋಷೇಣ ಸಂಗತೌ ।
ಅಥ ಅಧ್ವವಿಧಿನಾ ತೌ ತು ಪಂಚರಾತ್ರೋಷಿತೌ ಪಥಿ ॥ 1 ॥
ದಮಘೋಷೇಣ ಸಂಗಮ್ಯ ಏಕರಾತ್ರೋಷಿತಾವಿವ ।
ಜಗ್ಮತುಃ ಸಹಿತೌ ವೀರೌ ಮುದಾ ಪರಮಯಾ ಯುತೌ ।
ನಗರೀಂ ಮಥುರಾಂ ಪ್ರಾಪ್ತೌ ವಸುದೇವಸುತಾವುಭೌ ॥ 2 ॥

ರಾಜನೇ! ಚೇದಿರಾಜ ದಮಘೋಷನೊಂದಿಗೆ ಕರವೀರಪುರದಿಂದ ಹೊರಟ ಶ್ರೀಕೃಷ್ಣ–ರಾಮರು ದಾರಿಯಲ್ಲಿ ಐದು ರಾತ್ರಿಗಳನ್ನು ಅಲ್ಲಲ್ಲಿದ್ದು ಮುಂದೆ ಮಥುರೆಯನ್ನು ಸೇರಿದರು. ಅವರಿಗೆ ಐದು ರಾತ್ರಿಗಳು ಒಂದು ರಾತ್ರಿಯಂತೆ ಕಳೆದುಹೋಯಿತು.

ಅಷ್ಟೊಂದು ಸಂತೋಷದಿಂದ ಮಥುರೆ ಬಂದು ಸೇರಿದರು.

ತತಃ ಪ್ರತ್ಯುದ್ಗತಾಃ ಸರ್ವೇ ಯಾದವಾಃ ಯದುನಂದನೌ ।
ಸಬಲಾ ಹೃಷ್ಟಮನಸಃ ಉಗ್ರಸೇನ ಪುರೋಗಮಾಃ ॥ 3 ॥
ಗೋವಿಂದರಾಮೌ ಸಂಪ್ರಾಪ್ತೌ ಭ್ರಾತರೌ ಲೋಕ ವಿಶ್ರುತೌ ।
ಸ್ವೇ ಪುರೇ ನಿರ್ಭಯಾಃ ಸರ್ವೇ ಕ್ರೀಡಧ್ವಂ ಯಾದವಾಃ ಸುಖಮ್ ॥ 4 ॥

ರಾಮಕೃಷ್ಣರನ್ನು ಎದುರುಗೊಳ್ಳಲು ಉಗ್ರಸೇನಾದಿಗಳು ಸ್ವಾಗತಿಸಿದರು. ಆಬಾಲವೃದ್ಧರೂ ಮಂತ್ರಿ ಮೊದಲಾದವರು ಸ್ವಾಗತಿಸಿದರು. ಆನಂದದಾಯಕ ಮಂಗಳವಾದ್ಯದೊಂದಿಗೆ ಸ್ತುತಿಪಾಠಕರು ಅವರ ಬಲಪರಾಕ್ರಮವನ್ನು ಸ್ತೋತ್ರ ಮಾಡುತ್ತಿದ್ದರು.

ಲೋಕವಿಖ್ಯಾತ ಪರಾಕ್ರಮಶಾಲಿಗಳಾದ ಗೋವಿಂದ-ರಾಮರು ಮಥುರೆಗೆ ಆಗಮಿಸಿರುವವರು. ಇನ್ನು ನಮಗೆ ಯಾರ ಭಯವೂ ಇರುವುದಿಲ್ಲ. ನಿರ್ಭಯರಾಗಿ ವಿಹರಿಸಿ ಸುಖವಾಗಿರೋಣ ಎಂದು ಹಾಡುತ್ತಿದ್ದರು. ವಸುದೇವನ ಮನೆಗೆ ಹೋದ ವಾಸುದೇವ-ಬಲರಾಮರು ಆಯುಧವನ್ನು ಇಟ್ಟು ವಸುದೇವನಿಗೆ ಪಾದಾಭಿವಾದನ ಮಾಡಿದರು.

## ಯಮುನಾ ಕರ್ಷಣ

**ನ ತತ್ರ ಕಶ್ಚಿದ್ ದೀನೋ ವಾ ಮಲಿನೋ ವಾ ವಿಚೇತನಃ ।**
**ಮಥುರಾಯಾಮಭೂದ್ ಕಶ್ಚಿದ್ ರಾಮಕೃಷ್ಣ ಸಮಾಗಮೇ ॥ 5 ॥**

**ಕಸ್ಯಚಿತ್ ತ್ವಥ ಕಾಲಸ್ಯ ಸ್ಮೃತ್ವಾ ಗೋಪೇಷು ಸೌಹೃದಮ್ ।**
**ಜಗಾಮೈಕೋ ವ್ರಜಂ ರಾಮಃ ಕೃಷ್ಣಸ್ಯಾನುಮತೇ ಸ್ಥಿತಃ ॥ 6 ॥**

ಬಲರಾಮ ಕೃಷ್ಣರು ಮಥುರೆಗೆ ಆಗಮಿಸಿದ ನಂತರ ಮಥುರೆಯಲ್ಲಿ ದೀನನಾಗಲೀ, ಕೊಳಕನಾಗಲೀ, ದರಿದ್ರನಾಗಲೀ, ಬುದ್ಧಿವಿಹೀನನಾಗಲಿ ಯಾವೊಬ್ಬನೂ ಇರಲಿಲ್ಲ.

ಹೀಗೆ ಮಥುರೆಯಲ್ಲಿ ಬಲರಾಮ-ಕೃಷ್ಣರಿರುವಾಗ, ಗೋಪಾಲಕರು ತನ್ನ ಮೇಲೆ ಮಾಡುತ್ತಿದ್ದ ಪ್ರೀತಿ ವಿಶ್ವಾಸಗಳನ್ನು ನೆನೆದು ಸಂತೋಷಪಟ್ಟನು.

ಕೃಷ್ಣನ ಅನುಮತಿ ಪಡೆದು ಏಕಾಕಿಯಾಗಿಯೇ ವೃಂದಾವನ ಭೂಮಿಗೆ ಹೋದನು. ಬಲರಾಮನು ರಮ್ಯವೂ ವಿಶಾಲವೂ ಸುಗಂಧಯುಕ್ತ ಕಾಡುಗಳು, ಸರೋವರಗಳನ್ನೂ ನೋಡಿದ ವನ್ಯ ಜನರ ವೇಷದಂತೆ ವೇಷಧರಿಸಿದ್ದ ವನ್ಯಜನರ ಭಾಷೆಯಂತೆ ಅವರೊಡನೆ ಮಾತನಾಡಿದ. ಗೊಲ್ಲರೊಡನೆ ಸಲಿಗೆಯ ಮಾತುಗಳಿಂದ ಮಧುರಾಲಾಪಗಳನ್ನು ಮಾಡಿದನು. ಗೋಪವೃದ್ಧರಾದರು ಅವನನ್ನು ಕುರಿತು-

## ಬಲರಾಮನಿಗೆ ಸ್ವಾಗತ

**ಸ್ವಾಗತಂ ತೇ ಮಹಾಬಾಹೋ ಯದೂನಾಂ ಕುಲನಂದನ ।**
**ಅದ್ಯ ಸ್ಮ ನಿರ್ವೃತಸ್ತಾತ ಯತ್ತ್ವಾಂ ಪಶ್ಯಾಮಹೇ ವಯಮ್ ॥ 7 ॥**
**ಅಥವಾ ಪ್ರಾಣಿನಸ್ತಾತ ರಮಂತೇ ಜನ್ಮಭೂಮಿಷು ।**

ಯದುಕುಲಾನಂದವುಂಟು ಮಾಡುವ ನಿನಗೆ ಸ್ವಾಗತವು. ನಿನ್ನ ಆಗಮನ ನಮಗೆ ಆನಂದ ತಂದಿದೆ. ಬಹಳ ಕಾಲವಾದ ಮೇಲೆ ನಿನ್ನನ್ನು ನೋಡುವ ಭಾಗ್ಯ ಎಮಗಾಗಿದೆ. ಅದೂ ಅಲ್ಲದೆ ಜನ್ಮಸ್ಥಳವು ಸ್ವರ್ಗಕ್ಕಿಂತ ಶ್ರೇಷ್ಠವಲ್ಲವೆ? ನಿನ್ನ ದಯೆಯಿಂದಾಗಿ ನಾವೆಲ್ಲರೂ ದೇವತೆಗಳಿಗೂ ಮಾನ್ಯರಾಗಿದ್ದೇವೆ.

**ದಿಷ್ಟ್ಯಾ ತೇ ನಿಹತಾಃ ಮಲ್ಲಾಃ ಕಂಸಶ್ಚ ವಿನಿಪಾತಿತಃ ।**
**ಉಗ್ರಸೇನೋಽಭಿಷಿಕ್ತಶ್ಚ ಮಾಹಾತ್ಮ್ಯೇನ ಜನೇನ ವೈ ॥ 8 ॥**
**ವಧಃ ಪಂಚಜನಸ್ಯೈವ ಜರಾಸಂಧೇನ ವಿಗ್ರಹಃ ।**
**ಗೋಮಂತೇ ಚ ಶ್ರುತೋಽಸ್ಮಾಭಿಃ ಕ್ಷತ್ರಿಯೈಃ ಸಹ ವಿಗ್ರಹಃ ॥ 9 ॥**
**ವಧಶ್ಚೈವ ಶೃಗಾಲಸ್ಯ ಕರವೀರಪುರೋತ್ತಮೇ ।**
**ಪ್ರತಿಷ್ಠಿತಾ ಚ ವಸುಧಾ ಪಾರ್ಥಿವಾಶ್ಚ ವಶೀಕೃತಾಃ ॥ 10 ॥**

ನಿಮ್ಮಿಂದಾಗಿ ಕಂಸ ಮೊದಲಾದ ಮಲ್ಲರು ಹತರಾದರು. ಉಗ್ರಸೇನನಿಗೆ ರಾಜ್ಯ ಲಭಿಸಿತು. ಪಂಚಜನ ದೈತ್ಯನನ್ನು ಕೊಂದು ಶಂಖ ಪಡೆದಿರಿ. ಗೋಮಂತ ಗಿರಿ ತಪ್ಪಲಿನಲ್ಲಿ ನಡೆದ ಮಹಾರಾಜರ ಯುದ್ಧದಲ್ಲಿ ವಿಜಯದ ವಾರ್ತೆ ಕೇಳಿದೆವು.

ದರದನ್ನನು, ಶೃಗಾಲವಾಸುದೇವನನ್ನು ಸಂಹರಿಸಿ ಮಗ ಶಕ್ರದೇವನಿಗೆ ರಾಜ್ಯಾಭಿಷೇಕ, ಆಕಾಶದಿಂದ ಆಯುಧಗಳು ಇಳಿದ ವಾರ್ತೆಗಳನ್ನು ಕೇಳಿದ್ದೇವೆ.

ನೀವಿಬ್ಬರೂ ದುಷ್ಟಶಿಕ್ಷಣ-ಶಿಷ್ಟರಕ್ಷಣೆಗಾಗಿ ಅವತರಿಸಿ ಭೂಭಾರಹರಣ ಮಾಡುತ್ತಿರುವಿರಿ. ನಿಮ್ಮ ಪುನರಾಗಮನದಿಂದ ಆನಂದ ಹೊಂದಿರುವೆವು.

**ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ**
**ಮಥುರೆಯಲ್ಲಿ ಕೃಷ್ಣಬಲರಿಗೆ ಸ್ವಾಗತವೆಂಬಲ್ಲಿ**
**ನಲವತ್ತೈದನೆಯ ಅಧ್ಯಾಯವು**
**॥ ಶ್ರೀಕೃಷ್ಣಾರ್ಪಣಮಸ್ತು ॥**

# ಅಥ ಷಟ್‌ಚತ್ವಾರಿಂಶೋಽಧ್ಯಾಯಃ

**ಯಾದವೇಷ್ವಪಿ ಸರ್ವೇಷು ಭವಂತೋ ಮಮ ಬಾಂಧವಾಃ ।**
**ಇಹಾವಯೋರ್ಗತಂ ಬಾಲ್ಯಮಿಹ ಚೈವಾವಯೋ ರತಮ್ ।**
**ಭವದ್ಭಿಃ ವರ್ಧಿತಾಶ್ಚೈವ ಯಾಸ್ಯಾಮೋ ವಿಕ್ರಿಯಾಂ ಕಥಮ್ ॥ 1 ॥**

ಗೋಪಾಲಕರೇ! ನಾವು ಯಾದವರಲ್ಲಿ ಜನಿಸಿದರೂ ನೀವು ನಮಗೆ ಅವರಿಗಿಂತಲೂ ಆತ್ಮೀಯ ಬಂಧುಗಳಾಗಿರುವಿರಿ. ನಮ್ಮ ಬಾಲ್ಯ ಕಳೆದದ್ದು ನಿಮ್ಮೊಂದಿಗೆ ಅಲ್ಲವೆ? ಆಟಪಾಟಗಳು ಇಲ್ಲಿಯೆ ನಡೆದಿದ್ದು ನೀವು ನಮ್ಮನ್ನು ಸಾಕಿ ಸಲಹಿರುವಿರಿ. ನಿಮ್ಮಿಂದ ಬೆಳೆದ ಈ ದೇಹ ನಿಮ್ಮನ್ನು ಮರೆಯುವುದು ಹೇಗೆ.

ಬಲರಾಮನು ನಂತರ ಅರಣ್ಯಪ್ರದೇಶಕ್ಕೆ ಹೋಗಿ ಅಲ್ಲಿ ವಿಹರಿಸುತ್ತಿದ್ದನು. ಅದೇ ಸಮಯದಲ್ಲಿ ದೇಶ ಕಾಲೋಚಿತ ತಿಳಿದ ಗೋಪರು ಅವನಿಗೆ ವಾರುಣೀ ಮದ್ಯವನ್ನು ನೀಡಿದರು. ಅದನ್ನು ಪಾನಮಾಡಿ ಮತ್ತೇರಿತು. ಆ ಸಮಯದಲ್ಲಿ ಬಲದೇವನಿಗೆ ವಿವಿಧ ಪುಷ್ಪಫಲಗಳನ್ನು ಭಕ್ಷ್ಯ ಭೋಜ್ಯಗಳನ್ನೂ ತಂದು ಕೊಟ್ಟರು. ಅದನ್ನು ಸ್ವೀಕರಿಸಿದ ಬಲದೇವನು ಯಮುನೆಗೆ ಹೇಳಿದನು.

## ಬಲರಾಮನ ಕೋಪ

**ರಾಮಸ್ತು ಯಮುನಾಮಾಹ ಸ್ನಾತುಮಿಚ್ಛೇ ಮಹಾನದಿ ।**
**ಏಹಿ ಮಾಮಭಿಗಚ್ಛ ತ್ವಂ ರೂಪಿಣೀ ಸಾಗರಂಗಮೇ ॥ 2 ॥**
**ನಾಭ್ಯ ವರ್ತತ ತಂ ದೇಶಂ ಸ್ತ್ರೀಸ್ವಭಾವೇನ ಮೋಹಿತಾ ।**
**ತತಶ್ಚುಕ್ರೋಧ ಬಲವಾನ್ ರಾಮೋ ಮದಸಮೀರಿತಃ ॥ 3 ॥**

**ಚಕಾರ ಸ ಹಲಂ ಹಸ್ತೇ ಕರ್ಷಣಾಧೋಮುಖಂ ಬಲೀ ।**
**ಸ ಹಲೇನಾನತಗ್ರೇಣ ಕೂಲೇ ಗೃಹ್ಯ ಮಹಾನದೀಮ್ ।**
**ಚಕರ್ಷ ಯಮುನಾಂ ರಾಮೋ ವ್ಯುತ್ಥಿತಾಂ ವನಿತಾಮಿವ ॥ 4 ॥**

ಮಹಾನದಿ ಯಮುನೇ ನಾನು ನಿನ್ನಲ್ಲಿ ಸ್ನಾನ ಮಾಡಲು ಇಚ್ಛಿಸಿದ್ದೇನೆ. ನೀನು ಮೂರ್ತಿಮತ್ತಾಗಿ ನನ್ನ ಸಮೀಪ ಬರುವವಳಾಗು.

ಮದ್ಯಪಾನ ಮತ್ತನಾದ ಅವನ ಮಾತುಗಳನ್ನು ತಿರಸ್ಕರಿಸಿದಳು ಯಮುನೆ. ಸ್ತ್ರೀ ಸ್ವಭಾವದಿಂದಾಗಿ ಬಲರಾಮನ ಸಾಮರ್ಥ್ಯವರಿಯದೆ ಮೋಹಿತಳಾಗಿ ಅವನು ಹೇಳಿದ ಸ್ಥಳಕ್ಕೆ ಹೋಗಲಿಲ್ಲ. ಮಧುಪಾನ ಮತ್ತ ಬಲರಾಮನು ಇದರಿಂದಾಗಿ ಯಮುನೆಯ ಮೇಲೆ ಕೋಪಗೊಂಡ ಯಮುನೆಯನ್ನು ತನ್ನೆಡೆಗೆ ಸೆಳೆದುಕೊಳ್ಳುವ ಸಲುವಾಗಿ ನೇಗಿಲನ್ನು ಅಧೋಮುಖವನ್ನಾಗಿ ಮಾಡಿದ ಯಮುನೆಯನ್ನು ನೇಗಿಲಿನಿಂದ ಸ್ವೇಚ್ಛಾಚಾರಿಣಿ ಸ್ತ್ರೀಯನ್ನು ಎಳೆದಾಡುವಂತೆ ದಡವನ್ನು ಸೆಳೆಯ ತೊಡಗಿದನು. ಜಲಪ್ರವಾಹ ಕ್ಷೋಭೆಗೊಂಡಿತು. ಜಲರಾಶಿಯು ಬಲರಾಮ ತೋಡಿ ಕಾಲುವೆ ಮಾಡಿದ್ದ ಕಡೆ ಹರಿಯತೊಡಗಿತು. ಯಮುನೆಯು ಸಂಕರ್ಷಣನ ಭಯದಿಂದ ನಡುಗುತ್ತಿರುವಂತೆ ತೋರಿತು. ಸಾಗರದ ಕಡೆ ಹರಿದು ಹೋಗುತ್ತಿದ್ದ ಅವಳು ಕ್ಷೋಭೆಗೊಂಡಿದ್ದಳು. ಹೀಗೆ ವಿಪರೀತ ಮಾರ್ಗದಲ್ಲಿ ಸೆಳೆದಿದ್ದರಿಂದ ಯಮುನೆಯು ವೃಂದಾವನ ಪ್ರವೇಶಿಸಿದಳು. ಭಯಗೊಂಡ ಯಮುನೆಯು ಸ್ತ್ರೀರೂಪ ಧರಿಸಿ ಹೀಗೆ ಹೇಳಿದಳು.

**ಪ್ರಸೀದ ನಾಥ ಭೀತಾಸ್ಮಿ ಪ್ರತಿಲೋಮೇನ ಕರ್ಮಣಾ ।**
**ವಿಪರೀತಮಿದಂ ರೂಪಂ ತೋಯಂ ಚ ಮಮ ಜಾಯತೇ ॥ 5 ॥**

**ಅಸತ್ಯಹಂ ನದೀಮಧ್ಯೇ ರೌಹಿಣೇಯ ತ್ವಯಾ ಕೃತಾ ।**
**ಕರ್ಷಣೇನ ಮಹಾಬಾಹೋ ಸ್ವಮಾರ್ಗ ವ್ಯಭಿಚಾರಿಣೀ ॥ 6 ॥**

ಮಹಾಬಾಹು ಬಲರಾಮನೇ! ನಿನ್ನ ವಿಪರೀತ ವ್ಯವಹಾರದಿಂಏ ಭೀತಳಾದ ನನ್ನ ಮೇಲೆ ಪ್ರಸನ್ನನಾಗು. ನನ್ನ ರೂಪ ಹಾಗೂ ನೀರು ವಿಪರೀತವಾಗಿ ಪರಿಣಾಮ ಹೊಂದಿದೆ.

ನನ್ನನ್ನು ಬಲಾತ್ಕಾರವಾಗಿ ಸೆಳೆದು ತಂದು ನದಿಗಳ ಮಧ್ಯದಲ್ಲಿ ಅಸತಿಯನ್ನಾಗಿ ಮಾಡಿದೆ. ನನ್ನ ಸ್ವಭಾವ ಸಹಜ ಮಾರ್ಗದಿಂದ ಭ್ರಷ್ಟಳನ್ನಾಗಿ ಮಾಡಿದೆ.

ಸಮುದ್ರ ಸೇರಿದ ನನ್ನನ್ನು ಬಿಳಿಯ ನೊರೆಯ ಮೂಲಕ ನಗಾಡಿ ಅಪಹಾಸ್ಯ ಮಾಡುತ್ತಾರೆ. ಈಗಲಾದರೂ ನನ್ನ ಮೇಲೆ ಪ್ರಸನ್ನನಾಗು. ನಾನು ಯಾವ ಮಾರ್ಗದಿಂದ ಎಲ್ಲಿಗೆ ಹೋಗಬೇಕೆಂದು ನೀನೆ ಹೇಳು.

ಇದಕ್ಕೆ ಬಲರಾಮನು ಯಮುನೆ ದುರಿತೋಪಶಮನೆ. ನಾನು ನೀನು ಪ್ರವಹಿಸಬೇಕಾದ ಮಾರ್ಗವನ್ನು ಕಲ್ಪಿಸಿದ್ದೇನೆ. ನೀನು ನಿನ್ನ ಶುಭ್ರ ಜಲದಿಂದ ವೃಂದಾವನ ಪ್ರದೇಶವನ್ನು ಆಪ್ಲಾವಿತವನ್ನಾಗಿ ಮಾಡು.

ಯಮುನೆಯು ತಾವು ವಾಸಿಸುತ್ತಿದ್ದ ವ್ರಜಭೂಮಿಗೂ ನೇಗಿಲಿನಿಂದ ಅಕರ್ಷಿತಳಾಗಿ ಬಂದದ್ದನ್ನು ನೋಡಿ ಬಲರಾಮನಿಗೆ ಪ್ರಣಾಮ ಮಾಡಿದರು.

ನಂತರ ಮಥುರಾಪುರಕ್ಕೆ ಮರಳಿದನು. ಕೃಷ್ಣನನ್ನು ಆಲಿಂಗಿಸಿ ಬಂಧುಗಳ ಕುಶಲವನ್ನು ವಿಚಾರಿಸಿದನು.

**ಸರ್ವತ್ರ ಕುಶಲಂ ಕೃಷ್ಣ ಯೇಷಾಂ ಕುಶಲಮಿಚ್ಛಸಿ ॥ 7 ॥**

ನೀನು ಯಾರೆಲ್ಲರ ಕ್ಷೇಮ ಕೇಳಿದೆಯೊ ಅವರೆಲ್ಲರೂ ಕುಶಲಿಗಳಾಗಿರುವರು ಎಂದು ಹೇಳಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಯಮುನಾ ಕರ್ಷಣವೆಂಬ
ನಲವತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 47 ವಿಷ್ಣುಪರ್ವ

# ಅಥ ಸಪ್ತಚತ್ವಾರಿಂಶೋಽಧ್ಯಾಯಃ

## ಶ್ರೀಕೃಷ್ಣನು ಭೀಷ್ಮಕನಗರಕ್ಕೆ ಹೋದದ್ದು

ಏತಸ್ಮಿನ್ನಂತರೇ ಪ್ರಾಪ್ತಾಃ ಲೋಕ ಪ್ರಾವೃತ್ತಿಕಾ ನರಾಃ ।
ಚಕ್ರಾಯುಧಗೃಹಂ ಸರ್ವೇ ಲೋಕಪಾಲಗೃಹೋಪಮಮ್ ॥ 1 ॥

ಸಮಾಗತೇಷು ಸರ್ವೇಷು ಯದುಮುಖ್ಯೇಷು ಸಂಸದಿ ।
ಪ್ರಾವೃತ್ತಿಕಾಃ ನರಾಃ ಪ್ರಾಹುಃ ಪಾರ್ಥಿವಾತ್ಯಯಿಕಂ ವಚಃ ॥ 2 ॥

ಜನಾರ್ದನ ನರೇಂದ್ರಾಣಾಂ ಪಾರ್ಥಿವಾನಾಂ ಸಮಾಗಮಃ
ಭವಿಷ್ಯತಿ ಕ್ಷಿತೀಶಾನಾಂ ಸಮೂಢಾನಾಮನೇಕಶಃ ॥ 3 ॥

ವೈಶಂಪಾಯನರು ಜನಮೇಜಯನಿಗೆ ರಾಜನೇ, ರಾಮಕೃಷ್ಣರು ಮಥುರೆಯಲ್ಲಿ ಸುಖದಿಂದಿರುತ್ತಿರಲು, ಒಂದು ದಿನ ದೇಶ-ವಿದೇಶಗಳ ಘಟನೆಗಳನ್ನು ಸಂಗ್ರಹಿಸಿ ಮತ್ತೊಂದು ಹೇಳುವ ವಾರ್ತಾವಾಹಕರು ಶ್ರೀಕೃಷ್ಣನ ಮನೆಗೆ ಬಂದರು.

ಯಾದವರೆಲ್ಲರೂ ಪರಸ್ಪರ ಸಂಕೇತದ ಮೂಲಕ ಶ್ರೀಕೃಷ್ಣನ ಅರಮನೆಯಲ್ಲಿ ಸಮಾಗಮ ಹೊಂದಿದರು.

ವಾರ್ತಾವಾಹಿಗಳು ವಿನಾಶಕಾರಿಯಾದ ರಾಜರ ವಿನಾಶಕ್ಕೆ ಕಾರಣವಾದ ವಾರ್ತೆ ಹೇಳತೊಡಗಿದರು. ಜನಾರ್ದನನೇ! ವಿವಾಹೇಚ್ಛೆವುಳ್ಳ ವಿವಿಧ ದೇಶದ ರಾಜರು, ಶಾಸಕರು, ನರೇಂದ್ರರೆಲ್ಲರೂ ಒಂದೆಡೆ ಸೇರಲಿದ್ದಾರೆ.

ರುಗ್ಮಿಣೀ ಕಿಲ ನಾಮಾಸ್ತಿ ರುಗ್ಮಿಣಃ ಪ್ರಥಮಃ ಸ್ವಸಾ ।
ಭಾವೀ ಸ್ವಯಂವರಸ್ತತ್ರ ತಸ್ಯಾಃ ಕಿಲ ಜನಾರ್ದನ ॥ 4 ॥

ತಸ್ಯಾಃ ತ್ರೈಲೋಕ್ಯ ಸುಂದರ್ಯಾಃ ತೃತೀಯೇಽಹನಿ ಯಾದವ ।
ರುಕ್ಮ ಭೂಷಣ ಭೂಷಿಣ್ಯಾಃ ಭವಿಷ್ಯತಿ ಸ್ವಯಂವರಃ ॥ 5 ॥

ರಾಜ್ಞಾಂ ತತ್ರ ಸಮೇತಾನಾಂ ಹಸ್ತ್ಯಶ್ವರಥ ಗಾಮಿನಾಮ್ ।
ದ್ರಕ್ಷ್ಯಾಮಃ ಶತಶಸ್ತತ್ರ ಶಿಬಿರಾಣಿ ಮಹಾತ್ಮನಾಮ್ ॥ 6 ॥

ಶ್ರೀಕೃಷ್ಣ! ಭೀಷ್ಮಕರಾಜನ ಮಗನಾದ ರುಗ್ಮಿಯು ಆಹ್ವಾನವನ್ನು ಅಂಗೀಕರಿಸಿ ನಾನಾ ದೇಶದ ರಾಜರುಗಳೆಲ್ಲ ಶೀಘ್ರವಾಗಿ ಕುಂಡಿನಪುರಕ್ಕೆ ಹೋಗುತ್ತಿದ್ದಾರೆ. ಇದು ಜನರೇ ಹೇಳದ ಮಾತು. ರುಗ್ಮಿಗೆ ರುಗ್ಮಿಣಿಯೆಂಬ ತಂಗಿಯಿದ್ದಾಳೆ. ಅವಳಿಗೆ **ಸ್ವಯಂವರ**[1]ವೇರ್ಪಡಿಸಿದ್ದಾರೆ. ರಾಜರೆಲ್ಲರೂ ಸೈನ್ಯ ಸಹಿತರಾಗಿ ಅಲ್ಲಿಗೆ ಹೋಗುತ್ತಿದ್ದಾರೆ. ತ್ರಿಲೋಕ ಸುಂದರಿಯಾದ ರುಗ್ಮಿಣಿಗೆ ಇಂದಿಗೆ ಮೂರು ದಿವಸಕ್ಕೆ ಸರಿಯಾಗಿ ಸ್ವಯಂವರವಾಗುತ್ತದೆ.

### ಕೇಶವನ ಕುಂಡಿನಪುರಗಮನ

ಶ್ರುತ್ವೈತತ್ ಕೇಶವೋ ವಾಕ್ಯಂ ಹೃದಿ ಶಲ್ಯಮಿವಾರ್ಪಿತಮ್ ।
ನಿರ್ಜಗಾಮ ಯದುಶ್ರೇಷ್ಠಃ ಯದೂನಾಂ ಸಹಿತೋ ಬಲೈಃ ॥ 7 ॥

ಉಗ್ರಸೇನಂ ತು ಗೋವಿಂದಃ ಪ್ರಾಹ ನಿಶ್ಚಿತ ದರ್ಶನಃ ।
ತಿಷ್ಠ ತ್ವಂ ನೃಪಶಾರ್ದೂಲ ಭ್ರಾತ್ರಾ ಮೇ ಸಹಿತೋಽನಘ ॥ 8 ॥

ಪುರೀಂ ಶೂನ್ಯಾಮಿಮಂ ವೀರ ಜಘನ್ಯೇಽಭಿಪತಂತಿ ಹ ।

ವಾರ್ತಾವಹರು ತನಗೆ ಸೇರಬೇಕಿದ್ದ ಲಕ್ಷ್ಮೀರೂಪಳಾದ ರುಗ್ಮಿಣಿಯನ್ನು ಬೇರೊಬ್ಬರಿಗೆ ಸೇರಿಸಲು ಹಂಚಿಕೆ ವಿಷಯ ಶಲ್ಯ ಪ್ರಾಯವಾಗಿತ್ತು. ಯಾದವರ

---

1. ರುಗ್ಮಿಣೀಸ್ವಯಂವರ :
ರುಗ್ಮಿಣಿಯು ಸಾಕ್ಷಾತ್ ಲಕ್ಷ್ಮೀದೇವಿಯೇ – 'ರಮೈವ ರುಗ್ಮಿಣೀತಿ ಯೋದ್ಯತಾಂ' ರುಗ್ಮಿಗೆ ಶ್ರೀಕೃಷ್ಣನಿಗೆ ಕೊಡುವುದು ಇಷ್ಟವಾಗಿದ್ದಿಲ್ಲ. ಜರಾಸಂಧನ ಸಾಕುಮಗ ಶಿಶುಪಾಲನಿಗೆ ನೀಡಬೇಕೆಂದಿದ್ದ –
ರುಗ್ಮೀ ನಿವಾರ್ಯ ಕೃಷ್ಣದ್ವಿಟ್ ಚೈದ್ಯಾಯ ಸಮಕಲ್ಪಯತ್ ॥ *–ಭಾಗ.10*
ಹರೇಃ ಪ್ರದಾತುಮುದ್ಯತಾಂ ನ್ಯವಾರಯದ್ ಹರಿಪ್ರಿಯಾಮ್ ॥ *–ತಾ.ನಿ. 17/2*

ಸೈನ್ಯದೊಂದಿಗೆ ಕುಂಡಿನಪುರಕ್ಕೆ ಹೊರಟೆ ಬಿಟ್ಟನು. ದೊಡ್ಡ ಸೈನ್ಯ ಶ್ರೀಕೃಷ್ಣನ ಹಿಂದೆ ಹೊರಟಿತು.

ಈ ಸಮಯದಲ್ಲಿ ವೈರಿ ರಾಜರ ಅಭಿಪ್ರಾಯ ತಿಳಿದಿದ್ದ ಶ್ರೀಕೃಷ್ಣನು ಉಗ್ರಸೇನನಿಗೆ ಮಹಾರಾಜನೇ ನೀನು ನನ್ನ ಅಣ್ಣನೊಂದಿಗೆ ಇಲ್ಲಿಯೇ ಇರುವವನಾಗು. ಕ್ಷತ್ರಿಯ ರಾಜರು ಪ್ರಾಯಶಃ ಕುಹಕಿಗಳು. ನಾವು ಹೊರಟದ್ದನ್ನು ತಿಳಿದು ಮಥುರಾ ಪಟ್ಟಣವು ಶೂನ್ಯವಾಗಿದೆಯೆಂದು ತಿಳಿದು ಆಕ್ರಮಿಸಲು ಬರಬಹುದು. ನಮ್ಮ ಮೇಲೆ ಸಂಶಮಗ್ರಸ್ತರಾದವರೆಲ್ಲ ಜರಾಸಂಧನ ಬಳಿಯಿದ್ದಾರೆ. ಉಗ್ರಸೇನನು ಗದ್ಗದ ಕಂಠಿಯಾಗಿ ಹೀಗೆಂದನು.

**ತ್ವಯಾ ವಿಹೀನಾಃ ಸರ್ವೇ ಸ್ಮ ನ ಶಕ್ತಾಃ ಸುಖಮಾಸಿತುಮ್ ।**
**ಪುರೋಽಸ್ಮಿನ್ ವಿಷಯಾಂತೇ ವಾ ಪತಿಹೀನಾ ಇವ ಸ್ತ್ರಿಯಃ ॥ 9 ॥**
**ತ್ವತ್ ಸನಾಥಾಃ ದಯಂ ತಾತ ತ್ವದ್ಬಾಹು ಬಲಮಾಶ್ರಿತಾಃ**
**ಬಿಭೀಮೋ ನ ನರೇಂದ್ರಾಣಾಂ ಸೇಂದ್ರಾಣಾಮಪಿ ಮಾನದ ॥ 10 ॥**

ಶ್ರೀಕೃಷ್ಣನೇ! ನೀನು ನಗರದಲ್ಲಾಗಲೀ ರಾಜ್ಯದಲ್ಲಾಗಲಿ ದೇಹದಲ್ಲಾಗಲೀ ಇರದಿದ್ದರೆ ಪತಿಯಿಂದ ಹೀನ ಸ್ತ್ರೀಯರಂತೆ ಸುಖವಾಗಿರಲು ಸಾಧ್ಯವಿಲ್ಲ. ನಿನ್ನಿಂದಲೇ ನಾವೆಲ್ಲರೂ ಸನಾಥರು. ನೀನಿರುವಾಗ ರಾಜರಿಗೆ ಮಾತ್ರವಲ್ಲ ದೇವೇಂದ್ರನಿಗೂ ಹೆದರಲಾರೆವು. ಆದ್ದರಿಂದ ನೀನು ವಿಜಯಗಳಿಸಲು ಎಲ್ಲೆಲ್ಲಿ ಹೋಗುವೆಯೋ ಆ ಎಲ್ಲ ಸ್ಥಳಗಳಿಗೂ ನಿನ್ನೊಂದಿಗೆ ನಮ್ಮನ್ನೂ ಕರೆದೊಯ್ಯಬೇಕು ಎಂದಾಗ ಹಾಗೆ ಆಗಲಿ ಎಂದನು. ಸೂರ್ಯನು ಮುಳುಗುತ್ತಿರುವ ವೇಳೆಗೆ ಕೃಷ್ಣನು ಕುಂಡಿನಪುರ ಸೇರಿದನು.

ಕುಂಡಿನಪುರದಲ್ಲಿ ನೂರಾರು ಶಿಬಿರಗಳನ್ನು ಹಾಕಲಾಗಿತ್ತು. ಶ್ರೀಕೃಷ್ಣನು ಅಲ್ಲಿದ್ದ ರಾಜರನ್ನು ಭಯಪಡಿಸಲು ತನ್ನ ಸಾಮರ್ಥ್ಯ ತೋರಿಸಲು ತನ್ನ ವಾಹನವಾದ ಗರುಡನನ್ನು ನೆನೆದನು. ಸ್ಮರಣೆ ಮಾತ್ರದಿಂದಲೇ ಅಲ್ಲಿಗೆ ಬಂದ ಗರುಡನು ತನ್ನ ರೆಕ್ಕೆ ಬಡಿತದಿಂದಲೇ ರಾಜರೆಲ್ಲರನ್ನು ಅಧೋಮುಖವಾಗಿ ಬೀಳಿಸಿಬಿಟ್ಟನು. ಸರ್ಪಗಳಂತೆ ಭೂಮಿಯಲ್ಲಿ ಹೊರಳಾಡುತ್ತಿದ್ದರು. ಶ್ರೀಕೃಷ್ಣನು ಮಾತ್ರ ಪರ್ವತದಂತೆ ಅಚಲವಾಗಿದ್ದನು. ಗರುಡನು ಬಂದದ್ದನ್ನು ನೋಡಿ ಶ್ರೀಕೃಷ್ಣನು –

### ಗರುಡನಿಗೆ ಸ್ವಾಗತ

**ಸ್ವಾಗತಂ ಖೇಚರಶ್ರೇಷ್ಠ ಸುರಸೇನಾರಿಮರ್ದನ ।**
**ವಿನತಾಹೃದಯಾನಂದ ಸ್ವಾಗತಂ ಕೇಶವಪ್ರಿಯ ॥ 11 ॥**

**ವ್ರಜ ಪತ್ರರಥಶ್ರೇಷ್ಠ ಕೈಶಿಕಸ್ಯ ನಿವೇಶನಮ್ ।**
**ವಯಂ ತತ್ರೈವ ಗತ್ವಾದ್ಯ ಪ್ರತೀಕ್ಷಾಮಃ ಸ್ವಯಂವರಮ್ ॥ 12 ॥**

ಪಕ್ಷಿಶ್ರೇಷ್ಠ **ಗರುಡ**[2]. ಕೇಶವ ಪ್ರಿಯನಾದ ನಿನಗೆ ಸ್ವಾಗತವು. ನೀನಿಗಲೇ ಕೈಶಿಕರಾಜನ ಅರಮನೆಗೆ ಹೋಗು. ನಾವೂ ಕೂಡ ಅಲ್ಲಿಗೆ ಬಂದು ಸ್ವಯಂವರ ನೋಡುತ್ತಿರುತ್ತೇವೆ. ಅಲ್ಲಿ ನಾವು ಗಜಾಶ್ವರಥಗಳಲ್ಲಿ ಬಂದು ನೆರೆದಿರುವ ರಾಜರೆಲ್ಲರನ್ನು ನೋಡಬಹುದು. ಹೀಗೆ ವೈನತೇಯನಿಗೆ ಹೇಳಿ ತಾನೂ ಯಾದವರೊಂದಿಗೆ ಕುಂಡಿನಪುರದಲ್ಲಿರುವ ಕೈಶಿಕನ ಅರಮನೆಗೆ ಹೊರಟನು.

## ಕೈಶಿಕನ ಆದರಾತಿಥ್ಯ

**ಕೈಶಿಕಸ್ತತ ಉತ್ಥಾಯ ಪ್ರಹೃಷ್ಟೇನಾಂತರಾತ್ಮನಾ ।**
**ಅರ್ಘ್ಯಾಚಮನಂ ದತ್ವಾ ಸ ರಾಜಾ ಕೈಶಿಕಃ ಸ್ವಯಮ್ ॥ 13 ॥**
**ಸತ್ಕೃತ್ಯ ವಿಧಿವತ್ ಕೃಷ್ಣಂ ಸ್ವಪುರಂ ಸಂಪ್ರವೇಶಯತ್ ।**
**ಪೂರ್ವಮೇವ ತು ಕೃಷ್ಣಾಯ ಕಾರಿತಂ ದಿವ್ಯಮಂದಿರಮ್ ॥ 14 ॥**
**ವಿವೇಶ ಸಬಲಃ ಶ್ರೀಮಾನ್ ಕೈಲಾಸಂ ಶಂಕರೋ ಯಥಾ ।**
**ಪೂಜಿತೋ ಬಹುಮಾನೇನ ಸ್ನೇಹಪೂರ್ಣೇನ ಚೇತಸಾ ॥ 15 ॥**

ಶ್ರೀಕೃಷ್ಣನು ಬರುತ್ತಿದ್ದಂತೆಯೇ ಕೃಷ್ಣಭಕ್ತನಾದ ಕೈಶಿಕ ರಾಜನು ಸಂತೋಷದಿಂದ ಎದ್ದು ಬಂದು ಶ್ರೀಕೃಷ್ಣನನ್ನು ಅರ್ಘ್ಯ-ಪಾದ್ಯಾಚಮನಾದಿಗಳನ್ನು ನೀಡಿ ಸ್ವಾಗತಿಸಿದನು. ಈ ಹಿಂದೆಯೆ ಶ್ರೀಕೃಷ್ಣನಿಗಾಗಿ ಕುಂಡಿನಪುರದಲ್ಲಿ ದಿವ್ಯವಾದ ಅರಮನೆಯನ್ನು ವಾಸಕ್ಕಾಗಿ ಕಲ್ಪಿಸಲಾಗಿತ್ತು. ಕೈಶಿಕನು ಅರಮನೆಯಲ್ಲಿ ನಾನಾವಿಧ ಖಾದ್ಯ ಪಾನೀಯಗಳಿಂದಲೂ ಸತ್ಕಾರ ಮಾಡಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕೈಶಿಕನ ಸತ್ಕಾರವೆಂಬಲ್ಲಿ
ನಲವತ್ತೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

---

2. ಗರುಡಶಕ್ತಿ :
ಪತತ್ರವಾಯುನಾಽಸ್ಯತೇ ನರೇಶ್ವರಾಃ ಪ್ರಪಾತಿತಾಃ ।
ಯದೀದೃಶಂ ಪತತ್ರಿಣೋ ಬಲಂ ಹರೇಃ ಕಿಮುಚ್ಯತೇ ॥ *–17/5*

## ವಿಷ್ಣುಪರ್ವ 48 ವಿಷ್ಣುಪರ್ವ

# ಅಥ ಅಷ್ಟಚತ್ವಾರಿಂಶೋಽಧ್ಯಾಯಃ

### ಶ್ರೀಕೃಷ್ಣನ ಆಗಮನ ರಾಜರ ಚಿಂತೆ

ತೇ ಕೃಷ್ಣಮಾಗತಂ ದೃಷ್ಟ್ವಾ ವೈನತೇಯ ಸಹಾಚ್ಯುತಮ್ ।
ಬಭೂವುಃ ಚಿಂತಯಾವಿಷ್ಟಾಃ ಸರ್ವೇ ನೃಪತಿಸತ್ತಮಾಃ ॥ 1 ॥

ತೇ ಸಮೇತ್ಯ ಸಭಾಂ ರಾಜನ್ ರಾಜಾನೋ ಭೀಮವಿಕ್ರಮಾಃ ।
ಮಂತ್ರಾಯ ಮಂತ್ರ ಕುಶಲಾಃ ನೀತಿಶಾಸ್ತ್ರಾರ್ಥ ವಿತ್ತಮಾಃ ॥ 2 ॥

ಭೀಷ್ಮಕಸ್ಯ ಸಭಾಂ ಗತ್ವಾ ರಮ್ಯಾಂ ಹೇಮಪರಿಷ್ಕೃತಾಮ್ ।
ಸಿಂಹಾಸನೇಷು ಚಿತ್ರೇಷು ವಿಚಿತ್ರಾಸ್ತರಣೇಷು ಚ ।
ನಿಷೇದುಸ್ತೇ ನೃಪವರಾಃ ದೇವಾ ದೇವಸಭಾಮಿವ ॥ 3 ॥

ಜನಮೇಜಯ ಕೇಳು! ಶ್ರೀಕೃಷ್ಣನು ಗರುಡನೊಂದಿಗೆ ಸ್ವಯಂವರಕ್ಕೆ ಬಂದದ್ದನ್ನು ನೋಡಿ ರಾಜರೆಲ್ಲರೂ ಚಿಂತಾಕ್ರಾಂತರಾದರು. ನೀತಿಶಾಸ್ತ್ರ ರಾಜಕೀಯ ತಂತ್ರ ತಿಳಿದಿದ್ದ ಆ ರಾಜರೆಲ್ಲರೂ ಮಂತ್ರಾಲೋಚನೆಗಾಗಿ ಒಂದೆಡೆಯಲ್ಲಿ ಸೇರಲು ನಿಶ್ಚಯಿಸಿದರು. ನಂತರ ರಮ್ಯವಾಗಿದ್ದ ಭೀಷ್ಮಕ ರಾಜನ ಸಭೆಗೆ ಹೋಗಿ ವಿಚಿತ್ರ ಆಸ್ತರಣಗಳಿಂದ ಕೂಡಿದ್ದ ಸಿಂಹಾಸನಗಳಲ್ಲಿ ಆಸೀನರಾದರು. ರಾಜರ ಮಧ್ಯದಲ್ಲಿ ಮಹಾಬಲಿಷ್ಠ ಜರಾಸಂಧನು ಹೀಗೆ ಹೇಳಿದನು.

ಯೋಽಸೌ ಕೃಷ್ಣ ಇತಿ ಖ್ಯಾತಃ ವಸುದೇವಸುತೋ ಬಲೀ ।
ವೈನತೇಯ ಸಹಾಯೇನ ಸಂಪ್ರಾಪ್ತಃ ಕುಂಡಿನಂ ಪುರಮ್ ॥ 4 ॥

**ಅವಶ್ಯಂ ಕುರುತೇ ಯತ್ನಂ ಕನ್ಯಾವಾಪ್ತಿರ್ಯಥಾ ಭವೇತ್ ।**
**ಪದಾತಿನೌ ಮಹಾವೀರ್ಯೌ ವಸುದೇವ ಸುತಾವುಭೌ ।**
**ಕೃತವಂತೌ ನಹಾಘೋರಂ ಭವದ್ಭಿಃ ವಿದಿತಂ ಹಿ ತತ್ ॥ 5 ॥**
**ಕನ್ಯಾರ್ಥೇ ಯತಮಾನೇನ ಗರುಡಸ್ಥೇನ ವಿಷ್ಣುನಾ ।**
**ಕಃ ಸ್ಥಾಸ್ಯತಿ ರಣೇ ತಸ್ಮಿನ್ ಅಪಿ ಶಕ್ರಃ ಸುರೈಃ ಸಹ ॥ 6 ॥**

ನೃಪಶ್ರೇಷ್ಠರೇ! ನಾನು ಹೇಳುವ ಮಾತನ್ನು ಕೇಳಿರಿ ಭೀಷ್ಮಕನೂ ಕೇಳಲಿ, ಮಹಾಬಲಿಷ್ಠನಾದ ವಸುದೇವ ಸುತನಾದ ಕೃಷ್ಣನು ಗರುಡನು ಸಹಾಯದೊಂದಿಗೆ ಈಗ ವಿವಾಹಕ್ಕಾಗಿ ಕುಂಡಿನಪುರಕ್ಕೆ ಬಂದಿರುವನು. ಅವನನ್ನು ಎದುರಿಸಬೇಕಾದರೆ ಬಲಾಬಲ ವಿಮರ್ಶೆಯಾಗಬೇಕು. ನಾವೆಲ್ಲರೂ ಪದಾತಿಗಳಾದ ಗರುಡನ ಸಹಾಯ ರಹಿತರಾದ ರಾಮಕೃಷ್ಣರಿಬ್ಬರೆ ಹೇಗೆ ಸದೆಬಡೆದರು ಎಂದು ತಿಳಿದಿರುವ ವಿಷಯವೆ. ಈಗಂತೂ ಗರುಡನೊಂದಿಗೆ ಬಂದಿದ್ದಾನೆ. ವೃಷ್ಣ ಭೋಜ ಅಂಧಕರೆಲ್ಲ ಇದ್ದಾರೆ. ಹೀಗಿರುವಾಗ ಅವರೊಂದಿಗೆ ನಾವು ಯುದ್ಧ ಮಾಡಲಾರೆವು. ಗರುಡನ ಮೇಲೆ ಕುಳಿತಿರುವ ಕನ್ಯೆಗಾಗಿ ಬಂದಿರುವ ಕೃಷ್ಣನನ್ನು ಎದುರಿಸಬಲ್ಲ ವೀರ ಯಾರಿದ್ದಾನೆ? ಇಂದ್ರನಿಗೂ ಕಷ್ಟಕರವೆ.

**ಯದಾ ಚಾಸ್ಮೈ ನಾಪಿ ಸುತಾ ಕದಾಚಿತ್ ಸಂಪ್ರದೀಯತೇ ।**
**ತತೋ ಹ್ಯಯಂ ಬಲಾದೇನಾಂ ನೇತುಂ ಶಕ್ತಃ ಸುರೈಃ ಸಹ ॥ 7 ॥**

ಭೀಷ್ಮಕನೇ! ನೀನು ನಿನ್ನ ಮಗಳನ್ನು ಅವನಿಗೆ ಧಾರೆಯೆರೆದು ಕೊಡದಿದ್ದರೆ ನಿನಗೆ ದೇವತೆಗಳ ಬೆಂಬಲವಿದ್ದರೂ ನಿನ್ನ ಮಗಳನ್ನು ಬಲಾತ್ಕಾರವಾಗಿಯಾದರೂ ಕರೆದೊಯ್ಯಲು ಸಮರ್ಥನೆ ಆಗಿರುವನು.

ಹಿಂದೊಮ್ಮೆ ಈ ಭೂಮಿಯು ತಾನೇ ಮುಳುಗಿ ಹೋಗಿ ಪಾತಾಳ ಸೇರಿತ್ತಂತೆ. ಆಗ ವರಾಹ ವೇಷ ಧರಿಸಿ ತನ್ನ ಕೋರೆದಾಡೆಯಲ್ಲಿ ಭೂಮಂಡಲವನ್ನು ಮೇಲೆ ತಂದಿತ್ತವನು ಇವನೇ,

ಹಿರಣ್ಯಕಶಿಪುವು ದೇವ ದಾನವ ಋಷಿ ಗಂಧರ್ವರಿಂದಲೂ ಅಜೇಯನು ಅವಧ್ಯನು. ಅವನಿಗೆ ಬ್ರಹ್ಮದೇವರು ಆಕಾಶ-ಭೂಮಿ, ಹಗಲು-ರಾತ್ರಿ, ಒಣಗಿದ-ಹಸಿಯ ಅಸ್ತ್ರಗಳಿಂದಲೂ, ವಧಿಸಲು ಅಸಾಧ್ಯನಾಗಿದ್ದನು. ಇವನನ್ನು ನೃಸಿಂಹರೂಪ ಧರಿಸಿ ಮಹಾವಿಷ್ಣುವು ಕೊಂದು ಹಾಕಿದನು.

ಅದಿತಿ ಕಶ್ಯಪರಲ್ಲಿ ವಾಮನನಾಗಿ ಜನಿಸಿದ ಶ್ರೀಹರಿಯು, ಸತ್ಯವೆಂಬ ಪಾಶದಿಂದ ಬಲಿಯ ಬಂಧಿಸಿ ಸುತಲಲೋಕದಲ್ಲಿರಿಸಿದನು.

ದತ್ತಾತ್ರೇಯನ ವರದಿಂದ ಸಾವಿರ ತೋಳುಗಳನ್ನು ಪಡೆದಿದ್ದ ಕಾರ್ತವೀರ್ಯಾರ್ಜುನನು ವರದಿಂದ ಮದೋನ್ಮತ್ತನಾಗಿದ್ದನು. ಜಮದಗ್ನಿ ಪುತ್ರ ಪರಶುರಾಮನಾಗಿ ಕಾರ್ತವೀರ್ಯಾರ್ಜುನನನ್ನು ಕೊಡಲಿಯಿಂದ ಕೊಂದು ಹಾಕಿದನು.

ಇಕ್ಷ್ವಾಕುವಂಶದ ದಶರಥ ಪುತ್ರ ರಾಮನಾಗಿ ಅವತರಿಸಿ ಮೂರು ಲೋಕ ಜಯಿಸಿದ್ದ ರಾವಣನನ್ನು ಸಂಹರಿಸಿದನು.

ಸತ್ಯಯುಗದಲ್ಲಿ ತಾರಾಕಾಮಯ ಸಂಗ್ರಾಮದಲ್ಲಿ ವರದಾನಗರ್ವಿತ ಕಾಲನೇಮಿಯನ್ನು ಕೊಂದು ಹಾಕಿದನು. ಈಗ ಶ್ರೀಕೃಷ್ಣನಾಗಿರುವ ವಿಷ್ಣುವು ಅನೇಕ ದೈತ್ಯರು ಹತರಾಗಿದ್ದಾರೆ. ಬಾಲಕನಾಗಿರುವಾಗಲೇ ಪ್ರಲಂಬ ಅರಿಷ್ಟ, ಧೇನುಕ, ಪೂತನೀ ಕೇಶೀ ಧುನಿಚಮೂ, ಕುವಲಯಾಪೀಡ ಆನೆ, ಚಾಣೂರ-ಮುಷ್ಟಿಕ ಹಾಗೂ ಕಂಸನೂ ಇವನಿಂದ ಕೊಲ್ಲಲ್ಪಟ್ಟಿದ್ದಾರೆ. ಇದರಿಂದ ನಾನು ಹೇಳುವುದೇನೆಂದರೆ ಶ್ರೀಕೃಷ್ಣನು ದೈತ್ಯನಾಶಕನಾದ ಶ್ರೀಮಹಾವಿಷ್ಣುವೆ ಆಗಿದ್ದಾನೆ ಎಂದು ನನ್ನ ಭಾವನೆ.

### ಜರಾಸಂಧನ ನಾರಾಯಣ ಸ್ತುತಿ

**ನಾರಾಯಣಂ ಜಗದ್ಯೋನಿಂ ಪುರಾಣಂ ಪುರುಷಂ ದ್ರುವಮ್ ।**
**ತ್ರಿವಿಕ್ರಮಂ ತ್ರಿಲೋಕೇಶಂ ತ್ರಿದಶೇಂದ್ರಾರಿನಾಶನಮ್ ॥ 8 ॥**

ನಾರಾಯಣನು ಜಗಜ್ಜನ್ಮಾದಿ ಕಾರಣನು ಪುರಾಣ ಪುರುಷನು, ಮೂರು ಪಾದದಿಂದ ಹದಿನಾಲ್ಕು ಲೋಕ ಅಳೆದವನು, ಇಂದ್ರಾದಿ ದೇವತೆಗಳ ಶತ್ರುಗಳನ್ನು ಸದೆ ಬಡಿಯುವವನು. ಉತ್ಪತ್ತಿ ಸ್ಥಿತಿ ಸಂಹಾರ ಮಾಡುವವನಾದರೂ ಅವನಿಗೆ ಇದಾವುದೂ ಇರುವುದಿಲ್ಲ.

**ಕುಲೇ ಮಹತಿ ವೈ ರಾಜ್ಞಾಂ ವಿಪುಲೇ ಚಕ್ರವರ್ತಿನಾಮ್ ।**
**ಕಥಮನ್ಯಸ್ಯ ಮರ್ತ್ಯಸ್ಯ ಗರುಡೋ ವಾಹನಂ ಭವೇತ್ ॥ 9 ॥**
**ಸ್ವಯಂವರ ಕೃತೇನಾಸೌ ವಿಷ್ಣುಃ ಸ್ವಯಮಿಹಾಗತಃ ।**
**ವಿಷ್ಣೋರಾಗಮನೆ ಚೈವ ಮಹಾನ್ ದೋಷಃ ಪ್ರಕೀರ್ತಿತಃ ॥ 10 ॥**

ಈ ಮಹಾವಿಷ್ಣುವೆ ಶ್ರೀಕೃಷ್ಣನಾಗಿ ಅವತರಿಸಿದ್ದಾನೆ. ಹಾಗಿಲ್ಲವಾದರೆ ಇಷ್ಟು

ಮಂದಿ ಚಕ್ರವರ್ತಿ ರಾಜರುಗಳಿರುವಾಗ ಇವನಿಗೆ ಮಾತ್ರ ಗರುಡನು ವಾಹನವಾಗುವುದು ಹೇಗೆ? ಅದರಲ್ಲಿಯೂ ಕನ್ಯೆಗಾಗಿ ಸಾಕ್ಷಾತ್ ಜನಾರ್ದನನೆ ತನ್ನ ಪರಾಕ್ರಮ ತೋರಿಸಿ ಅವಳನ್ನು ಪಡೆಯಬೇಕೆಂದು ಬಂದಿರುವಾಗ, ನಮ್ಮಲ್ಲಿ ಯಾರಿಗೆ ತಾನೆ ಅವನ ವಾಹನ ಗರುಡನ ಮುಂದೆ ನಿಲ್ಲಬಲ್ಲರು ಹೇಳಿ? ಹೀಗಿರುವಾಗ ನಾವೆಲ್ಲ ಏನು ಮಾಡಬೇಕೆಂದು ನಿರ್ಧರಿಸಬೇಕಾಗಿದೆ.

ಈ ಮಧ್ಯದಲ್ಲಿ ಸುನೀಥನೆಂಬ ನಾಮಾಂತರವುಳ್ಳ ಶಿಶುಪಾಲನು ಎದ್ದು ನಿಂತು ಹೀಗೆಂದನು.

*ಸುನೀಥ ಉವಾಚ–*

**ಸಮ್ಯಗಾಹ ಮಹಾಬಾಹುಃ ಮಗಧಾದಿಪತಿಃ ನೃಪಃ ।**
**ಸಮಕ್ಷಂ ನರ ದೇವಾನಾಂ ಯಥಾವೃತ್ತಂ ಮಹಾಹವೇ ॥ 11 ॥**

**ಗೋಮಂತೇ ರಾಮಕೃಷ್ಣಾಭ್ಯಾಂ ಕೃತಂ ಕರ್ಮ ಸುದುಷ್ಕರಮ್ ।**
**ನಿರ್ದಗ್ಧಾ ಮಹತೀ ಸೇನಾ ಚಕ್ರಲಾಂಗಲವಹ್ನಿನಾ ॥ 12 ॥**

ರಾಜರೇ! ಮಗಧರಾಜ ವಿಷಯವನ್ನು ಅದ್ಭುತವಾಗಿ ನಿರೂಪಿಸಿದ್ದಾನೆ. ಗೋಮುತದ ಸಮೀಪ ನಡೆದ ಭಯಂಕರ ಯುದ್ಧದಲ್ಲಿ ಇಬ್ಬರೆ ಪದಾತಿಗಳಾಗಿ ಎಂತಹ ದುಷ್ಕರ ಕಾರ್ಯ ಮಾಡಿರುವರು ಎಂದು ಎಲ್ಲರಿಗೂ ಅನುಭೂತ ವಿಷಯವಾಗಿದೆ. ಚತುರಂಗ ಬಲವನ್ನು ಚಕ್ರ–ಲಾಂಗಲ ಎರಡೆಗಳಿಂದ ಭಸ್ಮ ಮಾಡಿರುವರು.

ಇನ್ನು ಗರುಡನು ಇಲ್ಲಿಗೆ ಬಂದ ಕೂಡಲೇ ಅವನ ಸಾಮರ್ಥ್ಯವೆಷ್ಟೆಂದು ನೀವೆಲ್ಲರೂ ನೋಡಿರುವಿರಿ. ರೆಕ್ಕೆಗಳ ವೇಗದಿಂದ ಮುಗ್ಗರಿಸದವನು ಯಾರಿದ್ದಾನೆ? ಸಮುದ್ರ–ಪರ್ವತಗಳೆಲ್ಲ ಕ್ಷೋಭೆ ಹೊಂದಿದವು. ಹೀಗಿರುವಾಗ ಅಂತಹ ಗರುಡನ ಮೇಲೇರಿ ಕೃಷ್ಣನು ಯುದ್ಧದಲ್ಲಿ ತೊಡಗಿದರೆ ಅವನ ಮುಂದೆ ನಿಂತು ಹೋರಾಡುವವರು ಯಾರಿದ್ದಾರೆ?

ರಾಜರಿಗೆ ಸ್ವಯಂವರವು ಆನಂದದಾಯಕ ಉತ್ಸವವೇ ಆಗಿದ್ದು ಯಶೋಧರ್ಮಗಳ ಸಿದ್ಧಿಯೂ ಆಗುವುದರಿಂದ ಸ್ವಯಂವರ ಪದ್ಧತಿ ಹಿಂದಿನವರು ತಂದರು. ಆದರೆ, ಅದೇ ಸ್ವಯಂವರದ ಸಲುವಾಗಿ ಶ್ರೀಕೃಷ್ಣನೊಂದಿಗೆ ಯುದ್ಧ ಮಾಡಬೇಕಾದ ಸಂದರ್ಭವೊದಗಿದೆ. ಆದರೆ ಸ್ವಯಂವರದಲ್ಲಿ ಯುದ್ಧ ಮಾಡುವುದು ಸರಿಯಲ್ಲವೆಂದು ನನ್ನ ಭಾವನೆ.

**ಯದಿ ಸಾ ವರಯೇದನ್ಯಂ ರಾಜ್ಞಾಂ ಮಧ್ಯೇ ನೃಪಾತ್ಮಜಾ ।**
**ಕೃಷ್ಣಸ್ಯ ಭುಜಯೋಃ ವೀರ್ಯಂ ಕಃ ಪುಮಾನ್ ಪ್ರಸಹಿಷ್ಯತಿ ॥ 13 ॥**
**ಕೃಷ್ಣಸ್ಯಾಗಮನಂ ಚೈವ ನೃಪಾಣಾಮತಿಗರ್ಹಿತಮ್ ।**
**ಕನ್ಯಾಹೇತೋಃ ನರೇಂದ್ರಾಣಾಂ ಯಥಾ ವದತಿ ಮಾಗಧಃ ॥ 14 ॥**

ಈ ಸ್ವಯಂವರದಲ್ಲಿ ಯುದ್ಧವಾಗುವ ಪ್ರಸಂಗವಿದೆ. ಶ್ರೀಕೃಷ್ಣನು, ನಮ್ಮೆಲ್ಲರಂತೆ ಸ್ವಯಂವರಕ್ಕೆ ಆಗಮಿಸಿದ್ದಾನೆ. ಇವನು ಇಲ್ಲಿಗೆ ಬಂದಿರುವುದೆಂದರೆ ನಮ್ಮೆಲ್ಲರೂ ತಿರಸ್ಕಾರವೇ ಎಂದು ನನ್ನ ಭಾವನೆ

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ರುಗ್ಮಿಣೀ ಸ್ವಯಂವರ ಪ್ರಸ್ತಾಪದಲ್ಲಿ ಸುನೀಥನ ಭಾಷಣವೆಂಬ
ನಲವತ್ತೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಏಕೋನಪಂಚಾಶತ್ತಮೋಽಧ್ಯಾಯಃ

## ದಂತವಕ್ತ್ರ – ಶಾಲ್ವನ ಭಾಷಣ

**ಏವಮುಕ್ತೇ ವಚನೇ ಸುನೀಥೇನ ಮಹಾತ್ಮನಾ ।**
**ಕರೂಷಾಧಿಪತಿರ್ವೀರೋ ದಂತವಕ್ತ್ರೋಽಭ್ಯಭಾಷತ ॥ 1 ॥**
**ಯದುಕ್ತಂ ಮಾಗಧೇನಾತ್ರ ಸುನೀಥೇನ ನರಾಧಿಪಾಃ ।**
**ಯುಕ್ತ ಪೂರ್ವಮಹಂ ಮನ್ಯೇ ಯದಸ್ಮಾಕಂ ವಚೋಹಿತಮ್ ॥ 2 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ! **ಸುನೀಥ**[1] ಶಿಶುಪಾಲನು ಹೀಗೆ ಹೇಳಿದ ಮೇಲೆ ಅವನ ತಮ್ಮ ದಂತವಕ್ತ್ರನು ತನ್ನ ಅಭಿಪ್ರಾಯ ಹೀಗೆ ಹೇಳಿದನು. ನರಾಧಿಪರೇ! ಜರಾಸಂಧ ಹಾಗೂ ಶಿಶುಪಾಲನು ಹೇಳಿದ ಮಾತು ಯುಕ್ತಿಯುಕ್ತವಾಗಿದೆ.

**ನ ಚ ವಿದ್ವೇಷಣೇನಾಹಂ ನ ಚಾಹಂಕಾರವಾದಿನಾ ।**
**ನ ಚಾತ್ಮ ವಿಜಿಗೀಷುತ್ವಾದ್ ದೂಷಯಾಮಿ ವಚೋಽಮೃತಮ್ ॥ 3 ॥**

---

1. **ಸುನೀಥ:**
   ಸುನೀಥನೆಂದರೆ ಯಾರೆಂದು ಸ್ಪಷ್ಟವಾಗುವುದಿಲ್ಲ. ಮಹಾಭಾರತದಲ್ಲಿ ಸುನೀಥನೆಂದು ಶಿಶುಪಾಲನಿಗೆ ನಾಮಾಂತರವಿತ್ತೆಂದು ತೋರುತ್ತದೆ.
   **ಜನ್ಮಪ್ರಭೃತಿ ವೃಷ್ಣೀನಾಂ ಸುನೀಥಃ ಶತ್ರುರಬ್ರವೀತ್ ।** – *ಮ.ಭಾ.ಸಭಾ 39–54*
   ಶ್ರೀಮದಾಚಾರ್ಯರೂ–
   **ಅಥಾಹ ಚೇದಿಭೂಪತಿಃ ಸದಂತವಕ್ರಕೋವಚ ।**
   **ಪುರಾ ಹರೇರ್ಹಿ ಪಾರ್ಷದಃ ಪ್ರಸನ್ನ ಬುದ್ಧಿರೇಕದಾ ॥** –*ತಾ.ನಿ. 17/11*

**ಯಥಾಽಽಗತಾಃ ವಯಂ ಸರ್ವೇ ಕೃಷ್ಣೋಽಪೀಹ ತಥಾಗತಃ ।**
**ಕಿಮತ್ರ ದೋಷೋ ಗೌಣ್ಯೋ ವಾ ಕನ್ಯಾಹೇತೋಃ ಸಮಾಗತಾಃ ॥ 4 ॥**

ಸುನೀಥಾದಿ ಮಾತುಗಳನ್ನು ನಾನು ದ್ವೇಷ, ಅಹಂಕಾರ, ನಾನೇ ಗೆಲ್ಲವೆನೆಂಬ ಕಾರಣದಿಂದಾಗಲಿ ಅಮೃತ ಸದೃಶ ಮಾತುಗಳನ್ನು ನಿಂದಿಸುತ್ತಿಲ್ಲ. ಸಾಗರದಂತೆ ಅಗಾಧವಾಗಿರುವ ನೀತಿಶಾಸ್ತ್ರ ಸಂಹಿತೆಯಲ್ಲಿ ಹೇಳರುವ ಮಾತುಗಳನ್ನು ಬೇರೆ ಯಾರು ತಾನೇ ಹೇಳಿಯಾನು? ನನ್ನದೊಂದು ಮನವಿ. ನಾವೆಲ್ಲರೂ ಹೇಗೆ ಸ್ವಯಂವರಕ್ಕೆ ಬಂದಿರುವೆವೋ ಹಾಗೆಯೇ ಶ್ರೀಕೃಷ್ಣನೂ ಆಗಮಿಸಿದ್ದಾನೆ. ಇಲ್ಲಿ ದೋಷವಾಗಲಿ, ಗುಣವಾಗಲಿ ಏನಿದೆ?

ನಾವೆಲ್ಲರೂ ಗೋಮಂತದಲ್ಲಿ ಐಕ್ಯಮತ್ಯದಿಂದ ಪರ್ವತ ನಿರೋಧಿಸಿದೆವು. ಯುದ್ಧವಾಯಿತು. ಇದರಲ್ಲಿ ನಮ್ಮ ದೋಷವೇನಿದೆ?

**ವನವಾಸೇ ಸ್ಥಿತೌ ವೀರೌ ಕಂಸವ್ಯಾಮೋಹಹೇತುನಾ ।**
**ತಾವಾಹೂಯ ವಧಾರ್ಥೇನ ಉಭೌ ರಾಮ–ಜನಾರ್ದನೌ ॥ 5 ॥**

**ನಾಗೇನೋದ್ಧೀಪಿತೌ ವೀರೌ ಹತ್ವಾ ನಾಗಂ ವಿವೇಶತುಃ**
**ತತಃ ಸ್ವವೀರ್ಯಮಾಶ್ರಿತ್ಯ ನಿಹತೋ ರಂಗಸಾಗರೇ ॥ 6 ॥**

**ಗತಾಸುರಿವ ಚಾಸೀನೋ ಮಥುರೇಶಃ ಸಹಾನುಗಃ ।**
**ಕಿಮತ್ರ ವಿಹಿತೋ ದೋಷೋ ಯೇನಾಸ್ಮಾಭಿಃ ವಯೋಧಿಕೈಃ ।**
**ಉಪರೋಧ ಪರಾ ರಾಜನ್ ವಯಂ ಸರ್ವೇ ಸಮಾಗತಾಃ ॥ 7 ॥**

ಬಲರಾಮಕೃಷ್ಣರು ಮಥುರೆಯ ಅರಣ್ಯದಲ್ಲಿ ಸಂಚರಿಸುತ್ತಿದ್ದರು. ನಾರದರ ಮಾತಿನಂತೆ ಬೃಂದಾವನದಲ್ಲಿಯೂ ಕೆಲವು ಕಾಲ ವಾಸಿಸಿದರು. ಇವರನ್ನು ಸಂಹರಿಸಬೇಕೆಂಬ ಅಪೇಕ್ಷೆಯಿಂದ ರಾಮ–ಕೃಷ್ಣರನ್ನು ಮಥುರೆಗೆ ಕರೆಯಿಸಿ, ಕುವಲ್ಯಾಪೀಡನೆಂಬ ಆನೆಯನ್ನು ಅವರ ಮೇಲೆರಗಿಸಿದನು. ಅವರು ಅದನ್ನು ಕೊಂದುಹಾಕಿದರು. ನಂತರ ಕಂಸನನ್ನು ತನ್ನ ಬಾಹುಬಲದಿಂದ ಕೊಂದು ಹಾಕಿದ. ವಯೋಜ್ಯೇಷ್ಠರಾದ ನಮ್ಮನ್ನು ದ್ವೇಷಿಸಿದ್ದಕ್ಕಾಗಿ ನಾವೆಲ್ಲರೂ ಸೇರಿ ಮಥುರೆಯನ್ನಾಕ್ರಮಿಸಿದನು. ಭಯಗೊಂಡ ರಾಮಕೃಷ್ಣರು ಗೋಮಂತಕ ಪರ್ವತದಲ್ಲಿ ಅಡಗಿ ಕೂತರು. ಅವರನ್ನು ನಿಗ್ರಹಿಸಲು ನಾವೇನು ಚತುರಂಗ ಬಲವನ್ನು ಅವರ ಮೇಲೆ ಪ್ರಯೋಗಿಸದೆ ನಾಲ್ಕೂ ದಿಕ್ಕಿನಲ್ಲಿ ಸುತ್ತುವರೆದು ಪರ್ವತಕ್ಕೆ ಅಗ್ನಿಸ್ಪರ್ಶ ಮಾಡಿದೆವು. ಆದರೆ ಅವರು ಸತ್ತರೆಂದು ತಿಳಿದೆವು.

ಆದರೆ ಅವರು ತಪ್ಪಿಸಿಕೊಂಡು ನಮ್ಮೊಂದಿಗೆ ಯುದ್ಧಕ್ಕೆ ಬಂದರೆ ನಾವು ಜನಾರ್ದನನ್ನೇಕೆ ದೂಷಿಸಬೇಕು. ಹಾಗೆಯೆ ನಾವೇಕೆ ದೋಷಿಗಳಾಗಿರುತ್ತೇವೆ?

### ಶ್ರೀಕೃಷ್ಣನೊಂದಿಗೆ ಸ್ನೇಹ ಬೆಳೆಸೋಣ

**ಯತ್ರ ಯತ್ರ ಪ್ರಯಾಸ್ಯಾಮೋ ವಯಂ ತತ್ರ ಭವೇತ್ ಕಲಿಃ ।**
**ಪ್ರೀತ್ಯರ್ಥೇ ಪ್ರಯತಿಷ್ಯಾಮಃ ಕೃಷ್ಣೇನ ಸಹ ಭೂಮಿಪಾಃ ॥ 8 ॥**

**ಇದಂ ಕುಂಡಿನಪುರಂ ಕೃಷ್ಣೋ ನಾಗತಃ ಕಲಿಹೇತುನಾ ।**
**ಕನ್ಯಾ ನಿಮಿತ್ತಾಗಮನೇ ಕಸ್ಯ ಯುದ್ಧಂ ಪ್ರಯಚ್ಛತಿ ॥ 9 ॥**

ಇನ್ನು ನಾವು ಕೃಷ್ಣನೊಂದಿಗೆ ವೈರವನ್ನು ಕಟ್ಟಿಕೊಂಡ ಮೇಲೆ ನಾವೆಲ್ಲ ಎಲ್ಲೆಲ್ಲಿ ಹೋಗುತ್ತೇವೆಯೋ ಅಲ್ಲಲ್ಲಿ ಕಲಹ ಆಗಿಯೇ ತೀರುತ್ತದೆ. ಆದ್ದರಿಂದ ನಾವೆಲ್ಲರೂ ಶ್ರೀಕೃಷ್ಣನನ್ನು ದ್ವೇಷಿಸುವುದನ್ನು ಬಿಟ್ಟು ಪ್ರೀತಿಸೋಣ.

ಇದಲ್ಲದೆ, ಶ್ರೀಕೃಷ್ಣನು ಕನ್ಯಾರ್ಥಿಯಾಗಿ ಸ್ವಯಂವರಕ್ಕೆ ಬಂದಿರುತ್ತಾನೆ. ಹೊರತು ಯುದ್ಧ ಮಾಡುವುದಕ್ಕಲ್ಲ. ಯುದ್ಧದ ಪ್ರಸಂಗವಲ್ಲ ತಾನೆ ಇದು.

### ದಂತವಕ್ರನ ಹರಿ ಸೌಹಾರ್ದತೆ

**ಮರ್ತ್ಯೇಽಸ್ಮಿನ್ ಪುರುಷೇಂದ್ರೋಽಸೌ ನ ಕಶ್ಚಿತ್ ಪ್ರಾಕೃತೋ ನರಃ ।**
**ದೇವಲೋಕೇಷು ದೇವೇಷು ಪ್ರವರಃ ಪುರುಷೋತ್ತಮಃ ॥ 10 ॥**

**ದೇವಾನಾಮಪಿ ಕರ್ತಾಸೌ ಲೋಕಾನಾಂ ಚ ವಿಶೇಷತಃ ।**
**ನ ಚೈವ ಬಾಲಿಶಾ ಬುದ್ಧಿಃ ನ ಚೇರ್ಷ್ಯಾ ನಾಪಿ ಮತ್ಸರಃ ॥ 11 ॥**

**ನ ಸ್ತಬ್ಧೋನ ಕೃಶೋ ನಾರ್ತಃ ಪ್ರಣತಾರ್ತಿಹರಃ ಸದಾ ।**
**ಏಷ ವಿಷ್ಣು ಪ್ರಭುರ್ದೇವಃ ದೇವಾನಾಮಪಿ ದೈವತಮ್ ॥ 12 ॥**

ಶ್ರೀಕೃಷ್ಣನು ಸಾಧಾರಣ ಮಾನವನೆಂದು ತಿಳಿಯಬೇಡಿರಿ. ಚತುರ್ದಶ ಭುವನದಲ್ಲಿಯ ಪುರುಷೋತ್ತಮನಾಗಿರುವನು. ದೇವತೆಗಳಿಗೂ ದೇವತೆಯು, ದೇವತೆ ಹಾಗೂ ಲೋಕಗಳ ಸೃಷ್ಟಿಕರ್ತನು. ಇವನೇನು ಮೂರ್ಖನಲ್ಲ, ಅಸೂಯ, ಮತ್ಸರ, ಕಠೋರತೆ ಇವನಲ್ಲಿಲ್ಲ. ದುರ್ಬಲನೂ, ರೋಗ ಶೋಕ ಪೀಡಿತನೂ ಆಗದೆ ಶರಣು ಬಂದವರ ದುಃಖ ಪರಿಹಾರಕನು.

ಶ್ರೀಕೃಷ್ಣನು ನಿಜವಾಗಲೂ ಸಾಮರ್ಥ್ಯಶಾಲಿಯಾದ ಮಹಾವಿಷ್ಣುವೆ

ಆಗಿರುವನು. ನಮಗಿಬ್ಬರಿಗೂ ಕೃಷ್ಣನನ್ನು ನೋಡಿದಾಗ ಕೆಲವೊಮ್ಮೆ ಮಹಾಭಕ್ತಿವುಂಟಾಗುತ್ತದೆ. ಸುಖಾರ್ಥಿಗಳಾದ ನಾವು ಶತ್ರುತ್ವ ತೊರೆದು ಅವನನ್ನು ಸೇರೋಣ.

## ಶ್ರೀಹರಿಗೆ ಅರ್ಘ್ಯ ಪಾದ್ಯಾಚಮನ ನೀಡೋಣ

**ಇಮಾಂ ಯಾತ್ರಾಂ ವಿಜಾನೀಧ್ವಂ ಪ್ರೀತ್ಯರ್ಥಂ ಹ್ಯಾಗತೋ ಹರಿಃ ।**
**ಸಹಿತೋ ಯಾದವೇಂದ್ರೈಶ್ಚ ಭೋಜವೃಷ್ಣ್ಯಂಧಕೈರಿಹ ॥ 13 ॥**

**ಅರ್ಘ್ಯಮಾಚಮನಂ ದತ್ತ್ವಾ ಆತಿಥ್ಯಂ ಚ ನರಾಧಿಪಾಃ ।**
**ಕರಿಷ್ಯಾಮೋ ವಯಂ ಸರ್ವೇ ಕೇಶವಾಯ ಮಹಾತ್ಮನೇ ॥ 14 ॥**

**ಏವಂ ಸಂಧಾನತಃ ಕೃತ್ವಾ ಕೃಷ್ಣೇನ ಸಹಿತಾ ವಯಮ್ ।**
**ವಸಾಮೋ ವಿಗತೋದ್ವೇಗಾಃ ನಿರ್ಭಯಾಃ ವಿಗತಜ್ವರಾಃ ॥ 15 ॥**

ಶ್ರೀಹರಿಯು ಯಾದವ, ಭೋಜ, ವೃಷ್ಣಿಗಳೊಂದಿಗೆ ಬಂದಿರುವುದು ಶತ್ರುಗಳ ನಾಶಕ್ಕಾಗಿಯಾದರೂ ಈ ಉತ್ಸವ ಸಮಯದಲ್ಲಿ ಅವರೊಂದಿಗೆ ಬಂದಿರುವುದು ತನ್ನ ವೈಶಿಷ್ಟ್ಯ ತೋರಲಷ್ಟೆ. ಕೀರ್ತಿ ಸಂಪಾದನೆಗಾಗಿಯೆಂದೆ ತಿಳಿಯಿರಿ.

ಆದ್ದರಿಂದ ನಾವೆಲ್ಲರೂ ಶ್ರೀಕೃಷ್ಣ ಪರಮಾತ್ಮನಿಗೆ ಅರ್ಘ್ಯ ಪಾದ್ಯ ಆಚಮನಾದಿಗಳಿಂದ ಅತಿಥಿಸತ್ಕಾರ ಮಾಡೋಣ. ಹೀಗೆ ಅವನೊಂದಿಗೆ ನಾವು ಸಂಧಿ ಮಾಡಿಕೊಂಡರೆ ಉದ್ವೇಗ ಭಯ ಯಾವುದೂ ಇಲ್ಲದೆ ಸುಖವಾಗಿರಬಹುದು ಎಂದನು.

## ಶಾಲ್ವನ ಪ್ರತಿವಚನ

**ಕಿಂ ಭಯೇನಾಸ್ಯ ನಃ ಸರ್ವೇ ನ್ಯಸ್ತಶಸ್ತ್ರಾ ಭವಾಮಹೇ ।**
**ಸಂಧಾನಕರಣಾದ್ ಹೇತೋಃ ಕೃಷ್ಣಸ್ಯ ಭಯಕಂಪಿತಾಃ ॥ 16 ॥**

ಧೀಮಂತನಾದ ದಂತವಕ್ತ್ರನ ಮಾತುಗಳನ್ನು ಕೇಳಿ ವಾಗ್ಮಿಯಾದ ಶಾಲ್ವನು ಹೀಗೆಂದನು. ಕೃಷ್ಣನ ಭಯದಿಂದ ಕಂಪಿಸುತ್ತಾ ಅವನೊಡನೆ ಸಂಧಿ ಮಾಡಿಕೊಳ್ಳಬೇಕೆಂಬ ಕಾರಣದಿಂದ ನಾವೆಲ್ಲರೂ ಅಸ್ತ್ರ ಸನ್ಯಾಸ ಮಾಡಬೇಕೆ? ನಮ್ಮ ಸಾಮರ್ಥ್ಯವನ್ನು ನಾವೆ ನಿಂದಿಸುತ್ತಾ ಇತರರನ್ನು ಸ್ತುತಿ ಮಾಡುವುದು

ನಮ್ಮಂತಹ ವೀರರಿಗೆ ಉಚಿತವಾಗುವುದಿಲ್ಲ. ದೊಡ್ಡ ವಿಶಾಲರಾಜವಂಶದಲ್ಲಿ ಜನ್ಮವೆತ್ತಿದ ನಿಮಗೆ ಈಗ ಹೇಡಿತನ ಹೇಗೆ ನಿಮ್ಮನ್ನು ಪ್ರವೇಶಿಸಿತು?

**ಅಹಂ ಜಾನಾಮಿ ವೈ ಕೃಷ್ಣಮಾದಿದೇವಂ ಸನಾತನಮ್ ।**
**ಪ್ರಭುಂ ಸರ್ವಾಮರೇಂದ್ರಾಣಾಂ ನಾರಾಯಣ ಪರಾಯಣಮ್ ॥ 17 ॥**
**ಸಂಭೂತಂ ದೇವಕೀಗರ್ಭಂ ವಿಷ್ಣುಂ ಲೋಕನಮಸ್ಕೃತಮ್ ।**
**ಕಂಸರಾಜವಧಾರ್ಥಾಯ ಭಾರಾವತರಣಾಯ ಚ ।**
**ಅಸ್ಮಾಕಂ ಚ ವಿನಾಶಾಯ ಲೋಕಸಂರಕ್ಷಣಾಯ ಚ ॥ 18 ॥**

ಶ್ರೀಕೃಷ್ಣನು ದೇವಾಧಿ ದೇವನೆಂದೂ, ಅನಾದಿ ಪುರುಷನೆಂದೂ, ಸರ್ವಾಶ್ರಯನೆಂದೂ ನನಗೂ ತಿಳಿದಿದೆ. ಸರ್ವರಿಂದಲೂ ಅಜೇಯನೂ, ಸ್ಥಾವರ ಜಂಗಮಾತ್ಮಕ ಪ್ರಪಂಚಕ್ಕೆ ಜ್ಞಾನೋಪದೇಶಕನೆಂದೂ, ಸರ್ವಲೋಕ ನಮಸ್ಕೃತ ವಿಷ್ಣುವೇ ಕಂಸನ ವಧಕ್ಕಾಗಿಯೂ, ಭೂಭಾರಹರಣಕ್ಕಾಗಿಯೂ ನಮ್ಮಂತಹ ಕೌರವಾದಿ ದುಷ್ಟನಾಶಕ್ಕಾಗಿಯೂ ಪಾಂಡವರಂತೆ ಸಜ್ಜನರ ಉದ್ಧಾರಕ್ಕಾಗಿಯೂ, ಲೋಕ ಸಂರಕ್ಷಣೆಗಾಗಿಯೂ ದೇವಕೀ ದೇವಿಯಲ್ಲಿ ಅವತರಿಸಿರುವನೆಂದೂ ತಿಳಿದಿದೆ.

ಅಷ್ಟೇ ಅಲ್ಲ. ಈ ಅಂಶಾವತಾರದಲ್ಲಿ ಏನೇನು ಘನಕಾರ್ಯ ಮಾಡುವನೆಂದೂ ತಿಳಿದಿದೆ. ರಾಜನೇ! ನಾವೆಲ್ಲರೂ ವಿಷ್ಣುವಿನೊಂದಿಗೆ ಹೋರಾಡಿ ಅವನ ಚಕ್ರದಿಂದ ದಗ್ಧಗಾತ್ರರಾಗಿ ಪವಿತ್ರರಾಗಿ ಯಮಲೋಕಕ್ಕೆ ಹೋಗೋಣ. ಸದಾ ಸ್ಥಿರವಾಗಿ ಹರಿಯನ್ನು ದ್ವೇಷಿಸುವುದು ನಮ್ಮ ಧರ್ಮ. ನಮ್ಮ ಧರ್ಮದಲ್ಲಿದ್ದು ಸತ್ತರೂ ಸ್ವರ್ಗವೆ ಎಂದಾಗ ಜರಾಸಂಧ ಪ್ರಶಂಸಿಸಿದ.

ಕಾಲಕಳೆದಂತೆ ಆಯುಸ್ಸು ಕ್ಷೀಣವಾಗುತ್ತಿರುತ್ತದೆ. ತನ್ನ ಕರ್ಮ ಮುಗಿಯದೆ ಅಕಾಲದಲ್ಲಿ ಸಾಯುವುದಿಲ್ಲವೆಂದೂ, ಕಾಲಬಂದಾಗ ನಿಮಿಷ ಮಾತ್ರ ಇಲ್ಲಿರಲಾರನೆಂದೂ ನನಗೆ ತಿಳಿದಿದೆ. ಹೀಗೆ ತತ್ವ ತಿಳಿದ ಯಾವುದೇ ವ್ಯಕ್ತಿಯು ಯಾರಿಗೂ ಭಯಪಡಬೇಕಿಲ್ಲ ವಿಷ್ಣುವೆ ತಪಸ್ಸಿನ ಜಲಕ್ಷೀಣವಾದಾಗ ಸಂಹರಿಸುತ್ತಾನೆ. ಮಹಾಬಲಿಷ್ಠನಾದ ಬಲಿಚಕ್ರವರ್ತಿಯನ್ನು ಬಂಧಿಸಿ ಸುತಲಲೋಕಕ್ಕೆ ಇಳಿಸಲಿಲ್ಲವೆ?

ಹೀಗಿರುವಾಗ ಶ್ರೀಕೃಷ್ಣನೊಂದಿಗೆ ಈ ಸಮಯದಲ್ಲಿ ಯುದ್ಧದ ಯೋಚನೆ ಮಾಡು ಅನುಚಿತವಾಗಿದೆ. ಕೃಷ್ಣನು ಯುದ್ಧಕ್ಕೆ ಬಂದಿಲ್ಲ. ರಾಜಕನ್ಯೆಯು

ಯಾರ ಕೊರಳಿಗೆ ಮಾಲೆ ಹಾಕುವಳೋ ಅವನೊಂದಿಗೆ ಸೇರುತ್ತಾಳೆ. ಇದಕ್ಕೆ ಕಲಹವ್ಯಾತಕೆ? ರಾಜರಲ್ಲಿ ಪರಸ್ಪರ ಪ್ರೀತಿಯುಂಟಾಗಲೀ ಎಂದನು.

### ಭೀಷ್ಮಕರಾಜನ ಮೌನ

**ಏವಂ ಕಥಯಮಾನಾನಾಂ ನೃಪಾಣಾಂ ಬುದ್ಧಿಶಾಲಿನಾಮ್ ।**
**ನ ಕಿಂಚಿದಬ್ರವೀತ್ ರಾಜಾ ಭೀಷ್ಮಕಃ ಪುತ್ರಕಾರಣಾತ್ ॥ 19 ॥**

**ಮಹಾವೀರ್ಯಮದೋತ್ಸಿಕ್ತಂ ಭಾರ್ಗವಾಸ್ತ್ರಾಭಿರಕ್ಷಿತಮ್ ।**
**ರಣಪ್ರಚಂಡಾತಿರಥಂ ವಿಚಿಂತ್ಯ ಮನಸಾ ಸುತಮ್ ॥ 20 ॥**

ಮಹಾಮೇಧಾವಿ ರಾಜರುಗಳೆಲ್ಲ ಹೀಗೆ ತಮ್ಮ ಅಭಿಪ್ರಾಯವನ್ನು ತಿಳಿಸುತ್ತಿದ್ದರೂ ಭೀಷ್ಮಕರಾಜನೂ ಮಾತ್ರ – ತನ್ನ ಅಭಿಪ್ರಾಯವನ್ನು ಹೇಳಲು ಮುಂದಾಗಲ್ಲಿಲ್ಲ. ಅತಿರಥನೂ, ಮಹಾವೀರ್ಯನೂ, ಅತಿಗರ್ವಿತನೂ, ಭಾರ್ಗವಾಸ್ತ್ರ ತನ್ನಲ್ಲಿದೆಯೆಂದು ಅಹಂಕಾರಿಯೂ, ಆದ ರುಗ್ಮಿಯ ಭಯದಿಂದಾಗಿ ಅವನನ್ನು ಚಿಂತಿಸುತ್ತಲೇ ಹೀಗೆ ಹೇಳಿದನು.

**ಕೃಷ್ಣಂ ನ ಸಹತೇ ನಿತ್ಯಂ ಪುತ್ರೋ ಮೇ ಬಲದರ್ಪಿತಃ ।**
**ನಿತ್ಯಾಭಿಮಾನೀ ಚ ರಣೇ ನ ಬಿಭೇತಿ ಚ ಕಸ್ಯಚಿತ್ ॥ 21 ॥**

**ದ್ವೇಷೀ ಚೈವಾಭಿಮಾನೀ ಚ ಕುತೋ ಜೀವತಿ ಮೇ ಸುತಃ ।**
**ಜೀವಿತಂ ನಾತ್ರ ಪಶ್ಯಾಮಿ ಮಮ ಪುತ್ರಸ್ಯ ಕಾರಣಾತ್ ॥ 22 ॥**

**ಕನ್ಯಾ ಹೇತೋಃ ಸುತಂ ಜ್ಯೇಷ್ಠಂ ಪಿತೄಣಾಂ ನಂದಿವರ್ಧನಮ್ ।**
**ಕಾರಯಿಷ್ಯೇ ಕಥಂ ಯುದ್ಧಂ ಪುತ್ರೇಣ ಸಹ ಕೇಶವಮ್ ॥ 23 ॥**

ನನ್ನ ಮಗನು ಬಲದರ್ಪಿಷ್ಟನೂ, ದುರಭಿಮಾನಿಯೂ. ಕೃಷ್ಣದ್ವೇಷಿಯೂ ಯುದ್ಧದಲ್ಲಿ ಯಾರಿಗೂ ಹೆದರುವವನೂ ಅಲ್ಲ. ಶ್ರೀಕೃಷ್ಣನಂತೂ ಭುಜಪರಾಕ್ರಮದಿಂದ ಕನ್ಯೆಯನ್ನು ಅಪಹರಿಸುವುದು ನಿಶ್ಚಯ. ಇದರಿಂದಾಗಿ ದ್ವೇಷ ಯುದ್ಧ ನಡೆದೆ ತೀರುತ್ತದೆ. ಈ ಸಂದರ್ಭದಲ್ಲಿ ಕೃಷ್ಣನ ಕೈಯಲ್ಲಿ ಸಾಯುವುದು ನಿಶ್ಚಿತ. ಕನ್ಯೆಯ ಸಲುವಾಗಿ ಪಿತೃಗಳಿಗೆ ಆನಂದವನ್ನೀಯುವ ನನ್ನ ಜ್ಯೇಷ್ಠಪುತ್ರನು ಯುದ್ಧದಲ್ಲಿ ಭಾಗವಹಿಸಲು ಹೇಗೆ ಹೇಳಲಿ. ರುಗ್ಮಿಯಾದರೂ ರುಗ್ಮಿಣಿಗೆ ಶ್ರೀಕೃಷ್ಣನು ವರನಾಗುವುದನ್ನು ಹೇಗೆ ತಾನೆ ಸಹಿಸಿಯಾನು? ಹೀಗಾಗಿ ಶ್ರೀಕೃಷ್ಣನ ಚಕ್ರಾಗ್ನಿಗೆ ಹತ್ತಿರಾಶಿಯು

ಬೂದಿಯಾಗುವಂತೆ ಭಸ್ಮವಾಗುತ್ತಾನೆ. ಅತಿಬಲಿಷ್ಠನಾದ ಕೃಷ್ಣನು ಕ್ಷಣ ಮಾತ್ರದಲ್ಲಿ ಮಹಾಶೂರನಾದ ಶೃಗಾಲನನ್ನೆ ಕೊಂದು ಹಾಕಿದವನು. ಇವನಿಗೆ ರುಗ್ಮಿಯು ಯಾವ ಲೆಕ್ಕ?

## ಶ್ರೀಕೃಷ್ಣಮಹಿಮೆ – ಭೀಷ್ಮಕನಿಂದ

**ವೃಂದಾವನೇಽವಸತ್ ಶ್ರೀಮಾನ್ ಕೇಶವೋ ಬಲಿನಾಂ ವರಃ ।**
**ಉದ್ಧೃತ್ಯೈಕೇನ ಹಸ್ತೇನ ಸಪ್ತಾಹಂ ಧೃತವಾನ್ ಗಿರಿಮ್ ।**
**ಅಭಿಷಿಚ್ಯಾಬ್ರವೀತ್ ಕೃಷ್ಣಂ ಉಪೇಂದ್ರೇತಿ ಶಚೀಪತಿಃ ॥ 24 ॥**
**ಯಥಾ ವೈ ದಮಿತೋ ನಾಗಃ ಕಾಲಿಯೋ ಯಮುನಾಹ್ರದೇ ।**
**ಕೇಶೀ ಚಾಪಿ ಮಹಾವೀರ್ಯೋ ದಾನವೋ ಹಯವಿಗ್ರಹಃ ॥ 25 ॥**
**ನಿಹತೋ ವಾಸುದೇವೇನ ದೇವೈರಪಿ ದುರಾಸದಃ ।**
**ಸಾಂದೀಪಿನೀಸುತಶ್ಚೈವ ಚಿರನಷ್ಟೇ ಹಿ ಸಾಗರೇ ॥ 26 ॥**
**ದೈತ್ಯಂ ಪಂಚಜನಂ ಹತ್ವಾ ಆನೀತೋ ಯಮಮಂದಿರಾತ್ ।**
**ನ ಮಯಾ ಶ್ರುತ ಪೂರ್ವೋ ವಾ ದೃಷ್ಟಪೂರ್ವೋ ಕುತೋಽಪಿ ವಾ ।**
**ತಾದೃಶೋ ಭುವಿ ಮರ್ತ್ಯೋಽನ್ಯೋ ವಾಸುದೇವಾತ್ ಸುರೋತ್ತಮಾತ್॥27॥**

ಬಲಿಷ್ಠರಿಗೂ ಬಲಿಷ್ಠನಾದ ಶ್ರೀಕೃಷ್ಣನು ಗೋವರ್ಧನ ಗಿರಿಯನ್ನು ಎತ್ತಿ ಏಳು ದಿವಸ ಎತ್ತಿಯೆ ನಿಂತಿದ್ದನು. ಈ ಸಮಯದಲ್ಲಿ ವೃತ್ರಹಂತಕ ಇಂದ್ರದೇವನೇ ಬಂದು ಗೋವಿಂದ ಪಟ್ಟಾಭಿಷೇಕ ಮಾಡಿರುವನು.

ಯಮುನಾಹ್ರದದ ಕಾಳಿಂಗನಾಗವನ್ನು ಮಣಿಸಲ್ಲಿಲ್ಲವೆ? ದೇವತೆಗಳಿಂದಲೂ ಅಸಾಧ್ಯ ಬಲವುಳ್ಳ ಕುದುರೆಯ ಕೇಶಿಯನ್ನು ಕೊಂದು ಹಾಕಿದನಲ್ಲವೆ?

ಬಹು ಹಿಂದೆ ಸಮುದ್ರದಲ್ಲಿ ಮುಳುಗಿದ್ದ ಸಾಂದೀಪಿನೀ ಗುರುಗಳ ಮೃತಪುತ್ರನನ್ನು ತಂದು ನೀಡಲಿಲ್ಲವೆ? ಪಂಚಜನದೈತ್ಯನನ್ನು ಪಂಚತ್ವ ಹೊಂದಿಸಿ ಪಂಚಜನ್ಯ ಶಂಖ ಧರಿಸಲ್ಲಿಲ್ಲವೆ? ಗೋಮಂತ ಯುದ್ಧ ಹೇಗೆ ನಡೆಸಿದರೆಂದು ನಾವೆಲ್ಲ ಪ್ರತ್ಯಕ್ಷ ಸಾಕ್ಷಿಗಳಾಗಿರುವೆವು. ಇಂತಹ ಯುದ್ಧ ದೇವಾಸುರಯಕ್ಷೋರಕ್ಷೋ ರಾಕ್ಷಸರು ಮಾಡಿಲ್ಲ. ಇಂತಹ ಇವನ ಪರಾಕ್ರಮ ನೋಡಿ ನನ್ನ ಮನಸ್ಸು ಕಾತರಗೊಂಡಿದೆ.

ವಾಸುದೇವನ ಹೊರತಾಗಿ ಇಂತಹ ಅಮಾನುಷ ವ್ಯಕ್ತಿತ್ವವುಳ್ಳ ವ್ಯಕ್ತಿಯನ್ನು

ಈ ಪ್ರಪಂಚದಲ್ಲಿ ನೋಡಿಲ್ಲ ಕೇಳಯೂ ಇಲ್ಲ. ದಂತವಕ್ರ ಹೇಳದಂತೆ ನಾವು ಶ್ರೀಕೃಷ್ಣನನ್ನು ಮಧುರಾಲಾಪಗಳಂದ ಸಂತೋಷಗೊಳಸಿದ ನಂತರ ಯಥೋಚಿತ ವರ್ತಿಸೋಣ ಎಂದನು.

**ಇತಿ ಸಂಚಿಂತ್ಯ ಮನಸಾ ಬಲಾಬಲ ವಿನಿಶ್ಚಯಮ್ ।**
**ಗಮನಾಯ ಮತಿಂ ಚಕ್ರೇ ಪ್ರಸಾದಯಿತುಮಚ್ಯುತಮ್ ॥ 28 ॥**

ಹೀಗೆ ಭೀಷ್ಮಕನು ಮನಸ್ಸಿನಲ್ಲಿಯೆ ಬಲಾಬಲವನ್ನು ನಿಶ್ಚೈಸಿ ಶ್ರೀಕೃಷ್ಣನನ್ನು ಸಂತೋಷಪಡಿಸಲು ಅವನ ಸಮೀಪ ಹೋಗಲು ಇಚ್ಛಿಸಿದನು. ಮಂತ್ರಾಲೋಚನೆ ನಡೆಸಿ ರಾತ್ರಿ ನಿದ್ರಿಸಿದನು. ಕಳೆದು ಬೆಳಗಾದಾಗ ಪ್ರಾತರಾಹ್ನಿಕಾದಿಗಳನ್ನು ಮುಗಿಸಿದ ರಾಜರುಗಳು ತಮಗಾಗಿ ಸಿದ್ಧ ಪಡಿಸಿದ್ದ ಆಸನಗಳಲ್ಲಿ ಬಂದು ಅಲ್ಲಿ ನಡೆದ ಸಮಾಚಾರ ಅರುಹಿದರು.

**ಶ್ರುತ್ವಾ ಕೃಷ್ಣಾಭಿಷೇಕಂ ತು ಕೇಚಿದ್ ಹೃಷ್ಟಾಃ ನರಾಧಿಪಾಃ ।**
**ಕೇಚಿದ್ ದೀನತರಾಃ ಭೀತಾಃ ಉದಾಸೀನಾಃ ತಥಾ ಪರೇ ॥ 29 ॥**

**ತ್ರಿಧಾ ಪ್ರಭಿನ್ನಾ ಸಾ ಸೇನಾ ನರನಾಗಾಶ್ವಮಾಲಿನೀ ।**
**ಮಹಾರ್ಣವ ಇವ ಬಹುಧಾ ಅಭಿಷೇಕೇಣ ಚಾಲಿತಾ ॥ 30 ॥**

ಶ್ರೀಕೃಷ್ಣನಿಗೆ ಪಟ್ಟಾಭಿಷೇಕ ವಿಷಯವನ್ನು ಕೇಳ ಕೆಲವರು ಸಂತುಷ್ಟರಾದರು. ಕೆಲವರು ದುಃಖಗೊಂಡರು, ಮತ್ತೆ ಭಯಗೊಂಡರು. ಕೆಲವರು ಉದಾಸೀನತೆ ತೋರಿದರು. ಈ ಕೃಷ್ಣನಿಗೆ ಗೌರವದ ಕಾರಣವಾಗಿ ಪದಾತಿ ನಾಗ ಅಶ್ವ ರಥಗಳಂದ ಒಂದಾಗಿ ಸಮುದ್ರದಂತೆ ಅಖಂಡ ಸೇನಾಸಾಗರವು ಮೂರು ಭಾಗಗಳಾಗಿ ಒಡೆದು ಹೋದವು. ಈ ಭೇದಭಾವಕ್ಕೆ ತಾನೆ ಕಾರಣವೆಂದು ದುಃಖದಿಂದ ರಾಜರ ಸಮೂಹಕ್ಕೆ ಸಾಂತ್ವನ ಮಾಡಲು ರಾಜರಿದ್ದಲ್ಲಿಗೆ ಹೋದನು.

## ರಾಜರಿಗೆ ಇಂದ್ರದೇವರ ಸಂದೇಶ

**ಏತಸ್ಮಿನ್ನಂತರೇ ದೂತಾಃ ಸಂಪ್ರಾಪ್ತಾಃ ಕ್ರಥಕೈಶಿಕೌ ।**
**ಲೇಕಮುದ್ಧೃತ್ಯ ಶಿರಸಾ ವಿವಿಶುಃ ತೇ ನೃಪಾರ್ಣವಮ್ ॥ 31 ॥**

ಇಂದ್ರದೇವನು, ಈ ದುಷ್ಟಕೂಟವೆಲ್ಲ ಯುದ್ಧ ಮಾಡಲುದ್ಯುಕ್ತರಾದಾಗ ಚಿತ್ರಾಂಗದನೆಂಬ ಗಂಧರ್ವನ ಮೂಲಕ ಭೀಷ್ಮಕನ ಅನುಜರೂ ಪವಮಾನ-

ಶುಂಧಿ ಎಂಬ ವಕ್ಷಿ ಪುತ್ರರ ಅವತಾರವೆನಿಸಿದ ಕ್ರಥ-ಕೈಶಿಕರ ಸಮೀಪಕೆ ಲಿಖಿತ ರೂಪ ಸಂದೇಶವನ್ನು ಕಳುಹಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಇಂದ್ರದೇವ ಲಿಖಿತ ಸಂದೇಶೋನಾಮವೆಂಬಲ್ಲಿ
ನಲವತ್ತೊಂಬತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಪಂಚಾಶತ್ತಮೋಽಧ್ಯಾಯಃ

## ಕ್ರಥ ಕೈಶಿಕರ ಕೃಷ್ಣಭಕ್ತಿ – ರಾಜ ಸಮರ್ಪಣೆ

*ಜನಮೇಜಯ ಉವಾಚ –*

**ಹತ್ವಾ ಕಂಸಂ ಮಹಾವೀರ್ಯಂ ದೇವೈರಪಿ ದುರಾಸದಮ್ ।**

**ನಾಭಿಷಿಕ್ತಃ ಸ್ವಯಂ ರಾಜ್ಯೇ ನೋಪವಿಷ್ಟೋ ನೃಪಾಸನೇ ॥ 1 ॥**

**ಕನ್ಯಾರ್ಥೇ ಚಾಗತಃ ಕೃಷ್ಣಃ ತತ್ರಾಪಿ ನ ಕೃತೋಽತಿಥಿಃ ।**

**ಅಮಾನಮತುಲಂ ಪ್ರಾಪ್ಯ ಕ್ಷಾಂತವಾನ್ ಕೇನ ಹೇತುನಾ ॥ 2 ॥**

ವೈಶಂಪಾಯನರೇ, ದೇವತೆಗಳಿಗೂ ದುರ್ಜಯನಾಗಿದ್ದ ಮಹಾಪರಾಕ್ರಮಿ ಕಂಸನನ್ನು ಸಂಹರಿಸಿದ ನಂತರವೂ ಶ್ರೀಕೃಷ್ಣನೂ ರಾಜ್ಯದಲ್ಲಿ ಅಭಿಷಿಕ್ತನಾಗಲ್ಲಿಲ್ಲ ಮತ್ತು ನೃಪಾಸನದಲ್ಲಿ ಕೂಡಲೂ ಇಲ್ಲ ಏಕೆ?

ಕುಂಡಿನಪುರಕ್ಕೆ ಕನ್ಯಾರ್ಥವಾಗಿ ಬಂದಿದ್ದರೂ ಅವನನ್ನು ಆಮಂತ್ರಿತ ಅತಿಥಿಯನ್ನಾಗಿ ಯಾರೂ ಪುರಸ್ಕರಿಸಲ್ಲಿಲ್ಲ. ಇಂತಹ ಅವಮಾನವನ್ನು ಹೇಗೆ ಯಾತಕ್ಕಾಗಿ ಸಹಿಸಿಕೊಂಡನು. ಗರುಡನಾದರೂ ತನ್ನ ಸ್ವಾಮಿಗಾದ ಅವಹೇಳನವನ್ನಾದರೂ ಹೇಗೆ ಸಹಿಸಿದ ಎಂದು ತಿಳಿಸಿ ಕೊಡಿ' ಎಂದ

*ವೈಶಂಪಾಯನ ಉವಾಚ–*

**ವಿದರ್ಭನಗರೀಂ ಪ್ರಾಪ್ತೇ ವೈನತೇಯೇ ಸಹಾಚ್ಯುತೇ ।**

**ಮನಸಾ ಚಿಂತಯಾಮಾಸ ವಾಸುದೇವಾಯ ಕೈಶಿಕಃ ॥ 3 ॥**

**ದೃಷ್ಟ್ವಾಽಽಶ್ಚರ್ಯಂ ಹಿ ನಃ ಸರ್ವಾನ್ ರಾಜನ್ಯಾನ್ ಪ್ರವದಾಮ್ಯಹಮ್ ।**
**ವಸುದೇವ ಸುತೇ ದೃಷ್ಟೇ ಧ್ರುವಂ ಪಾಪಕ್ಷಯೋ ಭವೇತ್ ॥ 4 ॥**

**ಕೃಷ್ಣಾತ್ ಕಮಲಪತ್ರಾಕ್ಷಾದ್ ದೇವದೇವಾದ್ ಜನಾರ್ದನಾತ್**
**ತಸ್ಯಾವಾಂ ಕಿಂ ಪ್ರದಾಸ್ಯಾವಃ ಆತಿಥ್ಯಕರಣೇ ನೃಪ ॥ 5 ॥**

**ಪಾತ್ರಮಾಸಾದ್ಯ ವೈ ರಾಜನ್ ಯಥಾ ಧರ್ಮೋ ನ ಲುಪ್ಯತೇ**
**ಏವಮನ್ಯೋನ್ಯಂ ಸಂಚಿಂತ್ಯ ಭ್ರಾತರೌ ಕ್ರಥಕೈಶಿಕೌ ॥ 6 ॥**

ವೈಶಂಪಾಯನರು ಉತ್ತರಿಸುವರು –ರಾಜನೇ, **ಕ್ರಥ–ಕೈಶಿಕರು**[1] ಸ್ವರೂಪತಃ ದೇವಾಂಶರಾದ್ದರಿಂದ ಭಕ್ತರೆ ಆಗಿದ್ದರು. ಭಕ್ತರನ್ನು ಅನುಗ್ರಹಿಸಲೆಂದೇ ಶ್ರೀಕೃಷ್ಣನು ಅಲ್ಲಿಗೆ ಬಂದಿದ್ದನು. ಕೈಶಿಕನಾದರೂ ಶ್ರೀಕೃಷ್ಣನಿಗಾಗಿ ಹೀಗೆ ಚಿಂತಿಸಿದನು.

ನಾವಿಬ್ಬರೂ ನಮ್ಮ ರಾಜ್ಯವನ್ನು ಶ್ರೀಕೃಷ್ಣನಿಗೆ ಅರ್ಪಿಸಿ ಪಟ್ಟಾಭಿಷೇಕ ಮಾಡಿದ್ದಾದರೆ, ಅದನ್ನು ನೋಡಿದ ಖಂಡಿತ ನಮ್ಮ ಪಾಪವೆಲ್ಲವೂ ಭಸ್ಮವಾಗುತ್ತದೆ.

ಹಾಗೆಯೆ ನಮ್ಮಲ್ಲಿಯೂ ಕೂಡ ಕೃಷ್ಣನಿಗೆ – ಇವರಿಬ್ಬರೂ ದುಷ್ಟ ಕೂಟ ಸೇರಿಲ್ಲವೆಂದು ವಿಶುದ್ಧ ಭಾವನೆ ಉಂಟಾಗುತ್ತದೆ. ಆದ್ದರಿಂದ ರಾಜರ ಸಮೂಹದ ಮುಂದೆಯೂ ನಾನು ಹೀಗೆ ಹೇಳುತ್ತೇನೆ. ವಸುದೇವ ಪುತ್ರ ವಾಸುದೇವನ ದರ್ಶನ ಮಾತ್ರದಿಂದಲೇ ಪಾಪನಷ್ಟವಾಗುತ್ತದೆ. ಈ ತತ್ತ್ವವನ್ನು

---

1. ಕ್ರಥ–ಕೈಶಿಕರು :
ಭೀಷ್ಮಕನ ಅನುಜರು ಪವಮಾನ–ಶುಂಧಿ ಎಂಬ ಅಗ್ನಿಯ ಪುತ್ರರು. ಶ್ರೀಕೃಷ್ಣ ಅವಮಾನ ಮಾಡಲು ಹವಣಿಸಿದಾಗ ಇದರಿಂದ ಖತಿಗೊಂಡ ಕ್ರಥ ಕೈಶಿಕರು ತಮ್ಮ ರಾಜ್ಯವನ್ನೆ ನೀಡಲು ಮುಂದಾದರು. ಇದರಿಂದ ರಾಜನಲ್ಲದವನಿಗೆ ರಾಜನ ಸಿಂಹಾಸನವೇತಕ್ಕೆ ಆದ್ದರಿಂದ ಸಿಂಹಾಸನವನ್ನೆ ಹಾಕದಿದ್ದರೆ ಅವಮಾನಿತನಾಗಿ ಹೊರಟು ಹೋಗುತ್ತಾನೆ ಎಂದು ಅವರ ದುರಾಲೋಚನೆ. ಭೀಷ್ಮಕನಿಗೂ ಇದು ಇಷ್ಟವಾಗಲಿಲ್ಲ. ಅದಕ್ಕಾಗಿ ಕೃಷ್ಣನಿಗೆ ತಂಗಲು ಬೇರೆಯೇ ಒಂದು ಮನೆ ಕಟ್ಟಿಸಿದ ಕಥ ಕೈಶಿಕರು ಇವರ ದುರಾಲೋಚನೆಯನ್ನು ಕೃಷ್ಣನಿಗೆ ಹೇಳಿದರು.
ಪ್ರಣಮ್ಯ ಪಾದ ಪದ್ಮಯೋ ನಿಜಂ ಗೃಹಂ ಪ್ರವೇಶ್ಯ ಚ ।
ಮಹಾಸನಂ ಪ್ರದಾಯ ತೌ ಪ್ರಚಕ್ರತುಃ ವರಾಸನಮ್ ॥ –*ತಾ.ನಿ. 17/31*

ನಾವಿಬ್ಬರೂ ಸಾಕ್ಷಾತ್ಕಾರ ಮಾಡಿಕೊಂಡಿದ್ದೇವೆ. ಆದ್ದರಿಂದ ಶ್ರೀಕೃಷ್ಣನಿಗಿಂತ ಪಾತ್ರತಮರು ಬೇರೆ ಯಾರಿದ್ದಾನೆ. ತ್ರಿಲೋಕದಲ್ಲಿಯೂ ದುರ್ಲಭವೆ. ನಾವಿಬ್ಬರೂ ಅತಿಥಿ ಸತ್ಕಾರ ಸಮಯದಲ್ಲಿ ಏನನ್ನು ಅರ್ಪಿಸೋಣ? ಏನನ್ನು ನೀಡಿದರೆ ಸತ್ಪಾತ್ರ ಲಭಿಸಿದಾಗ ಸರಿಯಾಗಿ ಗೌರವಿಸದ ಕಾರಣ ನಮಗೆ ಪಾಪಲೇಪವಾಗುವುದಿಲ್ಲ?

ಹೀಗೆ ಅನ್ಯೋನ್ಯವಾಗ ಸಂಚಿಂತಿಸಿ, ತಮ್ಮ ರಾಜ್ಯವನ್ನೇ ಅರ್ಪಿಸಲು ಕೃಷ್ಣನ ಬಳಿಗೆ ಹೋದರು. ಹೀಗೆಂದರು.

**ಸ್ವಂ ರಾಜ್ಯಂ ದಾತುಕಾಮೌ ತು ಜಗ್ಮತುಃ ಕೇಶವಾಂತಿಕಮ್ ।**
**ದೇವಮಾಸಾದ್ಯ ತೌ ವೀರೌ ವಿದರ್ಭನಗರಾಧಿಪೌ ॥ 7 ॥**

**ಊಚುತುಸ್ತೇ ಮಹಾಭಾಗೌ ಪ್ರಣಮ್ಯ ಶಿರಸಾ ಹರಿಮ್ ।**
**ಅದ್ಯಾವಾಂ ಸಫಲಂ ಜನ್ಮ ಅದ್ಯಾವಾಂ ಸಫಲಂ ಯಶಃ ॥ 8 ॥**

**ಅದ್ಯಾವಾಂ ಪಿತರಃ ತೃಪ್ತಾಃ ದೇವೇ ಚಾವಾಂ ಗೃಹಾಗತೇ ।**
**ಚಾಮರಂ ವ್ಯಜನಂ ಛತ್ರಂ ಧ್ವಜಂ ಸಿಂಹಾಸನಂ ಬಲಮ್ ।**
**ಸ್ಫೀತಕೋಶಾ ಪುರೀ ಚೇಯಂ ಆವಾಭ್ಯಾಂ ಸಹಿತಾ ತವ ॥ 9 ॥**

ಶ್ರೀಕೃಷ್ಣನೇ! ಇಂದು ನೀನು ನಮ್ಮ ಮನೆಗೆ ಬಂದಿರಲಾಗಿ ನಮ್ಮ ಜನ್ಮ ಬದುಕು ಸಾರ್ಥಕವಾಯಿತು. ನಮ್ಮ ಯಶಸ್ಸು, ನಮ್ಮ ಪಿತೃಗಳೂ ತೃಪ್ತರಾದರು. ನೀವು ನಮ್ಮ ಮನೆಗೆ ಬಂದದ್ದು ನಮ್ಮನ್ನು ಉದ್ಧರಿಸಲೆಂದೆ. ದೇವೇಂದ್ರನು ನಿನಗೆ ಈಗಾಗಲೇ ಅಭಿಷೇಕ ಮಾಡಿ ಪುನೀತನಾಗಿದ್ದಾನೆ. ಇಂದು ನಾವು ನಿನಗೆ ಸುವರ್ಣ ಚಾಮರ, ಶ್ವೇತಚ್ಛತ್ರ, ರತ್ನ ಸಿಂಹಾಸನ, ಸಮಗ್ರ ರಾಜ್ಯ ಸಕಲ ಸೈನ್ಯ, ಸಮೃದ್ಧ ಸಂಪತ್ತಿನ ಭಂಡಾರ ಸಹಿತ ಈ ಪಟ್ಟಣವನ್ನು ನಾವು ನಿಮ್ಮ ಪಾದಗಳಲ್ಲಿ ಅರ್ಪಿಸಿದ್ದೇವೆ. ನಾವೂ ನಿನ್ನ ಸೇವಕರು.

**ಆವಯೋಃ ಯತ್ಕೃತಂ ಕಾರ್ಯಂ ಬಹುಭಿಃ ಪಾರ್ಥಿವೈರಪಿ ।**
**ನ ಶಕ್ಯತೇಽನ್ಯಥಾ ಕರ್ತುಂ ಜರಾಸಂಧೇನ ವಾ ಸ್ವಯಮ್ ॥ 10 ॥**

**ಶತ್ರುಸ್ತೇ ಮಾಗಧೋ ರಾಜಾ ಜರಾಸಂಧೋ ಮಹಾದ್ಯುತಿಃ ।**
**ಕಥಾಂ ತೇ ಬ್ರುವತೇ ನಿತ್ಯಂ ನೃಪಾಣಾಮಭಯಪ್ರದಃ ॥ 11 ॥**

**ಸಿಂಹಾಸನಮನರ್ಧ್ಯಾಸ್ಯಂ ಪುರಂ ಚಾಸ್ಯ ನ ವಿದ್ಯತೇ ।**
**ಕಥಂ ರಾಜ ಸಮಾಜೇಽಸ್ಮಿನ್ ಆಸ್ಯತೇ ದೇವಕೀಸುತಃ ॥ 12 ॥**
**ಕೃಷ್ಣೋಽಪಿ ಸುಮಹಾವೀರ್ಯೋ ಹ್ಯಭಿಮಾನೀ ಮಹಾದ್ಯುತಿಃ ।**
**ನ ಚಾಗಮಿಷ್ಯತೇ ವಾಸ್ಮಿನ್ ಕನ್ಯಾರ್ಥೇ ಚ ಸ್ವಯಂವರೇ ।**
**ಕಥಮಾಸ್ಯತಿ ನೀಚೇಷು ಆಸನೇಷು ಮಹಾದ್ಯುತಿಃ ॥ 13 ॥**

ನಾವಿಬ್ಬರೂ ಸ್ವಯಂ ಪ್ರೇರಿತರಾಗಿ ನೀಡುವ ನಮ್ಮ ಪಾಲಿನ ರಾಜ್ಯವನ್ನಾಗಲೀ, ಅಭಿಷೇಕ ಕಾರ್ಯವನ್ನಾಗಲೀ ಬದಲಾಯಿಸಲು ಅಥವಾ ವಿರೋಧಿಸಲು ರಾಜರೆ ಆಗಲಿ, ಸ್ವಯಂ ಜರಾಸಂಧನೇ ಆಗಲಿ ಸಮರ್ಥನಾಗಲಾರ. ಜರಾಸಂಧನು ನಿನಗೆ ಶತ್ರುವು. ನಿನ್ನ ವಿರೋಧಿಗಳಿಗೆಲ್ಲ ಅಭಯ ನೀಡುತ್ತಿರುವನು. ನಿನ್ನ ವಿಷಯವನ್ನು ಹೇಳುತ್ತಲೆ ಇಗುತ್ತಾನೆ. ಅವರ ಕುಯುಕ್ತಿ ಹೀಗಿದೆ.

ಸ್ವಯಂವರಕ್ಕಾಗಿ ಸೇರಿರುವ ರಾಜರ ಸಭೆಗೆ ಕೃಷ್ಣ ಬಂದಾಗ ಆ ಸ್ವಯಂವರ ಮಂಟಪದಲ್ಲಿ ರಾಜರಿಗಾಗಿ ಮಾತ್ರ ಸಿಂಹಾಸನ ಹಾಕಿಸಬೇಕು. ಕೃಷ್ಣನಾದರೂ ರಾಜರ ವಂಶದಲ್ಲಿ ಹುಟ್ಟಿರಬಹುದು. ಗೋಪಾಲರ ಜೊತೆ ಬೆಳೆದವನು. ಇವನ ತಂದೆಯೂ ಯಾವ ದೇಶಕ್ಕೂ ರಾಜನಲ್ಲ. ಇವನು ಹೇಗೆ ರಾಜನಾದಾನು? ಬೇರೆ ರಾಜ ಸಿಂಹಾಸನದಲ್ಲಿ ಅಭಿಷೇಕವೂ ಆಗಿಲ್ಲ. ಮಥುರೆಗೆ ಉಗ್ರಸೇನ ರಾಜ ಇವನ್ನಲ್ಲ. ಆದ್ದರಿಂದ ಇವನು ರಾಜಾಸನದಲ್ಲಿ ರಾಜಸಭೆಯಲ್ಲಿ ಕೂಡಲು ಅರ್ಹನಲ್ಲವೆಂದೂ ಸಾರಿ, ರಾಜರಾದವರೆಲ್ಲ ತಮ್ಮ ತಮ್ಮ ಸಿಂಹಾಸನಗಳಲ್ಲಿ ಕೂತಿರಬೇಕು. ಉತ್ತಮಾಸನದಲ್ಲಿ ಕುಳಿತಿರುವ ನಮ್ಮ ಮುಂದೆ ನೆಲದ ಮೇಲೆ ಕೂಡಲಾರ. ಮಹಾ ಸ್ವಾಭಿಮಾನಿಯಾದ ಕೃಷ್ಣನು ಈ ಸಭೆಗೆ ಕನ್ಯಾರ್ಥಿಯಾಗಿ ಬರುವುದೆ ಇಲ್ಲ. ಇಂತಹ ಅವಮಾನವಾಗುವ ಸ್ಥಳಕ್ಕೆ ಅವರು ಬರದೆ ತಾನಾಗಿಯೆ ಮಥುರೆಗೆ ಹಿಂತಿರುಗುವನು! ಮಹಾದ್ಯುತಿಯಾದ ಕೃಷ್ಣನು ಯಾವುದೋ ನೀಚಾಸನದಲ್ಲಿ ಕೂಡಲಾರನೆಂಬುದು ನಿಶ್ಚಿತ.[2]

---

2. ಕೃಷ್ಣನಿಗೆ ಸಿಂಹಾಸನವಿಲ್ಲ :
ಅತೋ ನ ದೇಯಮಸ್ಯ ನಃ ಸುಭೂಭುಜಾಂ ಸಮಾಗಮೇ ।
ಕ್ವಚಿತ್ ಕದಾಚಿದಾಸನಂ ನ ಚಾರ್ಘ್ಯ ಪೂರ್ವಕೋವಿಧಿಃ ।
ನ ಚಾಸ್ಯತಿ ಕ್ಷಿತೌ ಕ್ವಚಿತ್ ವಿಮಾನಿತಃ ಪುರೋ ಹಿ ನಃ ।
ಸ ದರ್ಪಮಾನ ಸಂಯುತಃ ಕ್ರುಧಾ ಪ್ರಯಾಸ್ಯತಿ ಧ್ರುವಮ್ ॥–*ತಾ.ನಿ. 17/27–29*

**ಇತಿ ಸಂಚ್ಯೋದ್ಯಮಾನಸ್ತು ಶ್ರುತ್ವಾಸೌ ಭೀಷ್ಮಕೋನೃಪಃ ।**
**ತವ ವಿಶ್ರಾಮ ಹೇತೋರ್ಹಿ ಕಾರಿತೇದಂ ಗೃಹೋತ್ತಮಮ್ ॥ 14 ॥**
**ಮಾನುಷ್ಯೇ ಮರ್ತ್ಯಲೋಕೇಽಸ್ಮಿನ್ ರಾಜೇಂದ್ರತ್ವಂ ಸಮಾಚರ ।**
**ಸಮಾಜೇ ಮನುಜೇಂದ್ರಾಣಾಂ ಮಾ ಭೂದಾಸನ ಸಂಕಟಮ್ ॥ 15 ॥**
**ವಿದರ್ಭನಗರೇ ವೈಷಾಂ ರಾಜೇಂದ್ರತ್ವಂ ವಿಚೇಷ್ಟಯ ।**
**ಆಸ್ಯತಾಮಾಸನೇ ಶುಭ್ರೇ ಶ್ವಃ ಪ್ರಭಾತೇ ಮಹಾದ್ಯುತೇ ॥ 16 ॥**

ಭೀಷ್ಮಕನು ಜರಾಸಂಧನಾಡಿದ ಮಾತುಗಳೆಲ್ಲವನ್ನೂ ಕೇಳಿ ಜಗಳವಾಗ-ಬಾರದೆಂದು ನಮ್ಮೊಡನೆ ಸಮಾಲೋಚಿಸಿ, ನೀನು ಇಳಿದುಕೊಳ್ಳಲು ಪ್ರತ್ಯೇಕವೂ ಶ್ರೇಷ್ಠವೂ ಆದ ಈ ಭವನವನ್ನು ಕಟ್ಟಿಸಿದ್ದಾನೆ.

ದೇವಾಧಿದೇವನೂ ಸಮಸ್ತಲೋಕಾಧಿಪತಿಯೂ ಆದ ನೀನು ಈ ಮನುಷ್ಯರಿಗೆ ಸಂಬಂಧಿಸಿದ ಈ ನರಲೋಕದಲ್ಲಿ ನೀನು ಕೇವಲ ರಾಜನಲ್ಲ. ರಾಜಾಧಿರಾಜನಾಗಿರು. ನೀನೂ ರಾಜೇಂದ್ರನಾದ್ದರಿಂದ ರಾಜರ ಕೂಟದಲ್ಲಿ ಸಿಂಹಾಸನದ ಸಮಸ್ಯೆ ಬರುವುದು ಬೇಡ. ವಿದರ್ಭನಗರದಲ್ಲಿ ನೀನು ಉಜ್ವಲವಾದ ರತ್ನ ಸಿಂಹಾಸನದಲ್ಲಿ ಕುಳಿತು ರಾಜರ ರಾಜೇಂದ್ರತ್ವವನ್ನು ತಿರಸ್ಕರಿಸು. ಅದಕ್ಕಾಗಿ ನೀನು ಶಾಸ್ತ್ರವಿಧಿಗೆ ಅನುಸಾರವಾಗಿ ರಾಜ್ಯಾಭಿಷೇಕ ಸಂಸ್ಕಾರ ಸಂಪನ್ನನಾಗು. ನಾಳೆ ಇಂದ್ರದೇವನ ಆದೇಶದಂತೆ ಎಲ್ಲರೂ ಇಲ್ಲಿಗೆ ಬರುವಂತೆ ಮಾಡುವೆ ಎಂದನು.

### ದೇವೇಂದ್ರನ ಲಿಖಿತ ಸಂದೇಶ

ಹೀಗೆ ಹೇಳಿ ಕ್ರಥ ಕೈಶಿಕರು – ರಾಜರ ಸಮೂಹದಿಂದ ತುಂಬಿದ್ದ ಸ್ವಯಂವರ ಮಂಟಪಕ್ಕೆ ಇಂದ್ರದೇವನ ಸಂದೇಶವನ್ನು ಕಳುಹಿಸಿ ಕೊಟ್ಟರು.

**ದೇವದೂತಸ್ಯ ವಚನಂ ಯಥೋಕ್ತಂ ವಜ್ರಪಾಣಿನಾ ।**
**ಲಿಖಿತ್ವಾ ಸುಮಹಾತೇಜಾಃ ಕೈಶಿಕಃ ಪ್ರಾಹ ಶಾಸನಮ್ ॥ 17 ॥**
**ವಿದಿತಂ ವೋ ನೃಪಾಃ ಸರ್ವೇ ವೈನತೇಯಸಹಾಚ್ಯುತಃ ।**
**ಆಗತೋಽತಿಥಿರೂಪೇಣ ವಿದರ್ಭನಗರೀಂ ಹರಿಃ ॥ 18 ॥**

**ಪ್ರಾಪ್ತಮಾಲೋಕ್ಯ ಪಾತ್ರೋಽಯಮಿತಿ ಸಂಚಿಂತ್ಯ ಭೂಪತಿಃ ।**
**ಪ್ರದದೌ ವಾಸುದೇವಾಯ ಸ್ವಂ ರಾಜ್ಯಂ ಧರ್ಮಹೇತುನಾ ॥ 19 ॥**

**ಇದಮಾಸನಮಾಸ್ವೇತಿ ಭ್ರಾತ್ರಾ ಮೇ ಚೋದಿತೇ ತತಃ ।**
**ವಾಗುಕ್ತಾ ಚಾಶರೀರೇಣ ಕೇನಾಪಿ ವ್ಯೋಮಚಾರಿಣಾ ॥ 20 ॥**

ನಂತರ ಕೈಶಿಕನು ತಾನೆ ರಂಗಸ್ಥಳಕ್ಕೆ ಹೋಗಿ ಇಂದ್ರದೇವನು ತನ್ನ ದೂತ ಚಿತ್ರಾಂಗದನ ದ್ವಾರಾ ಹೇಳಕಳಿಸಿದ್ದ ಮಾತನ್ನು ಯಥಾವತ್ತಾಗಿ ಪತ್ರದಲ್ಲಿ ಬರೆದು ಅದನ್ನು ಸಭೆಯಲ್ಲಿ ಓದಿದನು.

ರಾಜೇಂದ್ರರೇ! ಅಚ್ಯುತನು ಗರುಡನೊಂದಿಗೆ ವಿದರ್ಭ ದೇಶಕ್ಕೆ ಬಂದಿರುವನು. ಇದು ತಿಳಿದ ವಿಷಯವೆ. ಸತ್ಪಾತ್ರ ಬಂದನೆಂದು ಕ್ರಥನು ಕೃಷ್ಣನಿಗೆ ತನ್ನ ರಾಜ್ಯವನ್ನೆಲ್ಲ ಸಮರ್ಪಿಸಿ, ಸಿಂಹಾಸನವನ್ನು ಅಲಂಕರಿಸುವಂತೆ ಹೇಳಿದಾಗ ಅಶರೀರವಾಣಿಯೊಂದು ಹೀಗೆ ಹೇಳಿತು.

### ದೇವದೂತನ ಶಾಸನ

**ನ ಯುಕ್ತಮಾಸನಂ ದಾತುಂ ತ್ವಯಾಸೀನಂ ನರಾಧಿಪ ।**
**ಇದಮಸ್ಯಾಸನಂ ದಿವ್ಯಂ ಸರ್ವರತ್ನ ವಿಭೂಷಿತಮ್ ॥ 21 ॥**

**ಜಾಂಬೂನದಮಯಂ ಶುಭ್ರಂ ರಚಿತಂ ವಿಶ್ವಕರ್ಮಣಾ ।**
**ಪ್ರೇಷಿತಂ ದೇವರಾಜೇನ ಸಿಂಹಲಕ್ಷಣ ಲಕ್ಷಿತಮ್ ॥ 22 ॥**

**ಅತ್ರೋಪವಿಷ್ಟಂ ದೇವೇಶಂ ಚರಾಚರ ನಮಸ್ಕೃತಮ್ ।**
**ಅಭಿಷಿಂಚಂತು ರಾಜೇಂದ್ರಂ ಬಹುಭಿಃ ಪಾರ್ಥಿವೈಃ ಸಹ ॥ 23 ॥**

ನರೇಂದ್ರನೇ! ಕ್ರಥರಾಜ! ನೀನು ಈಗಾಗಲೇ ಕುಳಿತಿರುವ ಸಿಂಹಾಸನವನ್ನು ಕೃಷ್ಣನಿಗೆ ಅರ್ಪಿಸುವುದು ಯೋಗ್ಯವಲ್ಲ. ದೇವರಾಜ ಇಂದ್ರನಿಂದಲೇ ಕಳುಹಿಸಲ್ಪಟ್ಟ – ನವರತ್ನ ಖಚಿತವೂ, ಸಿಂಹ ಲಕ್ಷಣದಿಂದ ಕೂಡಿರುವ, ವಿಶ್ವಕರ್ಮ ನಿರ್ಮಿತವಾದ – ಅತ್ಯುತ್ತಮ ಸುವರ್ಣ ಸಿಂಹಾಸನದ ಮೇಲೆ ಶ್ರೀಕೃಷ್ಣನನ್ನು ಕುಳ್ಳರಿಸಿ, ಸರ್ವರಾಜರೂ ಸೇರಿ ಪಟ್ಟಾಭಿಷೇಕ ಮಾಡಬೇಕು. ಸರ್ವರಾಜರಲ್ಲಿ ಜರಾಸಂಧ, ಸಾಲ್ವ, ರುಗ್ಮಿ, ಶಿಶುಪಾಲರು ಅಭಿಷೇಕದಲ್ಲಿ ಪಾಲ್ಗೊಳ್ಳಬೇಕಿಲ್ಲ. ರಂಗಮಂಟಪ ಶೂನ್ಯವಾಗದಿರಲು ಈ ನಾಲ್ವರೋ ಇಲ್ಲಿಯೆ ಇರಲಿ. ಕನ್ಯಾರ್ಥಿಗಳಾಗಿ ಯಾವ ರಾಜರು ಬಂದಿರುವರೋ ಅವರೆಲ್ಲ

ಈ ಮಹೋತ್ಸವದಲ್ಲಿ ಪಾಲ್ಗೊಳ್ಳಲೇಬೇಕು. ಯಾರಾದರೂ ಬಾರದಿದ್ದರೆ ಅವನನ್ನು ಕೊಂದು ಹಾಕುತ್ತೇನೆ' ಎಂದು ಇಂದ್ರನ ಸಂದೇಶವನ್ನು ಚಿತ್ರಾಂಗದ ಗಂಧರ್ವನ ಸಂದೇಶ ಕೈಶಿಕ ಓದಿ ಹೇಳಿದ.

### ಕುಬೇರನಿಂದ ಅಭಿಷೇಕಕ್ಕೆ ಎಂಟು ಕಲಶಗಳು

**ಇಮೇ ಚೈವಾಷ್ಟಕಲಶಾಃ ನಿಧೀನಾಮಂಶ ಸಂಭವಾಃ ।**
**ಅಕ್ಷಯಾ ರಾಜರಾಜಸ್ಯ ಧನೇಶಸ್ಯ ಮಹಾತ್ಮನಃ ॥ 24 ॥**

**ದಿವ್ಯಾಃ ಕಾಂಚನರತ್ನಾಢ್ಯಾಃ ದಿವ್ಯಾಭರಣಯೋನಯಃ ।**
**ರಾಜೇಂದ್ರಸ್ಯಾಭಿಷೇಕಾರ್ಥಂ ಆಗಚ್ಛಂತಿ ನೃಪೈಃ ವೃತಾಃ ॥ 25 ॥**

**ಏಷ ಶಕ್ರಸ್ಯ ಸಂದೇಶಃ ಕಥಿತೋ ವೋ ನರಾಧಿಪಾಃ ।**
**ಲೇಖೇನಾಹೂಯ ತಾನ್ ಸರ್ವಾನಭಿಷಿಂಚಂತು ಕೇಶವಮ್ ॥ 26 ॥**

ಇದಲ್ಲದೆ ಅಪ್ರಾಕೃತ ಪುರುಷನಿಗೆ ಅಭಿಷೇಕಕ್ಕಾಗಿಯೆಂದ ಮಹಾತ್ಮನಾದ ರಾಜರಾಜ ಕುಬೇರನು ಎಂಟು ಸುವರ್ಣಕಲಶವನ್ನು ಕಳುಹಿಸಲಿರುವನು. ಇದು ಅಕ್ಷಯ ಕಲಶಗಳು ಅಷ್ಟ ನಿಧಿಗಳ ಅಂಶದಿಂದ ಹುಟ್ಟಿರುವಂತಹವು.

ರಾಜರೇ! ಇಂದ್ರನ ಸಂದೇಶವನ್ನು ಯಥಾವತ್ತಾಗಿ ನಿಮ್ಮ ಮುಂದೆ ಇಟ್ಟಿದ್ದೇನೆ. ನೀವೆಲ್ಲರೂ ಸೇರಿ, ಲಿಖಿತ ಆಹ್ವಾನದ ಮೂಲಕ ಸಮಸ್ತ ರಾಜರನ್ನೂ ಆಮಂತ್ರಿಸಿ ಶ್ರೀಕೃಷ್ಣನಿಗೆ ಅಭಿಷೇಕ ಮಾಡಿರಿ' ಎಂದನು

**ಇತಿ ಸಂಚೋದ್ಯ ಖಸ್ಥೋಽಸೌ ದೇವದೂತೋ ಗತೋ ದಿವಮ್ ।**
**ದತ್ವಾಽಽಸನಂ ಚ ಕೃಷ್ಣಾಯ ಬಾಲಾರ್ಕ ಸದೃಶ ಪ್ರಭಮ್ ॥ 27 ॥**

**ತೇನಾಹಂ ನೋದಯಿಷ್ಯಾಮಿ ಭವದ್ಭಿರ್ಯೇ ಸಮಾಗತಾಃ ।**
**ದುರ್ನಿವಾರ್ಯತರಂ ಘೋರಂ ಶಕ್ರಸ್ಯ ಸ್ವಯಮೀರಿತಾಮ್ ॥ 28 ॥**

**ಯುಷ್ಮಾಭಿರ್ದರ್ಶನೇ ಯುಕ್ತಮದ್ಭುತಂ ಭುವಿ ದುರ್ಲಭಮ್ ।**
**ಕಲಶೈಃ ಅಭಿಷಿಚ್ಯಂತಂ ಸ್ವಯಮೇವ ನಭಸ್ತಲಾತ್ ॥ 29 ॥**

**ದೃಷ್ಟ್ವಾಽಽಶ್ಚರ್ಯಂ ಹಿ ನಃ ಸರ್ವಾನ್ ಧ್ರುವಂ ಪಾಪಕ್ಷಯೋ ಭವೇತ್ ।**
**ಸ್ನಾಪನಾರ್ಥೇಚ ಕೃಷ್ಣಾಯ ದೇವದೇವಾಯ ವಿಷ್ಣವೇ ॥ 30 ॥**

ಆಕಾಶದಲ್ಲಿ ಅದೃಶ್ಯನಾಗಿದ್ದ ದೇವದೂತನು ಬಾಲಾರ್ಕಸದೃಶ ರತ್ನ

ಸಿಂಹಾಸನವನ್ನು ನೀಡಿ ಹೊರಟು ಹೋದನು. ಇದಕ್ಕಾಗಿ ನಿಮಗೆಲ್ಲ ನಾನು ಹೇಳುತ್ತಿರುವುದು ಶ್ರೀಕೃಷ್ಣನಿಗೆ ಪಟ್ಟಾಭಿಷೇಕ ಮಾಡಿರಿ ಎಂದು ಪ್ರೇರಿಸುತ್ತಿರುವೆನು. ಇಂದ್ರನ ಆದೇಶ ಪಾಲಿಸದಿದ್ದರೆ ವಜ್ರಾಘಾತ ಖಂಡಿತ ಆಕಾಶದಿಂದ ಎಂಟು ಕಲಶಗಳು ತಾವಾಗಿಯೇ ಒಂದು ಅಭಿಷೇಕ ಮಾಡುತ್ತವೆ. ಇದೊಂದು ಪರಮಾದ್ಭುತ. ಇದನ್ನು ನೋಡಿದ ಮಾತ್ರಕ್ಕೆ ನಮ್ಮಲ್ಲಿರುವ ಪಾಪಗಳೆಲ್ಲ ನಷ್ಟವಾಗಿ ಹೋಗುತ್ತವೆ ದೇವದೇವನಿಗೆ ಅಭಿಷೇಕಿಸಲು ನೀವೂ ಬನ್ನಿರಿ. ಕೃಷ್ಣನಿಗೆ ಹೆದರಬೇಕಿಲ್ಲ. ನಾವು ಈ ಮೊದಲೇ ನಿಮ್ಮೆರಿಗಾಗಿ ಸಂಧಿ ಮಾಡಿಕೊಂಡಿದ್ದೇವೆ. ಅವನೂ ಸಹ ಅಭಯ ನೀಡಿರುವನು. ಜರಾಸಂಧನ ಮೇಲೂ ಶ್ರೀಕೃಷ್ಣನಿಗೆ ವೈರಭಾವವಿರುವುದಿಲ್ಲ.' ಮುಂದೆ ಆಲೋಚಿಸಿರಿ ಎಂದನು.

## ಮತ್ತೊಮ್ಮೆ ಅಶರೀರವಾಣಿ

**ಭೂಯಃ ಶುಶ್ರುವೂ ರಾಜನ್ ಕೇಶವಾಯ ಮಹಾತ್ಮನೇ ।**
**ಮೇಘ ಗಂಭೀರ ನಾದೇನ ಸ್ವರೇಣಾ ಪೂರಯನ್ ದಿಶಃ ॥ 31 ॥**
**ವಾಗುವಾಚಾ ಶರೀರೇಣ ದೇವರಾಜಸ್ಯ ಶಾಸನಾತ್ ॥ 32 ॥**

*ಚಿತ್ರಾಂಗದ ಉವಾಚ –*

**ತ್ರೈಲೋಕ್ಯಾಧಿಪತಿಃ ಶಕ್ರಃ ಪ್ರಜಾಪಾಲನ ಹೇತುನಾ ।**
**ಆಜ್ಞಾಪಯತಿ ಯುಷ್ಮಾಕಂ ನೃಪಾಣಾಂ ಹಿತಕಾಮ್ಯಯಾ ॥ 33 ॥**

ರಾಜರೆಲ್ಲ ಸಮಾಲೋಚನೆ ನಡೆಸುತ್ತಿದ್ದಂತೆ ಇಂದ್ರನ ದೂತನಾದ ಚಿತ್ರಾಂಗದನು ಮತ್ತೊಮ್ಮೆ ಅದೃಶ್ಯನಾಗಿ ಅಶರೀರವಾಣಿಯಿಂದ ಹೀಗೆ ಹೇಳಿದನು.

ನೀವೆಲ್ಲರೂ ಕೃಷ್ಣನಲ್ಲಿ ವೈರಭಾವ ಹೊಂದಿರುವುದು ಸಮಂಜಸವಲ್ಲ.

ಪ್ರೀತಿ ವಿಶ್ವಾಸಗಳಿಂದಿರಿ. ಕೃಷ್ಣನು ಶಿಷ್ಟರಕ್ಷಕನು–ದುಷ್ಟಭಕ್ಷಕನು

**ಮಾನುಷಾಣಾಂ ನೃಪಾ ದೇವಾಃ ನೃಪಾಣಾಂ ದೇವತಾಃ ಸುರಾಃ ।**
**ಸುರಾಣಾಂ ದೇವತಾ ಶಕ್ರಃ ಶಕ್ರಸ್ಯಾಪಿ ಜನಾರ್ದನಃ ॥ 34 ॥**
**ಜಾತೋಽಯಂ ಮಾನುಷೇ ಲೋಕೇ ನರರೂಪೇಣ ಕೇಶವಃ ।**

**ನ ಚಾಧಿಕಾರೋ ದೇವಾನಾಂ ರಾಜೇಂದ್ರಸ್ಯಾಭಿಷೇಚನೇ ।**
**ತೇನಾಹಂ ನಾಭಿಷಿಂಚಾಮಿ ಸರ್ವಲೋಕ ನಮಸ್ಕೃತಮ್ ॥ 35 ॥**
**ನೃಪಾಣಾಮಧಿಕಾರೋಽಯಂ ರಾಜೇಂದ್ರಸ್ಯ ನಿವೇಶನೇ ।**
**ಗತ್ವಾ ಯೂಯಂ ವಿದರ್ಭಾಯಾಂ ಕ್ರಥ ಕೈಶಿಕಯೋಃ ಸಹ ॥ 36 ॥**
**ತಾಭ್ಯಾಂ ಸಹ ನೃಪಶ್ರೇಷ್ಠಾಃ ಕೃತ್ವಾ ಸುಮಹದುತ್ಸವಮ್ ॥ 37 ॥**

ಮಾನುಷರಿಗೆ ರಾಜರು ದೇವತೆಗಳು, ರಾಜರಿಗೆ ದೇವತೆಗಳು, ದೇವತೆಗಳಿಗೆ ಇಂದ್ರನು ನಿಯಾಮಕನು. ಇಂದ್ರನಿಗೆ ಕೇಶವನೆ ನಿಯಾಮಕನು. ಈ ಶ್ರೀಕೃಷ್ಣನಾದರೂ ನರರೂಪದಿಂದ ಅವತರಿಸಿರುವನು. ದೇವದಾನವ ರಾಕ್ಷಸರಿಂದ ಅಜೇಯ ಪರಾಕ್ರಮನು. ಶೂಲಪಾಣಿ ಶೂಲಿಯೂ ವೇಲಾಯುಧ ಸ್ಕಂದನೊಂದಿಗೆ ಬಂದರೂ ಅವನನ್ನು ಎದುರಿಸಲಸಾಧ್ಯನು. ಇನ್ನು ನೀನೆ ಬಂದು ಅಭಿಷೇಕ ಮಾಡಬಹುದಲ್ಲ ಎನ್ನುವಿರೋ. ದೇವತೆಗಳಿಗೆ ಚಕ್ರವರ್ತಿಯ ಪಟ್ಟದಲ್ಲಿ ಅಭಿಷೇಕಿಸಲು ಅಧಿಕಾರವಿಲ್ಲ. ಅದಕ್ಕಾಗಿಯೇ ನಾನೆ ಮುಂದೆ ಬರುತ್ತಿಲ್ಲ. ರಾಜರಿಗೇನೆ ಆ ಅಧಿಕಾರವು ನೀವೆಲ್ಲರೂ ಕ್ರಥ ಕೈಶಿಕರೊಂದಿಗೆ ವಿದರ್ಭಕ್ಕೆ ಹೋಗಿ ಅವನಿಗೆ ಅಭಿಷೇಕ ಮಾಡಿರಿ ಇದು ಪರಸ್ಪರ ಸಂಧಿ ಮಾಡಿಕೊಳ್ಳಲು ಸದವಕಾಶವೆಂದು ತಿಳಿಯಿರಿ. ಇದನ್ನು ಹೇಳಲೆಂದೇ ಇಂದ್ರನಿಂದ ಕಳುಹಿಸಲ್ಪಟ್ಟಿದ್ದೇನೆ.

**ಜರಾಸಂಧಃ ಸುನೀಥಶ್ಚ ರುಗ್ಮೀ ಚೈವ ಮಹಾರಥಃ ।**
**ಶಾಲ್ವಃ ಸೌಭಪತಿಶ್ಚೈವ ಚತ್ವಾರೋ ರಾಜಸತ್ತಮಾಃ ।**
**ರಂಗಸ್ಯಾಶೂನ್ಯ ಹೇತೋರ್ಹಿ ತಿಷ್ಠಂತು ಇಹ ಪಾರ್ಥಿವಾಃ ॥ 38 ॥**

ವಿದರ್ಭದಲ್ಲಿರುವ ಕೃಷ್ಣನು ಪಟ್ಟಾಭಿಷೇಕ ಪೂರ್ವಾಂಗ ಸಂಸ್ಕಾರವನ್ನು ಮುಗಿಸಿರುವನು. ಕ್ರಥ ಕೈಶಿಕರು ಪಟ್ಟಾಭಿಷೇಕ ಸಿದ್ಧತೆ ಮಾಡಿಕೊಂಡಿರುತ್ತಾರೆ. ನೀವೆಲ್ಲರೂ ಅವನಿಗೆ ಪಟ್ಟಾಭಿಷೇಕ ಮಾಡಿ ಅವನಿಂದಲೂ ದಕ್ಷಿಣಾದಿಗಳಿಂದ ಸತ್ಕೃತರಾಗಿ ಸ್ವಯಂವರ ಮಂಟಪಕ್ಕೆ ಬರಬಹುದಾಗಿದೆ. ರಾಜರೂ ವಿದರ್ಭಕ್ಕೆ ಹೋದಾಗ ಸಭಾಮಂದಿರವು ಶೂನ್ಯವೂ ಆಗಬಾರದು. ಅದಕ್ಕಾಗಿ ಪಟ್ಟಾಭಿಷೇಕಕ್ಕೆ ಜರಾಸಂಧ, ಶಿಶುಪಾಲ, ರುಗ್ಮಿ, ಸಾಲ್ವ ಹೋಗದೆ ಇಲ್ಲಿಯೆ ಇರಲಿ.

## ಸರ್ವರಾಜರೂ ಪಟ್ಟಾಭಿಷೇಕಕ್ಕೆ

**ಏವಮಾಜ್ಞಾಂ ಸುರೇಶಸ್ಯ ಶ್ರುತ್ವಾ ಚಿತ್ರಾಂಗದೇರಿತಾಮ್ ।**
**ಗಮನಾಯ ಮತಿಂ ಚಕ್ರುಃ ಸರ್ವ ಏವ ನೃಪೋತ್ತಮಾಃ ॥ 39 ॥**

**ಭೀಷ್ಮಕಂ ಪುರತಃ ಕೃತ್ವಾ ಪ್ರಯಾತಾಃ ಸ್ವಬಲೈಃ ವೃತಾಃ ॥ 40 ॥**

ಹೀಗೆ ಇಂದ್ರದೇವನ ಆಜ್ಞೆಯಂತೆ ಭೀಷ್ಮಕನನ್ನು ಮುಂದೆ ಮಾಡಿಕೊಂಡು ಸೈನ್ಯಸಮೇತರಾಗಿ ವಿದರ್ಭ ದೇಶಕ್ಕೆ ಅಭಿಷೇಕ ಮಾಡಲು ಹೊರಟರು.

### ಅಷ್ಟಕಲಶಾಭಿಷೇಕ

**ಜಗಾಮ ಪಾರ್ಥಿವೈಃ ಸಾರ್ಧಂ ದಹ್ಯ ಮಾನೇನ ಚೇತಸಾ ।**
**ಯತ್ರ ಕೃಷ್ಣೋ ಮಹಾಬಾಹುಃ ಕೈಶಿಕಸ್ಯ ನಿವೇಶನೇ ।**
**ಶುಭಾ ದೇವಸಭಾ ರಮ್ಯಾ ಸ್ನಾನ ಹೇತೋರಿಹಾಗತಾ ॥ 41 ॥**

**ದೇವದುಂದುಭಯಶ್ಚೈವ ಸ್ವಯಮೇವಾನದನ್ ದಿವಿ ।**
**ಪಂಚಯೋನಿ ಸಮುತ್ಥಾನಿ ಗಂಧಚೂರ್ಣಾನ್ಯನೇಕಶಃ ॥ 42 ॥**

**ಸ್ವಯಮಾಗತ್ಯ ದೇವೇಂದ್ರೋ ದೇವೈಃ ಸಹ ಶಚೀಪತಿಃ ।**
**ಶ್ರುತ್ವಾ ಸುತುಮುಲಂ ನಾದಂ ಸರ್ವಏವ ನರಾಧಿಪಾಃ ।**
**ವಿಸ್ಮಯೋತ್ಫುಲ್ಲ ನಯನಾಃ ವಿವಿಶುಸ್ತೇ ಸಭಾಂ ಶುಭಾಮ್ ॥ 43 ॥**

ಭೀಷ್ಮಕರಾಜನೂ ಸಹ ಸೈನ್ಯ ಸಮೇತನಾಗಿ ಶ್ರೀಕೃಷ್ಣನು ತಂಗಿದ್ದ ಕೈಶಿಕನ ಅರಮನೆಗೆ ಹೋದನು. ಆದರೂ ಅವನ ಮನಸ್ಸಿನಲ್ಲಿ ರುಗ್ಮಿ ಮುಂದೆ ಏನು ರಾದ್ಧಾಂತ ಮಾಡುವನೋ ಎಂಬ ಆತಂಕ ಇದ್ದೇ ಇತ್ತು.

ಭಗವಂತನ ಅಭಿಷೇಕಕ್ಕಾಗಿ ದೇವಲೋಕದಿಂದ ಬಂದಿದ್ದ ದೇವಸಭೆಯು ಧ್ವಜ ಪತಾಕೆ ತೋರಣಗಳಿಂದ ಸಮಲಂಕೃತವಾಗಿತ್ತು. ದೇವ ದುಂದುಭಿಗಳು ತಾನೆ ಮೊಳಗಿದವು. ಗಂಧರ್ವಾಪ್ಸರಸೆಯರು ನೆರೆದಿದ್ದರು. ದೇವತೆಗಳು ಆಕಾಶದಲ್ಲಿ ನಿಂತು ಮಂದಾರ ಪಾರಿಜಾತ ಸಂತಾನ ಕಲ್ಪವೃಕ್ಷ ಹರಿಚಂದನಗಳೆಂಬ ದೇವವೃಕ್ಷ ಜನ್ಯವಾದ ಗಂಧವನ್ನು ಎರಚುತ್ತಿದ್ದರು.

ಇಂದ್ರದೇವನೆ ದೇವತೆಗಳೊಂದಿಗೆ ವಿಮಾನದಲ್ಲಿ ಕುಳಿತ್ತಿದ್ದನು.

**ತತೋಽಂಬರಸ್ಥಾಸ್ತೇ ದಿವ್ಯಾಃ ಕಲಶಾಃ ಚೈಲಕಂಠಿನಃ ।**
**ಸಹಕಾರ ಸಮಾಯುಕ್ತಾಃ ವವರ್ಷುಃ ಜಲದಾ ಇವ ॥ 44 ॥**

ಕೈಶಿಕನು ಪ್ರತಿರಾಜರನ್ನೂ ಪ್ರತ್ಯೇಕವಾಗಿ ಸ್ವಾಗತ ಕೋರಿ ಸಿಂಹಾಸನಗಳಲ್ಲಿ ಕೂಡಿಸಿದನು. ಇದೇ ಸಮಯದಲ್ಲಿ ಇಂದ್ರದೇವನು ಸಭೆಗೆ ಆಗಮಿಸಿದನು. ಆಗ ದಿವ್ಯ ವಾದ್ಯಗಳು ವೇದೋಕ್ತ ಮಂತ್ರಗಳು ಪಠಿಸುತ್ತಿರುವಾಗಲೇ ಆಕಾಶದಲ್ಲಿದ್ದ ದಿವ್ಯವಾದ ಅಷ್ಟಕಲಶಗಳಿಂದ ಧಾರಾಕಾರವಾದ ದಿವ್ಯಜಲಧಾರೆಗಳು ಕೃಷ್ಣನನ್ನು ಅಭಿಷೇಕಿಸಿದವು.

**ಉಪಾಸ್ಯಮಾನೊ ಯದುಭಿಃ ವಿಧರ್ಭೈಶ್ಚ ನರಾಧಿಪೈಃ ।**
**ವೈನತೇಯಶ್ಚ ಬಲವಾನ್ ಕಾಮರೂಪೀ ನರಾಕೃತಿಃ ॥ 45 ॥**

**ದಕ್ಷಿಣಂ ಪಾರ್ಶ್ವ ಮಾಶ್ರಿತ್ಯ ಆಸನಸ್ಥೋ ಮಹಾಬಲಃ ।**
**ಕ್ರಥಶ್ಚ ಕೈಶಿಕೋ ವೀರೋ ವಾಮಪಾರ್ಶ್ವೇ ತಥಾಽಸನೇ ॥ 46 ॥**

ಶ್ರೀಕೃಷ್ಣ ಅಭಿಷೇಕಕ್ಕಾಗಿ ಬಂದಿದ್ದ ರಾಜರುಗಳನ್ನು ದಿವ್ಯಾಂಬರ, ದಿವ್ಯ ಮಾಲೆಗಳಿಂದ ಗೌರವಿಸಿದನು. ನಂತರ ದಿವ್ಯ ಸಿಂಹಾಸನದ ಮೇಲೆ ಬಂದು ಕುಳಿತನು. ಆ ಸಮಯದಲ್ಲಿ ಕಾಮರೂಪೀ ಗರುಡನು ಮನುಷ್ಯರಂತೆ ರೂಪ ತಳೆದು ಶ್ರೀಕೃಷ್ಣನ ಬಲಭಾಗದಲ್ಲಿ ಕೂತಿದ್ದರೆ, ಎಡಭಾಗದಲ್ಲಿ ಕ್ರಥ ಕೈಶಿಕರು ಕುಳಿತ್ತಿದ್ದರು.

**ತಥೈವ ವಾಮಪಾರ್ಶ್ವೇ ತು ವೃಷ್ಣ್ಯಂಧಕ ಮಹಾರಥಾಃ ।**
**ಸಾತ್ಯಕಿ ಪ್ರಮುಖಾಃ ವೀರಾ ಉಪವಿಷ್ಟಾಃ ಮಹಾಬಲಾಃ ॥ 47 ॥**

**ಭಾಸ್ಕರ ಪ್ರತಿಮೇ ದಿವ್ಯೇ ದಿವ್ಯಾಸ್ತರಣ ವಿಸ್ತೃತೇ ।**
**ಸುಖೋಪವಿಷ್ಟಂ ಶ್ರೀಮಂತಂ ದೇವೈರಿವ ಶಚೀಪತಿಮ್ ॥ 48 ॥**

**ಯಥಾರ್ಹೇಣ ಚ ಸಂಪೂಜ್ಯ ರಾಜಾನಃ ಸರ್ವ ಏವ ತೇ ।**
**ಸುಖೋಪವಿಷ್ಟಾಃ ತೇ ಸ್ವೇಷು ಆಸನೇಷು ನರಾಧಿಪಾಃ ॥ 49 ॥**

ಶ್ರೀಕೃಷ್ಣನ ಎಡಭಾಗದಲ್ಲಿಯೇ ವೃಷ್ಣಿ, ಅಂಧಕ ಮೊದಲಾದ ಮಹಾರಥರೂ ಸಾತ್ಯಕಿ ಮೊದಲಾದ ವೀರರು ಆಸೀನರಾಗಿದ್ದರು. ಶ್ರೀಕೃಷ್ಣನಾದರೂ ಸೂರ್ಯನಂತೆ ದೇದೀಪ್ಯಮಾನವಾದ ರತ್ನ ಸಿಂಹಾಸನದಲ್ಲಿ ದೇವತೆಗಳಿಂದ ಸಹಿತ ಇಂದ್ರನೆಂಬಂತೆ ಕುಳಿತಿದ್ದನು. ಮಂತ್ರಿಗಳ ಮೂಲಕ ರಾಜನ

ಅಭಿಪ್ರಾಯ ತಿಳಿದ ರಾಜರುಗಳು ಶ್ರೀಕೃಷ್ಣನಿಗೆ ಯಥಾಯೋಗ್ಯವಾಗಿ ಪೂಜಿಸಿ, ತಮ್ಮ ತಮ್ಮ ಆಸನಗಳಲ್ಲಿ ಕುಳಿತರು. ಕೈಶಿಕನೂ ಯಥಾವಿಧಿ ಅರ್ಚಿಸಿ ಹೀಗೆಂದನು.

**ಅವಿಜ್ಞಾತಾಃ ನೃಪಾಃ ಸರ್ವೇ ಮಾನುಷೋಽಯಮಿತಿ ಪ್ರಭೋ ।**
**ಭವಂತಮುಪರುದ್ಧಾನಾಂ ದೇವ ತ್ವಂ ಕ್ಷಂತುಮರ್ಹಸಿ ॥ 50 ॥**

ದೇವದೇವನೇ! ಇಷ್ಟರವರೆಗೂ ರಾಜರೆಲ್ಲರೂ ಅಜ್ಞಾನದಿಂದಾಗಿ ನಿನ್ನನ್ನು ಕೇವಲ ಮಾನವನೆಂದು ತಿಳಿದಿದ್ದರು. ಇದು ಮಹಾಪರಾಧವಾಗಿದೆ. ಇವರ ತಪ್ಪನ್ನು ಕ್ಷಮಿಸು ಎಂದನು.

**ನ ಮೇ ವೈರಂ ಪ್ರವಸತಿ ಏಕಾಹಮಪಿ ಕೈಶಿಕ ।**
**ವಿಶೇಷೇಣಂ ನರೇಂದ್ರಾಣಾಂ ಕ್ಷತ್ರಧರ್ಮೇಽಪತಿಷ್ಠತಾಮ್ ॥ 51 ॥**

**ಯೋದ್ಧವ್ಯಮಿತಿ ಧರ್ಮೇಣ ಅಧರ್ಮೇ ತು ಪರಾಙ್ಮುಖೇ ।**
**ತೇಷಾಂ ಕಿಂ ಹೇತುನಾ ಕೋಪಃ ಕರ್ತವ್ಯಃ ತ್ವವನೀಶ್ವರಾಃ ॥ 52 ॥**

ಕೈಶಿಕ! ನನಗೆ ಯಾರ ಮೇಲೂ ವೈರವಿಲ್ಲ. ಒಂದು ದಿನವೂ ಯಾರ ಮೇಲೂ ವೈರ ಮಾಡಿಲ್ಲ. ಇದರಲ್ಲಿಯೂ ಧರ್ಮಕ್ಕಾಗಿ ಹೋರಾಡುವ ಅಧರ್ಮ ಪರಾಙ್ಮುಕರಾದ ರಾಜರ ಮೇಲಂತೂ ನಾನು ಕೋಪ ಮಾಡುವುದೇ ಇಲ್ಲ. ಕಳೆದದ್ದು ಕಳೆದದ್ದಾಯಿತು. ಅದನ್ನು ಚಿಂತಿಸಿ ಲಾಭವಿಲ್ಲ. ಸತ್ತವರು ಸ್ವರ್ಗ ಸೇರಿರುತ್ತಾರೆ. ಪುನರಪಿಜನನಂ ಪುನರಪಿ ಮರಣಂ ಎಂಬುದು ಮರ್ತ್ಯಲೋಕ ಧರ್ಮವು.

ಆದ್ದರಿಂದ ಸತ್ತವರಿಗಾಗಿ ಚಿಂತಿಸುವ ಕಾರಣವಿಲ್ಲ. ನಮಗಾದರೂ ಕ್ಷಮಾಗುಣವೆ ಹಿತವೆಂದು ತೋರುತ್ತದೆ. ನೀವೂ ಸಹ ವೈರಭಾವ ಬಿಡಿರಿ ಎಂದನು.

ನಂತರ ಇದಕ್ಕೆಲ್ಲ ಮೂಲಕಾರಣನಾದ ಕೈಶಿಕನನ್ನು ಕರುಣಾ ದೃಷ್ಟಿ ಬೀರಿ ಅನುಗ್ರಹಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಶ್ರೀಕೃಷ್ಣ ಪಟ್ಟಾಭಿಷೇಕವೆಂಬಲ್ಲಿ
ಐವತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಏಕಪಂಚಾಶತ್ತಮೋಽಧ್ಯಾಯಃ

*ಭೀಷ್ಮಕ ಉವಾಚ–*

ಪುತ್ರೋ ಮೇ ಬಾಲಭಾವೇನ ಭಗಿನೀಂ ದಾತುಮಿಚ್ಛತಿ ।
ಸ್ವಯಂವರೇ ನರೇಂದ್ರಾಣಾಂ ನ ಚಾಹಂ ದಾತುಮುತ್ಸಹೇ ॥ 1 ॥

ಅತೀವ ಬಾಲಭಾವತ್ವಾತ್ ದಾತುಮಿಚ್ಛೇನ್ ಮತಿರ್ಮಮ ।
ಏಕಾ ಹ್ಯೇಕಂ ಸಮಾಲೋಕ್ಯ ವರಯಿಷ್ಯತಿ ಮೇ ಮತಿಃ ॥ 2 ॥

ಅತಃ ಪ್ರಸಾದಯಿಷ್ಯೇ ತ್ವಾಂ ಪುತ್ರದುರ್ನಯ ಹೇತುನಾ ।
ಪ್ರಸಾದಂ ಕುರು ದೇವೇಶ ಕ್ಷಂತುಮರ್ಹಸಿ ಮೇ ಪ್ರಭೋ ॥ 3 ॥

ಶ್ರೀಕೃಷ್ಣ ಪರಮಾತ್ಮನೇ! ಬಾಲಬುದ್ಧಿಯವನೂ ಬಾಲಿಶಮತಿಯೂ ಆಗಿರುವ ಈ ನನ್ನ ಪುತ್ರ ರುಗ್ಮಿಯು, ನಿನಗೆ ಕೊಡಲಿಚ್ಛಿಸದೆ ಸ್ವಯಂವರವನ್ನು ಏರ್ಪಡಿಯೆ ತನ್ನ ತಂಗಿಯನ್ನು ರಾಜರಿಗೆ ಕೊಡಲಿಚ್ಛಿಸಿದ್ದಾನೆ. ಅವನು ಸ್ವಯಂವರದಲ್ಲಿಯೆ ವಿವಾಹ ಮಾಡುವುದು ನಿಶ್ಚಿತವಾದರೆ ನನ್ನ ಒಬ್ಬಳೇ ಮಗಳು ರುಗ್ಮಿಣೀ ಮಹಾಬುದ್ಧಿವಂತಳು.

ಯೋಗ್ಯವಾದ ನಿನ್ನಂತಹ ವರನೊಬ್ಬನನ್ನೆ ಆರಿಸುವಳೆಂದು ನನ್ನ ಭಾವನೆ ಸ್ವಾಮಿಯೇ, ಇದರಲ್ಲಿ ನಾನು ಅಸ್ವತಂತ್ರನು, ನನ್ನನ್ನು ಕ್ಷಮಿಸು. ಅವನ ದುರ್ನೀತಿಯನ್ನೂ ಕ್ಷಮಿಸೆಂದು ಬೇಡುವೆ ಎಂದನು.

ಬಾಲಭಾವೇನ ಪುತ್ರೇಣ ಚಾಲಿತಂ ನೃಪಮಂಡಲಮ್ ।
ಯದಾ ಭವತಿ ವೈ ಪ್ರೌಢಃ ಕೀದೃಶೋಽವಿನಯೋ ಭವೇತ್ ॥ 4 ॥

**ಏಕಸ್ಯಾಪಿ ನೃಪಸ್ಯಾಗ್ರೇ ಮೋಹಾದ್ ಯೋ ವಿತಥಂ ವದೇತ್ ।**
**ನ ಸ ತಿಷ್ಠತಿ ಲೋಕೇಽಸ್ಮಿನ್ ನಿರ್ದಹೇತ್ ದಂಡವಹ್ನಿನಾ ॥ 5 ॥**

**ಏಷ ಧರ್ಮಃ ನರೇಂದ್ರಾಣಾಂ ಇತಿ ತೇ ವಿದಿತಂ ಪ್ರಭೋ ।**
**ಲೋಕಧರ್ಮಂ ಪುರಸ್ಕೃತ್ಯ ಪುರಾ ಗೀತಂ ಸ್ವಯಂಭುವಾ ॥ 6 ॥**

ಶ್ರೀಕೃಷ್ಣನು ಭೀಷ್ಮಕ! ನಿನ್ನ ಮಗ ರುಗ್ಮಿ ಇನ್ನೂ ಚಿಕ್ಕಪ್ರಾಯದವನಿರುವಾಗಲೇ ರಾಜರಲ್ಲಿ ಅಲ್ಲೋಲ ಕಲ್ಲೋಲವೆಬ್ಬಿಸುತ್ತಿದ್ದಾನೆಂದರೆ ಸರಿಯಾದ ಪ್ರಾಯಕ್ಕೆ ಬಂದರೆ ಇನ್ನು ಎಷ್ಟು ರಾದ್ಧಾಂತ ಮಾಡಬಹುದು ಊಹಿಸು.

ಮಾನವನು ಈ ಲೋಕದಲ್ಲಿ ಸಂಪಾದಿಸಿದ ತಪಸ್ಸಿನ ಪ್ರಭಾವದಿಂದಾಗಿ ಸೂರ್ಯ ಸದೃಶ ಕಾಂತಿ ಲೋಕಗಳನ್ನು ಪಡೆದು, ಸುಖಿಸಿ, ಪುಣ್ಯ ಕ್ಷೀಣವಾದಾಗ ಭೂಮಿಯಲ್ಲಿ ಮಹಾಕುಲದಲ್ಲಿ ಜನಿಸುತ್ತಾನೆ. ಅಂತಹ ರಾಜನು ಮೋಹದಿಂದಾಗಿ ಒಂದು ಸುಳ್ಳನ್ನು ಹೇಳದರೂ ಅವರ ದುಷ್ಫಲ ಅಸಹನೀಯ ಯಮಧರ್ಮನ ಶಿಕ್ಷೆ ಅವನಿಗೆ ತಪ್ಪಿದ್ದಲ್ಲ.

ಧರ್ಮ ಹೀಗಿರುವಾಗ ನಿನ್ನ ಮಗ ರಾಜರ ಸಭೆಯಲ್ಲಿ ನಿಂತು ನಿನ್ನ ಅನುಮತಿಯಿಲ್ಲದೆ ಸುಳ್ಳಿನ ಘೋಷಣೆ ಹೇಗೆ ಮಾಡುವನು? ಸ್ವಯಂವರವನ್ನು ಮಾಡಲು ನಿನಗೆ ಇಷ್ಟವಿಲ್ಲದಿರುವಾಗ ನಿನ್ನ ಅಭಿಪ್ರಾಯಕ್ಕೆ ವಿರುದ್ಧ ರುಗ್ಮಿಯು ಸ್ವಯಂವರ ಮಂಟಪವನ್ನು ಹೇಗೆ ನಿರ್ಮಿಸಿದ? ನಿನಗೆ ಗೊತ್ತಿಲ್ಲದೆಯೆ ಈ ಕಾರ್ಯಗಳು ಮಾಡಲು ಸಾಧ್ಯವಿಲ್ಲ. ಇದೇ ನನಗೆ ಸಂಶಯ. ಇಲ್ಲಿಗೆ ಬಂದಿರುವ ರಾಜರುಗಳನ್ನೆಲ್ಲ ಯಥಾಯೋಗ್ಯವಾಗಿ ನೀನು ಸತ್ಕಾರವನ್ನೂ ಮಾಡಿರುವಿ. ಆ ರಾಜರುಗಳ ಪದಾತಿ ಅಶ್ವಗಜ ರಥ ಸೈನ್ಯಗಳ ಸಮ್ಮರ್ದನ ನಡೆಯುತ್ತಿದೆ. ನಿನಗೆ ಇದೆಲ್ಲ ತಿಳಯದೇ ಇರುವುದು ಆಶ್ಚರ್ಯ.

**ಮಮಾಗಮನಮೇವೇಹ ಪ್ರಾಯೇಣ ನ ಹಿತಂ ತವ ।**
**ಅತೋ ನ ಕೃತಮಾತಿಥ್ಯಂ ಅಪಾತ್ರಾಯ ನರೇಶ್ವರ ॥ 7 ॥**

**ಪಾತ್ರೇಭ್ಯೋ ದೀಯತಾಂ ಕನ್ಯಾ ಮಾಮಪಾಸ್ಯ ನರೇಶ್ವರ ।**
**ಮಮಾಗಮನದೋಷೇಣ ಕಥಂ ಕನ್ಯಾ ನ ದಾಸ್ಯಸೇ ॥ 8 ॥**

ನಾನು ಇಲ್ಲಿಗೂ ಬಂದದ್ದೂ ನಿನಗೆ ಇಷ್ಟವಾಗಿರಲಿಕ್ಕಿಲ್ಲ ಅಲ್ಲವೆ? ಹಾಗಿಲ್ಲವಾದರೆ ನಾನು ಬರದಿದ್ದರೂ ನನಗೆ ಮಾತ್ರ ನೀನು ಅತಿಥಿ ಸತ್ಕಾರ ಮಾಡಿರುವುದಿಲ್ಲ. ನಾನು ರಾಜನಲ್ಲವಾದ್ದರಿಂದ ರಾಜಸತ್ಕಾರಕ್ಕೆ ಅಪಾತ್ರನೆಂದು ನಿನ್ನ ಭಾವನೆ.

ನಿನ್ನ ಅಭಿಪ್ರಾಯದಂತೆ ಅಪಾತ್ರನಾದ ನನ್ನನ್ನು ಬಿಟ್ಟು ಪಾತ್ರರಾದವರಿಗೆ ನೀನು ನಿನ್ನ ಮಗಳನ್ನು ಕೊಡು. ನಾನು ಬಂದೆನೆಂದು ಕನ್ಯದಾನ ಮಾಡದಿರಬೇಡ.

**ಕನ್ಯಾವಿಘ್ನಂ ಚ ಕುರ್ವಾಣೋ ನರಕೇ ಪರಿಪಚ್ಯತೇ ।**
**ಅತೋऽರ್ಥಂ ನ ಪ್ರವಿಷ್ಟೋऽಹಂ ರಂಗಮಧ್ಯೇ ವಿಶಾಂಪತೇ ॥ 9 ॥**

**ವಿದಿತ್ವಾ ನಕೃತಾತಿಥ್ಯಂ ನರದೇವ ತವಾಲಯಮ್ ।**
**ಆವಾಭ್ಯಾಂ ಕೃತಮಾತಿಥ್ಯಂ ಕೈಶಿಕಸ್ತು ಪ್ರಿಯಾತಿಥಿಃ ॥ 10 ॥**

ರಾಜನೇ! ಮನ್ವಾದಿಗಳ ಅಭಿಪ್ರಾಯದಲ್ಲಿ ಕನ್ಯೆಯ ವಿವಾಹಕ್ಕೆ ವಿಘ್ನವನ್ನೊಡ್ಡುವುದು ನರಕದಲ್ಲಿ ದುಃಖಕ್ಕೆ ಕಾರಣವಾಗುತ್ತದೆ. ನನ್ನಿಂದ ಕನ್ಯಾ ವಿವಾಹಕ್ಕೆ ಅಡ್ಡಿ ಬರುವುದು ಬೇಡ.

ಈ ಕಾರಣದಿಂದಾಗಿ ನಾನು ರಾಜರಿರುವ ರಂಗಮಂಟಪಕ್ಕೆ ಬರಲಿಲ್ಲ. ನನ್ನನ್ನು ನೋಡಿ ನೀನು ಸತ್ಕಾರವನ್ನೂ ಮಾಡುವುದಿಲ್ಲವೆಂಬುದನ್ನು ತಿಳಿದೇ ನಿನ್ನ ಅರಮನೆಯಲ್ಲಿ ಉಳಿಯಲು ಬರದೆ ಕೈಶಿಕನ ಮನೆಯಲ್ಲಿ ತಂಗಿದ್ದು ಅತಿಥಿಪ್ರಿಯನಾದ ಕೈಶಿಕ ನನಗೆ ಹಾಗೂ ಗರುಡನಿಗೆ ಸ್ವರ್ಗದಲ್ಲಿರುವಂತೆ ನೋಡಿಕೊಂಡಿದ್ದಾನೆ ಎಂದನು.

*ವೈಶಂಪಾಯನ ಉವಾಚ –*

**ಏವಮೇವ ಬ್ರುವಾಣಂ ತು ಕೃಷ್ಣಂ ವಾಗ್ವಜ್ರ ಚೋದಿತಮ್ ।**
**ಶ್ಲಕ್ಷ್ಣವಾಚಾಂಬುನಾऽऽಸಿಚ್ಯ ಶಮಿತೋऽಗ್ನಿರಿವ ಜ್ವಲನ್ ॥ 11 ॥**

**ಪ್ರಸೀದ ದೇವ ದೇವೇಶ ಪಾಹಿ ಮಾಂ ಲೋಕಶಾಸನ ।**
**ಅಜ್ಞಾನ ತಮಸಾವಿಷ್ಟಂ ಜ್ಞಾನ ಚಕ್ಷುಃ ಪ್ರದೋ ಭವ ॥ 12 ॥**

**ಭವಂತಂ ಶರಣಂ ಪ್ರಾಪ್ಯ ದೇವಾನಾಮಪಿ ದೈವತಮ್ ।**
**ಸಮ್ಯಗ್ ಭವತು ಮೇ ದೃಷ್ಟಿಃ ಸಂಪಶ್ಯಂತು ಚ ಮೇ ಕ್ರಿಯಾಃ ॥ 13 ॥**

ಜನಮೇಜಯನೇ, ಹೀಗೆ ಶ್ರೀಕೃಷ್ಣನು ವಾಗ್ ಪ್ರಹಾರದಿಂದ ಪ್ರಹರಿಸುತ್ತಿದ್ದಾಗ ಮುಂದಿನ ಮಧುರ ಮಾತಿನಿಂದ ಅಗ್ನಿಯನ್ನು ನೀರಿನಿಂದ ಶಾಂತಗೊಳಸುವಂತೆ ಶಾಂತ ಮಾಡಲುದ್ಯುಕ್ತನಾದನು.

ಕೃಷ್ಣನೆ! ಅಜ್ಞಾನವೆಂಬ ಗಾಢಾಂಧಕಾರದಲ್ಲಿ ಕಣ್ಣುಗಳು ಕಾಣಿಸದೆ ನಿನ್ನನ್ನು

ಅವಮಾನಿಸಿದ್ದೇನೆ. ಜ್ಞಾನಾಂಜನಶಲಾಕೆಯಿಂದ ನನ್ನ ಅಜ್ಞಾನದ ಪೊರೆ ದೂರಮಾಡು. ಮನುಷ್ಯರಾದ ನಾವು ಚರ್ಮದ ನೇತ್ರಗಳಿಂದ ಅಪ್ರಾಕೃತ ವಿಗ್ರಹವನ್ನು ನೋಡುವುದಾದರೂ ಹೇಗೆ? ನಿನ್ನಲ್ಲಿ ಶರಣು ಬಂದಿರುವೆ. ಸತ್ಪಥದಲ್ಲಿ ನನ್ನ ದೃಷ್ಟಿಯಿರುವಂತೆ ಅನುಗ್ರಹಿಸು. ನಿನ್ನ ಶರಣು ಹೊಂದಿರುವ ನನಗೆ ಇನ್ನು ಯಾರ ಭಯವೂ ಇರುವುದಿಲ್ಲ.

**ನ ದಾತುಮಿಚ್ಛೇ ಕನ್ಯಾಂ ವೈ ಪಾರ್ಥಿವೇಭ್ಯಃ ಸ್ವಯಂವರೇ ।**
**ಪ್ರಸಾದಂ ಕುರು ದೇವೇಶ ನ ಕೋಪಂ ಕರ್ತು ಮರ್ಹಸಿ ॥ 14 ॥**

*ಶ್ರೀಕೃಷ್ಣ ಉವಾಚ–*

**ವಚನೇನ ಕಿಮುಕ್ತೇನ ತ್ವಯಾ ರಾಜನ್ ಮಹಾಮತೇ ।**
**ಸ್ವಕನ್ಯಾಂ ದಾಸ್ಯಸೇ ನೇತಿ ಕೋಽತ್ರ ನೇತಾ ತವಾನಘ ॥ 15 ॥**
**ಮಾ ದೇಹೀತಿ ನ ಚಾಖ್ಯೇಯಂ ದದಸ್ವೇತಿ ನ ಮೇ ವಚಃ ।**
**ರುಗ್ಮಿಣ್ಯಾ ದಿವ್ಯ ಮೂರ್ತಿಸ್ತ್ವಂ ಸಂಬಂಧೇ ಕಾರಣಂ ಮಮ ॥ 16 ॥**

ದೇವೇಶನೇ ಶ್ರೀಕೃಷ್ಣನೇ, ನಾನಂತೂ ಸ್ವಯಂವರದ ಮೂಲಕ ನನ್ನ ಮಗಳ ವಿವಾಹ ಮಾಡುವುದಿಲ್ಲ. ನೀನು ಕೋಪಿಸಬೇಡ.

ಶ್ರೀಕೃಷ್ಣನು - ಮಹಾಮತಿಯಾದ ನೀನು ಕೇವಲ ಮಾತನಾಡುವುದರಿಂದ ಯಾವ ಪ್ರಯೋಜನವೂ ಇರುವುದಿಲ್ಲ. ರಾಜೇಂದ್ರನಾಗಿರುವ ನಿನ್ನನ್ನು ಕನ್ಯೆಯನ್ನು ಯಾರಿಗೆ ಕೊಡುವೆ? ಯಾರಿಗೆ ಕೊಡುವುದಿಲ್ಲ, ಏಕೆ? ಎಂದು ಪ್ರಶ್ನಿಸುವವರು ಯಾರಿದ್ದಾರೆ.

ರಾಜನೇ ನಿನ್ನ ಪುತ್ರಿಯನ್ನು ಅವರಿಗೆ ಕೊಡಬೇಡ, ನನಗೇ ಕೊಡು ಎಂದು ಹೇಳಲು ಬಂದಿರುವುದಿಲ್ಲ. ರುಗ್ಮಿಣಿಯ ದಿವ್ಯ ಅಪ್ರಾಕೃತ ಶರೀರವುಳ್ಳವಳು. ಆ ದಿವ್ಯತೆಯೇ ನನ್ನನ್ನು ಸಂಬಂಧ ಹೊಂದಲು ಕಾರಣವಾಗಿದೆ.

## ಮೇರುಕೂಟದಲ್ಲಿ ಸಮಾಲೋಚನೆ

**ಮೇರುಕೂಟೇ ಪುರಾ ದೇವೈಃ ಕೃತಮಂಶಾವತಾರಣಮ್ ।**
**ತದಾ ನಿಸೃಷ್ಟಾ ಶ್ರೀಃ ಪೂರ್ವಂ ಗಚ್ಛತ್ವಂ ಪತಿನಾ ಸಹ ॥ 17 ॥**
**ಮಾನುಷ್ಯೋ ಕುಂಡಿನಪುರಂ ಭೀಷ್ಮಕಸ್ಯಾಂಗನೋದರೇ ।**
**ಜಾಯಸ್ವ ವಿಪುಲ ಶ್ರೋಣಿ! ಪ್ರತ್ಯವೇಕ್ಷ್ಯ ಚ ವಾಸವಮ್ ॥ 18 ॥**

**ತೇನಾಹಂ ವಃ ಪ್ರವಕ್ಷ್ಯಾಮಿ ರಾಜನ್ ಅಕೃತಕಂ ವಚಃ ।**
**ಶ್ರುತ್ವಾ ಸ್ವಯಂ ವಿನಿಶ್ಚಿತ್ಯ ಯದ್ ಯುಕ್ತಂ ತತ್ ಕರಿಷ್ಯತಿ ॥ 19 ॥**

ರಾಜನೇ, **ರುಗ್ಮಿಣಿ**[1]ಯ ವಿಷಯ ತಿಳಿಸುತ್ತೇನೆ ಕೇಳು? ಹಿಂದೆ ಒಂದು ಬಾರಿ ದೇವತೆಗಳೆಲ್ಲ ಮೇರುವಿನಲ್ಲಿ ಸೇರಿದ್ದರು. ಎಲ್ಲರೂ ತಮ್ಮ ತಮ್ಮ ಅಂಶಗಳಿಂದ ಭೂಮಿಯಲ್ಲಿ ಅವತರಿಸಲು ನಿಶ್ಚಯಿಸಿದರು. ಆಗ ಬ್ರಹ್ಮದೇವನು ಲಕ್ಷ್ಮೀದೇವಿಯನ್ನು ಕುರಿತು – ಮಹಾತಾಯೆ! ನೀನು ನಿನ್ನ ಪತಿಯೊಂದಿಗೆ ಭೂಮಿಯಲ್ಲಿರುವ ಕುಂಡಿನಪುರದಲ್ಲಿ ಭೀಷ್ಮಕನೆಂಬ ರಾಜನ ಮನೆಯಲ್ಲಿ ಅವನ ಮಗಳಾಗಿ ಅವತರಿಸು. ಇಂದ್ರನ ಮೇಲೆ ದಯೆ ತೋರಿ ಅವನ ಕಾರ್ಯಕ್ಕಾಗಿ ನೀನು ಅವತರಿಸಬೇಕು. ರಾಜನೇ! ಬ್ರಹ್ಮದೇವರ ಪ್ರಾರ್ಥನೆಯಂತೆ ಸಾಕ್ಷಾಲ್ಲಕ್ಷ್ಮೀದೇವಿಯು ನಿನ್ನ ಮನೆಯಲ್ಲಿ ಅವತರಿಸುವಳು. ಇದೇನು ಕೃತ್ರಿಮ ಮಾತಲ್ಲ. ನಿಜವಾದ ವಿಷಯ ಇದನ್ನು ಕೇಳಿದ ಮೇಲೆ ಯಾವುದು ಯುಕ್ತವೆಂದು ನೀನೆ ನಿರ್ಣಯಿಸು.

### ರುಗ್ಮಿಣಿ ಸಾಕ್ಷಾಲ್ಲಕ್ಷ್ಮೀದೇವಿಯು

**ರುಗ್ಮಿಣೀ ನಾಮ ತೇ ಕನ್ಯಾ ನ ಸಾ ಪ್ರಾಕೃತ ಮಾನುಷೀ ।**
**ಶ್ರೀರೇಷಾ ಬ್ರಹ್ಮವಾಕ್ಯೇನ ಜಾತಾ ಕೇನಾಪಿ ಹೇತುನಾ ॥ 20 ॥**

**ನ ಚ ಸಾ ಮನುಜೇಂದ್ರಾಣಾಂ ಸ್ವಯಂವರ ವಿಧಿಕ್ಷಮಾ ॥ 21 ॥**

**ಏಕಾ ತ್ವೇಕಾಯ ದಾತವ್ಯಾ ಇತಿ ಧರ್ಮೋ ವ್ಯವಸ್ಥಿತಃ ॥ 22 ॥**

ರುಗ್ಮಿಣಿಯು ಸಾಧಾರಣ ಸ್ತ್ರೀಯಲ್ಲ. ಸಾಕ್ಷಾತ್ತಾಗೆ ಲಕ್ಷ್ಮೀದೇವಿಯೇ ಬ್ರಹ್ಮನ

---

1. ರುಗ್ಮಿಣೀ:
ಇಯಂ ರಮಾ ತವಾತ್ಮಜಾ ಬಭೂವ ತಾಂ ಹರೇರ್ನ ಕ್ವಚಿತ್ ।
ದದಾತಿ ಚೇತ್ ತದಾ ಪಿತಾ ನಿರಿಂದಿರೋ ವ್ರಜೇದಧಃ ॥
ಹಿತಾಯ ಚೈತದೀರಿತಂ ತವಾನ್ಯಥಾ ನ ಚಿಂತಯ ।
ನ ಯೋಷಿದಿಚ್ಛಯಾ ತ್ವಹಂ ಬ್ರವೀಮಿ ಪಶ್ಯ ಯಾದೃಶಃ ॥
ಸ ವಿಶ್ವರೂಪ ಮುತ್ತಮಂ ವಿಸಂಖ್ಯ ಬಾಹು ಶೀರ್ಷಕಮ್ ।
ಪ್ರಪಶ್ಯ ಯಾದೃಶಾಃ ಸ್ತ್ರಿಯೋ ಮಮೇತ್ಯದರ್ಶಯತ್ ಶ್ರಿಯಂ ॥
ಅನಚಿತರೂಪಿಣೀಂ ಪರಾಂ ಮನುಷ್ಯ ದೃಷ್ಟಿತೋಽಧಿಕಾಮ್ ।
ಸ ರುಗ್ಮಿಣೀತನೋರಪಿ ವ್ಯದರ್ಶಯಚ್ಚ ದೇವತಾಃ ॥ *–ತಾ.ನಿ. 17/52–57*

ಪ್ರಾರ್ಥನೆಯಂತೆ ವಿಶೇಷ ಕಾರಣದಿಂದಾಗಿ ನಿನ್ನ ಮನೆಯಲ್ಲಿ ಅವತರಿಸಿರುವಳು. ನಾನಾ ರಾಜರ ಸಮ್ಮುಖದಲ್ಲಿ ಅವಳನ್ನು ಸ್ವಯಂವರ ಪದ್ಧತಿಯಂತೆ ವಿವಾಹ ಮಾಡಲು ಅನರ್ಹಳು.

ಈ ದಿವ್ಯಕನ್ಯೆಯನ್ನು ದಿವ್ಯಪುರುಷನಾದ ಏಕನೂ ಅದ್ವಿತೀಯನೂ ಆದ ಏಕನಿಗೆ ನೀಡಬೇಕು (ಏಕೋ ನೈಕಃ). ಆದ್ದರಿಂದ ಇವಳಿಗೆ ಸದೃಶನಾದ ವರನಿಗೆ ಇವಳನ್ನು ಕೊಡುವುದುತ್ತಮ.

ಈ ಮಹಾಲಕ್ಷ್ಮೀ ಸ್ವರೂಪಿಣೀಯಾದ ರುಗ್ಮಿಣಿಯನ್ನು ಸ್ವಯಂವರಕ್ಕೆ ವಿಘ್ನವುಂಟು ಮಾಡಲೆಂದೇ ದೇವೇಂದ್ರನು ಇಲ್ಲಿಗೆ ಕಳುಹಿಸಿರುವನು. ನಾನೂ ಸಹ ಸುಗುಣಮಣಿ ರುಗ್ಮಿಣಿಯನ್ನು ನೋಡಲು ಬಂದಿರುವೆನು. ನೀನು ನನ್ನ ಅಪರಾಧ ಕ್ಷಮಿಸು' ಎಂದು ಬೇಡಿರುವೆ. ನಾನೂ ಸಹ ನಿನ್ನ ರಾಜ್ಯಕ್ಕೆ ವಿರೋಧಭಾವದಿಂದ ಬಂದವನಲ್ಲ. ನಿನ್ನನ್ನು ಕ್ಷಮಿಸಿದ್ದೇನೆ.

ಕ್ಷಮಾವಂತರಲ್ಲಿ ಗುಣಬಾಹುಲ್ಯವಿರುತ್ತದೆ. ನಿನ್ನಂತಹ ಸತ್ಕುಲಪ್ರಸೂತನಲ್ಲಿ ದುರ್ಭಾವನೆ ಇರಲಾರದು.

ನಾನು ಸೈನ್ಯದೊಂದಿಗೆ ಇಲ್ಲಿಗೆ ಬಂದಿದ್ದರೂ ಶಾಂತನಾಗಿರುವೆನೆಂದೇ ತಿಳಿ. ನಾನು ಯುದ್ಧಕ್ಕೆ ಹೋಗುವುದಾದಲ್ಲಿ ಶಂಖಚಕ್ರಗದಾದಿಯುಕ್ತನಾಗಿಯೇ ಹೋಗುವೆನು.

**ಮಾನ್ಯೋऽಸ್ಮಾಕಂ ತ್ವಯಾ ರಾಜನ್ ವಯಸಾ ಚ ಪಿತಾ ಮಮ ।**
**ಪಾಲಯಸ್ವ ಪುರೀಂ ಸಮ್ಯಕ್ ಕ್ಷತ್ರೇಷು ಪಿತೃವದ್ ವಸ ॥ 23 ॥**
**ಕಲುಷೋನಾಮ ರಾಜೇಂದ್ರ ವಸೇತ್ ಕಾಪುರುಷೇಷು ವೈ ॥ 24 ॥**

ರಾಜನೇ! ನನಗೆ ನನ್ನ ತಂದೆಯು ಮಹಾಮಾನ್ಯನಾಗಿರುವನು. ನೀನಾದರೂ ವಯಸ್ಸಿನಲ್ಲಿ ನನ್ನ ತಂದೆಗೂ ಸಮಾನನಾಗಿದ್ದು ನನಗೆ ಪಿತೃತುಲ್ಯನೇ ಆಗಿರುವಿ. ನೀನು ನಿನ್ನ ನಗರವನ್ನು ಚೆನ್ನಾಗಿ ಪಾಲಿಸುತ್ತಾ ಸರ್ವರ ಆದರಣೆಗೂ ಪಾತ್ರನಾಗು. ಕೆಟ್ಟ ಭಾವನೆ ಕೆಟ್ಟವರಲ್ಲಿ ಮಾತ್ರ ಇರುವ ಧರ್ಮವಾಗಿದ್ದು ನಿನ್ನಂತಹ ಸಜ್ಜನಲ್ಲಿ ಕಾಲುಷ್ಯವಿರಲಾರದು. ನನ್ನ ವ್ಯವಹಾರವೂ ಸಹ ಕೆಟ್ಟಭಾವನೆವುಳ್ಳದಲ್ಲ. ನಾನು ಹೇಳಿರುವ ಸಂಗತಿಯೆಲ್ಲ ಸದ್ಭಾವನೆಯಿಂದ ಕೂಡಿದ್ದು.

**ಆತಿಥ್ಯಕರಣೇऽಸ್ಮಾಕಂ ಸ್ವರಾಜ್ಯಂ ದದತಾವುಭೌ ।**
**ತೇನ ದಾನಫಲೇನಾಸ್ಯ ದಶಪೂರ್ವಾ ದಿವಂ ಗತಾಃ ॥ 25 ॥**

**ಭವಿಷ್ಯಾಶ್ಚೈವ ರಾಜಾನಃ ಪುತ್ರಪೌತ್ರಾ ದಶಾವರಾಃ ।**
**ತೇಽಪಿ ತತ್ರೈವ ಯಾಸ್ಯಂತಿ ದೇವಲೋಕಂ ನರಾಧಿಪಾಃ ॥ 26 ॥**

ಇನ್ನು ನಿನ್ನ ತಮ್ಮಂದಿರಾದ ಕ್ರಥ-ಕೈಶಿಕರು ನನ್ನನ್ನು ಸತ್ಕರಿಸುತ್ತಾ ತಮ್ಮ ರಾಜ್ಯವನ್ನೆ ಧಾರೆಯೆರೆದರು. ಇಂತಹ ಫಲದಿಂದಾಗಿ ಅವರ ಹಿಂದಿನ ಹತ್ತುತಲೆಗಳೂ ಮುಂದಿನ ಹತ್ತು ತಲೆಮಾರಿನ ಪುತ್ರ ಪೌತ್ರಾದಿಗಳೆಲ್ಲ ದೇವಲೋಕ ಸೇರಿದರು.

ಇವರಿಬ್ಬರೂ ಸಹ ಬಹುಕಾಲ ರಾಜ್ಯಭೋಗವನ್ನು ಅನುಭವಿಸಿ ಮುಂದೆ ಮೋಕ್ಷಮಾರ್ಗ ಹಿಡಿಯುವರು.

ನನಗೆ ಪಟ್ಟಾಭಿಷೇಕ ಮಾಡುವಾಗ ಯಾವ ಯಾವ ರಾಜರು ಸದ್ಭಾವನೆಯಿಂದ ಈ ಮಹೋತ್ಸವಕ್ಕೆ ಪಾಲ್ಗೊಂಡಿದ್ದರೋ ಅವರೆಲ್ಲರೂ ಮುಂದೆ ಸ್ವರ್ಗ ಸೇರುವುದು ನಿಶ್ಚಯ.

**ಸ್ವಸ್ತಿ ವೋಽಸ್ತು ಗಮಿಷ್ಯಾಮಿ ವೈನತೇಯ ಸಹಾಯವಾನ್ ।**
**ನಗರೀಂ ಮಥುರಾಂ ರಮ್ಯಾಂ ಭೋಜರಾಜೇನ ಪಾಲಿತಾಮ್ ॥ 27 ॥**

ರಾಜರೇ, ನಿಮಗೆಲ್ಲರಿಗೂ ಮಂಗಳವಾಗಲಿ, ಗರುಡನೊಂದಿಗೆ ಭೋಜರಾಜ ಪಾಲಿತವಾದ ಮಥುರೆಗೆ ಹೋಗಿ ಬರುತ್ತೇನೆ ಭೀಷ್ಮಕ ನಿನಗೆ ಇನ್ನೊಂದು ಮಾತನ್ನು ಹೇಳುವೆ ಕೇಳು. ರುಗ್ಮಿಣಿಯು ಸಾಕ್ಷಾತ್ತಾಗಿ ಮಹಾಲಕ್ಷ್ಮೀ ಸ್ವರೂಪಳು. ಅವಳನ್ನು ಯಾರ್ಯಾರಿಗೂ ಸ್ವಯಂವರದಲ್ಲಿ ಕೊಡಲು ಯೋಗ್ಯಳಲ್ಲ. ಅವಳನ್ನು ಶ್ರೀಮನ್ನಾರಾಯಣನಾದ ನನಗೆ ವಿವಾಹ ಮಾಡಿಕೊಡು ಹೀಗಾದಲ್ಲಿ ಲಕ್ಷ್ಮೀನಾರಾಯಣರನ್ನು ಒಂದುಗೂಡಿಸಿದ ಪುಣ್ಯದಿಂದಾಗಿ ಅಷ್ಟೈಶ್ವರ್ಯವನ್ನೂ ಅನುಗಾಲ ಹೊಂದುವೆ. ಅನ್ಯಥಾ ಇಂದಿರಾದೇವಿ-ಇಂದಿರಾಪತಿ ಇವರಿಬ್ಬರನ್ನೂ ಬೇರೆ ಮಾಡಿದ ಪಾಪದಿಂದಾಗಿ ನಷ್ಟೈಶ್ವರ್ಯ ಹೊಂದಿ ದುಃಖಪಡುವೆ. ನಿನ್ನ ಮಗಳ ಮೇಲೆ ಮೋಹದಿಂದಾಗಿ ಹೀಗೆ ಹೇಳುತ್ತಿರುವೆನೆಂದು ತಿಳಯಬೇಡ. ನಿನಗೆ ದಿವ್ಯ ದೃಷ್ಟಿ ನೀಡುವೆ. ನನ್ನ ವಿಶ್ವರೂಪ ನೋಡು ಎಂದು ತೋರಿಸಿದನು.

### ವಿಶ್ವರೂಪದರ್ಶನ

**ಆದ್ಯಂ ಸ್ವಾಯಂಭುವಂ ರೂಪಂ ಸುರಾಸುರ ನಮಸ್ಕೃತಮ್ ।**
**ಸಹಸ್ರಪಾತ್ ಸಹಸ್ರಾಕ್ಷಂ ಸಹಸ್ರಭುಜವಿಗ್ರಹಮ್ ॥ 28 ॥**

**ಸಹಸ್ರ ಶಿರಸಂ ದೇವಂ ಸಹಸ್ರ ಮುಕುಟೋಜ್ವಲಮ್ ।**
**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ॥ 29 ॥**

**ದಿವ್ಯಾಭರಣ ಸಂಯುಕ್ತಂ ದಿವ್ಯಾನೇಕೋದ್ಯತಾಯುಧಮ್ ।**
**ಕೃಷ್ಣಂ ರಕ್ತಾರವಿಂದಾಕ್ಷಂ ಚಂದ್ರ ಸೂರ್ಯಾಗ್ನಿ ಲೋಚನಮ್ ।**
**ದೃಷ್ಟ್ವಾ ಸ ರಾಜಾ ರಾಜೇಂದ್ರಂ ಪ್ರಣಿಪತ್ಯ ಕೃತಾಂಜಲಿಃ ॥ 30 ॥**

ಆದಿಕಾರಣನೂ ಸ್ವಯಂಭುವೂ, ಸುರಾಸುರ ನಮಸ್ಕೃತನೂ, ಅನಂತಾನಂತ ಪಾದಗಳುಳ್ಳವನೂ, ಅನಂತಾನಂತ ನೇತ್ರನೂ, ಅನಂತಭುಜನೂ, ಅನಂತಶಿರಸ್ಕನೂ, ಅನಂತಕಿರೀಟಧಾರಿಯೂ, ದಿವ್ಯಮಾಲ್ಯ-ಗಂಧಧಾರಿಯೂ, ಪೀತಾಂಬರಧಾರಿಯೂ, ಅನೇಕ ದಿವ್ಯಾಭರಣ ಧರಿಸುವವನೂ, ಪುಂಡರೀಕಾಕ್ಷನೂ, ಸೋಮಸೂರ್ಯಾಗ್ನಿನೇತ್ರನೂ ಹದಿನಾಲ್ಕು ಲೋಕಕ್ಕೂ ಅಧಿನೇತನಾದ ಭಗವಂತನ ವಿಶ್ವರೂಪವನ್ನು ನೋಡಿ ಬೆರಗಾದನು.

ಭಗವಂತನು ಅನಂತಾಸೌದರ್ಯವತಿಯೂ, ತನ್ನದೆ ಆದ ರುಗ್ಮಿಣೀ ರೂಪಕ್ಕಿಂತಲೂ ಮನುಷ್ಯ ದೃಷ್ಟಿಯಿಂದ ಮಾತ್ರ ಅಧಿಕ ಸೌಂದರ್ಯವುಳ್ಳ, ಎದೆ, ತೊಡೆ ಮೊದಲಾದ ಭಗವಂತನ ಅವಯವಗಳಲ್ಲಿ ಪಾದಸೇವೆಗಾಗಿ ಅನಂತರೂಪಧರಿಸಿರುವ ಲಕ್ಷ್ಮೀದೇವಿಯನ್ನೂ ತೋರಿಸಿದ. ಅವಳೊಂದಿಗೆ ಇತರ ಬ್ರಹ್ಮಾದಿಗಳನ್ನು ತೋರಿಸಿದ.

ಈ ರೂಪವನ್ನು ನೋಡಿ ಮಾತು, ಮನಸ್ಸು ಶರೀರಗಳಿಂದಲೂ ಶ್ರೀಕೃಷ್ಣನನ್ನು ಸ್ತುತಿಸಿದ. ಈ ಅದ್ಭುತ ರೂಪ ನೋಡಿ ಭೀಷ್ಮಕನಿಗೆ ಭಯವಾಯಿತು. ಶ್ರೀಕೃಷ್ಣನ ಪಾದಗಳಿಗೆ ಬಿದ್ದು ಸ್ತುತಿ ಮಾಡಿದ.

## ಭೀಷ್ಮಕ ಸ್ತುತಿ

**ದೇವದೇವ ನಮಸ್ತುಭ್ಯಂ ಅನಾದಿನಿಧನಾಯ ವೈ ।**
**ಶಾಶ್ವತಾಯಾದಿ ದೇವಾಯ ನಾರಾಯಣ ಪರಾಯಣ ॥ 31 ॥**

ಬ್ರಹ್ಮಾದಿದೇವತೆಗಳಿಗೂ ದೇವನೂ, ಆದ್ಯಂತ ರಹಿತನೂ, ಶಶ್ವದೇಕಪ್ರಕಾರನೂ ಭಕ್ತಪರಾಯಣ ನಾರಾಯಣನಿಗೆ ನಮಸ್ಕಾರಗಳು.

ಸ್ವಯಂ ಅಭಿವ್ಯಕ್ತನೂ, ವಿಶ್ವಾದಿ ಸಹಸ್ರರೂಪಿಯೂ, ಸ್ಥಾಣವೆನಿಸಿದ ರುದ್ರನಿಗೂ ಸ್ಥಾಣುತ್ವದಾತನೂ ಬ್ರಹ್ಮನಲ್ಲಿದ್ದು ಬ್ರಹ್ಮ ಎನಿಸಿದವನೂ, ಕಮಲನಾಭನೂ,

ಪರಶುರಾಮಾದಿ ಅವತಾರದಲ್ಲಿ ಜಟಾಧಾರಿಯೂ, ಸಂಕರ್ಷಣ ರೂಪದಲ್ಲಿ ದಂಡಧಾರಿಯೂ, ಪಿಂಗಲವರ್ಣನೂ ವಾಸುದೇವಾದಿ ರೂಪದಲ್ಲಿ ಹಂಸದಂತೆ ಸ್ವಚ್ಛ ವರ್ಣದವನೂ, ಚಕ್ರರೂಪಿಯೂ ವಿಕುಂಠಾ ಪುತ್ರನೆನಿಸಿದವನೂ, ಜನ್ಮರಹಿತನೂ ಪರಮಾತ್ಮನೂ, ಯೋಗ್ಯತೆಯಂತೆ ಸದ್ಭಾವ-ಅಸದ್ಭಾವಯುಕ್ತನೂ, ಪುರಾಣಪುರುಷನೂ, ಕ್ಷರಾಕ್ಷರುತ್ಮನೂ, ಭಕ್ತರಲ್ಲಿ ಮನೋಯೋಗವುಳ್ಳವನೂ, ಪ್ರಾಕೃತಗುಣರಹಿತನೂ, ನಿನಗೆ ನಮಸ್ಕಾರಗಳು. ನೀನು ಹೇಳಿದಂತೆ ನಡೆಸುವೆ. ನನ್ನನ್ನು ರಕ್ಷಿಸು ಎಂದು.

**ಏವಂ ಸ್ತುತ್ವಾ ಮಹಾದೇವಂ ನೃಪಾಣಾಮಗ್ರತೋ ನೃಪಃ ।**
**ಶಾತಕುಂಭಸ್ಯ ನಿಚಯಂ ಕೃಷ್ಣಾಯ ಪ್ರದದೌ ನೃಪಃ ॥ 32 ॥**

**ನಮಸ್ತಸ್ಮೈ ಖಗೇಂದ್ರಾಯ ನಮೋ ಮಾರುತ ರಂಹಸೇ ।**
**ಕಾಮರೂಪಾಯ ದಿವ್ಯಾಯ ಕಾಶ್ಯಪಾಯ ಚ ವೈ ನಮಃ ॥ 33 ॥**

ಭೀಷ್ಮಕ ರಾಜನು ಸಮಸ್ತ ರಾಜರ ಮಧ್ಯದಲ್ಲಿ ಶ್ರೀಕೃಷ್ಣನನ್ನು ಸ್ತೋತ್ರ ಮಾಡಿ ಮಣಿ ಮಾಣಿಕ್ಯ ವೈಡೂರ್ಯಾದಿಗಳನ್ನು ಬಹುಮಾನವಾಗಿ ನೀಡಿದನು.

ವಾಯುವಿನಂತೆ ವೇಗವುಳ್ಳ, ಕಾಮರೂಪಿಯಾದ ವಿನತಾ ತನೂಜನೆ ನಿನಗೂ ನಮಸ್ಕಾರ ಎಂದು ಸ್ತೋತ್ರ ಮಾಡಿದನು.

ನಂತರ ಶ್ರೀಕೃಷ್ಣನನ್ನು ಬೀಳ್ಕೊಟ್ಟನು. ರಾಜರೆಲ್ಲರೂ ಅವನ ಹಿಂದೆ ಹೋದರು. ಅವರಿಂದಲೂ ಸತ್ಕಾರ ಸ್ವೀಕರಿಸಿ ಹೊರಟನು.[2]

**ಜಗಾಮ ಮಥುರಾಂ ಕೃಷ್ಣಃ ದ್ಯೋತಯಾನೋ ದಿಶೋ ದಶ ।**
**ವೈನತೇಯಂ ಪುರಸ್ಕೃತ್ಯ ಸೌಮ್ಯರೂಪಂ ಖಗೋತ್ತಮಮ್ ॥ 34 ॥**

**ಭೇರಿಪಟಾಹನಾದೇನ ಶಂಖ ದುಂದುಭಿ ನಿಸ್ವನೈಃ ।**
**ಸಿಂಹನಾದೇನ ಶೂರಾಣಾಂ ರಥನೇಮಿಸ್ವನೇನ ಚ ॥ 35 ॥**

ಉಪೇಂದ್ರನಾದ ಶ್ರೀಕೃಷ್ಣನು ಹೊರಟ ಕೂಡಲೇ ಇತರ ರಾಜರೂ

---

2. ತದದ್ಭುತಂ ಸಮೀಕ್ಷ್ಯ ತು ಪ್ರಭೀತ ಆಶು ಭೀಷ್ಮಕಃ ।
ಪಪಾತ ಪಾದಯೋಃ ವಿಭೋಃ ಕರೋಮಿ ತತ್ ತಥೇತಿ ಚ ॥
ಪುನಶ್ಚ ವಿಶ್ವರೂಪತಾಂ ಪಿಧಾಯ ಪದ್ಮಲೋಚನಃ ।
ಜಗಾಮ ಪಕ್ಷಿವಾಹನಃ ಪುರೀಂ ಸ್ವಬಾಹು ಪಾಲಿತಮ್ ॥ -ತಾ.ನಿ. 17/58-59

ಅವನನ್ನನ್ನುಸರಿಸಿ ಹೋದರು. ರಾಜರಿಂದ ಸತ್ಕೃತನಾಗಿ ತನ್ನ ಕಾಂತಿಯಿಂದ ಹತ್ತೂ ದಿಕ್ಕನ್ನು ಬೆಳಗಿಸುತ್ತಾ ಮಥುರೆಗೆ ಗರುಡನೊಂದಿಗೆ ಹೊರಟನು. ಮಂಗಳ ವಾದ್ಯಗಳು ಮೊಳಗಿದ್ದವು. ಶಂಖ ದುಂದುಭಿ ಧ್ವನಿಗಳೂ, ರಾಜರ ಜಯಕಾರ ಶಬ್ದವೂ, ರಥಗಳ ನೇಮಿಗಳ ಶಬ್ಧಗಳಿಂದ ಸಂಭ್ರಮದ ಶಬ್ಧಗಳು ಕೇಳಿಬಂದವು.

**ಗತೇ ಕೃಷ್ಣೇ ಮಹಾವೀರ್ಯೇ ಆದಾಯ ವರಮಾಸನಮ್ ।**
**ಸಭಾಮಾದಾಯ ದೇವಾಶ್ಚ ಪ್ರಯಯುಃ ತ್ರಿದಶಾಲಯಮ್ ॥ 36 ॥**

**ಕ್ರೋಶಮಾತ್ರಮುಪವ್ರಜ್ಯ ಅನುಜ್ಞಾತೇ ಜನಾರ್ದನೇ ।**
**ಪ್ರಯಯುಸ್ತೇ ನೃಪಾಃ ಸರ್ವೇ ಪುನರೇವ ಸ್ವಯಂವರಮ್ ॥ 37 ॥**

ಮಹಾವೀರ್ಯವಂತ ಶ್ರೀಕೃಷ್ಣನು ಮಥುರೆಗೆ ಹೋಗುತ್ತಿದ್ದಂತೆಯೇ, ಶ್ರೀಕೃಷ್ಣನ ಅಭಿಷೇಕಕ್ಕಾಗಿ ಸ್ವರ್ಗದಿಂದ ತಂದಿದ್ದ ಮಹಾಸಿಂಹಾಸನವನ್ನೂ ಹಾಗೂ ಸಭೆಯನ್ನೂ ತೆಗೆದುಕೊಂಡು ಹೋದರು. ಅಲ್ಲಿ ನೆರೆದಿದ್ದ ರಾಜರೆಲ್ಲರೂ ಒಂದು ಕ್ರೋಶ ದೂರ ಅವನ ಹಿಂದೆ ಹೋಗಿ ಅವನು ಅನುಮತಿ ನೀಡಿದ ಮೇಲೆ ಪುನಃ ಸ್ವಯಂವರ ಮಂಟಪಕ್ಕೆ ಹೋದರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ವಿಶ್ವರೂಪದರ್ಶನ ಭೀಷ್ಮಕ ಸ್ತುತಿವೆಂಬಲ್ಲಿ
ಐವತ್ತೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ದ್ವಿಪಂಚಾಶತ್ತಮೋಽಧ್ಯಾಯಃ

*ವೈಶಂಪಾಯನ ಉವಾಚ –*

ತತಃ ಪ್ರಯಾತೇ ವಸುದೇವ ಪುತ್ರೇ ನರಾಧಿಪಾಃ
ಭೂಷಣ ಭೂಷಿತಾಂಗಾಃ।
ಸಭಾಂ ಸಮಾಜಗ್ಮುಃ ಸುರೇಂದ್ರ ಕಲ್ಪಾಃ
ಪ್ರಬೋಧನಾರ್ಥಂ ಗಮನೋತ್ಸವಾಸ್ತೇ ॥ 1 ॥

ರಾಜಾ ಜನಮೇಜಯನೇ! ದೇವಕಿ ವಸುದೇವ ಪುತ್ರನಾದ ಕೃಷ್ಣನು ಮಥುರೆಗೆ ಹಿಂತಿರುಗಿದ ಮೇಲೆ ದೇವೇಂದ್ರ ಸದೃಶರಾದ ರಾಜರೆಲ್ಲರೂ ಭೀಷ್ಮಕನಿಗೆ ಮುಂದಿನ ಕರ್ತವ್ಯದ ಬಗೆಗೆ ಎಚ್ಚರಿಸುವ ಸಲುವಾಗಿ ಸಭಾಮಂಟಪಕ್ಕೆ ಬಂದರು. ಅವರನ್ನು ನೋಡಿ ನೀತಿಯುಕ್ತ ಮಾತನಾಡುವ ಭೀಷ್ಮಕನು ಹೀಗೆಂದನು.

ಸ್ವಯಂವರ ಕೃತಂ ದೋಷಂ ವಿದಿತ್ವಾ ವೋ ನರಾಧಿಪಾಃ ।
ಕ್ಷಂತವ್ಯೋ ಮಮ ವೃದ್ಧಸ್ಯ ದುರ್ದಗ್ಧಸ್ಯ ಫಲೋದಯಮ್ ॥ 2 ॥

ಯಾವ ಸ್ವಯಂವರದಿಂದಾಗಿ ಶ್ರೀಕೃಷ್ಣನಿಗೆ ವಿರೋಧ ಮಾಡಿದಂತಾಗುವುದೋ ಅಂತಹ ಸ್ವಯಂವರವನ್ನೆ ನಾನು ನಿಲ್ಲಿಸಿದ್ದೇನೆ. ನನ್ನನ್ನು ನೀವೆಲ್ಲರೂ ಕ್ಷಮಿಸಿರಿ. ಹೀಗಿದ್ದರೂ ಸ್ವಯಂವರವನ್ನು

ಏರ್ಪಡಿಸಿದ್ದಾರೆ. ಕಾಡ್ಗಿಚ್ಚಿನಿಂದ ಬೆಂದು ಹೋದ ವೃಕ್ಷದಿಂದ ಫಲ ಅರಸಿದಂತೆ ಈ ಸ್ವಯಂವರ ನಿಷ್ಫಲವೆ ಆಗುವುದು.

ಹೀಗೆ ಹೇಳಿ ರಾಜರಿಗೆಲ್ಲ ಗೌರವ ಮಾಡಿ ಅವರವರ ರಾಜ್ಯಕ್ಕೆ ಕಳುಹಿಸಿಕೊಟ್ಟ. ಅವರೂ ಸಹ ಭೀಷ್ಮಕನಿಗೆ ಗೌರವಿಸಿ ಹೊರಟು ಹೋದರು.

**ಜರಾಸಂಧಃ ಸುನೀಥಶ್ಚ ದಂತವಕ್ತ್ರಶ್ಚ ವೀರ್ಯವಾನ್ ।**
**ಏತೇ ಚಾನ್ಯೇ ಚ ಬಹವೋ ದಕ್ಷಿಣಾಪಥಿಕಾ ನೃಪಾಃ ।**
**ಶ್ರೋತುಕಾಮಾಃ ರಹೋ ವಾಕ್ಯಂ ಸ್ಥಿತಾ ವೈ ಭೀಷ್ಮಕಾಂತಿಕೇ ॥ 3 ॥**

ಆದರೆ ಜರಾಸಂಧನ ಶಿಶುಪಾಲ ದಂತವಕ್ತ್ರ ಶಾಲ್ವ ಮಹಾಕೂರ್ಮ ಮೊದಲಾದವರು ಮಾತ್ರ ಭೀಷ್ಮಕನೊಂದಿಗೆ ಏಕಾಂತದಲ್ಲಿ ಮಾತನಾಡಬೇಕೆಂದು ಅಲ್ಲಿಯೆ ನಿಂತರು. ಭೀಷ್ಮಕನು ಅವರನ್ನು ನೋಡಿ,

ರಾಜರೇ! ನಿಮ್ಮೆಲ್ಲರ ಅಭಿಪ್ರಾಯದಂತೆ ಸ್ವಯಂವರವೇರ್ಪಡಿಸಿದೆ. ನನ್ನ ಮಗನ ಭಯವೂ ನನಗಿತ್ತು. ಆದರೆ ಈಗ ಸ್ವಯಂವರ ನಿಲ್ಲಿಸಿದ್ದೇನೆ. ನೀವೆಲ್ಲರೂ ಸತ್ಪುರುಷರು, ನಾವಾದರೂ ನಿತ್ಯಾಪರಾಧಿಗಳು, ನನ್ನನ್ನು ಕ್ಷಮಿಸಿ.

**ಪುತ್ರಸ್ಯ ಚೇಷ್ಟಾಮಾಲೋಕ್ಯ ತ್ರಾಸಾಕುಲಿತಲೋಚನಃ ।**
**ಮನ್ಯೇ ಬಾಲಾನಿಮಾನ್ ಲೋಕಾನ್ ಸ ಏಷಃ ಪುರುಷಃ ಪರಃ ॥ 4 ॥**

**ಸ್ಥಾಪಿತಂ ಭುವಿ ಮರ್ತ್ಯೇಽಸ್ಮಿನ್ ಸ್ವಬಾಹುಬಲಮೂರ್ಜಿತಮ್ ।**
**ಧನ್ಯಾ ಖಲು ಮಹಾಭಾಗಾ ದೇವಕೀ ಯೋಷಿತಾಂ ವರಾ ।**
**ಪುತ್ರಂ ಕಮಲ ಪತ್ರಾಕ್ಷಂ ಕೃತ್ವಾ ಗರ್ಭೇಣ ಕೇಶವಮ್ ॥ 5 ॥**

ರಾಜರೇ ! ನನ್ನ ಪುತ್ರ ರುಗ್ಮಿಯು ಮಾಡುತ್ತಿರುವ ಕಾರ್ಯಗಳನ್ನು ನೋಡಿ ನನ್ನ ನೇತ್ರಗಳೆಲ್ಲವೂ ತ್ರಾಸಗೊಂಡಿವೆ. ಇಂತಹವರೆಲ್ಲರೂ ಮೂರ್ಖರೆಂದೆ ನನ್ನ ಭಾವನೆ. ಶ್ರೀಕೃಷ್ಣನಾದರೂ ಪರಮಪುರುಷನು, ಕೀರ್ತಿವಂತರಲ್ಲಿ ಮಹಾಕೀರ್ತಿವಂತನು. ತನ್ನ ಭುಜಬಲದಿಂದಲೇ ಅಪಾರ ಯಶಸ್ಸನ್ನು ಭೂಮಿಯಲ್ಲಿ ಸ್ಥಾಪಿಸಿರುವನು.

ಮಹಾಭಾಗ್ಯವತಿಯಾದ ದೇವಕಿಯು ಸ್ತ್ರೀಯರಲ್ಲಿಯೇ ಧನ್ಯಳು. ಹಾಗಿಲ್ಲದಿದ್ದರೆ ಕಾಂತಿಯ ರಾಶಿಯೂ, ದೇವಾರ್ಚಿತ ಪಾದನೂ ಈ ಕೃಷ್ಣನನ್ನು

ತನ್ನ ಗರ್ಭದಲ್ಲಿ ಧರಿಸಲು ಸಾಧ್ಯವೇ? ಗರ್ಭದಲ್ಲಿ ಅವನು ಅಡಗುವನೆ. ನಿರನಿಷ್ಠ ನಿರವದ್ಯನಿಗೆ ಗರ್ಭವಾಸವೆಲ್ಲಿಹುದು? ಇಂತಹ ಪರಮಪುರುಷನನ್ನು ನಿರಂತರ ನೇತ್ರಗಳಿಂದ ನೋಡುತ್ತಿರುವ ಅವಳೇ ಧನ್ಯಳು.

ಕೃಷ್ಣನನ್ನು ಪ್ರಶಂಸುತ್ತಿರುವುದನ್ನು ನೋಡಿ ಶಾಲ್ವ ರಾಜನು ಹೀಗೆಂದನು.

**ಅಲಂ ಖೇದೇನ ರಾಜೇಂದ್ರ ಸುತಾಯ ರಿಪುಮರ್ದಿನೇ ।**
**ಕ್ಷತ್ರಿಯಸ್ಯ ರಣೇ ರಾಜನ್ ಧ್ರುವಂ ಜಯಪರಾಜಯೌ ॥ 6 ॥**

**ಬಲಕೇಶವಯೋಃ ಅನ್ಯಃ ತೃತೀಯಃ ಕಃ ಪುಮಾನಿಹ ।**
**ರಣೇ ಯೋಧಯಿತುಂ ಶಕ್ತಃ ತವ ಪುತ್ರಂ ಮಹಾಬಲಮ್ ॥ 7 ॥**

**ರಿಪೂನ್ ಬಾಧಯಿತುಂ ಶಕ್ತೋ ಧನುರ್ಗೃಹ್ಯ ಮಹಾಭುಜಃ ।**
**ಭಾರ್ಗವಾಸ್ತ್ರಂ ಮಹಾರೌದ್ರಂ ದೇವೈರಪಿ ದುರಾಸದಮ್ ॥ 8 ॥**

ಮಹಾರಾಜ ಭೀಷ್ಮಕ ನಿನ್ನ ಮಗನ ವಿಷಯವಾಗಿ ಇಷ್ಟು ಖೇದ ಪಡಬೇಕಾದ ಕಾರಣವಿಲ್ಲ. ನಿನ್ನ ಮಗನು ಮಹಾಶಕ್ತಿ ಶಾಲ್ಮಿ, ಭಾರ್ಗವಾಸ್ತ್ರ ಹೊಂದಿರುವನು. ಬಲರಾಮ-ಕೃಷ್ಣ ಹೊರತಾಗಿ ಅವನ ಮುಂದೆ ಯುದ್ಧ ಮಾಡಲು ಯಾರಿಗೆ ಶಕ್ತಿಯಿದೆ? ಇಂತಹ ಮಗ ನಿನಗೆ ಹುಟ್ಟಿದ್ದಕ್ಕಾಗಿ ಅಭಿಮಾನಪಡಬೇಕು. ರಾಜರಿಗೆ ಜಯ-ಪರಾಜಯಗಳು ಸಾಮಾನ್ಯವಾಗಿರುತ್ತದೆ.

**ಅಯಂ ತು ಪುರುಷಃ ಕೃಷ್ಣೋ ಹ್ಯನಾದಿನಿಧನೋಽವ್ಯಯಃ ।**
**ತಂ ವಿಜೇತಾ ನೃಲೋಕೇಽಸ್ಮಿನ್ ನಾಪಿ ಶೂಲಧರಃ ಸ್ವಯಮ್ ॥ 9 ॥**

**ತವ ಪುತ್ರೋ ಮಹಾರಾಜ! ಸರ್ವಶಾಸ್ತ್ರಾರ್ಥ ತತ್ತ್ವವಿತ್ ।**
**ವಿದಿತ್ವಾ ದೇವಮೀಶಾನಂ ನ ಯೋಧಯತಿ ಕೇಶವಮ್ ॥ 10 ॥**

ಶ್ರೀಕೃಷ್ಣನಾದರೂ ನೀನು ಕಂಡಂತೆ ಅನಾದಿಪುರುಷನೂ ಅವಿನಾಶಿಯೂ ಆಗಿರುವನು. ಶೂಲಧರನೂ ಸಹ ಶ್ರೀಕೃಷ್ಣನನ್ನು ಜಯಿಸಲಾರ. ಹಾಗೆಂದು ನಿನ್ನ ಮಗನೇನೂ ಸಾಮಾನ್ಯನಲ್ಲ. ಸಕಲ ಶಾಸ್ತ್ರಗಳ ತತ್ತ್ವವನ್ನರಿತವನು. ಹಾಗಾಗಿಯೇ ಶ್ರೀಕೃಷ್ಣನು ಸಕಲ ದೇವತಾ ನಿಯಮಾಕನೆಂದು ತಿಳಿದೆ ಅವನೊಂದಿಗೆ ಯುದ್ಧ ಮಾಡುತ್ತಿಲ್ಲ. ಶ್ರೀಕೃಷ್ಣನನ್ನು ಕೊಲ್ಲುವವನೆಂದರೆ ಕಾಲಯವನನು ಮಾತ್ರ. ಕೃಷ್ಣ ಅವನನ್ನು ಕೊಲ್ಲಲಾರನು.

**ಸ ಕಾಲಯವನೋ ನಾಮ ಅವಧ್ಯಃ ಕೇಶವಸ್ಯ ಹ ।**
**ತಪ್ತ್ವಾ ಸುದಾರುಣಂ ಘೋರಂ ತಪಃ ಪರಮದುಶ್ಚರಮ್ ॥ 11 ॥**
**ರುದ್ರಮಾರಾಧಯಾಮಾಸ ದ್ವಾದಶಾಬ್ದಾನ್ ಅಯೋಽಶನಃ ।**
**ಪುತ್ರಕಾಮೇನ ಮುನಿನಾ ತೋಷ್ಯ ರುದ್ರಾತ್ ಸುತೋ ವೃತಃ ॥ 12 ॥**
**ಮಾಥುರಾಣಾಮವಧ್ಯೋಽಯಂ ಭವೇದಿತಿ ಚ ಶಂಕರಾತ್ ।**
**ಏವಮಸ್ತ್ವಿತಿ ರುದ್ರೋಽಪಿ ಪ್ರದದೌ ಮುನಯೇ ಸುತಮ್ ॥ 13 ॥**

ಗರ್ಗಾಚಾರ್ಯರು ಪುತ್ರಕಾಮನೆಯಿಂದ ಹನ್ನೆರಡು ವರ್ಷ ಅತಿದಾರುಣವಾದ ತಪಸ್ಸನ್ನಾಚರಿಸಿದರು. ರುದ್ರದೇವರನ್ನು ಮೆಚ್ಚಿಸಲು ಕಬ್ಬಿಣದ ಪುಡಿ ತಿನ್ನುತ್ತಾ ತಪಸ್ಸನ್ನು ಮಾಡಿದನು. ರುದ್ರನು ವರವೇನು ಬೇಕೆಂದನು. ಗರ್ಗನು ಕೃಷ್ಣನೆ ಮೊದಲಾದ ಮಥುರೆಯ ಯಾರಿಂದಲೂ ನಾನು ಅವಧ್ಯನಾಗಿರಬೇಕೆಂದು ವರ ಬೇಡಿದನು. ಕಾರಣವೇನೆಂದರೆ ಗರ್ಗನ ಪತ್ನಿಯ ಸಹೋದರನು ನನ್ನ ಭಾವನು ಷಂಢನಾಗಿರುವನು ಎಂದು ಅವನ ಮುಂದೆಯೇ ನುಡಿದಿದ್ದನು. ಆಗ ಯಾದವರೆಲ್ಲ ನಕ್ಕರು. ಅವಮಾನವಾದಂತಾಗಿ ಅವರ ಮೇಲೆ ಕೋಪಗೊಂಡ. ಕೃಷ್ಣನ ಬಲದಿಂದಲೇ ಈ ಯಾದವರು ಹೀಗೆ ನನ್ನನ್ನು ಅಪಹಾಸ್ಯ ಮಾಡಿದ್ದಾರೆ. ಅದಕ್ಕಾಗಿ ಕೃಷ್ಣ ಹಾಗೂ ಯಾದವರನ್ನು ಕೊಲ್ಲುವ ಮಗನನ್ನು ಪಡೆಯುವೆ ಎಂದು ಶಪಥ ಮಾಡಿದನು. ವಿಷ್ಣುಭಕ್ತನಾಗಿದ್ದರೂ ಅಸುರಾವೇಶ ಪ್ರಯುಕ್ತ ಹೀಗೆ ಪ್ರತಿಜ್ಞೆ ಮಾಡಿದನು. ರುದ್ರದೇವನು 'ಅವನಿಚ್ಛೆಯಂತೆ ಮಥುರೆಯಲ್ಲಿದ್ದವರನ್ನೆಲ್ಲ ಕೊಲ್ಲಬಲ್ಲ ಮಗನು ನಿನಗಾಗುತ್ತಾನೆ' ಎಂದನು.

**ಏವಂ ಗಾರ್ಗ್ಯಸ್ಯ ತನಯಃ ಶ್ರೀಮಾನ್ ರುದ್ರವರೋದ್ಭವಃ ।**
**ಮಾಥುರಾಣಾಮವಧ್ಯೋಽಯಂ ಮಥುರಾಯಾಂ ವಿಶೇಷತಃ ॥ 14 ॥**
**ಕೃಷ್ಣೋಽಪಿ ಬಲವಾನೇಷಃ ಮಾಥುರೋ ಜಾತವಾನಯಮ್ ।**
**ಸ ಜೇಷ್ಯತಿ ರಣೇ ಕೃಷ್ಣಂ ಮಥುರಾಯಾಂ ಸಮಾಗತಃ ॥ 15 ॥**

ಹೀಗೆ ಗಾರ್ಗ್ಯನ ಮಹಾತೇಜಸ್ವಿ ಮಗನು ರುದ್ರದೇವನ ಪ್ರಸಾದದಿಂದ ಹುಟ್ಟಿರುವನು. ಮಥುರಾ ಜನರಿಂದ ಅವಧ್ಯನು. ಶ್ರೀಕೃಷ್ಣನೂ ಮಥುರೆಯಲ್ಲಿ ಹುಟ್ಟಿದವನಾಗಿದ್ದ ಅವನಿಂದಲೂ ಕಾಲಯವನನು ಅಜೇಯನು. ರಾಜರೇ!

ನಾನು ಹೇಳಿದ್ದು ನಿಮಗೆ ಸಮ್ಮತವಾದರೆ ಯವನ ರಾಜನ ಪಟ್ಟಣಕ್ಕೆ ದೂತನನ್ನು ಕಳುಹಿಸಿರಿ. ಶಾಲ್ವನ ಮಾತಿನಿಂದ ಸಂತುಷ್ಟರಾದ ದುಷ್ಟಕೂಟ ರಾಜರೆಲ್ಲರೂ ಜರಾಸಂಧನಿಗೆ ಜರಾಸಂಧನೇ! ನಾವು ಯವನನ ಬಳಿಗೆ ದೂತನನ್ನು ಕಳಿಹಿಸೋಣ ಎಂದರು.

## ಜರಾಸಂಧನ ಸ್ವಾಭಿಮಾನ ಭಂಗ

**ಶ್ರುತ್ವಾ ಸೌಭಪತೇಃ ವಾಕ್ಯಂ ಸರ್ವೇ ತೇ ನೃಪಸತ್ತಮಾಃ ।**
**ಕುರ್ಮ ಇತ್ಯಬ್ರುವನ್ ಹೃಷ್ಟಾಃ ಜರಾಸಂಧಂ ಮಹಾಬಲಮ್ ॥ 16 ॥**

**ಸ ತೇಷಾಂ ವಚನಂ ಶ್ರುತ್ವಾ ಜರಾಸಂಧೋ ಮಹೀಪತಿಃ ।**
**ಬಭೂವ ವಿಮನಾ ರಾಜನ್ ಬ್ರಹ್ಮಣೋ ವಚನಂ ಸ್ಮರನ್ ॥ 17 ॥**

ಈ ಹಿಂದೆ ನೀವೆಲ್ಲರೂ ಬೇರೆ ರಾಜರಿಂದ ಪೀಡಿಸಲ್ಪಟ್ಟು ರಕ್ಷಣೆಗಾಗಿ ನನ್ನನ್ನು ಆಶ್ರಯಿಸುತ್ತಿದ್ದಿರಿ. ನನ್ನ ಸಹಾಯದಿಂದಲೇ ಕಳೆದು ಹೋದ ಭೃತ್ಯ ಬಲವಾಹನ ಪಡೆಯುತ್ತಿದ್ದೀರಿ. ಈಗ ಬೇರೊಬ್ಬ ರಾಜನನ್ನು ಆಶ್ರಯಿಸುತ್ತಿದ್ದೀರಿ. ಕನ್ಯೆಯೊಬ್ಬಳು ಪತಿಯನ್ನು ಬಿಟ್ಟು ಸುರತಕ್ಕಾಗಿ ಮತ್ತೊಬ್ಬ ವಿಟನನ್ನು ಅರಸಿದಂತಾಗಿದೆ. ದೈವಗತಿ ಬಲು ವಿಚಿತ್ರ. ಮತ್ತೊಬ್ಬರಿಗೆ ಆಶ್ರಯದಾತನಾದ ನಾನು ಬೇರೊಬ್ಬನನ್ನು ಆಶ್ರಯಿಸಬೇಕಾಗಿದೆ. ಅಹೋ ದುರಂತ!

**ಶ್ರೇಯೋ ಹಿ ಮರಣಂ ಮಹ್ಯಂ ನ ಚಾನ್ಯಂ ಸಂಶ್ರಯೇ ನೃಪಾಃ ।**
**ಕೃಷ್ಣೋ ವಾ ಬಲದೇವೋ ವಾ ಯೋ ವಾಽಸೌ ವಾ ನರಾಧಿಪಃ ।**
**ಹಂತಾರಂ ಪ್ರತಿಯೋತ್ಸ್ಯಾಮಿ ಯಥಾ ಬ್ರಾಹ್ಮ ಪ್ರಚೋದಿತಃ ॥ 18 ॥**

ಇತರರನ್ನು ಆಶ್ರಯಿಸಿ ಬದುಕುವುದಕ್ಕಿಂತಲೂ ಶತ್ರುವಿನೊಂದಿಗೆ ಹೋರಾಡಿ ಸಾಯುವುದೇ ಲೇಸು. ಕೃಷ್ಣನೋ, ಬಲರಾಮನೋ ಅಥವಾ ಇನ್ನಾವನೊ ಆಗಲೀ ಅವನೊಂದಿಗೆ ಯುದ್ಧ ಮಾಡುತ್ತೇನೆ. ಇದು ನಿಶ್ಚಿತ!

**ಭವತಾಂ ಸಾಧುವೃತ್ತಾನಾಂ ಆಬಾಧಂ ನ ಕರೋತಿ ಸಃ ।**
**ತೇನ ದೂತಂ ಪ್ರದಸ್ಯಾಮಿ ನೃಪಾಣಾಂ ರಕ್ಷಣಾಯ ವೈ ॥ 19 ॥**

**ಅಯಂ ಸೌಭಪತಿಃ ಶ್ರೀಮಾನ್ ಅನಲಾರ್ಕೇಂದುವಿಕ್ರಮಃ ।**
**ರಥೇನಾದಿತ್ಯ ವರ್ಣೇನ ಪ್ರಯಾತಿ ಸ್ವಪುರಂ ಬಲೀ ॥ 20 ॥**

ಆದರೇ ನಿಮ್ಮಂತಹ ಸಜ್ಜನ ರಾಜರಿಗೆ ಶ್ರೀಕೃಷ್ಣನು ತೊಂದರೆ ನೀಡಬಾರದೆಂಬುವುದಕ್ಕಾಗಿ ಕಾಲಯವನನ ಸಮೀಪ ನಮ್ಮ ಸಾಲ್ವನನ್ನೆ ದೂತನಾಗಿ ಕಳುಹಿಸುತ್ತೇನೆ. ರಾಜಾ ಸಾಲ್ವನೇ ! ನಮ್ಮೆಲ್ಲರ ಪರವಾಗಿ ನೀನು ದೂತನಾಗಿ ಹೋಗಿ ರಾಜರಿಗೆ ಸಹಾಯ ಮಾಡು ಎಂದನು.

**ಯವನೇಂದ್ರೋ ಯಥಾ ಯಾತಿ ಯಥಾ ಕೃಷ್ಣಂ ವಿಜೇಷ್ಯತಿ ।**
**ಯಥಾ ವಯಂ ಚ ತುಷ್ಯಾಮಃ ತಥಾ ನೀತಿರ್ವಿಧೀಯತಾಮ್ ॥ 21 ॥**
**ಶಾಲ್ವೋಽಪಿ ನೃಪತಿಶ್ರೇಷ್ಠಃ ತಾಂಶ್ಚ ಸಂಪೂಜ್ಯ ಧರ್ಮತಃ ।**
**ಜಗಾಮಾಕಾಶಮಾರ್ಗೇಣ ರಥೇನಾನಿಲರಂಹಸಾ ॥ 22 ॥**

ಯವನೇಂದ್ರನು ಹೇಗೆ ನಮಗೆ ಸಹಾಯ ಮಾಡುತ್ತಾನೋ, ಹೇಗೆ ಕೃಷ್ಣನನ್ನು ಜಯಿಸುತ್ತಾನೋ, ಹೇಗೆ ನಮಗೆಲ್ಲ ಮುದವುಂಟಾಗುವುದೋ ಹಾಗೆ ಮಾಡುವವನಾಗು. ಹೀಗೆ ಹೇಳಿ ಜರಾಸಂಧ ಸೈನ್ಯದೊಂದಿಗೆ ತನ್ನ ದೇಶಕ್ಕೆ ಹೊರಟು ಹೋದ. ಸಾಲ್ವನೂ ಸಹ ತನ್ನ ವಿಮಾನವೇರಿ ಆಕಾಶಮಾರ್ಗ ಮೂಲಕ ಹೊರಟನು.

**ಭೀಷ್ಮಕಃ ಸಹ ಪುತ್ರೇಣ ತಾವುಭೌ ಚಿಂತ್ಯ ದುರ್ನಯಮ್ ।**
**ಸ್ವೇ ಗೃಹೇ ನ್ಯವಸದ್ ದೀನಃ ಕೃಷ್ಣಮೇವಾನುಚಿಂತಯನ್ ॥ 23 ॥**

## ರುಗ್ಮಿಣಿಯ ನಿಶ್ಚಿತ ತೀರ್ಮಾನ

**ವಿದಿತಾ ರುಗ್ಮಿಣೀ ಸಾಧ್ವೀ ಸ್ವಯಂವರ ನಿವರ್ತನಮ್ ।**
**ಕೃಷ್ಣಸ್ಯಾಗಮನಾದ್ ಹೇತೋಃ ನೃಪಾಣಾಂ ದೋಷ ದರ್ಶನಮ್ ॥ 24 ॥**
**ಗತ್ವಾ ತು ಸಾ ಸಖೀಮಧ್ಯೇ ಉವಾಚ ವ್ರೀಡಿತಾನನಾ ।**
**ನ ಚಾನ್ಯೇಷಾಂ ನರೇಂದ್ರಾಣಾಂ ಪತ್ನೀ ಭವಿತುಮುತ್ಸಹೇ ।**
**ಕೃಷ್ಣಾತ್ ಕಮಲಪತ್ರಾಕ್ಷಾತ್ ಸತ್ಯಮೇತದ್ ವಚೋಮಮ ॥ 25 ॥**

ಭೀಷ್ಮಕನಾದರೂ ಜರಾಸಂಧ-ಸಾಲ್ವರು ಅನುಸರಿಸಿದ ದುರ್ನಯದಿಂದಾಗಿ ಬಹಳ ವ್ಯಥೆಪಟ್ಟನು. ಶ್ರೀಕೃಷ್ಣನನ್ನೆ ಧ್ಯಾನಿಸುತ್ತಾ ರುಗ್ಮಿಯೊಂದಿಗೆ ಅರಮನೆಗೆ ಬಂದು ಸೇರಿದನು.

ಕೃಷ್ಣ ಆಗಮನದಿಂದಾಗಿ ಸ್ವಯಂವರ ನಿಂತು ಹೋದದ್ದನ್ನೂ ಹಾಗು ದುಷ್ಟ

ರಾಜರೆಲ್ಲರೂ ಕೃಷ್ಣನ ಮೇಲೆ ದೋಷ ದೃಷ್ಟಿಯಿರುವುದನ್ನೂ ನೋಡಿ ನಾಚಿಕೆಯಿಂದ ತಲೆತಗ್ಗಿಸಿ ಸಖಿಯರಿಗೆ ತನ್ನ ನಿಶ್ಚಿತಾಭಿಪ್ರಾಯ ಹೀಗೆ ಹೇಳಿದಳು.

"ಸಖೀಯರೇ ! ನಾನು ಕಮಲದಳಾಯತಾಕ್ಷನಾದ ಶ್ರೀಕೃಷ್ಣನನ್ನು ಬಿಟ್ಟು ಬೇರೆ ಯಾವ ರಾಜನಿಗೂ ಪತ್ನಿಯಾಗುವುದಿಲ್ಲ. ಇದು ಸತ್ಯ" ಎಂದಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಾಲಯವನನ ಬಳಿ ದೂತ ಪ್ರೇಷಣೆವೆಂಬಲ್ಲಿ
ಐವತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 53 ವಿಷ್ಣುಪರ್ವ

# ಅಥ ತ್ರಿಪಂಚಾಶತ್ತಮೋಽಧ್ಯಾಯಃ

## ಕಾಲಿಯವನ ವಿಶಿಷ್ಟತೆ

*ವೈಶಂಪಾಯನ ಉವಾಚ –*

**ಯವನಾನಾಂ ಬಲೋದಗ್ರಃ ಸ ಕಾಲಯವನೋ ನೃಪಃ ।**
**ಬಭೂವ ರಾಜಾ ಧರ್ಮೇಣ ರಕ್ಷಿತಾ ಪುರವಾಸಿನಾಮ್ ॥ 1 ॥**

**ತ್ರಿವರ್ಗವಿದಿತಃ ಪ್ರಾಜ್ಞಃ ಷಡ್ಗುಣಾನುಪಜೀವಕಃ ।**
**ಸಪ್ತವ್ಯಸನ ಸಂಮೂಢೇ ಗುಣೇಷ್ವಭಿರತಃ ಸದಾ ॥ 2 ॥**

ವೈಶಂಪಾಯನರು ಜನಮೇಜಯ ರಾಜನಿಗೆ ರಾಜನೇ! ಕಾಲಯವನನು ಮಹಾಬಲಿಷ್ಠನು. ಯವನರಿಗೆ ರಾಜನಾಗಿ ಪ್ರಜೆಗಳ ರಕ್ಷಣೆಯನ್ನು ಧರ್ಮದಿಂದ ಮಾಡುತ್ತಿದ್ದನು.

ಧರ್ಮ ಅರ್ಥ ಕಾಮ ತಿಳಿದವನೂ, ಸಂಧಿ ವಿಗ್ರಹಯಾನಾದಿ ಷಡ್ ತಂತ್ರಜ್ಞನೂ, ವಿದ್ಯಾವಂತನೂ ಧರ್ಮಶೀಲನೂ, ಸತ್ಯವಾದಿಯೂ, ಜಿತೇಂದ್ರಿಯನೂ, ದುರ್ಲಭ ವಸ್ತು ಪಡೆಯುವುದರಲ್ಲಿ ಆಸಕ್ತನೂ, ಮಂತ್ರಿಗಳ ಸಲಹೆ ಪಡೆಯುವವನೂ ಆಗಿದ್ದನು.

**ಸುಖಾಸೀನಃ ಸಭಾಂ ರಮ್ಯಾಂ ಸಚಿವೈಃ ಪರಿವಾರಿತಃ ।**
**ಉಪಾಸ್ಯಮಾನೋ ಯವನೈಃ ಆತ್ಮವಿದ್ಭಿಃ ವಿಪಶ್ಚಿತೈಃ ॥ 3 ॥**

**ಏತಸ್ಮಿನ್ನೇವ ಕಾಲೇ ತು ದಿವ್ಯಗಂಧವಹೋಽನಿಲಃ ।**
**ಕಿಂ ಸ್ವಿದಿತ್ಯೇಕಮನಸಃ ಸಭಾಯಾಂ ಯೇ ಸಮಾಗತಾಃ ॥ 4 ॥**
**ಅಪಶ್ಯಂತ ರಥಂ ದಿವ್ಯಂ ಆಯಾಂತಂ ಭಾಸ್ಕರೋಪಮಂ ।**
**ರಚಿತಂ ವೈ ವಿಶ್ವಕೃತಾ ವೈಯಾಘ್ರ ವರ ಭೂಷಿತಮ್ ॥ 5 ॥**
**ತತ್ರೋಪವಿಷ್ಟಂ ಶ್ರೀಮಂತಂ ಸೌಭಸ್ಯ ಪತಿಮೂರ್ಜಿತಮ್ ।**
**ದೃಷ್ಟ್ವಾ ಪರಮಸಂಹೃಷ್ಟಶ್ಚ ಅರ್ಘ್ಯಂ ಪಾದ್ಯೇತಿ ಚಾಸಕೃತ್ ॥ 6 ॥**

ಕಾಲಯವನನೊಂದುದಿನ ಮಂತ್ರಿಗಳಿಂದ ಪರಿವೃತನಾಗಿ ಸಭೆಯಲ್ಲಿದ್ದನು. ಕಥಾ ಕಾಲಕ್ಷೇಪ ಪಂಡಿತರಿಂದ ನಡೆಯುತ್ತಿತ್ತು. ಆ ಸಮಯಕ್ಕೆ ಸುಗಂಧಮಯ ಗಾಳಿ ಬೀಸತೊಡಗಿತು. ಎಲ್ಲರೂ ಕುತೂಹಲಿಗಳಾಗಿ ನೋಡಿದರು. ಸೌಭವಿಮಾನ ಕಾಣಿಸಿತು. ಸ್ವರ್ಣಮಯವೂ, ಜಾಂಬೂನದವೆಂಬ ಬಂಗಾರದಿಂದ ವಿಶ್ವಕರ್ಮನೆ ರಚಿಸಿದ್ದ ಹುಲಿಯ ಚರ್ಮದಿಂದ ಕೂಡಿದ್ದು, ಶತ್ರುಗಳಿಗೆ ಆತಂಕಕಾರಿಯೂ, ಮಿತ್ರಹರ್ಷವರ್ಧಕವೂ ಆಗಿತ್ತು. ಅದರಲ್ಲಿ ಶ್ರೀಮಂತನೂ ಧೀಮಂತನಾದ ಶಾಲ್ವನು ಕುಳಿತ್ತಿದ್ದನು. ಅವನನ್ನು ನೋಡಿದ ಕೂಡಲೇ ಯವನರಾಜನ ಮಂತ್ರಿಯು ಸಂತುಷ್ಟನಾಗಿ ಸ್ವಾಗತ ಹೇಳಿ ಅರ್ಘ್ಯಪಾದ್ಯಗಳಿಂದ ಗೌರವಿಸಿದನು.

**ತತ್ರೋತ್ಥಾಯ ಮಹಾಬಾಹುಃ ಸ್ವಯಮೇವ ನೃಪಾಸನಾತ್ ।**
**ಪ್ರತ್ಯುದ್ಗಮ್ಯಾರ್ಘ್ಯಮಾದಾಯ ರಥಾವತರಣೆ ಸ್ಥಿತಃ ॥ 7 ॥**

ಈ ಸಮಯದಲ್ಲಿ ಕಾಲಯವನನೇ ರಾಜಸಿಂಹಾಸನದಿಂದೆದ್ದು ಅರ್ಘ್ಯ ಪಾದ್ಯಾದಿಗಳಿಂದ ರಥದ ಸಮೀಪ ಹೋಗಿ ಸ್ವಾಗತ ಕೋರಿದನು. ಶಾಲ್ವನೂ ಭಯರಹಿತನಾಗಿ ರಥದಿಂದ ಇಳಿದನು. ಇಬ್ಬರೂ ರಾಜಭವನ ಪ್ರವೇಶ ಮಾಡಿದರು. ಸುಖಾಸೀನರಾದ ಮೇಲೆ ರಾಜನೇ! ನಾನೀಗ ಜರಾಸಂಧನೆ ಮೊದಲಾದ ರಾಜರ ದೂತನಾಗಿ ಬಂದಿರುವೆನು. ಜರಾಸಂಧನ ದೂತನಾಗಿ ಬಂದಿರುವ ನನಗೇಕೆ ಅರ್ಘ್ಯ ಪಾದ್ಯಾದಿಗಳು.

**ಜಾನಾಮ್ಯಹಂ ಮಹಾಬಾಹೋ ದೈತ್ಯೇನ ತ್ವಾಮಿಹಾಗತಮ್ ।**
**ಸಾಹಿತ್ಯೇ ನರದೇವಾನಾಂ ಪ್ರೇಷಿತೋ ಮಾಗಧೇನ ವೈ ॥ 8 ॥**

**ಭವತ್ಯಭ್ಯರ್ಚಿತೇ ರಾಜ್ಞಾಂ ಸರ್ವೇಷಾಮರ್ಚಿತಂ ಭವೇತ್ ।**
**ಆಸ್ಯತಾಮಾಸನೇ ಶುಭ್ರೇ ಮಯಾ ಸಾರ್ಧಂ ಜನೇಶ್ವರ ॥ 9 ॥**

ಸಾಲ್ವರಾಜನೇ! ಜರಾಸಂಧನೆ ಮೊದಲಾದ ರಾಜರುಗಳ ಪ್ರತಿನಿಧಿಯಾಗಿ ನೀನು ದೂತನಾಗಿ ಬಂದಿರುವ ವಿಷಯ ನನಗೆ ತಿಳಿದಿದೆ. ಆದ್ದರಿಂದಲೇ ನಿನಗೆ ಸತ್ಕಾರ ಮಾಡಿದರೆ ಎಲ್ಲಾ ರಾಜರಿಗೂ ಸತ್ಕಾರ ಮಾಡಿದಂತಾಗುತ್ತದೆ ಎಂದೆ ನಿನಗೆ ಸತ್ಕಾರ. ಈ ಸಿಂಹಾಸನದಲ್ಲಿ ಕೂಡು.

ನಂತರ ಕಾಲಯವನನು ಸೌಭಪತಿಯನನ್ನು ಹಸ್ತಾಲಿಂಗನ ಮಾಡಿ ಕುಶಲವನ್ನು ಕೇಳಿದನು. ನಂತರ ಕಾಲಯವನ ಸೌಭನಿಗೆ ಹೀಗೆ ಹೇಳಿದನು.

**ಯದ್ ಬಾಹುಬಲಮಾಶ್ರಿತ್ಯ ವಯಂ ಸರ್ವೇ ನರಾಧಿಪಾಃ ।**
**ವಸಾಮೋ ವಿಗತೋದ್ವಿಗ್ನಾಃ ದೇವಾ ಇವ ಶಚೀಪತಿಮ್ ॥ 10 ॥**

**ವದ ಸತ್ಯಂ ವಚಸ್ತಸ್ಯ ಕಿಮಾಜ್ಞಾಪಯತಿ ಪ್ರಭುಃ ।**
**ಕರಿಷ್ಯೇ ವಚನಂ ತಸ್ಯ ಅಪಿ ಕರ್ಮ ಸುದುಷ್ಕರಮ್ ॥ 11 ॥**

ರಾಜಾ ಸಾಲ್ವಪತಿಯೇ, ಯಾವ ರಾಜನ ಬಲವನ್ನಾಶ್ರೈಸಿ ರಾಜರಾದ ನಾವೆಲ್ಲರೂ ಇಂದ್ರನನ್ನು ಆಶ್ರಿಯಿಸಿರುವ ದೇವತೆಗಳಂತೆ ನಿರ್ಭಯರಾಗಿದ್ದೇವೆಯೋ ಅಂತಹ ಜರಾಸಂಧನಿಗೆ ಅಸಾಧ್ಯವಾದ ಕಾರ್ಯ ಯಾವುದಿದೆ? ಅವನಿಗೆ ನನ್ನಿಂದೇನಾಗಬೇಕು? ಆ ಕಾರ್ಯವು ದುಸ್ತರವಾಗಿದ್ದರೂ ಅವನ ಮಾತನ್ನು ನಡೆಸಿಕೊಡುವೆ. ಸಾಲ್ವನು ಹೇಳುತ್ತಾನೆ.

**ಜಾತೋಽಯಂ ಜಗತಾಂ ಬಾಧೀ ಕೃಷ್ಣಃ ಪರಮದುರ್ಜಯಃ ।**
**ವಿದಿತ್ವಾ ತಸ್ಯ ದುರ್ವೃತ್ತಮಹಂ ಹಂತುಂ ಸಮುದ್ಯತಃ ॥ 12 ॥**

**ಉಪರುಧ್ಯ ಮಹಾಸೈನ್ಯೈಃ ಗೋಮಂತಮಚಲೋತ್ತಮಮ್ ।**
**ತದಾ ತಯೋರ್ವಿನಾಶಾಯ ಹುತಾಶನಮಯೋಜಯಮ್ ।**
**ದೃಷ್ಟ್ವಾ ರಾಮೋ ಗಿರೇಃ ಕೂಟಾದ್ ಆಪ್ಲುತೋ ಹೇಮತಾಲಧೃಕ್ ॥13 ॥**

ಈಗ ನಮಗೆ ಬಂದಿರುವ ಆಪತ್ತೆಂದರೆ ಕೃಷ್ಣನಿಂದಾಗಿದೆ. ಯಾರಿಂದಲೂ ಪರಾಜಯ ಹೊಂದದ ಕೃಷ್ಣನು ಜಗತ್ತಿಗೆ ಬಾಧೆವುಂಟು ಮಾಡುತ್ತಿರುವನು. ಅವನ ದುರಾಚಾರ ಕೇಳಿ ಅವನನ್ನು ಸಂಹರಿಸಲು ರಾಜರ ಸೈನ್ಯದಿಂದ

ಕೂಡಿ ಗೋಮಂತದಲ್ಲಿದ್ದ ರಾಮಕೃಷ್ಣರನ್ನು ಆಕ್ರಮಿಸಿದೆನು. ದಂತವಕ್ರನ ಮಾತಿನಂತೆ ಪರ್ವತಕ್ಕೆ ಸುತ್ತಲೂ ಬೆಂಕಿ ಹಾಕಿದೆವು. ಆದರೆ ಬಲರಾಮಕೃಷ್ಣರಿಬ್ಬರೂ ಪರ್ವತವನ್ನೊತ್ತಿ ಕೆಳಗೆ ಹಾರಿಬಂದರು. ನಂತರ ನಮ್ಮ ಸೇನಾವಾಹಿನಿಯನ್ನೆಲ್ಲ ಇಬ್ಬರೇ ಧ್ವಂಸ ಮಾಡಿಬಿಟ್ಟರು. ಸರ್ಪರಾಜನಂತೆ ಸೈನಿಕರನ್ನು ಹಿಂದು-ಮುಂದು ನೇಗಿಲಿನಿಂದ ಎಳೆದು ಒನಕೆಯಿಂದ ಹೊಡೆದು ಹಾಕಿದನು.

ಶ್ರೀಕೃಷ್ಣನೂ ಸಹ ಚಕ್ರಧಾರಿಯಾಗಿ ಸಿಂಹವು ಕ್ಷುದ್ರಮೃಗಳನ್ನೆಂಬಂತೆ ರಾಜರನ್ನು ಆಕ್ರಮಿಸುತ್ತಾ ಚಕ್ರ ಹಾಗೂ ಗದೆಗಳಿಂದ ನಿರಂತರ ಹೋರಾಟ ನಡೆಸಿದನು.

ಇಬ್ಬರೇ ಪದಾತಿಗಳಿಂದ ಪ್ರಚಂಡ ಸೇನಾವಾಹಿನಿಯು ನಾಶವಾಯಿತು.

ಬಲರಾಮನೊಬ್ಬನೇ ನಮ್ಮ ಕಡೆಯ ಹನ್ನೆರಡು ಅಕ್ಷೋಹಿಣಿಯನ್ನು ನಾಶ ಮಾಡಿದನು. ನಂತರ ಹಲ-ಸೌನಂದಾಯುಧಗಳಿಂದ ನನ್ನನ್ನೂ ಹೊಡೆದನು. ನಂತರ ಕಾಲದಂಡದಂತಿದ್ದ ಗದೆಯನ್ನು ಓಲಾಡಿಸುತ್ತಾ ನನ್ನ ಬಳಿ ಬಂದು ನನ್ನ ಮೇಲೆ ಕುಳಿತು ಕೊಲ್ಲಲುದ್ಯುಕ್ತನಾದಾಗ ಅಶರೀರವಾಣಿಯಿಂದಾಗಿ ನಾನು ಬದುಕಿ ಉಳಿದೆ. ಅವನು ನನ್ನನ್ನು ಬಿಟ್ಟು ಹೊರಟುಹೋದ.

**ತೇನಾಹಂ ವಃ ಪ್ರವಕ್ಷ್ಯಾಮಿ ನೃಪಾಣಾಂ ಹಿತಕಾಮ್ಯಯಾ ।**
**ಶ್ರುತ್ವಾ ತ್ವಮೇವ ರಾಜೇಂದ್ರ ಕರ್ತುಮರ್ಹಸಿ ತದ್ ವಚಃ ॥ 14 ॥**
**ತಪಸೋಗ್ರೇಣ ಮಹತಾ ಪುತ್ರಾರ್ಥೀ ತೋಷ್ಯ ಶಂಕರಮ್ ।**
**ಪ್ರಾಪ್ತವಾನ್ ದೇವದೇವಂ ತ್ವಾಮವಧ್ಯಂ ಮಾಥುರೈಃ ಜನೈಃ ॥ 15 ॥**

ರಾಜೇಂದ್ರನೇ, ಸಮಸ್ತರಾಜರಿಗೂ ಹಿತವನ್ನುಂಟು ಮಾಡುವ ಸಲುವಾಗಿ ನಾನು ಕೆಲವು ಮಾತುಗಳನ್ನು ಹೇಳುವೆ. ಇದನ್ನು ಕೇಳಿ ಅದರಂತೆ ನಡೆಯುವುದು.

ಈ ಹಿಂದೆ ಮಹಾಮುನಿಯಾದ ಗರ್ಗಾಚಾರ್ಯನು ಹನ್ನೆರಡು ವರ್ಷಗಳ ಕಾಲ ಲೋಹಚೂರ್ಣವನ್ನು ತಿನ್ನುತ್ತಾ ದುಷ್ಕರ ತಪಸ್ಸನ್ನು ಮಾಡಿದನು. ಪುತ್ರಕಾಮನೆ ಈ ತಪಸ್ಸಿನ ಉದ್ದೇಶವಾಗಿತ್ತು. ಉಗ್ರ ತಪಸ್ಸಿನಿಂದ ಶಿವನು

ಪ್ರಸನ್ನನಾಗಿ ಅವನು ಕೃಷ್ಣ ಹಾಗೂ ಮಾಥುರರಿಂದ ಅವಧ್ಯತ್ವ ವರವುಳ್ಳ ಮಗನನ್ನು ನೀಡಿದನು. ಆ ಮಗನೇ ನೀನಾಗಿರುವೆ. ಹೀಗೆ ಗಾರ್ಗ್ಯನ ತಪಸ್ಸು ಶಿವನ ವರಪ್ರಸಾದದಿಂದ ಹುಟ್ಟಿರುವ ನಿನ್ನನ್ನೂ ಎದುರಿಸುವ ಕೃಷ್ಣನು ಸೂರ್ಯನ ಮುಂದೆ ಮಂಜುಕರಗುವಂತೆ ಕರಗಲೇಬೇಕು.

**ಯತಸ್ವ ರಾಜ್ಞಾಂ ವಚನ ಪ್ರಚೋದಿತೋ ವ್ರಜಸ್ವ**
**ಯಾತ್ರಾಂ ವಿಜಯಾಯ ಕೇಶವಂ ।**
**ಪ್ರವಿಶ್ಯ ರಾಷ್ಟ್ರಂ ಮಥುರಾಂ ಚ ಸೇನಯಾ**
**ನಿಹತ್ಯ ಕೃಷ್ಣಂ ಪ್ರಥಯನ್ ಸ್ವಕಂ ಯಶಃ ॥ 16 ॥**

ರಾಜರ ಮಾತಿನಿಂದ ಪ್ರೇರಿತನಾದ ನೀನು ಕೃಷ್ಣನನ್ನು ಗೆಲ್ಲಲು ಸೈನ್ಯಸಹಿತನಾಗಿ ಮಥುರೆಯನ್ನಾಕ್ರಮಿಸು. ಶ್ರೀಕೃಷ್ಣನನ್ನು ಕೊಂದು ಹಾಕಿ ನಿನ್ನ ಯಶಸ್ಸನ್ನು ವಿಸ್ತರಿಸಿಕೊ.

**ಮಾಥುರೋ ವಾಸುದೇವೋಽಯಂ ಬಲದೇವಃ ಸಬಾಂಧವಃ ।**
**ತೌ ವಿಜೇಷ್ಯಸಿ ಸಂಗ್ರಾಮೇ ಗತ್ವಾ ತಾಂ ಮಥುರಾ ಪುರೀಮ್ ॥ 17 ॥**

ಶ್ರೀಕೃಷ್ಣ–ಬಲರಾಮರಿಬ್ಬರೂ ಮಥುರಾದವರೆ. ಆದ್ದರಿಂದ ನಿನ್ನನ್ನೇನೂ ಮಾಡಲಾರರು. ಅವರನ್ನು ನೀನು ಗೆಲ್ಲುವುದು ನಿಶ್ಚಿತ.

ಶಾಲ್ವನು – ಕಾಲಯವನನೇ ! ರಾಜರ ಮಧ್ಯದಲ್ಲಿ ಸೂರ್ಯನಂತೆ ಬೆಳಗುತ್ತಿರುವನು. ಅವನು ರಾಜರೆಲ್ಲರ ಪರವಾಗಿ ಕಳುಹಿಸಿರುವ ಸಂದೇಶವನ್ನು ನಾನು ನಿನಗೆ ತಲುಪಿಸಿದ್ದೇನೆ. ನಿನಗೆ ಯಾವುದೇ ಉಚಿತವೋ ಅದನ್ನು ಮಾಡು ಎಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಜರಾಸಂಧ ಸಂದೇಶ ಪ್ರಾಪಣಂವೆಂಬಲ್ಲಿ
ಐವತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 54 ವಿಷ್ಣುಪರ್ವ

# ಅಥ ಚತುಷ್ಪಂಚಾಶತ್ತಮೋಽಧ್ಯಾಯಃ

## ಕಾಲಯವನನ ಉತ್ತರ

ಏವಂ ಕಥಯಮಾನಂ ತಂ ಶಾಲ್ವರಾಜಂ ನೃಪಾಜ್ಞಯಾ ।
ಉವಾಚ ಪರಮಪ್ರೀತಃ ಯವನಾಧಿಪತಿಃ ನೃಪಃ ॥ 1 ॥

ಧನ್ಯೋಽಸ್ಮಿ ಅನುಗೃಹೀತೋಽಸ್ಮಿ ಸಫಲಂ ಜೀವಿತಂ ಮಮ ।
ಕೃಷ್ಣ ನಿಗ್ರಹ ಹೇತೋಃ ನಿಯುಕ್ತೋ ಬಹುಭಿರ್ನೃಪೈಃ ॥ 2 ॥

ಕರಿಷ್ಯೇ ವಚನಂ ತೇಷಾಂ ನೃಪಸತ್ತಮಚೋದಿತಂ ।
ಪರಾಜಯೋಽಪಿ ರಾಜೇಂದ್ರ ಜಯೇನ ಸದೃಶೋ ಮಮ ॥ 3 ॥

ಅದ್ಯೈವ ತಿಥಿನಕ್ಷತ್ರಂ ಮುಹೂರ್ತಂ ಕರಣಂ ಶುಭಮ್ ।
ಯಾಸ್ಯಾಮಿ ಮಥುರಾಂ ರಾಜನ್ ವಿಜೇತುಂ ಕೇಶವಂ ರಣೇ ॥ 4 ॥

ಹೀಗೆ ದುಷ್ಟಕೂಟದ ಅಧಿರಾಜನಾದ ಜರಾಸಂಧನ ಸಂದೇಶವನ್ನು ಶಾಲ್ವನು ಹೇಳಿದ ಮೇಲೆ ಹೀಗೆ ಉತ್ತರಿಸಿದನು.

ಶ್ರೀಕೃಷ್ಣನನ್ನು ನಿಗ್ರಹಿಸಲು ರಾಜಾಧಿರಾಜರಿಂದ ನಿಯೋಜಿಸಲ್ಪಟ್ಟಿರುವೆನೆಂದರೆ ನಾನು ಧನ್ಯ. ನನ್ನ ಬದುಕು ಸಾರ್ಥಕವಾಯಿತು. ತ್ರಿಲೋಕದಲ್ಲಿಯೂ ದೇವಾನುದೇವರಿಂದ ಜಯಿಸಲು ಅಸಾಧ್ಯನಾದ ಶ್ರೀಕೃಷ್ಣನನ್ನು ಸಕಲರಾಜರ ಆಶೀರ್ವಾದದಿಂದ ನಿಗ್ರಹಿಸುವುದು ನಿಶ್ಚಿತ. ಒಂದು ವೇಳೆ ಪರಾಜಯವಾದರೂ ಅದು ನನಗೆ ಜಯವಿದ್ದಂತೆಯೆ.

ನಾನು ಇಂದೇ ಪಂಚಾಂಗ ಶುದ್ಧಿಯಿರುವ ದಿವಸವಾಗಿದೆ. ಇಂದೇ ಮಥುರೆಯನ್ನಾಕ್ರಮಿಸುವೆ.

**ಏವಮಾಭಾಷ್ಯ ರಾಜಾನಂ ಸೌಭಸ್ಯ ಪತಿಮೂರ್ಜಿತಮ್ ।**
**ಸತ್ಕೃತ್ಯ ಚ ಯಥಾನ್ಯಾಯಂ ಮಹಾರ್ಹಮಣಿ ಭೂಷಣೈಃ ॥ 5 ॥**
**ಬ್ರಾಹ್ಮಣೇಭ್ಯೋ ದದೌ ವಿತ್ತಂ ಸಿದ್ಧಾದೇಶಾಯ ವೈ ನೃಪಃ ।**
**ಹುತ್ವಾಗ್ನಿಂ ವಿಧಿವದ್ ರಾಜಾ ಕೃತ ಕೌತುಕ ಮಂಗಲಃ ।**
**ಪ್ರಸ್ಥಾನಂ ಕೃತವಾನ್ ಸಮ್ಯಗ್ ಜೇತುಕಾಮೋ ಜನಾರ್ದನಮ್ ॥ 6 ॥**

ಹೀಗೆ ಹೇಳಿ ಸೌಭಪತಿಗೆ ಮಹಾರ್ಹವಾದ ಮಣಿಭೂಷಣಾದಿಗಳಿಂದ ಗೌರವಿಸಿ ಬ್ರಾಹ್ಮಣರಿಗೆ ಪುರೋಹಿತರಿಗೂ ಧನಕನಕಾದಿಗಳನ್ನು ಕೊಟ್ಟು, ಹೋಮದಿಂದ ಅಗ್ನಿಯನ್ನು ತೃಪ್ತಿಗೊಳಿಸಿ, ಮಂಗಲ ಕೌತುಕ ಧರಿಸಿ, ಕೃಷ್ಣ ನಿಗ್ರಹಕ್ಕಾಗಿ ಮಥುರೆಗೆ ಹೊರಟನು. ಇತ್ತ ಸಾಲ್ವನು ತನ್ನ ದೇಶಕ್ಕೆ ಹೊರಟು ಹೋದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಕಾಲಯವನನ ಮಥುರಾಕ್ರಮಣೋದ್ಯೋಗವೆಂಬಲ್ಲಿ
ಐವತ್ತನಾಲ್ಕನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥




## ಅಥ ಪಂಚಪಂಚಾಶತ್ತಮೋಽಧ್ಯಾಯಃ

*ಜನಮೇಜಯ ಉವಾಚ –*

**ವಿದರ್ಭ ನಗರಾದ್ ಯಾತೇ ಶಕ್ರ ತುಲ್ಯ ಪರಾಕ್ರಮೇ ।**
**ಕಿಮರ್ಥಂ ಗರುಡೋ ನೀತಃ ಕಿಂ ಚ ಕರ್ಮ ಚಕಾರ ಹ ॥ 1 ॥**

ವೈಶಂಪಾಯನರೇ, ಶ್ರೀಕೃಷ್ಣನು ವಿದರ್ಭದಿಂದ ಮಥುರೆಗೆ ಹೋಗುವಾಗ ಗರುಡನೊಂದಿಗೆ ಏಕೆ ಹೋದನು? ಗರುಡನು ಕೃಷ್ಣನ ಜೊತೆಗೆ ಹೋಗಿ ಯಾವ ಕಾರ್ಯ ಮಾಡಿದನು. ಕೃಷ್ಣನಾದರೂ ಗರುಡನ ಮೇಲೆ ಏಕೆ ಕುಳಿತುಕೊಳ್ಳಲಿಲ್ಲ. ಇದರ ತತ್ವವೇನೆಂದು ಕೇಳಿದಾಗ ವೈಶಂಪಾಯನರು.

### ಗರುಡನಿಂದ ಶ್ರೀಕೃಷ್ಣನಿಗೆ ಯೋಗ್ಯ ವಾಸಸ್ಥಾನ

**ಶ್ರುಣು ರಾಜನ್ ಸುಪರ್ಣೇನ ಕೃತಂ ಕರ್ಮಾತಿ ಮಾನುಷಮ್ ।**
**ವಿದರ್ಭನಗರೀಂ ಗತ್ವಾ ವೈನತೇಯೋ ಮಹಾದ್ಯುತಿಃ ॥ 2 ॥**

ರಾಜನೇ ಕೇಳು. ಗರುಡನು ವಿದರ್ಭನಗರಿಗೆ ಹೋಗಿ ಅತಿಮಾನುಷ ಕರ್ಮವನ್ನೇ ಮಾಡಿರುವನು. ಶ್ರೀಕೃಷ್ಣನು ವಿದರ್ಭ ದೇಶದಿಂದ ಮಥುರೆಗೆ ಹೊರಟಿರುವಾಗ ಜೊತೆಯಲ್ಲಿದ್ದ ಗರುಡನಿಗೆ ಒಂದು ಆಲೋಚನೆ ಬಂತು. ಅವನು ವಿನೀತನಾಗಿ ಕೃಷ್ಣನಿಗೆ ಹೀಗೆಂದನು.

**ದೇವ ಯಾಸ್ಯಾಮಿ ನಗರೀಂ ರೈವತಸ್ಯ ಕುಶಸ್ಥಲೀಮ್ ।**
**ರೈವತಂ ಚ ಗಿರಿಂ ರಮ್ಯಂ ನಂದನಪ್ರತಿಮಂ ವನಮ್ ।**
**ರುಗ್ಮಿಣೋದ್ವಾಸಿತಾಂ ರಮ್ಯಾಂ ಶೈಲೋದಧಿ ತಟಾಶ್ರಯಾಮ್ ॥ 3 ॥**

**ತಾಂ ಸಮಂತಾತ್ ಸಮಾಲೋಕ್ಯ ವಾಸಾರ್ಥಂ ತೇ ಕ್ಷಮಾಂ ಕ್ಷಮಾ ।**
**ಕಂಟಕೋದ್ಧರಣಂ ಕೃತ್ವಾ ಆಗಮಿಷ್ಯೇ ತವಾಂತಿಕಮ್ ॥ 4 ॥**

ದೇವದೇವನೇ ! ನಾನು ರೈವತನ ಪಟ್ಟಣವಾದ ಕುಶಸ್ಥಲಿಗೆ ಹೋಗುವೆನು. ಅಲ್ಲಿ ನಂದನವನದಂತಿರುವ ರೈವತರ ಪರ್ವತವಿದೆ. ಅದು ಮೊದಲು ರುಗ್ಮಿಯಿಂದ ಆಶ್ರಿತವಾಗಿದ್ದು ಈಗ ಅವನು ಅದನ್ನು ಪರಿತ್ಯಜಿಸಿದ್ದಾನೆ.

ವೃಕ್ಷಗಳಿಂದಲೂ, ಪ್ರಾಣಿಗಳಿಂದಲೂ ಪೂರ್ಣವಾದ ಆ ಪ್ರದೇಶವನ್ನು ನಾನು ಅವಲೋಕಿಸುತ್ತೇನೆ. ನಿನ್ನ ವಾಸಕ್ಕೆ ಯೋಗ್ಯವಾಗಿದ್ದರೆ ಅಲ್ಲಿರುವ ಕಲ್ಲು ಮುಳ್ಳುಗಳನ್ನು ತೆಗೆದು ಶುದ್ಧಿ ಮಾಡಿ ನಿನ್ನಲ್ಲಿಗೆ ಬರುತ್ತೇನೆ ಎಂದನು.

ಹೀಗೆ ಹೇಳಿ ನಮಸ್ಕರಿಸಿ ಗರುಡನು ಪಶ್ಚಿಮಾಭಿಮುಖನಾಗಿ ಹೊರಟು ಹೋದನು. ಶ್ರೀಕೃಷ್ಣನು ಮಥುರೆಗೆ ಬಂದಾಗ ಭವ್ಯಸ್ವಾಗತ ಮಾಡಿ ಕೃತಾರ್ಥರಾದರು.

ಶ್ರೀಕೃಷ್ಣನಿಗೆ ಸಕಲರಾಜರೂ ರಾಜೇಂದ್ರನ ಪಟ್ಟದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಿದರೆಂದು ವಾರ್ತೆಯನ್ನು ಕೇಳಿದ ಉಗ್ರಸೇನನು ಅತ್ಯಂತ ಹರ್ಷಗೊಂಡನು. ಆ ಪಟ್ಟಾಭಿಷೇಕ ಮಹೋತ್ಸವದಲ್ಲಿ,

**ಏಕೈಕಂ ನೃಪತೇರ್ಭಾಗಂ ಶತಸಾಹಸ್ರ ಸಮ್ಮಿತಮ್ ।**
**ರಾಜೇಂದ್ರೇ ತ್ವರ್ಬುದಂ ದತ್ತಂ ಮಾನವೇಷು ಚ ವೈ ದಶ ॥ 5 ॥**

**ಯೇ ತತ್ರ ಸಮನುಪ್ರಾಪ್ತಾಃ ನ ರಿಕ್ತಾಸ್ತೇ ಗೃಹಂ ಗತಾಃ ।**
**ಶಂಖೋ ಯಾದವ ರೂಪೇಣ ಪ್ರದದೌ ಹರಿ ಚಿಂತಿತಮ್ ॥ 6 ॥**

**ಇತಿ ಶ್ರುತ್ವಾತ್ಮಿಕ ಜನಾಲ್ಲೋಕ ಪ್ರವೃತ್ತಿಕಾತ್ ನರಾತ್ ।**
**ಚಕಾರ ಮಹತೀಂ ಪೂಜಾಂ ದೇವತಾಯತನೇಷ್ವಪಿ ॥ 7 ॥**

ಜನಮೇಜಯ! ಹಲವಾರು ರಾಜರೆಲ್ಲರೂ ಸೇರಿ ಶ್ರೀಕೃಷ್ಣನನ್ನು ಮಹಾಸಿಂಹಾಸನದಲ್ಲಿ ಕುಳ್ಳಿರಿಸಿ ರಾಜೇಂದ್ರ ಪದವಿಯಲ್ಲಿ ಅಭಿಷೇಕ ಮಾಡಿದ್ದನ್ನೂ ಇಂದ್ರದೇವನು ದೂತನಾದ ಚಿತ್ರಾಂಗದನುನೆಂಬುವನನ್ನು ದೂತನನ್ನಾಗಿ ಕಳುಹಿಸಿದ್ದನ್ನು ಶಂಖನಿಧಿಯು ಒಬ್ಬೊಬ್ಬ ರಾಜನಿಗೂ ಒಂದೊಂದು ಲಕ್ಷ ಸುವರ್ಣ ಮುದ್ರಿಕೆಯನ್ನೂ, ರಾಜೇಂದ್ರನಿಗೆ ಕೋಟಿ ಸುವರ್ಣ ಮುದ್ರಿಕೆಯನ್ನು, ಮಾನವರಿಗೆ ಹತ್ತು ಸಾವಿರ ಮುದ್ರಿಕೆಗಳನ್ನು

ಕಾಣಿಕೆಯಾಗಿ ಕೊಟ್ಟನು. ಮಹೋತ್ಸವಕ್ಕೆ ಬಂದಿದ್ದವರಲ್ಲಿ ಯಾರೊಬ್ಬನೂ ರಿಕ್ತ ಹಸ್ತದಿಂದ ಹಿಂತಿರುಗಲಿಲ್ಲ.

ಈ ವೃತ್ತಾಂತವನ್ನು ಆತ್ಮೀಯರಿಂದಲೂ, ಲೋಕವೃತ್ತಾಂತ ಸಂಗ್ರಹಕಾರರಿಂದಲೂ ಕೇಳಿದ ಉಗ್ರಸೇನನು ಸಂತುಷ್ಟನಾಗಿ ದೇವಾಲಯಗಳಲ್ಲಿ ವಿಶೇಷ ಪೂಜೆ ವ್ಯವಸ್ಥೆ ಮಾಡಿದನು. ನಟರು, ನರ್ತಕರು ನರ್ತನ ಮಾಡಿದರು. ವಾದ್ಯಘೋಷಗಳು, ಪತಾಕೆಗಳು, ತೋರಣಗಳಿಂದ ಕಂಸನ ಸಭಾಭವನ ಅಲಂಕೃತವಾಯಿತು. ರಾಜೇಂದ್ರನಾದ ಕೃಷ್ಣನಿಗಾಗಿ ಸಿಂಹಾಸನವನ್ನು ಸಿದ್ಧಗೊಳಿಸಿದನು. ಸ್ತ್ರೀಯರು ಮಂಗಳ ಹಾಡುಗಳನ್ನು ಹಾಡುತ್ತಿದ್ದರು. ಯುವತಿಯರೆಲ್ಲರೂ ಅರ್ಘ್ಯ ಪಾದ್ಯಾದಿಗಳನ್ನು ಇಟ್ಟುಕೊಂಡು ಕೃಷ್ಣನ ಹಾದಿ ನೋಡುತ್ತಿದ್ದನು.

**ವಸುದೇವಂ ಗೃಹಂ ಗತ್ವಾ ಪ್ರಿಯಾಖ್ಯಾನಂ ನಿವೇದ್ಯ ಚ ।**
**ರಾಮೇಣ ಸಹ ಸಂಮ್ಮಂತ್ರ್ಯ ನಿರ್ಗತೋ ರಥಮಂತಿಕಮ್ ॥ 8 ॥**

ಹೀಗೆ ಉಗ್ರಸೇನನು ಆನಂದೋತ್ಸವದ ವ್ಯವಸ್ಥೆ ಮಾಡಿ, ವಸುದೇವನ ಮನೆಗೆ ಹೋಗಿ ಅವನಿಗೆ ವಿಷಯ ತಿಳಿಸಿ, ಬಲರಾಮನೊಂದಿಗೆ ಶ್ರೀಕೃಷ್ಣನ ರಥದ ಸಮೀಪ ಬಂದನು.

ಶಂಖ ಧ್ವನಿ ಮೊಳಗಿತು. ಪಾಂಚಜನ್ಯದ ಗಂಭೀರನಾದ ಕೇಳಿದ ಕೂಡಲೇ ಸ್ತ್ರೀ ಬಾಲಾದಿಗಳು, ವಂದಿ-ಮಾಗಧರು, ಬಲರಾಮನನ್ನು ಮುಂದೆ ಮಾಡಿಕೊಂಡು ಅರ್ಘ್ಯ ಪಾದ್ಯಾದಿಗಳಿಂದ ಕೃಷ್ಣನನ್ನು ಎದುರುಗೊಂಡರು.

ಕೃಷ್ಣನು ರಥದಲ್ಲಿ ವಿರಾಜಮಾನನಾಗಿದ್ದನು. ದಿವ್ಯಾಭರಣ ಭೂಷಿತನೂ, ವನಮಾಲೆ, ಪೀತಾಂಬರಧಾರಿಯಾಗಿದ್ದನು. ಸ್ತ್ರೀಯರು ಚಾಮರ ಬೀಸುತ್ತಿದ್ದರು. ಕೃಷ್ಣನನ್ನು ಕಾಲ್ನಡಿಗೆಯಿಂದಲೇ ಸಮೀಪಿಸಿ, ಶ್ರೀಕೃಷ್ಣನನ್ನು ನೋಡಿ, ಗದ್ಗ ಸ್ವರದಿಂದ ಬಲರಾಮನಿಗೆ ಹೀಗೆಂದನು.

**ರಥೇನ ನ ಮಯಾ ಗಂತುಂ ಯುಕ್ತಪೂರ್ವೇತಿ ಚಿಂತ್ಯ ವೈ ।**
**ಅವತೀರ್ಣೋ ಮಹಾಭಾಗ ಗಚ್ಛ ತ್ವಂ ಸ್ಯಂದನೇನ ಚ ॥ 9 ॥**
**ವಿಷ್ಣುನಾ ಛದ್ಮರೂಪೇಣ ಗತ್ವೇಮಾಂ ಮಥುರಾಂ ಪುರೀಮ್ ।**
**ಅನುಪ್ರಕಾಶಿತಾತ್ಮಾನಂ ದೇವೇಂದ್ರಸ್ತ್ವಂ ನೃಪಾರ್ಣವೇ ॥ 10 ॥**

ಕೃಷ್ಣನೇ ! ರಾಜೇಂದ್ರನಾದ ಶ್ರೀಕೃಷ್ಣನ ಮುಂದೆ ಕುಳಿತು ರಥದಲ್ಲಿ ಹೋಗಬಾರದೆಂದು ಈ ಹಿಂದೆಯೆ ಯೋಚಿಸಿದ್ದೆನು. ಆದ್ದರಿಂದ ನಾನು ರಥದಿಂದ ಇಳಿದು ನಡೆದು ಬರುತ್ತೇನೆ. ನೀನು ರಥಧಲ್ಲಿ ಕುಳಿತು ಬಾ ಎಂದು ಹೇಳಿ ರಥದಿಂದ ಕೆಳಗಿಳಿದನು.

ಭಗವಾನ್ ಮಹಾವಿಷ್ಣುವೇ ಈಗ ಶ್ರೀಕೃಷ್ಣ ವೇಷ ಧರಿಸಿ ಮಥುರೆಗೆ ಆಗಮಿಸಿದ್ದಾನೆ. ಸಮುದ್ರರೂಪರಾದ ಸಾವಿರಾರು ರಾಜರ ಮಧ್ಯದಲ್ಲಿ ದೇವೇಂದ್ರತ್ವವನ್ನು ಪ್ರಕಟಗೊಳಿಸಿದ್ದಾನೆ.

ಇಂತಹ ಭಗವಂತ ಕೃಷ್ಣನನ್ನು ಸರ್ವಭಾವದಿಂದಲೂ ಸ್ತುತಿಸಲಿಚ್ಛಿಸುತ್ತೇನೆ ಎಂದಾಗ ಬಲರಾಮನು – ರಾಜನೇ, ರಾಜನಾದ ನೀನು ಇಲ್ಲಿಗೆ ಬರುತ್ತಿರುವ ಶ್ರೀಕೃಷ್ಣನು ನೀನು ಸ್ತೋತ್ರ ಮಾಡದಿದ್ದರೂ ನಿನ್ನಲ್ಲಿ ಸಂತುಷ್ಟನಾಗಿರುವನು. ಅವನ ದರ್ಶನ ಮಾತ್ರದಿಂದಲೇ ಸ್ತೋತ್ರವನ್ನು ಮಾಡಿದಂತಾಗಿದೆ.

**ಯನ್ಮಯಾ ಚಾಭಿಷಿಕ್ತಸ್ತ್ವಂ ಮಥುರೇಶೋ ಭವತ್ವಿತಿ ।**
**ನ ಯುಕ್ತಮನ್ಯಥಾ ಕರ್ತುಂ ಮಧುರಾಧಿಪತೇ ಸ್ವಯಮ್ ॥ 11 ॥**

**ಅರ್ಘ್ಯ ಮಾಚಮನೀಯಂ ಚ ಪಾದ್ಯಂ ಚಾಸ್ಮೈ ನಿವೇದಿತಮ್ ।**
**ನ ದಾತು ಮರ್ಹಸೇ ರಾಜನ್ ಏಷ ಮೇ ಮನಸಃ ಪ್ರಿಯಃ ॥ 12 ॥**

**ತ್ವಮೇವ ಮಾಥುರೋ ರಾಜಾ ನಾನ್ಯಥಾ ಕರ್ತು ಮರ್ಹಸಿ ॥ 13 ॥**

ಶ್ರೀಕೃಷ್ಣನು ಉಗ್ರಸೇನನಿಗೆ ಮಥುರಾಧಿಪತಿ ಉಗ್ರಸೇನ – ನಾನು ನಿನ್ನನ್ನು ಒಂದು ಬಾರಿ ಮಥುರಾಧೀಶ್ವರನೆಂದು ಪಟ್ಟಗಟ್ಟಿದ ಮೇಲೆ ನಾವೆಲ್ಲರೂ ನಿನ್ನ ದಾಸರು. ರಾಜನಾದವನು ಸೇವಕನಿಗೆ ಅರ್ಘ್ಯಪಾದ್ಯಾದಿಗಳಿಂದ ಗೌರವಿಸುವುದು ನಿನ್ನ ರಾಜತ್ವಕ್ಕೆ ಕುಂದು ತರುವಂತಹುದು. ಇದೇ ನನಗೆ ಪ್ರಿಯವಾಗಿದೆ. ನೀನೇ ಮಥುರಾ ರಾಜನು. ಇದನ್ನು ಅನ್ಯಥಾ ಮಾಡಬೇಡ ಎಂದನು.

ರಾಜ ಉಗ್ರಸೇನನೇ! ರಾಜನಾದ ನಿನಗೆ ನಾನೂ ಸಹ ಪುರಸ್ಕಾರ ರೂಪದಿಂದ ಇತರ ರಾಜರು ನಿನಗೆ ನೀಡುವಂತೆ ಒಂದು ಲಕ್ಷ ಸುವರ್ಣ ಮುದ್ರೆಗಳನ್ನು ನಿನಗೆ ಅರ್ಪಿಸುತ್ತೇನೆ. ನನಗೆ ಮಾಡಬೇಕೆಂದಿರುವ ಗೌರವ ಶ್ವೇತಚ್ಛತ್ರ, ಚಾಮರ ದಿವ್ಯಧ್ವಜ, ದಿವ್ಯಕಿರೀಟಾದಿಗಳೆಲ್ಲ ನಿನಗೆ ಇರಲಿ.

**ದೇವ ದೇವಾದ್ಯನಂತಾಯ ಶೌರಿಣೇ ವಜ್ರಪಾಣಿನಾ ।**
**ಪ್ರೇಷಿತಂ ದೇವರಾಜೇನ ದಿವ್ಯಾಭರಣಮಂಬರಮ್ ॥ 14 ॥**

**ಮಾಥುರಾಣಾಂ ಚ ಸರ್ವೇಷಾಂ ಭಾಗಾ ದೀನಾರಕಾ ದಶ ।**
**ನೃಪೇಣ ಸಹ ತಿಷ್ಠಂತಿ ವಿಕದ್ರು ಪ್ರಮುಖಾಶ್ಚ ಯೇ ।**
**ದಶಸಾಹಸ್ರಿಕೋ ಭಾಗಃ ತೇಷಾಂ ಧಾತ್ರಾ ಪ್ರಕಲ್ಪಿತಃ ॥ 15 ॥**

ಇಂದ್ರದೇವನು ಬಲರಾಮನಿಗೆ ದಿವ್ಯ ವಸ್ತ್ರಾಭರಣಗಳನ್ನು ಕಳುಹಿಸಿ-ಕೊಟ್ಟಿರುವನು. ಮಥುರೆಯ ಪ್ರಜೆವೊಬ್ಬಬ್ಬನಿಗೆ ಹತ್ತು ಹತ್ತು ದೀನಾರ ನೀಡಬೇಕೆಂದು ಸೂತಮಾಗಧರಿಗೆ ಸಾವಿರ ಸಾವಿರ ದೀನಾರಗಳೂ, ವೃದ್ಧರು, ಸ್ತ್ರೀಯರೂ, ವೈಶ್ಯರಿಗೂ ನೂರು ನೂರು ದೀನಾರಗಳೂ, ಉಗ್ರಸೇನನ ಸಹಾಯಕ ವಿಕದ್ರು ಮೊದಲಾದವರಿಗೆ ಇಂದ್ರನೂ ಹತ್ತು ಸಾವಿರ ದೀನಾರ ನೀಡಲು ಮುಂದೆ ಬಂದಿರುವನು.

ವೈಶಂಪಾಯನರು – ಹೀಗೆ ಕೃಷ್ಣ ಭಗವಾನ್‌ನು ಮಥುರೆಯ ಸೈನ್ಯದ ಸಮಕ್ಷಮದಲ್ಲಿ ಉಗ್ರಸೇನನನ್ನು ಗೌರವಿಸಿ, ಮಥುರೆಯ ಜನತೆಯನ್ನು ಆನಂದ ಸಾಗರದಲ್ಲಿ ಮುಳುಗಿಸಿ ಪುರಪ್ರವೇಶಿಸಿದನು. ಮಥುರೆಯ ಜನರೆಲ್ಲರೂ ದಿವ್ಯಾಭರಣಭೂಷಿತರಾಗಿ ರಾರಾಜಿಸಿದರು.

ಭೇರೀ ಪಟಹ ಶಂಖ ಮೊದಲಾದ ಮಂಗಳವಾದ್ಯ – ರಾಜರ – ಜನತೆಗಳ ಜಯಜಯಕಾರ ಶಬ್ಧಗಳಿಂದಲೂ, ವಂದಿ–ಮಾಗಧರ ಸ್ತುತಿಗಳಿಂದ ಸ್ತುತಿಸುತ್ತಿದ್ದರೂ, ಪ್ರಜೆಗಳೆಲ್ಲ ಅವನ ಕಾಲಿಗೆ ಬಿದ್ದು ನಮಸ್ಕರಿಸುತ್ತಿದ್ದರೂ, ಅಪಾರ ಧನರಾಶಿ ದಾನ ನೀಡುತ್ತಿದ್ದರೂ, ಅವನಿಗೆ ಗರ್ವವುಂಟಾಗಲಿಲ್ಲ. ಇದಕ್ಕೆ ಕಾರಣ.

**ಸ್ವಭಾವೋನ್ನತ ಭಾವತ್ವಾತ್ ದೃಷ್ಟ ಪೂರ್ವಾತ್ ತತೋಽಧಿಕಮ್ ।**
**ಅನಹಂಕಾರಭಾವಾಚ್ಚ ವಿಸ್ಮಯಂ ನ ಜಗಾಮ ಹ ॥ 16 ॥**

ಅವನ ಸ್ವಾಭಾವಿಕವಾಗಿ ಉನ್ನತ ಭಾವನೆವುಳ್ಳವನೂ, ತಾನು ಈಗ ದಾನ ಮಾಡಿದ್ದಕ್ಕಿಂತಲೂ ಅಧಿಕವಾಗಿ ದಾನಕೊಟ್ಟ ಸಂದರ್ಭಗಳನ್ನು ಅವನು ನೋಡಿದ್ದರಿಂದಲೂ ನಿರಹಂಕಾರಿ ಪುರುಷನಾದ್ದರಿಂದಲೂ ಆಶ್ಚರ್ಯವಾಗಲೀ, ಗರ್ವವಾಗಲೀ ಉಂಟಾಗಲಿಲ್ಲ. ಜನರು ಈ ಮಹಾನುಭಾವತೆಯಿಂದ ಮೆರೆದ ಇವನನ್ನು ಕುರಿತು ಮಾತನಾಡುತ್ತಿದ್ದರು.

ಏಷ ನಾರಾಯಣಃ ಶ್ರೀಮಾನ್ ಕ್ಷೀರಾರ್ಣವ ನಿಕೇತನಃ ।
ನಾಗ ಪರ್ಯಂಕ ಮುತ್ಸೃಜ್ಯ ಪ್ರಾಪ್ತೋಽಯಂ ಮಥುರಾ ಪುರೀಮ್ ॥17 ॥

ಕ್ಷೀರ ಸಮುದ್ರದ ಶ್ವೇತದ್ವೀಪದಲ್ಲಿರುವ ಶ್ರೀಮನ್ನಾರಾಯಣನೇ ಇವನು. ಶೇಷ ಪರ್ಯಂಕವನ್ನೂ ತ್ಯಜಿಸಿ ಭಕ್ತರಿಗಾಗಿ ಮಥುರೆಗೆ ಆಗಮಿಸಿದ್ದಾನೆ.

ಈ ಮಹಾನುಭಾವನೆ ವಾಮನನಾಗಿ ಅವತರಿಸಿ, ಬಲಿಯನ್ನು ಬಲಿ ಹಾಕಿ ಇಂದ್ರನಿಗೆ ತ್ರಿಲೋಕಾಧಿಪತ್ಯ ನೀಡಿದವನು.

ಚಾಣೂರ ಮುಷ್ಟಿಕಾದಿ ದೈತ್ಯರನ್ನು ಸಂಹರಿಸಿ ಬಲಿಷ್ಠ ಕಂಸನನ್ನೂ ಕೊಂದು ಹಾಕಿ ಉಗ್ರಸೇನನಿಗೆ ಮಥುರೆಯಲ್ಲಿ ರಾಜನನ್ನಾಗಿಸಿದ ನಿಷ್ಕಾಮಿಯು.

ನಾಭಿಷಿಕ್ತಃ ಸ್ವಯಂ ರಾಜ್ಯೇ ನ ಚಾಸೀನೋ ನ ನೃಪಾಸನೇ ।
ರಾಜೇಂದ್ರತ್ವಂ ಚ ಸಂಪ್ರಾಪ್ಯ ಮಥುರಾಮಾವಿಶತ್ ತತಃ ॥ 18 ॥

ಕಂಸನನ್ನು ಕೊಂದಿದ್ದರಿಂದಲೂ, ಅಭಿಷೇಕಕ್ಕೆ ಅರ್ಹನಾಗಿದ್ದರೂ ಅಭಿಷಿಕ್ತನಾಗಲಿಲ್ಲ. ಸಿಂಹಾಸನದಲ್ಲಿ ಕೂಡಲಿಲ್ಲ. ರಾಜೇಂದ್ರನ ಪದವಿ ಪಡೆದು ಮಥುರೆಗೆ ಬರುತ್ತಿರುವನು.

ಕಿಂ ವಾ ಶಕ್ಯಾಮಹೇ ವಕ್ತುಂ ಗುಣಾನಾಂ ತೇ ಗುಣೋದಧೇ ।
ಮಾನುಷೇಣೈಕ ಜಿಹ್ವೇನ ಪ್ರಭಾವೋತ್ಸಾಹ ಸಂಭವಾನ್ ॥ 19 ॥

ಸ ತತ್ರ ಭೋಗೀ ನಾಗೇಂದ್ರಃ ಕದಾಚಿದ್ ದೇವ ಬುದ್ಧಿಮಾನ್ ।
ದ್ವಿ ಸಾಹಸ್ರೇಣ ಜಿಹ್ವೇನ ವಾಸುಕಿಃ ಕಥಯಿಷ್ಯತಿ ॥ 20 ॥

ಕಿಂ ತ್ವದ್ಭುತಮಿದಂ ಲೋಕೇ ಮಾನವೇಂದ್ರೇಷು ಭೂತಲೇ ।
ನ ಭೂತಂ ನ ಭವಿಷ್ಯಂ ಚ ಶಕ್ರಾದ್ ಆಸನಮಾಗತಮ್ ॥ 21 ॥

ಸಭಾವತರಣಂ ಚೈವ ಕಲಶೈರಾಗತಂ ಸ್ವಯಮ್ ।
ನ ಶ್ರುತಂ ನ ಚ ದೃಷ್ಟಂ ವಾ ತೇನ ಮನ್ಯಾಮಹೇಽದ್ಭುತಮ್ ॥ 22 ॥

ವಂದಿ ಮಾಗಧರು ಸ್ತೋತ್ರ ಮಾಡುವರು – ಗುಣಗಳ ಖನಿಯಾದ ಶ್ರೀಕೃಷ್ಣನೇ! ನಿನ್ನ ಅನಂತಾನಂತಾಗುಣಗಳನ್ನು ಸಾವಿರಾರು ನಾಲಗೆ ಇರುವ ಶೇಷನಿಗೆ ಸಾಧ್ಯವಾಗದಿರುವಾಗ ಮಾನವರಿಗೆ ಇರುವ ಒಂದು ನಾಲಗೆಯಿಂದ ನಾವೇನು ಹೊಗಳಬಲ್ಲೆವು?

ಜಗತ್ತಿನಲ್ಲಿ ಇದಕ್ಕಿಂತ ಅದ್ಭುತವೆಂದರೆ ಸ್ವರ್ಗದಿಂದ ಇಂದ್ರದೇವನ ಸಭಾಭವನ ಭೂಮಿಗಿಳಿಯುವುದು, ದಿವ್ಯ ಅಷ್ಟ ಕಲಶಗಳಿಂದ ನಿನಗೆ ಅಭಿಷೇಕ ಮಾಡುವುದು ಇಂತಹ ಚಮತ್ಕಾರಗಳನ್ನು ಕೇಳಿಲ್ಲ, ನೋಡಿರುವುದಿಲ್ಲ. ಇದೊಂದು ಮಹಾ ಅದ್ಭುತ ಮಹಿಮೆ.

ನಿನ್ನಂತಹ ಪುತ್ರನನ್ನು ಮಗನನ್ನಾಗಿ ಪಡೆದ ದೇವಕಿಗಿಂತಲೂ ಶ್ರೇಷ್ಠ ನಾರೀ ಯಾರಿರುವರು? ಹೀಗೆ ವಂದಿ ಮಾಗಧರು ಹೀಗೆ ಹೇಳುತ್ತಿರುವ ಮಾತನ್ನು ಆಲಿಸುತ್ತಾ ಮಥುರೆಯ ಮಹಾದ್ವಾರಕ್ಕೆ ಬಂದರು. ಉಗ್ರಸೇನನು ಶ್ರೀಕೃಷ್ಣನಿಗೆ ಅರ್ಘ್ಯ ಪಾದ್ಯಾಚಮನ ನೀಡಿದ. ತಲೆಬಾಗಿ ಶಿರಸಾ ನಮಸ್ಕರಿಸಿ, ಆನೆಯ ಮೇಲೆ ಹತ್ತಿದ ಅವನು ಶ್ರೀಕೃಷ್ಣನ ಮೇಲೆ ಸುವರ್ಣಗಳ ರಾಶಿಯಿಂದ ವೃಷ್ಟಿಗರೆದನು. ನಂತರ ಹೀಗೆಂದನು, ಪ್ರಭುವೇ! ನಿನ್ನ ಭುಜಬಲದಿಂದ ಗೆದ್ದ ಈ ರಾಜ್ಯವನ್ನು ನಿನಗೆ ಅರ್ಪಿಸುತ್ತಿದ್ದೇನೆ. ನೀನೆ ರಾಜನಾಗಿರು. ನಾವೆಲ್ಲ ನಿನ್ನ ದಾಸರಾಗಿರುತ್ತೇವೆ ಎಂದನು.

ಆಗ ಕಂಸನ ತಾಯಿಯಾದ ಪದ್ಮಾವತಿಯು ಕೃಷ್ಣನನ್ನು ಕಂಸನು ಸಂಗ್ರಹಿಸಿದ್ದ ಅಪಾರ ಧನರಾಶಿಯನ್ನು ಅವನ ಪಾದಗಳಲ್ಲಿ ಅರ್ಪಿಸಿದಳು.

**ನ ಚಾಹಂ ಮಥುರಾಕಾಂಕ್ಷೀ ನ ಮಯಾ ವಿತ್ತಕಾಂಕ್ಷಯಾ ।**
**ಘಾತಿತಸ್ತವ ಪುತ್ರೋಽಯಂ ಕಾಲೇನ ನಿಧನಂ ಗತಃ ॥ 23 ॥**

ಉಗ್ರಸೇನ ರಾಜನೇ ! ನಾನು ಯಾವುದೇ ರಾಜ್ಯಕ್ಕಾಗಿಯಾಗಲೀ, ಧನಕನಕಾದಿಗಳ ಆಸೆಯಿಂದಾಗಲೀ ಕಂಸನನ್ನು ಕೊಂದದ್ದಲ್ಲ. ನನ್ನ ನಿಮಿತ್ತ ಮಾಡಿಕೊಂಡು ಕಾಲವೇ ಅವನನ್ನು ಕೊಂದಿತು. ನೀನೆ ಮಥುರೆಗೆ ಅಧಿಪತಿಯು. ನೀನಾದರೂ ಪ್ರಜಾಕ್ಷೇಮಕ್ಕಾಗಿ ಅನೇಕ ಯಜ್ಞಗಳನ್ನು ಮಾಡು, ದಾನ ಮಾಡು, ಶತ್ರು ನಿಗ್ರಹ ಮಾಡಿ ರಾಜ್ಯ ನಡೆಸು.

ನಾನು ನಿನ್ನ ಮಗನನ್ನು ಕೊಂದೆನೆಂದು ಮನಸ್ಸಿನಲ್ಲಿ ತಾಪ ಪಡಬೇಡ. ನನಗೆ ಬಂದಿರುವ ಧನಕನಕಾದಿಗಳನ್ನು ನಿನಗೆ ನೀಡುತ್ತೇನೆ. ಅದನ್ನೂ ನಿನ್ನ ಧನಾಗಾರಕ್ಕೆ ಸೇರಿಸು.

ಹೀಗೆ ಹೇಳಿ ವಸುದೇವ-ದೇವಕಿಯರ ಬಳಿ ಹೋದನು. ಇಬ್ಬರಿಗೂ ನಮಸ್ಕರಿಸಿ ಶಿಕ್ಷಣ ನೀಡಿದನು. ಈ ಸಮಯದಲ್ಲಿ ಮಥುರೆಯು ಇಂದ್ರದೇವನ ಅಮರಾವತಿಯೇ ಭೂಮಿಗೆ ಇಳಿದು ಬಂದಂತೆ ಕಾಂತಿಯುಕ್ತವಾಗಿತ್ತು.

ನಂತರ ಉಗ್ರಸೇನ-ಪದ್ಮಾವತಿಯ ಅನುಮತಿ ಪಡೆದು ಅಲ್ಲಿಂದ ಹೊರಟರು. ತಮ್ಮ ಅಸ್ತ್ರ-ಶಸ್ತ್ರಗಳನ್ನೆಲ್ಲ ತಮ್ಮ ಮನೆಯಲ್ಲಿಟ್ಟರು. ಸ್ವೇಚ್ಛೆಯಿಂದ ತಿರುಗಾಡ ತೊಡಗಿದರು. ಪ್ರತಿದಿನವು ಕರ್ಮಬಂಧನ ರಹಿತರಾದಾಗ್ಯೂ ನಿತ್ಯಾಹ್ನಿಕಾದಿಗಳನ್ನು ಮಾಡುತ್ತಾ ಆದರ್ಶ ತೋರಿದರು.

## ಗರುಡನಾಗಮನ

**ಏತಸ್ಮಿನ್ನೇವ ಕಾಲೇ ತು ಮಹೋತ್ಪಾತೋ ಬಭೂವ ಹ ।**
**ಬಭ್ರಮುಶ್ಚ ಘನಾಕಾಶೇ ಚೇಲುಶ್ಚ ಭುವಿ ಪರ್ವತಾಃ ॥ 24 ॥**

**ಕಂಪಿತಾ ಯಾದವಾಃ ಸರ್ವೇ ನ್ಯುಬ್ಜಾಶ್ಚ ಪತಿತಾ ಭುವಿ ।**
**ಮಹತಾ ಪಕ್ಷವಾತೇನ ವಿಜ್ಞಪ್ತೌ ಪತಗೋತ್ತಮಮ್ ।**
**ಸ್ವಾಗತಂ ಖೇಚರ ಶ್ರೇಷ್ಠ! ಸ್ವಾಗತಂ ಕೇಶವಪ್ರಿಯ ॥ 25 ॥**

ಒಮ್ಮೆ ಅಕಸ್ಮಾತ್ ಮಹೋತ್ಪಾತಗಳು ಕಂಡುಬಂದವು. ಆಕಾಶದಲ್ಲಿ ಮೇಘಗಳು ಚದುರಿದವು. ಪರ್ವತಗಳು ಕಂಪಿಸಿದವು. ಸಮುದ್ರ ಉಲ್ಲೋಲ-ಕಲ್ಲೋಲಾಯಿತು. ಮಥುರೆಯ ಯಾದವರೆಲ್ಲರ ತಲೆಕೆಳಗಾಗಿ ಭೂಮಿಗೆ ಬಿದ್ದರು. ಬಲರಾಮಕೃಷ್ಣರು ಆಕಾಶಕ್ಕೆ ಮುಖ ಮಾಡಿ ನೋಡಿದರು. ಗರುಡನು ಆಗಮಿಸುತ್ತಿದ್ದನು. ಈ ಚಂಡಮಾರುತ ಗರುಡನ ರೆಕ್ಕೆಗಳಿಂದ ಬರುತ್ತಲ್ಲಿತ್ತು. ಅಷ್ಟರಲ್ಲಿ ಗರುಡನು ಸಮೀಪ ಬಂದನು. ಬಲರಾಮ ಕೃಷ್ಣನಿಗೆ ನಮಸ್ಕರಿಸಿ ಆಸನದಲ್ಲಿ ಕುಳಿತನು. ಶ್ರೀಕೃಷ್ಣನು ಅವನಿಗೆ ಸ್ವಾಗತ ಮಾಡಿ ಹೀಗೆಂದನು.

**ಯಾಸ್ಯಾಮಃ ಪತಗಶ್ರೇಷ್ಠ! ಭೋಜಸ್ಯಾಂತಃ ಪುರಂ ಮಹತ್ ।**
**ತತ್ರ ಗತ್ವಾ ಸುಖಾಸೀನಾಃ ಮಂತ್ರಯಾಮೋ ಮನೋಗತಮ್ ॥ 26 ॥**

ಗರುಡನೇ, ನಾವು ಮೂವರೂ ಭೋಜನ ಅಂತಃಪುರಕ್ಕೆ ಹೋಗಿ ಅಲ್ಲಿ ಮನೋಗತ ವಿಷಯ ಚಿಂತಿಸೋಣ ಎಂದು ಹೇಳಿದನು.

**ವೈನತೇಯತೃತೀಯೌ ತೌ ಗುಹ್ಯಂ ಮಂತ್ರಮಥಾಬ್ರುವನ್ ।**
**ಅವಧ್ಯೋಽಸೌ ಕೃತೋಽಸ್ಮಾಕಂ ಸುಮಹಚ್ಚ ರಿಪೋರ್ಬಲಮ್ ॥ 27 ॥**
**ವೃತಃ ಸೈನ್ಯೇನ ಮಹತಾ ಮಹದ್ಭಿಶ್ಚ ನರಾಧಿಪೈಃ ।**
**ಬಹುಲಾನಿ ಚ ಸೈನ್ಯಾನಿ ಹಂತುಂ ವರ್ಷಶತೈರಪಿ ॥ 28 ॥**

**ನ ಶಕ್ಷ್ಯಾಮಃ ಕ್ಷಯಂ ಕರ್ತುಂ ಜರಾಸಂಧಸ್ಯ ವಾಹಿನೀಮ್ ।**
**ಅತೋಽರ್ಥಂ ವೈನತೇಯ ತ್ವಾಂ ಬ್ರವೀಮಿ ಮಥುರಾಂ ಪುರೀಮ್ ।**
**ವಸತೋರಾವಯೋಃ ಶ್ರೇಯಃ ನ ಭವೇದಿತಿ ಮೇ ಮತಿಃ ॥ 29 ॥**

ಮೂವರೂ ಅಂತಃಪುರ ಸೇರಿ ಗುಪ್ತಲೋಚನೆ ಮಾಡಲಾರಂಭಿಸಿದರು. ಕೃಷ್ಣನು ಗರುಡನೇ, ಜರಾಸಂಧನನ್ನಾಗಲೀ, ಕಾಲಯವನನ್ನಾಗಲೀ ನಮ್ಮಿಂದ ಕೊಲ್ಲಲು ಸಾಧ್ಯವಿಲ್ಲ. (ಅವರನ್ನು ಕೊಲ್ಲುವುದು ಭೀಮ ಹಾಗೂ ಮುಚುಕುಂದರು ಎಂದು ಆಂತರಿಕ) ಶತ್ರು ಜರಾಸಂಧನ ಸೈನ್ಯವೂ ಅಪಾರವಾಗಿದ್ದು ಬಹಳ ರಾಜರ ಬೆಂಬಲ ಅವನಿಗಿದೆ. ಇಂತಹ ಸೇನಾಸಾಗರವನ್ನು ಈಜಿ ಹೋಗಲು ನೂರಾರು ವರ್ಷವಾದರು ಸಾಧ್ಯವಾಗಲಾರದು. ಆದ್ದರಿಂದ ಮಥುರಾಪಟ್ಟಣದಲ್ಲಿ ನಮ್ಮ ವಾಸ ಶ್ರೇಯಸ್ಸನ್ನುಂಟು ಮಾಡಲಾರದು. ಗರುಡನು ಹೇಳುವನು,

**ದೇವದೇವಂ ನಮಸ್ಕೃತ್ಯ ಗತೋಽಹಂ ಭವತೋಽಂತಿಕಾತ್ ।**
**ವಾಸಾರ್ಥಮೀಕ್ಷಿತುಂ ಭೂಮಿಂ ತವ ದೇವ ಕುಶಸ್ಥಲೀಮ್ ॥ 30 ॥**

**ದೃಷ್ಟ್ವಾಹಂ ವಿಬುಧಶ್ರೇಷ್ಠ! ಪುರೀಂ ಲಕ್ಷಣ ಪೂಜಿತಾಮ್ ।**
**ಸರ್ವತೋದಧಿ ಮಧ್ಯಸ್ಥಾಂ ಅಭೇದ್ಯಾಂ ತ್ರಿದಶೈರಪಿ ॥ 31 ॥**

**ಭೀಷಣೀಂ ರಿಪು ಸಂಘಾನಾಂ ಮಿತ್ರಾಣಾಂ ಹರ್ಷವರ್ಧನೀಮ್ ।**
**ರೈವತಂ ಚ ಗಿರಿಶ್ರೇಷ್ಠಂ ಕುರು ದೇವ ಸುರಾಲಯಾಮ್ ।**
**ಕಾರಯಸ್ವಾಧಿವಾಸಂ ಚ ತತ್ರ ಗತ್ವಾ ಸುರೋತ್ತಮ ॥ 32 ॥**

ಸ್ವಾಮಿಯೇ, ಹಿಂದೆ ನಿನ್ನನ್ನು ನಮಸ್ಕರಿಸಿ ನಿನಗೆ ವಾಸಯೋಗ್ಯ ಸ್ಥಳವನ್ನು ಹುಡುಕಲು ಕುಶಸ್ಥಲಿಗೆ ಹೋದೆ. ಆಕಾಶದಲ್ಲಿಯೇ ನಿಂತು ಪ್ರದೇಶವನ್ನು ಅವಲೋಕಿಸಿದೆ. ಕುಶಸ್ಥಲಿಯ ಸುತ್ತಮುತ್ತ ಪ್ರದೇಶ ಶುಭಲಕ್ಷಣಗಳಿಂದ ಕೂಡಿದ್ದು ನಿನ್ನ ವಾಸಕ್ಕೆ ಯೋಗ್ಯವಾಗಿದೆ. ಸಮುದ್ರದಿಂದ ಸುತ್ತುವರೆದಿದ್ದು ದೇವತೆಗಳಿಂದಲೂ ಅಭೇದ್ಯವೆಂದೆ ಹೇಳಬಹುದು ಅನೇಕ ವೃಕ್ಷಗಳಿಂದಲೂ. ಪುಷ್ಪಬಳ್ಳಿಗಳಿಂದಲೂ ಕೂಡಿರುವ ಈ ಪ್ರದೇಶದಲ್ಲಿ ಸುಶೋಭಿತ ನಗರೀ ನಿರ್ಮಾಣ ಮಾಡಬಹುದಾಗಿದೆ. ಅಲ್ಲಿರುವ ರೈವತಕ ಪರ್ವತವನ್ನು ನಂದವನವನ್ನಾಗಿ ಮಾಡು. ಕುಶಸ್ಥಲಿಯಲ್ಲಿ ನಗರ ನಿರ್ಮಾಣ ಮಾಡಿ ನೀನು ಅಲ್ಲಿಯೆ ವಾಸ ಮಾಡು. ನಾವು ನಿರ್ಮಿಸಿರುವ ಈ ನಗರವು 'ದ್ವಾರಾವತೀ' ಎಂದು ವಿಖ್ಯಾತವಾಗುತ್ತದೆ. ಸಾಗರವು ನೀರಿನಲ್ಲಿ ಮುಳುಗಿರುವ

ಸ್ವಲ್ಪಭಾಗವನ್ನು ಬಿಟ್ಟುಕೊಟ್ಟರೆ ನಗರ ನಿರ್ಮಾಣ ಇನ್ನೂ ಸುಲಭವಾಗುತ್ತದೆ. ದೇವಶಿಲ್ಪಿ ವಿಶ್ವಕರ್ಮನೇ ನಿರ್ಮಾಣ ಮಾಡಿಕೊಡುವನು. ಚಂದ್ರ-ಸೂರ್ಯ ಸದೃಶವಾದ ಮಹಡಿಗಳನ್ನು ನಿರ್ಮಿಸು. ಬಂಗಾರದ ಇಟ್ಟಿಗೆಗಳಿಂದ ನಿರ್ಮಿತವಾದದ್ದೂ, ಸರ್ವರತ್ನ ಶೋಭಿತವೂ ಆದ ನಗರ ನಿರ್ಮಾಣವಾಗಲಿ ಎಂದನು.

ಗರುಡನ ಹಿತಕರ ಮಾತನ್ನು ಆಲಿಸಿ ಸ್ವಲ್ಪಹೊತ್ತು ಆಲೋಚನೆಯಲ್ಲಿ ತೊಡಗಿದನು. ಗರುಡನನ್ನು ಸತ್ಕರಿಸಿ ಕಳುಹಿಸಿಕೊಟ್ಟನು. ನಂತರ ಉಗ್ರಸೇನನು ಮಧುಮಧುರವಾದ ಮಾತನ್ನಾಡಿದನು.

**ಶ್ರೂಯತಾಂ ವಚನಂ ತ್ವಾದ್ಯ ವಕ್ಷ್ಯಾಮಿ ರಿಪುಸೂದನ ।**
**ತ್ವಯಾ ವಿಹೀನಾಃ ಸರ್ವೇ ಸ್ಮ ನ ಶಕ್ತಾಃ ಸುಖಮಾಸಿತುಮ್ ॥ 33 ॥**
**ಪುರೇಽಸ್ಮಿನ್ ವಿಷಯಾಂತೇ ವಾ ಪತಿಹೀನಾ ಇವ ಸ್ತ್ರಿಯಃ ।**
**ತ್ವತ್ ಸನಾಥಾಃ ವಯಂ ತಾತ ತ್ವದ್ ಬಾಹುಬಲಮಾಶ್ರಿತಾಃ ॥ 34 ॥**
**ಬಿಭೀಮೋ ನ ನರೇಂದ್ರಾಣಾಂ ಸೇಂದ್ರಾಣಾಮಪಿ ಮಾನದ ।**
**ವಿಜಯಾಯ ಯದುಶ್ರೇಷ್ಠ ಯತ್ರ ಯತ್ರ ಗಮಿಷ್ಯಸಿ ॥ 35 ॥**

ಶ್ರೀಕೃಷ್ಣನೇ ! ನಿನ್ನಿಂದಲೇ ಜೀವಿಸಿರುವ ನಿನ್ನ ಬಲವನ್ನೆ ಆಶ್ರಯಿಸಿರುವ ನಾವೆಲ್ಲರೂ ನಿನ್ನ ಬಿಟ್ಟು ಬದುಕಬಲ್ಲರೆ? ಪತಿಯಿಲ್ಲದೆ ಸ್ತ್ರೀಯು ನಿರ್ಭಯಳಾಗಿ ಬದುಕುವುದು ಹೇಗೆ ಅಸಾಧ್ಯವೋ ಹಾಗೆ ಜಗತ್ಪತಿಯಾದ ನಿನ್ನ ಬಿಟ್ಟು ಬದುಕುವುದು ಅಸಾಧ್ಯವೇ.

ಆದ್ದರಿಂದ ನೀನೆಲ್ಲಿ ಹೋಗುವೆಯೋ ನಮ್ಮನ್ನೂ ಅಲ್ಲಿಗೆ ಕರೆದೊಯ್ಯು. ನಿನ್ನ ಬಲವಿದ್ದರೆ ಇಂದ್ರನೊಂದಿಗೆ ದೇವತೆಗಳು ಬಂದರೂ ನಾವು ಭಯಪಡುವುದಿಲ್ಲ.

ಹೀಗೆ ಉಗ್ರಸೇನ ಹೇಳಿದ ಮಾತನ್ನು ಕೇಳಿ ನಸುನಕ್ಕು - ನಿಮಗೆ ಯಾವುದು ಹಿತವೋ ಅದರಂತೆ ನಾನೂ ನಡೆದುಕೊಳ್ಳುತ್ತೇನೆ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ದ್ವಾರವತಿ ನಿರ್ಮಾಣ ಸಂಕಲ್ಪವೆಂಬಲ್ಲಿ
ಐವತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಷಟ್‌ಪಂಚಾಶತ್ತಮೋಽಧ್ಯಾಯಃ

## ದ್ವಾರಕ ಪುರೀಗೆ ಪ್ರಯಾಣ

*ವೈಶಂಪಾಯನ ಉವಾಚ –*

**ಕಸ್ಯಚಿತ್ ತ್ವಥ ಕಾಲಸ್ಯ ಸಭ್ಯಾಂಸ್ತಾನ್ ಯದು ಸಂಸದಿ ।**
**ಬಭಾಷೇ ಪುಂಡರೀಕಾಕ್ಷೋ ಹೇತುಮದ್ ವಾಕ್ಯಮುತ್ತಮಮ್ ॥ 1 ॥**

**ಯಾದವಾನಾಮಿಯಂ ಭೂಮಿಃ ಮಥುರಾ ರಾಷ್ಟ್ರಮಾಲಿನೀ ।**
**ವಯಂ ಚೈವೇಹ ಸಂಭೂತಾಃ ವ್ರಜೇ ಚ ಪರಿವರ್ಧಿತಾಃ ॥ 2 ॥**

ವೈಶಂಪಾಯನರು ಹೇಳುವರು – ರಾಜನೇ ! ಕೇಳು ಕೆಲವು ಕಾಲ ಕಳೆದ ನಂತರ ಶ್ರೀಕೃಷ್ಣನು ಯಾದವರ ಸಭೆಯಲ್ಲಿದ್ದ ಯಾದವ ಶ್ರೇಷ್ಠರನ್ನು ಉದ್ಧೇಶಿಸಿ ಹೀಗೆಂದನು. ಈ ಮಥುರೆಯು ನನಗೆ ಜನ್ಮಭೂಮಿಯು, ನಾವು ಬೆಳೆದದ್ದು ಇಲ್ಲಿಯೇ. ಇದು ನಮಗೆ ಮಾಲೆಯಂತೆ ಶೋಭಿಸುತ್ತಿರುವುದು.

ಈಗ ನಮಗೆ ಹಿಂದಿದ್ದ,

ಒಂದು ದಿನ ಶ್ರೀಕೃಷ್ಣನು ಯಾದವರ ಸಭೆ ಕರೆದನು. ತನ್ನ ಅಭಿಪ್ರಾಯವನ್ನು ತಿಳಸುತ್ತಾ, ಯದುಶ್ರೇಷ್ಠರೇ! ನಾವು ನೀವು ಎಲ್ಲರೂ ಈ ಮಥುರೆಯಲ್ಲಿಯೇ ಹುಟ್ಟಿ ಬೆಳೆದಿದ್ದೇವೆ. ಈಗ ನಾವು ಸಮಸ್ತ ರಾಜರ ಹಾಗೂ ಪ್ರಬಲ ಜರಾಸಂಧನನೊಂದಿಗೆ ವಿರೋದ ಕಟ್ಟಿ ಕೊಂಡಿರುವೆವು. ನಮ್ಮಲ್ಲಿ ಈಗ ಅಪಾರಸಂಪತ್ತು ಮುತ್ತು ರತ್ನಗಳು ನಮ್ಮಲ್ಲಿವೆ. ಈ ಅಪಾರ ಸಂಪತ್ತನ್ನು ರಕ್ಷಿಸುವುದು ದುಸ್ತರವಾಗಿದೆ. ಇದಲ್ಲದೆ, ನಮ್ಮ ಮಿತ್ರ ಪರಿವಾರ, ಬಂಧುಬಾಂಧವರು, ಸೇನಾವಾಹಿನೀ, ಕೋಟ್ಯಾವಧಿ ಜನಸಂಖ್ಯೆ,

ಚಿಕ್ಕಮಕ್ಕಳು ಇವರುಗಳಿಂದ ಮಥುರೆಯು ಈಗ ತುಂಬಿ ಹೋಗಿದೆ. ಜನರಿಗೆ ಈ ಮಥುರೆಯು ಸಾಲದಾಗಿದೆ. ಮಥುರೆಯು ದಿನದಿನಕ್ಕೆ ಬೆಳೆಯುತ್ತಿದ್ದು ಯಾವುದಕ್ಕೂ ಸಾಲದಾಗಿದೆ. ಮನೆಯಲ್ಲಿಯೂ ಇದ್ದರೂ ಹೊರಗಿದ್ದಂತೆ ಗದ್ದಲವಾಗುತ್ತಿದೆ?

**ಅತ್ರ ನೋ ರೋಚತೇ ಮಹ್ಯಂ ನಿವಾಸೋ ಯದುಪುಂಗವಾಃ ।**
**ಪುರೀಂ ನಿವೇಶಯಿಷ್ಯಾಮಿ ಮಮ ತತ್ ಕ್ಷಂತುಮರ್ಹಥ ॥ 3 ॥**

**ತಮೂಚುಃ ಯಾದವಾಃ ಸರ್ವೇ ಹೃಷ್ಟೇನ ಮನಸಾ ತದಾ ।**
**ಸಾಧ್ಯತಾಂ ಯದಭಿಪ್ರೇತಂ ಜನಸ್ಯಾಸ್ಯ ಭವಾಯ ವೈ ॥ 4 ॥**

ಆದ್ದರಿಂದ ಇಲ್ಲಿ ವಾಸ ಮಾಡುವುದು ನನಗೆ ಸರಿಯಾಗಿ ಕಾಣುತ್ತಿಲ್ಲ. ಆದುದರಿಂದ ಬೇರೆ ಪಟ್ಟಣವನ್ನು ನಿರ್ಮಿಸುತ್ತೇನೆ. ನನ್ನ ಈ ದಿಟ್ಟಹೆಜ್ಜೆಯ ಯೋಜನೆಗೆ ನೀವೆಲ್ಲರೂ ಸ್ವಾಗತಿಸುವರೆಂದು ತಿಳಿಯುವೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು ಎಂದನು?

ಆಗ ಎಲ್ಲಾ ಯಾದವರು ಒಕ್ಕೊರಲಿನಿಂದ ಜನರಿಗೆ ಒಳ್ಳೆಯದಾಗುವುದಾದರೇ ನೀನೇನು ಮಾಡಿದರೂ ನಮಗೆಲ್ಲ ಸಮ್ಮತವೆಂದು ಹೇಳಿದರು. ನಂತರ ಯಾದವರು ಸಮಾಲೋಚನೆ ನಡೆಸಿದರು.

**ಅವಧ್ಯೋಽಸೌ ಕೃತೋಽಸ್ಮಾಕಂ ಸುಮಹಚ್ಚ ರಿಪೋರ್ಬಲಮ್ ।**
**ಬಹುಲಾನಿ ಚ ಸೈನ್ಯಾನಿ ಹಂತುಂ ವರ್ಷಶತೈರಪಿ ।**
**ನ ಶಕ್ಯಾಮೋ ಹ್ಯತಸ್ತೇಷಾಮಪಯಾನೇಽಭವನ್ ಮತಿಃ ॥ 5 ॥**

ಈ ಜರಾಸಂಧ, ಕಾಲಯವನರು ನಮ್ಮಿಂದ ವಧಿಸಲ್ಪಡುವವರಲ್ಲ. ಅವರ ಸೈನ್ಯವಾದರೂ ಅಪಾರವಾಗಿದೆ. ಈಗಾಗಲೇ ಅವರ ಅಪಾರ ಸಂಖ್ಯೆಯಲ್ಲಿ ಸೈನ್ಯವನ್ನು ನಾಶ ಮಾಡಿದ್ದೇವೆ. ಆದರೂ ಅವರ ಸೇನಾ ಸಂಖ್ಯೆ ಎಷ್ಟೆಂದರೆ – ನಾವೆಲ್ಲರೂ ಇನ್ನೂ ನೂರು ವರ್ಷ ಯುದ್ಧ ಮಾಡಿದರು ಅವರನ್ನು ನಾಶ ಮಾಡಲಾರೆವು. ಆದ್ದರಿಂದ ಈ ಪಟ್ಟಣ ಬಿಟ್ಟು ಹೋಗುವುದೇ ಮೇಲು ಎಂದರು.

### ಕಾಲಯವನನ ಮಥುರಾ ಆಕ್ರಮಣ

**ತಸ್ಮಿಂಶ್ಚೈವಾಂತರೇ ರಾಜಾ ಸಕಾಲಯವನಸ್ತದಾ ।**
**ಸೈನ್ಯೇನ ತದ್ ವಿಧೇನೈವ ಮಥುರಾಮಭ್ಯುಪಾಗಮತ್ ॥ 6 ॥**

**ತತೋ ಜರಾಸಂಧಬಲಂ ದುರ್ನಿವಾರ್ಯಮಭೂತ್ ತದಾ ।**
**ತೇ ಕಾಲಯವನಂ ಚೈವ ಶ್ರುತ್ವೇದಂ ಪ್ರತಿಪೇದಿರೇ ॥ 7 ॥**

ಹೀಗೆ ವೃಷ್ಣಿಗಳು ಮಂತ್ರಾಲೋಚನೆ ಮಾಡುತ್ತಿರುವಾಗಲೇ ಜರಾಸಂಧನು ಕಾಲಯವನನೊಂದಿಗೆ ಮಥುರೆಯನ್ನಾಕ್ರಮಿಸಿದನು. ಆಗ ಶ್ರೀಕೃಷ್ಣನು ಹೇಳಿದನು.

**ಅದ್ಯೈವ ದಿವಸಃ ಪುಣ್ಯೋ ನಿರ್ಯಾಮಃ ಸ್ವಬಲಾನುಗಾಃ ।**
**ತತೋ ನಿಶ್ಚಕ್ರಮುಃ ಸರ್ವೇ ಯಾದವಾಃ ಕೃಷ್ಣಶಾಸನಾತ್ ॥ 8 ॥**
**ಸಂಗೃಹ್ಯ ತೇ ಕಲತ್ರಾಣಿ ವಸುದೇವ ಪುರೋಗಮಾಃ ।**
**ಆಹತ್ಯ ದುಂದುಭೀನ್ ಸರ್ವೇ ಸ್ವಜನಜ್ಞಾತಿ ಬಾಂಧವಾಃ ।**
**ನಿರ್ಯಯುಃ ಯಾದವಾಃ ಸರ್ವೇ ಮಥುರಾಮಪಹಾಯ ವೈ ॥ 9 ॥**

ಯಾದವರೇ! ನಮಗೆ ಮಥುರೆ ಬಿಟ್ಟು ಹೋಗಲು ಇಂದೇ ಶುಭಮುಹೂರ್ತವಾಗಿದೆ. ಇಂದೇ ಹೊರಟು ಬಿಡೋಣ ಎಂದನು. ಯಾದವರೆಲ್ಲರೂ ತಮ್ಮ ತಮ್ಮ ಮನೆಗೆ ಹೋಗಿ ತಮ್ಮ ವಸ್ತುಗಳನ್ನು ಪುತ್ರಮಿತ್ರಕಲತ್ರ ಪರಿವಾರದೊಂದಿಗೆ ಹೊರಟುಬಿಟ್ಟರು.

ಭೋರ್ಗರೆಯುವ ಸಮುದ್ರದಂತೆ ಆನೆ, ಕುದುರೆ, ರಥಗಳಲ್ಲಿ ಕುಳಿತು ಪಶ್ಚಿಮ ದಿಕ್ಕಿಗೆ ಪ್ರಯಾಣ ಬೆಳೆಸಿದರು. ಶ್ರೀಕೃಷ್ಣನೆ ಆದಿಯಾಗಿ ಪ್ರಮುಖ ಯಾದವರು ತಮ್ಮ ತಮ್ಮ ಭಾಗಗಳಿಗೆ ಸೇರಿದ ಸೈನ್ಯಗಳನ್ನು ನಡೆಸಿಕೊಂಡು ಹೋಗುತ್ತಿದ್ದರು.

**ಅನೂಪಂ ಸಿಂಧುರಾಜಸ್ಯ ಪ್ರಪೇತುಃ ಯದುಪುಂಗವಾಃ ।**
**ಮುಮುದುಃ ಯಾದವಾಃ ಸರ್ವೇ ದೇವಾಃ ಸ್ವರ್ಗಗತಾ ಇವ ॥ 10 ॥**

ಯಾದವರು ಪ್ರಯಾಣ ಮಾಡುತ್ತಾ ಸಿಂಧುರಾಜನ ಜೌಗುತಾಣವನ್ನು ಸೇರಿದರು. ಅನೇಕ ಲತೆ ಬಳ್ಳಿಗಳಿಂದಲೂ ತೆಂಗು, ತಾಳೇಮರಗಳಿಮದಲೂ ಕೂಡಿರುವ ಆ ಪ್ರದೇಶವನ್ನು ಸೇರಿ ಸ್ವರ್ಗದಲ್ಲಿರುವಂತೆ ಆನಂದ ತುಂದಿಲರಾದರು.

**ಪುರವಾಸ್ತು ವಿಚಿನ್ವನ್ ಸಃ ಕೃಷ್ಣಸ್ತು ಪರವೀರಹಾ ।**
**ದದರ್ಶ ವಿಪುಲಂ ದೇಶಂ ಸಾಗರೇಣೋಪಶೋಭಿತಂ ॥ 11 ॥**

ವಿಷಯಂ ಸಿಂಧುರಾಜಸ್ಯ ಶೋಭಿತಂ ಪುರಲಕ್ಷಣೈಃ ।
ತತ್ರ ರೈವತಕೋನಾಮ ಪರ್ವತೋ ನಾತಿ ದೂರತಃ ॥ 12 ॥
ಮಂದರೋದಾರ ಶಿಖರಃ ಸರ್ವತೋಽಭಿರಾಜತೇ ।
ತತ್ರೈಕಲವ್ಯ ಸಂವಾಸೋ ದ್ರೋಣೇನಾಧ್ಯುಷಿತಶ್ಚಿರಮ್ ॥ 13 ॥
ವಿಹಾರಭೂಮಿಃ ತತ್ರೈವ ತಸ್ಯ ರಾಜ್ಞಃ ಸುನಿರ್ಮಿತಾ ।
ನಾಮ್ನಾ ದ್ವಾರವತೀ ನಾಮ ಸ್ವಾಯಕಾಷ್ಟಾಪದೋಪಮಾ ॥ 14 ॥

ಶ್ರೀಕೃಷ್ಣನು ನಗರದ ವಾಸ್ತುಸ್ಥಾನವನ್ನು ಯೋಚಿಸುತ್ತಾ ಸಮುದ್ರತೀರದಲ್ಲಿದ್ದ ಶೋಭಿಸುತ್ತಿದ್ದ ವಿಶಾಲವಾದ ಒಂದು ಪ್ರದೇಶ ಕಂಡನು. ಮರಳಿನೊಂದಿಗೆ ಕೆಮ್ಮಣ್ಣಿನಿಂದ ಕೂಡಿರುವ ಆ ಪ್ರದೇಶವು ನಗರ ನಿರ್ಮಾಣಕ್ಕೆ ಯೋಗ್ಯವಾಗಿದ್ದು ಲಕ್ಷ್ಮೀದೇವಿಯೇ ಅಲ್ಲಿ ಸನ್ನಿಹಿತಳಾಗಿದ್ದಾಳೋ ಎಂಬಂತಿತ್ತು.

ಅದರ ಹತ್ತಿರವೆ 'ರೈವತಕ' ಎಂಬ ಪರ್ವತವಿತ್ತು. ಅಲ್ಲಿ ಏಕಲವ್ಯನು ವಾಸ ಮಾಡುತ್ತಿದ್ದನು. ದ್ರೋಣರು ಅವನಿಗೆ ಅಸ್ತ್ರ ನೀಡಲೆಂದು ಅಲ್ಲಿ ಕೆಲವು ಕಾಲವಿದ್ದರು. ಹಲವಾರು ಮಂದಿ ಅಲ್ಲಿಗೆ ಬಂದು ಹೋಗುತ್ತಿದ್ದರು.

ಅದು ರೇವತಕ ರಾಜನ ವಿಹಾರ ಸ್ಥಳವಾಗಿತ್ತು. 'ದ್ವಾರವತೀ' ಎಂಬ ನಾಮದಿಂದ ಅಲಂಕೃತವಾಗಿತ್ತು. ಶ್ರೀಕೃಷ್ಣನು ಈ ಸುಂದರ ತಾಣದಲ್ಲಿಯೇ ನಗರೀ ನಿರ್ಮಿಸಲು ಮನಸ್ಸು ಮಾಡಿದನು. ಯಾದವರೂ ತಮ್ಮ ಸೈನ್ಯವನ್ನು ಅಲ್ಲಿಯೇ ಬಿಡಾರ ಹೂಡಿದರು.

## ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ

ತಸ್ಯಾಸ್ತು ವಿಧಿವನ್ನಾಮ ವಾಸ್ತೂನಿ ಚ ಗದಾಗ್ರಜಃ ।
ನಿರ್ಮಮೇ ಪುರುಷಶ್ರೇಷ್ಠೋ ಮನಸಾ ಯಾದವೋತ್ತಮಃ ॥ 15 ॥

ಶ್ರೀಕೃಷ್ಣನಾದರೂ ಯದುವೀರರೊಂದಿಗೆ ನಗರಿಯನ್ನು ನಿರ್ಮಿಸಲು ತೀರ್ಮಾನಿಸಿದನು. ಮನಃ ಸಂಕಲ್ಪ ಮಾತ್ರದಿಂದಲೇ ನಗರದ ಹೆಸರನ್ನು ನಿಶ್ಚಯಿಸಿದನು. ಮನಸ್ಸಿನಿಂದಲೇ ವಿಧಿವತ್ತಾಗಿ ಸೌಧ, ಮಹಡಿ, ಮೊದಲಾದ ವಿಭಾಗಗಳನ್ನು ಮಾಡಿದನು. ಅತ್ಯಂತ ಸುಂದರವಾದ ದ್ವಾರಾವತಿಯು ಕೇವಲ ಇಚ್ಛಾ ಮಾತ್ರದಿಂದ ಸೃಷ್ಟಿಸಿದನು.

**ಏವಂ ದ್ವಾರವತೀಂ ಚೈವ ಪುರೀಂ ಪ್ರಾಪ್ಯ ಸಬಾಂಧವಾಃ ।**
**ಸುಖಿನೋ ನ್ಯವಸನ್ ರಾಜನ್ ಸ್ವರ್ಗೇ ದೇವಗಣಾ ಇವ ॥ 16 ॥**

ಜನಮೇಜಯನೇ ! ಹೀಗೆ ನಿರ್ಮಿಲ್ಪಟ್ಟ ದ್ವಾರವತಿಯನ್ನು ಬಂಧುಗಳಿಂದ ಕೂಡಿದ್ದ ಯಾದವರೆಲ್ಲರೂ ಪುರಪ್ರವೇಶ ಮಾಡಿ ದೇವತೆಗಳು ಸ್ವರ್ಗದಲ್ಲಿರುವಂತೆ ಅತ್ಯಂತ ಸುಖಿಗಳಾಗಿ ವಾಸಿಸಿದರು.

ಕೃಷ್ಣನಾದರೂ ಕಾಲಯವನ ಹಾಗೂ ಜರಾಸಂಧ ಮಥುರೆಯನ್ನು ಆಕ್ರಮಿಸಲು ಉದ್ಯುಕ್ತರಾಗಿದ್ದನ್ನು ತಿಳಿದು ದ್ವಾರವತಿಯನ್ನು ಪ್ರವೇಶಿಸಿದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ದ್ವಾರವತಿ ಪ್ರವೇಶೋವೆಂಬಲ್ಲಿ
ಐವತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಸಪ್ತಪಂಚಾಶತ್ತಮೋಽಧ್ಯಾಯಃ

*ಜನಮೇಜಯ ಉವಾಚ –*

**ಭಗವನ್ ಶ್ರೋತುಮಿಚ್ಛಾಮಿ ವಿಸ್ತರೇಣ ಮಹಾತ್ಮನಃ ।**
**ಚರಿತಂ ವಾಸುದೇವಸ್ಯ ಯದುಶ್ರೇಷ್ಠಸ್ಯ ಧೀಮತಃ ॥ 1 ॥**

**ಕಿಮರ್ಥಂ ಚ ಪರಿತ್ಯಜ್ಯ ಮಥುರಾಂ ಮಧುಸೂದನಃ ।**
**ಸ ಕಾಲಯವನಶ್ಚಾಪಿ ಕೃಷ್ಣೇ ಕಿಂ ಪ್ರತ್ಯಪದ್ಯತ ॥ 2 ॥**

**ದ್ವಾರಕಾಂ ಚ ಸಮಾಸಾದ್ಯ ವಾರಿದುರ್ಗಾಂ ಜನಾರ್ದನಃ ।**
**ಕಿಂ ಚಕಾರ ಮಹಾಬಾಹುಃ ಮಹಾಯೋಗೀ ಮಹಾತಪಾಃ ॥ 3 ॥**

**ಕಿಂ ವೀರ್ಯಃ ಕಾಲಯವನಃ ಕೇನ ಜಾತಶ್ಚ ವೀರ್ಯವಾನ್ ।**

ಪೂಜ್ಯ ವೈಶಂಪಾಯನರೇ! ಧೀಮಂತನೂ, ಮಹಾನುಭಾವನೂ ಯದುಶ್ರೇಷ್ಠ ಶ್ರೀಕೃಷ್ಣನ ಮಹಾಮಹಿಮೆಗಳನ್ನು ವಿಸ್ತಾರವಾಗಿ ತಿಳಿಯಬೇಕೆಂದಿದ್ದೇನೆ.

ಮಧುಸೂದನನು ಮಹಾಪ್ರಭುವಾಗಿದ್ದು ಏತಕ್ಕಾಗಿ ಮಥುರೆಯನ್ನು ಬಿಟ್ಟುಹೋದನು? ಮಥುರೆಯಾದರೂ ಲಕ್ಷ್ಮಿಯ ಸನ್ನಿಧಾನ ಮುಕ್ತವಾಗಿದ್ದು ಧನ-ಧಾನ್ಯ ಸಮೃದ್ಧವಾಗಿತ್ತು. ನೀರಿನ ಸಮೃದ್ಧಿಯೂ ಇರುವಾಗ ಬಿಟ್ಟು ಹೋಗುವ ಪರಿತ್ಯಜಿಸಿದ ಕಾರಣವೇನು? ಕಾಲಯವನನು ಶ್ರೀಕೃಷ್ಣನೊಂದಿಗೆ ಹೇಗೆ ವ್ಯವಹರಿಸಿದನು? ಕಾಲಯವನನು ಹುಟ್ಟಿದ್ದೇಗೆ? ಅವನ ಬಲಪರಾಕ್ರಮವೇನು? ಜಲದುರ್ಗದಿಂದ ಆವೃತವಾಗಿದ್ದ ದ್ವಾರವತಿಯನ್ನು ಸೇರಿ ಏನು ಮಾಡಿದನು?

## ಕಾಲಯವನನ ಜನ್ಮ

**ವೃಷ್ಣೀನಾಮಂಧಕಾನಾಂ ಚ ಗುರುಃ ಗಾರ್ಗ್ಯೋ ಮಹಾಮನಾಃ ।**
**ಬ್ರಹ್ಮಚಾರೀ ಪುರಾ ಭೂತ್ವಾ ನ ಸ್ಮ ದಾರಾನ್ ಸ ವಿಂದತಿ ॥ 4 ॥**

**ತಥಾ ಹಿ ವರ್ತಮಾನಂ ತಮೂರ್ಧ್ವರೇತಸಮವ್ಯಯಮ್ ।**
**ಶ್ಯಾಲೋಽಭಿಶಸ್ತವಾನ್ ಗಾರ್ಗ್ಯಂ ಅಪುಮಾನಿತಿ ರಾಜನಿ ॥ 5 ॥**

**ಸೋಽಭಿಶಸ್ತಃ ತದಾ ರಾಜನ್! ನಗರೇ ತ್ವಜಿತಂಜಯೇ ।**
**ಅಲಿಪ್ಸಂಸ್ತು ಸ್ತ್ರಿಯಂ ಚೈವ ತಪಸ್ತೇಪೇ ಸುದಾರುಣಮ್ ॥ 6 ॥**

ಕಾಲಯವನನ ಚರಿತ್ರೆ ವಿಚಿತ್ರ ಹಾಗೂ ಜಾತಿಸಾಂಕರ್ಯದ ಸಂಕೇತವಾಗಿದೆ. ವೃಷ್ಣಿ ಹಾಗೂ ಅಂಧಕರಿಗೆಲ್ಲ ಗಾರ್ಗ್ಯರು ಗುರುವಾಗಿದ್ದರು. ಗಾರ್ಗ್ಯನು ಮಹಾತಪಸ್ವಿಯಾಗಿದ್ದು ವಿವಾಹವಾದ ಮೇಲೆಯೂ ಬ್ರಹ್ಮಚಾರಿ ವ್ರತದಲ್ಲಿ ಮುಂದುವರೆದ. ವಿವಾಹ ನಂತರವೂ ಊರ್ಧ್ವರೇತಸ್ಕನಾಗಿರುವ ತನ್ನ ಅಕ್ಕನ ಗಂಡನನ್ನು ನೋಡಿ, ಶಾಲ' ಎಂಬ ಯಾದವನು, ಗಾರ್ಗ್ಯನು ನಪುಂಸಕನೆಂದು ಯಾದವರ ಮುಂದೆಲ್ಲ ಅಪಪ್ರಚಾರ ನಡೆಸಿದ. ಒಂದು ಬಾರಿ ಯಾದವರ ಮುಂದೆಯೇ ಗಾರ್ಗ್ಯನನ್ನು ಅಪಹಾಸ ಮಾಡಿದಾಗ ಉಳಿದ ಯಾದವರು ನಗಾಡಿದರು. ಗಾರ್ಗ್ಯನಿಗೆ ಮಹಾಕ್ರೋಧವುಂಟಾಯಿತು. ಅವನು 'ಅಜಿತಂಜಯ' ಪರ್ವತಕ್ಕೆ ಹೋಗಿ ಒಂದು ವರ್ಷ ಕಠಿಣ ತಪಸ್ಸುನ್ನಾಚರಿಸಿದ, ಒಂದು ವರ್ಷ ಮಾಡಿದ್ದರೂ ಅತ್ಯಂತ ಕಠಿಣವಾದ್ದರಿಂದ ಹನ್ನೆರಡು ವರ್ಷದಂತಾಗಿತ್ತು. ಉಕ್ಕಿನ ಪುಡಿಯನ್ನು ಮುಕ್ಕಿ ತಪಸ್ಸು ಮಾಡಿದರು. ಶಿವನು ಪ್ರಸನ್ನನಾಗಿ ವರಬೇಡು ಎನಲು ಭೂಮಿಯಲ್ಲಿ ಕೃಷ್ಣನಿಲ್ಲದಂತೆ ಮಾಡುವ ವೃಷ್ಣಿ ಅಂಧಕಾದಿ ಯಾದವರನ್ನು ಸಂಹಾರ ಸಮರ್ಥನಾದ ಒಬ್ಬ ತೇಜಸ್ವಿ ಪುತ್ರನನ್ನು ಕರುಣಿಸು ಎಂದು ಬೇಡಿದನು. ಕೃಷ್ಣನನ್ನು ಆಶ್ರಯಿಸಿಯೇ ಯಾದವರೆಲ್ಲ ನನ್ನನ್ನು ಅಪಹಸಿಸಿದ್ದಾರೆ ಎಂದು. ವಸ್ತುತಃ ಗರ್ಗಮುನಿ ವಿಷ್ಣುಭಕ್ತನಾದರೂ ಕ್ರೂರರಾದ ಅಸುರಾವೇಶದಿಂದಾಗಿ ಕೃಷ್ಣನಿಗೆ ವಿರೋಧ ಮಾಡಿದ್ದನು.

## ಯವನಾಧಿಪತಿ ಸಹಕಾರ

**ತತಃ ಶುಶ್ರಾವ ತಂ ರಾಜಾ ಯವನಾಧಿಪತಿಃ ವರಮ್ ।**
**ಪುತ್ರ ಪ್ರಸವಜಂ ದೈವಾದಪುತ್ರಃ ಪುತ್ರಕಾಮಿತಾ ॥ 7 ॥**

**ಸ ನೃಪಃ ತಮುಪಾನಾಯ್ಯ ಸಾಂತಯಿತ್ವಾ ದ್ವಿಜೋತ್ತಮಮ್ ।**
**ತಂ ಘೋಷಮಧ್ಯೇ ಯವನೋ ಗೋಪಸ್ತ್ರೀಷು ಸಮಾಸೃಜತ್ ॥ 8 ॥**

**ಗೋಪಾಲೀ ತ್ವಪ್ಸರಾಸ್ತತ್ರ ಗೋಪಸ್ತ್ರೀ ವೇಷಧಾರಿಣೀ ।**
**ಧಾರಯಾಮಾಸ ಗಾರ್ಗ್ಯಸ್ಯ ಗರ್ಭಂ ದುರ್ಧರಮಚ್ಯುತಮ್ ॥ 9 ॥**

ಈ ವಿಷಯ ಯವನಾಧಿಪತಿಗೆ ತಿಳಿಯಿತು. ಸಂತಾನವಿಲ್ಲದ ಯವನರಾಜನು ಗರ್ಗಾಚಾರ್ಯನನ್ನು ಮಧುರ ಮಾತುಗಳಿಂದ ಸಂತೈಸಿ ಮನವೊಲಿಸಿ ತನ್ನಲ್ಲಿ ಇರಲು ಒಪ್ಪಿಸಿದನು.

ಅವನ ನಗರದಲ್ಲಿ ಗೋವಳಗರ ವಸತಿಯಲ್ಲಿ ಗೋಪಾಲೀಯೆಂಬ ಅಪ್ಸರೆಯು ಗೋಪಿಕಾವೇಷಧರಿಸಿ ಅಲ್ಲಿಯೇ ಇರುತ್ತಿದ್ದಳು. ಅವಳ ತಾರುಣ್ಯ-ಲಾವಣ್ಯಗಳಿಗೆ ಮನಸೋತು ಅವಳೊಂದಿಗೆ ರಮಿಸಿದನು. ಅವನ ಗರ್ಭವನ್ನು ಗೋಪಾಲಿಯು ಧರಿಸಿದಳು. ಇವಳಿಂದ ಹುಟ್ಟಿದವನೇ 'ಕಾಲಯವನ'.

## ಕಾಲಯವನನ ಯುದ್ಧಾಸಕ್ತಿ

**ಮಾನುಷ್ಯಾಂ ಗಾರ್ಗ್ಯಭಾರ್ಯಾಯಾಂ ನಿಯೋಗಾತ್ ಶೂಲಪಾಣಿನಃ ।**
**ಸ ಕಾಲಯವನೋ ನಾಮ ಜಜ್ಞೇ ಶೂರೋ ಮಹಾಬಲಃ ॥ 10 ॥**

**ಅಪುತ್ರಸ್ಯಾಥ ರಾಜ್ಞಸ್ತು ವವೃಧೇಽಂತಃ ಪುರೇ ಶಿಶುಃ ।**
**ತಸ್ಮಿನ್ನುಪರತೇ ರಾಜನ್ ಸ ಕಾಲಯವನೋ ನೃಪಃ ॥ 11 ॥**

**ಯುದ್ಧಾಭಿಕಾಮೋ ನೃಪತಿಃ ಪರ್ಯಪೃಚ್ಛದ್ ದ್ವಿಜೋತ್ತಮಾನ್ ।**
**ವೃಷ್ಣ್ಯಂಧಕ ಕುಲಂ ತಸ್ಯ ನಾರದೇನ ನಿವೇದಿತಮ್ ॥ 12 ॥**

ಮನುಷ್ಯ ವೇಷಧರಿಸಿ ಬಂದ ಗೋಪಾಲಿ ಅಪ್ಸರೆಯು ಗಾರ್ಗ್ಯನ ನಿಯೋಗಪದ್ಧತಿಯಂತೆ ಹುಟ್ಟಿದ ಕಾಲಯವನನನ್ನು ರಾಜನು ಬೆಳೆಸಿ ದೊಡ್ಡವನನ್ನಾಗಿ ಮಾಡಿದ. ಯವನ ರಾಜ ಮರಣಾನಂತರ ಅವನಿಗೆ ಸ್ವಂತ ಮಕ್ಕಳಿಲ್ಲವಾದ್ದರಿಂದ ಸಾಕುಮಗನಾದ ಕಾಲಯವನನಿಗೆ ರಾಜ್ಯದಲ್ಲಿ ಕೂಡಿಸಿ ಕಾಡಿಗೆ ಹೋದ. ಹೀಗೆ ಬ್ರಹ್ಮರ್ಷಿ ಮಗನಾದರೂ ಒಬ್ಬ ಗೊಲ್ಲತಿಯಲ್ಲಿ ಜನಿಸಿ, ಮ್ಲೇಚ್ಛನಲ್ಲಿ ಬೆಳೆದು ಜಾತಿಸಾಂಕರ್ಯದ ಸಂಕೇತವಾದನು.

ಅವನು ಪ್ರಬುದ್ಧನಾದ ಮೇಲೆ ಯಾವಾಗಲೂ ಯುದ್ಧಾಸಕ್ತನಾಗಿರುತ್ತಿದ್ದನು. ಬ್ರಾಹ್ಮಣರನ್ನು ಕರೆಸಿ ಪ್ರಶ್ನಿಸುತ್ತಿದ್ದನು. ಒಮ್ಮೆ ನಾರದರನ್ನು ಭೇಟಿ ಮಾಡಿ,

ನನ್ನೊಂದಿಗೆ ಯುದ್ಧ ಮಾಡಲು ಸಾಮರ್ಥ್ಯವಿರುವ ವೀರರು ಈ ಭೂಮಿಯಲ್ಲಿ ಯಾರಿದ್ದಾರೆ? ಎಂದ. ಅದಕ್ಕೆ ನಾರದರು – ವೃಷ್ಣಿ – ಅಂಧಕರ ವಂಶದಲ್ಲಿ ನಿನ್ನನ್ನು ಎದುರಿಸಿ ಯುದ್ಧ ಮಾಡುವ ವೀರರಿದ್ದಾರೆ' ಎಂದರು.

## ನಾರದರಿಂದ ಕೃಷ್ಣನಿಗೆ ಯವನನ ಜನ್ಮರಹಸ್ಯ

**ಜ್ಞಾತ್ವಾ ತು ವರದಾನಂ ತತ್ ನಾರದಾತ್ ಮಧುಸೂದನಃ ।**
**ಉಪಪ್ರೈಕ್ಷತ ತೇಜಸ್ವೀ ವರ್ಧಂತಂ ಯವನೇಷು ತಮ್ ॥ 13 ॥**

**ಸಮೃದ್ಧೋ ಹಿ ಯದಾ ರಾಜಾ ಯವನಾನಾಂ ಮಹಾಬಲಃ ।**
**ತತ ಏವಂ ನೃಪಾಃ ಮ್ಲೇಚ್ಛಾಃ ಸಂಶ್ರಿತ್ಯಾನುಯಯುಃ ತದಾ ॥ 14 ॥**

**ಶಕಾಃ ತುಷಾರಾಃ ದರದಾಃ ಪಾರದಾಃ ಶೃಂಗಲಾಃ ಖಸಾಃ ।**
**ಸ ತೈಃ ಪರಿವೃತೋ ರಾಜಾ ದಸ್ಯುಭಿಃ ಶಲಭೈರಿವ ।**
**ಪೃಥಿವೀಂ ಕಂಪಯಾಮಾಸ ಸೈನ್ಯೇನ ಮಹತಾ ವೃತಃ ॥ 15 ॥**

ವೃಷ್ಣ್ಯಂಧಕರು ನಿನಗೆ ಸರಿಯಾದ ಯುದ್ಧ ನೀಡುವವರೆಂದು ಹೇಳಿ ನಾರದರು ಶ್ರೀಕೃಷ್ಣನನ್ನು ಭೇಟಿ ಮಾಡಿ, ಕಾಲಯವನು ವೃಷ್ಣ್ಯಂಧಕರನ್ನು ಜಯಿಸುವ ಸಾಮರ್ಥ್ಯವನ್ನು ಶಿವ ವರದಿಂದ ಪಡೆದಿರುವನು. ಎಂಬ ವಾರ್ತೆಯನ್ನು ಅವನಿಗೆ ತಿಳಿಸಿದರು. ಆದರೂ ಕೃಷ್ಣನು ಕಾಲಯವನನನ್ನು ಕಾಲಬರಲಿ ಎಂದು ಉಪೇಕ್ಷಿಸಿದ್ದನು. ಕಾಲಯವನನು ಸೈನ್ಯ-ಧನ-ಧಾನ್ಯಾದಿಗಳಲ್ಲಿ ಮಹಾಸಮೃದ್ಧಿಯನ್ನು ಪಡೆದ ಮೇಲೆ ಮ್ಲೇಚ್ಛರಾಜರೆಲ್ಲರೂ ಇವನನ್ನೆ ಆಶ್ರಯಿಸಿದರು. ಶುಕರು, ತುಷಾರರು, ದರದರು, ಪಾರದರು, ಶೃಂಗಲರು, ಖಸರು, ಪಹ್ಲವರು, ಹಿಮಾಲಯದ ನೂರಾರು ಮ್ಲೇಚ್ಛರಾಜರು ಇವನೊಂದಿಗೆ ಮೈತ್ರೀ ಹೊಂದಿದರು. ಮಿಡತೆ ಹುಳುಗಳಂತಿರುವ ಇವರೊಂದಿಗೆ ಮಥುರೆಯನ್ನಾಕ್ರಮಿಸಿದನು. ಅವನ ಬಳಿ ಲಕ್ಷ-ಕೋಟಿ ಸಂಖ್ಯೆಯಲ್ಲಿ (ಮೂರು ಕೋಟಿ ಅಕ್ಷೌಹಿಣೀ) ಅಶ್ವ ಗಜ ಪದಾತಿಗಳ ಸೈನ್ಯವಿದ್ದಿತು. ಇಂಥಹ ಮಹಾಸೈನ್ಯದಿಂದ ಮಥುರೆಯನ್ನಾಕ್ರಮಿಸಿದ.

## ಅಶ್ವಶಕೃನ್ನದೀ

**ಮೂತ್ರೇಣ ಶಕೃತಾ ಚೈವ ಸೈನ್ಯೇನ ಸಸೃಜೇ ನದೀಮ್ ।**
**ಅಶ್ವೋಷ್ಟ್ರಕೃತಾಂ ರಾಶೇಃ ನಿಃಸೃತೇತಿ ಜನಾಧಿಪ ॥ 16 ॥**

**ತತೋ ಅಶ್ವಶಕೃದಿತ್ಯೇವಂ ನಾಮ ನದ್ಯಾ ಬಭೂವ ಹ ।**

ಕಾಲಯವನನ ಕುದುರೆ ಆನೆ ಒಂಟೆಗಳ ಮಲ ಮೂತ್ರಗಳಿಂದ ಬಹಳ ವೇಗವಾಗಿ ಹರಿಯುವ ನದಿಯೊಂದು ಹರಿಯಿತು. ಆ ನದಿಗೆ ಅಶ್ವಶಕೃತ್' ಎಂದೇ ಹೆಸರಾಯಿತು.

ಪುನಃ ಪುನಃ ಆ ನದಿಗಳು ತಲೆಯೆತ್ತುತ್ತಲಿದ್ದವು. ಇದನ್ನು ನೋಡಿ ವಾಯುದೇವನು ದೇಶನಾಶ ತಡೆಯಲು ಆ ಮೂತ್ರಗಳನ್ನು ಒಣಗಿಸಿಬಿಟ್ಟರು. ಸೈನ್ಯದ ಪಾದಧೂಳಿನಿಂದ ಸೂರ್ಯನೆ ಆಚ್ಛಾದಿತನಾಗುತ್ತಿದ್ದನು.

**ವಸುದೇವಾದಿಗಳ ಆಲೋಚನೆ**

ಇಂತಹ ದೊಡ್ಡಸೈನ್ಯವು ಮಥುರೆಯನ್ನಾಕ್ರಮಿಸಲು ಉದ್ಯುಕ್ತವಾದ ವಿಷಯ ವಸುದೇವಾದಿಗಳಿಗೆ ತಿಳಿಯಿತು. ವಸುದೇವನು ಎಲ್ಲರನ್ನೂ ಕರೆದು ಮಂತ್ರಾಲೋಚನೆ ಮಾಡಲು ಹೀಗೆಂದನು.

**ಇದಂ ಸಮುತ್ಥಿತಂ ಘೋರಂ ವೃಷ್ಣ್ಯಂಧಕ ಭಯಂ ಮಹತ್ ।**
**ಅವಧ್ಯಶ್ಚಾಪಿ ನಃ ಶತ್ರುಃ ವರದಾನಾತ್ ಪಿನಾಕಿನಃ ॥ 17 ॥**
**ಸಾಮಾದಯೋಽಭ್ಯುಪಾಯಾಶ್ಚ ವಿಹಿತಾಃ ತಸ್ಯ ಸರ್ವಶಃ ।**
**ಮತ್ತೋ ಮದಬಲಾಭ್ಯಾಂ ತು ಯುದ್ಧಮೇವ ಚಿಕೀರ್ಷತಿ ॥ 18 ॥**
**ಏತಾವಾನಿಹ ವಾಸಶ್ಚ ಕಥಿತೋ ನಾರದೇನ ಮೇ ।**
**ಜರಾಸಂಧಶ್ಚ ನೋ ರಾಜಾ ನಿತ್ಯಮೇವ ನ ಮೃಷ್ಯತೇ ॥ 19 ॥**
**ಕೇಚಿತ್ ಕಂಸವಧಾಚ್ಚಾಪಿ ವಿರಕ್ತಾಃ ತದ್ಗತಾಃ ನೃಪಾಃ ।**
**ಸಮಾಶ್ರಿತ್ಯ ಜರಾಸಂಧಂ ಅಸ್ಮಾನ್ ಇಚ್ಛಂತಿ ಬಾಧಿತುಮ್ ॥ 20 ॥**

ಬಂಧುಗಳೇ! ಯಾದವರಿಗೆ ಸಂಪ್ರತಿ ಮಹತ್ತಾದ ಆಪತ್ತು ಬಂದಿದೆ. ಶಿವನ ವರದಿಂದ ದುರ್ದಮ್ಯನಾದ ಕಾಲಯವನನು ಮಹಾಸೈನ್ಯದೊಂದಿಗೆ ಮಥುರೆಯನ್ನಾಕ್ರಮಿಸಲಿದ್ದಾನೆ. ಅವನನ್ನು ನಾವು ಕೊಲ್ಲಲಾರೆವು. ಸಾಮಪ್ರಯೋಗವನ್ನು ಮಾಡಿದೆವು. ಸಫಲರಾಗಲಿಲ್ಲ. ನಾರದರು ಮಥುರೆಯಲ್ಲಿನ ನಮ್ಮ ವಾಸವು ಇಷ್ಟು ಕಾಲದವರೆಗೆ ಮಾತ್ರ ಎಂದು ಅವಧಿಯನ್ನು ಸೂಚಿಸಿದ್ದಾರೆ. ಜರಾಸಂಧನೂ ನಮ್ಮ ಮೇಲೆ ಅಸಹನೆಯಿಂದಲೆ ಇದ್ದಾನೆ. ಕಂಸನನ್ನು ಕೃಷ್ಣ ಕೊಂದು ಹಾಕಿದನೆಂಬ ಕೋಪದಿಂದಾಗಿ ಕೆಲವು

ರಾಜರು ನಮ್ಮನ್ನು ಪ್ರೀತಿಸುತ್ತಿಲ್ಲ. ಅವರೆಲ್ಲ ಜರಾಸಂಧನ ಪಕ್ಷ ಸೇರಿದ್ದಾರೆ. ಜರಾಸಂಧನ ಸೈನ್ಯದಿಂದ ನಮ್ಮ ಕಡೆ ಅನೇಕರು ಪ್ರಾಣ ಬಿಟ್ಟಿರುವರು.

## ಕಾಲಯವನನಿಗೆ ಕೃಷ್ಣ ಸಂದೇಶ

**ವರ್ಧಿತುಂ ನೈವ ಶಕ್ಷ್ಯಾಮಿಃ ಪುರೇಽಸ್ಮಿನ್ ಇತಿ ಕೇಶವಃ ।**
**ಅಪಯಾನೇ ಮತಿಂ ಕೃತ್ವಾ ದೂತಂ ತಸ್ಮೈ ಸಸರ್ಜ ಹ ॥ 21 ॥**
**ತತಃ ಕುಂಭೇ ಮಹಾಸರ್ಪಂ ಭಿನ್ನಾಂಜನಚಯೋಪಮಂ ।**
**ಘೋರಮಾಶೀವಿಷಂ ಕೃಷ್ಣಂ ಕೃಷ್ಣಃ ಪ್ರಾಕ್ಷೇಪಯತ್ ತದಾ ॥ 22 ॥**
**ತತಸ್ತಂ ಮುದ್ರಯಿತ್ವಾ ತು ಸ್ವೇನ ದೂತೇನ ಹಾರಯತ್ ।**
**ಸ ದೂತಃ ಕಾಲಯವನೇ ದರ್ಶಯಾಮಾಸ ತಂ ಘಟಮ್ ।**
**ಕಾಲಸರ್ಪೋಪಮಃ ಕೃಷ್ಣಃ ಇತ್ಯುಕ್ತ್ವಾ ಭರತರ್ಷಭ ॥ 23 ॥**

ಕಾಲಯವನನ ಮುಂದೆ ನಾವು ಅಭಿವೃದ್ಧಿಗೆ ಬರುವುದು ಅಶಕ್ಯವೆಂದರಿತ ಕೃಷ್ಣನು ಆ ನಗರವನ್ನೇ ತ್ಯಜಿಸಲು ನಿಶ್ಚಯ ಮಾಡಿದನು. ಹೊರಡುವ ಮೊದಲು ಕಾಲಯವನನ ಸಮೀಪಕ್ಕೆ ಒಬ್ಬ ದೂತನನ್ನು ಕಳುಹಿಸಿದನು. ಕಾಡಿಗೆಯ ಮೊತ್ತದಂತಿರುವ ಭಯಂಕರವಾದ ಸರ್ಪವನ್ನಿಟ್ಟು – ನಾನು ನಿರಾಯುಧನಾಗಿದ್ದರೂ ವೈರಿಗಳು ಸಾಯುಧರಾಗಿದ್ದರೂ ಶತ್ರು ಸೈನ್ಯವನ್ನು ಸಂಹರಿಸಲು ಸಮರ್ಥವೆಂದು ಸೂಚಿಸುತ್ತಾ ಆ ಘಟದ ಬಾಯಿಗೆ ಬಟ್ಟೆಯಿಂದ ಮುಚ್ಚಿ ಕಳುಹಿಸಿಕೊಟ್ಟ.

ಆ ದೂತನಾದರೂ ಕಾಲಯವನನನಿಗೆ ಹೀಗೆ ಹೇಳಿದನು. ಮಹಾರಾಜ! ಕೃಷ್ಣನು ಮಡಿಕೆಯಲ್ಲಿ **ಕಾಳಸರ್ಪ**[1]ದಂತೆ ಶತ್ರು ಭಯಂಕರನು ಕಾಳಂಗವು

---

1. ಕಾಳಸರ್ಪ :
ಸ ಕೃಷ್ಣಪನ್ನಗಂ ಘಟೇ ನಿಧಾಯ ಕೇಶವೋಽರ್ಪಯತ್ ।
ನಿರಾಯುಧೋಽಪ್ಯಹಂ ಕ್ಷಮೋ ನಿಹಂತುಮಪ್ರಿಯಾನಿತಿ ॥
ಘಟಂ ಪಿಪೀಲಿಕಾಗಣೈಃ ಪ್ರಪೂರ್ಯ ಯಾವನೋಽಸ್ಯ ಚ ।
ಬಹುತ್ವತೋ ವಿಜೇಷ್ಯ ಇತ್ಯಹಿಂ ಮೃತಂ ವ್ಯದರ್ಶಯತ್ ॥ *–ತಾ.ನಿ.17/121–122*
ಶ್ರೀಕೃಷ್ಣನು ಸರ್ಪವನ್ನು ಕಳಿಹಿಸಿದಾಗ ಅದನ್ನು ಕೊಂದು ಹಾಕುತ್ತಾನೆಂದು ಅವನಿಗೆ ತಿಳಿದೇ ಇತ್ತು. ಹಾಗಾಗಲೆಂದೇ ಈ ರೀತಿ ನೀತಿಯನ್ನನುಸರಿಸಿ "ಗಾರ್ಗ್ಯರಿಗೆ ಕೃಷ್ಣನನ್ನು ಕೊಲ್ಲುವ ಮಗ ಹುಟ್ಟುವನು' ಎಂಬ ಶಿವನ ವರಕ್ಕೆ ಮನ್ನಣೇ ನೀಡಲು

ಒಂದೇ ಆದರೂ ಅದು ಬಹುಮಂದಿಯನ್ನೆದುರಿಸುವಂತೆ ನಾನೂ ನಿನ್ನ ಎದುರಿಸಬಲ್ಲೆ ಆದ್ದರಿಂದ ಯುದ್ಧಕ್ಕೆ ಹೊರಡುವ ಮೊದಲು ಈ ಬಗ್ಗೆ ಯೋಚಿಸು ಎಂದು

## ಕೃಷ್ಣನಿಗೆ ಕಾಲಯವನನ ಸಂದೇಶ

**ತತ್ ಕಾಲಯವನೋ ಬುಧ್ವಾ ತ್ರಾಸನಂ ಯಾದವೈಃ ಕೃತಮ್ ।**
**ಪಿಪೀಲಿಕಾನಾಂ ಚಂಡಾನಾಂ ಪೂರಯಾಮಾಸ ತಂ ಘಟಮ್ ॥ 24 ॥**

**ಸ ಸರ್ಪೋ ಬಹುಭಿಃ ತೀಕ್ಷ್ಣೈಃ ಸರ್ವತಃ ತೈಃ ಪಿಪೀಲಿಕೈಃ ।**
**ಭಕ್ಷ್ಯಮಾಣಃ ಕಿಲಾಂಗೇಷು ಭಸ್ಮೀಭೂತೋಽಭವತ್ ತದಾ ॥ 25 ॥**

**ತಂ ಮುದ್ರಯಿತ್ವಾ ತು ಘಟಂ ತಥೈವ ಯವನಾಧಿಪಃ ।**
**ಪ್ರೇಷಯಾಮಾಸ ಕೃಷ್ಣಾಯ ಬಾಹುಲ್ಯಮುಪವರ್ಣಯನ್ ॥ 26 ॥**

ಇಲ್ಲಿಗೆ ಶ್ರೀಕೃಷ್ಣ ಮೊದಲಾದ ಯಾದವರು ನನ್ನನ್ನು ಭಯಪಡಿಸಲು ಯತ್ನಿಸುತ್ತಿದ್ದಾರೆಂದು ತಿಳಿದು, ಯಾದವರಿಗೂ ತನ್ನ ಸಾಮರ್ಥ್ಯದ ಅರಿವಾಗಲಿ ಎಂದು ಯೋಚಿಸಿ, ಕಾಲಯವನನು ಕೃಷ್ಣಸರ್ಪವಿದ್ದ ಮಡಿಕೆಯಲ್ಲಿ ಸಾವಿರಾರು ಕೆಂಪಿರುವೆಗಳನ್ನು ತುಂಬಿಸಿ ಮುಚ್ಚಳ ಮುಚ್ಚಿಬಿಟ್ಟನು. ಇರುವೆಗಳೆಲ್ಲ ಸೇರಿ ಕಾಳಸರ್ಪವನ್ನು ಕಚ್ಚಿ ಸರ್ಪದ ಪ್ರಾಣವನ್ನೆ ಹೀರಿದವು. ಯವನನು ಆ ದೂತನಿಗೆ ತನ್ನ ಸಾಮರ್ಥ್ಯವನ್ನು ಹೇಳುತ್ತಾ ನೀನು ಎಷ್ಟೇ ಭಯಂಕರ ಸರ್ಪವಾಗಿದ್ದರೂ ನನ್ನ ಸೈನ್ಯಸಾಗರದ ಮುಂದೆ ಪ್ರಾಣಬಿಡುವುದು ಖಚಿತ ಎಂದು ತಿಳಿಸಿದ.

**ವಾಸುದೇವಸ್ತು ತಂ ದೃಷ್ಟ್ವಾ ಯೋಗಂ ವಿಹತಮಾತ್ಮನಃ ।**
**ಉತ್ಸೃಜ್ಯ ಮಥುರಾಮಾಶು ದ್ವಾರಕಾಮಭಿಜಗ್ಮಿವಾನ್ ॥ 27 ॥**

**ವೈರಸ್ಯಾಂತಂ ವಿಧಿತ್ಸುಸ್ತು ವಾಸುದೇವೋ ಮಹಾಯಶಾಃ ।**
**ನಿವೇಶ್ಯ ದ್ವಾರಕಾಂ ರಾಜನ್ ವೃಷ್ಣೀನಾಶ್ವಾಸ್ಯ ಚೈವ ಹ ॥ 28 ॥**

---

ಹೀಗೆ ಮಾಡಿದ. ಇಲ್ಲಿ ಕೃಷ್ಣನೆಂದರೆ ಕೃಷ್ಣಸರ್ಪವು ಅದನ್ನು ಕಾಲಯವನು ಕೊಂದಿದ್ದರಿಂದ ಶಿವನ ವರ ಸತ್ಯವಾಯಿತು. ಹೀಗಿಲ್ಲವಾದರೆ ಯಾರನ್ನು ಕೊಲ್ಲುವಾಗಲೂ ಇಂತಹ ನೀತಿ ತೋರಿಸದೆ ಇದ್ದ ಶ್ರೀಹರಿಯು ಕಾಲಯವನನ ಕೊಲ್ಲುವಾಗ ಏಕೆ ನೀತಿ ತೋರಿಸುತ್ತಿದ್ದ?

**ಪದಾತಿಃ ಪುರುಷವ್ಯಾಘ್ರೋ ಬಾಹುಪ್ರಹರಣಸ್ತದಾ ।**
**ಆಜಗಾಮ ಮಹಾವೀರ್ಯೋ ಮಥುರಾಂ ಮಧುಸೂದನಃ ॥ 29 ॥**

ಹೀಗೆ ಉಪಾಯ ಮಾಡಿ ತನ್ನ ಉದ್ದೇಶವನ್ನು ಅವನಿಗೆ ತಿಳಿಸಿ, ಮಥುರೆಯನ್ನು ತ್ಯಜಿಸಿ ದ್ವಾರಕೆಗೆ ಹೊರಟು ಹೋದನು. ಶ್ರೀಕೃಷ್ಣನಿಗೆ ಇನ್ನು ಇವನು ತಮ್ಮ ಮೇಲೆ ಮಾಡುತ್ತಿರುವ ವೈರವನ್ನು ಅಂತ್ಯಗಾಣಿಸಬೇಕೆಂದು ಯೋಚಿಸಿದನು. ದ್ವಾರಾವತಿಯಲ್ಲಿ ಯಾದವರೆಲ್ಲರನ್ನೂ ನೆಲೆಗೊಳಿಸಿ ಪುನಃ ತಾನು ಮಾತ್ರ ಪದಾತಿಯಾಗಿ, ಯಾವುದೇ ಆಯುಧವನ್ನೂ ಹಿಡಿಯದೆ ಮಥುರೆಗೆ ಹಿಂತಿರುಗಿದನು ಕಾಲ್ನಡಿಗೆಯಲ್ಲಿಯೇ.

### ಕಾಲಯವನನೊಂದಿಗೆ ಮಹಾಯುದ್ಧ

**ತಂ ದೃಷ್ಟ್ವಾ ನಿರ್ಯಯೌ ಹೃಷ್ಟಃ ಸ ಕಾಲಯವನೋ ರುಷಾ ।**
**ಪ್ರೇಕ್ಷಾಪೂರ್ವಂ ಚ ಕೃಷ್ಣೋಽಪಿ ನಿಶ್ಚಕರ್ಷ ಮಹಾಬಲಃ ॥ 30 ॥**
**ಅಥಾನ್ವಗಚ್ಛತ್ ಗೋವಿಂದಂ ಜಿಘೃಕ್ಷುಃ ಯವನೇಶ್ವರಃ ।**
**ನ ಚೈನಮಶಕದ್ ರಾಜಾ ಗ್ರಹೀತುಂ ಯೋಗಧರ್ಮಿಣಮ್ ॥ 31 ॥**

ಪದಾತಿಯಾಗಿ ಒಬ್ಬನೇ ನಿರಾಯುಧನಾಗಿ ಬಂದಿದ್ದ ಶ್ರೀಕೃಷ್ಣನನ್ನು ನೋಡಿ ಕಾಲಯವನನಿಗೆ ಸಂತೋಷವಾಯಿತು. ಮಹಾವೀರನಾದ ನನ್ನನ್ನು ಒಬ್ಬನೇ ಎದುರಿಸಲು ಬಂದಿರುವನಲ್ಲ ಎಂದು ಮಹಾಕೋಪವೂ ಬಂತು. ಅವನನ್ನು ನೋಡಿದೊಡನೆ ಹಿಡಿಯಲುದ್ಯುಕ್ತನಾದನು. ಕಾಲಯವನ ಹಾಗೂ ಏಕಾಂಗಿ ಕೃಷ್ಣನಿಗೆ ಮಹಾಯುದ್ಧವೇರ್ಪಟ್ಟಿತು. ಕೃಷ್ಣ ನಿರಾಯುಧನಾಗಿದ್ದರೂ ತನ್ನ ತಲಪ್ರಹಾರಗಳಿಂದಲೇ ಕಾಲಯವನನನ್ನೂ ಗೆದ್ದು ಅವನ ಸೈನಿಕರನ್ನು ಕೊಂದುಹಾಕಿ, ಅವನ ಅಪಾರ ಸಂಪತ್ತನ್ನು ದ್ವಾರಕೆಗೆ ಕಳುಹಿಸಿದ. ಅನೇಕ ಅಸ್ತ್ರ-ಶಸ್ತ್ರಗಳ ಪ್ರಯೋಗ ಮಾಡುತ್ತಿದ್ದ ಯವನನನ್ನು ಕೈಯಿಂದ ಎಳೆದು ರಥದಿಂದ ಕೆಳಗೆ ಬೀಳಿಸಿದ. ಬಾಹುವಿನಿಂದಲೇ ವಾಹನ, ಆಯುಧ ರಹಿತನನ್ನಾಗಿ ಮಾಡಿ ಮೂರ್ಛೆಗೊಳಿಸಿದ ಕೊಲ್ಲಲಿಲ್ಲ. ಶ್ರೀಕೃಷ್ಣನು ದೇವತೆಗಳಿಗೆ ನೀಡಿದ ವರವನ್ನು ಸ್ಮರಿಸಿಕೊಂಡ.

### ಮುಚುಕುಂದ ಪ್ರಸಾದಕ ಕೃಷ್ಣಃ

**ಮಾಂಧಾತಸ್ತು ಸುತೋ ರಾಜಾ ಮುಚುಕುಂದೋ ಮಹಾಯಶಾಃ ।**
**ಪುರಾ ದೇವಾಸುರೇ ಯುದ್ಧೇ ಕೃತಕರ್ಮಾ ಮಹಾಬಲಃ ॥ 32 ॥**

**ವರೇಣ ಛಂದಿತೋ ದೇವೈಃ ನಿದ್ರಾಮೇವ ಗೃಹೀತವಾನ್ ।**
**ಶ್ರಾಂತಸ್ಯ ತಸ್ಯ ವಾಗೇವಂ ತದಾ ಪ್ರಾದುರಭೂತ್ ಕಿಲ ॥ 33 ॥**
**ಪ್ರಸುಪ್ತಂ ಬೋಧಯೇದ್ ಯೋ ಮಾಂ ದಹೇಯಮಹಂ ಸುರಾಃ ।**
**ಚಕ್ಷುಷಾ ಕ್ರೋಧದೀಪ್ತೇನ ಏವಮಾಹ ಪುನಃ ಪುನಃ ॥ 34 ॥**

ಮುಚುಕುಂದ ಮಹಾರಾಜನು ಯೌವನಾಶ್ವನ ಮಗನಾದ ಮಾಂಧಾತರಾಜನ ಮಗನು. ಅವನು ಹಿಂದೆ ದೇವಾಸುರ ಸಂಗ್ರಾಮದಲ್ಲಿ ದೇವತೆಗಳ ಪಕ್ಷ ವಹಿಸಿ ಹೋರಾಡಿದ್ದನು. ಇದರಿಂದಾಗಿ ದೇವತೆಗಳಿಗೆ ಗೆಲುವಾಗಿತ್ತು. ಇದಕ್ಕಾಗಿ ದೇವತೆಗಳು ಅವನಿಗೆ ವರ ಬೇಡಲು ಹೇಳಿದರು. ರಾಜನಾದರೂ ಬಹಳ ದಣಿದಿದ್ದನಾದ್ದರಿಂದ ನನಗೆ ನಿರಂತರ ನಿದ್ರೆಯನ್ನು ವರವಾಗಿ ನೀಡಿರಿ ಎಂದ.

ಯಾರು ನನ್ನ ನಿದ್ರೆಗೆ ಭಂಗವೊಡ್ಡುವರೋ ಅವರು ನನ್ನ ನೇತ್ರಾಗ್ನಿಯಿಂದ ಉರಿದು ಬೂದಿಯಾಗಲಿ ಎಂದು. ದೇವತೆಗಳು ಹಾಗೆ ಆಗಲಿ ಎಂದರು. ಆದರೂ ಅವನು ಮಾಡಿದ ಸೇವೆಗೆ ನಿದ್ರೆ ಫಲವೆ? ತಕ್ಕಫಲ ನೀನೇ ನೀಡು ಎಂದು ಶ್ರೀಹರಿಯನ್ನು ಪ್ರಾರ್ಥಿಸಿದರು. ಇದನ್ನು ಕೃಷ್ಣ ನೆನೆದು ಮುಚುಕುಂದನಿಂದ ಕಾಲಯವನನನ್ನು ಕೊಲ್ಲಿಸಿ ವಿಶೇಷ ಪುಣ್ಯಫಲವನ್ನು ನೀಡುವೆ ಎಂದು ಆಲೋಚಿಸಿದನು.

**ಸ ಪರ್ವತಗುಹಾಂ ಕಾಂಚಿತ್ ಪ್ರವಿಶ್ಯ ಶ್ರಮಕರ್ಶಿತಃ ।**
**ಸುಷ್ವಾಪ ಕಾಲಮೇತಂ ವೈ ಯಾವತ್ ಕೃಷ್ಣಸ್ಯ ದರ್ಶನಮ್ ॥ 35 ॥**
**ತತ್ಸರ್ವಂ ವಾಸುದೇವಾಯ ನಾರದೇನ ನಿವೇದಿತಮ್ ।**
**ವರದಾನಂ ಚ ದೇವೇಭ್ಯಃ ತೇಜಸ್ತಸ್ಯ ಚ ಭೂಪತೇಃ ॥ 36 ॥**

ಮುಚುಕುಂದನು ದೇವತೆಗಳ ಅನುಮತಿ ಪಡೆದು ಮಥುರಾ ಪಟ್ಟಣದ ಸಮೀಪದಲ್ಲಿ ಪರ್ವತವೊಂದಿತ್ತು. ಅದರ ಗುಹೆಯಲ್ಲಿ ಕೃಷ್ಣನು ಅಲ್ಲಿಗೆ ಹೋಗುವವರೆಗೂ ಮಲಗಿದ್ದನು.

ಈ ಸಕಲ ವಿಷಯಗಳನ್ನು ನಾರದರ ಮೂಲಕ ತಿಳಿದ ಶ್ರೀಕೃಷ್ಣನು ಕಾಲಯವನನನ್ನು ನೋಡಿ ಭಯಪಟ್ಟವನಂತೆ ಓಡಲಾರಂಭಿಸಿದ. ಕಾಲಯವನನನ್ನು ಹಿಂದೆ ಹಿಂದೆ ನೋಡುತ್ತಾ ಓಡುತ್ತಿದ್ದನು. ಕಾಲಯವನನು ಶ್ರೀಕೃಷ್ಣನನ್ನು ಹಿಡಿಯಬೇಕೆಂಬಾಸೆಯಿಂದ ಹಿಂಬಾಲಿಸಿ ಹೋಗುತ್ತಿದ್ದನು.

ಇನ್ನೇನು ಕೈಗೆ ಸಿಕ್ಕಿಯೆ ಬಿಟ್ಟ ಎಂದಾಗ ಎವೆಯಿಕ್ಕುವುದರೊಳಗೆ ಬಹುದೂರ ಹೋಗಿರುತ್ತಿದ್ದನು. ಹೀಗಾಗಿ ಉಪಾಯಬಲ್ಲ ಕೃಷ್ಣನನ್ನು ಹಿಡಿಯಲಾಗಲ್ಲಿಲ್ಲ.

### ಮುಚುಕುಂದ ಗುಹಾಪ್ರವೇಶ

**ಕೃಷ್ಣೋऽನುಗಮ್ಯಮಾನಶ್ಚ ತೇನ ಮ್ಲೇಚ್ಛೇನ ಶತ್ರುಣಾ ।**
**ತಾಂ ಗುಹಾಂ ಮುಚುಕುಂದಸ್ಯ ಪ್ರವಿವೇಶ ವಿನೀತವತ್ ॥ 37 ॥**

**ಶಿರಃ ಸ್ಥಾನೇ ತು ರಾಜರ್ಷೇಃ ಮುಚುಕುಂದಸ್ಯ ಕೇಶವಃ ।**
**ಸಂದರ್ಶನ ಪಥಂ ತ್ಯಕ್ತ್ವಾ ತಸ್ಥೌ ಬುದ್ಧಮತಾಂ ವರಃ ॥ 38 ॥**

ಮ್ಲೇಚ್ಛನಾದ ಯವನು ಶ್ರೀಕೃಷ್ಣನನ್ನು ಹಿಂಬಾಲಿಸುರುವಾಗಲೇ ಶ್ರೀಕೃಷ್ಣನು ಮುಚುಕುಂದ ಗುಹೆಯನ್ನು ವಿನೀತನಂತೆ ಶಬ್ಧ ಮಾಡದೆ ಪ್ರವೇಶಿಸಿದನು. ಶ್ರೀಕೃಷ್ಣನು ಮುಚುಕುಂದನಿಗೆ ಎದುರಾಗಿ ನಿಲ್ಲದೆ ಶಿರೋಸ್ಥಾನದಲ್ಲಿದ್ದ ಯಾರಿಗೂ ಕಾಣದೆ ಅದೃಶ್ಯನಾದ.

**ಮುಚುಕುಂದಸ್ಯ ರಾಜರ್ಷಿಃ ಪಾದಸ್ಪರ್ಶ ಪ್ರಬೋಧಿತಃ ।**
**ನಿದ್ರಾಚ್ಛೇದೇನ ಚುಕ್ರೋಧ ಪಾದಸ್ಪರ್ಶೇನ ತೇನ ಚ ॥ 39 ॥**

**ಸಂಸ್ಮೃತ್ಯ ಸ ವರಂ ಶಕ್ರಾದವೈಕ್ಷತ ತಮಗ್ರತಃ ।**
**ಸ ದೃಷ್ಟಮಾತ್ರಃ ಕ್ರೋಧೇನ ಸಂಪ್ರಜಜ್ವಾಲ ಸರ್ವಶಃ ॥ 40 ॥**

ಸ್ವಲ್ಪ ಸಮಯದ ನಂತರ ಕಾಲಯವನನೂ ಗುಹೆಯನ್ನು ಪ್ರವೇಶಿಸಿದನು. ಗುಹೆಯೊಳಗೆ ಪ್ರವೇಶ ಮಾಡುತ್ತಿದ್ದಂತೆಯೆ ಗುಹೆಯಲ್ಲಿ ದೀರ್ಘನಿದ್ರೆಯಲ್ಲಿದ್ದ ಮುಚುಕುಂದನನ್ನು ಮುಕುಂದನೆಂದೇ ಭ್ರಮಿಸಿ ಅವನನ್ನು ಕಾಲಿನಿಂದ ಜೋರಾಗಿ ಒದ್ದನು. ಆ ಒದೆತದಿಂದ ಮುಚುಕುಂದನಿಗೆ ಎಚ್ಚರವಾಯಿತು. ಕಾಲಿನಿಂದ ಒದ್ದದ್ದು ಹಾಗೂ ನಿದ್ರಾಭಂಗ ಮಾಡಿದ್ದರಿಂದ ಭಾರಿ ಕ್ರೋಧಾವಿಷ್ಟನಾದ ಮುಚುಕುಂದನು ಕೋಪದಿಂದ ಒಮ್ಮೆ ಅವನನ್ನು ದಿಟ್ಟಿಸಿ ನೋಡಿದ. ಮರುಕ್ಷಣದಲ್ಲಿಯೆ ದೇವತೆಗಳ ವರದಂತೆ ಸುಟ್ಟು ಬೂದಿಯಾದನು.

**ದದಾಹ ಪಾವಕಸ್ತಂ ತು ಶುಷ್ಕಂ ವೃಕ್ಷಮಿವಾಶನಿಃ ।**
**ಸ ತಂ ಸುಪ್ತಂ ಕೃತಾಂತಾಭಂ ಆಸಸಾದ ಸುದುರ್ಮತಿಃ ॥ 41 ॥**

**ಕ್ಷಣೇನ ಕಾಲಯವನಂ ನೇತ್ರ ತೇಜೋ ವಿನಿರ್ಗತಃ ॥ 42 ॥**

**ತಂ ವಾಸುದೇವಃ ಶ್ರೀಮಂತಂ ಚಿರಸುಪ್ತಂ ನರಾಧಿಪಮ್ ।**
**ಕೃತಕಾರ್ಯೋऽಬ್ರವೀದ್ ಧೀಮಾನ್ ಇದಂ ವಚನ ಮುತ್ತಮಮ್ ॥43॥**

ರಾಜರ್ಷಿಯ ದೃಷ್ಟಿಬಿದ್ದೊಡನೆಯೇ ಕಾಲಯವನನು ಸಿಡಿಲು ಹೊಡೆದಾಗ ಮರವು ಸುಟ್ಟು ಹೋಗುವಂತೆ ಸುಟ್ಟುಬೂದಿಯಾದನು.

ಶ್ರೀಕೃಷ್ಣನಿಗೆ ತಾನಿಚ್ಛಿಸಿದ ಕರ್ಮದಿಂದಾಗಿ ಕೃತಕೃತ್ಯನಾದನು. ರಾಜನನ್ನು ಕುರಿತು ಹೀಗೆಂದನು –

ಶ್ರೀಕೃಷ್ಣ ಉವಾಚ–

ರಾಜನೇ! ಚಂದ್ರವಂಶದ ರಾಜಾ ಯಯಾತಿಯ ಪುತ್ರ ಯದು. ಯದುವಿಗೆ ಯದು ಮೊದಲಾದವರು ತಮ್ಮಂದಿರು. ನಾನು ಆ ಯದುವಿನ ವಂಶದಲ್ಲಿ ಹುಟ್ಟಿದವನು. ವಸುದೇವನ ಪುತ್ರ ವಾಸುದೇವನು. ನೀನು ತ್ರೇತಾಯುಗದಲ್ಲಿ ಮಲಗಿದ್ದೆ. ಈಗ ದ್ವಾಪರ-ಕಲಿಯುಗದ ಸಂಧಿ ಕಾಲವಾಗಿದೆ. ನಾನು ನಿನಗೇನು ಮಾಡಲಿ ಹೇಳು ಎಂದನು.

**ಮಮ ಶತ್ರುಃ ತ್ವಯಾ ದಗ್ಧಃ ದೇವದತ್ತೋವರೋ ನೃಪ ।**
**ಅವಧ್ಯೋ ಯೋ ಮಯಾ ಸಂಖ್ಯೇ ಭವೇದ್ ವರ್ಷಶತೈರಪಿ ॥ 44 ॥**

ದೇವತೆಗಳಿಂದ ವರವನ್ನು ಪಡೆದಿದ್ದ ನೀನು ನನ್ನ ಶತ್ರುವನ್ನು ಬೂದಿ ಮಾಡಿದಿ. ನಾನು ಇವನೊಂದಿಗೆ ನೂರು ವರ್ಷ ಹೋರಾಟ ನಡೆಸಿದ್ದರೂ ನಾನವನನ್ನು ಕೊಲ್ಲಲಾಗುತ್ತಿರಲ್ಲಿಲ್ಲ. ನನ್ನ ಕಾರ್ಯ ನಿನ್ನಿಂದ ಸಾಧ್ಯವಾಯಿತು ಎಂದನು. ಜನಮೇಜಯನೇ! ಹೀಗೆ ಹೇಳದ ನಂತರ ಮುಚುಕುಂದನು ಗುಹೆಯೊಳಗಿಂದ ಹೊರಗೆ ಬಂದನು. ಅವನ ಹಿಂದೆ ಶ್ರೀಕೃಷ್ಣನೂ ಹೊರಬಂದನು. ಮುಚುಕುಂದನು ಹೊರಗೆ ಬಂದು ನೋಡಿದಾಗ ಕುಬ್ಜಾಕೃತಿಯ ಮಾನವರೇ ಕಂಡುಬಂದರು. ಎಲ್ಲರೂ ಅಲ್ಪವೀರ್ಯರೂ ಅಲ್ಪೋತ್ಸಾಹರೂ ಆಗಿದ್ದರು.

ರಾಜನು ಶ್ರೀಕೃಷ್ಣನನ್ನು ಸ್ತೋತ್ರ ಮಾಡಿ, ಅವನ ಅನುಜ್ಞೆಯಿಂದ ತಪಸ್ಸನ್ನಾಚರಿಸಿ ಮುಕ್ತನಾದ. ಹೀಗೆ ಶತ್ರುವನ್ನು ಉಪಾಯದಿಂದ ಕೊಲ್ಲಿಸಿ ಅಪಾರ ಸೇನಾವಾಹಿನಿಯನ್ನು ವಶಪಡಿಸಿಕೊಂಡು ದ್ವಾರಕೆಗೆ ಕಳುಹಿಸಿದನು

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
ಮುಚುಕುಂದನಿಂದ ಕಾಲಯವನ ವಧೆವೆಂಬಲ್ಲಿ
ಐವತ್ತೇಳನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಅಷ್ಟಪಂಚಾಶತ್ತಮೋಽಧ್ಯಾಯಃ

## ದ್ವಾರಕೆ ನಿರ್ಮಾಣ

*ವೈಶಂಪಾಯನ ಉವಾಚ-*

**ತತಃ ಪ್ರಭಾತೇ ವಿಮಲೇ ಭಾಸ್ಕರೇ ಉದಿತೇ ತದಾ ।**
**ಕೃಷ್ಣಜಾಪ್ಯೋ ಹೃಷಿಕೇಶೋ ವನಾಂತೇ ನಿಷಸಾದ ಹ ॥ 1 ॥**
**ಪರಿಚಕ್ರಾಮ ತಂ ದೇಶಂ ದುರ್ಗಸ್ಥಾನ ದಿದೃಕ್ಷಯಾ ।**
**ರೋಹಿಣ್ಯಾಮಹನಿ ಶ್ರೇಷ್ಠೇ ಸ್ವಸ್ತಿ ವಾಚ್ಯ ದ್ವಿಜೋತ್ತಮಾನ್ ॥ 2 ॥**
**ಪುಣ್ಯಾಹಘೋಷೈಃ ವಿಪುಲೈಃ ದುರ್ಗಸ್ಯಾರಬ್ಧವಾನ್ ಕ್ರಿಯಾಮ್ ।**
**ಪ್ರೋವಾಚ ವದತಾಂ ಶ್ರೇಷ್ಠೋ ದೇವಾನ್ ವೃತ್ರರಿಪುರ್ಯಥಾ ॥ 3 ॥**

ಜನಮೇಜಯನೇ, ಮಾರನೇ ದಿನ ಸೂರ್ಯೋದಯವಾಯಿತು. ಶ್ರೀಕೃಷ್ಣನು ಜನರಿಗೆ ಶಿಕ್ಷಣ ನೀಡಲು ತಾನೂ ಸಹ ಸಂಧ್ಯಾವಂದನೆ ಪೂಜಾದಿಗಳನ್ನು ಮುಗಿಸಿ ಅರಣ್ಯದ ಮಧ್ಯದಲ್ಲಿ ಕುಳಿತನು. ಎಲ್ಲ ಯಾದವರೂ ಬಂದರು ದುರ್ಗವನ್ನು ನಿರ್ಮಿಸಲು ಯೋಗ್ಯವಾದ ಜಾಗವನ್ನು ಪರೀಕ್ಷಿಸಿದನು.

ಶ್ರೀಕೃಷ್ಣನು ಇಂದು ರೋಹಿಣೀ ನಕ್ಷತ್ರ ಶುಭದಿನವಾಗಿದೆ ಎಂದು ಬ್ರಾಹ್ಮಣರನ್ನು ಕರೆದು ಸ್ವಸ್ತಿಪುಣ್ಯಾಹ ಮಾಡಿಸಿ ದುರ್ಗದ ಕಾರ್ಯವನ್ನು ಆರಂಭಿಸಿದನು. ಯಾದವ ಮುಖ್ಯರನ್ನು ಕುರಿತು ದೇವೇಂದ್ರನು ದೇವತೆಗಳಿಗೆ ಹೇಳಿದಂತೆ ಹೇಳಲಾರಂಭಿಸಿದನು.

ಯಾದವರೇ! ದೇವಸದನಕ್ಕೆ ಸದೃಶವಾದ ಈ ಭೂಮಿಯನ್ನು ನಾನು

ಚಿತ್ರಿಸಿದ್ದೇನೆ. ಜಗತ್ತಿನಲ್ಲಿಯೇ ಪ್ರಖ್ಯಾತವಾಗುವ ಈ ನಗರದ ಹೆಸರನ್ನು ನಿಶ್ಚಯಿಸಿದ್ದೇನೆ.

**ಇಯಂ ದ್ವಾರವತೀ ನಾಮ ಪೃಥಿವ್ಯಾಂ ನಿರ್ಮಿತಾ ಮಯಾ ।**
**ಭವಿಷ್ಯತಿ ಪುರೀ ರಮ್ಯಾ ಶಕ್ರಸ್ಯೇವ ಅಮರಾವತೀ ॥ 4 ॥**

**ತಾನ್ಯೇವಾಸ್ಯಾಃ ಕಾರಯಿಷ್ಯೇ ಚಿಹ್ನಾನ್ಯಾಯತನಾನಿ ಚ ।**
**ಚತ್ವರಾನ್ ರಾಜಮಾರ್ಗಾಂಶ್ಚ ಸಮ್ಯಗಂತಃ ಪುರಾಣಿ ಚ ॥ 5 ॥**

**ದೇವಾ ಇವಾತ್ರ ಮೋದಂತು ಭವಂತೋ ವಿಗತಜ್ವರಾಃ ।**
**ಬಾಧಮಾನಾ ರಿಪೂನ್ ಉಗ್ರಾನ್ ಉಗ್ರಸೇನ ಪುರೋಗಮಾಃ ॥ 6 ॥**

ಈ ನಾನು ನಿರ್ಮಿಸಬೇಕೆಂದಿರುವ ಪಟ್ಟಣಕ್ಕೆ 'ದ್ವಾರವತೀ' ಎಂದೆ ಹೆಸರು. ಇದು ಮೋಕ್ಷ ದ್ವಾರವೂ ಆಗಿರುತ್ತದೆ. ಇಂದ್ರನ ಅಮರಾವತಿಯಂತೆ ರಮ್ಯವಾಗಿರುತ್ತದೆ.

ಇಂದ್ರದೇವನ ಅಮರಾವತಿಯಲ್ಲಿರುವ ಚಿಹ್ನೆಗಳನ್ನು, ಮಂದಿರಗಳನ್ನೂ, ರಾಜಮಾರ್ಗ, ಚೌಕ ಅಂತಃಪುರಗಳು, ಇಲ್ಲಿಯೂ ಇರುತ್ತವೆ. ನೀವೆಲ್ಲರೂ ದೇವತೆಗಳಂತೆ ನಿರ್ಭಯರಾಗಿ ಇಲ್ಲಿರಬಹುದು. ಉಗ್ರಸೇನಾದಿಗಳು ನಿಮ್ಮನ್ನು ಬಾದಿಸುವ ರಿಪುಗಳನ್ನು ನೀವೆ ಬಾಧಿಸಬಹುದಾಗಿದೆ.

ಮನೆಗಳನ್ನು ಕಟ್ಟಲು ಶಿಲಾನ್ಯಾಸ ನಡೆಯಬೇಕು. ಅದಕ್ಕಾಗಿ ಸಾಮಗ್ರಿ ಸಂಗ್ರಹಕ್ಕಾಗಿ ನೀವೆಲ್ಲರೂ ಬನ್ನಿರಿ. ತ್ರಿಕೋಣ, ಚತ್ವರಗಳನ್ನು ಕಲ್ಪಿಸಿರಿ. ರಾಜಮಾರ್ಗ ಹಾಗೂ ಅರಮನೆಗೆ ತಲುಪಿಸುವ ಮಾರ್ಗಗಳಿಗೆ ಬೇಕಾಗುವ ಭೂಮಿಯನ್ನು ಅಳೆಯಿರಿ. ಗೃಹನಿರ್ಮಾಣದಲ್ಲಿ ಕಾರ್ಯನಿಪುಣ ಶಿಲ್ಪಿಗಳನ್ನು ಕರೆಕಳುಹಿಸಿರಿ. ಕೂಲಿಗರನ್ನು ನಿಯಮಿಸಿರಿ ಎಂದನು.

**ಏವಮುಕ್ತೇ ತು ಯದವೋ ಗೃಹ ಸಂಗ್ರಹ ತತ್ಪರಾಃ ।**
**ಯಥಾನಿವೇಶಂ ಸಂಹೃಷ್ಟಾಃ ಚಕ್ರುಃ ವಾಸ್ತುಪರಿಗ್ರಹಮ್ ॥ 7 ॥**

**ಸೂತ್ರಹಸ್ತಾಃ ತತೋ ಮಾನಂ ಚಕ್ರುಃ ಯಾದವ ಸತ್ತಮಾಃ ।**
**ಪುಣ್ಯೇಽಹನಿ ಮಹಾರಾಜ ದ್ವಿಜಾತೀನ್ ಅಭಿಪೂಜ್ಯ ಚ ॥ 8 ॥**

**ವಾಸ್ತುದೈವತಕರ್ಮಾಣಿ ವಿಧಿನಾ ಕಾರಯಂತಿ ಚ ।**
**ಸ್ಥಪತೀನಥ ಗೋವಿಂದಃ ತತ್ರೋವಾಚ ಮಹಾಮತಿಃ ॥ 9 ॥**

ಶ್ರೀಕೃಷ್ಣನು ಹೀಗೆ ಹೇಳುತ್ತಿರಲು ಸಂತೋಷಗೊಂಡ ಯಾದವರು ಮನೆಕಟ್ಟಲು ಬೇಕಾದ ವಸ್ತುಗಳನ್ನು ಸಂಗ್ರಹಿಸಿದರು. ತಮ್ಮ ತಮ್ಮ ಮನೆಗೆ ಬೇಕಾದ ವಸ್ತುಗಳನ್ನು ಕೆಲವೆ ದಿವಸಗಳಲ್ಲಿ ಸಂಗ್ರಹಿಸಿದರು. ನಂತರ ಪವಿತ್ರ ದಿವಸದಲ್ಲಿ ಬ್ರಾಹ್ಮಣರನ್ನು ಪೂಜಿಸಿ ಅವರ ಅನುಮತಿ ಪಡೆದರು. ನಂತರ ರೇಖೆಯನ್ನೆಳೆಯಲು ದಾರವನ್ನು ಹಿಡಿದು ಗುರುತುಗಳನ್ನು ಮಾಡಿದರು. ವಾಸ್ತು ಪೂಜೆ, ಭೂಮಿ ಪೂಜೆ, ಹೋಮಾದಿಗಳನ್ನು ವಿಪ್ರರಿಂದ ಮಾಡಿಸಿದರು. ಕೃಷ್ಣನು ಸ್ಥಪತಿಗಳಗೆ ಹೀಗೆ ಹೇಳಿದನು.

**ಅಸ್ಮದರ್ಥೇ ಸುವಿಹಿತಂ ಕ್ರಿಯತಾಮತ್ರ ಮಂದಿರಮ್ ।**
**ವಿವಿಕ್ತ ಚತ್ವರ ಪಥಂ ಸುನಿವಿಷ್ಟೇಷ್ಟ ದೈವತಮ್ ॥ 10 ॥**

**ತೇ ತಥೇತಿ ಮಹಾಬಾಹುಮುಕ್ತ್ವಾ ಸ್ಥಪತಯಸ್ತದಾ ।**
**ದುರ್ಗಕರ್ಮಾಣಿ ಸಂಸ್ಕಾರಾನ್ ಉಪಕಲ್ಪ್ಯ ಯಥಾವಿಧಿ ।**
**ಯಥಾನ್ಯಾಯಂ ನಿರ್ಮಿಮಿರೇ ದುರ್ಗಾಣ್ಯಾಯತನಾನಿ ಚ ॥ 11 ॥**

ಶಿಲ್ಪಿ ಶ್ರೇಷ್ಠರೇ! ನೀವು ಯಾದವರಿಗಾಗಿ ಸುಂದರವಾದ ಮಂದಿರಗಳನ್ನು ನಿರ್ಮಿಸಿರಿ. ದೇವತಾಪೂಜೆಗೆ ಯೋಗ್ಯವಾದ ದೇವರಮನೆಯೊಂದಿರಲಿ. ಪ್ರತ್ಯೇಕ ಮಾರ್ಗಗಳನ್ನು ರಚಿಸಿರಿ ಎಂದನು. ಸ್ಥಪತಿಗಳು ಹಾಗೆ ಆಗಲಿ ಎಂದು ವಿಧಿವತ್ತಾಗಿ ಭೂಶೋಧನೆ, ಕಂಟಕ ಉದ್ಧರಣ, ಮೊದಲಾದ ಕಾರ್ಯಗಳನ್ನು ಮಾಡಿದರು. ಅನೇಕ ರೀತಿಯ ದುರ್ಗಗಳನ್ನು, ಮಂದಿರ, ದೇವಪೂಜಾಗೃಹಗಳನ್ನೂ, ನಾಲ್ಕೂ ದ್ವಾರಗಳನ್ನೂ ನಿರ್ಮಿಸಿ, ಅಲ್ಲಿ ವರುಣ, ಇಂದ್ರ, ಅಗ್ನಿ, ಕಲ್ಲಿನ ಒರಳು ಮೊದಲಾದ ದೇವತೆಗಳನ್ನು ಸ್ಥಾಪಿಸಿದರು.

**ಅಪಾಮಗ್ನೇಃ ಸುರೇಶಸ್ಯ ದೃಷದೋಲೂಖಲಸ್ಯ ಚ ।**
**ಚಾತುರ್ದೈವಾನಿ ಚತ್ವಾರಿ ದ್ವಾರಾಣಿ ನಿದಧುಶ್ಚ ತೇ ॥ 12 ॥**

**ಶುದ್ಧಾಕ್ಷಮೈಂದ್ರಂ ಭಲ್ಲಾಟಂ ಪುಷ್ಪದಂತಂ ತಥೈವ ಚ ।**
**ತೇಷು ವೇಶ್ಮಸು ಯುಕ್ತೇಷು ಯಾದವೇಷು ಮಹಾತ್ಮಸು ॥ 13 ॥**

ನಾಲ್ಕು ದ್ವಾರಗಳಲ್ಲಿ ಇಂದ್ರಾದಿದೇವತೆಗಳನ್ನೂ, ಶುದ್ಧಾಕ್ಷಾದಿ ನಾಲ್ಕು ಮೂರ್ತಿಗಳನ್ನೂ ಅದನ್ನು ಸ್ಥಾಪಿಸುವ ಸ್ಥಾನವನ್ನು ಗುರುತಿಸಿದರು.

ಹೀಗೆ ಯಾದವರೆಲ್ಲ ಗೃಹನಿರ್ಮಾಣ ಹೇಗಿರಬೇಕೆಂಬ ರೇಖಾಚಿತ್ರಗಳನ್ನು

ತಯಾರಿಸಿ ನಕ್ಷೆಯನ್ನು ಸ್ಥಪತಿಗಳ ಮೂಲಕ ತಯಾರಿಸಿದ್ದರು. ಮಾಧವನಾದರೂ ಇದೇ ರೀತಿ ಪಟ್ಟಣವನ್ನು ಶೀಘ್ರವಾಗಿ ಹೇಗೆ ನಿರ್ಮಿಸುವುದು? ಜರಾಸಂಧ ತನಗಾದ ಸೋಲಿನಿಂದ ಕೋಪಗೊಂಡು ನನ್ನನ್ನೆ ನಂಬಿರುವ ಅಮಾಯಕ ಯಾದವರನ್ನು ಕೊಂದು ಹಾಕುತ್ತಾನೆ. ಹಿಂದೆ ನಮ್ಮನ್ನು ಗೆಲ್ಲಬೇಕೆಂದು ಆಸೆ ಹೊಂದಿದ್ದು ಯಾದವರನ್ನು ಕೊಲ್ಲಲಿಲ್ಲ. ಅದಕ್ಕಾಗಿ ಸಮುದ್ರ ಮಧ್ಯದಲ್ಲಿಯೆ ಪಟ್ಟಣ ನಿರ್ಮಾಣವಾಗಬೇಕು. ಯಾದವರಿಗೆ ಇದು ದುರ್ಗದಂತೆ ಇದ್ದು ರಕ್ಷಣೆ ನೀಡಬಲ್ಲದು.

## ವಿಶ್ವಕರ್ಮ ಸ್ಮರಣೆ–ಆಗಮನ

**ಪುರ್ಯಾಃ ಕ್ಷಿಪ್ರಂ ನಿವೇಶಾರ್ಥಂ ಚಿಂತಯಾಮಾಸ ಮಾಧವಃ ।**
**ಶಿಲ್ಪಿ ಮುಖ್ಯಸ್ತು ದೇವಾನಾಂ ಪ್ರಜಾಪತಿ ಸುತಃ ಪ್ರಭುಃ ॥ 14 ॥**

**ವಿಶ್ವಕರ್ಮಾ ಸ್ವಮತ್ಯಾ ವೈ ಪುರೀಂ ಸಂಸ್ಥಾಪಯಿಷ್ಯತಿ ।**
**ಮನಸಾ ಸಮನುಧ್ಯಾಯ ತಸ್ಯಾಗಮನ ಕಾರಣಾತ್ ॥ 15 ॥**

**ತಸ್ಮಿನ್ನೇವ ತತಃ ಕಾಲೇ ಶಿಲ್ಪಾಚಾರ್ಯೋ ಮಹಾಮತಿಃ ।**
**ವಿಶ್ವಕರ್ಮಾ ಸುರಶ್ರೇಷ್ಠಃ ಕೃಷ್ಣಸ್ಯ ಪ್ರಮುಖೇ ಸ್ಥಿತಃ ॥ 16 ॥**

ಹೀಗೆ ಆಲೋಚಿಸಿ ಕೂಡಲೆ ಪಟ್ಟಣ ನಿರ್ಮಾಣ ಹೇಗೆ ಸಾಧ್ಯವೆಂದು ಆಲೋಚಿಸಿ ಸರ್ವಸಮರ್ಥನೂ, ಸರ್ವಜ್ಞನೂ ಆದ ಕೃಷ್ಣನು ವಿಶ್ವಕರ್ಮನ ದೈವಯೋಗದಿಂದ ಅವನಿಂದ ಈ ಬೃಹತ್ಕಾರ್ಯ ಮಾಡಿಸಿ ಕೀರ್ತಿ ನೀಡಲೆಂದು ಅವನನ್ನು ಸ್ಮರಿಸಿದನು. ಕೂಡಲೇ ಭುವನ ನಿರ್ಮಾಣ ಕುಶಲನೂ, ಭುವನದಲ್ಲಿರುವ ಶಿಲ್ಪರಹಸ್ಯವನ್ನೆಲ್ಲ ತಿಳಿದವನೂ ಆದ, ವಸುಗಳಲ್ಲಿ ವಸ್ತುಯೆಂಬ ಪ್ರಜಾಪತಿಯ ಮಗನೂ ಆದ ವಿಶ್ವಕರ್ಮನು ಶ್ರೀಕೃಷ್ಣನ ಎದುರಿನಲ್ಲಿ ನಿಂತನು.

*ವಿಶ್ವಕರ್ಮೋವಾಚ–*

**ಶಕ್ರೇಣ ಪ್ರೇಷಿತಃ ಕ್ಷಿಪ್ರಂ ತವ ವಿಷ್ಣೋ ಧೃತವ್ರತ ।**
**ಕಿಂಕರಃ ಸಮನುಪ್ರಾಪ್ತಃ ಶಾಧಿ ಮಾಂ ಕಿಂಕರೋಮಿ ತೇ ॥ 17 ॥**

**ಯಥಾಸೌ ದೇವದೇವೋ ಮೇ ಶಂಕರಶ್ಚ ಯಥಾವ್ಯಯಃ ।**
**ತಥಾ ತ್ವಂ ದೇವ ಮಾನ್ಯೋ ಮೇ ವಿಶೇಷೋ ನಾಸ್ತಿ ವಃ ಪ್ರಭೋ ॥18 ॥**

**ವಿಷ್ಣೋಽಸ್ಮಿ ಪರಿದೃಷ್ಟಾರ್ಥಃ ಕಿಂ ಕರೋಮಿ ಪ್ರಶಾಧಿ ಮಾಮ್ ।**

ಭಗವಾನ್ ಶ್ರೀಕೃಷ್ಣನೇ, ನಿನ್ನ ಬಳಿಗೆ ಕೂಡಲೇ ಧಾವಿಸಲು ನನಗೆ ಇಂದ್ರದೇವ ಆದೇಶವಿತ್ತಿದ್ದಾನೆ. ನನಗೆ ನಿನ್ನ ಪುತ್ರ ಬ್ರಹ್ಮದೇವನು, ನಿನ್ನ ಪೌತ್ರನಾದ ಶಂಕರನೂ ಹೇಗೆ ಆದರ ಪಾತ್ರರೊ ಹಾಗೆ ಅವರಿಗೂ ಜನಕನಾದ ನೀನೂ ನನಗೆ ಮಾನ್ಯವಾಗಿರುವೆ. ನಿನಗೂ ಹಾಗೂ ಅವರಲ್ಲಿ ಅಂತರ್ಯಾಮಿಯಾಗಿರುವ ವಿಷ್ಣುವಿಗೂ ಯಾವುದೇ ವಿಶೇಷಗಳಿಲ್ಲ. ನಾನು ಏನು ಮಾಡಬೇಕೆಂದು ನನಗೆ ಆದೇಶಿಸು. ಶಿಲ್ಪಶಾಸ್ತ್ರದ ಪಾರವನ್ನು ನೋಡಿರುವ ನಾನು ನಿನ್ನ ಮುಂದೆ ನಿಂತಿದ್ದೇನೆ. ನನಗೆ ಆಜ್ಞಾಪಿಸು ಎಂದನು.

ಅದಕ್ಕೆ ಶ್ರೀಕೃಷ್ಣನು–

**ಶ್ರುತಾರ್ಥೋ ದೇವಗುಹ್ಯಸ್ಯ ಭವಾನ್ ಯತ್ರ ವಯಂ ಸ್ಥಿತಾಃ ।**
**ಅವಶ್ಯಂ ತ್ವಿಹ ಕರ್ತವ್ಯಂ ಸದನಂ ಮೇ ಸುರೋತ್ತಮ ॥ 19 ॥**

**ತದಿಯಂ ಪೂಃ ಪ್ರಕಾಶಾರ್ಥಂ ನಿವೇಶ್ಯಾ ಮಯಿ ಸುವ್ರತ ।**
**ಮತ್ಪ್ರಭಾವಾನುರೂಪೈಶ್ಚ ಗೃಹೈಶ್ಚಾಯಂ ಸಮಂತತಃ ॥ 20 ॥**

**ಮಮ ಸ್ಥಾನಮಿದಂ ಕಾರ್ಯಂ ಯಥಾ ವೈ ತ್ರಿದಿವೇ ತಥಾ ।**
**ಮರ್ತ್ಯಾಃ ಪಶ್ಯಂತು ಮೇ ಲಕ್ಷ್ಮೀಂ ಪುರ್ಯಾಃ ಯದುಕುಲಸ್ಯ ಚ ॥ 21 ॥**

ವಿಶ್ವಕರ್ಮನೇ! ಹಿಂದೆ ನಾವೆಲ್ಲ ದೇವತೆಗಳು ಸೇರಿದ್ದಾಗ ನೀನು ಅಲ್ಲಿದ್ದಿ. ನಮ್ಮಿಂದ ದೇವತೆಗಳಿಗೆ ರಹಸ್ಯವಾಗಿ ಯಾವ ಪ್ರಯೋಜನವಾಗಲಿದೆ ಎಂದು ನೀನು ನಮ್ಮ ಮಂತ್ರಾಲೋಚನೆಯನ್ನು ಕೇಳಿ ತಿಳಿದಿರುವಿ. ದೇವತೆಗಳ ಸಹಾಯಕ್ಕಾಗಿ ಈ ಸಮುದ್ರದ ಮಧ್ಯದಲ್ಲಿ ನೀನು ಸುಂದರವಾದ ಭವನವೊಂದನ್ನು ನಿರ್ಮಿಸಬೇಕು. ನಿನ್ನ ಶಿಲ್ಪ ಚಾತುರ್ಯ ಪ್ರದರ್ಶಿಸುತ್ತಾ. ಈ ನಗರಿಯು ಗೃಹದ್ವಾರಾದಿಗಳಿಂದ ಸುಶೋಭಿತವಾಗಿದ್ದು ನನ್ನ ವೈಕುಂಠನಗರಿಯ ಪ್ರತಿಬಿಂಬದಂತಿರುವ ನಗರ ನಿರ್ಮಿಸುವವನಾಗು. ನಿನಗೆ ಅಂತಹ ಚಮತ್ಕಾರವೂ ಇದೆ.

ವಿಶ್ವಕರ್ಮನು ಹೀಗೆಂದನು.

**ಸರ್ವಮೇತತ್ ಕರಿಷ್ಯಾಮಿ ಯತ್ ತ್ವಯಾಭಿಹಿತಂ ಪ್ರಭೋ ।**
**ಪುರೀತ್ವಿಯಂ ಜನಸ್ಯಾಸ್ಯ ನ ಪರ್ಯಾಪ್ತಾ ಭವಿಷ್ಯತಿ ॥ 22 ॥**

**ಯದೀಚ್ಛೇತ್ ಸಾಗರಃ ಕಿಂಚಿತ್ ಉತ್ಸ್ರಷ್ಟುಮಪಿ ತೋಯರಾಟ್ ।**
**ತದಾ ಸ್ವಾಯತಲಕ್ಷಣ್ಯಾ ಪುರೀ ಸ್ಯಾತ್ ಪುರುಷೋತ್ತಮ ॥ 23 ॥**

ಪ್ರಭುವೇ! ನೀನು ಆದೇಶಿಸಿದಂತೆಯೇ ಸರ್ವವನ್ನೂ ನಿರ್ಮಿಸುತ್ತೇನೆ. ಆದರೆ ನೀನು ಈಗ ಸೂಚಿಸಿರುವ ಭೂಮಿಯ ಚೌಕಟ್ಟಿನೊಳಗೆ ನಿನ್ನ ಅಸಂಖ್ಯಾತ ಯಾದವರಿಗೆ ಈ ಪ್ರದೇಶ ಪರ್ಯಾಪ್ತವಾಗಲಾರದೆಂದು ನನ್ನ ಅನಿಸಿಕೆ. ನೀನು ಮನಸ್ಸು ಮಾಡಿದರೆ ಇದು ಮತ್ತಷ್ಟು ವಿಸ್ತಾರ ಹೊಂದುತ್ತದೆ. ಈ ಭೂಮಿಯಲ್ಲಿ ಚತುಸ್ಸಮುದ್ರಗಳೂ ಸುತ್ತುವರೆದು ನಿಲ್ಲಬಹುದು.

ಇದಕ್ಕಾಗಿ ರತ್ನಾಕರನಾದ ಸಮುದ್ರರಾಜನು ಸ್ವಲ್ಪ ಸರಿದು ಭೂಮಿಯನ್ನು ನಮಗೆ ಬಿಟ್ಟುಕೊಟ್ಟರೆ, ಪಟ್ಟಣ ನಿರ್ಮಾಣ ವಿಸ್ತಾರವಾಗಿಯೂ ಮನೋಹರವಾಗಿಯೂ ಕಟ್ಟಬಹುದು ಎಂದನು.

## ಸಮುದ್ರನಿಗೆ ಸ್ಥಳ ನೀಡಲು ಆದೇಶ

**ಏವಮುಕ್ತಃ ತತಃ ಕೃಷ್ಣಃ ಪ್ರಾಗೇವ ಕೃತ ನಿಶ್ಚಯಃ ।**
**ಸಾಗರಂ ಸರಿತಾಂ ನಾಥಮುವಾಚ ವದತಾಂ ವರಃ ॥ 24 ॥**

**ಸಮುದ್ರ! ದಶ ಚ ದ್ವೇ ಚ ಯೋಜನಾನಿ ಜಲಾಶಯೇ ।**
**ಪ್ರತಿಸಂಹ್ರಿಯತಾಮಾತ್ಮಾ ಯದ್ಯಸ್ತಿ ಮಯಿ ಮಾನ್ಯತಾ ॥ 25 ॥**

**ಅವಕಾಶೇ ತ್ವಯಾ ದತ್ತೇ ಪುರೀಯಂ ಮಾಮಕಂ ಬಲಮ್ ।**
**ಪರ್ಯಾಪ್ತವಿಷಯಾ ರಮ್ಯಾ ಸಮಗ್ರಂ ವಿಸಹಿಷ್ಯತಿ ॥ 26 ॥**

ಜನಮೇಜಯನೇ! ಈ ಹಿಂದೆಯೇ ಶ್ರೀಕೃಷ್ಣನು ಸಮುದ್ರರಾಜನಿಂದ ಸ್ವಲ್ಪ ಭೂಮಿಯನ್ನು ಪಡೆಯಲು ನಿಶ್ಚೈಯಿಸಿದ್ದನು. ವಿಶ್ವಕರ್ಮನೂ ಇದೇ ಅಭಿಪ್ರಾಯ ಸೂಚಿಸಿದನು. ಇದರಿಂದಾಗಿ ಶ್ರೀಕೃಷ್ಣನು ಸಮುದ್ರನಿಗೆ ಹೀಗೆಂದನು.

ರತ್ನಾಕರನೇ! ನಾನು ನಿನಗೆ ಆದರಣೀಯನಾಗಿದ್ದಲ್ಲಿ ನನ್ನ ಆದೇಶದಂತೆ ನೀನು ಹನ್ನೆರಡು ಯೋಜನಗಳಷ್ಟು ದೂರ ಸರಿದು ಅಷ್ಟು ಭೂಪ್ರದೇಶ ನನಗೆ ನೀಡು. ಹೀಗೆ ಅವಕಾಶ ನೀಡಿದಲ್ಲಿ ಸೈನ್ಯ ಸಹಿತವಾದ ನನ್ನ ಸಮಗ್ರ ಯಾದವರಿಗೂ ಸಾಕಾಗುತ್ತದೆ ಎಂದನು.

## ಸಮುದ್ರ ಸ್ಥಳ ನೀಡಿದ

**ತತಃ ಕೃಷ್ಣಸ್ಯ ವಚನಂ ಶ್ರುತ್ವಾ ನದ ನದೀಪತಿಃ ।**
**ಸ ಮಾರುತೇನ ಯೋಗೇನ ಉತ್ಸಸರ್ಜಜಲಾಶಯಮ್ ।**
**ಗೋವಿಂದೇ ಚೈವ ಸಮ್ಮಾನಂ ಕೃತವಾನ್ ಸಾಗರಸ್ತದಾ ॥ 27 ॥**

ಶ್ರೀಕೃಷ್ಣನ ಆದೇಶವನ್ನು ಆದರಿಸಿದ ನದ-ನದೀಪತಿಯಾದ ಸಾಗರನು ಹನ್ನೆರಡು ಯೋಜನದಷ್ಟು ಜಲವನ್ನು ವಾಯುದೇವನ ಸಹಾಯದಿಂದ ಹಿಂದಕ್ಕೆ ಸೆಳೆದುಕೊಂಡನು. ನಗರ ನಿರ್ಮಾಣಕ್ಕೆ ಪರ್ಯಾಪ್ತವಾದ ಭೂಮಿಯು ಲಭಿಸಿದ್ದಕ್ಕಾಗಿ ವಿಶ್ವಕರ್ಮನಿಗೂ ಸಂತೋಷವಾಯಿತು. ರತ್ನಾಕರನು ವಿಶೇಷ ಆದರವನ್ನು ಶ್ರೀಕೃಷ್ಣನಿಗೆ ಮಾಡಿ ಕೃತಾರ್ಥನಾದನು.

## ದ್ವಾರವತೀ ವರ್ಣನೆ

**ವಿಶ್ವಕರ್ಮಾ ತತಃ ಕೃಷ್ಣ ಮುವಾಚ ಯದುನಂದನಮ್ ।**
**ಅದ್ಯಪ್ರಭೃತಿ ಗೋವಿಂದ ಸರ್ವೇ ಸಮಧಿರೋಹತ ॥ 28 ॥**

**ಮನಸಾ ನಿರ್ಮಿತಾ ಚೇಯಂ ಮಯಾ ಪೂಃ ಪ್ರವರಾ ವಿಭೋ ।**
**ಅಚಿರೇಣೈವ ಕಾಲೇನ ಗೃಹ ಸಂಬಾಧ ಮಾಲಿನೀ ॥ 29 ॥**

**ಭವಿಷ್ಯತಿ ಪುರಾ ರಮ್ಯಾ ಸುದ್ವಾರಾ ಪ್ರಾಗ್ರ್ಯ ತೋರಣಾ ।**
**ಚಯಾಟ್ಟಲಕ ಕೇಯೂರಾ ಪೃಥಿವ್ಯಾಂ ಕಕುದೋಪಮಾ ॥ 30 ॥**

**ಅಂತಃ ಪುರಂ ಚ ಕೃಷ್ಣಸ್ಯ ಪರಿಚರ್ಯಾಕ್ಷಯಂ ಮಹತ್ ।**
**ತತಃ ಸಾ ನಿರ್ಮಿತಾ ಕಾಂತಾ ಪುರೀ ದ್ವಾರಾವತೀ ತದಾ ।**
**ಮಾನಸೇನ ಪ್ರಯತ್ನೇನ ವೈಷ್ಣವೀ ವಿಶ್ವಕರ್ಮಣಾ ॥ 31 ॥**

ವಿಶ್ವಕರ್ಮನು ಶ್ರೀಕೃಷ್ಣನಿಗೆ ಹೀಗೆ ಹೇಳಿದನು. ಸ್ವಾಮಿಯೇ! ನಾನು ನನ್ನ ಶಕ್ತಿಯಿಂದಾಗಿ ಕೇವಲ ಮನಸ್ಸಿನ ಸಂಕಲ್ಪ ಮಾತ್ರದಿಂದಲೇ ದ್ವಾರಾವತಿಯನ್ನು ನಿರ್ಮಿಸಿದ್ದೇನೆ. ನೀವೆಲ್ಲರೂ ವಾಸ ಮಾಡುವುದಕ್ಕಾಗಿ ಸಕಲ ಸಿದ್ಧತೆ ನಡೆಸಿರಿ.

ಈ ಭೂಭಾಗವು ಮನೆಗಳ ಸಾಲುಗಳಿಂದಲೂ ಕೂಡಿದ್ದು ಸುಂದರವಾದ ಬಾಗಿಲುಗಳುಳ್ಳದ್ದಾಗಿವೆ. ಪಟ್ಟಣದ ಮಹಾದ್ವಾರವೂ ಸುಂದರವಾಗಿಯೂ, ಇದ್ದು ಉಪರಿಗೆ, ಅಟ್ಟಾಲಕ ಪ್ರಾಕಾರಗಳೆಲ್ಲವೂ ತೋಳ್ಬಳೆಯಂತೆ ಶೋಭಿಸುತ್ತಿವೆ. ಈ ದ್ವಾರಾವತಿಯು ಸಮುದ್ರವೆಂಬ ಗೂಳಿಯ ಹಿಣಿಲಿನಂತೆ ತೋರುತ್ತಿದೆ.

ದೇವ ಪೂಜಿತ ಸ್ಥಳದಲ್ಲಿ ಶ್ರೀಕೃಷ್ಣನಿಗಾಗಿಯೇ ಒಂದು ಅಂತಃಪುರವನ್ನು ನಿರ್ಮಿಸಿದ್ದನು. ಅಂತಃಪುರದಲ್ಲಿ ಅವನ ಸೇವೆಗಾಗಿಯೇ ಪ್ರತ್ಯೇಕ ಪ್ರತ್ಯೇಕ ಭವನಗಳಿದ್ದವು.

ನಗರದ ಸುತ್ತಲೂ ಪ್ರಾಕಾರಗಳೂ ಕೋಟೆ ಕಂದಕಗಳಿಂದಲೂ ಸಂರಕ್ಷಿತವಾಗಿತ್ತು. ಕಾಂತ- ಕಾಂತೇಯರಿಂದಲೂ, ವ್ಯಾಪಾರಿಗಳಿಂದಲೂ ಹಲವಾರು ಅಂಗಡಿಗಳಿಂದಲೂ, ಅಲ್ಲಲ್ಲಿ ಅರವಟ್ಟಿಗೆಗಳಿಂದಲೂ, ಬಾವಿ ಸರೋವರಗಳಿಂದಲೂ, ಉದ್ಯಾನವನಗಳಿಂದಲೂ ಶೋಭಿಸುತಿತ್ತು. ಎತ್ತರವಾದ ಉಪ್ಪರಿಗೆಗಳ ಮೇಲೆ ಮೇಘಗಳ ಪಂಕ್ತಿ ನಿಂತಿದ್ದವು. ಸಾವಿರಾರು ರಸ್ತೆಗಳಿಂದ ತುಂಬಿದ್ದು ಸ್ವರ್ಗದ ಅಮರಾವತಿಯೆ ಇಳಿದು ಬಂದಂತೆ ಸರ್ವರತ್ನಗಳಿಂದ ಶೋಭಿತವಾಗಿದ್ದು, ಕೃಷ್ಣನಿಂದಾಗಿ ದೇವತೆಗಳಿಗೂ ಪುಣ್ಯಸ್ಥಾನವಾಗಿತ್ತು. ಅತ್ಯಂತ ಜನನಿಬಿಡವೂ, ಸರ್ವದಾ ನಾನಾವಿಧ ಶಬ್ಧಗಳಿಂದ ನಿನಾದಿತವೂ ಸಮುದ್ರ ಅಲೆಗಳು ಅಪ್ಪಳಿಸುವ ಶಬ್ಧದಿಂದ ಕೂಡಿತ್ತು. ಸಮುದ್ರದ ಮಧ್ಯೆಯಿದ್ದು ವಾತಾವರಣ ತಂಪಾಗಿರುತಿತ್ತು. ಇಂತಹ ದ್ವಾರಕೆಯಲ್ಲಿ ಶ್ರೀಕೃಷ್ಣನೂ ಹಾಗೂ ಸಮಸ್ತ ಯಾದವರೂ ವಾಸ ಮಾಡತೊಡಗಿದರು. ಶ್ರೀಕೃಷ್ಣನು - ಆಕಾಶದಲ್ಲಿ ಚಂದ್ರನಂತೆ ಯಾದವರ ಮಧ್ಯೆ ಶೋಭಿಸುತ್ತಿದ್ದನು.

ಇಂತಹ ನಗರ ನಿರ್ಮಾಣ ಮಾಡಿದ ದೇವಶಿಲ್ಪಿ ಭೌವನನು ಶ್ರೀಕೃಷ್ಣನಿಂದ ಸನ್ಮಾನಿತನಾಗಿ ತನ್ನ ಲೋಕಕ್ಕೆ ಸೇರಿಕೊಂಡನು.

## ಶಂಖನಿಧಿಯ ಆಗಮನ

ಭೂಯಶ್ಚ ಬುದ್ಧಿರಭವತ್ ಕೃಷ್ಣಸ್ಯ ವಿದಿತಾತ್ಮನಃ ।
ಜನಾನಿಮಾನ್ ಧನೌಘೈಶ್ಚ ತರ್ಪಯೇಯಮಹಂ ಯದಿ ॥ 32 ॥

ಸ ವೈಶ್ರವಣ ಸಂಸ್ಪೃಷ್ಟಂ ನಿಧೀನಾಮುತ್ತಮಂ ನಿಧಿಮ್ ।
ಶಂಖಮಾಹ್ವಯತೋಪೇಂದ್ರೋ ನಿಶೀ ಸ್ವೇ ಭವನೇ ಪ್ರಭುಃ ॥ 33 ॥

ಸ ಶಂಖಃ ಕೇಶವಾಹ್ವಾನಂ ಜ್ಞಾತ್ವಾ ಹಿ ನಿಧಿರಾಟ್ ಸ್ವಯಮ್ ।
ಆಜಗಾಮ ಸಮೀಪಂ ವೈ ತಸ್ಯ ದ್ವಾರವತೀ ಪತೇಃ ॥ 34 ॥

ಕೃಷ್ಣಂ ವಿಜ್ಞಾಪಯಾಮಾಸ ಯಥಾ ವೈಶ್ರವಣಂ ತಥಾ ।
ಭಗವನ್ ಕಿಂ ಕಾರ್ಯಂ ಸುರಾಣಾಂ ವಿತ್ತರಕ್ಷಿಣಾ ।
ನಿಯೋಜಯ ಮಹಾಬಾಹೋ ಯತ್ ಕಾರ್ಯಂ ಯದುನಂದನ ॥ 35॥

ಸರ್ವವನ್ನೂ ಬಲ್ಲ ಶ್ರೀಕೃಷ್ಣನಿಗೆ ಮತ್ತೊಂದು ವಿಚಾರವು ಹೊಳೆಯಿತು. ಈ

ಯಾದವರಿಗೆ ಸಕಲ ಸಂಪತ್ತು ಧನ ಕನಕಾದಿಗಳಿಂದಲೂ ತೃಪ್ತಿಪಡಿಸಿದರೆ ಹೇಗೆ? ಎಂದು ಹೀಗೆ ಯೋಚಿಸಿ ಕೂಡಲೆ ವಿಶ್ವೇಶ್ವರ ಕುಬೇರನೊಂದಿಗೆ ಸಂಬಂಧ ಹೊಂದಿದ್ದ ನಿಧಿಗಳಿಗೆ ಅಧಿದೇವತೆಗಳಿಗೂ ಮೊದಲಿಗನಾದ ತನ್ನ ಮನೆಗೆ ಬರಲು ಆಹ್ವಾನಿಸಿದನು. ಶಂಖನಿಧಿಯಾದರೂ ಮನ್ನಿಸಿ ಕೂಡಲೆ ದ್ವಾರಾವತಿಗೆ ಬಂದನು. ಕುಬೇರನಲ್ಲಿ ವಿಜ್ಞಾಪಿಸಿಕೊಳ್ಳುವಂತೆ ಶ್ರೀಕೃಷ್ಣನನ್ನು ವಿಜ್ಞಾಪಿಸಿಕೊಂಡನು. ಸ್ವಾಮಿ ಶ್ರೀಕೃಷ್ಣನೆ! ದೇವತೆಗಳ ಐಶ್ವರ್ಯ ರಕ್ಷಕನಾದ ನಾನು ಶಂಖನಿಧಿ. ಇದೋ ನಿನ್ನ ಮುಂದೆ ಬಂದಿರುವೆನು. ನಾನು ನಿನಗೇನು ಮಾಡಿಕೊಡಲಿ ಎಂದು ಆದೇಶಿಸು.

ಶ್ರೀಕೃಷ್ಣನು ಶಂಖನಿಧಿಯನ್ನು ಕುರಿತು – ಕುಬೇರ ಭೃತ್ಯನೇ! ನನ್ನ ಈ ದ್ವಾರಾವತಿಯಲ್ಲಿ ಯಾರು ಧನಹೀನರಾಗಿರುವರೋ ಅವರನ್ನು ಧನಿಕರನ್ನಾಗಿಸು. ನನ್ನಿಂದ ಅಧಿಷ್ಠಿತವಾದ ಈ ದ್ವಾರಕೆಯಲ್ಲಿ ದರಿದ್ರನನ್ನು, ಹೊಟ್ಟೆಗಿಲ್ಲದವನನ್ನೂ, ಮಾಲಿನ್ಯದಿಂದ ಕೂಡಿ ದೇಹಿ ದೇಹಿ ಎಂದು ದೈನ್ಯ ಜೀವನ ನಡೆಸುವವನನ್ನು ನಾನು ನೋಡಲಾರೆನು.

ಶಂಖನಿಧಿಯು ಕೇಶವನ ಆಜ್ಞೆ ಹೊಂದಿದ ಕೂಡಲೇ ನಿಧಿದೇವತೆಗಳಿಗೆ ಆಜ್ಞಾಪಿಸಿದನು. ಅವರು ಕ್ಷಣಮಾತ್ರದಲ್ಲಿ ದ್ವಾರಾವತಿಯ ಮನೆಗಳೆಲ್ಲವನ್ನೂ ಸಂಪತ್ತಿನಿಂದ ತುಂಬಿಸಿದರು.

ಲಕ್ಷ್ಮೀಪತಿಯ ಸನ್ನಿಧಾನ–ಅಲಕ್ಷ್ಮೀಪತಿಯ ಉಚ್ಚಾಟನೆ.

**ನಾಧನೋ ವಿದ್ಯತೇ ತತ್ರ ಕ್ಷೀಣಭಾಗ್ಯೋऽಪಿ ವಾ ನರಃ ।**
**ಕೃಶೋವಾ ಮಲಿನೋ ವಾಪಿ ದ್ವಾರವತ್ಯಾಂ ಕಥಂಚನ ॥ 36 ॥**

ಶ್ರೀಕೃಷ್ಣನ ದ್ವಾರಕೆಯಲ್ಲಿ ದರಿದ್ರನಾಗಲೀ, ಭಾಗ್ಯಹೀನನಾಗಲೀ, ಕೃಶದೇಹಿಯಾಗಲೀ ಮಲಿನನಾಗಲಿ ಇರಲ್ಲಿಲ್ಲ.

## ವಾಯುವಿನಿಂದ ಸುಧರ್ಮ ಸಭೆ ಅರ್ಪಣೆ

**ಚಕಾರ ವಾಯೋರಾಹ್ವಾನಂ ಭೂಯಶ್ಚ ಪುರುಷೋತ್ತಮಃ ।**
**ತತ್ರಸ್ಥ ಏವ ಭಗವಾನ್ ಯಾದವಾನಾಂ ಪ್ರಿಯಂಕರಃ ॥ 37 ॥**

**ಕಿಂ ಮಯಾ ದೇವ ಕರ್ತವ್ಯಂ ಸರ್ವಗೇ ನಾಶುಗಾಮಿನಾ ।**
**ಯಥೈವ ದೂತೋ ದೇವಾನಾಂ ತಥೈವಾಸ್ಮಿ ತವಾನಘ ॥ 38 ॥**

ಗಚ್ಛ ಮಾರುತ ದೇವೇಶಮನುಮಾನ್ಯ ಸಹಾಮರೈಃ ।
ಸಭಾಂ ಸುಧರ್ಮಾಮಾದಾಯ ದೇವೇಭ್ಯಸ್ತ್ವಮಿಹಾನಯ ॥ 39 ॥

ಸಂಗೃಹ್ಯ ವಚನಂ ತಸ್ಯ ಕೃಷ್ಣಸ್ಯಾಕ್ಲಿಷ್ಟಕರ್ಮಣಃ ।
ವಾಯುರಾತ್ಮೋಪಮಗತಿಃ ಜಗಾಮ ತ್ರಿದಿವಾಲಯಮ್ ॥ 40 ॥

ಸೋಽನುಮಾನ್ಯ ಸುರಾನ್ ಸರ್ವಾನ್ ಕೃಷ್ಣವಾಕ್ಯಂ ನಿವೇದ್ಯ ಚ ।
ಸಭಾಂ ಸುಧರ್ಮಾಮಾದಾಯ ಪುನರಾಯಾತ್ ಮಹೀತಲಮ್ ॥ 41 ॥

ಸುಧರ್ಮಾಯ ಸುಧರ್ಮಾಂ ತಾಂ ಕೃಷ್ಣಾಯ ಅಕ್ಲಿಷ್ಟಕಾರಿಣೇ ।
ದೇವೋ ದೇವಸಭಾಂ ದತ್ವಾ ವಾಯುರಂತರಧೀಯತ ॥ 42 ॥

ಶಂಖನಿಧಿಯು ಹೋದ ಮೇಲೆ ಶ್ರೀಕೃಷ್ಣನು ವಾಯುದೇವನನ್ನು ಆಹ್ವಾನಿಸಿದನು. ಸಮಸ್ತ ಪ್ರಾಣಿಗಳ ಪ್ರಾಣನಿಯಾಮಕನಾದ ವಾಯುದೇವನು ಏಕಾಂತದಲ್ಲಿದ್ದ ಶ್ರೀಹರಿಯನ್ನು ಭೇಟಿ ಮಾಡಿದನು. ಪ್ರಾಣಿಗಳಿಗೆ ಪ್ರಾಣಭೂತನಾದ ವಾಯುದೇವನಿಗೆ ಹೀಗೆ ರಹಸ್ಯವಾದ ಮಾತನಾಡಿದನು.

ಮಾರುತನೇ! ನೀನೀಗಲೇ ಇಂದ್ರಲೋಕಕ್ಕೆ ಹೋಗು. ಅಲ್ಲ ದೇವೇಂದ್ರನನ್ನು ಭೇಟಿ ಮಾಡು ಅಲ್ಲ ಇಂದ್ರ ಹಾಗೂ ದೇವಾನುದೇವತೆಗಳ ಅನುಮತಿ ಪಡೆದು ದೇವಲೋಕದಲ್ಲಿರುವ 'ಸುಧರ್ಮಾ' ಎಂಬ ಸಭೆಯ ಒಂದು ಭಾಗವನ್ನು ತಂದು ದ್ವಾರಕೆಯಲ್ಲಿಡು.

ಈ ಸಭೆಯಲ್ಲಿ ಸಾವಿರಾರು ಯಾದವರು ಕುಳಿತುಕೊಳ್ಳುವಂತಾಗಲಿ. ಯಾವ ದೇವಸಭೆಯು ನೂರೈವತ್ತು ಯೋಜನ ಉದ್ದ, ನೂರು ಯೋಜನ ಅಗಲ, ಐದು ಯೋಜನ ಎತ್ತರವಿದ್ದು, ನಾಶರಹಿತವೂ, ಇಚ್ಛೆ ಬಂದಲ್ಲಿಗೆ ಹೋಗುವಂತಹುದು, ಕಾಮರೂಪಧರಿಸುವಂತಹ ಮಹಾಸಭೆಯು ಸ್ವರ್ಗದಲ್ಲಿರುವ ದೇವತೆಗಳನ್ನು ಧರಿಸಿದಂತೆ ದ್ವಾರವತಿಯಲ್ಲಿರುವ ಸಮಸ್ತ ಯಾದವರನ್ನು ಧರಿಸಲಿ ಎಂದನು.

ಯಾವುದೇ ಕರ್ಮವನ್ನು ಅನಾಯಾಸವಾಗಿ ಮಾಡುವ ನಿಸ್ಸೀಮ ಪೌರುಷವುಳ್ಳ ವಾಯುದೇವನು ಸ್ವರ್ಗಕ್ಕೆ ಹೋಗಿ, ಶ್ರೀಕೃಷ್ಣನ ಆದೇಶ ಹೇಳಿ ಅವರ ಅನುಮತಿಯಿಂದ ಸುಧರ್ಮ ಸಭೆಯನ್ನು ಎತ್ತಿಕೊಂಡು ಬಂದನು. ಶ್ರೀಕೃಷ್ಣನಿಗೆ ಆ ಸಭೆಯನ್ನೂ ಹಾಗೂ ಶಂಖನಿಧಿ ಹೊರತು ಉಳಿದ ಪದ್ಮ

ಮಹಾಪದ್ಮ ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ಖರ್ವವೆಂಬ **ಎಂಟು ನಿಧಿ**[1]ಗಳನ್ನೂ ವಾಯುದೇವನು ತಂದು ಅರ್ಪಿಸಿದನು.

**ಏವಂ ದಿವ್ಯೈಶ್ಚ ಭೋಗೈಶ್ಚ ಜಲಜೈಶ್ಚಾವ್ಯಯೋ ಹರಿಃ ।**
**ದ್ರವ್ಯೈರಲಂಕರೋತಿ ಸ್ಮ ಪುರೀಂ ಸ್ವಾಂ ಪ್ರಮದಾಮಿವ ॥ 43 ॥**
**ಉಗ್ರಸೇನಂ ನರಪತಿಂ ಕಾಶ್ಯಂ ಚಾಪಿ ಪುರೋಹಿತಮ್ ।**
**ಸೇನಾಪತಿಮನಾಧೃಷ್ಟಿಂ ವಿಕದ್ರುಂ ಮಂತ್ರಿ ಪುಂಗವಮ್ ॥ 44 ॥**
**ಯಾದವಾನಾಂ ಕುಲಕರಾನ್ ಸ್ಥವಿರಾನ್ ದಶ ತತ್ರ ವೈ ।**
**ಮತಿಮಾನ್ ಸ್ಥಾಪಯಾಮಾಸ ಸರ್ವಕಾರ್ಯೇಷ್ವನಂತರಾನ್ ॥ 45 ॥**

ಶ್ರೀಕೃಷ್ಣನು ಹನ್ನೆರಡು ಯೋಜನಗಳಿರುವ ದ್ವಾರಾವತಿಯ ಮಧ್ಯದಲ್ಲಿ ಒಂದು ಯೋಜನ ಉದ್ದ ಅಗಲವಿರುವ ಸುಧರ್ಮಸಭೆಯ ಭಾಗವನ್ನು ದ್ವಾರವತಿಯ ಮಧ್ಯೆ ಸ್ಥಾಪಿಸಿದ. ಇದು ದೇವತೆಗಳ ಸಭೆಯಂತೆ ಯಾದವರ ಸಭೆಯಾಯಿತು. ಶ್ರೀಕೃಷ್ಣನು ಸಮುದ್ರದಲ್ಲಿ ಸಿಗುವ ರತ್ನಗಳಿಂದ ಪ್ರಮದೆಯನ್ನು ಅಲಂಕರಿಸುವಂತೆ ಅನೇಕ ವಸ್ತುಗಳಿಂದ ದ್ವಾರಾವತಿಯುನ್ನು ಅಲಂಕರಿಸಿದನು. ಯಾದವರೆಲ್ಲರನ್ನೂ ಧರ್ಮದ ಚೌಕಟ್ಟಿನಲ್ಲಿರುವಂತೆ ಮಾಡಿದ್ದನು. ವ್ಯಾಪಾರಿಗಳು, ಸೇನಾಪತಿಗಳು, ಪ್ರಜಾಶಾಸಕರ ಯಾರೂ ಧರ್ಮದ ಎಲ್ಲೆ ಮೀರುವಂತಿರಲ್ಲಿಲ್ಲ.

ಉಗ್ರಸೇನನು ದ್ವಾರಕೆಯ ರಾಜನಾದನು. ಕಾಶಿಯಲ್ಲಿದ್ದು ಮುಂದೆ ಆವಂತಿ ದೇಶದಲ್ಲಿ ವಾಸಮಾಡುತ್ತಿದ್ದ ಸಾಂದೀಪಿನೀ ಆಚಾರ್ಯರನ್ನು ಪುರೋಹಿತರನ್ನಾಗಿ ಮಾಡಿದ. ಅನಾಧೃಷ್ಟಿಯನ್ನು ಸೇನಾಪತಿಯನ್ನಾಗಿ ಮಾಡಿದನು. ವಿಕದ್ರುವು ಪ್ರಧಾನಮಂತ್ರಿಯಾದನು. ನಂತರ ಧೀಮಂತನಾದ ಶ್ರೀಕೃಷ್ಣನು ಕಾರ್ಯಗಳ ಸಲಹೆ ನೀಡಲೆಂದು ಉದ್ಧವ, ಕಂಕ, ವಸುದೇವ,

---

1. **ನಿಧಿ ಸಮರ್ಪಣೆ:**
**ನಿಧೀನ್ ಸಮರ್ಪ್ಯ ಸರ್ವಶಃ ಯಯೌ ಪ್ರಣಮ್ಯ ತಂ ಯಯೌ॥**–*ತಾ.ನಿ. 17/115*
**ಗೃಹೀತ್ವಾ ಶಾಸನಂ ದೇವಃ ನಿಧಿರಾಟ್ ಕೇಶವಸ್ಯ ಹ** – ಎಂದು ಹರಿವಂಶದಲ್ಲಿರುವ ನಿಧಿರಾಟ್ ಎಂದರೆ ಶಂಖನಿಧಿಯೂ ಹಾಗೂ ವಾಯುದೇವನೂ ವಿವಕ್ಷಿತವಾಗಿದ್ದಾರೆ. ಶಂಖನಿಧಿ ಒಂದು ಭಾಗ ನೀಡಿದರೆ ವಾಯುದೇವನು ಉಳಿದ ನಿಧಿಗಳನ್ನೂ ಅರ್ಪಿಸಿದನೆಂದು ತಿಳಿಯಬೇಕು. ಇದನ್ನೆ ಆಚಾರ್ಯರು *'ಸರ್ವಶಃ'* ಎಂದಿದ್ದಾರೆ.

ವಿಪೃಥು ಶ್ವಫಲ್ಕ ಚಿತ್ರಕ. ಗದ. ಸತ್ಯ ಬಲಭದ್ರ ಹಾಗೂ ಪೃಥು ಹತ್ತು ಮಂದಿ ಉಪಮಂತ್ರಿಗಳನ್ನಾಗಿ ನೇಮಿಸಿದನು.

## ರೇವತೀ–ಬಲರಾಮ ಕಲ್ಯಾಣ

**ರಥೇಷ್ವತಿರಥೋ ಯಂತಾ ದಾರುಕಃ ಕೇಶವಸ್ಯ ವೈ ।**
**ಯೋಧಮುಖ್ಯಶ್ಚ ಯೋಧಾನಾಂ ಪ್ರವರಃ ಸಾತ್ಯಕಿಃ ಕೃತಃ ॥ 46 ॥**

**ರೇವತಸ್ಯಾಥ ಕನ್ಯಾಂ ಚ ರೇವತೀಂ ಶೀಲ ಸಂಮತಾಮ್ ।**
**ಪ್ರಾಪ್ತವಾನ್ ಬಲದೇವಸ್ತು ಕೃಷ್ಣಸ್ಯಾನುಮತೇ ತದಾ ॥ 47 ॥**

ಶ್ರೀಕೃಷ್ಣನ ರಥದ ಸಾರಥಿಯಾಗಿ ದಾರುಕನಿದ್ದನು. ಯೋಧ ಮುಖ್ಯರಲ್ಲಿ ಮಹಾಯೋಧನಾದ ಸಾತ್ಯಕಿಯು ಯೋಧರಲ್ಲಿ ಪ್ರಧಾನನಾಗಿದ್ದನು. ಹೀಗೆ ಶ್ರೀಕೃಷ್ಣನು ರಾಜ್ಯ ತಂತ್ರ ನಡೆಸಲು ವ್ಯವಸ್ಥೆಗೊಳಿಸಿ ಸಂತೋಷದಿಂದ ಇದ್ದನು. ಬಲರಾಮನು ಶ್ರೀಕೃಷ್ಣನ ಅನುಮತಿಯಂತೆ ರೇವತನ ಮಗಳಾದ ರೈವತಿಯನ್ನು ವಿವಾಹವಾದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ದ್ವಾರಕ ನಿರ್ಮಾಣ"ವೆಂಬಲ್ಲಿ
ಐವತ್ತೆಂಟನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥





## ಅಥ ಏಕೋನಷಷ್ಟಿತಮೋऽಧ್ಯಾಯಃ

*ವೈಶಂಪಾಯನ ಉವಾಚ-*

ಏತಸ್ಮಿನ್ನೇವ ಕಾಲೇ ತು ಜರಾಸಂಧಃ ಪ್ರತಾಪವಾನ್ ।
ನೃಪಾನ್ ಉದ್ಯೋಜಯಾಮಾಸ ಚೇದಿರಾಜ ಪ್ರಿಯೇಪ್ಸಯಾ ॥ 1 ॥
ಸುತಾಯಾಃ ಭೀಷ್ಮಕಸ್ಯಾಥ ರುಕ್ಮಿಣ್ಯಾಃ ರುಗ್ಮಭೂಷಣಃ ।
ಶಿಶುಪಾಲಸ್ಯ ನೃಪತೇಃ ವಿವಾಹೋ ಭವಿತಾ ಕಿಲ ॥ 2 ॥
ದಂತವಕ್ತ್ರಸ್ಯ ತನಯಂ ಸುವಕ್ತ್ರಂ ಅಮಿತೌಜಸಮ್ ।
ಪೌಂಡ್ರಸ್ಯ ವಾಸುದೇವಸ್ಯ ತನಯಂ ಚ ಮಹಾಬಲಮ್ ॥ 3 ॥

ಜನಮೇಜಯ! ಇದೇ ಸಮಯಕ್ಕೆ ಸರಿಯಾಗಿ ಜರಾಸಂಧನು ಚೇದಿರಾಜನೂ, ತನಗೆ ದತ್ತು ಮಗನೂ ಆದ ಶಿಶುಪಾಲನಿಗೆ ಪ್ರಿಯವುಂಟು ಮಾಡಲು ರಾಜರೆಲ್ಲರನ್ನೂ ಒಂದು ಕಡೆ ಸೇರಿಸಿದನು.

ಚೇದಿರಾಜ ಶಿಶುಪಾಲನಿಗೆ ಸಾಲಂಕೃತ ರುಗ್ಮಿಣಿ ವಿವಾಹವಾಗುತ್ತದೆ ಎಂದು ರಾಜರೆಲ್ಲರಿಗೂ ರಾಯಸ ಕಳುಹಿಸಿದನು. ಮಹಾಮಾಯಾವಿ ದಂತವಕ್ತ್ರನ ಪುತ್ರ ಸುವಕ್ತ್ರನನ್ನು, ಪೌಂಡ್ರಕ ವಾಸುದೇವನ ಮಗ ಸುದೇವನನ್ನು, ಏಕಲವ್ಯ ಮಗನನ್ನೂ, ಪಾಂಡ್ಯನ ಮಗ, ಕಲಿಂಗಾಧಿಪತಿಯನ್ನು, ವೇಣುಧಾರಿಯನ್ನೂ ಅಂಶುಮಂತ, ಶ್ರುತಧರ್ಮ, ಕಲಿಂಗರಾಜ, ಗಾಂಧಾರರಾಜ, ಕೌಶಾಂಬಿ ರಾಜರನ್ನು ಬಲಾತ್ಕಾರವಾಗಿ ಕರೆಸಿಕೊಂಡನು.

ಭಗದತ್ತ, ಭೂರಿಶ್ರವಸ್, ಕುಂತೀ ವೀರ್ಯ ಮೊದ ರಾಜರು ಶಿಶುಪಾಲನ ದಿಬ್ಬಣದಲ್ಲಿ ಭಾಗವಹಿಸಲು ಬಂದರು.

## ರುಗ್ಮಿಯ ಜನ್ಮ

**ಕಸ್ಮಿನ್ ದೇಶೇ ನೃಪೋ ಜಜ್ಞೇ ರುಗ್ಮೀ ವೇದವಿದಾಂ ವರಃ ।**
**ಕಸ್ಯಾನ್ವವಾಯೇ ದ್ಯುತಿಮಾನ್ ಸಂಭೂತೋ ದ್ವಿಜಸತ್ತಮ ॥ 4 ॥**

ವೈಶಂಪಾಯನಿಗೇ ! ರುಗ್ಮಿಯು ಯಾವ ದೇಶದವನು ಯಾವ ಕುಲ ಎಂಬುದನ್ನು ಹೇಳ. ರಾಜನೇ! ಯಾದವನಿಗೆ ವಿದರ್ಭ ರಾಜನು ಮಗನಾದನು. ಅವನ ದೇಶ ವಿದರ್ಭ. ವಿದರ್ಭನಿಗೆ ಕ್ರಥ ಕೈಶಿಕರು ಮಕ್ಕಳಾದರು. ಇವರಿಂದ ಪ್ರತ್ಯೇಕ ಪ್ರತ್ಯೇಕ ವಂಶಗಳ ಹುಟ್ಟಿದವು. ಯಾದವನಿಂದಲೇ ಭೀಮಕುಲ ಹುಟ್ಟಿತು. ಕ್ರಥನಿಗೆ ಅಂಶುಮಂತನೂ, ಕೈಶಿಕನಿಗೆ ಭೀಷ್ಮಕನು ಜನಿಸಿದರು. ಭೀಷ್ಮಕನಿಗೆ 'ಹಿರಣ್ಯರೋಮ'ನೆಂದೂ, ದಾಕ್ಷಿಣಾತ್ಯೇಶ್ವರನೆಂದೂ ಕರೆಯುತ್ತಿದ್ದರು. ಭೀಷ್ಮಕನ ಕುಂಡಿನಪುರದಲ್ಲಿದ್ದುಕೊಂಡು ಅಗಸ್ತ್ಯ ಋಷಿಯಿಂದ ರಕ್ಷಿತವಾದ ದೇಶಗಳನ್ನು ಪಾಲಿಸುತ್ತಿದ್ದನು. ಇವನಿಗೆ ರುಗ್ಮೀ ಎಂಬ ಮಗನೂ ರುಗ್ಮಿಣೀಯೆಂಬ ಸಾಕ್ಷಾತ್ ಲಕ್ಷ್ಮೀ ಸ್ವರೂಪಳಾದ ಮಗಳೂ ಹುಟ್ಟಿದರು. ರುಗ್ಮಿಯು ದ್ರುಮ ರಾಜನಿಂದ ದಿವ್ಯಾಸ್ತ್ರಗಳನ್ನೂ, ಪರಶುರಾಮನಿಂದ ಬ್ರಹ್ಮಾಸ್ತ್ರವನ್ನೂ ಪಡೆದುಕೊಂಡನು. ಆದರೆ ದುರಂಹಕಾರಿಯಾದ ರುಗ್ಮಿಯು ಶ್ರೀಕೃಷ್ಣನೊಂದಿಗೆ ಸ್ಪರ್ಧೆ ಮಾಡುತ್ತಿದ್ದನು.

**ರುಗ್ಮಿಣೀ ತ್ವಭವದ್ ರಾಜನ್ ರೂಪೇಣಾಸದೃಶೀ ಭುವಿ ।**
**ಚಕಮೇ ವಾಸುದೇವಸ್ತಾಂ ಶ್ರವಾದೇವ ಮಹಾದ್ಯುತಿಃ ॥ 5 ॥**

**ಸ ತಯಾ ಚಾಭಿಲಷಿತಃ ಶ್ರವಾದೇವ ಜನಾರ್ದನಃ ।**
**ತೇಜೋ ವೀರ್ಯ ಬಲೋಪೇತಃ ಸ ಮೇ ಭರ್ತಾ ಭವೇದಿತಿ ॥ 6 ॥**

**ತಾಂ ದದೌ ನ ಚ ಕೃಷ್ಣಾಯ ದ್ವೇಷಾದ್ ರುಗ್ಮೀ ಮಹಾಬಲಃ ।**
**ಚೈದ್ಯಸ್ಯಾರ್ಥೇ ಸುನೀಥಸ್ಯ ಜರಾಸಂಧಸ್ತು ಭೂಮಿಪಃ ।**
**ವರಯಾಮಾಸ ತಾಂ ರಾಜಾ ಭೀಷ್ಮಕಂ ಭೀಮವಿಕ್ರಮಮ್ ॥ 7 ॥**

ರುಗ್ಮಿಣಿಯು ಸುಗುಣಮಣಿಯೂ ರೂಪವತಿಯೂ ಗುಣವತಿಯೂ ಸಾಧ್ವಿಯೂ ಆಗಿದ್ದಳು. ಇವಳ ಗುಣಗಳನ್ನು ಕೇಳ ಶ್ರೀಕೃಷ್ಣನು ಅವಳನ್ನು ವರಿಸಲಚ್ಛಿಸಿದನು.

ಅವನು ಇವಳನ್ನಿಚ್ಛಿಸಿದಂತೆ ರುಗ್ಮಿಣಿಯೂ ಶ್ರೀಕೃಷ್ಣನ ತೇಜೋಬಲ

ವೀರ್ಯಗಳನ್ನು ಕೇಳಿದ್ದ ರುಗ್ಮಿಣಿಯೂ ತನಗೆ ಶ್ರೀಕೃಷ್ಣನೇ ಪತಿಯಾಗಬೇಕೆಂದು ಇಚ್ಛಿಸಿದ್ದಳು.

ಆದರೆ ರುಗ್ಮಿಯು ಮಾತ್ರ ಶ್ರೀಕೃಷ್ಣನು ಕಂಸನನ್ನು ಕೊಂದದ್ದರಿಂದ ಅಸಮಾಧಾನ ಹೊಂದಿದ್ದು ಆ ದ್ವೇಷದಿಂದಲೇ ಕೃಷ್ಣನಿಗೆ ರುಗ್ಮಿಣಿಯನ್ನು ಕೊಡಲಿಚ್ಛಿಸದೆ. ಅವನು ಯಾಚಿಸಿದರೂ ತಂಗಿಯನ್ನು ಕೊಡಬಾರದೆಂದು ತೀರ್ಮಾನಿಸಿದ್ದನು.

ಇತ್ತ ಜರಾಸಂಧನಾದರೂ ತನ್ನ ಸಾಕಮಗನಾದ ಶಿಶುಪಾಲನಿಗೆ ರುಗ್ಮಿಣಿಯನ್ನು ವಿವಾಹ ಮಾಡಿಕೊಡೆಂದು ಭೀಷ್ಮಕನನ್ನು ಬೇಡಿದ್ದನು.

**ಜರಾಸಂಧ ಪೂರ್ವೇತಿಹಾಸ**

ಹಿಂದೆ ಚೇದಿರಾಜನಾದ ಉಪರಿಚರ ವಸುವಿನ ಪುತ್ರನು ಬೃಹದ್ರಥನು ಅವನು ಮಗಧರಾಜ್ಯ 'ಗಿರಿವ್ರಜ'ವೆಂಬ ಪಟ್ಟಣ ನಿರ್ಮಿಸಿದ್ದನು. ಅವನ ಮಗನೇ ಜರಾಸಂಧ.

ಉಪರಿಚರವಸುವಿನ ವಂಶದಲ್ಲಿಯೇ ಚೇದಿರಾಜ ದಮಘೋಷನು ಹುಟ್ಟಿದನು. ದಮಘೋಷನು ವಸುದೇವನ ತಂಗಿಯಾದ 'ಶ್ರುತಶ್ರವೆ'ಯನ್ನು ಮದುವೆಯಾಗಿ ಶಿಶುಪಾಲ, ದಶಗ್ರೀವ, ರೈಭ್ಯ, ಉಪದಿಶ, ಬಲಿ ಎಂಬ ಐವರು ಪುತ್ರರನ್ನು ಪಡೆದನು. ಶಿಶುಪಾಲ-ಜರಾಸಂಧ ಒಂದೇ ವಂಶದವರು. ಇದರಿಂದಾಗಿ ದಮಘೋಷನು ಶಿಶುಪಾಲನನ್ನು ಜರಾಸಂಧನಿಗೆ ನೀಡಿ ಇವನ ಭಾರವೆಲ್ಲ ನಿನ್ನದೆ ಎಂದು ಹೇಳಿ, ಅವನ ಕೈಯ್ಯಲ್ಲಿಟ್ಟನು. ಜರಾಸಂಧನಾದರೂ ಶಿಶುಪಾಲನನ್ನು ತನ್ನ ಮಗನಂತೆ ನೋಡುತ್ತಿದ್ದನು. ಚೇದಿರಾಜನೂ ಸಹ ಜರಾಸಂಧನನ್ನು ಮೆಚ್ಚಿಸಲು ವೃಷ್ಣಿಗಳನ್ನು ತೊಂದರೆಗೀಡು ಮಾಡಿದ್ದನು. ಕಂಸನನ್ನು ಕೊಂದಾಗ ಜರಾಸಂಧನಿಗೆ ವೃಷ್ಣಿಗಳ ದ್ವೇಷವುಂಟಾಯಿತು. ಜರಾಸಂಧನು ತನ್ನ ಸಾಕುಮಗನಿಗೆ ರುಗ್ಮಿಣಿಯನ್ನು ಕೇಳಿದ್ದು ಸಹಜವೆ ಆಗಿದೆ. ಭೀಷ್ಮಕನೂ ಸಹ ಮಗಳನ್ನು ಶಿಶುಪಾಲನಿಗೆ ಕೊಡಲು ವಾಗ್ದಾನ ಮಾಡಿದ್ದನು.

**ತತೋ ಚೈದ್ಯ ಮುಪಾದಾಯ ಜರಾಸಂಧೋ ನರಾಧಿಪಃ ।**
**ಯಯೌ ವಿದರ್ಭಾನ್ ಸಹಿತೋ ದಂತವಕ್ರೇಣ ಯಾಯಿನಾ ॥ 8 ॥**

**ಪಿತೃಷ್ವಸುಃ ಪ್ರಿಯಾರ್ಥಂ ಚ ರಾಮ ಕೃಷ್ಣಾವುಭಾವಪಿ ।**
**ಪ್ರಯಯುಃ ವೃಷ್ಣಯಶ್ಚಾನ್ಯೇ ರಥೈಃ ತತ್ರ ಬಲಾನ್ವಿತಾಃ ॥ 9 ॥**

ರಾಜರೆಲ್ಲರೂ ಶಿಶುಪಾಲನ ವಿವಾಹದ ವಾರ್ತೆ ಕೇಳಿ ಅವರೂ ಹೊರಟರು. ಜರಾಸಂಧನೂ ಸಹ ದಂತವಕ್ತ್ರನೊಂದಿಗೆ ಶಿಶುಪಾಲನನ್ನು ಕರೆದುಕೊಂಡು ವಿದರ್ಭಕ್ಕೆ ಹೊರಟ. ಅಂಗ, ವಂಗ, ಕಲಿಂಗರೂ ಪೌಂಡ್ರಕ ವಾಸುದೇವಾದಿಗಳೂ ಇದಕ್ಕೆ ಸಮ್ಮತಿಸಿದ್ದರು.

ಜರಾಸಂಧನ ಸಾಕುಮಗನೊಂದಿಗೆ ಬಂದಿದ್ದ ಜರಾಸಂಧಾದಿಗಳಿಗೆ ರುಗ್ಮಿಯು ಪುರದ್ವಾರಕ್ಕೆ ಹೋಗಿ ಸಕಲವೈಭವದೊಂದಿಗೆ ಗೌರವ ಮಾಡಿ ಕರೆತಂದನು.

ಶ್ರೀಕೃಷ್ಣ–ಬಲರಾಮರೂ ತಮ್ಮ ಸೋದರತ್ತೆಯಾದ ಶ್ರುತಶ್ರವೆಗೆ ಪ್ರೀತಿವುಂಟು ಮಾಡಲು ವಿದರ್ಭ ದೇಶಕ್ಕೆ ಹೊರಟರು.

ಭೀಷ್ಮಕನಾದರೂ ಪೂಜಾರ್ಹರಾದ ರಾಜರೆಲ್ಲರನ್ನೂ ವಿಧಿವತ್ತಾಗಿ ಗೌರವಿಸಿ ತಮಗಾಗಿಯೇ ಇರಿಸಿದ್ದ ಬಿಡಾರಗಳಲ್ಲಿ ವಾಸ ಮಾಡಲು ಕಲ್ಪಿಸಿದ್ದನು.

## ರುಗ್ಮಿಣಿಯ ಕುಲದೇವಿಪೂಜೆ

ಶ್ಲೋ॥ ಭಾವಿನಿ ವಿವಾಹೇ ಚ ರುಗ್ಮಿಣೀ ನಿರ್ಯಯೌ ಬಹಿಃ ।
ಚತುರ್ಯುಜಾ ರಥೇನೈಂದ್ರೀ ದೇವತಾಯತನೇ ಶುಭೇ ॥ 10 ॥

ಇಂದ್ರಾಣೀಮರ್ಚಯಿಷ್ಯಂತೀ ಕೃತಕೌತುಕಮಂಗಲಾ ।
ದೀಪ್ಯಮಾನೇನ ವಪುಷಾ ಬಲೇನ ಮಹತಾ ವೃತಾ ॥ 11 ॥

ರುಗ್ಮಿಣಿಯ ವಿವಾಹ ನಾಳೆ ನಡೆಯುವುದರಲ್ಲಿತ್ತು. ರಾಜಕುಮಾರಿ ರುಗ್ಮಿಣಿಯು ದೇದೀಪ್ಯಮಾನವಾದ ಶರೀರಕಾಂತಿಯಿಂದ ಬೆಳಗುತ್ತಾ ಊರ ಹೊರಗಿರುವ ಇಂದ್ರಾಣೀ ದೇವಾಲಯದಲ್ಲಿ ಕುಲದೇವಿ ಪೂಜೆಗಾಗಿ ಹೊರಟಳು. ಚತುರಶ್ವಗಳಿಂದ ಎಳೆಯಲ್ಪಡುವ ರಥದಲ್ಲಿ ಕುಳಿತು ಅಂಗರಕ್ಷಕ ಭಾರೀ ಸೈನ್ಯದಿಂದ ಸುತ್ತುವರೆಯಲ್ಪಟ್ಟಿದ್ದಳು. ಗುಣಜ್ಯೇಷ್ಠನಾದ ಶ್ರೀಕೃಷ್ಣನನ್ನು ಹೊಂದಲು ಜ್ಯೇಷ್ಠಾನಕ್ಷತ್ರದಲ್ಲಿ ಹೊರ ಹೊರಟಳು.

## ವರವರನಿಗೆ ನವವಧು ದರ್ಶನ

ತಾಂ ದದರ್ಶ ತದಾ ಕೃಷ್ಣೋ ಲಕ್ಷ್ಮೀಂ ಸಾಕ್ಷಾದಿವ ಸ್ಥಿತಾಮ್ ।
ರೂಪೇಣಾಗ್ರ್ಯೇಣ ಸಂಪನ್ನಾಂ ದೇವತಾಯತನಾಂತಿಕೇ ॥ 12 ॥

ಶ್ರೀಮಿವಾಗ್ರ್ಯಾಂ ವಿನಾ ಪದ್ಮಂ ಭವಿಷ್ಯಾಂ ಶ್ರೀ ಸಹಾಯಿನೀಮ್ ।
ಕೃಷ್ಣೇನ ಮನಸಾ ದೃಷ್ಟಾಂ ದುರ್ನಿರೀಕ್ಷ್ಯಾಂ ಸುರೈರಪಿ ॥ 13 ॥

ಇಂದ್ರಾಣೀ ದೇವಾಲಯದ ಸಮೀಪದಲ್ಲಿ ಸಾಕ್ಷಾಲ್ಲಕ್ಷ್ಮೀದೇವಿಯಂತೆ ಕಾಣುತ್ತಿರುವ, ಸೌಂದರ್ಯಾದಿ ಗುಣೋನ್ನತಳಾದ ಕಡುಚೆಲುವೆಯನ್ನು ಶ್ರೀಕೃಷ್ಣನು ನೋಡಿದನು. ಅಗ್ನಿಜ್ವಾಲೆಯಂತೆಯೂ, ಭೂಗತ ದೇವಮಾಯ ಭೂದೇವಿಯಂತೆ ಇರುವವಳೂ ಚಂದ್ರನ ಕಾಂತಿಯೇ ಮೂರ್ತಿಮತ್ತಾಗಿ ಬಂದಿರುವ ರುಗ್ಮಿಣಿಯನ್ನು ನೋಡಿದನು. ಕೈಯಲ್ಲಿ ಕಮಲವಿಲ್ಲದಿರುವ ಕಮಲನೇತ್ರೆಯಾದ ರುಗ್ಮಿಣಿಯನ್ನು ನೋಡಿದನು.

**ಅನನ್ಯಾ ಪ್ರಮದಾಲೋಕೇ ರೂಪೇಣ ಯಶಸಾ ಶ್ರಿಯಾ ।**
**ರುಗ್ಮಿಣೀ ರೂಪಿಣೀ ದೇವೀ ಪಾಂಡುರಕ್ಷೌಮವಾಸಿನೀ ॥ 14 ॥**
**ತಾಂ ದೃಷ್ಟ್ವಾ ವವೃಧೇ ಕಾಮಃ ಕೃಷ್ಣಸ್ಯ ಪ್ರಿಯದರ್ಶನಾಮ್ ।**

ಹದಿನಾರು ವಯಸ್ಸಿನವಳೂ, ವಿಶಾಲ ಹರಿಣದಂತೆ ನೇತ್ರಗಳೂ, ತಾಮ್ರ ತುಟಿಗಳೂ, ಯೌವನ ತುಂಬಿದ ಸ್ತನ ನಿತಂಬಗಳುಳ್ಳವಳೂ ಸರ್ವಾಂಗ ಸುಂದರಳೂ, ಚಂದ್ರಮುಖಿಯೂ, ರಕ್ತವರ್ಣದ ಉಗುರುಗಳೂ, ಸುಭ್ರುವೂ, ಅಸಿತ ಹಾಗೂ ಉಂಗುರು ಕೂದಲುಳ್ಳವಳೂ ಬಿಳುಪಾದ, ಸಮವಾದ, ಕಾಂತಿಯುಕ್ತ ದಂತಸಾಲುಗಳೂ ರೂಪ ಕಾಂತಿಗಳಿಂದ ಇವಳಿಗೆ ಸಮಳೆಂದರೆ ಲಕ್ಷ್ಮೀದೇವಿಯೊಬ್ಬಳೆ ಅಂತಹ ಸ್ತ್ರೀರತ್ನವನ್ನು ಪುರುಷರತ್ನ ಶ್ರೀಕೃಷ್ಣ ನೋಡಿದ. ಬಿಳಿ ಸೀರೆಯುಟ್ಟ ಇವಳನ್ನು ನೋಡಿದ ಕೂಡಲೇ ತುಪ್ಪದ ಆಹುತಿ ಹಾಕಿದ ಕೂಡಲೇ ಜ್ವಾಲೆಯು ವೃದ್ಧಿಸುವಂತೆ ಭಕ್ತಳಾದ ಇವಳ ಇಚ್ಛೆಯನ್ನು ನಾನು ಕೂಡಲೇ ಪೂರ್ತಿ ಮಾಡಬೇಕೆಂಬುವ ಇಚ್ಛೆ ವೃದ್ಧಿಯಾಯಿತು.

## ರಾಮನೊಂದಿಗೆ ಮಂತ್ರಾಲೋಚನೆ – ಅಪಹರಣ

**ರಾಮೇಣ ಸಹ ನಿಶ್ಚಿತ್ಯ ಕೇಶವಸ್ತು ಮಹಾಬಲಃ ।**
**ತತ್ ಪ್ರಮಾಥೇಽಕರೋದ್ ಬುದ್ಧಿಂ ವೃಷ್ಣಿಭಿಃ ಪ್ರಣಿಧಾಯ ಚ ॥ 15 ॥**
**ಕೃತೇ ತು ದೇವತಾ ಕಾರ್ಯೇ ನಿಷ್ಕ್ರಾಮಂತೀಂ ಸುರಾಲಯಾತ್ ।**
**ಉನ್ಮಥ್ಯ ಸಹಸಾ ಕೃಷ್ಣಃ ಸ್ವಂ ನಿನಾಯ ರಥೋತ್ತಮಮ್ ॥ 16 ॥**

ಶ್ರೀಕೃಷ್ಣನು ಬಲರಾಮ ವೃಷ್ಣಿಗಳೊಂದಿಗೆ ತನ್ನ ಕರ್ತವ್ಯವನ್ನು ಚಿಂತಿಸಿ, ರುಗ್ಮಿಣಿಯನ್ನು ಅಪಹಾರ ಮಾಡುವುದೇ ಯೋಗ್ಯವೆಂದರಿತನು.

ಇಂದ್ರಾಣಿದೇವಿಯ ಪೂಜೆ ಮುಗಿಸಿಕೊಂಡು ರುಗ್ಮಿಣಿಯು ದೇವಾಲಯದಿಂದ

ಹೊರಗೆ ಬಂದಳು. ಕೂಡಲೇ ರುಗ್ಮಿಣಿಯನ್ನು ಅನಾಮತ್ತಾಗಿ ಎತ್ತಿಕೊಂಡು ತನ್ನ ರಥದ ಸಮೀಪ ಹೊರಟನು. ಅದೇ ಸಂದರ್ಭದಲ್ಲಿ ಅವಳ ಅಂಗರಕ್ಷಕದಳದವರೆಲ್ಲರೂ ಅವನ ಮೇಲೆ ಯುದ್ಧಕ್ಕೆ ಸಿದ್ಧರಾದರು. ಬಲರಾಮನು ವೃಕ್ಷದ ಕೊಂಬೆಯೊಂದನ್ನು ತೆಗೆದುಕೊಂಡು ಅದರಿಂದ ಹೊಡೆದು ಸಂಹರಿಸಿದನು. ಚತುರಂಗ ಬಲ ಸಹಿತ ಬಲರಾಮನನ್ನು ಸುತ್ತುವರೆದರು. ಶ್ರೀಕೃಷ್ಣನು ಯುದ್ಧ ಮಾಡಲು ಬಲರಾಮ-ಸಾತ್ಯಕಿಗಳಿಗೆ ಒಪ್ಪಿಸಿ, ರುಗ್ಮಿಣಿದೇವಿಯೊಂದಿಗೆ ಶೀಘ್ರವಾಗಿ ದ್ವಾರಕೆಗೆ ಬಂದು ಸೇರಿದನು.

ಇತ್ತ ಅಕ್ರೂರ, ಗದ, ವಿಪೃಥು, ಕೃತವರ್ಮ, ಚಕ್ರದೇವ, ಸುದೇವ, ಸಾರಣ, ನಿವೃತ್ತಶತ್ರು, ಭಂಗಕಾರ, ವಿದೂರಥ, ಕಂಕ, ಶತದ್ಯುಮ್ನ, ರಾಜಾಧಿದೇವ, ಪ್ರಸೇರ, ಚಿತ್ರಕ, ಅತಿದುರ್ಗ, ಶ್ವಫಲ್ಕ, ಸತ್ಯಕರೆಲ್ಲರೂ ಯುದ್ಧದಲ್ಲಿ ತೊಡಗಿದರು.

**ದಂತವಕ್ತ್ರೋ ಜರಾಸಂಧಃ ಶಿಶುಪಾಲಶ್ಚ ವೀರ್ಯವಾನ್ ।**
**ನಿರ್ಯಯೌ ಚೇದಿರಾಜಸ್ತು ಭ್ರಾತೃಭಿಃ ಸ ಮಹಾರಥೈಃ ॥ 17 ॥**

ವಿವಾಹ ಕನ್ಯೆಯನ್ನು ಶ್ರೀಕೃಷ್ಣನು ಅಪಹರಿಸಿಕೊಂಡು ಹೋದನೆಂಬ ವಾರ್ತೆ ಕೇಳಿದ ಕೂಡಲೇ ದಂತವಕ್ತ್ರ, ಶಿಶುಪಾಲ, ಜರಾಸಂಧಾದಿಗಳು ಯುದ್ಧಕ್ಕೆ ಹೋದರು.

ಸಾತ್ಯಕಿಯು ಜರಾಸಂಧನನ್ನು ಆರು ಬಾಣಗಳಿಂದಲೂ, ಅಕ್ರೂರನು ದಂತವದನನನ್ನು ಒಂಭತ್ತು ಬಾಣಗಳಿಂದಲೂ ಪ್ರಹರಿಸಿದನು. ದಂತವಕ್ತ್ರನು ಇವನಿಗೆ ಪ್ರತಿಯಾಗಿ ಹತ್ತು ನಾರಾಚಗಳನ್ನು ಬಿಟ್ಟು ಪ್ರಹರಿಸಿದನು. ಶಿಶುಪಾಲನು ವಿಪೃಥುವನ್ನು ಎಂಟು ಬಾಣಗಳಿಂದ ಹೊಡೆದನು. ಗವೇಷಣ, ಅತಿದಾಂತ, ಬೃಹದ್ದುರ್ಗನು ಕ್ರಮವಾಗಿ ಆರು, ಎಂಟು, ಐದು ಬಾಣಗಳಿಂದ ಶಿಶುಪಾಲನಿಗೆ ಹೊಡೆದರು. ಶಿಶುಪಾಲನು ಒಂದು ಬಾಣ ಬಿಟ್ಟು ಬೃಹದ್ದುರ್ಗನ ತಲೆ ಹಾರಿಸಿದನು.

ಈ ಮಧ್ಯ ಉಪೃಥುವು ತನ್ನ ನಾಶವಾದ ರಥ ಬಿಟ್ಟು ಬೃಹದ್ದುರ್ಗನ ರಥವೇರಿದನು. ವಿಪೃಥುವಿನ ಸಾರಥಿಯೂ ವೇಗವಾಗಿ ರಥವನ್ನು ಹತ್ತಿ ಕುದುರೆಗಳನ್ನು ನಿಯಂತ್ರಣಕ್ಕೊಳಪಡಿಸಿದನು. ಮಹಾಪರಾಕ್ರಮ ತೋರುತ್ತಿದ್ದ ಶಿಶುಪಾಲನನ್ನು ವೃಷ್ಣ್ಯಂಧಕರೆಲ್ಲ ಆಕ್ರಮಿಸಿದರು. ಚಕ್ರದೇವನು ದಂತವಕ್ತ್ರನ ಎದೆಗೆ ಹೊಡೆದನು. ಶಿಶುಪಾಲನ ತಮ್ಮ ಬಲಿಯು ಚಕ್ರದೇವನನ್ನು ಹತ್ತು ಬಾಣಗಳಿಂದ ಹೊಡೆದನು. ಕೃತವರ್ಮನು ಪೌಂಡ್ರಕವಾಸುದೇವನ

ಮಗನನ್ನು ಗಾಯಗೊಳಿಸಿ ಸಾರಥಿಯನ್ನು ಕೊಂದು ಹಾಕಿದನು. ಕಂಕನು ಗಜಾರೂಢನಾಗಿ ಅಂಗನನ್ನು ಅವನ ಆನೆಯನ್ನು ಹೊಡೆದನು. ಬಲರಾಮನು ವಂಗರಾಜನನ್ನು ಹಾಗೆ ಅವನ ಆನೆಯನ್ನೂ ಎಲೆಗಳನ್ನುದುರಿಸಿದ ರೆಂಬೆಯಿಂದ ಹೊಡೆದು ಕೊಂದನು. ಹಾಗೆಯೆ ಮಾಗಧರ ನೂರು ಮಂದಿ ಸೇನಾಪತಿಗಳನ್ನೂ ಸಂಹರಿಸಿದನು. ನಂತರ ಬಲದೇವನು ಜರಾಸಂಧನನ್ನು ಎದುರಿಸಿದನು. ಜರಾಸಂಧನು ಮೂರು ಬಾಣದಿಂದ ಬಲದೇವನನ್ನು ಹೊಡೆದನು. ಇವನು ಎಂಟು ಬಾಣಗಳಂದ ಜರಾಸಂಧನನ್ನು ಹೊಡೆದು ಧ್ವಜವನ್ನು ತುಂಡರಿಸಿದನು. ಎರಡು ಸೈನ್ಯಗಳ ಯುದ್ಧವು ದೇವಾಸುರ ಸಂಗ್ರಾಮವನ್ನು ನೆನಪು ತರುವಂತಿತ್ತು. ಉಭಯ ಪಕ್ಷದಲ್ಲಿಯೂ ಬಿಲ್ಲು ಬಾಣಗಳ ಶಬ್ಧಗಳು ಸಮರವಾದ್ಯಗಳನ್ನೆ ಮರೆಮಾಡಿತು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ರುಗ್ಮಿಣೀ ಅಪಹರಣ"ವೆಂಬಲ್ಲಿ
ಐವತ್ತೊಂಭತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 60 ವಿಷ್ಣುಪರ್ವ

# ಅಥ ಷಷ್ಟಿತಮೋಽಧ್ಯಾಯಃ

## ರುಗ್ಮಿಯ ಪರಾಜಯ

**ಕೃಷ್ಣೇನ ಹ್ರಿಯಮಾಣಾಂ ತಾಂ ರುಗ್ಮೀ ಶ್ರುತ್ವಾ ತು ರುಗ್ಮಿಣೀಮ್ ।**
**ಪ್ರತಿಜ್ಞಾಮಕರದ್ ಕ್ರುದ್ಧಃ ಸಮಕ್ಷಂ ಭೀಷ್ಮಕಸ್ಯ ಹ ॥ 1 ॥**
**ಅಹತ್ವಾ ಯುಧಿ ಗೋವಿಂದಂ ಅನಾನೀಯ ಚ ರುಗ್ಮಿಣೀಮ್ ।**
**ಕುಂಡಿನಂ ನ ಪ್ರವೇಕ್ಷ್ಯಾಮಿ ಸತ್ಯಮೇತದ್ ಬ್ರವೀಮ್ಯಹಮ್ ॥ 2 ॥**
**ಭೀಷ್ಮಕಸ್ಯ ಸುತಾಶ್ಚಾನ್ಯೇ ರಥೇನ ರಥಿನಾಂ ವರಾಃ ।**
**ಕ್ರಥ ಕೈಶಿಕಮುಖ್ಯಾಶ್ಚ ಸರ್ವ ಏವ ಮಹಾರಥಾಃ ॥ 3 ॥**
**ತೇ ಗತ್ವಾ ದೂರಮಧ್ವಾನಂ ಸರಿತಂ ನರ್ಮದಾಮನು ।**
**ಗೋವಿಂದಂ ದದೃಶುಃ ಕ್ರುದ್ಧಾಃ ಸಹೈವ ಪ್ರಿಯಯಾ ಸ್ಥಿತಮ್ ॥ 4 ॥**

ಜನಮೇಜಯರಾಜನೇ ಕೇಳು! ಶ್ರೀಕೃಷ್ಣನು ತನ್ನ ತಂಗಿಯಾದ ರುಗ್ಮಿಣೀಯನ್ನು ಅಪಹರಿಸಿಕೊಂಡು ಹೋದನೆಂಬ ವಾರ್ತೆ ಕೇಳಿ ಕೋಪದಿಂದ ಕಿಡಿಯಾಗಿ, ಭೀಷ್ಮಕನ ಮುಂದೆ ರುಗ್ಮಿಯು ಹೀಗೆ ಪ್ರತಿಜ್ಞೆಗೈದನು "ನಾನು ಗೋವಿಂದನನ್ನು ಯುದ್ಧದಲ್ಲಿ ಕೊಂದು ನನ್ನ ತಂಗಿಯನ್ನು ತಾರದೆ ಈ ಕುಂಡಿನಪುರ ಪ್ರವೇಶಿಸುವುದಿಲ್ಲ" ಎಂದು. ಹೀಗೆ ಪ್ರತಿಜ್ಞೆ ಮಾಡಿ, ಶ್ರೇಷ್ಠ ಅಸ್ತ್ರ ಸಜ್ಜಿತ ರಥದಲ್ಲಿ ಮಹಾಸೈನ್ಯದೊಂದಿಗೆ ಶ್ರೀಕೃಷ್ಣನನ್ನು ಹಿಡಿಯುವ ಸಲುವಾಗಿ ಅತಿವೇಗವಾಗಿ ಪ್ರಯಾಣ ಮಾಡಿದನು. ದಾಕ್ಷಿಣಾತ್ಯದ ಅನೇಕ ರಾಜರು, ಅಂಶುಮಂತ, ಶ್ರುತವರ್ಾಣನೂ, ವೇಣುಧಾರಿಗಳು, ಭೀಷ್ಮಕನ ಇತರ ಪುತ್ರರಾದ ರುಗ್ಮರಥ ರುಗ್ಮಬಾಹುಗಳೂ ಹೊರಟರು.

ಅವರೆಲ್ಲರೂ ಬಹಳ ದೂರ ಪ್ರಯಾಣ ಮಾಡಿ ನರ್ಮದಾ ನದಿಯ ತೀರದಲ್ಲಿ ರುಗ್ಮಿಣಿಯೊಂದಿಗೆ ಇದ್ದ ಶ್ರೀಕೃಷ್ಣನನ್ನು ಕಂಡರು.

**ಅವಸ್ಥಾಪ್ಯ ಚ ತತ್ ಸೈನ್ಯಂ ರುಗ್ಮೀ ಮದಬಲಾನ್ವಿತಃ ।**
**ಚಿಕೀರ್ಷುಃ ದ್ವೈರಥಂ ಯುದ್ಧಂ ಅಭ್ಯಯಾತ್ ಮಧುಸೂದನಮ್ ॥ 5 ॥**

ರುಗ್ಮಿಯು ಶ್ರೀಕೃಷ್ಣನೊಂದಿಗೆ ದ್ವಂದ್ವ ಯುದ್ಧವನ್ನು ಮಾಡಲೆಂದು ಬಲದರ್ಪಗಳಿಂದಾಗಿ ಹೊರಟನು. ಸೈನ್ಯವೆಲ್ಲವನ್ನೂ ಒಂದೆಡೆ ನಿಲ್ಲಿಸಿ ತಾನೊಬ್ಬನೆ ಹೊರಟನು.

### ರುಗ್ಮಿ-ಕೃಷ್ಣಯುದ್ಧ

ಶ್ರೀಕೃಷ್ಣನಿಗೂ ರುಗ್ಮಿಗೂ ಘೋರವಾದ ಯುದ್ಧವೇರ್ಪಟ್ಟಿತು. ರುಗ್ಮಿಯು ಅರವತ್ತನಾಲ್ಕು ಬಾಣದಿಂದ ಕೃಷ್ಣನಿಗೆ ಹೊಡೆದರೆ, ಕೃಷ್ಣನು ಎಪ್ಪತ್ತು ಬಾಣಗಳನ್ನು ರುಗ್ಮಿಗೆ ಎಸೆದನು. ಗೆಲ್ಲಬೇಕೆಂದು ಹವಣಿಸುತ್ತಿದ್ದ ರುಗ್ಮಿಯ ಧ್ವಜವನ್ನು ಕತ್ತರಿಸಿ, ಸಾರಥಿಯ ತಲೆ ಹಾರಿಸಿದನು. ರುಗ್ಮಿಯ ಸ್ಥಿತಿ ನೋಡಿ ಉಳಿದ ರಾಜರೆಲ್ಲ ಶ್ರೀಕೃಷ್ಣನನ್ನು ಆಕ್ರಮಿಸಿದರು. ಅಂಶುಮಂತ, ಶ್ರುತರ್ವಾಣ, ವೇಣುಧಾರಿಗಳು ಕ್ರಮವಾಗಿ ಹತ್ತು, ಐದು, ಏಳು ಬಾಣಗಳನ್ನು ಕೃಷ್ಣನ ಮೇಲೆ ಬಿಟ್ಟರು. ಪ್ರತಿಯಾಗಿ ಕೃಷ್ಣನು ಅಂಶುಮಂತನ ಎದೆಗೆ ಹೊಡೆದನು. ಈ ಪೆಟ್ಟಿನಿಂದಾಗಿ ಅಂಶುಮಂತ ಹಿಂದಕ್ಕೆ ಸರಿದನು.

ಹಾಗೆಯೇ ಶ್ರುತರ್ವಾಣನ ರಥದ ನಾಲ್ಕೂ ಕುದುರೆಗಳಿಗೂ ಚೂಪಾದ ಬಾಣಗಳಿಂದ ಹೊಡೆದು ವೇಣುಧಾರಿಯ ಧ್ವಜವನ್ನು ಕತ್ತರಿಸಿ, ಬಲಭುಜವನ್ನು ಹೊಡೆದು ಗಾಯಗೊಳಿಸಿದನು. ಶ್ರುತರ್ವಾಣನಿಗೂ ಐದು ಬಾಣಗಳಿಂದ ಹೊಡೆದನು. ಅವನು ಧ್ವಜದಂಡವನ್ನು ಹಿಡಿದು ದುಃಖಿತನಾಗಿ ಕುಳಿತನು.

ಕ್ರಥ ಕೈಶಿಕರು ಶ್ರೀಕೃಷ್ಣನ ಮೇಲೆ ಬಾಣಗಳ ಸುರಿಮಳೆ ಸುರಿಸಿದರು. ಕೃಷ್ಣನು ಅವುಗಳನ್ನೆಲ್ಲ ಮಾರ್ಗದಲ್ಲಿಯೇ ತುಂಡರಿಸಿದನು. ರುಗ್ಮಿಯ ಸೈನಿಕರ ಮೇಲೆ ಅರವತ್ತು ಬಾಣ ಪ್ರಯೋಗಿಸಿ ಪಲಾಯನ ಮಾಡುವಂತೆ ಮಾಡಿದನು. ಇದನ್ನು ನೋಡಿದ ರುಗ್ಮಿಯು ಅತೀಕ್ರುದ್ಧನಾಗಿ ಶ್ರೀಕೃಷ್ಣನಿಗೆ ಐದು ಬಾಣಗಳಿಂದ ಹೊಡೆದನು. ಶ್ರೀಕೃಷ್ಣನು ತನ್ನ ಬಾಣಗಳಿಂದ ಹೊಡೆದು ಗಾಯಗೊಳಿಸಿ ಅವನ ಧನುಸ್ಸನ್ನು ಕತ್ತರಿಸಿದನು. ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ದಿವ್ಯಾಸ್ತ್ರಗಳಿಂದ ಹೊಡೆಯಲಾರಂಭಿಸಿದನು. ಶ್ರೀಕೃಷ್ಣನು ರುಗ್ಮಿಯ ಧನುಸ್ಸನ್ನು ಪುನಃ ಕತ್ತರಿಸಿ ರಥದ ಮೂಕಿಯನ್ನು ಭೇದಿಸಿದನು. ರುಗ್ಮಿಯು ಕತ್ತಿ-ಗುರಾಣಿ

ಹಿಡಿದು ಗರುಡನ ವೇಗದಂತೆ ಧುಮುಕಿ ಕೃಷ್ಣನಿಗೆದುರಾಗಿ ಬಂದನು. ಕೃಷ್ಣನು ಅವನ ಕತ್ತಿಯನ್ನು ಎರಡಾಗಿ ತುಂಡು ಮಾಡಿ ವಕ್ಷಸ್ಥಳಕ್ಕೆ ಹೊಡೆದಾಗ, ಎಚ್ಚರದಪ್ಪಿ ಭೂಮಿಯಲ್ಲಿ ಬಿದ್ದನು. ಅವನ ಅನುಯಾಯಿಗಳು ಭಯದಿಂದ ಓಡಿಹೋದರು.

## ರುಗ್ಮಿಣಿಯ ಸಂತಾಪ ನಟನೆ

**ವಿಚೇಷ್ಟಮಾನಂ ತಂ ಭೂಮೌ ಭ್ರಾತರಂ ವೀಕ್ಷ್ಯ ರುಗ್ಮಿಣೀ ।**
**ಪಾದಯೋಃ ನ್ಯಪತದ್ ವಿಷ್ಣೋಃ ಭ್ರಾತುಃ ಜೀವಿತ ಕಾಂಕ್ಷಿಣೀ ॥ 7 ॥**

**ತಾಮುತ್ಥಾಪ್ಯ ಪರಿಷ್ವಜ್ಯ ಸಾಂತ್ವಯಾಮಾಸ ಕೇಶವಃ ।**
**ಅಭಯಂ ರುಗ್ಮಿಣೇ ದತ್ವಾ ಪ್ರಯಯೌ ಸ್ವಪುರೀಂ ತತಃ ॥ 8 ॥**

ತನ್ನ ಅಣ್ಣನಾದ ರುಗ್ಮಿಯು ವಿಚೇಷ್ಟಿತವಾಗಿ ಭೂಮಿಗೆ ಉರುಳಿದ್ದನ್ನು ನೋಡಿ ಮೃದು ಹೃದಯದ ರುಗ್ಮಿಣಿಯು ತನ್ನ ಅಣ್ಣನನ್ನು ಕೊಲ್ಲಬೇಡಿ ಎಂದು ಬೇಡುತ್ತಾ ಪಾದಗಳಿಗೆ ಬಿದ್ದಳು. ಕೃಷ್ಣನು ಮುಂದೆ ಇನ್ನೂ ಇವನಿಂದ ಕಾರ್ಯವಿದೆಯೆಂದು ತಿಳಿದು, ರುಗ್ಮಿಣಿಯನ್ನು ಆಲಿಂಗಿಸಿ ಸಮಾಧಾನಗೊಳಿಸಿದನು. ನಂತರ ದ್ವಾರಕೆಗೆ ಪ್ರಯಾಣ ಮಾಡಿದನು.

ನಂತರ ಮೂರ್ಛೆ ಬಿದ್ದಿದ್ದ ರುಗ್ಮಿಯನ್ನು ಶ್ರುತರ್ವಾಣನು ತನ್ನ ರಥದಲ್ಲಿ ಕುಳ್ಳಿರಿಸಿ ಪಟ್ಟಣಕ್ಕೆ ಕರೆದೊಯ್ಯನು. ಅಭಿಮಾನ–ದುರ್ಮದಗಳಿಂದ ಪ್ರತಿಜ್ಞೆ ಮಾಡಿದ ಹೊರತು ರುಗ್ಮಿಣಿಯನ್ನು ಹಿಂದಕ್ಕೆ ಕರೆತಾರದೆ ಭ್ರಷ್ಟ ಪ್ರತಿಜ್ಞನಾದ ಪ್ರಯುಕ್ತ ಕುಂಡಿನಪುರಕ್ಕೆ ಹೋಗಲು ಇಚ್ಛಿಸಲಿಲ್ಲ. ವಿದರ್ಭದಲ್ಲಿ ತಾನು ವಾಸ ಮಾಡಲು ಮತ್ತೊಂದು ಭೋಜಕಟ ನಗರವನ್ನು ಆರಿಸಿಕೊಂಡು ಅಲ್ಲಿಯೆ ಇರುತ್ತಿದ್ದನು. ಭೀಷ್ಮಕನು ಕುಂಡಿನಪುರದಲ್ಲಿಯೇ ಇರುತ್ತಿದ್ದನು.

## ರುಗ್ಮಿಣೀ ವಾಸುದೇವರ ಕಲ್ಯಾಣ

**ದ್ವಾರಕಾಂ ಚಾಪಿ ಸಂಪ್ರಾಪ್ತೇ ರಾಮೇ ವೃಷ್ಣಿ ಬಲಾನ್ವಿತೇ ।**
**ರುಗ್ಮಿಣ್ಯಾಃ ಕೇಶವಃ ಪಾಣಿಂ ಜಗ್ರಾಹ ವಿಧಿವತ್ ಪ್ರಭುಃ ॥ 9 ॥**

**ತತಃ ಸಹ ತಯಾ ರೇಮೇ ಪ್ರಿಯಯಾ ಪ್ರೀಯಮಾಣಯಾ ।**
**ಸೀತಯೇವ ಪುರಾ ರಾಮಃ ಪೌಲೋಮ್ಯೇವ ಪುರಂದರಃ ॥ 10 ॥**

ಬಲರಾಮದೇವನು ಯಾದವರೊಂದಿಗೆ ಯುದ್ಧ ಮಾಡಿ ಅವರನ್ನು ಸೋಲಿಸಿ

ದ್ವಾರಕೆಗೆ ಹಿಂತಿರುಗಿ ಬಂದನು. ಶ್ರೀಕೃಷ್ಣನು ತಾನು ಅಪಹರಿಸಿ ತಂದಿದ್ದ ರುಗ್ಮಿಣಿಯನ್ನು ಶುಭ ಮುಹೂರ್ತದಲ್ಲಿ ಪಾಣಿಗ್ರಹಣ ಮಾಡಿದನು. ತನ್ನ ಅನಾದಿ ಪತ್ನಿಯಾದ ರುಗ್ಮಿಣಿಯೊಂದಿಗೆ ತ್ರೇತೆಯಲ್ಲಿ ಇದೇ ಕೃಷ್ಣನು ರಾಮನಾಗಿ ಅವತರಿಸಿದಾಗ ಇದೇ ರುಗ್ಮಿಣಿಯು ಸೀತೆಯಾಗಿದ್ದಾಗ ವಿಹರಿಸಿದಂತೆ ರುಗ್ಮಿಣಿಯೊಂದಿಗೆ ವಿವಿಧ ವಿಹಾರದಿಂದ ಸಂತೋಷಗೊಳಿಸಿದನು.

### ರುಗ್ಮಿಣೀ ಜ್ಯೇಷ್ಠಪತ್ನಿಯಾದಳು

**ಸಾ ಹಿ ತಸ್ಯಾಭವದ್ ಜ್ಯೇಷ್ಠಾ ಪತ್ನೀ ಕೃಷ್ಣಸ್ಯ ಭಾಮಿನೀ ।**
**ತಸ್ಯಾಮುತ್ಪಾದಯಾಮಾಸ ಪುತ್ರಾನ್ ದಶ ಮಹಾರಥಾನ್ ॥ 11 ॥**

**ಚಾರುದೇಷ್ಣಂ ಸುದೇಷ್ಣಂ ಚ ಪ್ರದ್ಯುಮ್ನಂ ಚ ಮಹಾಬಲಮ್ ।**
**ಸುಷೇಣಂ ಚಾರುಗುಪ್ತಂ ಚ ಭದ್ರಚಾರುಂ ತಥೈವ ಚ ॥ 12 ॥**

ರುಗ್ಮಿಣೀ ದೇವಿಯು ಶ್ರೀಕೃಷ್ಣನ ಪಟ್ಟದರಸಿಯರಲ್ಲಿ ಜ್ಯೇಷ್ಠ ಪತ್ನಿಯಾಗಿದ್ದಳು. ಶ್ರೀಕೃಷ್ಣನು ರುಗ್ಮಿಣಿಯಲ್ಲಿ ಗಣಪತಿಯ ಅವತಾರ ಚಾರುದೇಷ್ಣ, ಸುದೇಷ್ಣ, ಸ್ಕಂಧನ ಅವತಾರ ಪ್ರದ್ಯುಮ್ನ, ಸುಷೇಣ, ಚಾರುಗುಪ್ತ, ಚಾರುಬಾಹು, ಚಾರುವಿಂದ, ಸುಚಾರು, ಭದ್ರಚಾರು ಹಾಗೂ ಚಾರು ಎಂಬ ಹತ್ತು ಗಂಡು ಮಕ್ಕಳೂ, ಚಾರುಮತೀಯೆಂಬ ಒಬ್ಬ ಕನ್ಯೆಯನ್ನು ಉತ್ಪಾದಿಸಿದನು.

### ಕೃಷ್ಣನ ಅಷ್ಟಮಹಿಷಿಯರು

**ಮಹಿಷೀರಷ್ಟ ಕಲ್ಯಾಣೀಃ ತತೋಽನ್ಯಾ ಮಧುಸೂದನಃ ।**
**ಉಪಯೇಮೇ ಮಹಾಬಾಹುಃ ಗುಣೋಪೇತಾಃ ಕುಲೋದ್ಭವಾಃ ॥ 13 ॥**

**ಕಾಲಿಂದೀಂ ಮಿತ್ರವಿಂದಾಂ ಚ ಸತ್ಯಾಂ ನಾಗ್ನಜಿತೀ ಮಪಿ ।**
**ಸುತಾಂ ಜಾಂಬವತಶ್ಚಾಪಿ ರೋಹಿಣೀಂ ಕಾಮರೂಪಿಣೀಮ್ ॥ 14 ॥**

**ಮದ್ರರಾಜಸುತಾಂ ಚಾಪಿ ಸುಶೀಲಾಂ ಶುಭಲೋಚನಾಮ್ ।**
**ಸಾತ್ರಾಜಿತೀಂ ಸತ್ಯಭಾಮಾಂ ಲಕ್ಷ್ಮಣಾಂ ಚಾರುಹಾಸಿನೀಮ್ ॥ 15 ॥**

**ಶೈಬ್ಯಸ್ಯ ಚ ಸುತಾಂ ತನ್ವೀಂ ರೂಪೇಣಾಪ್ಸರಸೋಪಮಾಮ್ ॥ 16 ॥**

**ಸ್ತ್ರೀ ಸಹಸ್ರಾಣಿ ಚಾನ್ಯಾನಿ ಷೋಡಶಾತುಲವಿಕ್ರಮಃ ।**
**ಉಪಯೇಮೇ ಹೃಷೀಕೇಶಃ ಸರ್ವಾ ಭೇಜೇ ಸ ತಾಃ ಸಮಮ್ ॥ 17 ॥**

ಶ್ರೀಕೃಷ್ಣನು ರುಗ್ಮಿಣಿಯನ್ನಲ್ಲದೆ ಕಲ್ಯಾಣ ಸ್ವರೂಪಿಣಿಯರಾದ, ಸತ್ಕುಲ ಸಂಭೂತೆಯರಾದ ಏಳು ಮಂದಿಯನ್ನು ವಿವಾಹವಾದನು, ಸೂರ್ಯಪುತ್ರಿಯಾದ ಕಾಳಂದೀ, ಕೃಷ್ಣನ ಸೋದರತ್ತೆ ರಾಜಾಧಿದೇವಿಯ ಪುತ್ರಿ ಮಿತ್ರವಿಂದಾ, ಅಯೋಧ್ಯಾಧಿಪತಿ ನಗ್ನಜಿತ್ ರಾಜನ ಪುತ್ರೀ ಸತ್ಯಾ, ಜಾಂಬವಂತನ ಪುತ್ರಿಯಾದ ರೋಹಿಣಿ ಎಂಬ ನಾಮಾಂತರವುಳ್ಳ ಜಾಂಬವತೀ, ಮದ್ರರಾಜನ ಮಗಳು ಲಕ್ಷಣಾ, ಸತ್ರಾಜಿತ್‌ನ ಮಗಳಾದ ಸತ್ಯಭಾಮೆ, ಶೈಬ್ಯಪುತ್ರಿ.

ಇವರಲ್ಲದೆ ಹದಿನಾರು ಸಾವಿರದ ನೂರು ಮಂದಿಯನ್ನು ವಿವಾಹವಾಗಿದ್ದನು. ಶ್ರೀಕೃಷ್ಣನು ಇವರು ಎಷ್ಟು ಮಂದಿಯಿರುವರೊ ಅಷ್ಟು ರೂಪಗಳನ್ನು ಧರಿಸಿ ಎಲ್ಲರನ್ನೂ ಸಂತೋಷಗೊಳಸಿದನು.

## ಸಂತಾನಗೋಪಾಲಕೃಷ್ಣ ಮಹಿಮೆ

**ಜಜ್ಞಿರೇ ತಾಸು ಪುತ್ರಾಶ್ಚ ತಸ್ಯ ವೀರಾಃ ಸಹಸ್ರಶಃ ।**
**ಶಾಸ್ತ್ರಾರ್ಥ ಕುಶಲಾಃ ಸರ್ವೇ ಬಲವಂತೋ ಮಹಾರಥಾಃ ।**
**ಯಜ್ವಾನಃ ಪುಣ್ಯಕರ್ಮಾಣೋ ಮಹಾಭಾಗಾಃ ಮಹಾಬಲಾಃ ॥ 18 ॥**

ಶ್ರೀಕೃಷ್ಣನು ಹದಿನಾರು ಸಾವಿರದ ನೂರೆಂಟು ಮಂದಿಯಲ್ಲೂ ತನಗೆ ಎಲ್ಲಾ ರೀತಿಯಿಂದಲೂ ಸದ್ಗುಣಶಾಲಿಗಳು, ಮಹಾರಥಿಕರು, ಬಲವಂತರಾದ ಸಾವಿರಾರು ಪುತ್ರರಾದರು. 1,61,080 – ಪುತ್ರರೂ, 16,108 ಪುತ್ರಿಯರೂ ಆದರು. ಸಂತಾನಗೋಪಾಲಕೃಷ್ಣನಿಗೆ ಸಂತಾನಕ್ಕೆ ಬರವೆಲ್ಲಿ?

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ಸಂತಾನಗೋಪಾಲಕೃಷ್ಣ ಮಹಿಮೆ"ವೆಂಬಲ್ಲಿ
ಅರವತ್ತನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 61 ವಿಷ್ಣುಪರ್ವ

# ಅಥ ಏಕಷಷ್ಠಿತಮೋಽಧ್ಯಾಯಃ

## ಪ್ರದ್ಯುಮ್ನ – ಶುಭಾಂಗೀ ವಿವಾಹ

*ವೈಶಂಪಾಯನ ಉವಾಚ–*

**ತತಃ ಕಾಲೇ ವ್ಯತೀತೇ ತು ರುಗ್ಮೀ ಮಹತಿ ವೀರ್ಯವಾನ್ ।**
**ದುಹಿತುಃ ಕಾರಯಾಮಾಸ ಸ್ವಯಂವರ ಮರಿಂದಮಃ ॥ 1 ॥**

**ತತ್ರಾ ಜಗಾಮ ಪ್ರದ್ಯುಮ್ನಃ ಕುಮಾರೈಃ ಅಪರೈರ್ವೃತಃ ।**
**ಸಾ ಹಿ ತಂ ಚಕಮೇ ಕನ್ಯಾ ಸ ಚ ತಾಂ ಶುಭಲೋಚನಾಮ್ ॥ 2 ॥**

**ಶುಭಾಂಗೀ ನಾಮ ವೈದರ್ಭೀ ಕಾಂತಿದ್ಯುತಿ ಸಮನ್ವಿತಾ ।**
**ಉಪವಿಷ್ಟೇಷು ಸರ್ವೇಷು ಪಾರ್ಥಿವೇಷು ಮಹಾತ್ಮಸು ।**
**ವೃದರ್ಭೀ ವರಯಾಮಾಸ ಪ್ರದ್ಯುಮ್ನಮರಿಸೂದನಮ್ ॥ 3 ॥**

ವೈಶಂಪಾಯನರು ಜನಮೇಜಯನಿಗೆ ರಾಜನೇ. ರುಗ್ಮಿಯು ಭೋಜಕಟದಲ್ಲಿಯೇ ವಾಸ ಮಾಡುತ್ತಾ ಇರಲು. ರುಗ್ಮಿಯು ತನ್ನ ಮಗಳಾದ ಶುಭಾಂಗಿಯ ಸ್ವಯಂವರಕ್ಕಾಗಿ ನಾನಾ ದೇಶದ ರಾಜರನ್ನು ಆಹ್ವಾನಿಸಿದನು. ಅದರಂತೆ ಅನೇಕ ಪರಾಕ್ರಮಿ ರಾಜರುಗಳು ಸ್ವಯಂವರಕ್ಕೆ ಆಹೂತರಾಗಿ ಬಂದರು. ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನೂ ರುಗ್ಮಿಯ ಮಗಳನ್ನು ವಿವಾಹವಾಗುವ ಇಚ್ಛೆಯಿಂದ ತನ್ನ ಮಿತ್ರರೊಂದಿಗೆ ಭೋಜನಕೂಟಕ್ಕೆ ಬಂದನು. ರುಗ್ಮಿಯ ಮಗಳು ಶುಭಾಂಗಿಯು ಶ್ರೀಕೃಷ್ಣ ಕುಮಾರನನ್ನು ವಿವಾಹವಾಗಬೇಕೆಂದು ಬಯಸಿದ್ದಳು. ಶುಭಾಂಗಿಯು ಹೆಸರಿಗೆ ತಕ್ಕಂತೆ ರೂಪಲಾವಣ್ಯಗಳುಳ್ಳ ಶರೀರ ಕಾಂತಿಯನ್ನು ಹೊಂದಿದ್ದಳು.

ರುಗ್ಮಿಯಿಂದ ಆಹ್ವಾನಿತ ರಾಜರೆಲ್ಲ ಅಲಂಕೃತರಾಗಿ ಸ್ವಯಂವರ ಮಂಟಪದಲ್ಲಿ ಆಸೀನರಾಗಿದ್ದರು. ಮಾಲೆಯನ್ನು ಹಿಡಿದು ಬಂದ ಶುಭಾಂಗಿಯು ಪ್ರದ್ಯುಮ್ನನ ಕೊರಳಲ್ಲಿ ಮಾಲೆಯನ್ನು ಹಾಕಿ ಅವನನ್ನು ಸ್ವಯಂವರಿಸಿದಳು. ಕೇಶವ ಪುತ್ರ ಪ್ರದ್ಯುಮ್ನನು ಸರ್ವಾಸ್ತ್ರಕುಶಲನೂ, ಸಿಂಹ ಸಂಹನನನೂ, ನವತಾರುಣ್ಯದಿಂದ ಶೋಭಿಸುತ್ತಿದ್ದನು.

ರಾಜಕುಮಾರಿಯೂ ಇನ್ನೂ ಹರೆಯದ ಪ್ರಾಯದವಳೂ ರೂಪವತೀ ಗುಣವತಿಯೂ ಆಗಿದ್ದಳು. ಇಂದ್ರನ ಮಗಳಾದ ಜಯಂತಿಯು ನಾರಾಯಣ ರೂಪಿ ಋಷಭನನ್ನು ವರಿಸಿದಂತೆಯೂ, ನಳನಂದಿನಿಯು, ಮುದ್ಗಲ್ಯಷಿಯೊಳಗಿರುವ ವಾಯುದೇವನನ್ನು ಪ್ರೀತಿಸಿದಂತೆಯೂ ಇವರ ಪ್ರೇಮವಿತ್ತು.

## ಪ್ರದ್ಯುಮ್ನ ಪುತ್ರ ಅನಿರುದ್ಧ ಜನ್ಮ

**ವೃತ್ತೇ ಸ್ವಯಂವರೇ ಜಗ್ಮೂ ರಾಜಾನಃ ಸ್ವಪುರಾಣಿ ತೇ ।**
**ಉಪಾದಾಯ ಚ ವೈದರ್ಭೀಂ ಪ್ರದ್ಯುಮ್ನೋ ದ್ವಾರಕಾಂ ಯಯೌ ॥ 4 ॥**

**ಸ ತಸ್ಯಾಂ ಜನಯಾಮಾಸ ದೇವಗರ್ಭೋಪಮಂ ಸುತಮ್ ।**
**ಅನಿರುದ್ಧಮಿತಿ ಖ್ಯಾತಂ ಕರ್ಮಣಾಪ್ರತಿಮಂ ಭುವಿ ।**
**ಧನುರ್ವೇದೇ ಚ ವೇದೇ ಚ ನೀತಿಶಾಸ್ತ್ರೇ ಚ ಪಾರಗಮ್ ॥ 5 ॥**

ಸ್ವಯಂವರ ಮುಗಿದ ಮೇಲೆ ಆಹೂತ ರಾಜಾಧಿರಾಜರೆಲ್ಲ ನಿರಾಶರಾಗಿ ತಮ್ಮ ತಮ್ಮ ನಗರಕ್ಕೆ ಹೋದರು. ಪ್ರದ್ಯುಮ್ನನು ಶುಭಾಂಗಿಯೊಂದಿಗೆ ದ್ವಾರಕೆಗೆ ಬಂದನು.

ಕಾಲಕ್ರಮದಲ್ಲಿ ಪ್ರದ್ಯುಮ್ನನು ವೈದರ್ಭಿಯಲ್ಲಿ ದೇವಸುತ ಸದೃಶ ತೇಜಸ್ವಿಯಾದ 'ಅನಿರುದ್ಧ'ನೆಂಬ ಮಗನನ್ನು ಪಡೆದನು. ಇವನು ಮಹಾವೀರನೆಂದು ಖ್ಯಾತನಾಗಿದ್ದನು. ವೇದ, ಧನುರ್ವೇದ, ನೀತಿಶಾಸ್ತ್ರ ವಿಶಾರದನಾಗಿದ್ದನು. ಕ್ರಮೇಣ ಅನಿರುದ್ಧನೂ ಪ್ರಾಯದವನಾದನು. ರುಗ್ಮಿಣಿಯು ಮೊಮ್ಮಗನಿಗೆ ವಿವಾಹ ಮಾಡಲಿಚ್ಛಿಸಿದಳು.

## ಅನಿರುದ್ಧ – ರುಗ್ಮವತೀ ಪರಿಣಯ

**ಅಭವತ್ ಸ ಯದಾ ರಾಜನ್ ಅನಿರುದ್ಧೋ ವಯೋಽನ್ವಿತಃ ।**
**ತದಾಸ್ಯ ರುಗ್ಮಿಣಃ ಪೌತ್ರೀಂ ರುಗ್ಮಿಣೀ ರುಗ್ಮಸಂನಿಭಾಮ್ ॥ 6 ॥**

**ಪತ್ನ್ಯರ್ಥೇ ವರಯಾಮಾಸ ನಾಮ್ನಾ ರುಗ್ಮವತೀತಿ ಸಾ ।**
**ಅನಿರುದ್ಧಗುಣೈಃ ದಾತುಂ ಕೃತಬುದ್ಧಿಃ ನೃಪಸ್ತತಃ ।**
**ಪ್ರೀತ್ಯಾ ಹಿ ರೌಕ್ಮಿಣೇಯಸ್ಯ ರುಗ್ಮಿಣ್ಯಾಶ್ಚಾಪ್ಯುಪಗ್ರಹಾತ್ ॥ 7 ॥**
**ವಿಸ್ಪರ್ಧನ್ನಪಿ ಕೃಷ್ಣೇನ ವೈರಂ ತ್ಯಜ್ಯ ಮಹಾಯಶಾಃ ।**
**ದದಾಮಿತ್ಯಬ್ರವೀದ್ ರಾಜಾ ಪ್ರೀತಿಮಾನ್ ಜನಮೇಜಯ ॥ 8 ॥**

ಅನಿರುದ್ಧನು ವಿವಾಹೋಚಿತ ವಯಸ್ಕನಾದಾಗ ರುಗ್ಮಿಣಿಯು ಮೊಮ್ಮಗ ಅನಿರುದ್ಧನಿಗೆ ವಿವಾಹ ಮಾಡಲು ನಿಶ್ಚಯಿಸಿ, ಅಣ್ಣನಾದ ರುಗ್ಮಿಯ ಮೊಮ್ಮಗಳಾದ ರುಗ್ಮವತಿಯನ್ನು ತನ್ನ ಮೊಮ್ಮಗನಿಗೆ ಪಾಣಿಗ್ರಹಣ ಮಾಡಿಕೊಡಲು ಪ್ರಾರ್ಥಿಸಿದಳು. ರುಗ್ಮಿಗೆ ಕೃಷ್ಣನ ಮೇಲೆ ಮೊದಲಿನಿಂದಲೂ ಸ್ಪರ್ಧೆ ದ್ವೇಷಾದಿಗಳು ಇದ್ದರೂ ಅನಿರುದ್ಧನ ಗುಣ-ಶೌರ್ಯಗಳಿಂದ ಆಕರ್ಷಿತನಾಗಿದ್ದನು. ತನ್ನ ಅಳಿಯನಾದ ಪ್ರದ್ಯುಮ್ನನಿಗೆ ಸಂತೋಷಪಡಿಸಬೇಕೆಂಬ ಇಚ್ಛೆಯಿಂದಲೂ, ರುಗ್ಮಿಣಿಗೆ ತನ್ನ ಮೊಮ್ಮಗಳನ್ನು ತನ್ನ ಮೊಮ್ಮಗನಿಗೆ ಕೊಡಬೇಕೆಂಬ ಆಗ್ರಹದಿಂದಲೂ ಕಟ್ಟುಬಿದ್ದು ವಿವಾಹ ಮಾಡಿಕೊಟ್ಟನು.

**ಕೇಶವಃ ಸಹ ರುಗ್ಮಿಣ್ಯಾ ಪುತ್ರೈಃ ಸಂಕರ್ಷಣೇನ ಚ ।**
**ಆನ್ಯೈಶ್ಚ ವೃಷ್ಣಿಭಿಃ ಸಾರ್ಧಂ ವಿದರ್ಭಾನ್ ಸಬಲೋ ಯಯೌ ॥ 9 ॥**
**ಶುಭೇ ತಿಥೌ ಮಹಾರಾಜ ನಕ್ಷತ್ರೇ ಚಾಭಿಪೂಜಿತೇ ।**
**ವಿವಾಹಃ ಸೋಽನಿರುದ್ಧಸ್ಯ ಬಭೂವ ಪರಮೋತ್ಸವಃ ॥ 10 ॥**

ನಂತರ ಕೃಷ್ಣನು ಸಹ ಪತ್ನಿ ರುಗ್ಮಿಣೀ, ಮಕ್ಕಳು, ಬಲರಾಮನೊಂದಿಗೆ, ಹಾಗೂ ವೃಷ್ಣಿ ನಾಯಕರೊಡನೆ ರುಗ್ಮಿಯ ವಿದರ್ಭ ದೇಶಕ್ಕೆ ಹೊರಟನು. ರುಗ್ಮಿಯ ಬಂಧು ಬಾಂಧವರೂ ಆಹ್ವಾನಿತರಾಗಿ ಬಂದು ಸೇರಿದರು. ಅನಿರುದ್ಧನ ವಿವಾಹವು ಶುಭತಿಥಿ, ಶುಭನಕ್ಷತ್ರದಲ್ಲಿ ವೈಭವದಿಂದ ನಡೆಯಿತು. ರುಗ್ಮವತಿಯನ್ನು ಪಾಣಿಗ್ರಹಣ ಮಾಡುತ್ತಲೇ ಯಾದವರಿಗೆಲ್ಲ ಅತ್ಯಂತ ಸಂತೋಷವುಂಟಾಯಿತು.

## ರುಗ್ಮಿಯೊಂದಿಗೆ ದ್ಯೂತ

ಈ ವಿವಾಹ ಸಮಯದಲ್ಲಿ ಅಶ್ಮಕರಾಜ ವೇಣುಧಾರೀ, ಅಕ್ಷ, ಶ್ರುತರ್ವಾಣ,

ಕ್ರಥಮತ್ರ ಕಲಿಂಗಾಧಿಪತಿ ಜಯತ್ಸೇನ ಋಷೀಕನರೇಶ ಇವರೆಲ್ಲ ಸಮಾಲೋಚನೆ ನಡೆಸಿದರು. ಅವರೆಲ್ಲ ರುಗ್ಮಿಯನ್ನು ಸಂಧಿಸಿ – ಹೀಗೆಂದರು.

**ಭವಾನ್ ಅಕ್ಷೇಷು ಕುಶಲೋ ವಯಂ ಚಾಪಿ ರಿರಂಸವಃ ।**
**ಪ್ರಿಯದ್ಯೂತಶ್ಚ ರಾಮೋಽಸೌ ಅಕ್ಷೇಷ್ವನಿಪುಣೋಽಪಿ ಚ ।**
**ಇತ್ಯುಕ್ತೋ ರೋಚಯಾಮಾಸ ರುಗ್ಮೀ ದ್ಯೂತಂ ಮಹಾರಥಃ ॥ 11 ॥**

ರುಗ್ಮಿಯೇ! ನೀನು ದ್ಯೂತದಲ್ಲಿ ಪ್ರವೀಣನಾಗಿರುವೆ. ನಮಗೂ ಪಗಡೆಯಾಡಲು ಇಚ್ಛೆ ಇದೆ. ಬಲರಾಮನನ್ನು ದ್ಯೂತಕ್ಕೆ ಆಹ್ವಾನಿಸು. ಅವನು ದ್ಯೂತದಲ್ಲಿ ಕುಶಲನಲ್ಲದಿದ್ದರೂ ದ್ಯೂತವೆಂದರೆ ಪ್ರಾಣ. ನಾವೆಲ್ಲರೂ ನಿನ್ನ ಬಂಧುವಾದ ಬಲರಾಮನನ್ನು ನಿನ್ನನ್ನು ಮುಂದೆ ಮಾಡಿಕೊಂಡು ದ್ಯೂತವಾಡಿ ಅವನನ್ನು ಸೋಲಿಸಬೇಕೆಂಬ ಆಶಯದಿಂದಿದ್ದೇವೆ."

ರುಗ್ಮಿಯು ಇದಕ್ಕೆ ಸಮ್ಮತಿಸಿದನು. ರಾಜರೆಲ್ಲರೂ ದ್ಯೂತಕ್ಕಾಗಿಯೇ ಅಲಂಕೃತವಾಗಿದ್ದ ದ್ಯೂತಾಗಾರವನ್ನು ಪ್ರವೇಶಿಸಿ ಆಸನಗಳಲ್ಲಿ ಬಂದು ಕುಳಿತರು.

### ಬಲರಾಮನಿಗೆ ದ್ಯೂತಾಹ್ವಾನ

**ಆಹೂತೋ ಬಲದೇವಸ್ತು ಕಿತವೈಃ ಅಕ್ಷಕೋವಿದೈಃ ।**
**ಬಾಢಮಿತ್ಯಬ್ರವೀದ್ ಧೃಷ್ಟಃ ಸಹ ದೀವ್ಯಾಮ ಪಣ್ಯತಾಮ್ ॥ 12 ॥**

**ನಿಕೃತ್ಯಾ ವಿಜಿಗೀಷಂತೋ ದಾಕ್ಷಿಣಾತ್ಯಾ ನರಾಧಿಪಾಃ ।**
**ಮಣಿಮುಕ್ತಾಃ ಸುವರ್ಣಂ ಚ ತತ್ರಾನಿನ್ಯುಃ ಸಹಸ್ರಶಃ ॥ 13 ॥**

**ತತಃ ಪ್ರಾವರ್ತತ ದ್ಯೂತಂ ತೇಷಾಂ ರತಿವಿನಾಶನಮ್ ।**
**ಕಲಹಸ್ಯಾಸ್ಪದಂ ಘೋರಂ ದುರ್ಮತೀನಾಂ ಕ್ಷಯಾವಹಮ್ ॥ 14 ॥**

ರಾಜರೆಲ್ಲರೂ ರುಗ್ಮಿಯೊಂದಿಗೆ ಸೇರಿ ಬಲದೇವನನ್ನು ದ್ಯೂತಕ್ಕೆ ಆಹ್ವಾನಿಸಿದರು. ದ್ಯೂತಪ್ರಿಯ ಬಲರಾಮನೂ 'ಬಾಢಂ' ಹಾಗೆ ಆಗಲಿ ಎಂದು ಸಮ್ಮತಿಸಿ ಪಣವನ್ನಿಟ್ಟು ದ್ಯೂತವಾಡೋಣ ಎಂದನು.

ದ್ಯೂತವು ಪ್ರಾರಂಭವಾಯಿತು. ದಕ್ಷಿಣಾತ್ಯ ರಾಜರೆಲ್ಲ ಮೋಸದಿಂದ ಬಲರಾಮನ ಪ್ರತಿಯೊಂದು ಆಟದಲ್ಲಿ ಗೆಲ್ಲುತ್ತಾ ರತ್ನ, ಮುಕ್ತಾಹಾರಗಳನ್ನು

ಸುವರ್ಣ ಮುದ್ರಿಕೆಗಳನ್ನು ಗೆದ್ದರು. ಪರಸ್ಪರ ಪ್ರೀತಿಗಾಗಿ ಆಡಿದ ದ್ಯೂತ ಪ್ರೀತಿನಾಶಕವಾದ ಜಗಳಕ್ಕೆ ಕಾರಣವಾಗುತ್ತಿತ್ತು. ಮನುಷ್ಯರ ವಿನಾಶಕ್ಕಾಗಿ ಪರಿವರ್ತಿತವಾಯಿತು.

**ನಿಷ್ಕಾಣಾಂ ಚ ಸಹಸ್ರಾಣಿ ಸುವರ್ಣಸ್ಯ ದಶಾದಿತಃ**
**ರುಗ್ಮಿಣಾ ಸಹ ಸಂಪಾತೇ ಬಲದೇವೋ ಗ್ಲಹಂದದೌ ॥ 15 ॥**

ಬಲರಾಮನು ರುಗ್ಮಿಯೊಂದಿಗೆ ದ್ಯೂತ ಮಾಡುತ್ತಾ ಹತ್ತು ಸಾವಿರ ಸುವರ್ಣನಾಣ್ಯ ಪಣಕ್ಕಿಟ್ಟನು. ಬಲದೇವನು ಈ ಬಾರಿ ತಾನೆ ಗೆಲ್ಲುವೆನು ಎಂದು ದಾಳ ಹಾಕಿದಾಗಲೇ ರುಗ್ಮಿಯು ನಾನೇ ಗೆದ್ದಿದ್ದು ಎಂದು ಪಣವನ್ನು ವಶಪಡಿಸಿಕೊಂಡ. ಪುನಃ ಹತ್ತು ಸಾವಿರ ನಾಣ್ಯವಿಟ್ಟನು. ಅವನ್ನೂ ವಂಚನೆಯಿಂದ ಗೆದ್ದುಕೊಂಡನು. ಹೀಗೆ ಬಹುಬಾರಿ ನಡೆಯಿತು.

**ಅಸಕೃದ್ ಜೀಯಮಾನಸ್ತು ರುಗ್ಮಿಣಾ ಕೇಶವಾಗ್ರಜಃ ।**
**ಸುವರ್ಣಕೋಟೀಃ ಜಗ್ರಾಹ ಗ್ರಹಂ ತಸ್ಯ ಮಹಾತ್ಮನಃ ॥ 16 ॥**

**ಜಿತಮಿತ್ಯೇವ ಹೃಷ್ಟೋಽಥ ತಮಾಹ್ವತಿರಭಾಷತ ।**
**ಅವಿದ್ವೋ ದುರ್ಬಲಃ ಶ್ರೀಮಾನ್ ಹಿರಣ್ಯಮಮಿತಂ ಮಯಾ ।**
**ಅಜೇಯೋ ಬಲದೇವೋಽಯಂ ಅಕ್ಷದ್ಯೂತೇ ಪರಾಜಿತಃ ॥ 17 ॥**

### ಕಲಿಂಗ ರಾಜನ ಅಟ್ಟಹಾಸ

**ಕಲಿಂಗ ರಾಜಃ ತಚ್ಛ್ರುತ್ವಾ ಪ್ರಜಾಹಾಸ ಭೃಶಂ ತದಾ ।**
**ದಂತಾನ್ ಸಂದರ್ಶಯನ್ ಹೃಷ್ಟಃ ತತ್ರಾಕ್ರುಧ್ಯದ್ ಹಲಾಯುಧಃ ॥ 18 ॥**

ಬಲರಾಮನು ಒಂದು ಕೋಟಿ ಸುವರ್ಣವನ್ನು ಪಣವನ್ನಾಗಿಟ್ಟ. ವಂಚನೆಯಿಂದಾಡುತ್ತಿದ್ದ ರುಗ್ಮಿಯು ಈ ಬಾರಿಯೂ ನಾನೆ ಗೆದ್ದೇ ಎಂದು ಹೇಳಿದನು. ರಾಜರು ಪ್ರಶಂಸಿದರು. ಇದರಿಂದ ಉಬ್ಬಿದ ರುಗ್ಮಿಯು ಬಲರಾಮನನ್ನು ಆಕ್ಷೇಪ ಮಾಡಿದ.

ರಾಜರೇ! ನೋಡಿರಿ! ಧನದಲ್ಲಿ ಶ್ರೀಮಂತನಾದರೂ ಬಲರಾಮನು ದ್ಯೂತವಿದ್ಯೆಯಲ್ಲಿ ನೈಪುಣ್ಯವಿಲ್ಲದ ಅಜ್ಞನು. ಇವನು ನನ್ನಿಂದ ಸೋತು ಅವನ ಕೋಟಿ ಸುವರ್ಣ ನನ್ನದಾಗಿದೆ.

ರುಗ್ಮಿಯ ಮಾತನ್ನು ಕೇಳಿ ಕಳಿಂಗರಾಜ ಜಯತ್ಸೇನನು ಮುವ್ವತ್ತೆರಡೂ ದಂತಗಳನ್ನು ಪ್ರದರ್ಶಿಸುತ್ತಾ ಗಹಗಹಿಸುತ್ತಾ ಅಟ್ಟಹಾಸ ಮಾಡಿದನು. ಅವನ ಅಪಹಾಸ ಬಲದೇವನಿಗೆ ಸಹಿಸಲಾಗಲ್ಲಿಲ್ಲ ಕೋಪ ಅವನ್ನನಾವರಿಸಿತು. ರುಗ್ಮಿಯಾದರೂ ಬಲದೇವ ಸೋತಾಗಲೆಲ್ಲ ಚುಚ್ಚು ಮಾತುಗಳಿಂದ ನೋಯಿಸುತ್ತಿದ್ದನು. ರುಗ್ಮಿಯು ಮಾತುಗಳೂ ಸಹ ಕ್ರೋಧ ಮೂರ್ಛಿತವನ್ನಾಗಿಸಿತ್ತು. ಆದರೂ ಬಂಧುವಾದ್ದರಿಂದ ಸಹಿಸಿಕೊಂಡು, ಪುನಃ

**ದಶಕೋಟಿ ಸಹಸ್ರಾಣಿ ಗ್ಲಹ ಏಕೋ ಮಮಾಪರಃ ।**
**ಏನಂ ಸಂಪರಿಗೃಷ್ಣೀಷ್ವ ಪಾತಯ ಅಕ್ಷಾನ್ ನರಾಧಿಪ ॥ 19 ॥**

ರುಗ್ಮಿಯೇ! ನಾನೀಗ ಹತ್ತು ಸಾವಿರ ಕೋಟಿ ಸುವರ್ಣ ಪಣಕ್ಕಿಟ್ಟಿದ್ದೇನೆ. ದಾಳ ಹಾಕಿ ಎಂದು ರುಗ್ಮಿಯನ್ನು ಆಟಕ್ಕೆ ಎಳೆದ. ಹಾಗೆ ಆಗಲಿ ಎಂದು ದಾಳಗಳನ್ನು ಎಸೆದನು. ಬಲರಾಮ ನಾಲ್ಕು ಗರ ಎಂದ ಅದೇ ಬಿತ್ತು. ಬಲರಾಮ ಗೆದ್ದಿದ್ದ. ಆದರೆ ರುಗ್ಮಿಯು ನಾನೇ ಗೆದ್ದಿದ್ದು ನೀನಲ್ಲವೆಂದೆ ಹೇಳಿದ. ಬಂಧುವಾದ್ದರಿಂದ ಕೋಪಬಂದರೂ ಸಹಿಸಿದ ಬಲರಾಮನು ಸುಮ್ಮನೆ ಇದ್ದದ್ದು ನೋಡಿ ರುಗ್ಮಿಯು ತಾನು ವಂಚನೆ ಮಾಡಿದ್ದರೂ ಬಲರಾಮನಿಗೆ ಗೊತ್ತಾಗಲ್ಲಿಲ್ಲವೆಂದು ಜೋರಾಗಿ ನಗಲು ಆರಂಭಿಸಿದ.

### ಅಶರೀರವಾಣಿಯಿಂದ ಸತ್ಯತೆ

**ಬಲದೇವಸ್ತು ತಚ್ಛ್ರುತ್ವಾ ಜಿಹ್ಮಂ ವಾಕ್ಯಂ ನರಾಧಿಪ ।**
**ಭೂಯಃ ಕ್ರೋಧ ಸಮಾವಿಷ್ಟೋ ನೋತ್ತರಂ ವ್ಯಾಜಹಾರ ಹ ॥ 20 ॥**
**ತತೋ ಗಂಭೀರ ನಿರ್ಘೋಷಾ ವಾಗುವಾಚ ಅಶರೀರಿಣೀ**
**ಬಲದೇವಸ್ಯ ತಂ ಕ್ರೋಧಂ ವರ್ಧಯಂತೀ ಮಹಾತ್ಮನಃ ॥ 21 ॥**

ರುಗ್ಮಿಯ ವಂಚನೆಯ ಮಾತನ್ನು ಕೇಳಿ ಕೋಪಗೊಂಡರೂ ಏನನ್ನೂ ಹೇಳದೆ ಸುಮ್ಮನಿದ್ದನು. ಈ ಕೋಪವೆಂಬ ಅಗ್ನಿಗೆ ತುಪ್ಪವನ್ನು ಹಾಕುವಂತೆಯೋ ಎಂಬಂತೆ ಗಂಭೀರವಾದ ಅಶರೀರವಾಣಿಯು ಆಕಾಶದಿಂದ ಕೇಳಿಬಂತು.

### ವಂಚನೆಯು ಬಹಿರಂಗವಾಯಿತು

**ಸತ್ಯಮಾಹ ಬಲಃ ಶ್ರೀಮಾನ್ ಧರ್ಮೇಣೈಷಃ ಪರಾಜಿತಃ ।**
**ಅನುಕ್ತ್ವಾ ವಚನಂ ಕಿಂಚಿತ್ ಪ್ರಾಪ್ತೋ ಭವತಿ ಕರ್ಮಣಾ ॥ 22 ॥**
**ಮನಸಾ ಸಮನುಜ್ಞಾತಂ ತತ್ ಸ್ಯಾದ್ ಇತ್ಯವಗಮ್ಯತಾಮ್ ॥ 23 ॥**

"ಬಲರಾಮನು ಸತ್ಯವನ್ನೆ ಹೇಳುತ್ತಿದ್ದಾನೆ. ರುಗ್ಮಿಯು ಮೋಸದಿಂದ ಆಟವಾಡಿ ಧರ್ಮದಿಂದ ಪರಾಜಿತನಾಗಿರುವನು. ಬಲರಾಮನು ಮೌನವಾಗಿದ್ದರೂ, ನಾನೇ ಗೆದ್ದೆ ಎಂದು ಹೇಳದಿದ್ದರೂ ಧರ್ಮದ ದೃಷ್ಟಿಯಲ್ಲಿ ಅವನೆ ಗೆದ್ದಿರುವನು. ಅವನ ಮನಸ್ಸು ಸರಿಯಾಗಿ ಹೇಳದೆ. ಮೋಸ ಮಾಡಿದವರೆ ಹಾರಾಡುವುದು ಸತ್ಯವಂತರಲ್ಲ" ಎಂದು ಗಂಭೀರವಾದ ವಾಣಿಯಿಂದ ವಾಯುದೇವನೆ ಹೇಳದನು.

### ರುಗ್ಮಿಯನ್ನು ಕೊಂದು ಹಾಕಿದ ಬಲದೇವ

ಇತಿ ಶ್ರುತ್ವಾ ವಚಸ್ತಥ್ಯಮ್ ಅಂತರಿಕ್ಷಾತ್ ಸುಭಾಷಿತಮ್ ।
ಸಂಕರ್ಷಣಃ ತಥೋತ್ಥಾಯ ಸೌವರ್ಣೇನೋರುಣಾ ಬಲೀ ॥ 24 ॥

ರುಗ್ಮಿಣ್ಯಾಃ ಭ್ರಾತರಂ ಜ್ಯೇಷ್ಠಂ ನಿಜಘಾನ ಮಹೀತಲೇ ।
ವಿವಾದೇ ಕುಪಿತೋ ರಾಮಃ ಕ್ಷೇಪ್ತಾರಂ ಕಿಲ ರುಗ್ಮಿಣಮ್ ॥ 25 ॥

ಜಘಾನಾಷ್ಟಾಪದೇನೈವ ಪ್ರಮಥ್ಯ ಯದುನಂದನಃ ॥ 26 ॥

ಆಕಾಶದಿಂದ ಕೇಳಿ ಬಂದ ಅಶರೀರವಾಣಿಯ ಯಥಾರ್ಥತೆ ತಿಳಿದ ಬಲರಾಮನು ತನ್ನ ಸ್ಥಳದಿಂದ ಮೇಲೆದ್ದು ದೊಡ್ಡದಾದ ಚಿನ್ನದ ಪಗಡೆಯಿಂದ ರುಗ್ಮಿಯ ತಲೆಗೆ ಬಲವಾಗಿ ಹೊಡೆದನು. ಅವನು ಕೆಳಗುರುಳಿ ಬಿದ್ದನು. ಪದೇ ಪದೇ ಅದರಿಂದಲೇ ಥಳಿಸಿದನು.

### ಜಯತ್ಸೇನನ ದಂತಭಗ್ನ

ತತೋಽಪಸೃತ್ಯ ಸಂಕ್ರುದ್ಧಃ ಕಲಿಂಗಾಧಿಪತೇರಪಿ ।
ದಂತಾನ್ ಬಭಂಜ ಸಂರಂಭಾದ್ ಉನ್ನನಾದ ಚ ಸಿಂಹವತ್ ॥ 27 ॥

ಖಡ್ಗಮುದ್ಯಮ್ಯ ತಾನ್ ಸರ್ವಾನ್ ತ್ರಾಸಯಾಮಾಸ ಪಾರ್ಥಿವಾನ್ ।
ರುಗ್ಮಿಣಂ ನಿಕೃತ್ತಿಪ್ರಜ್ಞಂ ಸ ಹತ್ವಾ ಯಾದವರ್ಷಭಃ ॥ 28 ॥

ಜಗಾಮ ಶಿಬಿರಂ ರಾಮಃ ಸ್ವಯಮೇವ ಜನಾವೃತಃ ।
ನ್ಯವೇದಯತ್ ಸ ಕೃಷ್ಣಾಯ ತತ್ರ ಸರ್ವಂ ಯಥಾಭವತ್ ॥ 29 ॥

ನೋವಾಚ ಸ ತದಾ ಕೃಷ್ಣಃ ಕಿಂಚಿದ್ ರಾಮಂ ಮಹಾದ್ಯುತಿಃ ।
ನ ಹತೋ ವಾಸುದೇವೇನ ಯಃ ಪೂರ್ವಂ ಪರವೀರಹಾ ॥ 30 ॥

ಜ್ಯೇಷ್ಠೋ ಭ್ರಾತಾಥ ರುಗ್ಮಿಣ್ಯಾ ರುಗ್ಮಿಣೀ ಸ್ನೇಹ ಕಾರಣಾತ್ ।
ಸ ರಾಮಕರಮುಕ್ತೇನ ನಿಹತೋ ದ್ಯೂತಮಂಡಲೇ ॥ 31 ॥

ರುಗ್ಮಿಗೆ ಹೊಡೆದು ಅಲ್ಲಿಂದ ಹೊರಟು ಕಳಿಂಗಾಧಿಪತಿಯಾದ ಜಯತ್ಸೇನನನ್ನು ಹಿಡಿದು ಬಲವಾಗಿ ಕಪಾಳಕ್ಕೆ ಹೊಡೆದನು. ಅವನ ಪೆಟ್ಟನ್ನು ತಾಳಲಾರದೆ ಅವನ ಹಲ್ಲುಗಳೆಲ್ಲ ಉದುರಿ ಬಿದ್ದವು. ಹಲ್ಲು ತೋರಿಸಿ ಅಪಹಾಸದ ಮಾಡಿದ ಫಲವನ್ನು ಅನುಭವಿಸಿದ. ನಂತರ ಕತ್ತಿ ಹಿಡಿದು ನೆರೆದಿದ್ದ ರಾಜರನ್ನೆಲ್ಲ ವಿತ್ರಾಸಗೊಳಸಿದ. ದ್ಯೂತಮಂಟಪದ ಸ್ತಂಭವೊಂದನ್ನು ಆನೆಯಂತೆ ಕಿತ್ತುಹಾಕಿ ಅದರಿಂದ ಕೈಶಿಕರನ್ನು ಓಡಿಸಿದ.

ನಂತರ ತನ್ನವರಿಂದ ಕೂಡಿದ ತನ್ನ ಶಿಬಿರಕ್ಕೆ ಬಂದ. ಅಲ್ಲಿದ್ದ ಶ್ರೀಕೃಷ್ಣನಿಗೆ ನಡೆದ ವೃತ್ತಾಂತ ತಿಳಸಿದ. ಶ್ರೀಕೃಷ್ಣನು ರುಗ್ಮಿಣಿಗೂ, ಬಲರಾಮನಿಗೂ ಬೇಜಾರಾಗದಂತೆ ಮೌನವಾಗಿದ್ದು ಕಣ್ಣೀರು ಸುರಿಸಿ ನೀತಿ ತೋರಿದ.

ಹೀಗೆ ರುಗ್ಮಿಯು-ರುಗ್ಮಿಣಿಯ ಪ್ರೀತಿಯಿಂದಾಗಿ ಕೃಷ್ಣನಿಂದ ಸಂಹೃತನಾಗದೆ ಉಳದಿದ್ದ. ಈಗ ದ್ಯೂತದಲ್ಲಿ ಮೋಸ ಮಾಡಿ, ಮಂಗಲಕಾರ್ಯದಲ್ಲಿ ಬಲರಾಮನಿಂದ ಸತ್ತ. ಇಂತಹ ವಿವಾಹದಲ್ಲಿ ರುಗ್ಮಿಯ ವಧೆಯಿಂದಾಗಿ ವೃಷ್ಣ್ಯಂಧಕರು ಉತ್ಸಾಹ ಶೂನ್ಯರಾದರು.

## ರುಗ್ಮಿಣಿಯ ಪ್ರಲಾಪ

ರುಗ್ಮಿಣೀ ಚ ಮಹಾಭಾಗ ವಿಲಂಪಂತ್ಯಾರ್ತಯಾ ಗಿರಾ ।
ವಿಲಪಂತೀ ತಥಾ ದೃಷ್ಟ್ವಾ ಸಾಂತ್ವಯಾಮಾಸ ಕೇಶವಃ ॥ 32 ॥

ರುಗ್ಮಿಣಿಯಾದರೂ ಅಣ್ಣನು ಮೃತನಾದ ಸುದ್ಧಿ ಕೇಳ ಆರ್ತನಾದ ಮಾಡುತ್ತಾ ಗೋಳಾಡಿದಳು. ಶ್ರೀಕೃಷ್ಣನು ಬಹಳ ರೀತಿಯಿಂದ ಅವಳನ್ನು ಸಮಾಧಾನ ಗೊಳಸಿದನು.

ನಂತರ ಬಲರಾಮದೇವನು ಗೆದ್ದಿದ್ದ ಸಂಪತ್ತಿನ ರಾಶಿಯನ್ನು ಯಾದವರು ದ್ವಾರಕೆಗೆ ಸಾಗಿಸಿದರು. ಎಲ್ಲರೂ ದ್ವಾರಕೆಗೆ ಸೇರಿಕೊಂಡರು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ಬಲರಾಮನಿಂದ ರುಗ್ಮಿಯವಧೆ"ವೆಂಬಲ್ಲಿ
ಅರವತ್ತೊಂದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ದ್ವಿಷಷ್ಟಿತಮೋಽಧ್ಯಾಯಃ

ಭೂಯ ಏವ ತು ವಿಪ್ರರ್ಷೇ ಬಲದೇವಸ್ಯ ಧೀಮತಃ ।
ಮಹಾತ್ಮ್ಯಂ ಶ್ರೋತುಮಿಚ್ಛಾಮಿ ಶೇಷಸ್ಯ ಧರಣೀಭೃತಃ ॥ 1 ॥

ರಾಜನು ವೈಶಂಪಾಯನರೇ! ಬಲರಾಮನ ಮಹಿಮೆಯನ್ನು ಇನ್ನೂ ಕೇಳಬೇಕೆಂದಿರುವೆನು. ದಯಾಮಾಡಿ ಹೇಳಿರಿ ಎಂದನು.

### ಸಾಂಬನಿಂದ ಲಕ್ಷಣೆಯ ಅಪಹಾರ

*ವೈಶಂಪಾಯನ ಉವಾಚ–*

ಪುರಾಣೇ ನಾಗರಾಜೋಽಸೌ ಪಠ್ಯತೇ ಧರಣೀಧರಃ ।
ಶೇಷಸ್ತೇಜನಿಧಿಃ ಶ್ರೀಮಾನ್ ಅಕಂಪ್ಯಃ ಪುರುಷೋತ್ತಮಃ ॥ 2 ॥

ಜರಾಸಂಧಂ ಗದಾಯುದ್ಧೇ ಜಿತವಾನ್ ಯೋ ನ ಚಾವಧೀತ್ ।
ನಾಗಾಯುತ ಬಲಪ್ರಾಣೋ ಭೀಮೋ ಭೀಮಪರಾಕ್ರಮಃ ॥ 3 ॥

ದುರ್ಯೋಧನಸ್ಯ ಕನ್ಯಾಂ ತು ಹರಮಾಣೋ ನ್ಯಗೃಹ್ಯತ ।
ಸಾಂಬೋ ಜಾಂಬವತೀ ಪುತ್ರಃ ನಗರೇ ನಾಗಸಾಹ್ವಯೇ ॥ 4 ॥

ಪುರಾಣವೇತ್ತರು ಬಲರಾಮನನ್ನು ತೇಜೋರಾಶಿಯೆಂದೂ. ದುರ್ಜಯನೆಂದೂ. ಭೂಮಂಡಲ ಹೊತ್ತ ಶೇಷನೆಂದೂ. ನಿರ್ಭಯನೂ.

ಯೋಗಾಚಾರ್ಯನೂ. ನಾಗಾಯುತ ಬಲ ಸಂಪನ್ನನೂ ಆಗಿರುವನು. ಜರಾಸಂಧನನ್ನು ಭೂಮಿಯಲ್ಲಿ ಕೆಡವಿ ಕೊಲ್ಲದೆ ಬಿಟ್ಟವನು. ಅನೇಕ ಜರಾಸಂಧಾನುಯಾಯಿಗಳು ಇವನಿಂದ ಪರಾಜಿತರಾಗಿರುವರು. ಅವನ ಮಹಿಮೆ ಹೇಳುವೆ ಕೇಳು.

ಸಾಂಬನು ಶ್ರೀಕೃಷ್ಣನಿಂದ ಜಾಂಬವತಿಯಲ್ಲಿ ಜನಿಸಿದನು. ಮಹಾಪರಾಕ್ರಮಿಯೂ ಸುಂದರನೂ ಆಗಿದ್ದವನು. ದುರ್ಯೋಧನನಿಗೆ ಲಕ್ಷ್ಮಣಾಯೆಂಬ ಪುತ್ರಿಯಿದ್ದಳು. ಸಾಂಬನು ಇವಳನ್ನು ವರಿಸಿದ್ದ ಅವಳನ್ನು ಅಪಹರಿಸಿ ತರಲು ಯತ್ನಿಸಿದನು.

ಈ ವಿಷಯ ಕೌರವರಿಗೆ ತಿಳಿದು ಸಾಂಬನನ್ನು ಬಂಧಿಸಿಟ್ಟರು.

ಈ ವಿಷಯ ಯಾದವರಿಗೆ ತಿಳಿಯಿತು. ಸಾಂಬನನ್ನು ಬಿಡಿಸಿ ತರಲು ಬಲರಾಮನು ತಾನೆ ಹೊರಟನು. ಬಲರಾಮನು ತನ್ನ ದೂತನನ್ನು ಕಳುಹಿಸಿ ಸಾಂಬನನ್ನು ಬಿಡುವಂತೆ ಹೇಳಿದ. ಈ ಸಾಮೋಪಾಯಕ್ಕೆ ಕೌರವರು ಒಪ್ಪಲಿಲ್ಲ. ಅವರೆಲ್ಲರೂ ಸಾಂಬನನ್ನು ಬಿಡುವುದಿಲ್ಲವೆಂದೆ ಹೇಳಿ ಕಳುಹಿಸಿದರು.

### ಹಸ್ತಿನಾವತಿ ಗಂಗೆಗೆ ಸೆಳೆದ ಬಲದೇವ

ತತಃ ಚುಕ್ರೋಧ ಬಲವಾನದ್ಭುತಃ ಚಾಕರೋನ್ ಮಹತ್ ।
ಅನಿವಾರ್ಯಮಭೇದ್ಯಂ ಚ ದಿವ್ಯಮಪ್ರತಿಮಂ ಬಲೀ ॥ 5 ॥

ಲಾಂಗಲಾಸ್ತ್ರಂ ಸಮುದ್ಯಮ್ಯ ಬ್ರಹ್ಮಮಂತ್ರಾಭಿಮಂತ್ರಿತಮ್ ।
ಪ್ರಕ್ಷೇಪ್ತುಮೈಚ್ಛದ್ ಗಂಗಾಯಾಂ ನಗರಂ ಕೌರವಸ್ಯ ತತ್ ॥ 6 ॥

ತದ್ ವಿಘೂರ್ಣಿತ ಮಾಲಕ್ಷ್ಯ ಪುರಂ ದುರ್ಯೋಧನೋ ನೃಪಃ ।
ಸಾಂಬಂ ನಿರ್ಯಾತಯಾಮಾಸ ಸಭಾರ್ಯಂ ತಸ್ಯ ಧೀಮತಃ ॥ 7 ॥

ಬಲರಾಮನು ಕೌರವರ ದುರ್ನಡತೆ ತಿಳಿದು ಕ್ರುದ್ಧನಾಗಿ ಬ್ರಹ್ಮದೇವನ ಮಂತ್ರದಿಂದ ತನ್ನ ನೇಗಿಲನ್ನು ಅಭಿಮಂತ್ರಿಸಿ ಆ ಲಾಂಗಲಾಸ್ತ್ರವನ್ನು ಹಸ್ತಿನಾವತಿಯ ತುದಿಯಲ್ಲಿಟ್ಟು ಕೌರವರ ರಾಜಧಾನಿಯಾದ ಹಸ್ತಿನಪುರವನ್ನೆ

ಸೆಳೆದು ಗಂಗೆಯಲ್ಲಿ ಮುಳುಗಿಸಲು ಸೆಳೆದನು. ಹಸ್ತಿನಾವತಿಯು ಕಂಪಿಸಿತು. ದುರ್ಯೋಧನಾದಿಗಳು ಭಯಗೊಂಡರು. ಕೂಡಲೇ ಸಾಂಬನನ್ನು ಹಾಗು ಲಕ್ಷ್ಮಣೆಯನ್ನೂ ಬಲರಾಮನಿಗೆ ತಂದೊಪ್ಪಿಸಿದನು. ಹಾಗು ತಾನು ತಮ್ಮ ಶಿಷ್ಯನೆಂದು ಪರಿಗ್ರಹಿಸಬೇಕೆಂದೂ ಪ್ರಾರ್ಥಿಸಿದನು. ರಾಮನು ಅಂಗೀಕರಿಸಿದನು. ಹಸ್ತಿನಾವತಿಯೂ ಇಂದಿಗೂ ಗಂಗೆ ಕಡೆವಾಲಿದ್ದು ಬಲರಾಮನ ಪರಾಕ್ರಮ ದ್ಯೋತಕವಾಗಿದೆ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ಬಲರಾಮನ ಮಹಿಮೆ"ವೆಂಬಲ್ಲಿ
ಅರವತ್ತೆರಡನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 63 ವಿಷ್ಣುಪರ್ವ

# ಅಥ ತ್ರಿಷಷ್ಠಿತಮೋಽಧ್ಯಾಯಃ

### ನರಕಾಸುರವಧೆಃ

**ಪ್ರತ್ಯೇತ್ಯ ದ್ವಾರಕಾಂ ವಿಷ್ಣುಃ ಹತೇ ರುಗ್ಮಿಣೀ ವೀರ್ಯವಾನ್ ।**
**ಅಕರೋದ್ ಯನ್ಮಹಾಬಾಹುಃ ತನ್ಮೇ ವದ ಮಹಾಮುನೇ ॥ 1 ॥**

**ಸ ತೈಃ ಪರಿವೃತಃ ಶ್ರೀಮಾನ್ ಪುರೀಂ ಯಾದವನಂದನಃ ।**
**ದ್ವಾರಕಾಂ ಭಗವಾನ್ ವಿಷ್ಣುಃ ಪ್ರತ್ಯವೈಕ್ಷತ ವೀರ್ಯವಾನ್ ॥ 2 ॥**

ಗುರುಗಳೇ! ರುಗ್ಮಿಯನ್ನು ಸಂಹರಿಸಿದ ನಂತರ ದ್ವಾರಕಾಪಟ್ಟಣಕ್ಕೆ ಹಿಂತಿರುಗಿದ ಶ್ರೀಕೃಷ್ಣನು ಏನು ಮಾಡಿದನೆಂಬುದನ್ನು ತಿಳಿಸಿರಿ ಎಂದಾಗ ವೈಶಂಪಾಯನರು – ದ್ವಾರಕೆಗೆ ಬಂದ ಮೇಲೆ ತನ್ನ ರಾಜಧಾನಿಯನ್ನು ಕೂಲಂಕಷನಾಗಿ ನಿರೀಕ್ಷಿಸಿದನು. ವಿಧರ್ಭ ದೇಶದಿಂದ ನಾನಾ ರೀತಿಯ ಧನ ಕನಕ ರತ್ನ ವಸ್ತು ವಾಹನಗಳನ್ನು ತಂದಿದ್ದು ಅದನ್ನು ಭದ್ರವಾಗಿ ಸಂರಕ್ಷಿಸಲು ವ್ಯವಸ್ಥೆ ಮಾಡಿದ್ದನು. ಇದನ್ನು ಅಪಹರಿಸಲು ಬಂದಿದ್ದ ಅನೇಕ ರಾಕ್ಷಸರನ್ನು ಕೊಂದು ಹಾಕಿದ್ದನು.

### ನರಕಾಸುರನಿಂದ ಪೀಡೆ

**ವಿಘ್ನಂ ಚಾಸ್ಯಾಕರೋತ್ ತತ್ರ ನರಕೋ ನಾಮ ದಾನವಃ ।**
**ತ್ರಾಸನಃ ಸರ್ವದೇವಾನಾಂ ದೇವರಾಜರಿಪುರ್ಮಹಾನ್ ॥ 3 ॥**
**ದೇವತಾನಾಂ ಋಷೀಣಾಂ ಚ ಪ್ರತೀಪಮಕರೋದ್ ತದಾ ।**

ಶ್ರೀಕೃಷ್ಣನು ಯಾವುದೇ ಕಾರ್ಯಗಳಿಗೆ ವರದರ್ಪಿಷ್ಠರಾದ ದೈತ್ಯದಾನವರು ವಿಘ್ನವನ್ನುಂಟು ಮಾಡುತ್ತಿದ್ದರು. ಅವರನ್ನೆಲ್ಲ ಕೃಷ್ಣನು ಕೊಂದು ಹಾಕುತ್ತಿದ್ದ. ಅವರಲ್ಲಿ ನರಕಾಸುರನು ಮಹಾಬಲಿಷ್ಠನಾಗಿದ್ದು ಕೃಷ್ಣನ ಕಾರ್ಯಗಳಿಗೆ ವಿಘ್ನಕಾರಕನಾಗಿದ್ದನು. ದೇವೇಂದ್ರನಿಗೂ ರಿಪುವಾಗಿದ್ದ ನರಕನು ದೇವತೆಗಳಿಗೆಲ್ಲ ಭಯಕಾರಕನಾಗಿದ್ದನು.

### ಕಶೇರುವಿನ ಅಪಹಾರ

ಭೂಮಿಯೊಳಗೆ ಲಿಂಗಾಕಾರದ ಅಭೇದ್ಯ ಭವನದಲ್ಲಿದ್ದುಕೊಂಡು ಸಮಸ್ತ ದೇವತೆಗಳನ್ನೂ ಪೀಡಿಸುತ್ತಿದ್ದನು. ಭೂದೇವಿಯ ಪುತ್ರನಾಗಿದ್ದು ಭೌಮನೆಂದೆ ಖ್ಯಾತಿ ಪಡೆದಿದ್ದ ನರಕನು ಆನೆ ರೂಪ ತಾಳಿದ. ತ್ವಷ್ಟ್ರುವಿನ ಮಗಳು ಕಶೇರುವು. ಅವಳಿಗೆ ಹದಿನಾಲ್ಕು ವರ್ಷ ವಯಸ್ಸಾಗಿತ್ತು. ಮಹಾಸುಂದರಿಯಾದ ಅವಳನ್ನು ಬಲಾತ್ಕಾರವಾಗಿ ಅಪಹರಿಸಿ ತನ್ನ ಅರಮನೆಯಲ್ಲಿ ಬಂಧಿ ಮಾಡಿಟ್ಟನು. ನರಕನಿಗೆ ಇದರಿಂದ ಶೋಕವಾಗಲಿ, ತನ್ನನ್ನು ಯಾರಾದರೂ ಕೊಲ್ಲಬಹುದೆಂಬ ಭಯವೂ ಇಲ್ಲದೆ ಇದ್ದನು.

**ಯಾನಿ ದೇವಮನುಷ್ಯೇಷು ರತ್ನಾನಿ ವಿವಿಧಾನಿ ಚ ।**
**ಬಿಭರ್ತಿ ಚ ಮಹೀ ಕೃತ್ಸ್ನಾ ಸಾಗರೇಷು ಯದ್ ವಸು ॥ 4 ॥**

**ಅದ್ಯಪ್ರಭೃತಿ ತಾನೀಹ ಸಹಿತಾಃ ಸರ್ವನೈರ್ಋತಾಃ ।**
**ತವೈವೋಪಾಹರಿಷ್ಯಂತಿ ದೈತ್ಯಾಶ್ಚ ಸಹ ದಾನವೈಃ ॥ 5 ॥**

ಕಶೇರುವೇ, ದೇವ ಮಾನವರಲ್ಲಿ ಏನೇನು ರತ್ನಗಳಿವೆಯೋ, ಈ ಸಮಗ್ರ ಭೂಮಂಡಲದಲ್ಲಿ ಎಷ್ಟು ರತ್ನಗಳಿವೆಯೋ, ರತ್ನಾಕರನಲ್ಲಿ ಎಷ್ಟು ರತ್ನಗಳಿವೆಯೋ ಅವೆಲ್ಲವನ್ನೂ ನನ್ನ ಭೃತ್ಯರು ಇಂದಿನಿಂದ ನಿನಗೆ ತಂದು ನೀಡುತ್ತಾರೆ. ಹೀಗೆ ಹೇಳಿ ಕಶೇರುವನ್ನು ತನ್ನ ಅರಮನೆಯಲ್ಲಿರಿಸಿ ವಿಧವಿಧ ವಸ್ತ್ರಾಭರಣಗಳನ್ನೆಲ್ಲ ತಂದು ನೀಡಿದನು. ನಂತರ ಸ್ತ್ರೀಯರಲ್ಲಿ ಮೋಹಪರವಶನಾಗಿ ಪ್ರಪಂಚದಲ್ಲಿದ್ದ ಕನ್ಯೆಯೆಲ್ಲರನ್ನೂ ಅಪಹರಿಸಲು ಆರಂಭಿಸಿದನು.

### ಹದಿನಾರು ಸಾವಿರ ಕನ್ಯೆಯರು

**ಗಂಧರ್ವಾಣಾಂ ಚ ಯಾಃ ಕನ್ಯಾ ಜಹಾರ ನರಕೋ ಬಲೀ ।**
**ಯಾಶ್ಚ ದೇವಮನುಷ್ಯಾಣಾಂ ಸಪ್ತ ಚಾಪ್ಸರಸಾಂ ಗಣಾಃ ॥ 6 ॥**

**ಚತುರ್ದಶ ಸಹಸ್ರಾಣಿ ಏಕವಿಂಶಚ್ಛತಾನಿ ಚ ।**
**ಏಕವೇಣೀಧರಾಃ ಸರ್ವಾಃ ಸತೀಮಾರ್ಗಮನುವ್ರತಾಃ ॥ 7 ॥**

ನರಕನು ಗಂಧರ್ವ ಕನ್ಯೆಯರನ್ನೂ ದೇವ–ಮಾನವ ಕನ್ಯೆಯರನ್ನೂ ಅಪ್ಸರಾ ಸ್ತ್ರೀಯರ ಗಣವನ್ನೂ ಅಪಹರಿಸಿ ತನ್ನ ಅರಮನೆಯಲ್ಲಿಟ್ಟನು. ಹೀಗೆ ಹದಿನಾರು ಸಾವಿರದ ನೂರು ಕನ್ಯೆಯರನ್ನು ರಾಣೀ ವಾಸಕ್ಕೆ ಸೇರಿಸಿದನು. ಅವರೆಲ್ಲ ಸಾಧ್ವೀಮಣಿಗಳು, ಏಕವೇಣೀಧರರಾಗಿ ವ್ರತ ನಿಯಮಗಳನ್ನು ಆಚರಿಸುತ್ತಿದ್ದರು.

ಈ ಸ್ತ್ರೀಯರ ವಾಸಕ್ಕಾಗಿ ಮಣಿಪರ್ವತ ಮೇಲ್ಭಾಗದಲ್ಲಿ 'ಅಲಕಾ' ಎಂಬ ಹೆಸರಿನ ನಗರ ನಿರ್ಮಿಸಿದನು. ಮುರಾ ಎಂಬ ರಾಕ್ಷಸನು ಅದರ ರಕ್ಷಣೆಯಲ್ಲಿದ್ದನು. ಮುರನ ಹತ್ತು ಪುತ್ರರೂ ತಂದೆಗೆ ಸಹಾಯಕರಾಗಿದ್ದರು. ನರಕನು ತಪಸ್ಸಿನಿಂದಾಗಿ ಅಮೋಘ ವರಗಳನ್ನು ಪಡೆದು ದುರಹಂಕಾರಿ–ಯಾಗಿದ್ದನು. ನರಕನೊಬ್ಬನೇ ಘೋರ ಪಾಪಕರ್ಮವನ್ನಾಚರಿಸುತ್ತಿದ್ದನು.

### ಅದಿತಿಯ ಕರ್ಣಕುಂಡಲ ಅಪಹಾರ

**ಅದಿತಿಂ ಧರ್ಷಯಾಮಾಸ ಕುಂಡಲಾರ್ಥೇ ಮಹಾಸುರಃ ।**
**ದ್ವಾರಾಪಾಲಾಶ್ಚ ಚತ್ವಾರಃ ತಸ್ಯಾಸನ್ ಯುದ್ಧ ದುರ್ಮದಾಃ ॥ 8 ॥**
**ಹಯಗ್ರೀವೋ ನಿಸುಂದಶ್ಚ ವೀರಃ ಪಂಚನದಸ್ತಥಾ ।**
**ಮುರುಃ ಪುತ್ರಸಹಸ್ರೈಶ್ಚ ವರದತ್ತೋऽಸುರೋ ಮಹಾನ್ ॥ 9 ॥**

ಒಮ್ಮೆ ದುರ್ಬುದ್ಧಿಯ ನರಕನು ದೇವಮಾತೆ ಅದಿತಿಯನ್ನು ಹಿಂಸಿಸಿ ಅವಳ ಅಮೂಲ್ಯ ಕಿವಿಯ ಆಭರಣಗಳನ್ನು ಅಪಹರಿಸಿದನು. ಭೂದೇವಿ ಪುತ್ರನೂ ಪ್ರಾಗ್ ಜ್ಯೋತಿಷಪುರಕ್ಕೆ ರಾಜನೂ ಆದ ನರಕನು ನಾಲ್ಕು ಮಂದಿ ದ್ವಾರಪಾಲಕರನ್ನು ಹೊಂದಿದ್ದನು. ಹಯಗ್ರೀವ, ನಿಸುಂದ, ಪಂಚನದ ಹಾಗೂ ಮುರ ಎಂಬುವರು.

ಅನೇಕ ವರ ಹೊಂದಿದ್ದ ಮುರನಿಗೆ ಸಾವಿರಾರು ಮಕ್ಕಳಿದ್ದರು. ಇವರೂ ದೇವಯಾನ ಮಾರ್ಗವನ್ನೆ ಅತಿಕ್ರಮಿಸಿ ಆ ಮಾರ್ಗವಾಗಿ ಹೋಗುವವರಿಗೆ ಪೀಡೆ ಕೊಡುತ್ತಿದ್ದರು.

### ಜಾತಃ ನರಕ ವಧಾರ್ಥಾಯ

ತದ್ವಧಾರ್ಥಂ ಮಹಾಬಾಹುಃ ಶಂಖ ಚಕ್ರಗದಾಸಿಭೃತ್ ।
ಜಾತೋ ವೃಷ್ಣೀಷು ದೇವಕ್ಯಾಂ ವಸುದೇವಾದ್ ಜನಾರ್ದನಃ ॥ 10 ॥
ತಸ್ಯಾಥ ಪುರುಷೇಂದ್ರಸ್ಯ ಲೋಕಪ್ರಥಿತ ತೇಜಸಃ
ನಿವಾಸೋ ದ್ವಾರಕಾದೇವೈ ರುಪಾಯಾದುಪಪಾದಿತಾ ॥ 11 ॥

ಈ ದುಷ್ಟ ನರಕನನ್ನು ನರಕಕ್ಕೆ ಕಳುಹಿಸಲೆಂದೆ ಶ್ರೀಕೃಷ್ಣನ ಅವತಾರವಾಗಿತ್ತು. ದೇವತೆಗಳೆಲ್ಲರೂ ದ್ವಾರಕೆಗೆ ಬಂದು ಹೋಗುತ್ತಿದ್ದರು. ದ್ವಾರಕೆಯೂ ಇಂದ್ರನ ಅಮರಾವತಿಗಿಂತಲೂ ಅತ್ಯಂತ ಸುಂದರವಾಗಿತ್ತು. ನಾಲ್ಕೂ ಕಡೆಯಿಂದಲೂ ಸಮುದ್ರವು ದುರ್ಗೆಯನ್ನು ನಿರ್ಮಿಸಿತ್ತು. ಐದು ಪರ್ವತಗಳಿಂದ ಕೂಡಿತ್ತು. ದ್ವಾರಕೆಯಲ್ಲಿ ಸಭಾಭವನವೊಂದಿತ್ತು. ಬಹಿರ್ದ್ವಾರವಾದರೂ ಸುವರ್ಣಮಯ–ವಾಗಿತ್ತು. ಒಂದು ಯೋಜನವಿರುವ ಈ ಸಭೆಯು ದಾಶಾರ್ಹೀ ಸಭಾಭವನ' ಎಂದು ಪ್ರಸಿದ್ಧಿ ಪಡೆದಿತ್ತು. ಇದರಲ್ಲಿಯೆ ಸಭೆ ಮಂತ್ರಾಲೋಚನೆ ನಡೆಯುತ್ತಿತ್ತು.

### ದ್ವಾರಕೆಗೆ ಇಂದ್ರದೇವನ ಆಗಮನ

ತತ್ರಾಸೀನೇಷು ಸರ್ವೇಷು ಕದಾಚಿದ್ ಭರತರ್ಷಭ ।
ದಿವ್ಯಗಂಧೋ ವವೌ ವಾಯುಃ ಪುಷ್ಪವರ್ಷಂ ಪಪಾತ ಹ ॥ 12 ॥
ಮಧ್ಯೇ ತು ತೇಜಸಸ್ತಸ್ಯ ಪಾಂಡುರಂ ಗಜಮಾಸ್ಥಿತಃ ।
ವೃತೋ ದೇವಗಣೈಃ ಸರ್ವೈಃ ವಾಸವಃ ಸಮದೃಶ್ಯತ ॥ 13 ॥
ಸೋಽವತೀರ್ಯ ಗಜಾತ್ ತೂರ್ಣಂ ಪರಿಷ್ವಜ್ಯ ಜನಾರ್ದನಮ್ ।
ಅಥೋವಾಚ ಮಹಾತೇಜಾಃ ವಾಸವೋ ವಾಸವಾನುಜಮ್ ॥ 14 ॥

ಒಂದು ದಿನ ಶ್ರೀಕೃಷ್ಣಾದಿಗಳು ಸಭೆಯಲ್ಲಿ ಸುಖಾಸೀನರಾಗಿ ಕುಳಿತಿದ್ದಾರೆ. ಆಗ ಸುಗಂಧಮಯವಾದ ಗಾಳಿಯು ಬೀಸಿತು. ಪುಷ್ಪವೃಷ್ಟಿಯಾಯಿತು. ಅಂತರಿಕ್ಷದಲ್ಲಿ ಕಿಲಕಿಲ ಶಬ್ಧವಾಗುತ್ತಿತ್ತು. ಅಲ್ಲಿಯೆ ಪ್ರಭಾಮಂಡಲವೊಂದು ಏರ್ಪಟ್ಟಿತ್ತು. ಅದರ ಮಧ್ಯದಿಂದ ಪ್ರಭೆಯ ಪುಂಜವು ಭೂಮಿಗೆ ಬರುತ್ತಾ ದಿವ್ಯಾಕೃತಿ ಪ್ರಕಟವಾಯಿತು. ಆ ತೇಜೋರಾಶಿಯ ಮಧ್ಯದಲ್ಲಿದ್ದ ಬಿಳಿಯ ಐರಾವತದ ಮೇಲೆ ಕುಳಿತಿದ್ದ ಇಂದ್ರದೇವನು ಇಳಿದು ಸಭಾಭವನ ಪ್ರವೇಶಿಸಿದನು.

ಬಲರಾಮ ಕೃಷ್ಣ ಯಾದವರನ್ನು ಆಲಿಂಗಿಸಿ ಕುಳಿತುಕೊಂಡನು. ಅರ್ಘ್ಯ ಪಾದ್ಯ ಸ್ವೀಕರಿಸಿದನು.

ಶ್ರೀಕೃಷ್ಣನೇ! ನಾನಿಂದು ನಿನ್ನಲ್ಲಿಗೆ ಬಂದಿರುವ ಕಾರ್ಯವನ್ನು ಹೇಳುವೆನು.

**ನೈರ್ಋತೋ ನರಕೋ ನಾಮ ಬ್ರಹ್ಮಣೋ ವರದರ್ಪಿತಃ ।**
**ಅದಿತ್ಯಾಃ ಕುಂಡಲೇ ಮೋಹಾದ್ ಜಹಾರ ದಿತಿನಂದನಃ ॥ 15 ॥**

**ದೇವಾನಾಂ ವಿಪ್ರಿಯೇ ನಿತ್ಯಂ ಋಷೀಣಾಂ ಚ ಸ ವರ್ತತೇ ।**
**ತಂ ಚ ದೇವಾಂತರಂ ಪ್ರೇಕ್ಷ್ಯ ಜಹಿ ತ್ವಂ ಪಾಪಪೂರುಷಮ್ ॥ 16 ॥**

ಬ್ರಹ್ಮದೇವನ ವರದಿಂದ ಮಹಾದರ್ಪಿಷ್ಠನಾದ ನರಕನೆಂಬ ದೈತ್ಯನೊಬ್ಬನಿರುವನು. ಕುಂಡಲದ ಮೇಲಿನ ಮೋಹದಿಂದಾಗಿ ಅದಿತಿದೇವಿಯ ಕುಂಡಲವನ್ನೂ ಅಪಹರಿಸಿದ್ದಾನೆ. ಪ್ರತಿದಿನವೂ ದೇವ-ಋಷಿಗಳಿಗೆ ಪೀಡೆ ನೀಡುವುದರಲ್ಲಿಯೇ ಆಸಕ್ತನಾಗಿರುವನು. ಇಂತಹ ಜಗತ್ಕ್ಷಯಕಾರಿ ನರಕನನ್ನು ನೀನು ಕೊಂದು ಹಾಕಿದರೆ ಜಗತ್ತು ಕ್ಷೇಮದಿಂದಿರುತ್ತದೆ.

ಸರ್ವತ್ರ ಅವ್ಯಾಹತಗಮನವುಳ್ಳ ಗರುಡನೇ ನಿನ್ನನ್ನು ನರಕನಲ್ಲಿಗೆ ಕರೆದೊಯ್ಯುವೆನು. ನಿನ್ನಿಂದ ಹೊರತಾಗಿ ನರಕಾಸುರನು ಯಾರಿಂದಲೂ ಮರಣ ಹೊಂದಲಾರನು. ಹೀಗೆ ಇಂದ್ರದೇವನು ಪ್ರಾರ್ಥಿಸಿದಾಗ ನರಕನನ್ನು ಸಂಹಾರ ಮಾಡುವೆನು ಎಂದು ಪ್ರತಿಜ್ಞೆ ಮಾಡಿದನು.

### ಪ್ರಾಗ್‌ಜ್ಯೋತಿಷಪುರಕ್ಕೆ ಕೃಷ್ಣನ ಆಗಮನ

**ತತಃ ಸಹೈವ ಶಕ್ರೇಣ ಶಂಖಚಕ್ರ ಗದಾಸಿಭೃತ್ ।**
**ಪ್ರಸಸ್ಥೇ ಗರುಡೇನಾಥ ಸತ್ಯಭಾಮಾ ಸಹಾಯವಾನ್ ॥ 17 ॥**
**ಕ್ರಮೇಣ ಸಪ್ತಸ್ಕಂಧಾನ್ ಸ ಮರುತಾಂ ಸಹ ವಾಸವಃ ।**
**ವಾರಣೇಂದ್ರಗತಃ ಶಕ್ರಃ ಗರುಡಸ್ಥೋ ಜನಾರ್ದನಃ ॥ 18 ॥**

**ಅಪಶ್ಯದ್ ದ್ವಾಂ ತತ್ರಸ್ಥಾಂ ಹಸ್ತ್ಯಶ್ವರಥವಾಹಿನೀಮ್ ।**
**ಕ್ಷುರಾಂತಾನ್ ಮೌರವಾನ್ ಪಾಶಾನ್ ಷಟ್ ಸಹಸ್ರಾನ್ ದದರ್ಶ ಹ॥19॥**

ನಂತರ ಇಂದ್ರೋಪೇಂದ್ರರಿಬ್ಬರೂ ಸತ್ಯಭಾಮೆಯೊಂದಿಗೆ ಪ್ರಾಗ್‌ಜ್ಯೋತಿಷಕ್ಕೆ

ಪ್ರಯಾಣ ಮಾಡಿದರು. ಶ್ರೀಕೃಷ್ಣನು ಇಂದ್ರನೊಡನೆ ಆಕಾಶದಲ್ಲಿರುವ ಏಳೂ ಸ್ತರಗಳನ್ನೂ ದಾಟಿ ಬಹಳ ದೂರ ಪ್ರಯಾಣ ಮಾಡಿದನು. ಗರುಡ ವಾಹನ – ಗಜವಾಹನರಿಬ್ಬರೂ ಆಕಾಶದಲ್ಲಿ ಸೂರ್ಯ-ಚಂದ್ರರಂತೆ ಶೋಭಿಸುತ್ತಿದ್ದರು. ಇಂದ್ರದೇವನು ಅಮರಾವತಿಗೆ ಹಿಂತಿರುಗಿದನು. ಕೃಷ್ಣನು ನರಕನ ಪಟ್ಟಣಕ್ಕೆ ಪ್ರಯಾಣ ಬೆಳೆಸಿದನು. ಗರುಡನ ರೆಕ್ಕೆ ಬಡಿತದಿಂದಾಗಿ ವಾಯುವು ಎದುರಾಗಿ ಬೀಸಿದವು. ಗರುಡವಾಹನ ಬರುತ್ತಿದ್ದನ್ನು ನೋಡಿದ ರಾಕ್ಷಸರೆಲ್ಲರೂ ತಮ್ಮ ತಮ್ಮ ಸ್ಥಾನದಲ್ಲಿ ಉಪಸ್ಥಿತರಾದರು.

ಕೃಷ್ಣನು ಮಹಾದ್ವಾರದಲ್ಲಿ ಚದುರಂಗ ಸೈನ್ಯವನ್ನು ನೋಡಿದನು. ಮುರ ರಾಕ್ಷಸನು ನಿರ್ಮಿಸಿದ್ದ ಆರು ಸಾವಿರ ಮುರಪಾಶಗಳನ್ನು ನೋಡಿದನು. ಶ್ರೀಕೃಷ್ಣನು ಧನುಷ್ಟಂಕಾರ ಮಾಡಿದಾಗ ಸಿಡಿಲು ಹೊಡೆದಂತೆ ಇತ್ತು.

ಮುರಾಸುರನು ಆ ಶಬ್ಧವನ್ನು ಕೇಳಿ ಶ್ರೀಕೃಷ್ಣನೆ ಬಂದಿರುವನೆಂದು ತಿಳಿದನು. ಮುರನು ಕಾಲ-ಅಂತಕರಿಗೆ ಸಮಾನವಾದ ಶಕ್ತ್ಯಾಯುಧವನ್ನು ಶ್ರೀಕೃಷ್ಣನ ಮೇಲೆ ಪ್ರಯೋಗಿಸಿದನು. ಚಿನ್ನದ ರೆಕ್ಕೆಯ ಬಾಣದಿಂದ ಒಂದು ಬಾಣವನ್ನು ಎಳೆದು ಕಿವಿಯವರೆಗೂ ಸೆಳೆದು ಬಿಟ್ಟು ಶಕ್ತ್ಯಾಯುಧವನ್ನು ಎರಡು ತುಂಡು ಮಾಡಿದನು.

ಮುರಾರಾಕ್ಷಸನು ಕ್ರೋಧಮೂರ್ಛಿತನಾಗಿ ವಿದ್ಯುತ್ತಿನಂತೆ ಪ್ರಕಾಶಮಾನವಾದ ಅರ್ಧಚಂದ್ರ ಬಾಣವನ್ನು ತೆಗೆದು ಎಳೆದು ಬಿಟ್ಟಾಗ ಗದೆಯೂ ಸಹ ಮಧ್ಯಭಾಗದಲ್ಲಿ ಎರಡು ತುಂಡಾಯಿತು. ಕೂಡಲೇ ಮತ್ತೊಂದು ಭಲ್ಲವೆಂಬ ಬಾಣವನ್ನು ಮುರನಿಗೆ ಬಿಟ್ಟು ತಲೆಯನ್ನು ಕತ್ತರಿಸಿ ಹಾಕಿ 'ಮುರಾರಿ' ಎನಿಸಿದ.

ನಂತರ ತನ್ನ ನಂದಕ ಖಡ್ಗದಿಂದ ಮುರಾಸುರನ ಆರುಸಾವಿರ ಪಾಶಗಳನ್ನು ಕತ್ತರಿಸಿ ಹಾಕಿದ. ಮುರನಂತೆ ಮುರನ ಬಂಧು ಮಿತ್ರರನ್ನೂ ಸಂಹಾರ ಮಾಡಿದ ಮುಂದೆ ಹೋದ ಶ್ರೀಕೃಷ್ಣನು ಮುವ್ವತ್ತು ಅಕ್ಷೌಹಿಣೀ ಸೈನ್ಯವನ್ನೂ ಹಯಗ್ರೀವ ನಿಸುಂದ ವಿಚಿತ್ರಯೋಧಿಗಳನ್ನೂ ನೋಡಿದನು.

## ನಿಸುಂದ-ಶ್ರೀಕೃಷ್ಣ ಯುದ್ಧ

ನಿಸುಂದನ ಶ್ರೀಹರಿಯ ಮಾರ್ಗವನ್ನು ತಡೆದನು. ಹತ್ತು ಬಾಣಗಳಿಂದ ಕೇಶವನಿಗೆ ಹೊಡೆದನು. ಕೃಷ್ಣನಾದರೂ ಎಪ್ಪತ್ತು ಚೂಪಾದ ಬಾಣಗಳಿಂದ ನಿಸುಂದನನ್ನು ಹೊಡೆದನು. ನಿಸುಂದನು ಆಕಾಶದಲ್ಲಿಯೆ ಅವುಗಳನ್ನು ಕತ್ತರಿಸಿ

ಹಾಕಿದನು. ರಾಕ್ಷಸ ಸೈನ್ಯವೆಲ್ಲ ಸೇರಿ ಶ್ರೀಕೃಷ್ಣನನ್ನು ಸುತ್ತುವರೆದು ಬಾಣಗಳಿಂದ ಮುಚ್ಚಿ ಬಿಟ್ಟರು.

ಶ್ರೀಕೃಷ್ಣನು ಪಾರ್ಜನ್ಯಾಸ್ತ್ರವನ್ನು ಪ್ರಯೋಗಿಸಿ ಶತ್ರು ಸೈನ್ಯದ ವೇಗ ತಡೆದನು. ಪರ್ಜನ್ಯಾಸ್ತ್ರದಿಂದ ಮರ್ಮಭೇದಕ ಪರ್ಜನ್ಯಾಸ್ತ್ರದಿಂದ ರಾಕ್ಷಸರೆಲ್ಲ ಓಡಿಹೋದರು. ನಿಸುಂದನು ಪುನಃ ಯುದ್ಧಕ್ಕೆ ಬಂದು ಬಾಣವೃಷ್ಟಿ ಸುರಿಸಿದನು. ಕೃಷ್ಣನಾದರೂ ಸವಿತೃದೇವತಾಕವಾದ ಅಸ್ತ್ರ ತೆಗೆದುಕೊಂಡು ಅದರ ಮೂಲಕ ಬಾಣಗಳನ್ನು ಬಿಟ್ಟು ನಿಸುಂದನ ಛತ್ರ, ರಥದ ಮೂಕಿ, ಕುದುರೆ, ಸಾರಥಿ, ಧ್ವಜಗಳನ್ನು ಕತ್ತರಿಸಿ ಹಾಕಿದನು. ಮತ್ತೊಂದು ಬಾಣವನ್ನು ನಿಸುಂದನ ಎದೆಗೆ ನಾಟಿಸಿ, ಮತ್ತೊಂದು ಬಾಣದಿಂದ ತಲೆತೆಗೆದು ಕೊಂದು ಹಾಕಿದನು. ಸಾವಿರ ವರ್ಷ ದೇವತೆಗಳೊಂದಿಗೆ ಏಕಾಕಿಯಾಗಿ ಯುದ್ಧ ಮಾಡಿದ್ದ ಸುನಂದನು ಶ್ರೀಕೃಷ್ಣನ ಒಂದೇ ಬಾಣಕ್ಕೆ ಬಲಿಯಾದನು.

## ಮುರಾರಿ-ಹಯಗ್ರೀವ ಯುದ್ಧ

ನಿಸುಂದ ಸತ್ತಮೇಲೆ ಮತ್ತೊಬ್ಬ ದ್ವಾರಪಾಲಕ ಹಯಗ್ರೀವಾಸುರನು ಕೃಷ್ಣನ ಮೇಲೇರಿ ಬಂದ ಹಯಗ್ರೀವನು ದೊಡ್ಡ ಬಂಡೆಯನ್ನೆತ್ತಿ ವೇಗದಿಂದ ಕೃಷ್ಣನ ಮೇಲೆ ಬಿಸಾಕಿದನು. ಕೃಷ್ಣನು ಪರ್ಜನ್ಯಾಸ್ತ್ರ ಉಪಯೋಗಿಸಿ ಆ ಬಂಡೆಯನ್ನು ಏಳು ತುಂಡುಗಳನ್ನಾಗಿ ಮಾಡಿದನು. ಶಾಂರ್ಗ ಧನುಸ್ಸಿನಿಂದ ಹೊರಡುತ್ತಿದ್ದ ಬಾಣಗಳಿಂದ ಸಾವಿರಾರು ರಾಕ್ಷಸರು ನೆಲಕ್ಕುರುಳಿದರು. ಚಕ್ರದಿಂದ ಕೆಲವರು, ಶಂಖಧ್ವನಿಯಿಂದಲೆ ಎದೆ ಒಡೆದು ಸತ್ತರು.

ಇದರಿಂದ ಕೆಂಗಣ್ಣನಾದ ಹಯಗ್ರೀವನು ಹತ್ತು ಮಾರು ಎತ್ತರದ ಗಿಡವೊಂದನ್ನು ಕಿತ್ತು ಕೃಷ್ಣನ ಮೇಲೆಸೆದಾಗ ವೃಕ್ಷದಿಂದ ಮಹಾಶಬ್ಧವುಂಟಾಯಿತು. ಕೃಷ್ಣನು ಸಾವಿರ ಬಾಣಗಳನ್ನು ಒಂದೇ ಬಾರಿ ಬಿಟ್ಟು ವೃಕ್ಷವನ್ನು ಸಾವಿರ ತುಂಡು ಮಾಡಿದನು.

ನಂತರ ಮತ್ತೊಂದು ಬಾಣದಿಂದ ಹಯಗ್ರೀವನ ಎದೆಗೆ ಹೊಡೆದು ಅವನ ಎದೆ ಸೀಳಿ ಸಂಹರಿಸಿದನು. ಎಂಟುಲಕ್ಷ ಸೈನಿಕರನ್ನು ಸಂಹರಿಸಿ ಪ್ರಾಗ್‌ಜ್ಯೋತಿಷ್ಯಪುರವನ್ನು ಆಕ್ರಮಿಸಿದನು. ನರಕಾಸುರನ ಮುಖ್ಯಸೇನಾಪತಿ ಪಂಚನದನು ಅವನನ್ನು ಕೊಂದು ನರಕನ ಪುರವನ್ನು ಪ್ರವೇಶಿಸಿದನು. ಶ್ರೀಕೃಷ್ಣನು ಪಾಂಚಜನ್ಯವೆಂಬ ಶಂಖವನ್ನೂದಿದನು. ಇದನ್ನು ಕೇಳಿ

ನರಕಾಸುರನು ಅದ್ಭುತ ರಥದಲ್ಲಿ ಕುಳಿತು ಯುದ್ಧಕ್ಕೆ ಬಂದನು. ಮಹಾಕಾಯರಾಗಿದ್ದ ಸಾವಿರಾರು ದೈತ್ಯ ದಾನವರು ಹಿಂಬಾಲಿಸುತ್ತಿದ್ದರು. ಇವರೆಲ್ಲ ಗರುಡನನ್ನು ಸುತ್ತುವರೆದು ಯುದ್ಧ ಮಾಡಲುಪಕ್ರಮಿಸಿದರು. ಅವರು ಬಿಟ್ಟ ಆಯುಧಗಳಿಂದ ಆಕಾಶವೆ ಕಾಣಿಸದಾಯಿತು. ಕೃಷ್ಣನು ಶಾರ್ಂಗಧನುಸ್ಸಿನಿಂದ ರಾಕ್ಷಸರೆಲ್ಲರನ್ನೂ ಯಮನಿಗೆ ಕಳುಹಿಸಿಕೊಟ್ಟನು. ಚಕ್ರ ಕಾಮೋದಕೀ ಗದೆ ಶಾರ್ಂಗಗಳಿಗೆ ಸಿಕ್ಕು ತುಂಡಾದರು.

### ಶ್ರೀಕೃಷ್ಣ ನರಕ ಯುದ್ಧಂ

ದಿವ್ಯೇನಾಸ್ತ್ರೇಣ ಸಮರೇ ಪೂರಯಾಮಾಸ ತಂ ರಥಮ್ ।
ಉತ್ತಮಾಸ್ತ್ರಂ ಮಹಾಪಾತಂ ಮುಮೋಚ ನರಕೋ ಬಲೀ ॥ 20 ॥
ಚಿಚ್ಛೇದಾಸ್ತ್ರಂ ಮಹಾಭಾಗಃ ಚಕ್ರೇಣ ಮಧುಸೂದನಃ ।

ವೀರನಾದ ಶ್ರೀಕೃಷ್ಣನು ಇಂದ್ರನ ಧನುಸ್ಸಿಗೆ ಸಮಾನವಾದ ಶಾರ್ಂಗ ಧನುಸ್ಸನ್ನು ಹಿಡಿದು ಸೂರ್ಯಾರ್ಶ್ಮಿ ಸದೃಶ ಬಾಣವನ್ನು ಯೋಜಿಸಿ. ದಿವ್ಯಾಸ್ತ್ರಗಳಿಂದ ನರಕಾಸುರನ ಮಹಾರಥವನ್ನೆ ತುಂಬಿಸಿಬಿಟ್ಟನು. ಪ್ರತಿಯಾಗಿ ನರಕನು ಆಘಾತಕಾರಿಯಾದ ಮಹಾಸ್ತ್ರವನ್ನು ಕೃಷ್ಣನ ಮೇಲೆ ಬಿಟ್ಟನು. ಸಿಡಿಲಿನ ಶಬ್ಧ ಮಾಡುತ್ತಾ ವಜ್ರಾಯುಧದಂತೆ ಬರುತ್ತಿರುವ ಆ ಅಸ್ತ್ರವನ್ನು ಚಕ್ರದಿಂದ ಕ್ಷಣ ಮಾತ್ರದಿಂದ ತುಂಡು ಮಾಡಿದನು.

### ಕೃಷ್ಣನಿಂದ ಸಾರಥಿ, ಅಶ್ವ, ಧ್ವಜ, ಕವಚ ನಾಶ

ವ್ಯಹನತ್ ಸಾರಥಿಂ ಚಾಸ್ಯ ಶರೈಕೇಣ ಜನಾರ್ದನಃ ।
ಸರಥಂ ಸಧ್ವಜಂ ಸಾಶ್ವಂ ಜಘಾನ ದಶಭಿಃ ಶರೈಃ ॥ 21 ॥
ತನುತ್ರಂ ಚೈವ ಬಿಚ್ಛೇದ ಶರೇಣ ಮಧುಸೂದನಃ ।
ತತೋ ವಿಮುಕ್ತಕವಚಃ ಸರ್ಪಸ್ಯೇವ ತನುರ್ಯಥಾ ॥ 22 ॥
ಜಗ್ರಾಹ ವಿಮಲಜ್ವಾಲಂ ಲೋಹಭಾರಾರ್ಪಿತಂ ದೃಢಮ್
ಆವಿಧ್ಯ ಸಹಸಾಮುಕ್ತಂ ಶೂಲಮಿಂದ್ರಾಸನಿಪ್ರಭಮ್ ॥ 23 ॥

ಶ್ರೀಕೃಷ್ಣನು ಹತ್ತುಬಾಣಗಳಿಂದ ನರಕನ ಸಾರಥಿ. ಅಶ್ವಗಳು. ಧ್ವಜ. ಹಾಗೂ ರಥವನ್ನು ಧ್ವಂಸ ಮಾಡಿದನು. ಅಲ್ಲದೆ ನರಕಾಸುರನ ಕವಚವನ್ನೇ

ಕತ್ತರಿಸಿದನು. ಕವಚ ಶೂನ್ಯನೂ ಸಾರಥ್ಯಾದಿಗಳಿಂದ ರಹಿತನಾದರೂ ಧೈರ್ಯಗುಂದದೆ ಜ್ವಾಲಾಮಾಲೆಯಿಂದ ಯುಕ್ತವೂ, ಭಾರವಾಗಿದ್ದು ದೃಢವಾಗಿದ್ದ ಶೂಲವನ್ನೆತ್ತಿ ಕೃಷ್ಣನ ಮೇಲೆ ಎಸೆದನು. ಆ ಶೂಲವು ವೇಗವಾಗಿ ಬರುತ್ತಿದ್ದ ಶೂಲಾಯುಧವನ್ನು ನೋಡಿ ಕ್ಷುರಪ್ರ'ಎಂಬ ಬಾಣದಿಂದ ಕತ್ತರಿಸಿ ಹಾಕಿದನು.

ಹೀಗೆ ಒಂದು ಮುಹೂರ್ತ ಕಾಲ ನರಕನೊಂದಿಗೆ ಯುದ್ಧ ಮಾಡುತ್ತಲೆ ಇದ್ದು, ಮುಂದೆ ಚಕ್ರಾಯುಧವನ್ನೆತ್ತಿ ಅದರಿಂದ ನರಕಾಸುರನ ದೇಹವನ್ನು ಎರಡು ಭಾಗಗಳಾಗಿ ಕತ್ತರಿಸಿ ಹಾಕಿದನು. ನರಕಾಸುರನೆಂಬ ಸೂರ್ಯನು ಅಸ್ತಂಗತನಾದನು. ರಕ್ತದಿಂದ ತೊಯ್ದ ನರಕನು ವಜ್ರಾಹತವೂ ಗೈರಿಕಾದಿ ಧಾತುಯುಕ್ತವಾದ ಪರ್ವತೋಪಾದಿಯಲ್ಲಿ ಕಾಣುತ್ತಿದ್ದನು.

### ಭೂದೇವಿಯ ಆರ್ತನಾದ

**ಭೂಮಿಸ್ತು ಪತಿತಂ ಪುತ್ರಂ ನಿರೀಕ್ಷ್ಯಾದಾಯ ಕುಂಡಲೇ ।**
**ಉಪಾತಿಷ್ಠತ ಗೋವಿಂದಂ ವಚನಂ ಚೇದಮಬ್ರವೀತ್ ॥ 24 ॥**

**ದತ್ತಃ ತ್ವಯೈವ ಗೋವಿಂದಃ ತ್ವಯೈವ ವಿನಿಪಾತಿತಃ ।**
**ಇಮೇ ತೇ ಕುಂಡಲೇ ದೇವ ಪ್ರಜಾಃ ತಸ್ಯಾನುಪಾಲಯ ॥ 25 ॥**

ನರಕನು ಸತ್ತು ಭೂಮಿಯಲ್ಲಿ ಬಿದ್ದಾಗ ದುಃಖಿಸಿ, ಅವನು ಕಿತ್ತು ತಂದಿದ್ದ ಅದಿತಿಯ ಕರ್ಣಕುಂಡಲಗಳನ್ನು ಶ್ರೀಕೃಷ್ಣನಿಗೆ ನೀಡುತ್ತಾ ಕೃಷ್ಣನೇ ಮಗನನ್ನು ನೀನೆ ನನಗೆ ಕೊಟ್ಟೆ, ನೀನೆ ಅವನನ್ನು ಸಂಹರಿಸಿದೆ. ಬಾಲಕನು ಆಟಿಕೆಗಳಿಂದ ಮನಸೇಚ್ಛೆ ಆಡುವಂತೆ ನಿನಗೂ ಈ ಸೃಷ್ಟಿ–ನಾಶ ಬಾಲಕರ ಆಟದಂತೆ ಈ ಕುಂಡಲ ಸ್ವೀಕರಿಸು. ನರಕನ ಪ್ರಜೆಗಳನ್ನೂ ರಕ್ಷಿಸು ಎಂದಳು

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ನರಕಾಸುರ ವಧೆ"ಎಂಬಲ್ಲಿ
ಅರವತ್ತಮೂರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 64 ವಿಷ್ಣುಪರ್ವ

# ಅಥ ಚತುಷ್ಷಷ್ಟಿತಮೋಽಧ್ಯಾಯಃ

*ವೈಶಂಪಾಯನ ಉವಾಚ –*

ನಿಹತ್ಯ ನರಕಂ ಭೌಮಂ ವಾಸವೋಪಮವಿಕ್ರಮಮ್ ।
ವಾಸವಾವರಜೋ ವಿಷ್ಣುಃ ದದರ್ಶ ನರಕಾಲಯಮ್ ॥ 1 ॥
ಅಥಾರ್ಥ ಗೃಹ ಮಾಸಾದ್ಯ ನರಕಸ್ಯ ಜನಾರ್ದನಃ ।
ದದರ್ಶ ಧನಮಕ್ಷಯ್ಯಂ ರತ್ನಾನಿ ವಿವಿಧಾನಿ ಚ ॥ 2 ॥
ಶಯನಾನಿ ಮಹಾರ್ಹಾಣಿ ತಥಾ ಸಿಂಹಾಸನಾನಿ ಚ ।
ಹಿರಣ್ಯದಂ ರುಚಿರಂ ಶೀತರಶ್ಮಿ ಸಮುಪ್ರಭಮ್ ॥ 3 ॥
ದದರ್ಶ ತನ್ಮಹಚ್ಛತ್ರಂ ವರ್ಷಮಾಣಮಿವಾಂಬುದಮ್
ವರುಣಾದಾಹೃತಂ ಪೂರ್ವಂ ನರಕೇಣೇತಿ ನಃ ಶ್ರುತಮ್ ॥ 4 ॥

ರಾಜನೇ! ಶ್ರೀಕೃಷ್ಣನು ಇಂದ್ರ ಪರಾಕ್ರಮಿ ನರಕನನ್ನು ಸಂಹರಿಸಿ. ಅವನ ಅಂತಃಪುರವನ್ನು ಪ್ರವೇಶಿಸಿದ. ಅಲ್ಲಿ ಧನಭಾಂಡಾಗಾರದಲ್ಲಿ ಅಪಾರ ಧನರಾಶಿ. ವಿವಿಧ ರತ್ನಗಳ ರಾಶಿ. ಮುತ್ತು. ಮಣಿ. ಹವಳ. ವೈಡೂರ್ಯಗಳು. ಚಂದ್ರಕಾಂತಮಣಿ. ವಜ್ರದರಾಶಿ. ಜಾಂಬೂನದ ಶಾಂತಕುಂಭ ಸುವರ್ಣದಿಂದ ಮಾಡಿದ ವಸ್ತುಗಳ ರಾಶಿಗಳನ್ನು ನೋಡಿದ.

ನಂತರ ಅಂತಃಪುರದಲ್ಲಿದ್ದ ಹಂಸತೂಲಿಕಾ ತಲ್ಪಗಳೂ. ಸಿಂಹಾಸನಗಳನ್ನೂ ನೋಡಿದನು. ಅಲ್ಲಿಯೆ ಪ್ರಧಾನ ಸಿಂಹಾಸನದ ಮೇಲಿದ್ದ ವರುಣನ

ಶ್ವೇತಚ್ಛತ್ರವನ್ನು ನೋಡಿದನು. ಚಂದ್ರನಿಗೆ ಸಮಾನಕಾಂತಿವುಳ್ಳದ್ದು. ಸಾವಿರಾರು ಸುವರ್ಣಧಾರೆಗಳು ನಿರಂತರ ಸುರಿಯುತ್ತಿದ್ದು ಆಕಾಶದಿಂದ ಮಳೆಗರೆದಂತೆ ಇತ್ತು. ಆ ಛತ್ರಿಯ ದಂಡವೂ ಸುವರ್ಣಮಯವಾಗಿತ್ತು. ನರಕಾಸುರನಲ್ಲಿದ್ದ ಅಪಾರ ಧನ ಕನಕ ಸಂಪತ್ತು ಕುಬೇರ, ಇಂದ್ರ, ಯಮರಲ್ಲಿಯೂ ಇರಲ್ಲಿಲ್ಲ. ಇತರರಲ್ಲಿದ್ದದ್ದೂ ಕೇಳಿಯೂ ಇಲ್ಲ.

### ಅಪರಾಧ ಸಂಪತ್ತು ಕೃಷ್ಣನ ವಶ

**ಹತೇ ಭೌಮೇ ನಿಸುಂದೇ ಚ ಹಯಗ್ರೀವೇ ಚ ದಾನವೇ ।**
**ಉಪನಿನ್ಯುಃ ತತಸ್ತಾನಿ ರತ್ನಾನಿ ಅಂತಃಪುರಾಣಿ ಚ ।**
**ದಾನವಾಃ ಹತಶಿಷ್ಟಾ ಯೇ ಕೋಶ ಸಂಚಯ ರಕ್ಷಿಣಃ ॥ 5 ॥**

ನರಕಾಸುರ, ನಿಸುಂದ, ಹಯಗ್ರೀವಾಸುರರೆಲ್ಲ ಮೃತರಾದ ಮೇಲೆ ಹತಾವಶಿಷ್ಟರಾದ ದಾನವರು ಹಾಗೂ ಕೋಶಾಗಾರದ ರಕ್ಷಕರು ಅಲ್ಲಿ ಸಂಗ್ರಹೀತವಾಗಿದ್ದ ಸಮಸ್ತ ಸಂಪತ್ತನ್ನೂ ಶ್ರೀಕೃಷ್ಣನಿಗೆ ತಂದೊಪ್ಪಿಸಿದರು.

ಜನಾರ್ದನನೇ! ಇಲ್ಲಿ ನಾನಾ ವಿಧ ಮಣಿ ರತ್ನಗಳು ಮುತ್ತು ಮಾಣಿಕ್ಯಗಳ ರಾಶಿಯಿದೆ. ನರಕನ ಗಜಶಾಲೆಯಲ್ಲಿ ಇಪ್ಪತ್ತು ಸಾವಿರ ಗಂಡಾನೆಗಳು ಇವೆ. ಹವಳ ಮುತ್ತು ಚಿತ್ರತವಾದ ಗಂಡಾನೆಗಳಿಗೆ ರತ್ನ ಕಂಬಳಿಗಳು, ಧನುಸ್ಸು ತೋಮರಾದಿ ಆಯುಧಗಳೂ ಇವೆ. ಗಂಡಾನೆಗಳಿಗೆ ದುಪ್ಪಟ್ಟು ನಲವತ್ತು ಸಾವಿರ ಹೆಣ್ಣಾನೆಗಳಿವೆ. ಅಶ್ವಶಾಲೆಯಲ್ಲಿ ಎಂಟು ಲಕ್ಷ ಅಶ್ವಗಳೂ, ಗೋಶಾಲೆಯಲ್ಲಿ ಅಸಂಖ್ಯಾತ ಗೋವುಗಳೂ ತುಂಬಿವೆ. ನೀನು ಎಷ್ಟು ಬೇಕೆಂದರೆ ಅಷ್ಟನ್ನೂ ದ್ವಾರಕೆಗೆ ನಾವೇ ಕಳುಹಿಸಿಕೊಡುತ್ತೇವೆ. ಉಣ್ಣೆ, ಬಟ್ಟೆಗಳೂ, ಹಾಸಿಗೆ, ಆಸನ, ಮಾತನಾಡುವ ದೇವತೆಗಳಲ್ಲಿ ಗಂಧರ್ವ, ಪನ್ನಗರಲ್ಲಿ ಯಾವ ಐಶ್ವರ್ಯಗಳಿವೆಯೋ ಅವೆಲ್ಲ ನರಕನೊಬ್ಬನಲ್ಲಿಯೆ ಇರುತ್ತವೆ.

ದಾನವರ ಮಾತನ್ನು ಕೇಳಿದ ಶ್ರೀಕೃಷ್ಣನು ಮಹೈಶ್ವರ್ಯವನ್ನು ನೋಡಿ ಅವೆಲ್ಲವನ್ನೂ ದ್ವಾರಕೆಗೆ ಕಳುಹಿಸಿದ.

### ಶ್ವೇತಛತ್ರ ಪರಿಗ್ರಹ

**ತತಃ ತದ್ ವಾರುಣಂ ಛತ್ರಂ ಸ್ವಯಮುತ್ಕ್ಷಿಪ್ಯ ಮಾಧವಃ ।**
**ಹಿರಣ್ಯವರ್ಷಂ ವರ್ಷಂತಂ ಆರುರೋಹ ವಿಹಂಗಮಮ್ ॥ 6 ॥**

**ತತೋಽಭ್ಯಯಾದ್ ಗಿರಿಶ್ರೇಷ್ಠಮಭಿತೋ ಮಣಿಪರ್ವತಮ್ ।**
**ತತ್ರ ವೈದೂರ್ಯವರ್ಣಾನಿ ದದರ್ಶ ಮಧುಸೂದನಃ ॥ 7 ॥**

ನಂತರ ಸುವರ್ಣವನ್ನು ಮಳೆಗರೆಯುವ ವರುಣ ದೇವನ ಶ್ವೇತಚ್ಛತ್ರವನ್ನು ಸಿಂಹಾಸನದಿಂದ ಬೇರೆ ಮಾಡಿ ಅದರ ಸಹಿತ ಗರುಡನ ಮೇಲೆ ಕುಳಿತನು. ಮುಂದೆ ಪರ್ವತಶ್ರೇಷ್ಠವಾದ 'ಮಣಿಪರ್ವತ'ಕ್ಕೆ ಹೊರಟ. ಶ್ರೀಕೃಷ್ಣನು ವೈದೂರ್ಯ ವರ್ಣದಿಂದ ಕೂಡಿದ ತೋರಣಾದಿಗಳಿಂದ ಅಲಂಕೃತ ನಾನಾ ಭವನಗಳನ್ನು ನೋಡಿದನು. ಇಲ್ಲಿಯೇ ಸಾವಿರಾರು ರಾಜಕುಮಾರಿಯರನ್ನು ಬಂಧಿಸಿಟ್ಟಿದ್ದನು.

ಸುವರ್ಣಮಯವಾದ ಚಿತ್ರಿತವಾದ ಮೇಲ್‌ಛಾವಣಿಗಳಿಂದ ಕೂಡಿದ ಪ್ರಾಸಾದಗಳಿಂದ ಆ ಪರ್ವತವು ಶೋಭಾಯಮಾನವಾಗಿತ್ತು. ಆ ಪ್ರಾಸಾದಗಳಲ್ಲಿ ಗಂಧರ್ವರ ದೇವತೆಗಳ ಕನ್ಯೆಯರಿದ್ದರು. ಎಲ್ಲೂ ಹೋಗದಂತೆ ರಕ್ಷಣಾ ವ್ಯವಸ್ಥೆ ಇತ್ತು.

ಅವರಾರೂ ನರಕಾಸುರನಿಗೆ ವಶರಾಗಿರಲ್ಲಿಲ್ಲ. ಅವರಿಗೆ ಯಾವುದೇ ಕಾಮೋಪಭೋಗಗಳು ಬೇಕಾಗಿರಲಿಲ್ಲ. ವ್ರತೋಪವಾಸಾದಿಗಳಿಂದ ದೇಹವನ್ನು ಸವೆಸಿದ್ದರು. ಶ್ರೀಕೃಷ್ಣನನ್ನು ನೋಡಬೇಕೆಂದು ಕಾತರರಾಗಿದ್ದ ಅವರೆಲ್ಲ ಅವನ ಬಳಿ ಬಂದು ನಮಸ್ಕರಿಸಿ ನಿಂತರು. ಆ ರಾಜಕುಮಾರಿಯರನ್ನು ರಕ್ಷಿಸುತ್ತಿದ್ದ ರಾಕ್ಷಸರೂ ಬಂದು ಕೈಮುಗಿದು ನಿಂತರು.

## ಶ್ರೀಕೃಷ್ಣನನ್ನೆ ವರಿಸಲು ಸಂಕಲ್ಪ

**ತಾಸಾಂ ಪರಮನಾರೀಣಾಂ ಋಷಭಾಕ್ಷಂ ನಿರೀಕ್ಷ್ಯ ತಮ್ ।**
**ಸರ್ವಾಸಾಮೇವ ಸಂಕಲ್ಪಃ ಪತಿತ್ವೇನಾಭವತ್ ತತಃ ॥ 8 ॥**

**ಸಂಪ್ರಹೃಷ್ಟಾಃ ಮಹಾಬಾಹುಮಿದಂ ವಚನಮಬ್ರುವನ್ ।**
**ಸತ್ಯಂ ಚ ಯತ್ ಪುರಾ ವಾಯುರಿಹಾಸ್ಮಾನ್ ವಾಕ್ಯಮಬ್ರವೀತ್ ॥ 9 ॥**

**ಸರ್ವಭೂತಮತಿಜ್ಞಶ್ಚ ದೇವರ್ಷಿರಪಿ ನಾರದ ।**
**ವಿಷ್ಣುಃ ನಾರಾಯಣಃ ದೇವಃ ಶಂಖಚಕ್ರಗದಾಸಿಭೃತ್ ।**
**ಸ ಭೌಮಂ ನರಕಂ ಹತ್ವಾ ಭರ್ತಾ ಚ ಭವಿತಾ ಸ ವಃ ॥ 10 ॥**

ಶ್ರೀಕೃಷ್ಣನನ್ನು ನೋಡಿದ ಕೂಡಲೇ ಅವರೆಲ್ಲರ ಸಂಕಲ್ಪವೂ ಶ್ರೀಕೃಷ್ಣನನ್ನೆ ಕೈಹಿಡಿದು ಅವನನ್ನು ಪತಿಯನ್ನಾಗಿ ಹೊಂದಬೇಕೆಂದಾಗಿತ್ತು.

ಸಂತೋಷದಿಂದ ಹೀಗೆಂದರು – ಸ್ವಾಮಿನ್! ಹಿಂದೆ ವಾಯುದೇವನು ನಮಗೆ ನಿನ್ನನ್ನು ಹೊಂದುವ ಬಗ್ಗೆ ಹೇಳಿದ ಮಾತು ಹಾಗೆ ಸರ್ವಪ್ರಾಣಿ ಮನೋಭಾವ ತಿಳಿಯುವ ನಾರದರೂ ಏನು ಹೇಳಿದ್ದರೋ ಅದು ಇಂದು ಸತ್ಯವಾಗಿ ಪರಿಣಮಿಸಿದೆ.

ಶಂಖ-ಚಕ್ರ-ಗದಾ-ಖಡ್ಗಧಾರಿ ಶ್ರೀಕೃಷ್ಣನು ಭೂದೇವಿಯ ಪುತ್ರನನ್ನು ಸಂಹರಿಸಿ, ನಿಮ್ಮೆಲ್ಲರನ್ನು ಪಾಣಿಗ್ರಹಣ ಮಾಡುವನು ಈ ಮಾತನ್ನು ಬಹಳ ಹಿಂದೆಯೇ ಕೇಳಿದ್ದೆವು. ನಾವೂ ನಿನ್ನ ಪರಮಾದ್ಭುತ ಮಹಿಮೆಗಳನ್ನು ಕೇಳಿದ್ದೆವೋ ಅಂತಹ ಪರಮಪ್ರಿಯ ಪ್ರಭುವನ್ನು ನಾವೀಗ ಪ್ರತ್ಯಕ್ಷವಾಗಿ ಕಾಣುತ್ತಿದ್ದೇವೆ, ಧನ್ಯರಾದೆವು.

ಶ್ರೀಕೃಷ್ಣನೂ ಸಹ ಅವರ ಮಾತುಗಳನ್ನು ಕೇಳಿ ಅವರನ್ನು ಸಮಾಧಾನಗೊಳಿಸಿ, ಮಂದಸ್ಮಿತನಾಗಿ ಅವರನ್ನು ನೋಡಿ ಮಾತನಾಡಿದನು.

### ಕಿಂಕರರಿಂದ ಕನ್ಯೆಯರ ದ್ವಾರಕಾಗಮನ

**ಯಾನೈಃ ಕಿಂಕರ ಸಂಯುಕ್ತೈಃ ಉವಾಹ ಮಧುಸೂದನಃ ।**
**ಕಿಂಕರಾಣಾಂ ಸಹಸ್ರಾಣಿ ರಕ್ಷಸಾಂ ವಾತರಂಹಸಾಮ್ ॥ 11 ॥**

ಕೃಷ್ಣನು ರಾಜಕುಮಾರಿಯರೆಲ್ಲರನ್ನೂ ಯಥಾಯೋಗ್ಯ ಗೌರವಿಸಿ, ಕಿಂಕರರೆಂಬ ರಾಕ್ಷಸರು ಹೊತ್ತುಕೊಂಡಿದ್ದ ಪಲ್ಲಕ್ಕಿಗಳಲ್ಲಿ ಎಲ್ಲರನ್ನೂ ಕುಳ್ಳಿರಿಸಿದನು. ವಾಯುವೇಗಿಗಳಾದ ರಾಕ್ಷಸರು ಪಲ್ಲಕ್ಕಿಯನ್ನೆತ್ತಿ ಹೋಗುವಾಗ ಪ್ರಯಾಣದ ಮಹಾಶಬ್ಧವುಂಟಾಯಿತು.

### ಮಣಿಪರ್ವತವನ್ನು ಕಿತ್ತಿಟ್ಟ ಕೃಷ್ಣ

**ತಸ್ಯ ಪರ್ವತ ರಾಜಸ್ಯ ಶೃಂಗಂ ಯತ್ ಪರಮಾರ್ಚಿತಮ್ ।**
**ವಿಮಲಾರ್ಕೇಂದು ಸಂಕಾಶಂ ಮಣಿಕಾಂಚನ ತೋರಣಮ್ ॥ 12 ॥**

**ತದಪ್ಯತಿಬಲೋ ವಿಷ್ಣುಃ ದೋರ್ಭ್ಯಾಮುತ್ಪಾಟ್ಯ ಭಾಸುರಮ್ ।**
**ಆರೋಪಯಾಮಾಸ ಬಲೀ ಗರುಡೇ ಪಕ್ಷಿಣಾಂ ವರೇ ॥ 13 ॥**

**ಮಣಿಪರ್ವತ ಶೃಂಗಂ ಚ ಸಭಾರ್ಯಂ ಚ ಜನಾರ್ದನಮ್ ।**
**ಉವಾಹ ಲೀಲಯಾ ಪಕ್ಷೀ ಗರುಡಃ ಪತತಾಂ ವರಃ ॥ 14 ॥**

ಶ್ರೀಕೃಷ್ಣನು ಪರ್ವತಾರಾಜನೆನಿಸಿದ ಮಣಿಪರ್ವತದ ಶಿಖರವು ಸೂರ್ಯಚಂದ್ರಂತೆ ಬೆಳಗುತ್ತಿತ್ತು. ಪಕ್ಷಿಗಳು, ಆನೆಗಳು, ಜಿಂಕೆ, ಸರ್ಪ, ಮಹಾನ್ ವೃಕ್ಷಗಳಿಂದ ಪೂರ್ಣವಾಗಿತ್ತು. ಇಲ್ಲಿರುವ ಜಿಂಕೆ, ರುರು, ಹಾದಿ, ಜಲಪಾತಗಳಿಂದ ಊಹಿಸಲಸಾಧ್ಯವಾದಷ್ಟು ಮನೋಹರವಾಗಿತ್ತು.

ಶ್ರೀಕೃಷ್ಣನು ಆ ಮಣಿಪರ್ವತವನ್ನೂ ತನ್ನೆರಡೂ ಕೈಗಳಿಂದ ಕಿತ್ತಿ ಗರುಡನ ಮೇಲಿರಿಸಿದನು. ಗರುಡನಾದರೂ ಅದನ್ನು ಸತ್ಯಭಾಮಾ ಸಹಿತ ಕೇಶವನನ್ನೂ ಅನಾಯಾಸವಾಗಿ ಹೊತ್ತು ಹೊರಟನು. ಅವನ ವೇಗಕ್ಕೆ ಗಿಡಮರಗಳು ಉರುಳಿದವು. ಗಂಧರ್ವಾದಿಗಳು ಸ್ತುತಿಸುತ್ತಿದ್ದರು.

ಹೀಗೆ ಗರುಡಾರೂಢನಾಗಿ ಮೇರು ಪರ್ವತಕ್ಕೆ ಬಂದನು. ಅಲ್ಲಿ ದೇವತೆಗಳೆಲ್ಲರೂ ಸೇರಿದ್ದರು. ಅಲ್ಲಿದ್ದ ದೇವತಾವೃಂದವನ್ನೂ ದಾಟಿ ಮುಂದೆ ದೇವಲೋಕಕ್ಕೆ ಬಂದನು.

ಇಂದ್ರಭವನ ಪ್ರವೇಶಿಸಿ ವಾಹನದಿಂದ ಇಳಿದು ಇಂದ್ರನನ್ನು ನೋಡಿ, ಅದಿತಿದೇವಿಯ ಕರ್ಣಕುಂಡಲಗಳನ್ನು ಇಂದ್ರದೇವನಿಗೆ ಕೊಟ್ಟು ಪ್ರಣಾಮ ಮಾಡಿದನು.

### ಅದಿತಿಯ ಪ್ರೀತ್ಯಾಲಿಂಗನ

**ಅದಿತಿಸ್ತೌ ಸುತೌ ಪ್ರೀತ್ಯಾ ಪರಿಷ್ವಜ್ಯಾಭಿನಂದ್ಯ ಚ ।**
**ಆಶೀರ್ಭಿಃ ಅನುಕೂಲಾಭಿಃ ಉಭಾವಪ್ಯವದತ್ ತದಾ ॥ 15 ॥**
**ಪೌಲೋಮಿೂ ಸತ್ಯಭಾಮಾ ಚ ಪ್ರೀತ್ಯಾ ಪರಮಯಾ ಯುತೇ ।**
**ಅಗೃಹ್ಣೀತಾಂ ವರಾರ್ಹಾಯಾಃ ದೇವ್ಯಾಸ್ತೇ ಚರಣೌ ಶುಭೌ ॥ 16 ॥**

ಶ್ರೀಕೃಷ್ಣನು ತಂದು ಕೊಟ್ಟ ಕುಂಡಲಗಳನ್ನು ಇಂದ್ರದೇವನು ತಾಯಿ ಅದಿತಿಗೆ ನೀಡಿದನು. ಹಾಗೂ ಶ್ರೀಕೃಷ್ಣನ ಪರಾಕ್ರಮ ಕೊಂಡಾಡಿದನು. ಅದಿತಿಯ ಇಂದ್ರೋಪೇಂದ್ರರನ್ನು ಪ್ರೀತಿಪೂರ್ವಕ ಆಲಿಂಗಿಸಿಕೊಂಡು ಅಭಿನಂದಿಸಿದಳು.

ಶಚೀ ಹಾಗು ಸತ್ಯಭಾಮಾದೇವಿಯರೂ ಸಹ ಅದಿತಿಯ ಪಾದ ಮುಟ್ಟಿ ನಮಸ್ಕರಿಸಿದರು. ಅವರನ್ನು ಪ್ರೀತಿಯಿಂದ ಮಾತನಾಡಿಸಿದಳು. ಶ್ರೀಕೃಷ್ಣ ಸತ್ಯೆಯರಿಗೆ ಆಶೀರ್ವದಿಸಿದಳು.

## ಅದಿತಿಯ ಆಶೀರ್ವಾದ

**ಅಧೃಷ್ಯಃ ಸರ್ವಭೂತಾನಾಂ ಅವಧ್ಯಶ್ಚ ಭವಿಷ್ಯಸಿ ।**
**ಯಥೈವ ದೇವರಾಜೋಽಯಂ ಅಜಿತೋ ಲೋಕಪೂಜಿತಃ ॥ 17 ॥**

**ಭವತ್ವಿಯಂ ವರಾರೋಹಾ ನಿತ್ಯಂ ಚ ಪ್ರಿಯದರ್ಶನಾ ।**
**ಸರ್ವಲೋಕೇಷು ವಿಖ್ಯಾತಾ ದಿವ್ಯಗಂಧಾ ಮನೋರಮಾ ॥ 18 ॥**

**ಸತ್ಯಭಾಮೋತ್ತಮಾ ಸ್ತ್ರೀಣಾಂ ಸುಭಗಾ ಸ್ಥಿರಯೌವನಾ ।**
**ಜರಾಂ ನ ಯಾಸ್ಯತಿ ವಧೂಃ ಯಾವತ್ ತ್ವಂ ಕೃಷ್ಣಃ ಮಾನುಷಃ ॥ 19 ॥**

ಶ್ರೀಕೃಷ್ಣನೆ! ಹೇಗೆ ಇಂದ್ರದೇವನು ಅಜೇಯನಾಗಿ ತ್ರಿಲೋಕ ಪೂಜಿತನಾಗಿರುವನೋ ಹಾಗೆಯೇ ನೀನೂ ಯಾರಿಂದಲೂ ಎದುರಿಸಲಸಾಧ್ಯನೂ, ಯಾರಿಂದಲೂ ಅವಧ್ಯನೂ ಆಗಿರು.

ಸುಂದರಿಯಾದ ಈ ನಿನ್ನ ಭಾಮೆಯಾದ ಸತ್ಯಭಾಮೆಯು ಸದಾ ನಿನಗೆ ಪ್ರಿಯದರ್ಶನಳಾಗಿರುವಳು. ಸಕಲಲೋಕ ವಿಖ್ಯಾತಳೂ ಇವಳ ಶರೀರದ ಆಸ್ಯ, ನಾಸಾದಿ ನವದ್ವಾರಗಳೂ ದಿವ್ಯಗಂಧವನ್ನು ಹೊರಸೂಸುತ್ತಿರುತ್ತವೆ. ಪತಿಗೆ ಅನುಕೂಲಳಾಗಿರುತ್ತಾಳೆ. ಇವಳ ಯೌವನವು ಯಾವಾಗಲೂ ಸುಸ್ಥಿರವಾಗಿರುತ್ತದೆ. ಮಂಗಲ ದೇವತೆ ಲಕ್ಷ್ಮೀದೇವಿಯಂತೆ ಇವಳೂ ಸಹ ಮಂಗಲದೇವತೆಯಾಗಿರುವಳು. ನೀನು ಭೂಮಿಯಲ್ಲಿ ಮನುಷ್ಯನಂತೆ ಎಲ್ಲಿಯವರೆಗೂ ಇರುವೆಯೋ ಅಲ್ಲಿಯವರೆಗೂ ಇವಳನ್ನು ವೃದ್ಧಾಪ್ಯವು ಪೀಡಿಸುವುದಿಲ್ಲ ಎಂದು ಆಶೀರ್ವದಿಸಿದಳು.

### ಪಾರಿಜಾತ ಹರಣ

ಹೀಗೆ ಅದಿತಿಯು ಆಶೀರ್ವಾದ ಪಡೆದು ಸತ್ಯೆಯೊಂದಿಗೆ ಗರುಡನನ್ನೇರಿ ನಂತರ ವನಕ್ಕೆ ಹೋಗಿ ಅಲ್ಲಿ ವಾಹನದಿಂದಿಳಿದು ಸತ್ಯಭಾಮೆಯೊಂದಿಗೆ ವಿಹಾರ ಮಾಡಲು ಸಂಚರಿಸಿದನು. ಅಲ್ಲಿದ್ದ ಪಾರಿಜಾತ ವೃಕ್ಷವನ್ನು ನೋಡಿದನು.

## ಪಾರಿಜಾತ ವೈಶಿಷ್ಟ್ಯ

**ದಿವ್ಯಮಭ್ಯರ್ಚಿತಂ ದೇವೈಃ ಪಾರಿಜಾತಂ ಮಹಾದ್ರುಮಮ್ ।**
**ನಿತ್ಯ ಪುಷ್ಪಧರಂ ದಿವ್ಯಂ ಪುಣ್ಯಗಂಧಮನುತ್ತಮಮ್ ॥ 20 ॥**

**ಯಮಾಸಾದ್ಯ ಜನಃ ಸರ್ವೋ ಜಾತಿಂ ಸ್ಮರತಿ ಪೂರ್ವಿಕೀಮ್ ।**
**ಸಂರಕ್ಷ್ಯಮಾಣಂ ದೇವೈಸ್ತಂ ಪ್ರಸಹ್ಯ ಅಮಿತವಿಕ್ರಮಃ ।**
**ಉತ್ಪಾಟ್ಯಾರೋಪಯಾಮಾಸ ವಿಷ್ಣುಸ್ತಂ ಗರುಡೋಪರಿ ॥ 21 ॥**

ಇಂದ್ರನ ಉದ್ಯಾನವನದ ಕ್ರೀಡಾವನದಲ್ಲಿ ಸರ್ವರಿಂದ ಪೂಜಿತವೂ, ಪುಣ್ಯಗಂಧ ಸೂಸುವ ಪಾರಿಜಾತ ವೃಕ್ಷವನ್ನು ನೋಡಿದನು. ಆ ವೃಕ್ಷದಡಿಯಲ್ಲಿ ಯಾರು ಹೋದರೂ ಅವರಿಗೆ ಪೂರ್ವಜನ್ಮದ ಸ್ಮರಣೆವುಂಟಾಗುತ್ತಿತ್ತು. ದೇವತೆಗಳಿಂದ ರಕ್ಷಿತವಾಗಿದ್ದ ಪಾರಿಜಾತ ವೃಕ್ಷವನ್ನು ಬಲಾತ್ಕಾರವಾಗಿ ಕಿತ್ತು ಗರುಡನ ಮೇಲಿರಿಸಿದನು. ಅಲ್ಲಿದ್ದ ಅಪ್ಸರಾಗಣವನ್ನು ಕೃಷ್ಣ–ಸತ್ಯಭಾಮೆಯರು ನೋಡಿದರು. ಅಪ್ಸರೆಯರೂ ಸಹ ಗಿಡವನ್ನು ಹೊತ್ತು ನಡೆದದ್ದನ್ನೂ ನೋಡಿದರು. ಗಿಡದೊಂದಿಗೆ ದ್ವಾರಕೆಗೆ ಬಂದರು. ದೇವೇಂದ್ರನಿಗೆ ಶಚಿಯ ಒತ್ತಡದಂತೆ ಯುದ್ಧ ಹೂಡಲು ಆರಂಭಿಸಿದನು. ಶ್ರೀಕೃಷ್ಣನು ಯುದ್ಧದಲ್ಲಿ ಎಲ್ಲರನ್ನು ಸೋಲಿಸಿ ಗಿಡ ತಂದನು. ಇಂದ್ರದೇವನು ತನಗೆ ಮಾಡಿರುವ ಉಪಕಾರ ನೆನೆದು ಪಾರಿಜಾತ ವೃಕ್ಷವನ್ನು ತೆಗೆದುಕೊಂಡು ಹೋಗಲು ಅನುಮತಿಯಿತ್ತನು. ಶ್ರೀಕೃಷ್ಣನು ದ್ವಾರಕೆಗೆ ಬಂದನು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ಪಾರಿಜಾತಹರಣ"ವೆಂಬಲ್ಲಿ
ಅರವತ್ತನಾಲ್ಕನೇ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

ವಿಷ್ಣುಪರ್ವ 65 ವಿಷ್ಣುಪರ್ವ

# ಅಥ ಪಂಚಷಷ್ಟಿತಮೋಽಧ್ಯಾಯಃ

*ವೈಶಂಪಾಯನ ಉವಾಚ-*

**ಜನಮೇಜಯ ಕೃಷ್ಣಸ್ಯ ಕೃತದಾರಸ್ಯ ಭಾರತ ।**
**ನಿಬೋಧ ಚರಿತಂ ಚಿತ್ರಂ ತಸ್ಯೈವ ಸದೃಶಂ ಪ್ರಭೋ ॥ 1 ॥**

**ಪ್ರಾಪ್ತದಾರೋ ಮಹಾತೇಜಾಃ ವಾಸುದೇವಃ ಪ್ರತಾಪವಾನ್ ।**
**ರುಗ್ಮಿಣ್ಯಾ ಸಹಿತೋ ದೇವ್ಯಾ ಯಯೌ ರೈವತಕಂ ನೃಪ ॥ 2 ॥**

ಜನಮೇಜಯನೇ! ಶ್ರೀಕೃಷ್ಣನ ಮಹಿಮೆಯನ್ನು ಷಡ್ಗುಣಗಳು ಹೇಗೆ ಪ್ರಕಟವಾಗುತಿತ್ತು ಎಂದು ಹೇಳುವೆ ಕೇಳು.

ವಿವಾಹನಂತರ ಪ್ರತಾಪಿಯಾದ ವಾಸುದೇವನು ರುಗ್ಮಿಣೀಯೊಂದಿಗೆ ರೈವತಕ ಪರ್ವತಕ್ಕೆ ಹೋದನು. ಅಂದೇ ರುಗ್ಮಿಣಿದೇವಿಯ ವ್ರತದ ಪರಿಸಮಾಪ್ತಿಯೂ ಇತ್ತು. ಅವಳು ಲೋಕಶಿಕ್ಷಣಕ್ಕಾಗಿ ಮಾಡಿದ್ದ ವ್ರತವನ್ನು ಪ್ರಶಂಸಿಸುತ್ತಾ, ಅಲ್ಲಿಗೆ ಆಹ್ವಾನಿತರಾಗಿ ಬಂದಿರುವ ವಿಪ್ರರನ್ನು ಭೋಜನಾದಿಗಳಂದ ತೃಪ್ತಿ ಪಡಿಸುವುದೂ ಉದ್ಧೇಶವಿತ್ತು.

ಶ್ರೀಕೃಷ್ಣನೊಂದಿಗೆ ಹದಿನಾರು ಸಾವಿರನೂರು ರಾಜಕುಮಾರಿಯರೂ ಹೊರಟು ಬಂದಿದ್ದರು.

**ತತಸ್ತತ್ರ ದ್ವಿಜಾತೀನಾಂ ಕಾಮಾನ್ ಪ್ರಾದಾದಧೋಕ್ಷಜಃ ।**
**ಕಲ್ಯಾಣ ನಾಮ ಗೋತ್ರಾಣಾಂ ಮಹತಾಂ ಪುಣ್ಯಕರ್ಮಣಾಮ್ ॥ 3 ॥**

**ತರ್ಪಯಿತ್ವಾ ದ್ವಿಜಾನ್ ಕಾಮ್ಯೈಃ ಇಷ್ಟೈರಿಷ್ಟಃ ಸತಾಂಗತಿಃ ।**
**ಉಪವಾಸಾವಸಾನೇಽಥ ಭಗವಾನ್ ಸ ವಿಶೇಷತಃ ।**
**ಬಹು ಮೇನೇ ಪ್ರಿಯಾಂ ಭಾರ್ಯಾಂ ರುಗ್ಮಿಣೀಂ ಭೀಷ್ಮಕಾತ್ಮಜಾಮ್॥4॥**

ಶ್ರೀಕೃಷ್ಣನು ಈ ವ್ರತ ಪರಿಸಮಾಪ್ತಿ ಕಾಲದಲ್ಲಿ ಆಹೂತರಾಗಿದ್ದ ಬ್ರಾಹ್ಮಣರಿಗೆ ಯಥೇಚ್ಛ ಕಾಮನೆಗಳನ್ನು ಪೂರೈಸಿ, ಧರ್ಮಪರಾಯಣರಾದ, ಜನ್ಮ-ಕರ್ಮ, ವಿದ್ಯೆಗಳಲ್ಲಿ ಯಜ್ಞದಲ್ಲಿ ಪರಿಶುದ್ಧರಾದ ಬ್ರಾಹ್ಮಣರುಗಳಿಗೆ ಇಷ್ಟಗಳಿಂದ ಸಂತುಷ್ಟರನ್ನಾಗಿಸಿ, ನಂತರ ತನ್ನ ಬಂಧು ಬಾಂಧವರನ್ನು ಯಥಾಯೋಗ್ಯ ಸತ್ಕರಿಸಿದರು.

ರುಗ್ಮಿಣಿಯ ಉಪವಾಸ ವ್ರತವು ಸಮಾಪ್ತಿಯಾದ ಮೇಲೆ ರುಗ್ಮಿಣಿಯನ್ನು ಅತ್ಯಂತವಾಗಿ ಆದರಿಸಿದನು. ಒಮ್ಮೆ ಕೃಷ್ಣನು ಪತ್ನಿಯರೊಂದಿಗೆ ಕುಳಿತಿರುವಾಗ ನಾರದರು ಆಗಮಿಸಿದರು. ನಾರದರನ್ನು ಸ್ವಾಗತ ಮಾಡಿ ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿದನು. ನಾರದರು ಪರಮಪ್ರೀತರಾಗಿ ತಮ್ಮೊಂದಿಗೆ ತಂದಿದ್ದ ಪಾರಿಜಾತ ಪುಷ್ಪವನ್ನು ಕೃಷ್ಣನಿಗೆ ನೀಡಿ ಕೃಷ್ಣನೇ! ನಿನಗೆ ಅತ್ಯಂತ ಪ್ರಿಯಳಾದ ಭಾರ್ಯೆಗೆ ಇದನ್ನು ನೀಡು ಎಂದರು.

### ಪಾರಿಜಾತ ರುಗ್ಮಿಣಿಗೆ

**ಪಾರಿಜಾತತರೋಃ ಪುಷ್ಪಂ ದದೌ ಕೃಷ್ಣಾಯ ಭಾರತ ।**
**ತದ್ ವೃಕ್ಷರಾಜಕುಸುಮಂ ರುಗ್ಮಿಣ್ಯಾಃ ಪ್ರದದೌ ಹರಿಃ ॥ 5 ॥**

**ಪಾರ್ಶ್ವಸ್ಥಾ ಸಾ ಹಿ ಕೃಷ್ಣಸ್ಯ ಭೋಜ್ಯಾ ನರವರಾಭವತ್ ।**
**ಪ್ರತಿಗೃಹ್ಯ ತು ತತ್ ಪುಷ್ಪಂ ಕಾಮಾರಣಿರನಿಂದಿತಾ ॥ 6 ॥**

**ಶಿರಸ್ಯಮಲಪತ್ರಾಕ್ಷೀ ದದೌ ಕೃಷ್ಣೇಂಗಿತಾನುಗಾ ।**
**ಶುಶುಭೇ ದೇವ ಪುಷ್ಪೇಣ ದ್ವಿಗುಣಂ ಭೈಷ್ಮಿಕೀ ತದಾ ॥ 7 ॥**

ನಾರದರು ನೀಡಿದ ಪುಷ್ಪವನ್ನು ತನ್ನ ಪಾರ್ಶ್ವದಲ್ಲಿಯೇ ಕುಳಿತಿದ್ದ ರುಗ್ಮಿಣಿಯ ಕೈಯಲ್ಲಿ ನೀಡಿ ಇದನ್ನು ಮುಡಿದುಕೋ ಎಂದಾಗ ಕೃಷ್ಣನ ಅಂತರಂಗವರಿತ ರುಗ್ಮಿಣಿಯು ಅದನ್ನು ಸ್ವೀಕರಿಸಿ, ಅದನ್ನು ಶಿರಸ್ಸಿನಲ್ಲಿ ಧರಿಸಿದಳು. ಮಹಾಸೌಂದರ್ಯವತಿಯಾದ ರುಗ್ಮಿಣಿಯು, ಈ ದೇವಲೋಕ ಪುಷ್ಪಧರಿಸಿ, ಅತ್ಯಧಿಕ ರೂಪಲಾವಣ್ಯಗಳಿಂದ ಶೋಭಿಸಿದಳು.

*ನಾರದ ಉವಾಚ –*

**ತವೈವೌಪಯಿಕಂ ಪುಷ್ಪಮೇಕಂ ದೇವಿ ಪತಿವ್ರತೇ ।**
**ಅತ್ಯರ್ಹಾ ಚ ಮತಾ ಮೇ ತ್ವಂ ಏತದ್ ಪುಷ್ಪಾದ್ ಧೃತವ್ರತೇ ॥ 8 ॥**
**ಅಮ್ಲಾನಮೇತತ್ ಸತತಂ ಪುಷ್ಪಂ ಭವತಿ ಕಾಮಿನಿ ।**
**ಈಪ್ಸಿತಾನಪಿ ಗಂಧಾಂಶ್ಚ ದದಾತಿ ವದತಾಂ ವರೇ ।**
**ಶೀತೋಷ್ಣೇ ಚೇತ್ ಇಚ್ಛತೇ ದೇವಿ ಪುಷ್ಪಮೇತತ್ ಪ್ರಯಚ್ಛತಿ ॥ 9 ॥**

ಪಾರಿಜಾತ ಪುಷ್ಪಧರಿಸಿದ ರುಗ್ಮಿಣಿಗೆ ಸುಗುಣಮಣಿ ರುಗ್ಮಿಣಿ! ಈ ನಿನ್ನ ಸಂಬಂಧದಿಂದಾಗಿ ಈ ಪುಷ್ಪ ಅತ್ಯಂತವಾಗಿ ಮೆರಗುತ್ತಿದೆ. ಈ ಪುಷ್ಪಧಾರಣೆಗೆ ನೀನೆ ಅತ್ಯಂತ ಯೋಗ್ಯಳೆಂದು ನನ್ನ ಮತ. ಪತಿವ್ರತೆಯೇ! ಈ ಕುಸುಮವು ಒಂದು ಸಂವತ್ಸರ ಪರ್ಯಂತ ನೀನು ಇಚ್ಛಿಸಿದ ಸುಗಂಧ ಹೊರಸೂಸುತ್ತದೆ. ಶೀತ–ಉಷ್ಣಗಳಲ್ಲಿ ಶೀತವನ್ನೋ –ಉಷ್ಣವನ್ನೋ ಬಯಸಿದೆಯಾದರೆ ಅದನ್ನು ಈ ಸುಮವು ಒದಗಿಸಿಕೊಡುತ್ತದೆ. ಯಾವುದೇ ರಸಗಳನ್ನು ಇಚ್ಛಿಸಿದರೂ ಅದನ್ನು ಸುರಿಸುತ್ತದೆ. ಇದನ್ನು ಸರಿಯಾಗಿ ಸೇವಿಸಿದರೆ ಸೌಭಾಗ್ಯವನ್ನೂ ಕೊಡಲು ಸಮರ್ಥವಾಗಿದೆ. ಇದು ಯಾವ ಜಾತಿಯ ಪುಷ್ಪವನ್ನಾದರೂ ಕೊಡಬಲ್ಲನು. ಇದು ಐಶ್ವರ್ಯ, ಸತ್ಸಂತಾನವನ್ನೂ ಕೊಡುತ್ತದೆ. ಇದನ್ನು ನಿರಂತರ ಧರಿಸಿದ್ದಲ್ಲಿ ಅಶುಭ ವಿಷಯಗಳು ಪ್ರವೇಶಿಸುವುದಿಲ್ಲ. ಇದು ಯಾವ ಬಣ್ಣದ್ದಾಗಿರಬೇಕೆನ್ನುವೆಯೋ ಆ ಬಣ್ಣದಲ್ಲಿಯೇ ತನ್ನನ್ನು ತೋರಿಸಬಲ್ಲದು. ದೊಡ್ಡದಾಗಬೇಕೆಂದರೆ ದೊಡ್ಡದಾಗುವುದು. ಚಿಕ್ಕದಾಗಬೇಕೆಂದರೆ ಚಿಕ್ಕದಾಗುತ್ತದೆ. ರಾತ್ರಿಯಲ್ಲಿ ಪ್ರದೀಪದ ಕೆಲಸವನ್ನೂ ಮಾಡಿ ಬೆಳಕನ್ನು ಹರಿಸಬಲ್ಲದು. ಇದು ದುರ್ಗಂಧ ದೂರ ಮಾಡಿ ಸುಗಂಧವನ್ನು ಹರಡುತ್ತದೆ. ಸಂತಾನವೆಂಬ ಕಲ್ಪವೃಕ್ಷದ ಪುಷ್ಪಹಾರಗಳನ್ನೂ, ದಿವ್ಯಮಂಟಪವನ್ನೂ, ದಿವ್ಯವಸ್ತ್ರಗಳನ್ನೂ ನೀಡುತ್ತದೆ. ಇದನ್ನು ಧರಿಸಿರುವ ನಿನಗೆ ಹಸಿವು, ಬಾಯಾರಿಕೆ, ಆಯಾಸ, ಜರೆ ಉಂಟಾಗುವುದುಲ್ಲ ವಾದ್ಯಗೀತೆ ಅನುಗೀತೆಗಳನ್ನೂ ಕೇಳಬಹುದು.

ಹೀಗೆ ಕಾಮಧೇನುವಿನಂತಿರುವ ಈ ಮಂದಾರ ಪುಷ್ಪ ಒಂದು ವರ್ಷ ನಿನ್ನೊಂದಿಗೆ ಇದ್ದು ನಂತರ ಪಾರಿಜಾತ ವೃಕ್ಷದಲ್ಲಿ ಸೇರಿಕೊಳ್ಳುತ್ತದೆ.

ನಿನಗೆ ಮಂಗಳವಾಗಲಿ. ಬ್ರಹ್ಮದೇವನೇ ದೇವತೆಗಳನ್ನು ಸತ್ಕರಿಸಲು ಇಂತಹ ಶಕ್ತಿ ನೀಡಿದ್ದಾನೆ.

ಉಮಾ ದೇವವರಸ್ಯೇಷ್ಟಾ ಹಿಮಾಲಯಸುತಾ ಸತೀ ।
ಅದಿತಿಶ್ಚ ಸಪೌಲೋಮಿಾ ಮಹೇಂದ್ರ ಸುರತಾರಿಣೇ ॥ 10 ॥
ಸಾವಿತ್ರೀ ದೇವಮಾತಾ ಚ ಶ್ರೀಶ್ಚ ಸರ್ವಗುಣೋಚಿತಾ ।
ಸಂವತ್ಸರ ಪರಃ ಕಾಲಃ ಸರ್ವೇಷಾಂ ನ ತು ಸಂಶಯಃ ॥ 11 ॥

ಈ ಪುಷ್ಪವನ್ನು ಪಾರ್ವತೀ, ಅದಿತಿ, ಶಚೀದೇವಿ, ಸಾವಿತ್ರೀದೇವಿ, ಲಕ್ಷ್ಮೀದೇವಿಯರು ಇತರ ದೇವತಾ ಪತ್ನಿಯರು, ವಸುಪತ್ನಿಯರೂ ಇದನ್ನು ನಿತ್ಯವೂ ಧರಿಸುವರು. ಇವರೆಲ್ಲ ಒಂದು ವರ್ಷದವರೆಗೆ ಮಾತ್ರ ಈ ಹೂವನ್ನು ಧರಿಸಬಲ್ಲರು.

## ಹದಿನಾರು ಸಾವಿರ ಸ್ತ್ರೀಯರ ಮಧ್ಯೆ
## ರುಗ್ಮಿಣಿಯೇ ಪ್ರಿಯಭಾಮಿನಿ

ಷೋಡಶ ಸ್ತ್ರೀಸಹಸ್ರಾಣಾಂ ಮಧ್ಯೇ ತ್ವಂ ಖಲು ವರ್ತಸೇ ।
ಅಧ್ಯೇಷ್ಟಾಂ ವಾಸುದೇವಸ್ಯ ವೇದ್ಮಿ ತ್ವಾಂ ಭೋಜನಂದಿನಿ ॥ 12 ॥
ಸಪತ್ನ್ಯಸ್ತೇ ಗುಣೋಪೇತೇ ಸರ್ವಾಃ ಸರ್ವೇಶ್ವರ ಪ್ರಿಯೇ ।
ಅವಮಾನಾವಸೇಕೇನ ತ್ವಯಾ ಸಿಕ್ತಾದ್ಯ ಭಾಮಿನಿ ॥ 13 ॥
ಪ್ರಕಾಶಮದ್ಯ ಸೌಭಾಗ್ಯಮನಿವಾರ್ಯಂ ಯಶಶ್ಚ ತೇ ।
ಮಂದಾರಕುಸುಮಂ ದತ್ತಂ ಯತ್ ತೇ ಮಧುನಿಘಾತಿನಾ ॥ 14 ॥
ಅತ್ರ ಸಾತ್ರಾಜಿತೀ ದೇವೀ ಜ್ಞಾಸ್ಯತೇ ವರವರ್ಣಿನೀ ।
ಸೌಭಾಗ್ಯಾಢ್ಯಾಂ ಸದಾ ವೇತ್ತಿ ಯಾಽತ್ಮಾನಂ ಸುಭಗಂ ಸತೀ ॥ 15 ॥
ಸೌಭಾಗ್ಯೈಕರಥೋ ಜೈತ್ರಃ ತವ ದೇವ್ಯದ್ಯ ನಿಃ ಸೃತಃ ।
ಮನೋರಥ ರಥಾನಾಂ ಯಃ ಸಹಸ್ರೈರಪಿ ದುರ್ಜಯಃ ॥ 16 ॥
ಅದ್ಯಾಮವಗಚ್ಛಾಮಿ ಸರ್ವಥಾ ಸರ್ವಶೋಭನೇ ।
ಆತ್ಮಾ ದ್ವಿತೀಯಃ ಕೃಷ್ಣಸ್ಯ ಭೋಜೇ ತ್ವಮಿತಿ ಭಾಮಿನಿ ॥ 17 ॥

ಭೋಜ ನಂದಿನಿ! ಶ್ರೀಕೃಷ್ಣನ ಹದಿನಾರು ಸಾವಿರ ಪತ್ನಿಯರಲ್ಲಿ ಕೃಷ್ಣಪ್ರಿಯಳೆಂದರೆ ನೀನೆ ಎಂದು ನನ್ನ ಭಾವನೆ ನೀನಿಂದು ನಿನ್ನ ಎಲ್ಲ

ಸವತಿಯರನ್ನು ಅವಮಾನವೆಂಬ ನೀರಿನಲ್ಲಿ ಮುಳುಗಿಸಿ ಬಿಟ್ಟಿರುವೆ. ಇಂದು ನಿನಗೆ ಅತ್ಯಧಿಕ ಸೌಭಾಗ್ಯ ಯಶಸ್ಸೂ ಲಭಿಸಿದೆ. ಇಷ್ಟು ಮಂದಿ ಪತ್ನಿಯರಲ್ಲಿ ನಿನಗೆ ತಾನೆ ಕೃಷ್ಣ ಮಂದಾರ ಪುಷ್ಪ ನೀಡಿದ್ದು?

ಸತ್ರಾಜಿತನ ಪುತ್ರಿ ಸತ್ಯಭಾಮೆ ತಾನೇ ಅತ್ಯಂತ ಸೌಭಾಗ್ಯಶಾಲಿನಿಯೆಂದು ತಿಳಿದಿದ್ದಳು ಯಾರ ಸೌಭಾಗ್ಯ ಅಧಿಕವೆಂದು ಇಂದಿನಿಂದ ಅವಳಿಗೂ ಅರಿವಾಗುತ್ತದೆ. ಜಾಂಬವತೀ, ಗಾಂಧಾರಿ ಮೊದಲಾದ ಉಳಿದ ಭಾರ್ಯೆಯರೂ ಸಹ ನಾವು ಶ್ರೀಕೃಷ್ಣನಿಗೆ ಅಧಿಕ ಪ್ರೀತಿಪಾತ್ರರಾಗಬೇಕೆಂದು ಮಾಡುತ್ತಿದ್ದ ಪ್ರಯತ್ನವನ್ನು ಇನ್ನು ಮುಂದೆ ತ್ಯಜಿಸುವರು.

ತಾಯಿ! ನಿನ್ನ ಪರಮಸೌಭಾಗ್ಯದ ಏಕಮಾತ್ರ ಚೈತ್ರರಥವು ಇಂದು ಹೊರಟಿದ್ದು ಯಾವುದೆ ಮನೋರಥಗಳು ಅದಕ್ಕೆ ಸರಿಸಾಟಿಯಾಗದು. ಶ್ರೀಕೃಷ್ಣನ ಎರಡನೇ ಆತ್ಮವೆಂದರೆ ನೀನೇ ಎಂದೆ ನನ್ನ ಭಾವನೆ.

## ಸತ್ಯಭಾಮೆಯ ಆಕ್ರೋಶ ನಟನೆ

**ನಾರದೇನೈವಮುಕ್ತಂ ತು ತಥ್ಯಂ ವಾಕ್ಯಂ ನರಾಧಿಪ ।**
**ತತ್ರಸ್ಥಾಃ ಶುಶ್ರುವುಃ ಪ್ರೇಷ್ಯಾಃ ಪ್ರೇಷಿತಾ ಸತ್ಯಭಾಮಯಾ ॥ 18 ॥**

**ದೃಷ್ಟ್ವಾ ತಾಃ ಸವಿಶೇಷಂ ಚ ನಾರದೇನಾಭ್ಯುದಾಹೃತಮ್ ।**
**ತಚ್ಚ ಶ್ರುತ್ವಾ ಸುನಿಖಿಲಂ ಪ್ರೇಷ್ಯಾಭಿಃ ಸ್ತ್ರೀ ಸ್ವಭಾವತಃ ॥ 19 ॥**

ಸತ್ಯಭಾಮೆಯು ಕಳುಹಿಸಿರುವ ದಾಸಿಯರು ನಾರದರ ಮಾತನ್ನು ಕೇಳಿ ಹಾಗೆ ಸತ್ಯಭಾಮೆಗೆ ಹಾಗೂ ಉಳಿದ ಅಂತಃಪುರದ ರಾಣಿಯರ ಮುಂದೆ ಸ್ತ್ರೀಸ್ವಭಾವ ಚಾಪಲ್ಯದಿಂದ ಹೇಳಿದರು. ಇದು ಕಿವಿಯಿಂದ ಕಿವಿಗೆ ತಲುಪಿ ಶ್ರೀಕೃಷ್ಣರಮಣಿಯರಿಗೂ ತಿಳಿದು ಸಂತೋಷಪಟ್ಟರು. ಇಂತಹ ಸೌಭಾಗ್ಯಕ್ಕೆ ರುಗ್ಮಿಣಿಯು ಅರ್ಹಳೆ ಆಗಿರುವಳೆಂದು ಸಂತೋಷಪಟ್ಟರು.

ಇವಳು ಜ್ಯೇಷ್ಠಭಾರ್ಯೆ, ಅವಳ ಮಗ ಪ್ರದ್ಯುಮ್ನನು ಜ್ಯೇಷ್ಠಪುತ್ರನು. ಈ ಸೌಭಾಗ್ಯಕ್ಕೆ ಯೋಗ್ಯಳೆ ಎಂದು ಸಂತಸಪಟ್ಟರು.

## ಸತ್ಯಭಾಮೆಯ ಸವತಿಮಾತ್ಸರ್ಯ

**ಮಮೃಷೇ ನ ಸಪತ್ನ್ಯಾಸ್ತು ತತ್ ಸೌಭಾಗ್ಯ ಗುಣೋದಯಮ್ ।**
**ಸತ್ಯಭಾಮಾ ಪ್ರಿಯಾ ನಿತ್ಯಂ ವಿಷ್ಣೋಃ ಅತುಲ ತೇಜಸಃ ॥ 20 ॥**

**ರೂಪಯೌವನ ಸಂಪನ್ನಾ ಸ್ವ ಸೌಭಾಗ್ಯೇನ ಗರ್ವಿತಾ ।**
**ಅಭಿಮಾನವತೀ ದೇವೀ ಶ್ರುತ್ವೈವ ಈರ್ಷ್ಯಾವಶಂಗತಾ ॥ 21 ॥**

ಸತ್ಯಭಾಮೆಯಾದರೂ ಈ ಸೌಭಾಗ್ಯ ರುಗ್ಮಿಣಿಗೆ ಸಿಕ್ಕಿದ್ದು ಸಹಿಸಲಾಗಲ್ಲಿಲ್ಲ. ಅವಳೇನು ರೂಪ ಯೌವನಾದಿಗಳಿಂದ ಸಂಪೂರ್ಣ ಲಾವಣ್ಯಯಾಗಿದ್ದು ತನ್ನ ಸೌಂದರ್ಯದಲ್ಲಿ ಅಭಿಮಾನವಿದ್ದಿತು. ಸ್ವಾಭಿಮಾನಿನಿಯಾದ ಸತ್ಯಭಾಮೆಯು ರುಗ್ಮಿಣಿಗೆ ಅತ್ಯಪೂರ್ವ ಸೌಭಾಗ್ಯ ಲಭಿಸಿತೆಂದು ಕೇಳಿದ ಕೂಡಲೇ ಸವತಿ ಮಾತ್ಸರ್ಯಕ್ಕೆ ವಶವಾದಳು. ಯದ್ಯಪಿ ಶ್ರೀ-ಭೂರೂಪಗಳಾದ ರುಗ್ಮಿಣೀ ಸತ್ಯಭಾಮೆಯರಲ್ಲಿ ಐಕ್ಯವಿದ್ದುದರಿಂದ ರುಗ್ಮಿಣಿಗೆ ಸೌಭಾಗ್ಯ ದೊರಕಿದರೆ ಸತ್ಯಭಾಮೆಗೂ ಲಭಿಸಿದಂತೆ. ಆದರೂ ರಾಮ-ಪರಶುರಾಮರು ಒಂದೇ ಆದರೂ ಬೇರೆ ಬೇರೆಯಂತೆ ನಟಿಸಿ ಅಸುರ ಮೋಹಗೊಳಿಸಿದಂತೆ ಇವರಿಬ್ಬರೂ ಸಹ ಬೇರೆ ಬೇರೆಯಂತೆ ನಟಿಸಿ, ಒಬ್ಬನಿಗೆ ಇಬ್ಬರು ಹೆಂಡಂದಿರಿದ್ದರೆ ಅವನು ಎದುರಿಸಬಹುದಾದ ತೊಂದರೆಯನ್ನು ನಾಟಕ ಮಾಡಿ ತೋರಿಸುವರಷ್ಟೆ.

ಯಾವಾಗಲೂ ಶುಭ್ರ ಮಂದಹಾಸದಿಂದ ಇರುವ ಭಾಮೆಯು ಕ್ರೋಧಮೂರ್ಛಿತಳಂತೆ ನಟಿಸಿ ತಾನು ಧರಿಸಿದ ಕೆಂಪುಪಟ್ಟೆ ಪೀತಾಂಬರ ಬಿಚ್ಚಿ ಹಾಕಿ ಬಿಳಿಸೀರೆ ಧರಿಸಿದಳು. ತುಪ್ಪ ಸುರಿದ ಅಗ್ನಿಯಂತೆ ಕ್ರೋಧಾಗ್ನಿ ಪ್ರಜ್ವಲಗೊಂಡಿತು. ಅಸೂಯೆಯಿಂದ ಕುದಿಯುತ್ತಿದ್ದಳು. ಕೋಪಗೃಹಕ್ಕೆ ನಡೆದಳು. ಆಭರಣಗಳನ್ನೆಲ್ಲ ತೆಗೆದಳು. ಚತುಷ್ಕಪರ್ದಿಯಾದವಳು ಏಕವೇಣೀಧರಳಾದಳು. ತನಗೆ ಕೋಪ ಬಂದಿದೆ ಎಂದು ತಿಳಿಸಲೆಂದೆ ಶ್ವೇತವಸ್ತ್ರ-ಕೆಂಪುಗಂಧ ಧರಿಸಿದಳು. 'ಅವನು ಬರಲಿ' ಎಂದು ತಲೆ ಅಲ್ಲಾಡಿಸುತ್ತಾ, ಕೈಯ್ಯಲ್ಲಿದ್ದ ಕ್ರೀಡಾಕಮಲವನ್ನು ಉಗುರುಗಳಿಂದ ಕತ್ತರಿಸಿ ಹಾಕಿದಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ಸತ್ಯಭಾಮೆಯ ಸವತಿ ಮಾತ್ಸರ್ಯ"ವೆಂಬಲ್ಲಿ
ಅರವತ್ತೈದನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಷಟ್‌ಷಷ್ಠಿತಮೋಽಧ್ಯಾಯಃ

*ವೈಶಂಪಾಯನ ಉವಾಚ –*

ಉಪವಿಷ್ಟಂ ಮುನಿಂ ಜ್ಞಾತ್ವಾ ರುಗ್ಮಿಣ್ಯಾ ಸಹ ಕೇಶವಃ ।
ನಿಶ್ಚಕ್ರಾಮಾ ಪ್ರಮೇಯಾತ್ಮಾ ವ್ಯಪದೇಶೇನ ಸರ್ವವಿತ್ ॥ 1 ॥
ಜಗಾಮ ತ್ವರಿತಶ್ಚೈವ ಸತ್ಯಭಾಮಾಗೃಹಂ ಮಹತ್ ।
ಜಾನನ್ ಸಾತ್ರಾಜಿತೀಂ ವಿಷ್ಣುಃ ವಿವೇಶ ಶನಕೈರಿವ ॥ 2 ॥
ಭೀತಭೀತಃ ಸ ಶನಕೈಃ ವಿವೇಶ ಮಧುಸೂದನಃ ।
ಸೇವಕಂ ದ್ವಾರದೇಶೇ ತು ತಿಷ್ಠೇತ್ಯುಕ್ತ್ವಾ ವಿವೇಶ ಹ ॥ 3 ॥
ಸ ದದರ್ಶ ಪ್ರಿಯಾಂ ದೂರಾತ್ ಕ್ರೋಧಾಗಾರಗತಾಂ ತದಾ ।
ಕರಜಾಗ್ರಾವಲೀಢಂ ತು ಪಂಕಜಂ ಮುಖಪಂಕಜೇ ।
ಸಂಶ್ಲೇಷಯಿತ್ವಾ ನಿಃಶ್ವಸ್ಯ ವಿಹಸಂತೀಂ ಪುನಃ ಪುನಃ ॥ 4 ॥

ಭೂತ ಭವ್ಯ ಭವತ್ ಪ್ರಭುವಾದ ಶ್ರೀಕೃಷ್ಣನು ರುಗ್ಮಿಣಿಯು ನಾರದರೊಂದಿಗೆ ಮಾತನಾಡುತ್ತಿರುವುದನ್ನು ನೋಡಿ ನೆಪವೊಡ್ಡಿ ಸತ್ಯಭಾಮೆಯ ಮನೆಗೆ ನೇರವಾಗಿ ಬಂದನು. ಸತ್ಯಭಾಮೆಯಾದರೂ ಕೃಷ್ಣನಿಗೆ ಅಚ್ಚುಮೆಚ್ಚಿನ ಮಡದಿಯಾಗಿದ್ದಳು. ಅವಳು ಸ್ವಾಭಿಮಾನಿಯೆಂದೂ ತಿಳಿದಿದ್ದು ಅವಳನ್ನು ಮೆಲ್ಲಮೆಲ್ಲನೆ ಅರಮನೆಯನ್ನು ಪ್ರವೇಶಿಸಿದನು. ಸ್ನೇಹದ ಮೂಲಕ ಸಾಂತ್ವನಗೊಳಸಲು ಭಯಭೀತನಾದವನಂತೆ ಪ್ರವೇಶಿಸುತ್ತಾ, ತನ್ನೊಂದಿಗೆ

ಬಂದಿದ್ದ ಸೇವಕನನ್ನು ದ್ವಾರದಲ್ಲಿಯೇ ನಿಲ್ಲಲು ಹೇಳಿ ಕ್ರೋಧಾಗಾರಕ್ಕೆ ಪ್ರವೇಶಿಸಿದನು. ಕಮಲವೊಂದನ್ನು ಮುಖಕ್ಕೆ ತಗುಲಿಸಿಕೊಂಡು ನಿಟ್ಟುಸಿರು ಬಿಡುತ್ತಿದ್ದಳು. ಕೆಲವೊಮ್ಮೆ ನಗುತ್ತಿದ್ದ ಭಾಮೆ ಪ್ರೇಮಕಲಹ ತೋರುತ್ತಿದ್ದಳು. ನೆಲವನ್ನು ಉಗುರಿನಿಂದ ಗೀಚುತ್ತಾ, ತನ್ನ ಎಡಗೈಯ ಮೇಲೆ ತನ್ನ ಮುಖಕಮಲವನ್ನಿಟ್ಟು ಚಿಂತಾಕ್ರಾಂತಳಾಗಿರುವಂತೆ ತೋರುತ್ತಿದ್ದಳು. ಕಮಲಾದಳಾಯತಾಕ್ಷಿಯೂ ಸರ್ವಾಂಗ ಸುಂದರಿಯೂ ಆದ ಸತ್ಯಭಾಮೆಯನ್ನು ನೋಡಿದನು. ಹಾಸಿಗೆಯಿಂದ ಮೇಲೆದ್ದು ಪುನಃ ಹಾಗೆ ಕುಳಿತು, ಗಂಧವನ್ನು ಕೊಟ್ಟ ದಾಸಿಯನ್ನು ಪ್ರಶಂಸಿಸುತ್ತಾ, ರುಗ್ಮಿಣಿಯ ಸೌಭಾಗ್ಯ ಜ್ಞಾಪಕ ಬಂದ ಕೂಡಲೇ ಅವಳನ್ನು ನಿಂದಿಸುತ್ತಾ ಇರುವ ಪ್ರೇಯಸಿಯ ಚೇಷ್ಟೆಗಳನ್ನು ನೋಡಿದನು. ತನ್ನ ದುಃಖವನ್ನು ತೋರಿಸುತ್ತಾ ತನ್ನ ಮುಖವನ್ನು ವಸ್ತ್ರದಿಂದ ಮುಚ್ಚಿಕೊಂಡು ತಲೆದಿಂಬಿನ ಮೇಲೆ ಮಲಗಿದ್ದಳು. ಈ ಸುಸಮಯವೆಂದೆ ಅರಿತು ಭಾಮೆಯ ಬಳಿ ಹೊರಟನು. ದಾಸಿಯರಿಗೆ ತಾನು ಬಂದಿರುವ ವಿಷಯ ತಿಳಿಸಬಾರದೆಂದು ಕೈಯಿಂದ ಸಂಜ್ಞೆ ಮಾಡಿ ದಾಸಿಯ ಕೈಯಿಂದ ಬೀಷಣಿಕೆ ತೆಗೆದುಕೊಂಡು ಮೆಲ್ಲನೆ ಗಾಳಿ ಹಾಕತೊಡಗಿ, ನಗೆ ಬೀರಿದನು. ಪಾರಿಜಾತ ಸಂಪರ್ಕದಿಂದಾಗಿ ದಿವ್ಯಗಂಧ ಅವನಿಂದ ಹೊರಬರುತ್ತಿತ್ತು. ಆ ದಿವ್ಯಗಂಧ ಆಘ್ರಾಣಿಸಿದ ಭಾಮೆಯು ಆಶ್ಚರ್ಯದಿಂದ, ಸೀರೆಯ ಅಂಚಿನಿಂದ ತನ್ನ ಮುಖವನ್ನು ಮುಚ್ಚಿಕೊಂಡು ಇದೇನಿದು? ಎಂದಳು. ತನ್ನ ಹಿಂದೆಯೆ ಕುಳಿತಿದ್ದ ಕೃಷ್ಣನನ್ನು ನೋಡದೆ 'ಈ ಸುಗಂಧ ಎಲ್ಲಿಂದ? ಎಂದು ದಾಸಿಯರನ್ನು ಕೇಳಿದಳು.

ಸೋತ್ಥಿತಾ ಪೃಷ್ಠತೋ ದೇವಮಪಶ್ಯಂತೋ ಶುಚಿಸ್ಮಿತಾ ।
ಪರ್ಯಪೃಚ್ಛದಥೋ ಪ್ರೇಷ್ಯಾಃ ಗಂಧಸ್ಯ ಪ್ರಭವೇ ತದಾ ॥ 5 ॥

ತದಪೂರ್ವಮದೃಷ್ಟೈವ ಗಂಧಂ ಮುಂಚತಿ ಮೇದಿನೀ ।
ಕಿಂ ತ್ವಿದಂ ಸ್ಯಾದಿತಿ ಚ ಸಾ ವಿವೇಕ್ಷಂತೀ ಸಮಂತತಃ ॥ 6 ॥

ದದೃಶೇ ಕೇಶವಂ ದೇವೀ ಸಹಸಾ ಲೋಕಭಾವನಮ್ ।
ಯಜ್ಯತೀತಿ ತತೋವಾಚ ಸಹಸಾऽಸ್ರಾವಿಲೇಕ್ಷಣಾ ॥ 7 ॥

ಅವತಿಕ್ತೇವ ರೋಷೇಣ ಬಭೂವ ಪ್ರಣಯಾನ್ವಿತಾ ।
ನಿವೇಶ್ಯ ವದನಂ ಹಸ್ತೇ ಶೋಭಸೀತ್ಯಬ್ರವೀದ್ ಹರಿಮ್ ॥ 8 ॥

ದಾಸಿಯರೆಲ್ಲರೂ ಹಿಂದಿನ ಸಂಜ್ಞೆಯಂತೆ ತಮಗೇನೂ ಗೊತ್ತಿಲ್ಲವೆಂಬಂತೆ ಮೌನಿಗಳಾಗಿ ಮಂಡಿಯೂರಿ ನಮಸ್ಕರಿಸಿದರು. ಗಂಧವತಿಯಾದ ಭೂಮಿಯೇ ಈ ದಿವ್ಯಗಂಧವನ್ನು ಹೊರಹಾಕುತ್ತಿರುವಳೆ? ಹಾಗಿಲ್ಲವಾದರೆ ಇಂತಹ ದಿವ್ಯಗಂಧ ಇಲ್ಲಿಯವರೆಗೂ ಹೇಗೆ ವ್ಯಾಪಿಸಿತು. ಈ ಗಂಧವು ಎಲ್ಲಿಂದ ಬರುತ್ತಿರಬಹುದೆಂದು ಸುತ್ತಲೂ ನೋಡಿದಳು ಅವಳ ಹಿಂದೆ ಇದ್ದ ಶ್ರೀಕೃಷ್ಣ ಅವಳ ದೃಷ್ಟಿಗೆ ಬಿದ್ದ. ಅವನನ್ನು ನೋಡಿದ ಕೂಡಲೆ ಅವಳ ಕಣ್ಣಿಂದ ನೀರಿನ ಕಣಗಳು ತುಂಬಿದವು. 'ನಿನ್ನ ಶರೀರದಿಂದ ಇಂತಹ ಗಂಧ ರುಗ್ಮಿಣಿಯ ಮನೆಯಿಂದ ನಿನಗೆ ಯುಕ್ತವೆ ಆಗಿದೆ' ಎಂದು ಹೇಳಿ, ತಲೆತಗ್ಗಿಸಿಕೊಂಡು ದೀರ್ಘವಾಗಿ ನಿಟ್ಟುಸಿರು ಬಿಡುತ್ತಾ ಮುಹೂರ್ತ ಪರ್ಯಂತ ಯಾವ ಮಾತನ್ನೂ ಆಡಲ್ಲಿಲ್ಲ. ಎಡಹುಬ್ಬ ಗಂಟಿಕ್ಕಿ, ಕೈಗಳನ್ನು ಗಲ್ಲದ ಮೇಲೆ ಇಟ್ಟು - ಈ ಕಾರ್ಯದಿಂದ ತುಂಬಾ ಚೆನ್ನಾಗಿ ಶೋಭಿಸುತ್ತಿರುವಿ ಎಂದಳು.

ಪ್ರಣಯ ಕೋಪದಿಂದ ಕಮಲನಯನಗಳಿಂದ ಕಂಬನಿಗಳು ಬೀಳಲಾರಂಭಿಸಿದವು ಅದನ್ನು ಕಂಡ ಶ್ರೀಕೃಷ್ಣನು - ಅವು ನೆಲಕ್ಕೆ ಬೀಳುವ ಮೊದಲೆ ತನ್ನ ಬೊಗಸೆಯಲ್ಲಿ ಹಿಡಿದು ಅವುಗಳನ್ನೆಲ್ಲ ತನ್ನ ವಕ್ಷಸ್ಥಲದ ಮೇಲೆ ಸಿಂಪಡಿಸಿಕೊಂಡನು.

## ಶ್ರೀಕೃಷ್ಣ ಸಾಂತ್ವನ

**ಸಪತ್ನ್ಯಸಿತಪತ್ರಾಕ್ಷಿ ಕಿಮರ್ಥಂ ತವ ಭಾಮಿನಿ ।**
**ತೋಯಂ ಸುಂದರಿ ನೇತ್ರಾಭ್ಯಾಂ ಪುಷ್ಕರಾಭ್ಯಾಮಿವೋದಕಮ್ ॥ 9 ॥**

**ಪ್ರಭಾತೇ ಪೂರ್ಣಚಂದ್ರಸ್ಯ ಮಧ್ಯಾಹ್ನೇ ಪಂಕಜಸ್ಯ ಚ ।**
**ಬಿಭರ್ತಿ ತವ ಕಿಂ ವಕ್ತ್ರಂ ವಪುಸ್ತವ ಮನೋಹರೇ ॥ 10 ॥**

**ಕಿಮರ್ಥಂ ಕೌಂಕುಮಂ ವಾಸೋ ಮಹಾರಾಜತಮೇವ ಚ ।**
**ನಾನುಗೃಹ್ಣಾಸಿ ಸುಶ್ರೋಣಿ ಶುಕ್ಲಂ ವಾಸೋಽನುಗೃಹ್ಯತೇ ॥ 11 ॥**

ನೀಲಕಮಲನೇತ್ರೇ! ಕಮಲದಿಂದ ಹಿಮಕಣ ಬೀಳುವಂತೆ ನಿನ್ನ ನೇತ್ರದಿಂದ ದುಃಖಾಶ್ರು ಉದುರುತ್ತಿವೆ. ನಿನ್ನ ಮುಖ ಹಗಲಿನ ಪೂರ್ಣಚಂದ್ರನಂತೆಯೂ, ಬಾಡಿದ ಕಮಲದಂತೆಯೂ ಕಾಂತಿರಹಿತವಾಗಿವೆ ಏಕೆ?

ಅತ್ಯಂತ ಪ್ರಿಯವಾದ ಕುಂಕುಮ ಬಣ್ಣದ ಜರತಾರಿ ಪೀತಾಂಬರ ಧರಿಸದೆ, ಬಿಳಿಯ ಸೀರೆ ಧರಿಸಿ ಅದನ್ನು ಅನುಗ್ರಹ ಮಾಡುತ್ತಿರುವೆ ಏಕೆ? ಸಾತ್ವಿಕ

ಗುಣ ಬಿಂಬಿಸುವ ಬಿಳಿ ಸೀರೆ ಪೂಜಾ ನಂತರದಲ್ಲಿ ಶೋಭಿಸುವುದಿಲ್ಲ. ಸುಂದರಾಂಗಿಯೇ ! ಇದೇನು ನಿನ್ನ ಶರೀರಕ್ಕೆ ಆಭರಣಗಳನ್ನೇ ಧರಿಸಿಲ್ಲ ತಿಲಕದಿಂದ ಶೋಭಿಸುವ ನಿನ್ನ ಹಣೆ ಗಂಟಿಕ್ಕಿರುವ ಹುಬ್ಬಿನಿಂದ ಕೂಡಿದೆ.

ನೀನು ಈ ನಿನ್ನ ವ್ಯಾಪಾರದಿಂದ ನನ್ನ ಮನಸ್ಸನ್ನು ಕದಡುತ್ತಿರುವೆ. ಚಂದನ ರಸವು ನಿನ್ನ ಕಪೋಲ ಸೌಂದರ್ಯಕ್ಕೆ ಸವತಿಯಂತೆ ಬೀಗುತ್ತಿದೆ. ನಿನ್ನ ಕಂಠವು ಆಭರಣಗಳಿಂದ ರಹಿತವಾಗಿದ್ದು ಮಳೆಗಾಲದಲ್ಲಿ ಗ್ರಹನಕ್ಷತ್ರಗಳಿಂದ ರಹಿತ ಆಕಾಶದಂತೆ ತೋರುತ್ತಿದೆ. ಸುಗಂಧ ಸೂಸುವ ನಿನ್ನ ಮುಖದ ಮೂಲಕ ನನ್ನೊಂದಿಗೆ ಏನೂ ಮಾತನಾಡುತ್ತಿಲ್ಲವೇಕೆ? ನಿನ್ನ ಅಳುವನ್ನು ನಿಲ್ಲಿಸು. ನಾನೆಂದೂ ನಿನ್ನವನೂ, ಹಾಗೂ ನಿನ್ನ ಸೇವಕನೆಂದು ಸತ್ಯಭಾಮಾ ಪತಿಯೆಂದು ಜಗತ್ತೆಲ್ಲ ಸಾರುತ್ತಿದೆ. ಅದೇನಾಗಬೇಕೊ ನನಗೆ ಆಜ್ಞಾಪಿಸು ಯಾವ ಅಪರಾಧ ನನ್ನಿಂದ ನಿನಗೆ ಉಂಟಾಗಿದೆ.

**ಮನಸಾ ಕರ್ಮಣಾ ವಾಚಾ ನ ತ್ವಾಮತಿಚರಾಮ್ಯಹಮ್ ।**
**ಸರ್ವಥಾ ಸರ್ವಚಾರ್ವಂಗಿ ಸತ್ಯಮೇತದ್ ಬ್ರವೀಮಿ ತೇ ॥ 12 ॥**

**ಬಹುಮಾನೋಪಮಾನ್ಯಾಸು ಸ್ತ್ರೀಷು ಸರ್ವಾಸು ಶೋಭನೇ ।**
**ಸ್ನೇಹಶ್ಚ ಬಹುಮಾನಶ್ಚ ತ್ವಾಮೃತೇಽನ್ಯಾಸು ನಾಸ್ತಿ ಮೇ ॥ 13 ॥**
**ನೈವ ತ್ವಾಂ ಮದನೋ ಜಹ್ಯಾತ್ ಮೃತೇಽಪಿ ಮಯಿ ಮಾಮಕಃ ।**
**ಇತಿ ಮೇ ನಿಶ್ಚಿತಂ ವಿದ್ಧಿ ಚೇತಃ ಸುರಸುತೋಪಮೇ ॥ 14 ॥**

ಚಾರ್ವಂಗಿ! ನಾನು ಕಾಯಾ ಮನಸಾ ವಾಚಾ ತ್ರಿಕರಣದಿಂದಲೂ ನಿನ್ನ ಆಜ್ಞೆಯನ್ನು ಎಂದಿಗೂ ಉಲ್ಲಂಘಿಸಲಾರೆ. ಇದು ಸತ್ಯ. ನನ್ನ ಪತ್ನಿಯರೆಲ್ಲರೂ ನನ್ನಿಂದ ಗೌರವಾದರಕ್ಕೆ ಪಾತ್ರರಾಗಿದ್ದರೂ, ನನ್ನ ವಿಶೇಷ ಪ್ರೀತಿ ಸ್ನೇಹ ಆದರಗಳು ನಿನ್ನಲ್ಲಿಯೇ ಲಗ್ನವಾಗಿರುತ್ತವೆ. ನಿನ್ನಲ್ಲಿ ನನಗೆ ಯಾವ ಪ್ರೇಮಭಾವವಿದೆಯೋ ಅದು ನಾನು ಮೃತನಾದರೂ ಹೋಗುವುದಿಲ್ಲವೆಂದು ಶಪಥಪೂರ್ವಕ ಹೇಳುವೆ.

ಭೂಮಿಗೆ ಕ್ಷಮಾಗುಣ, ಕಮಲಕ್ಕೆ ಕಾಂತಿಗುಣ, ಆಕಾಶಕ್ಕೆ ಶಬ್ಧಗುಣ ನಿತ್ಯವೆಂಬಂತೆ ನಿನ್ನಲ್ಲಿ ಪ್ರೇಮಗುಣವೆಂದು ತಿಳಿ. ಹೀಗೆ ಸಮಾಧಾನ– ಗೊಳಿಸುತ್ತಾ ಇರುವಾಗ ಸಮಾಧಾನ ಮನಸ್ಕಳಾಗಿ ಮೆಲ್ಲನೆ ಮಾತನಾಡಲಾರಂಭಿಸಿದಳು.

**ವಾಙ್ಮಾತ್ರಮೇನ ಪಶ್ಯಾಮಿ ಮಾಧುರ್ಯಂ ಸಂಪ್ರಯುಜ್ಯತೇ ।**
**ಮಯಿ ಸ್ನೇಹಶ್ಚ ಕೃತಕಃ ತವಾನ್ಯತ್ರ ನ ಕೃತ್ರಿಮಃ ॥ 15 ॥**
**ಋಜು ಸ್ವಭಾವಾಂ ಭಕ್ತಾಂ ಚ ಸರ್ವಥಾ ಪುರುಷೋತ್ತಮ ।**
**ಅವಜಾನಾಸಿ ಜಾನನ್ ಮಾಂ ಕೈತವೀಂ ವೃತ್ತಿಮಾಶ್ರಿತಃ ॥ 16 ॥**
**ಏತಾವತ್ ಖಲು ಪರ್ಯಾಪ್ತಂ ದೃಷ್ಟಂ ದ್ರಷ್ಟವ್ಯ ಮವ್ಯಯಮ್ ।**
**ಶ್ರುತಂ ಚಾಪ್ಯಥ ಯಚ್ಛ್ರಾವ್ಯಂ ದೃಷ್ಟಃ ಸ್ನೇಹಫಲೋದಯಃ ॥ 17 ॥**

ಪ್ರಭುವೇ! ಇದುವರೆಗೂ ನೀನು ಸತ್ಯಭಾಮಾಪತಿ ಎಂದೇ ವಿಶ್ವಾಸವಿತ್ತು. ನಿನ್ನ ನಿನ್ನೆಯ ವ್ಯವಹಾರ ನೋಡಿದರೆ ಎಲ್ಲಾ ಪತ್ನಿಯರಲ್ಲಿಟ್ಟಂತೆ ಸರ್ವ ಸಾಧಾರಣ ಪ್ರೇಮವಿಟ್ಟಿರುವೆ ಎಂದು ತಿಳಿಯಿತು. ನನ್ನ ಸ್ನೇಹ ಪ್ರೀತಿ ವಿಶ್ವಾಸಗಳು ನಿತ್ಯವೆಂದು, ಕಾಲವು ನಿತ್ಯವೆಂದೆ ತಿಳಿದಿದ್ದೆ. ಆದರೆ ಎಲ್ಲವೂ ಅನಿತ್ಯವೆಂದೆ ಸಾಬೀತಾಯಿತು. ನಾನು ಬದುಕಿರುವವರೆಗೂ ನಾನು ನಿನಗೆ ಆತ್ಮಪ್ರಾಯನೆಂದೂ, ಜೀವನ ಸಂಗಾತಿಯೆಂದೂ, ಪ್ರಿಯತಮನೆಂದೂ ತಿಳಿದಿದ್ದೆನು. ಇಂದಿಗೆ ನನ್ನ ಈ ತಿಳುವಳಿಕೆ ಭ್ರಮಯೆಂದು ಚೆನ್ನಾಗಿ ತಿಳಿದುಹೋಯಿತು.

ನೀನು ಮಾತಿನಲ್ಲಿ ಜೇನುಸುರಿಸುವಂತಹ ಮಾತುಗಳನ್ನಾಡುತ್ತಿದ್ದರೂ ನನ್ನಲ್ಲಿ ಪ್ರೇಮ ಮಾತ್ರ ಕೃತಕ. ಬೇರೆಯವರಲ್ಲಿ ಇಂತಹ ತೋರಿಕೆಯ ಸ್ನೇಹ ಮಾಡಿರುವುದಿಲ್ಲ. ನಾನು ಸರಳ ಸ್ವಭಾವದವಳು, ನಿನ್ನ ಭಕ್ತಳು, ಇದು ನಿನಗೂ ಗೊತ್ತಿದೆ. ಹೀಗಿದ್ದರೂ ನನ್ನನ್ನೂ ಅವಹೇಳನ ಮಾಡುತ್ತಿರುವೆ.

ಈ ಘಟನೆಯಿಂದ ಶಾಶ್ವತವಾವುದು? ಅಶಾಶ್ವತವಾವುದೆಂದು ತಿಳಿದು ಹೋಯಿತು. ನಿನ್ನ ಸ್ನೇಹ ಹೇಗಾಗುತ್ತದೆ, ಅದು ಹೇಗೆ ಫಲ ನೀಡುತ್ತದೆ ಎಂದು ತಿಳಿಯಿತು. ನಾನೇನಾದರೂ ನಿನ್ನ ಅನುಗ್ರಹಪಾತ್ರಳಾಗಿದ್ದರೆ ನನಗೆ ತಪಸ್ಸು ಮಾಡಲು ಅನುಜ್ಞೆ ನೀಡು. ಮುಂದಿನ ಜನ್ಮದಲ್ಲಾದರೂ ನಿನ್ನ ಪ್ರೀತಿವಿಶ್ವಾಸ ಪಡೆಯಲು ಪ್ರಯತ್ನ ಪಡುತ್ತೇನೆ.

**ಭರ್ತುಶ್ಛಂದೇನ ನಾರೀಣಾಂ ತಪೋ ವಾ ವ್ರತಕಾನಿ ವಾ ।**
**ನಿಷ್ಫಲಂ ಖಲು ಯದ್ ಭರ್ತುಃ ಅಚ್ಛಂದೇನ ಕ್ರಿಯೇತ ಹಿ ॥ 18 ॥**

ಪತಿಯ ಅನುಮತಿ ಪಡೆದು ಮಾಡಿದ ತಪಸ್ಸು, ವ್ರತಗಳೆಲ್ಲವೂ

ಸಫಲವಾಗುತ್ತವೆ. ಅವನಿಚ್ಛೆಗೆ ವಿರುದ್ಧವಾಗಿ ಯಾವುದೇ ಒಳ್ಳೆ ಕಾರ್ಯ ನಡೆಸಿದರೂ ಅದು ನಿಷ್ಫಲವು ಹೀಗೆ ಹೇಳುತ್ತಾ ದುಃಖದಿಂದ ಅಳುತ್ತಾ ಶ್ರೀಕೃಷ್ಣನ ಪೀತಾಂಬರದ ತುದಿಯಿಂದ ಮುಖವನ್ನು ಮುಚ್ಚಿಕೊಂಡು ಪುನಃ ಪುನಃ ಕಣ್ಣೀರಿಡಲು ಆರಂಭಿಸಿದಳು.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
"ಸತ್ಯಭಾಮೆ ದುಃಖ ಸಾಂತ್ವನ"ವೆಂಬಲ್ಲಿ
ಅರವತ್ತಾರನೆಯ ಅಧ್ಯಾಯವು
॥ ಶ್ರೀಕೃಷ್ಣಾರ್ಪಣಮಸ್ತು ॥

# ಅಥ ಸಪ್ತಷಷ್ಠಿತಮೋಽಧ್ಯಾಯಃ

**ನಾರಾಯಣಃ ಸತ್ಯಭಾಮಾಂ ಪುನರೇವೈಷ ಭಾರತ ।**
**ಪ್ರೋವಾಚ ಪ್ರಣಯಾತ್ ಕೃದ್ಧಾಂ ಅಭಿಮಾನವತೀಂ ಸತೀಮ್ ॥ 1 ॥**

***ಶ್ರೀಭಗವಾನುವಾಚ –***

**ದಹತೀವ ಮಮಾಂಗಾನಿ ಶೋಕಃ ಕಮಲಲೋಚನೇ ।**
**ಕಿಮು ತತ್ ಕಾರಣಂ ಯೇನ ತ್ವಮೇವಮತಿವಿಕ್ಲವಾ ॥ 2 ॥**
**ಶಾಪಿತಾಸಿ ಮಮ ಪ್ರಾಣೈಃ ಆಚಕ್ಷ್ವಾನತ್ಯಯೋ ಯದಿ ॥ 3 ॥**

ನಾರಾಯಣ ರೂಪಿ ಶ್ರೀಕೃಷ್ಣನು ಪ್ರೇಮವಶಳಾಗಿ ತನ್ನಲ್ಲಿ ಕೋಪಗೊಂಡಿದ್ದ ಸತ್ಯಭಾಮೆಗೆ ಪುನಃ ಹೀಗೆಂದನು. "ನಿನ್ನ ಈ ಶೋಕ ನೋಡಿ ನನಗೂ ಬಹಳ ದುಃಖವುಂಟಾಗಿದೆ. ಈ ಶೋಕದಿಂದ ನಾನು ದಹಿಸಲ್ಪಡುತ್ತಿರುವೆ. ಈ ರೀತಿ ದುಃಖಗೊಂಡಿರಲು ಕಾರಣವಾದರೂ ಏನೆಂದು ಹೇಳು. ನಾನು ಸಾಯಬಾರದೆಂದಿದ್ದರೆ, ನನಗೆ ಹೇಳಬಹುದಾದರೆ ದುಃಖ ಕಾರಣವೇನೆಂದು ಹೇಳು."

ಸತ್ಯಭಾಮೆಯು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ, ಗದ್ಗದ ಧ್ವನಿಯಲ್ಲಿ ತಲೆಯನ್ನು ತಗ್ಗಿಸಿಕೊಂಡೆ ಮಾತನಾಡಿದಳು.

**ತ್ವಯೈವ ಸ್ಥಾಪಿತಂ ಪೂರ್ವಂ ಸೌಭಾಗ್ಯಂ ಮಮ ಮಾನದ ।**
**ಸರ್ವ ಸೀಮಂತಿನೀಮಧ್ಯೇ ಸ್ಪೃಹಣೀಯಾಸ್ಮಿ ಸರ್ವಥಾ ॥ 4 ॥**

ಸಾಹಮದ್ಯಾವಹಾಸ್ಯಾಸ್ಮಿ ಸಪತ್ನೀನಾಂ ಜನಸ್ಯ ಚ ।
ಯತ್ ಪಾರಿಜಾತ ಕುಸುಮಂ ದತ್ತವಾನ್ ನಾರದಸ್ತವ ॥ 5 ॥

ತತ್ ಕಿಲೇಷ್ವಜನೇ ದತ್ತಂ ತ್ವಯಾಹಂ ಪರಿವರ್ಜಿತಾ ।
ತಾಮಸೌಷೀಶ್ಚ ಹೃಷ್ಟಸ್ತ್ವಂ ಪ್ರಿಯಯಾಃ ಸಂಸ್ತವಂ ಕಿಲ ।
ಸ್ತೋತವ್ಯೋ ಯದಿ ತಾವತ್ ಸ ನಾರದೇನ ತವಾಗ್ರತಃ ॥ 6 ॥

ಕೇಶಿಸೂದನ ಮಧುಸುದನ! ಈ ಹಿಂದೆ ನೀನೇ ಸ್ವತಃ ಸ್ತ್ರೀಯರೆಲ್ಲರಿಗಿಂತಲೂ ನಾನೇ ಪ್ರಿಯಳೆಂದು ಶ್ರೇಷ್ಠಸ್ಥಾನ ನೀಡಿದ್ದೆ. ಇದು ಜಗತ್ತಿಗೆ ತಿಳದಿದೆ. ನಿನ್ನ ಪ್ರಿಯತಮೆ ನಾನೆಂದೆ ಗರ್ವದಿಂದ ಹೆಮ್ಮೆಯಿಂದ ಬೀಗಿ ನನ್ನ ಸಮಾರಾರೆಂದು ಗರ್ವಿಷ್ಠಳೂ ಆಗಿದ್ದೆ. ಸ್ಪೃಹಣೀಯಳೂ ಆಗಿದ್ದು ಈಗ ಸವತಿಯರ ಹಾಗೂ ಇತರ ಜನರ ಅಪಹಾಸ್ಯಕ್ಕೆ ಗುರಿಯಾಗಿದ್ದೇನೆ. ನನ್ನ ದಾಸಿಯರಿಂದ ಅಲ್ಲಿ ನಡೆದ ವಿಷಯವೆಲ್ಲ ತಿಳದಿದ್ದೇನೆ. ನಾರದರು ಅದ್ಭುತ ಪುಷ್ಪವಾದ ಪಾರಿಜಾತವನ್ನು ತಂದು ನಿನಗೆ ನೀಡಿದರು. ನೀನಾದರೂ ಅದನ್ನು ರುಗ್ಮಿಣಿಗೆ ಕೊಟ್ಟು ನಿನ್ನ ಅಧಿಕ ಪ್ರೀತಿ ತೋರಿಸಿದೆ. ನಾರದರೂ ರುಗ್ಮಿಣಿಯನ್ನು ಹೊಗಳುತ್ತಿರುವಾಗ ಮನದಲ್ಲಿಯೇ ಹಿಗ್ಗುತ್ತಿದ್ದಿ. ಈ ದೌರ್ಭಾಗ್ಯಳಾದ ನನ್ನ ಹೆಸರನಾದರೂ ಹೇಳಲ್ಲಿಲ್ಲ. ಸ್ವಪ್ನದಲ್ಲಿ ದೃಶ್ಯ ನೋಡಿದ್ದರೂ ನಾನು ವಿಶ್ವಾಸವಿಡುತ್ತಿದ್ದಿಲ್ಲ.

## ಪಾರಿಜಾತ ವೃಕ್ಷ ವೈಶಿಷ್ಟ್ಯ

ತತ್ರಾದ್ಯಂ ದೇವಮೀಶಾನಂ ನಮಸ್ಕೃತ್ಯ ಮಹೇಶ್ವರಂ ।
ಗಾಸ್ಯಂತಿ ದೇವಗಂಧರ್ವಾಃ ತಥೈವಾಪ್ಸರನಾಂ ಗಣಾಃ ॥ 7 ॥

ನಿಮಂತ್ರಿತೋಽಹಂ ಪೂರ್ವೇದ್ಯುಃ ಪುಷ್ಪಂದತ್ವಾ ಮಹಾದ್ಯುತೇ ।
ಪಾರಿಜಾತಸ್ಯ ಭದ್ರಂ ತೇ ತರುರಾಜ್ಞೋ ಮಹಾತ್ಮನಃ ॥ 8 ॥

ಯದೇದಾಹೃತಂ ಸ್ವರ್ಗಾತ್ ತ್ವದರ್ಥಂ ತು ಮಯಾ ವಿಭೋ ।
ದೇವೋಪ ಭೋಗ್ಯ ಮೇತದ್ಧಿ ತರುರಾಜ ಸಮುದ್ಭವಮ್ ॥ 9 ॥

ಇಷ್ಟಃ ಸ ವೃಕ್ಷಃ ಸತತಂ ಶಚ್ಯಾಃ ಪುಷ್ಕರಲೋಚನ ।
ಸೌಭಾಗ್ಯಮಾವಹತ್ಯೇವ ಪೂಜ್ಯಮಾನೋಽಪಿ ನಿತ್ಯಶಃ ॥ 10 ॥

**ಪುಣ್ಯಂ ಕರ್ತುಂ ತದಾ ಸೃಷ್ಟಃ ಪಾರಿಜಾತೋ ಮಹಾದ್ರುಮಃ ।**
**ಅದಿತ್ಯಾ ಧರ್ಮ ನಿತ್ಯೇನ ಕಶ್ಯಪೇನ ಮಹಾತ್ಮನಾ ॥ 11 ॥**

ದೇವಲೋಕದಲ್ಲಿ ದೇವ ಗಂಧರ್ವಾಪ್ಸರಸೆಯರು ರುದ್ರದೇವನನ್ನು ಪ್ರಣಾಮಗೈದು ಅವನ ಪ್ರಸನ್ನತೆಗಾಗಿ ಗೀತ ನೃತ್ಯಗಳನ್ನು ಮಾಡುತ್ತಿದ್ದಾರೆ. ಮಹಾದೇವನ ಪೂಜೆಗಾಗಿಯೇ ದೇವೇಂದ್ರನ ಭವನದಲ್ಲಿ ಪ್ರತಿಮಾಸ ಉತ್ಸವ ನಡೆಯುತ್ತದೆ. ದೇವೇಂದ್ರನು ಭಕ್ತ್ಯಾದರಪೂರ್ವ ನಡೆಸುವ ಈ ಪೂಜೆಯನ್ನು ಶಿವನು ತನ್ನ ಪಾರ್ವತ್ಯಾದಿಗಳೊಂದಿಗೆ ಅದೃಶ್ಯನಾಗಿಯೇ ನೋಡುತ್ತಿರುತ್ತಾನೆ.

ಮಾಧವನೆ ! ಈ ಉತ್ಸವದಲ್ಲಿ ಪಾಲ್ಗೊಳ್ಳಲೆಂದು ಹಿಂದಿನ ದಿನವೆ ನನಗೆ ಪಾರಿಜಾತ ವೃಕ್ಷದ ಪುಷ್ಪವೊಂದನ್ನು ನೀಡಿ ನನ್ನನ್ನು ಆಹ್ವಾನಿಸಿರುವನು. ಆ ಪಾರಿಜಾತ ಪುಷ್ಪವನ್ನೇ ದೇವೋಪಭೋಗ್ಯವೆಂದು ದೇವದೇವನಾದ ನಿನಗೇ ಸೇರಬೇಕೆಂದು ನಿನಗೆ ನೀಡಿದೆ. ಶಚೀದೇವಿಗೆ ಸರ್ವದಾಪ್ರಿಯವಾದದ್ದು ಈ ವೃಕ್ಷ. ಈ ವೃಕ್ಷವನ್ನು ಪ್ರತಿನಿತ್ಯ ಪೂಜಿಸಿದರೆ ಸಾಕು ಅಮಿತವಾದ ಸೌಭಾಗ್ಯ ನೀಡುತ್ತದೆ. ಕಶ್ಯಪರು ಅದಿತಿಯ ಪುಣ್ಯ ಕಾರ್ಯ ನಿಮಿತ್ತವಾಗಿ ಈ ವೃಕ್ಷವನ್ನು ನಿರ್ಮಿಸಿರುತ್ತಾರೆ. ಹಿಂದೆ ಒಮ್ಮೆ ಅದಿತಿಯು ತನ್ನ ಸೇವೆಯಿಂದ ಪತಿ ಕಶ್ಯಪರನ್ನು ಸಂತೋಷಪಡಿಸಿದಳು. ಕಶ್ಯಪರಾದರೂ ವರವನ್ನು ಬೇಡೆಂದರೂ ಹೀಗೆಂದಳು.

**ಸೋವಾಚ ಸುಭಗಾ ಯೇನ ಭವೇಯಂ ಮುನಿಸತ್ತಮ ।**
**ಸ್ವಲಂಕೃತಾ ಕಾಮತಶ್ಚ ಸರ್ವೈರೇವ ವಿಭೂಷಣೈಃ ॥ 12 ॥**
**ಕುಮಾರೀ ನಿತ್ಯದಾ ಚೈವ ಭವೇಯಂ ತಪಸೋ ನಿಧೇ ।**
**ವಿರಜಾ ಶೋಕರಹಿತಾ ಭವೇಯಮಿತಿ ನಿತ್ಯದಾ ।**
**ಪತಿಭಕ್ತಿಮತೀ ಚೈವ ಧರ್ಮಶೀಲಾ ತಥೈವ ಚ ॥ 13 ॥**

ಅದಿತಿಯು ತನ್ನ ಪತಿಗೆ "ಮುನಿಶ್ರೇಷ್ಠನೇ ! ನಿನ್ನ ವರದಿಂದಾಗಿ ನಾನು ಯಾವಾಗಲೂ ಸೌಭಾಗ್ಯಶಾಲಿನೀಯಾಗಿರಬೇಕು. ಸಕಲಾಭರಣಗಳಿಂದಲೂ ಅಲಂಕೃತಳಾಗಿರಬೇಕು. ನೃತ್ಯಗೀತಾದಿಗಳು ನನ್ನ ಸಮೀಪದಲ್ಲಿಯೇ ಉಪಸ್ಥಿತವಾಗಿರಬೇಕು. ನಾನು ನಿತ್ಯ ಯೌವನ ಸಂಪನ್ನಳಾಗಿರಬೇಕು.

ಹಾಗೆಯೆ ಧರ್ಮಶೀಲಳೂ. ಪತಿಪರಾಯಣಳೂ ಶೋದಿರಹಿತಳೂ ಆಗಿರಬೇಕು" ಎಂದಳು.

## ಪಾರಿಜಾತ ವೈಶಿಷ್ಟ್ಯ

**ಪಾರಿಜಾತಂ ತತೋಽಸ್ರಾಕ್ಷೀದ್ ಅದಿತ್ಯಾಃ ಪ್ರಿಯಕಾಮ್ಯಯಾ ।**
**ಸರ್ವಕಾಮಪ್ರದೈಃ ಪುಷ್ಪೈರಾವೃತಂ ನಿತ್ಯಗಂಧದೈಃ ॥ 14 ॥**

ಶ್ರೀಕೃಷ್ಣನೇ ! ಅದಿತಿಯ ಕಾಮನೆಗಳನ್ನು ಪೂರೈಸಿಕೊಡಲು ಕಶ್ಯಪನು ಸಕಲೇಷ್ಟಾರ್ಥ ಪೂರೈಸುವ, ನಿತ್ಯ ಸುಗಂಧ ಸೂಸುವ ಪುಷ್ಪಗಳಿಂದ ಕೂಡಿರುವ 'ಪಾರಿಜಾತ ವೃಕ್ಷ'ವನ್ನು ಸೃಷ್ಟಿಸಿದನು.

ಮೂರು ಶಾಖೆಗಳಿಂದ ಕೂಡಿರುವಂತೆ ಯಾವಾಗಲೂ ಕಾಣುತ್ತದೆ. ಅಸಾಧಾರಣ ಕಾಂತಿಯುಕ್ತವೂ, ಈ ಒಂದೇ ಗಿಡದಲ್ಲಿ ಸಮಸ್ತ ಕುಸುಮಗಳೂ ಇರುವಂತೆ ಕಾಣುತ್ತದೆ. ಈ ಮೂರು ಶಾಖೆಗಳಲ್ಲಿ ಒಂದು ಶಾಖೆಯಲ್ಲಿ ನಾನು ನಿನಗೆ ಅರ್ಪಿಸಿದ ಪುಷ್ಪಗಳೇಕಗಳಿವೆ. ಇನ್ನೊಂದು ಶಾಖೆಯು ವಿಧವಿಧವಾದ ಪುಷ್ಪಗಳನ್ನು ಹೊಂದಿರುತ್ತದೆ. ಮೂರನೆಯ ಶಾಖೆಯು ಕಮಲಪುಷ್ಪಗಳನ್ನು ಹೊಂದಿರುತ್ತದೆ.

ಕಶ್ಯಪರು ಮಂದಾರವೃಕ್ಷದ ಸಾರದಿಂದ ಈ ವೃಕ್ಷ ಸೃಷ್ಟಿಸಿರುವನು. ಹೀಗಾಗಿ ಈ ವೃಕ್ಷ ಪಾರಿಜಾತವು ಎಲ್ಲಾ ವೃಕ್ಷಗಳಿಗಿಂತಲೂ ಶ್ರೇಷ್ಠತಮವಾಗಿದೆ.

## ಪತಿದಾನದಿಂದ ಸೌಭಾಗ್ಯ ಪ್ರಾಪ್ತಿ

**ತತಸ್ತತ್ರ ನಿಬಧ್ಯಾಥ ಕಶ್ಯಪಂ ಪದದೌ ಶುಭಾ ।**
**ಅದಿತಿರ್ಮಮ ಪುಣ್ಯಾರ್ಥಂ ಸೌಭಾಗ್ಯಾರ್ಥಂ ತಥೈವ ಚ ॥ 15 ॥**

**ಅದಿತ್ಯಾ ಕಶ್ಯಪೋ ದತ್ತಃ ಪುಣ್ಯಾರ್ಥಂ ಚ ದದೌ ಮಮ ।**
**ಪುಷ್ಪಧಾಮ್ನಾ ವೇಷ್ಟಯಿತ್ವಾ ಕಂಠೇ ಪುಣ್ಯಾರ್ಥಮಾತ್ಮವಾನ್ ॥ 16 ॥**
**ನಿಷ್ಕ್ರಯೇಣ ಮಯಾ ಮುಕ್ತೋ ಕಶ್ಯಪಸ್ತು ತಪೋಧನಃ ॥ 17 ॥**

ಅನಂತರ ಅದಿತಿಯು ತನಗೆ ಪುಣ್ಯ ಹಾಗೂ ಸೌಭಾಗ್ಯವೃದ್ಧಿಯಾಗಲೆಂದು ಬಯಸಿ, ತನ್ನ ಪತಿ ಕಶ್ಯಪರನ್ನು ಈ ವೃಕ್ಷಕ್ಕೆ ಪುಷ್ಪಮಾಲೆಯಿಂದ ಕಟ್ಟಿ. ನನಗೆ ದಾನವನ್ನಾಗಿ ನೀಡಿದಳು. ನಂತರ ನಾನು ಅದಿತಿಯಿಂದ ಯೋಗ್ಯ ಮೌಲ್ಯವನ್ನು ಪಡೆದು ಅವರನ್ನು ಮುಕ್ತಗೊಳಿಸಿದೆ.

### ಇಂದ್ರಾಣಿ ದೇವಿಯಿಂದ ಪುಣ್ಯಕವ್ರತ

ಇದೇ ರೀತಿ ಇಂದ್ರಾಣೀದೇವಿಯೂ, ಸೌಭಾಗ್ಯವೃದ್ಧಿಗಾಗಿ ಇಂದ್ರನನ್ನು ದಾನ ಮಾಡಿರುವಳು. ಹೀಗೆ ರೋಹಿಣೀ ಚಂದ್ರನನ್ನು, ಋದ್ಧಿಯು ಕುಬೇರನನ್ನು, ಪುಣ್ಯ ಹಾಗೂ ಸೌಭಾಗ್ಯಕ್ಕಾಗಿ ವ್ರತ ಮಾಡಿ ಅಖಂಡ ಸೌಭಾಗ್ಯ ಪಡೆದಿರುವರು.

### ಪಾರಿಜಾತವೆಂದರೇನು?

**ಪರಿಜಾತೋ ವಿಷ್ಣುಪದ್ಯಾಃ ಪಾರಿಜಾತೇತಿ ಶಬ್ದಿತಃ ।**
**ಮಂದಾರ ಪುಷ್ಪೈಃ ಯದ್ಯುಕ್ತೋ ಮಂದಾರಸ್ತೇನ ಕಥ್ಯತೇ ॥ 18 ॥**

ಈ ಪಾರಿಜಾತವು ವಿಷ್ಣುಪದಿಯೆನಿಸಿದ ಗಂಗಾನದಿಯ ತಟದಲ್ಲಿ ಪ್ರಕಟವಾಯಿತು. ಮಂದಾರಪುಷ್ಪಗಳಿಂದಲೂ ಯುಕ್ತವಾಗಿದ್ದರಿಂದ ಮಂದಾರವೃಕ್ಷವೆಂದೂ ಕರೆಯುತ್ತಾರೆ.

### ಕೋವಿದಾರ ವೃಕ್ಷ

**ಕೋಽಪ್ಯಯಂ ದಾರುರಿತ್ಯಾಹು ರಜಾನಂತೋ ಯತೋ ಜನಾಃ ।**
**ಕೋವಿದಾರ ಇತಿ ಖ್ಯಾತಃ ತತಃ ಸ ಮಹಾತರುಃ ॥ 19 ॥**

ಯಾರು ಈ ವೃಕ್ಷವನ್ನು ತಿಳಿದಿಲ್ಲವೋ ಅಂತಹವರು ಈ ವೃಕ್ಷ ನೋಡಿ 'ಕೋಽಪ್ಯಯಂ ದಾರುಃ' ಇದು ಯಾವುದೋ ಒಂದು ವೃಕ್ಷವಾಗಿದೆ ಎಂದೇ ಉದ್ಗರಿಸುತ್ತಾರೆ. ಇದರಿಂದಾಗಿ 'ಕೋವಿದಾರ' ಎನಿಸಿದೆ.

ಹೀಗೆ ಈ ಪಾರಿಜಾತವು ಮಂದಾರ ಕೋವಿದಾರ ಪಾರಿಜಾತಗಳೆಂಬ ಹೆಸರುಗಳಿಂದ ಖ್ಯಾತವಾಗಿದೆ.

ಇತಿ ಶ್ರೀ ಹರಿವಂಶ ಖಿಲಭಾಗದಲ್ಲಿ
'ಪಾರಿಜಾತ ಉತ್ಪತ್ತಿ' ಯೆಂಬಲ್ಲಿ
ಅರವತ್ತೇಳನೆಯ ಅಧ್ಯಾಯವು

## – ಇಲ್ಲಿಗೆ ಹರಿವಂಶ ಪ್ರಥಮ ಭಾಗ ಮುಕ್ತಾಯ –

॥ ಶ್ರೀಕೃಷ್ಣಾರ್ಪಣಮಸ್ತು ॥



ಜಯತಿ ಪರಾಶರಸೂನುಃ ಸತ್ಯವತೀಹೃದಯನಂದನೋ ವ್ಯಾಸಃ
ಯಸ್ಯಾಸ್ಯಕಮಲಗಲಿತಂ ವಾಙ್ಮಯಮಮೃತಂ ಜಗತ್ಪಿಬತಿ ॥